ಭಾಗ - 9

# ಪರಿಪೂರ್ಣ ಚಂದ್ರಿಕಾ

ಸೂತ್ರ - ಭಾಷ್ಯ - ಟೀಕಾ - ಟಿಪ್ಪಣಿ - ಮೊದಲಾದ ಗ್ರಂಥಗಳೊಂದಿಗೆ
ಶ್ರೀವ್ಯಾಸತೀರ್ಥರ ತಾತ್ಪರ್ಯಚಂದ್ರಿಕಾ ಸಂಸ್ಕೃತಮೂಲ ಹಾಗೂ ಕನ್ನಡಾನುವಾದ



ಆನುಮಾನಿಕಾಧಿಕರಣ, ಜ್ಯೋತಿರುಪಕ್ರಮಾಧಿಕರಣ,
ನಸಂಖ್ಯೋಪಸಂಗ್ರಹಾಧಿಕರಣ.

ಪ್ರಕಾಶನ :
ಶ್ರೀವ್ಯಾಸರಾಜಮಠ - ಶ್ರೀಪಾದರಾಜಮಠ
ಸೋಸಲೆ ಮುಳಬಾಗಿಲು

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

## ಭಾಗ -೯

# ಪರಿಪೂರ್ಣಚಂದ್ರಿಕಾ

## ಪ್ರಥಮಾಧ್ಯಾಯ-ಚತುರ್ಥ ಪಾದ

### ಆನುಮಾನಿಕಾಧಿಕರಣದಿಂದ -ನಸಂಖ್ಯೋಪಸಂಗ್ರಹಾಧಿಕರಣದ ತನಕ

ಬ್ರಹ್ಮಸೂತ್ರ , ಬ್ರಹ್ಮಸೂತ್ರಭಾಷ್ಯ, ಸೂತ್ರದೀಪಿಕಾ,
ತತ್ವಪ್ರಕಾಶಿಕಾ, ಭಾವದೀಪ,
ತಾತ್ಪರ್ಯಚಂದ್ರಿಕಾ, ಪ್ರಕಾಶ, ಗುರುರಾಜೀಯ,
ಅಣುಭಾಷ್ಯ, ತತ್ವಮಂಜರೀ, ತಂತ್ರದೀಪಿಕಾ, ನ್ಯಾಯಮುಕ್ತಾವಳಿ
ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

* * * * * *

ಪ್ರಕಾಶನ :

ಶ್ರೀವ್ಯಾಸರಾಜಮಠ ಶ್ರೀಪಾದರಾಜಮಠ

'ಪರಿಪೂರ್ಣಚಂದ್ರಿಕಾ' ಜಯನಾಮಸಂವತ್ಸರದ ಫಾಲ್ಗುಣ, ಬಹುಳ ಚತುರ್ಥಿ, ದಿನಾಂಕ : ೯-೩-೨೦೧೫ರಂದು ನವವೃಂದಾವನದಲ್ಲಿ ಶ್ರೀವ್ಯಾಸರಾಜರ ಆರಾಧನೆಯಲ್ಲಿ, ಪರಮಪೂಜ್ಯ ಶ್ರೀವಿದ್ಯಾಮನೋಹರತೀರ್ಥರ ಅಧ್ಯಕ್ಷತೆಯಲ್ಲಿ ಬಿಡುಗಡೆಯಾಯಿತು.

ಪ್ರಕಾಶನ : ಶ್ರೀವ್ಯಾಸರಾಜಮಠ, ಶ್ರೀಪಾದರಾಜಮಠ.

ಸಹಯೋಗ : ಶ್ರೀಮತಿ ಲೀಲಾ ಮತ್ತು ಶ್ರೀನಿವಾಸ ಪ್ರಹ್ಲಾದ
ಡಾಯಲ್ಸ್ ಟೌನ್, ಪೆನ್ಸಿಲ್‌ವೆನಿಯಾ, ೧೮೯೦೧,
ಯು.ಎಸ್.ಎ.

ಪ್ರಥಮಮುದ್ರಣ : 2015

ಬೆಲೆ : 1000 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ನಾಗಲತಾ,
ಕುಮಾರಸ್ವಾಮಿ ಬಡಾವಣೆ, ಬೆಂಗಳೂರು.
ದೂರವಾಣಿ : 9141197485

ಮುದ್ರಣ
ಮುಕ್ತಿಪಥ ಮುದ್ರಣಾಲಯ, ಬೆಂಗಳೂರು.

|| Srilakshmihayagreevo Vijayatetamam ||

# Vol. - 9

# PARIPOORNACHANDRIKA

## Prathamadhyaya - Chaturtha Pada

## Anumanikadhikarana to Nasankyopasangrahadhikarana

**Brahmasutra, Brahmasutrabhaashya, Sutradpeeka, Tatvaprakaashika, Bhavadipa, Tatparyachandrika, Prakaasha, Gururaajiya, Anubhashya, Tatvamanjari, Tantradipika, Nyaayamuktaavali**

**Sanskrit Original Text with Kannada Translation**

******

**Published by :**

**Srivyasarajamutt** **Sripadarajamutt**

'PARIPOORNACHANDRIKA' : 9th March 2015 Jayanama Samvatsara,
Phalguna Masa at Navavrindavana.

Publication : Sri Vyasaraja Mutt, Sripadaraja Mutt.

Financial Assistance for DTP : Smt. Leela & Srinivasa Prahlad,
Doylestown, Pennsylvania, 18901, U.S.A.

First Edition : 2015

Price : Rs. 1000

Copies : 1000





Type set :

Smt. S. Nagalatha, Bangalore.

Printed at :

Muktipatha Mudranalaya, Bangalore.



ಶ್ರೀಪಾದರಾಜರ ವೃಂದಾವನ
ಮುಳಬಾಗಿಲು.



**ಶ್ರೀವ್ಯಾಸರಾಜರ ವೃಂದಾವನ**
ನವವೃಂದಾವನ.

# ಪರಿಪೂರ್ಣಚಂದ್ರಿಕಾ

* * * *

ಪೋಷಕರು :

ಪರಮ ಪೂಜ್ಯ ಶ್ರೀವಿದ್ಯಾಮನೋಹರತೀರ್ಥ ಶ್ರೀಪಾದರು

ಪೀಠಾಧಿಪತಿಗಳು, ಶ್ರೀವ್ಯಾಸರಾಜಮಠ.

ಗೌರವ ಸಂಪಾದಕರು :

ಶ್ರೀ ಹೆಚ್.ಬಿ. ಲಕ್ಷ್ಮೀನಾರಾಯಣಾಚಾರ್ಯ

ಬೆಂಗಳೂರು.

ಪ್ರಧಾನಸಂಪಾದಕರು :

ವಿ॥ ಆರ್. ವೇಂಕಟೇಶಾಚಾರ್ಯ

ಶ್ರೀರಂಗಮ್

ಸಂಪಾದನೆ ಮತ್ತು ಅನುವಾದ :

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

# PARIPOORNACHANDRIKA

******

**Poshakaru:**

**HH Srividyamanoharatirtha Sripadaru**

PeeTadhipati of Srivyasarajamutt.

**Ho'norary Editor:**

**Sri H.B. Lakshminarayanacharya**

**Bangalore.**

**Chief Editor:**

**Vidwan R. Venkateshacharya,**

**Srirangam.**

**Edited & Translated by :**

**Vidwan Bemmatti Venkateshacharya,**

**Bangalore.**

ಶ್ರೀಪಾದರಾಜಮಠಾಧೀಶರಾದ

ಪರಮಪೂಜ್ಯ ಶ್ರೀಕೇಶವನಿಧಿತೀರ್ಥಶ್ರೀಪಾದಂಗಳವರು

ಹಾಗೂ

ಶ್ರೀವ್ಯಾಸರಾಜಮಠಾಧೀಶರಾದ
ಪರಮಪೂಜ್ಯ ಶ್ರೀವಿದ್ಯಾಮನೋಹರತೀರ್ಥಶ್ರೀಪಾದಂಗಳವರು

ಶ್ರೀವ್ಯಾಸರಾಜರ ೪೭೬ ಆರಾಧನಾಮಹೋತ್ಸವದಲ್ಲಿ

ಶ್ರೀಪಾದರಾಜರು ಹಾಗೂ ಶ್ರೀವ್ಯಾಸರಾಜರು
ಇವರ ಅಂತರ್ಯಾಮಿಗಳಾದ
ಮೂಲಗೋಪಿನಾಥದೇವರು ಹಾಗೂ ಮೂಲಗೋಪಾಲಕೃಷ್ಣದೇವರು
ಇವರಿಗೆ ಅರ್ಪಿಸಿದ

ಗ್ರಂಥಕುಸುಮ

* * * *

# ಅನುಗ್ರಹ ವಚನ

ಶ್ರೀವ್ಯಾಸರಾಜಗುರುಸಾರ್ವಭೌಮರ ತಾತ್ಪರ್ಯಚಂದ್ರಿಕಾಗ್ರಂಥ ಅತ್ಯಂತ ವೈಭವದಿಂದ ಇಂದು ಪರಿಪೂರ್ಣಚಂದ್ರಿಕೆಯ ಮೂಲಕ ಎಲ್ಲೆಡೆ ಬೆಳಗುತ್ತಿದೆ. ಹುಣ್ಣಿಮೆಚಂದ್ರ ತಿಂಗಳಿಗೆ ಒಂದುಬಾರಿ ಮಾತ್ರ ಜಗತ್ತಿನಲ್ಲಿ ತನ್ನ ಪ್ರಕಾಶವನ್ನು ಬೀರುತ್ತಾನೆ. ಆದರೆ ಇಂದು ಪ್ರತಿನಿತ್ಯವೂ ತಾತ್ಪರ್ಯಚಂದ್ರಿಕೆಯ ಬೆಳದಿಂಗಳು ಹಗಲು ರಾತ್ರಿಗಳ ಭೇದವಿಲ್ಲದೆ ಎಲ್ಲ ಸಜ್ಜನರ ಹೃದಯದಲ್ಲಿ ಬೆಳಗುತ್ತಿದೆ.

ಪರಿಪೂರ್ಣಚಂದ್ರಿಕೆಯ ಎಂಟು ಸಂಪುಟಗಳು ನಮ್ಮ ಮಠದ ಕಡೆಯಿಂದ ಪ್ರಕಾಶನವಾಯಿತು. ಈಗ ಒಂಬತ್ತನೇ ಸಂಪುಟದ ಮುದ್ರಣಕ್ಕೆ ವ್ಯಾಸರಾಜಮಠವು ಜೊತೆ ಸೇರಿದೆ. ಶ್ರೀವ್ಯಾಸರಾಜ-ಗುರುಸಾರ್ವಭೌಮರು ತಮ್ಮ ಗುರುಗಳಾದ ಶ್ರೀಪಾದರಾಜಗುರುಸಾರ್ವಭೌಮರ ಜೊತೆ ಸೇರಿದಂತಹ ಅನುಭವ ನಮಗಾಗುತ್ತಿದೆ. ಹೀಗೆ ಜ್ಞಾನಕಾರ್ಯದಲ್ಲಿ ನಾವೆಲ್ಲರು ಒಂದಾಗಿ ಸಜ್ಜನವೃಂದಕ್ಕೆ ಉತ್ತಮ ತತ್ವಜ್ಞಾನದ ಬೆಳಕನ್ನು ನೀಡೋಣ.

ಶ್ರೀವ್ಯಾಸರಾಜಮಠಾಧೀಶರಾದ ಶ್ರೀವಿದ್ಯಾಮನೋಹರತೀರ್ಥರು ಸ್ವತಃ ಇಚ್ಛೆಯಿಂದ ತಾತ್ಪರ್ಯಚಂದ್ರಿಕೆಯ ಕನ್ನಡ ಅನುವಾದದ ಪ್ರಕಾಶನದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದರಿಂದ ಇವರಿಗೆ ಶ್ರೀವ್ಯಾಸರಾಜಗುರುಸಾರ್ವಭೌಮರಲ್ಲಿರುವ ಅಚಲವಾದ ಭಕ್ತಿ, ಶ್ರದ್ದೆ ಹಾಗೂ ಜ್ಞಾನನಿಷ್ಠೆ ಮೊದಲಾದ ಗುಣಗಳು ಎದ್ದು ಕಾಣಿಸುತ್ತಿವೆ. ಇಂಥ ಜ್ಞಾನಕಾರ್ಯಗಳು ಇವರಿಂದ ಇನ್ನೂ ಹೆಚ್ಚುಹೆಚ್ಚು ಸಮಾಜದಲ್ಲಿ ನಡೆಯುತ್ತವೆ. ಶ್ರೀವ್ಯಾಸರಾಜಗುರುಸಾರ್ವಭೌಮರ ಎಲ್ಲಾ ಗ್ರಂಥಗಳ ಜ್ಞಾನಪ್ರಚಾರದ ಕಾರ್ಯವನ್ನು ಕೂಡ ಇವರು ಸಮರ್ಥರಾಗಿ ನಿಭಾಯಿಸುತ್ತಾರೆಂಬುದರಲ್ಲಿ ನಮಗೆ ಸಂದೇಹವೇ ಇಲ್ಲ.

ಈ ಕೃತಿಯ ಗೌರವಸಂಪಾದಕರಾದ ಶ್ರೀಯುತ ಹೆಚ್.ಬಿ. ಲಕ್ಷ್ಮೀನಾರಾಯಣಾಚಾರ್ಯರ ಉದಾತ್ತಭಾವನೆಯೂ ಕೂಡ ಈ ಕೃತಿಯ ಪ್ರಕಾಶನಕ್ಕೆ ಮುಖ್ಯಕಾರಣವಾಗಿದೆ. ಅವರಿಗೂ ಹಾಗೂ ಈ ಕೃತಿಯ ಸಂಪಾದನೆ ಹಾಗೂ ಅನುವಾದ ಕಾರ್ಯದಲ್ಲಿ ತೊಡಗಿಕೊಂಡಿರುವ ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯರಿಗೂ ನಮ್ಮ ಉಪಾಸ್ಯಮೂರ್ತಿಯಾದ ರಂಗವಿಠಲದೇವರು ಸಂಪೂರ್ಣವಾಗಿ ಹರಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಾರಾಯಣಸ್ಮರಣೆಗಳು

ಶ್ರೀಕೇಶವನಿಧಿಶ್ರೀಪಾದರು

ಪೀಠಾಧಿಪತಿಗಳು, ಶ್ರೀಪಾದರಾಜಮಠ

# ಘೋಷಕವಾಣಿ

ಶ್ರೀವ್ಯಾಸರಾಜಗುರುಸಾರ್ವಭೌಮರ ತಾತ್ಪರ್ಯಚಂದ್ರಿಕೆಯ ಜ್ಞಾನಪ್ರಸಾರೋತ್ಸವ ಮಾಡುವ ಅವಕಾಶ ನಮಗೆ ದೊರಕಿರುವುದು ನಿಜವಾಗಿಯು ಶ್ರೀವ್ಯಾಸರಾಯರ ಪರಮಾನುಗ್ರಹ ಹೊರತು ಬೇರೆ ಮತ್ತೇನು ಅಲ್ಲ. ಶ್ರೀವ್ಯಾಸರಾಜಗುರುಸಾರ್ವಭೌಮರಂಥ ಗುರುಗಳು ಮತ್ತೊಬ್ಬರಿಲ್ಲ. ಅವರು ಬರೆದಿರುವ ತಾತ್ಪರ್ಯಚಂದ್ರಿಕೆಯ ಗ್ರಂಥದಂಥ ಮತ್ತೊಂದು ಗ್ರಂಥವಿಲ್ಲ. ಇಂಥ ಶ್ರೇಷ್ಠವಾದ ಗುರುಗಳ ಹಾಗೂ ಗ್ರಂಥದ ಸೇವೆಯ ಸೌಭಾಗ್ಯ ದೊರಕುವುದು ಬಹುಜನುಮದ ಸುಕೃತ. ಸಮಾನ ಸ್ವರಗಳ ಎರಡು ವೀಣೆಗಳು ಒಟ್ಟಿಗೆ ಸೇರಿದಾಗ ಒಂದರಿಂದ ನಾದ ಹೊಮ್ಮಿದರೆ ಮತ್ತೊಂದು ಸಹ ಮಿಡಿಯುತ್ತದೆ. ಈ ತರಹದ ಬಾಂಧವ್ಯ ಗುರುಶಿಷ್ಯರದ್ದು. ಸಮಾನ ವಿಚಾರವುಳ್ಳ ಶಿಷ್ಯನ ಮನೀಷೆಗೆ ಗುರುವಿನ ಹೃದಯವು ಮಿಡಿಯುತ್ತದೆ. ಈ ತೆರನಾದ ಬಾಂಧವ್ಯ ಶ್ರೀವ್ಯಾಸರಾಜಗುರುಸಾರ್ವಭೌಮರು ಹಾಗೂ ಶ್ರೀಪಾದರಾಜಗುರುಸಾರ್ವಭೌಮರದ್ದು.

ಮಾಯಾತಂತ್ರಾಮರಾರಿಸ್ಮಯಮಪನಯತೋ ಮಧ್ವಸಿದ್ಧಾಂತನಾಮ್ನೋ
ನೇತ್ರಾಣೀವ ತ್ರಯೋಽಪಿ ತ್ರಿಜಗತಿ ನೃಹರೇರಿಂಧತೇ ಯತ್ಪ್ರಬಂಧಾಃ ।
ಯದ್ವಾಗದ್ವೈತವಿದ್ಯಾಚಲಕುಲಕುಲಿಶಪ್ರೌಢಿಮಾಢೌಕತೇ ಸಃ
ಶ್ರೇಯೋ ಭೂಯೋ ವಿದಧ್ಯಾತ್ಸುಮಹಿತಮಹಿಮಾ ಸಂಪ್ರತಿ ವ್ಯಾಸರಾಜಃ ॥

ಶ್ರೀವ್ಯಾಸರಾಜರ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ ಮತ್ತು ತರ್ಕತಾಂಡವ ಎಂಬ ಮೂರು ಪ್ರಬಂಧಗಳು, ಅದ್ವೈತಸಿದ್ಧಾಂತವೆಂಬ ದೈತ್ಯ ಹಿರಣ್ಯಕಶಿಪುವಿನ ಗರ್ವವನ್ನು ನಿರ್ಮೂಲ ಮಾಡುವ ಮಧ್ವಸಿದ್ಧಾಂತವೆಂಬ ಶ್ರೀನೃಸಿಂಹ ದೇವರ ಮೂರು ಕಣ್ಣುಗಳಂತೆ ಶೋಭಿಸುತ್ತಿವೆ. ಶ್ರೀವ್ಯಾಸರಾಜ-ಗುರುಸಾರ್ವಭೌಮರ ವಚನಗಳು ಪರ್ವತಗಳ ಸಮೂಹವನ್ನು ನಾಶಪಡಿಸುವ ವಜ್ರಾಯುಧದಂತೆ ಅದ್ವೈತಶಾಸ್ತ್ರವನ್ನು ನಿರಸನಗೊಳಿಸುವಲ್ಲಿ ಅತ್ಯಂತ ಸಮರ್ಥವಾಗಿವೆ. ಇಂಥ ಮಹಿಮೋಪೇತರಾದ ಶ್ರೀವ್ಯಾಸರಾಜರು ನಮಗೆ ಬಹಳವಾದ ಶ್ರೇಯಸ್ಸನ್ನುಂಟು ಮಾಡಲಿ.

ಹೀಗೆ ವಾದೀಂದ್ರತೀರ್ಥರು ವರ್ಣನೆ ಮಾಡಿದಂತೆ ಶ್ರೀವ್ಯಾಸರಾಜಗುರುಸಾರ್ವಭೌಮರು ರಚನೆ ಮಾಡಿರುವ ವ್ಯಾಸತ್ರಯಗ್ರಂಥವನ್ನು ಪ್ರತಿಯೊಬ್ಬರೂ ಅಧ್ಯಯನ ಮಾಡಲೇಬೇಕು.

ನಮ್ಮ ಗುರುಗಳಾದ ಶ್ರೀವಿದ್ಯಾವಾಚಸ್ಪತಿ ಶ್ರೀಪಾದಂಗಳವರಿಗೆ ಇಂಥ ಜ್ಞಾನಕಾರ್ಯದಲ್ಲಿ ಎಲ್ಲಿಲ್ಲದ ಉತ್ಸಾಹ. ಅವರ ಆಶೀರ್ವಾದಬಲದಿಂದಷ್ಟೇ ಇಂದು ತಾತ್ಪರ್ಯಚಂದ್ರಿಕೆಯ ಜ್ಞಾನಪ್ರಸಾರೋತ್ಸವದ ಕಾರ್ಯಕ್ರಮವನ್ನು ನಾವು ಹಮ್ಮಿಕೊಂಡಿರುವೆವು. ಪ್ರತಿಯೊಂದು

ಊರುಗಳಲ್ಲಿ ಹಾಗೂ ಪ್ರತಿಯೊಬ್ಬ ಮಾಧ್ವರ ಮನೆಗಳಲ್ಲಿ ಈ ತಾತ್ಪರ್ಯಚಂದ್ರಿಕೆ ಬೆಳಗಬೇಕು. ಶ್ರೀವ್ಯಾಸರಾಜರು ನೀಡಿದ ತತ್ವಜ್ಞಾನದ ಸದುಪಯೋಗವನ್ನು ಪಡೆದುಕೊಂಡು ಪ್ರತಿಯೊಬ್ಬರೂ ಕೂಡ ಮುಕ್ತಿಭಾಜನರಾಗಬೇಕು. ಈ ನಿಟ್ಟಿನಲ್ಲಿ ನಾವು ತಾತ್ಪರ್ಯಚಂದ್ರಿಕಾಜ್ಞಾನಪ್ರಸಾರೋತ್ಸವವನ್ನು ಪೀಠಾರೋಹಣದ ಹನ್ನೆರಡನೆಯ ವರ್ಷದ ನಿಮಿತ್ತದಿಂದ ಹಮ್ಮಿಕೊಂಡಿರುವೆವು.

ಈಗ ಪರಿಪೂರ್ಣಚಂದ್ರಿಕೆಯ ಒಂಬತ್ತನೆಯ ಸಂಪುಟವು ಮುದ್ರಣವಾಗುತ್ತಿದೆ. ಇಲ್ಲಿಯತನಕ ಎಂಟು ಸಂಪುಟಗಳನ್ನು ಶ್ರೀಪಾದರಾಜಮಠದವರು ಮುದ್ರಣ ಮಾಡಿದ್ದಾರೆ. ಈಗ ಅವರ ಜೊತೆ ಸೇರಿಕೊಂಡು ಜ್ಞಾನಪ್ರಸಾರ ಮಾಡುವ ಅವಕಾಶ ನಮಗೆ ದೊರೆಕಿದೆ. ಈ ಕಾರ್ಯ ಇಲ್ಲಿಗೆ ನಿಲ್ಲದೆ ಮುಂದೆಯೂ ಕೂಡ ಅವಿಚ್ಛಿನ್ನವಾಗಿ ನಡೆಸಬೇಕೆಂಬುದೇ ನಮ್ಮ ಮಹತ್ವಾಕಾಂಕ್ಷೆಯಾಗಿದೆ. ತಾತ್ಪರ್ಯಚಂದ್ರಿಕಾ ಮಾತ್ರವಲ್ಲದೆ, ಶೇಷಚಂದ್ರಿಕೆಯ ಪ್ರಕಾಶನವೂ ಕೂಡ ಇದೇ ಕ್ರಮದಲ್ಲಿ ನಡೆಯಬೇಕು.

ಶ್ರೀಪಾದರಾಜಮಠದ ಯತಿಗಳಾದ ಶ್ರೀಕೇಶವನಿಧಿಶ್ರೀಪಾದಂಗಳವರು ನಮ್ಮನ್ನು ಮುಕ್ತಮನಸ್ಸಿನಿಂದ ಈ ಜ್ಞಾನಪ್ರಸಾರಕಾರ್ಯದಲ್ಲಿ ಸೇರಿಸಿಕೊಂಡಿದ್ದಕ್ಕೆ ನಮಗೆ ಬಹಳ ಸಂತೋಷವಾಗಿದೆ. ಶ್ರೀಪಾದರಾಜಮಠದ ಮುಖ್ಯನಿರ್ವಾಹಕರಾದ ಶ್ರೀಯುತ ಹೆಚ್.ಬಿ. ಲಕ್ಷ್ಮೀನಾರಾಯಣಾಚಾರ್ಯರ ಬಗ್ಗೆ ಎಷ್ಟು ಹೇಳಿದರೂ ಕಮ್ಮಿ. ಅವರ ವಿಶಾಲಹೃದಯವಂತಿಕೆ, ಉದಾರತೆ, ಮುಕ್ತಮನಸ್ಸು ಈ ಎಲ್ಲ ಗುಣಗಳ ಪರಿಚಯ ಪ್ರತಿಯೊಬ್ಬರಿಗೂ ಇದೆ. ನಾವೂ ಕೂಡ ಅನೇಕ ವರ್ಷಗಳಿಂದ ಅವರ ಒಡನಾಟದಲ್ಲಿ ಅನೇಕ ಗುಣಗಳನ್ನು ಅವರಲ್ಲಿ ಕಂಡಿದ್ದೇವೆ. ಪ್ರಕೃತ ಪರಿಪೂರ್ಣಚಂದ್ರಿಕೆಯ ಪ್ರಕಾಶನದ ಈ ಕಾರ್ಯವನ್ನು ತಮ್ಮ ಮಠದಿಂದಲೇ ಮಾಡಲು ಅವರು ಸಮರ್ಥರಾಗಿದ್ದರೂ ಕೂಡ ನಮ್ಮ ಶ್ರೀವ್ಯಾಸರಾಜಮಠವನ್ನು ಸೇರಿಸಿಕೊಂಡಿರುವುದು ಅವರ ವಿಶಾಲಮನೋಭಾವನೆ ಹೊರತು ಬೇರೆ ಮತ್ತೇನು ಅಲ್ಲ. ಇವರಿಗೆ ನಮ್ಮ ಉಪಾಸ್ಯಮೂರ್ತಿಯಾದ ಮೂಲಗೋಪಾಲಕೃಷ್ಣದೇವರು ಪರಮಾನುಗ್ರಹವನ್ನು ಉಂಟುಮಾಡಲಿ ಎಂದು ತುಂಬು ಹೃದಯದಿಂದ ಆಶೀರ್ವದಿಸುತ್ತೇವೆ.

ವಿದ್ವಾನ್ ಬೆಮ್ಮತ್ತಿ ವಿಜಯೀಂದ್ರಚಾರ್ಯರು ಈ ಪರಿಪೂರ್ಣಚಂದ್ರಿಕೆಯ ಎರಡು ಸಂಪುಟಗಳನ್ನು ಸ್ವತಃ ತಾವೇ ಮುದ್ರಣ ಮಾಡಿದ್ದರು. ಒಂದು ಮಠಮಾಡುವ ಕಾರ್ಯವನ್ನು ತಾವೊಬ್ಬರೆ ನಿರ್ವಹಿಸಿದ್ದರು. ಅವರನ್ನು ಈ ಸಂದರ್ಭದಲ್ಲಿ ವಿಶೇಷವಾಗಿ ಆಶೀರ್ವದಿಸುತ್ತೇವೆ. ಅಷ್ಟೇ ಅಲ್ಲದೆ ನಮ್ಮ ಮಠಕ್ಕೆ ಈ ಪ್ರಕಾಶನಕಾರ್ಯವನ್ನು ವಹಿಸಿದ ಪುಣ್ಯಭಾಗಿಗಳು ಕೂಡ ಅವರೇ ಆಗಿದ್ದಾರೆ. ಅವರಿಗೂ ಮೂಲಗೋಪಾಲಕೃಷ್ಣದೇವರು ಪರಮಾನುಗ್ರಹವನ್ನು ಉಂಟುಮಾಡಲಿ.

ತಾತ್ಪರ್ಯಚಂದ್ರಿಕೆಯನ್ನು ಆಮೂಲಾಗ್ರವಾಗಿ ತಾವೊಬ್ಬರೇ ನಿಂತು ಬರೆಯುತ್ತಿರುವ ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯರ ಲೇಖನಸರಸ್ವತಿಯನ್ನು ಎಷ್ಟು ಹೊಗಳಿದರೂ ಸಾಲದು. ಕೇವಲ ತಾತ್ಪರ್ಯಚಂದ್ರಿಕೆ ಅಷ್ಟೇ ಅಲ್ಲದೆ ಅದರ ಜೊತೆ ಹದಿನೈದು ಗ್ರಂಥಗಳನ್ನು ಅನುವಾದ ಮಾಡಿ ಇಂದಿನ ಶಾಸ್ತ್ರರಸಿಕರಿಗೆ ಬಹಳವಾಗಿ ಉಪಕರಿಸುತ್ತಿದ್ದಾರೆ. ನಮ್ಮ ಉಪಾಸ್ಯಮೂರ್ತಿಪಟ್ಟಾಭಿರಾಮ-

ದೇವರು ಹಾಗೂ ಮೂಲಗೋಪಾಲಕೃಷ್ಣದೇವರು ಇವರ ಲೇಖನಸರಸ್ವತಿ ಮತ್ತಷ್ಟು ಬೆಳೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ. ಮತ್ತು ತಾತ್ಪರ್ಯಚಂದ್ರಿಕೆಯ ಅನುವಾದ ಅಷ್ಟೇ ಅಲ್ಲದೆ ಶೇಷಚಂದ್ರಿಕೆಯ ಅನುವಾದವನ್ನು ಕೂಡ ಇವರ ಮುಖಾಂತರ ಶ್ರೀವ್ಯಾಸರಾಜಗುರುಸಾರ್ವಭೌಮರು ನಡೆಸಲಿ ಎಂದು ತುಂಬು ಹೃದಯದಿಂದ ಆಶೀರ್ವದಿಸುತ್ತೇವೆ.

ಈ ಕೃತಿಯ ಪ್ರಕಾಶನಕ್ಕೆ ಶ್ರೀವ್ಯಾಸರಾಜರ ಅನೇಕ ಮಂದಿ ಭಕ್ತರು ದೇಣಿಗೆಯನ್ನು ನೀಡಿದ್ದಾರೆ. ಆ ಎಲ್ಲ ಭಕ್ತರಿಗೂ ಮೂಲಗೋಪಾಲಕೃಷ್ಣದೇವರು ಅನುಗ್ರಹವನ್ನು ಉಂಟುಮಾಡಲಿ ಹಾಗೂ ಈ ಪುಸ್ತಕದ ಪ್ರಕಾಶನಕಾರ್ಯದಲ್ಲಿ ಪರೋಕ್ಷವಾಗಿ ಹಾಗೂ ಪ್ರತ್ಯಕ್ಷವಾಗಿ ನಿಂತು ಶ್ರಮವಹಿಸಿದ ಪ್ರತಿಯೊಬ್ಬರಿಗೂ ಸನ್ಮಂಗಳವಾಗಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮರಣೆಗಳು

ಶ್ರೀವಿದ್ಯಾಮನೋಹರತೀರ್ಥಶ್ರೀಪಾದಂಗಳವರು
ಪೀಠಾಧಿಪತಿಗಳು, ಶ್ರೀವ್ಯಾಸರಾಜಮಠ.

# ಮುನ್ನುಡಿ

ಸಾರಸ್ವತ ಪ್ರಪಂಚದ ಮೂರು ರತ್ನಗಳೆಂದರೆ ತಾತ್ಪರ್ಯಚಂದ್ರಿಕಾ, ನ್ಯಾಯಾಮೃತ, ತರ್ಕತಾಡವ ಈ ಮೂರು ಗ್ರಂಥಗಳು. ಶ್ರೀಮದಾಚಾರ್ಯರ ಸಿದ್ಧಾಂತವನ್ನು ಜಗತ್ತಿನ ಉತ್ತುಂಗ ಶೃಂಗದೆತ್ತರಕ್ಕೆ ಎತ್ತಿ ಹಿಡಿದಿವೆ. ಅಪಾರವಾದ ಭಕ್ತಿ, ಅದ್ಭುತವಾದ ವಾಗ್ವೈಖರಿ, ಅಗಾಧ ಪಾಂಡಿತ್ಯ, ಅಪೂರ್ವಪ್ರತಿಭೆ ಇಂಥ ಗುಣಗಳ ಗಣಿಯಾಗಿರುವ ಶ್ರೀವ್ಯಾಸರಾಜಗುರುಸಾರ್ವಭೌಮರು ವಿಜಯನಗರದ ವ್ಯಾಪಕ ವೇದಾಂತವಿಶ್ವಾವಿದ್ಯಾನಿಲಯದ ಕುಲಪತಿಗಳಾಗಿದ್ದರಷ್ಟೆ ಅಲ್ಲದೆ ಕಾಶಿ, ಕುಂಭಕೋಣ, ಮುಳುಬಾಗಿಲು ಮೊದಲಾದೆಡೆ ಶಾಖಾವಿದ್ಯಾಪೀಠಗಳನ್ನು ಸ್ಥಾಪಿಸಿ ವೇದಾಂತವಿದ್ಯೆಯ ಪ್ರಚಾರವನ್ನು ಎಲ್ಲೆಡೆ ಕೈಗೊಂಡಿದ್ದರು. ಶ್ರೀ ವಿಜಯೀಂದ್ರತೀರ್ಥರು, ಶ್ರೀಗೋವಿಂದ ಒಡೆಯರು, ಶ್ರೀನಿವಾಸತೀರ್ಥರು ಮುಂತಾದ ಅತಿರಥ,ಮಹಾರಥ ಯತಿಗಳೇ ಇವರಿಗೆ ಶಿಷ್ಯಂದಿರಾಗಿದ್ದರು. ಇವರು ಪಂಡಿತಪ್ರಪಂಚದಲ್ಲಿಯೇ ಪ್ರಚಂಡವಾದ ಶಕ್ತಿಯುಳ್ಳವರು. ಶ್ರೀರಾಜೇಂದ್ರತೀರ್ಥರ ಪರಂಪರೆಯ ಶ್ರೀಬ್ರಹ್ಮಣ್ಯತೀರ್ಥರಿಂದ ಆಶ್ರಮವನ್ನು ಸ್ವೀಕರಿಸಿ ಶ್ರೀಪಾದರಾಜರ ವಿದ್ಯೆಯ ಕೂಸಾಗಿ ಬೆಳೆದರು.

ಉತ್ತರಭಾರತ ಸಂಚಾರದಲ್ಲಿ ವ್ಯಾಸರಾಜರು ಪಕ್ಷಧರಮಿಶ್ರನೊಡನೆ ನಡೆಸಿದ ವಾದ ಐತಿಹಾಸಿಕವಾದುದು. ಪಕ್ಷಧರಮಿಶ್ರ 'ಇಮ್ಮಡಿ ಜಯದೇವ' ಎಂಬ ಪ್ರಶಸ್ತಿಗೆ ಭಾಜನನಾಗಿದ್ದವನು. ಇವನಿಗೆ 'ಪೀಯೂಷವರ್ಷ' ಎಂಬ ಹೆಸರೂ ಇತ್ತು. ಇವನ ಗುರುಕುಲದಲ್ಲಿ ನೂರಾರು ಜನ ಶಿಷ್ಯರಿದ್ದರು. ಅವನು ಬಾಯಿ ಬಿಟ್ಟರೆ ಗಂಗಾಪ್ರವಾಹ. ಇವನು ಹಲವಾರು ಗ್ರಂಥಗಳನ್ನು ರಚಿಸಿದ್ದನು. ಚಂದ್ರಿಕಾಲೋಕವೆಂಬುದು ನೂರು ಅಲಂಕಾರಗಳುಳ್ಳ ವರ್ಣನಗ್ರಂಥ. ಈ ಗ್ರಂಥಕ್ಕೆ ಅಪ್ಪಯ್ಯದೀಕ್ಷಿತರು 'ಕುವಲಯಾನಂದ' ಎಂಬ ವ್ಯಾಖ್ಯಾನ ರಚಿಸಿದ್ದರು. ಇವನು 'ಪ್ರಸನ್ನರಾಘವ' ಎಂಬ ನಾಟಕವನ್ನು ರಚಿಸಿದ್ದನು. 'ಪಕ್ಷಧರೀಯ ಕಾರಕವಾದ' ಎಂಬ ತರ್ಕಗ್ರಂಥವನ್ನು ರಚಿಸಿದ್ದನು. ಅಲ್ಲದೆ ಸೀತಾವಿಹಾರ, ರತಿಮಂಜರಿ ಎಂಬ ಕಾವ್ಯಗಳನ್ನು ರಚಿಸಿದ್ದನು. ಇದೆಲ್ಲಕ್ಕೂ ಮಿಗಿಲಾಗಿ ಸುಪ್ರಸಿದ್ಧ ತರ್ಕವಿದ್ವನ್ಮಣಿ ಎನಿಸಿದ್ದ ಗಂಗೇಶೋಪಾಧ್ಯಾಯದ 'ಚಿಂತಾಮಣಿ' ಗ್ರಂಥವನ್ನು ಕರತಲಾಮಲಕ ಮಾಡಿಕೊಂಡು ಅದರ ನವೀನನ್ಯಾಯ-ತರ್ಕಗಳ ಪರಿಭಾಷೆಯಿಂದ ವಾದಕ್ಕೆ ಬಂದ ವಿದ್ವಾಂಸರನ್ನು ಧೂಳೀಪಟಮಾಡಿ ವಿಪಕ್ಷವನ್ನು ಕತ್ತರಿಸಿ ಹಾಕಿ ಪಕ್ಷಧರಮಿಶ್ರ ಎನ್ನುವ ಖ್ಯಾತಿ ಪಡೆದಿದ್ದನು.

ವ್ಯಾಸರಾಜರಂಥ ತಪಸ್ವಿಗಳು, ಅಪರೋಕ್ಷಜ್ಞಾನಿಗಳು ವಾದಕ್ಕೆ ಬಂದಾಗ ಮೊಟ್ಟಮೊದಲ ಬಾರಿಗೆ ಅವನ ಆತ್ಮವಿಶ್ವಾಸ ಅಲುಗಾಡಿತು. ಭರವಸೆ ಬಿದ್ದುಹೋಯಿತು. ಅವನ ಎಲ್ಲ ಪಟ್ಟುಗಳನ್ನು ಮೆಟ್ಟಿನಿಂತ ವ್ಯಾಸರಾಜರು ಜಗಜ್ಜಟ್ಟಿಯಂತೆ ಅವನಿಗೆ ಕಂಡುಬಂದರು. ಹತ್ತು ದಿನಗಳ ಕಾಲ ನಡೆದ






# ಪೋಷಕರು



**ಪರಮಪೂಜ್ಯ ಶ್ರೀ ವಿದ್ಯಾಮನೋಹರತೀರ್ಥ ಶ್ರೀಪಾದರು**
**ಪೀಠಾಧಿಪತಿಗಳು, ಶ್ರೀ ವ್ಯಾಸರಾಜಮಠ, ಸೋಸಲೆ.**



**ಪರಮಪೂಜ್ಯ ಶ್ರೀ ಕೇಶವನಿಧಿತೀರ್ಥ ಶ್ರೀಪಾದರು**

**ಪೀಠಾಧಿಪತಿಗಳು , ಶ್ರೀಪಾದರಾಜಮಠ, ಮುಳಬಾಗಿಲು.**

ವಾದದಲ್ಲಿ ಪಕ್ಷಧರಮಿಶ್ರನು ವ್ಯಾಸರಾಜರಿಗೆ ದೀರ್ಘದಂಡ ಪ್ರಣಾಮ ಮಾಡಿ ತನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸಬೇಕೆಂದು ಅವರಲ್ಲಿ ಪ್ರಾರ್ಥಿಸುವಲ್ಲಿಗೆ ಹೋಯಿತು.

ಅವನು ವ್ಯಾಸರಾಜರಲ್ಲಿ ಕೈಜೋಡಿಸಿ, ದಕ್ಷಿಣದೇಶದವರಿಗೆ ನವೀನನ್ಯಾಯಶಾಸ್ತ್ರದ ಪರಿಚಯವೇ ಇಲ್ಲವೆಂದುಕೊಂಡಿದ್ದ ತನ್ನ ಅಹಂಕಾರದ ಮರ ನೆಲಕ್ಕೊರಗಿದೆ ಎಂದು ಹೇಳಿ ತಾವೇ ಇಷ್ಟು ಅಸಾಧಾರಣ ಪಾಂಡಿತ್ಯ ಪಡೆದಿರುವಾಗ ಇನ್ನು ತಮಗೆ ವಿದ್ಯಾದಾನ ಮಾಡಿದ ಗುರುಗಳು ಯಾರೆಂಬುದನ್ನು ಹೇಳಬೇಕು ಎಂದು ಪ್ರಾರ್ಥಿಸಿದ. ತಾನು ಆಡಿದಂತೆಯೇ ನಡೆಯುವ ಸಂಪ್ರದಾಯ ಏನೆಂದು ತೋರಿಸಿದ. ಆ ಪಕ್ಷಧರಮಿಶ್ರ ಮುಳಬಾಗಿಲಿನವರೆಗೂ ಬಂದು ಶ್ರೀಪಾದರಾಜರ ಪಾದಗಳಿಗೆ ನಮಸ್ಕರಿಸಿ ಸ್ವಾಮಿ, ತಮ್ಮ ಶಿಷ್ಯರ ಜ್ಞಾನ ಗಂಗೆಯ ಪ್ರವಾಹದ ಬಗ್ಗೆ ಏನು ಹೇಳಲಿ, 'ನಾನು ಓದಿಕೊಂಡಿರುವುದನ್ನೆಲ್ಲಾ ಅವರು ಓದಿದ್ದಾರೆ. ನಾನು ಓದದೇ ಇರುವುದನ್ನೂ ಓದಿದ್ದಾರೆ. ಈ ಪಕ್ಷಧರಮಿಶ್ರನ ಹೆಗ್ಗಳಿಕೆಯಾಗಿದ್ದ ಎರಡು ಪಕ್ಷಗಳನ್ನು ತಮ್ಮ ವಾಗ್ವಜ್ರಹಾರದಿಂದ ಕತ್ತರಿಸಿದ ಅವರು ಕೇವಲ ವ್ಯಾಸರಾಜರಲ್ಲ. ಅಭಿನವವ್ಯಾಸರೇ ಸರಿ', ಎಂದು ವ್ಯಾಸರಾಜರನ್ನು ಮುಕ್ತಕಂಠದಿಂದ ಪ್ರಶಂಸಿಸಿ, ಶ್ರೀಪಾದರಾಜರನ್ನು ಅಭಿನಂದಿಸಿ ತೆರಳಿದನು.

ಇಂಥ ಶ್ರೇಷ್ಠರಾದ ಶ್ರೀವ್ಯಾಸರಾಜಗುರುಸಾರ್ವಭೌಮರು ಶ್ರೀಪಾದರಾಜರ ಶಿಷ್ಯಂದಿರಾಗಿ ಸಮಸ್ತಲೋಕಕ್ಕೆ ಸಾರಸ್ವತ ನಿಧಿಯನ್ನು ನೀಡಿರುವರು. ಇವರ ಸೇವೆಯನ್ನು ಮಾಡಿ ಧನ್ಯರಾಗುವುದಷ್ಟೆ ನಮ್ಮ ಕರ್ತವ್ಯ . ಪ್ರಕೃತ ನಮ್ಮ ಗುರುಗಳ ಆಜ್ಞೆಯಂತೆ ಪರಿಪೂರ್ಣಚಂದ್ರಿಕೆಯ ಎಲ್ಲಾ ಸಂಪುಟಗಳನ್ನು ಮುದ್ರಣ ಮಾಡುತ್ತಿದ್ದೇವೆ.

ಎರಡು ವರ್ಷಗಳ ಹಿಂದೆ ಎಂಟು ಸಂಪುಟಗಳು ಮುದ್ರಣವಾದವು. ಆದರೆ ಮಹತ್ ಕಾರ್ಯಗಳಿಗೆ ಹೆಚ್ಚು ವಿಘ್ನವೆಂಬಂತೆ ಎರಡು ವರ್ಷಗಳಿಂದ ಒಂಬತ್ತನೆಯ ಸಂಪುಟ ಯಾವಾಗ ಮುದ್ರಣವಾಗುತ್ತದೆಂಬುದೇ ಒಗಟಾಯಿತು. ಇದೀಗ ಉತ್ತರ ದೊರಕಿದೆ. ಶ್ರೀವ್ಯಾಸರಾಜಮಠದ ಪೀಠಾಧಿಪತಿಗಳಾದ ಶ್ರೀವಿದ್ಯಾಮನೋಹರತೀರ್ಥರು ಈ ಪ್ರಕಾಶನಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ಉದ್ದೇಶ ಇದರ ಹಿಂದಿರಬಹುದು. ಶ್ರೀಪಾದರಾಜಮಠದ ಹಾಗೂ ವ್ಯಾಸರಾಜಮಠದ ಅನ್ಯೋನ್ಯ ಬಾಂಧವ್ಯ ಶ್ರೀಪಾದರಾಜರ ಕಾಲದಿಂದಲೂ ಅನೂಚಾನವಾಗಿ ನಡೆದುಕೊಂಡು ಬರುತ್ತಿದೆ. ನಮಗೆ ಶ್ರೀವ್ಯಾಸರಾಜಮಠದ ಜೊತೆಗೆ ಇಂಥ ಜ್ಞಾನಕಾರ್ಯವನ್ನು ಮಾಡುವುದಕ್ಕಾಗಿ ಹೆಮ್ಮೆ ಎನಿಸುತ್ತಿದೆ.

ವಿದ್ವಾನ್ ಬೆಮ್ಮತ್ತಿ ॥ ವೆಂಕಟೇಶಾಚಾರ್ಯರು ೧೨ ಸಂಪುಟಗಳನ್ನು ಬರೆದು ಮುಗಿಸಿದ್ದಾರೆ. ಆದರೆ ಅವರ ಲೇಖನದ ವೇಗಕ್ಕೆ ಮುದ್ರಣ ಮಾಡಲು ನಾವೇ ತಡಮಾಡುತ್ತಿದ್ದೇವೆ. ಇನ್ನು ಮುಂದೆ ಶೀಘ್ರದಲ್ಲಿಯೇ ಮುಂದಿನ ಸಂಪುಟಗಳು ಮುದ್ರಣವಾಗುವುದರಲ್ಲಿ ಸಂದೇಹವಿಲ್ಲ. ಕೇವಲ ತಾತ್ಪರ್ಯಚಂದ್ರಿಕೆಯಲ್ಲಿ ಶ್ರೀವ್ಯಾಸರಾಜರು ಪ್ರತಿಪಾದಿಸಿದ ವಿಷ್ಣುಸರ್ವೋತ್ತಮತ್ವದ ಬಗ್ಗೆ ಹಾಗೂ ಭಗವಂತನ ಗುಣಪರಿಪೂರ್ಣತ್ವದ ಬಗ್ಗೆ 'ಇದಮಿತ್ಥಂ' ಎಂದು ತಿಳಿಯುವುದಕ್ಕಿಂತ ಅಥವಾ ತಿಳಿಸುವುದಕ್ಕಿಂತ ಶ್ರೇಷ್ಠವಾದ ಕಾರ್ಯ ಮತ್ತೊಂದಿಲ್ಲ. ಇಂಥ ಜ್ಞಾನಕಾರ್ಯವನ್ನು ಬಿಟ್ಟು ಬೇರೆ

ಕಾರ್ಯಗಳು ಮಾಡಿದರೇನು! ಬಿಟ್ಟರೇನು! ಈ ಧೋರಣೆಯಲ್ಲಿ ಮೊದಲಿಂದಲೂ ನಾವು ಪರಿಪೂರ್ಣಚಂದ್ರಿಕೆಯ ಬೃಹತ್‌ಸಂಪುಟಗಳನ್ನು ಮುದ್ರಣ ಮಾಡುತ್ತಿದ್ದೇವೆ. ಮುದ್ರಣ ಕಾರ್ಯ ಇಲ್ಲಿಯತನಕ ಹೇಗೆ ಮಾಡಿದ್ದೇವೆಂಬುದನ್ನು ಊಹಿಸಲು ನಮ್ಮಿಂದಲೇ ಸಾಧ್ಯವಾಗುತ್ತಿಲ್ಲ. ಸ್ವತಃ ಶ್ರೀಪಾದರಾಜರೇ ಅನುಗ್ರಹಿಸಿ ಬೃಹತ್ ಮೊತ್ತದ ಬೃಹತ್‌ಸಂಪುಟಗಳನ್ನು ಮಾಡಿಸಿದ್ದಾರೆ. ನಾವು ಕೇವಲ ಬೊಂಬೆಗಳು. ಮುಂದೆಯೂ ಕೂಡ ಶ್ರೀಪಾದರಾಜರೇ ನಿಂತು ಈ ಕಾರ್ಯವನ್ನು ನೆರವೇರಿಸುವುದರಲ್ಲಿ ಸಂದೇಹವೇ ಇಲ್ಲ. ಶ್ರೀಪಾದರಾಜರಿಗೆ ಹಾಗೂ ಶ್ರೀವ್ಯಾಸರಾಜಗುರುಸಾರ್ವಭೌಮರಿಗೆ ಪ್ರತಿನಿತ್ಯ ಪ್ರತಿಕ್ಷಣ ಅನಂತಾನಂತ ಭಕ್ತಿಯ ನಮಸ್ಕಾರಗಳನ್ನು ಸಲ್ಲಿಸುವುದಷ್ಟೆ ನಮ್ಮಿಂದ ಸಾಧ್ಯ. ಬೇರೆ ಮತ್ತೇನು ಮಾಡಲು ಸಾಧ್ಯವಾಗುವುದಿಲ್ಲ.

ಪರಮಪೂಜ್ಯ ॥ ಶ್ರೀವಿಜ್ಞಾನನಿಧಿಶ್ರೀಪಾಂದಗಳವರು ಈ ಯೋಜನೆಯನ್ನು ಪ್ರಾರಂಭ ಮಾಡಿದರು. ಈಗ ಪರಮಪೂಜ್ಯ ॥ ಶ್ರೀಕೇಶವನಿಧಿ ಶ್ರೀಪಾದಂಗಳವರು ಮುಂದುವರೆಸುತ್ತಿದ್ದಾರೆ. ಗುರುಗಳಾದ ಇವರಿಗೆ ಅನಂತಾನಂತ ನಮಸ್ಕಾರಗಳು

ಈ ಜ್ಞಾನಕಾರ್ಯದಲ್ಲಿ ತೊಡಗಿಸಿಕೊಂಡ ಪರಮಪೂಜ್ಯ ॥ ಶ್ರೀವಿದ್ಯಾಮನೋಹರತೀರ್ಥ-ಶ್ರೀಪಾದಂಗಳವರ ಜ್ಞಾನನಿಷ್ಠೆ ಪ್ರಶಂಸಾರ್ಹವಾದದ್ದು. ಅವರಿಗೆ ಯಾವುದೇ ಅನುಕೂಲ ಇಲ್ಲದಿದ್ದರೂ ಭಕ್ತರ ಮನೆಮನೆಗಳಿಗೆ ತೆರಳಿ ಭಕ್ತರನ್ನು ಭೇಟಿ ಮಾಡಿ ಈ ಕೃತಿಯ ಪ್ರಕಾಶನಕಾರ್ಯವನ್ನು ನಡೆಸುತ್ತಿದ್ದಾರೆ. ಕೇವಲ ವ್ಯಾಸರಾಜರ ಸೇವೆ ಮಾಡಬೇಕು, ಅವರ ಗ್ರಂಥಗಳನ್ನು ಪ್ರಚಾರ ಮಾಡಬೇಕೆಂಬ ಉದ್ದೇಶಬಿಟ್ಟು ಬೇರೆ ಯಾವ ಉದ್ದೇಶವೂ ಇವರಲ್ಲಿ ಕಾಣುವುದಿಲ್ಲ. ಮುಂದೆಯೂ ಎಲ್ಲಾ ಸಂಪುಟಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕೆಂಬ ಉತ್ಸಾಹವನ್ನು ಹೊಂದಿದ್ದಾರೆ. ಅನೇಕ ಜನರು ಇವರಲ್ಲಿರುವ ಶ್ರದ್ಧೆಯನ್ನು ಪ್ರಶಂಸೆ ಮಾಡುತ್ತಿದ್ದಾರೆ. ಶ್ರೀಪಾದರಾಜಮಠದ ಜೊತೆ ಸೇರಿ ಈ ಜ್ಞಾನಕಾರ್ಯದಲ್ಲಿ ತೊಡಗಿಸಿಕೊಂಡ ಇವರಿಗೆ ಅನಂತ ನಮಸ್ಕಾರಗಳು.

ಪರಿಪೂರ್ಣಚಂದ್ರಿಕೆಯ ನಿರ್ಮಾತೃಗಳಾದ ವಿದ್ವಾನ್ ಬೆಮ್ಮತ್ತಿ॥ ವೆಂಕಟೇಶಾಚಾರ್ಯರ ಸ್ನೇಹದಿಂದ ಇಂಥ ಶ್ರೇಷ್ಠವಾದ ಜ್ಞಾನಕಾರ್ಯವನ್ನು ಮಾಡಲು ನಮಗೆ ಸಾಧ್ಯವಾಯಿತು. ಅವರು ಬರೆಯುತ್ತಿರುವ ಎಲ್ಲಾ ಗ್ರಂಥಗಳನ್ನು ನಮ್ಮ ಮಠದಿಂದ ಪ್ರಕಾಶನ ಮಾಡಬೇಕೆಂಬ ಹೆಬ್ಬಯಕೆ ನಮ್ಮದಾಗಿದೆ. ರಂಗವಿಠಲಪತ್ರಿಕೆಯಲ್ಲಿಯೂ ಉತ್ತಮಲೇಖಕರಾಗಿ ಎಲ್ಲಾ ಓದುಗರ ಮನ ಗೆದ್ದಿದ್ದಾರೆ. ಇವರ ಸ್ನೇಹ ಹಾಗೂ ಆಧ್ಯಾತ್ಮ ಬಾಂಧವ್ಯಗಳು ನಿರಂತರವಾಗಿರಲಿ ಎಂದು ನಾವು ಅಪೇಕ್ಷಿಸುತ್ತೇವೆ. ಇವರ ಲೇಖನ ಶ್ರಮಕ್ಕೆ ನಾವು ಕೃತಜ್ಞತೆಯನ್ನಷ್ಟೆ ಸಲ್ಲಿಸಲು ಸಾಧ್ಯ.

ಹೆಚ್.ಬಿ. ಲಕ್ಷ್ಮೀನಾರಾಯಣಾಚಾರ್ಯರು

ಶ್ರೀಪಾದರಾಜಮಠ. ಬೆಂಗಳೂರು.

# ಲೇಖಕ ಉವಾಚ

'ಶ್ರೀಮತ್-ಪರಮಹಂಸಪರಿವ್ರಾಜಕಾಚಾರ್ಯ ।
ಪದವಾಕ್ಯಪ್ರಮಾಣಪಾರಾವಾರಪಾರೀಣ ಸರ್ವತಂತ್ರಸ್ವತಂತ್ರ ।
ಶ್ರೀಮದ್ವೈಷ್ಣವಸಿದ್ಧಾಂತಪ್ರತಿಷ್ಠಾಪನಾಚಾರ್ಯ ।
ಪೂರ್ಣಬೋಧಮತಾಂಬೋಧಿಪೂರ್ಣಚಂದ್ರಮ ।
ಶಿಷ್ಯನಿಕರಾಜ್ಞಾನತಿಮಿರಮಾರ್ತಾಂಡಪರಾಪರತತ್ವಬೋಧಕ ।
ದ್ವಾತ್ರಿಂಶಚ್ಛತಹನುಮಂತವಿಗ್ರಹಪ್ರತಿಷ್ಠಾಪಕ ।
ಅನೇಕಾಗ್ರಹಾರತಟಾಕನಿರ್ಮಾಪಕ ।
ಲಕ್ಷದ್ವಿಜಕುಟುಂಬಸಂರಕ್ಷಕ ।
ದೇವಾಲಯಾದಿಮರ್ಯಾದಾಜನಿತದಿಗಂತಪರ್ಯಾಪ್ತಯಶಸ್ಯ ।
ಪರವಾದಿಮತ್ತೇಭಮಸ್ತಕವಿದಾರಣವಿಚಕ್ಷಣಯುಕ್ತಕಲಾಪ ।
ತಾತ್ಪರ್ಯಚಂದ್ರಿಕಾನ್ಯಾಯಾಮೃತತರ್ಕತಾಂಡವಾಖ್ಯಮೇರುಕೃತಿನಿರ್ಮಾಪಕ ।
ಶ್ರೀ ಮೂಲಗೋಪಾಲಕೃಷ್ಣಪಟ್ಟಾಭಿರಾಮವೇದವ್ಯಾಸಪಾದಪದ್ಮಾರಾಧಕ ।
ವಿಜಯನಗರಾಖ್ಯ ಕರ್ನಾಟಕಸಾಮ್ರಾಜ್ಯಷಟ್‌ಚಕ್ರವರ್ತಿ ಪೋಷಕ ।
ವಿಜಯೀಂದ್ರ ವಾದಿರಾಜ ಪುರಂದರದಾಸಾದಿ ಶಿಷ್ಯೋಪದೇಶಕ ।
ಹರಿದಾಸಕೂಡ ಪ್ರತಿಷ್ಠಾಪಕ ।
ಕರ್ನಾಟಕ ಸಂಗೀತವಿದ್ಯಾಸಂಪ್ರದಾಯ ಪ್ರವರ್ತಕ ।
ಗಜಗಹ್ವರಕರ್ನಾಟಕರತ್ನ ಸಿಂಹಾಸನಾಧಿಷ್ಠಿತ ಶ್ರೀಶ್ರೀ ವ್ಯಾಸರಾಜಮಹಾಪ್ರಭೋ ।
ಸ್ವಾಮಿನ್ । ಪರಾಕ್ । ಬಹುಪರಾಕ್ ॥

ಈಗ ನನಗೆ ವ್ಯಾಸರಾಜರೇ ಅನುಗ್ರಹಿಸಿದ ಅನುಭವವಾಗುತ್ತಿದೆ. ಶ್ರೀಪಾದರಾಜಮಠ ಹಾಗೂ ವ್ಯಾಸರಾಜಮಠ ಇಬ್ಬರೂ ಸೇರಿ ಈ ಒಂಬತ್ತನೆಯ ಸಂಪುಟವನ್ನು ಮುದ್ರಣ ಮಾಡುತ್ತಿರುವುದು ಬಹಳ ಸಂತೋಷಪಡುವ ವಿಚಾರ. ಶ್ರೀಪಾದರಾಜರು ಹಾಗೂ ಶ್ರೀವ್ಯಾಸರಾಜರಿಗೆ ಇದರಿಂದ ಸಂತೋಷವಾಗುವುದರಲ್ಲಿ ಸಂದೇಹವೇ ಇಲ್ಲ. ಇವರೀರ್ವ ಯತಿಪುಂಗವರ ಅನುಗ್ರಹಕ್ಕಿಂತ ಜೀವನದಲ್ಲಿ ಬೇರೆ ಏನೂ ಬೇಡ.

"ಶ್ರೀವ್ಯಾಸರಾಜ ಮಠಾಧೀಶರಾದ ಪರಮಪೂಜ್ಯ ॥ ಶ್ರೀವಿದ್ಯಾಮನೋಹರತೀರ್ಥ-ಶ್ರೀಪಾದಂಗಳವರು ಈಗ ಶ್ರೀಪಾದಮಠದೊಂದಿಗೆ ತಾತ್ಪರ್ಯಚಂದ್ರಿಕೆಯ ಪ್ರಕಾಶನಕಾರ್ಯವನ್ನು ನಡೆಸುತ್ತಿದ್ದಾರೆ. ಶ್ರೀವ್ಯಾಸರಾಜಗುರುಸಾರ್ವಭೌಮರ ಗ್ರಂಥವನ್ನು ಪ್ರಚಾರ ಮಾಡಬೇಕು". ಇಂಥ ಕಾರ್ಯವನ್ನು ನಾವು ಮಾಡದೆ ಬೇರೆ ಯಾರು ತಾನೆ ಮಾಡಬೇಕು! ಎಂಬ ಶ್ರದ್ಧೆಯಿಂದ ತಾವಾಗಿಯೇ ಈ ಜ್ಞಾನಕಾರ್ಯದಲ್ಲಿ ತೊಡಗಿಕೊಂಡಿರುವುದು ನಾವೆಲ್ಲರೂ ಹೆಮ್ಮೆ ಪಡಬೇಕಾದ ವಿಚಾರ.

ನಾನು ಶ್ರೀಗಳವರ ಬಳಿ ಬಿನ್ನವಿಸಿದೆ - 'ಬೃಹತ್‌ಸಂಪುಟಗಳ ಮುದ್ರಣ ಸಾಮಾನ್ಯಕಾರ್ಯವಲ್ಲ. ತಮಗೆ ಹಣದ ಅನುಕೂಲತೆ ಇಲ್ಲವಾದ್ದರಿಂದ ನಿಭಾಯಿಸುವುದು ಕಷ್ಟ' ಎಂದು. ಆದರೆ ಶ್ರೀಪಾದರು ಸ್ವಲ್ಪವೂ ಯೋಚನೆ ಮಾಡದೆ ನಾವು ಕಷ್ಟಪಟ್ಟಾದರು ಪ್ರೋತ್ಸಾಹಿಸುತ್ತೇವೆ. ಇದು ನಮ್ಮ ಕರ್ತವ್ಯವೆಂದು ಹೇಳಿದರು. ಅದರಂತೆ ಅನೇಕ ಭಕ್ತರ ಬಳಿ ಈ ಯೋಜನೆಯ ಬಗ್ಗೆ ಕುರಿತು ತಿಳಿಸಿ ಶ್ರಮಪಟ್ಟು ಪ್ರಕಾಶನಕಾರ್ಯವನ್ನು ಹಮ್ಮಿಕೊಂಡರು. ಇದೇ ಉತ್ಸಾಹದಲ್ಲಿ ಶ್ರೀಪಾದರು ಹೊಸಯೋಜನೆಯನ್ನೇ ರೂಪಿಸಬಹುದಿತ್ತು. ಆದರೆ 'ಹೊಸ ದೇವಸ್ಥಾನವನ್ನು ಕಟ್ಟುವುದಕ್ಕಿಂತ ಹಳೆಯ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿದರೆ ಅದರ ಹತ್ತುಪಟ್ಟು ಪುಣ್ಯ' ಎಂಬ ಮಾತಿನಂತೆ ಹೊಸಯೋಜನೆಯನ್ನು ರೂಪಿಸುವುದಕ್ಕಿಂತ ಹಳೆಯೋಜನೆಗೆ ಹೊಸ ಚೈತನ್ಯವನ್ನು ತುಂಬುವುದು ಹೆಚ್ಚು ಸಾರ್ಥಕವೆಂಬ ಭಾವನೆ ಶ್ರೀಗಳು ತೋರಿದರು.

ಮಾಘ, ಬಹುಳ, ತ್ರಯೋದಶಿ ಶಿವರಾತ್ರಿಯಂದು ತಾತ್ಪರ್ಯಚಂದ್ರಿಕೆಯ ಜ್ಞಾನಪ್ರಸಾರೋತ್ಸವ-ಕಾರ್ಯಕ್ರಮವನ್ನು ಶ್ರೀವಿದ್ಯಾಮನೋಹರತೀರ್ಥಶ್ರೀಪಾದಂಗಳವರು ಭೋಗನರಸಿಂಹ ಹಾಗೂ ಯೋಗನರಸಿಂಹ ಕ್ಷೇತ್ರದ ಸನ್ನಿಧಾನದಲ್ಲಿ ಹಮ್ಮಿಕೊಂಡರು. ಕೇವಲ ಒಂದು ತಿಂಗಳಲ್ಲಿಯೇ ಒಂದು ಸಂಪುಟದ ಪ್ರಕಾಶನವನ್ನು ಮಾಡುತ್ತೇವೆಂದು ದರ್ಭಾರಿನಲ್ಲಿ ಘೋಷಣೆ ಮಾಡಿದರು. ಸೇರಿದ ಜನಸ್ತೋಮ ಶ್ರೀವಿದ್ಯಾಮನೋಹರತೀರ್ಥರಿಗೆ ಜಯಕಾರ ಹಾಕಿತು.

ಪ್ರತಿಯೊಬ್ಬರೂ ಅಂತರಂಗದಲ್ಲಿ ಶ್ರೀಗಳವರ ಸಾತ್ವಿಕಧೋರಣೆಯನ್ನು ಅನುಭವಿಸಿ ನಿಟ್ಟುಸಿರು ಬಿಟ್ಟರು. ಸಭೆಯಲ್ಲಿ ಸೇರಿದ ಅನೇಕ ಮಂದಿ ತಮ್ಮ ಕೈಲಾದ ಸೇವೆಯನ್ನು ನೀಡಿದರು.

ತಾತ್ಪರ್ಯ ಚಂದ್ರಿಕೆಯ ಅನುವಾದ ಕಾರ್ಯ ಪ್ರಾರಂಭವಾದದ್ದು ೨೦೦೭ ಮಾಘಶುದ್ಧ ಪಂಚಮಿ ಅಂದು ಕೇವಲ ಎರಡೇ ವರ್ಷಗಳಲ್ಲಿ ಪರಿಪೂರ್ಣವಾಗಿ ಚಂದ್ರಿಕೆ ಅನುವಾದವನ್ನು ಮುಗಿಸಬೇಕೆಂಬ ಹೆಬ್ಬಯಕೆಯಿತ್ತು. ಎರಡು ವರ್ಷಗಳಲ್ಲಿ ಮುಗಿದದ್ದು ಕೇವಲ ಜಿಜ್ಞಾಸಾಧಿಕರಣ. ಐದು ಅಧಿಕರಣ ಮುಗಿಯಲು ೩ ವರ್ಷಗಳೇ ಬೇಕಾಯಿತು. ಅಷ್ಟರಲ್ಲಿ ಬರೆದದ್ದು ೩೦೦೦ ಪುಟ ಮಾತ್ರ. ಹೀಗೆ ಏಕಾಂಗಿಯಾಗಿ ಬರೆಯುತ್ತಿದ್ದ ನನ್ನ ಶ್ರಮವನ್ನು ಗಮನಿಸಿ ಪ್ರಾರಂಭದಲ್ಲಿ ನನ್ನ ಅಣ್ಣಂದಿರಾದ ಬೆಮ್ಮತ್ತಿ ವಿಜಯೀಂದ್ರಚಾರ್ಯರು ಪುಸ್ತಕ ಪ್ರಕಾಶನವನ್ನು ಮಾಡುತ್ತೇನೆಂದು ಉತ್ಸಾಹ ತುಂಬಿದರು. ಪ್ರಾರಂಭದ ಸಂಪುಟ ಮುದ್ರಣವೂ ಆಯಿತು. ಆದರೆ ಮುಂದಿನ ಅನೇಕ

ಸಂಪುಟಗಳ ಮುದ್ರಣಕ್ಕೆ ದೊಡ್ಡ ಸಂಸ್ಥೆಯ ಅನಿವಾರ್ಯತೆ ತೀವ್ರವಾಗಿತ್ತು. ಆಗ ನನಗೆ ಒಲಿದ ಸಂಸ್ಥೆ ಶ್ರೀಪಾದರಾಜಮಠ. ಶ್ರೀ ಹೆಚ್. ಬಿ. ಲಕ್ಷ್ಮೀನಾರಾಯಣಾಚಾರ್ಯರು ನನ್ನನ್ನು ಕರೆದು 'ನೀವು ನೆಮ್ಮದಿಯಿಂದ ಲೇಖನಕಾರ್ಯದಲ್ಲಿ ತೊಡಗಿರಿ' 'ಮುಂದಿನ ಎಲ್ಲಾ ಸಂಪುಟಗಳು ಶ್ರೀಪಾದರಾಜರು ಪ್ರಕಾಶನಗೊಳಿಸುತ್ತಾರೆ. ಅವರ ಈ ಒಂದು ಮಾತೇ ಶ್ರೀಪಾದರಾಜಮಠಕ್ಕೆ ನಾನು ಪ್ರವೇಶಿಸಲು ಕಾರಣವಾಯಿತು. ಅಂದಿನಿಂದ ಇಲ್ಲಿಯತನಕ ಶ್ರೀಪಾದರಾಜಮಠದ ನೆರಳಿನಲ್ಲಿ ಸ್ವರ್ಗಸುಖವನ್ನೇ ಅನುಭವಿಸುತ್ತಿರುವೆ.

ಸುಮಾರು ಐದು ವರ್ಷಗಳಿಂದ ಲಕ್ಷ್ಮೀನಾರಾಯಣಾಚಾರ್ಯರ ಸ್ನೇಹವು ದಿನೇ ದಿನೇ ಪ್ರವರ್ಧಮಾನವಾಗುತ್ತಿದೆ. ಹೊರತು ಕಮ್ಮಿಯಾಗುತ್ತಿಲ್ಲ. ಅವರು ನೀಡಿದ ಪ್ರೋತ್ಸಾಹದಿಂದ ಇಷ್ಟೆಲ್ಲಾ ಜ್ಞಾನಕಾರ್ಯಗಳನ್ನು ವ್ಯಾಪಕವಾಗಿ ಮಾಡಲು ಸಾಧ್ಯವಾಗುತ್ತಿದೆ. ಅವರ ಉಪಕಾರವನ್ನು ಯಾವ ಜನ್ಮದಲ್ಲಿಯೂ ಯಾವ ಕ್ಷಣದಲ್ಲಿಯೂ ಮರೆಯಲು ಸಾಧ್ಯವಾಗುವುದಿಲ್ಲ.

'ಯೋಜಕಸ್ತತ್ರ ದುರ್ಲಭಃ' ಎಂಬ ಮಾತಿನಂತೆ ನಾವು ಎಷ್ಟು ಬೇಕಾದರೂ ಬರೆಯಬಹುದು ಬರೆದದ್ದನ್ನು ಯೋಜನೆ ಮಾಡಿ ಪ್ರಕಾಶನ ಮಾಡುವ ಕಾರ್ಯ ಸುಲಭದ ಮಾತಲ್ಲ. ಅಂಥ ವಿಶೇಷ ಅನುಕೂಲತೆ ಇಲ್ಲದಿದ್ದರೂ ಕೇವಲ ಶ್ರೀಪಾದರಾಜರ ಶ್ರೀವ್ಯಾಸರಾಜರ ಮೇಲಿರುವ ಭಕ್ತಿಯಿಂದ ಲಕ್ಷ್ಮೀನಾರಾಯಣಾಚಾರ್ಯರು ಈ ಜ್ಞಾನಕಾರ್ಯವನ್ನು ನಡೆಸುತ್ತಿದ್ದಾರೆ. ಶ್ರೀಪಾದರಾಜಮಠದ ಯತಿಪುಂಗವರಾದ ಪರಮಪೂಜ್ಯ ॥ ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರನ್ನು ನಾವು ಕಳೆದುಕೊಂಡಿರುವೆವು ಎಂಬ ದುಃಖವನ್ನು ಕೂಡ ಮರೆಸುವಂತೆ ಇವರು ಜ್ಞಾನಕಾರ್ಯವನ್ನು ನಡೆಸುತ್ತಿದ್ದಾರೆ.

ಶ್ರೀಪಾದರಾಜಮಠದ ಪ್ರಸ್ತುತಪೀಠಾಧಿಪತಿಗಳಾದ ಶ್ರೀಕೇಶವನಿಧಿ ಶ್ರೀಪಾದಂಗಳರು ಪ್ರತಿಯೊಂದು ಜ್ಞಾನಕಾರ್ಯದಲ್ಲಿಯೂ ಆಸಕ್ತಿಯುಳ್ಳವರು. ಹಾಗೂ ಅಂತರಂಗಸಾಧನೆಯಲ್ಲಿ ತಮ್ಮಷ್ಟಕ್ಕೆ ತಾವು ಸಾಧನೆ ಗೈಯುತ್ತಿರುವರು. ಈ ಜ್ಞಾನಕಾರ್ಯಕ್ಕಾಗಿ ಅವರ ಅನುಗ್ರಹ ಹಾಗೂ ಪ್ರೋತ್ಸಾಹಗಳು ಅಪಾರವಾಗಿವೆ. ಅವರಿಗೆ ಅನಂತ ನಮಸ್ಕಾರಗಳು ಹಾಗೂ ಕೃತಜ್ಞತೆಗಳು.

ಪ್ರಾರಂಭದಿಂದಲೂ ಪರಿಪೂರ್ಣಚಂದ್ರಿಕೆಯ ಪ್ರಕಾಶನಕಾರ್ಯದಲ್ಲಿ ಪ್ರೋತ್ಸಾಹ ಮಾಡುತ್ತಿರುವ ಅಣ್ಣಂದಿರಾದ ಬೆಮ್ಮತ್ತಿ ವಿಜಯೀಂದ್ರಾಚಾರ್ಯರಿಗೆ ಅನಂತ ಕೃತಜ್ಞತೆಗಳು ಹಾಗೂ ನಮಸ್ಕಾರಗಳು. ಈ ಸಂಪುಟದ ಡಿ.ಟಿ.ಪಿ. ಕಾರ್ಯಕ್ಕಾಗಿ ಸಂಪೂರ್ಣವಾಗಿ ಸಹಾಯ ಮಾಡಿದ ಲೀಲಾ ಶ್ರೀನಿವಾಸಪ್ರಸಾದ್ ಅವರಿಗೆ ಅನಂತ ಕೃತಜ್ಞತೆಗಳು.

ಈ ಗ್ರಂಥ ಪ್ರಕಾಶನಕ್ಕೆ ಮೊದಲಿಂದಲೂ ಬಹಳಷ್ಟು ಪ್ರೋತ್ಸಾಹಿಸುತ್ತಿರುವ ಸತ್ಕುಲ ಪ್ರಸೂತರು ದೊಡ್ಡ ತ್ಯಾಗಿಗಳೂ ನಿರಂತರ ಹಸನ್ಮುಖಿಗಳೂ ಧೀರೋದಾತ್ತ ಸ್ವಭಾವವುಳ್ಳ ಮತ್ತೊಬ್ಬ ಹರಿಭಕ್ತರು ಶ್ರೀಮತಿ ಲೀಲಾ ಮತ್ತು ಶ್ರೀ ಶ್ರೀನಿವಾಸಪ್ರಹ್ಲಾದ ಇವರ ಬೆಂಬಲವಿಲ್ಲದಿದ್ದಲ್ಲಿ 'ಪರಿಪೂರ್ಣಚಂದ್ರಿಕಾ'

ಗ್ರಂಥವು ಪ್ರಕಾಶನವಾಗುತ್ತಿತ್ತೋ? ಇಲ್ಲವೋ? ಎಂದೇ ಅನೇಕ ಬಾರಿ ಸಂಶಯ ಬರುತ್ತದೆ. ಇವರ ಸೇವೆ ಗುರುಗಳಿಗೆ ಭಗವಂತನಿಗೆ ನಿಶ್ಚಯವಾಗಿಯೂ ತಲುಪಿದೆ. ಇವರಿಗೆ ಶ್ರೀಹರಿವಾಯುಗುರುಗಳು ಪರಮಮಂಗಳವನ್ನುಂಟು ಮಾಡಿ ಮತ್ತಷ್ಟು ಹರಿಭಕ್ತಿ, ತತ್ವಜ್ಞಾನ ವಿಷಯವೈರಾಗ್ಯಗಳನ್ನು ಅಭಿವೃದ್ಧವಾಗುವಂತೆ ಅನುಗ್ರಹಿಸಲೆಂದಷ್ಟೇ ಪ್ರಾರ್ಥಿಸುತ್ತೇನೆ.

ಸ್ವತಃ ತಾವೇ ಹುಡುಕಿಕೊಂಡು ಬಂದು ಈ ಕಾರ್ಯಕ್ಕೆ ಪ್ರೋತ್ಸಾಹಿಸಿದ ಮತ್ತೊಬ್ಬ ಹರಿಭಕ್ತರು ಶ್ರೀ ಭೀಮಣ್ಣ ಹಾಗೂ ಶ್ರೀಮತಿ ವಿಜಯಾ ದಂಪತಿಗಳು. ಇವರು ಈ ಗ್ರಂಥ ಪ್ರಕಾಶನಕ್ಕೆ ಆರ್ಥಿಕ ಸಹಾಯವನ್ನು ಮಾಡಿದ್ದಲ್ಲದೆ ಶಾಸ್ತ್ರನಿಧಿ ಬಿ. ವೆಂಕಟೇಶಾಚಾರ್ಯ ಮೆಮೋರಿಯಲ್ ಟ್ರಸ್ಟ್‌ನ ಮುಖ್ಯಾಧಿಕಾರಿಗಳಾದ ಶ್ರೀ ಬಿ.ಆರ್. ಚಕ್ರಪಾಣಿ ಇವರಿಂದಲೂ ಆರ್ಥಿಕ ಸಹಾಯವನ್ನು ಮಾಡಿಸಿದ್ದಾರೆ. ಶ್ರೀ ಭೀಮಣ್ಣನವರ ಉಪಕಾರವನ್ನು ಎಂದೂ ಮರೆಯಲಾರೆ. ಇವರೀರ್ವ ದಂಪತಿಗಳಿಗೆ ಶ್ರೀಹರಿವಾಯುಗುರುಗಳು ಉತ್ತಮವಾದ ಜ್ಞಾನಭಕ್ತಿವೈರಾಗ್ಯಗಳನ್ನು ನೀಡಲಿ ಹಾಗೂ ಇವರ ತಂದೆ-ತಾಯಂದಿರಾದ ಕೀರ್ತಿಶೇಷ ಅನುಸೂಯಬಾಯಿ, ಬಾಡಿಗಾರ್ಡ್ ಪ್ರಾಣೇಶ್‌ರಾವ್ ಇವರಿಗೆ ಈ ಗ್ರಂಥದ ಜ್ಞಾನದಾನದ ಪುಣ್ಯವು ದೊರೆಯಲೆಂದು ಹಾರೈಸುತ್ತೇನೆ.

ಪರೋಕ್ಷವಾಗಿ ಪ್ರತ್ಯಕ್ಷವಾಗಿ ಸಹಕರಿಸಿದ ಎಲ್ಲ ಮಹನೀಯರಿಗೂ ಅನಂತ ಕೃತಜ್ಞತೆಗಳು.

ಅನುವಾದಕರು

ಬೆಮ್ಮತ್ತಿ ವೆಂಕಟೇಶಾಚಾರ್ಯ.

# ವಿಷಯಾನುಕ್ರಮಣಿಕೆ

## ಆನುಮಾನಿಕಾಧಿಕರಣ



* * *

## ಜ್ಯೋತಿರುಪಕ್ರಮಾಧಿಕರಣ



* * *

## ನ ಸಂಖ್ಯೋಪಸಂಗ್ರಹಾಧಿಕರಣ

# ಚತುರ್ಥಪಾದದ ಸಾರಾಂಶ

## ನಾಲ್ಕನೆಯ ಪಾದಕ್ಕೆ ಸಾರ್ಥಕ್ಯ ಚಿಂತನೆ

ಅನ್ಯತ್ರೈವಪ್ರಸಿದ್ಧ ಶಬ್ದ ಸಮನ್ವಯವನ್ನು ಮಾಡಲು ಹೊರಟಿರುವ ನಾಲ್ಕನೆಯ ಪಾದವು ಪ್ರಾರಂಭವಾಗುತ್ತಿದೆ. ಮೊದಲಿನ ಎರಡು ಪಾದಗಳಲ್ಲಿ ಅನ್ಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡಲಾಯಿತು. ಮೂರನೆಯ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡಿದ್ದಾಯಿತು. ಪ್ರಕೃತ ಈ ಅಧಿಕರಣದಲ್ಲಿ ಅನ್ಯತ್ರೈವಪ್ರಸಿದ್ಧವಾದ ಅವ್ಯಕ್ತಾದಿ ಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

ವಾಸ್ತವಿಕವಾಗಿ ಶಬ್ದಗಳಲ್ಲಿ 'ಅನ್ಯತ್ರಪ್ರಸಿದ್ಧ' ಹಾಗೂ 'ಉಭಯತ್ರಪ್ರಸಿದ್ಧ' ಮತ್ತು 'ತತ್ರಪ್ರಸಿದ್ಧ' ಎಂಬ ಮೂರು ಬಗೆಯ ವಿಭಾಗಗಳನ್ನಷ್ಟೇ ಹೇಳಲು ಸಾಧ್ಯ. 'ತತ್ರಪ್ರಸಿದ್ಧ' ಎಂದರೆ ವಿಷ್ಣು ನಾರಾಯಣ ಮೊದಲಾದ ಶಬ್ದಗಳು ಇವುಗಳ ಸಮನ್ವಯ ಮಾಡುವ ಅವಶ್ಯಕತೆಯಿರುವುದಿಲ್ಲ. ಅನ್ಯತ್ರಪ್ರಸಿದ್ಧವಾದ ಶಬ್ದಗಳೆಂದರೆ ಇಂದ್ರಾದಿ ಶಬ್ದಗಳು ಇವುಗಳನ್ನು ಮೊದಲಿನೆರಡು ಪಾದದಲ್ಲಿ ಸಮನ್ವಯ ಮಾಡಿದ್ದಾಗಿದೆ. ಉಭಯತ್ರಪ್ರಸಿದ್ಧವೆಂದರೆ ವಿಷ್ಣು ಹಾಗೂ ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾಗಿರುವ ಶಬ್ದಗಳು ಇದನ್ನು ಮೂರನೆಯ ಪಾದದಲ್ಲಿ ಸಮನ್ವಯ ಮಾಡಲಾಗಿದೆ. ಈ ಮೂರು ಬಗೆಯ ಶಬ್ದಗಳನ್ನು ಬಿಟ್ಟು, ಪುನಃ ಅನ್ಯತ್ರಪ್ರಸಿದ್ಧ ಎಂಬ ನಾಲ್ಕನೆಯ ಪ್ರಕಾರವು ಇರುವುದಿಲ್ಲ. ಇದು ಅನ್ಯತ್ರಪ್ರಸಿದ್ಧದಲ್ಲೇ ಗತಾರ್ಥವಾಗುತ್ತದೆ. ಏಕೆಂದರೆ ಅನ್ಯತ್ರಪ್ರಸಿದ್ಧ ಶಬ್ದವೆಂದರೂ ಅನ್ಯತ್ರೈವಪ್ರಸಿದ್ಧ ಶಬ್ದವೆಂದರೂ ಒಂದೇ ಅರ್ಥ. ಒಂದು ವೇಳೆ ಅನ್ಯತ್ರಪ್ರಸಿದ್ಧ ಎಂಬುದಕ್ಕೆ ಜಗತ್ತಿನಲ್ಲೂ ಪ್ರಸಿದ್ಧವಾಗಿದೆ, ವಿಷ್ಣುವಿನಲ್ಲೂ ಪ್ರಸಿದ್ಧವಾಗಿದೆ ಎಂಬರ್ಥವನ್ನೇನಾದರೂ ಹೇಳುವುದಾದರೆ ಆವಾಗ ಅದು ಅನ್ಯತ್ರಾಪಿಪ್ರಸಿದ್ಧ ಎಂದೇ ಅರ್ಥವನ್ನು ನೀಡುತ್ತದೆ. ಆವಾಗ ಉಭಯತ್ರಪ್ರಸಿದ್ಧದಲ್ಲೇ ಸೇರಿಸಿದಂತಾಗುತ್ತದೆ. ಹೀಗೆ ಅನ್ಯತ್ರೈವಪ್ರಸಿದ್ಧವೆಂಬ ಪ್ರತ್ಯೇಕ ವಿಭಾಗವೇ ಇಲ್ಲದ ಕಾರಣ, ಈ ಪಾದವನ್ನು ಸೂತ್ರಕಾರರು ಏಕೆ ಪ್ರತ್ಯೇಕವಾಗಿ ರಚನೆ ಮಾಡುತ್ತಿದ್ದಾರೆ? ಎಂಬ ಪ್ರಬಲವಾದ ಪ್ರಶ್ನೆ ಬರುತ್ತದೆ.

ಈ ಪ್ರಶ್ನೆಗೆ ಟೀಕೆಯಲ್ಲಿ ಎರಡು ರೀತಿಯ ಸಮಾಧಾನಗಳನ್ನು ನೀಡಿರುತ್ತಾರೆ. ಅಂದರೆ ಅನ್ಯತ್ರಪ್ರಸಿದ್ಧವೆಂದರೂ, ಅನ್ಯತ್ರೈವಪ್ರಸಿದ್ಧಶಬ್ದವೆಂದರೂ ಒಂದೇ ಅರ್ಥ ಎಂಬುದು ಸರಿಯಾದ ವಿಚಾರವೇ ಆಗಿದೆ. ಆದರೆ ಪ್ರಥಮ ಪಾದದಲ್ಲಿ ಯಾವ ಇಂದ್ರಾದಿ ಶಬ್ದಗಳನ್ನು ಸಮನ್ವಯ ಮಾಡಲಾಯಿತೋ, ಅವುಗಳನ್ನು ಅನ್ಯತ್ರಪ್ರಸಿದ್ಧವೆನ್ನಲು ಶ್ರುತಿಲಿಂಗಾದಿಗಳು ಪ್ರಮಾಣವಾಗಿರಲಿಲ್ಲ. ಆದರೆ ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಅವ್ಯಕ್ತಾದಿ ಶಬ್ದಗಳು, ಶ್ರುತಿಲಿಂಗಾದಿಗಳ ಬಲದಿಂದಲೇ ಅನ್ಯತ್ರಪ್ರಸಿದ್ಧವೆಂದು ಕಾಣಿಸುತ್ತಿವೆ. ಈ ದೃಷ್ಟಿಯಿಂದ 'ಅನ್ಯತ್ರೈವಪ್ರಸಿದ್ಧಿ' ಎಂಬುದನ್ನು ಪ್ರತ್ಯೇಕವಾಗಿ ಪರಿಗಣಿಸಲಾಗಿದೆ. ಅಥವಾ ಇಂದ್ರಾದಿ ಶಬ್ದಗಳು ಅನ್ಯತ್ರಪ್ರಸಿದ್ಧವೆನ್ನಲು ಶ್ರುತಿಲಿಂಗಾದಿ ಪ್ರಮಾಣಗಳಿರಬಹುದು. ಆದರೆ ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಅವ್ಯಕ್ತಾದಿ ಶಬ್ದಗಳು ಅನ್ಯತ್ರಪ್ರಸಿದ್ಧವೆನ್ನಲು ಬಲಿಷ್ಠವಾದ ಶ್ರುತಿಲಿಂಗಾದಿಗಳು

ಪ್ರಮಾಣವಾಗಿವೆ. ಈ ದೃಷ್ಟಿಯಿಂದಲೂ ಅನ್ಯತ್ರಪ್ರಸಿದ್ಧವೆಂಬ ವಿಭಾಗವನ್ನು ಮಾಡಲಾಗಿದೆ. ಆದ್ದರಿಂದ ಈ ಪಾದವು ಸಾರ್ಥಕವಾಗಿದೆ.

ಅಥವಾ ಮತ್ತೊಂದು ಬಗೆಯಲ್ಲಿ ಈ ಪಾದಕ್ಕೆ ಸಾರ್ಥಕ್ಯವನ್ನು ತಿಳಿಯಬಹುದು. ಹಿಂದಿನ ಮೂರು ಪಾದಗಳಲ್ಲಿ ಜಗತ್ಕಾರಣತ್ವಕ್ಕೆ ಉಪಯುಕ್ತವಾದ ಪ್ರತಿಯೊಂದು ಶ್ರುತಿವಾಕ್ಯಗಳ ಸಮನ್ವಯವನ್ನು ತಿಳಿದಿದ್ದಾಯಿತು. ಈ ಪಾದದಲ್ಲಿ ಗುಣಪೂರ್ಣತ್ವಕ್ಕೆ ಉಪಯುಕ್ತವಾದ ಅವ್ಯಕ್ತಾದಿಶಬ್ದಗಳ ಸಮನ್ವಯವನ್ನು ತಿಳಿಸಲಾಗಿದೆ. ಪ್ರಥಮ ಸೂತ್ರದಲ್ಲಿ ಗುಣಪರಿಪೂರ್ಣತ್ವವೇ ಬ್ರಹ್ಮನ ಮುಖ್ಯಲಕ್ಷಣವೆಂದು ಹೇಳಿದ್ದಾರೆ. ಅದನ್ನು ಸಮರ್ಥಿಸಲು ಎರಡನೆಯ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವು ಹೊರಟಿದೆ. ಅದೇ ವಿಷಯದಲ್ಲಿ ಶಾಸ್ತ್ರಗಳು ಪ್ರಮಾಣವಾಗಿವೆ ಎಂದು ಮೂರನೆಯ ಸೂತ್ರವು ಸಮರ್ಥನೆ ಮಾಡಿದರೆ, ನಾಲ್ಕನೇ ಸೂತ್ರವು ಗುಣಪರಿಪೂರ್ಣತ್ವಕ್ಕಾಗಿಯೇ ಸಕಲಶಬ್ದಗಳ ಸಮನ್ವಯವನ್ನು ಪ್ರತಿಜ್ಞೆಮಾಡಿದೆ. ಜಗತ್ಕಾರಣತ್ವಕ್ಕೆ ಉಪಯುಕ್ತವಾದ ಶಬ್ದಗಳ ಸಮನ್ವಯವನ್ನು ಮೊದಲಿನ ಮೂರು ಪಾದಗಳಲ್ಲಿ ತಿಳಿದ ಮಾತ್ರಕ್ಕೆ ಸಮನ್ವಯಾಧಿಕರಣದ ಪ್ರತಿಜ್ಞೆಯು ಪೂರ್ತಿಯಾಗುವುದಿಲ್ಲ. ಅದಕ್ಕೋಸ್ಕರ ಈ ಪಾದವು ಸ್ವರ, ವರ್ಣ, ಪದ ಮೊದಲಾದ ಸಕಲಶಬ್ದಗಳ ಸಮನ್ವಯವನ್ನು ಮಾಡಲು ಹೊರಟಿರುವುದರಿಂದ, ವಿಷ್ಣುವಿನ ಗುಣಪರಿಪೂರ್ಣತ್ವ ಎಂಬ ಲಕ್ಷಣವು ಸಿದ್ಧವಾಗುತ್ತದೆ. ಆದ್ದರಿಂದಲೂ ಈ ಪಾದವು ಸಾರ್ಥಕ.

ವಾಸ್ತವಿಕವಾಗಿ ಮಹಾವಿಷ್ಣುವು ಒಂದು ಗುಣದಿಂದ ಪೂರ್ಣನಾಗಿದ್ದಾನೆಂದು ಹೇಳಿದರೂ ಸಾಕು. ಆ ಗುಣದಲ್ಲಿ ನಿರತಿಶಯತ್ವಾದಿಗಳು ಇರುವ ಕಾರಣ ಅತಿವ್ಯಾಪ್ತ್ಯಾದಿದೋಷಗಳು ಬರುವುದಿಲ್ಲ. ಅದರಿಂದಲೇ ಜೀವಭೇದವು ಸಿದ್ಧವಾಗುತ್ತದೆ. ಆದರೆ ಮುಮುಕ್ಷುವಾದವನು ಒಂದೇ ಗುಣದಿಂದ ಪೂರ್ಣನೆಂದು ತಿಳಿದರೆ ಸಾಲದು, ಎಲ್ಲಾ ಗುಣಗಳಿಂದಲೂ ಕೂಡ ಭಗವಂತನು ಪೂರ್ಣನಾಗಿದ್ದಾನೆಂದು ತಿಳಿಯಬೇಕು. ಆದ್ದರಿಂದಲೇ ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಜನ್ಮಕರ್ತೃತ್ವ ಎಂಬ ಲಕ್ಷಣವನ್ನು ಹೇಳದೇ ಅಷ್ಟಕರ್ತೃತ್ವ ಲಕ್ಷಣವನ್ನು ಹೇಳಿರುತ್ತಾರೆ. ಆದ್ದರಿಂದ ಸಕಲಗುಣಪರಿಪೂರ್ಣತ್ವವನ್ನು ತಿಳಿಯಬೇಕೆಂದರೆ ಸಕಲಶಬ್ದವಾಚ್ಯತ್ವವನ್ನು ಪರಮಾತ್ಮನಲ್ಲಿ ಅತ್ಯವಶ್ಯವಾಗಿ ತಿಳಿಯಲೇ ಬೇಕು.

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಯಾವ ಜಗಜ್ಜನ್ಮಾದಿಕಾರಣತ್ವ ಲಕ್ಷಣವನ್ನು ಹೇಳಿರುತ್ತಾರೋ ಅದಕ್ಕೋಸ್ಕರವೇ ಈ ಸಮಸ್ತ ಅಧ್ಯಾಯವು ಹೊರಟಿದೆ ಎಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಅಂತಸ್ತದ್ಧರ್ಮೋಪದೇಶಾತ್, ಜ್ಯೋತಿಶ್ಚರಣಾಭಿಧಾನಾತ್, ಸರ್ವತ್ರಪ್ರಸಿದ್ಧೋಪದೇಶಾತ್ ಇವೇ ಮೊದಲಾದ ಸೂತ್ರಗಳಲ್ಲಿ ಯಾವ ವಿಷಯವಾಕ್ಯವನ್ನು ಸಮನ್ವಯ ಮಾಡಲಾಗಿದೆಯೋ, ಆ ವಾಕ್ಯಗಳಲ್ಲಿ ಜನ್ಮಕಾರಣತ್ವಲಕ್ಷಣವು ಕಾಣಿಸುತ್ತಲೇ ಇಲ್ಲ. ಆದ್ದರಿಂದ ಅನಿವಾರ್ಯವಾಗಿ ಗುಣಪರಿಪೂರ್ಣತ್ವದ ಉದ್ದೇಶವೇ ಈ ಅಧ್ಯಾಯಕ್ಕೆ ಇರುತ್ತದೆಂಬುದನ್ನು ತಿಳಿಯಬೇಕು.

### ಚತುರ್ಥಪಾದದಲ್ಲಿ ಎಷ್ಟು ಅಧಿಕರಣಗಳು ?

ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್ ।
ಪೃಥಕ್ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥

ವಿರೋಧಿ, ಸರ್ವ, ಬಾಹುಲ್ಯ, ಕಾರಣ, ಸ್ತ್ರೀ, ನಿಷೇಧ ಈ ಅರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಪ್ರತ್ಯೇಕ, ಪ್ರತ್ಯೇಕವಾಗಿ ಮಾಡಲಾಗಿದೆ. ಅನುವ್ಯಾಖ್ಯಾನದ ಈ ಶ್ಲೋಕವನ್ನು ಗಮನಿಸಿದಾಗ ಆರು ಉಪಾಧಿಗಳು ಕಾಣಿಸುತ್ತಿವೆ. ಆದ್ದರಿಂದ ಈ ಪಾದದಲ್ಲಿ ಆರು ಅಧಿಕರಣಗಳಿವೆ ಎಂದೇ ತಿಳಿಯುತ್ತದೆ. ತ್ರಿವಿಕ್ರಮಾಪಂಡಿತಾಚಾರ್ಯರೂ ಕೂಡ ಹಾಗೆಯೇ ಆರು ಅಧಿಕರಣಗಳೆಂದುವ್ಯಾಖ್ಯಾನಮಾಡಿದ್ದಾರೆ.ಆದರೆಸುಧಾಕಾರರುಏಳುಅಧಿಕರಣಗಳೆಂದುಪರಿಗಣಿಸಿದ್ದಾರೆ 'ಸಮಾಕರ್ಷಾತ್' ಇತ್ಯಾದಿ ಎಂಟುಸೂತ್ರಗಳು ಹಿಂದಿನ ಆಕಾಶಾಧಿಕರಣದ ಗುಣಸೂತ್ರವಲ್ಲ. ಪ್ರತ್ಯೇಕ ಅಧಿಕರಣವೆಂಬುದು ಸುಧಾಕಾರರ ಪಕ್ಷ. ಅನುವ್ಯಾಖ್ಯಾನದಲ್ಲಿ ಎರಡನೆಯ ಅಧಿಕರಣದ 'ಸರ್ವ' ಎಂಬ ಉಪಾಧಿಯೇ ಐದನೆಯ ಸಮಾಕರ್ಷಾಧಿಕರಣಕ್ಕೂ ಸಂಬಂಧ ಪಡುವುದರಿಂದ ಪ್ರತ್ಯೇಕವಾಗಿ ಉಪಾಧಿಯನ್ನು ಉಲ್ಲೇಖಿಸಿಲ್ಲ. ಕೇವಲ ಉಪಾಧಿಯು ಒಂದೇ ಆಗಿದ್ದರೂ, ನ್ಯಾಯದಲ್ಲಿ ವ್ಯತ್ಯಾಸವಿರುವ ಕಾರಣ ಅಧಿಕರಣ ಭೇದವನ್ನು ಸಮರ್ಥಿಸಬೇಕು.

ಎರಡನೆಯ ಅಧಿಕರಣದಲ್ಲಿ ಎಲ್ಲಾ ಶಬ್ದಗಳನ್ನೂ ಸಮನ್ವಯ ಮಾಡುತ್ತಾರೆಂದರೆ ಶ್ರುತಿಯಲ್ಲಿರುವ ಪದ, ವರ್ಣಗಳ ಸಮನ್ವಯವೆಂದು ತಿಳಿಯಬೇಕು. ಹೊರತು, ವಾಕ್ಯಗಳ ಸಮನ್ವಯವು ಉದ್ದೇಶವಾಗಿಲ್ಲ. ಅಂದರೆ ಯಾವಶ್ರುತಿಗಳನ್ನು ವಾಕ್ಯರೂಪದಿಂದ ಹಿಂದಿನ, ಮುಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡಿರುತ್ತಾರೋ, ಅದೇ ಶ್ರುತಿಗಳಲ್ಲಿರುವ ಪ್ರತಿಯೊಂದು ಪದಗಳನ್ನು, ವರ್ಣಗಳನ್ನು ಸಮನ್ವಯ ಮಾಡಲು ಎರಡನೆಯ ಜ್ಯೋತಿರುಪಕ್ರಮಾಧಿಕರಣವು ಹೊರಟಿರುತ್ತದೆ.

### ದೋಷವಾಚಕಶಬ್ದಗಳ ಸಮನ್ವಯ ಆವಶ್ಯಕವೇ ?

ನಾಲ್ಕನೆಯ ಈ ಪಾದದಲ್ಲಿ ದೋಷವಾಚಕಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಆದರೆ ಇಂಥ ಶಬ್ದಗಳ ಸಮನ್ವಯವು ಆವಶ್ಯಕವೇ? ಎಂಬುದನ್ನು ವಿಚಾರ ಮಾಡಬೇಕು. ಪರಮಾತ್ಮನು ಗುಣಪರಿಪೂರ್ಣನಾಗಿದ್ದಾನೆಂಬ ಅರಿವಿಗಾಗಿ 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳ ಸಮನ್ವಯವು ಅನಾವಶ್ಯಕ.

ಅಪೂರ್ವವಾದ ಯೋಗವೃತ್ತಿಯನ್ನು 'ದುಃಖೀ' ಮೊದಲಾದ ಶಬ್ದಗಳಿಗೆ ಕಲ್ಪನೆ ಮಾಡಿ, ಇವುಗಳೂ ಕೂಡ ಗುಣವಾಚಕವಾಗಿವೆಯೆಂದು ಸಮರ್ಥನೆ ಮಾಡಬೇಕು. ಆದರೆ ಈ ಶಬ್ದಗಳು ದೋಷವಾಚಕಗಳೇ ಆಗಿವೆ. ಈ ದೋಷಗಳೆಲ್ಲವೂ ವಿಷ್ಣುವಿನ ಅಧೀನವಾಗಿವೆ ಎಂದು ಸಿದ್ಧಾಂತಿಗಳಾದ ನೀವೇ ಸಮರ್ಥನೆ ಮಾಡುತ್ತೀರಿ. ಹೀಗಿರುವಾಗ ಬೇರೆ ಪ್ರವೃತ್ತಿನಿಮಿತ್ತವನ್ನು ಒಪ್ಪಿ ಗುಣವಾಚಕಗಳೆಂದು ಸಮರ್ಥನೆ ಮಾಡಲು ಸಾಧ್ಯವಿಲ್ಲ.

ಇತರರಲ್ಲಿರುವ ದುಃಖಕ್ಕೆ ಭಗವಂತನು ಸ್ವಾಮಿಯಾಗಿರುವುದರಿಂದ ಸರ್ವನಿಯಾಮಕತ್ವ ಎಂಬ ಮಹಿಮೆಯ ಸಿದ್ಧಿಗೋಸ್ಕರ ಇಂಥ ದೋಷವಾಚಕಶಬ್ದಗಳ ಸಮನ್ವಯವನ್ನು ಮಾಡುವುದು ಸಾರ್ಥಕವಲ್ಲವೇ? ಎಂಬ ಪ್ರಶ್ನೆಯೂ ಕೂಡ ಅಸಾಧುವಾಗಿದೆ. ಈ ಸರ್ವನಿಯಾಮಕತ್ವವೆಂಬ ಗುಣವು ಅಂತರ್ಯಾಮ್ಯಧಿಕರಣದ ನ್ಯಾಯದಿಂದಲೇ ಮಹಾವಿಷ್ಣುವಿನಲ್ಲಿ ಸಿದ್ಧವಾಗಿದೆ. ಪುನಃ ಆನುಮಾನಿಕಾಧಿ-ಕರಣದಲ್ಲಿ ಇತರ ಸಮರ್ಥನೆ ಅನಾವಶ್ಯಕ. ಇಷ್ಟು ಆಕ್ಷೇಪ.

ಈ ಆಕ್ಷೇಪವು ಅಸಾಧುವಾಗಿವೆ. ಪರಮಾತ್ಮನಲ್ಲಿ ಸಕಲಗುಣಪರಿಪೂರ್ಣತ್ವವನ್ನು ತಿಳಿಯುವುದೇ ಮುಖ್ಯ ಉದ್ದೇಶವಲ್ಲ. ಸಕಲಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂಬುದನ್ನೂ ಕೂಡ ತಿಳಿದುಕೊಳ್ಳಬೇಕು. ವೇದದಲ್ಲಿರುವ ಪ್ರತಿಯೊಂದು ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ತಿಳಿದಾಗ ಮಾತ್ರ ಮೋಕ್ಷವಾಗಲು ಸಾಧ್ಯ. ಈ ಕಾರಣಕ್ಕಾಗಿ ದೋಷವಾಚಕಶಬ್ದಗಳ ಸಮನ್ವಯಕ್ಕಾಗಿ ಈ ಅಧಿಕರಣವು ಹೊರಟಿದೆ. ಆದ್ದರಿಂದ ಆನುಮಾನಿಕಾಧಿಕರಣದ ಪ್ರಾರಂಭವನ್ನು ಅನಾವಶ್ಯಕವೆಂದು ಹೇಳಬಾರದು.

''ನಾಮಾನಿ ಸರ್ವಾಣಿ'' ಎಂಬಲ್ಲಿರುವ ಸರ್ವಪದದ ಅರ್ಥವನ್ನು ಸಂಕೋಚ ಮಾಡಬಾರದು

ಮೋಕ್ಷವನ್ನು ಬಯಸುವ ಸಾಧಕನು ಪ್ರತಿಯೊಂದು ಶಬ್ದಗಳೂ ಕೂಡ ಹರಿನಾಮಗಳಾಗಿವೆ ಎಂಬುದನ್ನು ಅವಶ್ಯವಾಗಿ ತಿಳಿಯಲೇ ಬೇಕು. 'ನಾಮಾಯತ್ತಾ ಸಮತೃಪ್ಯಂಚ್ಛ್ರತೇಧಿ' ಎಂಬ ಶ್ರುತಿಯು ಇದನ್ನು ಸಾರುತ್ತಿದೆ. ಇದನ್ನು ತಿಳಿಯಬೇಕೆಂದರೆ 'ದುಃಖೀ', 'ಬದ್ಧಃ' 'ಅವ್ಯಕ್ತ' ಮೊದಲಾದ ಶಬ್ದಗಳೂ ಕೂಡ ಹರಿನಾಮಗಳೇ ಆಗಿವೆಯೆಂದು ತಿಳಿಯಲೇ ಬೇಕು.

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಎಲ್ಲಾ ವಿಧವಾದ ವೈದಿಕಶಬ್ದಗಳು ಭಗವಂತನಲ್ಲೇ ಸಮನ್ವಯ ಹೊಂದುತ್ತವೆಂದು ಹೇಳುತ್ತಿದೆ. ಈ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ದೋಷವಾಚಕಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳು ಮಾತ್ರ ಸಮನ್ವಯವಾಗುತ್ತವೆಂದು ಸಂಕೋಚ ಮಾಡಬಾರದು. ಹಾಗಾದಲ್ಲಿ ಇಂದ್ರಾದಿ ಶಬ್ದಗಳ ಸಮನ್ವಯವನ್ನೂ ಕೂಡ ಕೈ ಬಿಡಬೇಕಾಗುತ್ತದೆ. ಇಂದ್ರಾದಿಶಬ್ದಗಳನ್ನು ಸಮನ್ವಯ ಮಾಡುವಾಗ ದೇವೇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗಳು ಭಗವದಧೀನವಾಗಿವೆ ಎಂದು ಹೇಗೆ ವ್ಯಾಖ್ಯಾನ ಮಾಡಿ, ಸಮನ್ವಯ ಮಾಡಲಾಗುತ್ತದೋ, ಅದೇ ರೀತಿಯಾಗಿ ಇತರರಲ್ಲಿರುವ ದುಃಖ, ಬಂಧನ ಮೊದಲಾದವೂ ಕೂಡ ಭಗವದಧೀನವಾದ್ದರಿಂದ ಭಗವಂತನು 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯ-ನಾಗುತ್ತಾನೆಂದು ತಿಳಿಯಬೇಕು.

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯನ್ನು ಇಂದ್ರಾದಿಶಬ್ದಗಳ ಸಮನ್ವಯ ವಿಷಯದಲ್ಲಿ ಬಿಟ್ಟು, ಉಳಿದ ಶಬ್ದಗಳ ಸಮನ್ವಯ ವಿಷಯದಲ್ಲಿ ಸಂಕೋಚ ಮಾಡಲು ಸಾಧ್ಯವಿಲ್ಲ. ಏಕೆಂದರೆ 'ಇಂದ್ರೋ ರಾಜಾ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಇಂದ್ರಾದಿಶಬ್ದಗಳ ಸಮನ್ವಯವನ್ನು ಹೇಳುತ್ತಿದೆ. ಮತ್ತು 'ಯೋ ದೇವಾನಾಮ್ ನಾಮಧಾ' ಎಂಬ ಶ್ರುತಿಯೂ ಕೂಡ ಇಂದ್ರಾದಿಶಬ್ದಗಳ ಸಮನ್ವಯವು ವಿಷ್ಣುವಿನಲ್ಲಿ ತಿಳಿಸುತ್ತಿದೆ. ಆದ್ದರಿಂದ ಸಂಕೋಚ ಮಾಡಲಾಗದೆಂದು ಹೇಳಿದರೆ, ಅದೇ ಕಾರಣದಿಂದಲೇ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳ ಸಮನ್ವಯ ವಿಷಯದಲ್ಲಿಯೂ ಸಂಕೋಚ ಮಾಡಬಾರದು. ಏಕೆಂದರೆ 'ಸ ಬದ್ಧಃ ಸ ದುಃಖೀ ಸ ಬಂಧಯತಿ' ಎಂಬ ಶ್ರುತಿಯು 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ವಿಷ್ಣುವಿನಲ್ಲಿ ಹೇಳುವ ಮೂಲಕ ಆಯಾ ಶಬ್ದಗಳ ಸಮನ್ವಯವನ್ನು ತಿಳಿಸುತ್ತಿದೆ. ಆದ್ದರಿಂದ ಈ ವಿಷಯದಲ್ಲಿಯೂ ಸಂಕೋಚ ಮಾಡಬಾರದು.

## ಅಧಿಕರಣದ ಸಂಶಯ ಪರಂಪರೆ

### ದೋಷವಾಚಕಶಬ್ದಗಳು ಶ್ರೀಹರಿಯಲ್ಲಿ ಬರುವುದಿಲ್ಲವೆಂದು ಪೂರ್ವಪಕ್ಷ

ಶ್ರುತಿಯಲ್ಲಿರುವ 'ಅವ್ಯಕ್ತಾತ್ ಪುರುಷಃ ಪರಃ' 'ಜೀವಾ ಏವ ತು ದುಃಖಿನಃ' ಎಂಬಲ್ಲಿ ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರಕೃತಿ, ಜೀವ ಇವರೇ ಪ್ರತಿಪಾದ್ಯರಾಗುತ್ತಾರೆ ಹೊರತು, ಬ್ರಹ್ಮನಲ್ಲ. ಏಕೆಂದರೆ ಅವ್ಯಕ್ತ, ಜೀವ ಮೊದಲಾದ ಶಬ್ದಗಳು ಪ್ರಕೃತಿ ಜೀವಾದಿಗಳಲ್ಲಿಯೇ ಪ್ರಸಿದ್ಧವಾಗಿವೆ. ಅನೇಕ ಪ್ರಮಾಣಗಳಿಂದ ಇವರೇ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧವಾಗಿದೆ. 'ಅಕ್ಷರಾತ್ ಪರತಃ ಪರಃ' ಎಂಬಲ್ಲಿ ಪಂಚಮ್ಯಂತವಾದ ಅಕ್ಷರಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡಿದಂತೆ, ಇಲ್ಲಿಯೂ 'ಅವ್ಯಕ್ತಾತ್' ಎಂಬ ಪಂಚಮ್ಯಂತ ಪದವು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತದೆನ್ನಬಾರದು. ಅಕ್ಷರಾಧಿಕರಣದಲ್ಲಿ ಪಂಚಮ್ಯಂತವಾದ ಅಕ್ಷರಶಬ್ದದ ಸಮನ್ವಯವನ್ನು ಮಾಡಿಯೇ ಇಲ್ಲ. , 'ತದಕ್ಷರಮಧಿಗಮ್ಯತೇ' ಎಂಬಲ್ಲಿರುವ ಅಕ್ಷರಶಬ್ದದ ಸಮನ್ವಯವನ್ನು ಮಾಡಿದ್ದಾರೆ.

'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಪಂಚಮೀವಿಭಕ್ತಿಯು ಕೇಳಿಸುತ್ತಿದೆ. ಅವ್ಯಕ್ತವು ಪುರುಷನಿಗಿಂತ 'ಅವರ' ಎಂದು ಇದರಿಂದ ಸೂಚಿತವಾಗಿದೆ. ಒಂದುವೇಳೆ ಅವ್ಯಕ್ತಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾದರೆ, ಅವರತ್ವವು ಬ್ರಹ್ಮನಲ್ಲಿ ಬಂದಂತಾಗುತ್ತದೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಈ ಅವಧಿತ್ವವು ಬ್ರಹ್ಮನಲ್ಲಿ ಬರುತ್ತದೆನ್ನಬಾರದು. ಒಂದುವೇಳೆ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಪರಿಗಣಿಸುವುದಾದರೆ, ಭೃತ್ಯನಲ್ಲಿರುವ ಅಪಜಯ, ಬಂಧನ ಮೊದಲಾದವುಗಳು ರಾಜನ ಅಧೀನವಾದ್ದರಿಂದ ರಾಜನಲ್ಲಿಯೂ 'ಬದ್ಧಃ' 'ಪರಾಜಿತಃ' ಮೊದಲಾದ ಶಬ್ದಪ್ರಯೋಗಗಳು ಬರಬೇಕಾಗುತ್ತದೆ. ಒಂದುವೇಳೆ ಅಮಂಗಲವಾದ್ದರಿಂದ ರಾಜನಲ್ಲಿ ಇಂತಹ ಶಬ್ದಗಳನ್ನು ಪ್ರಯೋಗಿಸಬಾರದು ಎನ್ನುವುದಾದರೆ, ಬ್ರಹ್ಮನಲ್ಲಿಯೂ ಕೂಡ ಇಂತಹ ಪ್ರಯೋಗಗಳನ್ನು ಮಾಡಬಾರದು.

### ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ದೋಷವಾಚಕಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬೇಕು

ಸ್ವಾತಂತ್ರ್ಯಮ್ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ ।
ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ಕುತೋ ರಾಜ್ಞಿ ಜಯೋಽನ್ಯಥಾ ॥

ಸ್ವಾತಂತ್ರ್ಯ ಮತ್ತು ಆಶ್ರಯತ್ವ ಇವೆರಡೂ ಶಬ್ದವೃತ್ತಿಯಲ್ಲಿ ಕಾರಣವಾಗಿವೆ. ಆದರೆ ಸ್ವಾತಂತ್ರ್ಯವೇ ಇವೆರಡರಲ್ಲಿ ಬಹಳ ಮುಖ್ಯವಾದದ್ದು. ಇಲ್ಲದಿದ್ದರೆ ರಾಜನಲ್ಲಿ 'ಜಯಿ' ಎಂಬ ಪ್ರಯೋಗವು ಹೇಗೆ ತಾನೇ ಬರುತ್ತದೆ ಎಂಬ ಈ ಅನುವ್ಯಾಖ್ಯಾನದ ಶ್ಲೋಕದಲ್ಲಿ ಈ ಅಧಿಕರಣದ ಸಂಪೂರ್ಣ ಸಿದ್ಧಾಂತವನ್ನು ಸಂಗ್ರಹಿಸಿದ್ದಾರೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಎಲ್ಲಾ ಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬೇಕು. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನುವುದಾದರೆ ಭೃತ್ಯನನ್ನು ಬಂಧಿಸುವ ರಾಜನಲ್ಲಿಯೂ 'ಬದ್ಧಃ' ಎಂಬ ಪ್ರಯೋಗವು ಬರಬೇಕಾಗುತ್ತದಲ್ಲವೇ? ಎಂದು ಆಕ್ಷೇಪಿಸಬಾರದು. ಸ್ವಾತಂತ್ರ್ಯ ಶಬ್ದಕ್ಕೆ 'ನಿಯಾಮಕತ್ವೇ ಸತಿ ತದಾಶ್ರಯತ್ವಪ್ರಯುಕ್ತ ನೀಚತ್ವಾಯೋಗ್ಯತ್ವಮ್' ಎಂಬರ್ಥವನ್ನು ವಿವಕ್ಷಿಸುತ್ತೇವೆ.

ನಿಯಾಮಕನಾಗಿರಬೇಕು. ಮತ್ತು ಅಂತಹ ಪ್ರವೃತ್ತಿನಿಮಿತ್ತ ಬರುವುದರಿಂದ ತಾನು ನೀಚನಾಗಬಾರದು. ಅಂತಹ ಸ್ವಾತಂತ್ರ್ಯವಷ್ಟೇ ಶಬ್ದಪ್ರಯೋಗಕ್ಕೆ ಕಾರಣವಾಗುತ್ತದೆ. ಭೃತ್ಯನಲ್ಲಿರುವ ದುಃಖಕ್ಕೆ ರಾಜನು ನಿಯಾಮಕನಾಗಿರಬಹುದು. ಆದರೆ ಅಂತಹ ದುಃಖವು ರಾಜನಲ್ಲಿ ಬಂದಾಗ ನೀಚತ್ವಕ್ಕೆ ಯೋಗ್ಯನೇ ಆಗುತ್ತಾನೆ. ಆದ್ದರಿಂದ ಸ್ವಾತಂತ್ರ್ಯದ ಲಕ್ಷಣವು ಬಾರದ ಕಾರಣ, ರಾಜನಲ್ಲಿ 'ದುಃಖೀ' ಎಂಬ ಶಬ್ದವನ್ನು ಪ್ರಯೋಗಿಸಲು ಸಾಧ್ಯವಾಗುವುದಿಲ್ಲ. ಆದರೆ ದುಃಖಕ್ಕೆ ನಿಯಾಮಕನಾದ ಪರಮಾತ್ಮನಲ್ಲಿ 'ದುಃಖೀ' ಎಂಬ ಶಬ್ದವನ್ನು ಹೇಳಿದಾಗ ಯಾವುದೇ ಬಗೆಯ ನೀಚತ್ವವು ಸರ್ವಥಾ ಬರುವುದಿಲ್ಲ. ಆದ್ದರಿಂದ 'ನಿಯಾಮಕತ್ವೇ ಸತಿ ತದಾಶ್ರಯತ್ವಪ್ರಯುಕ್ತ ನೀಚತ್ವಾಯೋಗ್ಯತ್ವಮ್' ಎಂಬ ಲಕ್ಷಣವು ಬರುವುದರಿಂದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ 'ದುಃಖೀ' ಇತ್ಯಾದಿ ಶಬ್ದಗಳನ್ನು ನಿರಾತಂಕವಾಗಿ ವ್ಯವಹರಿಸಬಹುದು. ಭೃತ್ಯನು ಗೆದ್ದಾಗ ರಾಜನನ್ನು 'ಜಯಿ' ಎನ್ನಲು ತೊಂದರೆಯಿಲ್ಲ. ಏಕೆಂದರೆ ಭೃತ್ಯನಲ್ಲಿರುವ ಜಯಕ್ಕೆ ರಾಜನು ನಿಯಾಮಕನಾಗಿದ್ದಾನೆ. ಅಂಥ ಜಯಕ್ಕೆ ರಾಜನು ಆಶ್ರಯನಾಗಿದ್ದಾನೆಂದು ಹೇಳಿದಾಗ, ತಾನು ನೀಚನೂ ಕೂಡ ಆಗುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯಲಕ್ಷಣವು ಎಲ್ಲಿ ಬರುತ್ತದೋ, ಅಲ್ಲಿ ಮಾತ್ರ ಆ ಶಬ್ದಪ್ರಯೋಗಗಳನ್ನು ಮಾಡಬೇಕು. ಮತ್ತು ಆಶ್ರಯತ್ವವನ್ನೇ ಪ್ರವೃತ್ತಿನಿಮಿತ್ತವೆನ್ನುವುದಾದರೂ ದೋಷವು ತಪ್ಪಿದ್ದಲ್ಲ. ಸಕಲ ಪದಾರ್ಥಗಳಿಗೆ ಆಧಾರವಾದ ಕಾಲದಲ್ಲಿ ರೂಪ ಹಾಗೂ ದಂಡಗಳು ಇರುತ್ತವೆ. ಆಶ್ರಯತ್ವವೆಂಬ ಪ್ರವೃತ್ತಿನಿಮಿತ್ತದಿಂದ ಕಾಲವನ್ನು 'ರೂಪೀ', 'ದಂಡೀ' ಇತ್ಯಾದಿಯಾಗಿ ವ್ಯವಹರಿಸಬೇಕಾದ ಸ್ಥಿತಿ ಉಂಟಾಗುತ್ತದೆ. ಆದ್ದರಿಂದ ಅಲ್ಲಿಯೂ ಕೂಡ ಪರಿಷ್ಕಾರದ ಅವಶ್ಯಕತೆ ಇದ್ದೇ ಇದೆ.

## ಸ್ವಾತಂತ್ರ್ಯಪ್ರವೃತ್ತಿನಿಮಿತ್ತದ ಎರಡನೆಯ ಪರಿಷ್ಕಾರ

ಅಥವಾ 'ಸ್ವಗತತ್ವಯೋಗ್ಯತ್ವೇ ಸತಿ ಯದ್ದೋಷತ್ವಂ ತದ್ರಹಿತಂ ಪ್ರತಿ ಸ್ವಾತಂತ್ರ್ಯಂ ನಿಮಿತ್ತಮ್' ಎಂದು ಹೇಳುತ್ತೇವೆ. ಯಾವ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸುತ್ತೇವೋ, ಅದು ಎರಡು ಕಾರಣಗಳಿಂದ ಶಬ್ದದ ವ್ಯವಹಾರಕ್ಕೆ ಹೇತುವಾಗುತ್ತದೆ. ರಾಜನಲ್ಲಿ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸಬಹುದು. ಏಕೆಂದರೆ ಜಯವು ರಾಜನಲ್ಲಿರಲು ಯೋಗ್ಯವಾಗಿದೆ. ಆದರೆ ಅದು ದೋಷವಲ್ಲ. ಆದ್ದರಿಂದ ತದ್ರಾಹಿತ್ಯವು ಬರುವುದರಿಂದ ಸ್ವಾತಂತ್ರ್ಯವನ್ನು ಇಲ್ಲಿ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಬಹುದು. ಆದರೆ 'ಬದ್ಧಃ' ಎಂಬ ಪ್ರಯೋಗವನ್ನು ರಾಜನಲ್ಲಿ ಮಾಡಲಾಗದು. ಬದ್ಧಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಬಂಧನವು ರಾಜನಲ್ಲಿರಲು ಯೋಗ್ಯವೇ ಆಗಿದೆ. ಮತ್ತು ದೋಷವೂ ಆಗಿದೆ. ಹಾಗಾಗಿ ತದಭಾವವು ಬಾರದ ಕಾರಣ ಸ್ವಾತಂತ್ರ್ಯವನ್ನು ಅಲ್ಲಿ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಲು ಬರುವುದಿಲ್ಲ. ಆದರೆ ವಿಷ್ಣುವಿನ ವಿಷಯದಲ್ಲಿ ಸಕಲಶಬ್ದಗಳನ್ನು ಈ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ವ್ಯವಹರಿಸಲು ಬರುತ್ತದೆ. ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಪರಮೈಶ್ವರ್ಯಾದಿಗಳು ವಿಷ್ಣುವಿನಲ್ಲಿರಲು ಯೋಗ್ಯವಾಗಿವೆ. ಆದರೆ ದೋಷವಲ್ಲದ ಕಾರಣ ತದ್ರಾಹಿತ್ಯವು ಬರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನು ಇಂದ್ರಾದಿಶಬ್ದಗಳ ವಿಷಯದಲ್ಲಿಯೂ ಪ್ರವೃತ್ತಿನಿಮಿತ್ತವೆನ್ನಬಹುದು. ಇದರಂತೆ 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳ ಪ್ರಯೋಗವಿಷಯದಲ್ಲಿಯೂ ಪ್ರವೃತ್ತಿನಿಮಿತ್ತವೆನ್ನಬಹುದು. ಏಕೆಂದರೆ ಇವುಗಳ

ಪ್ರವೃತ್ತಿನಿಮಿತ್ತವೆನಿಸಿದ ದುಃಖ, ಬಂಧನ ಮೊದಲಾದವು ವಿಷ್ಣುವಿನಲ್ಲಿರಲು ಯೋಗ್ಯವಾಗಿರುವುದಿಲ್ಲ. ಆದ್ದರಿಂದ ದೋಷವಾಗಿದ್ದರೂ ಸ್ವಗತತ್ವ-ಯೋಗ್ಯತ್ವ ಎಂಬ ವಿಶೇಷ್ಯವಿಲ್ಲದ ಕಾರಣ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಬಹುದು. ಹೀಗೆ ಪರಿಷ್ಕಾರ ಮಾಡುವುದರಿಂದ ವಿಷ್ಣುವಿನಲ್ಲಿ 'ದುಃಖೀ'-'ಬದ್ಧ' ಮೊದಲಾದ ಶಬ್ದಪ್ರಯೋಗದಂತೆ ರಾಜನಲ್ಲಿಯೂ ಅಂತಹ ಶಬ್ದಪ್ರಯೋಗವು ಬರಲಿ ಎಂಬ ಅತಿಪ್ರಸಂಗಕ್ಕೆ ಲವಲೇಶವೂ ಅವಕಾಶವಿರುವುದಿಲ್ಲ.

### ಅಥವಾ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತ

ಪ್ರತಿಯೊಂದು ಶಬ್ದಗಳ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾಗಿದೆ. ಆದ್ದರಿಂದ ಸಕಲ-ಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗುತ್ತಾನೆ. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ ರಾಜನಲ್ಲಿಯೂ ಬದ್ಧಾದಿ ಶಬ್ದಪ್ರಯೋಗಗಳು ಬರಬೇಕಾದೀತು ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆಲೋಕದಲ್ಲಿದೋಷವಾಚಕಶಬ್ದಗಳಪ್ರಯೋಗಕ್ಕೆತದ್ಗತತ್ವವುಪ್ರವೃತ್ತಿನಿಮಿತ್ತವಾಗಿದೆ.ಗುಣವಾಚಕ ಶಬ್ದಪ್ರಯೋಗಗಳಿಗೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗಿದೆ. ಬ್ರಹ್ಮನ ವಿಷಯದಲ್ಲಿ ಮಾತ್ರ ಪ್ರತಿಯೊಂದು ಶಬ್ದಗಳ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತ ಹೊರತು, ತದ್ಗತತ್ವವಲ್ಲ. ಹಾಗಾಗಿ ಲೋಕದ ದೃಷ್ಟಾಂತವನ್ನು ವಿವಕ್ಷಿಸಿ, ಬ್ರಹ್ಮನಲ್ಲಿ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗುವುದಿಲ್ಲವೆಂದು ಆಕ್ಷೇಪಿಸಲಾಗದು. ಸ್ವಾತಂತ್ರ್ಯವೇ ಬ್ರಹ್ಮನ ವಿಷಯದಲ್ಲಿ ಪ್ರವೃತ್ತಿನಿಮಿತ್ತವೆನ್ನಲು 'ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' ಇವೇ ಮೊದಲಾದ ಅನೇಕ ಶ್ರುತಿಗಳು ಆಧಾರವಾಗಿವೆ.

### ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ಶಬ್ದಗಳನ್ನು ಪ್ರಯೋಗಿಸಬಾರದು

ಬದ್ಧಾದಿ ಶಬ್ದಗಳಿಗೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾದಲ್ಲಿ, ರಾಜನನ್ನೂ ಕೂಡ 'ಬದ್ಧಃ', 'ದುಃಖೀ' ಇತ್ಯಾದಿಯಾಗಿ ವ್ಯವಹರಿಸಬೇಕಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಬಗೆಯಲ್ಲಿ ಉತ್ತರಿಸುತ್ತಿದ್ದಾರೆ. ಲೋಕಪ್ರಯೋಗವನ್ನು ನೋಡಿಕೊಂಡು ಶಬ್ದಗಳ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕು ಹೊರತು, ಪ್ರವೃತ್ತಿನಿಮಿತ್ತವಿದೆಯೆಂದ ಮಾತ್ರದಿಂದ ಶಬ್ದಗಳನ್ನು ಆಯಾ ಪದಾರ್ಥಗಳಲ್ಲಿ ಪ್ರಯೋಗಿಸುವುದು ಮೂರ್ಖತನ. ಏಕೆಂದರೆ ಮಣ್ಣು ಎಂಬುದು ದ್ರವ್ಯವಾಗಿದ್ದರೂ ಸುವರ್ಣಾದಿಗಳನ್ನೇ ದ್ರವ್ಯವೆನ್ನುತ್ತಾರೆ. ಅಥವಾ ತಾರ್ಕಿಕರು ದ್ವೇಷವನ್ನು ಗುಣವೆಂದು ಒಪ್ಪಿದರೂ ಲೋಕದಲ್ಲಿ ಯಾರೂ ಸಹ ದ್ವೇಷವನ್ನು ಗುಣವೆಂದು ಹೇಳುವುದಿಲ್ಲ ಜ್ಞಾನಾದಿಗಳನ್ನೇ ಗುಣವೆನ್ನುತ್ತಾರೆ. ಅಥವಾ 'ಧಾನಕರ್ಮತ್ವ' ಎಂಬ ಧೇನುಶಬ್ದದ ಪ್ರವೃತ್ತಿನಿಮಿತ್ತವು ಮಹಿಷ್ಯಾದಿಗಳಲ್ಲಿದ್ದರೂ ಹಸುಗಳನ್ನಷ್ಟೇ ಧೇನುವೆಂದು ವ್ಯವಹರಿಸುತ್ತಾರೆ. ಕುಂಬಾರನಲ್ಲಿ ಉದಂಚನ ಕರ್ತೃತ್ವ ಎಂಬ ಪ್ರವೃತ್ತಿನಿಮಿತ್ತವಿದ್ದರೂ ಉದಂಚನಕಾರನೆಂದು ಯಾರೂ ವ್ಯವಹರಿಸುವುದಿಲ್ಲ. ಆದ್ದರಿಂದ ಲೋಕವ್ಯವಹಾರ ಹೇಗಿರುತ್ತದೋ, ಅದಕ್ಕನುಗುಣವಾಗಿ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕಾಗುತ್ತದೆ. ಹೊರತು ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ವ್ಯವಹರಿಸಲು ಹೊರಟರೆ, ಎಮ್ಮೆಯನ್ನೂ ಕೂಡ ಧೇನುವೆಂದು ಕರೆಯಬೇಕಾಗುತ್ತದೆ. ದ್ವೇಷವನ್ನೂ ಕೂಡ ಗುಣವೆಂದು ಕರೆಯಬೇಕಾಗುತ್ತದೆ.

### ವ್ಯಾಕರಣಶಾಸ್ತ್ರದ ದೃಷ್ಟಾಂತದಿಂದ ಬದ್ಧಾದಿ ಶಬ್ದ ಪ್ರಯೋಗದ ಸಮರ್ಥನೆ

ವ್ಯಾಕರಣಶಾಸ್ತ್ರದಲ್ಲಿ 'ಅತಿತ್ವಾಕಮ್ ಅತಿತ್ವಯಾಮ್' 'ನಿನ್ನನ್ನು ಮೀರಿಸಿದವರಿಗೆ' ಇತ್ಯಾದಿ ಶಬ್ದಗಳನ್ನು ನಿಷ್ಪತ್ತಿಮಾಡಿದ್ದಾರೆ. ಆದರೆ ಲೋಕದಲ್ಲಿ ಎಲ್ಲಿಯೂ ಸಹ ಇಂತಹ ಪ್ರಯೋಗಗಳನ್ನು ನಾವು ಕಾಣುತ್ತಿಲ್ಲ. ಆದರಂತೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿದ್ದರೂ ರಾಜನಲ್ಲಿ ಬದ್ಧಾದಿ ಶಬ್ದಗಳನ್ನು ಪ್ರಯೋಗಿಸಬೇಕಾಗಿಲ್ಲ. ಒಂದು ವೇಳೆ ವ್ಯಾಕರಣಶಾಸ್ತ್ರದಲ್ಲಿ ಉದಾಹರಿಸಿದ 'ಅತಿತ್ವಾಕಮ್' ಇತ್ಯಾದಿ ಪ್ರಯೋಗಗಳು ಎಲ್ಲಿಯಾದರೂ ಇದ್ದೇ ಇರುತ್ತವೆಂದು ಊಹಿಸುವುದಾದಲ್ಲಿ, ನಾವೂ ಸಹ ಹಿಂದೆ ಉಲ್ಲೇಖಿಸಿದ ಶ್ರುತಿ-ಸ್ಮೃತಿಗಳ ಆಧಾರದಿಂದ ಭೃತ್ಯನಲ್ಲಿರುವ ಬಂಧಾದಿಗಳಿಗೆ ರಾಜನು ಸ್ವಾಮಿಯಾದ್ದರಿಂದ ಬದ್ಧಾದಿ ಶಬ್ದಗಳ ಪ್ರಯೋಗದ ಯೋಗ್ಯತೆಯು ಇದ್ದೇ ಇರುತ್ತದೆ.

### ಶಬ್ದಪ್ರಯೋಗಗಳ ನಿಯಮವಿಷಯದಲ್ಲಿ ವ್ಯಾಕರಣದ ಮತ್ತೊಂದು ದೃಷ್ಟಾಂತ

ವ್ಯಾಕರಣಶಾಸ್ತ್ರದಲ್ಲಿ ದ್ವಂದ್ವಸಮಾಸವನ್ನು ವಿಧಿಸುವಾಗ ಪ್ರಾಣ್ಯಂಗಾದಿಗಳಲ್ಲಿ ಸಮಾಹಾರ-ದ್ವಂದ್ವಸಮಾಸವನ್ನೇ ಮಾಡಬೇಕು. 'ದಧಿಪಯೇ' ಎಂಬಲ್ಲಿ 'ಇತರೇತರಯೋಗ' ಸಮಾಸವನ್ನೇ ಮಾಡಬೇಕು ಎಂಬ ನಿಯಮವನ್ನು ಮಾಡಿದ್ದಾರೆ. ವಾಸ್ತವಿಕವಾಗಿ 'ದಧಿಪಯೇ' ಎಂಬಲ್ಲಿಯೂ ಸಮಾಹಾರ ದ್ವಂದ್ವವನ್ನು ಮಾಡಬಹುದು. ಪ್ರಾಣ್ಯಂಗಾದಿಗಳಲ್ಲಿ 'ಇತರೇತರಯೋಗ' ದ್ವಂದ್ವಸಮಾಸವನ್ನು ಮಾಡಬಹುದು. ಇದನ್ನು ನಿಷೇಧಿಸಿ ಪ್ರಾಣ್ಯಂಗಾದಿಗಳಲ್ಲಿ ಸಮಾಹಾರ ದ್ವಂದ್ವಸಮಾಸವನ್ನೇ ಮಾಡಬೇಕು. 'ದಧಿಪಯೇ' ಎಂಬಲ್ಲಿ ಇತರೇತರೇ ಸಮಾಸವನ್ನೇ ಮಾಡಬೇಕೆಂದು ನಿಯಮ ಮಾಡಿರುತ್ತಾರೆ. ಆದರಂತೆ ಪ್ರಕೃತ 'ದುಃಖೀ' ಎಂಬ ಶಬ್ದದಲ್ಲಿ ದುಃಖವುಳ್ಳವನು ಹಾಗೂ ದುಃಖಕ್ಕೆ ಸ್ವಾಮಿಯು ಎಂಬೆರಡರ್ಥವು ಇದ್ದರೂ ಲೋಕದಲ್ಲಿರುವ ಜನರಲ್ಲಿ ದುಃಖವುಳ್ಳವನು ಎಂಬರ್ಥದಲ್ಲಿಯೇ 'ದುಃಖೀ' ಎಂಬ ಶಬ್ದವನ್ನು ಪ್ರಯೋಗಿಸಬೇಕು. ಪರಮಾತ್ಮನು ದುಃಖಕ್ಕೆ ಸ್ವಾಮಿಯಾದ್ದರಿಂದ 'ದುಃಖೀ' ಎಂಬ ಶಬ್ದವನ್ನು ಪ್ರಯೋಗಿಸಬೇಕು ಹೊರತು, ಲೋಕದಲ್ಲಿ ದುಃಖಸ್ವಾಮಿಯೆಂಬರ್ಥದಲ್ಲಿ 'ದುಃಖೀ' ಶಬ್ದವನ್ನು ದುಃಖಕ್ಕೆ ಆಶ್ರಯನು ಎಂಬರ್ಥದಿಂದ ಪರಮಾತ್ಮನಲ್ಲಿ 'ದುಃಖೀ' ಎಂಬರ್ಥವನ್ನು ಪ್ರಯೋಗಿಸಬಾರದು.

### ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವೆಂಬ ಪಕ್ಷದಲ್ಲಿ ಯಾವುದೇ ಅತಿಪ್ರಸಂಗವಿಲ್ಲ

'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲು ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಲಾಯಿತು. ಹಾಗಾದಲ್ಲಿ ರಾಜನಲ್ಲಿಯೂ 'ಬದ್ಧಃ' ಇತ್ಯಾದಿಪ್ರಯೋಗಗಳು ಬರಬೇಕಲ್ಲವೆ? ಎಂಬ ಅತಿಪ್ರಸಂಗವನ್ನು ಆಕ್ಷೇಪಿಸಬಾರದು. ಏಕೆಂದರೆ ರಾಜನಿಗೂ ಪರಮಾತ್ಮನಿಗೂ ವ್ಯತ್ಯಾಸವಿದೆ. ಒಂದು ವೇಳೆ ಭೃತ್ಯನು ಬಂಧಿತನಾದಾಗ ರಾಜನಲ್ಲಿ 'ಬದ್ಧಃ' ಎಂಬ ಪದವನ್ನು ಪ್ರಯೋಗಿಸಿದರೆ ರಾಜನಲ್ಲಿ ಬಂಧನಾದಿ ಯೋಗ್ಯತೆಗಳು ಇರುವುದರಿಂದ ಅಮಂಗಳ ಪ್ರಯೋಗವೆನಿಸುತ್ತವೆ. ಆ ಮಂಗಳ ಶಬ್ದಗಳನ್ನು ಕೇಳಿದ ರಾಜನಿಗೆ ಕೋಪ ಮೊದಲಾದವುಗಳು ಬರಬಹುದು. ಆದರೆ ಯಾವುದೇ ದೋಷಗಳಿಗೆ ಅವಕಾಶವಿಲ್ಲದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಇಂತಹ 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳನ್ನು

ಪ್ರಯೋಗಿಸಲು ಯಾವುದೇ ತೊಂದರೆಯಿರುವುದಿಲ್ಲ. ರಾಜನಲ್ಲಿ ಬಂಧನಾದಿಗಳ ಯೋಗ್ಯತೆಯಿರುವಂತೆ ಪರಮಾತ್ಮನಲ್ಲಿ ಅಂತಹ ಬಂಧನಾದಿಗಳ ಯೋಗ್ಯತೆ ಸರ್ವಥಾ ಇರುವುದಿಲ್ಲ.

ಉದಾಹರಣೆ - ಶಿಷ್ಯನು ಬಹಳ ಚೆನ್ನಾಗಿ ಸಭೆಗಳಲ್ಲಿ ತನ್ನ ವಿದ್ಯಾಚಾತುರ್ಯವನ್ನು ಪ್ರದರ್ಶನ ಮಾಡಿದಾಗ ಎಲ್ಲರೂ ಗುರುಗಳನ್ನೇ ಪ್ರಶಂಸಿಸುತ್ತಾರೆ. ಆದರೆ ಶಿಷ್ಯನು ಏನಾದರೂ ತಪ್ಪು ಹೇಳಿದರೆ, ಶಿಷ್ಯನ ತಪ್ಪೆಂದು. ಇದು ಲೋಕದಲ್ಲಿರುವ ನಿಯಮ. ಸಣ್ಣ ಮಗು ಉತ್ತಮವಾದ ಗುಣಗಳಿಂದ ಬೇರೆಯವರನ್ನು ಆಕರ್ಷಿಸಿದಾಗ ತಂದೆ-ತಾಯಿಯಂದಿರನ್ನು ಪ್ರಶಂಸಿಸುತ್ತಾರೆ. ಅದೇ ಮಗು ಕೆಟ್ಟ ವರ್ತನೆಯನ್ನು ಮಾಡಿದಾಗ ಯಾರೂ ಸಹ ತಂದೆ-ತಾಯಿಯಂದಿರನ್ನು ನಿಂದಿಸುವುದಿಲ್ಲ. ಅದರಂತೆ ಇಲ್ಲಿಯೂ ಕೂಡ ಭೃತ್ಯರು ಯುದ್ಧದಲ್ಲಿ ಗೆದ್ದಾಗ ರಾಜನು ಗೆದ್ದಿದ್ದಾನೆಂದು ಹೇಳಬಹುದು. ಆದರೆ ಭೃತ್ಯರು ಸೋತಾಗ, ರಾಜನು ಸೋತನೆಂದು ಸರ್ವಥಾ ಹೇಳಬಾರದು. ಇದು ಲೋಕದ ನೀತಿ. ಆದರೆ ಪರಮಾತ್ಮನ ವಿಷಯದಲ್ಲಿ ಇದು ಸಂಬಂಧಪಡುವುದಿಲ್ಲ. ಅವನು ಲೋಕವಿಲಕ್ಷಣನಾದ್ದರಿಂದ ಉಳಿದವರ ದುಃಖ ಬಂಧನ ಮೊದಲಾದವುಗಳಿಗೆ ನಿಯಾಮಕನಾದ್ದರಿಂದ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಬಹುದು.

ದುಃಖಾದೇರ್ಜೀವಗಸ್ಯಾಪಿ ಸ್ವಾಧೀನತ್ವೇನ ಹೇತುನಾ ।
ದುಃಖೀತಿ ಗೀಯತೇ ಬ್ರಹ್ಮ ಧನಸ್ವಾಮೀ ಧನೀ ಯಥಾ ॥೧॥

ಧನಕ್ಕೆ ಸ್ವಾಮಿಯಾದ ಕಾರಣದಿಂದ 'ಧನೀ' ಎಂಬ ವ್ಯವಹಾರವನ್ನು ಲೋಕದಲ್ಲಿ ಮಾಡುವುದು ಕಂಡಿದೆ. ಅದರಂತೆ ದುಃಖಾದಿಗಳು ಜೀವನಲ್ಲೇ ಇರುತ್ತವೆ. ಆ ದುಃಖಾದಿಗಳಿಗೆ ಪರಮಾತ್ಮನು ಸ್ವಾಮಿಯಾದ್ದರಿಂದ ಅವನನ್ನು 'ದುಃಖೀ' ಎಂದು ಶ್ರುತಿಗಳಲ್ಲಿ ಕರೆಯಲಾಗುತ್ತದೆ.

### ಮುಖ್ಯಾರ್ಥದ ನಿರ್ಣಾಯಕ ಪ್ರವೃತ್ತಿನಿಮಿತ್ತವೇ ಹೊರತು ಪ್ರಯೋಗಪ್ರಾಚುರ್ಯವಲ್ಲ

ಇಲ್ಲಿಯ ತನಕ ಸ್ವಾತಂತ್ರ್ಯ ಹಾಗೂ ತದ್ಗತತ್ವ ಎರಡೂ ಸಹ ಶಬ್ದಗಳ ಪ್ರವೃತ್ತಿನಿಮಿತ್ತವಾಗಿರುತ್ತವೆಂದು ಸಮರ್ಥಿಸಲಾಯಿತು. ಹಾಗಾದರೆ ಎರಡು ಪ್ರವೃತ್ತಿನಿಮಿತ್ತಗಳಿಂದ ಪ್ರತಿಯೊಂದು ಶಬ್ದಗಳೂ ನಾನಾರ್ಥಕವಾಗಬೇಕಲ್ಲವೇ ? ಎಂಬ ಪ್ರಶ್ನೆಗೆ ಮತ್ತೊಂದು ಬಗೆಯಲ್ಲಿ ಈಗ ಸಮಾಧಾನ ನೀಡುತ್ತಿದ್ದಾರೆ - 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳಲ್ಲಿ ಸ್ವಾತಂತ್ರ್ಯವಾಗಲೀ, ತದ್ಗತತ್ವವಾಗಲೀ ಪ್ರವೃತ್ತಿನಿಮಿತ್ತವೆಂದು ಹೇಳುವುದೇ ಇಲ್ಲ. ದುಃಖ-ಬಂಧನ ಮೊದಲಾದವುಗಳೇ ಪ್ರವೃತ್ತಿನಿಮಿತ್ತವಾಗುತ್ತವೆ. ಇಂತಹ ಪ್ರವೃತ್ತಿನಿಮಿತ್ತಗಳು ಆಯಾ ಪದಾರ್ಥಗಳಲ್ಲಿ ಬೇರೆ ಬೇರೆ ಸಂಬಂಧಗಳಿಂದ ಬರುತ್ತವೆ. ಅಂದರೆ ಪರಮಾತ್ಮನಲ್ಲಿ ದುಃಖವು ಸ್ವಾತಂತ್ರ್ಯವೆಂಬ ಸಂಬಂಧದಿಂದ ಜೀವನಲ್ಲಿ ತದ್ಗತತ್ವ ಎಂಬ ಸಂಬಂಧದಿಂದ ಬರುತ್ತದೆ. ಆದರೆ ತದ್ಗತತ್ವವಿರುವ ಜೀವನಲ್ಲಿಯೂ ಸ್ವಾತಂತ್ರ್ಯವಿದ್ದೇ ಇರುತ್ತದಾದ್ದರಿಂದ ಶಬ್ದಗಳು ನಾನಾರ್ಥಕವಾಗುವುದಿಲ್ಲ. ಜೀವನಲ್ಲಿ ದುಃಖವು ಆಶ್ರಿತವಾಗಿದ್ದರೂ ಅಂತಹ ದುಃಖಕ್ಕೆ ಜೀವನು ನಿಯಾಮಕನೇ ಆಗಿದ್ದಾನೆ. ಹಾಗಾಗಿ ರೂಢವಾದ ಶಬ್ದವಾಗಲೀ, ಯೌಗಿಕವಾದ ಶಬ್ದವಾಗಲೀ ತದ್ಗತತ್ವವೆಂಬ ಸಂಬಂಧವನ್ನು ಹೊಂದಿದ್ದರೆ, ಅಮುಖ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ.

ಯಥೇಷ್ಟವಿನಿಯೋಕ್ತೃತ್ವರೂಪಸ್ವಾತಂತ್ರ್ಯವೆಂಬ ಸಂಬಂಧವನ್ನು ಹೊಂದಿದ್ದರೆ ಮುಖ್ಯವಾಗುತ್ತವೆ. ಆಶ್ರಯತ್ವವೆಂಬ ಸಂಬಂಧವಿರುವ ಜೊತೆಗೆ ತದಧೀನತ್ವವಿದ್ದರೂ ಕೂಡ ಗೌಣವಾಗಿರುವ ಕಾರಣ, ಶಬ್ದವು ಆಯಾ ಪದಾರ್ಥಗಳನ್ನು ಗೌಣವಾಗಿಯೇ ಪ್ರತಿಪಾದನೆ ಮಾಡುತ್ತವೆಂದು ತಿಳಿಯಬೇಕು.

ಅವ್ಯಕ್ತ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಪರಮ ಸೂಕ್ಷ್ಮನಾದ ಬ್ರಹ್ಮನಲ್ಲಿ ಮುಖ್ಯವಾಗಿರುತ್ತದೆ. ಪ್ರಕೃತಿಯು ಎಷ್ಟು ಸೂಕ್ಷ್ಮವಾಗಿದೆಯೋ, ಅದಕ್ಕಿಂತ ಹೆಚ್ಚು ಪರಮಾತ್ಮನು ಸೂಕ್ಷ್ಮನಾದ್ದರಿಂದ ಅವ್ಯಕ್ತಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಪರಮಾತ್ಮನೇ ಆಗುತ್ತಾನೆ. ಪ್ರವೃತ್ತಿನಿಮಿತ್ತವು ಎಲ್ಲಿ ಹೆಚ್ಚಾಗಿರುತ್ತದೋ, ಅದೇ ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕವಾಗುತ್ತದೆ. ಉದಾಹರಣೆ - ನೂರಾರು ವಿದ್ವಾಂಸರಲ್ಲಿ 'ವಿದ್ವಾನ್' ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ಕೇವಲ ವ್ಯಾಕರಣಶಾಸ್ತ್ರವನ್ನು ಓದಿದವನನ್ನೂ 'ವಿದ್ವಾನ್' ಎನ್ನುತ್ತಾರೆ. 'ತರ್ಕ-ವ್ಯಾಕರಣ' ಎರಡು ಶಾಸ್ತ್ರಗಳನ್ನು ಓದಿದವನನ್ನೂ 'ವಿದ್ವಾನ್' ಎನ್ನುತ್ತಾರೆ 'ಚತುಃಶಾಸ್ತ್ರಪಾರಂಗತನನ್ನೂ 'ವಿದ್ವಾನ್' ಎನ್ನುತ್ತಾರೆ. ಆದರೆ ಚತುಃಶಾಸ್ತ್ರಪರಾಂಗತನಲ್ಲಿ 'ವಿದ್ವಾನ್' ಎಂಬ ಶಬ್ದವನ್ನು ಎಷ್ಟು ಮುಖ್ಯವಾಗಿ ಪ್ರಯೋಗಿಸಲಾಗುತ್ತದೋ, ಅಷ್ಟು ಮುಖ್ಯವಾದ ಪ್ರಯೋಗವನ್ನು ಒಂದೇ ಶಾಸ್ತ್ರವನ್ನು ಓದಿದವನಲ್ಲಿ ಮಾಡುವುದಿಲ್ಲ. ಸಣ್ಣ ಪ್ರದೇಶಕ್ಕೆ ಮಂತ್ರಿಯಾದವನನ್ನು ಮಂತ್ರಿಯೆನ್ನುತ್ತಾರೆ. ಸಮಗ್ರ ದೇಶಕ್ಕೆ ಮಂತ್ರಿಯಾದವನನ್ನು ಮಂತ್ರಿಯೆನ್ನುತ್ತಾರೆ. ಎಲ್ಲರೂ ಮಂತ್ರಿಯಾಗಿದ್ದರೂ ಪ್ರತಿಯೊಬ್ಬ ಮಂತ್ರಿಯಲ್ಲಿಯೂ ಪ್ರವೃತ್ತಿನಿಮಿತ್ತದ ತಾರತಮ್ಯದಿಂದ ಶಬ್ದದ ಮುಖ್ಯಾರ್ಥದಲ್ಲಿ ತಾರತಮ್ಯವನ್ನು ನಾವು ಅನುಭವಿಸಿದ್ದೇವೆ. ಆದ್ದರಿಂದ ಪ್ರವೃತ್ತಿನಿಮಿತ್ತದ ಮುಖ್ಯವಾಗಿರುವಿಕೆಯೇ ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕ ಹೊರತು, ಪ್ರಯೋಗಪ್ರಾಚುರ್ಯವಲ್ಲ. ಪ್ರಯೋಗ ಪ್ರಾಚುರ್ಯವೇ ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕವಾಗಿದ್ದಲ್ಲಿ 'ಮಂಚಾಃ ಕ್ರೋಶಂತಿ' ಇತ್ಯಾದಿ ರೂಢಲಕ್ಷಣವಾದ ವಾಕ್ಯಗಳಲ್ಲಿಯೂ ಪ್ರಯೋಗಪ್ರಾಚುರ್ಯವಿರುವ ಕಾರಣ ಶಬ್ದದ ಮುಖ್ಯತ್ವವನ್ನು ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಶಬ್ದದ ಮುಖ್ಯಾರ್ಥತ್ವಕ್ಕೆ ಪ್ರವೃತ್ತಿನಿಮಿತ್ತದ ಮುಖ್ಯತ್ವವೇ ಕಾರಣವೆಂದು ಸಿದ್ಧವಾಯಿತು.

ದೋಷವಾಚಕಶಬ್ದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನೆಂಬ ವಿಚಾರವು ಸಿದ್ಧವಾಯಿತು

ಪ್ರಯೋಗೋ ಜ್ಞಾಪಕಃ ಶಕ್ತೇರ್ನಿಮಿತ್ತಂ ತು ನಿಯಾಮಕಮ್ ।
ನಿಯಾಮಕಾನುಸಾರಿತ್ವಂ ನಿಯಮ್ಯಸ್ಯ ಚ ಶೋಭತೇ ॥೧॥

ಪ್ರಯೋಗಪ್ರಾಚುರ್ಯವು ಶಬ್ದಶಕ್ತಿಗೆ ಕೇವಲ ಜ್ಞಾಪಕವಾಗಿರುತ್ತದೆ. ಆದರೆ ಪ್ರವೃತ್ತಿನಿಮಿತ್ತವು ಮುಖ್ಯವಾದ ನಿಯಾಮಕ. ನಿಯಮ್ಯವಾದ ಶಕ್ತಿಯು ನಿಯಾಮಕವಾದ ಶಬ್ದಶಕ್ತಿಗೆ ಅನುಸಾರಿಯಾಗಿರುತ್ತದೆಂದು ಹೇಳುವುದೇ ಶೋಭಿಸುತ್ತದೆ.

'ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮ್' ಇವೇ ಮೊದಲಾದ ಸ್ಮೃತಿಗಳಿಂದ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಗಳಿಂದ ಪರಮಾತ್ಮನಲ್ಲಿ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದ ಇರುತ್ತವೆಂದು ಸಿದ್ಧವಾಗಿವೆ. ಲೋಕದಲ್ಲಿ ಯಾರೂ ಸಹ ಪರಮಾತ್ಮನನ್ನು

'ದುಃಖೀ' 'ಬದ್ಧಃ' ಇತ್ಯಾದಿಯಾಗಿ ಕರೆಯುವುದಿಲ್ಲ. ಹೀಗಿರುವಾಗ ಇಂತಹ ದೋಷವಾಚಕಶಬ್ದಗಳನ್ನು ಪರಮಾತ್ಮನಲ್ಲಿ ಹೇಗೆ ಸಮನ್ವಯ ಮಾಡುತ್ತೀರಿ? ಎಂದು ಪ್ರಶ್ನಿಸಬಾರದು. 'ಚಮಸ' ಶಬ್ದವನ್ನು ಯಾರೂ ಸಹ ಶಿರಸ್ಸಿನಲ್ಲಿ ಪ್ರಯೋಗ ಮಾಡುವುದಿಲ್ಲ. ಆದರೆ ಶ್ರುತಿಯಲ್ಲಿ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬುದಾಗಿ ಕೆಳಮುಖವುಳ್ಳ ಪಾತ್ರಾವಿಶೇಷವನ್ನು 'ಚಮಸ' ಎಂದು ಕರೆಯಲಾಗಿದೆ. ಅದರಂತೆ ಸ್ವರ್ಗಶಬ್ದವನ್ನು ಸುಖ ಎಂಬರ್ಥದಲ್ಲಿ ಯಾರೂ ಪ್ರಯೋಗ ಮಾಡುವುದಿಲ್ಲ. ಆದರೆ 'ಸುಖಂ ಸ್ವರ್ಗಪದಾಸ್ಪದಂ' ಎಂಬ ವಾಕ್ಯವನ್ನು ಸುಖವನ್ನೇ ಸ್ವರ್ಗವೆಂದು ಕರೆಯುತ್ತಿದೆ. ಹೀಗೆ ಲೋಕದಲ್ಲಿರುವ ಪ್ರಯೋಗಗಳು ಶಬ್ದಾರ್ಥನಿರ್ಣಯಕ್ಕೆ ಜ್ಞಾಪಕಗಳಾಗಿರುವುದಿಲ್ಲವೆಂದು ಸಿದ್ಧವಾಗುತ್ತದೆ. ಅದರಂತೆ ಪ್ರಕೃತ 'ದುಃಖೀ' 'ಬದ್ಧಃ' ಮೊದಲಾದ ಪ್ರಯೋಗಗಳು ಪರಮಾತ್ಮನಲ್ಲಿ ಇಲ್ಲವೆನ್ನಲು ಲೋಕದಲ್ಲಿ ಪ್ರಯೋಗವಿಲ್ಲವೆಂಬುದು ಕಾರಣವಾಗುವುದಿಲ್ಲ. ಆದ್ದರಿಂದ ಅವರ ಶಬ್ದದ ಮೇಲೆ ಪಚಾದಿಗಣದಲ್ಲಿ ಪಠಿತವಾದ ಕಾರಣ 'ಣಿಚ್' ಪ್ರತ್ಯಯ ಮುಂದಿರುವಾಗ 'ಅಚ್' ಪ್ರತ್ಯಯವನ್ನು ಹೇಳಿದರೆ 'ಅವರಯತಿ ಇತಿ ಅವರಃ' ಎಂಬ ರೂಪವು ಸಿದ್ಧವಾಗುತ್ತದೆ. ಇಂತಹ ಅವರ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಸುಲಭವಾಗಿ ಸಮನ್ವಯಗೊಳ್ಳುತ್ತವೆ. ಅಂದರೆ ಮತ್ತೊಬ್ಬರನ್ನು ನೀಚರನ್ನಾಗಿ ಮಾಡುತ್ತಾನಾದ್ದರಿಂದ ಪರಮಾತ್ಮನು ನೀಚನೆನಿಸುತ್ತಾನೆ. ಮತ್ತೊಬ್ಬರಿಗೆ ದುಃಖಗಳನ್ನು ನೀಡುತ್ತಾನಾದ್ದರಿಂದ 'ದುಃಖೀ' ಎನಿಸುತ್ತಾನೆ. ಹೀಗೆ ಪ್ರತಿಯೊಂದು ದೋಷವಾಚಕ ಶಬ್ದಗಳು ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದ ಸಮನ್ವಯಗೊಳ್ಳುತ್ತವೆನ್ನಲು ಯಾವುದೇ ಬಾಧಕಗಳಿರುವುದಿಲ್ಲ.

## ಒಂಬತ್ತು ಸೂತ್ರಗಳ ಜೋಡಣೆ ಅತ್ಯಂತ ಸ್ವರಸ

'ಆನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ' ಎಂಬುದು ಮೊದಲನೆಯ ಸೂತ್ರ. ಇದನ್ನು ಸೂತ್ರಕಾರರು ಮೊದಲೇ ನಿರ್ದೇಶಿಸಲು ಕಾರಣ ಹೀಗಿದೆ - 'ಅವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕೋಪನಿಷತ್ತಿನ ವಾಕ್ಯದಲ್ಲಿ ಶ್ರುತವಾದ ಅವ್ಯಕ್ತಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ. ಇಂತಹ ಬ್ರಹ್ಮನ ಸಂಪರ್ಕದಿಂದ ಪ್ರಕೃತಿಯು ಅವ್ಯಕ್ತಶಬ್ದಪ್ರತಿಪಾದ್ಯವಾಗಿದೆ ಹೊರತು, ಪ್ರಕೃತಿಯ ಸಂಬಂಧದಿಂದ ಬ್ರಹ್ಮನು ಅವ್ಯಕ್ತಶಬ್ದವಾಚ್ಯನಾಗಿಲ್ಲ. ಏಕೆಂದರೆ ಅವ್ಯಕ್ತಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆನ್ನಲು 'ಅವ್ಯಕ್ತಮಚಲಂ ಶಾಂತಮ್' ಎಂಬ ಶ್ರೌತ ಪ್ರಯೋಗವು 'ಅವ್ಯಕ್ತೋಽಕ್ಷರ ಉಚ್ಯತೇ' ಎಂಬ ಸ್ಮಾರ್ತ ಪ್ರಯೋಗವು ಆಧಾರವಾಗಿದೆ. ಹೀಗೆ ಅವ್ಯಕ್ತಶಬ್ದಪ್ರತಿಪಾದ್ಯತ್ವವನ್ನು ಮೊದಲು ಸಮನ್ವಯ ಮಾಡಲು ಈ ಸೂತ್ರವನ್ನು ಮೊದಲು ನಿರ್ದೇಶಿಸಿದ್ದಾರೆ.

'ಸೂಕ್ಷ್ಮಂ ತು ತದರ್ಹತ್ವಾತ್' ಎಂಬುದು ಎರಡನೆಯ ಸೂತ್ರ. ಪ್ರಥಮಸೂತ್ರದಲ್ಲಿ ಅವ್ಯಕ್ತಶಬ್ದದ ಪ್ರಯೋಗವು ಬ್ರಹ್ಮನಲ್ಲೇ ಇರುತ್ತದೆಂದು ಹೇಳಿದ ಮೇಲೆ ಮುಖ್ಯವೃತ್ತಿಯಿಂದಲೇ ಬ್ರಹ್ಮನಲ್ಲಿರುತ್ತದೆಂದು ಸಮರ್ಥಿಸಲು ಈ ಸೂತ್ರ ಹೊರಟಿದೆ. ಅವ್ಯಕ್ತಶಬ್ದಕ್ಕೆ ಅವ್ಯಕ್ತತ್ವ ಎಂಬುದು ಪ್ರವೃತ್ತಿನಿಮಿತ್ತವಾಗಿದೆ. ಅತಿಸೂಕ್ಷ್ಮವಾದ ವಸ್ತುವಿನಲ್ಲೇ ಈ ಪ್ರವೃತ್ತಿನಿಮಿತ್ತವು ಬರುವುದರಿಂದ ಪರಮಾತ್ಮನೇ ಮುಖ್ಯವಾಗಿ ಅವ್ಯಕ್ತಶಬ್ದ ಪ್ರತಿಪಾದ್ಯನಾಗುತ್ತಾನೆಂಬುದು ಈ ಸೂತ್ರದ ಅಭಿಪ್ರಾಯ.

'ತದಧೀನತ್ವಾತ್ ಅರ್ಥವತ್' ಎಂಬುದು ಮೂರನೆಯ ಸೂತ್ರ. ಎರಡನೆಯ ಸೂತ್ರದಲ್ಲಿ ಅವ್ಯಕ್ತ ಎಂಬ ಪ್ರಾತಿಪದಿಕ ಶಬ್ದವನ್ನು ಸಮನ್ವಯ ಮಾಡಿದ ಮೇಲೆ 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯಿಂದ ತಿಳಿಯುವ ಅರ್ಥವನ್ನೂ ಕೂಡ ಈ ಸೂತ್ರದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಪ್ರಾತಿಪದಿಕ ಸಮನ್ವಯದ ಅನಂತರ ವಿಭಕ್ತಿಯ ಸಮನ್ವಯ ಮಾಡುವುದು ಸಂಗತವಾಗುವ ಕಾರಣ, ಎರಡನೆಯ ಸೂತ್ರದ ಅನಂತರ ಈ ಸೂತ್ರ ಹೊರಟಿದ್ದು ಅರ್ಥಪೂರ್ಣವಾಗಿದೆ. 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯು ಅವರತ್ವವನ್ನು ಹೇಳುತ್ತದೆ. ಪರಮಾತ್ಮನಲ್ಲಿ ಅವರತ್ವ ಇಲ್ಲದಿದ್ದರೂ ಇತರ ಪದಾರ್ಥಗಳಲ್ಲಿರುವ ಅವರತ್ವಕ್ಕೆ ಸ್ವಾಮಿಯಾದ್ದರಿಂದ ಇವನೂ ಕೂಡ ಅವರನೆನಿಸುತ್ತಾನೆಂಬುದು ಈ ಸೂತ್ರದ ಹೃದಯ.

'ಜ್ಞೇಯತ್ವಾವಚನಾಚ್ಚ ' ಎಂಬುದು ನಾಲ್ಕನೆಯ ಸೂತ್ರ. ಭಾವರೂಪವಾದ ಅಂತರಂಗವಾದ ಹೇತುಗಳನ್ನು ಮೊದಲಿನ ಮೂರು ಸೂತ್ರಗಳಲ್ಲಿ ಪ್ರತಿಪಾದನೆ ಮಾಡಿ, ಬಹಿರಂಗವಾದ ಅಭಾವರೂಪವಾದ ಜ್ಞೇಯತ್ವಾವಚನವೆಂಬ ಹೇತುವನ್ನು ಈ ಸೂತ್ರದಲ್ಲಿ ಹೇಳುತ್ತಿದ್ದಾರೆ. ಆದ್ದರಿಂದ ನಾಲ್ಕನೆಯ ಸ್ಥಾನವು ಯುಕ್ತವಾಗಿದೆ. 'ತಮೇವೈಕಂ ಜಾನಥ' ಎಂಬ ಶ್ರುತಿಯಲ್ಲಿ ಮುಮುಕ್ಷುಗಳಿಂದ ಪರಮಾತ್ಮನೇ ಜ್ಞೇಯನಾಗಿದ್ದಾನೆ. ಇತರ ಯಾವುದೇ ಪದಾರ್ಥಗಳೂ ಕೂಡ ಜ್ಞೇಯವಲ್ಲವೆಂದು ಹೇಳಿದ್ದರಿಂದ ಮೋಕ್ಷಫಲಕವಾದ ವೇದವಾಕ್ಯಗಳೆಲ್ಲವೂ ಬ್ರಹ್ಮಪರವಾಗಿವೆಯೆಂದು ಸಿದ್ಧವಾಗುತ್ತದೆ. ಆದ್ದರಿಂದ ಕಾಠಕೋಪನಿಷತ್ತಿನ ಸಂಪೂರ್ಣಪ್ರಕರಣವು ಬ್ರಹ್ಮನನ್ನು ಪ್ರತಿಪಾದನೆ ಮಾಡಬೇಕು. ಮಧ್ಯದಲ್ಲಿರುವ ಅವ್ಯಕ್ತ ಮೊದಲಾದ ಶಬ್ದಗಳೂ ಕೂಡ 'ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಎಂಬ ಶ್ರುತಿಯ ಆಧಾರದಂತೆ ಬ್ರಹ್ಮನನ್ನೇ ಪ್ರತಿಪಾದನೆ ಮಾಡಬೇಕು ಎಂಬುದೇ ಈ ಸೂತ್ರದ ಅಭಿಪ್ರಾಯ.

'ವದತೀತಿ ಚೇನ್ನ ಪ್ರಾಜ್ಞೋ ಹಿ' ಎಂಬುದು ಐದನೆಯ ಸೂತ್ರ. ಹಿಂದಿನ ನಾಲ್ಕನೆಯ ಸೂತ್ರದಲ್ಲಿ ಜ್ಞೇಯತ್ವದ ಅವಚನವನ್ನು ಹೇಳಿದ್ದು ಅಸಿದ್ಧವಾಗಿದೆ. ಏಕೆಂದರೆ 'ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ಶ್ರುತಿಯಲ್ಲಿ ಮಹತ್‌ಪರತ್ವವೆಂಬ ಲಿಂಗವುಳ್ಳ ಪ್ರಧಾನದಲ್ಲೇ ಮುಮುಕ್ಷು ಜ್ಞೇಯತ್ವವನ್ನು ಹೇಳಿರುತ್ತಾರೆ. ಆದ್ದರಿಂದ ಹಿಂದಿನ ಸೂತ್ರದಲ್ಲಿ ಹೇಳಿದ ಜ್ಞೇಯತ್ವದ ಅವಚನವು ಅಸಿದ್ಧವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಎಲ್ಲಾ ತತ್ವಗಳಿಗಿಂತಲೂ ಉತ್ತಮನಾದ ಬ್ರಹ್ಮನು ಮಹತ್ತತ್ವಕ್ಕಿಂತಲೂ ಉತ್ತಮನೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ 'ನಿಚಾಯ್ಯ ತಂ' ಎಂಬ ವಾಕ್ಯದಿಂದಲೂ ವಿಷ್ಣುವೇ ಜ್ಞೇಯನೆಂದು ಕರೆಸಿಕೊಳ್ಳುತ್ತಾನೆ. ಹಾಗಾಗಿ, ಹೇತ್ವಸಿದ್ಧಿದೋಷಕ್ಕೆ ಅವಕಾಶವಿರುವುದಿಲ್ಲ.

'ಪ್ರಕರಣಾತ್' ಎಂಬುದು ಆರನೆಯ ಸೂತ್ರ. ನಿಚಾಯ್ಯ ವಾಕ್ಯದಲ್ಲಿ ಪ್ರಧಾನವೇ ಪ್ರತಿಪಾದ್ಯವಾದಲ್ಲಿ, ಬಾಧಕವನ್ನು ಹೇಳಲಾಗಿದೆ. ಏಕೆಂದರೆ 'ಸೋಽಧ್ವನಃ ಪಾರಮಾಪ್ನೋತಿ' ಎಂಬುದು ವಿಷ್ಣುವಿನ ಪ್ರಕರಣವಾದ್ದರಿಂದ ವಿಷ್ಣುವೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆ.

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬುದು ಏಳನೆಯ ಸೂತ್ರ. ಉಪನಿಷತ್ತಿನಲ್ಲಿ ಮುಮುಕ್ಷುಗಳಿಂದ ಜ್ಞೇಯವೆಂದು ಹೇಳಲ್ಪಟ್ಟದ್ದು ಪ್ರಧಾನವೇ ಆಗಬಹುದಿಲ್ಲವೇ? ಎಂಬ ಪ್ರಶ್ನೆಗೆ

ಬಾಧಕವನ್ನು ಈ ಸೂತ್ರದಲ್ಲಿ ಹೇಳಲಾಗಿದೆ. ನಚಿಕೇತನು ಪಿತೃಸೌಮನಸ್ಯ, ಅಗ್ನಿ, ಬ್ರಹ್ಮ ಮೂವರ ಬಗ್ಗೆ ಮಾತ್ರ ಪ್ರಶ್ನಿಸಿರುತ್ತಾನೆ. ಅದಕ್ಕನುಸಾರಿಯಾಗಿ ಯಮದೇವರು ಬ್ರಹ್ಮನ ಬಗ್ಗೆ ಉತ್ತರಿಸುತ್ತಾರೆ ಹೊರತು, ಪ್ರಕೃತಿಯ ಬಗ್ಗೆ ಉತ್ತರಿಸುವುದು ಸೂಕ್ತವಾಗುವುದಿಲ್ಲ. ಆದ್ದರಿಂದ 'ಪ್ರಕರಣಾತ್' ಎಂಬ ಸೂತ್ರದ ಮೇಲೆ ಬರುವಂತಹ ಆಕ್ಷೇಪಕ್ಕೆ ಉತ್ತರಿಸಲು ಏಳನೆಯ ಸೂತ್ರ ಹೊರಟಿದ್ದರಿಂದ ಏಳನೆಯ ಸ್ಥಾನವು ಇದಕ್ಕೆ ಅತ್ಯಂತ ಸಮಂಜಸವಾಗಿದೆ.

### ಸ್ವಪಕ್ಷಬಾಧಕದ ಉದ್ಧಾರಕ್ಕಾಗಿ ಕೊನೆಯ ಎರಡು ಸೂತ್ರಗಳು

'ಜ್ಞೇಯತ್ವಾವಚನಾಚ್ಚ' ಎಂಬ ನಾಲ್ಕನೆಯ ಸೂತ್ರದಲ್ಲಿ ಹೇಳಿದ ಸ್ವಪಕ್ಷಸಾಧಕ ಪ್ರಮಾಣವನ್ನು ಮುಂದಿನ ಮೂರು ಸೂತ್ರಗಳಲ್ಲಿ ಸಾಧಿಸಲಾಯಿತು. ಎಂಟನೆಯದ್ದು 'ಮಹದ್ವಚ್ಚ' ಎಂಬ ಸೂತ್ರ. ಅವ್ಯಕ್ತಾದಿಶಬ್ದಗಳ ಪ್ರಯೋಗಪ್ರಾಚುರ್ಯವು ಮಹಾವಿಷ್ಣುವಿನಲ್ಲಿ ಇಲ್ಲದಿರುವಾಗ ಮಹಾವಿಷ್ಣುವೇ ಅವ್ಯಕ್ತಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆಂದು ಹೇಗೆ ಹೇಳುತ್ತೀರಿ? ಎಂಬುದಾಗಿ ಸ್ವಪಕ್ಷ ಸ್ಥಾಪನೆಯಲ್ಲಿ ಬಾಧಕಪ್ರಮಾಣವನ್ನು ಆಕ್ಷೇಪಿಸುತ್ತಾರೆ. ಇದಕ್ಕೆ ಉತ್ತರಿಸುವುದಕ್ಕಾಗಿ ಈ ಸೂತ್ರ ಹೊರಟಿದೆ. ಪ್ರಯೋಗಪ್ರಾಚುರ್ಯವಿಲ್ಲದಿದ್ದರೂ ಪ್ರವೃತ್ತಿನಿಮಿತ್ತವು ಅತಿಶಯವಾಗಿದ್ದರೆ ಸಾಕು. ಆ ಶಬ್ದವು ಮಹಾವಿಷ್ಣುವನ್ನು ಮುಖ್ಯವಾಗಿ ಹೇಳುತ್ತದೆ. ಉದಾಹರಣೆ - 'ಮಹಾನ್' ಎಂಬ ಶಬ್ದವು ಮಹತ್ತತ್ವವನ್ನೇ ಮುಖ್ಯವಾಗಿ ಹೇಳುವುದಾದರೆ, ಪ್ರವೃತ್ತಿನಿಮಿತ್ತದ ಅತಿಶಯದಿಂದ ವಿಷ್ಣುವನ್ನೂ ಮುಖ್ಯವಾಗಿ ಹೇಳುತ್ತದೆ. ಅದರಂತೆ ಅವ್ಯಕ್ತಾದಿಶಬ್ದಗಳೂ ಕೂಡ ವಿಷ್ಣುವನ್ನು ಮುಖ್ಯವಾಗಿ ಹೇಳಬಹುದು. ಸ್ವಪಕ್ಷಸಾಧಕಪ್ರಮಾಣಗಳನ್ನು ಹಿಂದಿನ ಸೂತ್ರಗಳಲ್ಲಿ ಸ್ಥಾಪನೆ ಮಾಡಿದ ಮೇಲೆ ಈ ಸೂತ್ರದಲ್ಲಿ ಸ್ವಪಕ್ಷಬಾಧಕಪ್ರಮಾಣವನ್ನು ಉದ್ಧಾರ ಮಾಡುತ್ತಿರುವ ಕಾರಣ ಎಂಟನೆಯ ಸ್ಥಾನವು ಇದಕ್ಕೆ ಯುಕ್ತವಾಗಿದೆ.

'ಚಮಸವದವಿಶೇಷಾತ್' ಎಂಬುದು ಈ ಅಧಿಕರಣದ ಒಂಭತ್ತನೆಯ ಅಂತಿಮ ಸೂತ್ರ. ಮಹಾವಿಷ್ಣುವಿನಲ್ಲಿ 'ಮಹತ್' ಶಬ್ದವು ಮುಖ್ಯವಾಗಿರುತ್ತದೆ ಎಂದು ಇದುವರೆಗೂ ಸಿದ್ಧವಾಗಿಲ್ಲ. ಒಂದು ವೇಳೆ ಈ ಅಧಿಕರಣದ ಪ್ರಮೇಯವು ಸಿದ್ಧವಾದರೆ ಅವ್ಯಕ್ತಾದಿ ಶಬ್ದಗಳಂತೆ 'ಮಹತ್' ಶಬ್ದವೂ ಕೂಡ ಮಹಾವಿಷ್ಣುವನ್ನು ಹೇಳುತ್ತದೆಂದು ಸಿದ್ಧವಾಗುತ್ತಿತ್ತು. ಹಾಗಾಗಿ 'ಮಹತ್' ಶಬ್ದದ ದೃಷ್ಟಾಂತವನ್ನು ಎಂಟನೆಯ ಸೂತ್ರದಲ್ಲಿ ಹೇಳಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಉದಾಹರಣೆಯನ್ನು ಈ ಸೂತ್ರವು ನೀಡುತ್ತಿದೆ. ಅನುಶಾಸನದ ಬಲದಿಂದ 'ಚಮಸ' ಶಬ್ದವನ್ನು ಶಿರಸ್ಸಿನಲ್ಲಿ ಪ್ರಯೋಗಿಸಲಾಗಿದೆ. ಆದರೆ ಲೋಕದಲ್ಲಿ ಎಲ್ಲಿಯೂ ಕೂಡ ಶಿರಸ್ಸಿನಲ್ಲಿ 'ಚಮಸ' ಶಬ್ದವನ್ನು ಪ್ರಯೋಗಿಸುತ್ತಿಲ್ಲ. ಅದರಂತೆ ಅವ್ಯಕ್ತಾದಿಶಬ್ದಗಳೂ ಕೂಡ ಮಹಾವಿಷ್ಣುವನ್ನು ಹೇಳುತ್ತದೆಂದು ಅನುಶಾಸನವಿರುವಾಗ ಮುಖ್ಯವಾಚಕತ್ವವು ಮಹಾವಿಷ್ಣುವಿಗಿರುವುದಿಲ್ಲವೆಂದು ಹೇಳುವುದು ತಪ್ಪು. ಹಾಗಾಗಿ ಆನುಮಾನಿಕಾಧಿಕರಣದ ಒಂಭತ್ತು ಸೂತ್ರಗಳಿಂದ 'ದುಃಖೀ' 'ಬದ್ಧಃ' 'ಅವರಃ' 'ಅವ್ಯಕ್ತಃ' ಮೊದಲಾದ ಎಲ್ಲಾ ಶಬ್ದಗಳಿಂದಲೂ ಪರಮಾತ್ಮನು ಮುಖ್ಯವಾಗಿ ಪ್ರತಿಪಾದ್ಯನೆಂದು ಸಿದ್ಧವಾಯಿತು.

## ಶಾಂಕರಭಾಷ್ಯ ರಾಮಾನುಜ ಭಾಷ್ಯಗಳಲ್ಲಿರುವ ಅಧಿಕರಣಶರೀರ ವಿಮರ್ಶೆ

ಶಾಂಕರಭಾಷ್ಯದ ಪ್ರಕಾರ ಅಧಿಕರಣಶರೀರವನ್ನು ಹೀಗೆ ತಿಳಿಯಬೇಕು - 'ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕೋಪನಿಷತ್ತಿನಲ್ಲಿರುವ ಮಂತ್ರವೇ ವಿಷಯವಾಗಿದೆ. ಇಲ್ಲಿರುವ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳುತ್ತದೋ, ಅಥವಾ ಶರೀರವನ್ನು ಹೇಳುತ್ತದೋ ? ಎಂದು ಸಂಶಯ. 'ನ ವ್ಯಕ್ತಮ್ ಅವ್ಯಕ್ತಮ್' ಎಂಬ ನಿಷ್ಪತ್ತಿಯಿಂದ ಸೂಕ್ಷ್ಮವಾದ ಜಡಪ್ರಕೃತಿಯಲ್ಲಿ ಈ ವ್ಯುತ್ಪತ್ತಿಯು ಉಪಪನ್ನವಾಗುತ್ತದೆ. ಸಾಂಖ್ಯಸ್ಮೃತಿಯ ಪ್ರಕಾರ ಅವ್ಯಕ್ತಶಬ್ದವು ಪ್ರಕೃತಿಯಲ್ಲಿ ರೂಢವೂ ಆಗಿದೆ. ಆದ್ದರಿಂದ ಪ್ರಕೃತಿಯು ಅವ್ಯಕ್ತ ಶಬ್ದದಿಂದ ಪ್ರತಿಪಾದ್ಯವಾಗುತ್ತಿರುವಾಗ ಈಕ್ಷತ್ಯಧಿಕರಣದಲ್ಲಿ 'ಅಶಬ್ದಮ್' ಎಂಬ ಪದದಿಂದ ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಿಸಿದ್ದು ಸರಿಯಲ್ಲ ಎಂದು ಪೂರ್ವಪಕ್ಷ.

ಅವ್ಯಕ್ತಶಬ್ದದಿಂದ ಶರೀರವೇ ಪ್ರತಿಪಾದ್ಯವಾಗಿದೆ ಹೊರತು, ಪ್ರಕೃತಿಯಲ್ಲ. ಏಕೆಂದರೆ ಅವ್ಯಕ್ತಶಬ್ದಕ್ಕೆ ಅಲೌಕಿಕವಾದ ಪ್ರಕೃತಿಯಲ್ಲಿ ಲೋಕಪ್ರಸಿದ್ಧಿಯಿರುವುದಿಲ್ಲ. ಸಾಂಖ್ಯಸ್ಮೃತಿಯೂ ಕೂಡ ಪೌರುಷೇಯವಾದ್ದರಿಂದ ನಿರ್ಣಾಯಕವಾಗುವುದಿಲ್ಲ. ಆದ್ದರಿಂದ ಪ್ರಕೃತಿಯನ್ನು ಹೇಳುವುದಿಲ್ಲ. ಶರೀರವನ್ನೇ ಹೇಳಬೇಕು. ಏಕೆಂದರೆ 'ಆತ್ಮಾನಾಂ ರಥಿನಂ ವಿದ್ಧಿ ಶರೀರಂ ರಥಮೇವ ಚ' ಎಂಬುದಾಗಿ ನಮ್ಮ ದೇಹವನ್ನು ರಥವನ್ನಾಗಿ ಶ್ರುತಿಯು ನಿರೂಪಣೆ ಮಾಡುತ್ತಿದೆ. ಇಂದ್ರಿಯಗಳು ಕುದುರೆಗಳಾಗಿವೆ. ಆ ಕುದುರೆಗಳು ನಮ್ಮ ಅಧೀನವಾಗಿದ್ದರೆ, 'ಸೋಽಧ್ವನಃ ಪಾರಮಾಪ್ನೋತಿ' ಎಂಬ ಮಾತಿನಂತೆ ಮೋಕ್ಷ ಮಾರ್ಗವನ್ನು ತಲುಪಲು ಸಾಧ್ಯ. ಮೋಕ್ಷಮಾರ್ಗದ ಮುಕ್ತಾಯ ಎಲ್ಲಿ ಆಗುತ್ತದೆ ? ಎಂಬುದನ್ನು ಶ್ರುತಿಯೇ ಮುಂದೆ ವಿವರಿಸುತ್ತದೆ -

ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ ।<br>
ಮನಸಸ್ತು ಪರಾ ಬುದ್ಧಿಃ ಬುದ್ಧಿರಾತ್ಮಾ ಮಹಾನ್ ಪರಃ<br>
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ<br>
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ॥

ಹೀಗೆ ಬ್ರಹ್ಮನೇ ಆತ್ಯಂತಿಕವಾಗಿ ಹೊಂದಲು ಯೋಗ್ಯವಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಶರೀರವು ರಥವಾಗಿರುವುದರಿಂದ ಇಂದ್ರಿಯಗಳು, ವಿಷಯಗಳು, ಮನಸ್ಸು, ಬುದ್ಧಿ, ಆತ್ಮ ಇವೆಲ್ಲವೂ ಸಾರಥ್ಯ ಮೊದಲಾದ ಸ್ಥಾನವನ್ನು ಪಡೆಯುತ್ತವೆ. 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿ ಮಂತ್ರದಲ್ಲಿ ಇಂದ್ರಿಯಗಳು ವಿಷಯಗಳು ಇವುಗಳನ್ನೆಲ್ಲ ಹೇಳುವಂತಹ ಶಬ್ದಗಳು ಸ್ಪಷ್ಟವಾಗಿರುತ್ತವೆ. ಆದರೆ ಶರೀರವನ್ನು ಹೇಳುವಂತಹ ಶಬ್ದವೇ ಇಲ್ಲ. ಹಾಗಾಗಿ ಪರಿಶೇಷ ಪ್ರಮಾಣದಿಂದ ಉಳಿದಿರುವ ಅವ್ಯಕ್ತಶಬ್ದವೇ ಶರೀರವನ್ನು ಹೇಳುತ್ತದೆಂದು ನಿರ್ಣಯಿಸಬೇಕು. ಹಾಗಾಗಿ ಜಡಪ್ರಕೃತಿಯನ್ನು ಅವ್ಯಕ್ತಶಬ್ದವು ಹೇಳುತ್ತದೆಂಬುದು ಅಸಂಗತವಾಗುತ್ತದೆ.

ರಾಮಾನುಜರ ಅಧಿಕರಣಶರೀರ ಹೀಗಿದೆ - 'ಅವ್ಯಕ್ತಾತ್ ಪುರುಷಃ ಪರಃ' ಎಂಬುದನ್ನೇ ವಿಷಯವನ್ನಾಗಿ ಉಲ್ಲೇಖಿಸುತ್ತಾರೆ. ಇಲ್ಲಿರುವ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳುತ್ತದೋ, ಅಥವಾ

ಶರೀರವನ್ನು ಹೇಳುತ್ತದೋ ಎಂಬ ಸಂಶಯವು ಪ್ರಾಪ್ತವಾದರೆ, ಅವ್ಯಕ್ತಶಬ್ದದಿಂದ ಪ್ರಕೃತಿಯು ಪ್ರತಿಪಾದ್ಯವಾಗಿದೆ. ಏಕೆಂದರೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಪುರುಷಶಬ್ದದಿಂದ ಸಾಂಖ್ಯರು ನಿರೂಪಣೆ ಮಾಡುವ ಆತ್ಮನು ಪ್ರತಿಪಾದ್ಯನಾಗಿದ್ದಾನೆ. 'ಪುರುಷಾನ್ನ ಪರಂ ಕಿಂಚಿತ್' ಎಂಬುದಾಗಿ ಇಪ್ಪತ್ತೈದನೆಯ ಪುರುಷನಿಗಿಂತ ಉತ್ತಮವಾದದ್ದು ಮತ್ತೊಂದು ಪದಾರ್ಥ ಇರುವುದಿಲ್ಲ ಎಂದು ನಿಷೇಧ ಮಾಡಿದ್ದರಿಂದ ಪ್ರಕೃತಿಯೇ ಪ್ರತಿಪಾದ್ಯವಾಗಬೇಕು ಎಂದು ಪೂರ್ವಪಕ್ಷ.

ಇದು ಸರಿಯಲ್ಲ. ಶರೀರವನ್ನು ಅವ್ಯಕ್ತಶಬ್ದವು ಪ್ರತಿಪಾದನೆ ಮಾಡುತ್ತದೆ. ಏಕೆಂದರೆ ಪುರುಷಶಬ್ದದಿಂದ ಪ್ರತಿಪಾದ್ಯನಾದವನು ಪರಮಾತ್ಮನೇ ಹೊರತು, ಸಾಂಖ್ಯಸ್ಮೃತಿಸಿದ್ಧನಾದ ಪುರುಷನಲ್ಲ. ಏಕೆಂದರೆ ಕಾಠಕೋಪನಿಷತ್ತಿನಲ್ಲಿ ರೂಪಕಾಲಂಕಾರದ ಮೂಲಕ ಜೀವನನ್ನು ಸಾರಥಿಯೆಂದು, ಶರೀರವನ್ನು ರಥವೆಂದು, ಇಂದ್ರಿಯಗಳನ್ನು ಕುದುರೆಯೆಂದು, ವಿಷಯಗಳನ್ನು ಮಾರ್ಗವೆಂದು, ಮನಸ್ಸನ್ನು ಕಡಿವಾಣವೆಂದು, ಬುದ್ಧಿಯನ್ನು ಸಾರಥಿಯೆಂದು ಹೇಳಲಾಗಿದೆ.

ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧಿರಾತ್ಮಾ ಮಹಾನ್ ಪರಃ
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ॥

ಎಂದು. ಹೀಗೆ ಹೇಳಿದ್ದರಿಂದ ಶರೀರವೇ ಪ್ರತಿಪಾದ್ಯವಾಗಬೇಕು ಹೊರತು, ಪ್ರಕೃತಿಯಲ್ಲವೆಂದು ಸಿದ್ಧಾಂತ ಮಾಡಿದ್ದಾರೆ.

ಇವರೀರ್ವರ ಅಧಿಕರಣಶರೀರವು ಸರಿಯಲ್ಲ. ಏಕೆಂದರೆ ಪ್ರಧಾನಕ್ಕೆ ಸಕಲಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡಲು ಹೊರಟಿದ್ದೀರೋ, ಅಥವಾ ಜಗತ್ಕಾರಣತ್ವ ಪ್ರತಿಪಾದಕವಾದ ಶಬ್ದಗಳಿಂದ ಪ್ರತಿಪಾದ್ಯವಲ್ಲವೆಂದು ಹೇಳಲು ಹೊರಟಿದ್ದೀರೋ, ಯಾವುದೇ ಶಬ್ದಗಳಿಂದಲೂ ಪ್ರತಿಪಾದ್ಯವಲ್ಲವೆಂದು ಸಮರ್ಥನೆ ಮಾಡುವುದರಿಂದ ಏನೂ ಪ್ರಯೋಜನವಿಲ್ಲ. ನಾವು ಸಕಲಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವುದರಿಂದ ಪ್ರಕೃತ್ಯಾದಿಗಳು ಶಬ್ದಪ್ರತಿಪಾದ್ಯವಲ್ಲವೆಂದು ಹೇಳಿದರೆ ಪ್ರಯೋಜನವಿದೆ. ಆದರೆ ನಿಮ್ಮ ಮತದಲ್ಲಿ ಸಮನ್ವಯ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಸಕಲ ಶಬ್ದಗಳ ಸಮನ್ವಯದ ಪ್ರತಿಜ್ಞೆಯನ್ನು ಬ್ರಹ್ಮನಲ್ಲಿ ಮಾಡಿರುವುದಿಲ್ಲ. ಹೀಗಿರುವಾಗ ಅವ್ಯಕ್ತಾದಿ ಶಬ್ದಪ್ರತಿಪಾದ್ಯತ್ವವನ್ನು ಪ್ರಕೃತಿಯಲ್ಲಿ ನಿಷೇಧ ಮಾಡುವುದರಿಂದ ಯಾವುದೇ ಲಾಭವು ಇರುವುದಿಲ್ಲ. ಮತ್ತು ಈಕ್ಷತ್ಯಧಿಕರಣದಲ್ಲಿಯೂ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿಷೇಧ ಮಾಡಿದ್ದು ವ್ಯರ್ಥವಾಗಿದೆ. ಮತ್ತು ಅಶಕ್ಯವೂ ಆಗಿದೆ. ಇನ್ನು ಜಗತ್ಕಾರಣತ್ವ ಪ್ರತಿಪಾದಕವಾದ ಶಬ್ದಗಳಿಂದ ಪ್ರಧಾನವೂ ಪ್ರತಿಪಾದ್ಯವಲ್ಲವೆಂದು ಸಾಧಿಸಬೇಕು. ಆದರೆ ಪ್ರಕೃತ 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯಲ್ಲಿ ಜಗತ್ಕಾರಣತ್ವವನ್ನು ಹೇಳುತ್ತಲೇ ಇಲ್ಲ. ಮಹತ್ತತ್ವಕ್ಕಿಂತಲೂ ಅವ್ಯಕ್ತತತ್ವವು ಶ್ರೇಷ್ಠವೆಂದಷ್ಟೇ ಹೇಳಲಾಗಿದೆ. ಆದ್ದರಿಂದ ಇವರೀರ್ವರ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲದಾಗ, ಸಿದ್ಧಾಂತದ ಉತ್ಥಾನವು ಸುತರಾಂ ಸಾಧ್ಯವಿಲ್ಲ.

## ಅದ್ವೈತಿಗಳಿಗೆ ಈ ಅಧಿಕರಣವು ಅನಾರಂಭಣೀಯ

ಕಾರಣತ್ವಂ ಪ್ರಧಾನಸ್ಯ ನಿರಸ್ಯ ಸ್ಥಾಪಿತಂ ಯದಿ ।
ಅವಿದ್ಯಾದೇಸ್ತದಾ ಕೋನು ಲಾಭೋಽಸ್ತಿ ಬ್ರಹ್ಮವಾದಿನಃ ॥೧॥

ಬ್ರಹ್ಮವಾದಿಯಾದ ನಿನಗೆ ಕಾರಣತ್ವವನ್ನು ಪ್ರಧಾನದಲ್ಲಿ ನಿರಾಕರಿಸಿ, ಅವಿದ್ಯಾದಿಗಳಲ್ಲಿ ಸ್ಥಾಪನೆ ಮಾಡುವುದಾದರೆ, ಏನು ಲಾಭವಿದೆ ?

ವೃಕೋಣಾಪಹೃತಂ ಮೇಷಮಾದಾಯಾತಿಪ್ರಯತ್ನತಃ ।
ಸ ಚೇದ್ವ್ಯಾಘ್ರಾಯ ದೀಯೇತ ಕೋ ಲಾಭಸ್ತೇನ ಸಿಧ್ಯತಿ ॥೨॥

ತೋಳದಿಂದ ಕುರಿಯನ್ನು ಮಹಾಪ್ರಯತ್ನದಿಂದ ರಕ್ಷಣೆ ಮಾಡಿ ಹುಲಿಯ ಬಾಯಿಯಲ್ಲಿ ನೀಡಿದರೆ ನಿನಗೇನು ಲಾಭವಾಗುತ್ತದೆ.

ಪ್ರಧಾನವು ಈಶ್ವರನ ಶರೀರದಂತಿರುವುದರಿಂದ ಅವನ ಅಧೀನವಾಗಿದೆ. ಆದರೆ ಶ್ರುತಿಯನ್ನು ನೋಡಿದಾಗ ಸ್ವತಂತ್ರವಾಗಿದೆಯೆಂಬ ಭ್ರಾಂತಿ ಬರುತ್ತದೆ. ಸ್ವಾತಂತ್ರ್ಯಭ್ರಮೆಯನ್ನು ನಿರಾಕರಿಸುವುದಕ್ಕಾಗಿ ಈ ಅಧಿಕರಣ ಹೊರಟಿದೆಯೆಂದು ಅಧಿಕರಣಕ್ಕೆ ನಾವು ಸಾರ್ಥಕ್ಯವನ್ನು ಹೇಳುತ್ತೇವೆಂದು ಅದ್ವೈತಿಗಳು ವಾದಿಸುತ್ತಾರೆ.

ಇದು ಸರಿಯಲ್ಲ. ಹಾಗಾದಲ್ಲಿ ಯಾವ ಪ್ರಕರಣದಲ್ಲಿ ಅವ್ಯಕ್ತದ ಬಗ್ಗೆ ಪ್ರಸಕ್ತಿ ಬಂದಿದೆಯೋ, ಅದೇ ಪ್ರಕರಣದಲ್ಲೇ ಆಕಾಶ, ಇಂದ್ರಿಯ ಮೊದಲಾದವುಗಳೂ ಕೂಡ ಪ್ರಸಕ್ತವಾಗಿವೆ. ಅವ್ಯಕ್ತವು ಈಶ್ವರನ ಅಧೀನವಾಗಿರುವಂತೆ ಆಕಾಶಾದಿಗಳೂ ಈಶ್ವರನ ಅಧೀನವೇ ಆಗಿವೆ. ಆದ್ದರಿಂದ ಈಶ್ವರನ ಅಧೀನವಲ್ಲವೆಂಬ ವಿಷಯವನ್ನು ಆಕಾಶಾದಿಗಳಲ್ಲಿಯೂ ಈ ಅಧಿಕರಣದಿಂದ ನಿರಾಕರಿಸಬಹುದಲ್ಲವೇ? ಅವುಗಳ ವಿಚಾರವನ್ನು ಬಿಟ್ಟು, ಅವ್ಯಕ್ತಶಬ್ದದಲ್ಲಿ ಮಾತ್ರ ಈಶ್ವರನ ಅನಧೀನತ್ವದ ನಿರಾಕರಣೆ ಮಾಡುವುದು ಯುಕ್ತವಾಗುವುದಿಲ್ಲ. ಮತ್ತು ಅವ್ಯಕ್ತವು ಜಗತ್ತಿಗೆ ಉಪಾದಾನ ಕಾರರಣವಾಗಿದೆಯೆಂದು 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಮೊದಲಾದ ಶ್ರುತಿಗಳೂ, 'ಸತ್ವಂ ರಜಸ್ತಮ ಇತಿ' ಮೊದಲಾದ ಸ್ಮೃತಿಗಳು ಪ್ರತಿಪಾದನೆ ಮಾಡುತ್ತಿವೆ. ಹೀಗಿರುವಾಗ ಜಗತ್ತಿಗೆ ಪ್ರಕೃತಿಯು ಕಾರಣವೇ ಅಲ್ಲ. ಅದು ಶಬ್ದದಿಂದ ಪ್ರತಿಪಾದ್ಯವೂ ಅಲ್ಲ. ಇತ್ಯಾದಿಯಾಗಿ ಅದ್ವೈತಿಗಳು ಸಮರ್ಥಿಸುವುದು ಅತ್ಯಂತ ಅನುಚಿತವಾಗಿದೆ.

### ಪ್ರಥಮ ಸೂತ್ರಾರ್ಥ ವಿಮರ್ಶೆ

'ಆನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ' ಎಂಬ ಪ್ರಥಮಸೂತ್ರಕ್ಕೆ ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಒಂದೇ ಪ್ರಕಾರದಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ. 'ಆನುಮಾನಿಕಮಪ್ಯಕೇಷಾಮ್ ಇತಿ ಚೇನ್ನ' ಎಂಬ ಸೂತ್ರದ ಪೂರ್ವಾರ್ಧಕ್ಕೆ ನಮ್ಮಂತೆ ವ್ಯಾಖ್ಯಾನ ಮಾಡುತ್ತಾರಾದ್ದರಿಂದ ವಿವಾದವಿರುವುದಿಲ್ಲ. ಆದರೆ 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಪದಕ್ಕೆ ನಾವು ಪರಮಾತ್ಮನ ಶರೀರದಂತಿರುವ (ಕುತ್ಸಿತಾರ್ಥದಲ್ಲಿ 'ಕ' ಪ್ರತ್ಯಯ) ಪ್ರಕೃತಿಯಲ್ಲಿ ಪರಮಾತ್ಮನ

ರೂಪವಿಶೇಷವು ಇರುವುದರಿಂದ ಪರಮಾತ್ಮನು ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ವ್ಯಾಖ್ಯಾನಿಸಿ 'ದರ್ಶಯತಿ ಚ' ಎಂಬ ಪದಕ್ಕೆ ಈ ವಿಷಯದಲ್ಲಿ ಶ್ರುತಿ-ಸ್ಮೃತಿಗಳು ಆಧಾರವಾಗಿವೆಯೆಂದು ವ್ಯಾಖ್ಯಾನ ಮಾಡುತ್ತೇವೆ. ಆದರೆ ಅವರು ಮಾತ್ರ ಬಹಳ ಕಷ್ಟಪಟ್ಟು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬಲ್ಲಿ 'ರೂಪಕವಿನ್ಯಸ್ತ' ಎಂಬುದನ್ನು ವಿಶೇಷಣವೆಂದು, ಶರೀರವನ್ನು ವಿಶೇಷ್ಯವೆಂದು ಪರಿಗಣಿಸುತ್ತಾರೆ. 'ರೂಪಕವಿನ್ಯಸ್ತಂ ಚ ತತ್ ಶರೀರಂಚ ಶರೀರರೂಪಕವಿನ್ಯಸ್ತಂ' ಎಂಬುದಾಗಿ ಶರೀರಶಬ್ದಕ್ಕೆ ಪೂರ್ವನಿಪಾತ ಮಾಡಬೇಕು. ಯಾವರೀತಿಯಾಗಿ 'ವ್ಯಂಸಕಾಶ್ಚತೇ ಮಯೂರಾಶ್ಚ ಮಯೂರವ್ಯಂಸಕಾಃ' ಎಂಬುದಾಗಿ ವಿಶೇಷ್ಯವಾಚಕಶಬ್ದಕ್ಕೆ ಪೂರ್ವನಿಪಾತ ಮಾಡಲಾಗುತ್ತದೋ, ಅದರಂತೆ ಇಲ್ಲಿಯೂ ತಿಳಿಯಬೇಕು. ಶರೀರವನ್ನೇ ರಥವನ್ನಾಗಿ ತಿಳಿ ಎಂಬುದಾಗಿ ರೂಪಕಾಲಂಕಾರವನ್ನು ಹೇಳಲಾಗಿದೆ. ಆದ್ದರಿಂದ ರಥರೂಪದಿಂದ ಹೇಳಲ್ಪಟ್ಟ ಶರೀರವನ್ನೇ ಅವ್ಯಕ್ತಶಬ್ದದಿಂದ ನಾವು ಸ್ವೀಕರಿಸುತ್ತಿದ್ದೇವೆ.

ಇವರ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ಅವ್ಯಕ್ತಪದದಿಂದ ಪ್ರಕೃತಿಯನ್ನು ಸ್ವೀಕರಿಸುವುದಿಲ್ಲ. , ಶರೀರವನ್ನೇ ಸ್ವೀಕರಿಸುತ್ತೇವೆ ಎಂದು ಹೇಳಬೇಕಾದರೆ ಸೂತ್ರದಲ್ಲಿ 'ಶರೀರಗೃಹಿತೇಃ' ಎಂದಷ್ಟೇ ಹೇಳಿದರೆ ಸಾಕು. ರೂಪಕವಿನ್ಯಸ್ತತ್ವಕ್ಕೆ ಕೃತ್ಯವಿರುವುದಿಲ್ಲ. ಮತ್ತು 'ವಿಶೇಷಣಂ ವಿಶೇಷ್ಯೇಣ ಬಹುಲಂ' ಎಂಬ ಸೂತ್ರದಂತೆ 'ವಿಶೇಷಣಂ' ಎಂಬುದಾಗಿ ಪ್ರಥಮಾಂತವಾಗಿ ನಿರ್ದೇಶಿಸಲ್ಪಟ್ಟಿದೆ. ಯಾವುದು ಪ್ರಥಮಾನಿರ್ದಿಷ್ಟವಾಗಿರುತ್ತದೋ, ಅದು ಸಮಾಸದಲ್ಲಿ ಉಪಸರ್ಜನವಾಗಿರುತ್ತದೆಂದು ನಿಯಮ. ಆವಾಗ 'ಉಪಸರ್ಜನಂ ಪೂರ್ವಂ' ಎಂಬ ಸೂತ್ರದಂತೆ ವಿಶೇಷಣ ವಾಚಕವಾದ ರೂಪಕವಿನ್ಯಸ್ತ ಪದವು ಮೊದಲು ಬರಬೇಕು. ವಿಶೇಷ್ಯವಾಚಕವಾದ ಪದವು ಅನಂತರ ಬರಬೇಕು. ಮತ್ತು 'ತಥಾಹಿ ದರ್ಶಯತಿ' ಎಂಬುದೂ ಕೂಡ ವ್ಯರ್ಥವಾಗುತ್ತದೆ. ಏಕೆಂದರೆ 'ರೂಪಕವಿನ್ಯಸ್ತಗೃಹಿತೇಃ' ಎಂಬುದಕ್ಕೆ ರಥವೆಂದು ಹೇಳಲ್ಪಟ್ಟ ಶರೀರವನ್ನು ಇಲ್ಲಿ ತೆಗೆದುಕೊಳ್ಳುತ್ತೇವೆ ಎಂದು ನೀವು ವ್ಯಾಖ್ಯಾನ ಮಾಡಿದ್ದೀರಿ. ಆದ್ದರಿಂದ ಪೂರ್ವವಾಕ್ಯದಲ್ಲಿ ಹೇಳಲ್ಪಟ್ಟಿದೆ ಎಂಬ ವಿಚಾರವು ಇದರಿಂದಲೇ ತಿಳಿಯುವಾಗ ಪುನಃ 'ತಥಾಹಿ ದರ್ಶಯತಿ' ಎಂಬ ಪದಕ್ಕೆ ಕೃತ್ಯವಿರುವುದಿಲ್ಲ. ಆದ್ದರಿಂದ 'ರೂಪಕವಿನ್ಯಸ್ತ' ಎಂಬುದನ್ನು ಹೇಳಿದರೆ 'ದರ್ಶಯತಿ' ಎಂಬ ಪದವು ಬೇಕಾಗುವುದಿಲ್ಲ. 'ದರ್ಶಯತಿ' ಎಂಬ ಪದವನ್ನು ಹೇಳಿದರೆ 'ರೂಪಕವಿನ್ಯಸ್ತ' ಎಂಬ ಪದವು ಬೇಕಾಗುವುದಿಲ್ಲ.

### ದ್ವಿತೀಯ ಸೂತ್ರಾರ್ಥವಿಮರ್ಶೆ

'ಮಹತಃ ಪರಮವ್ಯಕ್ತಮ್' ಎಂಬಲ್ಲಿರುವ ಅವ್ಯಕ್ತಶಬ್ದದಿಂದ ಶರೀರವು ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. ಏಕೆಂದರೆ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಈ ಶರೀರದಲ್ಲಿಲ್ಲವೆಂದು ಶಂಕಿಸಬಾರದು. ಏಕೆಂದರೆ ಶರೀರವು ವ್ಯಕ್ತರೂಪದಲ್ಲಿದ್ದರೂ ಅದಕ್ಕೆ ಕಾರಣವಾಗಿರುವ ಭೂತಸೂಕ್ಷ್ಮವು ಅವ್ಯಕ್ತವಾಗಿದೆ. ಇಂತಹ ಭೂತಸೂಕ್ಷ್ಮದಲ್ಲಿ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಇರುತ್ತದೆ. ಕಾರ್ಯದಲ್ಲಿ ಕಾರಣವಾಚಕಶಬ್ದಗಳನ್ನು ಪ್ರಯೋಗಿಸುವುದು 'ಗೋಭಿಃ ಶ್ರೀಣೀತ ಮತ್ಸರಮ್' ಇತ್ಯಾದಿ ಸ್ಥಳದಲ್ಲಿ ಕಂಡಿದೆ. ಅದರಂತೆ ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವನ್ನು ಹೇಳುವ ಅವ್ಯಕ್ತಶಬ್ದವನ್ನು

ಕಾರ್ಯರೂಪವಾದ ಶರೀರದಲ್ಲಿ ಪ್ರಯೋಗಿಸಲಾಗಿದೆ. ಇಷ್ಟು 'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಎರಡನೆಯ ಸೂತ್ರ ವ್ಯಾಖ್ಯಾನ.

ಇದು ಸರಿಯಲ್ಲ. ಶರೀರಕ್ಕೆ ಕಾರಣವಾದ ಯಾವ ಭೂತಸೂಕ್ಷ್ಮವಿದೆಯೋ, ಅದನ್ನೇ ಅವ್ಯಕ್ತಶಬ್ದ ಪ್ರತಿಪಾದ್ಯವೆಂದು ಹೇಳಲು ಬರುವಾಗ, ಶರೀರವನ್ನು ಅವ್ಯಕ್ತಶಬ್ದಪ್ರತಿಪಾದ್ಯವೆಂದು ಹೇಳುವುದರಲ್ಲಿ ಅರ್ಥವಿಲ್ಲ. ಮತ್ತು ಶರೀರವು ಹಿಂದೆ ಪ್ರಸಕ್ತವಾಗಿದ್ದರೂ ಅಂತಹ ಶರೀರದಲ್ಲಿ ಮಹತ್ ಪರತ್ವವಾಗಲೀ, ಅವ್ಯಕ್ತತ್ವವಾಗಲೀ, ಸರ್ವಥಾ ಇರುವುದಿಲ್ಲ. ಆದ್ದರಿಂದ ಭೂತಸೂಕ್ಷ್ಮವನ್ನು ವಿವಕ್ಷಿಸುವುದೇ ಉಚಿತ. ಶಾಂಕರಭಾಷ್ಯದಲ್ಲಿ ಅವಿದ್ಯೆಯನ್ನು ಅವ್ಯಕ್ತಶಬ್ದಾರ್ಥವೆಂದು ವ್ಯಾಖ್ಯಾನಿಸಲಾಗಿದೆ. ಹೀಗೆ ಹೇಳುವುದಂತೂ ಬಹಳ ತಪ್ಪಾಗುತ್ತದೆ. ಏಕೆಂದರೆ ನಿರಂತರವಾಗಿ 'ಅಹಮಜ್ಞಃ' ಇತ್ಯಾದಿ ಪ್ರತೀತಿಗಳಿಂದ ನಮ್ಮಲ್ಲಿ ಅವಿದ್ಯೆಯು ಸಾಕ್ಷಿಸಿದ್ಧವಾಗಿದೆ. ಆದ್ದರಿಂದ ವ್ಯಕ್ತವಾದ ಈ ಅವಿದ್ಯೆಯನ್ನು ಅವ್ಯಕ್ತವೆಂದು ಹೇಳಲು ಸಾಧ್ಯವಿಲ್ಲ. ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವಕ್ಕೆ ಪ್ರಯೋಜಕವಾದ ಸೂಕ್ಷ್ಮತ್ವವು ಇಂತಹ ಅವಿದ್ಯೆಯಲ್ಲಿ ಸುತರಾಂ ಇರುವುದಿಲ್ಲ. ಆದ್ದರಿಂದ ಶರೀರವಾಗಲೀ, ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವಾಗಲೀ, ಅಥವಾ ಅವಿದ್ಯೆಯಾಗಲೀ, ಅವ್ಯಕ್ತಶಬ್ದ ಪ್ರತಿಪಾದ್ಯವಾಗುವುದಿಲ್ಲ. ಹೀಗೆ ಅವ್ಯಕ್ತಶಬ್ದದಿಂದ ಯಾವುದು ಪ್ರತಿಪಾದ್ಯವೆಂದು ಅದ್ವೈತಿಗಳನ್ನು ಪ್ರಶ್ನಿಸಿದರೆ, ಅವರಿಗೆ ಬಹಳ ಗೊಂದಲವಿದೆ. ಒಮ್ಮೆ ಶರೀರವೆನ್ನುತ್ತಾರೆ, ಮತ್ತೊಮ್ಮೆ ಭೂತಸೂಕ್ಷ್ಮವೆನ್ನುತ್ತಾರೆ, ಮತ್ತೊಮ್ಮೆ ಅವಿದ್ಯೆಯೆನ್ನುತ್ತಾರೆ. ಗೊಂದಲಕ್ಕೀಡಾದ ಇವರು ಹೇಗೆ ತಾನೆ ಭಾಷ್ಯಕಾರರಾಗುತ್ತಾರೆ ?

## ಮೂರನೆಯ ಮತ್ತು ನಾಲ್ಕನೆಯ ಸೂತ್ರಾರ್ಥ ವಿಮರ್ಶೆ

'ತದಧೀನತ್ವಾದರ್ಥವತ್' ಎಂಬ ಮೂರನೆಯ ಸೂತ್ರಕ್ಕೆ ಪರವಾದಿಗಳ ವ್ಯಾಖ್ಯಾನ ಹೀಗಿದೆ - ದೇಹಕ್ಕೆ ಕಾರಣವಾದ ಭೂತಸೂಕ್ಷ್ಮಗಳು ಅವ್ಯಕ್ತವಾದ್ದರಿಂದ ಅವ್ಯಕ್ತಶಬ್ದಪ್ರತಿಪಾದ್ಯವಾಗಿವೆ. ಹಾಗಾದರೆ ಸಾಂಖ್ಯರು ಒಪ್ಪುವ ಪ್ರಕೃತಿಯನ್ನು ನೀವೂ ಕೂಡ ಒಪ್ಪಿದಂತಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಸಾಂಖ್ಯರು ಈಶ್ವರನ ಅನಧೀನವಾದ ಸ್ವತಂತ್ರವಾದ ಪ್ರಕೃತಿತತ್ವವನ್ನು ಒಪ್ಪುತ್ತಾರೆ. ಆದರೆ ನಾವು ಈಶ್ವರನ ಅಧೀನವಾದ ಪ್ರಕೃತಿಯನ್ನು ಒಪ್ಪುತ್ತೇವೆ. ಪ್ರಕೃತಿಯೆಂಬ ಉಪಾದಾನಕಾರಣವಿಲ್ಲದೇ, ಜಗತ್ತನ್ನು ಸೃಷ್ಟಿ ಮಾಡಲೂ ಕೂಡ ಸಾಧ್ಯವಿಲ್ಲ. ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ಹಿಂದಿನ ಎರಡು ಸೂತ್ರಗಳಲ್ಲಿ ಈಶ್ವರನು ಅಪ್ರಕೃತನಾಗಿರುವಾಗ ಮೂರನೆಯ ಸೂತ್ರದಲ್ಲಿರುವ 'ತತ್' ಶಬ್ದದಿಂದ ಈಶ್ವರನನ್ನು ಪರಾಮರ್ಶಿಸುವುದು ತಪ್ಪಾಗುತ್ತದೆ. ಮತ್ತು 'ಯಸ್ಯಾವ್ಯಕ್ತಮ್ ಶರೀರಂ' ಇತ್ಯಾದಿ ಸೂತ್ರದಿಂದ ಪ್ರಧಾನಕ್ಕೆ ಸ್ವಾತಂತ್ರ್ಯವನ್ನೇ ನೀವು ನಿರಾಕರಣೆ ಮಾಡಬೇಕು. ಅದನ್ನು ಬಿಟ್ಟು ಅವ್ಯಕ್ತಶಬ್ದಾರ್ಥತ್ವವನ್ನು ನಿರಾಕರಣೆ ಮಾಡುವುದೂ ಕೂಡ ತಪ್ಪಾಗುತ್ತದೆ.

'ಜ್ಞೇಯತ್ವಾವಚನಾಚ್ಚ' ಎಂಬ ನಾಲ್ಕನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಸಾಂಖ್ಯರು ಪ್ರಕೃತಿ-ಪುರುಷ ವಿವೇಕಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳುತ್ತಾರೆ. ಇದರಿಂದ ಪ್ರಕೃತಿಯನ್ನು ಅವಶ್ಯ ತಿಳಿಯಬೇಕೆಂಬುದು ಸಾಂಖ್ಯರ ಅಭಿಪ್ರಾಯ. ಆದರೆ ಉಪನಿಷತ್ತಿನಲ್ಲೆಲ್ಲೂ ಕೂಡ

ಪ್ರಕೃತಿಯನ್ನು ತಿಳಿಯಬೇಕೆಂದು ಹೇಳಿರುವುದಿಲ್ಲ. ಆದ್ದರಿಂದ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯು ಇಲ್ಲಿರುವ ಶ್ರುತಿಯಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲವೆಂದು. ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ಪ್ರಕೃತಿಯನ್ನು ತಿಳಿಯಬೇಕೆಂದು ಹೇಳದಿದ್ದರೂ ಕೂಡ 'ಮಹತಃ ಪರಮವ್ಯಕ್ತಮ್' ಎಂಬ ತಿಳಿಸುವಿಕೆಯಿಂದಲೇ ಪ್ರಕೃತಿಯನ್ನು ತಿಳಿಯಬೇಕೆಂದು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲದೇ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಪ್ರಕೃತಿ ಪುರುಷರ ವಿವೇಕವನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಅಷ್ಟೇ ಅಲ್ಲದೇ ಯಾವ ಅವಿದ್ಯೆಯು ಈ ಶ್ರುತಿಯಲ್ಲಿ ಪ್ರತಿಪಾದ್ಯವೆಂದು ನೀನು ಒಪ್ಪುತ್ತೀಯೋ, ಅಂತಹ ಅವಿದ್ಯೆಯಲ್ಲಿ ಅವಿದ್ಯೆಯ ಲಕ್ಷಣವೇ ಇರುವುದಿಲ್ಲ. ಆದ್ದರಿಂದ ಅವಿದ್ಯೆಯೂ ಕೂಡ ಇಲ್ಲಿ ಪ್ರತಿಪಾದ್ಯವಾಗದೇ ಇರಬೇಕಾದೀತು. ಆದ್ದರಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ.

ರಾಮಾನುಜರಿಗೆ ಬೇರೆ ರೀತಿಯಲ್ಲಿಯೇ ದೋಷವನ್ನು ಹೇಳಬೇಕು. ಸಕಲ ಹೇಯಪದಾರ್ಥಗಳಿಗಿಂತ ಭಿನ್ನನಾಗಿ ಬ್ರಹ್ಮನನ್ನು ತಿಳಿಯಬೇಕೆಂದು ರಾಮಾನುಜರು ಹೇಳುತ್ತಾರೆ. ಸಕಲ ಹೇಯಪದಾರ್ಥಗಳಲ್ಲಿ ಪ್ರಧಾನವೂ ಕೂಡ ಹೇಳಿರುವುದರಿಂದ ಪ್ರಧಾನವನ್ನು ತಿಳಿಯಬೇಕೆಂದು ಹೇಳಿದಂತಾಯಿತು. ಹೀಗೆ ಪ್ರಧಾನವೂ ಕೂಡ ಮೋಕ್ಷಕ್ಕೋಸ್ಕರ ಜ್ಞೇಯವೆಂದು ನೀವೂ ಕೂಡ ಒಪ್ಪುತ್ತೀರಿ. ಆದರೆ ಪ್ರಕೃತ ಶ್ರುತಿಯಲ್ಲಿ ಮೋಕ್ಷಕ್ಕೋಸ್ಕರ ಪ್ರಧಾನವನ್ನು ತಿಳಿಯಬೇಕೆಂದು ಹೇಳಿರುವುದಿಲ್ಲ. ಮತ್ತು ನೀವು ಪ್ರಧಾನವನ್ನು ಪರಮಾತ್ಮನ ಶರೀರವೆಂದು ಹೇಳುತ್ತೀರಿ. ಆದರೆ ಇಲ್ಲಿರುವ ಪ್ರಧಾನವು ಭಗವಂತನ ಶರೀರವೆಂದು ಹೇಳಿರುವುದಿಲ್ಲ. ಆದ್ದರಿಂದ ಇಲ್ಲಿರುವ ಅವ್ಯಕ್ತಶಬ್ದದಿಂದ ನಿಮಗೆ ಅಭಿಪ್ರೇತವಾದ ಪ್ರಧಾನವನ್ನು ವಿವಕ್ಷಿಸಲು ಬರುವುದಿಲ್ಲ. ಹಾಗಾಗಿ ಅದ್ವೈತಿಗಳಂತೆ ನಿಮ್ಮ ಮತದಲ್ಲಿಯೂ 'ಜ್ಞೇಯತ್ವಾವಚನಾಚ್ಚ' ಎಂಬ ಸೂತ್ರವ್ಯಾಖ್ಯಾನವು ಸಮಂಜಸವಾಗಿಲ್ಲ.

### ಐದು ಮತ್ತು ಆರನೆಯ ಸೂತ್ರಾರ್ಥ ವಿಮರ್ಶೆ

ಅದ್ವೈತಿಗಳು 'ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್' ಐದನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ -

''ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ಶ್ರುತಿಯು ಪ್ರಕೃತಿಗೆ ಉತ್ತಮತ್ವವನ್ನು ಹೇಳುತ್ತಿದೆ. ಆದ್ದರಿಂದ ಪ್ರಕೃತಿಯೇ ಜ್ಞೇಯವಾಗುತ್ತದೆ. ಇಷ್ಟು ಪೂರ್ವಪಕ್ಷ. 'ಮಹತಃ ಪರಮ್' ಎಂಬುದಾಗಿ ಬ್ರಹ್ಮನನ್ನು ಹೇಳಿ, ಅವನಲ್ಲಿ ಜ್ಞೇಯತ್ವವನ್ನು ಹೇಳುತ್ತಿರುವುದರಿಂದ ಪ್ರಕೃತಿಯು ಜ್ಞೇಯವಲ್ಲ. 'ಸಾ ಕಾಷ್ಠಾ ಸಾ ಪರಾ ಗತಿಃ' ಎಂಬುದಾಗಿ ಇದು ಬ್ರಹ್ಮನ ಪ್ರಕರಣವೇ ಪ್ರಕರಣವೇ ಆಗಿರುತ್ತದೆ. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ವ್ಯಾಖ್ಯಾನ ತಪ್ಪು. ಏಕೆಂದರೆ ಅದ್ವೈತ ಮತದಲ್ಲಿ ಜ್ಞಾತೃತ್ವಾದಿ ಧರ್ಮಗಳಿಂದ ರಹಿತನಾದ, ಶುದ್ಧನಾದ ತುರೀಯ ಬ್ರಹ್ಮನ ಜ್ಞಾನವೇ ಮೋಕ್ಷಕ್ಕೆ ಕಾರಣವೆಂದು ಒಪ್ಪಲಾಗಿದೆ. ಆದರೆ ಸೂತ್ರದಲ್ಲಿ ಜ್ಞಾತೃತ್ವಾದಿ ಧರ್ಮಗಳನ್ನು ಹೇಳುವಂತಹ 'ಪ್ರಜ್ಞಾವತ್' ಎಂಬ ಅರ್ಥದಲ್ಲಿರುವ 'ಪ್ರಾಜ್ಞ' ಎಂಬ ಪದವನ್ನು ಪ್ರಯೋಗಿಸಲಾಗಿದೆ. 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯೂ ಕೂಡ ಅದ್ವೈತಿಗಳಿಗೆ

ಪ್ರತಿಕೂಲವೇ ಆಗಿದೆ. ಏಕೆಂದರೆ ಮಹತ್ತತ್ತ್ವಕ್ಕಿಂತ ಶ್ರೇಷ್ಠನಾಗಿದ್ದಾನೆಂಬ ವಿಶಿಷ್ಟಾಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ಶುದ್ಧಬ್ರಹ್ಮನ ಜ್ಞಾನದಿಂದ ಮೋಕ್ಷವಾಗುತ್ತದೆಂಬ ಅದ್ವೈತ ಮತ ಶ್ರುತಿಗೆ ವಿರುದ್ಧವಾಗಿದೆ.

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಆರನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ -

ಕಾಠಕೋಪನಿಷತ್ತಿನಲ್ಲಿ ನಚಿಕೇತನು ಮೂರರ ಬಗ್ಗೆ ಮಾತ್ರ ಪ್ರಶ್ನಿಸಿದ್ದಾನೆ. 'ಸತ್ವಮಗ್ನಿಮ್' ಎಂಬುದಾಗಿ ಅಗ್ನಿಯ ಬಗ್ಗೆ, 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬುದಾಗಿ ಮರಣವನ್ನು ಹೊಂದಿದ ಜೀವನ ಬಗ್ಗೆ 'ಅನ್ಯತ್ರ ಧರ್ಮಾತ್' ಎಂಬುದರಿಂದ ಬ್ರಹ್ಮನ ಬಗ್ಗೆ ನಚಿಕೇತನು ಪ್ರಶ್ನಿಸಿದ್ದಾನೆ. ಅದಕ್ಕನುಗುಣವಾಗಿ ಯಮನು ಉತ್ತರಿಸಿದ್ದಾನೆ. ಹೀಗಿರುವಾಗ ಜಡಪ್ರಕೃತಿಯ ನಿರೂಪಣೆಯ ಪ್ರಸಂಗವೇ ಇಲ್ಲಿ ಕಾಣಿಸುವುದಿಲ್ಲ. ಇಷ್ಟು ಆರನೆಯ ಸೂತ್ರ ವ್ಯಾಖ್ಯಾನ.

ಈ ಸೂತ್ರ ವ್ಯಾಖ್ಯಾನವೂ ಕೂಡ ಸರಿಯಿಲ್ಲ. ಏಕೆಂದರೆ ಶ್ರುತಿಯಲ್ಲಿ ನಚಿಕೇತನು ಮೂರರ ಬಗ್ಗೆ ಮಾತ್ರ ಪ್ರಶ್ನಿಸಿದ್ದರೂ ಉತ್ತರ ನೀಡುವ ವಾಕ್ಯದಲ್ಲಿ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿಯಾಗಿ ಮೂರು ವಿಷಯಗಳಿಗಿಂತ ಅತಿರಿಕ್ತವಾದ ಇಂದ್ರಿಯಾದಿಗಳೂ ಪ್ರಸಕ್ತವಾಗಿವೆ.

ಮತ್ತು ಶ್ರುತಿಯಲ್ಲಿ 'ತ್ರೀನ್ ವರಾನ್ ವೃಣೀಷ್ವ' ಎಂದು ಮೂರು ವರಗಳನ್ನು ಬೇಡು ಎಂದು ಯಮನು ಹೇಳಿದಾಗ, ನಚಿಕೇತನು 'ಪ್ರಥಮಂ ವರಂ ವೃಣೇ' ಎಂದು ಮೊದಲನೆಯ ವರವನ್ನು, ತಂದೆಯ ಮನಶ್ಶಾಂತಿಯ ಬಗ್ಗೆ 'ದ್ವಿತಿಯೇನ ವೃಣೇ ವರೇಣ' ಎಂಬುದಾಗಿ ಸ್ವರ್ಗಕಾರಣವಾದ ಅಗ್ನಿಯಲ್ಲಿರುವ ಪರಮಾತ್ಮನ ಬಗ್ಗೆ, 'ವರಾಣಾಮೇಷ ವೃತಸ್ತೃತೀಯಃ' ಎಂಬುದರಿಂದ ಮುಕ್ತನಿಯಾಮಕನಾದ ಪರಮಾತ್ಮನ ಬಗ್ಗೆ ವರವನ್ನು ಕೇಳಿದ್ದಾನೆ. ಆದ್ದರಿಂದ 'ತ್ರಿಶಬ್ದದಿಂದ ಮತ್ತು ಪ್ರಥಮಾದಿಶಬ್ದಗಳಿಂದ ಹೇಳಲ್ಪಟ್ಟ ಪಿತೃಸೌಮನಸ್ಯ, ಅಗ್ನಿ ಮತ್ತು ಈಶ್ವರ ಈ ಮೂವರನ್ನು ಬಿಟ್ಟು ಸೂತ್ರದಲ್ಲಿರುವ ತ್ರಿಶಬ್ದಕ್ಕೆ ಬೇರೆ ಅರ್ಥವನ್ನು ನೀವು ಮಾಡುತ್ತಿರುವುದು ಅಯುಕ್ತವಾಗುತ್ತದೆ. ಆದ್ದರಿಂದ 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬ ಪ್ರಶ್ನೆಯು ಮುಕ್ತನಿಯಾಮಕನಾದ ಭಗವದ್ವಿಷಯಕವಾದದ್ದು ಎಂದೇ ತಿಳಿಯಬೇಕು. ಇನ್ನೂ ಹೆಚ್ಚಿನ ವಿಚಾರವನ್ನು ಕಾಠಕಭಾಷ್ಯದಲ್ಲಿ ವಿವರಿಸಲಾಗಿದೆ.

### ರಾಮಾನುಜರ ಸೂತ್ರಾರ್ಥ ವಿಮರ್ಶೆ

'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬುದರಿಂದ ಭಕ್ತಿಯೆಂಬ ಉಪಾಸನದ ಬಗ್ಗೆ 'ಅಣೋರಣೀಯಾನ್' ಇತ್ಯಾದಿ ವಾಕ್ಯದಿಂದ ಉಪೇಯನಾದ ವಿಷ್ಣುವಿನ ಬಗ್ಗೆ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಇತ್ಯಾದಿ ವಾಕ್ಯದಿಂದ ಉಪೇತೃವಾದ ಜೀವನ ಬಗ್ಗೆ ಯಮನು ಉತ್ತರಿಸಿದ್ದಾನೆ. ಆದ್ದರಿಂದ ಸೂತ್ರದಲ್ಲಿರುವ 'ತ್ರಯಾಣಾಮ್' ಎಂಬ ಪದವು 'ಉಪಾಯ', 'ಉಪೇಯ', 'ಉಪಾಸಕ' ಎಂಬ ಮೂರು ಅರ್ಥವುಳ್ಳದ್ದಾಗಿದೆ. ಆದ್ದರಿಂದ

*ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ ।*
*ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥*

ಎಂಬುದು ವಿಷ್ಣುಪರವಾದ ಶ್ಲೋಕವಾಗಿದೆ.

ರಾಮಾನುಜರ ಸೂತ್ರ ವ್ಯಾಖ್ಯಾನವು ತಪ್ಪು. 'ತ್ರೀನ್ ವರಾನ್ ವೃಣೀಷ್ವ' ಎಂದು ಯಮದೇವರು ಹೇಳಿದ ಅನಂತರ ನಚಿಕೇತನು ಪ್ರಥಮ ವರಂ ವೃಣೇ, ದ್ವಿತಿಯೇನ ವೃಣೇ ವರೇನ, 'ವರಾಣಾಮೇಷ ವೃತಸ್ತೃತೀಯಃ' ಎಂಬುದಾಗಿ ಮೂರು ವರಗಳ ಕ್ರಮವನ್ನು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಅದನ್ನೇ 'ತ್ರಯಾಣಾಮ್' ಎಂಬ ಪದದಿಂದ ಸ್ವೀಕರಿಸಬೇಕು. ಇದನ್ನು ಬಿಟ್ಟು ಉಪಾಯ, ಉಪೇಯ, ಉಪಾಸಕ ಇವುಗಳಿಗಿಂತ ವಿಲಕ್ಷಣವಾದ ಅರ್ಥವನ್ನು ಹೇಳುವುದು ಸರಿಯಲ್ಲ.

'ಮಹದ್ವಚ್ಚ' ಎಂಬ ಏಳನೆಯ ಸೂತ್ರಾರ್ಥವನ್ನು ರಾಮಾನುಜರು ಹಾಗೂ ಶಂಕರರು ಹೀಗೆ ಹೇಳುತ್ತಾರೆ - 'ವೇದಾಹಮೇತಂ ಪುರುಷಂ ಮಹಾಂತಮ್' ಎಂಬಲ್ಲಿರುವ 'ಮಹತ್' ಶಬ್ದವು ಸಾಂಖ್ಯಸ್ಮೃತಿಸಿದ್ಧವಾದ ಮಹತ್ತತ್ವವನ್ನು ಹೇಗೆ ಪ್ರತಿಪಾದನೆ ಮಾಡುವುದಿಲ್ಲವೋ, ಅದರಂತೆ ಅವ್ಯಕ್ತಶಬ್ದವೂ ಕೂಡ ಸಾಂಖ್ಯಸ್ಮೃತಿ-ಸಿದ್ಧವಾದ ಪ್ರಕೃತಿಯನ್ನು ಹೇಳುವುದಿಲ್ಲ. ಇಷ್ಟು 'ಮಹದ್ವಚ್ಚ' ಎಂಬ ಸೂತ್ರದ ಅರ್ಥ.

ಇದು ತಪ್ಪು. 'ವೇದಾಹಮೇತಂ' ಇತ್ಯಾದಿ ವಾಕ್ಯದಲ್ಲಿ 'ಆದಿತ್ಯವರ್ಣಮ್' ಇತ್ಯಾದಿಯಾದ ಬಾಧಕಗಳಿರುವ ಕಾರಣ ಮಹತ್ತತ್ವವನ್ನು ಸ್ವೀಕರಿಸಲು ಬರುವುದಿಲ್ಲ. ಆದರೆ ಅವ್ಯಕ್ತಶಬ್ದದಿಂದ ಪ್ರಧಾನವನ್ನು ಸ್ವೀಕರಿಸಲು ಅಂತಹ ಯಾವುದೇ ಬಾಧಕಗಳಿದಿರುವುದಿಲ್ಲ. ಆದ್ದರಿಂದ ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಸೂತ್ರಾರ್ಥಗಳು ಅಯುಕ್ತವಾಗಿವೆ ಎಂಬುದು ನಿರ್ಣಯವಾಯಿತು.

## ಜ್ಯೋತಿರುಪಕ್ರಮಾಧಿಕರಣ

### ಅಧಿಕರಣದ ಉದ್ದೇಶ ಮತ್ತು ಸಂಶಯಪರಂಪರೆ

ಈ ಅಧಿಕರಣದಲ್ಲಿ ವರ್ಣ, ಪದ ಮೊದಲಾದ ಸಕಲವಿಧವಾದ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲು ಹೊರಟಿದ್ದಾರೆ. 'ತಾವ ಏತಾಃ ಸರ್ವಾ ಋಚಃ ಸರ್ವೇ ವೇದಾಃ, ಸರ್ವೇ ಘೋಷಾಃ' ಎಂಬುದಾಗಿ ಐದನೆಯ ಆರಣ್ಯಕವು ಭಗವಂತನನ್ನು ಸಕಲ ಶಬ್ದಪ್ರತಿಪಾದ್ಯನೆಂದು ಅವಶ್ಯವಾಗಿ ಮುಮುಕ್ಷುಗಳು ತಿಳಿಯಬೇಕೆಂದು ಘೋಷಣೆ ಮಾಡಿದೆ. ಆದ್ದರಿಂದ ಪ್ರತಿಯೊಂದು ವರ್ಣಗಳ, ಪ್ರತಿಯೊಂದು ಪದಗಳ ಸಮನ್ವಯವು ಅತ್ಯಂತ ಅನಿವಾರ್ಯ. ಹಿಂದಿನ ಅಧಿಕರಣದಲ್ಲಿ ದೇವತಾ ವಾಚಕವಾದ ಪದಗಳ ಸಮನ್ವಯವನ್ನು ಹಾಗೂ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳಲ್ಲಿರುವ ಪಂಚಮ್ಯಾದಿ ವಿಭಕ್ತಿಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಲಾಯಿತು. ಪ್ರಕೃತ ಈ ಅಧಿಕರಣದಲ್ಲಿ ಕರ್ಮವನ್ನು ಪ್ರತಿಪಾದನೆ ಮಾಡಲು ಹೊರಟಿರುವ ಕರ್ಮಕಾಂಡವೆನಿಸಿದ ಯಜುರ್ವೇದದ ಮಂತ್ರಗಳನ್ನೆಲ್ಲಾ

ಸಮನ್ವಯ ಮಾಡಲಾಗಿದೆ. ಮತ್ತು ಪಂಚಮ್ಯಾದಿ ವಿಭಕ್ತಿಗಳ ಸಮನ್ವಯವನ್ನೂ ಕೂಡ ಮಾಡಲಾಗಿದೆ. ಅಷ್ಟೇ ಅಲ್ಲದೇ ಆಯಾ ಕರ್ಮವಾಚಕವಾದ ಜ್ಯೋತಿಷ್ಟೋಮಾದಿ ಸಮುದಾಯರೂಪವಾದ ಪದಗಳ ಅವಯವವೆನಿಸಿದ 'ಜ್ಯೋತಿಃ' 'ಸ್ತೋಮ' ಮೊದಲಾದ ಪದಗಳ ಸಮನ್ವಯವನ್ನೂ ಕೂಡ ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಸಿದ್ಧಸ್ವರೂಪವಾದ ದೇವತಾವಾಚಕ ಪದಗಳ ಸಮನ್ವಯದ ಅನಂತರ ಸಾಧ್ಯಸ್ವರೂಪವಾದ ಕರ್ಮದ ಸಮನ್ವಯವು ಅತ್ಯಂತ ಪ್ರಸ್ತುತವಾಗುತ್ತದೆ. ಹಿಂದಿನ ಅಧಿಕರಣದಲ್ಲಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ 'ದುಃಖೀ', 'ಬದ್ಧಃ', 'ಅವರಃ' ಮೊದಲಾದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮಾಡಿದ್ದಾಯಿತು. ಇದರಿಂದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಗುಣವಷ್ಟೇ ಸಿದ್ಧವಾಗುತ್ತದೆ. ಆದರೆ ಈ ಅಧಿಕರಣದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸದೇ ಪ್ರತ್ಯೇಕವಾಗಿ ಒಂದೊಂದು ಪದಗಳ ಪ್ರವೃತ್ತಿನಿಮಿತ್ತವೂ ಕೂಡ ಪರಮಾತ್ಮನಲ್ಲೇ ಬರುತ್ತಿದೆಯೆಂದು ಹೇಳುತ್ತಿರುವುದರಿಂದ ಅನೇಕ ಪದಗಳ ಸಮನ್ವಯವೂ ಸಿದ್ಧವಾಗುತ್ತದೆ.

'ಜ್ಯೋತಿಷ್ಟೋಮ' ಪದದಲ್ಲಿರುವ 'ಜ್ಯೋತಿಃ' 'ಸ್ತೋಮ' ಮೊದಲಾದ ಅವಯವಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಾದರೆ 'ಜ್ಯೋತಿಷ್ಟೋಮ' ಎಂಬ ಸಮುದಾಯವು ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ. ಒಂದು ವೇಳೆ 'ಜ್ಯೋತಿಷ್ಟೋಮ' ಎಂಬ ಸಮಗ್ರ ಪದವನ್ನು ಸಮನ್ವಯ ಮಾಡುವುದಾದರೆ ಅದರ ಅವಯವಗಳು ವಿಷ್ಣುವನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಹೀಗೆ ಸರ್ವಸಮನ್ವಯವು ಅಸಾಧ್ಯವಾಗುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

'ಜ್ಯೋತಿಃ' 'ಸ್ತೋಮ' ಮೊದಲಾದ ಅವಯವಗಳು ವಿಷ್ಣುವನ್ನು ಪ್ರತಿಪಾದನೆ ಮಾಡಿದಂತೆ 'ಜ್ಯೋತಿಷ್ಟೋಮ' ಮೊದಲಾದ ಸಮುದಾಯಗಳೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. ಈ ಎಲ್ಲಾ ಪದಗಳ ಪ್ರವೃತ್ತಿನಿಮಿತ್ತಗಳೂ ಭಿನ್ನ-ಭಿನ್ನವೇ ಆಗಿವೆ. ಈ ವಿಷಯದಲ್ಲಿ ವಿದ್ವದ್ರೂಢಿಯು ಪ್ರಮಾಣವಾಗಿರುವುದರಿಂದ ಪ್ರಬಲವಾದ ಮಹಾಯೋಗವೇ ಅಜ್ಞರೂಢಿಯನ್ನು ಬಾಧಿಸುತ್ತದೆ. ಹಾಗಾಗಿ 'ಜ್ಯೋತಿರಾದಿ' ಸಕಲ ಶಬ್ದಗಳ ಸಮನ್ವಯವು ಮಹಾವಿಷ್ಣುವಿನಲ್ಲಿ ಸರ್ವಥಾ ಸಿದ್ಧವಾಗುತ್ತದೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

## ಸರ್ವಶಬ್ದಸಮನ್ವಯವು ಸಾಧ್ಯವಿಲ್ಲವೆಂದು ಪೂರ್ವಪಕ್ಷ

ಸಕಲಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ತಿಳಿದರೆ ಮಾತ್ರ, ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಹಾಗಾಗಿ ಪ್ರಥಮಾಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಮಾಡಲಾಗುತ್ತಿದೆಯೆಂದು ಸಮನ್ವಯಾಧಿಕರಣದಲ್ಲಿ ಪ್ರತಿಜ್ಞೆ ಮಾಡಲಾಯಿತು. ಇದು ಸಾಧ್ಯವಿಲ್ಲ. ಏಕೆಂದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮಗಳಲ್ಲೇ ಪ್ರಸಿದ್ಧವಾಗಿವೆ. ಎಲ್ಲವೂ ಹರಿನಾಮಗಳೇ ಆದರೆ ಸ್ವರ್ಗವನ್ನು ಬಯಸುವವನು ವಸಂತಕಾಲದಲ್ಲಿ ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ಎಂಬ ಅರಿವು ಹೇಗೆ ತಾನೇ ಮೂಡುತ್ತದೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, ಆಯಾ ಶಬ್ದಗಳು ಕರ್ಮಪ್ರತಿಪಾದಕವಾಗಲಿ ಎಂಬ

ಸಮಾಧಾನವನ್ನೇನೋ ಹೇಳಬಹುದು. ಇದರಿಂದ ಸ್ವಾತಂತ್ರ್ಯವೆಂಬ ಒಂದೇ ಗುಣವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ ಹೊರತು, ವಿಭಿನ್ನವಾದ ಶಬ್ದಗಳ ಸಮನ್ವಯದಿಂದ ಆಯಾ ಪ್ರವೃತ್ತಿನಿಮಿತ್ತಗಳು ಹೇಳುವ ವಿಭಿನ್ನವಾದ ಗುಣಗಳು ಬ್ರಹ್ಮನಲ್ಲಿ ಸಿದ್ಧವಾಗುವುದೇ ಇಲ್ಲ. ಆದ್ದರಿಂದ ಯಾವುದೇ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕಾದರೆ, ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸುವಂತೆ ಆಯಾ ಪ್ರವೃತ್ತಿನಿಮಿತ್ತಗಳನ್ನೂ ಕೂಡ ಬ್ರಹ್ಮನಲ್ಲಿ ಸಮನ್ವಯ ಮಾಡಲೇಬೇಕು. ಆವಾಗ ಮಾತ್ರ ಅನೇಕ ಗುಣಗಳನ್ನು ಸಾಧಿಸಿದಂತಾಗುತ್ತದೆ. ಹಾಗೇನಾದರೂ ಪ್ರತಿಯೊಂದು ಪದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಲು ಹೊರಟರೆ, ಎಲ್ಲವೂ ಹರಿನಾಮವಾಗುತ್ತದೆ. ಆದ್ದರಿಂದ ವೇದದಲ್ಲಿರುವ ಕರ್ಮಕಾಂಡವು ವ್ಯರ್ಥವಾಗಿ ಕರ್ಮಾನುಷ್ಠಾನವೇ ಲೋಪವಾಗುವ ಪ್ರಸಂಗ ಬರುತ್ತದೆ.

ಮತ್ತು 'ಜ್ಯೋತಿಷ್ಟೋಮೇನ' ಎಂಬಲ್ಲಿರುವ 'ಜ್ಯೋತಿ', 'ಸ್ತೋಮ' ಎಂಬ ಅವಯವಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುವುದಾದರೆ, 'ಜ್ಯೋತಿಷ್ಟೋಮ' ಎಂಬ ಸಮುದಾಯವು ಬ್ರಹ್ಮನನ್ನು ಪ್ರತಿಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಅದರಂತೆ 'ಜ್ಯೋತಿ' ಎಂಬ ಪದದಲ್ಲಿರುವ 'ಜಿ' ಮತ್ತು 'ಓತಿಃ' ಎಂಬೆರಡು ಅವಯವಗಳು ಬ್ರಹ್ಮನ ಹೆಸರುಗಳಾದರೆ, 'ಜ್ಯೋತಿ' ಎಂಬ ಪದವು ಬ್ರಹ್ಮನ ಹೆಸರಾಗಲು ಸಾಧ್ಯವಿಲ್ಲ. ಏಕೆಂದರೆ ಯಾವ ಅರ್ಥವು ಯಾವ ಸಮುದಾಯದಿಂದ ಪ್ರತಿಪಾದ್ಯವಾಗುತ್ತದೋ, ಅದೇ ಅರ್ಥವು ಅದರ ಅವಯವದಿಂದ ಪ್ರತಿಪಾದ್ಯವಾಗುವುದಿಲ್ಲವೆಂಬುದು ಲೋಕಸಿದ್ಧವಾದ ನಿಯಮ. 'ಪಂಕಜ' ಎಂಬ ಶಬ್ದದಿಂದ ಕಮಲವು ಪ್ರತಿಪಾದ್ಯವಾಗುತ್ತದೆ. ಆದರೆ 'ಪಂಕಜ' ಶಬ್ದದ ಅವಯವವಾದ 'ಪಂಕ' ಮತ್ತು 'ಜ' ಎಂಬ ಶಬ್ದದಿಂದ ಕಮಲವು ಪ್ರತಿಪಾದ್ಯವಾಗುವುದಿಲ್ಲ. ಆದ್ದರಿಂದ ಸರ್ವಶಬ್ದಸಮನ್ವಯವನ್ನು ಮಾಡುವುದು ಸುಲಭದ ಮಾತಲ್ಲ.

## ಸರ್ವಶಬ್ದಗಳಿಂದ ಪರಮಾತ್ಮನೇ ಮುಖ್ಯಪ್ರತಿಪಾದ್ಯನು

ಜಗತ್ತಿನಲ್ಲಿ ಶ್ರುತವಾದ ಸರ್ವಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಇದನ್ನು 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬ ಸೂತ್ರವು ಪ್ರತಿಪಾದನೆ ಮಾಡುತ್ತಿದೆ. ಐತರೇಯೋಪನಿಷತ್ತಿನಲ್ಲಿ ಪರಮಾತ್ಮನು ಬ್ರಹ್ಮಾದಿಜೀವರ ಶರೀರದಲ್ಲಿ ಪ್ರವೇಶ ಮಾಡಿದ್ದಾನೆಂದು ಪ್ರಾರಂಭ ಮಾಡಿ, ಸಕಲ ಋಜ್ ಮಂತ್ರಗಳೂ, ಸಕಲ ವೇದಗಳೂ, ಧ್ವನಿಗಳೆಲ್ಲವೂ ಪರಮಾತ್ಮನ ನಾಮಗಳೆಂದು ಮುಕ್ತಾಯ ಮಾಡಲಾಗಿದೆ. ಆದ್ದರಿಂದ ಸೂತ್ರದಲ್ಲಿ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವು ಉಪಲಕ್ಷಣವೆಂದು ತಿಳಿಯಬೇಕು. ಅಂದರೆ 'ಜ್ಯೋತಿಃ' ಶಬ್ದದ ಸಮನ್ವಯವಷ್ಟೇ ವಿವಕ್ಷಿತವಲ್ಲ. ಹಾಗಾಗಿದ್ದಲ್ಲಿ ಸರ್ವಶಬ್ದಸಮನ್ವಯದ ಉಪಪಾದನೆಗಾಗಿ 'ಉಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ ಉಪನಿಷತ್ತನ್ನು ಉಲ್ಲೇಖಿಸುವ ಅವಶ್ಯಕತೆ ಇರುತ್ತಿರಲಿಲ್ಲ. ಹೀಗೆ ಸರ್ವಶಬ್ದಸಮನ್ವಯಕ್ಕೆ ಉಪಯುಕ್ತವಾದ ಪ್ರಮಾಣವನ್ನು ಹೇಳಿದ್ದರಿಂದ ಸೂತ್ರದಲ್ಲಿ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವು ಉಪಲಕ್ಷಣವೆಂದು ತಿಳಿಯಬೇಕು. ಅಂದರೆ ಸಕಲಶಬ್ದಗಳೂ ಕೂಡ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಈ ವಿಷಯದಲ್ಲಿ ಐತರೇಯೋಪನಿಷತ್ತೇ ಆಧಾರವಾದ ಪ್ರಮಾಣ. ಮತ್ತು

ಅವಸ್ವರತಿ ಗರ್ಗರೋ ಗೋಧಾ ಪರಿ ಸನಿಷ್ವಣತ್ ।
ಪಿಂಗಾ ಪರಿ ಚನಿಷ್ಕದದಿಂದ್ರಾಯ ಬ್ರಹ್ಮೋದ್ಯತಮ್ ॥

ಎಂಬ ಶ್ರುತಿಯೂ ಸಹ ಸಕಲವಿಧವಾದ ಧ್ವನಿಗಳಿಂದ ಪರಮಾತ್ಮನು ಪ್ರತಿಪಾದ್ಯನೆಂದು ಹೇಳಿ, ವಿಶೇಷವಾಗಿ ವೇದಪ್ರತಿಪಾದ್ಯತ್ವವನ್ನು ಸಮರ್ಥನೆ ಮಾಡುತ್ತಿದೆ. ಆದ್ದರಿಂದಲೂ ಪರಮಾತ್ಮನೇ ಸರ್ವಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನು.

## ವೈದಿಕ ಸರ್ವಶಬ್ದಗಳ ಯೌಗಿಕಾರ್ಥ ಶ್ರೀಹರಿ ಮಾತ್ರ

ವೇದದಲ್ಲಿರುವ ಎಲ್ಲ ಸಂಧಿಗಳೂ ಪೂರ್ವೋತ್ತರವರ್ಣಗಳೂ ವಿಷ್ಣುವೆಂಬ ನಾಮದ ಅರ್ಥವೇ ಆಗಿವೆ. ಆದ್ದರಿಂದ ಎಲ್ಲವೂ ಪರಮಾತ್ಮ ಪ್ರತಿಪಾದಕವೆಂದು ತಿಳಿಯಬೇಕು. ಎಲ್ಲ ವರ್ಣಗಳೂ, ಎಲ್ಲ ಸಂಧಿಗಳೂ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ' ಎಂಬ ಶ್ರುತಿಯು ವಿಷ್ಣುನಾಮಾರ್ಥವೆಂದು ತಿಳಿದೇ ವೇದಾಧ್ಯಯನದಲ್ಲಿ ತೊಡಗಬೇಕೆಂದು ಎಚ್ಚರಿಸುತ್ತಿದೆ.

'ಣ'ಕಾರ, 'ಷ'ಕಾರಗಳ ಅರ್ಥವನ್ನು ಸಕಲವರ್ಣಗಳು ಹೇಳಿದ ಮಾತ್ರದಿಂದ ವಿಷ್ಣುನಾಮಾರ್ಥವನ್ನು ಹೇಳಿದಂತೆ ಹೇಗಾಗುತ್ತದೆ ? ಎಂದು ಶಂಕಿಸಬಾರದು. 'ಣ'ಕಾರ ಹಾಗೂ 'ಷ'ಕಾರ ಎಂಬೆರಡು ಅಕ್ಷರಗಳೇ ವಿಷ್ಣುನಾಮದಲ್ಲಿ ಮುಖ್ಯವಾಗಿವೆ. 'ವಿ' ಎಂಬುವುದು ಉಪಸರ್ಗವಾಗಿದೆ. 'ಉನ್' ಎಂಬುದೂ ಕೂಡ ಶೀಲಾರ್ಥಕವಾದ ಪ್ರತ್ಯಯವಾಗಿದೆ. ಇವೆರಡೂ ಅಪ್ರಧಾನವಾದ್ದರಿಂದ ಮುಖ್ಯವಾಗಿ ಣಕಾರ, ಷಕಾರಗಳೇ ವಿಷ್ಣುನಾಮವೆಂದು ಶ್ರುತಿಯ ಅಭಿಪ್ರಾಯವಾಗಿದೆ. ಆದ್ದರಿಂದ ಸ್ವರ, ವರ್ಣ. ಪದ ರೂಪದಿಂದಲೂ ವೇದಕ್ಕೆ ಪರಮಾತ್ಮನಲ್ಲೇ ಸಮನ್ವಯವಿದೆ ಎಂದು ಹೇಳುವುದರಿಂದ ವಾಕ್ಯದ ಸಮನ್ವಯೂ ಕೂಡ ಇದೆಯೆಂಬುದು ಅರ್ಥಾತ್ ಸಿದ್ಧವಾಗುತ್ತದೆ.

ಇದರಂತೆ 'ಅಃ ಇತಿ ಬ್ರಹ್ಮ' ಅ ಎಂಬ ಅಕ್ಷರವು ಪರಮಾತ್ಮನ ನಾಮ ಎಂಬ ಮತ್ತೊಂದು ಶ್ರುತಿಯಲ್ಲಿ ಅಕಾರವು ಪರಮಾತ್ಮನ ನಾಮಸ್ವರೂಪವೆಂದು ಹೇಳಲಾಗಿದೆ. 'ಅಕಾರೋ ವೈ ಸರ್ವಾವಾಕ್' ಎಂಬ ಮತ್ತೊಂದು ಶ್ರುತಿಯಲ್ಲಿ ಅಕಾರವು ಸಕಲಶಬ್ದಗಳ ಸ್ವರೂಪವಾಗಿದೆಯೆಂದು ಹೇಳಲಾಗಿದೆ. ಅಕಾರವು ಸರ್ವಶಬ್ದಗಳ ಸ್ವರೂಪವಾಗುವುದು ಪ್ರತ್ಯಕ್ಷವಾದ್ದರಿಂದ, ಎಲ್ಲಾ ಶಬ್ದಗಳೂ ಅಕಾರಕ್ಕೆ ವ್ಯಾಖ್ಯಾನಗಳಾಗಿವೆ ಎಂದು ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು. ಆವಾಗ ವ್ಯಾಖ್ಯೇಯವಾದ ಅಕಾರವು ಯಾರನ್ನು ಪ್ರತಿಪಾದನೆ ಮಾಡುತ್ತದೋ, ವ್ಯಾಖ್ಯಾನರೂಪವಾದ ಸಕಲಶಬ್ದಗಳೂ ಕೂಡ ಅವನನ್ನೇ ಪ್ರತಿಪಾದನೆ ಮಾಡಬೇಕು. ಇದರಿಂದ ಸರ್ವಶಬ್ದಗಳ ಮುಖ್ಯತಾತ್ಪರ್ಯ ಪರಮಾತ್ಮನೆಂದು ನಿರ್ಣಯವಾಗುತ್ತದೆ.

ಐತರೇಯೋಪನಿಷತ್ತಿನಲ್ಲಿ 'ಯದ್ವಾಚ ಓಮಿತಿ ಯಚ್ಚ ನೇತಿ ಯಚ್ಚಾಸ್ಯಾಃ' ಇತ್ಯಾದಿಯಾಗಿ ಅಂಗೀಕಾರವಾಚಕವಾದ, ನಿಷೇಧಾರ್ಥಕವಾದ, ಕಠಿಣಾರ್ಥಕವಾದ ಎಲ್ಲಾ ವಿಧ ಶಬ್ದಗಳ ಪ್ರವೃತ್ತಿನಿಮಿತ್ತಗಳನ್ನು ತಿಳಿದರೂ ಆ ಜ್ಞಾನವು ಪರಿಪಕ್ವವಾದಾಗ ಮುಕ್ತರಾಗಿ ಕೃತಕೃತ್ಯರಾದರು ಎಂದು ಹೇಳಲಾಗಿದೆ. ಆದರೆ 'ತಮೇವಂ ವಿದ್ವಾನ್' ಎಂಬ ಮತ್ತೊಂದು ಶ್ರುತಿಯಲ್ಲಿ ಪರಮಾತ್ಮನನ್ನು ತಿಳಿದವನೇ ಮುಕ್ತನಾಗುತ್ತಾನೆಂದು ಹೇಳಲಾಗಿದೆ. ಈ ಎರಡೂ ವಾಕ್ಯಗಳು ಉಪಪನ್ನವಾಗಬೇಕಾದರೆ

ವೈದಿಕಶಬ್ದಗಳೆಲ್ಲವೂ ಪರಮಾತ್ಮವಾಚಕಗಳೇ ಆಗಬೇಕು. ಹೀಗೆ ಈ ಶ್ರುತಿಯಿಂದಲೂ ಸಕಲಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ.

ಮತ್ತು 'ಕಶ್ಛಂದಸಾಂ ಯೋಗಮಾವೇದ ಧೀರ' ಯಾರು ತಾನೇ ವೇದದ ಯೋಗಾರ್ಥವನ್ನು ತಿಳಿಯಲು ಸಮರ್ಥನು ಎಂದು ಶ್ರುತಿಯು ಆಕ್ಷೇಪ ಮಾಡಿದೆ. ಅನಂತರ ಪ್ರಜಾಪತಿಯೇ ಎಲ್ಲಾ ವೈದಿಕಶಬ್ದಗಳ ಯೋಗಾರ್ಥವನ್ನು ತಿಳಿಯಲು ಸಮರ್ಥನಾಗಿದ್ದಾನೆಂದು 'ಕಶ್ಛಂದಸಾಂ' ಎಂಬ ಶ್ರುತಿಯು ಉತ್ತರಿಸುತ್ತಿದೆ. 'ಪ್ರಜಾಪತಿರ್ವೈ ಕಃ' ಎಂಬ ಶ್ರುತಿಯು ಹೇಳುವಂತೆ ಪ್ರಜಾಪತಿಯು 'ಕಃ' ಎನಿಸಿದ್ದಾನೆ. ಆಕ್ಷೇಪಾರ್ಥದಲ್ಲಿಯೂ 'ಕಃ' ಎಂಬ ಶಬ್ದವನ್ನು ಪ್ರಯೋಗ ಮಾಡಬಹುದು. ಪ್ರಜಾಪತಿಯೆಂಬರ್ಥದಲ್ಲಿಯೂ 'ಕಃ' ಎಂಬರ್ಥವನ್ನು ಪ್ರಯೋಗ ಮಾಡಬಹುದು. ಶ್ರುತಿಯು ಎರಡು ಅರ್ಥಗಳನ್ನು ವಿವಕ್ಷಿಸುತ್ತಿದೆ. ಚತುರ್ಮುಖ ಎಂಬರ್ಥವನ್ನು ಇಟ್ಟುಕೊಂಡಾಗ, ಚತುರ್ಮುಖನಿಗೆ ಯೋಗಾರ್ಥಜ್ಞಾನ ಸಾಮರ್ಥ್ಯವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಪದಸಮನ್ವಯಕ್ಕೆ ಯಾರೂ ಅರ್ಹರಲ್ಲ ಎಂದು ಹೇಳಲಾಗದು. 'ಕಃ' ಎಂಬುದಕ್ಕೆ ಆಕ್ಷೇಪಾರ್ಥವನ್ನಿಟ್ಟುಕೊಂಡಾಗ ಬೇರೆಯವರಿಗೆ ಅರ್ಹತೆಯಿಲ್ಲ ಎಂದಷ್ಟೇ ಶ್ರುತಿಯ ಅಭಿಪ್ರಾಯ. ಆದ್ದರಿಂದ ಯೌಗಿಕವಾದ ಪದಸಮನ್ವಯವು ಕಠಿಣವೆಂದು ಹೇಳಿದ್ದರಿಂದ ಚತುರ್ಮುಖಾದಿಗಳು ಅರ್ಹರಾಗಿದ್ದಾರೆಂದು ತಿಳಿಯುತ್ತದೆ. ಕೃಷ್ಣ ಪರಮಾತ್ಮನೂ ಕೂಡ ಭಾಗವತದಲ್ಲಿ 'ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ' ಎಂಬುದಾಗಿ ಸಕಲ ವೈದಿಕಶಬ್ದಗಳ ತಾತ್ಪರ್ಯನು ತಾನೇ ಆಗಿದ್ದೇನೆಂದು ಹೇಳಿಕೊಂಡಿದ್ದಾನೆ. ಈ ಎಲ್ಲಾ ಪ್ರಮಾಣಗಳ ಆಧಾರದಿಂದ ವೇದದಲ್ಲಿರುವ ಪ್ರತಿಯೊಂದು ಸ್ವರಗಳು, ವರ್ಣಗಳು, ಪದಗಳು, ವಾಕ್ಯಗಳು ಶ್ರೀಹರಿಯಲ್ಲಿಯೇ ಸಮನ್ವಯಗೊಳ್ಳುತ್ತವೆಂದು ನಿರ್ಣಯವಾಗುತ್ತವೆ.

### ಪ್ರತಿಯೊಂದು ಪದಗಳ ಸಮನ್ವಯ

ತತ್ರಾಪಿ ಯೌಗಿಕೋ ಮುಖ್ಯಃ ಸರ್ವತ್ರಾಸ್ತಿ ಸ ವೈದಿಕೇ ।
ಅನವಸ್ಥಾನಿವೃತ್ತ್ಯರ್ಥಂ ಯೌಗಿಕೇ ರೂಢಿಕಲ್ಪನಾ ॥

ರೂಢಿ ಹಾಗೂ ಯೋಗಗಳ ನಡುವೆ ಯೌಗಿಕವಾದ ಅರ್ಥವೇ ಮುಖ್ಯವಾಗಿರುತ್ತದೆ. ವೇದದಲ್ಲಿರುವ ಸಕಲಶಬ್ದಗಳು ರೂಢ್ಯರ್ಥವನ್ನು ಹಾಗೂ ಯೋಗಾರ್ಥವನ್ನು ಹೇಳಿದರೂ ಯೋಗಾರ್ಥವೇ ಮುಖ್ಯ. ಅನವಸ್ಥಾದೋಷ ಪರಿಹಾರಕ್ಕಾಗಿ ಮಾತ್ರ ಯೌಗಿಕವಾದ ಶಬ್ದಗಳಲ್ಲಿ ರೂಢಿಗಳನ್ನು ಕಲ್ಪಿಸಲಾಗಿರುತ್ತದೆ.

ತತ್ರಾಪಿ ಪರಮೋ ಮುಖ್ಯೋ ವಾಚ್ಯೋ ಶೇಷರವೈರ್ಹರಿಃ ।
ತತ್ತನ್ಮುಖ್ಯಾವಿರೋಧೇನ ತದನ್ಯಾರ್ಥಸ್ಯ ಸಂಗ್ರಹಃ ॥

ಯೌಗಿಕಾರ್ಥದಲ್ಲಿಯೂ ಕೂಡ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಉಳಿದೆಲ್ಲಾ ಪದಾರ್ಥಗಳು ಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗುತ್ತವೆ.

ಇವೇ ಮೊದಲಾದ ಸ್ಮೃತಿಗಳಿಂದ ಪರಮಾತ್ಮನೊಬ್ಬನೇ ಪರಮಮುಖ್ಯವೃತ್ತಿಯಿಂದ ಸಕಲವೇದ-ಪ್ರತಿಪಾದ್ಯನೆಂದು ತಿಳಿಯಬೇಕು.

ಹೀಗೆ ಭಗವಂತನಲ್ಲಿ ವೇದಗಳ ಅನೇಕರೀತಿಯ ಸಮನ್ವಯಗಳನ್ನು ತಿಳಿಯಬೇಕು. ವೇದದಲ್ಲಿರುವ ಪ್ರತಿಯೊಂದು ಪದಗಳು ಧರ್ಮ, ದೇವತೆ, ಯಜ್ಞ ಮತ್ತು ಅವುಗಳಿಗೆ ಸಂಬಂಧಪಟ್ಟ ವಸ್ತುಗಳನ್ನು ಅಮುಖ್ಯವಾಗಿ ತಿಳಿಸುವುದರ ಜೊತೆಗೆ ಭಗವಂತನನ್ನು ಮುಖ್ಯವಾಗಿ ತಿಳಿಸುತ್ತವೆ. ಪ್ರತಿಯೊಂದು ಪದಗಳು ಅಕ್ಷರಗಳು ಭಗವಂತನನ್ನೇ ಬೋಧಿಸುತ್ತವೆ. ಇಂಥ ಸಮನ್ವಯವನ್ನು ಬ್ರಹ್ಮದೇವರು ಮಾತ್ರ ತಿಳಿಯಬಲ್ಲರು. ಇದಕ್ಕೆ ಪದಸಮನ್ವಯವೆಂದು ಹೆಸರು.

ಮತ್ತೊಂದು ವಾಕ್ಯಸಮನ್ವಯ. ವಾಕ್ಯದಲ್ಲಿರುವ ಇಂದ್ರ, ಅಗ್ನಿ, ವರುಣ ಮುಂತಾದ ಒಂದೊಂದು ಪದಗಳು ಭಗವಂತನನ್ನು ತಿಳಿಸಿದಾಗ ಮಾತ್ರ ಇಡೀ ವಾಕ್ಯವು ಭಗವಂತನ ಗುಣವರ್ಣನೆಯಲ್ಲಿ ಪರ್ಯವಸಾನವಾಗುತ್ತದೆ. ಇದನ್ನು ವಾಕ್ಯಸಮನ್ವಯವೆಂದು ಹೇಳುತ್ತಾರೆ.

ವಾಕ್ಯಸಮನ್ವಯದ ಮತ್ತೊಂದು ಕ್ರಮ ಹೀಗಿದೆ - ಯಜ್ಞ ಮುಂತಾದ ಅನೇಕ ಕರ್ಮಗಳ ಅನುಷ್ಠಾನ ಪ್ರಕಾರವನ್ನು ವಾಕ್ಯಗಳು ತಿಳಿಸುತ್ತವೆ ಮತ್ತು ದೇವತೆಗಳನ್ನೂ ಕೂಡ ಸಮಗ್ರವಾಗಿ ತಿಳಿಸುತ್ತವೆ. ಆದರೆ ವಾಕ್ಯಗಳ ಮುಖ್ಯತಾತ್ಪರ್ಯ ಸ್ವರ್ಗವಾಗಲೀ, ದೇವತೆಗಳಾಗಲೀ ಆಗಿರುವುದಿಲ್ಲ. ಹೊರತಾಗಿ ಇಂತಹ ಸತ್ಕರ್ಮಗಳ ಅನುಷ್ಠಾನದಿಂದ ಅಂತಃಕರಣದ ನೈರ್ಮಲ್ಯವನ್ನು ಪಡೆದು ಅದರ ಜೊತೆಗೆ ಈ ಕರ್ಮಗಳು ಕೇವಲ ಅಲ್ಪವಾದ ಸಾಂಸಾರಿಕ ಫಲವನ್ನಷ್ಟೇ ನೀಡುತ್ತವೆಂದು ತಿಳಿದು ಶುದ್ಧವಾದ ಅಂತಃಕರಣದಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ನಮ್ಮನ್ನು ಪ್ರಚೋದಿಸುವುದೇ ಕರ್ಮಕಾಂಡದ ಉದ್ದೇಶವಾಗಿರುತ್ತದೆ. ಹೀಗೆ ಭಗವಂತನ ಉದ್ದೇಶವಾಗಿಯೇ ಎಲ್ಲಾ ವಾಕ್ಯಗಳು ಪರ್ಯವಾಸನಗೊಳ್ಳುತ್ತವೆ. ಇದು ವಾಕ್ಯಸಮನ್ವಯದ ಮತ್ತೊಂದು ಪ್ರಕಾರ.

ಇನ್ನೂ ಹೆಚ್ಚೆಂದರೆ ವೇದದಲ್ಲಿರುವ ಶಬ್ದಗಳಷ್ಟೇ ಅಲ್ಲದೇ ನಮ್ಮ ವ್ಯವಹಾರದಲ್ಲಿರುವ ಸಕಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ. ಅಷ್ಟೇ ಅಲ್ಲದೇ ಹಕ್ಕಿಗಳ ಕಲರವ, ಸಮುದ್ರದ ಘೋಷ, ಮಗುವಿನ ಗೆಜ್ಜೆಯ ನಿನಾದ, ಹಲ್ಲಿಯ ಲೊಚಗುಟ್ಟುವಿಕೆ ಇವೆಲ್ಲಾ ಧ್ವನಿಗಳು ಪರಮಾತ್ಮನ ಗುಣಗಾನಗಳೆಂದು ಜ್ಞಾನಿಗಳು ತಿಳಿಯುತ್ತಾರೆ. ಅತ್ಯಂತ ಕಠಿಣವಾದ ಪದಸಮನ್ವಯದ ವಿಷಯದಲ್ಲಿ 'ತಂ ಯಚ್ಛತಮ್' ಎಂಬ ವಾಕ್ಯವು ಪ್ರಮಾಣವಾಗಿದೆ. ಎಲ್ಲಾ ಪದಗಳೂ ಬ್ರಹ್ಮನ ಹೆಸರೇ ಆದಲ್ಲಿ ಸರ್ವಶಬ್ದವಾಚ್ಯತ್ವವನ್ನು ಈ ವಾಕ್ಯಕ್ಕೂ ಕೂಡ ವಿಧಾನ ಮಾಡಲು ಬರುವುದಿಲ್ಲ. ಏಕೆಂದರೆ ಈ 'ತಂ ಯಚ್ಛತಮ್' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳೂ ಪರಮಾತ್ಮನ ಹೆಸರೇ ಆದಲ್ಲಿ ಎಲ್ಲಾ ಪದಗಳಿಂದಲೂ ವಾಚ್ಯನೆಂಬ ತಾತ್ಪರ್ಯವನ್ನು ಹೇಗೆ ಹೊಂದುತ್ತದೆ ? ಈ ಗೊಂದಲವು ಸಹಜವಾಗಿ ಬರುತ್ತದೆ. ಆದರೆ ಲೋಕಪ್ರಸಿದ್ಧವಾದ ಪದಾರ್ಥಸಂಸರ್ಗಬೋಧಕವಾದ ಪದಸಮನ್ವಯವು ತನಗೆ ಉಪಜೀವ್ಯವಾದ ವಾಕ್ಯಸಮನ್ವಯವನ್ನು ವಿರೋಧಿಸಲು ಸಾಧ್ಯವಿಲ್ಲ. ಆದ್ದರಿಂದ ಪದಸಮನ್ವಯದ ಜೊತೆಗೆ ವಾಕ್ಯಸಮನ್ವಯವನ್ನೂ ಕೂಡ ಇದರಿಂದ ತಿಳಿಯಬೇಕು.

### ಶಬ್ದಗಳು ಪರಮಾತ್ಮನಲ್ಲೇ ಸಮನ್ವಯವಾಗುತ್ತವೆ; ಆದರೂ ಲೋಕವ್ಯವಹಾರಕ್ಕೆ ತೊಂದರೆಯಿಲ್ಲ

ವೇದಗಳಲ್ಲಿ ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುವುದಾದರೆ, ಎಲ್ಲವೂ ಭಗವಂತನ ನಾಮಗಳೇ ಆಗುತ್ತವೆ. ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೇ ವಿಷಯವನ್ನು ಅವು ಹೇಳಲಾರವು.

ಆವಾಗ ವೇದದಿಂದ ಯಾವ ಕರ್ಮಾನುಷ್ಠಾನಗಳನ್ನು ಯಾವುದೇ ಶಬ್ದಗಳ ವ್ಯುತ್ಪತ್ತಿಯನ್ನೂ ಕೂಡ ತಿಳಿಯಲು ಸಾಧ್ಯವಿಲ್ಲದಂತಾಗುತ್ತದೆ. ನಮ್ಮ ಎಲ್ಲಾ ಕರ್ಮಾನುಷ್ಠಾನಗಳು ಲೋಪವಾಗುವುದಲ್ಲದೇ, ಸಕಲ ವ್ಯವಹಾರಗಳೂ ಲೋಪವಾಗುತ್ತವೆ. ಆದ್ದರಿಂದ ಸರ್ವಶಬ್ದ ಸಮನ್ವಯವನ್ನು ತಿಳಿಯುವುದು ಬಹಳ ಕಷ್ಟವಲ್ಲವೇ?

ಸಮನ್ವಯದ ಕ್ರಮಗಳನ್ನು ಸರಿಯಾಗಿ ತಿಳಿದಾಗ ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಯಾವುದೇ ಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡುವಾಗ ಆ ಶಬ್ದಗಳ ಅವಯವಗಳು ಲೌಕಿಕವಾದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತವೆ. 'ಜ್ಯೋತಿ' ಎಂಬ ಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡುವಾಗ, 'ಜೀ' 'ಓತಿ' ಎಂಬ ಅವಯವಗಳು ಲೌಕಿಕವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ. 'ಓತಿ' 'ಜೀ' ಎಂಬುದು ಪರಮಾತ್ಮನನ್ನು ಪ್ರತಿಪಾದನೆ ಮಾಡುವುದಾದರೆ ಅದರ ಅವಯವಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವ್ಯುತ್ಪತ್ತಿಯ ತಿಳುವಳಿಕೆಯು ಕಷ್ಟವಾಗುವುದಿಲ್ಲ. ಇದರಂತೆ ಕರ್ಮವಿಲೋಪ ಪ್ರಸಂಗಕ್ಕೂ ಅವಕಾಶವಿಲ್ಲ. ಏಕೆಂದರೆ ಎಲ್ಲಾ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಿದರೂ, ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನು ಮಾತ್ರ ಪ್ರತಿಪಾದನೆ ಮಾಡುತ್ತವೆ. ಮುಖ್ಯವೃತ್ತಿಯಿಂದ ಯಜ್ಞಯಾಗಾದಿಕರ್ಮಗಳನ್ನೂ ಕೂಡ ಪ್ರತಿಪಾದಿಸುತ್ತವೆ. 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯವು ವಸಂತಮಾಸದಲ್ಲಿ ಜ್ಯೋತಿಷ್ಟೋಮಯಾಗವನ್ನು ಮಾಡಬೇಕೆಂದು ತಿಳಿಸುತ್ತದೆ. ಅದರ ಜೊತೆಗೆ ಪರಮಮುಖ್ಯವೃತ್ತಿಯಿಂದ ಪ್ರತಿಯೊಂದು ಪದಗಳೂ ಭಗವಂತನ ವಿಭಿನ್ನವಾದ ಗುಣಗಳನ್ನು ವರ್ಣಿಸುತ್ತವೆಂದು ಹೇಳುತ್ತವೆ. ಶಬ್ದಗಳಲ್ಲಿ ಮುಖ್ಯವೃತ್ತಿ, ಪರಮಮುಖ್ಯವೃತ್ತಿಯೆಂಬ ವೈವಿಧ್ಯವಿದೆ. ಶಬ್ದಗಳು ಪರಮಾತ್ಮನ ಗುಣಧರ್ಮಗಳನ್ನು ಹೇಳುವುದಷ್ಟೇ ಅಲ್ಲದೇ, ಜ್ಞಾನಿಗಳ ರೂಢಿಯು ಇದ್ದಲ್ಲಿ ಪರಮಮುಖ್ಯವೃತ್ತಿಯೆಂದು ಕರೆಸಿಕೊಳ್ಳುತ್ತದೆ. ಒಂದು ವೇಳೆ ಲೌಕಿಕವಾಗಿ ಯೋಗರೂಢಿಗಳಿದ್ದಲ್ಲಿ ಮುಖ್ಯವೃತ್ತಿಯೆನಿಸಿಕೊಳ್ಳುತ್ತದೆ. ಹೀಗೆ ವೈವಿಧ್ಯವನ್ನು ತಿಳಿದಾಗ ಯಾವುದೇ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ. ಮತ್ತು ಲೌಕಿಕಪದಾರ್ಥಗಳೆಲ್ಲವನ್ನೂ ಶಬ್ದಗಳು ಲಕ್ಷಣಾವೃತ್ತಿಯಿಂದಲೇ ಪ್ರತಿಪಾದನೆ ಮಾಡಿದಂತಾಗುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಕೋಶ, ವ್ಯಾಕರಣ ಮೊದಲಾದವುಗಳಿಂದ ಲೌಕಿಕಾರ್ಥಗಳಲ್ಲಿ ಶಬ್ದಗಳು ಪ್ರಮಾಣಸಿದ್ಧವಾಗಿವೆ. ಬಾಧಕವಿಲ್ಲದೇ ಇಂತಹ ಪ್ರಮಾಣಸಿದ್ಧವಾದ ಅರ್ಥವನ್ನು ಬಿಡುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಲೋಕದಲ್ಲಿ ಮುಖ್ಯವೃತ್ತಿಯನ್ನು ಒಪ್ಪಿಯೇ ಪರಮಾತ್ಮನಲ್ಲಿ ಶಬ್ದಗಳ ಸಮನ್ವಯವನ್ನು ಮಾಡಬೇಕೆಂಬುದು ಗಮನಿಸಬೇಕಾದ ಸೂಕ್ಷ್ಮವಿಚಾರ.

### ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದಕ್ಕೆ ಅನೇಕಾರ್ಥತ್ವವು ಯುಕ್ತವೆನ್ನಲು ವ್ಯಾಕರಣದ ದೃಷ್ಟಾಂತ

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿರುವ ಜ್ಯೋತಿರಾದಿಶಬ್ದಗಳಿಗೆ ಪರಮಮುಖ್ಯವೃತ್ತಿಯಿಂದ ಪರಮಾತ್ಮಪರವಾಗಿ ಅರ್ಥೈಸಬೇಕು. ಮುಖ್ಯವೃತ್ತಿಯಿಂದ ಯಜ್ಞಾದಿಕರ್ಮಪರವಾಗಿ ಅರ್ಥೈಸಬೇಕೆಂದು ಸಮರ್ಥಿಸಲಾಯಿತು. ಒಮ್ಮೆ ಪ್ರಯೋಗಿಸಲ್ಪಟ್ಟ ಜ್ಯೋತಿರಾದಿಶಬ್ದಗಳು ಹೀಗೆ ಅನೇಕಾರ್ಥವನ್ನು ನೀಡುತ್ತವೆ. ಇದು ನ್ಯಾಯವಿರುದ್ಧವಲ್ಲ. ಏಕೆಂದರೆ 'ರಾಜ ಕುವಲಯೋಲ್ಲಾಸಕಾರಿ'

ಇತ್ಯಾದಿ ಲೌಕಿಕ ದೃಷ್ಟಾಂತಗಳಲ್ಲಿ ಶ್ಲೇಷಾಲಂಕಾರವನ್ನು ವಿವಕ್ಷಿಸಿ, 'ರಾಜ' ಎಂಬ ಒಂದೇ ಪದಕ್ಕೆ ಚಂದ್ರ ಹಾಗೂ ಭೂಪತಿ ಎಂಬರೆಡರ್ಥವನ್ನು ಎಲ್ಲರೂ ವಿವಕ್ಷಿಸುತ್ತಾರೆ. ಅದರಂತೆ ವ್ಯಾಕರಣಶಾಸ್ತ್ರದಲ್ಲಿಯೂ 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿರುವ ಸಂಖ್ಯಾ ಎಂಬ ಪದಕ್ಕೆ ಸಂಜ್ಞಾ ಹಾಗೂ ಸಂಜ್ಞಿ ಎಂಬೆರಡರ್ಥವನ್ನು ವಿವಕ್ಷಿಸಿದ್ದಾರೆ. 'ಷಷ್ಠೀ ಶೇಷೇ' ಎಂಬ ಸೂತ್ರದಲ್ಲಿರುವ 'ಶೇಷೇ' ಎಂಬ ಪದಕ್ಕೆ ಕರ್ಮಕಾರಕ ಮೊದಲಾದ ವಿಭಕ್ತ್ಯರ್ಥಕ್ಕಿಂತ ಅತಿರಿಕ್ತವಾದ ಸ್ವಸ್ವಾಮ್ಯಭಾವಸಂಬಂಧ ಎಂಬರ್ಥದ ಜೊತೆಗೆ ಅಪ್ರಧಾನ ಎಂಬರ್ಥವನ್ನೂ ಕೂಡ ವಿವಕ್ಷಿಸಿದ್ದಾರೆ. 'ಹಲಂತ್ಯಮ್' ಎಂಬ ಸೂತ್ರದಲ್ಲಿ 'ಹಲ್' ಎಂಬ ಶಬ್ದಕ್ಕೆ ಹಕಾರದ ಪರದಲ್ಲಿರುವ ಲಕಾರ ಎಂಬರ್ಥವನ್ನು ವಿವಕ್ಷಿಸುವುದರ ಜೊತೆಗೆ ಅಧ್ಯಾಹಾರ ಎಂಬರ್ಥವನ್ನೂ ಕೂಡ ವಿವಕ್ಷಿಸಿದ್ದಾರೆ. ಆದ್ದರಿಂದ ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದಗಳಿಗೆ ಅನೇಕಾರ್ಥತ್ವವನ್ನು ಒಪ್ಪುವುದು ವ್ಯಾಕರಣಶಾಸ್ತ್ರಕ್ಕೆ ಸಮ್ಮತವಾಗಿದೆ.

### ಅಪೌರುಷೇಯವಾದ ವೇದದಲ್ಲಿ ಅನೇಕಾರ್ಥತ್ವವಿರುವುದು ಕಂಡಿದೆ

ಒಂದೇ ಶಬ್ದವು ಅನೇಕಾರ್ಥಪರವಾಗುತ್ತದೆಂಬುದು ಪೌರುಷೇಯವಾದ ವ್ಯಾಕರಣಶಾಸ್ತ್ರದಲ್ಲಷ್ಟೇ ಕಂಡಿರುವುದಲ್ಲ. ಅಪೌರುಷೇಯವಾದ ವೇದದಲ್ಲಿಯೂ ಕೂಡ ಕಂಡಿದೆ. 'ಅಗ್ನಿರ್ಮೂರ್ಧಾ' ಎಂಬ ಮಂತ್ರವು ಅಗ್ನಿಪರವಾಗುತ್ತದೆ. ಮತ್ತು ಅಂಗಾರಕ ಪರವಾಗುತ್ತದೆಂದು ಶ್ರುತಿ ಹಾಗೂ ಸ್ಮೃತಿಗಳಿಂದ ಸಿದ್ಧವಾಗಿದೆ. 'ಪವಿತ್ರಂ ತೇ' ಎಂಬ ಮಂತ್ರವು ಪವಿತ್ರೇಷ್ಟಿಪರವಾಗುತ್ತದೆ ದಶಾಪವಿತ್ರ ಪರವಾಗುತ್ತದೆಂಬುದು ಶ್ರುತಿ ಹಾಗೂ ಆಶ್ವಲಾಯನ ಸೂತ್ರಗಳಿಂದ ಸಿದ್ಧವಾಗಿದೆ. 'ಅಪ್ಯಾಯಸ್ವ' ಎಂಬ ಮಂತ್ರವೂ ಕೂಡ ಸೋಮದೇವತಾಕವಾದ ಪತ್ನೀಸಂಯಾಜಯಾಗ ಪರವಾಗಿ, ಸೋಮರಸ ಆಪ್ಯಾಯನ ಪರವಾಗಿ ವಿನಿಯೋಗಿಸಲ್ಪಡುತ್ತದೆಂದು ಶ್ರುತಿಯಿಂದಲೇ ಸಿದ್ಧವಾಗಿದೆ. ಮತ್ತು 'ಆತ್ಮದೈವತಂ ಸೌರ್ಯಂ ಚ' ಇತ್ಯಾದಿ ಅನುಕ್ರಮಣಿಕಾದಲ್ಲಿ 'ಅಯಂಗೌಃ' ಎಂಬ ಮಂತ್ರಕ್ಕೆ ವಿಷ್ಣುಪರತ್ವವನ್ನು ಸೂರ್ಯದೇವತಾಪರತ್ವವನ್ನು ಸಮರ್ಥಿಸಲಾಗಿದೆ. 'ಅಂತ್ಯಾ ಸರಸ್ವತೇ ಸೂರ್ಯಾಯ' ಎಂಬ ಅನುಕ್ರಮಣಿಕೆಯು, 'ದಿವ್ಯಂ ಸುಪರ್ಣಂ' ಎಂಬ ಮಂತ್ರವು ಸರಸ್ವತೀ ದೇವತಾಪರವಾಗಿದೆ, ಹಾಗೂ ಸೂರ್ಯದೇವತಾಪರವಾಗಿದೆ ಎಂದು ಸಮರ್ಥಿಸುತ್ತಿದೆ. ಅಷ್ಟೇ ಅಲ್ಲದೇ 'ತ್ರಯಃ ಕೇಶಿನ' ಎಂಬ ಮಂತ್ರವು ಅಗ್ನಿ, ಸೂರ್ಯ, ವಾಯು ಮೂರು ದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆಂದು ಸಮರ್ಥಿಸುತ್ತಿದೆ. ಹೀಗೆ ಅಪೌರುಷೇಯವಾದ ವೇದವೂ ಕೂಡ ಒಂದೇ ಶಬ್ದಕ್ಕೆ ಅನೇಕಾರ್ಥತ್ವವನ್ನು ಅಂಗೀಕರಿಸಿದೆ.

### ನಿರುಕ್ತ, ಶ್ರುತಿ, ಸ್ಮೃತಿ, ಸೂತ್ರಗಳಿಂದ ವೇದಕ್ಕೆ ಅನೇಕಾರ್ಥತ್ವ ಸಮರ್ಥನೆ

ವೇದಕ್ಕೆ ಅನೇಕಾರ್ಥವನ್ನು ಯಾಸ್ಕರ ನಿರುಕ್ತದಲ್ಲಿ ಕಾಣಬಹುದು. 'ಆನೋ ಭರಪ್ರಮಗಂದಸ್ಯ' ಎಂಬ ಶ್ರುತಿಗೆ 'ಪ್ರಮಗಂದ' ಎಂಬ ಪದಕ್ಕೆ ರಾಜಪರವಾಗಿ ಅರ್ಥೈಸಿ ಪುನಃ ಕುಸೀದ ವೃತ್ತಿ ಮಾಡುವ ಪುರುಷ ಪರವಾಗಿಯೂ ವ್ಯಾಖ್ಯಾನ ಮಾಡಲಾಗಿದೆ. ಮತ್ತು ಭಗವಂತನ 'ವಾಸುದೇವ' ಎಂಬ ಹೆಸರಿಗೆ ಶ್ರುತಿಯೇ ಅನೇಕಾರ್ಥವನ್ನು ಸಮರ್ಥಿಸುತ್ತಿದೆ.

೧. ವಾನಾತ್ ಸೂತೇರ್ದೇವನಾತ್ ವಾಸುದೇವಃ = ಜ್ಞಾನಸ್ವರೂಪನಾದ್ದರಿಂದ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನಾದ್ದರಿಂದ ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೨. ವಾಸಾದ್ದ್ಯುತೇಃ = ಎಲ್ಲೆಡೆ ವಾಸಮಾಡುತ್ತಾನಾದ್ದರಿಂದ ಎಲ್ಲರ ವಾಸಿಸುವಿಕೆಗೆ ಆಶ್ರಯನಾದ್ದರಿಂದ, ಕಾಂತಿಸ್ವರೂಪನಾದ್ದರಿಂದ ವಾಸುದೇವನೆನಿಸುತ್ತಾನೆ.

೩. ಛಾದನಾತ್ ಕ್ರೀಡಯಾ ಚ = ಎಲ್ಲೆಡೆ ವ್ಯಾಪ್ತನಾದ್ದರಿಂದ ಅವಿದ್ಯೆ ಮೊದಲಾದ ಆವರಣಗಳನ್ನು ಪರಿಹರಿಸುತ್ತಾನಾದ್ದರಿಂದ, ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೪. ಬಲಾದಸುತ್ವಾದ್ದಾತೃತಃ ವರ್ತನಾಚ್ಚ = ಬಲಸ್ವರೂಪನಾದ್ದರಿಂದ, ಪ್ರಾಣಸ್ವರೂಪನಾದ್ದರಿಂದ ಎಲ್ಲವನ್ನೂ ಕೊಡುತ್ತಾನಾದ್ದರಿಂದ ಎಲ್ಲೆಡೆ ನೆಲೆಸಿದ್ದಾನಾದ್ದರಿಂದ ವಾಸುದೇವನೆನಿಸುತ್ತಾನೆ.

ಹೀಗೆ ವಾಸುದೇವನನ್ನು ವೇದಗಳು ಕೊಂಡಾಡುತ್ತವೆ.

'ಅದ್ಯತೇ ಇತಿ ಅನ್ನಂ', 'ಅತ್ತೀತಿ ಅನ್ನಂ' ಎಂಬುದಾಗಿ ಅನ್ನಶಬ್ದಕ್ಕೆ ಎರಡು ಅರ್ಥಗಳನ್ನು ಶ್ರುತಿಯೇ ಹೇಳಿದೆ. ಕರ್ಮಾರ್ಥದಲ್ಲಿ ಹಾಗೂ ಕರ್ತರ್ಥದಲ್ಲಿ 'ಕ್ತ' ಪ್ರತ್ಯಯವನ್ನು ಹೇಳಿ, ಪರಮಾತ್ಮನು ಎಲ್ಲರಿಗೂ ಉಪಜೀವ್ಯನಾಗಿದ್ದಾನೆ. ಹಾಗೂ ಎಲ್ಲರನ್ನೂ ಸಂಹಾರ ಮಾಡುತ್ತಾನೆ. ಆದ್ದರಿಂದ ಅನ್ನವೆನಿಸುತ್ತಾನೆ ಎಂಬುದಾಗಿ ಶ್ರುತಿಯು ವ್ಯಾಖ್ಯಾನ ಮಾಡಿದೆ.

'ವಿಷ್ಣು' ಎಂಬ ಶಬ್ದಕ್ಕೆ ಸ್ಮೃತಿಯು ಅನೇಕಾರ್ಥವನ್ನು ಹೇಳಿದೆ.

೧. ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ = ಸಕಲ ಭೂತಪದಾರ್ಥಗಳಿಗೆ ಬ್ರಹ್ಮಾದಿ ದೇವತೆಗಳಿಗೆ ಪ್ರೇರಕನಾದ್ದರಿಂದ ವಿಷ್ಣು ಎನಿಸಿದ್ದಾನೆ.

೨. ವ್ಯಾಪ್ತೇ ಮೇ ರೋದಸಿ ಪಾರ್ಥ = ದ್ಯಾವಾಪೃಥಿವ್ಯಾದಿಗಳನ್ನು ವ್ಯಾಪಿಸಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೩. ಕಾಂತಿಶ್ಚಾಭ್ಯಧಿಕಾ ಮಮ = ರಮಣೀಯವಾದ ಕಾಂತಿಯುಳ್ಳವನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೪. ಅಧಿಭೂತನಿವಿಷ್ಟಶ್ಚ = ಎಲ್ಲಾ ಭೌತಿಕ ಪದಾರ್ಥಗಳನ್ನೂ ಪ್ರವೇಶಿಸಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೫. ತದಿಚ್ಛುಶ್ಚಾಸ್ಮಿ ಭಾರತ = ಅಧಿಭೂತಗಳ ಸೃಷ್ಟ್ಯಾದಿ ವಿಷಯದಲ್ಲಿ ಇಚ್ಛಿಸುತ್ತಾನಾದ್ದರಿಂದ, 'ವಿಷ್ಣು' ಎನಿಸಿದ್ದಾನೆ.

೬. ಕ್ರಮೇಣಾಚ್ಚಾಪ್ಯಹಂ ಪಾರ್ಥ = ತ್ರಿವಿಕ್ರಮ ರೂಪದಿಂದ ತನ್ನ ಪಾದದ ಮೂಲಕ ಎಲ್ಲವನ್ನೂ ಆಕ್ರಮಣ ಮಾಡಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ. ಹೀಗೆ ಸ್ಮೃತಿಯಲ್ಲಿ 'ವಿಷ್ಣು' ಎಂಬ ಶಬ್ದಕ್ಕೆ ಅನೇಕಾರ್ಥಗಳನ್ನು ಸಮರ್ಥಿಸಲಾಗಿದೆ.

ಸೂತ್ರಕಾರರೂ ಕೂಡ 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂಬ ಸೂತ್ರದಲ್ಲಿ ಸುಷುಪ್ತಿ ವಾಕ್ಯಕ್ಕೆ ಅನೇಕಾರ್ಥವನ್ನು ಸಮರ್ಥಿಸಿದ್ದಾರೆ. 'ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ

ಸರ್ವಭಾರತೇ' ಎಂಬ ಸ್ಮೃತಿಯಿಂದಲೂ ವೇದಕ್ಕೆ ಮೂರು ಅರ್ಥಗಳು ನಿರಂತರವಾಗಿರುತ್ತವೆಂದು ಸಿದ್ಧವಾಗಿದೆ. ಆದ್ದರಿಂದ ಪ್ರತಿಯೊಂದು ವೇದವಾಕ್ಯಗಳಿಗೆ ಯೋಗಾರ್ಥ ಹಾಗೂ ರೂಢ್ಯರ್ಥಗಳನ್ನು ತಿಳಿಯಲೇಬೇಕು. ಪ್ರತೀತವಾಗುವ ಈ ಎರಡು ಅರ್ಥಗಳನ್ನು ಬಿಡಲು ಯಾವುದೇ ಕಾರಣವಿರುವುದಿಲ್ಲ.

## ಜ್ಯೋತಿರಾದಿಶಬ್ದಗಳು 'ಯಜ್'ಧಾತುವಿನ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದ್ದರೂ ಹರಿ ಪರವಾಗಬಹುದು

ಚಕ್ಷುರಿಂದ್ರಿಯದಿಂದ ಒಂದೇ ಕ್ಷಣದಲ್ಲಿ ಎರಡು ಘಟಗಳನ್ನು ನೋಡುತ್ತೇವೆ. ಅದರಂತೆ ಒಂದೇ ಶಬ್ದದಿಂದ ಎರಡು ಅರ್ಥಗಳ ಬೋಧವು ಏಕೆ ಬರಬಾರದು? ಗಂಗೆಯಲ್ಲಿ ಮೀನಿದೆ ಮತ್ತು ಹಳ್ಳಿಯಿದೆ ಎಂದು ಹೇಳಿದಾಗ ಒಂದೇ ಗಂಗಾ ಶಬ್ದಕ್ಕೆ ಪ್ರವಾಹ ಎಂಬರ್ಥವೂ, ತೀರ ಎಂಬರ್ಥವೂ ಒಟ್ಟಿಗೆ ಬರುವುದು ಕಂಡಿದೆಯಲ್ಲವೇ? ಪಂಕಜ ಶಬ್ದವನ್ನು ಕೇಳಿದಾಗ, ರೂಢಿಯಿಂದ ಪದ್ಮತ್ವಜಾತಿಯ ಸ್ಮರಣೆ ಬರುವುದೂ ಕಂಡಿದೆ. ಯೋಗದಿಂದ ಪಂಕಜನನಕರ್ತೃತ್ವದ ಸ್ಮರಣೆ ಬರುವುದೂ ಕೂಡ ಕಂಡಿದೆ.

ವ್ಯಾಕರಣ ಶಾಸ್ತ್ರದಲ್ಲಿ 'ಸಹ ಸುಪಾ' ಎಂಬ ಸೂತ್ರವಿದೆ. ಹಿಂದಿನ ಸೂತ್ರದಿಂದ 'ಸುಪ್' ಎಂಬುದನ್ನು ಅನುವೃತ್ತಿ ಮಾಡಿಕೊಂಡಾಗ, ಸುಬಂತವಾದ ಪದವು, ಸುಬಂತವಾದ ಮತ್ತೊಂದು ಪದದ ಜೊತೆಗೆ ಸಮಾಸವಾಗುತ್ತದೆಂದು ಇದಕ್ಕೆ ಅರ್ಥ. ತಿಙಂತವಾದ ಶಬ್ದದ ಜೊತೆಗೂ ಕೂಡ ಸಮಾಸ ಮಾಡಬೇಕೆಂಬ ಪ್ರಸಕ್ತಿ ಬಂದಾಗ ಸಹ ಎಂಬುದನ್ನು ಪ್ರತ್ಯೇಕಸೂತ್ರವೆಂದೇ ಪರಿಗಣಿಸುತ್ತಾರೆ. ಆವಾಗ ಹಿಂದಿನ ಸೂತ್ರದಿಂದ ಅನುವೃತ್ತವಾದ, 'ಸುಪ್' ಎಂಬುದು 'ಸಹ ಸುಪಾ' ಎಂಬ ಸೂತ್ರದಲ್ಲಿ 'ಸುಪಾ' ಎಂಬುದರ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದ್ದರೂ 'ಸಹ' ಎಂಬ ಸೂತ್ರವನ್ನು ಪ್ರತ್ಯೇಕವಾಗಿ ಪರಿಗಣಿಸಿದಾಗ, 'ಸುಪಾ' ಎಂಬುದರ ಜೊತೆಗೆ ಅನ್ವಯವನ್ನು ಹೊಂದದೇ ಸಮರ್ಥವಾದ 'ತಿಙಂತ'ದ ಜೊತೆಗೆ ಅನ್ವಯವನ್ನು ಹೊಂದಿ ಸಮಾಸವನ್ನು ವಿಧಿಸುತ್ತದೆ. ಆದ್ದರಿಂದ ಒಮ್ಮೆ ಏಕವಾಕ್ಯತ್ವವನ್ನು ಹೊಂದಿದ್ದರೂ ಪ್ರತ್ಯೇಕವಾಗಿ ಬೇರೆ ಅರ್ಥವನ್ನೂ ಕೂಡ ಶಬ್ದಗಳು ನೀಡಬಹುದು. ಇದರಂತೆ ಲೌಕಿಕ ಉದಾಹರಣೆಯೂ ಕೂಡ ಪ್ರಸಿದ್ಧವಾಗಿದೆ. ಯಾವ ವಾಕ್ಯದಲ್ಲಿ ಪ್ರಶ್ನಿಸಲಾಗಿದೆಯೋ, ಅದೇ ವಾಕ್ಯದಲ್ಲಿ ಉತ್ತರವನ್ನೂ ಕೂಡ ಹೇಳಲಾಗಿದೆ. ಉದಾಹರಣೆ -

ಕಾಶೀತಲವಾಹಿನೀ ಗಂಗಾ ಕೇದಾರಪೋಷಣರತಾಃ ।
ಕಂಸಂಜಘಾನ ಭಗವಾನ್ ಕಂಬಲತವಂತಂ ನ ಬಾಧತೇಶೀತಮ್ ॥

ಶೀತಲವಾಹನಿ ಗಂಗಾ ಕಾ ? ಶೀತಲವಾಹಿನಿಯಾದ ಗಂಗೆ ಯಾರು ? ಎಂಬ ಪ್ರಶ್ನೆಗೆ ಕಾಶೀತಲವಾಹಿನೀ ಗಂಗಾ ಎಂಬ ವಾಕ್ಯವೇ ಉತ್ತರಿಸಿದೆ. ಅಂದರೆ ಕಾಶಿಯಲ್ಲಿ ಹರಿಯುವ ಗಂಗೆಯು ಶೀತಲವಾಹಿನಿಯಾಗಿದೆ ಎಂದು.

ದಾರ ಪೋಷಣ ರತಾಃ ಕೇ? ಹೆಂಡತಿ, ಮಕ್ಕಳು ಮೊದಲಾದವರ ಪೋಷಣೆಯಲ್ಲಿ ರತರಾದವರು ಯಾರು ? ಎಂಬ ಪ್ರಶ್ನೆಗೆ 'ಕೇದಾರಪೋಷಣರತಾಃ' ಎಂಬ ಅದೇ ವಾಕ್ಯವೇ ಉತ್ತರಿಸಿದೆ. ಕೃಷಿಯನ್ನು ಮಾಡುವವರೇ ಹೆಂಡತಿ, ಮಕ್ಕಳ ಪೋಷಣೆಯಲ್ಲಿ ಆಸಕ್ತರಾಗಿರುತ್ತಾರೆ ಎಂದು.

೧. ವಾನಾತ್ ಸೂತೇರ್ದೇವನಾತ್ ವಾಸುದೇವಃ = ಜ್ಞಾನಸ್ವರೂಪನಾದ್ದರಿಂದ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನಾದ್ದರಿಂದ ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೨. ವಾಸಾದ್ದ್ಯುತೇಃ= ಎಲ್ಲೆಡೆವಾಸಮಾಡುತ್ತಾನಾದ್ದರಿಂದ ಎಲ್ಲರ ವಾಸಿಸುವಿಕೆಗೆ ಆಶ್ರಯನಾದ್ದರಿಂದ, ಕಾಂತಿಸ್ವರೂಪನಾದ್ದರಿಂದ ವಾಸುದೇವನೆನಿಸುತ್ತಾನೆ.

೩. ಛಾದನಾತ್ ಕ್ರೀಡಯಾ ಚ = ಎಲ್ಲೆಡೆ ವ್ಯಾಪ್ತನಾದ್ದರಿಂದ ಅವಿದ್ಯೆ ಮೊದಲಾದ ಆವರಣಗಳನ್ನು ಪರಿಹರಿಸುತ್ತಾನಾದ್ದರಿಂದ, ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೪. ಬಲಾದಸುತ್ವಾದ್ದಾತೃತಃ ವರ್ತನಾಚ್ಚ = ಬಲಸ್ವರೂಪನಾದ್ದರಿಂದ, ಪ್ರಾಣಸ್ವರೂಪನಾದ್ದರಿಂದ ಎಲ್ಲವನ್ನೂ ಕೊಡುತ್ತಾನಾದ್ದರಿಂದ ಎಲ್ಲೆಡೆ ನೆಲೆಸಿದ್ದಾನಾದ್ದರಿಂದ ವಾಸುದೇವನೆನಿಸುತ್ತಾನೆ.

ಹೀಗೆ ವಾಸುದೇವನನ್ನು ವೇದಗಳು ಕೊಂಡಾಡುತ್ತವೆ.

'ಅದ್ಯತೇ ಇತಿ ಅನ್ನಂ', 'ಅತ್ತೀತಿ ಅನ್ನಂ' ಎಂಬುದಾಗಿ ಅನ್ನಶಬ್ದಕ್ಕೆ ಎರಡು ಅರ್ಥಗಳನ್ನು ಶ್ರುತಿಯೇ ಹೇಳಿದೆ. ಕರ್ಮಾರ್ಥದಲ್ಲಿ ಹಾಗೂ ಕರ್ತರ್ಥದಲ್ಲಿ 'ಕ್ತ' ಪ್ರತ್ಯಯವನ್ನು ಹೇಳಿ, ಪರಮಾತ್ಮನು ಎಲ್ಲರಿಗೂ ಉಪಜೀವ್ಯನಾಗಿದ್ದಾನೆ. ಹಾಗೂ ಎಲ್ಲರನ್ನೂ ಸಂಹಾರ ಮಾಡುತ್ತಾನೆ. ಆದ್ದರಿಂದ ಅನ್ನವೆನಿಸುತ್ತಾನೆ ಎಂಬುದಾಗಿ ಶ್ರುತಿಯು ವ್ಯಾಖ್ಯಾನ ಮಾಡಿದೆ.

'ವಿಷ್ಣು' ಎಂಬ ಶಬ್ದಕ್ಕೆ ಸ್ಮೃತಿಯು ಅನೇಕಾರ್ಥವನ್ನು ಹೇಳಿದೆ.

೧. ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ = ಸಕಲ ಭೂತಪದಾರ್ಥಗಳಿಗೆ ಬ್ರಹ್ಮಾದಿ ದೇವತೆಗಳಿಗೆ ಪ್ರೇರಕನಾದ್ದರಿಂದ ವಿಷ್ಣು ಎನಿಸಿದ್ದಾನೆ.

೨. ವ್ಯಾಪ್ತೇ ಮೇ ರೋದಸಿ ಪಾರ್ಥ = ದ್ಯಾವಾಪೃಥಿವ್ಯಾದಿಗಳನ್ನು ವ್ಯಾಪಿಸಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೩. ಕಾಂತಿಶ್ಚಾಭ್ಯಧಿಕಾ ಮಮ = ರಮಣೀಯವಾದ ಕಾಂತಿಯುಳ್ಳವನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೪. ಅಧಿಭೂತನಿವಿಷ್ಟಶ್ಚ = ಎಲ್ಲಾ ಭೌತಿಕ ಪದಾರ್ಥಗಳನ್ನೂ ಪ್ರವೇಶಿಸಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೫. ತದಿಚ್ಛುಶ್ಚಾಸ್ಮಿ ಭಾರತ = ಅಧಿಭೂತಗಳ ಸೃಷ್ಟ್ಯಾದಿ ವಿಷಯದಲ್ಲಿ ಇಚ್ಛಿಸುತ್ತಾನಾದ್ದರಿಂದ, 'ವಿಷ್ಣು' ಎನಿಸಿದ್ದಾನೆ.

೬. ಕ್ರಮೇಣಾಚ್ಚಾಪ್ಯಹಂ ಪಾರ್ಥ = ತ್ರಿವಿಕ್ರಮ ರೂಪದಿಂದ ತನ್ನ ಪಾದದ ಮೂಲಕ ಎಲ್ಲವನ್ನೂ ಆಕ್ರಮಣ ಮಾಡಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ. ಹೀಗೆ ಸ್ಮೃತಿಯಲ್ಲಿ 'ವಿಷ್ಣು' ಎಂಬ ಶಬ್ದಕ್ಕೆ ಅನೇಕಾರ್ಥಗಳನ್ನು ಸಮರ್ಥಿಸಲಾಗಿದೆ.

ಸೂತ್ರಕಾರರೂ ಕೂಡ 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂಬ ಸೂತ್ರದಲ್ಲಿ ಸುಷುಪ್ತಿ ವಾಕ್ಯಕ್ಕೆ ಅನೇಕಾರ್ಥವನ್ನು ಸಮರ್ಥಿಸಿದ್ದಾರೆ. 'ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ

ಸರ್ವಭಾರತೇ' ಎಂಬ ಸ್ಮೃತಿಯಿಂದಲೂ ವೇದಕ್ಕೆ ಮೂರು ಅರ್ಥಗಳು ನಿರಂತರವಾಗಿರುತ್ತವೆಂದು ಸಿದ್ಧವಾಗಿದೆ. ಆದ್ದರಿಂದ ಪ್ರತಿಯೊಂದು ವೇದವಾಕ್ಯಗಳಿಗೆ ಯೋಗಾರ್ಥ ಹಾಗೂ ರೂಢ್ಯರ್ಥಗಳನ್ನು ತಿಳಿಯಲೇಬೇಕು. ಪ್ರತೀತವಾಗುವ ಈ ಎರಡು ಅರ್ಥಗಳನ್ನು ಬಿಡಲು ಯಾವುದೇ ಕಾರಣವಿರುವುದಿಲ್ಲ.

## ಜ್ಯೋತಿರಾದಿಶಬ್ದಗಳು 'ಯಜ್'ಧಾತುವಿನ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದ್ದರೂ ಹರಿ ಪರವಾಗಬಹುದು

ಚಕ್ಷುರಿಂದ್ರಿಯದಿಂದ ಒಂದೇ ಕ್ಷಣದಲ್ಲಿ ಎರಡು ಘಟಗಳನ್ನು ನೋಡುತ್ತೇವೆ. ಅದರಂತೆ ಒಂದೇ ಶಬ್ದದಿಂದ ಎರಡು ಅರ್ಥಗಳ ಬೋಧವು ಏಕೆ ಬರಬಾರದು? ಗಂಗೆಯಲ್ಲಿ ಮೀನಿದೆ ಮತ್ತು ಹಳ್ಳಿಯಿದೆ ಎಂದು ಹೇಳಿದಾಗ ಒಂದೇ ಗಂಗಾ ಶಬ್ದಕ್ಕೆ ಪ್ರವಾಹ ಎಂಬರ್ಥವೂ, ತೀರ ಎಂಬರ್ಥವೂ ಒಟ್ಟಿಗೆ ಬರುವುದು ಕಂಡಿದೆಯಲ್ಲವೇ? ಪಂಕಜ ಶಬ್ದವನ್ನು ಕೇಳಿದಾಗ, ರೂಢಿಯಿಂದ ಪದ್ಮತ್ವಜಾತಿಯ ಸ್ಮರಣೆ ಬರುವುದೂ ಕಂಡಿದೆ. ಯೋಗದಿಂದ ಪಂಕಜನನಕರ್ತೃತ್ವದ ಸ್ಮರಣೆ ಬರುವುದೂ ಕೂಡ ಕಂಡಿದೆ.

ವ್ಯಾಕರಣ ಶಾಸ್ತ್ರದಲ್ಲಿ 'ಸಹ ಸುಪಾ' ಎಂಬ ಸೂತ್ರವಿದೆ. ಹಿಂದಿನ ಸೂತ್ರದಿಂದ 'ಸುಪ್' ಎಂಬುದನ್ನು ಅನುವೃತ್ತಿ ಮಾಡಿಕೊಂಡಾಗ, ಸುಬಂತವಾದ ಪದವು, ಸುಬಂತವಾದ ಮತ್ತೊಂದು ಪದದ ಜೊತೆಗೆ ಸಮಾಸವಾಗುತ್ತದೆಂದು ಇದಕ್ಕೆ ಅರ್ಥ. ತಿಙಂತವಾದ ಶಬ್ದದ ಜೊತೆಗೂ ಕೂಡ ಸಮಾಸ ಮಾಡಬೇಕೆಂಬ ಪ್ರಸಕ್ತಿ ಬಂದಾಗ ಸಹ ಎಂಬುದನ್ನು ಪ್ರತ್ಯೇಕಸೂತ್ರವೆಂದೇ ಪರಿಗಣಿಸುತ್ತಾರೆ. ಆವಾಗ ಹಿಂದಿನ ಸೂತ್ರದಿಂದ ಅನುವೃತ್ತವಾದ, 'ಸುಪ್' ಎಂಬುದು 'ಸಹ ಸುಪಾ' ಎಂಬ ಸೂತ್ರದಲ್ಲಿ 'ಸುಪಾ' ಎಂಬುದರ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದ್ದರೂ 'ಸಹ' ಎಂಬ ಸೂತ್ರವನ್ನು ಪ್ರತ್ಯೇಕವಾಗಿ ಪರಿಗಣಿಸಿದಾಗ, 'ಸುಪಾ' ಎಂಬುದರ ಜೊತೆಗೆ ಅನ್ವಯವನ್ನು ಹೊಂದದೇ ಸಮರ್ಥವಾದ 'ತಿಙಂತ'ದ ಜೊತೆಗೆ ಅನ್ವಯವನ್ನು ಹೊಂದಿ ಸಮಾಸವನ್ನು ವಿಧಿಸುತ್ತದೆ. ಆದ್ದರಿಂದ ಒಮ್ಮೆ ಏಕವಾಕ್ಯತ್ವವನ್ನು ಹೊಂದಿದ್ದರೂ ಪ್ರತ್ಯೇಕವಾಗಿ ಬೇರೆ ಅರ್ಥವನ್ನೂ ಕೂಡ ಶಬ್ದಗಳು ನೀಡಬಹುದು. ಇದರಂತೆ ಲೌಕಿಕ ಉದಾಹರಣೆಯೂ ಕೂಡ ಪ್ರಸಿದ್ಧವಾಗಿದೆ. ಯಾವ ವಾಕ್ಯದಲ್ಲಿ ಪ್ರಶ್ನಿಸಲಾಗಿದೆಯೋ, ಅದೇ ವಾಕ್ಯದಲ್ಲಿ ಉತ್ತರವನ್ನೂ ಕೂಡ ಹೇಳಲಾಗಿದೆ. ಉದಾಹರಣೆ -

ಕಾಶೀತಲವಾಹಿನೀ ಗಂಗಾ ಕೇದಾರಪೋಷಣರತಾಃ ।
ಕಂಸಂಜಘಾನ ಭಗವಾನ್ ಕಂಬಲತವಂತಂ ನ ಬಾಧತೇಶೀತಮ್ ॥

ಶೀತಲವಾಹನಿ ಗಂಗಾ ಕಾ ? ಶೀತಲವಾಹಿನಿಯಾದ ಗಂಗೆ ಯಾರು ? ಎಂಬ ಪ್ರಶ್ನೆಗೆ ಕಾಶೀತಲವಾಹಿನೀ ಗಂಗಾ ಎಂಬ ವಾಕ್ಯವೇ ಉತ್ತರಿಸಿದೆ. ಅಂದರೆ ಕಾಶಿಯಲ್ಲಿ ಹರಿಯುವ ಗಂಗೆಯು ಶೀತಲವಾಹಿನಿಯಾಗಿದೆ ಎಂದು.

ದಾರ ಪೋಷಣ ರತಾಃ ಕೇ? ಹೆಂಡತಿ, ಮಕ್ಕಳು ಮೊದಲಾದವರ ಪೋಷಣೆಯಲ್ಲಿ ರತರಾದವರು ಯಾರು ? ಎಂಬ ಪ್ರಶ್ನೆಗೆ 'ಕೇದಾರಪೋಷಣರತಾಃ' ಎಂಬ ಅದೇ ವಾಕ್ಯವೇ ಉತ್ತರಿಸಿದೆ. ಕೃಷಿಯನ್ನು ಮಾಡುವವರೇ ಹೆಂಡತಿ, ಮಕ್ಕಳ ಪೋಷಣೆಯಲ್ಲಿ ಆಸಕ್ತರಾಗಿರುತ್ತಾರೆ ಎಂದು.

ಕಂ ಸಂಜಘಾನ ಭಗವಾನ್ ? ಕೃಷ್ಣನು ಯಾರನ್ನು ಸಂಹಾರ ಮಾಡಿದನು ಎಂಬ ಪ್ರಶ್ನೆಗೆ 'ಕಂಸಂ ಜಘಾನ ಭಗವಾನ್' ಎಂಬ ವಾಕ್ಯವೇ ಉತ್ತರಿಸಿದೆ. ಶ್ರೀಕೃಷ್ಣನು ಕಂಸನನ್ನು ಸಂಹರಿಸಿದನು.

ಬಲವಂತಮ್ ಕಂ ನ ಬಾಧತೇ ಶೀತಮ್? ಬಲಿಷ್ಠನಾದ ಯಾರನ್ನೂ ಶೀತವು ಬಾಧಿಸುವುದಿಲ್ಲ ? ಎಂಬ ಪ್ರಶ್ನೆಗೆ 'ಕಂಬಲವಂತಮ್ ನಾ ಬಾಧತೇ ಶೀತಮ್' 'ಕಂಬಳಿಯನ್ನು ಹೊದ್ದುಕೊಂಡಿರುವವನನ್ನು ಶೀತವು ಬಾಧಿಸುವುದಿಲ್ಲ' ಎಂಬ ಅದೇ ವಾಕ್ಯವೇ ಉತ್ತರಿಸಿದೆ.

### ಅಪೌರುಷೇಯವಾಕ್ಯಕ್ಕೆ ಅನೇಕಾರ್ಥವಿದೆಯೆನ್ನಲು ಪೂರ್ವಮೀಮಾಂಸೆಯ ದೃಷ್ಟಾಂತ

ಪುರುಷರು ವಾಕ್ಯವನ್ನು ಪ್ರಯೋಗ ಮಾಡುವಾಗ ಅನೇಕಾರ್ಥಗಳನ್ನು ವಿವಕ್ಷಿಸಿದಲ್ಲಿ, ಅನೇಕಾರ್ಥವನ್ನು ಕಲ್ಪನೆ ಮಾಡುವುದು ತಪ್ಪಾಗುವುದಿಲ್ಲ. ಆದರೆ ವೇದವು ಅಪೌರುಷೇಯವಾದ್ದರಿಂದ ಅನೇಕಾರ್ಥದ ವಿವಕ್ಷೆ ವೇದಕ್ಕೆ ಇದೆಯೆಂದು ನಿರ್ಣಯಿಸುವುದು ಹೇಗೆ? ಎಂಬ ಪ್ರಶ್ನೆಯು ಎದುರಾಗುತ್ತದೆ. ಇದನ್ನು ಸರಿಯಾಗಿ ವಿಮರ್ಶೆ ಮಾಡಬೇಕು. ಅನೇಕಾರ್ಥವನ್ನು ಕಲ್ಪನೆ ಮಾಡಲು ವಕ್ತೃವಿನ ವಿವಕ್ಷೆಯೇ ಕಾರಣವಾಗಿದ್ದಲ್ಲಿ ಅಪೌರುಷೇಯವಾದ ವಾಕ್ಯಕ್ಕೆ ಅನೇಕಾರ್ಥವನ್ನು ಹೇಳುವುದು ತಪ್ಪಾಗುತ್ತಿತ್ತು. ಆದರೆ ವಕ್ತೃವಿನ ವಿವಕ್ಷೆಯು ಅನೇಕಾರ್ಥಕ್ಕೆ ಕಾರಣವಲ್ಲ. ಹೊರತಾಗಿ ಅನೇಕಾರ್ಥವನ್ನು ಕಲ್ಪನೆ ಮಾಡಲು ಸಾಧಕವಾದ ಲಿಂಗಗಳು ವಾಕ್ಯದಲ್ಲಿ ಕಾಣಿಸುತ್ತಿರಬೇಕು. ಅಂತಹ ಲಿಂಗಗಳು ಪೌರುಷೇಯ ವಾಕ್ಯದಲ್ಲೇ ಇರಲಿ, ಅಪೌರುಷೇಯ ವಾಕ್ಯದಲ್ಲೇ ಇರಲಿ ಅನೇಕಾರ್ಥವನ್ನು ಖಂಡಿತವಾಗಿಯೂ ಹೇಳಬಹುದು.

ಮತ್ತು ಪೂರ್ವಮೀಮಾಂಸೆಯ ಅಕ್ತಾಧಿಕರಣದಲ್ಲಿ 'ತೇಜೋ ವೈ ಘೃತಂ' ಎಂಬ ವಾಕ್ಯವನ್ನು ಅರ್ಥವಾದ ಪರವೆಂದು ಒಪ್ಪಿದ್ದರೂ ಸ್ವಾರ್ಥದಲ್ಲಿಯೂ ಶಕ್ತಿಯನ್ನು ಒಪ್ಪಿರುತ್ತಾರೆ. ಆದ್ದರಿಂದ ಪ್ರಾಶಸ್ತ್ಯದಲ್ಲಿ ಲಕ್ಷಣಾವೃತ್ತಿಯನ್ನು ಸ್ವಾರ್ಥದಲ್ಲಿ ಶಕ್ತಿವೃತ್ತಿಯನ್ನು ಮೀಮಾಂಸಕರೂ ಕೂಡ ಅಂಗೀಕರಿಸಿದ್ದಾರೆ. ಇದರಂತೆ 'ಪ್ರತಿತಿಷ್ಠಂತಿ ಹವಾ ಏತಾ' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿಯೂ 'ಪ್ರತಿತಿಷ್ಠಂತಿ' ಎಂಬ ಪದಕ್ಕೆ ಪ್ರಾಶಸ್ತ್ಯದಲ್ಲಿ ಲಕ್ಷಣಾವನ್ನು ಸ್ವಾರ್ಥದಲ್ಲಿ ಶಕ್ತಿಯನ್ನು ಪೂರ್ವಮೀಮಾಂಸಕರು ಒಪ್ಪಿರುತ್ತಾರೆ. ಅದರಂತೆ ನಾವೂ ಕೂಡ ವೇದದಲ್ಲಿರುವ ವಾಕ್ಯಗಳಿಗೆ ಅನೇಕಾರ್ಥಗಳನ್ನು ಕಲ್ಪಿಸುತ್ತೇವೆ.

### ಕಲ್ಪಸೂತ್ರ, ಆಶ್ವಲಾಯನಸೂತ್ರ ಮೊದಲಾದವುಗಳ ಆಧಾರದಿಂದಲೂ ಅನೇಕಾರ್ಥತ್ವವು ಸಿದ್ಧವಾಗುತ್ತದೆ

ಒಂದೇ ಮಂತ್ರವು ಹಿಂದಿನ-ಮುಂದಿನ ವಾಕ್ಯದ ಜೊತೆ ಅನ್ವಯ ಹೊಂದಬಹುದು. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ಒಂಭತ್ತನೆಯ ಅಧ್ಯಾಯದ ದೃಷ್ಟಾಂತವನ್ನು ನೀಡಿರುತ್ತಾರೆ.

ಒಂದು ಪ್ರಕರಣದಲ್ಲಿರುವ ವಾಕ್ಯವು ಮತ್ತೊಂದು ಪ್ರಕರಣದಲ್ಲಿರುವ ವಾಕ್ಯದ ಜೊತೆ ಅನ್ವಯ ಹೊಂದುತ್ತದೆನ್ನಲು ಆಶ್ವಲಾಯನ ಸೂತ್ರವನ್ನು ಉದಾಹರಣೆಯನ್ನಾಗಿ ನೀಡಿರುತ್ತಾರೆ.

### ಪ್ರತಿಯೊಂದು ಪದಗಳೂ ಹರಿಪರವಾದರೆ ಬಾಧಕವಿಲ್ಲ

ಅಪೌರುಷೇಯವಾದ ವೇದವು ಏನು ಹೇಳಿದರೂ ಅದನ್ನು ಒಪ್ಪಿಕೊಳ್ಳಲೇಬೇಕು. ವೇದವು ತನ್ನಲ್ಲಿ ಅನೇಕಾರ್ಥಗಳಿರುತ್ತವೆಂದು ತಾನೇ ಹೇಳಿಕೊಂಡಿದೆ. ಹೀಗಿರುವಾಗ ಅದನ್ನು ಅಸಂಭಾವಿತವೆಂದು

ತಿಳಿಯುವುದು ನಮ್ಮ ಅಜ್ಞಾನ. ಆದ್ದರಿಂದ ಗೌಣವಾದ ಅರ್ಥವನ್ನಾಗಲೀ, ಲಾಕ್ಷಣಿಕವಾದ ಅರ್ಥವನ್ನಾಗಲೀ, ವಾಕ್ಯಭೇದದಿಂದ ಬರುವಂತಹ ಅರ್ಥವನ್ನಾಗಲೀ ವೇದವು ಹೇಳಿದರೆ ಅದನ್ನು ಶಿರಸಾವಹಿಸಲೇಬೇಕು. ಹಾಗಾಗಿ ಎಲ್ಲ ವೇದಗಳಿಗೂ ವಿಷ್ಣುವಿನಲ್ಲೇ ಮಹಾತಾತ್ಪರ್ಯವಿರುತ್ತದೆ. ಬೇರೆ ಪದಾರ್ಥಗಳಲ್ಲಿ ಅವಾಂತರ ತಾತ್ಪರ್ಯವಿರುತ್ತದೆ. ಪೂರ್ವಮೀಮಾಂಸೆಯ ಸ್ವಿಷ್ಟಕೃದಧಿಕರಣದಲ್ಲಿ ಸ್ವಿಷ್ಟಕೃತ್ ಮಂತ್ರಕ್ಕೆ ದೃಷ್ಟಫಲ ಹಾಗೂ ಅದೃಷ್ಟಫಲಗಳೆರಡನ್ನೂ ಸಮರ್ಥಿಸಿದ್ದಾರೆ. ವೇದಕ್ಕೂ ಕೂಡ ಭಗವತ್ಪರವಾಗಿ ಅರ್ಥೈಸಿ ಲೌಕಿಕಾರ್ಥಪರವಾಗಿಯೂ ಅರ್ಥೈಸಬೇಕು.

### ಬ್ರಾಹ್ಮಣ ಹಾಗೂ ಮಂತ್ರಭಾಗಗಳೆರಡರ ನಡುವೆ ಯಾವುದು ವಿಧಾಯಕ

ಶ್ರುತಿಗಳು ವಿಷ್ಣುಪರವಾದಾಗ ಕರ್ಮಪ್ರತಿಪಾದಕಗಳಾಗುವುದಿಲ್ಲವೆಂಬ ವಿಷಯದಲ್ಲಿ ಪೂರ್ವಮೀಮಾಂಸೆಯ ಎರಡನೇ ಅಧ್ಯಾಯದ ಉದಾಹರಣೆಯನ್ನು ನೀಡಿದ್ದಾರೆ. ಆದರೆ ಶಾಬರ ಭಾಷ್ಯದಲ್ಲಿ ಬ್ರಾಹ್ಮಣವಾಕ್ಯವು ಕರ್ಮವಿಧಾಯಕವಾದರೂ, ಮತ್ತೊಂದು ಅರ್ಥದಲ್ಲಿ ವಿನಿಯುಕ್ತವಾಗಲು ಯಾವುದೇ ಬಾಧಕವಿಲ್ಲವೆಂದು ಸಮರ್ಥಿಸಿದ್ದಾರೆ. ವಿಧಿಶಕ್ತಿಗೆ ಪ್ರತಿಬಂಧಕವಾದ ಯಚ್ಛಬ್ದ ಹಾಗೂ ಯದಿ ಶಬ್ದಗಳು ಬ್ರಾಹ್ಮಣವಾಕ್ಯದಲ್ಲಿವೆ. ಉತ್ತಮಪುರುಷ ಪ್ರಯೋಗ, ಆಮಂತ್ರಣ ಈ ಬಾಧಕಗಳು ಮಂತ್ರವಾಕ್ಯದಲ್ಲಿದೆ. ಈ ಕಾರಣದಿಂದ ವಿಧಾಯಕಗಳಾಗುವುದಿಲ್ಲ ಎಂಬುದಾಗಿ ಶಾಬರ ಭಾಷ್ಯದಲ್ಲಿ ಸಮರ್ಥಿಸಿದ್ದಾರೆ.

### ವೇದದಲ್ಲಿರುವ ಪ್ರತಿಯೊಂದು ಪದಗಳು ಹರಿನಾಮಗಳೆಂದು ನಿರ್ಣಯವಾಯಿತು

ವೇದದಲ್ಲಿ ಯಾವುದೇ ಪದಗಳು ವಾಕ್ಯದಲ್ಲಿ ಅನ್ವಯವನ್ನು ಹೊಂದುವ ಮೂಲಕ ಏಕವಾಕ್ಯತ್ವವನ್ನು ಪಡೆಯುತ್ತವೆ. ಆವಾಗ ಲೌಕಿಕವಾದ ಕರ್ಮಾದಿಗಳನ್ನೋ, ಅಥವಾ ದೇವತೆಗಳನ್ನೋ ಪ್ರತಿಪಾದನೆ ಮಾಡುತ್ತವೆ. ಆದರೆ ವಾಕ್ಯದಲ್ಲಿ ಅನ್ವಯವನ್ನು ಹೊಂದದೇ ಪ್ರತ್ಯೇಕವಾಗಿದ್ದಾಗ ಎಲ್ಲವೂ, ಎಲ್ಲಾ ಪದಗಳೂ ಶ್ರೀಹರಿಯ ನಾಮಗಳೇ ಆಗಿರುತ್ತವೆ.

ಒಮ್ಮೆ ನಾರದಮಹರ್ಷಿಗಳು ಸನತ್ಕುಮಾರರ ಬಳಿ ನಾನು ಚತುರ್ವೇದಗಳನ್ನು, ಇತಿಹಾಸ-ಪುರಾಣಗಳನ್ನು, ಪಂಚರಾತ್ರ ರಾಮಾಯಣ ಮೊದಲಾದವುಗಳನ್ನು, ಅಷ್ಟೇ ಅಲ್ಲದೇ ದೇವಲೋಕದಲ್ಲಿರುವ ಅನಂತವಾದ ಶಾಸ್ತ್ರಗ್ರಂಥಗಳನ್ನು, ವೇದೋಪನಿಷತ್ತುಗಳನ್ನೆಲ್ಲಾ ಅಧ್ಯಯನ ಮಾಡಿದ್ದೇನೆಂದು ಹೇಳುತ್ತಾರೆ. ಆವಾಗ ಸನತ್ಕುಮಾರರು ನಾರದಮಹರ್ಷಿಗಳಿಗೆ "ಯದ್ವೈಕಿಂಚೈತದಧ್ಯಗೀಷ್ಠಾ ನಾಮೈವೈತತ್" ನೀವು ಏನೇನು ಗ್ರಂಥಗಳನ್ನು ಓದಿದ್ದೀರೋ ಆ ಎಲ್ಲಾ ಗ್ರಂಥಗಳಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳು ಎಂಬುದಾಗಿ ಹೇಳಿರುತ್ತಾರೆ. ಆದ್ದರಿಂದ ವಾಙ್ಮಯ ಪ್ರಪಂಚದ ಶಬ್ದಗಳೆಲ್ಲವೂ ಶ್ರೀಹರಿಯ ನಾಮಗಳೇ ಆಗಿವೆ. ಇಂತಹ ಶ್ರೀಹರಿಯ ಹೆಸರುಗಳಾದ ಶಬ್ದಗಳನ್ನೇ ಜೋಡಿಸಿಕೊಂಡು ವಾಕ್ಯವನ್ನಾಗಿ ಮಾಡಿಕೊಂಡು ಕರ್ಮಾದಿಗಳನ್ನು, ದೇವತೆಗಳನ್ನು ವೇದವು ಪ್ರತಿಪಾದನೆ ಮಾಡುತ್ತದೆ. ಹಾಗೂ ಇತಿಹಾಸ-ಪುರಾಣಾದಿಗಳೂ ಕೂಡ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವೇದದ ಮುಖ್ಯತಾತ್ಪರ್ಯ ಶ್ರೀಹರಿಯೇ ಆಗಿರುತ್ತಾನೆ. ಅವಾಂತರತಾತ್ಪರ್ಯ ಕರ್ಮ, ದೇವತೆ ಮೊದಲಾದವುಗಳು.

ಪೂರ್ವಮೀಮಾಂಸೆಯಲ್ಲಿ 'ವಾಚಸ್ತೋಮ' ಎಂಬ ಯಾಗದ ಪ್ರಕ್ರಿಯೆಯೂ ಇದೆ. ಇದರಲ್ಲಿ ಬೇರೆ ಕರ್ಮಗಳಲ್ಲಿ ವಿನಿಯೋಗ ಮಾಡುವಂತಹ ಎಲ್ಲಾ ಮಂತ್ರಗಳನ್ನು ಪಠಿಸಬೇಕೆಂಬ ವಿಧಿಯಿದೆ. ಆ ವಾಚಸ್ತೋಮಯಾಗದಲ್ಲಿ ಪಠಿಸುವ ಎಲ್ಲ ಮಂತ್ರಗಳನ್ನೇ ಬೇರೆ ಬೇರೆ ಕರ್ಮಗಳಲ್ಲಿಯೂ ಕೂಡ ಪ್ರತ್ಯೇಕವಾಗಿ ಪಠಿಸಲಾಗುತ್ತದೆ. ಅದರಂತೆ ಎಲ್ಲಾ ಶಬ್ದಗಳೂ ಕೂಡ ಶ್ರೀಹರಿಯ ನಾಮಗಳೇ ಆಗಿವೆ. ಅವುಗಳನ್ನೇ ತೆಗೆದುಕೊಂಡು ಲೌಕಿಕವಾದ ಅರ್ಥಗಳಲ್ಲಿ ನಾವು ಪ್ರಯೋಗಿಸುತ್ತೇವೆ. ಮತ್ತೊಂದು ಗಮನಿಸಬೇಕಾದ ಬಹಳ ದೊಡ್ಡ ವಿಚಾರವೆಂದರೆ ವೇದಾಧ್ಯಯನವನ್ನು ಮಾಡುವವರು ವರ್ಣ, ಸ್ವರ, ಪದ, ಕ್ರಮ, ಜಟಾ, ವಾಕ್ಯ ಈ ಕ್ರಮಗಳಲ್ಲಿ ಸಂಹಿತಾಧ್ಯಯನವನ್ನು ಮಾಡುತ್ತಾರೆ. ಇದರ ಉದ್ದೇಶ ಹೀಗಿದೆ - ಪೂರ್ವಮೀಮಾಂಸೆಯ ಮೊದಲನೆಯ ಧರ್ಮಜಿಜ್ಞಾಸಾಧಿಕರಣದಲ್ಲಿ ಸ್ವಶಾಖಾಧ್ಯಯನವು ಅರ್ಥಜ್ಞಾನಪರ್ಯವಸಾಯಿ ಆಗಿದೆಯೆಂದು ನಿರ್ಣಯಿಸಲಾಗಿದೆ. ವೇದವನ್ನು ಅರ್ಥಜ್ಞಾನವಿಲ್ಲದೇ ಅಧ್ಯಯನ ಮಾಡಬಾರದು. ಅರ್ಥವನ್ನು ತಿಳಿದೇ ಅಧ್ಯಯನ ಮಾಡಬೇಕೆಂದು ವಿಧಿಸಲಾಗಿದೆ. ವೇದಾಧ್ಯಯನದಲ್ಲೇ ವರ್ಣ, ಸ್ವರ, ಪದ ಮೊದಲಾದವುಗಳ ಅಧ್ಯಯನವೂ ಕೂಡ ಸಾಂಪ್ರದಾಯಿಕವಾಗಿ ವಿಧಿಸಿದ್ಧವಾಗಿದೆ. ವರ್ಣ, ಸ್ವರ ಮೊದಲಾದವುಗಳ ಅರ್ಥವನ್ನೂ ಕೂಡ ಅವಶ್ಯವಾಗಿ ತಿಳಿಯಲೇ ಬೇಕು. ಇಲ್ಲದಿದ್ದರೆ ಪೂರ್ವಮೀಮಾಂಸೆಯ ಧರ್ಮಜಿಜ್ಞಾಸಾಧಿಕರಣವು ಕೇವಲ ವೇದದ ಒಂದು ಅಂಶವನ್ನು ಮಾತ್ರ ಅರ್ಥಜ್ಞಾನಪುರಸ್ಸರವಾಗಿ ಅಧ್ಯಯನ ಮಾಡಬೇಕೆಂದು ಹೇಳುತ್ತಿದೆ ಎಂದಾದೀತು. ಇದು ಸರ್ವಥಾ ಯುಕ್ತವಾಗುವುದಿಲ್ಲ.

ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।  
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥

ವೇದದಲ್ಲಿ ಎಷ್ಟು ಅಕ್ಷರಗಳಿವೆಯೋ, ಅವೆಲ್ಲವನ್ನು ದ್ವಿಜರು ಅಧ್ಯಯನ ಮಾಡಬೇಕು. ಆ ಎಲ್ಲಾ ಅಕ್ಷರಗಳೂ ಕೂಡ ಶ್ರೀಹರಿಯ ನಾಮಸ್ವರೂಪವಾಗಿವೆ ಇದರಲ್ಲಿ ಯಾವುದೇ ಸಂಶಯವಿಲ್ಲ ಎಂಬುದಾಗಿ ಅಧ್ಯಾಪಕಪ್ರಸಿದ್ಧಿಯಿರುತ್ತದೆ. ಪ್ರತಿಯೊಂದು ವೇದವಾಕ್ಯಗಳಲ್ಲಿರುವ ಪದಪಾಠವನ್ನು ಅಧ್ಯಯನ ಮಾಡಬೇಕೆಂದರೆ ಆ ಪದಗಳೆಲ್ಲವೂ ಹರಿನಾಮಗಳೆಂದು ಹೇಳಿದಿರಿ. ಹಾಗಾದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಲ್ಲಿ ಶ್ರೀಮದಾಚಾರ್ಯರು 'ಜ್ಯೋತಿಷಾ ಯಜೇತ' ಎಂಬುದಾಗಿ ಪದಚ್ಛೇದ ಮಾಡಿದ್ದಾರೆ. ಆದರೆ ಪದಪಾಠದಲ್ಲಿ ಇಂತಹ ಪದಚ್ಛೇದವು ಸರ್ವಥಾ ಇರುವುದಿಲ್ಲ. ಆದ್ದರಿಂದ ಶ್ರೀಮದಾಚಾರ್ಯರು ಹೀಗೆ ಪದಚ್ಛೇದ ಮಾಡುವುದು ಹೇಗೆ ಸರಿ? ಎಂಬುದು ಇಲ್ಲಿ ಬರುವ ಗೊಂದಲ. ಆದರೆ 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಶ್ರುತಿಯೇ ಹೇಳುವಂತೆ ವೇದದಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳೆಂದು ತಿಳಿಯಲು ನಾವು ಯಾರೂ ಸಹ ಅಧಿಕಾರಿಗಳಲ್ಲ. ಕೇವಲ ಚತುರ್ಮುಖಬ್ರಹ್ಮದೇವರೊಬ್ಬರೇ ಅಧಿಕಾರಿಗಳು. ಉಳಿದೆಲ್ಲಾ ಅಧಿಕಾರಿವರ್ಗದವರು ವಾಕ್ಯಸಮನ್ವಯವನ್ನಷ್ಟೇ ತಿಳಿಯಬೇಕು. ಆ ವಾಕ್ಯಸಮನ್ವಯಕ್ಕೆ ಉಪಯುಕ್ತವಾದ ಪದವಿಭಾಗಗಳನ್ನಷ್ಟೇ ಪದಪಾಠದಲ್ಲಿ ತೋರಿಸಲಾಗಿದೆ. ಶ್ರೀಮದಾಚಾರ್ಯರು 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿ ಪದವಿಭಾಗವನ್ನು ಮಾಡಿರುವುದು ವಾಕ್ಯಸಮನ್ವಯಕ್ಕೆ ಉಪಯುಕ್ತವಾದ

ಪದವಿಭಾಗಗಳಾಗಿರುವುದಿಲ್ಲ. ಕೇವಲ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳಾಗಿರುತ್ತವೆನ್ನಲು ಮಾತ್ರ ಅದು ದೃಷ್ಟಾಂತವಾಗಿರುತ್ತದೆ.

ಪ್ರತಿಯೊಂದು ಪದಗಳನ್ನು ಯೋಗವಿಭಾಗ ಮಾಡಿ ಪ್ರತಿಪಾದ್ಯವಾದ ಗುಣಸಮನ್ವಯವನ್ನು ಶ್ರೀಹರಿಯಲ್ಲಿ ಮಾಡುವಂತೆ ಮತ್ತೊಂದು ಬಗೆಯಲ್ಲಿ ಯೋಗವಿಭಾಗ ಮಾಡಿದಾಗ, ಅದೇ ಪದವು ದೋಷವನ್ನೂ ಕೂಡ ಹೇಳುತ್ತದೆ. ಅಂತಹ ದೋಷಗಳನ್ನೂ ಕೂಡ ಶ್ರೀಹರಿಯಲ್ಲಿ ಏಕೆ ತಿಳಿಯಬಾರದು? ಎಂಬ ಪ್ರಶ್ನೆ ಎದುರಾಗುತ್ತದೆ. ಆದರೆ ಈಗಾಗಲೇ ಹೇಳಿದಂತೆ 'ತಂ ಯಚ್ಛತಮ್' ಇತ್ಯಾದಿ ಶ್ರುತಿಗಳು ಜ್ಞಾನಿಜನರಾದ ಮುಮುಕ್ಷುಗಳು ಎಲ್ಲಾ ಪದಗಳನ್ನು ಯೋಗವೃತ್ತಿಯಿಂದ ಶ್ರೀಹರಿಯಲ್ಲಿ ಸಮನ್ವಯ ಮಾಡಿ ಅವುಗಳಿಂದ ಪ್ರತಿಪಾದ್ಯವಾದ ಗುಣಗಳನ್ನಷ್ಟೇ ಅನುಸಂಧಾನ ಮಾಡುತ್ತಾರೆಂದು ಸಮರ್ಥಿಸಲಾಗಿದೆ. ಆದ್ದರಿಂದ ದೋಷಪ್ರಕಾಶಕವಾದ ನಿರ್ವಚನದ ಉತ್ಪ್ರೇಕ್ಷೆಯನ್ನು ಸರ್ವಥಾ ಮಾಡಬಾರದು. ಹಾಗೇನಾದರೂ ಮಾಡಿದರೆ ಅದೇ ಗತಿ ಅವನಿಗೆ ಆಗುತ್ತದೆ. ಆದ್ದರಿಂದ ಅಲೌಕಿಕವಾದ ವೇದದಿಂದ ಅಲೌಕಿಕನಾದ ಈಶ್ವರನಲ್ಲಿ, ಅಲೌಕಿಕವಾದ ವಾಕ್ಯವಾಚಕಭಾವಸಂಬಂಧವನ್ನೇ ತಿಳಿಯಬೇಕು. ನಮ್ಮಂತಹ ಅಲ್ಪಮತಿಗಳಿಗೆ ಆ ಅಲೌಕಿಕ ಸಂಬಂಧಗಳು ತಿಳಿಯಲು ಸಾಧ್ಯವಾಗುವುದಿಲ್ಲ.

ಶಬ್ದದಲ್ಲಿ ಅನೇಕವಿಧವಾದ ವೃತ್ತಿಗಳಿವೆ. ಅವುಗಳಲ್ಲಿ ಮಹಾಯೋಗ ಮತ್ತು ಮಹಾಯೋಗರೂಢಿ ಎಂಬುದು ಮುಖ್ಯವಾದ ಶಬ್ದವೃತ್ತಿಗಳು. ಆ ಶಬ್ದಗಳು ಹೇಳುವ ಗುಣಧರ್ಮಗಳು ಶ್ರೀಹರಿಯಲ್ಲಿ ನಿರತಿಶಯವಾಗಿ ಅಥವಾ ಸ್ವತಂತ್ರವಾಗಿ ಇರುವುದರಿಂದ ಜ್ಞಾನಿಜನರು ಅದನ್ನು ಶ್ರೀಹರಿಯಲ್ಲಿ ಬಹಳವಾಗಿ ಪ್ರಯೋಗಿಸುತ್ತಾರೆ. ಆದ್ದರಿಂದ ಶಬ್ದಗಳು ಪರಮಾತ್ಮನನ್ನು ಮಹಾಯೋಗವೃತ್ತಿಯಿಂದ ಕರೆಯುತ್ತವೆ. ಇಂದ್ರ, ಪ್ರಾಣ ಮೊದಲಾದ ಶಬ್ದಗಳೇ ಇದಕ್ಕೆ ಉದಾಹರಣೆಗಳು. ಇನ್ನು ಇಂದ್ರಶಬ್ದದ ಪ್ರವೃತ್ತಿನಿಮಿತ್ತವಾಗಿರುವ ಐಶ್ವರ್ಯ, ಅಗ್ನಿ, ಪ್ರಾಣ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವಾಗಿರುವ ಜಗತ್‌ಪ್ರವರ್ತಕತ್ವ ಇವುಗಳೆಲ್ಲವೂ ಶ್ರೀಹರಿಯಲ್ಲಿ ನಿರತಿಶಯವಾಗಿ ಇರುತ್ತವೆ. ಆದ್ದರಿಂದ ಈ ಶಬ್ದಗಳು ಭಗವಂತನಲ್ಲಿ ಮಹಾಯೋಗವೃತ್ತಿಯಿಂದ ಇರುತ್ತವೆ.

ಆಯಾ ಶಬ್ದಗಳ ಗುಣಧರ್ಮಗಳು ಪರಮಾತ್ಮನಲ್ಲಿ ನಿರತಿಶಯವಾಗಿ ಇರುವುದರ ಜೊತೆಗೆ ಲೋಕದಲ್ಲಿ ಹಾಗೂ ವೇದದಲ್ಲಿ ಪ್ರಸಿದ್ಧಿಯಿದ್ದರೆ ಆ ಶಬ್ದಗಳು ಮಹಾಯೋಗರೂಢಿಯೆಂಬ ಶಬ್ದಶಕ್ತಿಯಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ. ವಿಷ್ಣು, ನಾರಾಯಣ, ಹರಿ ಮೊದಲಾದ ಶಬ್ದಗಳು ಇದಕ್ಕೆ ಉದಾಹರಣೆ. ಈ ಮಹಾಯೋಗ ಮತ್ತು ಮಹಾಯೋಗ ರೂಢಿಗಳನ್ನು ಪರಮಮುಖ್ಯವೃತ್ತಿಯೆಂದು ಕರೆಯುತ್ತಾರೆ. ಇದರಂತೆ ಯೋಗ, ರೂಢಿ, ಯೋಗರೂಢಿಯೆಂಬ ಮೂರು ಮುಖ್ಯವೃತ್ತಿಗಳಿವೆ. ಇವುಗಳು ಲೌಕಿಕವಾದ ಪದಾರ್ಥಗಳನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ ಎಂಬ ನಾಲ್ಕುಬಗೆಯ ವೃತ್ತಿಗಳು ಗೌಣವಾದ ವೃತ್ತಿಗಳೆಂದು ಕರೆಸಿಕೊಳ್ಳುತ್ತಾ ಲೌಕಿಕವಾದ ಪದಾರ್ಥಗಳನ್ನು ಗೌಣವಾಗಿಯೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಪರಮಾತ್ಮನಲ್ಲಿ ಮಾತ್ರ ಇರುವ ಎರಡು ವೃತ್ತಿಗಳನ್ನು ಬಿಟ್ಟರೆ ಲೋಕದಲ್ಲಿ ಏಳುಬಗೆಯ ವೃತ್ತಿಗಳು ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ೧. ರೂಢಿ, ೨. ಯೋಗ, ೩. ಯೋಗರೂಢಿ, ೪. ರೂಢೋಪಚಾರ, ೫. ರೂಢಲಕ್ಷಣ, ೬. ಉಪಚಾರ, ೭. ಲಕ್ಷಣಾ ಎಂಬುದಾಗಿ.

## ಸೂತ್ರಗಳ ಪಾಠಕ್ರಮ

ಈ ಅಧಿಕರಣದಲ್ಲಿ 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧಿಯತೇ ಏಕೇ', 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬೆರಡು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿ ಪ್ರತಿಯೊಂದು ಪದಗಳಿಂದ ಶ್ರೀಹರಿಯೇ ಪ್ರತಿಪಾದ್ಯನೆನ್ನಲು ಸ್ವಪಕ್ಷಸಾಧಕಪ್ರಮಾಣವನ್ನು ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ ಸಕಲಪದಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಿದರೆ ಬರುವಂತಹ ಬಾಧಕವನ್ನು ಪರಿಹರಿಸಿದ್ದಾರೆ.

ಪ್ರಥಮಸೂತ್ರದಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದು ವಿಷಯವಾಕ್ಯವಾಗಿದೆ. ವಿಷಯವಾಕ್ಯದಲ್ಲಿ ಮೊದಲು ಶ್ರುತವಾದ ವಸಂತ ಶಬ್ದವನ್ನೇ ಸೂತ್ರದಲ್ಲಿ ಉಲ್ಲೇಖಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರಬಹುದು. ಆದರೆ ಜ್ಯೋತಿಷ್ಟೋಮಯಾಗವು ಅತ್ಯಂತ ಪ್ರಧಾನವಾದ್ದರಿಂದ ತತ್ ಪ್ರತಿಪಾದಕವಾದ 'ಜ್ಯೋತಿಃ' ಶಬ್ದದಿಂದ ಉಳಿದ ಅಮುಖ್ಯವಾದ ಅರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸುವುದು ಸೂಕ್ತವೆಂಬ ದೃಷ್ಟಿಯಿಂದ 'ಜ್ಯೋತಿಃ' ಶಬ್ದವನ್ನೇ ಸೂತ್ರಕಾರರು ಉಲ್ಲೇಖಿಸಿದ್ದಾರೆ. ಎರಡನೆಯ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬ ಹೇತುವಿನಿಂದ ಕರ್ಮಕ್ರಮಗಳ ವಿರೋಧವನ್ನು ಎಲ್ಲಾ ಶಬ್ದಗಳು ಶ್ರೀಹರಿಯಲ್ಲಿ ಸಮನ್ವಯವಾದರೆ ಶಬ್ದಗಳ ವ್ಯುತ್ಪತ್ತಿಯೇ ಅಶಕ್ಯವಾಗುತ್ತದೆಂಬ ವಿರೋಧವನ್ನು ಪರಿಹರಿಸಿದ್ದಾರೆ. ಪ್ರತಿಯೊಂದು ಪದಗಳೂ ಅವಾಂತರತಾತ್ಪರ್ಯದಿಂದ ಮುಖ್ಯವೃತ್ತಿಯನ್ನೇ ಹೊಂದಿ, ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ಮುಖ್ಯತಾತ್ಪರ್ಯವನ್ನು ಹೊಂದಿ, ಅಲೌಕಿಕನಾದ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ 'ಜ್ಯೋತಿಃ' ಎಂಬ ಶಬ್ದವನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡುವಾಗ 'ಜೀ' ಮತ್ತು 'ಓತಿ' ಎಂಬ ಎರಡು ಅವಯವಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. 'ಜ್ಯೋತಿಃ' ಎಂಬ ಸಮಸ್ತಪದವು ಶ್ರೀಹರಿಯನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಪ್ರತಿಯೊಂದು ಪದಗಳ ಯೋಗಾರ್ಥವನ್ನು ಶ್ರೀಹರಿಯಲ್ಲಿ ತಿಳಿಯಬೇಕೆಂಬುದು ಇದರ ಅಭಿಪ್ರಾಯ.

ಗಮನಿಸಬೇಕಾದ ಮುಖ್ಯವಿಚಾರ - ಈ ಅಧಿಕರಣದಲ್ಲಿ ವೇದದಲ್ಲಿರುವ ಎಲ್ಲಾ ಪದಗಳ ಸಮನ್ವಯವನ್ನು ಮಾಡಿದ್ದಾರೆ. ಉಳಿದ ಅಧಿಕರಣಗಳಲ್ಲಿ ಒಂದೊಂದು ವಾಕ್ಯಗಳ ಸಮನ್ವಯವನ್ನು ಮಾಡಿದ್ದಾರೆ. ಹೊರತು, ಸಮಸ್ತ ವೇದಸಮನ್ವಯವನ್ನು ಎಲ್ಲಿಯೂ ಮಾಡಿಲ್ಲ. ಈ ಅಧಿಕರಣದ ವಿಶೇಷವೆಂದರೆ ಬೇರೆ ಅಧಿಕರಣಗಳಲ್ಲಿ ಪ್ರಸಕ್ತವಾದ ಎಲ್ಲಾ ವಾಕ್ಯಗಳಲ್ಲಿರುವ ಪದಗಳ ಸಮನ್ವಯ. ಆದ್ದರಿಂದಲೇ ಶ್ರೀಮದಾಚಾರ್ಯರು ಅಧಿಕರಣನ್ಯಾಯಗಳನ್ನು ಸಂಗ್ರಹಿಸುವಾಗ 'ಸರ್ವ' ಎಂಬುದನ್ನು ಈ ಅಧಿಕರಣದ ನ್ಯಾಯಗಳೆಂದು ಹೇಳಿರುತ್ತಾರೆ.

## ಅದ್ವೈತಿಗಳ ಅಧಿಕರಣಶರೀರ

ಅದ್ವೈತಿಗಳು ಚಮಸದವವಿಶೇಷಾತ್' ಇತ್ಯಾದಿ ಮೂರುಸೂತ್ರಗಳನ್ನು ಒಂದು ಅಧಿಕರಣವೆಂದು ಹೇಳುತ್ತಾರೆ. 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಃ ಸರೂಪಾ' ಎಂಬುದು ಈ ಅಧಿಕರಣದ ವಿಷಯವಾಕ್ಯ. ಇಲ್ಲಿರುವ ಅಜಾಶಬ್ದದಿಂದ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯೇ ಪ್ರತಿಪಾದ್ಯವಾಗಿದೆಯೆಂದು ಪೂರ್ವಪಕ್ಷ.

ಸಾಂಖ್ಯರಿಗೆಅಭಿಮತವಾದಪ್ರಕೃತಿಯುಅಜಾಶಬ್ದಪ್ರತಿಪಾದ್ಯವಾಗಿದೆಯೆನ್ನಲುಯಾವುದೇನಿಶ್ಚಾಯಕ ಪ್ರಮಾಣಗಳಿರುವುದಿಲ್ಲ. ಪ್ರಕೃತಿಯಲ್ಲಿ ಮಾತ್ರ ಬರುವಂತಹ ಯಾವುದೇ ಅಸಾಧಾರಣ ಧರ್ಮಗಳನ್ನೂ ಶ್ರುತಿಯಲ್ಲಿ ಕೂಡ ಹೇಳಿಲ್ಲ. ಯಾವರೀತಿಯಾಗಿ ಚಮಸದ ಬಗ್ಗೆ 'ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬ ವಾಕ್ಯಶೇಷವು ಸಂಪೂರ್ಣವಾದ ನಿರ್ಣಯವನ್ನು ನೀಡಲು ಸಾಧ್ಯವಿಲ್ಲವೋ, ಅದರಂತೆ 'ಅಜಾಮೇಕಾಂ' ಎಂಬ ಶ್ರುತಿವಾಕ್ಯವೂ ಕೂಡ ಅಜಾಶಬ್ದದಿಂದ ಪ್ರಕೃತಿಯನ್ನೇ ಸ್ವೀಕರಿಸಬೇಕೆನ್ನಲು ವಿಶೇಷವಾದ ಕಾರಣವನ್ನು ನೀಡಿರುವುದಿಲ್ಲ. ಆದ್ದರಿಂದ ತೇಜೋಬನ್ನವೇ ಈ ಅಜಾಶಬ್ದದಿಂದ ಪ್ರತಿಪಾದ್ಯವಾಗಿದೆ. ಇಂತಹ ತೇಜೋಬನ್ನದಲ್ಲಿ 'ಯದಗ್ನೇ ಲೋಹಿತಂ ರೂಪಂ' ಇತ್ಯಾದಿ ಶ್ರುತಿಯಿಂದ ಹೇಳಲ್ಪಟ್ಟ ಲೋಹಿತಾದಿ ಶಬ್ದಪ್ರತಿಪಾದ್ಯತ್ವವು ಸಮಂಜಸವಾಗುತ್ತದೆ. ಹೀಗೆ ಚಮಸ ಸೂತ್ರವನ್ನು ಜ್ಯೋತಿರಧಿಕರಣದ ಅಂಗವೆಂದು ಅದ್ವೈತಿಗಳು ಹೇಳುತ್ತಾರೆ.

## ಅದ್ವೈತಿಗಳ ಅಧಿಕರಣ ವಿಮರ್ಶೆ

ಅದ್ವೈತಿಗಳು ಹೇಳಿದ 'ಚಮಸವದವಿಶೇಷಾತ್' ಎಂಬ ಮೊದಲನೆಯ ಸೂತ್ರಾರ್ಥವೇ ಅಸಾಧುವಾಗಿದೆ. ಏಕೆಂದರೆ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಯಾವುದಕ್ಕೆ ಶಿರಸ್ಸು ಕೆಳಭಾಗದಲ್ಲಿದ್ದು ಉದರವು ಮೇಲ್ಭಾಗದಲ್ಲಿರುತ್ತದೋ, ಅದೇ 'ಚಮಸ' ಎನಿಸುತ್ತದೆ ಎಂದು ನಿಖರವಾಗಿ ಚಮಸವನ್ನು ಪರಿಚಯಿಸಿರುವಾಗ ಚಮಸದ ಬಗ್ಗೆ ಶ್ರುತಿಯು ಸ್ಪಷ್ಟವಾಗಿ ಹೇಳಿಯೇ ಇಲ್ಲ ಎಂಬ ಧೋರಣೆ ಸರಿಯಿಲ್ಲ. ಮತ್ತು 'ಅಜಾಮೇಕಾಮ್' ಎಂಬ ಶ್ರುತಿಯಿಂದ ಪ್ರಕೃತಿಯು ಪ್ರತಿಪಾದ್ಯವಲ್ಲ. ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳುತ್ತಿದ್ದಾರೆ. ಇದು ಹೇಗಾಯಿತೆಂದರೆ ಚೇಳಿಗೆ ಹೆದರಿ ಹಾವಿನ ಮುಖದಲ್ಲಿ ಬಿದ್ದಂತಾಯಿತು. ಪ್ರಧಾನವು ಶ್ರುತಿಪ್ರತಿಪಾದ್ಯವಲ್ಲ. ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳಿದರೆ ಬ್ರಹ್ಮನ ಜಗತ್ಕಾರಣತ್ವಲಕ್ಷಣಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ತೇಜೋಬನ್ನಗಳಲ್ಲಿ ಬರುತ್ತದೆಂದು ಒಪ್ಪಿದಂತಾಯಿತು. ಮತ್ತು

ಅಜಾ ಚೇತ್ ಜ್ಯೋತಿರಾದಿಃ ಸ್ಯಾದಜೈಕತ್ವಾದ್ಯಸಂಭವಃ ।
ಅವಿದ್ಯೇತಿ ತು ಪಕ್ಷೇ ಸ್ಯಾತ್ ಲೋಹಿತತ್ವಾದ್ಯಸಂಭವಃ ॥೧॥

ಅಜಾಶಬ್ದದಿಂದ ತೇಜೋಬನ್ನಾದಿಗಳು ಪ್ರತಿಪಾದ್ಯವೆಂದು ಹೇಳಿದರೆ, ಶ್ರುತಿಯಲ್ಲಿರುವ ಏಕತ್ವ ಮೊದಲಾದವು ಅಸಂಭಾವಿತವಾಗುತ್ತವೆ. ಅವಿದ್ಯೆಯು ಪ್ರತಿಪಾದ್ಯವೆಂದರೆ ಶ್ರುತಿಯಲ್ಲೇ ಹೇಳಿರುವ ಲೋಹಿತತ್ವಾದಿಗಳು ಅಸಂಭಾವಿತವಾಗುತ್ತವೆ.

ತೇಜೋಬನ್ನಗಳಲ್ಲಿಅಜಾತ್ವ, ಏಕತ್ವಮೊದಲಾದವುಗಳನ್ನುಆರೋಪಿತವಾಗಿಹೇಳಬಹುದಲ್ಲವೇ? ಎಂದು ಅದ್ವೈತಿಗಳು ವಾದಿಸುತ್ತಾರೆ. ಆದರೆ ಶ್ರುತಿಯಲ್ಲಿ ಇಂತಹ ಆರೋಪಿತವಾದ ಅರ್ಥಗಳನ್ನು ಹೇಳುವುದು ಸರ್ವಥಾ ಉಪಯುಕ್ತವಲ್ಲ. ಪಾಮರಜನರ ಮನೋರಂಜನೆಗಾಗಿ ಕಾವ್ಯಗಳಲ್ಲಿ ಇಂತಹ ಉತ್ಪ್ರೇಕ್ಷೆಗಳಿರುತ್ತವೆ. ಆದರೆ ಅಪೌರುಷೇಯವಾದ ವೇದದಲ್ಲಿ ತತ್ವವಿಚಾರವನ್ನು ಬಿಟ್ಟು ಇಂತಹ ಉತ್ಪ್ರೇಕ್ಷವಿಚಾರಗಳು ಇರುವುದರಿಂದ ಯಾವ ಫಲವೂ ಇರುವುದಿಲ್ಲ. ಮತ್ತು 'ಅಜಾಮೇಕಾಮ್' ಎಂಬ

ಶ್ರುತಿಯಿಂದ ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳುವುದಕ್ಕಿಂತಲೂ ಪ್ರಕೃತಿಯೇ ಪ್ರತಿಪಾದ್ಯವೆಂದು ಹೇಳುವುದು ಹೆಚ್ಚು ಸ್ವರಸ. ಕಾರಣವೇನೆಂದರೆ ಈ ಶ್ರುತಿಯಲ್ಲಿ 'ಅಜಾ' ಎಂಬ ಪದವು ವಿಶೇಷ್ಯವಾಚಕವಾದ ಶಬ್ದವಾಗಿದೆ. ಲೋಹಿತಾದಿ ಶಬ್ದಗಳು ವಿಶೇಷಣವಾಚಕಗಳಾಗಿವೆ. ವಿಶೇಷ್ಯವಾಚಕಶಬ್ದವು ಎಲ್ಲೆಡೆಯೂ ಮುಖ್ಯವಾಗಿರುವುದರಿಂದ ಅದಕ್ಕೆ ಗೌಣಾರ್ಥವನ್ನು ಮಾಡಬಾರದು. ಆದ್ದರಿಂದ ಅಜಾಶಬ್ದವು ಹೇಳುತ್ತಿರುವ ಪ್ರಕೃತಿಯನ್ನೇ ಮುಖ್ಯವಾಗಿ ಇಟ್ಟುಕೊಂಡು ಲೋಹಿತಾದಿಶಬ್ದಗಳಿಗೆ ಗೌಣಾರ್ಥವನ್ನು ಮಾಡಬೇಕು. ಆದರೆ ಅದ್ವೈತಿಗಳು ಶ್ರುತಿಯಲ್ಲಿರುವ ಲೋಹಿತಾದಿಶಬ್ದಗಳಿಗೆ ಕೆಂಪುಬಣ್ಣ ಮೊದಲಾದ ಅರ್ಥಗಳಲ್ಲಿ ಮುಖ್ಯಾರ್ಥವನ್ನು ವಿವಕ್ಷಿಸಿ ಅಜಾಶಬ್ದಕ್ಕೆ ಗೌಣಾರ್ಥವನ್ನು ಮಾಡುತ್ತಾರೆ. ವಿಚಾರ ಮಾಡಿದರೆ ಲೋಹಿತಾದಿ ಶಬ್ದಗಳು ಸತ್ತ್ವರಜಸ್ತಮೋಗುಣಗಳನ್ನೇ ಹೇಳುತ್ತಿವೆ ಹೊರತು, ಬಣ್ಣ ಎಂಬರ್ಥವನ್ನು ಹೇಳುತ್ತಿಲ್ಲ. ಈ ವಿಷಯದಲ್ಲಿ ಶ್ವೇತಾಶ್ವತರೋಪನಿಷತ್ತಿನಲ್ಲಿರುವ 'ಸ್ವಗುಣೈರ್ನಿಗೂಢಾಮ್' ಎಂಬ ವಾಕ್ಯವು ಆಧಾರವಾಗಿದೆ.

### ತೇಜೋಬನ್ನಗಳು ಮತ್ತು ಅವಿದ್ಯೆ 'ಅಜಾಮೇಕಾಮ್' ಇತ್ಯಾದಿ ಶ್ರುತಿಪ್ರತಿಪಾದ್ಯವಲ್ಲ

ತೇಜೋಬನ್ನಗಳು 'ಅಜಾಮೇಕಾಮ್' ಇತ್ಯಾದಿ ಶ್ರುತಿಗಳಿಂದ ಪ್ರತಿಪಾದ್ಯವಾಗುವುದಿಲ್ಲ. ಅದರಂತೆ ಅವಿದ್ಯೆಯೂ ಕೂಡ ಪ್ರತಿಪಾದ್ಯವಾಗುವುದಿಲ್ಲ. ಲೋಹಿತಾದಿ ಶಬ್ದಗಳು ಬಣ್ಣವನ್ನು ಹೇಳುತ್ತದೆಂದು ಅದ್ವೈತಿಗಳ ವ್ಯಾಖ್ಯಾನ. ಅಂತಹ ಲೋಹಿತಾದಿ ಬಣ್ಣಗಳನ್ನು ಅವಿದ್ಯೆಯಲ್ಲಿ ಹೇಳಲು ಹೇಗೆ ಸಾಧ್ಯ ? ಇನ್ನು ಅವಿದ್ಯೆಯು ಜಗತ್ತಾಗಿ ಪರಿಣಾಮವಾದ ಮೇಲೆ ಜಗತ್ತಿನಲ್ಲಿರುವ ಲೋಹಿತಾದಿ ಬಣ್ಣಗಳನ್ನು ವಿವಕ್ಷಿಸಿ, ಅವಿದ್ಯೆಯನ್ನು ಶ್ರುತಿ ಹೇಳುತ್ತಿದೆಯೆಂದು ಉತ್ತರಿಸಬೇಕು. ಹೀಗೆ ಹೇಳುವುದಾದರೆ ಸಾಂಖ್ಯರ ಪ್ರಕೃತಿಯನ್ನೇ ಶ್ರುತಿಪ್ರತಿಪಾದ್ಯವೆಂದು ಹೇಳುವುದು ಬಹಳ ಸುಲಭ. ಸಾಂಖ್ಯರ ಪ್ರಕೃತಿಯನ್ನು ನಿರಾಕರಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಏಕೆಂದರೆ ಸಾಂಖ್ಯರು ಪ್ರಕೃತಿಯನ್ನು ತ್ರಿಗುಣವೆಂದು ಅನಾದಿಯಾದ ಭಾವರೂಪವೆಂದು, ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವೆಂದು, ಜಗತ್ತಿಗೆ ಉಪಾದಾನವೆಂದು ಹೇಳುತ್ತಾರೆ. ಅದ್ವೈತಿಗಳಾದರೂ ಜಗತ್ತಿಗೆ ಕಾರಣವಾದ ಅವಿದ್ಯೆಯನ್ನು ತ್ರಿಗುಣವೆಂದು, ಅನಾದಿಯಾದ ಭಾವಸ್ವರೂಪವೆಂದು, ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವೆಂದು ಜಗತ್ತಿಗೆ ಉಪಾದಾನವೆಂದು ಹೇಳುತ್ತಾರೆ. ಸಾಂಖ್ಯರ ಪ್ರಕೃತಿಯ ಲಕ್ಷಣವನ್ನೇ ಅವಿದ್ಯೆಯಲ್ಲಿ ಹೇಳಿದಾಗ ಇದು ಕೇವಲ ಹೆಸರಿನಲ್ಲಷ್ಟೇ ಜಗಳ ಹೊರತು ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಸಾಂಖ್ಯರು ಪ್ರಕೃತಿಯಲ್ಲಿ ಸ್ವಾತಂತ್ರ್ಯವನ್ನು ಹೇಳುತ್ತಾರೆ. ನಾವು ಅದನ್ನು ನಿರಾಕರಿಸುತ್ತೇವೆಂದು ಅದ್ವೈತಿಗಳು ಉತ್ತರಿಸಬೇಕು. ಆದರೆ ಸಾಂಖ್ಯರ ಪ್ರಕೃತಿಗೆ ಸ್ವಾತಂತ್ರ್ಯವನ್ನು ನಿರಾಕರಿಸಲು ಸಮಯಪಾದದಲ್ಲಿ ರಚನಾನುಪಪತ್ತ್ಯಧಿಕರಣವು ಮೀಸಲಾಗಿದೆ. ಇಲ್ಲಿ ಅದರ ನಿರಾಕರಣೆಯು ಅಪ್ರಸ್ತುತ. ಈ ಹಿಂದೆ 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಪ್ರಕೃತಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ್ದಾಗಿದೆ. ಆದ್ದರಿಂದ

ತೇಜೋಽಬನ್ನಾತ್ಮಕಂ ವಾಪಿ ಯದ್ಯುಪಾದಾನಮಿಷ್ಯತೇ ।
ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ ॥

ತೇಜೋಬನ್ನರೂಪವಾದ ಅನಾದಿಯಾದ ಭೂತಸೂಕ್ಷ್ಮವನ್ನೇ ಉಪಾದಾನಕಾರಣವೆಂದು ಹೇಳುವುದಾದರೆ, ಸಾಂಖ್ಯರು ಹೇಳುವಂತೆ ಪ್ರಧಾನವನ್ನೇ ಕಾರಣವೆಂದು ಒಪ್ಪಿದರೆ ಏನು ದೋಷ ಬರುತ್ತದೆ?

'ಜ್ಯೋತಿರುಪಾಕ್ರಮಂ' ಎಂಬುದು ಅದ್ವೈತಿಗಳು ಸ್ವೀಕರಿಸಿದ ಅಪಪಾಠ. ಅಜಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ವ್ಯರ್ಥ. ಅದ್ವೈತಿಗಳ ಪ್ರಕಾರ 'ತೇಜ ಆದಿಃ' ಎಂದೇ ಸೂತ್ರವಿರಬೇಕು. ಇತ್ಯಾದಿ ಹಲವು ದೋಷಗಳು ಅದ್ವೈತಿಗಳನ್ನು ಬಾಧಿಸುತ್ತವೆ.

## ರಾಮಾನುಜರ ಅಧಿಕರಣ ವಿಮರ್ಶೆ

ರಾಮಾನುಜರು ಚಮಸಸೂತ್ರಕ್ಕೆ ಅದ್ವೈತಿಗಳಂತೆ ವ್ಯಾಖ್ಯಾನ ಮಾಡುತ್ತಾರೆ. ಆದರೆ 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರಕ್ಕೆ ಅದ್ವೈತಿಗಳಿಗಿಂತ ಬೇರೆಯಾದ ವ್ಯಾಖ್ಯಾನವನ್ನು ಮಾಡಿದ್ದಾರೆ. 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎಂಬ ಶ್ರುತಿಯಲ್ಲಿ ಪ್ರಸಕ್ತವಾದ ಅಜಾಶಬ್ದವು ಪ್ರಕೃತಿಯನ್ನು ಹೇಳುತ್ತಿದೆ. ಈ ಪ್ರಕೃತಿಯು ಬ್ರಹ್ಮನಿಂದ ಸೃಜ್ಯವಾಗಿದೆ. ಜ್ಯೋತಿರುಪಕ್ರಮಾ' ಎಂಬ ಸೂತ್ರದಲ್ಲಿರುವ ಜ್ಯೋತಿ ಎಂಬ ಶಬ್ದಕ್ಕೆ ಬ್ರಹ್ಮನೆಂದರ್ಥ. ಉಪಕ್ರಮ ಶಬ್ದಕ್ಕೆ ಕಾರಣವುಳ್ಳವನು ಎಂದರ್ಥ. ತೈತ್ತಿರೀಯಶಾಖೆಯಲ್ಲಿ 'ಅಣೋರಣೀಯಾನ್' ಇತ್ಯಾದಿಯಾಗಿ ಬ್ರಹ್ಮನ ಬಗ್ಗೆ ಹೇಳುತ್ತಾ ಮುಂದೆ 'ಅಜಾಮೇಕಾಮ್' ಎಂಬ ಶ್ರುತಿಯು ಬ್ರಹ್ಮನಿಂದ ಸೃಜ್ಯವಾದ ಪದಾರ್ಥಗಳನ್ನು ಹೇಳುವ ವಾಕ್ಯಗಳ ನಡುವೆ ಪ್ರಸಕ್ತವಾಗಿದೆ. ಆದ್ದರಿಂದ ಪ್ರಕೃತಿಯೂ ಕೂಡ ಬ್ರಹ್ಮನಿಂದ ಹುಟ್ಟಿದೆಯೆಂದು ಸೂತ್ರದ ಅಭಿಪ್ರಾಯವೆನ್ನುತ್ತಾರೆ.

ಇದೂ ಸಹ ತಪ್ಪು. ಏಕೆಂದರೆ 'ಅಜಾಮೇಕಾಮ್'ಎಂಬ ವಾಕ್ಯವನ್ನು ನೋಡಿದಾಗ ಪ್ರಕೃತಿಯು ಬ್ರಹ್ಮನಿಂದ ಹುಟ್ಟಿದೆಯೆಂದು ಸರ್ವಥಾ ತಿಳಿಯುತ್ತಿಲ್ಲ. ಪ್ರಕರಣಬಲದಿಂದ ತಿಳಿಯುತ್ತದೆಂದು ಹೇಳುವುದು ಸರ್ವಥಾ ಯುಕ್ತವಲ್ಲ. ಏಕೆಂದರೆ 'ಸೃಜಮಾನಾಃ' ಇತ್ಯಾದಿ ಶಬ್ದಗಳನ್ನು ಗಮನಿಸಿದಾಗ ಪ್ರಕೃತಿಯಲ್ಲಿ ಉಪಾದಾನತ್ವದ ಆಕಾಂಕ್ಷೆಯೇ ಬರುತ್ತಿದೆ ಹೊರತು, ಪ್ರಕೃತಿಯು ಯಾರಿಂದ ಹುಟ್ಟಿದೆ ? ಎಂಬ ಆಕಾಂಕ್ಷೆ ಬರುತ್ತಿಲ್ಲ. ಪ್ರಕೃತಿಯಿಂದ ಯಾವ ಪದಾರ್ಥಗಳು ಹುಟ್ಟಿವೆ ಎಂಬ ಆಕಾಂಕ್ಷೆ ಬರುತ್ತಿದೆ. ಆದ್ದರಿಂದ ಸಮಸ್ತ ಜಗತ್ತಿಗೆ ಪ್ರಕೃತಿ ಕಾರಣವೆಂದು ಶ್ರುತಿ ಹೇಳಬಹುದೇ ಹೊರತು, ಪ್ರಕೃತಿಯು ಬ್ರಹ್ಮನಿಂದ ಹುಟ್ಟಿದೆ ಎಂದು ಈ ವಾಕ್ಯದಿಂದ ಸರ್ವಥಾ ತಿಳಿಯುವುದಿಲ್ಲ. ಆದ್ದರಿಂದ ಇವರ ಈ ಸೂತ್ರಾರ್ಥಗಳೂ ಕೂಡ ಅತ್ಯಂತ ಅಯುಕ್ತವಾಗಿವೆ.

## ನಸಂಖ್ಯೋಪಸಂಗ್ರಹಾಧಿಕರಣ

### ಪ್ರಸಿದ್ಧ ಪ್ರವೃತ್ತಿನಿಮಿತ್ತವುಳ್ಳ ಶಬ್ದಗಳ ಸಮನ್ವಯಕ್ಕಾಗಿ ನ ಸಂಖ್ಯೋಪಸಂಗ್ರಹಾಧಿಕರಣ

ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವು ಸರ್ವಥಾ ಕೂಡುವುದಿಲ್ಲ. ಒಂದುವೇಳೆ ಅಪವಾದಕವಿದ್ದರೆ ಈ ನಿಯಮವನ್ನು ಬಿಡಬಹುದಿತ್ತು. ಅಂತಹ ಅಪವಾದಗಳೂ ಕೂಡ ಏನೂ

ಇರುವುದಿಲ್ಲ. 'ಪ್ರಾಣಸ್ಯ ಪ್ರಾಣಮ್ ಚಕ್ಷುಷಚಕ್ಷುಃ' ಇತ್ಯಾದಿ ವಾಕ್ಯಶೇಷವನ್ನೇ ಅಪವಾದಕವೆನ್ನಬೇಕು. ಆದರೆ ಈ ವಾಕ್ಯಶೇಷವು ಅಪವಾದಕವಾಗುವುದಿಲ್ಲ. ಏಕೆಂದರೆ ವಾಕ್ಯಶೇಷದಲ್ಲಿರುವ 'ಪ್ರಾಣಸ್ಯ' ಎಂಬ ಷಷ್ಠೀವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪಂಚ ಜನಾ ಆಕಾಶಶಬ್ದಗಳಿಂದ ಉಕ್ತನಾಗಿದ್ದಾನೆಂದು ಹೇಳಬೇಕು. ಆವಾಗ ದ್ವಿತೀಯಾವಿಭಕ್ತ್ಯಂತವಾದ ಪ್ರಾಣಾದಿಶಬ್ದಗಳಿಂದ ನಿರ್ದಿಷ್ಟನಾದ ವ್ಯಕ್ತಿಯು 'ಯಸ್ಮಿನ್' ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಆವಾಗ ಬ್ರಹ್ಮರಲ್ಲಿ ಆಶ್ರಿತರಾದ ಪ್ರಾಣಾದಿಗಳು ಭಿನ್ನರೇ ಆಗುತ್ತಾರೆ. ಆವಾಗ 'ಯಸ್ಮಿನ್' ಎಂಬ ಶಬ್ದದಿಂದ ಬ್ರಹ್ಮನನ್ನು ತೆಗೆದುಕೊಂಡಂತಾಯಿತು. ಪಂಚ ಜನಾದಿ ಶಬ್ದಗಳಿಂದ ಪ್ರಾಣಾದಿಗಳನ್ನು ತೆಗೆದುಕೊಂಡಂತಾಯಿತು. ಇವರಿಬ್ಬರಿಗೆ ಭೇದವಿರುವುದರಿಂದ ವಾಕ್ಯಶೇಷವು ಅಪವಾದಕವಾಗುವುದಿಲ್ಲ. ಹಾಗಾಗಿ ಪಂಚ ಜನ ಶಬ್ದಕ್ಕೆ ಬ್ರಹ್ಮನೆಂಬ ಅರ್ಥವನ್ನು ಹೇಳಲು ಸಾಧ್ಯವಿಲ್ಲ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

'ಪ್ರಾಣಸ್ಯ ಪ್ರಾಣಮ್' ಎಂಬಲ್ಲಿರುವ ಷಷ್ಠೀವಿಭಕ್ತ್ಯಂತವಾದ ಪದದಿಂದ ಯಾರು ನಿರ್ದಿಷ್ಟ-ರಾಗಿದ್ದಾರೋ, ಅಂತಹ ಪ್ರಾಣಾದಿಗಳನ್ನು ನಾವು ಪಂಚ ಜನಶಬ್ದದಿಂದ ವಿವಕ್ಷಿಸುತ್ತೇವೆ. ಮತ್ತು ಅಂತಹ ಪ್ರಾಣಾದಿಗಳಿಗೂ ಪ್ರಾಣತ್ವವನ್ನು ನೀಡುವಂತಹ ಪರಮಾತ್ಮನನ್ನೂ ಕೂಡ ಪಂಚ ಜನಶಬ್ದದಿಂದ ವಿವಕ್ಷಿಸುತ್ತೇವೆ. ಆದ್ದರಿಂದ ಪಂಚ ಜನ ಶಬ್ದವು ದ್ವಿತೀಯಾಂತವಾದ ಪ್ರಾಣಾದಿಶಬ್ದಗಳಿಂದಲೂ ಏಕಾರ್ಥವನ್ನು ಹೊಂದಿದೆ. ಪಂಚ ಜನಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ ವಾಕ್ಯಶೇಷವೇ ಅಪವಾದಕವಾಗುವುದರಿಂದ ಅಭೇದವಿದ್ದರೂ ಆಧಾರಾಧೇಯಭಾವವನ್ನು ಹೇಳಬಹುದೆಂದು ಸಿದ್ಧವಾಗುತ್ತದೆ. ಬ್ರಹ್ಮನೇ ಪಂಚ ಜನ ಶಬ್ದದ ಅರ್ಥನಾಗಿರುತ್ತಾನೆ. ಇಷ್ಟು ಈ ಅಧಿಕರಣದ ಸಿದ್ಧಾಂತ.

### ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡುವುದರಿಂದ ಪೂರ್ವಪಕ್ಷದ ಉದಯವಾಗುತ್ತದೆ

ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - 'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಬಹುತ್ವಸಂಖ್ಯೆಯನ್ನು ಹೇಳುವ 'ಪಂಚ' 'ಜನಾಃ' ಮೊದಲಾದ ಶಬ್ದಗಳು ಇರುತ್ತವೆ. ಈ ಶಬ್ದಗಳು ಒಬ್ಬನೇ ಬ್ರಹ್ಮನನ್ನು ಹೇಳಲು ಸಾಧ್ಯವಿಲ್ಲ. ಬಹುತ್ವವಾಚಕವಾದ ಈ ಶಬ್ದಗಳು ಬಹುಜನರನ್ನೇ ಹೇಳಬೇಕು ಹೊರತು, ಒಬ್ಬನನ್ನು ಹೇಳಲು ಸಾಧ್ಯವಿಲ್ಲ. ಮತ್ತು ಆಧಾರಾಧೇಯಭಾವವೂ ಕೂಡ ಈ ಶ್ರುತಿಯಿಂದಲೇ ತಿಳಿಯುತ್ತಿದೆ. ಒಬ್ಬನೇ ಬ್ರಹ್ಮನಲ್ಲಿ ಆಧಾರಾಧೇಯಭಾವವೂ ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ವಾಕ್ಯಶೇಷದಲ್ಲಿ ಪ್ರಸಕ್ತರಾದ ಪ್ರಾಣಾದಿಗಳೇ ಈ ಶ್ರುತಿಗಳಿಂದ ಪ್ರತಿಪಾದ್ಯರಾಗುತ್ತಾರೆ ಹೊರತು, ಬ್ರಹ್ಮನಾಗುವುದಿಲ್ಲ.

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯ ಸಮನ್ವಯಕ್ಕಾಗಿ ಈ ಅಧಿಕರಣವು ಪ್ರಾರಂಭವಾಗಬೇಕಾಗಿಲ್ಲ. ಏಕೆಂದರೆ ಹಿಂದಿನ ತದಧೀನತ್ವಾಧಿಕರಣದಿಂದಲೇ ಇಲ್ಲಿರುವ ಶಬ್ದಗಳ ಸಮನ್ವಯವೂ ಕೂಡ ಶ್ರೀಹರಿಯಲ್ಲಿ ಸಿದ್ಧವಾಗುತ್ತದೆ. ಬಹುತ್ವವೆಂಬ ಪ್ರವೃತ್ತಿನಿಮಿತ್ತವು ಪರಮಾತ್ಮನ ಅಧೀನವಾದ್ದರಿಂದ ತದ್ವಾಚಕವಾದ 'ಪಂಚ' ಮೊದಲಾದ ಶಬ್ದಗಳು ಪರಮಾತ್ಮನಲ್ಲಿ

ಸಮನ್ವಯಗೊಳ್ಳುತ್ತವೆಂದು ಹೇಳಬಹುದೆಂಬ ಪ್ರಶ್ನೆಯು ಬರುತ್ತದೆ. ಆದರೆ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ, ಈ ಅಧಿಕರಣದ ಪೂರ್ವಪಕ್ಷ ಹೊರಟಿದೆ. ಎಲ್ಲೆಡೆಯೂ ತದಧೀನತ್ವನ್ಯಾಯವನ್ನು ವಿವಕ್ಷಿಸುವುದಾದಲ್ಲಿ ಆಯಾ ಶಬ್ದಗಳಿಂದ ಪ್ರತಿಪಾದ್ಯವಾದ ಗುಣಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಲು ಸಾಧ್ಯವೇ ಆಗುವುದಿಲ್ಲ. ಇಂದ್ರಾದಿಶಬ್ದಗಳ ಸಮನ್ವಯದ ವಿಷಯದಲ್ಲಿಯೂ ತದಧೀನತ್ವನ್ಯಾಯವನ್ನೇ ವಿವಕ್ಷಿಸುವುದಾದಲ್ಲಿ ಪರಮೈಶ್ವರ್ಯಾದಿ ಗುಣಗಳೂ ಕೂಡ ಶ್ರೀಹರಿಯಲ್ಲಿ ಸಿದ್ಧವಾಗದಿರುವ ಪ್ರಸಂಗ ಬರುತ್ತದೆ. ಆದ್ದರಿಂದ ಪ್ರತಿಯೊಂದು ಅಧಿಕರಣಗಳಲ್ಲಿಯೂ ತದಧೀನತ್ವನ್ಯಾಯವನ್ನು ಮುಚ್ಚಿಟ್ಟು ಪೂರ್ವಪಕ್ಷ ಮಾಡಬೇಕು. 'ದುಃಖೀ', 'ಅವರ' ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡುವಾಗ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಲು ಸಾಧ್ಯವೇ ಆಗುವುದಿಲ್ಲ. ಅನಿವಾರ್ಯವಾಗಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವನ್ನು ಅನುಸರಿಸಬೇಕಾಗುತ್ತದೆ. ಆದರೆ ಉಳಿದ ಅಧಿಕರಣಗಳಲ್ಲಿ ಅಂತಹ ಅನಿವಾರ್ಯತೆ ಇರುವುದಿಲ್ಲವೆಂಬುದನ್ನು ಗಮನಿಸಬೇಕು. ಅಥವಾ ಸ್ವಾತಂತ್ರ್ಯವೆಂಬುದನ್ನು ಪ್ರವೃತ್ತಿನಿಮಿತ್ತವೆನ್ನುವುದಾದರೆ ಅನೇಕ ಜನರನ್ನು ವಶಮಾಡಿಕೊಂಡ ರಾಜನಲ್ಲಿಯೂ ಬಹುತ್ವವ್ಯವಹಾರವು ಬರಬೇಕಾಗುತ್ತದೆ. ಒಬ್ಬನೇ ರಾಜನನ್ನು ಬಹುರಾಜನೆಂದು ಎಲ್ಲರೂ ಕರೆಯಬೇಕಾಗುತ್ತದೆ. ಯಾರೂ ಸಹ ಲೋಕದಲ್ಲಿ ಒಬ್ಬ ರಾಜನನ್ನು ಬಹುರಾಜನೆಂದು ಕರೆಯುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಸ್ವಾತಂತ್ರ್ಯವನ್ನೇ ಆಕ್ಷೇಪ ಮಾಡಿ ಪೂರ್ವಪಕ್ಷವನ್ನೂ ಕೂಡ ಮಾಡಬಹುದು. ಆದ್ದರಿಂದ ಈ ಅಧಿಕರಣವು ತದಧೀನತ್ವನ್ಯಾಯದಿಂದ ಗತಾರ್ಥವಾಗುವುದಿಲ್ಲ.

## ಗುಹಾಧಿಕರಣದಿಂದಲೂ ಗತಾರ್ಥವಲ್ಲದ ಪೂರ್ವಪಕ್ಷವು ಸುದೃಢವಾಯಿತು

ತದಧೀನತ್ವನ್ಯಾಯದಿಂದ ಈ ಅಧಿಕರಣದ ಪ್ರಮೇಯವು ಗತಾರ್ಥವಾಗದಿದ್ದರೂ ಗುಹಾಧಿಕರಣದಿಂದ ಗತಾರ್ಥವಾಗಿದೆಯಲ್ಲವೇ? ಎಂಬುದಾಗಿ ಮತ್ತೊಂದು ಗೊಂದಲ ಹುಟ್ಟುತ್ತದೆ. ಏಕೆಂದರೆ ಗುಹಾಧಿಕರಣದಲ್ಲಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಸೂತ್ರದಿಂದ 'ದ್ವಿತ್ವ' ಮೊದಲಾದ ಧರ್ಮಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಏಕತ್ವಕ್ಕೆ ವಿರೋಧಿಯಾದ ದ್ವಿತ್ವವು ಬ್ರಹ್ಮನಲ್ಲಿ ಇದೆ ಎಂದು ಸಿದ್ಧವಾದ ಮೇಲೆ ಏಕತ್ವಕ್ಕೆ ವಿರೋಧಿಯಾದ ಬಹುತ್ವವೂ ಕೂಡ ಇರಲೇಬೇಕು. ಹೀಗೆ ಅನೇಕತ್ವ ಸಂಖ್ಯೆಯ ಸಮನ್ವಯವನ್ನು ಗುಹಾಧಿಕರಣದಲ್ಲಿ ಸಾಧಿಸಿದ ಮೇಲೆ ಪುನಃ ಈ ಅಧಿಕರಣದಲ್ಲಿಯೂ ಅದರ ಸಮನ್ವಯವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಅನೇಕತ್ವ ಸಂಖ್ಯೆಯು ಭಿನ್ನವೃತ್ತಿಯಾಗಿದೆ ಎಂಬ ನಿಯಮವು ಔತ್ಸರ್ಗಿಕವಾದದ್ದು. ಹೀಗೊಪ್ಪದಿದ್ದರೆ 'ದ್ವಾಸುಪರ್ಣಾ' ಎಂಬ ಶ್ರುತಿಯೂ ಕೂಡ ಭೇದವನ್ನು ಸಮರ್ಥನೆ ಮಾಡುವುದಿಲ್ಲ ಎಂದಾಗಬೇಕಾದೀತು. ಆದ್ದರಿಂದ ಯಾವ ಶ್ರುತಿಯು ಅನೇಕತ್ವ ಸಂಖ್ಯೆಯನ್ನು ಹೇಳುತ್ತಿದೆಯೋ, ಅದು ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕಾಗುತ್ತದೆ. ಆದರೆ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವೇ ಮೊದಲಾದ ಬಾಧಕಪ್ರಮಾಣಗಳಿರುವುದರಿಂದ ಈ ನಿಯಮವನ್ನು ಕೈಬಿಡಲಾಗಿತ್ತು. ಆದರೆ 'ಯಸ್ಮಿನ್ ಪಂಚ ಪಂಚ

ಜನಾಃ' ಎಂಬ ಪ್ರಕೃತ ವಿಷಯವಾಕ್ಯದಲ್ಲಿ ಅಂತಹ ಬಾಧಕಗಳೇನೂ ಕಾಣಿಸುತ್ತಿಲ್ಲ. ಆದ್ದರಿಂದ ಅನೇಕತ್ವ ಸಂಖ್ಯೆಯನ್ನು ಈ ಶ್ರುತಿಯು ಪ್ರತಿಪಾದನೆ ಮಾಡುವುದರಿಂದ ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕು. ವಾಕ್ಯಶೇಷದಲ್ಲಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ಶ್ರುತವಾಗಿದೆ. ಅಲ್ಲಿರುವ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಅವನೇ ಪ್ರಕೃತ 'ಯಸ್ಮಿನ್' ಎಂಬ ಸಪ್ತಮ್ಯಂತವಾದ ಪದದಿಂದ ಪ್ರತಿಪಾದ್ಯನಾಗಿದ್ದಾನೆ. 'ಪ್ರಾಣಸ್ಯ' ಎಂಬ ಷಷ್ಠ್ಯಂತವಾದ ಪದಗಳಿಂದ ನಿರ್ದಿಷ್ಟರಾದ ಪ್ರಾಣಾದಿಗಳು ಈ ವಿಷಯವಾಕ್ಯದಲ್ಲಿ 'ಪಂಚ ಜನಾ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆಂದು ಒಪ್ಪಬೇಕು. ಕಾರಣವೇನೆಂದರೆ ಬಹುತ್ವಸಂಖ್ಯೆಯು ಬ್ರಹ್ಮನಲ್ಲಿ ಅಯುಕ್ತವಾಗಿದೆ. ಸ್ವಾಶ್ರಿತತ್ವವೂ ಕೂಡ ಬ್ರಹ್ಮನಲ್ಲಿ ಅಯುಕ್ತವಾಗಿದೆ. ಈ ಎರಡು ಕಾರಣಗಳಿಂದ ಪ್ರಾಣಾದಿಗಳಿಗೆ ಆಶ್ರಿತನಾದ ಬ್ರಹ್ಮನು 'ಪಂಚ ಜನಾ' ಮೊದಲಾದ ಬಹುತ್ವಸಂಖ್ಯಾವಾಚಕ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲವೆಂಬ ಪೂರ್ವಪಕ್ಷವು ಉದಯವಾಗುತ್ತದೆ.

### ಒಬ್ಬನೇ ಪರಮಾತ್ಮನಲ್ಲಿ ಪಂಚತ್ವಸಂಖ್ಯೆಯು ಯುಕ್ತವಾಗುತ್ತದೆ

ದ್ವಿತೀಯಾಂತವಿನಿರ್ದಿಷ್ಟಂ ಪ್ರಧಾನಂ ಪ್ರಾಣಪೂರ್ವಕಮ್ ।
ಅರ್ಥತಃ ಶಬ್ದತಶ್ಚೈವ ನತು ಷಷ್ಠ್ಯಂತಶಬ್ದಿತಮ್ ॥

'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯಲ್ಲಿ 'ಪ್ರಾಣಮ್' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪ್ರಧಾನನಾಗಿದ್ದಾನೆ. ಅರ್ಥದಿಂದ ಮತ್ತು ಶಬ್ದದಿಂದಲೂ ಷಷ್ಠ್ಯಂತವಾದ 'ಪ್ರಾಣಸ್ಯ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ.

ಏಕತ್ರ ಹಿ ಯಥಾ ಪಂಚ ಸಂಖ್ಯಾ ನೈವೋಪಪದ್ಯತೇ ।
ತಥಾऽನಂತೇಷು ಪಂಚತ್ವಸಂಖ್ಯಾಪಿ ನಚ ಯುಜ್ಯತೇ ॥೧॥

ಒಬ್ಬನೇ ಬ್ರಹ್ಮನಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲವೆಂದು ಹೇಗೆ ಹೇಳುತ್ತೀರೋ, ಅದರಂತೆ ಅನಂತ ಪ್ರಾಣರಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲ ಎಂಬ ಪ್ರತಿಬಂದಿಯು ನಿಮಗೂ ಇರುತ್ತದೆ.

ಆಧಾರಾಧೇಯಭಾವೋ ಹಿ ಭೇದಾಭಾವೇऽಪಿ ಯುಜ್ಯತೇ ।
ಕಾಲಃ ಸದಾऽಸ್ತಿ ದೇಶೋऽಸ್ತಿ ಸರ್ವತ್ರೇತ್ಯಾದಿಭಾನತಃ ॥೧॥

ಭೇದವಿಲ್ಲದಿದ್ದರೂ ಕೂಡ ಬ್ರಹ್ಮನ ವಿಷಯದಲ್ಲಿ ಆಧಾರಾಧೇಯಭಾವವು ಯುಕ್ತವೇ ಆಗುತ್ತದೆ. 'ಕಾಲಃ ಸದಾऽಸ್ತಿ, ದೇಶಃ ಸರ್ವತ್ರ ಅಸ್ತಿ' ಕಾಲವು ಯಾವಾಗಲೂ ಇರುತ್ತದೆ. ದೇಶವು ಎಲ್ಲೆಡೆಯೂ ಇದೆ. ಇತ್ಯಾದಿ ಪ್ರಯೋಗಗಳೇ ಈ ವಿಷಯದಲ್ಲಿ ಉದಾಹರಣೆ.

ಆದ್ದರಿಂದ ಜಗತ್ತಿನಲ್ಲಿ ಒಟ್ಟು ಎಷ್ಟು ನಿಯಮ್ಯ ಪದಾರ್ಥಗಳಿವೆಯೋ, ಅಷ್ಟೇ ನಿಯಾಮಕವಾದ ಭಗವದ್ರೂಪಗಳೂ ಕೂಡ ಇರುತ್ತವೆ. ಆದ್ದರಿಂದ ಶರೀರದಲ್ಲಿ ಪಂಚಪ್ರಾಣಗಳು ಇವೆ. ಪಂಚಪ್ರಾಣಗಳೆಂಬ

ನಿಯಮ್ಯಪದಾರ್ಥಗಳು ಐದುಸಂಖ್ಯೆಯಲ್ಲಿರುವುದರಿಂದ ತನ್ನಿಯಾಮಕವಾದ ಭಗವದ್ರೂಪಗಳೂ ಕೂಡ ಐದುಸಂಖ್ಯೆಯಲ್ಲಿಯೇ ಇರುತ್ತವೆ.

ಶರೀರದಲ್ಲಿರುವ 'ಆಕಾಶ' ಎಂಬ ನಿಯಾಮಕ ರೂಪವು ಆರನೆಯದಾದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶಶ್ಚ ಪ್ರತಿಷ್ಠಿತಃ' ಎಂಬುದು ಸಾಧುವಾಗುತ್ತದೆ.

ಶರೀರವು ಪಂಚಪ್ರಾಣಗಳಿಗೆ ಆಧಾರವಾಗಿದೆ. ಪಂಚಪ್ರಾಣಗಳು ಆಧೇಯವಾಗಿವೆ. ಶರೀರದಲ್ಲಿರುವ ನಿಯಾಮಕ ಭಗವದ್ರೂಪವು ಆಧಾರವೆಂದು, ಆಧೇಯವಾದ ಪಂಚಪ್ರಾಣಗಳಲ್ಲಿರುವ ರೂಪಗಳು ಆಧೇಯವೆಂದು ಕರೆಸಿಕೊಳ್ಳುತ್ತವೆ. ಹೀಗೆ ಒಬ್ಬನೇ ಭಗವಂತನ ರೂಪಗಳಿಗೆ ಆಧಾರಾಧೇಯಭಾವವು ಯುಕ್ತವಾಗುತ್ತದೆ.

ಇದನ್ನೇ ನ್ಯಾಯವಿವರಣದಲ್ಲಿ 'ಬಹುರೂಪತ್ವಾತ್ ಅಧಿಕರಣಾಧೇಯತ್ವಾದಿ ತಸ್ಯೈವ ಯುಜ್ಯತೇ' ಭಗವಂತನಿಗೆ ಬಹುರೂಪಗಳಿರುವುದರಿಂದ ಅಧಿಕರಣಭಾವ ಹಾಗೂ ಆಧೇಯಭಾವವು ಒಬ್ಬನಲ್ಲಿಯೇ ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

## ಅದ್ವೈತಿಗಳ ಅಧಿಕರಣ ವಿಮರ್ಶೆ

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಬೃಹದಾರಣ್ಯಕೋಪನಿಷತ್ತಿನ ವಾಕ್ಯವೇ ಈ ಅಧಿಕರಣದ ವಿಷಯ. ಈ ವಾಕ್ಯವು ಸಾಂಖ್ಯಸಿದ್ಧಾಂತದಲ್ಲಿ ಪ್ರತಿಪಾದನೆ ಮಾಡಲ್ಪಟ್ಟ ಇಪ್ಪತ್ತೈದು ತತ್ವಗಳನ್ನು ನಿರೂಪಣೆ ಮಾಡುತ್ತಿದೆ. ಶ್ರುತಿಯಲ್ಲಿ 'ಪಂಚ ಜನ' ಎಂಬ ಶಬ್ದವು ಸಮಾಸವನ್ನು ಹೊಂದಿದೆ. ಇನ್ನೊಂದು 'ಪಂಚ' ಶಬ್ದವು ಸಮಾಸವನ್ನು ಹೊಂದಿಲ್ಲ. ಸಮಾಸ ಹೊಂದಿರುವ ಪಂಚ ಜನ ಶಬ್ದಕ್ಕೆ ಐದು ತತ್ವಗಳು ಎಂದರ್ಥ. ಸಮಾಸ ಹೊಂದದ ಪಂಚ ಶಬ್ದಕ್ಕೆ ಐದು ಎಂದರ್ಥ. ಆದ್ದರಿಂದ ಐದೈದು ತತ್ವಗಳ ಐದರ ಗುಂಪು ಎಂಬರ್ಥವು ಇದರಿಂದ ದೊರೆಯುತ್ತದೆ. ಆದ್ದರಿಂದ ಇಪ್ಪತ್ತೈದು ತತ್ವಗಳನ್ನು 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಪ್ರಕೃತಿಯು ಶ್ರುತಿಪ್ರತಿಪಾದ್ಯವಾಗಿದೆ ಎಂದು ಪೂರ್ವಪಕ್ಷ.

ಈ ವಾಕ್ಯವು ಇಪ್ಪತ್ತೈದು ತತ್ವಗಳನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಯಾವುದೇ ಶ್ರುತಿಯಲ್ಲಿ ದ್ವಿತ್ವಾದಿ ಸಂಖ್ಯೆಗಳ ನಿರ್ದೇಶವಿರಬೇಕೆಂದರೆ ಉಪಸಂಗ್ರಾಹಕ ಧರ್ಮಗಳನ್ನು ಹೇಳಲೇಬೇಕಾಗುತ್ತದೆ. ಪ್ರಕೃತ ಅಂತಹ ಉಪಸಂಗ್ರಾಹಕ ಧರ್ಮಗಳಿಲ್ಲದ ಕಾರಣ ಈ ಶ್ರುತಿಯು ಇಪ್ಪತ್ತೈದು ತತ್ವವನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಸರ್ವಥಾ ಹೇಳಲಾಗದು. ಏಕೆಂದರೆ 'ನಾನಾಭಾವಾತ್' ಈ ತತ್ವಗಳಲ್ಲಿ ಬೇರೆರೀತಿಯಾದ ಗುಂಪುಗಳನ್ನು ಹೇಳಬಹುದೇ ಹೊರತು, ಐದರ ಐದು ಗುಂಪುಗಳನ್ನು ಹೇಳಲು ಸಾಧ್ಯವಿಲ್ಲ. ಇಪ್ಪತ್ತೈದು ತತ್ವಗಳ ಮಧ್ಯದಲ್ಲಿ ಅಂತಹ ಯಾವುದೇ ಸಂಗ್ರಾಹಕ ಧರ್ಮಗಳು ಕಾಣಿಸುತ್ತಿಲ್ಲ. 'ಅತಿರೇಕಾಚ್ಚ' = ಆತ್ಮ ಹಾಗೂ ಆಕಾಶಗಳನ್ನು ಇಪ್ಪತ್ತೈದು ತತ್ವಗಳಿಗಿಂತ ಅತಿರಿಕ್ತವಾಗಿ ಉಲ್ಲೇಖಿಸಲಾಗಿದೆ. ಆದ್ದರಿಂದಲೂ ಇಪ್ಪತ್ತೈದು ಎಂಬ ಸಂಖ್ಯೆಯನ್ನು ನಿರ್ವಹಣೆ ಮಾಡಲು ಬರುವುದಿಲ್ಲ. ಆದ್ದರಿಂದ ಈ ವಾಕ್ಯವು ಸಾಂಖ್ಯರು ಹೇಳುವ ಇಪ್ಪತ್ತೈದು ತತ್ವಗಳನ್ನು ಪ್ರತಿಪಾದನೆ ಮಾಡುತ್ತಿಲ್ಲ. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ಅಧಿಕರಣ ಶರೀರ ಅಸಾಧುವಾಗಿದೆ.

ಪಂಚವಿಂಶತಿತತ್ವಾನಿ ಶ್ರುತಿಸ್ಮೃತಿಸಮಾಜತಃ ।
ಪ್ರಮಿತಾನ್ಯಪಲಪ್ಯಂತೇ ಕಥಂ ವೈದಿಕಮಾನಿನಾ ॥೧॥

ಇಪ್ಪತ್ತೈದು ತತ್ವಗಳು ಶ್ರುತಿ ಹಾಗೂ ಸ್ಮೃತಿಗಳೆಂಬ ಸಮಾಜದಿಂದ ಪ್ರಮಿತವಾಗಿರುವಾಗ ವೈದಿಕತತ್ವಗಳಿಗೆ ಮಾನ್ಯತೆಯನ್ನು ನೀಡುವ ನೀನು ಹೇಗೆ ತಾನೇ ಅಪಲಾಪ ಮಾಡುವಿ? ಮತ್ತು ಪಂಚವಿಂಶತಿ ತತ್ವಗಳೇ ಅಪ್ರಾಮಾಣಿಕ ಎಂದು ಅದ್ವೈತಿಗೆ ಹೇಳಲಾಗದು.

'ತಂ ಷಡ್ವಿಂಶಮಿತಿ ಪ್ರಾಹುಃ', 'ಪಂಚಭಿಃ ಪಂಚಭಿರ್ಬ್ರಹ್ಮ' ಇವೇ ಮೊದಲಾದ ಶ್ರುತಿ-ಸ್ಮೃತಿಗಳು ಅನೇಕ ಬಾರಿ ತತ್ವಗಳನ್ನು ಪ್ರತಿಪಾದನೆ ಮಾಡುತ್ತಿವೆ. ಇನ್ನು ಈ ವಾಕ್ಯವು ತತ್ವಪರವಲ್ಲವೆನ್ನಬೇಕು. ಹಾಗೇ ಹೇಳಿದ ಮಾತ್ರದಿಂದ ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವವೇ ಇಲ್ಲವೆಂಬ ಸಮರ್ಥನೆಯನ್ನು ಮಾಡಲಾಗದು. ಸಾಂಖ್ಯರು ಹೇಳುವ ಇಪ್ಪತ್ತೈದು ತತ್ವಗಳು ಎಲ್ಲಾ ವೇದಾಂತಿಗಳೂ ಕೂಡ ಪ್ರಾಮಾಣಿಕವೆಂದು ಒಪ್ಪಲೇಬೇಕು. ಹಾಗೊಪ್ಪದಿದ್ದರೆ ಸೂತ್ರಕಾರರ ಮಾತಿನಿಂದಲೇ ವಿರೋಧ ಬರುತ್ತದೆ. ಭಾಗವತದ ತೃತೀಯಸ್ಕಂಧದಲ್ಲಿ 'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ । ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ' ಎಂದು ಪುರುಷನನ್ನು ಬಿಟ್ಟು ಇಪ್ಪತ್ನಾಲ್ಕು ತತ್ವಗಳನ್ನು ಪ್ರತಿಪಾದನೆ ಮಾಡಿದ್ದಾರೆ. ಆದ್ದರಿಂದ ಇಪ್ಪತ್ತೈದು ತತ್ವಗಳು ಪ್ರಾಮಾಣಿಕವಾಗಿದ್ದರೂ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಬೃಹದಾರಣ್ಯಕದ ಈ ವಾಕ್ಯದಲ್ಲಿ ತತ್ವಗಳು ಪ್ರತಿಪಾದ್ಯವಾಗಿಲ್ಲ ಎಂದಷ್ಟೇ ಹೇಳಬೇಕು. ಹೀಗೆ ಹೇಳಿದಾಗ ಏನೂ ಲಾಭವಾಗುವುದಿಲ್ಲ. ಏಕೆಂದರೆ ಸಾಂಖ್ಯರು ಯಾವ ಪ್ರಕೃತಿಯನ್ನು ಶಬ್ದಪ್ರತಿಪಾದ್ಯವೆನ್ನುತ್ತಾರೋ, ಅದನ್ನು ಅಲ್ಲಗಳೆಯಲು ಈ ಸೂತ್ರಗಳು ಹೊರಟಿವೆ ಎಂಬುದು ನಿಮ್ಮ ಸಿದ್ಧಾಂತ. ಆದರೆ 'ಯಸ್ಮಿನ್ ಪಂಚ' ಎಂಬ ಶಬ್ದದಿಂದಷ್ಟೇ ಪ್ರತಿಪಾದ್ಯವಲ್ಲವೆಂದು ಹೇಳಿದಾಗ ಬೇರೊಂದು ಶಬ್ದದಿಂದ ಪ್ರತಿಪಾದ್ಯವಾಗಬಹುದು. ಮತ್ತು ಇಪ್ಪತ್ತೈದು ತತ್ವಗಳನ್ನು ಐದು ಗುಂಪುಗಳಲ್ಲಿ ವಿಂಗಡಿಸಲು ಯಾವುದೇ ಸಂಗ್ರಾಹಕ ಧರ್ಮಗಳಿಲ್ಲ ಎಂದು ಹೇಳಿದ್ದರು. ಇದೂ ಕೂಡ ಸರಿಯಲ್ಲ. ೧. ಪಂಚ ತನ್ಮಾತ್ರಗಳು, ೨. ಪಂಚಭೂತಗಳು, ೩. ಪಂಚಜ್ಞಾನೇಂದ್ರಿಯಗಳು, ೪. ಪಂಚಕರ್ಮೇಂದ್ರಿಯಗಳು, ೫. ಉಳಿದ ಐದು. ಹೀಗೆ ಐದೈದರ ಗುಂಪುಗಳನ್ನು ಸುಲಭವಾಗಿ ಮಾಡಬಹುದು.

### ಇಪ್ಪತ್ತೈದು ತತ್ವಗಳಲ್ಲಿ ಸಂಗ್ರಾಹಕಧರ್ಮಗಳಿವೆ

'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಚ್ಚ ಪ್ರತಿಷ್ಠಿತಃ' ಎಂಬ ವಾಕ್ಯವು ಪ್ರಕೃತಿಪರವಾದರೂ ಕೂಡ ಯಾವ ಬಾಧಕವಿರುವುದಿಲ್ಲ. ಇಪ್ಪತ್ತೈದರಲ್ಲಿ ಸಂಗ್ರಾಹಕಧರ್ಮಗಳಿರುವುದಿಲ್ಲ ಎಂಬುದು ಅವರ ವಾದ. ಏಕೆಂದರೆ ಆಕಾಶ ಹಾಗೂ ಆತ್ಮ ಈ ಎರಡು ತತ್ವಗಳನ್ನು ಶ್ರುತಿಯು ಪ್ರತ್ಯೇಕವಾಗಿ ಪರಿಗಣಿಸಿದ್ದರಿಂದ ಪೃಥಿವ್ಯಾದಿಗಳ ನಡುವೆ ಆಕಾಶವನ್ನು ಸೇರಿಸಲಾಗದು. ಆದ್ದರಿಂದ ಮುಂದಿನ ತತ್ವದಲ್ಲಿರುವ ಒಂದೊಂದು ತತ್ವಗಳನ್ನು ಹಿಂದಿನ ವಿಭಾಗಗಳಲ್ಲಿ ಸೇರಿಸಿಕೊಳ್ಳಬೇಕು. ಆವಾಗ ಐದೈದರ ಗುಂಪಿನಲ್ಲಿ ಸಂಗ್ರಾಹಕಧರ್ಮಗಳು ಭಗ್ನವಾಗುತ್ತವೆ ಎಂದು.

ಇದು ಸರಿಯಲ್ಲ. ಏಕೆಂದರೆ ಪೃಥಿವ್ಯಾದಿಗಳ ನಡುವೆ ಮನಸ್ಸನ್ನು ಸೇರಿಸಬೇಕು. ಆವಾಗ ಪೃಥಿವಿ, ಅಪ್, ತೇಜಸ್ಸು, ವಾಯು, ಮನಸ್ಸು ಇವುಗಳಲ್ಲಿ 'ವಿಶಂತ್ಯತಿರಿಕ್ತತ್ವ' ಎಂಬ ಸಂಗ್ರಾಹಕಧರ್ಮವು ಇರುತ್ತದೆ. ಸತ್ವ, ರಜಸ್ಸು, ತಮಸ್ಸು, ಮಹತ್ತತ್ವ, ಅಹಂಕಾರತತ್ವ ಈ ಐದರಲ್ಲಿ 'ಮನಃಪರತ್ವ' ಎಂಬ ಸಂಗ್ರಾಹಕಧರ್ಮವಿರುತ್ತದೆ. ಏಕೆಂದರೆ ಈ ಐದೂ ತತ್ವಗಳು ಮನುಷ್ಯರಿಗಿಂತ ಶ್ರೇಷ್ಠವಾಗಿವೆ. ಉಳಿದಂತೆ ಘ್ರಾಣಾದಿ ಐದು ಜ್ಞಾನೇಂದ್ರಿಯಗಳಲ್ಲಿ ಜ್ಞಾನೇಂದ್ರಿಯತ್ವವೆಂಬ ಸಂಗ್ರಾಹಕಧರ್ಮವು ಇದೆ. ವಾಗಿಂದ್ರಿಯವೇ ಮೊದಲಾದ ಐದರಲ್ಲಿ ಕರ್ಮೇಂದ್ರಿಯತ್ವ ಎಂಬ ಸಂಗ್ರಾಹಕಧರ್ಮವಿದೆ. ಶಬ್ದಾದಿಗಳಲ್ಲಿ ತನ್ಮಾತ್ರ ಎಂಬ ಸಂಗ್ರಾಹಕಧರ್ಮವಿದೆ. ಹೀಗೆ ಸಂಗ್ರಾಹಕಧರ್ಮಗಳನ್ನು ಹೇಳಲು ಬರುವಾಗ ಇಪ್ಪತ್ತೈದು ತತ್ವವನ್ನು ಈ ಶ್ರುತಿಯು ಪ್ರತಿಪಾದನೆ ಮಾಡುತ್ತಿಲ್ಲವೆಂಬ ಧೋರಣೆ ಸರಿಯಲ್ಲ.

## 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರದ ಶಾಂಕರ ಭಾಷ್ಯ ಹಾಗೂ ರಾಮಾನುಜ ಭಾಷ್ಯದ ನಿರಾಕರಣೆ

ಅವಾಂತರ ಸಂಖ್ಯೆಯಲ್ಲಿ ಉಪಸಂಗ್ರಾಹಕ ಧರ್ಮಗಳಿಲ್ಲದೇ ಸಂಖ್ಯೆಗಳನ್ನು ಹೇಳಬಾರದೆಂದು ನಿಯಮವಿಲ್ಲ. ಏಕೆಂದರೆ 'ಪಂಚಸಪ್ತಚ ವರ್ಷಾಣಿ ನವವರ್ಷ ಶತಕ್ರತುಃ' ಐದೇಳು ವರ್ಷಗಳ ಕಾಲ ಇಂದ್ರನು ಮಳೆ ಸುರಿಸಲಿಲ್ಲ. ಅಂದರೆ ಹನ್ನೆರಡುವರ್ಷಕಾಲ ಮಳೆಯಾಗಲಿಲ್ಲ ಎಂದರ್ಥ. ಮತ್ತು ಒಂಭತ್ತುಐದುವರ್ಷ ಕಾಲ ವ್ರತವನ್ನಾಚರಿಸಬೇಕು. ಅಂದರೆ ಹದಿನಾಲ್ಕುವರ್ಷಕಾಲ ವ್ರತವನಾಚರಿಸಬೇಕು ಎಂದರ್ಥ. ಮುಂತಾದ ಸ್ಥಳಗಳಲ್ಲಿ ಅವಾಂತರಸಂಖ್ಯೆಯಲ್ಲಿ ಸಂಗ್ರಾಹಕಧರ್ಮಗಳಿಲ್ಲದಿದ್ದರೂ ಮಹಾಸಂಖ್ಯೆಯಲ್ಲಿ ಅವಾಂತರಸಂಖ್ಯೆಯ ವಿಭಾಗ ಮಾಡಿದ್ದು ಕಾಣಿಸುತ್ತದೆ.

'ಪ್ರಾಣದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನವು ಸಾಧುವಲ್ಲ. 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷದಲ್ಲಿ ದ್ವಿತೀಯಾಂತ ಶಬ್ದಗಳಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳೇ ಪ್ರಧಾನರಾಗಿದ್ದಾರೆ. ಅವರನ್ನೇ ಸೂತ್ರದಲ್ಲಿಯೂ ಕೂಡ ಉಲ್ಲೇಖಿಸಬೇಕು. ಅದನ್ನು ಬಿಟ್ಟು ಅಪ್ರಧಾನರಾದ ಷಷ್ಠ್ಯಂತವಾದ ಶಬ್ದಗಳಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳನ್ನು ಸೂತ್ರದಲ್ಲಿ ಉಲ್ಲೇಖಿಸುವುದು ಅಸ್ವರಸವಾಗುತ್ತದೆ. ಮತ್ತು ಮೂರನೆಯ ಸೂತ್ರದಲ್ಲಿ ಏಕವಚನಾಂತವಾದ ಜ್ಯೋತಿಷಾ ಎಂಬ ಪದದಿಂದ ನಿರ್ದೇಶಿಸಲ್ಪಟ್ಟ ಜ್ಯೋತಿಸ್ಸನ್ನೇ ಪ್ರಧಾನವೆಂದು ಪರಿಗಣಿಸಿದಂತೆ ಇಲ್ಲಿಯೂ ಕೂಡ ದ್ವಿತೀಯಾವಿಭಕ್ತ್ಯಂತವಾದ ಪ್ರಾಣಾದಿಶಬ್ದದಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳನ್ನೇ ಉಲ್ಲೇಖಿಸುವುದು ಸ್ವರಸವಾಗುತ್ತದೆ. ಅದ್ವೈತಿಗಳಂತೆ ರಾಮಾನುಜರೂ ಕೂಡ ಎರಡನೆಯ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ. ಅದ್ವೈತಮತದ ನಿರಾಕರಣೆಯಿಂದ ಅವರ ಮತವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಮತ್ತು ರಾಮಾನುಜರಿಗೆ ಅಧಿಕವಾದ ದೋಷ ಬರುತ್ತದೆ. ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪೂರ್ವಮೀಮಾಂಸೆಯು ಪೂರ್ವಭಾಗವೆಂದು ಅವರು ಹೇಳುತ್ತಾರೆ. ಈ ಶಾಸ್ತ್ರದ ಪೂರ್ವಭಾಗವೆನಿಸಿದ ಪೂರ್ವಮೀಮಾಂಸೆಯಲ್ಲಿ 'ಸಂದಿಗ್ಧೇತು ವಾಕ್ಯಶೇಷಾತ್' ಎಂಬ ಅಧಿಕರಣವೇ ವಾಕ್ಯಶೇಷದ ಬಲದಿಂದ ಶ್ರುತ್ಯರ್ಥವನ್ನು ನಿರ್ಣಯ ಮಾಡಬೇಕೆಂದು ನಿರ್ಣಯಿಸಿದೆ. ಅದೇ

ವಿಷಯವನ್ನೇ 'ಪ್ರಾಣದಯೋ ವಾಕ್ಯಶೇಷಾತ್' ಎಂಬ ಅಧಿಕರಣವು ಸಮರ್ಥನೆ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ರಾಮಾನುಜರ ಪ್ರಕಾರ ಪುನರುಕ್ತಿದೋಷವು ಬರುತ್ತದೆ.

ಪೂರ್ವಮೀಮಾಂಸೆಯ ವಾಕ್ಯಶೇಷಾಧಿಕರಣದಿಂದ ಪುನರುಕ್ತಿ ಬರುವುದಿಲ್ಲವೆನ್ನಲು ರಾಮಾನುಜರು ತಮ್ಮ ಗ್ರಂಥಗಳಲ್ಲಿ ಸಮರ್ಥನೆಯನ್ನು ಮಾಡಿಕೊಂಡಿದ್ದಾರೆ. 'ತೇಜೋ ವೈ ಘೃತಮ್' ಎಂಬ ವಾಕ್ಯಶೇಷವು ಘೃತಪರವೆಂದು ನಿರ್ಣಯವಾದ್ದರಿಂದ 'ಅಕ್ತಾ' ಎಂಬುದನ್ನು ತುಪ್ಪದಿಂದ ಮಿಶ್ರಣಮಾಡಬೇಕು ಎಂಬರ್ಥದಲ್ಲಿ ನಿರ್ಣಯಿಸುತ್ತೇವೆ. ಆದರೆ ಪ್ರಕೃತ 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷವು ಇಂದ್ರಿಯಪರವೆಂದು ನಿರ್ಣಯವೇ ಆಗಿರುವುದಿಲ್ಲ. ಏಕೆಂದರೆ ಪ್ರಾಣ ಮತ್ತು ಅನ್ನ ಎಂಬೆರಡು ಶಬ್ದಗಳು ಇಂದ್ರಿಯಗಳನ್ನು ಪ್ರತಿಪಾದನೆ ಮಾಡುವುದಿಲ್ಲ. ಹೀಗಿರುವಾಗ ವಾಕ್ಯಶೇಷವು ಐದು ಇಂದ್ರಿಯಗಳನ್ನು ಪ್ರತಿಪಾದನೆಯನ್ನೇ ಮಾಡದಿರುವಾಗ 'ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿರುವ ಪಂಚತ್ವ ಸಂಖ್ಯೆಯನ್ನು ವಾಕ್ಯಶೇಷದಿಂದ ಪೂರಣ ಮಾಡಲು ಹೇಗೆ ಸಾಧ್ಯವಾಗುತ್ತದೆ? ಆದ್ದರಿಂದ ಪ್ರಾಣ ಮತ್ತು ಅನ್ನ ಶಬ್ದಗಳಿಗೆ ಚಕ್ಷುಸ್ಸು, ಶ್ರೋತ್ರ, ಮನಃ ಈ ಮೂರು ಶಬ್ದಗಳಿಗೆ ಅನುಕೂಲವಾಗಿ ಇಂದ್ರಿಯಪರತ್ವವನ್ನೇ ಸಮರ್ಥನೆ ಮಾಡಬೇಕು. ಅಂದರೆ ಇಂದ್ರಿಯಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳು ಶ್ರುತಿಯಲ್ಲಿ ಮೂರು ಇರುವುದರಿಂದ ಅದಕ್ಕನುಗುಣವಾಗಿ ಎರಡು ಈ ಶಬ್ದಗಳಿಗೆ ಇಂದ್ರಿಯಪರತ್ವವನ್ನು ಸಮರ್ಥನೆ ಮಾಡುವುದು ಅನಿವಾರ್ಯ. ಹೀಗೆ ವಾಕ್ಯಶೇಷಕ್ಕೆ ಮೊದಲು ಇಂದ್ರಿಯಪರತ್ವವನ್ನು ನಿರ್ಣಯ ಮಾಡಿ, ಇಂತಹ ವಾಕ್ಯಶೇಷದ ಬಲದಿಂದ 'ಪಂಚ ಪಂಚ ಜನಾಃ' ಎಂಬ ವಾಕ್ಯವೂ ಕೂಡ ಇಂದ್ರಿಯಪರವಾಗಿದೆ ಎಂದು ನಿರ್ಣಯಿಸಬೇಕು. ಹೀಗೆ ಸಮರ್ಥನೆ ಮಾಡುತ್ತಿರುವಾಗ ಪೂರ್ವಮೀಮಾಂಸೆಯ ಅಧಿಕರಣದಿಂದ ಪುನರುಕ್ತಿಯನ್ನು ಹೇಗೆ ಹೇಳುತ್ತೀರಿ? ಎಂದು. ಆದರೆ ಹೀಗೆ ಸಮರ್ಥಿಸುವ ರಾಮಾನುಜರಿಗೆ 'ಸಂದಿಗ್ಧೇ ತು ವಾಕ್ಯಶೇಷಾತ್' ಎಂಬ ಪೂರ್ವಮೀಮಾಂಸೆಯ ಅಧಿಕರಣದಿಂದ ಪುನರುಕ್ತಿಯು ಬಾರದಿದ್ದರೂ ಕೂಡ ಬಹ್ವನುಗ್ರಹನ್ಯಾಯವೆಂಬ ಪೂರ್ವಮೀಮಾಂಸಾ ಅಧಿಕರಣದಿಂದ ಪುನರುಕ್ತಿಯು ಬಂದೇ ಬರುತ್ತದೆ. ಏಕೆಂದರೆ ಅನೇಕ ಶ್ರುತಿಯ ಅನುಗ್ರಹಕ್ಕೋಸ್ಕರ ಏಕಶ್ರುತಿಯನ್ನು ಅರ್ಥಾಂತರ ಮಾಡಬೇಕು ಎಂಬುದನ್ನೂ ಕೂಡ ಪೂರ್ವಮೀಮಾಂಸೆಯ 'ವಿಪ್ರತಿಷಿದ್ಧಧರ್ಮಾಣಾಂ ಸಮನ್ವಯೇ ಭೂಯಸಾಂ ಸ್ಯಾತ್ ಸಧರ್ಮತ್ವಮ್' ಎಂಬ ಅಧಿಕರಣದಲ್ಲಿ ಸಮರ್ಥನೆ ಮಾಡಿದ್ದಾಗಿದೆ. ಅದನ್ನೇ ಪುನಃ 'ಪ್ರಾಣದಯೋ ವಾಕ್ಯಶೇಷಾತ್' ಎಂಬ ಅಧಿಕರಣದಲ್ಲಿ ಸಮರ್ಥನೆ ಮಾಡುತ್ತಿರುವುದರಿಂದ ರಾಮಾನುಜರಿಗೆ ಪುನರುಕ್ತಿಯು ತಪ್ಪಿದ್ದಲ್ಲ. ಪರರು ಮಾಡಿದ ಅಪವ್ಯಾಖ್ಯಾನಗಳ ವಿಮರ್ಶೆಯು ಇಲ್ಲಿಗೆ ಸಾಕು.

* * * * *

# ಆನುಮಾನಿಕಾಧಿಕರಣ

(೧-೪-೧)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ, ಭಾವದೀಪ ಇವುಗಳ ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

# ಆನುಮಾನಿಕಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ
ಬ್ರಹ್ಮಮೀಮಾಂಸಾಶಾಸ್ತ್ರ

## ಪ್ರಥಮಾಧ್ಯಾಯದ ಚತುರ್ಥಪಾದ ಪ್ರಾರಂಭ

*****

## 'ಅವ್ಯಕ್ತ' ಎಂದರೆ ಮುಖ್ಯವಾಗಿ ಮಹಾವಿಷ್ಣು, ಅಮುಖ್ಯವಾಗಿ ಪ್ರಕೃತಿ

**सूत्रम् – ॥ आनुमानिकमप्येकेषामिति चेन्न
शरीररूपकविन्यस्तगृहीतेर्दर्शयति च ॥ १ ॥**

ಸೂತ್ರಾರ್ಥ - ಸಾಂಖ್ಯರ ಅನುಮಾನದಿಂದ ಕಲ್ಪಿತವಾದ ಪ್ರಕೃತಿ, ಜೀವ ಮೊದಲಾದವು ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾಗಿವೆ. ಆದ್ದರಿಂದ ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವವು ಯುಕ್ತವಾಗುವುದಿಲ್ಲ.

ಇದು ತಪ್ಪು. 'ಅವ್ಯಕ್ತಮಚಲಂ ಶಾಂತಮ್' ಎಂಬ ಶ್ರುತಿಯಲ್ಲಿ 'ಅವ್ಯಕ್ತೋಽಕ್ಷರ ಉಚ್ಯತೇ' ಎಂಬ ಸ್ಮೃತಿಯಲ್ಲಿ 'ಅನೇನ ಜೀವೇನ' ಇತ್ಯಾದಿ ಶ್ರುತಿಗಳಲ್ಲಿಯೂ ಪರಮಾತ್ಮನೇ ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನೆಂದು ಸಿದ್ಧವಾಗಿದೆ. ಅಂಥ ಪರಮಾತ್ಮನ ಸಂಬಂಧವಿರುವುದರಿಂದ ಪ್ರಕೃತಿ ಮೊದಲಾದವುಗಳಲ್ಲಿ 'ಅವ್ಯಕ್ತ' ಮೊದಲಾದ ಶಬ್ದಗಳ ವ್ಯವಹಾರವಿದೆ. ಶರೀರವು ಹೇಗೆ ಪುರುಷನ ಅಧೀನವಾಗಿರುತ್ತದೋ, ಅದರಂತೆ ಪ್ರಧಾನಾದಿಗಳು ಬ್ರಹ್ಮನ ಅಧೀನವಾಗಿವೆ. ಆದ್ದರಿಂದ ಪ್ರಕೃತ್ಯಾದಿಗಳು ಮುಖ್ಯವಾಗಿ ಪ್ರತಿಪಾದ್ಯವಾಗುವುದಿಲ್ಲ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – अपिरेवार्थे । चः स्मृतिसमुच्चये । तथाच यतः **आनुमानिकं** साङ्ख्यानुमानकल्पितं प्रधानाद्येव । **एकेषां** शाखिनां शाखासु स्थितैः 'अव्यक्तात् पुरुषः' इत्यादिवाक्यगताव्यक्तादिशब्दैरुच्यते । अतो न विष्णोः सर्वशब्दवाच्यत्वं युज्यत **इति चेन्न ।** यतः विष्णुरेवाव्यक्तादिशब्दवाच्यः । न प्रधानादिः । तत्कुतः ? यतः 'अव्यक्तम्' इति श्रुतिः 'अव्यक्तोऽक्षरः' इति स्मृतिश्च । **दर्शयति** विष्णोरेवाव्यक्तादिशब्दवाच्यत्वं प्रतिपादयति । अत इत्यर्थः । कथं तर्ह्यन्यत्राव्यक्तादिशब्दव्यवहार इत्यत उक्तम् । शरीररूपकेत्यादि । कप्रत्ययः कुत्सने । तथा च **शरीररूपकविन्यस्तगृहीतेः** यथा शरीरं पुरुषतन्त्रम्, तथा परमात्मतन्त्रत्वेन निमित्तेन शरीरसमे कुत्सितत्वात् । वस्तुतः अशरीरे प्रधानादौ । विन्यस्तस्य स्थितस्य परमात्मन एवाव्यक्तादिशब्दैः गृहीतेः ग्रहणात् । तथाच परमात्मसम्बन्धादेवान्यत्र प्रकृत्यादावव्यक्तादिशब्दवाच्यत्व व्यवहार इत्यर्थः ।।१।।

ಅರ್ಥ -- ಸೂತ್ರದಲ್ಲಿರುವ 'ಅಪಿ' ಶಬ್ದವು ಅವಧಾರಣಾರ್ಥದಲ್ಲಿದೆ. 'ಚ' ಶಬ್ದವು ಸ್ಮೃತಿಯನ್ನು ಸಮುಚ್ಚಯ ಮಾಡುತ್ತಿದೆ. ಆದ್ದರಿಂದ ಯಾವ ಕಾರಣದಿಂದ 'ಆನುಮಾನಿಕಮಪಿ' = ಸಾಂಖ್ಯರ ಅನುಮಾನದಿಂದ ಕಲ್ಪಿತವಾದ ಪ್ರಕೃತಿ, ಜೀವ ಮೊದಲಾದವುಗಳೇ, ಏಕೇಷಾಂ = ಕೆಲವು ಶಾಖಿಗಳು ಪಠಿಸುವ ಶಾಖೆಗಳಲ್ಲಿರುವ 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ವಾಕ್ಯದಲ್ಲಿ ಶ್ರುತವಾದ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯವಾಗಿವೆ. ಆದ್ದರಿಂದ ವಿಷ್ಣುವು ಸರ್ವಶಬ್ದವಾಚ್ಯನಾಗಲಾರ. ಇತಿ ಚೇನ್ನ = ಈ ಆಕ್ಷೇಪವು ತಪ್ಪು. ಏಕೆಂದರೆ ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೊರತು, ಪ್ರಕೃತ್ಯಾದಿಗಳಲ್ಲ. ಏಕೆಂದರೆ ಯಾವ ಕಾರಣದಿಂದ 'ಅವ್ಯಕ್ತಮಚಲಮ್' ಎಂಬ ಶ್ರುತಿಯು 'ಅವ್ಯಕ್ತೋऽಕ್ಷರಃ' ಎಂಬ ಸ್ಮೃತಿಯು ಪ್ರಮಾಣವಾಗಿದೆಯೋ, ಆ ಕಾರಣದಿಂದ. ದರ್ಶಯತಿ = ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಶ್ರುತಿ-ಸ್ಮೃತಿಗಳು ಹೇಳುತ್ತಿವೆ. ಹಾಗಾದರೆ ಅವ್ಯಕ್ತಾದಿ ಶಬ್ದವ್ಯವಹಾರಗಳು ಪ್ರಕೃತ್ಯಾದಿಗಳಲ್ಲಿ

ಹೇಗೆ ಯುಕ್ತವಾಗುತ್ತದೆ ? ಎಂದರೆ, 'ಶರೀರರೂಪಕ' ಎಂಬಲ್ಲಿರುವ 'ಕ' ಪ್ರತ್ಯಯದಿಂದ ಉತ್ತರಿಸಿದ್ದಾರೆ. 'ಕುತ್ಸನಾರ್ಥದಲ್ಲಿ 'ಕ' ಪ್ರತ್ಯಯವಿದೆ. ಆದ್ದರಿಂದ, ಶರೀರರೂಪಕವಿನ್ಯಸ್ತ-ಗೃಹಿತೇಃ = ಯಾವರೀತಿಯಾಗಿ ಶರೀರವು ಪುರುಷನ ಅಧೀನವಾಗಿದೆಯೋ, ಅದೇ ರೀತಿಯಾಗಿ ಪ್ರಕೃತ್ಯಾದಿಗಳು ಪರಮಾತ್ಮನ ಅಧೀನವಾಗಿವೆ. ಆದ್ದರಿಂದ ಶರೀರದಂತಿವೆ. ಹೊರತು ಶರೀರವೇ ಆಗಿರುವುದಿಲ್ಲ. ಇಂಥ ಪ್ರಕೃತ್ಯಾದಿಗಳಲ್ಲಿ ಅಂತರ್ಯಾಮಿ-ಯಾಗಿರುವಾಗ ಪರಮಾತ್ಮನೇ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಅಂತಹ ಪರಮಾತ್ಮನ ಸಂಬಂಧದಿಂದಲೇ ಪ್ರಕೃತ್ಯಾದಿಗಳಲ್ಲಿಯೂ ಅವ್ಯಕ್ತಾದಿಶಬ್ದ ವ್ಯವಹಾರವು ಲೋಕದಲ್ಲಿ ಇರುತ್ತವೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

**भाष्यम् – ।। श्रुतिलिङ्गादिभिरन्यत्रैव प्रसिद्धानामपि शब्दानां सामस्त्येन विशेषहेतुभिर्विष्णावेव प्रवृत्तिं दर्शयत्यस्मिन् पादे ।**

ಅನುವಾದ - ವಿಷ್ಣುವಿಗಿಂತ ಬೇರೆಯಾದ ಪದಾರ್ಥವೇ ಶ್ರುತಿ ಹಾಗೂ ಲಿಂಗಗಳಿಂದ ಪ್ರತಿಪಾದ್ಯವಾಗಿದೆ ಎಂದು ಆಪಾತತಃ ತೋರುತ್ತದೆ. ಆದರೆ ಅಂತಹ ಶಬ್ದಗಳಿಂದೆಲ್ಲಾ ಮುಖ್ಯವಾಗಿ ವಿಷ್ಣುವೇ ವಾಚ್ಯನಾಗಿದ್ದಾನೆ. ಈ ವಿಷಯದಲ್ಲಿ ಸೂತ್ರಕಾರರು ಅನೇಕ ಪ್ರಬಲ ಕಾರಣಗಳನ್ನು ನೀಡುತ್ತಾರೆ. ಇದಕ್ಕಾಗಿಯೇ ಈ ನಾಲ್ಕನೆಯ ಪಾದ ಹೊರಡುತ್ತಿದೆ.

ಪ್ರತಿಪದಾರ್ಥ -- ನಾಲ್ಕನೆಯ ಪಾದದಿಂದ ಪ್ರತಿಪಾದ್ಯವಾದ ವಿಷಯವನ್ನು ತೋರಿಸುತ್ತಿದ್ದಾರೆ –

ಶ್ರುತಿಲಿಂಗಾದಿಭಿಃ = ಶ್ರುತಿ ಹಾಗೂ ಲಿಂಗಗಳಿಂದ, ಅನ್ಯತ್ರೈವ = ವಿಷ್ಣುವನ್ನು ಬಿಟ್ಟು ಬೇರೆ ಪ್ರಪಂಚದಲ್ಲಿಯೇ, ಪ್ರಸಿದ್ಧಾನಾಮಪಿ = ರೂಢಿಯಿಂದ ಅನ್ಯವಾಚಕವೆಂದು ಪ್ರಮಿತವಾಗಿದ್ದರೂ, ಶಬ್ದಾನಾಂ = ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳಿಗೆ, ಸಾಮಸ್ತ್ಯೇನ = ಸಮಗ್ರವಾಗಿ, ವಿಶೇಷಹೇತುಭಿಃ = ಪೂರ್ವಪಕ್ಷದಲ್ಲಿ ಹೇಳಲ್ಪಟ್ಟ ಲಿಂಗಗಳಿಗಿಂತಲೂ ಪ್ರಬಲವಾದ ಹೇತುಗಳಿಂದ, ವಿಷ್ಣಾವೇವ = ಮಹಾವಿಷ್ಣುವಿನಲ್ಲೇ, ಪ್ರವೃತ್ತಿಂ = ಸಮನ್ವಯವನ್ನು, ಅಸ್ಮಿನ್ ಪಾದೇ = ನಾಲ್ಕನೆಯ ಈ ಪಾದದಲ್ಲಿ, ದರ್ಶಯತಿ = ತೋರಿಸುತ್ತಿದ್ದಾರೆ.[೧]

(೧) ಪ್ರಥಮಾಧ್ಯಾಯದಲ್ಲಿ ಸಕಲಗುಣಪರಿಪೂರ್ಣತ್ವವನ್ನು ಸಮನ್ವಯ ಮಾಡುತ್ತಿದ್ದಾರೆ. ಸಕಲಗುಣಪರಿಪೂರ್ಣತ್ವವು ಸಿದ್ಧವಾಗಬೇಕಾದರೆ, ಸಕಲಶಬ್ದಸಮನ್ವಯವನ್ನು ಮಾಡಲೇಬೇಕೆಂದು ಈಗಾಗಲೇ ತಿಳಿದಿದ್ದೇವೆ. ಸಕಲವಿಧವಾದ

ಪರಿಪೂರ್ಣಚಂದ್ರಿಕಾ

**भाष्यम् – ।। आनुमानिकमप्येकेषामिति चेन्न शरीररूपकविन्यस्तगृहीतेर्दर्शयति च ।।१।।**

**'तत्तु समन्वयात्' (ब्र.सू. १-१-४) इति सर्वशब्दानां परमेश्वरे समन्वय उक्तः । तन्न युज्यते । यतः 'अव्यक्तात् पुरुषः परः' (क.उ. १-३-११) इति साङ्ख्यानुमानपरिकल्पितं प्रधानमप्येकेषां शाखिनामुच्यत इति चेत्**

ಅನುವಾದ - 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಶ್ರುತಿಗಳಿಂದ ಪ್ರಧಾನಾದಿಗಳೇ ಪ್ರತಿಪಾದ್ಯಗಳಾಗಿವೆಯೆಂದು ಪೂರ್ವಪಕ್ಷ. ಶ್ರುತಿಸ್ಮೃತಿಗಳ ಆಧಾರದಿಂದ ವಿಷ್ಣುವೇ ಅವ್ಯಕ್ತಾದಿಶಬ್ದಗಳಿಂದ ವಾಚ್ಯನಾಗಿದ್ದಾನೆಂದು ತಿಳಿಯುತ್ತದೆ. ವಿಷ್ಣುವಿನ ಶರೀರದಂತಿರುವ ಪ್ರಧಾನಾದಿಗಳು ಅಮುಖ್ಯವಾಚ್ಯಗಳೆಂದು ಸಿದ್ಧಾಂತ.

ಸಕಲಶಬ್ದಗಳು ಪರಮಾತ್ಮನಲ್ಲಿಯೇ ಸಮನ್ವಯವಾಗುತ್ತವೆಂಬುದು 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಮರ್ಥಿಸಲಾಗಿದೆ. ಆದರೆ ಇದು ಸರಿಯಲ್ಲ. ಏಕೆಂದರೆ 'ಅವ್ಯಕ್ತಾತ್ ಪುರುಷಃ ಪರಃ' 'ಅವ್ಯಕ್ತದಿಂದ ಪುರುಷನು ಹುಟ್ಟಿದನು' ಎಂಬ ಶ್ರುತಿಯಲ್ಲಿರುವ ಅವ್ಯಕ್ತಶಬ್ದದಿಂದ ಸಾಂಖ್ಯರ ಅನುಮಾನದಿಂದ ಕಲ್ಪಿತವಾದ ಪ್ರಧಾನವು ವಾಚ್ಯವಾಗುತ್ತದೆ. ಹೊರತು ವಿಷ್ಣು ವಾಚ್ಯನಾಗಲಾರ. ಇಷ್ಟು ಆಕ್ಷೇಪ.

---

ಶಬ್ದಗಳನ್ನು ನಾಲ್ಕು ಬಗೆಯಲ್ಲಿ ವಿಂಗಡಿಸಿ, ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳನ್ನು ಪ್ರಥಮಪಾದದಲ್ಲಿ ಸಮನ್ವಯ ಮಾಡಿದ್ದಾಯಿತು. ಎರಡನೆಯ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಮಾಡಿದ್ದಾಯಿತು. ಉಭಯತ್ರಪ್ರಸಿದ್ಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಮೂರನೆಯ ಪಾದದಲ್ಲಿ ಮಾಡಿದ್ದಾಯಿತು. ಇನ್ನು ಉಳಿದದ್ದು ಅನ್ಯತ್ರೈವಪ್ರಸಿದ್ಧವಾದ ನಾಮಲಿಂಗಾತ್ಮಕವಾದ ಶಬ್ದಸಮನ್ವಯ. ಅದನ್ನು ಈ ಪಾದದಲ್ಲಿ ಮಾಡಲು ಹೊರಟಿದ್ದಾರೆ.

'ದುಃಖೀ', 'ಬದ್ಧ', 'ನೀಚ' ಇತ್ಯಾದಿ ಶಬ್ದಗಳು ಭಗವಂತನಲ್ಲಿ ಸರ್ವಥಾ ಬರಲಾರವು. ಅಂತಹ ಶಬ್ದಗಳೇನಾದರೂ ಭಗವಂತನನ್ನು ಪ್ರತಿಪಾದನೆ ಮಾಡಿದರೆ ದುಃಖಾದಿ ದೋಷಗಳನ್ನು ಪರಮಾತ್ಮನಲ್ಲಿ ಒಪ್ಪಬೇಕಾಗುತ್ತದೆ. ಮತ್ತು ಇಂತಹ ಶಬ್ದಗಳ ಸಮನ್ವಯವನ್ನು ಭಗವಂತನಲ್ಲಿ ಮಾಡುವುದರಿಂದ ಯಾವುದೇ ಲಾಭವೂ ಇಲ್ಲ. ಈ ಶಬ್ದಗಳ ಸಮನ್ವಯವನ್ನು ಮಾಡದಿದ್ದರೂ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಇತ್ಯಾದಿ ಅನೇಕ ಬಗೆಯ ಪ್ರಶ್ನೆಗಳಿಗೆ ಉತ್ತರ ನೀಡಲು ಈ ಪಾದ ಹೊರಡುತ್ತಿದೆ.

ದುಃಖನಿಯಾಮಕತ್ವವೇ ಮೊದಲಾದ ಹಲವು ಗುಣಗಳು ಪರಮಾತ್ಮನಲ್ಲಿ ಸಿದ್ಧವಾಗಬೇಕಾದರೆ 'ದುಃಖೀ' ಮೊದಲಾದ ಶಬ್ದಗಳ ಸಮನ್ವಯ ಅನಿವಾರ್ಯ. ಮತ್ತು ಸರ್ವಶಬ್ದವಾಚ್ಯತ್ವದ ಜ್ಞಾನವೂ ಮೋಕ್ಷಕ್ಕೆ ಪ್ರಧಾನ ಕಾರಣ. ಅದಕ್ಕೋಸ್ಕರ ದೋಷವಾಚಕ ಶಬ್ದಗಳ ಸಮನ್ವಯವನ್ನು ಮಾಡಲೇಬೇಕು. ಮತ್ತು 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ವೇದಗಳಲ್ಲಿರುವ ಸರ್ವಶಬ್ದಕ್ಕೆ ಸಂಕೋಚ ಮಾಡಬಾರದೆಂದರೆ ದೋಷವಾಚಕಶಬ್ದಗಳ ಸಮನ್ವಯವನ್ನು ತಿಳಿಯಲೇ ಬೇಕು. ಅಷ್ಟೇ ಅಲ್ಲದೇ ಈ ಪಾದದಲ್ಲಿ ವೇದದಲ್ಲಿರುವ ಪದ, ಸ್ವರ, ವರ್ಣಗಳಿಂದಲೂ ಪರಮಾತ್ಮನು ಪ್ರತಿಪಾದ್ಯನೆಂದು ಸಮರ್ಥಿಸಲಾಗಿದೆ. ಹಾಗಾಗಿ ಈ ಪಾದವು ಅತ್ಯಂತ ಸಾರ್ಥಕ.

ಅನುಮಾನಿಕಾಧಿಕರಣ (೧-೪-೧)

ಪ್ರತಿಪದಾರ್ಥ -- ಅಧಿಕರಣದ ಪ್ರಾರಂಭದಲ್ಲಿ ಸಂಗತಿಯನ್ನೇ ತೋರಿಸಬೇಕೆಂಬ ನಿಯಮವೇನೂ ಇರುವುದಿಲ್ಲ. ಬೇರೆ ಅಧಿಕರಣಗಳಲ್ಲಿಯೂ ಹೀಗೆಯೇ ತಿಳಿಯಬೇಕು. ಇದನ್ನು ತಿಳಿಸಲು ಭಾಷ್ಯಕಾರರು ಮೊದಲು ಸೂತ್ರವನ್ನೇ ಪಠಿಸುತ್ತಿದ್ದಾರೆ –

ತತ್ತು ಸಮನ್ವಯಾತ್= ತತ್ತು ಸಮನ್ವಯಾತ್ ಎಂಬ ಸೂತ್ರದಲ್ಲಿ, ಸರ್ವಶಬ್ದಾನಾಂ = ಸಕಲವಿಧ ಶಬ್ದಗಳಿಗೆ, ಪರಮೇಶ್ವರೇ = ಮಹಾವಿಷ್ಣುವಿನಲ್ಲಿ, ಸಮನ್ವಯಃ = ಸಮ್ಯಕ್ ಪ್ರತಿಪಾದ್ಯತ್ವವನ್ನು, ಉಕ್ತಃ = ಹೇಳಲ್ಪಟ್ಟಿದೆ, ತತ್ = ಹಾಗೇ ಹೇಳಿರುವುದು, ನ ಯುಜ್ಯತೇ = ಯುಕ್ತವಾಗುವುದಿಲ್ಲ, ಯತಃ = ಏಕೆಂದರೆ, ಅವ್ಯಕ್ತಾತ್ ಪುರುಷಃ ಪರಃ = ಅವ್ಯಕ್ತದಿಂದ ಪುರುಷನು ಹುಟ್ಟಿದನು, ಇತಿ = ಹೀಗೆ ಕಾಠಕ ಶ್ರುತಿಯಲ್ಲಿ ಹೇಳಿರುವುದರಿಂದ, ಸಾಂಖ್ಯಾನುಮಾನಪರಿಕಲ್ಪಿತಂ = ಸಾಂಖ್ಯರ ಅನುಮಾನದಿಂದ ಪರಿಕಲ್ಪಿತವಾದ, ಪ್ರಧಾನಮಪಿ = ಪ್ರಕೃತಿಯೂ ಕೂಡ, ಏಕೇಷಾಂ ಶಾಖಿನಾಂ = ಬೇರೆ ಶಾಖೆಗಳಲ್ಲಿ, ಉಚ್ಯತೇ = ಹೇಳಲ್ಪಟ್ಟಿರುತ್ತದೆ, ಇತಿ ಚೇತ್ = ಇಷ್ಟು ಆಕ್ಷೇಪ.

**भाष्यम् — न तस्यैव पारतन्त्र्याच्छरीररूपकेऽव्यक्ते विन्यस्तस्य परमात्मन एवाव्यक्तशब्देन गृहीतेः। कप्रत्ययः कुत्सने। परमात्मन एवाव्यक्तशब्दः। तत्तन्त्रत्वेन तच्छरीररूपत्वादितरस्याप्यव्यक्तशब्दः ।**

ಅನುವಾದ - ಆ ಆಕ್ಷೇಪವು ಸರಿಯಲ್ಲ. ಪ್ರಧಾನಾದಿಗಳು ವಿಷ್ಣುವಿನ ಅಧೀನವಾದ್ದರಿಂದ, ವಿಷ್ಣುವಿನ ಶರೀರದಂತಿವೆ. ಅಂತಹ ಪ್ರಧಾನಗಳಲ್ಲಿ ಸಿದ್ಧನಾಗಿರುವ ವಿಷ್ಣುವನ್ನೇ ಅವ್ಯಕ್ತಶಬ್ದದಿಂದ ಶ್ರುತಿಗಳು ತಿಳಿಸುತ್ತಿವೆ. ಶರೀರರೂಪಕ ಎಂಬಲ್ಲಿರುವ 'ಕ' ಪ್ರತ್ಯಯವು ಲಿಂಗಾರ್ಥದಲ್ಲಿದೆ. ನಮಗೆ ಜಡಶರೀರವಿದ್ದಂತೆ ಪ್ರಕೃತ್ಯಾದಿಗಳು ಶರೀರಗಳಾಗಿಲ್ಲ. ಪರಮಾತ್ಮನ ಅಧೀನವಾದ್ದರಿಂದಷ್ಟೇ ಪ್ರಕೃತ್ಯಾದಿಗಳು ಪರಮಾತ್ಮನ ಶರೀರ ಎಂದು ಕರೆಸಿಕೊಳ್ಳಲ್ಪಟ್ಟಿವೆ. ಅವ್ಯಕ್ತಾದಿಶಬ್ದಗಳು ಮುಖ್ಯವಾಗಿ ಪರಮಾತ್ಮನಲ್ಲೇ ಇರುತ್ತವೆ. ಅವನ ಅಧೀನವಾದ್ದರಿಂದ ಅವನ ಶರೀರದಂತಿರುವ ಪ್ರಧಾನಾದಿಗಳಲ್ಲಿ ಅಮುಖ್ಯವಾಗಿ ಇರುತ್ತದೆ.

ಪ್ರತಿಪದಾರ್ಥ -- ಸಿದ್ಧಾಂತಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ -

ನ = ಸಕಲ ಶಬ್ದಗಳು ಪರಮಾತ್ಮ ಪರವಾಗುವುದಿಲ್ಲವೆಂಬ ಆಕ್ಷೇಪವು ತಪ್ಪು. ಏಕೆಂದರೆ ಪಾರತಂತ್ರ್ಯಾತ್ = ಈಶ್ವರನ ಅಧೀನವಾದ್ದರಿಂದ, ಶರೀರರೂಪಕೇ = ಶರೀರದಂತಿರುವ, ಅವ್ಯಕ್ತೇ = ಪ್ರಕೃತಿಯಲ್ಲಿ, ವಿನ್ಯಸ್ತಸ್ಯ = ಅಂತರ್ಗತನಾಗಿರುವ, ತಸ್ಯೈವ = ಯಾವ ಪರಮಾತ್ಮನಲ್ಲಿ ಸಮನ್ವಯದ ಪ್ರತಿಜ್ಞೆ ಮಾಡಲಾಯಿತೋ ಅಂತಹ ಪರಮಾತ್ಮನಃ ಏವ = ಪರಮಾತ್ಮನ್ನೇ, ಅವ್ಯಕ್ತಶಬ್ದೇನ = ಅವ್ಯಕ್ತಶಬ್ದದಿಂದ, ಗೃಹಿತೇಃ = ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ. ಕಪ್ರತ್ಯಯಃ = ಸೂತ್ರದಲ್ಲಿರುವ 'ಕ' ಪ್ರತ್ಯಯವು, ಕುತ್ಸನೇ = ನಿಂದಾರ್ಥದಲ್ಲಿದೆ, ಪರಮಾತ್ಮನ ಏವ = ಪರಮಾತ್ಮನೊಬ್ಬನೇ, ಅವ್ಯಕ್ತ ಶಬ್ದಃ = ಅವ್ಯಕ್ತ ಜೀವ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ತತ್ತಂತ್ರತ್ವೇನ = ಪರಮಾತ್ಮನ ಅಧೀನವಾದ್ದರಿಂದ, ತತ್ ಶರೀರರೂಪತ್ವಾತ್ = ಅವನ ಶರೀರವೆಂದು ಕರೆಸಿಕೊಳ್ಳುವ,

ಇತರಸ್ಯಾಪಿ = ಪ್ರಕೃತಿ, ಜೀವ ಮೊದಲಾದವುಗಳೂ ಕೂಡ, ಅವ್ಯಕ್ತಶಬ್ದಃ = ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಅಪ್ರಧಾನವಾಗಿ ಪ್ರತಿಪಾದ್ಯವಾಗುತ್ತವೆ.

**भाष्यम् – 'तुच्छयेनाभ्वपिहितं यदासीत्' इति (ऋ.स. १०-१२९-३) दर्शयति च ।**

ಅನುವಾದ - ಪರಮಾತ್ಮನಿಂದ ಗುಣದಲ್ಲಿ ಅಲ್ಪವಾದ ಪ್ರಕೃತಿಯಿಂದ ವಿಭುವಾದ ಪರಬ್ರಹ್ಮ ಆಚ್ಛಾದಿತವಾಗಿತ್ತು. ಹೀಗೆ ಋಗ್ವೇದವು ಹೇಳುತ್ತಿರುವುದರಿಂದ ಪ್ರಕೃತಿಯ ಒಳಗಡೆ ಪರಮಾತ್ಮನಿದ್ದಾನೆಂದು ತಿಳಿಯುತ್ತದೆ.

ಪ್ರತಿಪದಾರ್ಥ -- ಪರಮಾತ್ಮನೇ ಸ್ವತಂತ್ರನು, ಪ್ರಕೃತ್ಯಾದಿಗಳೇ ಅಸ್ವತಂತ್ರ ಎಂಬ ಪ್ರಮೇಯವು ಮತ್ತು ಪ್ರಧಾನಾದಿಗಳಲ್ಲಿ ಪರಮಾತ್ಮನು ಅಂತರ್ಗತನಾಗಿದ್ದಾನೆ ಎಂಬ ಪ್ರಮೇಯವು ಸಿದ್ಧವಾದರೆ, ಪರಮಾತ್ಮನು ಅವ್ಯಕ್ತಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನು, ಮತ್ತು ಅವನ ಸಂಪರ್ಕದಿಂದ ಪ್ರಕೃತ್ಯಾದಿಗಳು ಪ್ರತಿಪಾದ್ಯವಾಗಿವೆ ಎಂದು ಸಿದ್ಧವಾಗುತ್ತಿತ್ತು. ಆದರೆ ಈ ವಿಷಯದಲ್ಲಿ ಏನು ಆಧಾರ ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ –

ತುಚ್ಛ್ಯೇನ = ತನಗಿಂತ ಗುಣದಲ್ಲಿ ಅತ್ಯಂತ ಅಲ್ಪವಾದ ಪ್ರಕೃತಿಗಿಂತ, ಆಭು = ವ್ಯಾಪ್ತನಾದ ಪರಮಾತ್ಮನು, ಅಪಿಹಿತಂ = ಮುಚ್ಚಲ್ಪಟ್ಟವನಾಗಿ, ಯದಾ = ಯಾವ ಪ್ರಲಯಕಾಲದಲ್ಲಿ, ಆಸೀತ್ = ಇದ್ದನೋ, ಇತಿ = ಹೀಗೆ, ದರ್ಶಯತಿ ಚ = ಋಗ್ವೇದದಲ್ಲಿ (೧೦-೧೨೯-೩) ಹೇಳಲ್ಪಟ್ಟಿದೆ.

**भाष्यम् – 'अव्यक्तमचलं शान्तं निष्कलं निष्क्रियं परम् ।**
**यो वेद हरिमात्मानं स भयादनुमुच्यते'**
**इति पिप्पलादशाखायाम् ।**

**'अक्षरं ब्रह्म परमम्' इत्युक्त्वा 'अव्यक्तोऽक्षर इत्युक्तः (उच्यते)' (भ.गी.८-३,२१) इति वचनाच्च ।।१।।**

ಅನುವಾದ - ಇದೇ ವಿಷಯದಲ್ಲಿ ಅನೇಕ ಪ್ರಮಾಣಗಳಿವೆ. ಸಕಲರಿಂದ ತಿಳಿಯಲು ಸಾಧ್ಯವಿಲ್ಲದವನಾದ ಐಶ್ವರ್ಯದಿಂದ ಚ್ಯುತಿಯಿಲ್ಲದ ಕಾರಣ ಅಚಲನೆನಿಸಿರುವ ನಿರ್ವಿಕಾರನಾದ, ಷೋಡಶ ಕಲಾರಹಿತನಾದ, ಅನಾಯಾಸವಾಗಿ ಕ್ರಿಯಾಶೀಲನಾದ, ಸರ್ವೋತ್ತಮನಾದ, ಅಂತಃಪ್ರೇರಕನಾದ ಪರಮಾತ್ಮನನ್ನು ಯಾವ ಅಧಿಕಾರಿಯು ತಿಳಿಯುತ್ತಾನೋ ಅವನು ಸಂಸಾರ ಭಯದಿಂದ ಬಿಡುಗಡೆ ಹೊಂದುತ್ತಾನೆ, ಹೀಗೆ ಪಿಪ್ಪಲಾದ ಶಾಖೆಯಲ್ಲಿ ಹೇಳಲ್ಪಟ್ಟಿದೆ. ಮತ್ತು ಗೀತೆಯಲ್ಲಿ ಪರಬ್ರಹ್ಮನು ಅಕ್ಷರನಾಗಿದ್ದಾನೆಂದು ಹೇಳಿ, 'ಅವ್ಯಕ್ತೋऽಕ್ಷರ ಉಚ್ಯತೇ' ಅವ್ಯಕ್ತವೇ ಅಕ್ಷರ ಎಂದು ಹೇಳಲಾಗಿದೆ.

ಆನುಮಾನಿಕಾಧಿಕರಣ (೧-೪-೧)

ಪ್ರತಿಪದಾರ್ಥ -- ಪರಮಾತ್ಮನು ಅವ್ಯಕ್ತಾದಿಶಬ್ದಗಳಿಂದ ವಾಚ್ಯನಾಗಿದ್ದಾನೆಂದು ಸಿದ್ಧವಾದರೆ, ಹಿಂದೆ ಹೇಳಿದ ಎಲ್ಲಾ ವಿಷಯಗಳು ಸಿದ್ಧವಾಗುತ್ತಿದ್ದವು. ಆದರೆ ಅದೇ ಸಿದ್ಧವಾಗಿಲ್ಲವಲ್ಲ? ಎಂಬ ಪ್ರಶ್ನೆಗೆ ಸೂತ್ರದಲ್ಲಿರುವ 'ದರ್ಶಯತಿಚ' ಎಂಬ ಪದದ ಅರ್ಥವನ್ನು ಸ್ಪಷ್ಟಪಡಿಸುತ್ತಾ ಶ್ರುತಿ-ಸ್ಮೃತಿಗಳನ್ನು ಆಧಾರವನ್ನಾಗಿ ನೀಡುತ್ತಿದ್ದಾರೆ –

ಅವ್ಯಕ್ತಂ = ಸಾಕಲ್ಯೇನ ಯಾರಿಂದಲೂ ತಿಳಿಯದ, ಅಚಲಂ = ಐಶ್ವರ್ಯದಿಂದ ಚ್ಯುತಿಯಿಲ್ಲದ, ಶಾಂತಂ = ನಿರ್ವಿಕಾರನಾದ, ನಿಷ್ಕಲಂ = ಪ್ರಾಣಾದಿ ಷೋಡಶ ಕಲಾರಹಿತನಾದ, ನಿಷ್ಕ್ರಿಯಂ = ಅನಾಯಾಸವಾಗಿ ಕ್ರಿಯಾಶೀಲನಾದ, ಪರಂ = ಸರ್ವೋತ್ತಮನಾದ, ಆತ್ಮಾನಂ = ಅಂತಃಪ್ರೇರಕನಾದ, ಹರಿಂ = ಪರಮಾತ್ಮನನ್ನು, ಯಃ = ಯಾವ ಅಧಿಕಾರಿಯು, ವೇದ = ತಿಳಿಯುತ್ತಾನೋ, ಸಃ = ಅಂತಹ ಅಧಿಕಾರಿಯು, ಭಯಾತ್ = ಸಂಸಾರ ಭಯದಿಂದ, ಮುಚ್ಯತೇ = ಬಿಡುಗಡೆ ಪಡೆಯುತ್ತಾನೆ, ಇತಿ = ಹೀಗೆ, ಪಿಪ್ಪಲಾದಶಾಖಾಯಾಂ = ಪಿಪ್ಪಲಾದ ಶಾಖೆಯಲ್ಲಿ ಹೇಳಲಾಗಿದೆ. ಅಕ್ಷರಂ = ಅಕ್ಷರನಾದ, ಪರಮಮ್ = ಶ್ರೇಷ್ಠನಾದ, ಬ್ರಹ್ಮ = ಬ್ರಹ್ಮನು, ಇತಿ = ಹೀಗೆ, ಉಕ್ತ್ವಾ = ಹೇಳಿ, ಅವ್ಯಕ್ತೋಽಕ್ಷರ ಉಚ್ಯತೇ = ಅವ್ಯಕ್ತವೇ ಅಕ್ಷರ ಎಂದು ಕರೆಸಿಕೊಳ್ಳುತ್ತದೆ, ಇತಿ = ಎಂದು, ವಚನಾಚ್ಚ = ಗೀತೆಯ ಪ್ರಮಾಣವಚನವಿರುವುದರಿಂದಲೂ ಪರಮಾತ್ಮನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

### ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**एतत्पादप्रतिपाद्यं दर्शयति – श्रुतीति ।। अन्यत्रोभयत्र च प्रसिद्धानां नामलिङ्गात्मकानां शब्दानां भगवति समन्वये सिद्धेऽवसरप्राप्तमन्यत्रैव प्रसिद्धानामुभयविधशब्दानां विष्णौ समन्वयं वक्त्यस्मिन् पादे सूत्रकार इत्यर्थः ।**

ಪ್ರಥಮಾಧ್ಯಾಯದ ನಾಲ್ಕನೆಯ ಪಾದವು ಪ್ರಾರಂಭವಾಗುತ್ತಿದೆ. ಈ ಪಾದದಲ್ಲಿ ಯಾವ ವಿಷಯಗಳನ್ನು ಪ್ರತಿಪಾದನೆ ಮಾಡುತ್ತಾರೋ ಅವುಗಳನ್ನು ಭಾಷ್ಯಕಾರರು ಪ್ರಾರಂಭದಲ್ಲಿ 'ಶ್ರುತಿಲಿಂಗಾದಿಭಿಃ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ.

ವಿಷ್ಣುವನ್ನು ಬಿಟ್ಟು ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾದ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳ ಸಮನ್ವಯವನ್ನು ಮೊದಲಿನ ಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು, ಎರಡನೆಯ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಮೂರನೆಯ ಪಾದದಲ್ಲಿ ಪರಮಾತ್ಮನಲ್ಲಿ ಮಾಡಿದ್ದಾಯಿತು. ಪ್ರಕೃತ ಅವಸರಪ್ರಾಪ್ತವಾದ ವಿಷ್ಣುವನ್ನು

ಬಿಟ್ಟು ಬೇರೆ ಪದಾರ್ಥಗಳಲ್ಲಿ ಮಾತ್ರ ಪ್ರಸಿದ್ಧವಾದ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಈ ಪಾದದಲ್ಲಿ ಸೂತ್ರಕಾರರು ಮಾಡುತ್ತಿದ್ದಾರೆಂಬುದು ಭಾಷ್ಯವಾಕ್ಯದ ಅಭಿಪ್ರಾಯ.

**तत्वप्रकाशिका – नन्विन्द्रादिशब्दानामन्यत्रैव प्रसिद्धानां विष्णौ समन्वयस्य प्रथमपाद एव सिद्धत्वाद् व्यर्थ एवायं पादः प्रतिभाति । नच तेषामन्यत्रैव प्रसिद्धताऽभावः । तथा सति तृतीयवैयर्थ्यात् । 'अन्यत्रैव' 'अन्यत्रापि' इत्यतः प्रकारान्तराभावादित्यत उक्तम् – श्रुतिलिङ्गादिभिरिति ।।**

ಪ್ರಶ್ನೆ - ವಿಷ್ಣುವನ್ನು ಬಿಟ್ಟು ದೇವೇಂದ್ರಾದಿಗಳಲ್ಲಿ ಮಾತ್ರ ಪ್ರಸಿದ್ಧವಾದ ಇಂದ್ರಾದಿ ಶಬ್ದಗಳ ಸಮನ್ವಯವನ್ನು ಪ್ರಥಮಪಾದದಲ್ಲಿಯೇ ಮಾಡಿದ್ದಾಯಿತು. ಅದಕ್ಕಾಗಿ ಪುನಃ ಈ ನಾಲ್ಕನೆಯ ಪಾದ ಹೊರಡುವುದು ವ್ಯರ್ಥವೇ ಆಗಿದೆ. ಇಂದ್ರಾದಿ ಶಬ್ದಗಳು ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಲ್ಲಿ ಸೇರುವುದಿಲ್ಲವೆಂದು ಹೇಳಲಾಗದು. ಅನ್ಯತ್ರೈವಪ್ರಸಿದ್ಧವಲ್ಲವೆಂದರೆ ಅನ್ಯತ್ರಾಪಿಪ್ರಸಿದ್ಧವೆಂದು ಹೇಳಿದಂತಾಯಿತು. ಅರ್ಥಾತ್ ಉಭಯತ್ರಪ್ರಸಿದ್ಧಶಬ್ದಗಳೆಂದು ಹೇಳಿದಂತಾಯಿತು. ಆವಾಗ ಪ್ರಥಮಪಾದದಲ್ಲಿಯೇ ಉಭಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವು ಸಿದ್ಧವಾದ ಮೇಲೆ ಪುನಃ ಮೂರನೆಯ ಪಾದ ಹೊರಟಿದ್ದು ವ್ಯರ್ಥವಾಗಬೇಕಾಗುತ್ತದೆ. ಹೀಗೆ ಅನ್ಯತ್ರಪ್ರಸಿದ್ಧವಾದ ಶಬ್ದಗಳು ಅನ್ಯತ್ರೈವಪ್ರಸಿದ್ಧವೆಂದೇ ಕರೆಸಿಕೊಳ್ಳುವುದರಿಂದ ಶಬ್ದಗಳು ಅನ್ಯತ್ರೈವಪ್ರಸಿದ್ಧವೆಂದು, ಅನ್ಯತ್ರಾಪಿಪ್ರಸಿದ್ಧವೆಂದು ಎರಡೇ ಪ್ರಕಾರಗಳಲ್ಲಿರುತ್ತವೆ. ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮೊದಲಿನ ಎರಡು ಪಾದಗಳಲ್ಲಿ ಮಾಡಿದ್ದಾಯಿತು. ಅನ್ಯತ್ರಾಪಿಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮೂರನೆಯ ಪಾದದಲ್ಲಿ ಮಾಡಿದ್ದಾಯಿತು. ಈ ಎರಡು ಶಬ್ದಪ್ರಕಾರಗಳನ್ನು ಬಿಟ್ಟು ಮೂರನೆಯ ಪ್ರಕಾರ ಇರುವುದಿಲ್ಲ. ಆದ್ದರಿಂದ ಈ ನಾಲ್ಕನೆಯ ಪಾದ ಹೊರಟ್ಟಿದ್ದು ವ್ಯರ್ಥವಲ್ಲವೇ?

ಸಮಾಧಾನ - ಈ ಪ್ರಶ್ನೆಗೆ 'ಶ್ರುತಿಲಿಂಗಾದಿಭಿಃ' ಎಂಬ ಮಾತಿನಿಂದ ಭಾಷ್ಯಕಾರರು ಉತ್ತರಿಸಿದ್ದಾರೆ.

**तत्वप्रकाशिका – लोकप्रसिद्ध्याऽन्यत्ररूढानामिन्द्रादिशब्दानां श्रुतिलिङ्गादि-बलात् विष्णौ समन्वयः प्राक् प्रतिपादितः । इदानीं तु श्रुतिलिङ्गादिभिरेवान्यत्र-प्रसिद्धानामपि शब्दानां समन्वयनिरूपणान्नैतत्पादवैयर्थ्यम् । अनेनैवाभिप्रायेण 'अन्यत्रैव' इत्युक्तिरिति भावः ।**

ಪ್ರಥಮಪಾದದಲ್ಲಿ ಲೋಕರೂಢಿಯಿಂದ ಇಂದ್ರಾದಿಶಬ್ದಗಳು ಅನ್ಯತ್ರಪ್ರಸಿದ್ಧವಾಗಿದ್ದವು. ಅಂಥ ನಾಮಾತ್ಮಕವಾದ ಶಬ್ದಗಳನ್ನು ಶ್ರುತಿ ಹಾಗೂ ಲಿಂಗಗಳ ಬಲದಿಂದ ಮಹಾವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾಯಿತು. ಆದರೆ ಈ ಪಾದದಲ್ಲಿ ಶ್ರುತಿ ಹಾಗೂ ಲಿಂಗಾದಿಗಳ ಬಲದಿಂದಲೇ ಶಬ್ದಗಳು

ಅನ್ಯತ್ರಪ್ರಸಿದ್ಧವಾಗಿವೆ. ಅಂಥ ಶಬ್ದಗಳ ಸಮನ್ವಯಕ್ಕಾಗಿ ಈ ಪಾದ ಹೊರಟಿರುವುದು ವ್ಯರ್ಥವಲ್ಲ. ಈ ಅಭಿಪ್ರಾಯದಿಂದಲೇ ಪ್ರತ್ಯೇಕವಾಗಿ ಅನ್ಯತ್ರೈವಪ್ರಸಿದ್ಧಶಬ್ದಗಳೆಂದು ಪರಿಗಣಿಸಲಾಗಿದೆ.

ಅಭಿಪ್ರಾಯವಿಷ್ಟು - ಶ್ರುತಿ ಹಾಗೂ ಲಿಂಗಾದಿಗಳ ಬಲದಿಂದ ಯಾವ ಶಬ್ದಗಳು ಅನ್ಯತ್ರಪ್ರಸಿದ್ಧವಾಗಿವೆಯೋ, ಅವುಗಳನ್ನು ಅನ್ಯತ್ರೈವಪ್ರಸಿದ್ಧಶಬ್ದಗಳೆಂದು ಪರಿಗಣಿಸಬೇಕು. ಆದ್ದರಿಂದ ಶಬ್ದಗಳಲ್ಲಿ ಮೂರನೆಯ ಪ್ರಕಾರವಿಲ್ಲವೆಂಬ ಆಕ್ಷೇಪಕ್ಕೂ ಕೂಡ ಈಗ ಅವಕಾಶವಿರುವುದಿಲ್ಲ.

**तत्वप्रकाशिका – पूर्वं क्वचित् श्रुत्यादिनैवान्यत्रप्रसिद्धशब्दसमन्वयोक्तावप्येतत्पादीयश्रुत्यादीनां प्राबल्यादियमुक्तिः ।**

ಎರಡನೆಯ ಪಾದದಲ್ಲಿ ಕೆಲವು ಶಬ್ದಗಳು ಶ್ರುತ್ಯಾದಿಗಳಿಂದಲೇ ಅನ್ಯತ್ರಪ್ರಸಿದ್ಧವಾಗಿದ್ದವು, ಅಂಥ ಶಬ್ದಗಳ ಸಮನ್ವಯವನ್ನು ಈಗಾಗಲೇ ಮಾಡಿದ್ದಾಗಿದೆ. ಆದರೂ ಕೂಡ ಈ ಪಾದದಲ್ಲಿ ಸಮನ್ವಯ ಮಾಡಲು ಹೊರಟಿರುವ ಶಬ್ದಗಳು ಅನ್ಯತ್ರಪ್ರಸಿದ್ಧವೆನ್ನಲು ಯಾವ ಶ್ರುತ್ಯಾದಿಪ್ರಮಾಣಗಳನ್ನು ಆಧಾರವನ್ನಾಗಿ ಹೇಳಲಾಗಿದೆಯೋ, ಅವುಗಳು ಬಹಳ ಪ್ರಬಲವಾಗಿವೆ. ಹಿಂದೆ ಅನ್ಯತ್ರಪ್ರಸಿದ್ಧವೆನ್ನಲು ಆಧಾರವಾಗಿ ಹೇಳಲ್ಪಟ್ಟ ಶ್ರುತಿಗಳು ದುರ್ಬಲವಾಗಿವೆ. ಆದ್ದರಿಂದಲೂ ಈ ಪಾದವು ಸಾರ್ಥಕ.

**तत्वप्रकाशिका – पूर्वं स्रष्टृत्वादिगुणाभिधायकानां शब्दानां तत्सङ्गतानां च समन्वयो निगदितः, अत्र पुनः स्वर-वर्ण-पदात्मकानां समस्तशब्दानामिति वाऽवैयर्थ्यमिति भावेनोक्तम् – सामस्त्येनेति ।।**

ಹಿಂದಿನ ಮೂರು ಪಾದಗಳಲ್ಲಿಯೂ ಶ್ರೀಹರಿಯ ಗುಣಗಳನ್ನು ಪ್ರತಿಪಾದನೆ ಮಾಡುವ ಜಗತ್ ಸ್ರಷ್ಟೃತ್ವ ಮೊದಲಾದ ಶಬ್ದಗಳನ್ನು ಸಮನ್ವಯ ಮಾಡಲಾಯಿತು. ಹಾಗೂ ಆ ಜಗತ್‌ಸ್ರಷ್ಟೃತ್ವಕ್ಕೆ ಸಂಬಂಧಪಟ್ಟ ಆನಂದಮಯ ಮೊದಲಾದ ಶಬ್ದಗಳನ್ನೂ ಕೂಡ ಸಮನ್ವಯ ಮಾಡಲಾಯಿತು. ಆದರೆ ಈ ಪಾದದಲ್ಲಿ ಗುಣಪರಿಪೂರ್ಣತ್ವಕ್ಕೆ ಉಪಯುಕ್ತವಾದ ಸ್ವರ, ವರ್ಣ, ಪದಸ್ವರೂಪವಾದ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಈ ಕಾರಣದಿಂದಲೂ ಈ ಪಾದಕ್ಕೆ ವೈಯರ್ಥ್ಯವಿರುವುದಿಲ್ಲ. ಈ ಅಭಿಪ್ರಾಯದಿಂದ ಭಾಷ್ಯಕಾರರು 'ಸಾಮಸ್ತ್ಯೇನ' ಎಂಬ ಪದವನ್ನು ಉಲ್ಲೇಖಿಸಿದ್ದಾರೆ.

**तत्वप्रकाशिका – यदुक्तं 'बलवत् श्रुत्यादिभिन्यत्रप्रसिद्धशब्दानां समन्वयोऽत्र कथ्यते' इति तदयुक्तम् असम्भवादित्यत उक्तम् – विशेषेति ।।**

'ಅತ್ಯಂತ ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಈ ಪಾದವು ಸಮನ್ವಯ ಮಾಡುತ್ತಿದೆ' ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಹಾಗೇ ಶಬ್ದಗಳನ್ನು ಸಮನ್ವಯ ಮಾಡುವುದು ಅತ್ಯಂತ ಅಸಂಭಾವಿತ. ಈ ಆಶಂಕೆಯನ್ನು ಪರಿಹರಿಸಲು 'ವಿಶೇಷಹೇತುಭಿಃ' ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**तत्वप्रकाशिका – ततोऽपि प्रबलहेतुभिरित्यर्थः । यदुदितम् 'अत्र समस्तशब्दसमन्वयनिरूपणादवैयर्थ्यम्' इति । तदसत् । अंशे वैयर्थ्यादित्य (तो वा) तश्चाऽऽह – विशेषेति ।। प्रागनुक्तहेतुभिरित्यर्थः ।**

ಭಾಷ್ಯದಲ್ಲಿರುವ 'ವಿಶೇಷಹೇತುಭಿಃ' ಎಂಬುದರ ಅಭಿಪ್ರಾಯ ಹೀಗಿದೆ - ಪೂರ್ವಪಕ್ಷಿಯು ಯಾವ ಅರ್ಥದಲ್ಲಿ ಶ್ರುತಿಲಿಂಗಗಳು ಆಧಾರವಾಗಿವೆ ಎಂದು ಹೇಳಿದನೋ, ಅಂಥ ಶ್ರುತಿಲಿಂಗ-ಗಳಿಗಿಂತಲೂ ವಿಷ್ಣುಪರವಾದ ಶ್ರುತಿಲಿಂಗಗಳು ಬಲಿಷ್ಠವಾಗಿವೆ. ಆದ್ದರಿಂದ ಎಲ್ಲಾ ಶಬ್ದಗಳು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ ಎಂದರ್ಥ.

ಅಥವಾ 'ವಿಶೇಷಹೇತುಭಿಃ' ಎಂಬುದಕ್ಕೆ ಮತ್ತೊಂದು ಅಭಿಪ್ರಾಯವನ್ನೂ ಕೂಡ ತಿಳಿಯಬಹುದು - ಈ ಪಾದದಲ್ಲಿ ಎಲ್ಲಾ ಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದ ವೈಯರ್ಥ್ಯವಿಲ್ಲವೆಂದು ಹೇಳಿದ್ದು ಸರಿಯಲ್ಲ. ಒಂದು ವೇಳೆ ಹಿಂದಿನ ಮೂರು ಪಾದಗಳಲ್ಲಿ ಯಾವ ಶಬ್ದಗಳನ್ನೆಲ್ಲಾ ಪರಮಾತ್ಮನಲ್ಲಿ ಸಮನ್ವಯ ಮಾಡಿದ್ದಾಗಿದೆಯೋ, ಅದೇ ಶಬ್ದಗಳನ್ನು ಪುನಃ ಇಲ್ಲಿಯೂ ಸಮನ್ವಯ ಮಾಡಿದರೆ ಆ ಅಂಶದಲ್ಲಿ ವೈಯರ್ಥ್ಯದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ವಿಶೇಷಹೇತುಭಿಃ' ಎಂಬುದರಿಂದ ಉತ್ತರಿಸಿದ್ದಾರೆ.

ಹಿಂದೆ ಯಾವ ಹೇತುಗಳಿಂದ ಶಬ್ದಗಳನ್ನು ಸಮನ್ವಯ ಮಾಡಲಾಯಿತೋ, ಆ ಹೇತುಗಳನ್ನು ಬಿಟ್ಟು ಬೇರೆ ಹೇತುಗಳಿಂದ, ಎಲ್ಲಾ ಬಗೆಯ ಶಬ್ದಗಳನ್ನು ಸಮನ್ವಯ ಮಾಡುತ್ತಿರುವುದರಿಂದ ಪುನರುಕ್ತಿ ದೋಷವು ಬರುವುದಿಲ್ಲ. ಏಕೆಂದರೆ ಪ್ರಮೇಯವು ಒಂದೇ ಆಗಿದ್ದರೂ ಅದಕ್ಕೆ ಉಪಯುಕ್ತವಾದ ಉಪಪತ್ತಿಗಳು ಬೇರೆ ಬೇರೆಯಾಗಿವೆ.

**तत्वप्रकाशिका – स्यादेतत् । न समस्तशब्दसमन्वयोक्तिरुपपन्ना । वैयर्थ्यात् । 'जन्माद्यस्य' इत्युक्तजन्मादिकारणत्वे हि शास्त्रं प्रमाणीकृतम् । जन्मादिकारणत्वाभिधायकवाक्यानामेव परमात्मपरत्वं चतुर्थसूत्रे प्रतिज्ञातम्, तच्चातीतैः पादैः समर्थितमिति ।।**

ಎಲ್ಲಾ ಬಗೆಯ ಶಬ್ದಗಳು ವಿಷ್ಣುವಿನಲ್ಲಿ ಸಮನ್ವಯಗೊಳ್ಳುತ್ತವೆಂಬುದು ಸರಿಯಲ್ಲ. ಏಕೆಂದರೆ ಎಲ್ಲಾ ಬಗೆಯ ಶಬ್ದಗಳ ಸಮನ್ವಯ ಮಾಡುವುದು ವ್ಯರ್ಥ. ಹಿಂದೆ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಪರಮಾತ್ಮನು ಜಗಜ್ಜನ್ಮಾದಿಕಾರಣನಾಗಿದ್ದಾನೆಂಬ ವಿಷಯದಲ್ಲಷ್ಟೇ ಶಾಸ್ತ್ರಗಳು ಪ್ರಮಾಣವಾಗಿವೆಯೆಂದು ಸಮರ್ಥಿಸಲಾಯಿತು. 'ತತ್ತು ಸಮನ್ವಯಾತ್' ಎಂಬ ನಾಲ್ಕನೆಯ ಸೂತ್ರದಲ್ಲಿ ಜನ್ಮಾದಿಕಾರಣತ್ವವನ್ನು ಸಮರ್ಥಿಸುವ ವಾಕ್ಯಗಳು ಪರಮಾತ್ಮಪರವಾಗುತ್ತವೆಂದಷ್ಟೇ

ಪ್ರತಿಜ್ಞೆ ಮಾಡಲಾಗಿದೆ. ಅಂತಹ ಜಗಜ್ಜನ್ಮಾದಿಕಾರಣತ್ವಕ್ಕೆ ಉಪಯುಕ್ತವಾದ ಶಬ್ದಗಳನ್ನೆಲ್ಲಾ ಹಿಂದಿನ ಮೂರು ಪಾದಗಳಿಂದ ಸಮರ್ಥಿಸಿದ್ದಾಗಿದೆ. ಪುನಃ ಈ ಪಾದ ವ್ಯರ್ಥವಲ್ಲವೇ?

**तत्वप्रकाशिका – मैवम् । चतुर्थसूत्रे सर्वशब्दानां परमात्मपरत्वस्य प्रतिज्ञातत्वात् । जन्मादिसूत्रे हि न जन्मादिकारणत्वमात्रं विवक्षितम् । किन्तु 'किं तद् ब्रह्म' इत्याकाङ्क्षायां निखिलगुणपरिपूर्णत्वस्यैव वक्तव्यत्वात् ।**

ಈ ಆಕ್ಷೇಪವು ತಪ್ಪು. ನಾಲ್ಕನೆಯ ಸೂತ್ರದಲ್ಲಿ ಸಕಲ ಶಬ್ದಗಳು ಪರಮಾತ್ಮಪರವಾಗಿವೆ ಎಂದು ಪ್ರತಿಜ್ಞೆಯನ್ನು ಮಾಡಲಾಗಿದೆ. ಮತ್ತು ಜನ್ಮಾಧಿಕರಣದಲ್ಲಿ ಜಗಜ್ಜನ್ಮಾದಿಕಾರಣತ್ವವಷ್ಟೇ ವಿಷ್ಣುವಿನ ಲಕ್ಷಣವೆಂದು ವಿವಕ್ಷಿಸಿಲ್ಲ. ಹೊರತಾಗಿ, ಪ್ರಥಮಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆ ಮಾಡಬೇಕೆಂದು ಹೇಳಿದಾಗ 'ಕಿಂ ತದ್ ಬ್ರಹ್ಮ' ಅಂತಹ ಬ್ರಹ್ಮನು ಯಾರು? ಎಂಬ ಆಕಾಂಕ್ಷೆಯು ಪ್ರಾಪ್ತವಾಗುತ್ತದೆ. ಆವಾಗ ಸಕಲಗುಣಪರಿಪೂರ್ಣತ್ವವುಳ್ಳವನೇ ಬ್ರಹ್ಮನೆಂದು ಉತ್ತರಿಸಬೇಕು.

**तत्वप्रकाशिका – नहि ब्रह्मशब्दः कतिपयगुणाभिधायकः । जन्मादिकारणत्वगुणग्रहणं तु तस्याखिलगुणसाधकत्वेनान्योपलक्षणाभिप्रायेणैव । तृतीयसूत्रे च तत्रैव सर्वं शास्त्रं प्रमाणमुक्तम् । कतिपयशब्दानां निखिलगुणाभि-धायकत्वायोगादिति ।**

ಬ್ರಹ್ಮ ಶಬ್ದವು ಕೆಲವು ಗುಣಗಳನ್ನಷ್ಟೇ ಪರಮಾತ್ಮನಲ್ಲಿ ಹೇಳುತ್ತಿಲ್ಲ; ಹೊರತು ಸಕಲ ಗುಣಗಳನ್ನೇ ಹೇಳುತ್ತಿದೆ. ಎರಡನೆಯ ಸೂತ್ರದಲ್ಲಿ ಜನ್ಮಾದಿಕಾರಣತ್ವವೆಂಬ ಗುಣವನ್ನೇ ಸ್ವೀಕರಿಸಲು ಕಾರಣವೇನೆಂದರೆ ಶ್ರೀಹರಿಯಲ್ಲಿ ಜನ್ಮಾದಿಕಾರಣತ್ವವು ನಿಖಿಲಗುಣಪರಿಪೂರ್ಣತ್ವಕ್ಕೆ ಸಾಧಕ-ವಾಗಿದೆಯೆಂದು ತಿಳಿಸಬೇಕಾಗಿದೆ. ಇಂತಹ ಜಗಜ್ಜನ್ಮಾದಿಕಾರಣತ್ವದಿಂದ ಉಳಿದ ಗುಣಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂಬ ಅಭಿಪ್ರಾಯದಿಂದ ಜಗಜ್ಜನ್ಮಾದಿಕಾರಣತ್ವವನ್ನು ಸ್ವೀಕರಿಸಲಾಗಿದೆ. ಮೂರನೆಯ ಶಾಸ್ತ್ರಯೋನಿತ್ವಸೂತ್ರದಲ್ಲಿಯೂ ನಿಖಿಲಗುಣಪರಿಪೂರ್ಣತ್ವವಿಷಯದಲ್ಲಿ ಸಕಲ ಶಾಸ್ತ್ರಗಳು ಪ್ರಮಾಣವೆಂದು ಹೇಳಲಾಗಿದೆ. ಏಕೆಂದರೆ ಕೆಲವು ಪರಿಮಿತ ಶಬ್ದಗಳಿಂದ ನಿಖಿಲಗುಣಪರಿಪೂರ್ಣತ್ವವನ್ನು ಸಮರ್ಥಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ನಾಲ್ಕನೆಯ ಸೂತ್ರದಲ್ಲಿಯೂ ಸಕಲಶಬ್ದಗಳ ಸಮನ್ವಯವನ್ನು ಪ್ರತಿಜ್ಞೆ ಮಾಡಿದ್ದಾರೆಂದು ತಿಳಿಯಬೇಕು.

**तत्वप्रकाशिका – सूत्रमेवादौ पठति – आनुमानिकमिति ।। अत्रावरत्वादिलिङ्गैर्भगवति विरुद्धतयाऽन्यत्रैव प्रसिद्धाव्यक्तादिशब्दानां भगवति समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयन् सौत्रं पूर्वपक्षांशं तावद् व्याचष्टे – तत्त्विति ।।**

ಪರಿಪೂರ್ಣಚಂದ್ರಿಕಾ

ಭಾಷ್ಯಕಾರರು ಸೂತ್ರವನ್ನೇ ಮೊದಲು ಪಠಿಸುತ್ತಿದ್ದಾರೆ 'ಆನುಮಾನಿಕಮ್' ಇತ್ಯಾದಿಯಾಗಿ. ಅವರತ್ವ ಮೊದಲಾದ ಲಿಂಗಗಳು ಶ್ರೀಹರಿಯಲ್ಲಿ ಇಲ್ಲವೆಂದು ತೋರುತ್ತಿರುವುದರಿಂದ ಆ ಧರ್ಮಗಳಿಂದ ಅನ್ಯತ್ರವೇ ಪ್ರಸಿದ್ಧವಾದ ಅವ್ಯಕ್ತಾದಿಶಬ್ದಗಳನ್ನು ಭಗವಂತನಲ್ಲಿ ಸಮನ್ವಯ ಮಾಡಲಾಗಿದೆ. ಆದ್ದರಿಂದ ಶಾಸ್ತ್ರಸಂಗತಿಯನ್ನು ತಿಳಿಯಬೇಕು. ಶ್ರುತಿಸಂಗತಿ, ಅಧಿಕರಣಸಂಗತಿ ವಿಷಯಾದಿಗಳನ್ನು ಸೂಚಿಸುತ್ತಾ ಸೂತ್ರದಲ್ಲಿರುವ ಪೂರ್ವಪಕ್ಷಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ತತ್ತು' ಇತ್ಯಾದಿಯಾಗಿ.

**तत्वप्रकाशिका – 'तत्तु समन्वयात्' इति सूत्रे सर्वशब्दानां परमात्मपरत्वमुक्तम् । सर्वान्तर्गताव्यक्तादिशब्दैश्च काठकादौ किञ्चिदुच्यते –**

**'महतः परमव्यक्तमव्यक्तात् पुरुषः परः'।**

**'योनिमन्ये प्रपद्यन्ते शरीरत्वाय देहिनः ।**

**स्थाणुमन्ये नु संयन्ति यथा कर्म यथा श्रुतम्'।**

**'जीवा एव तु दुःखिनः'**

**इति । तस्याव्यक्तादेर्विष्णोरन्यत्वे न तस्य सर्वशब्दवाच्यता ? इत्यवश्य-निर्णेयता । (इति सङ्गतिसम्भवात्)[१]**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಕಲಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಲಾಗಿದೆ. ಎಲ್ಲಾ ಶಬ್ದಗಳಲ್ಲಿ 'ಅವ್ಯಕ್ತ', 'ದುಃಖೀ', 'ಬದ್ಧ', 'ಅವರ', 'ಜೀವ' ಮೊದಲಾದ ಶಬ್ದಗಳೂ ಕೂಡ ಸೇರಿವೆ. ಆದರೆ ಈ ಶಬ್ದಗಳು ಬೇರೆ ಪದಾರ್ಥವನ್ನೇ ಹೇಳುತ್ತಿರುವಂತೆ ಕಾಠಕಶ್ರುತಿ ಮೊದಲಾದವುಗಳನ್ನು ನೋಡಿದಾಗ ತಿಳಿದು ಬರುತ್ತದೆ. ಅದು ಹೀಗೆ -

'ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ' ಮಹತ್ತತ್ವಕ್ಕಿಂತ ಅವ್ಯಕ್ತತತ್ವ ಶ್ರೇಷ್ಠ. ಅವ್ಯಕ್ತ ತತ್ವಕ್ಕಿಂತಲೂ ಪುರುಷನು ಶ್ರೇಷ್ಠ. (ಈ ಶ್ರುತಿ ಪುರುಷನು ಅವ್ಯಕ್ತಕ್ಕಿಂತ ಪರ ಎಂದು ಹೇಳುತ್ತಿದೆ)

ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ।

ಸ್ಥಾಣುಮನ್ಯೇ ನು ಸಂಯಂತಿ ಯಥಾ ಕರ್ಮ ಯಥಾ ಶ್ರುತಮ್ ॥

'ತಮ್ಮ ಕರ್ಮಕ್ಕೆ ಅನುಗುಣವಾಗಿ ಕೆಲವು ಜೀವರು ಶರೀರವನ್ನು ಹೊಂದಲು ಯೋನಿಯನ್ನು

(೧) ಮುದ್ರಿತ ಪುಸ್ತಕದಲ್ಲಿ 'ಇತಿ ಸಂಗತಿಸಂಭವಾತ್' ಎಂಬ ಪಾಠ ಕಾಣುವುದಿಲ್ಲ. ಆದರೆ ರಾಯರು ಇದಕ್ಕೆ ವ್ಯಾಖ್ಯಾನ ಮಾಡಿದ್ದರಿಂದ ಉಲ್ಲೇಖಿಸಲಾಗಿದೆ.

ಪ್ರವೇಶಿಸುತ್ತಾರೆ. ಇನ್ನು ಕೆಲವರು ಮರದಲ್ಲಿ ಪ್ರವೇಶಿಸುತ್ತಾರೆ' (ಈ ಶ್ರುತಿ ಜೀವನಿಗೆ ಪ್ರಕೃತಿಬದ್ಧತ್ವವನ್ನು ಹೇಳುತ್ತಿದೆ).

'ಜೀವಾ ಏವ ತು ದುಃಖಿನಃ' 'ಜೀವರು ಮಾತ್ರ ದುಃಖಿಗಳು'. (ಈ ಶ್ರುತಿ ಜೀವನಿಗೆ ದುಃಖವನ್ನು ಹೇಳುತ್ತಿದೆ).

ಈ ವಾಕ್ಯಗಳಲ್ಲಿ ಶ್ರುತವಾದ ಅವ್ಯಕ್ತಾದಿಶಬ್ದಗಳು ವಿಷ್ಣುವನ್ನು ಬಿಟ್ಟು, ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಒಪ್ಪುವುದಾದರೆ ಸಮನ್ವಯಸೂತ್ರದಲ್ಲಿ ಹೇಳಲ್ಪಟ್ಟ ಸರ್ವಶಬ್ದ-ವಾಚ್ಯತ್ವವು ವಿಷ್ಣುವಿಗೆ ಕೂಡುವುದಿಲ್ಲ. ಆದ್ದರಿಂದ ಅವಶ್ಯವಾಗಿ ಅವ್ಯಕ್ತಾದಿ ಶಬ್ದಗಳಿಂದ ಯಾರು ಪ್ರತಿಪಾದ್ಯರೆಂಬುದನ್ನು ನಿರ್ಣಯ ಮಾಡಬೇಕು. ಹೀಗೆ ಸಮನ್ವಯಾಧಿಕರಣದಿಂದ ಸಂಗತಿಯಿರುತ್ತದೆ.

**तत्वप्रकाशिका – तदव्यक्तजीवादिपदवाच्यं विषयः । किं विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देहबीजम् । 'प्रधानाद्येवाव्यक्तादि पदवाच्यं नतु विष्णुः' इति पूर्वः पक्षः अव्यक्तादिशब्दानां प्रधानादावेव प्रसिद्धेः ।**

ಶ್ರುತಿ-ಸ್ಮೃತಿಗಳಲ್ಲಿರುವ 'ಅವ್ಯಕ್ತ', 'ಜೀವ' ಮೊದಲಾದ ಪದಗಳಿಂದ ಯಾರು ವಾಚ್ಯರೋ, ಅವರೇ ವಿಷಯ. ವಿಷ್ಣುವೋ ಅಥವಾ ಬೇರೆ ಪದಾರ್ಥವೋ ? ಎಂಬುದೇ ಸಂದೇಹ. ಸಮನ್ವಯಸೂತ್ರ ಹಾಗೂ ಅನ್ಯತ್ರಪ್ರಸಿದ್ಧಿ ಇವೆರಡು ಸಂದೇಹಕ್ಕೆ ಬೀಜ. ಪ್ರಕೃತಿ ಮೊದಲಾದವುಗಳೇ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯವಾಗಿವೆ ಹೊರತು ವಿಷ್ಣುವಲ್ಲ ಎಂಬುದು ಪೂರ್ವಪಕ್ಷ. ಏಕೆಂದರೆ ಅವ್ಯಕ್ತ ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲೇ ಪ್ರಸಿದ್ಧವಾಗಿವೆ.

**तत्वप्रकाशिका – नच तेषां विष्णावपि सावकाशतेति वाच्यम् । तत्राव्यक्तस्य पुरुषावरत्वश्रवणात् । तच्च प्रधानस्य युक्तं, नतु विष्णोः । 'न तत्समश्चाभ्यधिकश्च दृश्यते' इत्यादिप्रमाणविरोधात् ।**

ಪ್ರಶ್ನೆ - ಅವ್ಯಕ್ತ ಮೊದಲಾದ ಶಬ್ದಗಳು ವಿಷ್ಣುವಿನಲ್ಲಿ ಸಾವಕಾಶವಾಗಿದೆಯಲ್ಲವೇ ?

ಉತ್ತರ - ಮಂತ್ರದಲ್ಲಿ ಪುರುಷನಿಗಿಂತ ಅವ್ಯಕ್ತವು ನೀಚ ಎಂದು ಹೇಳಲಾಗಿದೆ. ಇದು ಪ್ರಕೃತಿಯಲ್ಲಿ ಬರುತ್ತದೆ ಹೊರತು, ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. 'ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ' ವಿಷ್ಣುವಿಗೆ ಸರಿಸಾಟಿಯಾದ ವ್ಯಕ್ತಿಯಾಗಲೀ, ವಿಷ್ಣುವಿಗಿಂತ ಶ್ರೇಷ್ಠ ವ್ಯಕ್ತಿಯಾಗಲೀ ಎಲ್ಲಿಯೂ ಕಾಣಸುತ್ತಿಲ್ಲ. ಇವೇ ಮೊದಲಾದ ಪ್ರಮಾಣಗಳ ವಿರೋಧವು ಬರುತ್ತದೆ.

**तत्वप्रकाशिका – तथाऽव्यक्तस्य महत्परत्वश्रवणात् । तदपि प्रधानस्यैवोपपन्नम् । 'महान्तं च समावृत्य प्रधानं समवस्थितम्' इत्यादेः विष्णोरव्यक्तादपि परत्वात् ।**

ಮತ್ತು ಅವ್ಯಕ್ತವು ಮಹತ್ತತ್ವಕ್ಕಿಂತ ಶ್ರೇಷ್ಠವಾಗಿದೆಯೆಂದು 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಇದೂ ಕೂಡ ಪ್ರಕೃತಿಯಲ್ಲೇ ಯುಕ್ತವಾಗುತ್ತದೆ ಹೊರತು, ವಿಷ್ಣುವಿನಲ್ಲಿ ಅಲ್ಲ. ಏಕೆಂದರೆ 'ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಮ್' ಇತ್ಯಾದಿ ವಾಕ್ಯದ ಆಧಾರದಿಂದ ಮಹತ್ತತ್ವವು ಪ್ರಕೃತಿಯನ್ನು ಆಶ್ರಯಿಸಿ ಪ್ರಕೃತಿಯಿಂದಲೇ ಉತ್ಪನ್ನವಾಗಿದೆ ಎಂದು ತಿಳಿಯುತ್ತಿದೆ. ವಿಷ್ಣುವಾದರೂ ಪ್ರಕೃತಿಗಿಂತಲೂ ಉತ್ತಮನಾಗಿದ್ದಾನೆ. ಅಂತಹ ಉತ್ತಮೋತ್ತಮನಾದ ವಿಷ್ಣುವಿನಿಂದ ಮಹತ್ತತ್ವವು ನೇರವಾಗಿ ಹುಟ್ಟಿದೆಯೆಂದು ಈ ವಾಕ್ಯದಿಂದ ತಿಳಿಯುತ್ತಿಲ್ಲ. ಈ ಕಾರಣದಿಂದ ಅವ್ಯಕ್ತಶಬ್ದವಾಚ್ಯವಾದದ್ದು ಪ್ರಕೃತಿಯೆಂದೇ ನಿರ್ಣಯವಾಗುತ್ತದೆ.

**तत्वप्रकाशिका – जीवानां च दुःखिबद्धत्वादिप्रतीतेः । तच्च विष्णोः प्रमाणविरुद्धम् ।**

'ಜೀವಾ ಏವ ತು ದುಃಖಿನಃ' ಇತ್ಯಾದಿ ವಾಕ್ಯಗಳಿಗೆ ದುಃಖ ಮೊದಲಾದ ದೋಷಗಳುಳ್ಳವನು ಜೀವನು ಎಂದು ಹೇಳಿದ್ದರಿಂದ ಜೀವಪದದಿಂದ ವಿಷ್ಣು ಪ್ರತಿಪಾದ್ಯನಾಗಲಾರನು. ಏಕೆಂದರೆ 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಗಳು ವಿಷ್ಣುವಿನಲ್ಲಿ ಯಾವುದೇ ದೋಷವಿಲ್ಲ ಎಂದು ಹೇಳುತ್ತಿವೆ.

**तत्वप्रकाशिका – तस्मादव्यक्तादिशब्दवाच्यं प्रधानाद्येव ।**

ಆದ್ದರಿಂದ 'ಮಹತಃ ಪರಮವ್ಯಕ್ತಮ್' ಎಂಬಲ್ಲಿರುವ ಅವ್ಯಕ್ತ ಮೊದಲಾದ ಶಬ್ದಗಳಿಂದ 'ಜೀವಾ ಏವ ತು ದುಃಖಿನಃ' ಎಂಬಲ್ಲಿರುವ 'ಜೀವ' ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವಲ್ಲ ಹೊರತು, ಪ್ರಕೃತಿ, ಜೀವ ಇವುಗಳೇ ಪ್ರತಿಪಾದ್ಯವಾಗುತ್ತವೆ.

**तत्वप्रकाशिका – यत एवं केषाञ्चिच्छाखास्वव्यक्तादिशब्दैः । प्रधानाद्येवोच्यते' अतो यत् 'तत् समन्वयात्' इति सर्वशब्दानां परमेश्वराभिधायकत्वं उक्तं तन्न युज्यत इति भावः ।**

ಯಾವ ಕಾರಣದಿಂದ ಕೆಲವು ಶಾಖೆಗಳಲ್ಲಿರುವ ಅವ್ಯಕ್ತ, ಜೀವ ಮೊದಲಾದ ಶಬ್ದಗಳು ಪ್ರಕೃತಿ, ಜೀವ ಮೊದಲಾದವನ್ನೇ ಪ್ರತಿಪಾದನೆ ಮಾಡುತ್ತಿವೆಯೋ ಆ ಕಾರಣದಿಂದ ಹಿಂದೆ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಕಲ ಶಬ್ದಗಳೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂದು ನೀವು ಪ್ರತಿಜ್ಞೆ ಮಾಡಿದ್ದು ತಪ್ಪಾಯಿತು. ಕೆಲವು ಶಬ್ದಗಳಿಂದ ಪ್ರಕೃತ್ಯಾದಿಗಳು ಪ್ರತಿಪಾದ್ಯವಾಗುತ್ತಿರುವಾಗ ಸಕಲಶಬ್ದಗಳು ವಿಷ್ಣುವನ್ನೇ ಹೇಳುತ್ತವೆಂದು ನಿಮಗೆ ಸಾಧಿಸಲಾಗದು. ಇಷ್ಟು ಪೂರ್ವಪಕ್ಷ.

**तत्वप्रकाशिका – सिद्धान्तांशं व्याचष्टे – नेति ।। यतः परमात्मैव अव्यक्तादिशब्दवाच्यो न प्रधानादि ।**

ಸಿದ್ಧಾಂತ ಹೀಗಿದೆ - ಸಿದ್ಧಾಂತ ಹೇಳುವ ಸೂತ್ರದ ಭಾಗವನ್ನು 'ನ' ಇತ್ಯಾದಿ ಭಾಷ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತಿಯಾಗಲೀ, ಜೀವನಾಗಲೀ ಪ್ರತಿಪಾದ್ಯವಲ್ಲ.

**तत्वप्रकाशिका – अतः परमात्मन एवाव्यक्तादिशब्दवाच्यत्वग्रहणात् यत् 'सर्वशब्दानां परमात्मपरत्वं न युज्यते' इत्युक्तं तन्न इत्यर्थः ।**

ಆದ್ದರಿಂದ ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಶ್ರುತಿಯು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿರುವ ಕಾರಣ ಸಕಲ ಶಬ್ದಗಳು ಪರಮಾತ್ಮಪರವಲ್ಲವೆಂಬ ಪೂರ್ವಪಕ್ಷವು ಅಸಾಧುವಾಗಿದೆ ಎಂದು ಹೇಳಿದಂತಾಯಿತು.

**तत्वप्रकाशिका – यस्मिन् समन्वयः प्रतिज्ञातः 'तस्यैव' इति स्वपदं 'परमात्मन एव' इति व्याख्यातम् ।**

ಯಾವ ವ್ಯಕ್ತಿಯಲ್ಲಿ ಸಕಲಶಬ್ದಗಳು ಸಮನ್ವಯವಾಗುತ್ತವೆಂದು ಸಮನ್ವಯ ಸೂತ್ರದಲ್ಲಿ ಪ್ರತಿಜ್ಞೆ ಮಾಡಲಾಗಿದೆಯೋ, ಅಂತಹ ಪರಮಾತ್ಮನ ವಿಷಯದಲ್ಲೇ ಎಂಬುದಾಗಿ ಭಾಷ್ಯದಲ್ಲಿರುವ 'ತಸ್ಯೈವ' ಎಂಬ ಪದದ ಅರ್ಥ. ಅದನ್ನೇ ಪುನಃ 'ಪರಮಾತ್ಮನಃ' ಎಂಬ ಪದದಿಂದ ಭಾಷ್ಯಕಾರರು ವ್ಯಾಖ್ಯಾನ ಮಾಡಿದ್ದಾರೆ.

**तत्वप्रकाशिका – परमात्मन एवाव्यक्तादिशब्दवाच्यत्वे कथं प्रधानादौ तद् व्यवहारः ?**

ಒಂದು ವೇಳೆ ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗುವುದಾದರೆ, ಪ್ರಕೃತಿ, ಜೀವ ಮೊದಲಾದವರಲ್ಲಿ ಅವ್ಯಕ್ತ, ಜೀವ ಮೊದಲಾದ ವ್ಯವಹಾರಗಳು ಹೇಗೆ ಕೂಡುತ್ತವೆ ?

**तत्वप्रकाशिका – 'अवाचकत्वेऽप्यनभिज्ञानादिना व्यवहारः' इत्युक्तम्, इति चेन्न ।**

ಪ್ರಕೃತ್ಯಾದಿಗಳು ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯವಲ್ಲ; ಹೊರತು ಪರಮಾತ್ಮನೇ ಪ್ರತಿಪಾದ್ಯ. ಇದನ್ನು ಸರಿಯಾಗಿ ತಿಳಿಯದ ಅಜ್ಞಾನಿಗಳು ಪ್ರಕೃತ್ಯಾದಿಗಳನ್ನೇ ಅವ್ಯಕ್ತ ಮೊದಲಾದ ಶಬ್ದಗಳಿಂದ ವ್ಯವಹರಿಸುತ್ತಿದ್ದಾರಲ್ಲವೇ? ಇದು ತಪ್ಪು.

**तत्वप्रकाशिका – तथा सत्यवाचकत्वाविशेषेण घटादिशब्दानां पटादौ व्यवहारप्रसङ्गादित्याशङ्कानिरासायोक्तं – शरीररुपकविन्यस्तेति ।।**

ಹಾಗಾದಲ್ಲಿ ಅವಾಚಕಶಬ್ದದಿಂದ ಆಯಾ ಪದಾರ್ಥಗಳು ಪ್ರತಿಪಾದ್ಯವಾಗುವುದಾದರೆ ಘಟ ಮೊದಲಾದ ಶಬ್ದಗಳು ಪಟಾದಿ ವಸ್ತುಗಳಿಗೆ ವಾಚಕವಾಗದಿದ್ದರೂ ಘಟ ಮೊದಲಾದ ಶಬ್ದಗಳನ್ನು ಪಟಾದಿಗಳಲ್ಲಿ ವ್ಯವಹಾರ ಮಾಡಬೇಕಾದಿತು. ಈ ಆಶಂಕೆಯನ್ನು ನಿರಾಕರಿಸಲು ಸೂತ್ರಕಾರರು 'ಶರೀರರೂಪಕವಿನ್ಯಸ್ತ' ಎಂಬ ಪದವನ್ನು ಪ್ರಯೋಗಿಸಿದ್ದಾರೆ.

**तत्वप्रकाशिका – तद् व्याचष्टे – पारतन्त्र्यादिति ।। यथा शरीरं पुरुषतन्त्रं तथा परमात्मतन्त्रत्वेन शरीरसमे प्रधानादौ स्थितस्य इत्यर्थः ।**

'ಶರೀರರೂಪಕವಿನ್ಯಸ್ತ' ಎಂಬ ಸೂತ್ರದ ಭಾಗವನ್ನೇ ಭಾಷ್ಯಕಾರರು 'ಪಾರತಂತ್ರ್ಯಾತ್' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. ಯಾವರೀತಿಯಾಗಿ ಶರೀರವು ಪುರುಷಾಧೀನವಾಗಿರುತ್ತದೋ, ಅದರಂತೆ ಶರೀರದಂತಿರುವ ಪ್ರಕೃತಿಯು ಪರಮಾತ್ಮನ ಅಧೀನವಾಗಿದೆಯೆಂದು ವಿವಕ್ಷಿಸಬೇಕು. 'ಇಂತಹ ಶರೀರದಂತಿರುವ ಪ್ರಧಾನದಲ್ಲಿ ಸ್ಥಿತನಾಗಿರುವ' ಎಂಬುದಾಗಿ 'ಶರೀರರೂಪಕವಿನ್ಯಸ್ತ' ಎಂಬ ಪದದ ಅರ್ಥವಾಗಿದೆ.

**तत्वप्रकाशिका – ननु 'अत्र पारतन्त्र्याभिप्रायेण प्रधानादेः परमात्म-शरीररूपत्वमसूत्रयत्' इति कुतो ज्ञायते ? शरीरत्वाभिप्रायेण किं न स्यात् ? इत्यत आह – कप्रत्यय इति ।।**

ಪ್ರಕೃತಿಯು ಪರಮಾತ್ಮನ ಶರೀರ ಎಂದರೆ ಪರಮಾತ್ಮನ ಅಧೀನವಾಗಿದೆ ಎಂಬರ್ಥವನ್ನು ಹೇಳುತ್ತಿದ್ದೀರಿ. ಇದು ನಮಗೆ ಹೇಗೆ ತಿಳಿಯುತ್ತದೆ. ಪ್ರಕೃತಿಯು ಪರಮಾತ್ಮನ ಶರೀರವೇ ಆಗಿರಬಹುದಲ್ಲವೇ? ಈ ಪ್ರಶ್ನೆಗೆ ಭಾಷ್ಯಕಾರರು 'ಕ ಪ್ರತ್ಯಯ' ಎಂಬುದರಿಂದ ಉತ್ತರಿಸಿದ್ದಾರೆ.

**तत्वप्रकाशिका – न प्रधानादेः परमात्मशरीरत्वाभिप्रायेणैतत्पदं प्रायुङ्क्त सूत्रकारः, यावता तत् कप्रत्ययेन कुत्सयामास ।**

ಪ್ರಧಾನವು ಪರಮಾತ್ಮನ ಸ್ವಾಭಾವಿಕವಾದ ಶರೀರವಾಗಿದ್ದಲ್ಲಿ ಸೂತ್ರಕಾರರು ಶರೀರರೂಪಕ ಎಂಬಲ್ಲಿ ಕಪ್ರತ್ಯಯವನ್ನು ಪ್ರಯೋಗಿಸುತ್ತಲೇ ಇರಲಿಲ್ಲ. ಯಾವ ಕಾರಣದಿಂದ ನಿಂದಾರ್ಥದಲ್ಲಿರುವ ಕಪ್ರತ್ಯಯವನ್ನು ಉಲ್ಲೇಖಿಸಿದ್ದಾರೋ, ಆ ಕಾರಣದಿಂದ ಪ್ರಕೃತಿಯು ಪರಮಾತ್ಮನ ಶರೀರವಲ್ಲವೆಂದು ನಿರ್ಣಯವಾಗುತ್ತದೆ.

**तत्वप्रकाशिका – नहि कुत्सनार्हं परमात्मशरीरमिति भावः । अन्यथा रूपपदवैयर्थ्याच्च ।**

ಏಕೆಂದರೆ ನಿಂದನೆಗೆ ವಿಷಯವಾದದ್ದು ಪರಮಾತ್ಮನ ಶರೀರವಾಗಲು ಸಾಧ್ಯವಿಲ್ಲ. ಹೀಗೊಪ್ಪದಿದ್ದರೆ ಶರೀರರೂಪಕ ಎಂಬಲ್ಲಿ ಸಾದೃಶ್ಯಾರ್ಥದಲ್ಲಿರುವ ರೂಪಶಬ್ದವೂ ಕೂಡ ವ್ಯರ್ಥವಾಗಬೇಕಾದೀತು.

**तत्वप्रकाशिका – शरीररूपकविन्यस्तपदं व्याख्याय तदभिप्रायमाह – परमात्मन एवेति ।।**

ಹೀಗೆ ಸೂತ್ರದಲ್ಲಿ 'ಶರೀರರೂಪಕವಿನ್ಯಸ್ತ' ಎಂಬ ಪದವನ್ನು ವ್ಯಾಖ್ಯಾನ ಮಾಡಿ, ಅದರ ಅಭಿಪ್ರಾಯವನ್ನು 'ಪರಮಾತ್ಮನ ಏವ' ಎಂಬ ಮುಂದಿನ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ.

**तत्वप्रकाशिका – यद्यपि परमात्मन एवाव्यक्तादिशब्दा वाचकाः, तथापि न प्रधानादौ तद् व्यवहारायोगः । प्रधानादौ परमात्मनो विन्यस्ततया, तत्सम्बन्धेन तत्रापि शब्दप्रवृत्तेः ।**

ಅವ್ಯಕ್ತಾದಿಶಬ್ದಗಳು ವಾಸ್ತವಿಕವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ. ಆದರೂ ಸಹ ಪ್ರಕೃತ್ಯಾದಿಗಳಲ್ಲಿಯೂ ಅವ್ಯಕ್ತಾದಿ ಶಬ್ದಗಳ ವ್ಯವಹಾರವು ಅಯುಕ್ತವಲ್ಲ. ಏಕೆಂದರೆ ಪ್ರಕೃತ್ಯಾದಿಗಳಲ್ಲಿ ಪರಮಾತ್ಮನು ನಿಯಾಮಕನಾಗಿ ನೆಲೆಸಿದ್ದಾನೆ. ಅಂತಹ ಅವ್ಯಕ್ತಾದಿಶಬ್ದಗಳಿಂದ ಮುಖ್ಯಪ್ರತಿಪಾದ್ಯನಾದ ಪರಮಾತ್ಮನ ಸಂಬಂಧದಿಂದ ಈ ಪ್ರಕೃತ್ಯಾದಿಪದಾರ್ಥಗಳೂ ಕೂಡ ಅಮುಖ್ಯವಾಗಿ ಪ್ರತಿಪಾದ್ಯ-ವಾಗುತ್ತಿವೆ.

**तत्वप्रकाशिका – नच वाच्यमुभयोरपि मुख्यवाच्यत्वं, विपरीतं वा किं न स्यात् ? इति । प्रधानादेः भगवत्तन्त्रत्वेनोभयोर्मुख्यवाच्यत्वस्योक्तविपर्यस्य चायोगादिति भावः ।**

ಪ್ರಶ್ನೆ - ಪರಮಾತ್ಮನು ಅವ್ಯಕ್ತಾದಿಶಬ್ದಗಳಿಂದ ಮುಖ್ಯವಾಗಿ ಹೇಗೆ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಪ್ರಕೃತಿಯೂ ಕೂಡ ಮುಖ್ಯವಾಗಿ ಪ್ರತಿಪಾದ್ಯವಾಗಬಹುದಲ್ಲವೇ? ಅಥವಾ ಪ್ರಕೃತಿಯೇ ಮುಖ್ಯವಾಗಿ ಪ್ರತಿಪಾದ್ಯವಾಗಿದ್ದು, ಇಂತಹ ಜಡವಾದ ಪ್ರಕೃತಿಯ ಸಂಬಂಧದಿಂದ ಪರಮಾತ್ಮನು ಅಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂದೇಕೆ ಹೇಳಬಾರದು ?

ಉತ್ತರ - ಇದು ತಪ್ಪು. ಪ್ರಕೃತ್ಯಾದಿಗಳು ಜಡವಾದ್ದರಿಂದ ಭಗವದಧೀನವಾಗಿವೆ. ಆದ್ದರಿಂದ ಪರಮಾತ್ಮನಂತೆ ಪ್ರಕೃತಿಯು ಮುಖ್ಯವಾಗಿ ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. ಮತ್ತು ಭಗವದ-

ಧೀನವಾದ ಪ್ರಕೃತಿಯ ಸಂಬಂಧದಿಂದ ಭಗವಂತನು ಪ್ರತಿಪಾದ್ಯನಾಗಿದ್ದಾನೆಂಬ ವಾದವೂ ಕೂಡ ಅಸಾಧುವಾಗಿದೆ.

**तत्वप्रकाशिका – तदुक्तं गारुडे –**

**'एवमेव हि शब्दानां प्रसिद्धिरपि लौकिकी ।**

**वाचकत्वं प्रधानस्य त्वितरस्य तदन्वयात्'**

**इति ।**

ಇದನ್ನೇ ಗರುಡಪುರಾಣದಲ್ಲಿ -

'ಏವಮೇವ ಹಿ ಶಬ್ದಾನಾಂ ಪ್ರಸಿದ್ಧಿರಪಿ ಲೌಕಿಕೀ ।

ವಾಚಕತ್ವಂ ಪ್ರಧಾನಸ್ಯ ತ್ವಿತರಸ್ಯ ತದನ್ವಯಾತ್ ॥'

ಸಕಲಶಬ್ದಗಳು ಮುಖ್ಯನಾದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಇವನ ಸಂಬಂಧದಿಂದ ಬೇರೆ ಪದಾರ್ಥಗಳನ್ನೂ ಪ್ರತಿಪಾದನೆ ಮಾಡುತ್ತವೆ.

**तत्वप्रकाशिका – नच मञ्चादावुक्तव्यभिचारः शङ्कनीयः । 'समाकर्षात्' इति वक्ष्यमाणन्यायस्यात्राभिप्रेतत्वेन लक्षणानाश्रयणादिति ।**

ಪ್ರಶ್ನೆ - ಯಾವ ಅರ್ಥವು ಅನ್ಯಾಧೀನವೋ, ಅದು ಅಮುಖ್ಯಾರ್ಥವೆಂದು ನಿಯಮ ಮಾಡಿದಿರಿ. 'ಮಂಚಾಃ ಕ್ರೋಶಂತಿ' ಇತ್ಯಾದಿ ಸ್ಥಳದಲ್ಲಿ ನಿಮ್ಮ ಈ ನಿಯಮಕ್ಕೆ ವ್ಯಭಿಚಾರ ಬರುತ್ತದೆ. ಇಲ್ಲಿ 'ಮಂಚ' ಶಬ್ದಕ್ಕೆ 'ಮಂಚದಲ್ಲಿರುವ ಪುರುಷರು' ಎಂದರ್ಥ. ಪುರುಷರೇ ಇಲ್ಲಿ ಮುಖ್ಯವಾಗಿ 'ಮಂಚ' ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ಮಂಚಗಳು ಪುರುಷಾಧೀನವಾದರೂ ಅಮುಖ್ಯಾರ್ಥಗಳಾಗಿಲ್ಲ. ಪುರುಷರು ಮಂಚಾಧೀನರಾಗದಿದ್ದರೂ ಅಮುಖ್ಯಾರ್ಥರಾಗಿದ್ದಾರೆ. ಮಂಚ ಶಬ್ದಕ್ಕೆ ಪುರುಷರಲ್ಲಿ ಲಕ್ಷಣಾ ಮಾಡುವುದು ಕಂಡಿದೆ. ಆದ್ದರಿಂದ ನಿಮ್ಮ ನಿಯಮಕ್ಕೆ ವ್ಯಭಿಚಾರ ಬರುತ್ತದಲ್ಲವೇ?

ಉತ್ತರ - ಇದು ತಪ್ಪು. ಏಕೆಂದರೆ ಮುಂದೆ 'ಸಮಾಕರ್ಷಾತ್' ಎಂಬ ಸೂತ್ರದಲ್ಲಿ ಹೇಳುವ ನ್ಯಾಯವು ಇಲ್ಲಿ ಅಭಿಪ್ರೇತವಾಗಿರುವುದರಿಂದ ಲಕ್ಷಣಾವನ್ನು ಆಶ್ರಯಿಸಬಾರದು. ಸಕಲಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಅವನನ್ನು ಹೇಳುವ ಶಬ್ದಗಳನ್ನೇ ಸಮಾಕರ್ಷಣ ಮಾಡಿ ಲೋಕದಲ್ಲಿ ವ್ಯವಹರಿಸುತ್ತಿದ್ದೇವೆ.

**तत्वप्रकाशिका – अत्र सर्वत्राव्यक्तपदं जीवाद्युपलक्षणार्थम् ।**

ಎಲ್ಲೆಡೆಯೂ ಅವ್ಯಕ್ತಪದದಿಂದ ಉಪಲಕ್ಷಣಯಾ ಜೀವನನ್ನೂ ಕೂಡ ವಿವಕ್ಷಿಸಬೇಕು. ಆದ್ದರಿಂದ ಪರಮಾತ್ಮನು ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ತಿಳಿಯುತ್ತೇವೆಯೋ, ಅದರಂತೆ ಜೀವ ಮೊದಲಾದ ಶಬ್ದಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನೆಂಬುದನ್ನೂ ಕೂಡ ತಿಳಿಯಬೇಕು.

**तत्वप्रकाशिका – ननु 'परमात्मन एवाव्यक्तादिशब्दाभिधेयत्वं प्रधानादेस्तु तत्सम्बन्धादेव' इति युज्यते, यदि प्रधानादेरल्पत्वं परमात्मनः स्वातन्त्र्यं प्रधानादिविन्यस्तत्वं च भवेत्; तदेव कुतः? इत्यत आह – तुच्छेनेति ॥**

ಪ್ರಶ್ನೆ - ಪರಮಾತ್ಮನೇ ಅವ್ಯಕ್ತಾದಿ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಪ್ರಕೃತ್ಯಾದಿಗಳು ಪರಮಾತ್ಮನ ಅಧೀನವಾದ್ದರಿಂದ ಅವನ ಸಂಬಂಧದಿಂದ ಅಮುಖ್ಯವಾಗಿ ಪ್ರತಿಪಾದ್ಯವಾಗಿವೆ ಎಂದು ಹೇಳುವುದಾದರೆ, ಪ್ರಕೃತ್ಯಾದಿಗಳು ಪರಮಾತ್ಮನ ಮುಂದೆ ಬಹಳ ಅಲ್ಪವಾಗಿವೆ ಎಂದು ನಿರ್ಣಯವಾಗಬೇಕು. ಮತ್ತು ಪರಮಾತ್ಮನು ಸ್ವತಂತ್ರನಾಗಿದ್ದಾನೆಂದು ಪ್ರಕೃತ್ಯಾದಿಗಳಿಗೆ ನಿಯಾಮಕನಾಗಿದ್ದಾನೆಂಬುದೂ ಕೂಡ ನಿರ್ಣಯವಾಗಬೇಕು. ಈ ವಿಷಯವು ಯಾವ ಪ್ರಮಾಣದಿಂದ ನಿರ್ಣಯವಾಗುತ್ತದೆ ?

ಉತ್ತರ - ಪ್ರಮಾಣವಿದೆ. 'ತುಚ್ಛ್ಯೇನಾಭ್ವಪಿಹಿತಂ ಯದಾಸೀತ್' ಎಂಬ ಋಗ್ವೇದ ವಾಕ್ಯವು ಇದನ್ನು ಪ್ರತಿಪಾದನೆ ಮಾಡುತ್ತಿದೆ. ಇದನ್ನೇ ಶ್ರೀಮದಾಚಾರ್ಯರು 'ತುಚ್ಛ್ಯೇನ' ಎಂಬ ಭಾಷ್ಯದಿಂದ ಹೇಳಿರುತ್ತಾರೆ.

**तत्वप्रकाशिका – 'अल्पेनाव्यक्तेन विभु ब्रह्म पिहितमासीत्' इत्यर्थः । 'य आत्मनि तिष्ठन्' इत्यादिश्रुत्यन्तरं चात्रोदाहर्तव्यम् ।**

ಅಲ್ಪವಾದ ಅವ್ಯಕ್ತದಿಂದ 'ಆಭು', ವಿಭು = ವ್ಯಾಪ್ತನಾದ ಪರಮಾತ್ಮನು ಆಚ್ಛಾದಿತನಾಗಿದ್ದನೆಂದರ್ಥ. ಅಲ್ಪವಾದ, ಅಸ್ವಂತ್ರವಾದ ಅವ್ಯಕ್ತದಲ್ಲಿ ವ್ಯಾಪ್ತನಾದ ಪರಮಾತ್ಮನು ಅಂತರ್ಯಾಮಿರೂಪದಿಂದ ಆಚ್ಛಾದಿತನಾಗಿದ್ದ ಎಂಬುದು ಇದರ ಅಭಿಪ್ರಾಯ. 'ಯ ಆತ್ಮನಿ ತಿಷ್ಠನ್' ಇತ್ಯಾದಿ ಬೇರೆ ಶ್ರುತಿಗಳನ್ನೂ ಕೂಡ ಇಲ್ಲಿ ಉದಾಹರಿಸಬೇಕು.

**तत्वप्रकाशिका – परमात्मनोऽव्यक्तादिशब्दवाच्यत्वे सिद्धे भवेत् प्राचीनचिन्ता । तदेव कुतः? इत्यतो 'दर्शयतिच' इति शब्दाभ्यां सूचिते श्रुतिस्मृती पठति – अव्यक्तमिति ॥**

ಪ್ರಶ್ನೆ - ಪರಮಾತ್ಮನು ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾದರೆ ಹಿಂದೆ ಹೇಳಿದ ಪರಮಾತ್ಮನ ಸಂಬಂಧದಿಂದ ಪ್ರಕೃತ್ಯಾದಿಗಳೂ ಕೂಡ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯವಾಗುತ್ತೆಂಬ ವಿಚಾರಗಳು ಸಿದ್ಧವಾಗುತ್ತಿದ್ದವು. ಆದರೆ ಪರಮಾತ್ಮನಿಗೆ ಅವ್ಯಕ್ತಶಬ್ದವಾಚ್ಯತ್ವವೇ ಹೇಗೆ ಕೂಡುತ್ತದೆ ?

ಉತ್ತರ - ಈ ಪ್ರಶ್ನೆಗೆ 'ದರ್ಶಯತಿ ಚ' ಎಂಬ ಸೂತ್ರದಲ್ಲಿರುವ ಶಬ್ದದಿಂದ ಸೂಚಿತವಾದ ಶ್ರುತಿ ಮತ್ತು ಸ್ಮೃತಿಗಳನ್ನು ಪಠಿಸುತ್ತಾ ಉತ್ತರಿಸುತ್ತಿದ್ದಾರೆ 'ಅವ್ಯಕ್ತಮ್' ಇತ್ಯಾದಿಯಾಗಿ.

**तत्वप्रकाशिका – अचलम् = ईश्वरभावात् । शान्तं = निर्विकारम् । निष्क्रियम् = अक्लिष्टकारित्वादेः । आत्मानम् , आदानादेः । यस्याक्षरस्य ब्रह्मत्वमुक्तं, तस्यैवाव्यक्तत्वमुच्यत इत्यर्थः ।**

'ಅವ್ಯಕ್ತಮಚಲಮ್' ಎಂಬ ಶ್ರುತಿಯಲ್ಲಿರುವ ಅಚಲಶಬ್ದಕ್ಕೆ ಈಶ್ವರಸ್ವರೂಪದಿಂದ ಎಂದೂ ಕೂಡ ಚಲನವಿಲ್ಲದವನು ಎಂದು ಅರ್ಥ. ಶಾಂತಂ = ನಿರ್ವಿಕಾರನು, ನಿಷ್ಕ್ರಿಯಮ್ = ಕ್ಲೇಶವಿಲ್ಲದೇ ಸಕಲ ಕಾರ್ಯಗಳನ್ನು ಮಾಡುವವನು. ಆತ್ಮಾನಂ = ಎಲ್ಲವನ್ನು ಸ್ವೀಕರಿಸುವವನು. ಯಾವ ಅಕ್ಷರನನ್ನು ಬ್ರಹ್ಮನೆಂದು ಹೇಳಲಾಗಿದೆಯೋ, ಅಂತಹವನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ಇದರ ಅರ್ಥ.

**तत्वप्रकाशिका – 'अनेन जीवेनाऽऽत्मना' इत्यादिश्रुतिः 'जीवो विनयिता साक्षी' इत्यादिस्मृतिश्चोदाहर्तव्या ।। १ ।।**

'ಅನೇನ ಜೀವೇನಾऽऽತ್ಮನಾ' ಇತ್ಯಾದಿ ಶ್ರುತಿ ಮತ್ತು 'ಜೀವೋ ವಿನಯಿತಾ ಸಾಕ್ಷೀ' ಇತ್ಯಾದಿ ಸ್ಮೃತಿಯು ಇಲ್ಲಿ ಪ್ರಮಾಣವಾಗಿದೆ. ಅವ್ಯಕ್ತಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆನ್ನಲು ಹೇಗೆ ಶ್ರುತಿ-ಸ್ಮೃತಿಗಳು ಆಧಾರವಾಗಿವೆಯೋ, ಅದರಂತೆ ಜೀವಶಬ್ದದಿಂದ ಪರಮಾತ್ಮನು ಪ್ರತಿಪಾದ್ಯ-ನಾಗಿದ್ದಾನೆಂಬ ವಿಷಯದಲ್ಲಿ ಶ್ರುತಿ-ಸ್ಮೃತಿಗಳು ಆಧಾರವಾಗಿವೆ ಎಂದು ತಿಳಿದುಕೊಳ್ಳಬೇಕು.

ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

# ಭಾವದೀಪ

पूर्ववत्कृत्स्नपादार्था(र्थत्वा) प्रतीतेराह – **एतदिति** ।। अत्रैतत् समन्वये का सङ्गतिरित्यत आनन्दमनये प्रागुक्तं स्मारयति – **अन्यत्रेति** ।। भाष्ये शब्दपदं नामलिङ्गपरमित्युपेत्याऽऽह **उभयविधेति** ।। श्रुतिलिङ्गादिभिरित्यस्योपयोगं वक्तुमाह – **नन्विति** ।।

ಅನ್ಯತ್ರೈವಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡಲು ನಾಲ್ಕನೆಯ ಪಾದವು ಹೊರಡುತ್ತಿದೆ. ಸಮಗ್ರ ಈ ಪಾದದಲ್ಲಿ ಪ್ರತಿಪಾದನೆ ಮಾಡುತ್ತಿರುವ ವಿಷಯವನ್ನು ತಿಳಿಸಲು ಟೀಕೆಯಲ್ಲಿ 'ಏತತ್-

ಪಾದಪ್ರತಿಪಾದ್ಯಂ' ಎಂಬ ವಾಕ್ಯವು ಹೊರಟಿದೆ. ಅನ್ಯತ್ರೈವಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಇಲ್ಲಿ ಮಾಡಲು ಯಾವ ಸಂಗತಿ ಇರುತ್ತದೆ ? ಎಂಬ ಪ್ರಶ್ನೆಗೆ ಹಿಂದೆ ಆನಂದಮಯಾಧಿಕರಣದಲ್ಲಿ ಹೇಳಿದ ವಿಷಯವನ್ನೇ ಪುನಃ ಸ್ಮರಣೆಗೆ ತಂದುಕೊಡುತ್ತಿದ್ದಾರೆ 'ಅನ್ಯತ್ರ' ಇತ್ಯಾದಿ ಟೀಕೆಯಿಂದ. ಭಾಷ್ಯದಲ್ಲಿ 'ಶಬ್ದಾನಾಮ್' ಎಂದು ಹೇಳಿದ್ದಾರೆ. ಇಲ್ಲಿರುವ 'ಶಬ್ದ' ಎಂಬ ಪದಕ್ಕೆ ನಾಮಾತ್ಮಕವಾದ ಹಾಗೂ ಲಿಂಗಾತ್ಮಕವಾದ ಶಬ್ದಗಳು ಎಂದರ್ಥ. ಆದ್ದರಿಂದ ಟೀಕೆಯಲ್ಲಿ 'ಉಭಯವಿಧ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದರಿಂದ 'ಶಬ್ದಾನಾಮ್' ಎಂಬ ಭಾಷ್ಯದ ಪದಕ್ಕೆ 'ಉಭಯವಿಧಶಬ್ದಾನಾಮ್' ನಾಮಾತ್ಮಕವಾದ ಮತ್ತು ಲಿಂಗಾತ್ಮಕವಾದ ಶಬ್ದಗಳ ಎಂಬರ್ಥವನ್ನು ಹೇಳಿದಂತಾಯಿತು.

ಭಾಷ್ಯದಲ್ಲಿ 'ಶ್ರುತಿಲಿಂಗಾದಿಭಿಃ' ಎಂದು ಹೇಳಿದ್ದಾರೆ. ಶ್ರುತಿ ಹಾಗೂ ಲಿಂಗಗಳ ಆಧಾರವನ್ನು ಹೇಳಿದ್ದಕ್ಕೆ ಉಪಯೋಗವನ್ನು ತಿಳಿಸಲು 'ನನು' ಇತ್ಯಾದಿ ಟೀಕೆ ಹೊರಡುತ್ತಿದೆ.

**ಭಾವದೀಪಃ – पूर्वं क्वचिदिति ।। द्वितीयपाद इत्यर्थः ।। प्राबल्यादिति ।। श्रुतेरर्थान्तरपरत्वमपि विनाऽनुपपद्यमानत्वरूपात् प्रबल्यादित्यर्थः । तादृशश्रुत्यादिकं च प्रतिनयं दर्शयिष्याम इति भावः ।**

'ಪೂರ್ವಂ ಕ್ವಚಿತ್' ಎಂದರೆ ಎರಡನೆಯ ಪಾದದಲ್ಲಿ ಎಂದರ್ಥ. 'ತಸ್ಯೈತಸ್ಯಾಸಾವಾದಿತ್ಯೋ ರಸಃ ಇತ್ಯಾದಿನಾ ಆದಿತ್ಯಸ್ಯ ಪ್ರತೀಯತೇ' ಎಂಬುದಾಗಿ ಎರಡನೆಯ ಪಾದದ ಸರ್ವಗತತ್ವಾಧಿಕರಣದಲ್ಲಿ ಶ್ರುತಿಯಿಂದಲೇ ಅನ್ಯತ್ರಪ್ರಸಿದ್ಧಿಯನ್ನು ತೋರಿಸಿದ್ದಾರೆ. ಆನಂದಮಯಾಧಿಕರಣದಲ್ಲಿಯೂ ಕೂಡ 'ಬ್ರಹ್ಮ ಶಬ್ದಾದ್ ಹಿರಣ್ಯಗರ್ಭಸ್ಯ ಪ್ರಾಪ್ತಿಃ' ಎಂದು ಶ್ರುತಿಯಿಂದಲೇ ಅನ್ಯತ್ರಪ್ರಸಿದ್ಧಿಯನ್ನು ತೋರಿಸಿದ್ದಾರೆ. 'ಪ್ರಾಬಲ್ಯಾತ್' ಎಂದರೆ ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಶ್ರುತಿಗಳು ಅನ್ಯತ್ರಪ್ರಸಿದ್ಧವೆಂದು ಒಪ್ಪದಿದ್ದರೆ ಅನುಪಪದ್ಯಮಾನವಾಗುತ್ತವೆ. ಹೀಗೆ ಅನ್ಯಥಾನುಪಪತ್ತಿ ಪ್ರಮಾಣದಿಂದ ಪ್ರಬಲವಾಗಿರುವುದರಿಂದ ಎಂದರ್ಥ. ಅಂತಹ ಪ್ರಬಲವಾದ ಶ್ರುತಿಗಳನ್ನು ಪ್ರತಿ ಅಧಿಕರಣದಲ್ಲಿಯೂ ಮುಂದೆ ತೋರಿಸುತ್ತೇವೆ.

**ಭಾವದೀಪಃ – सामस्त्येनेत्येतद् व्याचष्टे – पूर्वमिति ।। त्रिपाद्यामित्यर्थः ।। स्रष्टृत्वेति ।। जन्मादिसूत्रे कण्ठोक्तेरित्यर्थः ।। तत्सङ्गतानां चेति ।। आनन्दमयाकाशादिशब्दानामित्यर्थः ।।**

ಭಾಷ್ಯದಲ್ಲಿ 'ಸಾಮಸ್ತ್ಯೇನ' ಎಂದು ಹೇಳಿದ್ದಾರೆ. ಅದನ್ನೇ ಟೀಕೆಯಲ್ಲಿ 'ಪೂರ್ವಮ್ ಸ್ರಷ್ಟೃತ್ವಾದಿಗುಣಾಭಿಧಾಯಕನಾಮ್' ಎಂಬ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ. 'ಪೂರ್ವಮ್' ಎಂದರೆ ಹಿಂದಿನ ಮೂರು ಪಾದಗಳಲ್ಲಿ ಎಂದರ್ಥ. 'ಸ್ರಷ್ಟೃತ್ವ' ಎಂಬುದಕ್ಕೆ ಜನ್ಮಾದ್ಯಧಿಕರಣದಲ್ಲಿ ಕಂಠತಃ ಸ್ರಷ್ಟೃತ್ವ ಎಂಬ ಲಿಂಗವನ್ನು ಸಮನ್ವಯ ಮಾಡಿದ್ದಾರೆ ಎಂದರ್ಥ. 'ತತ್‌ಸಂಗತಾನಾಂ ಚ' ಎಂದರೆ ಸ್ರಷ್ಟೃತ್ವಕ್ಕೆ ಸಂಗತವಾದ 'ಆನಂದಮಯ' 'ಆಕಾಶ' ಮೊದಲಾದ ಶಬ್ದಗಳ ಸಮನ್ವಯವನ್ನು ಎಂದರ್ಥ.

ಪರಿಪೂರ್ಣಚಂದ್ರಿಕಾ

**भावदीपः – ततोऽपि प्रबलेति ।।** विष्णुपरत्वं विनाऽनुपपद्यमानैस्तदधीनत्वज्ञेयत्वावचनादिभिरित्यर्थः । विशेषहेतुभिरित्येतत्प्रकारान्तरेण व्याचष्टे – **यदुदितमिति ।। प्रागनुक्तेति ।।** तदधीनत्वादिभिरित्यर्थः ।

'ತತೋಽಪಿ ಪ್ರಬಲ' ಎಂದರೆ ಶ್ರುತಿಗಳಿಗೆ ವಿಷ್ಣುಪರತ್ವವನ್ನು ಒಪ್ಪದಿದ್ದರೆ ಶ್ರುತಿಗಳೇ ಅನುಪಪ್ಯದಮಾನವಾಗುತ್ತವೆಂಬ ಲಿಂಗ ಹಾಗೂ 'ತದಧೀನತ್ವ' 'ಜ್ಞೇಯತ್ವಾವಚನ' ಮೊದಲಾದ ಲಿಂಗಗಳಿಂದ ಪ್ರಬಲವಾಗಿವೆ ಎಂದರ್ಥ. 'ವಿಶೇಷಹೇತುಭಿಃ' ಎಂಬುದನ್ನು ಮತ್ತೊಂದು ಪ್ರಕಾರದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ 'ಯದುದಿತಮ್' ಇತ್ಯಾದಿ ಟೀಕೆಯಿಂದ. 'ಪ್ರಾಗನುಕ್ತ' ಎಂಬ ಟೀಕಾ ವಾಕ್ಯಕ್ಕೆ 'ತದಧೀನತ್ವ' ಇತ್ಯಾದಿ ಲಿಂಗಗಳು ಹಿಂದೆ ಹೇಳಿರುವುದಿಲ್ಲ ಎಂದಭಿಪ್ರಾಯ.

**भावदीपः –** 'तदधीनत्वात्' इत्युक्तिः सूत्रकृताऽत्रोक्तैव भाष्यादौ पूर्वमुक्तेति भावः । 'तत्तु' इत्याद्यग्रेतनभाष्योपपत्तिं 'जन्माद्यस्येति सूत्रेण गुणसर्वस्वसिद्धये' इत्याद्यानन्दमयनयानुभाष्यदिशा वक्तुमाह – **स्यादेतदिति ।।**

'ತದಧೀನತ್ವಾತ್' ಎಂಬ ನ್ಯಾಯವನ್ನು ಸೂತ್ರಕಾರರು ಇಲ್ಲಿ ಮಾತ್ರ ಹೇಳುತ್ತಿದ್ದಾರೆ. ಹಿಂದೆ ಭಾಷ್ಯಕಾರರು ಹೇಳಿದ್ದರೂ ಕೂಡ ಸೂತ್ರಕಾರರು ಹೇಳಿರಲಿಲ್ಲ. ಜನ್ಮಾಧಿಕರಣದಲ್ಲಿ ಹೇಳಲ್ಪಟ್ಟ ಜಗತ್ಕಾರಣತ್ವದ ಸಮನ್ವಯವಷ್ಟೇ ವಿವಕ್ಷಿತವಲ್ಲ. ತನ್ಮೂಲಕವಾಗಿ ಸಕಲಗುಣಗಳೂ ಕೂಡ ವಿವಕ್ಷಿತ. ಹೀಗೆ ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ 'ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ' ಎಂದು ಹೇಳಿರುತ್ತಾರೆ. ಪ್ರಕೃತ 'ತತ್ತು ಸಮನ್ವಯಾತ್' ಇತ್ಯಾದಿಯಾಗಿರುವ ಮುಂದಿನ ಭಾಷ್ಯದ ಮಾತುಗಳಿಂದ ತಿಳಿಯುವ ಉಪಪತ್ತಿಯನ್ನು ಈ ಅನುವ್ಯಾಖ್ಯಾನದ ಪ್ರಕಾರವಾಗಿ ವ್ಯಾಖ್ಯಾನ ಮಾಡಲು 'ಸ್ಯಾದೇತತ್' ಇತ್ಯಾದಿಯಾಗಿ ಆಶಂಕಿಸುತ್ತಿದ್ದಾರೆ.

**भावदीपः – न हीति ।।** सङ्कोचकाभावादिति भावः । अन्योपलक्षणत्वेनोक्तौ बीजमाह – **तस्याखिलगुणेति ।।** पूर्वत्रेव सङ्गतिभाष्यभ्रान्तिनिरासायाऽऽह – **सूत्रमेवेति ।।**

'ನಹಿ ಬ್ರಹ್ಮಶಬ್ದಃ ಕತಿಪಯಗುಣಾಭಿಧಾಯಕಃ' ಎಂಬ ಟೀಕೆಗೆ 'ಬ್ರಹ್ಮಶಬ್ದದಿಂದ ಕೆಲವು ಗುಣಗಳು ಮಾತ್ರ ವಿವಕ್ಷಿತವೆನ್ನಲು ಯಾವುದೇ ಆಧಾರವಿರುವುದಿಲ್ಲ' ಎಂದಭಿಪ್ರಾಯ. ಬೇರೆ ಗುಣಗಳನ್ನೂ ಕೂಡ ಉಪಲಕ್ಷಣಯಾ ವಿವಕ್ಷಿಸಬೇಕೆನ್ನಲು ಕಾರಣವನ್ನು 'ತಸ್ಯಾಖಿಲ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಹಿಂದಿನಂತೆ ಇಲ್ಲಿಯೂ ಸಹ ಪೂರ್ವಪಕ್ಷ ಹಾಗೂ ಸಂಗತಿಗಳನ್ನು ಭಾಷ್ಯದಲ್ಲಿ ಮೊದಲು ಹೇಳಿದ್ದಾರೆಂಬ ಭ್ರಾಂತಿ ಬರುತ್ತದೆ. ಅದಕ್ಕೋಸ್ಕರ 'ಸೂತ್ರಮೇವ' ಎಂದು ಹೇಳಿದ್ದಾರೆ. ಅಂದರೆ ಸೂತ್ರವನ್ನು ಪಠಿಸಿ ಅನಂತರ ಸಂಗತಿ ಮತ್ತು ಪೂರ್ವಪಕ್ಷಗಳನ್ನು ಭಾಷ್ಯಕಾರರು ಹೇಳಿದ್ದಾರೆಂದು ತಿಳಿಯಬೇಕು.

ಆನುಮಾನಿಕಾಧಿಕರಣ (೧-೪-೧)

**भावदीपः** – दुःखित्वादिरादिपदार्थः । तस्य प्राबल्यायोक्तं भगवति विरुद्धतयेति ।।

'ಅವರತ್ವಾದಿ' ಎಂಬಲ್ಲಿರುವ ಆದಿಪದದಿಂದ ದುಃಖಿತ್ವಾದಿಗಳನ್ನು ವಿವಕ್ಷಿಸಬೇಕು. ಈ ದುಃಖಿತ್ವ, ಅವರತ್ವ ಮೊದಲಾದವುಗಳು ಪ್ರಬಲವಾಗಿದೆ ಎಂದು ತಿಳಿಸಲು 'ಭಗವತಿ ವಿರುದ್ಧತಯಾ' ಎಂದು ಹೇಳಿದ್ದಾರೆ.

**भावदीपः** – **श्रुत्यादिति** ।। समन्वयसूत्रे सर्वश्रुतिगतसर्वशब्दार्थत्वोक्त्या तदधिकरणेन तद्विषयभूतसर्वश्रुतिनिचयेन च सङ्गतिमित्यर्थः ।

ಸಮನ್ವಯಸೂತ್ರದಲ್ಲಿ ಸಕಲ ಶ್ರುತಿಗಳಲ್ಲಿರುವ ಶಬ್ದಗಳ ಸಮನ್ವಯ ಪ್ರತಿಜ್ಞೆಯನ್ನು ಮಾಡಿದ್ದಾರೆ. ಆದ್ದರಿಂದ ಆ ಸಮನ್ವಯಾಧಿಕರಣದಿಂದ ಮತ್ತು ಆ ಸಮನ್ವಯಸೂತ್ರಕ್ಕೆ ವಿಷಯಭೂತವಾದ ಸಕಲ ಶ್ರುತಿಗಳ ಸಮೂಹದಿಂದ ಈ ಅಧಿಕರಣವು ಸಂಗತವಾಗಿದೆ ಎಂದು ತಿಳಿಯಬೇಕು.

**भावदीपः** – उच्यत इत्यन्तं भाष्यं सङ्गतिसूचकत्वेन तावद् व्याख्यातुम् उक्त इत्यन्तस्यार्थमाह – **तत्त्वित्यादिना** ।।

'ಏಕೇಷಾಂ ಶಾಖಿನಾಮ್ ಉಚ್ಯತೇ' ಎಂಬಲ್ಲಿಯ ತನಕ ಭಾಷ್ಯವು ಸಂಗತಿಸೂಚಕವಾಗಿದೆ ಎಂದು ವ್ಯಾಖ್ಯಾನ ಮಾಡಲು 'ಸಮನ್ವಯಃ ಉಕ್ತಃ' ಎಂಬಲ್ಲಿಯ ತನಕ ಇರುವ ಭಾಷ್ಯದ ವಾಕ್ಯವನ್ನು 'ತತ್ತು' ಇತ್ಯಾದಿಯಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – **तन्नेत्यादेरर्थः सर्वेत्यादि** ।। **अव्यक्तादीति** ।। दुःखिबद्धावरादिदोषवाचिनः सर्वेऽपि शब्दा आदिपदार्थाः । उक्तं चानुभाष्ये – 'दुःखिबद्धावराद्यास्तु' इति।

'ತನ್ನ ಯುಜ್ಯತೇ' ಇತ್ಯಾದಿ ಭಾಷ್ಯದ ಅಭಿಪ್ರಾಯವನ್ನು 'ಸರ್ವ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿದ್ದಾರೆ. 'ಅವ್ಯಕ್ತಾದಿ' ಎಂಬಲ್ಲಿ 'ದುಃಖೀ', 'ಬದ್ಧಃ', ಅವರ ಮೊದಲಾದ ದೋಷವಾಚಕವಾದ ಸಕಲಶಬ್ದಗಳನ್ನು ಆದಿಪದದ ಅರ್ಥವೆಂದು ವಿವಕ್ಷಿಸಬೇಕು. ಇದನ್ನೇ ಅನುವ್ಯಾಖ್ಯಾನದಲ್ಲಿ 'ದುಃಖಿಬದ್ಧಾವರಾದ್ಯಾಸ್ತು' ಎಂದು ಹೇಳಿದ್ದಾರೆ.

**भावदीपः** – पूर्वपक्षे युक्तिसूचनाय 'महतः परम्' इत्यंशोक्तिः । सूत्रभाष्ये उपलक्षणं मत्त्वाऽऽह – **योनिमिति** ।। अनेन बद्धत्वमुच्यते ।। **जीवा इति** ।। 'अदुःखमितरत् सर्वं जीवा एव तु दुःखिनः । तेषां दुःखप्रहाणाय श्रुतिरेषा प्रवर्तते' इति श्रुतौ किञ्चिदुच्यत इत्यर्थः । विष्णोरन्यत्वे वक्ष्यमाणदिशेति भावः । उक्त

इत्यन्तवाक्यस्य भावोक्तिः ।। **न तस्येति** ।। इति सङ्गतिसम्भवादितीति शब्दो हेत्वर्थः ।

ಪೂರ್ವಪಕ್ಷದಲ್ಲಿ ಯುಕ್ತಿಯನ್ನು ಸೂಚನೆ ಮಾಡುವುದಕ್ಕಾಗಿ 'ಮಹತಃ ಪರಮ್' ಎಂಬ ಶ್ರುತಿಯ ಭಾಗವನ್ನು ಉಲ್ಲೇಖಿಸಿದ್ದಾರೆ. ಸೂತ್ರ ಹಾಗೂ ಭಾಷ್ಯಗಳಲ್ಲಿ ಜೀವಾದಿಗಳನ್ನು ಉಪಲಕ್ಷಣಯಾ ವಿವಕ್ಷಿಸಬೇಕೆಂದು ತಿಳಿಸಲು 'ಯೋನಿಮನ್ಯೇ' ಇತ್ಯಾದಿಯಾಗಿ ಹೇಳಿದ್ದಾರೆ. 'ಯೋನಿಮನ್ಯೇ ಪ್ರಪದ್ಯಂತೇ' ಎಂಬ ವಾಕ್ಯದಲ್ಲಿ ಬದ್ಧತ್ವ ದೋಷವನ್ನು ಹೇಳಲಾಗಿದೆ. 'ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ । ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ' ಎಂಬ ಶ್ರುತಿಯಲ್ಲಿ ಜೀವನು ದುಃಖಿಯಾಗಿದ್ದಾನೆಂದು ಹೇಳಲಾಗಿದೆ. ಈ ಶ್ರುತಿ-ಸ್ಮೃತಿಗಳಲ್ಲಿರುವ ಅವ್ಯಕ್ತ, ಜೀವ ಮೊದಲಾದ ಶಬ್ದಗಳು ವಿಷ್ಣುವಾಗದಿದ್ದರೆ ಏನೆಂಬುದನ್ನು ಮುಂದೆ ಪೂರ್ವಪಕ್ಷದಲ್ಲಿ ಹೇಳುವಂತೆ ತಿಳಿಯಬೇಕು. 'ಉಕ್ತಃ' ಎಂಬಲ್ಲಿಯ ತನಕ ಇರುವ ಭಾಷ್ಯದ ಅಭಿಪ್ರಾಯವನ್ನು 'ನ ತಸ್ಯ' ಎಂಬ ಟೀಕೆಯಿಂದ ಸ್ಪಷ್ಟಪಡಿಸಿದ್ದಾರೆ. 'ಇತಿ ಸಂಗತಿಸಂಭವಾತ್' ಎಂಬಲ್ಲಿರುವ 'ಇತಿ' ಶಬ್ದವು ಹೇತ್ವರ್ಥದಲ್ಲಿದೆ.

**भावदीपः** – एवमव्यक्तादिशब्दाः सर्वेऽन्यत्र प्रसिद्धा अपीति वक्ष्यमाणभाष्यानुरोधेन विषयादिकमाह – **तदव्यक्तेति** ।। तन्नेत्यादिभाष्यं पूर्वपक्षादिपरत्वेनापि व्याख्यातुं प्रधानमप्युच्यत इति प्रतिज्ञामुपलक्षणत्वेन व्याचष्टे – **प्रधानाद्येवेति** ।।

एतेनापिरेवार्थ इति दर्शितम् । तत्र हेत्वाकाङ्क्षायां वक्ष्यमाणभाष्यसूचितां युक्तिमाह – **अव्यक्तेति** ।।

'ಏವಮವ್ಯಕ್ತಾದಿಶಬ್ದಾಃ ಸರ್ವೇಽನ್ಯತ್ರ ಪ್ರಸಿದ್ಧಾ ಅಪಿ' ಎಂಬ ಮುಂದಿನ ಭಾಷ್ಯಕ್ಕೆ ಅನುಸಾರಿಯಾಗಿ ವಿಷಯಾದಿಗಳನ್ನು ಟೀಕೆಯಲ್ಲಿ 'ತದವ್ಯಕ್ತ' ಇತ್ಯಾದಿಯಾಗಿ ಪ್ರತಿಪಾದನೆ ಮಾಡುತ್ತಿದ್ದಾರೆ. 'ತನ್ನ' ಇತ್ಯಾದಿಯಾದ ಭಾಷ್ಯವು ಕೇವಲ ಸಂಗತಿಪರವಷ್ಟೇ ಅಲ್ಲ, ಪೂರ್ವಪಕ್ಷಪರವೂ ಆಗಿದೆ ಎಂದು ವ್ಯಾಖ್ಯಾನ ಮಾಡಲು 'ಪ್ರಧಾನಮಪಿ ಉಚ್ಯತೇ' ಎಂಬ ಪ್ರತಿಜ್ಞೆಯು ಕೇವಲ ಉಪಲಕ್ಷಣವೆಂದು ವ್ಯಾಖ್ಯಾನ ಮಾಡುತ್ತಿದ್ದಾರೆ 'ಪ್ರಧಾನಾದ್ಯೇವ' ಇತ್ಯಾದಿಯಾಗಿ.

'ಪ್ರಧಾನಾದ್ಯೇವ' ಎಂದು ಹೇಳಿದ್ದರಿಂದ ಭಾಷ್ಯದಲ್ಲಿರುವ 'ಅಪಿ'ಶಬ್ದವು ಏವಕಾರಾರ್ಥದಲ್ಲಿದೆ ಎಂದು ತೋರಿಸಿದ್ದಾರೆ. ಈ ವಿಷಯದಲ್ಲಿ ಹೇತುವಿನ ಆಕಾಂಕ್ಷೆಯು ಪ್ರಾಪ್ತವಾದರೆ ಮುಂದಿನ ಭಾಷ್ಯದಿಂದ ಸೂಚಿತವಾದ ಯುಕ್ತಿಯನ್ನೇ 'ಅವ್ಯಕ್ತ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः** – अव्यक्तादिशब्दानां परमात्मविषयत्वाङ्गीकारे सर्वमानविरोध इति न्यायविवरणमत्र योजयितुं शङ्कामाह – **न चेति** ।। नामपादीयन्यायेनेति भावः ।

ಅವ್ಯಕ್ತ ಮೊದಲಾದ ಶಬ್ದಗಳು ಪರಮಾತ್ಮವಿಷಯಕವೆಂದು ಅಂಗೀಕಾರ ಮಾಡಿದರೆ, ಸಕಲಪ್ರಮಾಣಗಳ ವಿರೋಧ ಬರುತ್ತದೆ ಎಂಬುದಾಗಿ 'ಸರ್ವಮಾನವಿರೋಧಃ' ಎಂಬ ನ್ಯಾಯವಿವರಣದಲ್ಲಿ ಹೇಳಿದ್ದಾರೆ. ಅದನ್ನು ಇಲ್ಲಿ ಯೋಜನೆ ಮಾಡುತ್ತಾ ಶಂಕೆಯನ್ನು 'ನಚ' ಇತ್ಯಾದಿ ಟೀಕೆಯಲ್ಲಿ ಹೇಳಿದ್ದಾರೆ. ನಾಮಪಾದದ ನ್ಯಾಯದಂತೆ ಈ ಶಂಕೆಯನ್ನು ತಿಳಿಯಬೇಕು.

**भावदीपः** – 'महतः परं ध्रुवम्' इत्याद्यग्रेतनभाष्यलब्धां युक्तिमाह – **तथाऽव्यक्तस्येति** ।। महान्तं महत्तत्त्वम् । इत्येकादशगीताभाष्योक्तस्मृतेरित्यर्थः ।। **विष्णोरिति** ।। अदृश्यत्वनये तथा निर्णयादिति भावः ।

'ಮಹತಃ ಪರಂ ಧ್ರುವಮ್' ಇತ್ಯಾದಿಯಾದ ಮುಂದಿನ ಭಾಷ್ಯದಿಂದ ಲಬ್ಧವಾದ ಯುಕ್ತಿಯನ್ನು 'ತಥಾಽವ್ಯಕ್ತಸ್ಯ' ಇತ್ಯಾದಿಯಾಗಿ ಹೇಳಿದ್ದಾರೆ. 'ಮಹಾಂತಂ' ಎಂದರೆ 'ಮಹತ್ತತ್ತ್ವ' ಎಂದರ್ಥ. 'ಮಹಾಂತಂ ವಿಭುಮಾತ್ಮಾನಂ' ಎಂಬುದು ಹನ್ನೊಂದನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿವಾಕ್ಯವಾಗಿದೆ. 'ವಿಷ್ಣೋಃ' ಎಂದರೆ ಅದೃಶ್ಯತ್ವಾಧಿಕರಣದಲ್ಲಿ ನಿರ್ಣಯಿಸಿದಂತೆ ವಿಷ್ಣುವಿಗೆ ಅವ್ಯಕ್ತಶಬ್ದ ಪ್ರತಿಪಾದ್ಯತ್ವವನ್ನು ಇಲ್ಲಿ ನಿರ್ಣಯಿಸಲಾಗದು ಎಂದಭಿಪ್ರಾಯ.

**भावदीपः – न्यायविवरणस्थादिपदार्थं व्यञ्जयन् तत्रापि मानविरोधयुक्तिमाह – जीवानामिति** ।। **तच्चेति** ।। दुःखित्वादिकं निरनिष्टो निरवद्य इत्यादि-प्रमाणविरुद्धमित्यर्थः।

ನ್ಯಾಯವಿವರಣದಲ್ಲಿರುವ ಆದಿಪದದ ಅರ್ಥವನ್ನು ಸ್ಪಷ್ಟಪಡಿಸುತ್ತಾ 'ಮಾನವಿರೋಧ' ಎಂಬ ಯುಕ್ತಿಯನ್ನು ಜೀವನ ವಿಷಯದಲ್ಲಿಯೂ ಕೂಡ ವಿವಕ್ಷಿಸುತ್ತಿದ್ದಾರೆ 'ಜೀವಾನಾಮ್' ಇತ್ಯಾದಿ ಟೀಕೆಯಿಂದ. 'ತಚ್ಚ' ಎಂದರೆ ದುಃಖಿತ್ವಾದಿಗಳು 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಪ್ರಮಾಣಗಳಿಂದ ವಿಷ್ಣುವಿನಲ್ಲಿ ವಿರುದ್ಧವಾಗಿವೆ ಎಂದಭಿಪ್ರಾಯ. ಹೀಗೆ ಪ್ರಮಾಣವಿರೋಧವಿರುವುದರಿಂದ ವಿಷ್ಣು ಜೀವಶಬ್ದದಿಂದಲೂ ಪ್ರತಿಪಾದ್ಯನಾಗಲಾರನು.

**भावदीपः** – ननु भाष्ये प्रधानमप्युच्यत इति प्रतिज्ञामात्रं श्रूयते न तूक्तहेतुवाचि किमपीत्यतः तन्नेत्यत्र तच्छब्दः पञ्चम्यन्ततया इहाप्युक्तसर्वहेतुपरामर्शितयाऽन्वेतीति भावेनाऽऽह – **तस्मादिति** ।।

ಭಾಷ್ಯದಲ್ಲಿ 'ಪ್ರಧಾನಮಪ್ಯುಚ್ಯತೇ' ಎಂಬ ಪ್ರತಿಜ್ಞೆಯಷ್ಟೇ ಕೇಳಿಸುತ್ತಿದೆ ಹೊರತು, ಹಿಂದೆ ಹೇಳಿದ ಹೇತುವನ್ನು ಸೂಚಿಸುವಂತಹ ಯಾವುದೇ ಪದಗಳು ಕೇಳಿಸುತ್ತಿಲ್ಲವಲ್ಲ ? ಎಂಬ ಪ್ರಶ್ನೆಗೆ 'ತನ್ನ' ಎಂಬಲ್ಲಿರುವ 'ತತ್' ಶಬ್ದವನ್ನು ಪಂಚಮ್ಯಂತವಾಗಿ ವಿವಕ್ಷಿಸಬೇಕು. ಆವಾಗ ಹಿಂದೆ ಹೇಳಿದ ಸಕಲ ಹೇತುಗಳನ್ನು ಇಲ್ಲಿ

ಪರಾಮರ್ಶಿಸಿದಂತಾಗುತ್ತದೆ. ಹೀಗೆ ಭಾಷ್ಯವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ 'ತಸ್ಮಾತ್' ಇತ್ಯಾದಿ ಟೀಕಾ ವಾಕ್ಯವು ಹೊರಟಿದೆ.

**भावदीपः** – अव्यक्तादिशब्दानां प्रधानादौ प्रसिद्धत्वात् अवरत्वादीनां श्रुतानामपि तत्परत्वे प्रमाणाविरोधाच्चेत्यर्थः ।

'ಅವ್ಯಕ್ತ' ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲೇ ಪ್ರಸಿದ್ಧವಾದ್ದರಿಂದ, ಶ್ರುತಿಯಲ್ಲಿರುವ ಅವರತ್ವಾದಿಗಳು ವಿಷ್ಣುಪರವೆಂದು ಹೇಳಿದರೆ ಪ್ರಮಾಣವಿರೋಧವು ಬರುವುದರಿಂದ ಎಂಬುದಾಗಿ 'ತಸ್ಮಾತ್' ಎಂಬ ಪದದ ಅರ್ಥವನ್ನು ತಿಳಿಯಬೇಕು.

**भावदीपः** – एवं सानुषङ्गप्रतिज्ञांशं व्याख्याय समग्रभाष्यं यत इत्याद्युक्त्या अतो यदित्यध्याहृत्य योजयति – **यत एवमिति** ।।

उपक्रमादिलिङ्गकशक्तितात्पर्यावधारणरूपसमन्वयस्य तत्रोक्तेराह – **परमेश्वरेति**।। भाष्ये तन्नेति समन्वेयशब्दाभिमतस्य परमेश्वरवाचित्वपरामर्श इति भावः ।।

ಹೀಗೆ ಅನುಷಂಗವನ್ನು ಮಾಡಿಕೊಂಡು ಪ್ರತಿಜ್ಞಾಭಾಗವನ್ನು ವ್ಯಾಖ್ಯಾನ ಮಾಡಿದರು. ಮುಂದೆ ಸಮಗ್ರಭಾಷ್ಯವನ್ನು 'ಯತಃ' ಇತ್ಯಾದಿಯಾಗಿ ಹೇಳುತ್ತಾ 'ಅತಃ ಯತ್' ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಯೋಜನೆ ಮಾಡುತ್ತಿದ್ದಾರೆ 'ಯತ ಏವಮ್' ಇತ್ಯಾದಿ ಟೀಕೆಯಿಂದ.

ಉಪಕ್ರಮಾದಿಲಿಂಗಗಳಿಂದ ಕೂಡಿರುವ ಶಕ್ತಿತಾತ್ಪರ್ಯಾವಧಾರಣೆ ಎಂಬ ಸಮನ್ವಯವನ್ನು ಸಮನ್ವಯಸೂತ್ರದಲ್ಲಿ ಪ್ರತಿಜ್ಞೆ ಮಾಡಿದ್ದರಿಂದ 'ಪರಮೇಶ್ವರಾಭಿಧಾಯಕತ್ವಮ್' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ 'ತನ್ನ' ಎಂಬುದರಿಂದ ಸಮನ್ವಯ ಮಾಡಲು ಯೋಗ್ಯವಾದ ಶಬ್ದಗಳು ಪರಮಾತ್ಮ-ವಾಚಿಯಾಗಿವೆಯೆಂದು ಪರಾಮರ್ಶೆ ಮಾಡಿದ್ದಾರೆ.

**भावदीपः** – परमात्मन एवाव्यक्तशब्देन गृहीतेरित्येतत् नेत्यत्र हेत्वाकाङ्क्षापूरकं मत्वा हेतोरसिद्धिनिरासायाऽनुवादलब्धविधेयमाह – **परमात्मैवेति** ।।

ಪ್ರಕೃತ್ಯಾದಿಗಳೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವೆಂಬುದು ಯುಕ್ತವಾಗುವುದಿಲ್ಲ. ಇದನ್ನು ಸೂತ್ರ ಹಾಗೂ ಭಾಷ್ಯಗಳಲ್ಲಿ 'ನ' ಎಂಬುದರಿಂದ ಹೇಳಿದ್ದಾರೆ. ಇದಕ್ಕೆ ಕಾರಣವನ್ನು 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಭಾಷ್ಯದಲ್ಲಿಯೂ ಕೂಡ ಪರಮಾತ್ಮನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳಿರುತ್ತಾರೆ. ಆದ್ದರಿಂದ ಪೂರ್ವಪಕ್ಷನಿರಾಸಕವಾದ 'ನ' ಎಂಬ ಪದಕ್ಕೆ ಹೇತುವಿನ ಆಕಾಂಕ್ಷೆಗೆ ಪೂರಕವಾಗಿ ಪರಮಾತ್ಮನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬುದನ್ನು ತಿಳಿಯಬೇಕು. ಈ ಹೇತು

ಅಸಿದ್ಧವಾಗಿದೆಯಲ್ಲವೇ? ಎಂಬ ಆಶಂಕೆಯ ಪರಿಹಾರಕ್ಕೋಸ್ಕರ 'ಪರಮಾತ್ಮನಃ' ಎಂಬ ಪದದ ಉಲ್ಲೇಖದಿಂದ ತಿಳಿಯಲ್ಪಡುವ ವಿಧೇಯವನ್ನು 'ಪರಮಾತ್ಮೈವ' ಎಂಬ ಟೀಕೆಯಿಂದ ಹೇಳಿದ್ದಾರೆ.

**भावदीपः** – अत इत्यस्यैवार्थः परमात्मन एवेत्यादि । नेत्यत्र प्रतियोग्यपेक्षायां तन्न युज्यत इत्येतदन्वेतीत्याशयेनाऽऽह – **यत्सर्वेति** ।।

'ಅತಃ' ಎಂಬ ಪದದ ಅರ್ಥವನ್ನೇ 'ಪರಮಾತ್ಮನ ಏವ' ಎಂಬುದರಿಂದ ಹೇಳಿದ್ದಾರೆ. 'ನ' ಎಂಬಲ್ಲಿ ಪ್ರತಿಯೋಗಿಯ ಅಪೇಕ್ಷೆಯು ಬಂದರೆ 'ತನ್ನ ಯುಜ್ಯತೇ' ಎಂಬುದರ ಜೊತೆಗೆ ಅನ್ವಯವನ್ನು ತಿಳಿಯಬೇಕೆಂದು 'ಯತ್ಸರ್ವ' ಎಂಬ ವಾಕ್ಯದಿಂದ ಹೇಳಿದ್ದಾರೆ.

**भावदीपः** – सूत्रेऽदर्शनादाह – **स्वपदमिति** ।। तस्यार्थो यस्मिन्नित्यादि । अपौनरुक्त्यायाऽऽह इति व्याख्यातमिति ।।

ಸೂತ್ರದಲ್ಲಿ 'ಪರಮಾತ್ಮನಃ' ಎಂಬ ಪದವು ಇಲ್ಲದ ಕಾರಣ 'ಸ್ವಪದಮ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ಅದರ ಅರ್ಥವನ್ನೇ 'ಯಸ್ಮಿನ್' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡಿದ್ದಾರೆ. ಪುನರುಕ್ತಿ ಬರಬಾರದೆಂದು 'ಇತಿ ವ್ಯಾಖ್ಯಾತಮ್' ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಮುಂದಿನ ವಾಕ್ಯದಲ್ಲಿ 'ಪರಮಾತ್ಮನಃ ಏವ' ಎಂದಿರುವುದರಿಂದ ಎರಡು ಬಾರಿ ಹೇಳಿದಂತಾಗಿ ಶಾಬ್ದಬೋಧವೇ ಬರುತ್ತಿರಲಿಲ್ಲ.

**भावदीपः** – परमात्मन एवेत्यादिभाष्ये तात्पर्योक्त्यनुरोधेन सूत्रांशमवतारयति – **परमात्मन एवेति** ।।

'ಪರಮಾತ್ಮನ ಏವ' ಇತ್ಯಾದಿ ಭಾಷ್ಯದ ತಾತ್ಪರ್ಯಕ್ಕೆ ಅನುಗುಣವಾಗಿ ಸೂತ್ರಾಂಶಕ್ಕೆ ಅವತಾರಿಕೆಯನ್ನು 'ಪರಮಾತ್ಮನ ಏವ' ಇತ್ಯಾದಿಯಾಗಿ ನೀಡಿದ್ದಾರೆ.

**भावदीपः** – साक्षादप्यविरोधं जैमिनिरित्यनेन गतार्थत्वमाशङ्क्य निराह – **अवाचकत्वेऽपीति** ।।

'ಸಾಕ್ಷಾದಪ್ಯವಿರೋಧಂ ಜೈಮಿನಿಃ' ಎಂಬ ಸೂತ್ರದಿಂದ ಪುನರುಕ್ತಿಯನ್ನು ಆಶಂಕಿಸಿ, ನಿರಾಕರಿಸುತ್ತಿದ್ದಾರೆ 'ಅವಾಚಕತ್ವೇಽಪಿ' ಇತ್ಯಾದಿಯಾಗಿ.

**भावदीपः** – **शरीरसम इति** ।। रूपशब्दः समार्थ इति दर्शितम् । प्रायुङ्क्त प्रयुक्तवान् । प्रोपाभ्यां युजरेयज्ञपात्रेष्वित्यात्मनेपदम् । अन्यथा मुख्यशरीरत्वे शरीरविन्यस्तेत्येव सामञ्जस्यात् । अस्मत् पक्षे तु शरीरस्य रूपमिव रूपं यस्येति विग्रहसूचनार्थत्वेन सार्थक्यादिति भावः ।

ಸೂತ್ರದಲ್ಲಿರುವ 'ರೂಪ' ಶಬ್ದವು ಸದೃಶವಾದದ್ದು ಎಂಬರ್ಥದಲ್ಲಿ ಪ್ರಾಯುಂಕ್ತ = ಪ್ರಯೋಗಿಸಲ್ಪಟ್ಟಿದೆ. 'ಪ್ರೋಪಾಭ್ಯಾಂ ಯುಜರೇಯಜ್ಞಪಾತ್ರೇಷು' ಎಂಬ ಸೂತ್ರದಂತೆ 'ಪ್ರಾಯುಂಕ್ತ' ಎಂಬುದು ಆತ್ಮನೇ ಪದದಲ್ಲಿ ಪ್ರಯೋಗಿಸಲ್ಪಟ್ಟಿದೆ. ಒಂದು ವೇಳೆ ಪ್ರಕೃತಿಯೇ ಭಗವಂತನ ಮುಖ್ಯಶರೀರವಾಗಿದ್ದಲ್ಲಿ 'ಶರೀರವಿನ್ಯಸ್ತ' ಎಂದಷ್ಟೇ ಹೇಳಿದ್ದರೆ ಸಾಕಾಗುತ್ತಿತ್ತು. 'ರೂಪಕ' ಪದವು ಬೇಕಾಗಿರಲಿಲ್ಲ. ನಮ್ಮ ಸಿದ್ಧಾಂತದ ಪ್ರಕಾರ 'ಶರೀರಸ್ಯ ರೂಪಮಿವ ರೂಪಂ ಯಸ್ಯ' ಎಂಬ ವಿಗ್ರಹವನ್ನು ಸೂಚನೆ ಮಾಡುವುದಕ್ಕಾಗಿ 'ರೂಪಕ' ಪದವು ಸಾರ್ಥಕವಾಗಿದೆ.

**भावदीपः** – पुनरुक्तिप्रतीतेराह – **शरीरेति** ।।

ಪುನರುಕ್ತಿಯ ಪರಿಹಾರಕ್ಕೆ 'ಶರೀರ' ಇತ್ಯಾದಿಯಾಗಿ ಹೇಳಿದ್ದಾರೆ.

**भावदीपः** – अनेन भाष्येण प्रागुक्तशङ्कानिरासप्रकारं दर्शयति ।। **यद्यपीत्यादिना** ।।

ಇದರಿಂದ ಭಾಷ್ಯದಲ್ಲಿ ಹಿಂದೆ ಮಾಡಲ್ಪಟ್ಟ ಆಶಂಕೆಯ ನಿರಾಸಪ್ರಕಾರವನ್ನು 'ಯದ್ಯಪಿ' ಇತ್ಯಾದಿಯಾಗಿ ತೋರಿಸಿದ್ದಾರೆ.

**भावदीपः** – **विपरीतं वेति** ।। **प्रधानसम्बन्धाच्छब्दवृत्तिरिति** ।।

'ವಿಪರೀತಂ ವಾ' ಎಂದರೆ ಪ್ರಕೃತಿಯ ಸಂಬಂಧದಿಂದಲೇ ಪರಮಾತ್ಮನು ಪ್ರತಿಪಾದ್ಯನಾಗಲಿ ಎಂದಭಿಪ್ರಾಯ.

**भावदीपः** – एवमित्युक्तं व्यनक्ति – **वाचकत्वमिति** ।। **प्रधानस्य स्वतन्त्रस्य** हरेः । कर्मणि षष्ठी । **इतरस्य** जगतः । **वाचकत्वं** शब्दानां । **तदन्वयात्** प्रधानहरिसम्बन्धादित्यर्थः ।।

'ಏವಂ' ಎಂಬುದಾಗಿ ಹೇಳಿದ್ದನ್ನೇ 'ವಾಚಕತ್ವಮ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ಪ್ರಧಾನಸ್ಯ = ಸ್ವತಂತ್ರನಾದ ಶ್ರೀಹರಿಗೆ ಎಂದರ್ಥ. ಕರ್ಮಾರ್ಥದಲ್ಲಿ ಷಷ್ಠೀವಿಭಕ್ತಿಯು ಪ್ರಯೋಗಿಸಲ್ಪಟ್ಟಿದೆ. 'ಇತರಸ್ಯ' = ಜಗತ್ತಿಗೆ, ವಾಚಕತ್ವಂ = ಶಬ್ದಗಳು ಪ್ರತಿಪಾದನೆ ಮಾಡುತ್ತವೆ. 'ತದನ್ವಯಾತ್' = ಮುಖ್ಯನಾದ ಶ್ರೀಹರಿಯ ಸಂಬಂಧದಿಂದ ಎಂದರ್ಥ.

**भावदीपः** – **नच मञ्चादाविति** ।। पारतन्त्र्यादमुख्यत्वमिति व्यभिचरितं मञ्चशब्दस्य पुरुषे अमुख्यार्थत्वादर्शनादिति न शङ्क्यमित्यर्थः ।

'ನಚ ಮಂಚಾದಾವಿತಿ' ಎಂದರೆ 'ಮಂಚ' ಶಬ್ದಕ್ಕೆ ಪುರುಷನಲ್ಲಿ ಅಮುಖ್ಯಾರ್ಥವು ಕಂಡಿದೆ. ಆದ್ದರಿಂದ ಪಾರತಂತ್ರ್ಯವಿದ್ದಲ್ಲಿ, ಅಮುಖ್ಯತ್ವವಿರುತ್ತದೆ ಎಂಬ ನಿಯಮಕ್ಕೆ ವ್ಯಭಿಚಾರ ಬರುತ್ತದೆ ಎಂದಭಿಪ್ರಾಯ.

**भावदीपः – समाकर्षादित्यत्र परममुख्यमुख्यवृत्तिभेदेन वृत्तितारतम्यस्य मुख्यवृत्तावेव वक्ष्यमाणत्वेनेहापि हरौ परममुख्यत्वं तत्सम्बन्धात् प्रधानादौ मुख्यत्वं न लक्षणावृत्तिरिति मुख्यवृत्तावेव हीनत्वे प्रवृत्तिनिमित्तपारतन्त्र्यं हेतुः न लक्षणायामित्यभिमतत्वेन पारतन्त्र्याभावेऽपि मञ्चादिशब्दे लक्षणायाः सम्भवादित्यर्थः ।**

'ಸಮಾಕರ್ಷಾತ್' ಎಂಬ ಸೂತ್ರದಲ್ಲಿ ಪರಮಮುಖ್ಯವೃತ್ತಿ ಹಾಗೂ ಮುಖ್ಯವೃತ್ತಿ ಎಂಬ ವೈಲಕ್ಷಣ್ಯದಿಂದ ವೃತ್ತಿತಾರತಮ್ಯವನ್ನು ಮುಖ್ಯವೃತ್ತಿಯಲ್ಲಿಯೇ ಹೇಳುತ್ತಾರೆ. ಮುಖ್ಯವೃತ್ತಿಯಲ್ಲಿಯೇ ಈ ದ್ವೈವಿಧ್ಯ-ವಿರುವುದರಿಂದ ಶ್ರೀಹರಿಯಲ್ಲಿ ಪರಮಮುಖ್ಯವೃತ್ತಿಯನ್ನು ಅವನ ಸಂಬಂಧದಿಂದ ಪ್ರಕೃತ್ಯಾದಿಗಳಲ್ಲಿ ಮುಖ್ಯವೃತ್ತಿಯನ್ನು ತಿಳಿಯಬೇಕು. ಆದ್ದರಿಂದ ಲಕ್ಷಣಾ ಮಾಡುವ ಪ್ರಸಂಗವಿಲ್ಲ. ಈ ಎರಡು ಬಗೆಯ ಮುಖ್ಯವೃತ್ತಿಗಳ ನಡುವೆ ಪ್ರಕೃತ್ಯಾದಿಗಳಲ್ಲಿ ಪರಮಮುಖ್ಯವೃತ್ತಿಯನ್ನು ವಿವಕ್ಷಿಸಬಾರದು ಎಂದು ತಿಳಿಸುವುದಕ್ಕಾಗಿ ಪರಮಾತ್ಮನ ಸಂಬಂಧವನ್ನು ಹೇಳಲಾಗಿದೆ ಹೊರತು, ಲಕ್ಷಣಾ ಮಾಡುವುದಕ್ಕಾಗಿ ಅಲ್ಲ. ಈ ವಿಷಯವನ್ನು ಗಮನಿಸಬೇಕು. ಪುರುಷರಲ್ಲಿ ಪಾರತಂತ್ರ್ಯವಿಲ್ಲದಿದ್ದರೂ ಮಂಚಾದಿ ಶಬ್ದಗಳಿಗೆ ಲಕ್ಷಣಾವನ್ನು ಮಾಡಬಹುದು ಎಂದಭಿಪ್ರಾಯ. ಅಂದರೆ ಮಂಚ ಶಬ್ದಕ್ಕೆ ಪುರುಷರಲ್ಲಿ ಲಕ್ಷಣಾ ಮಾಡಿದಂತೆ ಪ್ರಕೃತ ಪ್ರಕೃತ್ಯಾದಿಗಳಲ್ಲಿ ಅವ್ಯಕ್ತಾದಿಶಬ್ದಗಳಿಗೆ ಲಕ್ಷಣಾವನ್ನು ಮಾಡುತ್ತಿಲ್ಲ.

**भावदीपः – अव्यक्तादीत्यग्रे भाषणादाह – अत्रेति ।। अधिकरण इत्यर्थः । सर्वत्र सूत्रेषु भाष्ये चेत्यर्थः ।**

'ಅವ್ಯಕ್ತಾದಿ' ಎಂಬುದಾಗಿ ಮುಂದೆ ಭಾಷ್ಯಕಾರರು ಹೇಳುತ್ತಾರೆ. ಅದನ್ನೇ 'ಅತ್ರ' ಎಂಬುದಾಗಿ ನಿರೂಪಣೆ ಮಾಡಿದ್ದಾರೆ. 'ಅತ್ರ' ಎಂದರೆ ಈ ಅಧಿಕರಣದಲ್ಲಿ ಎಂದರ್ಥ. 'ಸರ್ವತ್ರ' ಎಂದರೆ ಸೂತ್ರಗಳಲ್ಲಿ ಹಾಗೂ ಭಾಷ್ಯದಲ್ಲಿ ಎಂದರ್ಥ.

**भावदीपः – अल्पत्वं पारतन्त्रयमित्यर्थः ।**

'ಅಲ್ಪತ್ವಂ' ಎಂದರೆ 'ಪಾರತಂತ್ರ್ಯ' ಎಂದರ್ಥ.

**भावदीपः – तुच्छेनेत्यस्यार्थोऽल्पेनेति। परतन्त्रेणेत्यर्थः ।**

'ತುಚ್ಛೇನ' ಎಂಬುದರ ಅರ್ಥವನ್ನೇ 'ಅಲ್ಪೇನ' ಎಂಬುದರಿಂದ ಹೇಳಿದ್ದಾರೆ. ಪರತಂತ್ರವಾದ್ದರಿಂದ ಎಂದರ್ಥ.

**भावदीपः –** अव्यक्तेनेति विशेष्यम् । अनेन प्रधानस्य पारतन्त्र्यं हरेस्तत्र स्थितत्वं च सिद्धमिति भावः ।

'ಅವ್ಯಕ್ತೇನ' ಎಂಬುದು ವಿಶೇಷ್ಯವಾಚಕವಾದ ಪದ. ಹೀಗೆ ಹೇಳಿದ್ದರಿಂದ ಪ್ರಕೃತಿಗೆ ಪಾರತಂತ್ರ್ಯವನ್ನು ಅಂತಹ ಪರತಂತ್ರವಾದ ಪ್ರಕೃತಿಯಲ್ಲಿ ಶ್ರೀಹರಿಯು ಸ್ಥಿತನಾಗಿದ್ದಾನೆಂದು ಹೇಳಿದಂತಾಯಿತು.

**भावदीपः –** जीवस्य अस्वातन्त्र्ये हरेर्जीवविन्यस्तत्वे च अन्तर्यामिनये ब्रह्मपरत्वेन सिद्धश्रुत्यन्तरमाह – **य आत्मनीति** ।।

ಜೀವನು ಅಸ್ವತಂತ್ರನಾಗಿದ್ದಾನೆ. ಶ್ರೀಹರಿಯು ಅಂತಹ ಅಸ್ವತಂತ್ರನಾದ ಜೀವನಲ್ಲಿ ಸ್ಥಿತನಾಗಿದ್ದಾನೆ ಎಂಬುದಾಗಿ ತಿಳಿಯಬೇಕು. ಅಂತರ್ಯಾಮ್ಯಧಿಕರಣದಲ್ಲಿ ಇದೇ ವಿಷಯದಲ್ಲಿ ಬ್ರಹ್ಮಪರವಾಗಿ ಸಿದ್ಧವಾದ ಯಾವ ಶ್ರುತಿಯನ್ನು ಹೇಳಲಾಗಿತ್ತೋ ಅದನ್ನೇ ಇಲ್ಲಿ 'ಯ ಆತ್ಮನಿ' ಎಂಬುದರಿಂದ ಉಲ್ಲೇಖಿಸಿದ್ದಾರೆ.

**भावदीपः – प्राचीनेति** ।। अव्यक्तशब्दवाच्यभगवत्सम्बन्धादन्यत्र शब्दवृत्ति विचार इत्यर्थः ।

'ಪ್ರಾಚೀನ' ಎಂದರೆ ಅವ್ಯಕ್ತ ಶಬ್ದವಾಚ್ಯನಾದ ಪರಮಾತ್ಮನ ಸಂಬಂಧದಿಂದ ಬೇರೆಡೆ ಶಬ್ದಗಳು ಪ್ರವೃತ್ತವಾಗುತ್ತವೆಂಬ ಹಿಂದಿನ ಚಿಂತನೆಯು ಎಂದರ್ಥ.

**भावदीपः –** निष्क्रियमित्यनेनापौनरुक्त्यायाऽऽह – **अचलमीश्वरभावादिति** ।।

'ನಿಷ್ಕ್ರಿಯಮ್' ಎಂಬ ಪದದ ಜೊತೆಗೆ ಪುನರುಕ್ತಿ ಬರಬಾರದೆಂದು 'ಅಚಲಮ್ ಈಶ್ವರಭಾವಾತ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ಈಶ್ವರನು ಸ್ವರೂಪದಿಂದ ಚ್ಯುತನಾಗುವುದಿಲ್ಲ ಎಂದಭಿಪ್ರಾಯ.

**भावदीपः – अक्लिष्टेति** ।। अकर्माक्लिष्टकारित्वात् इत्येकादशस्कन्धतात्पर्योक्तेः इति भावः । प्राकृतादिक्रियाराहित्यमादिपदार्थः । अन्यभावव्यावृत्तेरित्युक्तेः । निष्कलं प्राकृतषोडशकलारहितमिति स्पष्टमिति भावः ।

'ಅಕರ್ಮಾಕ್ಲಿಷ್ಟಕಾರಿತ್ವಾತ್' ಎಂದು ಏಕಾದಶಸ್ಕಂಧತಾತ್ಪರ್ಯದಲ್ಲಿ ಹೇಳಿದ ಮಾತಿನಂತೆ ಕ್ಲೇಶವಿಲ್ಲದೆ ಕೆಲಸ ಮಾಡುತ್ತಾನೆಂಬರ್ಥವನ್ನು ತಿಳಿಯಬೇಕು. ಆದಿಪದದಿಂದ ಪ್ರಾಕೃತವಾದ ಕ್ರಿಯಾರಹಿತನಾಗಿದ್ದಾನೆಂದು ವಿವಕ್ಷಿಸಬೇಕು. ಏಕೆಂದರೆ 'ಅನ್ಯಭಾವವ್ಯಾವೃತ್ತೇಃ' ಎಂದು ಸೂತ್ರಕಾರರೇ ಹೇಳಿದ್ದಾರೆ. 'ನಿಷ್ಕಲಂ' ಎಂದರೆ ಪ್ರಾಕೃತವಾದ ಹದಿನಾರು ಕಲೆಗಳಿಂದ ರಹಿತನಾಗಿದ್ದಾನೆ ಎಂದರ್ಥ.

ಆನುಮಾನಿಕಾಧಿಕರಣ (೧-೪-೧)

**भावदीपः** – स्वात्मानमिति भ्रमनिरासायाऽऽह – **आत्मानमिति** ।। भाष्ये इत्युक्त्वेत्यन्तोक्तेरुपयोगायार्थमाह – **यस्येति** ।। **उक्तमिति** ।। गीतायामष्टमेऽध्याये उक्तमित्यर्थः ।

'ಸ್ವಾತ್ಮಾನಮ್' ಎಂದು ಪದಚ್ಛೇದ ಮಾಡಬಾರದೆಂದು ತಿಳಿಸಲು 'ಆತ್ಮಾನಾಮ್' ಎಂದು ಹೇಳಿದ್ದಾರೆ. ಭಾಷ್ಯದಲ್ಲಿ 'ಇತ್ಯುಕ್ತ್ವಾ' ಎಂಬಲ್ಲಿಯ ತನಕ ಹೇಳಿದ ಮಾತುಗಳ ಉಪಯೋಗವನ್ನು ತೋರಿಸಲು 'ಯಸ್ಯ' ಎಂಬ ಕೊನೆಯ ಟೀಕಾ ವಾಕ್ಯವು ಹೊರಟಿದೆ. 'ಉಕ್ತಮ್' ಎಂದರೆ ಗೀತೆಯ ಎಂಟನೆಯ ಅಧ್ಯಾಯದಲ್ಲಿ ಹೇಳಿದ್ದಾರೆ ಎಂದರ್ಥ.

**भावदीपः** – जीवशब्दवाच्यत्वेऽपि श्रुतिस्मृती आह – **अनेनेति** ।। छान्दोग्ये षष्ठे श्रुतेयं श्रुतिः । तत्र जीवशब्दस्य ईशपरत्वं चेमास्तिस्रो देवता अनेन जीवेनाऽऽत्मनाऽनुप्रविश्य नामरूपे व्याकरवाणीत्यादौ जीवानुप्रवेशात् पूर्वमेव देवतापदप्रयोगेण चेतनत्वावगमेन पुनर्जीवप्रवेशोक्तेः वैयर्थ्येन जीवाख्यानिरुद्ध-रूपात्मना भगवत एवानुप्रवेश इति तत्वनिर्णयछान्दोग्यभाष्यादौ व्यक्तमिति भावः ।। **जीव इति** ।। **सहस्रनामसु** ।।१।।

ಪರಮಾತ್ಮನು ಜೀವಶಬ್ದವಾಚ್ಯನಾಗಿದ್ದಾನೆ ಎಂಬ ವಿಷಯದಲ್ಲಿಯೂ ಶ್ರುತಿ-ಸ್ಮೃತಿಗಳನ್ನು 'ಅನೇನ' ಎಂಬುದರಿಂದ ಉಲ್ಲೇಖಿಸಿದ್ದಾರೆ. ಛಾಂದೋಗ್ಯೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಈ ಶ್ರುತಿಯು ಉಲ್ಲೇಖಿತವಾಗಿದೆ. ಆ ಶ್ರುತಿಯಲ್ಲಿ ಜೀವಶಬ್ದಕ್ಕೆ ಪರಮಾತ್ಮ ಎಂಬರ್ಥವನ್ನೇ ವಿವಕ್ಷಿಸಲಾಗಿದೆ. ವಿಷ್ಣುತತ್ವನಿರ್ಣಯದಲ್ಲಿ ಹಾಗೂ ಛಾಂದೋಗ್ಯಭಾಷ್ಯದಲ್ಲಿ 'ಅನೇನ ಜೀವೇನಾತ್ಮನಾ' ಎಂಬ ಶ್ರುತಿಗೆ ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿದ್ದಾರೆ. 'ಇಮಾಸ್ತಿಸ್ರೋ ದೇವತಾಃ' ಎಂಬಲ್ಲಿ ದೇವತಾ ಪದವನ್ನು ಉಲ್ಲೇಖ ಮಾಡಿದ್ದರಿಂದ ಜೀವನ ಅನುಪ್ರವೇಶಕ್ಕಿಂತ ಮೊದಲೇ ದೇವತಾಪದವನ್ನು ಪ್ರಯೋಗಿಸಲಾಗಿದೆ. ಪುನಃ ಜೀವಪ್ರವೇಶವನ್ನು ಹೇಳುವುದು ವ್ಯರ್ಥವಾಗುತ್ತದೆ. ಆದ್ದರಿಂದ ಅನಿರುದ್ಧರೂಪಿಯಾದ ಪರಮಾತ್ಮನ ಅನುಪ್ರವೇಶವನ್ನು ಶ್ರುತಿಯು ವಿವಕ್ಷಿಸಿದೆ ಎಂದು ತಿಳಿಯಬೇಕು. ಆವಾಗ ಜೀವಶಬ್ದದಿಂದ ಅನಿರುದ್ಧ-ರೂಪಿಯಾದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ. ವಿಷ್ಣುಸಹಸ್ರನಾಮದಲ್ಲಿ 'ಜೀವೋ ವಿನಯಿತಾ ಸಾಕ್ಷೀ' ಎಂಬ ವಾಕ್ಯವಿದೆ. ಈ ವಿಷ್ಣುಸಹಸ್ರನಾಮದ ಮಾತಿನಿಂದಲೂ ಜೀವ ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ.

## ಬ್ರಹ್ಮಮೀಮಾಂಸಾಶಾಸ್ತ್ರ

## ಅತ್ಯಂತ ಸೂಕ್ಷ್ಮವಾದ ಮಹಾವಿಷ್ಣುವಿನಲ್ಲಿ ಮಾತ್ರ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಿದೆ

**सूत्रम् – ।। सूक्ष्मं तु तदर्हत्वात् ।। २ ।।**

ಸೂತ್ರಾರ್ಥ - ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತ ಎಂದರೆ 'ಸೂಕ್ಷ್ಮತ್ವ'. ಇದು ವಿಷ್ಣುವಿನಲ್ಲಿ ಮಾತ್ರ ಇರುವುದರಿಂದ ಅವನೇ ಅವ್ಯಕ್ತ ಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ.

### ಸೂತ್ರದೀಪಿಕಾ

**सूत्रदीपिका** – यतः **सूक्ष्मं तु** सूक्ष्ममेवाव्यक्तशब्दवाच्यम् । कुतः ? **तदर्हत्वात्** तस्य सूक्ष्मस्य अव्यक्तशब्दप्रवृत्तिनिमित्तयोग्यत्वात् । तत्र च सूक्ष्मत्वं विष्णोरेव। अतस्तस्यैवाव्यक्तशब्दवाच्यत्वमित्यर्थः ।।२।।

ಅರ್ಥ -- ಯಾವ ಕಾರಣದಿಂದ ಸೂಕ್ಷ್ಮಂ ತು = ಸೂಕ್ಷ್ಮವಾದ ಪದಾರ್ಥವೇ ಅವ್ಯಕ್ತ ಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಏಕೆಂದರೆ ತದರ್ಹತ್ವಾತ್ = ಸೂಕ್ಷ್ಮವಾಗಿರುವಿಕೆಯು ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಇಂಥ ಸೂಕ್ಷ್ಮತ್ವವು ವಿಷ್ಣುವಿನಲ್ಲಿ ಮಾತ್ರ ಯುಕ್ತವಾಗುತ್ತದೆ. ಆದ್ದರಿಂದ ಪರಮಾತ್ಮನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನು.

### ಬ್ರಹ್ಮಸೂತ್ರಭಾಷ್ಯಮ್

**भाष्यम् – सूक्ष्ममेवाव्यक्तशब्देनोच्यते । तद्ध्यव्यक्ततामर्हति ।**

ಅನುವಾದ - ಸೂಕ್ಷ್ಮವಾದುದು 'ಅವ್ಯಕ್ತಃ' ಎಂಬ ಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಯಾವುದು ಅತ್ಯಂತ ಸೂಕ್ಷ್ಮವಾಗಿರುತ್ತದೋ, ಅದೇ ಅವ್ಯಕ್ತತ್ವಕ್ಕೆ ಅರ್ಹವಾಗಿರುತ್ತದೆ.

ಪ್ರತಿಪದಾರ್ಥ -- 'ಸೂಕ್ಷ್ಮವೇ ಅವ್ಯಕ್ತ ಶಬ್ದಪ್ರತಿಪಾದ್ಯವಾಗಿದೆ' ಎಂಬ ಸೂತ್ರದಲ್ಲಿರುವ ಪ್ರತಿಜ್ಞಾಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ –

ಸೂಕ್ಷ್ಮಮೇವ = ಅತ್ಯಂತ ಸೂಕ್ಷ್ಮವಾದ ವಸ್ತುವನ್ನೇ, ಅವ್ಯಕ್ತಶಬ್ದೇನ = ಅವ್ಯಕ್ತ ಎಂಬ ಪದದಿಂದ, ಉಚ್ಯತೇ = ಕರೆಯುತ್ತಾರೆ. ತತ್ = ಆ ಸೂಕ್ಷ್ಮವಾದ ವಸ್ತುವೇ, ಅವ್ಯಕ್ತತಾಂ = ಅವ್ಯಕ್ತತ್ವಕ್ಕೆ, ಅರ್ಹತಿ = ಅರ್ಹವಾಗುತ್ತದೆ.

**भाष्यम् – सूक्ष्मत्वं च मुख्यं तस्यैव ।**

ಅನುವಾದ - ಅತ್ಯಂತ ಸೂಕ್ಷ್ಮವಾಗಿರುವಿಕೆಯು ಅವ್ಯಕ್ತಶಬ್ದವಾಚ್ಯನಾದ ವಿಷ್ಣುವಿನಲ್ಲಿಯೇ ಮುಖ್ಯವಾಗಿ ಬರುತ್ತದೆ. ಬೇರೆಯವರಲ್ಲಿ ಬರುವುದಿಲ್ಲ.

ಪ್ರತಿಪದಾರ್ಥ -- ಸೂಕ್ಷ್ಮವಾದ ವಸ್ತುವೇ ಅವ್ಯಕ್ತತ್ವಕ್ಕೆ ಅರ್ಹವಾದ್ದರಿಂದ, ಅವ್ಯಕ್ತಶಬ್ದವಾಚ್ಯವಾಗಲಿ, ಇದರಿಂದ ಪ್ರಕೃತದಲ್ಲಿ ಏನು ಹೇಳಿದಂತಾಯಿತು ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ –

ಸೂಕ್ಷ್ಮತ್ವಂ ಚ = ಅತ್ಯಂತ ಸೂಕ್ಷ್ಮವಾಗಿರುವಿಕೆಯಾದರೂ, ಮುಖ್ಯಂ = ಪ್ರಧಾನವಾಗಿ, ತಸ್ಯೈವ = ವಿಷ್ಣುವಿನಲ್ಲಿಯೇ ಬರುತ್ತದೆ, ಉಳಿದವರಲ್ಲಿ ಬರುವುದಿಲ್ಲ.

**भाष्यम् – 'यत्तत् सूक्ष्मं परमं वेदितव्यं नित्यं पदं वैष्णवं ह्यामनन्ति ।**
**यत्तल्लोका न विदुर्लोकसारं विन्दन्त्येतत् कवयो योगनिष्ठाः ।।'**

**इति च पिप्पलादशाखायाम् ।**

ಅನುವಾದ - ಲೋಕೋತ್ತರವಾದ ವಿಷ್ಣುವಿನ ಯಾವ ಸ್ವರೂಪವಿದೆಯೋ, ಅದನ್ನು ಪರಮಸೂಕ್ಷ್ಮವೆಂದು ತಿಳಿಯಬೇಕು. ಇದನ್ನು ಆಥರ್ವಣಿಕರು 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂಬುದಾಗಿ ಹೇಳುತ್ತಾರೆ. ಯಾವಾತನನ್ನು ಪಾಮರ ಜನರು ತಿಳಿಯಲು ಅಸಮರ್ಥರಾಗುತ್ತಾರೋ, ಅಂತಹ ಮಹಾವಿಷ್ಣುವಿನ ದಿವ್ಯ ಸ್ವರೂಪವನ್ನು ಮನೋಯೋಗನಿಷ್ಠರಾದ ಉಪಾಯಸಿದ್ಧರಾದ ಜ್ಞಾನಿಜನರು ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಈ ವಿಷಯವು ಶ್ರುತಿಗಳಲ್ಲಿ ಪ್ರಸಿದ್ಧವಷ್ಟೇ.

ಪ್ರತಿಪದಾರ್ಥ -- ಮಹಾವಿಷ್ಣುವೇ ಅತ್ಯಂತ ಸೂಕ್ಷ್ಮನಾಗಿದ್ದಾನೆ. ಈ ವಿಷಯದಲ್ಲಿ ಸೂತ್ರಕಾರರಿಗೆ ಅಭಿಪ್ರೇತವಾದ ಶ್ರುತಿ ಹೀಗಿದೆ –

ಯತ್ = ಯಾವ, ಲೋಕಸಾರಂ = ಸಕಲ ಲೋಕಗಳಿಗಿಂತ ಉತ್ತಮವಾದ, ವೈಷ್ಣವಂಪದಂ = ವಿಷ್ಣುಸ್ವರೂಪವಿದೆಯೋ, ತತ್ = ಅದು, ಪರಮಂ ಸೂಕ್ಷ್ಮಂ = ಅತ್ಯಂತ ಸೂಕ್ಷ್ಮವಾಗಿದೆ ಎಂಬುದಾಗಿ, ವೇದಿತವ್ಯಂ = ತಿಳಿಯತಕ್ಕದ್ದು. ಇತಿ = ಹೀಗೆ, ಆಮನಂತಿ = 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂಬುದಾಗಿ ಆಥರ್ವಣಿಕರು ಹೇಳುತ್ತಾರೆ. ಯತ್ = ಯಾವ ವಿಷ್ಣುವನ್ನು, ಲೋಕಾಃ = ಪಾಮರ ಜನರು, ನ ವಿದುಃ = ತಿಳಿಯಲು ಅಸಮರ್ಥರಾಗುತ್ತಾರೋ, ತತ್ = ಅಂತಹ, ಏತತ್ = ಮಹಾವಿಷ್ಣುವಿನ ಸ್ವರೂಪವನ್ನು, ಯೋಗನಿಷ್ಠಾಃ = ಬ್ರಹ್ಮನಲ್ಲಿ ಮನೋಯೋಗ ನಿಷ್ಠರಾದ, ಉಪಾಯಸಿದ್ಧರಾದ, ಕವಯಃ = ಜ್ಞಾನಿಜನರು, ವಿದಂತಿ = ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ. ಹಿ = ಇದು ಪ್ರಸಿದ್ಧವಷ್ಟೆ. ಇತಿ ಚ = ಹೀಗೆ, ಪಿಪ್ಪಲಾದ ಶಾಖಾಯಾಂ = ಪಿಪ್ಪಲಾದ ಶಾಖೆಯಲ್ಲಿ ಹೇಳಲ್ಪಟ್ಟಿದೆ.

**भाष्यम् – मुख्ये च विद्यमाने नामुख्यं युक्तम् ।।२।।**

ಪರಿಪೂರ್ಣಚಂದ್ರಿಕಾ

ಅನುವಾದ - ಪ್ರಕೃತ ವಿಷಯವಾಕ್ಯದಲ್ಲಿ ಮಹಾವಿಷ್ಣುವೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ವಿವಕ್ಷಿಸಲು ಬರುವಾಗ, ಅಪ್ರಧಾನವಾದ ಪ್ರಕೃತಿಯನ್ನು ಅವ್ಯಕ್ತಶಬ್ದವಾಚ್ಯವೆಂದು ಹೇಳುವುದು ಯುಕ್ತವಲ್ಲ.

ಪ್ರತಿಪದಾರ್ಥ -- ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ, ಅತ್ಯಂತ ಸೂಕ್ಷ್ಮತ್ವವು ಮಹಾವಿಷ್ಣುವಿನಲ್ಲೇ ಇರಲಿ. ಆದರೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಅವ್ಯಕ್ತ ಶಬ್ದದಿಂದ ಪ್ರಕೃತಿಯೇ ಪ್ರತಿಪಾದ್ಯವಾಗಲಿ? ಈ ಪ್ರಶ್ನೆಗೆ ಹಿಂದಿನ ಸೂತ್ರದಲ್ಲಿ 'ಉಕ್ತೇಃ' ಎಂದು ಹೇಳದೆ, 'ಗೃಹೀತೇಃ' ಎಂದು ಹೇಳಿದ್ದರಿಂದ ಸೂಚಿತವಾದ ಯುಕ್ತಿಯನ್ನು ಹೇಳುತ್ತಾ ಉತ್ತರಿಸುತ್ತಿದ್ದಾರೆ. –

ಮುಖ್ಯೇಚ = ಸೂಕ್ಷ್ಮವಸ್ತುಗಳಿಗೂ, ಸೂಕ್ಷ್ಮತ್ವವನ್ನು ನೀಡುವುದರಿಂದಲೇ, ಅತ್ಯಂತ ಸೂಕ್ಷ್ಮನಾದ ಮಹಾವಿಷ್ಣುವನ್ನು, ವಿದ್ಯಮಾನೇ = ವಿವಕ್ಷಿಸಲು ಬರುವಾಗ, ಅಮುಖ್ಯಂ = ಗೌಣವಾದ ಪ್ರಕೃತ್ಯಾದಿಗಳನ್ನು, ನ ಯುಕ್ತಮ್ = ವಿವಕ್ಷಿಸುವುದು ಯುಕ್ತವಲ್ಲ.

## ತತ್ವಪ್ರಕಾಶಿಕಾ

**ನन्वस्त्वेवं श्रौतस्मार्तप्रयोगबलेनाव्यक्तादिशब्दानां भगवद्वाचित्वम् । तत्र तेषां मुख्यत्वं कुतः? प्रयोगस्यामुख्यवाच्येऽपि सम्भवात् इत्याशङ्कां परिहरन् सूत्रमुपन्यस्य व्याचष्टे – सूक्ष्ममिति ।।**

ಪ್ರಶ್ನೆ - ಶ್ರುತಿ ಹಾಗೂ ಸ್ಮೃತಿಗಳಲ್ಲಿ ಅವ್ಯಕ್ತಶಬ್ದವನ್ನು ವಿಷ್ಣುವಿನಲ್ಲೇ ಪ್ರಯೋಗಿಸಲಾಗಿದೆ. ಈ ಪ್ರಯೋಗದ ಬಲದಿಂದ ಅವ್ಯಕ್ತ ಮೊದಲಾದ ಶಬ್ದಗಳು ಭಗವದ್ವಾಚಕವೇ ಆಗಲಿ; ಅಂದ ಮಾತ್ರಕ್ಕೆ ಆ ಶಬ್ದಗಳು ಭಗವಂತನನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತಿವೆಯೆಂದು ಏಕೆ ಅಂಗೀಕರಿಸಬೇಕು? ಶ್ರುತಿ-ಸ್ಮೃತಿಗಳಲ್ಲಿರುವ ಪ್ರಯೋಗವು ಅಮುಖ್ಯವಾಗಿರಬಹುದು ಅಮುಖ್ಯವಾದಾಗಲೂ ಕೂಡ ಭಗವದ್ವಾಚಕವೆಂದು ಹೇಳಲು ಏನೂ ತೊಂದರೆಯಿರುವುದಿಲ್ಲವಲ್ಲವೇ?

ಉತ್ತರ - ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಸೂಕ್ಷ್ಮಮ್' ಎಂಬುದಾಗಿ.

**तत्वप्रकाशिका – अव्यक्तत्वस्यैवाव्यक्तशब्दप्रवृत्तिनिमित्तत्वात् कथं 'सूक्ष्ममेवाव्यक्तशब्देनोच्यते?' इति तत्राऽऽह – तद्धीति ।।**

ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ಅವ್ಯಕ್ತತ್ವವೇ ಆಗಿದೆ. ಆದರೆ ಸೂಕ್ಷ್ಮವಾದ ಪದಾರ್ಥವು ಅವ್ಯಕ್ತಶಬ್ದದಿದ ಪ್ರತಿಪಾದ್ಯವೆಂದು ನೀವು ಹೇಳುತ್ತಿದ್ದೀರಿ ಇದು ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ 'ತದ್ ಹಿ' ಎಂಬ ಭಾಷ್ಯದಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – अस्तु सूक्ष्मस्यैवाव्यक्तशब्दप्रवृत्तिनिमित्ताव्यक्तताऽर्हत्वात् तदव्यक्तशब्दवाच्यम् । तथापि प्रकृते किमायातम् ? इत्यत आह – सूक्ष्मत्वं चेति ।।**

ಸೂಕ್ಷ್ಮವಾದ ವಸ್ತುವಿನಲ್ಲಿ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಇರುವ ಕಾರಣ ಅದು ಅವ್ಯಕ್ತಶಬ್ದವಾಚ್ಯವಾಗಲಿ. ಅಂದಮಾತ್ರಕ್ಕೆ ಪ್ರಕೃತ ಪರಮಾತ್ಮನು ಅವ್ಯಕ್ತಶಬ್ದವಾಚ್ಯನೆಂದು ಹೇಗೆ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ 'ಸೂಕ್ಷ್ಮತ್ವಂ ಚ' ಎಂಬ ಭಾಷ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – युक्तं परमात्मन्यव्यक्तशब्दस्य मुख्यत्वम् । तदर्थभूताव्यक्तत्वस्य परमात्मनि सत्त्वात् । अव्यक्तत्वोपयोगिनः सूक्ष्मत्वस्य तत्र सद्भावात् ।**

ಪರಮಾತ್ಮನಲ್ಲಿ ಅವ್ಯಕ್ತಶಬ್ದವಾಚ್ಯತ್ವವು ಮುಖ್ಯವಾಗಿಯೇ ಬರುತ್ತದೆ. ಏಕೆಂದರೆ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವವು ಪರಮಾತ್ಮನಲ್ಲಿದೆ. ಅವ್ಯಕ್ತತ್ವಕ್ಕೆ ಉಪಯೋಗಿಯಾದ ಸೂಕ್ಷ್ಮತ್ವವು ಪರಮಾತ್ಮನಲ್ಲೇ ಮುಖ್ಯವಾಗಿ ಇರುವುದರಿಂದ ಅವ್ಯಕ್ತಶಬ್ದದಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – नच वाच्यं प्रधानस्यापि सूक्ष्मत्वेनाव्यक्तत्वसम्भवात् कथमव्यक्तशब्दस्य परमात्मनि मुख्यतेति । विष्णोरतिसूक्ष्मत्वेनात्यन्तमव्यक्तत्वात् तिशयेन प्रवृत्तिनिमित्तवत्येव शब्दस्य मुख्यत्वादिति भावः ।**

ಪರಮಾತ್ಮನು ಹೇಗೆ ಸೂಕ್ಷ್ಮನೆಂದು ಹೇಳಿದಿರೋ ಅದರಂತೆ ಪ್ರಕೃತಿಯೂ ಕೂಡ ಅತ್ಯಂತ ಸೂಕ್ಷ್ಮವೇ ಆಗಿದೆ. ಆದ್ದರಿಂದ ಅವ್ಯಕ್ತತ್ವವು ಪ್ರಕೃತಿಯಲ್ಲಿಯೂ ಕೂಡ ಇರುವುದರಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನೆಂದು ಹೇಗೆ ಹೇಳುತ್ತೀರಿ ? ಎಂದು ಪ್ರಶ್ನಿಸಬಾರದು. ಪ್ರಕೃತಿಯು ಎಷ್ಟು ಸೂಕ್ಷ್ಮವಾಗಿದೆಯೋ, ಅದಕ್ಕಿಂತಲೂ ಪರಮಾತ್ಮನು ಸೂಕ್ಷ್ಮನಾಗಿದ್ದಾನೆ. ಆದ್ದರಿಂದ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಾದ ಅತಿಸೂಕ್ಷ್ಮತ್ವವು ಮುಖ್ಯವಾಗಿ ಪರಮಾತ್ಮನಲ್ಲೇ ಇರುವುದರಿಂದ ಅವ್ಯಕ್ತಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿ ಬರುತ್ತದೆ; ಹೊರತು ಪ್ರಕೃತಿಯಲ್ಲಿ ಬರುವುದಿಲ್ಲ.

**तत्वप्रकाशिका – कुतो विष्णोः मुख्यसूक्ष्मत्वं ? येन तस्य मुख्याव्यक्तत्वमिति तत्राऽऽह – यदिति ।।**

ವಿಷ್ಣು ಮುಖ್ಯಸೂಕ್ಷ್ಮನೆಂಬ ವಿಷಯದಲ್ಲಿ ಯಾವ ಆಧಾರವೂ ಇರುವುದಿಲ್ಲ. ಒಂದು ವೇಳೆ ಆಧಾರವಿದ್ದಲ್ಲಿ, ಮುಖ್ಯವಾದ ಅವ್ಯಕ್ತಶಬ್ದವಾಚ್ಯನು ವಿಷ್ಣುವೇ ಆಗುತ್ತಿದ್ದನು? ಈ ಪ್ರಶ್ನೆಗೆ 'ಯತ್' ಇತ್ಯಾದಿ ವಾಕ್ಯದಿಂದ ಪ್ರಮಾಣವನ್ನು ಉದಾಹರಿಸುತ್ತಿದ್ದಾರೆ.

**तत्वप्रकाशिका – ''यत्तल्लोकोत्तमं नित्यं विष्णोः स्वरूपं परमसूक्ष्मं वेदितव्यम्, 'एषोऽणुरात्मा चेतसा वेदितव्यः' इत्याद्यामनन्ति । यच्च पृथग्जना न विदुस्तदेतदुपायसिद्धा ज्ञानिनः पश्यन्ति'' इत्यर्थः ।**

ಪಿಪ್ಪಲಾದಶಾಖೆಯ ಶ್ರುತಿಯಲ್ಲಿರುವ 'ಲೋಕಸಾರಂ' ಎಂಬ ಪದಕ್ಕೆ 'ಲೋಕಗಳಿಗಿಂತ ಉತ್ತಮನಾದ' ಎಂದರ್ಥ. 'ವೈಷ್ಣವಂ' ಎಂದರೆ 'ವಿಷ್ಣುವಿನ ಸ್ವರೂಪವನ್ನು' ಎಂದರ್ಥ. 'ಆಮನಂತಿ' ಎಂದರೆ 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂದು ಆಥರ್ವಣಿಕರು ಹೇಳುತ್ತಾರೆ. ''ಸಕಲ ಲೋಕಗಳಿಗಿಂತ ಉತ್ತಮನಾದ ನಿತ್ಯವಾದ ವಿಷ್ಣುವಿನ ಸ್ವರೂಪವು ಅತ್ಯಂತ ಸೂಕ್ಷ್ಮವೆಂದು ತಿಳಿಯಬೇಕು. 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' 'ಅಣುಸ್ವರೂಪಿಯಾದ ಪರಮಾತ್ಮನನ್ನು ಬುದ್ಧಿಯಿಂದ ತಿಳಿಯಬೇಕು. ಇವೇ ಮೊದಲಾದ ಪ್ರಮಾಣಗಳು ವಿಷ್ಣುವನ್ನೇ ಪರಮಸೂಕ್ಷ್ಮವೆಂದು ಹೇಳುತ್ತಿವೆ. ಸಾಮಾನ್ಯಜನರಿಂದ ಈ ಸೂಕ್ಷ್ಮಸ್ವರೂಪವನ್ನು ತಿಳಿಯಲು ಸಾಧ್ಯವಾಗುವುದಿಲ್ಲ. ಆದರೆ ಜ್ಞಾನಿಜನರು ಶ್ರವಣ-ಮನನಾದಿ ಸಾಧನೆಗಳಿಂದ ತಿಳಿಯುತ್ತಾರೆ.

**तत्वप्रकाशिका – एवं जीवादिशब्दप्रवृत्तिनिमित्तानां प्राणधारणादीनां भगवति मुख्यत्वेन तच्छब्दानां तत्र मुख्यत्वं द्रष्टव्यम् ।**

ಹೀಗೆ ಅವ್ಯಕ್ತಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿರುವಂತೆ ಜೀವಾದಿಶಬ್ದಗಳೂ ಕೂಡ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಏಕೆಂದರೆ ಜೀವಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಾಣಧಾರಣಾದಿಗಳು ಪರಮಾತ್ಮನಲ್ಲೇ ಮುಖ್ಯವಾಗಿರುತ್ತವೆ.

**तत्वप्रकाशिका – तदुक्तम् 'स जीवनामा भगवान् प्राणधारणहेतुतः । उपचारेण जीवाख्या संसारिणि निगद्यते' इत्यादि ।**

ಪ್ರಾಣಧಾರಣ ಮೊದಲಾದ ಪ್ರವೃತ್ತಿನಿಮಿತ್ತಗಳು ಮುಖ್ಯವಾಗಿ ಇರುತ್ತವೆನ್ನಲು ಪ್ರಮಾಣ ಹೀಗಿವೆ- 'ಸ ಜೀವನಾಮಾ ಭಗವಾನ್ ಪ್ರಾಣಧಾರಣಹೇತುತಃ । ಉಪಚಾರೇಣ ಜೀವಾಖ್ಯಾ ಸಂಸಾರಿಣಿ ನಿಗದ್ಯತೇ' ಪರಮಾತ್ಮನು ಸಕಲಜೀವರ ಪ್ರಾಣವನ್ನು ಧಾರಣೆ ಮಾಡುತ್ತಾನಾದ್ದರಿಂದ ಜೀವನೆಂದು ಕರೆಸಿಕೊಳ್ಳುತ್ತಾನೆ. ಸಂಸಾರಿಯಾದ ಜೀವನಾದರೂ ಔಪಚಾರಿಕವಾಗಿ ಜೀವನೆಂದು ಕರೆಸಿಕೊಳ್ಳುತ್ತಾನೆ. ಇವೇ ಮೊದಲಾದ ಪ್ರಮಾಣಗಳಿವೆ.

ಆನುಮಾನಿಕಾಧಿಕರಣ (೧-೪-೧)

**तत्वप्रकाशिका – नन्वस्तु विष्णौ मुख्यं शब्दप्रवृत्तिनिमित्तं प्रधानादावपि किञ्चिदव्यक्तत्वादिसद्भावात् 'अव्यक्तात् पुरुषः परः' इत्यादौ तद्वाच्यं किं न स्यात् ? इति चेत् ।**

ಪ್ರಶ್ನೆ - ವಿಷ್ಣುವಿನಲ್ಲಿ ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತವು ಮುಖ್ಯವಾಗಿರಲಿ, ಆದರೆ ಪ್ರಧಾನಾದಿಗಳಲ್ಲಿಯೂ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಸೂಕ್ಷ್ಮತ್ವವು ಅಪ್ರಧಾನವಾಗಿ ಇದ್ದೇ ಇರುತ್ತದೆ. ಅಂತಹ ಅಪ್ರಧಾನವಾದ ಅವ್ಯಕ್ತತ್ವ ಇರುವ ಕಾರಣ 'ಅವ್ಯಕ್ತಾತ್ ಪುರುಷಃ ಪರಃ' ಎಂಬ ಶ್ರುತಿಯಲ್ಲಿ ಅವ್ಯಕ್ತಶಬ್ದದಿಂದ ಪ್ರಕೃತಿಯೇ ವಾಚ್ಯವಾಗಬಹುದಲ್ಲವೇ?

**तत्वप्रकाशिका – तत् किं परमात्मनो मुख्यवाच्यत्वमङ्गीकृत्य, अमुख्यतयाऽन्यस्यापि वाच्यत्वं स्यादित्युच्यते ? उतान्यस्यैव ?**

ಉತ್ತರ - ನಮ್ಮ ಪ್ರಶ್ನೆಗೆ ನೀವು ಉತ್ತರಿಸಬೇಕು. ಅವ್ಯಕ್ತಶಬ್ದದಿಂದ ಪ್ರಧಾನವು ವಾಚ್ಯವೆಂದು ಹೇಳುವ ನಿಮ್ಮ ಅಭಿಪ್ರಾಯವೇನು ? ಪರಮಾತ್ಮನು ಮುಖ್ಯವಾಗಿ ವಾಚ್ಯನಾಗಿದ್ದಾನೆಂದು ಒಪ್ಪಿ, ಪ್ರಧಾನವು ಅಮುಖ್ಯವಾಗಿ ವಾಚ್ಯವಾಗಿರುತ್ತದೆ ಎಂದೋ? ಅಥವಾ ಪ್ರಧಾನವೇ ಮುಖ್ಯವಾಗಿ ಅವ್ಯಕ್ತಶಬ್ದದಿಂದ ವಾಚ್ಯವಾಗಿದೆ ಎಂದೋ ?

**तत्वप्रकाशिका – आद्ये न विरोधः । न चोभयार्थत्वे वाक्यभेदः । प्रधानविशिष्टस्यैव परमात्मनः शब्दवाच्यत्वाभ्युपगमात् ।**

ಮೊದಲನೆಯ ಪಕ್ಷದಲ್ಲಿ ನಮ್ಮ ವಿರೋಧವೇನೂ ಇರುವುದಿಲ್ಲ. ಇನ್ನು ಅವ್ಯಕ್ತಶಬ್ದಕ್ಕೆ ವಿಷ್ಣು ಹಾಗೂ ಪ್ರಧಾನ ಎಂಬ ಎರಡೂ ಅರ್ಥವನ್ನು ಒಪ್ಪಿದರೆ ವಾಕ್ಯಭೇದದೋಷ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ವಿಶಿಷ್ಟನಾದ ಪರಮಾತ್ಮನೇ ಅವ್ಯಕ್ತಶಬ್ದದಿಂದ ವಾಚ್ಯನಾಗುತ್ತಾನೆಂದು ನಾವು ಒಪ್ಪಿರುತ್ತೇವೆ.

**तत्वप्रकाशिका – द्वितीयं निराह – मुख्ये चेति ।। मुख्यतोऽव्यक्तादिशब्दार्थवति विष्णावव्यक्तादिशब्दवाच्यतया सम्भवति, तत् परित्यागेनामुख्यतः शब्दार्थवतां प्रधानादीनामत्र वाच्यतया ग्रहणं न युक्तम् । मुख्यासम्भव एव गौणाश्रयस्य न्यायत्वा(प्राप्तत्वा)दिति भावः ।। २ ।।**

ಎರಡನೆಯ ಪಕ್ಷವನ್ನು ನಿರಾಕರಿಸುವುದಕ್ಕಾಗಿ ಭಾಷ್ಯಕಾರರು 'ಮುಖ್ಯೇ ಚ' ಇತ್ಯಾದಿಯಾಗಿ ಹೇಳಿರುತ್ತಾರೆ. ಮುಖ್ಯವಾಗಿ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ಯಾವ ವಿಷ್ಣುವಿನಲ್ಲಿರುತ್ತದೋ, ಅಂತಹ

ವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ. ಹೊರತು, ಎಲ್ಲಿ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ಅಮುಖ್ಯವಾಗಿರುತ್ತದೋ, ಅಂತಹ ಪ್ರಕೃತ್ಯಾದಿಗಳಲ್ಲಿ ಅವ್ಯಕ್ತಶಬ್ದವಾಚ್ಯತ್ವವನ್ನು ಮುಖ್ಯವಾಗಿ ಸರ್ವಥಾ ತಿಳಿಯಬಾರದು. ಏಕೆಂದರೆ ಮುಖ್ಯಾರ್ಥವೇ ಸಂಭವಿಸುತ್ತಿರುವಾಗ ಗೌಣವಾದ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಸರ್ವಥಾ ನ್ಯಾಯಬದ್ಧವಾದುದಲ್ಲ.

## ಭಾವದೀಪ

**मुख्यत्वमिति ।। परममुख्यत्वमित्यर्थः ।**

'ಮುಖ್ಯತ್ವಮ್' ಎಂಬ ಪದಕ್ಕೆ 'ಪರಮಮುಖ್ಯತ್ವ' ಎಂದರ್ಥ. ಅವ್ಯಕ್ತ ಮೊದಲಾದ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡಲಿ. ಆದರೆ ಪರಮಮುಖ್ಯವೃತ್ತಿಯಿಂದಲೇ ಏಕೆ ಪ್ರತಿಪಾದನೆ ಮಾಡಬೇಕು ಎಂಬುದು ಇದರ ಅಭಿಪ್ರಾಯ.

**भावदीपः – एवं पदार्थानुक्त्वा तात्पर्योक्त्या उक्तशङ्कां निराह – युक्तमित्यादिना।।**

ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾದ ಅರ್ಥವನ್ನು ಹೇಳಿ ಇದರ ತಾತ್ಪರ್ಯವೂ ಕೂಡ ವಿಷ್ಣುವಿನಲ್ಲೇ ಯುಕ್ತವಾಗುತ್ತದೆಂದು ಹೇಳುತ್ತಾ ಹಿಂದಿನ ಆಶಂಕೆಯನ್ನು ಪರಿಹರಿಸಲು 'ಯುಕ್ತಮ್' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः – मुख्यमित्युक्तमुख्यपदतात्पर्यं व्यनक्ति – न चेत्यादिना ।।**

ವಿಷ್ಣುವಿನಲ್ಲಿ ಅವ್ಯಕ್ತ ಮೊದಲಾದ ಶಬ್ದಗಳು ಮುಖ್ಯವಾಗಿ ಇರುತ್ತವೆಂದು ಹಿಂದೆ ಹೇಳಲಾಯಿತು. ಅದರ ತಾತ್ಪರ್ಯವನ್ನು ನಿರೂಪಣೆ ಮಾಡಲು 'ನಚ' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः –** लोकसारं लोकोत्तमम् । पदं स्वरूपम् 'उत्तमानां स्वरूपं तु पादशब्देन भण्यते, इत्युक्तेः । एषोऽणुरित्याथर्वणे । पृथग्जनाः पामरा इत्यर्थः । यच्च पृथग्जना न विदुः तदेतदिति तच्छब्दद्वयस्य च योजना । योगनिष्ठा उपायसिद्धाः । कवयो ज्ञानिनः । विन्दन्तीत्यस्य योगनिष्ठा इत्याद्युक्त्यनुरोधेनार्थमाह – **पश्यन्तीति** ।। साक्षात्कुर्वन्तीत्यर्थः ।। **तदुक्तमिति** ।। गीतातात्पर्ये द्वितीय इत्यर्थः।

ಭಾಷ್ಯದಲ್ಲಿ ಉಲ್ಲೇಖಿಸಿದ ಪಿಪ್ಪಲಾದಶಾಖೆಯ ಶ್ಲೋಕದಲ್ಲಿ 'ಲೋಕಸಾರಂ' ಎಂಬ ಪದವಿದೆ, ಇದರ ಅರ್ಥವನ್ನು ಟೀಕೆಯಲ್ಲಿ 'ಲೋಕೋತ್ತಮಮ್' ಲೋಕಗಳಿಗಿಂತ ಉತ್ತಮನಾದ ಎಂದು ಹೇಳಿದ್ದಾರೆ.

'ಪದಂ' ಎಂಬ ಪದದ ಅರ್ಥವನ್ನು 'ಸ್ವರೂಪಮ್' 'ವಿಷ್ಣುವಿನ ಸ್ವರೂಪ' ಎಂದು ಹೇಳಿರುತ್ತಾರೆ. 'ಉತ್ತಮಾನಾಂ ಸ್ವರೂಪಂ ತು ಪಾದಶಬ್ದೇನ ಭಣ್ಯತೇ' ಉತ್ತಮರ ಸ್ವರೂಪವನ್ನು ಪಾದಶಬ್ದದಿಂದ ಹೇಳುತ್ತಾರೆ ಎಂಬ ಮಾತಿನಂತೆ ಪದ ಹಾಗೂ ಪಾದ ಇವೆರಡು ಪರ್ಯಾಯ ಪದಗಳಾದ್ದರಿಂದ ಪದಶಬ್ದಕ್ಕೆ ಸ್ವರೂಪ ಎಂಬರ್ಥವನ್ನು ಹೇಳಬಹುದು. ಟೀಕೆಯಲ್ಲಿ ಉದಾಹರಿಸಿದ 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ' ಎಂಬ ಮಾತು ಆಥರ್ವಣೋಪನಿಷತ್ತಿನಲ್ಲಿದೆ. 'ಪೃಥಗ್ಜನಾ' ಎಂಬ ಪದಕ್ಕೆ ಪಾಮರರು ಎಂದರ್ಥ. ಪಾಮರಜನರು ಪರಮಸೂಕ್ಷ್ಮನಾದ ಯಾವ ವಿಷ್ಣುವನ್ನು ತಿಳಿಯಲಾರರೋ ಅವನನ್ನು ಜ್ಞಾನಿಜನರು ಶ್ರವಣಮನನಾದಿ ಸಾಧನೆಗಳಿಂದ ತಿಳಿಯುತ್ತಾರೆ ಎಂಬುದಾಗಿ 'ತತ್' ಎಂಬ ಪದವನ್ನು ಪಿಪ್ಪಲಾದ ಶಾಖೆಯ ಶ್ಲೋಕದಲ್ಲಿ ಎರಡು ಬಾರಿ ಯೋಜನೆ ಮಾಡಿಕೊಳ್ಳಬೇಕು. ಶ್ಲೋಕದಲ್ಲಿರುವ 'ಯೋಗನಿಷ್ಠಾಃ' ಎಂಬ ಪದಕ್ಕೆ ಶ್ರವಣ-ಮನನಾದಿ ಉಪಾಯಗಳ ಸಿದ್ಧಿಯನ್ನು ಪಡೆದ 'ಕವಯಃ' ಜ್ಞಾನಿಗಳು 'ವಿಂದಂತಿ' ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆ ಎಂದರ್ಥ. 'ಯೋಗನಿಷ್ಠಾಃ' ಎಂಬ ಪದವಿರುವುದರಿಂದ 'ವಿಂದಂತಿ' ಎಂಬ ಪದಕ್ಕೆ ಟೀಕೆಯಲ್ಲಿ 'ಪಶ್ಯಂತಿ' ಎಂದು ಅರ್ಥೈಸಿದ್ದಾರೆ. ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾರೆಂಬುದು ಇದರ ಅಭಿಪ್ರಾಯ.

'ತದುಕ್ತಮ್' = ಗೀತಾತಾತ್ಪರ್ಯದಲ್ಲಿ 'ಸ ಜೀವನಾಮಾ' ಇತ್ಯಾದಿಯಾಗಿ ಹೇಳಿರುತ್ತಾರೆ.

**भावदीपः – मुख्यवाच्यत्वं परममुख्यवाच्यत्वम् ।। अमुख्यतयेति ।। परममुख्यवृत्त्यपेक्षया एवमुक्तिः । लोकसिद्धयोगरूढ्यादिरूपमुख्यवृत्त्येत्यर्थः नतु लक्षणादिनेति भ्रमितव्यम् । लक्षणानाश्रयणादिति प्रागेवोक्तत्वात् । एवमग्रेऽपि बोध्यम् ।**

'ಮುಖ್ಯವಾಚ್ಯತ್ವಂ' ಎಂಬ ಪದಕ್ಕೆ ಪರಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದರ್ಥ. 'ಅಮುಖ್ಯತಯಾ' ಎಂಬುದಕ್ಕೆ ಪರಮಮುಖ್ಯವೃತ್ತಿಗಿಂತಲೂ ಅಮುಖ್ಯವಾದ ವೃತ್ತಿಯಿಂದ ಎಂದರ್ಥ. ಲೋಕಸಿದ್ಧವಾದ ಯೋಗ, ರೂಢಿ ಮೊದಲಾದ ಮುಖ್ಯವೃತ್ತಿಗಳಿಂದ ಎಂದಭಿಪ್ರಾಯವೇ ಹೊರತು, ಅಮುಖ್ಯವೃತ್ತಿ ಎಂಬ ಶಬ್ದಕ್ಕೆ ಲಕ್ಷಣಾದಿ ವೃತ್ತಿಯಿಂದ ಎಂಬ ಭ್ರಾಂತಿಯನ್ನು ಹೊಂದಬಾರದು. ಏಕೆಂದರೆ ಲೋಕದಲ್ಲಿರುವ ಶಬ್ದಗಳಿಗೆ ನಾವು ಲಕ್ಷಣಾವೃತ್ತಿಯನ್ನು ಅಂಗೀಕರಿಸಿಲ್ಲ ಎಂದು ಈ ಹಿಂದೆಯೇ ಹೇಳಿದ್ದಾಗಿದೆ. ಇದರಂತೆ ಮುಂದೆಯೂ ಕೂಡ ಅಮುಖ್ಯವೃತ್ತಿಯೆಂಬ ಶಬ್ದವು ಪ್ರಸಕ್ತವಾದರೆ ಪರಮಮುಖ್ಯವೃತ್ತಿಗಿಂತಲೂ ಅಮುಖ್ಯವಾದ ಯೋಗ, ರೂಢಿ ಮೊದಲಾದ ವೃತ್ತಿಗಳಿಂದ ಎಂಬರ್ಥವನ್ನು ತಿಳಿಯಬೇಕು.

**भावदीपः –** शरीररूपकविन्यस्तगृहीतेरित्यंशतात्पर्यमाह – **प्रधानविशिष्टस्यैवेति ।।**

'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದ ಭಾಗದ ತಾತ್ಪರ್ಯವನ್ನು ಹೇಳಲು 'ಪ್ರಧಾನವಿಶಿಷ್ಟಸ್ಯೈವ' ಎಂಬ ವಾಕ್ಯವು ಹೊರಟಿದೆ.

**भावदीपः** – लोकसिद्धन्यायमाह – **मुख्यासम्भव इति** ।। यद्वा परममुख्यापेक्षया गौणेत्युक्तिः ।।२।।

ಲೋಕದಲ್ಲಿ ಸಿದ್ಧವಾದ ನ್ಯಾಯವನ್ನೇ 'ಮುಖ್ಯಾಸಂಭವೇ' ಎಂಬ ಮಾತಿನಿಂದ ಸಮರ್ಥಿಸುತ್ತಿದ್ದಾರೆ. 'ಗೌಣಾಶ್ರಯಸ್ಯ' ಎಂಬುದಕ್ಕೆ 'ಪರಮಮುಖ್ಯವೃತ್ತಿಗಿಂತಲೂ ಗೌಣವಾದ ವೃತ್ತಿಯಿಂದ' ಎಂದರ್ಥ. ಪರಮಮುಖ್ಯವೃತ್ತಿಯಿಂದಲೇ ವಾಚ್ಯತ್ವವು ಯುಕ್ತವಾಗುತ್ತಿರುವಾಗ ಯೋಗ, ರೂಢಿ ಮೊದಲಾದ ಅಮುಖ್ಯಾರ್ಥವನ್ನು ಸ್ವೀಕರಿಸಬಾರದು ಎಂಬುದು ನ್ಯಾಯಸಮ್ಮತವಾದ ಮಾತು.

## ಬ್ರಹ್ಮಮೀಮಾಂಸಾಶಾಸ್ತ್ರ

## ದೇವರನ್ನು 'ದುಃಖೀ' 'ಬದ್ಧಃ' ಇತ್ಯಾದಿಯಾಗಿ ಕರೆಯಬಹುದು

**सूत्रम् – ।। तदधीनत्वादर्थवत् ।। ३ ।।**

ಸೂತ್ರಾರ್ಥ - ಅವರತ್ವವನ್ನು ತಿಳಿಸುವ ಪಂಚಮ್ಯಾದಿ ಶಬ್ದಗಳು ಪರಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಏಕೆಂದರೆ ಪಂಚಮ್ಯಾದಿ ಪದಗಳ ಪ್ರವೃತ್ತಿನಿಮಿತ್ತವಾದ ಅವರತ್ವಾದಿಧರ್ಮಗಳು, ದುಃಖಿತ್ವ ಮೊದಲಾದವುಗಳು ಬ್ರಹ್ಮನ ಅಧೀನವಾಗಿರುತ್ತವೆ.

### ಸೂತ್ರದೀಪಿಕಾ

**सूत्रदीपिका** – दर्शयति चेत्यत्रत्यश्चशब्दोऽनुवर्तते । परमात्मन्येव परावरदुःखिबद्धत्वादिवाचिशब्दजातम् । **अर्थवत्** प्रवृत्तिनिमित्तरूपार्थवत् । न व्यर्थम् । कुतः ? **तदधीनत्वात्** तेषां प्रधानादिगतपरावरत्वादिधर्माणां भगवदधीनत्वात् । तथा चान्यगतप्रवृत्तिनिमित्तस्वामित्वेन निमित्तेनापि भगवति परावरादिशब्दप्रयोगो युक्त एवेत्यर्थः ।।३।।

ಅರ್ಥ -- 'ದರ್ಶಯತಿ ಚ' ಎಂಬಲ್ಲಿರುವ 'ಚ' ಶಬ್ದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಪರಮಾತ್ಮನಲ್ಲೇ 'ಪರಾವರ', 'ದುಃಖೀ' 'ಬದ್ಧ' ಮೊದಲಾದ ಶಬ್ದಗಳ ಸಮನ್ವಯವು ಯುಕ್ತವಾಗುತ್ತದೆ. ಅರ್ಥವತ್ = ಪ್ರವೃತ್ತಿನಿಮಿತ್ತವಿರುವುದರಿಂದ ಸಾರ್ಥಕವಾಗಿವೆ. ಏಕೆಂದರೆ, ತದಧೀನತ್ವಾತ್ = ಪ್ರಧಾನಾದಿಗಳಲ್ಲಿರುವ ಪರಾವರತ್ವ ಮೊದಲಾದ ಧರ್ಮಗಳು ಭಗವದಧೀನವಾಗಿವೆ. ಆದ್ದರಿಂದ ಬೇರೆಡೆಯಿರುವ ಪ್ರವೃತ್ತಿನಿಮಿತ್ತಗಳ ಸ್ವಾಮಿಯಾದ್ದರಿಂದ ಭಗವಂತನು 'ಪರಾವರ' ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ.

ಆನುಮಾನಿಕಾಧಿಕರಣ (೧-೪-೧)

## ಬ್ರಹ್ಮಸೂತ್ರಭಾಷ್ಯ

**भाष्यम् – तदधीनत्वाच्चाव्यक्तत्वादीनां तस्यैवाव्यक्तत्वपरावरत्वादिकमर्थवत् ।**

ಅನುವಾದ - ಅವ್ಯಕ್ತತ್ವಾದಿ ಧರ್ಮಗಳು ವಿಷ್ಣುವಿನ ಅಧೀನವಾಗಿರುವುದರಿಂದ ವಿಷ್ಣುವಿನಲ್ಲಷ್ಟೇ ಅವ್ಯಕ್ತತ್ವ, ಪರಾವರತ್ವ ಮೊದಲಾದ ಧರ್ಮಗಳು ಸಾರ್ಥಕವಾಗುತ್ತವೆ.

ಪ್ರತಿಪದಾರ್ಥ -- ವಿಷ್ಣುವಿನಲ್ಲೇ ಅವ್ಯಕ್ತ ಮೊದಲಾದ ಪ್ರಾತಿಪದಿಕಗಳು ಮುಖ್ಯವಾಗಿ ಬರುತ್ತವೆಂದು ಒಪ್ಪೋಣ. ಆದರೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಶ್ರುತವಾದ ಅವ್ಯಕ್ತಾದಿ ಶಬ್ದಗಳಿಂದ ವಿಷ್ಣುವಾಚ್ಯನಾಗುತ್ತಾನೆಂದು ವಿವಕ್ಷಿಸಲಾಗದು. ಹಾಗಾದಲ್ಲಿ 'ಮಹತಃ ಪರಮವ್ಯಕ್ತಂ' ಎಂಬುದಾಗಿ ಮಹತ್‌ಪರತ್ವವನ್ನು ಅವ್ಯಕ್ತದಲ್ಲಿ ಹೇಳುತ್ತಿರುವ ಶ್ರುತಿಯು ಅದೇ ರೀತಿಯಾಗಿ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಅವ್ಯಕ್ತಕ್ಕೆ ಅವರತ್ವವನ್ನು ಹೇಳುತ್ತಿರುವ ಪಂಚಮಿ ಶ್ರುತಿಯು, 'ಸೋಽವರಃ' ಎಂಬಲ್ಲಿ ನೇರವಾಗಿ ಅವ್ಯಕ್ತಕ್ಕೆ ಅವರತ್ವವನ್ನು ಹೇಳುತ್ತಿರುವ ಶ್ರುತಿಯು ಮತ್ತು 'ಜೀವಾ ಏವ ತು ದುಃಖಿನಃ ಕಾರ್ಯಕಾರಣಬದ್ಧಾ' ಎಂದು ದುಃಖಿತ್ವ, ಬದ್ಧತ್ವ ಮೊದಲಾದವುಗಳನ್ನು ಹೇಳುತ್ತಿರುವ ಶ್ರುತಿಯು 'ನಿರನಿಷ್ಟೋ ನಿರವದ್ಯಃ' ಎಂಬ ಶ್ರುತಿಯು ಪರಮಾತ್ಮನಲ್ಲಿ ಅತ್ಯಂತ ಅಸಂಭಾವಿತವಾಗುತ್ತದೆ. ಮತ್ತು ಈ ಎಲ್ಲಾ ಶ್ರುತಿಗಳಿಗೆ ನೈರರ್ಥ್ಯವು ಬರಬೇಕಾಗುತ್ತದೆ. ಈ ಬಾಧಕಗಳಿರುವುದರಿಂದ ಅವ್ಯಕ್ತಾದಿಶಬ್ದಗಳಿಂದ ಅಮುಖ್ಯವಾದರೂ ಕೂಡ ಪ್ರಧಾನಾದಿಗಳನ್ನೇ ಅರ್ಥವನ್ನಾಗಿ ಸ್ವೀಕರಿಸಬೇಕಲ್ಲವೇ? ಈ ಆಶಂಕೆಯನ್ನು ಪರಿಹರಿಸಲು ಮುಂದಿನ ಸೂತ್ರ ಹೊರಟಿದೆ. –

ತದಧೀನತ್ವಾತ್ ಅರ್ಥವತ್ = ಪ್ರಧಾನಾದಿ ಜಗತ್ತು ಭಗವದಧೀನವಾಗಿರುವುದರಿಂದ ಭಗವಂತನಲ್ಲಿಯೇ ಸಾರ್ಥಕವಾಗಿವೆ.

ಅವ್ಯಕ್ತತ್ವಾದೀನಾಂ = ಅವ್ಯಕ್ತತ್ವ ಮೊದಲಾದ ಧರ್ಮಗಳೆಲ್ಲವೂ, ತದಧೀನತ್ವಾಚ್ಚ = ವಿಷ್ಣುವಿನ ಅಧೀನವಾಗಿರುವುದರಿಂದಲೂ, ತಸ್ಯೈವ = ಮಹಾವಿಷ್ಣುವಿನಲ್ಲಿಯೇ, ಅವ್ಯಕ್ತತ್ವ = ಅವ್ಯಕ್ತತ್ವವು, ಪರಾವರತ್ವಾದಿಕಂ = ಪರಾವರತ್ವ ಮೊದಲಾದ ಧರ್ಮಗಳು, ಅರ್ಥವತ್ = ಸಾರ್ಥಕವಾಗುತ್ತವೆ.

**भाष्यम् – 'यदधीनो गुणो यस्य तद्गुणी सोऽभिधीयते ।**
**यथा जीवः परात्मेति यथा राजा जयीत्यपि'**

**इति च स्कान्दे ।।३।।**

ಅನುವಾದ - ಯಾವುದರ ಗುಣವು ಯಾರ ಅಧೀನವೋ, ಅವರೇ ಅಂತಹ ಗುಣಗಳುಳ್ಳವನೆಂದು ಕರೆಸಿಕೊಳ್ಳುತ್ತಾನೆ. ಉದಾ: - ಜೀವನಲ್ಲಿದ್ದು ಜೀವನ ಗುಣಗಳಿಗೆ ನಿಯಾಮಕನಾದ್ದರಿಂದ, ಪರಮಾತ್ಮನೇ 'ಜೀವ' ಎಂದು ಕರೆಸಿಕೊಳ್ಳುತ್ತಾನೆ. ಭೃತ್ಯನು ಗೆದ್ದಾಗ ರಾಜನು 'ಜಯೀ'ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ಸ್ಕಾಂದ ಪುರಾಣವು ಹೇಳಿದೆ.

ಪರಿಪೂರ್ಣಚಂದ್ರಿಕಾ

ಪ್ರತಿಪದಾರ್ಥ -- ಪ್ರಧಾನ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತಕ್ಕೆ ಪ್ರೇರಕನಾದ್ದರಿಂದ ಈಶ್ವರನು ಅವರ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಿದ್ದನು. ಒಂದು ವೇಳೆ ಅನ್ಯಗತವಾದ ಶಬ್ದಪ್ರವೃತ್ತಿನಿಮಿತ್ತಕ್ಕೆ ಪ್ರೇರಕನಾದ ಈಶ್ವರನಲ್ಲಿ ಅವರಾದಿ ಶಬ್ದಗಳು ಇರುವುದಾದರೆ, ಇದೇ ಇನ್ನು ಸಿದ್ಧವಾಗಿಲ್ಲವಲ್ಲ? ಎಂಬ ಪ್ರಶ್ನೆಗೆ ವ್ಯಾಪ್ತಿಯನ್ನು ಹೇಳುವ ಮೂಲಕ ಅನುಮಾನದಿಂದ ಸಮರ್ಥಿಸುತ್ತಿದ್ದಾರೆ. –

ಯದಧೀನಃ = ಧರ್ಮಿವಾಚಕವಾದ ಶಬ್ದದ ಪ್ರವೃತ್ತಿನಿಮಿತ್ತವೆಂಬ, ಗುಣಃ = ಗುಣವು, ಯದಧೀನಃ = ಯಾರ ಅಧೀನವಾಗಿದೆಯೋ, ಸಃ = ಅವನು, ತದ್ಗುಣ = ಆ ಗುಣವುಳ್ಳವನೆಂದು, ಅಭಿಧೀಯತೇ = ಕರೆಸಿಕೊಳ್ಳುತ್ತಾನೆ. ಯಥಾ = ವೈದಿಕವಾದ ಹಾಗೂ ಲೌಕಿಕವಾದ ಎರಡು ಬಗೆಯ ದೃಷ್ಟಾಂತಗಳು ಹೀಗಿವೆ - ಪರಾತ್ಮಾ = ವಿಷ್ಣುವು, ಜೀವಃ = 'ಅನೇನ ಜೀವೇನ' ಎಂಬ ಶ್ರುತಿಯಲ್ಲಿರುವ ಜೀವ ಎಂಬ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಗುಣಕ್ಕೆ ನಿಯಾಮಕನಾದ್ದರಿಂದ, ಜೀವಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಯಥಾ = ಹೇಗೆಂದರೆ, ರಾಜಾ ಜಯೀ = ಭೃತ್ಯನು ಜಯಶೀಲನಾದರೆ, ರಾಜನು ಜಯಿಸಿದನು, ಇತ್ಯಪಿ = ಈ ಪ್ರಯೋಗವೂ ಕೂಡ ಲೋಕದಲ್ಲಿ ಕಾಣಸುತ್ತದೆ. ಇತಿ ಚ = ಹೀಗೆ, ಸ್ಕಾಂದೇ = ಸ್ಕಾಂದಪುರಾಣದಲ್ಲಿ ಹೇಳಲಾಗಿದೆ.

## ತತ್ವಪ್ರಕಾಶಿಕಾ

**नन्वस्त्वेवं परमात्मन्येवाव्यक्तादिशब्दानां मुख्यत्वम् । तथापि 'अव्यक्तात् पुरुषः परः' इत्यादौ प्रधानाद्येवोच्यते; न विष्णुः ।**

ಹಿಂದಿನ ಸೂತ್ರದಲ್ಲಿ ಹೇಳಿದಂತೆ ಅವ್ಯಕ್ತ, ಜೀವ ಇವೇ ಮೊದಲಾದ ಶಬ್ದಗಳು ಮುಖ್ಯವಾಗಿ ವಿಷ್ಣುವನ್ನೇ ಪ್ರತಿಪಾದನೆ ಮಾಡಲಿ. ಆದರೂ ಕೂಡ 'ಅವ್ಯಕ್ತಾತ್ ಪುರುಷಃ ಪರಃ' ಎಂಬ ಶ್ರುತಿಯಲ್ಲಿರುವ ಅವ್ಯಕ್ತಶಬ್ದ ಮಾತ್ರ ಪ್ರಕೃತಿಯನ್ನೇ ಪ್ರತಿಪಾದನೆ ಮಾಡುತ್ತದೆ ಹೊರತು, ವಿಷ್ಣುವನ್ನಲ್ಲ.

**तत्वप्रकाशिका – अव्यक्तादीनां महत्परत्वस्य, पुरुषावरत्वस्य, दुःखि-बद्धत्वादेश्च श्रवणात् । तस्य च प्रधानादावेव सम्भवात् । सर्वप्रमाणविरोधेन परमात्मन्यसम्भवात् ।**

ಏಕೆಂದರೆ ಅವ್ಯಕ್ತ ಮೊದಲಾದ ಪದಾರ್ಥಗಳಿಗೆ ಮಹತ್ತತ್ವಕ್ಕಿಂತ ಉತ್ತಮತ್ವವನ್ನು, ಪುರುಷನಿಗಿಂತ ಅವರತ್ವವನ್ನು ಶ್ರುತಿಯು ಹೇಳುತ್ತಿದೆ. ಅಷ್ಟೇ ಅಲ್ಲದೇ ದುಃಖಿತ್ವ, ಬದ್ಧತ್ವ ಮೊದಲಾದವುಗಳೂ ಕೂಡ ಶ್ರುತವಾಗಿವೆ. ಈ ಎಲ್ಲಾ ಧರ್ಮಗಳು ಪ್ರಕೃತಿಯಲ್ಲೇ ಸಂಭವಿಸುತ್ತವೆ. ಅನೇಕ ಪ್ರಮಾಣಗಳ ವಿರೋಧವಿರುವ ಕಾರಣ ಪರಮಾತ್ಮನಲ್ಲಿ ಸರ್ವಥಾ ಕೂಡುವುದಿಲ್ಲ.

**तत्वप्रकाशिका – अतो विष्णोः मुख्यार्थत्वेऽपि तद्ग्रहणे परावरत्वादिश्रुतेः नैरर्थ्यादमुख्यमपि प्रधानादि ग्राह्यम्, इत्याशङ्कां परिहरत्सूत्रं पठित्वा व्याचष्टे – तदधीनत्वादिति ॥**

ಆದ್ದರಿಂದ ಅವ್ಯಕ್ತ ಮೊದಲಾದ ಶಬ್ದಗಳ ಮುಖ್ಯಾರ್ಥ ವಿಷ್ಣುವೇ ಆಗುತ್ತಾನೆ. ಆದರೂ ಕೂಡ ಈ ಶ್ರುತಿಯಲ್ಲಿ ಅವ್ಯಕ್ತಶಬ್ದದಿಂದ ಮಹಾವಿಷ್ಣುವನ್ನು ಸ್ವೀಕರಿಸಿದರೆ ಪರತ್ವಶ್ರುತಿ ಹಾಗೂ ಅವರತ್ವ ಪ್ರತಿಪಾದಕ ಶ್ರುತಿಗೆ ವೈಯರ್ಥ್ಯವು ಬರುತ್ತದೆ. ಹಾಗಾಗಿ ಅವ್ಯಕ್ತಶಬ್ದಕ್ಕೆ ಪ್ರಕೃತಿಯು ಅಮುಖ್ಯಾರ್ಥವಾದರೂ ಸ್ವೀಕರಿಸಬೇಕಲ್ಲವೇ? ಈ ಆಕ್ಷೇಪವನ್ನು ಪರಿಹರಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ತದಧೀನತ್ವಾತ್' ಇತ್ಯಾದಿಯಾಗಿ.

**तत्वप्रकाशिका – नाव्यक्तादिशब्दैः परमात्मनो वाच्यत्वग्रहणे परावरत्वादिश्रुतिनैरर्थ्यं, येन मुख्यार्थं परित्यज्य अमुख्यार्थाभ्युपगतिः ।**

ಅವ್ಯಕ್ತ ಮೊದಲಾದ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಮುಖ್ಯಾರ್ಥವನ್ನು ಸ್ವೀಕರಿಸಿದರೂ ಪರತ್ವಶ್ರುತಿ ಹಾಗೂ ಅವರತ್ವ ಪ್ರತಿಪಾದಕ ಶ್ರುತಿಗಳಿಗೆ ವೈಯರ್ಥ್ಯವು ಬರುವುದಿಲ್ಲ. ಹಾಗೆ ವೈಯರ್ಥ್ಯವು ಬರುವುದಾದಲ್ಲಿ ಅವ್ಯಕ್ತಾದಿಶಬ್ದಗಳಿಗೆ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯವಾದ ಪ್ರಕೃತಿ ಎಂಬರ್ಥವನ್ನೇ ಒಪ್ಪಬೇಕಾಗಿತ್ತು.

**तत्वप्रकाशिका – किं नाम ? तस्मिन्नैवावरत्वादिवाचिशब्दजातमर्थवत् । प्रधानादिगतपरावरत्वादिधर्माणां भगवदधीनत्वात् ।**

ಮತ್ತೇನೆಂದರೆ ಅವರತ್ವ, ದುಃಖಿತ್ವ ಮೊದಲಾದ ಧರ್ಮಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೆಲ್ಲವೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಾ ಸಾರ್ಥಕವಾಗುತ್ತವೆ. ಏಕೆಂದರೆ ಪ್ರಕೃತಿ ಮೊದಲಾದ ಪದಾರ್ಥಗಳಲ್ಲಿ ಇರುವಂತಹ, ಪರತ್ವ, ಅವರತ್ವ, ದುಃಖಿತ್ವ ಮೊದಲಾದ ಧರ್ಮಗಳೆಲ್ಲವೂ ಭಗವಂತನ ಅಧೀನವಾಗಿರುತ್ತವೆ. ಭಗವದಧೀನವಾಗಿರುವುದರಿಂದ ಅವರಾದಿ ಶಬ್ದಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – 'अन्यगतशब्दार्थनियन्तृत्वं' 'तदधिकरणत्वं' चेति द्विधा हि प्रवृत्तिनिमित्तम् ।**

ಅನ್ಯಗತಶಬ್ದಾರ್ಥನಿಯಂತೃತ್ವ, ಮತ್ತು ತದಧಿಕರಣತ್ವ ಎಂಬುದಾಗಿ ಎರಡು ಕ್ರಮದಲ್ಲಿ ಶಬ್ದಗಳು ಪ್ರವೃತ್ತವಾಗುತ್ತವೆ. ಬೇರೆ ಪದಾರ್ಥಗಳಲ್ಲಿರುವ ಆಯಾ ಶಬ್ದಾರ್ಥಗಳನ್ನು ನಿಯಮನ ಮಾಡುವಿಕೆ

ಅಥವಾ ಆ ಧರ್ಮಗಳಿಗೆ ಅಧಿಕರಣವಾಗಿರುವಿಕೆಯೆಂಬ ಎರಡು ಬಗೆಯ ಧರ್ಮಗಳಿದ್ದಲ್ಲಿ ಆಯಾ ಶಬ್ದಗಳನ್ನು ಪ್ರಯೋಗಿಸಬಹುದು.

**तत्वप्रकाशिका – तत्र परमात्मनो 'निरनिष्टो निरवद्यः' इत्यादिनावरत्वादिदोषात्यस्पृष्टिनियमात्, तदन्यथानुपपत्त्या तत्तन्नियामकत्वेन तत्तच्छब्दवाच्यताऽपातात् ।**

ಈ ಎರಡುವಿಧ ಪ್ರವೃತ್ತಿನಿಮಿತ್ತಗಳಲ್ಲಿ ಪರಮಾತ್ಮನು ಅನ್ಯಗತಶಬ್ದಾರ್ಥನಿಯಾಮಕತ್ವ ಎಂಬ ಕಾರಣದಿಂದ ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಅದು ಹೀಗೆ - 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಗಳು ಪರಮಾತ್ಮನು ಅವರತ್ವಾದಿ ದೋಷಗಳಿಂದ ರಹಿತನಾಗಿದ್ದಾನೆಂದು ಪ್ರತಿಪಾದನೆ ಮಾಡುತ್ತಿವೆ. ದೋಷವಿದೂರನೆಂಬ ಅರ್ಥವನ್ನು ಬಿಟ್ಟು 'ದುಃಖೀ' ಮೊದಲಾದ ಬೇರೆ ಪ್ರಕಾರದಿಂದ ಶ್ರುತಿಯನ್ನು ಸಮರ್ಥಿಸಲು ಸಾಧ್ಯವಿಲ್ಲ. ಆದರೆ ಶಬ್ದಗಳು ದೋಷವನ್ನು ಪ್ರತಿಪಾದನೆ ಮಾಡುತ್ತಿವೆ. ಈ ಉಭಯವಿಧ ಅನ್ಯಥಾನುಪಪತ್ತಿಯಿಂದ ಆಯಾ ದೋಷಗಳಿಗೆ ಭಗವಂತನು ನಿಯಾಮಕನಾಗಿದ್ದಾನೆಂದು ಹೇಳಬೇಕು. ಆದ್ದರಿಂದಲೇ ಆಯಾ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – नच तदवाच्यतयाऽन्यथोपपत्तिः । 'नामानि सर्वाणि यमाविशन्ति' इत्यादिश्रुतिविरोधात् ।**

ಅವರಾದಿ ಶಬ್ದಗಳಿಂದ ಪರಮಾತ್ಮನು ವಾಚ್ಯನೇ ಆಗದ ಕಾರಣ ಅನ್ಯಥಾ ಉಪಪನ್ನವಾಗುತ್ತದಲ್ಲವೇ? ಹೀಗೆ ಪ್ರಶ್ನಿಸಬಾರದು. ಏಕೆಂದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯ ವಿರೋಧ ಬರುತ್ತದೆ. ಸಕಲಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿವೆಯೆಂದು ಈ ಶ್ರುತಿಯು ಹೇಳುತ್ತಿರುವುದರಿಂದ ದೋಷವಾಚಕ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲವೆಂದು ಹೇಳಲಾಗದು.

**तत्वप्रकाशिका – नच सङ्कोचः । 'सर्वाणि' इत्यस्य निरवकाशत्वात्, बाधकाभावाच्चेति भावः ।**

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿರುವ ಸರ್ವ ಪದಕ್ಕೆ ದೋಷವಾಚಕ ಶಬ್ದಗಳನ್ನು ಬಿಟ್ಟು ಎಂದು ಸಂಕೋಚ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. 'ಸರ್ವಾಣಿ' ಎಂಬ ಪದವು ನಿರವಕಾಶವಾಗಿದೆ. ಮತ್ತು ಅಸಂಕುಚಿತವಾಗಿ ಸಕಲಶಬ್ದಗಳನ್ನು 'ಸರ್ವ' ಪದದಿಂದ ವಿವಕ್ಷಿಸಿದಾಗ ಯಾವುದೇ ಬಾಧಕಗಳೂ ಕೂಡ ಬರುತ್ತಿಲ್ಲ.

**तत्वप्रकाशिका – अत्र अव्यक्तत्वग्रहणेनाव्यक्तशब्दस्य द्वेधापि परमात्मनि वृत्तिरिति दर्शयति । अत एव भाष्ये 'च'शब्दः ।**

ಭಾಷ್ಯದಲ್ಲಿ 'ಅವ್ಯಕ್ತತ್ವಾದೀನಾಂ' ಎಂಬುದಾಗಿ ಅವ್ಯಕ್ತತ್ವ ಎಂಬ ಧರ್ಮವನ್ನು ಉಲ್ಲೇಖಿಸಿದ್ದರಿಂದ ಅವ್ಯಕ್ತಶಬ್ದಕ್ಕೆ ಎರಡು ಬಗೆಯಲ್ಲಿಯೂ ಪರಮಾತ್ಮನಲ್ಲಿ ಸಮನ್ವಯವನ್ನು ತೋರಿಸುತ್ತಿದ್ದಾರೆ. ಆದ್ದರಿಂದಲೇ ಭಾಷ್ಯದಲ್ಲಿ 'ಚ' ಶಬ್ದವು ಸಾರ್ಥಕವಾಗಿದೆ.

**तत्वप्रकाशिका – अनेन 'प्रधानादेरतिसूक्ष्मत्वाद्यभावेऽपि नामुख्यार्थत्वम्, अल्पपङ्कजेऽपि पद्मे पङ्कजशब्दस्यामुख्यार्थताऽदर्शनात्' इति शङ्का च निरस्ता भवति ।**

ಹೀಗೆ ಹೇಳಿದ್ದರಿಂದ ಪ್ರಕೃತ್ಯಾದಿಗಳಲ್ಲಿ ಅತಿಸೂಕ್ಷ್ಮತ್ವವು ಇರದಿದ್ದರೂ ಪ್ರಕೃತ್ಯಾದಿಗಳು ಅವ್ಯಕ್ತ ಶಬ್ದಕ್ಕೆ ಅಮುಖ್ಯಾರ್ಥವೆಂದು ತಿಳಿಯಬಾರದು. ಏಕೆಂದರೆ ಕಮಲವು ಸ್ವಲ್ಪ ಕೆಸರಿನಿಂದ ಹುಟ್ಟಿದಾಗ ಪಂಕಜ ಶಬ್ದಕ್ಕೆ ಕಮಲದಲ್ಲಿ ಅಮುಖ್ಯಾರ್ಥವೆಂದು ಯಾರೂ ಹೇಳುವುದಿಲ್ಲ. ಅದರಂತೆ ಪರಮಾತ್ಮನು ಮಾತ್ರ ಅತಿಸೂಕ್ಷ್ಮನಾಗಿದ್ದಾನೆ, ಪ್ರಕೃತಿಯು ಅತಿಸೂಕ್ಷ್ಮವಾಗದ ಕಾರಣ ಮುಖ್ಯಾರ್ಥವಲ್ಲ ಎಂದು ಹೇಳಬಾರದು ಎಂಬ ಕೆಲವರ ಆಕ್ಷೇಪವನ್ನು ಈಗ ನಿರಾಕರಿಸಿದಂತಾಯಿತು.

**तत्वप्रकाशिका – ननु भवेदेतत् प्रधानादिगतशब्दप्रवृत्तिनिमित्त-प्रेरकत्वेनेश्वरस्यावरत्वादिशब्दवाच्यत्वम् । यद्यन्यगतशब्दप्रवृत्तिनिमित्तप्रेरकेऽसौ शब्दो वर्तते सति सिध्येत् तदेव कुत ? इति तत्राह – यदधीन इति ।।**

ಪ್ರಶ್ನೆ - ಪ್ರಕೃತ್ಯಾದಿಗಳಲ್ಲಿರುವ ಶಬ್ದಪ್ರವೃತ್ತಿನಿಮಿತ್ತಗಳಿಗೆ ಪ್ರೇರಕನಾದ ಕಾರಣ ಈಶ್ವರನು ಅವರಾದಿ ಶಬ್ದಗಳಿಂದ ವಾಚ್ಯನಾಗುತ್ತಾನೆ. ಇದು ಯಾವಾಗ ಸರಿಹೊಂದುತ್ತದೆಂದರೆ ಒಂದು ವೇಳೆ ಬೇರೆ ಶಬ್ದಗಳಲ್ಲಿರುವ ಪ್ರವೃತ್ತಿನಿಮಿತ್ತಗಳಿಗೆ ಈಶ್ವರನೇ ಪ್ರೇರಕನಾಗಿದ್ದರೆ ಈಶ್ವರನು ಆಯಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಿದ್ದನು. ಆದರೆ ಈಶ್ವರನು ಹಾಗೆ ಪ್ರೇರಕನಾಗಿದ್ದಾನೆಂಬುದು ಹೇಗೆ ಸಿದ್ಧವಾಗುತ್ತದೆ?

ಉತ್ತರ - ಈ ಪ್ರಶ್ನೆಗೆ 'ಯದಧೀನಃ' ಎಂಬ ಪ್ರಮಾಣವನ್ನು ಉಲ್ಲೇಖಿಸುವ ಮೂಲಕ ಉತ್ತರಿಸುತ್ತಿದ್ದಾರೆ.

**तत्वप्रकाशिका – यथा परमात्मा जीवगतप्राणधारणस्य तदधीनत्वेन 'अनेन जीवेन' इत्यादौ जीवशब्देनोच्यते । यथा च भृत्यगतजयस्य राजाधीनत्वादसौ जयीत्युच्यते इत्यर्थः ।**

ಯಾವರೀತಿಯಾಗಿ ಜೀವನಲ್ಲಿರುವ ಪ್ರಾಣಧಾರಕತ್ವವು ಪರಮಾತ್ಮನ ಅಧೀನವಾಗಿರುವುದರಿಂದ 'ಅನೇನ ಜೀವೇನ' ಎಂಬ ಉಪನಿಷತ್ತಿನಲ್ಲಿರುವ ಜೀವಶಬ್ದದಿಂದ ಪರಮಾತ್ಮನು ಪ್ರತಿಪಾದ್ಯ-ನಾಗಿದ್ದಾನೋ, ಮತ್ತು ಭೃತ್ಯನಲ್ಲಿರುವ ಜಯವು ರಾಜಾಧೀನವಾದ್ದರಿಂದ ರಾಜನನ್ನು ಎಲ್ಲರೂ

'ಜಯೀ' ಎಂಬುದಾಗಿ ಕರೆಯುತ್ತಾರೋ, ಅದರಂತೆ ಪರಮಾತ್ಮನೂ ಕೂಡ ನಿಯಾಮಕನಾದ್ದರಿಂದ 'ಅವರ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

**तत्वप्रकाशिका – नच अन्यगतशब्दप्रवृत्तिनिमित्तप्रेरके शब्दप्रवृत्तिरमुख्या । राजनि विजयिब्दस्य बहुलप्रयोगात् यमादौ मृत्युप्रमुखशब्दानां च तथात्वात् बहुलप्रयोगसिद्धस्यैव मुख्यत्वात् ।**

ಬೇರೆ ಪದಾರ್ಥದಲ್ಲಿರುವ ಶಬ್ದಗಳ ಪ್ರವೃತ್ತಿನಿಮಿತ್ತಗಳಿಗೆ ನಿಯಾಮಕನಾದ ಪರಮಾತ್ಮನಲ್ಲಿ ಶಬ್ದಗಳ ಪ್ರವೃತ್ತಿಯು ಅಮುಖ್ಯವಾಗಿರುತ್ತದೆಂದು ಹೇಳಬಾರದು. ಏಕೆಂದರೆ 'ವಿಜಯೀ' ಎಂಬ ಶಬ್ದವನ್ನು ಭೃತ್ಯರಿಗಿಂತ ಹೆಚ್ಚಾಗಿ ರಾಜನಲ್ಲಿಯೇ ಎಲ್ಲರೂ ವ್ಯವಹರಿಸುತ್ತಾರೆ. ಅದರಂತೆ ಮೃತ್ಯುಶಬ್ದಕ್ಕೆ ಮರಣ ಎಂಬರ್ಥವಿದ್ದರೂ ಮರಣಕ್ಕೆ ನಿಯಾಮಕನಾದ ಯಮದೇವರಲ್ಲಿಯೇ ಎಲ್ಲರೂ ಹೆಚ್ಚಾಗಿ ಮೃತ್ಯುಶಬ್ದವನ್ನು ಪ್ರಯೋಗಿಸುತ್ತಾರೆ. ಹೆಚ್ಚಾದ ಪ್ರಯೋಗವು ಯಾರಲ್ಲಿರುತ್ತದೋ ಅವರೇ ಆಯಾ ಶಬ್ದಗಳ ಮುಖ್ಯಾರ್ಥರೆಂಬುದು ಲೋಕಸಿದ್ಧವಾದ ನಿಯಮ.

**तत्वप्रकाशिका – अवरयतीत्यादिव्युत्पत्त्युपपत्तेश्च । तथा च श्रुतिः 'स बद्धः स दुःखी स बन्धयति स दुःखयतीति स जीवः सा प्रकृतिः स जीवयति स प्रकरोति सोऽवरः सोऽनित्यः सोऽवरयति सोऽनित्ययति' इत्यादिका ।**

ಮತ್ತು 'ಅವರಯತಿ' 'ಮತ್ತೊಬ್ಬರನ್ನು ನೀಚರನ್ನಾಗಿ ಮಾಡಿಸುತ್ತಾನೆ' ಎಂಬ ವ್ಯುತ್ಪತ್ತಿಯಿಂದಲೇ ಪರಮಾತ್ಮನೇ 'ಅವರ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಿದ್ದಾನೆ. ಈ ವಿಷಯದಲ್ಲಿ ಶ್ರುತಿಪ್ರಮಾಣ ಹೀಗಿದೆ - 'ಸ ಬದ್ಧಃ, ಸ ದುಃಖೀ, ಸ ಬಂಧಯತಿ, ಸ ದುಃಖಯತೀತಿ, ಸ ಜೀವಃ, ಸಾ ಪ್ರಕೃತಿಃ, ಸ ಜೀವಯತಿ, ಸ ಪ್ರಕರೋತಿ, ಸೋಽವರಃ, ಸೋಽನಿತ್ಯಃ, ಸೋಽವರಯತಿ, ಸೋಽನಿತ್ಯಯತಿ' ಮತ್ತೊಬ್ಬರಿಗೆ ಬಂಧನವನ್ನು ನೀಡುತ್ತಾನಾದ್ದರಿಂದ ಬದ್ಧಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಮತ್ತೊಬ್ಬರಿಗೆ ದುಃಖವನ್ನು ನೀಡುತ್ತಾನಾದ್ದರಿಂದ 'ದುಃಖೀ' ಎನಿಸಿಕೊಳ್ಳುತ್ತಾನೆ. ಇಂತಹ ಪರಮಾತ್ಮನು ಮತ್ತೊಬ್ಬ ಪ್ರಾಣಧಾರಕನಿಗೆ ನಿಯಾಮಕನಾದ್ದರಿಂದ 'ಜೀವ' ಎನಿಸಿಕೊಳ್ಳುತ್ತಾನೆ. ಅವನು ಪ್ರಕೃಷ್ಟನಾದ್ದರಿಂದ ಪ್ರಕೃತಿ ಎನಿಸಿಕೊಳ್ಳುತ್ತಾನೆ. ಅವನು ಅವರರನ್ನಾಗಿ ಮಾಡುತ್ತಾನಾದ್ದರಿಂದ 'ಅವರ', ಅನಿತ್ಯರನ್ನಾಗಿ ಮಾಡುತ್ತಾನಾದ್ದರಿಂದ 'ಅನಿತ್ಯ'. ಹೀಗೆ 'ಅವರಃ', 'ಅನಿತ್ಯಃ' ಮೊದಲಾದ ಶಬ್ದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ.

**तत्वप्रकाशिका – एवं प्रयोगप्रवृत्तिनिमित्तातिशयाभ्यां परमात्मन्येवाव्यक्त-शब्दानां मुख्यत्वात्, मुख्यार्थस्यैव ग्राह्यत्वात् स एवाऽव्यक्तात् पुरुषः पर इत्यादावुच्यते न प्रधानादीत्युक्तम् ।। ३ ।।**

ಆನುಮಾನಿಕಾಧಿಕರಣ (೧-೪-೧)

ಹೀಗೆ ಆಯಾ ಶಬ್ದಗಳ ಪ್ರಯೋಗ ಹಾಗೂ ಪ್ರವೃತ್ತಿನಿಮಿತ್ತಗಳು ಅತಿಶಯವಾಗಿ ಪರಮಾತ್ಮನಲ್ಲೇ ಬರುವುದರಿಂದ ಅವ್ಯಕ್ತಾದಿಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ. ಮುಖ್ಯಾರ್ಥನಾದ ಪರಮಾತ್ಮನನ್ನೇ ಸ್ವೀಕರಿಸಬೇಕಾದ್ದರಿಂದ 'ಅವ್ಯಕ್ತಾತ್‌ಪುರುಷಃ ಪರಃ' ಎಂಬ ಶ್ರುತಿಯಲ್ಲಿರುವ ಅವ್ಯಕ್ತಶಬ್ದದಿಂದಲೂ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ ಹೊರತು ಪ್ರಕೃತ್ಯಾದಿಗಳಲ್ಲ ಎಂಬ ವಿಷಯವು ಈ ಸೂತ್ರದಿಂದ ಅತ್ಯಂತ ಸ್ಪಷ್ಟವಾಗಿ ಸಿದ್ಧವಾಗಿದೆ.

## ಭಾವದೀಪ

मुख्यासम्भवोऽसिद्ध इति शङ्कते – **नन्विति** ।।

'ಮುಖ್ಯಾಸಂಭವ ಏವ ಗೌಣಾಶ್ರಯಸ್ಯ ನ್ಯಾಯತ್ವಾತ್' ಎಂಬ ನ್ಯಾಯವು ಅಸಿದ್ಧವೆಂದು 'ನನು' ಇತ್ಯಾದಿ ಟೀಕೆಯಿಂದ ಪ್ರಶ್ನಿಸುತ್ತಾರೆ.

**भावदीपः – परावरत्वादिश्रुतेरिति ।। परशब्दः परत्वश्रुतिः । अव्यक्तादिति पञ्चमी त्ववरत्वाक्षेपकावधित्ववाचित्वादवरत्वश्रुतिरित्युच्यत इति ध्येयम् ।**

ಟೀಕೆಯಲ್ಲಿ 'ಪರವರತ್ವಾದಿಶ್ರುತೇಃ' ಎಂದು ಹೇಳಿದ್ದಾರೆ. ಇದಕ್ಕೆ ಹೀಗೆ ಅರ್ಥ - 'ಪರ' ಶಬ್ದವು ಪರತ್ವಪ್ರತಿಪಾದಕವಾದ ಶ್ರುತಿಯನ್ನು ಹೇಳುತ್ತಿದೆ. 'ಅವ್ಯಕ್ತಾತ್' ಎಂಬ ಶ್ರುತಿಯಲ್ಲಿರವ ಪಂಚಮೀ ವಿಭಕ್ತಿಯು ಅವಧಿತ್ವವನ್ನು ಹೇಳುತ್ತಿದೆ. ಇದರಿಂದ ಅವರತ್ವವು ಆಕ್ಷೇಪದ ಬಲದಿಂದ ಸಿದ್ಧವಾಗುತ್ತದೆ. ಹೀಗೆ ಪರಾವರತ್ವಾದಿ ಶ್ರುತಿಶಬ್ದಕ್ಕೆ ಪರತ್ವ ಪ್ರತಿಪಾದಕ ಶ್ರುತಿ ಹಾಗೂ ಆಕ್ಷೇಪದ ಬಲದಿಂದ ಸಿದ್ಧವಾಗುವ ಅವರತ್ವ ಪ್ರತಿಪಾದಕ ಶ್ರುತಿಯೆಂಬ ಅರ್ಥವನ್ನು ತಿಳಿಯಬೇಕು.

**भावदीपः – उक्तशङ्कानिवृत्तिपूर्वं तस्यैवेति सूत्रांशभाष्यं व्याचष्टे – नाव्यक्तेति।।**

ಇದುವರೆಗೂ ಹೇಳಿದ ಆಶಂಕೆಯನ್ನು ಪರಿಹರಿಸಲು 'ತಸ್ಯೈವ' ಎಂಬ ಸೂತ್ರಭಾಗದ ಅಂಶವನ್ನು ಭಾಷ್ಯದಲ್ಲಿ ವ್ಯಾಖ್ಯಾನಿಸಿದ್ದಾರೆ. ಅದನ್ನು ಟೀಕೆಯಲ್ಲಿ 'ನ ಅವ್ಯಕ್ತ' ಇತ್ಯಾದಿ ಮಾತುಗಳಿಂದ ಸ್ಪಷ್ಟಪಡಿಸುತ್ತಿದ್ದಾರೆ.

**भावदीपः – तस्येति पदं सप्तम्यन्तं व्याचष्टे – तस्मिन्निति ।। तदित्यादिभाष्यार्थमाह – प्रधानेति ।।**

ಭಾಷ್ಯದಲ್ಲಿರುವ 'ತಸ್ಯ' ಎಂಬ ಪದವು ಸಪ್ತಮಿ ವಿಭಕ್ತ್ಯರ್ಥವನ್ನು ಹೇಳುತ್ತಿರುವುದನ್ನು ತೋರಿಸಲು 'ತಸ್ಮಿನ್' ಎಂದು ಪ್ರಯೋಗ ಮಾಡಿದ್ದಾರೆ. 'ತದಧೀನತ್ವಾತ್' ಇತ್ಯಾದಿ ಭಾಷ್ಯದ ಅರ್ಥವನ್ನು 'ಪ್ರಧಾನಾದಿ' ಇತ್ಯಾಏ ವಾಕ್ಯದಿಂದ ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

**भावदीपः** – अवरत्वसमवायादेरवरादिशब्दप्रवृत्तिहेतोरीशेऽभावेन तच्छब्दवाच्यता नेत्यस्य किमुत्तरमनेनोक्तं स्यादित्यतः अवरत्वादिधर्मनियन्तृत्वं तत्तादम्त्यवत्वं चेति द्विविधं ह्यहरत्वादि । 'निरनिष्टो निरवद्यः' इत्यादिश्रुतेः तत्तद्दोषतादात्म्यात्यस्पृष्टिनियमात् विष्णोः 'नामानि सर्वाणि यमाविशन्ति' इति श्रुतिबलाच्च नियन्तृत्वमवरत्वादिकमित्यापतति । श्रुतिद्वयस्यापि निरवकाशत्वादिति न्यायविवरणमत्र योजयति – **अन्यगतेति** ।।

'ಅವರತ್ವ', 'ಸಮವಾಯ' ಮೊದಲಾದ ಆದಿಶಬ್ದದ ಪ್ರವೃತ್ತಿನಿಮಿತ್ತಗಳು ಪರಮಾತ್ಮನಲ್ಲಿ ಬರುವುದಿಲ್ಲ. ಅಂತಹ ಶಬ್ದವಾಚ್ಯತ್ವವನ್ನೂ ಕೂಡ ಅವನಲ್ಲಿ ಹೇಳಲು ಸಾಧ್ಯವಿಲ್ಲ. ಈ ಆಕ್ಷೇಪಕ್ಕೆ ಯಾವ ಉತ್ತರವನ್ನು ಹೇಳಿದಂತಾಯಿತು ? ಎಂದು ಪ್ರಶ್ನೆ ಬರುತ್ತದೆ. ಇದಕ್ಕೆ ನ್ಯಾಯವಿವರಣದಲ್ಲಿ ಹೇಳಿದ ಉತ್ತರವನ್ನೇ ಟೀಕೆಯಲ್ಲಿ 'ಅನ್ಯಗತ' ಇತ್ಯಾದಿಯಾಗಿ ಉಲ್ಲೇಖಿಸಿದ್ದಾರೆ. ನ್ಯಾಯವಿವರಣದಲ್ಲಿ ಹೀಗೆ ಹೇಳಿದ್ದಾರೆ -

'ಅವರ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವು ಎರಡುವಿಧ -

೧. ಬೇರೆಯಲ್ಲಿರುವ 'ಅವರತ್ವ' ಮೊದಲಾದ ಧರ್ಮಗಳ ನಿಯಾಮಕತ್ವ.

೨. 'ಅವರಾದಿ ವಸ್ತುಗಳ ಅಭೇದ' ಎಂದು. 'ಯದಧೀನೋ ಗುಣೋ ಯಸ್ಯ ತದ್ಗುಣೀ ಸೋಭಿಧೀಯತೇ' ಎಂಬ ಪ್ರಮಾಣದಿಂದ ಇದು ಪ್ರಸಿದ್ಧವಾಗಿದೆ. ಪರಮಾತ್ಮನಲ್ಲಿ ಅವರತ್ವ ಮೊದಲಾದ ಧರ್ಮಗಳಿರುವುದರಿಂದ 'ಅವರ' ಮೊದಲಾದ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆಂದು ನಾವು ಹೇಳುತ್ತಿಲ್ಲ. ಹೊರತಾಗಿ ಬೇರೆಯಲ್ಲಿರುವ 'ಅವರತ್ವ' ಮೊದಲಾದ ಧರ್ಮಗಳಿಗೆ ನಿಯಾಮಕನಾಗಿರುವುದರಿಂದ 'ಅವರ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂಬುದು ನಮ್ಮ ಅಭಿಪ್ರಾಯ. 'ನಿರನಿಷ್ಟಃ ನಿರವದ್ಯಃ' ಮೊದಲಾದ ಶ್ರುತಿಗಳಿಂದ ವಿಷ್ಣುವಿನಲ್ಲಿ ಯಾವ ದೋಷಗಳ ಸಂಪರ್ಕವು ಇಲ್ಲವೆಂದು ಸಿದ್ಧವಾಗಿದೆ. ಮತ್ತು 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಿಂದ ಬೇರೆಯವರಲ್ಲಿರುವ ಅವರತ್ವಾದಿ ಧರ್ಮಗಳಿಗೆ ವಿಷ್ಣುವೇ ನಿಯಾಮಕನೆಂಬ ವಿಚಾರವು ಸಿದ್ಧವಾಗಿದೆ. ಆದ್ದರಿಂದ ಅವರತ್ವಧರ್ಮಪುರಸ್ಸರವಾಗಿ ಅವರಾದಿಶಬ್ದ ಪ್ರತಿಪಾದ್ಯತ್ವವನ್ನು ಹೇಳದೇ ಅವರತ್ವಾದಿ ಧರ್ಮಗಳ ನಿಯಾಮಕತ್ವವನ್ನೇ ಅವರಾದಿಶಬ್ದಗಳ ಪ್ರವೃತ್ತಿನಿಮಿತ್ತವೆಂದು ಒಪ್ಪಿ, ಅವರ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನೆಂದು ಹೇಳಬೇಕು. ಏಕೆಂದರೆ ನಿರನಿಷ್ಟಃ ನಿರವದ್ಯಃ' ಮತ್ತು 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬೆರಡು ಶ್ರುತಿಗಳು ನಿರವಕಾಶಗಳಾಗಿವೆ. ಇಷ್ಟು ನ್ಯಾಯವಿವರಣದಲ್ಲಿ ಹೇಳಿದ ವಿಚಾರ.

**भावदीपः** – द्विधा हीति हि शब्देन भाष्ये वक्ष्यमाणप्रसिद्धिर्दर्शिता । अस्त्ववरत्वादिबाधकात् सङ्कोच इति तत्राऽऽह – **बाधकेति** ।। तस्य समाहितत्वादिति भावः ।

'ದ್ವಿಧಾ ಹಿ' ಎಂಬಲ್ಲಿರುವ 'ಹಿ' ಶಬ್ದದಿಂದ ಭಾಷ್ಯದಲ್ಲಿ ಮುಂದೆ ವಿಚಾರವನ್ನು ಹೇಳುತ್ತಾರೆಂಬುದನ್ನು ಸೂಚನೆ ಮಾಡಿದ್ದಾರೆ. 'ಅವರತ್ವ' ಮೊದಲಾದ ಬಾಧಕಗಳಿರುವುದರಿಂದ ಅವರಾದಿ ಶಬ್ದಗಳಿಗೆ ಸಂಕೋಚ ಮಾಡಬಹುದಲ್ಲವೇ? ಎಂಬ ಪ್ರಶ್ನೆಗೆ 'ಬಾಧಕಾಭಾವಾತ್' ಎಂಬುದರಿಂದ ಉತ್ತರಿಸಿದ್ದಾರೆ. ಸಕಲ ಬಗೆಯ ಶಬ್ದಗಳು ಪರಮಾತ್ಮನಲ್ಲಿ ಇರುತ್ತವೆನ್ನಲು ಯಾವುದೇ ಬಾಧಕವಿಲ್ಲ ಎಂದಭಿಪ್ರಾಯ.

**भावदीपः** – ननु भाष्ये तदधीनत्वाच्चावरत्वादीनामिति वाच्येऽव्यक्तत्वादीनामित्याद्युक्तिः किमर्था । अव्यक्तशब्दप्रवृत्तिनिमित्तस्य सूक्ष्मं तु इत्यत्रेशे प्रतिपादनेन तस्मिन् शब्दे अमुख्यत्वशङ्कानुदयादित्यत आह – **अत्राव्यक्तत्वेति** ।। अत एव पूर्वनिमित्तस्योक्तत्वादेवेत्यर्थः ।

ಭಾಷ್ಯದಲ್ಲಿ 'ತದಧೀನತ್ವಾಚ್ಚಾವರತ್ವಾದೀನಾಮ್' ಎಂದು ಹೇಳಬೇಕಿತ್ತು. ಅವರತ್ವಾದಿಗಳೆಲ್ಲವೂ ಭಗವದಧೀನವಾದ್ದರಿಂದ ಆಯಾ ಶಬ್ದಗಳು ಅವನಲ್ಲಿ ಇರುತ್ತವೆಂದು ಹೇಳಿದಾಗ ಸ್ಪಷ್ಟವಾಗಿ ಶಾಬ್ದಬೋಧ ಬರುತ್ತದೆ. ಆದರೆ 'ತದಧೀನತ್ವಾಚ್ಚ ಅವರತ್ವಾದೀನಾಮ್' ಎಂದು ಹೇಳಿರುತ್ತಾರೆ. ಹೀಗೆ ಹೇಳಿದರೆ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಸೂಕ್ಷ್ಮತ್ವವು ಈಶ್ವರನಲ್ಲಿ ಇರುತ್ತದೆಂದು 'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ್ದಾರೆ. ಹೀಗಿರುವಾಗ ಅವ್ಯಕ್ತಶಬ್ದವು ಅಮುಖ್ಯವಾದ ಅರ್ಥವನ್ನೇ ಪ್ರತಿಪಾದನೆ ಮಾಡಲಿ ಎಂಬ ಶಂಕೆಯು ಹುಟ್ಟುವುದೇ ಇಲ್ಲ. ಈ ಪ್ರಶ್ನೆಯ ಪರಿಹಾರಕ್ಕಾಗಿ 'ಅತ್ರ ಅವ್ಯಕ್ತತ್ವಗ್ರಹಣೇನ' ಎಂಬ ಟೀಕಾವಾಕ್ಯವು ಹೊರಟಿದೆ. 'ಅತ ಏವ' ಎಂದರೆ ಹಿಂದೆ ಹೇಳಿದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಬರುವುದರಿಂದಲೇ ಎಂದರ್ಥ.

**भावदीपः** – प्राचीननिमित्तेनैव अव्यक्तादिशब्दस्येशे मुख्यत्वोपपत्तौ तदधीनत्वन्यायः किमर्थं तत्र सञ्चारित इत्यत आह – **प्रधानादेरिति** ।। एतच्च 'तुष्यतु दुर्जनः' इति न्यायेनोक्तम् । वस्तुतस्तु प्रवृत्तिनिमित्तस्य हरौ मुख्यत्वेनैव मुख्यत्वोपपत्तेरिति वक्ष्यमाणत्वेन तन्न्यायस्याव्यभिचारात् । पद्मत्वजातेरेव निमित्तत्वेन विवक्षिततया तस्याल्पपङ्कजेऽपि सत्वेन अमुख्यत्वानापत्तेः । अन्यथाऽग्रेतनवाक्यविरोधादिति ध्येयम् ।। **निरस्तेति** ।। अव्यक्तत्वग्रहणेनेत्यनुषङ्गः ।

ಹಿಂದೆ ಹೇಳಿದ ಪ್ರವೃತ್ತಿನಿಮಿತ್ತದಿಂದಲೇ ಅವ್ಯಕ್ತಶಬ್ದವು ಪರಮಾತ್ಮನಲ್ಲಿ ಮುಖ್ಯವಾಗಿ ಯುಕ್ತವಾಗುತ್ತಿರುವಾಗ ತದಧೀನತ್ವನ್ಯಾಯವನ್ನು ಏಕೆ ಹೇಳುತ್ತಿದ್ದೀರಿ ? ಎಂಬ ಪ್ರಶ್ನೆಗೆ 'ಪ್ರಧಾನಾದೇಃ' ಎಂಬ ಟೀಕೆಯು ಉತ್ತರಿಸಿದೆ. ವಾಸ್ತವಿಕವಾಗಿ 'ತುಷ್ಯತು ದುರ್ಜನಃ' ಎಂಬ ನ್ಯಾಯದಿಂದ ಹೀಗೆ ಹೇಳಿದ್ದಾರೆ. ವಿಚಾರ ಮಾಡಿದರೆ ಪ್ರವೃತ್ತಿನಿಮಿತ್ತವು ಮುಖ್ಯವೃತ್ತಿಯಿಂದಲೇ ಪರಮಾತ್ಮನಲ್ಲಿ ಯುಕ್ತವಾಗುತ್ತವೆಂದು ಹೇಳಲು ಬರುತ್ತದೆ. ಆದ್ದರಿಂದ ಎಲ್ಲಿಯೂ ಕೂಡ ಇದಕ್ಕೆ ವ್ಯಭಿಚಾರವಿಲ್ಲ. ಸ್ವಲ್ಪ ಕೆಸರಿನಿಂದ ಹುಟ್ಟಿದಾಗಲೂ ಕಮಲವನ್ನು 'ಪಂಕಜ' ಎಂದೇ ಕರೆಯುತ್ತಾರೆ. ಆದ್ದರಿಂದ ಪದ್ಮತ್ವಜಾತಿಯನ್ನು ಪ್ರವೃತ್ತಿನಿಮಿತ್ತವೆಂದು

ಎಲ್ಲರೂ ಒಪ್ಪಿದ್ದಾರೆ. ಹೀಗೊಪ್ಪದಿದ್ದರೆ ಮುಂದಿನ ವಾಕ್ಯದ ವಿರೋಧ ಬರುತ್ತದೆ. 'ನಿರಸ್ತಾ' ಎಂಬಲ್ಲಿ 'ಅವ್ಯಕ್ತತ್ವಗ್ರಹಣೇನ' ಎಂಬುದನ್ನು ಅನುಷಂಗ ಮಾಡಿಕೊಳ್ಳಬೇಕು.

**भावदीपः** – लौकिकं च दृष्टान्तं व्यनक्ति – **यथाचेति** ।। अभिधीयत इत्युक्ताभिधावृत्तिं साधयितुं नहि भृत्यस्य विजयिशब्दस्तावत् प्रयुज्यते ।।

ಲೌಕಿಕ ದೃಷ್ಟಾಂತವನ್ನು 'ಯಥಾಚ' ಎಂಬುಗರಿಂದ ಹೇಳಿದ್ದಾರೆ. 'ಅಭಿಧೀಯತೇ' ಎಂಬ ಸ್ಕಂಧಪುರಾಣದ ಮಾತಿನಿಂದ ಹೇಳಿದ ಅಭಿಧಾವೃತ್ತಿಯನ್ನು ಸಮರ್ಥನೆ ಮಾಡಲು ಭೃತ್ಯನಲ್ಲಿ 'ವಿಜಯಿ' ಶಬ್ದವನ್ನು ಯಾರೂ ಕೂಡ ಪ್ರಯೋಗ ಮಾಡುವುದಿಲ್ಲವಷ್ಟೇ ? ಎಂದು ಟೀಕೆಯಲ್ಲಿ ಹೇಳಿರುತ್ತಾರೆ.

**भावदीपः** – 'यावद्राज्ञ्यन्यगत्वेऽपि स्वातन्त्र्याभासमात्रतः' इत्यनुभाष्योक्तमत्र योजयितुं शङ्कामाह – **नचेति** ।। मृत्युशब्दादिषु प्रसिद्धेश्च प्रसिद्धत्वाच्च कर्तृव्युत्पत्तेरिति न्यायविवरणोक्तमाह – **यमादावित्यादिना** ।। स्वातन्त्र्येण निमित्तेन मुख्यत्वादित्यर्थः ।

'ಯಾವದ್ರಾಜ್ಞ್ಯನ್ಯಗತ್ವೇऽಪಿ ಸ್ವಾತಂತ್ರ್ಯಾಭಾಸಮಾತ್ರತಃ' ರಾಜನನ್ನು ಬಿಟ್ಟು ಬೇರೆಯವರಲ್ಲಿ ಸ್ವಾತಂತ್ರ್ಯಾಭಾಸದಿಂದಷ್ಟೇ 'ವಿಜಯಿ' ಮೊದಲಾದ ಶಬ್ದಗಳನ್ನು ಪ್ರಯೋಗಿಸುತ್ತಾರೆ ಎಂಬ ಅಣುಭಾಷ್ಯದ ಅಭಿಪ್ರಾಯವನ್ನು ಯೋಜನೆ ಮಾಡಲು 'ನಚ' ಇತ್ಯಾದಿ ವಾಕ್ಯದಿಂದ ಆಶಂಕೆ ಮಾಡುತ್ತಿದ್ದಾರೆ. 'ಮೃತ್ಯುಶಬ್ದಾದಿಷು ಪ್ರಸಿದ್ಧೇಶ್ಚ ಪ್ರಸಿದ್ಧತ್ವಾಚ್ಚ ಕರ್ತೃವ್ಯುತ್ಪತ್ತೇಃ' ಮೃತ್ಯು ಮೊದಲಾದ ಶಬ್ದಗಳು ಮಾರಕತ್ವ ಎಂಬ ಪ್ರವೃತ್ತಿನಿಮಿತ್ತದಿಂದ ಯಮಾದಿಗಳನ್ನೇ ಪ್ರತಿಪಾದನೆ ಮಾಡುತ್ತವೆ. ಈ ವಿಷಯವು ಬಹುಪ್ರಯೋಗದಿಂದ ಸಿದ್ಧವಾಗಿದೆ. ಮತ್ತು ವಿಷ್ಣುವಿಗೆ ಅವರಾದಿ ಶಬ್ದಪ್ರತಿಪಾದ್ಯತ್ವ ಮಾತ್ರವಲ್ಲ. ಹೊರತಾಗಿ 'ಸ ಬದ್ಧಃ, ಸ ದುಃಖೀ, ಸ ಸಂಬಂಧಯತಿ, ಸ ದುಃಖಯತಿ' ಶ್ರೀಹರಿಯು ಸಂಸಾರಿಗಳನ್ನು ಬಂಧನೆ ಮಾಡುವುದರಿಂದ ಬದ್ಧನೆಂದು, ದುಃಖವನ್ನು ನೀಡುವುದರಿಂದ 'ದುಃಖೀ' ಎಂದು ಕರೆಸಿಕೊಳ್ಳುತ್ತಾನೆ. ಇವೇ ಮೊದಲಾದ ಶ್ರುತಿಗಳಲ್ಲಿ ಬದ್ಧಾದಿ ಶಬ್ದಗಳಿಗೆ ವಿಷ್ಣುವಿನಲ್ಲಿ ಕರ್ತೃವ್ಯುತ್ಪತ್ತಿಯು ಪ್ರಸಿದ್ಧವಾಗಿದೆ ಎಂಬ ನ್ಯಾಯವಿವರಣದ ಅಭಿಪ್ರಾಯವನ್ನೇ 'ಯಮಾದೌ' ಇತ್ಯಾದಿ ವಾಕ್ಯದಿಂದ ಟೀಕೆಯಲ್ಲಿ ಹೇಳಿರುತ್ತಾರೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿರುವುದರಿಂದ ವಿಷ್ಣುವಿನಲ್ಲಿ ಶಬ್ದಗಳು ಮುಖ್ಯವಾಗಿವೆ ಎಂದು ತಿಳಿಯಬೇಕು.

**भावदीपः** – यद्यपि न्यायविवरणे तमेव मृत्युममृतमिति हरावेव मृत्युप्रभृतिशब्दस्य श्रुतौ प्रसिद्धिर्दर्शिता । तथाप्येतदुदाहरणान्तरमित्यदोषः । नियामकाभावादन्यथापि व्युत्पत्तिः स्यादित्यतो माण्डूकभाष्योक्तश्रुतिमाह – **तथाचेति** ।। एतेन प्रसिद्धेश्चेत्युक्तप्रसिद्धिरुपपादिता । एतच्चावरत्वाक्षेपकावधित्व-वाचिपञ्चमीभिन्नावरादिशब्दविषयम् ।।

ವಾಸ್ತವಿಕವಾಗಿ ನ್ಯಾಯವಿವರಣದಲ್ಲಿ 'ತಮೇವ ಮೃತ್ಯುಮಮೃತಮ್' ಎಂಬುದಾಗಿ ಶ್ರೀಹರಿಯಲ್ಲಿ ಮಾತ್ರ ಮೃತ್ಯು ಮೊದಲಾದ ಶಬ್ದಗಳನ್ನು ಹೇಳುವ ಮೂಲಕ ಶ್ರುತಿಪ್ರಸಿದ್ಧಿಯನ್ನು ತೋರಿಸಿರುತ್ತಾರೆ. ಆದರೆ ಇದು ಮತ್ತೊಂದು ಉದಾಹರಣೆ ಎಂದು ತಿಳಿಯಬೇಕು. ಇದಕ್ಕಿಂತ ವಿಭಿನ್ನವಾಗಿ ಮತ್ತೊಂದು ಬಗೆಯಲ್ಲಿ ಶಬ್ದದ ವ್ಯುತ್ಪತ್ತಿಯನ್ನು ಸಮರ್ಥಿಸಬಹುದೆಂಬ ಉದ್ದೇಶದಿಂದ ಮಾಂಡೂಕಭಾಷ್ಯದಲ್ಲಿ ಉದಾಹರಿಸಿದ ಶ್ರುತಿಯನ್ನು 'ತಥಾಚ' ಇತ್ಯಾದಿ ವಾಕ್ಯದಿಂದ ಉಲ್ಲೇಖಿಸಿದ್ದಾರೆ. ಇದರಿಂದ 'ಪ್ರಸಿದ್ಧೇಶ್ಚ' ಎಂಬ ಸೂತ್ರಾಂಶದಲ್ಲಿ ಹೇಳಿದ ಪ್ರಸಿದ್ಧಿಯನ್ನು ಸಮರ್ಥನೆ ಮಾಡಿದಂತಾಗುತ್ತದೆ. ಇದು ಅವರತ್ವವನ್ನು ಆಕ್ಷೇಪದ ಬಲದಿಂದ ಸಮರ್ಥಿಸುವ ಅವಧಿತ್ವವಾಚಿಯಾದ ಪಂಚಮೀ ವಿಭಕ್ತಿಯಿಂದ ತಿಳಿಯುವುದಕ್ಕಿಂತ ಭಿನ್ನವಾದ ಅವರಶಬ್ದಕ್ಕೆ ವಿಷಯವಾಗಿರುತ್ತದೆ. ಪಂಚಮೀ ವಿಭಕ್ತಿಯು ಅವಧಿತ್ವವನ್ನು ಹೇಳುತ್ತದೆ. ಇದರಿಂದ ಅವರತ್ವವು ಅರ್ಥಾತ್ ಸಿದ್ಧವಾಗುತ್ತದೆ. ಇಂತಹ ಅವರತ್ವವನ್ನು ಹಿಂದೆ ಪರಮಾತ್ಮನಲ್ಲಿ ಸಮರ್ಥನೆ ಮಾಡಿದರು. ಆದರೆ ಈಗ ಇದಕ್ಕಿಂತ ವಿಭಿನ್ನವಾದ 'ಅವರಯತಿ' ಎಂಬ ವ್ಯುತ್ಪತ್ತಿಯಿಂದಲೇ ಅವರ ಶಬ್ದವನ್ನು ಪರಮಾತ್ಮನಲ್ಲಿ ಸಮರ್ಥನೆ ಮಾಡಿರುತ್ತಾರೆ.

**भावदीपः – स एवेति ।। प्रधानादिविशिष्ट एवेत्यर्थः ।। न प्रधानादीति ।। प्रधानाद्येवेत्यर्थः । यद्वा मुख्यत्वादित्यादिमुख्यशब्दस्य परममुख्यार्थत्वे तु यथान्यासमेव योज्यम् ।। अन्यथा अन्यस्यापि वाच्यत्वाभ्युपगमादित्यादिपूर्वेण विरोधात् । एवमग्रेऽपि विष्णोरेवेत्यादौ ध्येयम् ।।**

'ಸ ಏವ' ಎಂದರೆ ಪ್ರಧಾನಾದಿಗಳಿಂದ ವಿಶಿಷ್ಟನಾದ ಪರಮಾತ್ಮನೇ ಎಂದರ್ಥ. 'ನ ಪ್ರಧಾನಾದಿ' ಎಂದರೆ ಕೇವಲ ಪ್ರಕೃತಿ ಮೊದಲಾದವುಗಳು ಮಾತ್ರ ಪ್ರತಿಪಾದ್ಯವಲ್ಲ ಎಂದರ್ಥ. ಅಥವಾ ಇಲ್ಲಿರುವ ಮುಖ್ಯಶಬ್ದಕ್ಕೂ ಕೂಡ ಪರಮಮುಖ್ಯಾರ್ಥವೆಂದೇ ಅರ್ಥೈಸಬೇಕು. ಇಲ್ಲದಿದ್ದರೆ ಹಿಂದೆ ಹೇಳಿದಂತೆ ಉಳಿದ ಪದಾರ್ಥಗಳಿಗೂ ಮುಖ್ಯವಾಚ್ಯತ್ವದ ವಿರೋಧ ಬರುತ್ತದೆ. ಇದರಂತೆ ಮುಂದೆಯೂ ಕೂಡ 'ವಿಷ್ಣೋರೇವ' ಇತ್ಯಾದಿ ವಾಕ್ಯಗಳಲ್ಲಿ ಮಹಾವಿಷ್ಣುವೇ ಅವ್ಯಕ್ತ ಮೊದಲಾದ ಶಬ್ದಗಳಿಂದ ಪರಮವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು.

## ಬ್ರಹ್ಮಮೀಮಾಂಸಾಶಾಸ್ತ್ರ

## ಶ್ರೀಹರಿ ಮಾತ್ರ ಮುಮುಕ್ಷುಗಳಿಂದ ಜ್ಞೇಯ. ಆದ್ದರಿಂದ ಸಕಲಶಬ್ದವಾಚ್ಯ

**सूत्रम् – ।। ज्ञेयत्वावचनाच्च ।। ४ ।।**

ಸೂತ್ರಾರ್ಥ - 'ತಮೇವೈಕಂ ಜಾನಥ' ಎಂಬ ಉಪನಿಷತ್ತು ಮುಮುಕ್ಷುಗಳಿಂದ ಬ್ರಹ್ಮನೇ ಜ್ಞೇಯನಾಗಿದ್ದಾನೆ. ಉಳಿದವುಗಳು ಜ್ಞೇಯವಲ್ಲವೆಂದು ಹೇಳುತ್ತಿದೆ. ಆದ್ದರಿಂದ ಅವ್ಯಕ್ತಾದಿ ಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

ಪರಿಪೂರ್ಣಚಂದ್ರಿಕಾ

## ಸೂತ್ರದೀಪಿಕಾ

**सूत्रदीपिका** – 'तमेवैकं जानथ' इति विष्णोरेव मोक्षार्थं **ज्ञेयत्ववचनात्।** अन्येषां तदवचनात् । प्रत्युत विमुञ्चथेति हेयत्वावचनात् । अत्रत्याव्यक्तादि-शब्दैर्विष्णुरेव वाच्य इत्यर्थः ॥४॥

ಅರ್ಥ -- 'ತಮೇವೈಕಂ ಜಾನಥ' ಎಂಬ ಶ್ರುತಿಯಲ್ಲಿ ಮೋಕ್ಷಕ್ಕಾಗಿ ವಿಷ್ಣುವನ್ನೇ ತಿಳಿಯಬೇಕೆಂದು ಹೇಳಲಾಗಿದೆ. ಉಳಿದವರನ್ನು ತಿಳಿಯಬೇಕೆಂದು ಹೇಳಿರುವುದಿಲ್ಲ. ಹೊರತಾಗಿ 'ವಿಮುಂಚಥ' ಎಂಬುದಾಗಿ ಮೋಕ್ಷಕ್ಕೋಸ್ಕರ ಉಳಿದವರ ಜ್ಞಾನವು ಅಗತ್ಯವಿಲ್ಲವೆಂದೇ ಹೇಳಲಾಗಿದೆ. ಆದ್ದರಿಂದ ಶ್ರುತಿಗಳಲ್ಲಿರುವ ಅವ್ಯಕ್ತಾದಿ ಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

## ಬ್ರಹ್ಮಸೂತ್ರಭಾಷ್ಯಮ್

**भाष्यम् – अन्यस्य न वाच्यत्वं युज्यते ॥४॥**

ಅನುವಾದ - ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥ ಮಹಾವಿಷ್ಣುವೇ ಹೊರತು, ಪ್ರಕೃತ್ಯಾದಿಗಳಲ್ಲ. (ಏಕೆಂದರೆ 'ತಮೇವೈಕಂ ಜಾನಥ ಆತ್ಮಾನಂ' ಇತ್ಯಾದಿ ಶ್ರುತಿಯು ಬ್ರಹ್ಮನೇ ಮುಮುಕ್ಷುಗಳಿಂದ ಜ್ಞೇಯನೆಂದು ಹೇಳುತ್ತಿದೆ. ಹೊರತು, ಪ್ರಕೃತ್ಯಾದಿಗಳನ್ನು ಜ್ಞೇಯವೆಂದು ಹೇಳುತ್ತಿಲ್ಲ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥ ಮಹಾವಿಷ್ಣುವೇ ಆಗಿದ್ದಾನೆ ಹೊರತು ಪ್ರಕೃತ್ಯಾದಿಗಳಲ್ಲ. ಶ್ರುತಿ ಹಾಗೂ ಸ್ಮೃತಿಗಳಲ್ಲಿರುವ ಪ್ರಯೋಗಗಳ ಪ್ರವೃತ್ತಿನಿಮಿತ್ತವು ಅತಿಶಯವಾಗಿ ಪರಮಾತ್ಮನಲ್ಲಿಯೇ ಇರುತ್ತದೆ. ಆದ್ದರಿಂದ ಅವ್ಯಕ್ತಾದಿ ಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆ. ಬಾಧಕವಿಲ್ಲದಿದ್ದಾಗ, ಮುಖ್ಯಾರ್ಥವನ್ನೇ ಸ್ವೀಕರಿಸಬೇಕು. ಆದ್ದರಿಂದ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಅವ್ಯಕ್ತಾದಿ ಶಬ್ದಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತ್ಯಾದಿಗಳಲ್ಲ. ಈ ವಿಷಯವನ್ನೇ ಮತ್ತೊಂದು ಯುಕ್ತಿಯಿಂದ ಉಪಪಾದನೆ ಮಾಡಲು ಸೂತ್ರವನ್ನು ಉಪನ್ಯಾಸ ಮಾಡಿ, ಚ ಶಬ್ದಕ್ಕೆ ಅನೇಕ ಹೇತು ಸಮುಚ್ಚಯಾರ್ಥತ್ವವನ್ನು ವಿವಕ್ಷಿಸಿ, ಸೂತ್ರದಲ್ಲಿ ಶೇಷ ಪೂರಣ ಮಾಡಿಕೊಳ್ಳಬೇಕಾದ ಪ್ರತಿಜ್ಞೆಯನ್ನು ಪೂರ್ಣ ಮಾಡುತ್ತಿದ್ದಾರೆ)-

ಪ್ರತಿಪದಾರ್ಥ --

ಅನ್ಯಸ್ಯ = ಪ್ರಧಾನಾದಿಗಳಿಗೆ, ವಾಚ್ಯತ್ವಂ = ಅವ್ಯಕ್ತ ಮೊದಲಾದ ಶಬ್ದವಾಚ್ಯತ್ವವು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಹೊರತಾಗಿ ಪರಮಾತ್ಮನೇ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ.

## ತತ್ವಪ್ರಕಾಶಿಕಾ

**तदेव युक्त्यन्तरेणोपपादयत् सूत्रमुपन्यस्य तच्छेषं पूरयति – ज्ञेयत्वेति ।।**

ಹಿಂದಿನ ಸೂತ್ರದಲ್ಲಿ ಹೇಳಿದ ವಿಷಯವನ್ನೇ ಮತ್ತೊಂದು ಯುಕ್ತಿಯಿಂದ ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ರಚಿಸಿ, ಸೂತ್ರದಲ್ಲಿ ಅವಶೇಷ ಭಾಗವನ್ನು ಪೂರಣೆ ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದಾರೆ 'ಜ್ಞೇಯತ್ವ' ಇತ್ಯಾದಿಯಾಗಿ.

**तत्वप्रकाशिका – विष्णोरेवाव्यक्तादिश्रुतिवाच्यत्वम् न प्रधानादेः ।**

ಶ್ರುತಿಯಲ್ಲಿರುವ ಅವ್ಯಕ್ತಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತಿಯು ಸರ್ವಥಾ ಪ್ರತಿಪಾದ್ಯವಾಗಿಲ್ಲ.

**तत्वप्रकाशिका – 'तमेवैकं जानथ आत्मानमन्या वाचो विमुञ्चथ अमृतस्यैष सेतुः' इति विष्णोरेव मोक्षार्थं ज्ञेयत्ववचनात् ।**

ಏಕೆಂದರೆ 'ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ' 'ಆ ಪರಮಾತ್ಮನನ್ನೇ ಮುಖ್ಯವಾಗಿ ತಿಳಿಯಿರಿ. ಉಳಿದ ವಸ್ತುಗಳನ್ನು ತಿಳಿಯುವುದು ವ್ಯರ್ಥ. ಏಕೆಂದರೆ ಆ ಪರಮಾತ್ಮನೇ ಎಲ್ಲರನ್ನು ಮೋಕ್ಷಕ್ಕೆ ಕರೆದೊಯ್ಯುವ ಸೇತುವೆಯಾಗಿದ್ದಾನೆ'. ಹೀಗೆ ಮೋಕ್ಷಕ್ಕೋಸ್ಕರ ಪರಮಾತ್ಮನನ್ನೇ ತಿಳಿಯಬೇಕೆಂದು ಶ್ರುತಿಯು ಘೋಷಣೆ ಮಾಡುತ್ತಿದೆ.

**तत्वप्रकाशिका – प्रधानादेस्तदभावात् । यज्ज्ञानेन मोक्षः तज्ज्ञापन एव वेदस्य प्रवृत्तत्वादिति भावः ।**

ಆದರೆ ಪ್ರಕೃತಿಯ ಜ್ಞಾನದಿಂದ ಇಂತಹ ಮೋಕ್ಷವಾಗುತ್ತದೆಂದು ಯಾವ ಶ್ರುತಿಯಲ್ಲಿಯೂ ಕೂಡ ಹೇಳಿರುವುದಿಲ್ಲ. ಯಾವ ವಿಷ್ಣುವಿನ ಜ್ಞಾನದಿಂದ ಮೋಕ್ಷವು ದೊರೆಯುತ್ತದೋ, ಅಂತಹ ವಿಷ್ಣುವನ್ನು ತಿಳಿಸಲು ವೇದವು ಪ್ರವೃತ್ತವಾಗಿದೆ. ಇದು ಭಾಷ್ಯದ ಅಭಿಪ್ರಾಯ.

**तत्वप्रकाशिका – तथा च श्रावयति**

'न तादृशी प्रीतिरीड्यस्य विष्णोर्गुणोत्कर्षज्ञातरि यादृशी स्यात् ।
तत्प्रीणनान्मोक्षमाप्नोति सर्वस्ततो वेदास्तत्पराः सर्व एव ॥'

इति ॥ ४ ॥

ಇದನ್ನೇ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

'ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।
ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ ॥'

ಸ್ತುತ್ಯನಾದ ಮಹಾವಿಷ್ಣುವಿಗೆ ತನ್ನ ಗುಣೋತ್ಕರ್ಷವನ್ನು ತಿಳಿದವರ ಮೇಲೆ ಎಷ್ಟು ಪ್ರೀತಿಯು ಹುಟ್ಟುತ್ತದೋ, ಅಷ್ಟು ಪ್ರೀತಿಯು ತಿಳಿಯದವರ ಮೇಲೆ ಹುಟ್ಟುವುದಿಲ್ಲ. ಈ ಮಹಾವಿಷ್ಣುವನ್ನು ಸಂತೋಷ ಪಡಿಸುವುದರಿಂದಲೇ ಎಲ್ಲರೂ ಕೂಡ ಮೋಕ್ಷವನ್ನು ಪಡೆಯುತ್ತಾರೆ. ಆದ್ದರಿಂದಲೇ ಸಕಲವೇದಗಳು ಮುಖ್ಯವಾಗಿ ಅವನನ್ನೇ ಪ್ರತಿಪಾದನೆ ಮಾಡುತ್ತದೆ.

## ಭಾವದೀಪ

आकाङ्क्षां पूरयन् भाष्यं व्याचष्टे – **विष्णोरेवेति** ॥

ಭಾಷ್ಯದಲ್ಲಿ ಬೇರೆಯವರಿಗೆ ಶ್ರುತಿಪ್ರತಿಪಾದ್ಯತ್ವವನ್ನು ನಿರಾಕರಿಸಿದ್ದಾರೆ. ಬೇರೆಯವರು ಶ್ರುತಿಪ್ರತಿಪಾದ್ಯರಲ್ಲವೆಂದಾದರೆ ಯಾರು ಶ್ರುತಿಪ್ರತಿಪಾದ್ಯರೆಂಬ ಆಕಾಂಕ್ಷೆ ಹುಟ್ಟುತ್ತದೆ. ಅದನ್ನು ಪರಿಹರಿಸುತ್ತಾ ಭಾಷ್ಯದ ಮಾತನ್ನು ವ್ಯಾಖ್ಯಾನಿಸಲು 'ವಿಷ್ಣೋರೇವ' ಎಂಬ ಟೀಕೆಯು ಹೊರಟಿದೆ.

**भावदीपः** – 'अन्यार्थं तु जैमिनिः' इत्यादौ अन्यस्यापि ज्ञेयत्वोक्तेः सौत्रहेतोरसिद्धिनिरासाय उपलक्षणं मत्वा सूत्रार्थं शेषोक्तिपूर्वमाह – **तमेवेति** ॥

'ಅನ್ಯಾರ್ಥಂ ತು ಜೈಮಿನಿಃ' ಮೊದಲಾದ ಸೂತ್ರಗಳಲ್ಲಿ ವಿಷ್ಣುವಿಗಿಂತ ಅತಿರಿಕ್ತವಾದ ಬೇರೆ ಪದಾರ್ಥಗಳೂ ಕೂಡ ತಿಳಿಯಲು ಯೋಗ್ಯವಾಗಿವೆ ಎಂದು ಸಮರ್ಥಿಸಲಾಗಿದೆ. ಆದರೆ 'ಜ್ಞೇಯತ್ವಾವಚನಾಚ್ಚ' ಎಂಬ ಈ ಸೂತ್ರದಲ್ಲಿ ಬೇರೆಯವರು ತಿಳಿಯಲು ಯೋಗ್ಯರಲ್ಲವೆಂದು ಹೇಳಲಾಗಿದೆ. ಇದು ಅಸಿದ್ಧವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಸೂತ್ರದ ಮಾತು ಉಪಲಕ್ಷಣವಾಗಿದೆ ಎಂದು ಹೇಳುವವರಾಗಿ ಯಾವ ಪದವನ್ನು ಸೂತ್ರದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕೋ ಅದನ್ನೂ ಕೂಡ ಉಲ್ಲೇಖಿಸಲು 'ತಮೇವೈಕಂ' ಎಂಬ ಟೀಕಾವಾಕ್ಯವು ಹೊರಟಿದೆ.

ಪ್ರತಿಪದಾರ್ಥ --

ಅನ್ಯಸ್ಯ = ಪ್ರಧಾನಾದಿಗಳಿಗೆ, ವಾಚ್ಯತ್ವಂ = ಅವ್ಯಕ್ತ ಮೊದಲಾದ ಶಬ್ದವಾಚ್ಯತ್ವವು, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಹೊರತಾಗಿ ಪರಮಾತ್ಮನೇ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ.

## ತತ್ವಪ್ರಕಾಶಿಕಾ

**तदेव युक्त्यन्तरेणोपपादयत् सूत्रमुपन्यस्य तच्छेषं पूरयति – ज्ञेयत्वेति ।।**

ಹಿಂದಿನ ಸೂತ್ರದಲ್ಲಿ ಹೇಳಿದ ವಿಷಯವನ್ನೇ ಮತ್ತೊಂದು ಯುಕ್ತಿಯಿಂದ ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ರಚಿಸಿ, ಸೂತ್ರದಲ್ಲಿ ಅವಶೇಷ ಭಾಗವನ್ನು ಪೂರಣೆ ಮಾಡಿಕೊಳ್ಳಬೇಕೆಂದು ಹೇಳುತ್ತಿದ್ದಾರೆ 'ಜ್ಞೇಯತ್ವ' ಇತ್ಯಾದಿಯಾಗಿ.

**तत्वप्रकाशिका – विष्णोरेवाव्यक्तादिश्रुतिवाच्यत्वम् न प्रधानादेः ।**

ಶ್ರುತಿಯಲ್ಲಿರುವ ಅವ್ಯಕ್ತಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತಿಯು ಸರ್ವಥಾ ಪ್ರತಿಪಾದ್ಯವಾಗಿಲ್ಲ.

**तत्वप्रकाशिका – 'तमेवैकं जानथ आत्मानमन्या वाचो विमुञ्चथ अमृतस्यैष सेतुः' इति विष्णोरेव मोक्षार्थं ज्ञेयत्ववचनात् ।**

ಏಕೆಂದರೆ 'ತಮೇವೈಕಂ ಜಾನಥ ಆತ್ಮಾನಮ್ ಅನ್ಯಾ ವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ' 'ಆ ಪರಮಾತ್ಮನನ್ನೇ ಮುಖ್ಯವಾಗಿ ತಿಳಿಯಿರಿ. ಉಳಿದ ವಸ್ತುಗಳನ್ನು ತಿಳಿಯುವುದು ವ್ಯರ್ಥ. ಏಕೆಂದರೆ ಆ ಪರಮಾತ್ಮನೇ ಎಲ್ಲರನ್ನು ಮೋಕ್ಷಕ್ಕೆ ಕರೆದೊಯ್ಯುವ ಸೇತುವೆಯಾಗಿದ್ದಾನೆ'. ಹೀಗೆ ಮೋಕ್ಷಕ್ಕೋಸ್ಕರ ಪರಮಾತ್ಮನನ್ನೇ ತಿಳಿಯಬೇಕೆಂದು ಶ್ರುತಿಯು ಘೋಷಣೆ ಮಾಡುತ್ತಿದೆ.

**तत्वप्रकाशिका – प्रधानादेस्तदभावात् । यज्ज्ञानेन मोक्षः तज्ज्ञापन एव वेदस्य प्रवृत्तत्वादिति भावः ।**

ಆದರೆ ಪ್ರಕೃತಿಯ ಜ್ಞಾನದಿಂದ ಇಂತಹ ಮೋಕ್ಷವಾಗುತ್ತದೆಂದು ಯಾವ ಶ್ರುತಿಯಲ್ಲಿಯೂ ಕೂಡ ಹೇಳಿರುವುದಿಲ್ಲ. ಯಾವ ವಿಷ್ಣುವಿನ ಜ್ಞಾನದಿಂದ ಮೋಕ್ಷವು ದೊರೆಯುತ್ತದೋ, ಅಂತಹ ವಿಷ್ಣುವನ್ನು ತಿಳಿಸಲು ವೇದವು ಪ್ರವೃತ್ತವಾಗಿದೆ. ಇದು ಭಾಷ್ಯದ ಅಭಿಪ್ರಾಯ.

**तत्वप्रकाशिका – तथा च श्रावयति**

'न तादृशी प्रीतिरीड्यस्य विष्णोर्गुणोत्कर्षज्ञातरि यादृशी स्यात् ।
तत्प्रीणनान्मोक्षमाप्नोति सर्वस्ततो वेदास्तत्पराः सर्व एव ।।'

इति ।। ४ ।।

ಇದನ್ನೇ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ.

'ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರಿ ಯಾದೃಶೀ ಸ್ಯಾತ್ ।
ತತ್ ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾಃ ಸರ್ವ ಏವ ।।'

ಸ್ತುತ್ಯನಾದ ಮಹಾವಿಷ್ಣುವಿಗೆ ತನ್ನ ಗುಣೋತ್ಕರ್ಷವನ್ನು ತಿಳಿದವರ ಮೇಲೆ ಎಷ್ಟು ಪ್ರೀತಿಯು ಹುಟ್ಟುತ್ತದೋ, ಅಷ್ಟು ಪ್ರೀತಿಯು ತಿಳಿಯದವರ ಮೇಲೆ ಹುಟ್ಟುವುದಿಲ್ಲ. ಈ ಮಹಾವಿಷ್ಣುವನ್ನು ಸಂತೋಷ ಪಡಿಸುವುದರಿಂದಲೇ ಎಲ್ಲರೂ ಕೂಡ ಮೋಕ್ಷವನ್ನು ಪಡೆಯುತ್ತಾರೆ. ಆದ್ದರಿಂದಲೇ ಸಕಲವೇದಗಳು ಮುಖ್ಯವಾಗಿ ಅವನನ್ನೇ ಪ್ರತಿಪಾದನೆ ಮಾಡುತ್ತದೆ.

## ಭಾವದೀಪ

आकाङ्क्षां पूरयन् भाष्यं व्याचष्टे – **विष्णोरेवेति** ।।

ಭಾಷ್ಯದಲ್ಲಿ ಬೇರೆಯವರಿಗೆ ಶ್ರುತಿಪ್ರತಿಪಾದ್ಯತ್ವವನ್ನು ನಿರಾಕರಿಸಿದ್ದಾರೆ. ಬೇರೆಯವರು ಶ್ರುತಿಪ್ರತಿಪಾದ್ಯರಲ್ಲವೆಂದಾದರೆ ಯಾರು ಶ್ರುತಿಪ್ರತಿಪಾದ್ಯರೆಂಬ ಆಕಾಂಕ್ಷೆ ಹುಟ್ಟುತ್ತದೆ. ಅದನ್ನು ಪರಿಹರಿಸುತ್ತಾ ಭಾಷ್ಯದ ಮಾತನ್ನು ವ್ಯಾಖ್ಯಾನಿಸಲು 'ವಿಷ್ಣೋರೇವ' ಎಂಬ ಟೀಕೆಯು ಹೊರಟಿದೆ.

**भावदीपः** – 'अन्यार्थं तु जैमिनिः' इत्यादौ अन्यस्यापि ज्ञेयत्वोक्तेः सौत्रहेतोरसिद्धिनिरासाय उपलक्षणं मत्वा सूत्रार्थं शेषोक्तिपूर्वमाह – **तमेवेति** ।।

'ಅನ್ಯಾರ್ಥಂ ತು ಜೈಮಿನಿಃ' ಮೊದಲಾದ ಸೂತ್ರಗಳಲ್ಲಿ ವಿಷ್ಣುವಿಗಿಂತ ಅತಿರಿಕ್ತವಾದ ಬೇರೆ ಪದಾರ್ಥಗಳೂ ಕೂಡ ತಿಳಿಯಲು ಯೋಗ್ಯವಾಗಿವೆ ಎಂದು ಸಮರ್ಥಿಸಲಾಗಿದೆ. ಆದರೆ 'ಜ್ಞೇಯತ್ವಾವಚನಾಚ್ಚ' ಎಂಬ ಈ ಸೂತ್ರದಲ್ಲಿ ಬೇರೆಯವರು ತಿಳಿಯಲು ಯೋಗ್ಯರಲ್ಲವೆಂದು ಹೇಳಲಾಗಿದೆ. ಇದು ಅಸಿದ್ಧವಾಗುತ್ತದಲ್ಲವೆ? ಎಂಬ ಪ್ರಶ್ನೆಗೆ ಸೂತ್ರದ ಮಾತು ಉಪಲಕ್ಷಣವಾಗಿದೆ ಎಂದು ಹೇಳುವವರಾಗಿ ಯಾವ ಪದವನ್ನು ಸೂತ್ರದಲ್ಲಿ ಶೇಷಪೂರಣ ಮಾಡಿಕೊಳ್ಳಬೇಕೋ ಅದನ್ನೂ ಕೂಡ ಉಲ್ಲೇಖಿಸಲು 'ತಮೇವೈಕಂ' ಎಂಬ ಟೀಕಾವಾಕ್ಯವು ಹೊರಟಿದೆ.

**भावदीपः** – इयं च द्युभ्वादिनये विष्णुपरत्वेन निर्णीता । अस्त्वेवं तावताऽन्यस्यावाच्यत्वं कुत इत्यतो भावमाह – **यज्ज्ञानेनेति** ।।

ದ್ಯುಭ್ವಾದ್ಯಧಿಕರಣದಲ್ಲಿ 'ತಮೇವೈಕಂ' ಎಂಬ ಶ್ರುತಿಯು ವಿಷ್ಣುಪರವಾಗಿದೆಯೆಂದು ನಿರ್ಣಯಿಸಲಾಗಿದೆ. ಶ್ರುತಿಯು ಮೋಕ್ಷಕ್ಕೋಸ್ಕರ ವಿಷ್ಣುವನ್ನು ತಿಳಿಯಬೇಕೆನ್ನುತ್ತಿದೆ. ಇಷ್ಟು ಹೇಳಿದ ಮಾತ್ರಕ್ಕೆ ಬೇರೆ ಪದಾರ್ಥಗಳು ಏಕೆ ಶಬ್ದಪ್ರತಿಪಾದ್ಯವಾಗಬಾರದು ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಇದರ ಪರಿಹಾರಕ್ಕಾಗಿ ಶ್ರುತಿಯ ಅಭಿಪ್ರಾಯವನ್ನು 'ಯಜ್ ಜ್ಞಾನೇನ' ಇತ್ಯಾದಿ ಟೀಕೆಯಿಂದ ಸ್ಪಷ್ಟಪಡಿಸುತ್ತಿದ್ದಾರೆ.

**भावदीपः** – कुत इत्यत आह – **तथा चेति** ।। श्रावयति श्रुतिर्वक्ति । इयं तत्त्वनिर्णयादावुदाहृता । अनया श्रुत्या सर्वस्य ब्रह्मपरत्वे सिद्धे प्रतिवाक्यं च तत्परत्वस्यादावन्ते च मध्ये च विष्णुः सर्वत्र गीयत इत्यादिवचनसिद्धत्वात् स्वतः प्राप्तमुख्यवृत्तित्यागे च हेत्वभावाद्विष्णोरेव अव्यक्तादिश्रुतिवाच्यत्वमिति भावः ।।४।।

ಮೋಕ್ಷಕ್ಕೆ ಕಾರಣವಾದ ತತ್ವಜ್ಞಾನಕ್ಕೆ ವಿಷಯನಾದವನು ಮಹಾವಿಷ್ಣುವೇ ಆಗಿದ್ದಾನೆಂಬ ವಿಷಯದಲ್ಲಿ ಏನು ಪ್ರಮಾಣ? ಎಂಬುದಕ್ಕೆ ಉತ್ತರಿಸಲು 'ತಥಾಚ' ಎಂಬ ವಾಕ್ಯವು ಹೊರಟಿದೆ.

ಶ್ರಾವಯತಿ = ಶ್ರುತಿ ಹೇಳುತ್ತಿದೆ. 'ನ ತಾದೃಶಿ' ಎಂಬ ಪ್ರಮಾಣವಾಕ್ಯವು ತತ್ವನಿರ್ಣಯ ಮೊದಲಾದ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ. ಈ ಶ್ರುತಿವಾಕ್ಯದಿಂದ ಸಕಲ ವಾಕ್ಯಗಳೂ ಬ್ರಹ್ಮಪರವಾಗಿವೆಯೆಂದು ಸಿದ್ಧವಾಗುತ್ತದೆ. ಹೀಗೆ ಶ್ರುತಿಯು ಬ್ರಹ್ಮಪರವೆಂದು ಸಿದ್ಧವಾದ ಮೇಲೆ 'ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಎಂಬ ಪ್ರಮಾಣವಚನದಂತೆ ಪ್ರತಿಯೊಂದು ವಾಕ್ಯಗಳೂ ಕೂಡ ವಿಷ್ಣುಪರವೆಂದು ಸಿದ್ಧವಾಗುತ್ತವೆ. ಆದ್ದರಿಂದ ಸ್ವಾಭಾವಿಕವಾಗಿ ಸಿದ್ಧವಾದ ಮುಖ್ಯವೃತ್ತಿಯನ್ನು ಬಿಡಲು ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ ಮಹಾವಿಷ್ಣುವೇ ಅವ್ಯಕ್ತಶ್ರುತಿ ಮೊದಲಾದವುಗಳಿಂದ ಪ್ರತಿಪಾದ್ಯ-ನಾಗಿದ್ದಾನೆಂದು ನಿರ್ಣಯವಾಯಿತು.

## ಬ್ರಹ್ಮಮೀಮಾಂಸಾಶಾಸ್ತ್ರ

## 'ಅನಾದ್ಯಂತಂ' ಎಂಬ ಶ್ರುತಿಯಿಂದ ಶ್ರೀಹರಿಯೇ ಪ್ರತಿಪಾದ್ಯ

**सूत्रम् – ।। वदतीति चेन्न प्राज्ञो हि ।। ५ ।।**

ಸೂತ್ರಾರ್ಥ - 'ಅನಾದ್ಯಂತಮ್' ಎಂಬ ಶ್ರುತಿಯು ಪ್ರಕೃತಿಗೂ ಕೂಡ ಮುಮುಕ್ಷು ಜ್ಞೇಯತ್ವವನ್ನು ಹೇಳುತ್ತಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಆ

ಶ್ರುತಿಯಲ್ಲಿಯೂ ಕೂಡ ಸರ್ವಜ್ಞನಾದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಮುಮುಕ್ಷು ಜ್ಞೇಯತ್ವವನ್ನು ಅವನಲ್ಲಿಯೇ ಹೇಳುತ್ತಿದೆ.

## ಸೂತ್ರದೀಪಿಕಾ

**सूत्रदीपिका** – ननु अनाद्यनन्तमिति काठकवाक्यम् । **वदति** प्रधानं प्रतिपाद्यते । इति तस्यापि ज्ञेयत्वमस्तीति चेन्न । कुतः? **हि** यतः । **प्राज्ञः** प्राज्ञशब्दितः परमात्मैव तत्र प्रतिपाद्यते न प्रधानम् । अतो न तस्य ज्ञेयत्वं मन्तव्यमित्यर्थः ।।५।।

ಅರ್ಥ -- ವದತಿ ಇತಿ ಚೇತ್ = 'ಅನಾದ್ಯನಂತಮ್' ಎಂಬ ಕಾಠಕೋಪನಿಷತ್ತು ಪ್ರಧಾನಕ್ಕೂ ಕೂಡ ಮುಮುಕ್ಷುಜ್ಞೇಯತ್ವವನ್ನು ಹೇಳುತ್ತಿದೆಯಲ್ಲವೇ? ನ = ಹೀಗೆ ಪ್ರಶ್ನಿಸಬಾರದು. ಹಿ = ಏಕೆಂದರೆ, ಪ್ರಾಜ್ಞಃ = ಪ್ರಾಜ್ಞಶಬ್ದದಿಂದ ಪ್ರತಿಪಾದ್ಯನಾದ ಪರಮಾತ್ಮನೇ ಆ ಶ್ರುತಿಯಲ್ಲಿಯೂ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತಿಯಲ್ಲ. ಆದ್ದರಿಂದ ಮುಮುಕ್ಷುಜ್ಞೇಯತ್ವವನ್ನು ಪ್ರಕೃತಿಯಲ್ಲಿ ತಿಳಿಯಬಾರದು.

## ಬ್ರಹ್ಮಸೂತ್ರಭಾಷ್ಯಮ್

**भाष्यम् – 'महतः परं ध्रुवं निचाय्य तं मृत्युमुखात् प्रमुच्यते' (क.उ. १-३-१५) इति ज्ञेयत्वं वदतीति चेत् ।**

ಅನುವಾದ - 'ಮಹತಃ ಪರಂ' ಇತ್ಯಾದಿ ಶ್ರುತಿಯು ಪ್ರಕೃತಿಗೂ ಕೂಡ ಜ್ಞೇಯತ್ವವನ್ನು ಎಂದು ಹೇಳುತ್ತಿದೆಯಲ್ಲವೇ?

ಪ್ರತಿಪದಾರ್ಥ -- ಹಿಂದೆ ಹೇಳಿದ ಪ್ರಮೇಯವನ್ನು ಆಕ್ಷೇಪ ಮಾಡಿ, ಸಮಾಧಾನವನ್ನು ನೀಡುವ ಸೂತ್ರವನ್ನೇ ಉಪನ್ಯಾಸ ಮಾಡಿ, ಆಕ್ಷೇಪಾಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ವದತಿ ಇತಿ ಚೇತ್, 'ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಮಹತಃ = ಮಹತ್ತತ್ವಕ್ಕಿಂತ, ಪರಂ = ಉತ್ತಮವಾದ, ಧ್ರುವಂ = ನಿತ್ಯವಾದ, ತಂ = ಪ್ರಧಾನವನ್ನು, ನಿಚಾಯ್ಯ = ತಿಳಿದುಕೊಂಡು, ಮೃತ್ಯುಮುಖಾತ್ = ಸಂಸಾರದಿಂದ, ಪ್ರಮುಚ್ಯತೇ = ಮುಕ್ತನಾಗುತ್ತಾನೆ. ಇತಿ = ಹೀಗೆ ಕಾಠಕೋಪನಿಷತ್ತಿನಲ್ಲಿ, ಜ್ಞೇಯತ್ವಂ = ಪ್ರಧಾನಾದಿಗಳಿಗೂ ಮೋಕ್ಷಕ್ಕೋಸ್ಕರ ಜ್ಞೇಯತ್ವವನ್ನು ಹೇಳಲಾಗಿದೆ. ಇತಿ ಚೇತ್ = ಇಷ್ಟು ಆಕ್ಷೇಪ.

**भाष्यम् – न प्राज्ञः परमात्मा हि तत्रोच्यते । 'अणोरणीयान् महतो महीयान्' (क.उ. १-२-२०) इति तस्यैव हि महतो महत्वम् । सर्वस्मात् परस्य महतोऽपि परत्वं युज्यते ॥५॥**

ಅನುವಾದ - ಇದು ಸರಿಯಲ್ಲ. ಏಕೆಂದರೆ 'ಮಹತಃ ಪರಂ' ಎಂಬ ವಾಕ್ಯದಲ್ಲಿಯೂ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ. 'ಅಣೋರಣೀಯಾನ್ ಮಹತೋ ಮಹೀಯಾನ್ ' ಎಂಬ ಹಿಂದಿನ ಪ್ರಕರಣದಲ್ಲಿ ಮಹತ್ತತ್ವಕ್ಕಿಂತಲೂ ಉತ್ತಮತ್ವವನ್ನು ಹೇಳಿದ್ದು ಮಹಾವಿಷ್ಣುವಿನಲ್ಲಿ ಕೂಡುತ್ತದೆ. ಏಕೆಂದರೆ ಎಲ್ಲಾ ಪದಾರ್ಥಗಳಿಗಿಂತಲೂ ಯಾರು ಉತ್ತಮನೋ, ಅವನೇ ಮಹತ್ತತ್ವಕ್ಕಿಂತಲೂ ಉತ್ತಮನಾಗುತ್ತಾನೆಂದು ಹೇಳಬೇಕಷ್ಟೇ.

ಪ್ರತಿಪದಾರ್ಥ -- ಸೂತ್ರದ ಪರಿಹಾರ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ನ = ಮೇಲೆ ಉಲ್ಲೇಖಿಸಿದ ವಾಕ್ಯದ ಬಲದಿಂದ ಪ್ರಕೃತಿಗೆ ಮೋಕ್ಷಕ್ಕೋಸ್ಕರ ಜ್ಞೇಯತ್ವವನ್ನು ತಿಳಿಯಬಾರದು. ಹಿ = ಏಕೆಂದರೆ, ತತ್ರ = ಮೇಲೆ ಉದಾಹರಿಸಿದ ವಾಕ್ಯದಲ್ಲಿ, ಪ್ರಾಜ್ಞಃ = ಪ್ರಾಜ್ಞನಾದ, ಪರಮಾತ್ಮಾ = ಪರಮಾತ್ಮನು, ಉಚ್ಯತೇ = ಪ್ರತಿಪಾದ್ಯನಾಗಿದ್ದಾನೆ ಹೊರತು ಪ್ರಧಾನವಲ್ಲ.

ಮಹತಃಪರತ್ವಲಿಂಗದಿಂದ ಪ್ರಕೃತಿಯು ಪ್ರತಿಪಾದ್ಯವಾಗಬೇಕಲ್ಲವೇ ? ಎಂದು ಪ್ರಶ್ನಿಸಬಾರದು. ಹಿ = ಯಾವ ಕಾರಣದಿಂದ, ಅಣೋರಣೀಯಾನ್ = ಅಣುಪದಾರ್ಥಗಳಿಗೂ ಅಣುತರನು, ಮಹತೋ ಮಹೀಯಾನ್ = ಮಹತ್‌ಪದಾರ್ಥಗಳಿಗೆ ಮಹತ್ ಪರಿಮಾಣವುಳ್ಳವನು. ಇತಿ = ಹೀಗೆ, ತಸ್ಯೈವ = ಪರಮಾತ್ಮನಲ್ಲಿ, ಮಹತೋ ಮಹತ್ವಮ್ = ಮಹತ್ ಪದಾರ್ಥಗಳಿಂತಲೂ ಮಹತ್ವವನ್ನು ಹೇಳಲಾಗಿದೆ. ಸರ್ವಸ್ಮಾತ್ = ಚತುರ್ಮುಖಾದಿ ಜೀವರಾಶಿಗಳಿಗಿಂತಲೂ ಮಹತ್ತತ್ವ ಪ್ರಕೃತಿತತ್ವಗಳಿಗಿಂತಲೂ, ಪರಸ್ಯ = ಶ್ರೇಷ್ಠನಾದ ಪರಮಾತ್ಮನಿಗೆ, ಮಹತೋಽಪಿ = ಮಹತ್ತತ್ವಾದಿಗಳಿಗಿಂತಲೂ, ಪರತ್ವಂ = ಎಲ್ಲ ಬಗೆಯ ಉತ್ತಮತ್ವವು, ಯುಜ್ಯತೇ = ಯುಕ್ತವಾಗುತ್ತದಷ್ಟೇ.

## ತತ್ವಪ್ರಕಾಶಿಕಾ

**उक्तमाक्षिप्य समादधत् सूत्रमुपन्यस्याऽऽक्षेपांशं तावद् व्याचष्टे – वदतीति ॥**

ಹಿಂದಿನ ಸೂತ್ರದಲ್ಲಿ ಸಮರ್ಥನೆ ಮಾಡಿದ ವಿಷಯವನ್ನು ಆಕ್ಷೇಪ ಮಾಡಿ ಸಮಾಧಾನವನ್ನು ಹೇಳುವಂತಹ ಸೂತ್ರವನ್ನು ಪಠಿಸುತ್ತಿದ್ದಾರೆ. ಸೂತ್ರದಲ್ಲಿರುವ ಆಕ್ಷೇಪಭಾಗವನ್ನಷ್ಟೇ ಮೊದಲು ವ್ಯಾಖ್ಯಾನ ಮಾಡುತ್ತಿದ್ದಾರೆ 'ವದತಿ' ಇತ್ಯಾದಿಯಾಗಿ.

## ಪರಿಪೂರ್ಣಚಂದ್ರಿಕಾ

**तत्वप्रकाशिका – न प्रधानस्य मोक्षार्थं ज्ञेयत्वे वचनाभावः । 'अनाद्यनन्तं महतः परं ध्रुवं निचाय्य तं मृत्युमुखात् प्रमुच्यते' इति वचनस्य सद्भावात् ।**

ಮೋಕ್ಷಕ್ಕೋಸ್ಕರ ಪ್ರಕೃತಿಯನ್ನು ತಿಳಿಯಬೇಕು ಎಂಬ ಶ್ರುತಿವಾಕ್ಯವು ಎಲ್ಲಿಯೂ ಇರುವುದಿಲ್ಲವೆಂದು ಹೇಳಿದ್ದು ತಪ್ಪು. 'ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' 'ಆದಿ-ಅಂತ್ಯಗಳಿಲ್ಲದ ಮಹತ್ತತ್ವಕ್ಕಿಂತಲೂ ಶ್ರೇಷ್ಠವಾದ ನಿರ್ವಿಕಾರವಾದ ಪ್ರಕೃತಿ ಎಂಬ ತತ್ವವನ್ನು ಯಾರು ತಿಳಿಯುತ್ತಾರೋ ಅವರು ಸಂಸಾರದಿಂದ ಮುಕ್ತರಾಗುತ್ತಾರೆ' ಎಂಬ ಶ್ರುತಿಯು ಪ್ರಕೃತಿಯ ಜ್ಞಾನವು ಮೋಕ್ಷಕ್ಕೆ ಕಾರಣವೆಂದು ಹೇಳುತ್ತಿದೆ.

**तत्वप्रकाशिका – नच वाच्यमत्र प्रधानं प्रतिपाद्यं कुतः? इति । महत्परत्वलिङ्गादेव । 'महान्तं च समावृत्या प्रधानं समवस्थितम्' इत्यादेः ।**

ಈ ಶ್ರುತಿವಾಕ್ಯವು ಪ್ರಕೃತಿಯನ್ನೇ ಪ್ರತಿಪಾದನೆ ಮಾಡುತ್ತಿದೆಯೆಂಬುದು ಹೇಗೆ ಸಿದ್ಧವಾಗುತ್ತದೆ. ಎಂದು ಸಂಶಯಪಡಬಾರದು. ಏಕೆಂದರೆ 'ಮಹತಃ ಪರಂ' ಎಂಬುದಾಗಿ 'ಮಹತ್‌ಪರತ್ವ' ಎಂಬ ಪ್ರಕೃತಿಯ ಅಸಾಧಾರಣ ಧರ್ಮವು ಇಲ್ಲಿ ಶ್ರುತವಾಗಿದೆ. ಮತ್ತು 'ಮಹಾಂತಂ ಚ ಸಮಾವೃತ್ಯಾ ಪ್ರಧಾನಂ ಸಮವಸ್ಥಿತಮ್' ಮಹತ್ತತ್ವವನ್ನು ವ್ಯಾಪಿಸಿ ಪ್ರಕೃತಿಯು ಇರುತ್ತದೆ ಎಂಬ ವಚನವೂ ಕೂಡ ಇದೇ ವಿಷಯದಲ್ಲಿ ಆಧಾರವಾಗಿದೆ.

**तत्वप्रकाशिका – पूर्वोक्तरीत्या तदपि विष्णुपरतया नेतुं शक्यम्, इति चेत् । सत्यम् । अन्यस्यापि वाच्यत्वाऽभ्युपगमात् । प्रधानस्यापि मोक्षार्थं ज्ञेयत्ववचनात् तस्यापि मुख्यतो वेदवेद्यतेति भावः ।**

'ತದಧೀನತ್ವಾದರ್ಥವತ್' ಎಂಬ ಹಿಂದಿನ ಸೂತ್ರದಲ್ಲಿ ಹೇಳಿದ ಪ್ರಕಾರ ಮಹತ್‌ಪರತ್ವವು ವಿಷ್ಣುವಿನ ಲಿಂಗವೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಹುದು. ಆದರೆ ಮಹತ್‌ಪರತ್ವವು ವಿಷ್ಣುವಿನ ಲಿಂಗವಾಗಿದ್ದರೂ ಕೂಡ ಪ್ರಕೃತ್ಯಾದಿ ತತ್ವಗಳಲ್ಲಿಯೂ ಪ್ರಧಾನ ಮೊದಲಾದ ಶಬ್ದಗಳ ವಾಚ್ಯತ್ವವನ್ನು ನೀವೂ ಕೂಡ ಅಂಗೀಕರಿಸಿದ್ದೀರಿ. ಆದ್ದರಿಂದ ಪ್ರಧಾನವೂ ಕೂಡ ಮೋಕ್ಷಕ್ಕೋಸ್ಕರ ಜ್ಞೇಯವೇ ಆಗಿರುತ್ತದೆ. ಮುಖ್ಯತಃ ವಿಷ್ಣು ಹೇಗೆ ವೇದವೇದ್ಯನಾಗಿದ್ದಾನೋ ಅದರಂತೆ ಪ್ರಕೃತಿಯೂ ವೇದದಿಂದ ಮುಖ್ಯವಾಗಿ ವೇದ್ಯವೇ ಆಗಿದೆಯೆಂದು ಹೇಳಬೇಕು. ಇದು ಸೂತ್ರದಲ್ಲಿರುವ 'ವದತೀತಿಚೇತ್' ಎಂಬ ಆಕ್ಷೇಪಭಾಗದ ಅಭಿಪ್ರಾಯವಾಗಿದೆ.

**तत्वप्रकाशिका – परिहारांशं व्याचष्टे – नेति ।। नैतद्वाक्यबलेन प्रधानस्य मोक्षार्थं ज्ञेयत्वं मन्तव्यम् । यतस्तत्र वाक्ये परमात्मैवोच्यते न प्रदानमित्यर्थः ।**

'ನ ಪ್ರಾಜ್ಞೋಹಿ' ಎಂಬ ಸೂತ್ರದಲ್ಲಿರುವ ಪರಿಹಾರ ಭಾಗವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ನ' ಇತ್ಯಾದಿಯಾಗಿ. 'ಮಹತಃ ಪರಂ' ಎಂಬ ವಾಕ್ಯದ ಆಧಾರದಿಂದ ಪ್ರಧಾನವು ಮೋಕ್ಷಕ್ಕೋಸ್ಕರ ಜ್ಞೇಯವಾಗಿದೆಯೆಂದು ಸರ್ವಥಾ ತಿಳಿಯಬಾರದು. ಏಕೆಂದರೆ ಈ ವಾಕ್ಯದಲ್ಲಿಯೂ ಕೂಡ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತಿಯು ಅಲ್ಲ.

**तत्वप्रकाशिका – महतः परत्वलिङ्गात् प्रधानमत्रोच्यते, इति । तत्राह – अणोरिति ।।**

'ಮಹತಃ ಪರತ್ವ' ಎಂಬ ಲಿಂಗದಿಂದ ಪ್ರಕೃತಿಯು ಪ್ರತಿಪಾದ್ಯವಾಗಿದೆಯಲ್ಲವೇ? ಎಂಬ ಆಕ್ಷೇಪವನ್ನು ಪರಿಹರಿಸಲು 'ಅಣೋರಣೀಯಾನ್' ಎಂಬ ಶ್ರುತಿಯನ್ನು ಉಲ್ಲೇಖಿಸುತ್ತಿದ್ದಾರೆ.

**तत्वप्रकाशिका – ननु 'अणोरणीयान्' इति श्रुतौ सर्वस्मात् स्थूलात् स्थूलत्वमेवोच्यते, न महत्तत्वपरत्वम्, स्थूलस्यैवाणुप्रतियोगित्वात् । अतो न महत्परत्वलिङ्गं विष्णौ सावकाशम्, इत्यत आह – सर्वस्मादिति ।।**

ಪ್ರಶ್ನೆ - 'ಅಣೋರಣೀಯಾನ್' ಎಂಬ ಶ್ರುತಿಯಲ್ಲಿ ಸಕಲ ಸ್ಥೂಲ ಪದಾರ್ಥಗಳಿಗಿಂತ ಹೆಚ್ಚು ಸ್ಥೂಲವಾಗಿರುವಿಕೆಯನ್ನು ಪರಮಾತ್ಮನಲ್ಲಿ ಹೇಳಲಾಗಿದೆ. ಮಹತ್ತತ್ವಕ್ಕಿಂತ ಪರತ್ವವನ್ನು ಹೇಳಿರುವುದಿಲ್ಲ. ಏಕೆಂದರೆ ಅಣುವಿಗೆ ವಿರುದ್ಧವಾದದ್ದು ಸ್ಥೂಲ ಪದಾರ್ಥವೇ ಆಗಿದೆ. ಮಹತ್ತತ್ವವಲ್ಲ. 'ಮಹತೋ ಮಹೀಯಾನ್' ಎಂಬ ಶ್ರುತಿಯಲ್ಲಿ 'ಮಹತ್' ಶಬ್ದಕ್ಕೆ 'ಮಹತ್ತತ್ವ' ಎಂದೂ ಕೂಡ ಅರ್ಥವಲ್ಲ. ಆದ್ದರಿಂದ ಮಹತ್ತತ್ವಕ್ಕಿಂತ ಉತ್ತಮತ್ವವು ಈ ಶ್ರುತಿಯಿಂದ ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ.

ಪರಮಾತ್ಮನಲ್ಲಿ ವಿರುದ್ಧ ಧರ್ಮವಿರುತ್ತವೆಂಬುದನ್ನು ಸಮರ್ಥಿಸಲು 'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಶ್ರುತಿಯು ಹೊರಟಿದೆ. ಅಣುವಿಗೆ ವಿರುದ್ಧವಾದ ಪದಾರ್ಥವೆಂದರೆ ಸ್ಥೂಲಪದಾರ್ಥವೇ ಹೊರತು, ಮಹತ್ತತ್ವವಲ್ಲ. ಆದ್ದರಿಂದ ಈ ಶ್ರುತಿಯಲ್ಲಿ 'ಮಹತ್' ಎಂಬ ಶಬ್ದಕ್ಕೆ ಮಹತ್ತತ್ವ ಎಂದು ಅರ್ಥಮಾಡಬಾರದು. ಸ್ಥೂಲಪದಾರ್ಥವೆಂದಷ್ಟೇ ಅರ್ಥೈಸಬೇಕು.

**तत्वप्रकाशिका – सत्यम्, 'अत्र सर्वस्मात् स्थूलात् स्थूलत्वं विष्णोरुच्यते' इति । तथाप्यनेन महत् परत्वं च सिध्यति ।**

ಹೌದು. ಸಕಲ ಸ್ಥೂಲಪದಾರ್ಥಗಳಿಗಿಂತಲೂ ಪರಮಾತ್ಮನು ಸ್ಥೂಲನಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಆದರೂ ಕೂಡ ಇದೇ ಮಾತಿನಿಂದಲೇ 'ಮಹತ್ ಪರತ್ವ' ಎಂಬುದು ವಿಷ್ಣುವಿನಲ್ಲಿ ಸ್ವತಃ ಸಿದ್ಧವಾಗುತ್ತದೆ.

**तत्वप्रकाशिका – यदा खलु सर्वस्मात् स्थूलात् परस्तदा महत्तत्वपरत्वस्य सुतरां युक्तत्वादिति भावः ।। ५ ।।**

ಏಕೆಂದರೆ ಪರಮಾತ್ಮನು ಸಕಲ ಸ್ಥೂಲಪದಾರ್ಥಗಳಿಗಿಂತ ಹೆಚ್ಚು ಸ್ಥೂಲನಾಗಿದ್ದಾನೆಂದು ಹೇಳಿದಾಗ 'ಮಹತ್ತತ್ವ' ಎಂಬ ಸ್ಥೂಲ ಪದಾರ್ಥಕ್ಕಿಂತಲೂ ಉತ್ತಮನಾಗಿದ್ದಾನೆಂಬ ಅರ್ಥವು ಸ್ವಾಭಾವಿಕವಾಗಿಯೇ ಸಿದ್ಧವಾಗುತ್ತದೆಂಬುದು ಸೂತ್ರಕಾರರ ಅಭಿಪ್ರಾಯ.

## ಭಾವದೀಪ

उक्तमित्येतेद् व्यञ्जयन् 'महतः' इत्यादि भाष्यं व्याचष्टे – न प्रधानस्येति ।।

ಹಿಂದಿನ ಸೂತ್ರದಲ್ಲಿ ಹೇಳಿದ ವಿಚಾರವನ್ನು ಸ್ಪಷ್ಟಪಡಿಸುವವರಾಗಿ 'ಮಹತಃ' ಇತ್ಯಾದಿ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ನ ಪ್ರಧಾನಸ್ಯ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**भावदीपः – भाष्ये महतः परमित्यंशोक्तेः उपयोगमाह – नच वाच्यमित्यादिना।। इत्यादेरिति ।। एकादशगीताभाष्योक्तादित्यपुरणवाक्यम् ।।**

ಭಾಷ್ಯದಲ್ಲಿ 'ಮಹತಃ ಪರಂ' ಎಂಬ ಶ್ರುತಿಯ ಭಾಗವನ್ನು ಉಲ್ಲೇಖಿಸಲು ಏನು ಕಾರಣ? ಎಂಬ ಪ್ರಶ್ನೆಗೆ 'ನಚ ವಾಚ್ಯಮ್' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. 'ಮಹಾಂತಂ ಚ ಸಮಾವೃತ್ಯ' ಎಂಬ ವಾಕ್ಯವು ಹನ್ನೊಂದನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಉಲ್ಲೇಖಿಸಿದ ಪುರಾಣವಾಕ್ಯವೆಂಬುದನ್ನು 'ಇತ್ಯಾದೇಃ' ಎಂಬುದರಿಂದ ಹೇಳಿದ್ದಾರೆ.

**भावदीपः – पूर्वोक्तेति ।। तदधीनत्वादर्थवदित्युक्तरीत्येत्यर्थः । तदपि महत्परत्वमपि ।। तर्हि किमनिष्टं सिद्धान्तेऽपि तस्यानिरासादित्यतो निचाय्येत्याद्यंशोक्तितात्पर्यमाह – अत इति निरपवादोक्तलिङ्गादित्यर्थः ।**

'ಪೂರ್ವೋಕ್ತರೀತ್ಯಾ' ಎಂಬುದಕ್ಕೆ 'ತದಧೀನತ್ವಾದರ್ಥವತ್' ಎಂಬ ಸೂತ್ರದಲ್ಲಿ ಹೇಳಿದ ಪ್ರಕಾರ ಎಂದರ್ಥ. 'ತದಪಿ' = ಮಹತ್‌ಪರತ್ವ ಎಂಬುದೂ ಕೂಡ. ಪ್ರಕೃತಿಯ ಜ್ಞಾನವೂ ಕೂಡ ಮೋಕ್ಷಕ್ಕೆ ಉಪಯುಕ್ತವಾಗಿದೆ ಎಂದು ಸಿದ್ಧಾಂತದಲ್ಲಿ ನಿರಾಕರಣೆ ಮಾಡದಿದ್ದಾಗ, ಪೂರ್ವಪಕ್ಷಿಗೆ ಅನಿಷ್ಟವಾದದ್ದನ್ನು ಹೇಗೆ ಹೇಳಿದಂತಾಯಿತು? ಎಂಬ ಪ್ರಶ್ನೆಗೆ 'ನಿಚಾಯ್ಯ ತಮ್' ಎಂಬ ಶ್ರುತಿವಾಕ್ಯದ ಅಂಶದಿಂದಲೇ ಉತ್ತರ ನೀಡಿದಂತಾಗಿದೆ ಎಂದು ತಿಳಿಸಲು ಶ್ರುತಿಯ ತಾತ್ಪರ್ಯವನ್ನು 'ಅತಃ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಯಾವುದೇ ಅಪವಾದವಿಲ್ಲದ ಲಿಂಗವಿರುವುದರಿಂದ ಎಂದರ್ಥ.

**भावदीपः** – नेत्यत्र प्रतियोग्याकाङ्क्षायां पूर्वयोगोक्तं संयोजयति – **नैतदिति** ।। **ही**त्यस्यार्थो यत इति । तत्रेति भाष्यस्थानुवादः ।

ಸೂತ್ರದಲ್ಲಿರುವ 'ನ' ಎಂಬ ಪದವನ್ನು ಕೇಳಿದಾಗ ಪ್ರತಿಯೋಗಿಯ ಆಕಾಂಕ್ಷೆಯು ಹುಟ್ಟುತ್ತದೆ. ಅದಕ್ಕಾಗಿ ಹಿಂದೆ ಪ್ರಸಕ್ತವಾದದ್ದನ್ನು ಸಂಯೋಜನೆ ಮಾಡುವ ಮೂಲಕ ಶ್ರುತ್ಯರ್ಥವನ್ನು ತಿಳಿಯಬೇಕೆಂದು ಸ್ಪಷ್ಟಪಡಿಸಲು 'ನೈತತ್' ಎಂಬ ಟೀಕಾವಾಕ್ಯವು ಹೊರಟಿದೆ. ಸೂತ್ರದಲ್ಲಿರುವ 'ಹಿ' ಎಂಬ ಪದದ ಅರ್ಥವನ್ನು 'ಯತಃ' ಎಂದು ಟೀಕೆಯಲ್ಲಿ ಹೇಳಿದ್ದಾರೆ. 'ತತ್ರ' ಎಂಬ ಪದವು 'ತತ್ರೋಚ್ಯತೇ' ಎಂಬ ಭಾಷ್ಯದಲ್ಲಿರುವ 'ತತ್ರ' ಎಂಬ ಪದದ ಅನುವಾದ ರೂಪವಾಗಿದೆ.

**भावदीपः** – ननु महत इति पदेन महत्तत्वमेवोच्यतामित्यत आह – **स्थूलस्यैवेति** ।। **प्रतियोगित्वादिति** ।। अणोरित्युक्तस्य प्रतिद्वन्द्वित्वात् स्थूलवस्तुन एतत् प्रतिद्वन्द्वितायोग्यत्वादित्यर्थः ।।५।।

'ಮಹತಃ ಪರಮವ್ಯಕ್ತಮ್' ಎಂಬಲ್ಲಿರುವ 'ಮಹತ್' ಪದದಿಂದ ಮಹತ್ತತ್ವವನ್ನೇ ವಿವಕ್ಷಿಸಬಹುದಲ್ಲವೇ? ಎಂಬ ಪ್ರಶ್ನೆಗೆ 'ಸ್ಥೂಲಸ್ಯೈವ' ಎಂಬುದರಿಂದ ಉತ್ತರಿಸಿದ್ದಾರೆ. 'ಪ್ರತಿಯೋಗಿತ್ವಾತ್' ಎಂಬುದರ ಅಭಿಪ್ರಾಯ ಹೀಗಿದೆ - ಅಣುಪದಾರ್ಥಕ್ಕೆ ಪ್ರತಿಯೋಗಿಯಾದದ್ದು, ಸ್ಥೂಲಪದಾರ್ಥವೇ ಆಗಿರುತ್ತವೆ. ಆದ್ದರಿಂದ ಸ್ಥೂಲಪದಾರ್ಥವೇ ಅಣುವಿಗೆ ಪ್ರತಿಯೋಗಿಯಾಗಲು ಯೋಗ್ಯವಾಗಿರುತ್ತವೆ.

## ಬ್ರಹ್ಮಮೀಮಾಂಸಾಶಾಸ್ತ್ರ

## ಅವ್ಯಕ್ತ ಶಬ್ದವಿರುವುದು ವಿಷ್ಣುಪ್ರಕರಣದಲ್ಲಿ

**सूत्रम् – ।। प्रकरणात् ।। ६ ।।**

ಸೂತ್ರಾರ್ಥ - 'ಸೋಽಧ್ವನಃ' ಎಂಬ ಅದೇ ಪ್ರಕರಣದಲ್ಲಿ ಆ ವಿಷಯವನ್ನು ಉಪಾಸನೆ ಮಾಡುವವನಿಗೆ ವಿಷ್ಣು ಪದವು ಪ್ರಾಪ್ತವಾಗುತ್ತದೆ ಎಂದು ನಿರ್ಣಯಿಸಲ್ಪಟ್ಟಿದೆ. ಆದ್ದರಿಂದ 'ಮಹತಃ ಪರಮ್' ಎಂಬ ಶ್ರುತಿಯಿಂದ ಪ್ರಾಜ್ಞನಾದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ.

## ಸೂತ್ರದೀಪಿಕಾ

**सूत्रदीपिका** – वैष्णवरूपाणां त्रयाणां **प्रकरणबलाच्च** प्राज्ञ एवात्र प्रतिपाद्य इत्यर्थः ।।६।।

ಪರಿಪೂರ್ಣಚಂದ್ರಿಕಾ

ಅರ್ಥ -- ಪ್ರಕರಣಾತ್ = ವಿಷ್ಣುವನ್ನೇ ಪ್ರತಿಪಾದನೆ ಮಾಡುವ ಮೂರು ಪ್ರಕರಣಗಳಿಂದಲೂ ಪ್ರಾಜ್ಞನಾದ ಪರಮಾತ್ಮನೇ 'ಮಹತಃ ಪರಮ್' ಎಂಬ ಶ್ರುತಿಯಿಂದ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – 'सोऽध्वनः पारमाप्नोति तद्विष्णोः परमं पदम्' (क.उ. १-३-९) इति तस्य ह्येतत् प्रकरणम् ।।६।।**

ಅನುವಾದ - ಯಾವ ವ್ಯಕ್ತಿಯು ವಿಷ್ಣುವಿನ ಪರಮಸ್ವರೂಪವನ್ನು ತಿಳಿಯುತ್ತಾನೋ, ಅವನು ಸಂಸಾರವನ್ನು ದಾಟಿ, ಮೋಕ್ಷವನ್ನು ಪಡೆಯುತ್ತಾನೆ. ಹೀಗೆ ಈ ಪ್ರಕರಣವು ವಿಷ್ಣುವಿಗೆ ಸಂಬಂಧಪಟ್ಟಿರುವುದರಿಂದ, ಮಹತ್ತತ್ವಕ್ಕಿಂತ ಶ್ರೇಷ್ಠವಾದ ತತ್ವವೆಂದು ಪ್ರಸಕ್ತವಾದವನು ಮಹಾವಿಷ್ಣುವೇ ಆಗಿರುತ್ತಾನೆ.

ಪ್ರತಿಪದಾರ್ಥ -- 'ಮಹತ್‌ಪರತ್ವ' ಎಂಬುದು ಪ್ರಕೃತಿಯ ಲಿಂಗವಾಗಿದೆ. ಇದನ್ನು ಬಿಟ್ಟು ವಿಷ್ಣುವೆಂಬ ಅರ್ಥವನ್ನು ಸ್ವೀಕರಿಸಲು ಯಾವುದೇ ಕಾರಣವಿಲ್ಲ. ಈ ಆಶಂಕೆಗೆ ಉತ್ತರಿಸಲು ಸೂತ್ರವನ್ನು ಉಪನ್ಯಾಸ ಮಾಡಿ ವ್ಯಾಖ್ಯಾನ ಮಾಡುತ್ತಿದ್ದಾರೆ. –

ಸಃ = ಭಗವದುಪಾಸಕನು, ಅಧ್ವನಃ = ಸಂಸಾರವೆಂಬ ದಾರಿಯ, ಪಾರಮ್ = ಮತ್ತೊಂದು ದಡವನ್ನು, ಆಪ್ನೋತಿ = ಹೊಂದುತ್ತಾನೆ. ತತ್ = ಆ ದಡವು, ವಿಷ್ಣೋಃ = ಮಹಾವಿಷ್ಣುವಿನ, ಪರಮಂ ಪದಮ್ = ಶ್ರೇಷ್ಠ ಸ್ಥಾನವಾದ ಮೋಕ್ಷವೇ ಆಗಿದೆ. ಇತಿ = ಹೀಗೆ, ಏತತ್ = ಇದು, ತಸ್ಯ ಹಿ = ಮಹಾವಿಷ್ಣುವಿನ, ಪ್ರಕರಣಮ್ = ಪ್ರಕರಣವಾಗಿದೆ. ಆದ್ದರಿಂದ ಪ್ರಾಜ್ಞನು ಅವ್ಯಕ್ತಾದಿಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು.

## ತತ್ವಪ್ರಕಾಶಿಕಾ

**ननु विशिष्य महत्परत्वस्य प्रधानलिङ्गस्यामुख्यार्थतां स्वीकृत्य, अनाद्यनन्तादिवाक्यस्य विष्णुपरत्वग्रहणे कारणाभावात्, प्रधानमेवात्रोच्यत इत्याशङ्कां परिहरत्सूत्रमुपन्यस्य व्याचष्टे – प्रकरणादिति ।।**

ಪ್ರಕೃತಿಯ 'ಮಹತ್‌ಪರತ್ವ' ಎಂಬ ವಿಶೇಷ ಲಿಂಗಕ್ಕೆ ಅಮುಖ್ಯಾರ್ಥವನ್ನು ಸ್ವೀಕರಿಸಿ ವಿಷ್ಣುಪರತ್ವವನ್ನು ಹೇಳಿದಿರಿ. ಎಲ್ಲಾ ಪದಾರ್ಥಗಳಿಂದ ಉತ್ತಮನಾದ ಮಹಾವಿಷ್ಣು ಮಹತ್ ತತ್ವಕ್ಕಿಂತಲೂ ಉತ್ತಮನಾಗಿದ್ದಾನೆಂಬುದು ಅಮುಖ್ಯವಾದ ಮಹತ್‌ಪರತ್ವವಾಗುತ್ತದೆ. ಈ

ಅಮುಖ್ಯವಾದ ಮಹತ್‌ಪರತ್ವವನ್ನು ವಿಷ್ಣುವಿನಲ್ಲಿ ಒಪ್ಪಿ 'ಅನಾದ್ಯನಂತಂ' ಎಂಬ ವಾಕ್ಯವು ವಿಷ್ಣುಪರವಾಗಿದೆ ಎಂದು ಹೇಳಲು ಯಾವುದೇ ಕಾರಣವಿರುವುದಿಲ್ಲ. ಆದ್ದರಿಂದ ಪ್ರಕೃತಿಯೇ ಇಲ್ಲಿ ಮುಖ್ಯವಾಗಿ ಪ್ರತಿಪಾದ್ಯವಾಗುತ್ತದೆ.

ಈ ಆಶಂಕೆಗೆ ಪರಿಹಾರ ನೀಡಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪ್ರಕರಣಾತ್' ಎಂಬುದಾಗಿ.

**तत्वप्रकाशिका – नात्र विष्णुग्रहणे कारणाभावः, येनान्यस्य वाच्यता शङ्केत; एतत्प्रकरणस्य वैष्णवत्वात् ।**

ಶ್ರುತಿಯಲ್ಲಿ ಮಹತ್‌ಪರತ್ವವೆಂಬ ಲಿಂಗದಿಂದ ವಿಷ್ಣುವನ್ನೇ ಸ್ವೀಕರಿಸಲು ಕಾರಣವಿಲ್ಲವೆಂದು ಹೇಳಬಾರದು. ಒಂದು ವೇಳೆ ವಿಷ್ಣುವನ್ನು ಸ್ವೀಕರಿಸಲು ಕಾರಣವಿಲ್ಲದಿದ್ದಲ್ಲಿ ವಿಷ್ಣುವಿಗಿಂತ ಭಿನ್ನವಾದ ಪ್ರಕೃತಿಯೇ 'ಮಹತ್‌ಪರಂ' ಎಂಬ ಶ್ರುತಿಯಿಂದ ಪ್ರತಿಪಾದ್ಯವಾಗುತ್ತಿದೆಯೆಂದು ಶಂಕಿಸಬಹುದಿತ್ತು. ಆದರೆ ಸಂಪೂರ್ಣ ಈ ಪ್ರಕರಣವು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತಿದೆಯೆನ್ನಲು ಕಾರಣವಿದೆ.

**तत्वप्रकाशिका – एतत्प्रकरणोक्तार्थोपासकस्य विष्णुपदप्राप्त्युक्त्या तदवगमात्, अन्यप्रकरणत्वे तदयोगादिति भावः ।**

ಈ ಪ್ರಕರಣದ ಅರ್ಥವನ್ನು ಉಪಾಸನೆ ಮಾಡುವವನಿಗೆ ವಿಷ್ಣುವಿನ ಸ್ಥಾನವು ದೊರೆಯುತ್ತದೆಂದು ಹೇಳಲಾಗಿದೆ. ಒಂದು ವೇಳೆ ಬೇರೆ ಪದಾರ್ಥವು ಪ್ರತಿಪಾದ್ಯವಾಗಿದ್ದಲ್ಲಿ ಅಂತಹ ಬೇರೆ ಪದಾರ್ಥದ ಉಪಾಸನೆಯಿಂದ ವಿಷ್ಣುವಿನ ಪದವು ಪ್ರಾಪ್ತವಾಗುತ್ತದೆಂದು ಹೇಳಿದಂತಾಗುತ್ತದೆ. ಇದು ತಪ್ಪು. ಪ್ರಕರಣವು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿರುವಾಗ ಬೇರೆ ಪದಾರ್ಥವು ಪ್ರತಿಪಾದ್ಯವೆಂದು ಹೇಳುವುದು ತಪ್ಪಾಗುತ್ತದೆ.

**तत्वप्रकाशिका – नच लिङ्गात् प्रकरणस्य दौर्बल्येनासाधकत्वम् । लिङ्गस्योक्तरीत्या सावकाशत्वात्, प्रकरणस्य निरवकाशत्वात् । निरवकाशप्रकरणस्यापि सावकाशलिङ्गबाधकत्वोपपत्तेः ।**

ಲಿಂಗಕ್ಕಿಂತಲೂ ಪ್ರಕರಣವು ದುರ್ಬಲವಾದ್ದರಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ಹೇಗೆ ಸಮರ್ಥಿಸುತ್ತೀರಿ. ದುರ್ಬಲವಾದ ಪ್ರಕರಣವು ಈ ವಿಷಯದಲ್ಲಿ ಸಾಧಕವಾಗುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಹಿಂದಿನ ಸೂತ್ರದಲ್ಲಿ ಹೇಳಿದಂತೆ ಮಹತ್‌ಪರತ್ವವೆಂಬ ಲಿಂಗವು ಸಾವಕಾಶವಾಗಿದೆ. ಪ್ರಕರಣವು ನಿರವಕಾಶವಾಗಿದ್ದಾಗ, ಲಿಂಗವು ಸಾವಕಾಶವಾಗಿದ್ದಾಗ, ಪ್ರಕರಣವೇ ಲಿಂಗವನ್ನು ಬಾಧಿಸುತ್ತದೆ ಹೊರತು, ಲಿಂಗವು ಪ್ರಕರಣವನ್ನು ಬಾಧಿಸುವುದಿಲ್ಲ.

ಪರಿಪೂರ್ಣಚಂದ್ರಿಕಾ

**तत्वप्रकाशिका – नच वाच्यं विशिष्य महत्परत्वलिङ्गं च प्रधानपरे परमात्मनि निरवकाशमिति । प्रधानपरस्यपि 'यो बुद्धेः परतस्तु सः' इत्यादाविव महत्परत्वोक्तिसम्भवात् ।**

ಮತ್ತು 'ಮಹತಃ ಪರಂ' ಎಂಬುದಾಗಿ 'ಮಹತ್‌ಪರತ್ವ' ಲಿಂಗವನ್ನು ವಿಶೇಷವಾಗಿ ಹೇಳಲಾಗಿದೆ. ಇದು ಪ್ರಕೃತಿಗಿಂತಲೂ ಉತ್ತಮನಾದ ಪರಮಾತ್ಮನಲ್ಲಿ ನಿರವಕಾಶವಾಗಿರುತ್ತದಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ಪರಮಾತ್ಮನು ಪ್ರಕೃತಿಗಿಂತ ಉತ್ತಮನಾಗಿದ್ದರೂ ಕೂಡ 'ಯೋ ಬುದ್ಧೇಃ ಪರತಸ್ತು ಸಃ' ಎಂಬ ಗೀತೆಯಲ್ಲಿ ವಿಷ್ಣುವಿಗೆ ಬುದ್ಧಿಪರತ್ವವನ್ನು ಹೇಗೆ ಹೇಳಿದ್ದಾರೋ ಅದರಂತೆ ಇಲ್ಲಿಯೂ ಕೂಡ ಮಹತ್‌ಪರತ್ವವನ್ನು ಹೇಳಿದ್ದಾರೆಂದು ತಿಳಿಯಬೇಕು.

**तत्वप्रकाशिका – पूर्वं महत् परत्वेन परमात्मनोऽप्रकृतत्वात् प्रधानस्य तद्भावात् 'तम्' इति परामर्शेनैतत्सिद्धमित्युक्तार्थविस्मरणविजृम्भितं साधकमस्माकं, न परस्य ।**

ಹಿಂದೆ 'ಮಹತಃ ಪರಮವ್ಯಕ್ತಮ್' ಎಂಬಲ್ಲಿ ಪರಮಾತ್ಮನು ಅಪ್ರಕೃತನಾಗಿದ್ದಾನೆ. ಪ್ರಧಾನವು ಪ್ರಕೃತವಾಗಿದೆ. ಆದ್ದರಿಂದ 'ನಿಚಾಯ್ಯ ತಂ' ಎಂಬಲ್ಲಿರುವ 'ತಮ್' ಎಂಬ ಸರ್ವನಾಮಶಬ್ದದಿಂದ ಪ್ರಕೃತಿಯನ್ನು ಪರಾಮರ್ಶಿಸಬೇಕು. ಆ ಪ್ರಕೃತಿಯೇ ಶ್ರುತಿಯಿಂದ ಪ್ರತಿಪಾದ್ಯವಾಗಬೇಕು. ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂಬುದು ಮತ್ತು ಪರಮಾತ್ಮಗೆ ಮಹತ್‌ಪರತ್ವವು ಸಿದ್ಧವಾಗುತ್ತದೆಂಬುದು ಕೇವಲ ಹಿಂದೆ ಹೇಳಿದ ವಿಷಯದ ಮರೆಯುವಿಕೆಯ ವಿಜೃಂಭಣೆ ಮಾತ್ರ. ಹೀಗೆ ಪೂರ್ವಪಕ್ಷಿ ಹೇಳುವ ಉಕ್ತಾರ್ಥವಿಸ್ಮರಣ ವಿಜೃಂಭಣೆ ಎಂಬ ದೋಷ ಸಿದ್ಧಾಂತಿಗಳಿಗೆ ಸಾಧಕವೇ ಆಗುತ್ತದೆ. ಪೂರ್ವಪಕ್ಷಿಗೆ ಸಾಧಕವಾಗುವುದಿಲ್ಲ.

**तत्वप्रकाशिका – सत्यम् । तद्वदत्राप्युभयोक्तिः स्यादितिचेन्न । अविरोध एवोभयार्थताऽभ्युपगमात् ।**

ಮೊದಲನೆಯ ಸೂತ್ರದಲ್ಲಿ 'ಮಹತಃ ಪರಮವ್ಯಕ್ತಮ್' ಎಂಬಲ್ಲಿರುವ ಅವ್ಯಕ್ತಪದದ ಅರ್ಥ ಪರಮಾತ್ಮನೆಂದು ಸಾಧಿಸಲಾಗಿದೆ. ಆದ್ದರಿಂದ ಅವ್ಯಕ್ತಶಬ್ದಕ್ಕೆ ಪರಮಾತ್ಮ ಹಾಗೂ ಪ್ರಕೃತಿ ಎಂಬ ಎರಡೂ ಅರ್ಥವನ್ನು ಸ್ವೀಕರಿಸಬೇಕು ಎಂದು ಹೇಗೆ ಹೇಳುತ್ತೀರೋ, ಅದರಂತೆ 'ಅನಾದ್ಯನಂತಂ' ಎಂಬ ವಾಕ್ಯದಲ್ಲೂ 'ಪ್ರಕೃತಿ' ಹಾಗೂ 'ಪರಮಾತ್ಮ' ಎಂಬ ಎರಡು ಅರ್ಥವನ್ನು ಸ್ವೀಕರಿಸಬೇಕಲ್ಲವೇ? ಎಂದು ಪೂರ್ವಪಕ್ಷಿಯು ಪ್ರಶ್ನಿಸಬಹುದು. ಆದರೆ ಇದು ಸರಿಯಲ್ಲ. ಏಕೆಂದರೆ ಎಲ್ಲಿ ಎರಡು ಅರ್ಥವನ್ನು ಸ್ವೀಕರಿಸಲು ವಿರೋಧವಿರುವುದಿಲ್ಲವೋ ಅಲ್ಲಿ ಮಾತ್ರ ಶಬ್ದಗಳಿಗೆ ಉಭಯಾರ್ಥತ್ವವನ್ನು

ಸ್ವೀಕರಿಸಬೇಕು. ಆದರೆ 'ಅನಾದ್ಯನಂತಂ' ಎಂಬ ವಾಕ್ಯದಲ್ಲಿ ಪ್ರಕೃತಿ ಎಂಬರ್ಥವನ್ನು ಸ್ವೀಕರಿಸಿದರೆ ನಿರವಕಾಶ ಪ್ರಕರಣದ ವಿರೋಧ ಬರುತ್ತದೆ. ಆದ್ದರಿಂದ ಇಲ್ಲಿ ಉಭಯಾರ್ಥತ್ವವನ್ನು ಸ್ವೀಕರಿಸಬಾರದು.

**तत्वप्रकाशिका – नच प्रकरणस्यापि प्रसङ्गादन्योक्तिसम्भवात् सावकाशत्वेन पुनर्लिङ्गमेव प्रबलमिति युक्तम् । प्रासङ्गिकोक्तेरत्र प्रयोजनादर्शनात् ।**

ಪ್ರಕರಣವು ವಿಷ್ಣುವನ್ನೇ ಸಂಪೂರ್ಣವಾಗಿ ಪ್ರತಿಪಾದಿಸುತ್ತಿರಬಹುದು. ಆದರೂ ಕೂಡ ಪ್ರಾಸಂಗಿಕವಾಗಿ ಪ್ರಕೃತಿಯನ್ನೂ ಕೂಡ ವರ್ಣನೆ ಮಾಡಬಹುದು. ಆವಾಗ ಪ್ರಕರಣವು ಸಾವಕಾಶವಾಗುತ್ತದೆ. ಈ ಪ್ರಕರಣಕ್ಕಿಂತ ನಿರವಕಾಶವಾದ ಲಿಂಗ ಪ್ರಬಲವಾಗುತ್ತದಲ್ಲವೇ ? ಹೀಗೆ ಪ್ರಶ್ನಿಸಬಾರದು. ಏಕೆಂದರೆ ಈ ಪ್ರಕರಣದಲ್ಲಿ ಪ್ರಾಸಂಗಿಕವಾಗಿ ಪ್ರಕೃತಿಯನ್ನು ವರ್ಣನೆ ಮಾಡುವ ಸಂದರ್ಭವೇ ಇರುವುದಿಲ್ಲ. ಆದಕ್ಕೆ ಯಾವ ಪ್ರಯೋಜನವೂ ಕೂಡ ಇರುವುದಿಲ್ಲ.

**तत्वप्रकाशिका – 'अनाद्यनन्तं महतः परं ध्रुवम्' इति 'परो हि देवः पुरुहूतो महत्परः' (महतः) इति श्रुतेश्चेति ।। ६ ।।**

ಮತ್ತು 'ಅನ್ಯಾದ್ಯನಂತಂ ಮಹತಃ ಪರಂ ಧ್ರುವಮ್' ಎಂಬ ಶ್ರುತಿ ಮತ್ತು 'ಪರೋ ಹಿ ದೇವಃ ಪುರುಹೂತೋ ಮಹತ್ಪರಃ' ಎಂಬ ಶ್ರುತಿ ಮಹತ್ಪರತ್ವವನ್ನು ನೇರವಾಗಿ ವಿಷ್ಣುವಿನಲ್ಲಿ ಹೇಳುತ್ತಿದೆ. ಆದ್ದರಿಂದ ವಿಷ್ಣುವೇ ಮಹತ್ಪರನೆಂದು ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು.

## ಭಾವದೀಪ

**प्रकणादित्यत्र साध्याकाङ्क्षां पूरयति – नात्रेति ।। तस्यैव हि एतत् प्रकरणमिति अस्यार्थमाह – एतदिति ।। हिर्हेताविति सूचितम् ।**

'ಪ್ರಕರಣಾತ್' ಎಂಬ ಸೂತ್ರದಲ್ಲಿ ಯಾವುದು ಸಾಧ್ಯ ? ಎಂಬ ಆಕಾಂಕ್ಷೆಯನ್ನು 'ನಾತ್ರ' ಇತ್ಯಾದಿ ಟೀಕಾದಿಂದ ಪೂರಣ ಮಾಡುತ್ತಿದ್ದಾರೆ. 'ಮಹತ್‌ಪರತ್ವವೆಂಬ ಲಿಂಗವು ವಿಷ್ಣುವಿನಲ್ಲಿರುವುದಿಲ್ಲವೆಂದು ಹೇಳಬಾರದು' ಇದು ಸಾಧ್ಯ. 'ಈ ಪ್ರಕರಣವು ವಿಷ್ಣುಪರವಾಗಿರುವುದರಿಂದ' ಎಂಬುದು ಹೇತು. 'ಪ್ರಕರಣಾತ್' ಎಂಬ ಸೂತ್ರದ ಪದವನ್ನು 'ಏತತ್‌ಪ್ರಕರಣಸ್ಯ ವೈಷ್ಣವತ್ವಾತ್' ಎಂದು ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿರುವ 'ಹಿ' ಪದವು ಹೇತ್ವರ್ಥದಲ್ಲಿದೆ ಎಂದು ಇದರಿಂದ ಸೂಚನೆ ಮಾಡಿದಂತಾಯಿತು.

**भावदीपः** – कुतो न शङ्क्येतेत्यतः स इत्यादि पूर्वभाष्यं व्याचष्टे – **एतत्प्रकरणेति** ।।

ಪ್ರಕೃತಿಯಲ್ಲಿ ಮಹತ್ ಪರತ್ವವನ್ನು ಏಕೆ ಆಶಂಕಿಸಬಾರದು? ಎಂಬ ಪ್ರಶ್ನೆಗೆ 'ಸೋऽಧ್ವನಃ' ಎಂಬ ಭಾಷ್ಯವನ್ನು ವ್ಯಾಖ್ಯಾನ ಮಾಡಲು 'ಏತತ್‌ಪ್ರಕರಣಸ್ಯ' ಎಂಬ ಟೀಕಾವಾಕ್ಯವು ಹೊರಟಿದೆ.

**भावदीपः** – उक्ताशङ्कानिरासकतयाऽपि सर्वस्मात् परस्य महतोऽपि परत्वं युज्यत इति वाक्यमेवात्र योजयति ।। **प्रधानेति** ।। **इत्यादाविवेति** ।। यथा गीतायां तृतीयेऽध्याये बुद्धेः परान्महादितोऽपि परस्य बुद्धिपरत्वमुच्यते तथेत्यर्थः । उक्तं च गीताभाष्ये 'न केवलं बुद्धेः परः श्रुत्युक्तप्रकारेणाव्यक्तादपि' इत्यादि ।

ಹಿಂದಿನ ಆಕ್ಷೇಪಕ್ಕೆ ಉತ್ತರಿಸಲು 'ಸಕಲ ಪದಾರ್ಥದಿಂದ ಶ್ರೇಷ್ಠನಾದ ಪರಮಾತ್ಮನು ಮಹತ್ತತ್ವಕ್ಕಿಂತಲೂ ಶ್ರೇಷ್ಠನಾಗಿದ್ದಾನೆಂದು ಹೇಳುವುದು ಯುಕ್ತವಾಗುತ್ತದೆ' ಎಂಬುದಾಗಿ ಸ್ಪಷ್ಟವಾಗಿ ಹೇಳುವ ಶ್ರುತಿವಾಕ್ಯವನ್ನು ಟೀಕೆಯಲ್ಲಿ ಉಲ್ಲೇಖಿಸುತ್ತಿದ್ದಾರೆ 'ಪ್ರಧಾನಪರಸ್ಯಾಪಿ' ಇತ್ಯಾದಿಯಾಗಿ.

'ಇತ್ಯಾದಾವಿವ' ಎಂಬುದರ ಅಭಿಪ್ರಾಯ ಹೀಗಿದೆ - ಯಾವರೀತಿಯಾಗಿ ಗೀತೆಯ ತೃತೀಯಾಧ್ಯಾಯದಲ್ಲಿ ಬುದ್ಧಿತತ್ವಕ್ಕಿಂತಲೂ ಶ್ರೇಷ್ಠತ್ವವನ್ನು ಪರಮಾತ್ಮನಿಗೆ ಹೇಳಿದ್ದಾರೋ, ಅದರಂತೆ ಮಹತ್‌ಪರತ್ವವನ್ನೂ ಕೂಡ ತಿಳಿಯಬೇಕು. ಇದನ್ನು ಗೀತಾಭಾಷ್ಯದಲ್ಲಿ 'ನ ಕೇವಲಂ ಬುದ್ಧೇಃ ಪರಃ ಶ್ರುತ್ಯುಕ್ತಪ್ರಕಾರೇಣಾವ್ಯಕ್ತಾದಪಿ' "ಕೇವಲ ಬುದ್ಧಿತತ್ವಕ್ಕಿಂತ ಪರಮಾತ್ಮನು ಶ್ರೇಷ್ಠ ಎಂಬುದಷ್ಟೇ ಅಲ್ಲ. ಶ್ರುತಿಯಲ್ಲಿ ಹೇಳಿದಂತೆ ಅವ್ಯಕ್ತತತ್ವಕ್ಕಿಂತಲೂ ಕೂಡ ಶ್ರೇಷ್ಠನಾಗಿದ್ದಾನೆಂದು ತಿಳಿಯಬೇಕು" ಇತ್ಯಾದಿಯಾಗಿ ಹೇಳಲಾಗಿದೆ. ಬುದ್ಧಿತತ್ವ ಹಾಗೂ ಪರಮಾತ್ಮನ ನಡುವೆ ಮಹತ್ತತ್ವ ಹಾಗೂ ಅವ್ಯಕ್ತತತ್ವಗಳಿವೆ. ಇವೆರಡನ್ನೂ ಬಿಟ್ಟು ಬುದ್ಧಿತತ್ವಕ್ಕಿಂತ ಪರಮಾತ್ಮನು ಶ್ರೇಷ್ಠನೆಂದು 'ಯೋ ಬುದ್ಧೇಃ ಪರತಸ್ತು ಸಃ' ಎಂಬ ಗೀತಾವಾಕ್ಯ ಹೇಳುತ್ತಿದೆ. ಇದರಂತೆ ಸಕಲ ಪದಾರ್ಥಗಳಿಂದ ಶ್ರೇಷ್ಠನೆಂದು ಹೇಳಿದ ಮೇಲೆ ಮಹತ್ತತ್ವಕ್ಕಿಂತಲೂ ಶ್ರೇಷ್ಠನೆಂದು ಹೇಳಿದಂತಾಗುತ್ತದೆ.

**भावदीपः** – शङ्कते – **पूर्वमिति** ।। अनाद्यनन्तमिति वाक्यात् पूर्वं महतः परमव्यक्तमिति वाक्य इत्यर्थः । इति चोद्यमिति शेषः ।। **उक्तार्थेति** ।। आनुमानिकसूत्र एवाव्यक्तशब्दवाच्यं ब्रह्मेत्युक्तार्थ इत्यर्थः ।

'ಪೂರ್ವಮ್' ಎಂಬ ವಾಕ್ಯದಿಂದ ಆಕ್ಷೇಪ ಮಾಡುತ್ತಿದ್ದಾರೆ. 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿವಾಕ್ಯಕ್ಕಿಂತಲೂ ಹಿಂದಿನ 'ಅನಾದ್ಯನಂತಮ್' ಎಂಬ ವಾಕ್ಯದಲ್ಲಿ ಎಂದರ್ಥ. ಇಲ್ಲಿ 'ಇತಿ ಚೋದ್ಯಮ್' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಉಕ್ತಾರ್ಥ' ಎಂಬುದಕ್ಕೆ ಆನುಮಾನಿಕ ಸೂತ್ರದಲ್ಲೇ ಹೇಳಿದಂತೆ ಅವ್ಯಕ್ತಶಬ್ದವಾಚ್ಯನಾದವನು ಬ್ರಹ್ಮನಾಗಿದ್ದಾನೆ ಎಂಬರ್ಥದಲ್ಲಿ ಎಂದರ್ಥ.

'ಅನಾದ್ಯನಂತಮ್ ಮಹತಃ ಪರಮ್' ಎಂಬ ವಾಕ್ಯವು 'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯದಿಂದ ಮೊದಲು ಪ್ರಸಕ್ತವಾಗಿದೆ. ಈ ವಾಕ್ಯದಲ್ಲಿ ಪರಮಾತ್ಮನ ವಿಚಾರವು ಪ್ರಸಕ್ತವಾಗಿಲ್ಲ. ಪ್ರಕೃತಿ ವಿಚಾರವು ಪ್ರಸಕ್ತವಾಗಿದೆ. ಆದ್ದರಿಂದ 'ಮಹತಃ ಪರಂ ಧ್ರುವಂ ನಿಚಾಯ್ಯ ತಂ' ಎಂಬಲ್ಲಿ ಇರುವ 'ತಂ' ಎಂಬ ಪದದಿಂದಲೂ ಪರಮಾತ್ಮನು ಪ್ರತಿಪಾದ್ಯನಾಗುತ್ತಾನೆಂಬುದು ಹಿಂದೆ ಹೇಳಿದ ವಿಚಾರದ ವಿಸ್ಮರಣೆಯ ವಿಜೃಂಭಣೆಯಾಗಿದೆ ಎಂದು ಪೂರ್ವಪಕ್ಷಿಯು ಆಪಾದನೆ ಮಾಡುತ್ತಾನೆ. ಈ ಆಪಾದನೆಯು ಪ್ರತಿಯಾಗಿ ಪೂರ್ವಪಕ್ಷಿಗೆ ಬರುತ್ತದೆ ಹೊರತು, ನಮಗಲ್ಲ. ಏಕೆಂದರೆ ಈ ಅಧಿಕರಣದ ಮೊದಲನೆಯ ಆನುಮಾನಿಕ ಸೂತ್ರದಲ್ಲಿ 'ಶರೀರರೂಪಕ ವಿನ್ಯಸ್ತ ಗೃಹಿತೇಃ' ಎಂಬ ಪದದಿಂದ ಅವ್ಯಕ್ತಶಬ್ದಕ್ಕೆ ಬ್ರಹ್ಮನೆಂಬರ್ಥವನ್ನು ನಾವು ಸಮರ್ಥಿಸುತ್ತೇನೆ. ಇದರ ವಿಸ್ಮರಣೆಯ ವಿಜೃಂಭಣೆಯು ಪೂರ್ವಪಕ್ಷಿಯಲ್ಲಿ ಎದ್ದು ಕಾಣಿಸುತ್ತಿದೆ. ಆದ್ದರಿಂದ ವಿಸ್ಮರಣೆ, ವಿಜೃಂಭಣೆ ಎಂಬ ಮಾತು ಅವ್ಯಕ್ತಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ಹೇಳುವ ಹಾಗೂ ಪರಮಾತ್ಮನಿಗೆ ಮಹತ್ ಪರತ್ವವನ್ನು ಹೇಳುವ ನಮಗೆ ಅನುಕೂಲವೇ ಆಗಿದೆ. ಪ್ರತಿಕೂಲವಾಗಿರುವುದಿಲ್ಲ.

**भावदीपः – शङ्कते – सत्यमिति ।। प्रागव्यक्तं ब्रह्मेत्युक्तं सत्यमित्यर्थः ।। अविरोध एवेति ।। अविरोधे तु बह्वर्था एतन्मूलतया मता इत्यनुभाष्योक्तेः । इह तु मुक्तिहेतुज्ञानत्वविरोधादन्यवाचित्वमपोद्यत इति भावः ।**

ಪುನಃ ಪೂರ್ವಪಕ್ಷಿಯ ಆಕ್ಷೇಪವನ್ನು 'ಸತ್ಯಮ್' ಎಂಬುದರಿಂದ ಹೇಳುತ್ತಿದ್ದಾರೆ. ಹಿಂದೆ ಅವ್ಯಕ್ತಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನೆಂದು ಹೇಳಿದ್ದು ಸತ್ಯವೆಂದು ಒಪ್ಪುತ್ತೇವೆ ಎಂದಭಿಪ್ರಾಯ. 'ಅವಿರೋಧ ಏವ' ಎಂದರೆ 'ಅವಿರೋಧೇ ತು ಬಹ್ವರ್ಥಾ ಏತನ್ ಮೂಲತಯಾ ಮತಾ' ವಿರೋಧವಿಲ್ಲದಿದ್ದಾಗ ಅನೇಕ ಅರ್ಥಗಳನ್ನು ಒಪ್ಪಬಹುದು ಎಂಬ ಅನುವ್ಯಾಖ್ಯಾನದ ಮಾತಿನಂತೆ ವಿರೋಧವಿಲ್ಲದಿದ್ದರೆ ಮಾತ್ರ ಇಲ್ಲಿ ಉಭಯಾರ್ಥವನ್ನು ಒಪ್ಪಬಹುದು. ಆದರೆ ಪ್ರಕೃತ 'ಮುಕ್ತಿಹೇತುಜ್ಞಾನತ್ವ' ಎಂಬ ವಿರೋಧವಿರುವುದರಿಂದ ಪ್ರಕೃತಿಪರತ್ವವನ್ನು ಒಪ್ಪಲು ಸಾಧ್ಯವಿಲ್ಲ.

**भावदीपः – ननु षट्प्रश्ने यथा 'आत्मन एष प्राणो जायते' इत्यादि प्राणप्रकरणे प्रसङ्गात्' 'हृदि ह्येष आत्मा' इति जीवोक्तिः तथा विष्णुप्रकरणेऽपि प्रसङ्गादस्तु प्रधानोक्तिरित्याशङ्क्य निरस्यति – नचेति ।।**

ज्ञानरूपस्य जीवस्यैव विभोर्विषयसम्बन्धोपपत्तौ किमिन्द्रियवृत्तिभिरिति शङ्कानिरासरूपप्रयोजनं हृदिहीतिवाक्येऽस्तीति भावः ।

ಷಟ್‌ಪ್ರಶ್ನೋಪನಿಷತ್ತಿನಲ್ಲಿ 'ಆತ್ಮನ ಏಷ ಪ್ರಾಣೋ ಜಾಯತೇ' ಎಂಬ ಪ್ರಾಣಪ್ರಕರಣದಲ್ಲಿ ಪ್ರಾಸಂಗಿಕವಾಗಿ 'ಹೃದಿ ಹ್ಯೇಷ ಆತ್ಮಾ' ಎಂಬ ವಾಕ್ಯವಿದೆ. ಇಲ್ಲಿರುವ ಆತ್ಮ ಶಬ್ದಕ್ಕೆ ಜೀವಪರತ್ವವನ್ನು ನೀವೇ ಒಪ್ಪಿದ್ದೀರಿ. ಅದರಂತೆ ಇಲ್ಲಿಯೂ ವಿಷ್ಣುಪ್ರಕರಣವಾಗಿದ್ದರೂ ಪ್ರಾಸಂಗಿಕವಾಗಿ ಅವ್ಯಕ್ತತತ್ವವನ್ನು ಶ್ರುತಿ

ಹೇಳುತ್ತಿದೆಯೆಂದು ಒಪ್ಪಬಹುದಲ್ಲವೇ? ಎಂಬ ಆಶಂಕೆಯನ್ನು 'ನಚ' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

ಜ್ಞಾನರೂಪನಾದ ಜೀವನೇ ವಿಭುವಾದ್ದರಿಂದ ವಿಷಯಪದಾರ್ಥಗಳ ಜೊತೆ ಸಂಬಂಧವನ್ನು ಹೊಂದುತ್ತಾನೆಂದು ಹೇಳಲು ಬರುವಾಗ ಇಂದ್ರಿಯವೃತ್ತಿಯನ್ನು ಏಕೆ ಒಪ್ಪಬೇಕು ? ಎಂಬ ಆಶಂಕೆಯನ್ನು ನಿರಾಕರಣೆ ಮಾಡಬೇಕೆಂಬ ಪ್ರಯೋಜನವು 'ಹೃದಿ ಹಿ' ಎಂಬ ವಾಕ್ಯದಲ್ಲಿರುತ್ತದೆಂದು ತಿಳಿಯಬೇಕು.

**भावदीपः – स्पष्टां समाख्यां चाऽऽह – अनादीति ।। द्वादशे गीताभाष्योक्ताग्निवेश्य-श्रुतेश्चेत्यर्थः । महत्परः महतः = महत्तत्वात् परः ।।६।।**

ಸ್ಪಷ್ಟವಾದ ಸಮಾಖ್ಯಾ ಪ್ರಮಾಣವನ್ನು 'ಅನಾದಿ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ಪರೋಹಿ ದೇವಃ' ಎಂಬುದು ಹನ್ನೆರಡನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಉಲ್ಲೇಖಿಸಿದ ಅಗ್ನಿವೇಶ್ಯಶ್ರುತಿಯೆಂದು ತಿಳಿಯಬೇಕು. 'ಮಹತಃ' ಎಂಬ ಪದಕ್ಕೆ ಮಹತ್ತತ್ವಕ್ಕಿಂತಲೂ ಉತ್ತಮವಾದದ್ದು ಎಂದರ್ಥ.

ಕಠ ಶ್ರುತಿಯಲ್ಲಿ 'ಮಹತಃ ಪರಂ' ಎಂಬುದಾಗಿ ಹೇಳಲಾಗಿದೆ. ಈ ಪದಗಳಿಗೆ ಅಗ್ನಿವೇಶ್ಯಶ್ರುತಿಯು ವಿಷ್ಣುಪರವಾಗಿ ವ್ಯಾಖ್ಯಾನ ಮಾಡಿದೆ. ಹೀಗಿರುವಾಗ 'ಮಹತಃ ಪರಂ' ಎಂಬ ಪದಗಳು ಪ್ರಕೃತಿವಾಚಕಗಳೆನ್ನಲು ಹೇಳಲು ಯಾವುದೇ ಆಧಾರವಿರುವುದಿಲ್ಲ.

## ಬ್ರಹ್ಮಮೀಮಾಂಸಾಶಾಸ್ತ್ರ

## ಸಂಪೂರ್ಣ ಪ್ರಕರಣದಲ್ಲಿ ಪ್ರಕೃತಿ ಅಪ್ರಸ್ತುತ

**सूत्रम् – ।। त्रयाणामेव चैवमुपन्यासः प्रश्नश्च ।। ७ ।।**

ಸೂತ್ರಾರ್ಥ - ಪಿತೃಸೌಮನಸ್ಯ, ಸ್ವರ್ಗ್ಯಾಗ್ನಿ, ಪರಮಾತ್ಮ ಈ ಮೂರರ ಬಗ್ಗೆ ಮಾತ್ರ ನಚಿಕೇತನು ಪ್ರಶ್ನೆ ಮಾಡಿರುತ್ತಾನೆ. ಆದ್ದರಿಂದ ಈ ಮೂರರ ವಿಷಯದಲ್ಲಿ ಮಾತ್ರ ಯಮದೇವರು ಉತ್ತರವನ್ನು ನೀಡಿರುತ್ತಾರೆ. ಇದನ್ನು ಬಿಟ್ಟು, ಪ್ರಕೃತಿಯ ಬಗ್ಗೆ ಪ್ರಸ್ತಾಪವೇ ಇರುವುದಿಲ್ಲ.

### ಸೂತ್ರದೀಪಿಕಾ

**सूत्रदीपिका**—युक्तिसमुच्चये चो यत इत्यर्थे च । एवशब्दः प्रकारत्रैविध्यपरामर्शकः। तथाच यतः एवं **त्रयाणामेव** पितृसौमनस्यस्वर्ग्याग्निपरमात्मरूपाणां त्रयाणामेव।

तद्विषयक एव प्रश्नः नचिकेतऋषिणा यमं प्रति कृतः । तेषामेवोपन्यासः प्रतिवचनं चात्र प्रकरणे दृश्यते । अतो नात्र प्रधानं प्रतिपाद्यमित्यर्थः ।।७।।

ಅರ್ಥ -- 'ಚ'ಶಬ್ದವು ಯುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ. ಯಾವ ಕಾರಣದಿಂದ ಎಂಬರ್ಥದಲ್ಲಿಯೂ ಕೂಡ ಇರುತ್ತದೆ. 'ಏವ' ಶಬ್ದವು ಪ್ರಕಾರತ್ರೈವಿಧ್ಯವನ್ನು ಪರಾಮರ್ಶ ಮಾಡುತ್ತಿದೆ. ಆದ್ದರಿಂದ ತ್ರಯಾಣಾಮೇವ = ಪಿತೃಸೌಮನಸ್ಯ, ಸ್ವರ್ಗ್ಯಾಗ್ನಿ, ಪರಮಾತ್ಮನ ರೂಪ ಈ ಮೂರರ ಬಗ್ಗೆ ಮಾತ್ರ, ಪ್ರಶ್ನಃ = ನಚಿಕೇತನಿಂದ ಪ್ರಶ್ನೆ ಇವುಗಳ ಬಗ್ಗೆ ಮಾತ್ರ, ಉಪನ್ಯಾಸಃ = ಯಮದೇವರಿಂದ ಉತ್ತರವು ಪ್ರಕರಣದಲ್ಲಿ ಪ್ರಸಕ್ತವಾಗಿದೆ. ಆದ್ದರಿಂದ ಪ್ರಕೃತಿಯು ಪ್ರತಿಪಾದ್ಯವಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

**भाष्यम् – त्रयाणामेव पितृसौमनस्यस्वर्ग्याग्निपरमात्मनां प्रश्न उपन्यासश्च ।**

ಅನುವಾದ - ತಂದೆಯ ಮನಶ್ಶಾಂತಿ, ಮೋಕ್ಷಪ್ರಾಪ್ತಿಗೆ ಕಾರಣವಾದ ನಾಚಿಕೇತಾಗ್ನಿ, ಮುಕ್ತನಿಯಾಮಕನಾದ ಪರಮಾತ್ಮ ಈ ಮೂರರ ಬಗ್ಗೆ ಪ್ರಶ್ನೆ ಹಾಗೂ ಉತ್ತರಗಳು ಉಪನಿಷತ್ತಿನಲ್ಲಿ ಪ್ರಸಕ್ತವಾಗಿವೆ. ಇಲ್ಲಿ ಪ್ರಕೃತ್ಯಾದಿತತ್ವಗಳಿಗೆ ಪ್ರಸಕ್ತಿಯೇ ಇಲ್ಲ. ಆದ್ದರಿಂದ ಪರಮಾತ್ಮನೇ ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯನಾಗಬೇಕು.

ಪ್ರತಿಪದಾರ್ಥ -- ಮತ್ತೊಂದು ಹೇತುವಿನಿಂದ 'ಅನಾದ್ಯನಂತಂ' ಎಂಬ ಶ್ರುತಿಯು ಪ್ರಕೃತ್ಯಾದಿಗಳನ್ನು ಪ್ರತಿಪಾದನೆ ಮಾಡುವುದಿಲ್ಲವೆಂದು ಸಮರ್ಥಿಸುತ್ತಿದ್ದಾರೆ –

ತ್ರಯಾಣಾಮೇವ = ಕಾಠಕದಲ್ಲಿ ಮೂರು ವಿಷಯಗಳ ಬಗ್ಗೆ, ಪಿತೃಸೌಮನಸ್ಯ = ತಂದೆಯ ಮನಶ್ಶಾಂತಿ, ಸ್ವರ್ಗ್ಯಾಗ್ನಿ = ಸಾಧನೆಗಾಗಿ, ನಾಚಿಕೇತಾಗ್ನಿ ಪರಮಾತ್ಮಾನಾಂ = ಪರಮಾತ್ಮ ಈ ಮೂರು ವಿಷಯದಲ್ಲಷ್ಟೇ, ಪ್ರಶ್ನ ಉಪನ್ಯಾಸಶ್ಚ = ಪ್ರಶ್ನೆ ಹಾಗೂ ಉತ್ತರಗಳು ಇರುತ್ತವೆ.

**भाष्यम् – 'अविज्ञातप्रार्थनं च प्रश्न इत्यभिधीयते' इति वचनान्न विरोधः ।।७।।**

ಅನುವಾದ - ತಿಳಿಯದ ಅರ್ಥವನ್ನು ಪ್ರಾರ್ಥಿಸುವುದೇ ಪ್ರಶ್ನೆ ಎನಿಸಿಕೊಳ್ಳುತ್ತದೆ. ಹೀಗೆ ಪ್ರಮಾಣವಿರುವುದರಿಂದ ಯಾವುದೇ ವಿರೋಧವಿಲ್ಲ.

ಪ್ರತಿಪದಾರ್ಥ -- ಹಾಗಾದರೆ ಪಿತೃಸೌಮನಸ್ಯವನ್ನು ನಚಿಕೇತನು ವರವನ್ನಾಗಿ ಕೇಳಬೇಕೇ ಹೊರತು, ಪ್ರಶ್ನೆಯನ್ನಾಗಿ ಕೇಳಬಾರದು. ಆದ್ದರಿಂದ ಪ್ರಾರ್ಥನೆಯನ್ನು ಪ್ರಶ್ನೆಯಲ್ಲಿ ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಹೀಗೆ ಉತ್ತರ ತಿಳಿಯಬೇಕು. –

ಅವಿಜ್ಞಾತಪ್ರಾರ್ಥನಂ = ತಿಳಿಯದ ಅರ್ಥದ ಬಗ್ಗೆ ಬೇಡುವಿಕೆಯು, ಪ್ರಶ್ನಃ = ಪ್ರಶೆಯು, ಇತಿ = ಹೀಗೆ, ಅಭಿಧೀಯತೇ = ಕರೆಸಿಕೊಳ್ಳುತ್ತದೆ. ಇತಿ ವಚನಾತ್ = ಹೀಗೆ ಪ್ರಮಾಣವಚನವಿರುವುದರಿಂದ, ನ ವಿರೋಧಃ = ಯಾವ ವಿರೋಧವೂ ಇಲ್ಲ.

ತತ್ವಪ್ರಕಾಶಿಕಾ

**हेत्वन्तरेणानाद्यनन्तादिवाक्येऽन्यस्यापि प्रतिपाद्यतां पराकुर्वत् सूत्रमुपन्यस्य व्याचष्टे – त्रयाणामेवेति ।।**

'ಅನಾದ್ಯನಂತಂ' ಎಂಬ ಶ್ರುತಿಯಲ್ಲಿ ಪರಮಾತ್ಮನಿಗಿಂತ ಇತರವಾದ ಪ್ರಕೃತಿಯೂ ಕೂಡ ಪ್ರತಿಪಾದ್ಯವಾಗಿವೆ ಎಂಬುದನ್ನು ಮತ್ತೊಂದು ಹೇತುವಿನಿಂದ ನಿರಾಕರಣೆ ಮಾಡಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ತ್ರಯಾಣಾಮೇವ' ಇತ್ಯಾದಿಯಾಗಿ.

**तत्वप्रकाशिका – न केवलमेतत् प्रकरणस्य वैष्णवत्वेन प्रधानस्याप्रतिपाद्यता किं त्वेतदुपनिषद्यपि पितृसौमनस्यादित्रयस्यैवोपन्यासाच्च ।**

ಈ ಪ್ರಕರಣವು ವಿಷ್ಣುಪ್ರಕರಣವಾದ್ದರಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಹೊರತು ಪ್ರಧಾನವು ಪ್ರತಿಪಾದ್ಯವಾಗುವುದಿಲ್ಲ ಎಂಬುದಷ್ಟೇ ಅಲ್ಲ. ಈ ಕಾಠಕೋಪನಿಷತ್ತಿನಲ್ಲಿ 'ಪಿತೃಸೌಮನಸ್ಯ' ಮೊದಲಾದ ಮೂರು ವಿಷಯಗಳಲ್ಲಿ ಪ್ರಶ್ನೆಯನ್ನು ಉಪನ್ಯಾಸ ಮಾಡಿರುವುದರಿಂದ ಪ್ರಕೃತಿಯ ವಿಷಯದಲ್ಲಿ ಪ್ರಶ್ನೆಯೇ ಇರುವುದಿಲ್ಲ. ಆದ್ದರಿಂದಲೂ ಪ್ರಕೃತಿಯು ಪ್ರತಿಪಾದ್ಯವಾಗುವುದಿಲ್ಲವೆಂದು ತಿಳಿಯಬೇಕು.

**तत्वप्रकाशिका – तदेव कुतः । तत्त्रयविषय एव नचिकेतसः प्रश्नात् अपृष्टस्य चोपन्यासायोगादिति भावः ।**

ಪ್ರಕೃತಿಯ ವಿಷಯದಲ್ಲಿ ಪ್ರಶ್ನೆಯಿರುವುದಿಲ್ಲವೆಂದು ಹೇಗೆ ನಿರ್ಣಯಿಸುತ್ತೀರಿ? ಎಂದರೆ ನಚಿಕೇತನು ಮೂರು ವಿಷಯದಲ್ಲಿ ಮಾತ್ರ ಪ್ರಶ್ನೆಯನ್ನು ಮಾಡಿದ್ದಾನೆ. ಯಾವ ವಿಷಯದಲ್ಲಿ ನಚಿಕೇತನು ಪ್ರಶ್ನಿಸಿಲ್ಲವೋ, ಆ ವಿಷಯದಲ್ಲಿ ಉತ್ತರವನ್ನು ಯಮದೇವರು ಹೇಳುವುದೂ ಕೂಡ ತಪ್ಪಾಗುತ್ತದೆ ಎಂದು ಸಿದ್ಧಾಂತಿಗಳ ಅಭಿಪ್ರಾಯ.

**तत्वप्रकाशिका – त्रयाणामेवोपन्यास इत्युक्ते त्रयेऽपि प्रधानं किं न स्यादिति शङ्कानिरासाय तत्प्रकारं दर्शयन्नेवमित्याह, तदेव व्याचख्यौ – पितृसौमनस्येत्यादिना ।।**

ನಚಿಕೇತನು ಮಾಡಿರುವ ಮೂರು ಬಗೆಯ ಪ್ರಶ್ನೆಗಳ ಮಧ್ಯದಲ್ಲಿ ಪ್ರಕೃತಿಯು ಏಕೆ ಸೇರಿರಬಾರದು? ಎಂಬ ಆಶಂಕೆಯನ್ನು ನಿರಾಕರಣೆ ಮಾಡುವುದಕ್ಕಾಗಿ ಪ್ರಶ್ನೆಗಳ ಪ್ರಕಾರವನ್ನು

ತೋರಿಸಲು ಸೂತ್ರದಲ್ಲಿ 'ಏವಂ' ಎಂದು ಹೇಳಿದರು. ಸೂತ್ರದಲ್ಲಿರುವ 'ಏವಂ' ಎಂಬ ಪದವನ್ನು ಭಾಷ್ಯದಲ್ಲಿ 'ಪಿತೃಸೌಮನಸ್ಯ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**तत्वप्रकाशिका – 'येयं प्रेते विचिकित्सा' इत्यादिना मृतजीवस्यास्तित्वादौ तृतीयप्रश्नस्य प्रवृत्तत्वात् कथं परमात्मप्रश्न इति शङ्का तद् भाष्य एव परिहृता ।**

'ಯೇಯಂ ಪ್ರೇತೇ ವಿಚಿಕಿತ್ಸಾ' ಇತ್ಯಾದಿ ವಾಕ್ಯದಲ್ಲಿ ಮರಣವನ್ನು ಹೊಂದಿರುವ ಜೀವನು ಇದ್ದಾನೋ ಇಲ್ಲವೋ ? ಎಂಬ ಮೂರನೆಯ ಪ್ರಶ್ನೆಯು ಹೊರಟಿರುವುದರಿಂದ ಪರಮಾತ್ಮ-ವಿಷಯಕವಾದ ಪ್ರಶ್ನೆ ಎಂದು ಹೇಗೆ ಹೇಳುತ್ತೀರಿ? ಈ ಆಶಂಕೆಗೆ ಕಾಠಕೋಪನಿಷತ್ತಿನ ಭಾಷ್ಯದಲ್ಲಿಯೇ ಪರಿಹಾರವನ್ನು ಹೇಳಿರುತ್ತಾರೆ.

**तत्वप्रकाशिका – ननु पितृसौमनस्यं वरत्वेन प्रार्थ्यतेऽतः कथं प्रार्थनं प्रश्न इत्यत आह – अविज्ञातेति ।।**

ನಚಿಕೇತನು ತನ್ನ ತಂದೆಯ ಸೌಮನಸ್ಯವನ್ನು ವರವನ್ನಾಗಿ ಯಾಚನೆ ಮಾಡಿರುತ್ತಾನೆ. ಈ ಯಾಚನೆಯನ್ನು ಪ್ರಶ್ನೆ ಎಂದು ಹೇಗೆ ಹೇಳುತ್ತೀರಿ? ಎಂಬ ಆಶಂಕೆಗೆ 'ಅವಿಜ್ಞಾತ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**तत्वप्रकाशिका – 'यत् प्राप्स्यते न वेत्यविज्ञातं तत् प्रार्थनमपि प्रश्न इत्यभिधीयते' इति वचनान्न प्रार्थनस्यापि प्रश्नत्वोक्तिर्विरुद्धेत्यर्थः ।। ७ ।।**

'ಯತ್ ಪ್ರಾಪ್ಸ್ಯತೇ ನ ವೇತ್ಯವಿಜ್ಞಾತಂ ತತ್ ಪ್ರಾರ್ಥನಮಪಿ ಪ್ರಶ್ನ ಇತ್ಯಭಿಧೀಯತೇ' 'ವಸ್ತುವು ನಮಗೆ ಪ್ರಾಪ್ತವಾಗುತ್ತದೋ ಇಲ್ಲವೋ ಎಂಬ ವಿಷಯದಲ್ಲಿ ತಿಳುವಳಿಕೆ ಇಲ್ಲದಿದ್ದಾಗ ಅಂತಹ ವಸ್ತುವಿನ ಬಗ್ಗೆ ನಾವು ಮಾಡುವಂತಹ ಪ್ರಾರ್ಥನೆಯೂ ಕೂಡ ಪ್ರಶ್ನೆಯೆಂದು ಕರೆಸಿಕೊಳ್ಳುತ್ತದೆ' ಎಂಬ ವಚನವಿರುವುದರಿಂದ ಪ್ರಾರ್ಥನೆಯನ್ನೇ ಪ್ರಶ್ನೆಯೆಂದು ಇಲ್ಲಿ ವಿವಕ್ಷಿಸಲಾಗಿದೆ. ಆದ್ದರಿಂದ ಯಾವ ವಿರೋಧಗಳಿಗೂ ಅವಕಾಶವಿರುವುದಿಲ್ಲ.

## ಭಾವದೀಪ

आद्यश्चो युक्तिसमुच्चय इति मत्वाऽर्थमाह – **न केवलमिति ।।**

ಸೂತ್ರದಲ್ಲಿ ಮೊದಲನೆಯ "ಚ" ಎಂಬ ಶಬ್ದವು ಮತ್ತೊಂದು ಯುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ. ಅದನ್ನು ಟೀಕೆಯಲ್ಲಿ 'ನ ಕೇವಲಂ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**भावदीपः – पितृसौमनस्यादीति ।।** वीतमन्युस्त्वां ददृशिवान् मृत्युमुखात् प्रमुक्तमिति । स्वर्ग्यमग्निं नचिकेतः प्रजानन्निति । देवैरत्रापि विचिकित्सितं किलेत्येवं रूपस्य पितृसौमनस्य स्वर्ग्याग्निपरमात्मरूपत्रयस्येत्यर्थः ।

ಟೀಕೆಯಲ್ಲಿ 'ಪಿತೃಸೌಮನಸ್ಯಾದಿ' ಎಂಬ ಪದವಿದೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು - "ವೀತಮನ್ಯುಸ್ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಮ್" "ಎಲೈ ನಚಿಕೇತನೇ! ನಾನು ಕಳುಹಿಸಿದ ನಿನ್ನನ್ನು ನೋಡಿದಾಗ ನಿನ್ನ ತಂದೆಯು ಕೋಪ ರಹಿತನಾಗುವನು. ಬೇರೆ ಊರಿನಿಂದ ಬಂದರೆ ನಿನ್ನನ್ನು ಹೇಗೆ ಗುರುತಿಸುತ್ತಾನೋ ಹಾಗೆ ಗುರುತಿಸುವನು, ಮತ್ತು ರಾತ್ರಿಯಕಾಲ ಸುಖವಾಗಿ ನಿದ್ರಿಸುವನು". ಹೀಗೆ "ಪಿತೃಸೌಮನಸ್ಯ" ಎಂಬ ಮೊದಲನೆಯ ವರವನ್ನು ಯಮನು ನಚಿಕೇತನಿಗೆ ನೀಡಿದನು

"ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್" "ನಚಿಕೇತನೇ ಸ್ವರ್ಗಕ್ಕೆ ಸಾಧನವಾದ ಅಗ್ನಿಯಲ್ಲಿರುವ ಅಗ್ನಿ ಎಂಬ ಭಗವಂತನನ್ನು ನಾನು ಚೆನ್ನಾಗಿ ತಿಳಿದಿರುವೆನು. ನಿನಗೆ ಈಗ ಅವನನ್ನು ಉಪದೇಶಿಸುವೆನು. ಅಗ್ನಿ ನಾಮಕನಾದ ಈ ಪರಮಾತ್ಮನು ಶಾಶ್ವತವಾದ ಮೋಕ್ಷವನ್ನು ನೀಡುವವನಾಗಿದ್ದಾನೆ. ಎಲ್ಲರ ಹೃದಯಗುಹೆಯಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಇವನು ಸಮಸ್ತ ಲೋಕಗಳಿಗೆ ಆಧಾರನಾಗಿದ್ದಾನೆಂದು ತಿಳಿ." ಹೀಗೆ ನಚಿಕೇತನಿಗೆ ಸ್ವರ್ಗ್ಯಾಗ್ನಿಯನ್ನು ಉಪದೇಶಿಸಿ ಎರಡನೆಯ ವರವನ್ನು ನೀಡಿದನು.

"ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ" "ಮುಕ್ತಾಮುಕ್ತ ನಿಯಾಮಕನಾದ ಭಗವಂತನ ಸ್ವರೂಪವನ್ನು ಸುಲಭವಾಗಿ ತಿಳಿಯಲು ಸಾಧ್ಯವಿಲ್ಲ ಆದ್ದರಿಂದ ದೇವತೆಗಳೂ ಕೂಡ ಈ ವಿಷಯದಲ್ಲಿ ಸಂದೇಹವನ್ನು ಹೊಂದಿದ್ದಾರೆ. ಹೀಗೆ ನೀನೇ ಹೇಳಿರುವಿಯಷ್ಟೆ. ಆದ್ದರಿಂದ ನನಗೆ ಮುಕ್ತನಿಯಾಮಕನಾದ ಭಗವಂತನ ಬಗ್ಗೆ ಉಪದೇಶ ಮಾಡು". ಹೀಗೆ ನಚಿಕೇತನು ಯಮನ ಬಳಿ ಮುಕ್ತನಿಯಾಮಕನಾದ ಪರಮಾತ್ಮನ ಬಗ್ಗೆ ಮೂರನೆಯ ವರವನ್ನು ಪ್ರಾರ್ಥಿಸುತ್ತಾನೆ.

**भावदीपः –** उपन्यासोक्त्यैव प्रधानस्याप्रतिपाद्यतासिद्धौ प्रश्नोक्तिः किमर्थेत्यत आह – **तदेव कुत इति ।।**

ಕಾಠಕೋಪನಿಷತ್‌ನಲ್ಲಿ ಪಿತೃಸೌಮನಸ್ಯ, ಸ್ವರ್ಗ್ಯಾಗ್ನಿ ಮತ್ತು ಪರಮಾತ್ಮ. ಈ ಮೂರು ವಿಷಯದ ಬಗ್ಗೆ ಪ್ರಸ್ತಾಪ ಬಂದಿದೆ ಎಂದು ಹೇಳಿದರೆ ಸಾಕು. ಪ್ರಕೃತಿಯು ಪ್ರತಿಪಾದ್ಯವಲ್ಲವೆಂಬುದು ಸಿದ್ಧವಾಗುತ್ತದೆ. ಪುನಃ ಪ್ರಕೃತಿಯ ವಿಷಯದಲ್ಲಿ ಪ್ರಶ್ನೆಯನ್ನು ಮಾಡಿಲ್ಲ ಎಂಬುದನ್ನು ತಿಳಿಸಲು ಸೂತ್ರದಲ್ಲಿ 'ಪ್ರಶ್ನಃ' ಎಂಬ ಪದವನ್ನು ಏಕೆ ಪ್ರಯೋಗಿಸಿದರು ? ಎಂಬ ಪ್ರಶ್ನೆಗೆ 'ತದೇವ ಕುತಃ' ಎಂಬ ಮಾತಿನಿಂದ ಉತ್ತರಿಸುತ್ತಿದ್ದಾರೆ.

**भावदीपः –** उपन्यासस्य त्रितयविषयकत्वसमर्थनं प्रश्नोक्तेः फलमिति दर्शितम्।

ಮೂರು ವಿಷಯವನ್ನಷ್ಟೆ ಉಪನಿಷತ್ತು ಪ್ರತಿಪಾದನೆ ಮಾಡುತ್ತಿದೆ ಎಂಬ ಸಮರ್ಥನೆಯು ಪ್ರಶ್ನೋಕ್ತಿಯ ಫಲವಾಗಿದೆ ಎಂದು ಹೇಳಿದಂತಾಯಿತು.

ಆನುಮಾನಿಕಾಧಿಕರಣ (೧-೪-೧)

**भावदीपः** – पितृसौमनस्येत्यादिभाष्यस्य व्यावर्त्योक्तिपूर्वं व्याख्येयं दर्शयति – त्रयाणामिति ।।

'ಪಿತೃಸೌಮನಸ್ಯ' ಇತ್ಯಾದಿ ಭಾಷ್ಯದಿಂದ ವ್ಯಾವೃತ್ತವಾದುದ್ದನ್ನು ತಿಳಿಸುವ ಮೂಲಕ ವ್ಯಾಖ್ಯೇಯವನ್ನು ತೋರಿಸುತ್ತಿದ್ದಾರೆ 'ತ್ರಯಾಣಾಮ್' ಇತ್ಯಾದಿ ಟೀಕಾಮಾತಿನಿಂದ

**भावदीपः** – 'सुमना यथा स्यात् वीतमन्युः' इति 'स त्वमग्निं स्वर्ग्यमध्येषि मृत्यो प्रब्रूहि तम्' इति 'येयं प्रेते विचिकित्सा मनुष्ये' इति त्रयविषय एवेत्यर्थः । तद्भाष्ये काठकभाष्ये ।

"ಸುಮನಾ ಯಥಾ ಸ್ಯಾದ್ವೀತಮನ್ಯುಃ" "ಯಮನೇ! ನನ್ನ ತಂದೆಯು ನನ್ನ ವಿಷಯದಲ್ಲಿ ಕೋಪವನ್ನು ಬಿಟ್ಟು ಪ್ರಸನ್ನ ಮನಸ್ಕನಾಗಬೇಕು." ಇದು ಮೊದಲನೆಯ ವರ.

"ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಮ್" "ಯಮನೇ! ಸ್ವರ್ಗಕ್ಕೂ ವಿಷ್ಣುಲೋಕಕ್ಕೂ ಕಾರಣನಾದ ಅಗ್ನಿಯಲ್ಲಿರುವ ವಿಷ್ಣುವನ್ನು ನೀನು ಚೆನ್ನಾಗಿ ತಿಳಿದಿರುವಿ. ಅದನ್ನು ನನಗೆ ಉಪದೇಶಿಸು". ಇದು ಎರಡನೆಯ ವರ.

"ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ" "ಯಮನೇ! ಮುಕ್ತನಾದ ಮನುಷ್ಯನಲ್ಲಿ ಭಗವಂತನು ನಿಯಾಮಕನಾಗಿ ಇರುತ್ತಾನೆಂದು ಜ್ಞಾನಿಗಳು ಹೇಳುತ್ತಾರೆ. ಅಂಥ ಮುಕ್ತ ನಿಯಾಮಕನಾದ ಭಗವಂತನ ಸ್ವರೂಪವನ್ನು ನನಗೆ ತಿಳಿಸು". ಇದು ಮೂರನೆಯ ವರ.

ಹೀಗೆ ನಚಿಕೇತನು ಯಮನ ಬಳಿ ಮೂರರ ಬಗ್ಗೆ ಮಾತ್ರ ಪ್ರಶ್ನೆಯನ್ನು ಮಾಡಿರುತ್ತಾನೆ ಹೊರತು ಪ್ರಕೃತಿಯ ಬಗ್ಗೆ ಪ್ರಶ್ನೆ ಮಾಡಿರುವುದೇ ಇಲ್ಲ ಎಂದು ತಿಳಿಯಬೇಕು.

'ತದ್‌ಭಾಷ್ಯೇ' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಕಾಟಕಭಾಷ್ಯದಲ್ಲಿ ಎಂದು ಇದರ ಅರ್ಥ.

**भावदीपः** – प्रेते मुक्ते मनुष्ये नियामकत्वेन भगवानस्तीत्यादिना 'येयं प्रेते' इति वाक्यं मुक्तविषयं व्याख्याय नच मृत्वा यमं प्राप्तस्य नचिकेतसो मृतोऽस्ति न वेति संशयोऽस्तीत्यादीना परिहृतेत्यर्थः।।

ಪ್ರೇತೇ = ಮುಕ್ತನಾದ ಮನುಷ್ಯನಲ್ಲಿ, ನಿಯಾಮಕನಾಗಿ ಭಗವಂತನು ಇರುತ್ತಾನೆ ಇತ್ಯಾದಿಯಾಗಿ 'ಯೇಯಂ ಪ್ರೇತೇ' ಎಂಬ ಉಪನಿಷತ್ತಿನ ವಾಕ್ಯವನ್ನು ಮುಕ್ತನಿಯಾಮಕನಾದ ಪರಮಾತ್ಮವಿಷಯಕವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅನಂತರ ಮರಣವನ್ನು ಹೊಂದಿ ಯಮನ ಬಳಿ ನಿಂತಿರುವ ನಚಿಕೇತನಿಗೆ ಮರಣವಿದೆಯೋ ಇಲ್ಲವೊ ? ಎಂಬ ಸಂಶಯವು ಪ್ರಾಪ್ತವಾದರೆ 'ಅಸ್ತಿ' ಇತ್ಯಾದಿ ವಾಕ್ಯದಿಂದ ಪರಿಹರಿಸಿದ್ದಾರೆ.

**भावदीपः – अविज्ञातमिति ।। प्राप्स्यत इति वा न वेति वा यदनिर्णीतमित्यर्थः ।।७।।**

ಟೀಕೆಯಲ್ಲಿ ಹೇಳಿರುವ 'ಅವಿಜ್ಞಾತಮ್' ಎಂಬ ಪದಕ್ಕೆ 'ವಸ್ತುವು ನಮಗೆ ಪ್ರಾಪ್ತವಾಗುತ್ತದೋ ಇಲ್ಲವೊ ಎಂಬ ತಿಳುವಳಿಕೆಯನ್ನು ಹೊಂದದ ವಿಷಯದಲ್ಲಿ' ಎಂದರ್ಥ.

## ಬ್ರಹ್ಮಮೀಮಾಂಸಾಶಾಸ್ತ್ರ

## ಪರಮಾತ್ಮನು ಮಹತ್ ಶಬ್ದದಿಂದ ಪ್ರತಿಪಾದ್ಯನಾದಂತೆ ಅವ್ಯಕ್ತ ಶಬ್ದದಿಂದಲೂ ಪ್ರತಿಪಾದ್ಯ

**सूत्रम् – ।। महद्वच्च ।। ८ ।।**

ಸೂತ್ರಾರ್ಥ - ಪರಮಾತ್ಮನು ಹೇಗೆ 'ಮಹಾಂತಂ ವಿಭುಮಾತ್ಮಾನಂ' ಎಂಬಲ್ಲಿರುವ 'ಮಹತ್' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಅವ್ಯಕ್ತಾದಿ ಶಬ್ದಗಳಿಂದಲೂ ಕೂಡ ಪ್ರತಿಪಾದ್ಯನಾಗಿದ್ದಾನೆ.

## ಸೂತ್ರದೀಪಿಕಾ

**सूत्रदीपिका** – चः दार्ष्टान्तिकसमुच्चये । 'महान्तं विभुमात्मानम्' इत्यादिवाक्यगतमहच्छब्दस्य यथा विष्णुपरत्वमेव न महत्तत्वपरत्वं तद्वदव्यक्तादिशब्दस्यापीत्यर्थः ।।८।।

ಅರ್ಥ -- 'ಚ' ಶಬ್ದವು ದಾರ್ಷ್ಟಾಂತಿಕವನ್ನು ಸಮುಚ್ಚಯ ಮಾಡುತ್ತಿದೆ. 'ಮಹಾಂತಂ ವಿಭುಮಾತ್ಮಾನಮ್' ಎಂಬ ವಾಕ್ಯದಲ್ಲಿರುವ 'ಮಹತ್' ಶಬ್ದವು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ, ಹೊರತು ಮಹತ್ತತ್ವವನ್ನು ಪ್ರತಿಪಾದನೆ ಮಾಡುವುದಿಲ್ಲ. ಅದರಂತೆ ಅವ್ಯಕ್ತಶಬ್ದವೂ ಕೂಡ ಅವ್ಯಕ್ತತತ್ವವನ್ನು ಪ್ರತಿಪಾದನೆ ಮಾಡುವುದಿಲ್ಲ. ಹೊರತು, ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ.

## ಬ್ರಹ್ಮಸೂತ್ರಭಾಷ್ಯ

**भाष्यम् – यथा महच्छब्दो महत्तत्वे प्रसिद्धोऽपि परममहत्त्वात् परमात्मन एव मुख्यः एवमितरेऽपि ।।८।।**

ಅನುವಾದ - 'ಮಹತ್' ಎಂಬ ಶಬ್ದವು ಮಹತ್ತತ್ವದಲ್ಲಿ ಪ್ರಸಿದ್ಧವಾಗಿದ್ದರೂ 'ಮಹಾಂತಂ ವಿಭುಮಾತ್ಮಾನಂ' ಎಂಬಲ್ಲಿ ಪರಮ ಮಹತ್ವ ಎಂಬ ಗುಣವು ಶ್ರುತವಾಗಿರುವುದರಿಂದ, ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೋ, ಅದರಂತೆ ಅವ್ಯಕ್ತಾದಿ ಶಬ್ದಗಳೂ ಕೂಡ ಪರಮಾತ್ಮನಲ್ಲಿಯೇ ಮುಖ್ಯವಾಗಿ ಸಮನ್ವಯಗೊಳ್ಳುತ್ತವೆ.

ಪ್ರತಿಪದಾರ್ಥ -- ಅವ್ಯಕ್ತಾದಿಶಬ್ದಗಳು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತವೆಂದು ಹೇಳಿದ್ದು ತಪ್ಪು. ಪ್ರಧಾನಾದಿಗಳಲ್ಲಿ ಈ ಶಬ್ದವು ಪ್ರತಿಪಾದ್ಯವಾಗಿವೆ. ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತವು ಭಗವಂತನಲ್ಲಿ ಮುಖ್ಯವಾಗಿರುವುದರಿಂದ ಅವನಲ್ಲಿಯೇ ಮುಖ್ಯವಾಗಿ ಸಮನ್ವಯಗೊಳ್ಳುತ್ತದೆಂದು ಹೇಳಬಾರದು. ಯಾವ ಶಬ್ದವು ಯಾರಲ್ಲಿ ಪ್ರಸಿದ್ಧವಾಗಿದೆಯೋ, ಅದು ಅವರಲ್ಲಿ ಮುಖ್ಯವಾಗಿರುತ್ತದೆ. ಯಾವ ಶಬ್ದದ ಪ್ರವೃತ್ತಿನಿಮಿತ್ತವು ಎಲ್ಲಿ ಮುಖ್ಯವಾಗಿರುತ್ತದೋ, ಆ ಶಬ್ದವು ಅಲ್ಲಿ ಮುಖ್ಯವಾಗಿರುತ್ತದೆಂಬುದು ಎಲ್ಲಿಯೂ ಕೂಡ ಕಂಡಿಲ್ಲವಲ್ಲ ? ಎಂಬ ಪ್ರಶ್ನೆಗೆ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ –

ಯಥಾ = ಯಾವರೀತಿಯಾಗಿ, ಮಹತ್‌ಶಬ್ದಃ = ಮಹತ್ ಎಂಬ ಶಬ್ದವು, ಮಹತ್ತತ್ವೇ = ಮಹತ್ತತ್ವದಲ್ಲಿ, ಪ್ರಸಿದ್ಧೋಽಪಿ = ಪ್ರಸಿದ್ಧವಾಗಿದ್ದರೂ, ಪರಮಮಹತ್ವಾತ್ = ಪರಮ ಮಹತ್ವವನ್ನು ಹೊಂದಿರುವುದರಿಂದ, ಪರಮಾತ್ಮನಃ ಏವ = ಪರಮಾತ್ಮನಲ್ಲಿಯೇ, ಮುಖ್ಯಃ = ಮುಖ್ಯವಾಗಿರುತ್ತದೋ, ಏವಂ = ಅದೇ ರೀತಿಯಾಗಿ, ಇತರೇಽಪಿ = ಅವ್ಯಕ್ತಾದಿಶಬ್ದಗಳೂ ಕೂಡ ಪರಮಾತ್ಮನಲ್ಲಿಯೇ ಮುಖ್ಯವಾಗಿರುತ್ತವೆ.

## ತತ್ವಪ್ರಕಾಶಿಕಾ

**यदुक्तं विष्णोरेव मुख्यतोऽव्यक्तादिशब्दवाच्यत्वमिति तदयुक्तम् । अव्यक्तादिशब्दानां प्रधानादावेव प्रसिद्धत्वात् ।**

'ಅವ್ಯಕ್ತ' ಮೊದಲಾದ ಶಬ್ದಗಳಿಂದ ಮಹಾವಿಷ್ಣುವೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ ಎಂದು ಏನು ಸಮರ್ಥನೆ ಮಾಡಿದರೋ, ಅದು ಸರಿಯಲ್ಲ. ಏಕೆಂದರೆ 'ಅವ್ಯಕ್ತ' ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲೇ ಪ್ರಸಿದ್ಧವಾಗಿರುತ್ತವೆ.

**तत्वप्रकाशिका – नच वाच्यं शब्दप्रवृत्तिनिमित्तस्येश्वरे मुख्यत्वेन तत्र शब्दानां मुख्यत्वमुक्तमिति ।**

'ಅವ್ಯಕ್ತ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಅತಿಸೂಕ್ಷ್ಮತ್ವವು ಈಶ್ವರನಲ್ಲೇ ಮುಖ್ಯವಾಗಿರುವುದರಿಂದ ಅವನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡಬೇಕಲ್ಲವೇ? ಎಂದು ಪ್ರಶ್ನಿಸಬಾರದು.

ಪರಿಪೂರ್ಣಚಂದ್ರಿಕಾ

**तत्वप्रकाशिका – नहि यत्र शब्दः प्रसिद्धस्तत्रामुख्यो मुख्यतः प्रवृत्तिनिमित्तवति मुख्य इति दृष्टचरमित्याशङ्कां परिहरत् सूत्रमुपन्यस्य व्याचष्टे – महद्वचेति ।।**

ಶಬ್ದವು ಎಲ್ಲಿ ಪ್ರಸಿದ್ಧವಾಗಿರುತ್ತದೋ, ಅಲ್ಲಿ ಅಮುಖ್ಯವಾಗಿರುತ್ತದೆ. ಶಬ್ದವು 'ಎಲ್ಲಿ ಮುಖ್ಯವಾದ ಪ್ರವೃತ್ತಿನಿಮಿತ್ತವಿರುತ್ತದೋ ಅಲ್ಲಿ ಮುಖ್ಯವಾಗಿರುತ್ತದೆಂಬುದು' ಎಲ್ಲಿಯೂ ಕಂಡಿಲ್ಲ. ಹಾಗೇನಾದರೂ ಪ್ರವೃತ್ತಿನಿಮಿತ್ತವು ಮುಖ್ಯವಾಗಿದ್ದಲ್ಲೇ ಶಬ್ದವು ಮುಖ್ಯವಾಗಿ ಸಮನ್ವಯವಾಗುತ್ತದೆಂದು ಕಂಡಿದ್ದಲ್ಲಿ ನಿಮ್ಮ ಸಿದ್ಧಾಂತವು ಸಮಂಜಸವಾಗುತ್ತಿತ್ತು. ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಮಹದ್ವಚ್ಚ' ಇತ್ಯಾದಿಯಾಗಿ.

**तत्वप्रकाशिका – चशब्दो दार्ष्टान्तिकसमुच्चयार्थः । युक्तमेवाव्यक्तादिशब्दानां मुख्यतः परमात्मवाचित्वम् । तत्प्रवृत्तिनिमित्तस्य तत्र मुख्यत्वात् ।**

'ಮಹದ್ವಚ್ಚ' ಎಂಬ ಸೂತ್ರದಲ್ಲಿರುವ 'ಚ'ಶಬ್ದವು ದಾರ್ಷ್ಟಾಂತಿಕವಾದ ಅವ್ಯಕ್ತಾದಿಶಬ್ದಗಳನ್ನು ಸಮುಚ್ಚಯವನ್ನು ಮಾಡುತ್ತಿದೆ. ಯಾವ ವಿಷಯದಲ್ಲಿ ದೃಷ್ಟಾಂತವನ್ನು ಸೂತ್ರಕಾರರು ನೀಡಿದ್ದಾರೋ, ಅದರಂತೆ ದಾರ್ಷ್ಟಾಂತಿಕದಲ್ಲಿಯೂ ಸಮನ್ವಯವನ್ನು ಮಾಡಿಕೊಳ್ಳಬೇಕು. ಅವ್ಯಕ್ತ ಮೊದಲಾದ ಶಬ್ದಗಳು ಮುಖ್ಯವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು ಹಿಂದಿನ ಸೂತ್ರಗಳಲ್ಲಿ ಸಮರ್ಥನೆ ಮಾಡಿದ್ದು ಯುಕ್ತವೇ ಆಗಿದೆ. ಏಕೆಂದರೆ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ವಿಷ್ಣುವಿನಲ್ಲೇ ಮುಖ್ಯವಾಗಿರುತ್ತವೆ.

**तत्वप्रकाशिका – न चान्यत्रप्रसिद्धत्वविरोधः । 'महान्तं विभुम्' इत्यादौ श्रुतमहच्छब्दस्य महत्तत्वे प्रसिद्धत्वेऽपि तत्प्रवृत्तिनिमित्तस्य हरौ मुख्यत्वेन मुख्यत्वोपपत्तिरिति भावः ।**

ಪ್ರಕೃತ್ಯಾದಿಗಳಲ್ಲಿ ಅವ್ಯಕ್ತಶಬ್ದದ ಪ್ರಸಿದ್ಧಿ ಇದೆಯಲ್ಲವೇ? ಎಂಬುದಾಗಿ ಪ್ರಸಿದ್ಧಿಯ ವಿರೋಧವನ್ನು ಆಕ್ಷೇಪಿಸಬಾರದು. ಏಕೆಂದರೆ 'ಮಹಾಂತಂ ವಿಭುಮಾತ್ಮಾನಂ' ಎಂಬಲ್ಲಿರುವ ಮಹತ್ ಶಬ್ದವು ಮಹತ್ತತ್ವದಲ್ಲಿ ಪ್ರಸಿದ್ಧವಾಗಿದ್ದರೂ ಆ ಶಬ್ದದ ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿಯೇ ಮುಖ್ಯವಾಗಿರುತ್ತದೆ. ಆದ್ದರಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿರುತ್ತಾನೆ.

**तत्वप्रकाशिका – नच मन्तव्यं प्रवृत्तिनिमित्ताधिक्येन मुख्यतः शब्दवाच्यत्वाभावेऽपि दृष्टान्तोऽस्ति । अतिसहनवति पुरुषे सिंहशब्दस्यामुख्यत्वादिति ।**

ಪ್ರವೃತ್ತಿನಿಮಿತ್ತವು ಎಲ್ಲಿ ಮುಖ್ಯವಾಗಿರುತ್ತದೋ, ಶಬ್ದವು ಅದನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡಬೇಕು ಎಂಬ ವಿಷಯದಲ್ಲಿ ದೃಷ್ಟಾಂತವಿರುವುದಿಲ್ಲ. ಉದಾಹರಣೆ - ಅತ್ಯಂತ ಸಹನವುಳ್ಳ ಪುರುಷನಲ್ಲಿ ಸಿಂಹ ಎಂಬ ಶಬ್ದವನ್ನು ಅಮುಖ್ಯವಾಗಿಯೇ ಪ್ರಯೋಗಿಸುತ್ತಾರೆ.

**तत्वप्रकाशिका – न ह्यस्माभिः प्रवृत्तिनिमित्ताधिक्यमात्रेण शब्दस्य मुख्यतः परमात्मवाचित्वमुच्यते किं तु सिद्धे परमात्मवाचित्वे मुख्यत्वमात्रस्य तेन साधनादिति ।। ८ ।।**

ನಾವು ಪ್ರವೃತ್ತಿನಿಮಿತ್ತದ ಆಧಿಕ್ಯದಿಂದ ಶಬ್ದವು ಮುಖ್ಯವಾಗಿ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿದೆ ಎಂದಷ್ಟೇ ಹೇಳುತ್ತಿಲ್ಲ ಹೊರತಾಗಿ, ಶಬ್ದವು ಪರಮಾತ್ಮ ಪ್ರತಿಪಾದಕವಾಗಿದೆಯೆಂದು ಸಿದ್ಧವಾಗಿರುವುದರಿಂದ ಅಂತಹ ಪರಮಾತ್ಮನಲ್ಲಿ ಶಬ್ದಗಳು ಮುಖ್ಯವಾಗಿವೆ ಎಂದಷ್ಟೇ ಸಾಧನೆ ಮಾಡುತ್ತಿದ್ದೇವೆ. ಆದ್ದರಿಂದ ಯಾವ ವಿರೋಧಕ್ಕೂ ಅವಕಾಶವಿರುವುದಿಲ್ಲ.

## ಭಾವದೀಪ

प्रवृत्तिनिमित्तस्येति ।। सूक्ष्मं तु इत्यत्रोक्तस्येत्यर्थः ।

ಟೀಕೆಯಲ್ಲಿ 'ಶಬ್ದ ಪ್ರವೃತ್ತಿನಿಮಿತ್ತಸ್ಯ' ಎಂಬ ಪದದಿಂದ ಅವ್ಯಕ್ತಾದಿಶಬ್ದಗಳ ಪ್ರವೃತ್ತಿನಿಮಿತ್ತಗಳು ಪರಮಾತ್ಮನಲ್ಲಿ ಮುಖ್ಯವಾಗಿವೆಯೆಂದು ಹೇಳಿದ್ದಾರೆ. "ಸೂಕ್ಷ್ಮಂತು ತದರ್ಹತ್ವಾತ್" ಎಂಬ ಸೂತ್ರದಲ್ಲಿ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಮುಖ್ಯವಾಗಿದೆ ಎಂದು ಹೇಳಿದ್ದಾರೆ.

**भावदीपः – निमित्तस्य शब्दशक्तिनियामकत्वेन तस्य मुख्यत्वे शब्दस्यापि** मुख्यत्वनियमादिति भावः ।

ಶಬ್ದದ ಪ್ರವೃತ್ತಿನಿಮಿತ್ತವು ಶಬ್ದಶಕ್ತಿಗೆ ನಿಯಾಮಕವಾಗಿರುತ್ತದೆ. ಪರಮಾತ್ಮನಲ್ಲಿ ಅಂಥ ಪ್ರವೃತ್ತಿನಿಮಿತ್ತವು ಮುಖ್ಯವಾದರೆ ಶಬ್ದವೂ ಕೂಡ ಮುಖ್ಯವಾಗುತ್ತದೆ ಎಂಬ ನಿಯಮವಿದೆ. ಪ್ರಕೃತ ಅವ್ಯಕ್ತ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವು ಪರಮಾತ್ಮನಲ್ಲಿ ಮುಖ್ಯವಾಗಿರುವುದರಿಂದ ಅವ್ಯಕ್ತ ಮೊದಲಾದ ಶಬ್ದಗಳೂ ಕೂಡ ಪರಮಾತ್ಮನಲ್ಲಿ ಮುಖ್ಯವಾಗಿರುತ್ತವೆ ಎಂದು ಹೇಳಿದಂತಾಗುತ್ತದೆ.

**भावदीपः** – एवमितरेऽपीति भाष्यमुत्सूत्रमिति भ्रमं वारयति – च शब्द इति ।।

ಭಾಷ್ಯದಲ್ಲಿ ಮಹತ್‌ಶಬ್ದವನ್ನು ದೃಷ್ಟಾಂತವನ್ನಾಗಿ ಹೇಳಿ 'ಇತರೇಪಿ' ಎಂಬುದರಿಂದ ದಾರ್ಷ್ಟಾಂತಿಕವನ್ನು ಸಮುಚ್ಚಯ ಮಾಡಿದ್ದಾರೆ. 'ಏವಮಿತರೇಽಪಿ' ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದು ಸೂತ್ರಕಾರರಿಗೆ ಸಮ್ಮತವಿಲ್ಲವೆಂಬ ಭ್ರಮೆಯನ್ನು 'ಚ ಶಬ್ದಃ' ಇತ್ಯಾದಿ ಟೀಕೆಯಿಂದ ಪರಿಹರಿಸುತ್ತಿದ್ದಾರೆ.

**भावदीपः – इतरेऽपीतिभाष्यं व्याचष्टे – व्यक्तमिति । एवमित्यस्यार्थमाह – तत्प्रवृत्तीति ।**

'ಇತರೇಽಪಿ' ಎಂಬ ಭಾಷ್ಯವನ್ನು ಟೀಕೆಯಲ್ಲಿ 'ವ್ಯಕ್ತಮ್' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯದಲ್ಲಿರುವ 'ಏವಂ' ಎಂಬ ಪದದ ಅರ್ಥವನ್ನು 'ತತ್‌ಪ್ರವೃತ್ತಿ' ಇತ್ಯಾದಿ ಟೀಕೆಯಿಂದ ಹೇಳಿರುತ್ತಾರೆ.

**भावदीपः – यथा इत्यादि भाष्यं व्याचष्टे – न चान्यत्रेति ।। 'महान्तं विभुमात्मानं मत्वा धीरो न शोचति' इति काठक एवेत्यर्थः ।।**

'ಯಥಾ' ಇತ್ಯಾದಿ ಭಾಷ್ಯವನ್ನು 'ನ ಚ ಅನ್ಯತ್ರ' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡಿದ್ದಾರೆ. 'ಅನ್ಯತ್ರ' ಎಂದರೆ ''ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ'' ಎಲ್ಲೆಡೆ ವ್ಯಾಪ್ತನಾದ ಪರಮಾತ್ಮನನ್ನು ತಿಳಿದ ಧೀರ ದುಃಖಿಸುವುದಿಲ್ಲ. ಇಲ್ಲಿರುವ ಮಹತ್ ಶಬ್ದವು ಮಹತ್ತತ್ವದಲ್ಲಿ ಪ್ರಸಿದ್ಧವಾಗಿದ್ದರೂ ಅದರ ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಮುಖ್ಯವಾಗಿದೆ ಎಂದು ತಿಳಿಯಬೇಕು.

**भावदीपः – न ह्यस्माभिरिति ।। यद्यपि सिंहशब्दो जातिनिमित्तको न यौगिकः तथापि 'तुष्यतु दुर्जनः' इति न्यायेनेदं समाधानम् । वस्तुतो निमित्ताधिक्येन मुख्यत्वोक्तौ न व्यभिचार इति ध्येयम् ।**

ಪ್ರವೃತ್ತಿನಿಮಿತ್ತದ ಆಧಿಕ್ಯವಿದ್ದಮಾತ್ರದಿಂದ ಶಬ್ದವು ಮುಖ್ಯವಾಗಿ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ ಎಂದು ಸಮರ್ಥಿಸುತ್ತಿಲ್ಲ; ಹೊರತಾಗಿ ಶಬ್ದಗಳು ಮೊದಲೇ ಪರಮಾತ್ಮನಲ್ಲಿ ಮುಖ್ಯವಾಗಿವೆಯೆಂದು ಸಿದ್ಧವಾಗಿದೆ. ಅದನ್ನು ಸಮರ್ಥಿಸುತ್ತಿದ್ದೇವೆಂದು ಟೀಕೆಯಲ್ಲಿ ಹೇಳಿದ್ದಾರೆ. ಈ ವಿಷಯದಲ್ಲಿ ಸಿಂಹಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅತಿಸಹನತ್ವ ಎಂಬುದು ಪುರುಷನಲ್ಲಿ ಮುಖ್ಯವಾಗಿದ್ದರೂ ಸಿಂಹಶಬ್ದವು ಮುಖ್ಯವಾಗಿರುವುದಿಲ್ಲ ಎಂಬ ದೃಷ್ಟಾಂತವನ್ನು ನೀಡಿದ್ದಾರೆ. ವಾಸ್ತವಿಕವಾಗಿ ಈ ದೃಷ್ಟಾಂತವು ಸರಿ ಹೊಂದುವುದಿಲ್ಲ. ಏಕೆಂದರೆ ಈ ಸಿಂಹಶಬ್ದವು ಜಾತಿನಿಮಿತ್ತಕವಾದ ರೂಢಪದ ಹೊರತು ಯೋಗಿಕವಾದ ಪದವಲ್ಲ. ಪ್ರಕೃತ ಯೋಗಿಕವಾದ ಪದದ ವಿಷಯದಲ್ಲಿ ಪ್ರಸ್ತಾಪ ಬಂದಿದೆ. ಆದರೂ ಕೂಡ 'ತುಷ್ಯತು ದುರ್ಜನಃ' ಎಂಬ ನ್ಯಾಯವನ್ನು ಅನುಸರಿಸಿ ಗ್ರಂಥದಲ್ಲಿ ಹೀಗೆ ಸಮಾಧಾನವನ್ನು ಹೇಳಿರುತ್ತಾರೆ. ವಾಸ್ತವಿಕವಾಗಿ ಪ್ರವೃತ್ತಿನಿಮಿತ್ತದ ಆಧಿಕ್ಯದಿಂದ ಶಬ್ದದಲ್ಲಿ ಮುಖ್ಯತ್ವವನ್ನು ಹೇಳಿದರೂ ವ್ಯಭಿಚಾರದೋಷಕ್ಕೆ ಅವಕಾಶವಿರುವುದಿಲ್ಲ.

ಆನುಮಾನಿಕಾಧಿಕರಣ (೧-೪-೧)

**भावदीपः** – तस्य शब्दशक्तिनियामकत्वेन तदाधिक्ये मुख्यत्वावश्यम्भावात् । अवयवार्थो यथायथोत्कृष्यते तथा तथा योग वृत्तेरप्युत्कर्षेण भाव्यमिति सुधोक्तेः उत्तरसूत्रावतारणायाऽभ्युपगमवादः इति ज्ञेयम् ॥८॥

ಪ್ರವೃತ್ತಿನಿಮಿತ್ತವು ಶಬ್ದಶಕ್ತಿಗೆ ನಿಯಾಮಕವಾಗಿರುವುದರಿಂದ ಅದರಲ್ಲಿ ಆಧಿಕ್ಯವಿದ್ದರೆ ಶಬ್ದದಲ್ಲಿಯೂ ಕೂಡ ಮುಖ್ಯತ್ವವು ಬಂದೇ ಬರುತ್ತದೆ ಎಂದು ಅವಶ್ಯ ಒಪ್ಪಲೇಬೇಕು. ಅವಯವಾರ್ಥವು ಉತ್ಕೃಷ್ಟವಾದಷ್ಟು ಯೋಗವೃತ್ತಿಯೂ ಕೂಡ ಉತ್ಕೃಷ್ಟವಾಗಿಯೇ ಉಪಪನ್ನವಾಗುತ್ತದೆ. ''ಅವಯವಾರ್ಥೋ ಯಥಾ-ಯಥೋತ್ಕೃಷ್ಯತೇ ತಥಾ ತಥಾ ಯೋಗವೃತ್ತೇರಪ್ಯುತ್ಕರ್ಷೇಣ ಭಾವ್ಯಮ್'' ಹೀಗೆ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಆದರೂ ಕೂಡ ಪ್ರಕೃತ ಟೀಕೆಯಲ್ಲಿ ಅದಕ್ಕೆ ವಿರುದ್ಧವಾಗಿ ಹೇಳಿದ್ದು ಉತ್ತರಸೂತ್ರಕ್ಕೆ ಅವತಾರಿಕೆ ನೀಡಲು ಅಭ್ಯುಪಗಮವಾದಕ್ಕಾಗಿ ಮಾತ್ರ ಹೊರತು ನಮ್ಮ ಸಿದ್ಧಾಂತವೆಂಬ ಅಭಿಪ್ರಾಯದಿಂದಲ್ಲ.

## ಬ್ರಹ್ಮಮೀಮಾಂಸಾಶಾಸ್ತ್ರ

## ಮುಖ್ಯವಾಚ್ಯತ್ವಕ್ಕೆ ಲೋಕಪ್ರಸಿದ್ಧಿಯು ಗಮಕವಲ್ಲ

**सूत्रम् – ॥ चमसवदविशेषात् ॥ ९ ॥**

ಸೂತ್ರಾರ್ಥ - 'ಚಮಸ' ಶಬ್ದವು ಯಜ್ಞಪಾತ್ರೆಯಲ್ಲಿ ಪ್ರಸಿದ್ಧವಾಗಿದ್ದರೂ 'ಶಿರಸ್ಸು' ಎಂಬರ್ಥದಲ್ಲಿ ಹೇಗೆ ಮುಖ್ಯವಾಗಿದೆಯೋ, ಅದರಂತೆ ಅವ್ಯಕ್ತಾದಿ ಶಬ್ದಗಳೂ ಕೂಡ ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ವಿಷ್ಣುವಿನಲ್ಲಿ ಮುಖ್ಯವಾದ ಅರ್ಥವನ್ನು ಹೊಂದಿರುತ್ತದೆ. ಏಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ 'ಇದಂ ತಚ್ಛಿರಃ' ಎಂಬ ಶ್ರುತಿಯಿಂದ ಸಾಮ್ಯವಿರುವುದರಿಂದ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯೂ ಕೂಡ ಅನುಶಾಸನರೂಪವಾದ್ದರಿಂದ ಎಲ್ಲಾ ಶಬ್ದಗಳಿಗೂ ಭಗವಂತನೇ ಮುಖ್ಯಾರ್ಥವೆಂದು ಅಂಗೀಕರಿಸಬೇಕು.

### ಸೂತ್ರದೀಪಿಕಾ

**सूत्रदीपिका – चमसवत्** यथा यज्ञपात्रे प्रसिद्धस्यापि चमसशब्दस्य 'इदं तच्छिरः' इति श्रुतिबलेन शिरोवाचकता तद्वदव्यक्तादिशब्दस्य प्रधानादौ

प्रसिद्धत्वेऽपि विष्णुवाचकत्वमेव । कुतः ? 'नामानि' इति श्रुतेः । ननु तथापि कुतो विष्णुवाचकत्वम् ? इत्यत उक्तम् – **अविशेषादिति** । 'नामानि सर्वाणि' इति श्रुतेः 'इदं' इति श्रुत्या विशेषाभावादित्यर्थः ।।९।।

ಅರ್ಥ -- ಚಮಸವತ್ = ಯಾವ ರೀತಿಯಾಗಿ ಯಜ್ಞಪಾತ್ರದಲ್ಲಿ 'ಚಮಸ' ಶಬ್ದವು ಪ್ರಸಿದ್ಧವಾಗಿದ್ದರೂ 'ಇದಂ ತಚ್ಛಿರಃ' ಎಂಬ ಶ್ರುತಿಯ ಬಲದಿಂದ ಶಿರಸ್ಸು ಎಂಬ ಅರ್ಥದಲ್ಲಿ ಮುಖ್ಯವಾಗಿದೆಯೋ, ಅದರಂತೆ ಅವ್ಯಕ್ತಾದಿ ಶಬ್ದವೂ ಕೂಡ ಪ್ರಧಾನಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಆಧಾರವಾಗಿದೆ. ಆದರೂ ಕೂಡ ವಿಷ್ಣುವೇ ಏಕೆ ಪ್ರತಿಪಾದ್ಯನಾಗಬೇಕು ? ಎಂಬ ಪ್ರಶ್ನೆಗೆ 'ಅವಿಶೇಷಾತ್' ಎಂದು ಉತ್ತರಿಸಿದ್ದಾರೆ. ಅವಿಶೇಷಾತ್ = 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೆ 'ಇದಂ ತಚ್ಛಿರಃ' ಎಂಬ ಶ್ರುತಿಯಿಂದ ಸಾಮ್ಯವು ಇರುತ್ತದೆ.

## ಬ್ರಹ್ಮಸೂತ್ರಭಾಷ್ಯಮ್

**भाष्यम् – यथा चमसशब्दोऽन्यत्र प्रसिद्धोऽपि 'इदं तच्छिर एष ह्यर्वाग्बिलश्चमस ऊर्ध्वबुध्नः' (बृ.उ. ४-२-३) इति श्रुतेः शिरोवाचकः एवमव्यक्तादि शब्दाः सर्वेऽन्यत्र प्रसिद्धा अपि, 'नामानि सर्वाणि यमाविशन्ति तं वै विष्णुं परममुदाहरन्ति' (भाल्लवेयश्रुतिः) इत्यादिश्रुतेः परमात्माभिधायका एव ।। अविशेषात् श्रुतेः ।।९।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये आनुमानिकाधिकरणम् ।। १ ।।**

ಅನುವಾದ - ಯಾವರೀತಿಯಾಗಿ ಚಮಸ ಎಂಬ ಶಬ್ದವು ಯಜ್ಞಪಾತ್ರೆಯಲ್ಲಿ ಪ್ರಸಿದ್ಧವಾಗಿದ್ದರೂ ನಮ್ಮ ಶಿರಸ್ಸನ್ನು ಹೇಳುತ್ತದೆ. ಬಾಯಿ ಕೆಳಮುಖವಾಗಿದೆ, ದುಂಡಗಿನ ಗಟ್ಟಿಯಾದ ಕೆಳಭಾಗ ಮೇಲಿದೆ. ಹೀಗೆ ನಮ್ಮ ತಲೆಯು ಬೋರಲಾದ ಚಮಸವೆಂದು ಬೃಹದಾರಣ್ಯಕ ಹೇಳುತ್ತಿದೆ. ಆದ್ದರಿಂದ ಚಮಸ ಶಬ್ದವು ಶಿರೋವಾಚಕವಾಗಿದೆ. ಅದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಪ್ರಕೃತಿ ಮೊದಲಾದವುಗಳಲ್ಲಿ ಪ್ರಸಿದ್ಧವಾಗಿದ್ದರೂ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯ ಆಧಾರದಿಂದ ವಿಷ್ಣುವಾಚಕವಾಗಿದೆ. ಚಮಸ ಶ್ರುತಿಗೂ 'ನಾಮಾನಿ ಸರ್ವಾಣಿ' ಎಂಬ ಶ್ರುತಿಗೂ ಏನೂ ವ್ಯತ್ಯಾಸವಿಲ್ಲ.

ಪ್ರತಿಪದಾರ್ಥ -- ಅವ್ಯಕ್ತಾದಿ ಶಬ್ದಗಳು ಪರಮಾತ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಸಮನ್ವಯಗೊಳ್ಳುತ್ತವೆಂದು ಸಮರ್ಥಿಸಿದಿರಿ. ಆದರೆ ಅವ್ಯಕ್ತಾದಿಶಬ್ದಗಳು ಮುಖ್ಯವಾಗಿ

ಪರಮಾತ್ಮನಲ್ಲಿ ಬರುವುದಾದರೆ, ಪರಮಮುಖ್ಯತ್ವವನ್ನು ಸಮರ್ಥಿಸಬಹುದಿತ್ತು. ಆದರೆ ಮುಖ್ಯತ್ವವೇ ಪರಮಾತ್ಮನಲ್ಲಿ ಕೂಡುವುದಿಲ್ಲ. 'ಅವ್ಯಕ್ತಮಚಲಂ' ಇತ್ಯಾದಿ ಶ್ರುತಿ-ಸ್ಮೃತಿಗಳ ಪ್ರಯೋಗಾನುಸಾರದಿಂದಲೂ ಮುಖ್ಯತ್ವವನ್ನು ತಿಳಿಯಲಾಗದು. ಬೇರೆ ವೃತ್ತಿಯಿಂದ ಆ ಪ್ರಯೋಗವನ್ನು ಕೂಡಿಸಬಹುದಲ್ಲವೇ? ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಉಪನ್ಯಾಸ ಮಾಡುತ್ತಿದ್ದಾರೆ. –

ಯಥಾ = ಯಾವರೀತಿಯಾಗಿ, ಚಮಸ ಶಬ್ದಃ = ಚಮಸ ಎಂಬ ಪದವು, ಅನ್ಯತ್ರ = ಯಜ್ಞಪಾತ್ರೆಯಲ್ಲಿ, ಪ್ರಸಿದ್ಧೋಽಪಿ = ಪ್ರಸಿದ್ಧವಾಗಿದ್ದರೂ, ಇದಂತಚ್ಛಿರಃ ಏಷಃಹ್ಯರ್ವಾಗ್ ಬಿಲಶ್ಚಮಸ ಊರ್ಧ್ವಬುಧ್ನಃ = ಬಾಯಿ ಕೆಳಮುಖವಾಗಿದೆ, ದುಂಡಗಿನ ಗಟ್ಟಿಯಾದ ಕೆಳಭಾಗ ಮೇಲಿದೆ. ಇತಿ ಶ್ರುತೇಃ = ಹೀಗೆ ಬೃಹದಾರಣ್ಯಕ ಶ್ರುತಿ ಪ್ರಮಾಣವಾಗಿರುವುದರಿಂದ ಶಿರೋವಾಚಕಃ = ಚಮಸ ಎಂಬ ಶಬ್ದವು ಶಿರೋವಾಚಕವಾಗಿದೆ. ಏವಂ = ಅದರಂತೆ, ಅವ್ಯಕ್ತಾದಿಶಬ್ದಾಃ = ಅವ್ಯಕ್ತಾದಿಶಬ್ದಗಳು, ಅನ್ಯತ್ರಪ್ರಸಿದ್ಧಾ ಅಪಿ = ಅನ್ಯತ್ರಪ್ರಸಿದ್ಧವಾಗಿದ್ದರೂ, ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ = ಎಲ್ಲಾ ಶಬ್ದಗಳು ವಿಷ್ಣುವಿನಲ್ಲೇ ಸಮನ್ವಯವಾಗುತ್ತವೆ. ಅಂತಹ ಸರ್ವೋತ್ತಮನಾದ ವಿಷ್ಣುವನ್ನೇ ಹೇಳುತ್ತದೆ. ಇವೇ ಮೊದಲಾದ ಶ್ರುತಿಗಳಿರುವುದರಿಂದ, ಪರಮಾತ್ಮಾಭಿಧಾಯಕಾ ಏವ = ಎಲ್ಲಾ ಶ್ರುತಿಗಳೂ ಪರಮಾತ್ಮನ ಪ್ರತಿಪಾದಕಗಳೇ ಆಗಿವೆ. ಶ್ರುತೇಃ = ವೇದಗಳಿಗೆ, ಅವಿಶೇಷಾತ್ = ಏನೂ ವಿಶೇಷವಿಲ್ಲದ ಕಾರಣ ಚಮಸ ಶಬ್ದದಂತೆ ಅವ್ಯಕ್ತಾದಿ ಶಬ್ದಗಳೂ ಕೂಡ ಶಕ್ತಿವೃತ್ತಿಯಿಂದಲೇ ವಿಷ್ಣುವಾಚಕಗಳಾಗುತ್ತವೆ.

ಇಲ್ಲಿಗೆ ಆನುಮಾನಿಕಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**ननु भवेदियमव्यक्तादिशब्दानां परमात्मनि मुख्यत्वचिन्ता । यदि तेषां तद्वाचित्वमेव भवेत् ।**

ಹಿಂದಿನ ಸೂತ್ರದಲ್ಲಿ ಪ್ರತಿಪಾದನೆ ಮಾಡಿದಂತೆ ಅವ್ಯಕ್ತ ಮೊದಲಾದ ಶಬ್ದಗಳು ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತಿವೆ ಎಂಬ ವಿಚಾರವು ಯಾವಾಗ ಸಿದ್ಧವಾಗುತ್ತದೆಂದರೆ ಮೊದಲು ಆ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತದೆಂದು ಸಿದ್ಧವಾಗಬೇಕು.

**तत्वप्रकाशिका – नच तद्युक्तम्, तेषामन्यत्रैव प्रसिद्धत्वात् । नच वक्तव्यम् 'अव्यक्तमचलम्' इत्यादिप्रयोगात् तद्वाचित्वावगमः इति ।**

ಆದರೆ ಅವ್ಯಕ್ತ ಮೊದಲಾದ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ ಎಂಬುದೇ ಸಿದ್ಧವಾಗುವುದಿಲ್ಲ. ಏಕೆಂದರೆ ಆ ಶಬ್ದಗಳು ಬೇರೆ ಪದಾರ್ಥಗಳಲ್ಲಿಯೇ ಪ್ರಸಿದ್ಧವಾಗಿವೆ.

'ಅವ್ಯಕ್ತಮಚಲಂ' ಎಂದು ಪರಮಾತ್ಮನಲ್ಲಿ ಅವ್ಯಕ್ತ ಮೊದಲಾದ ಶಬ್ದಗಳು ಪ್ರಸಿದ್ಧವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – वृत्त्यन्तरेणापि प्रयोगोपपत्तेः ।**

ಪ್ರಯೋಗವನ್ನು ಕೂಡಿಸಬೇಕೆಂದರೆ ಮುಖ್ಯವಾಚ್ಯತ್ವವನ್ನೇ ಒಪ್ಪಬೇಕಾಗಿಲ್ಲ ರೂಢಿವೃತ್ತಿಯಿಂದಲೂ ಕೂಡ ಪ್ರಯೋಗವನ್ನು ಕೂಡಿಸಬಹುದು.

**तत्वप्रकाशिका – नच योगयुक्तप्रयोगेन तन्निश्चयः । सहनवति पुंसि प्रयुक्तस्यापि सिंहशब्दस्य तदवाचकत्वेन दर्शनात् ।**

ಸಕಲ ಶಬ್ದಗಳು ಯೌಗಿಕವಾಗಿ ಪರಮಾತ್ಮನಲ್ಲಿ ಪ್ರಯುಕ್ತವಾಗುತ್ತವಾದ್ದರಿಂದ ಅವನನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಬಾರದು. ಏಕೆಂದರೆ ಅತ್ಯಂತ ಸಹನೆಯಿರುವಂತಹ ಪುರುಷನಲ್ಲಿ ಸಿಂಹ ಶಬ್ದದ ಪ್ರಯೋಗವಿದ್ದರೂ ಅದು ಅವನನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವುದಿಲ್ಲ.

**तत्वप्रकाशिका – अतः प्रसिद्धेरेव वाचकताऽध्यवसायकत्वात् तस्याश्च प्रधानादावेव सत्त्वान्, नाव्यक्तादिशब्दा विष्णुवाचकाः किमु मुख्याः? इत्याकाङ्क्षां परिहरत्सूत्रमुपन्यस्य व्याचष्टे – चमसवदिति ॥**

ಆದ್ದರಿಂದ ಯಾವುದೇ ಒಂದು ಶಬ್ದವು ಪದಾರ್ಥವನ್ನು ಪ್ರತಿಪಾದನೆ ಮಾಡಬೇಕೆಂದರೆ ಲೋಕಪ್ರಸಿದ್ಧಿಯೇ ನಿಶ್ಚಾಯಕವಾಗಿರುತ್ತದೆ. ಅವ್ಯಕ್ತಾದಿ ಶಬ್ದಗಳು ಪ್ರಧಾನಾದಿಗಳಲ್ಲೇ ಪ್ರಸಿದ್ಧವಾಗಿರುತ್ತವೆ. ಈ ಎರಡು ಕಾರಣಗಳಿಂದ ಅವ್ಯಕ್ತಾದಿ ಶಬ್ದಗಳು ವಿಷ್ಣುವಾಚಕಗಳಲ್ಲ. ಹೀಗೆ ವಿಷ್ಣುವಾಚಕವೇ ಆಗದಿರುವಾಗ ಮುಖ್ಯವಾಗಿ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತದೆಂಬುದು ಹೇಗೆ ಸಿದ್ಧವಾಗುತ್ತದೆ? ಈ ಆಶಂಕೆಯನ್ನು ಪರಿಹರಿಸುವ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಚಮಸವತ್' ಇತ್ಯಾದಿಯಾಗಿ.

**तत्वप्रकाशिका – अव्यक्तादिशब्दाः परमात्मवाचका भवन्त्येव । 'नामानि सर्वाणि' इति तस्याशेषशब्दवाच्यत्वश्रुतेः ।**

ಅವ್ಯಕ್ತ ಮೊದಲಾದ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ. ಏಕೆಂದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಸಕಲ ಶಬ್ದಗಳಿಂದಲೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆಯೆಂದು ಘೋಷಣೆ ಮಾಡುತ್ತಿವೆ.

**तत्वप्रकाशिका – न चान्यत्र प्रसिद्धिविरोधः । यथा खलु चमसशब्दो यज्ञपात्रे प्रसिद्धोऽपि, श्रुतिबलेन शिरोवाचकः, तथाऽव्यक्तादिशब्दानां प्रधानादौ प्रसिद्धानामपि श्रुतिबलेन विष्णुवाचकत्वनिश्चयात् ।**

ಹಾಗಾದರೆ ಲೋಕಪ್ರಸಿದ್ಧಿಯ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಯಾವರೀತಿಯಾಗಿ 'ಚಮಸ' ಎಂಬ ಶಬ್ದವು ಯಜ್ಞಪಾತ್ರೆಯ ವಿಶೇಷದಲ್ಲಿ ಪ್ರಸಿದ್ಧವಾಗಿದ್ದರೂ 'ಇದಂ ತಚ್ಛಿರಃ' ಎಂಬ ಶ್ರುತಿಯ ಬಲದಿಂದ ಶಿರಸ್ಸನ್ನು ಪ್ರತಿಪಾದನೆ ಮಾಡುತ್ತದೋ, ಅದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಲೋಕತಃ ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ 'ಅವ್ಯಕ್ತಮಚಲಮ್' ಎಂಬ ಶ್ರುತಿಯ ಬಲದಿಂದ ವಿಷ್ಣುವಾಚಕವೆಂದು ನಿಶ್ಚಯಿಸಬೇಕು.

**तत्वप्रकाशिका – नच वक्तव्यं 'प्रयोगमात्रस्य वृत्त्यन्तरेणापि सम्भवात्, न चमसशब्दः शिरोवाचकः' इति । अभिधानादाविवानुशासनरूपत्वात् । नहि गौण्यादिवृत्तीनामनुशासनमस्ति । अन्यथा कलशकारीरादिशब्दानामनुशासन-सिद्धानां घटाद्यवाचकत्वप्रसङ्गात् ।**

'ಚಮಸ' ಶಬ್ದಪ್ರಯೋಗವನ್ನು ಶಿರಸ್ಸಿನಲ್ಲಿ ಗೌಣೀವೃತ್ತಿಯಿಂದ ಮಾಡಬಹುದಾದ್ದರಿಂದ ಶಿರಸ್ಸನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಕೋಶಾದಿಗಳಂತೆ ಶ್ರುತಿಯು ಅನುಶಾಸನ ಮಾಡುತ್ತಿದೆ. ಗೌಣೀ ವೃತ್ತಿಗಳಲ್ಲಿ ಅನುಶಾಸನವು ಸರ್ವಥಾ ಇರುವುದಿಲ್ಲ. ಹೀಗೊಪ್ಪದಿದ್ದರೆ ಕಲಶ, ಕಾರೀರ ಮೊದಲಾದ ಶಬ್ದಗಳೂ ಕೂಡ ಕೋಶ ಹಾಗೂ ಅನುಶಾಸನಗಳ ಬಲದಿಂದ ಘಟವನ್ನು ಪ್ರತಿಪಾದನೆ ಮಾಡುತ್ತವೆಂದೂ ಕೂಡ ಸಿದ್ಧವಾಗದಿರ-ಬೇಕಾದೀತು.

**तत्वप्रकाशिका – अथापि स्यात् – अनुशासनरुपत्वात् श्रुतिबलेन चमसशब्दस्य शिरोवाचकत्वेऽपि, न तथाऽव्यक्तदिशब्दानां परमात्मवाचित्वम् ? 'नामानि' इति प्रयोगस्य वृत्त्यन्तरेणापि सम्भवादिति ।।**

ಪ್ರಶ್ನೆ - ಶ್ರುತಿಯು ಅನುಶಾಸನರೂಪವಾಗಿರುವುದರಿಂದ 'ಚಮಸ' ಶಬ್ದವು ಶಿರಸ್ಸನ್ನು ಪ್ರತಿಪಾದನೆ ಮಾಡಬಹುದು. ಅದರಂತೆ 'ಅವ್ಯಕ್ತ' ಮೊದಲಾದ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಸರ್ವಶಬ್ದವಾಚ್ಯತ್ವವನ್ನು ಗೌಣ್ಯಾದಿವೃತ್ತಿಗಳಿಂದಲೂ ಕೂಡ ಪ್ರತಿಪಾದನೆ ಮಾಡುವಂತಹ ಅವಕಾಶವಿರುತ್ತದಲ್ಲವೇ?

**तत्वप्रकाशिका – मैवम् । 'नामानि सर्वाणि' इति श्रुतेरप्यनुशासनरूपत्वेन-तत् श्रुतेरविशेषात् । तद्वदस्याप्यनुशासनरूपत्वात् ।**

ಉತ್ತರ - ಈ ಪ್ರಶ್ನೆಯು ಸರಿಯಲ್ಲ. ಏಕೆಂದರೆ 'ನಾಮಾಣಿ ಸರ್ವಾಣಿ' ಎಂಬ ಶ್ರುತಿಯೂ ಕೂಡ ಅನುಶಾಸನರೂಪವೇ ಆಗಿರುತ್ತವೆ. 'ಇದಂ ತಚ್ಛಿರಃ' ಎಂಬ ಶ್ರುತಿಯಂತೆ.

**तत्वप्रकाशिका – न चात्राव्यक्तादिशब्दाश्रवणादोषः । सर्वशब्दसद्भावात् । सङ्कोचे कारणाभावादिति भावः ।**

ಅವ್ಯಕ್ತಶಬ್ದವು ವಿಷ್ಣುಪರವಾಗಿದೆ ಎಂಬ ವಿಷಯದಲ್ಲಿ ಯಾವುದೇ ಉಲ್ಲೇಖವಿಲ್ಲದ ಕಾರಣ ಶ್ರುತಿಯು ಅನುಶಾಸನರೂಪ ಎಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ಏಕೆಂದರೆ ಶ್ರುತಿಯಲ್ಲಿ ಸರ್ವಶಬ್ದವಿರುತ್ತದೆ. ಈ ಸರ್ವಶಬ್ದಕ್ಕೆ ಅವ್ಯಕ್ತಶಬ್ದವನ್ನು ಬಿಟ್ಟು ಎಂಬುದಾಗಿ ಸಂಕೋಚ ಮಾಡಲು ಯಾವುದೇ ಕಾರಣವಿರುವುದಿಲ್ಲ.

**तत्वप्रकाशिका – 'अर्वाग्बिलश्चमस ऊर्ध्वबुध्नः' इति व्याख्येयमन्त्रे यदुक्तं तदिदं = प्रतीयमानं शिरः कुतः । एष ह्यर्वाग्बिलश्चमस ऊर्ध्वबुध्नः इत्यर्थः ।**

'ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ವ್ಯಾಖ್ಯಾನ ಮಾಡಲು ಯೋಗ್ಯವಾಗಿರುವ ಈ ಮಂತ್ರದಲ್ಲಿ ಯಾವುದು ಪ್ರಸಿದ್ಧವಾಗುತ್ತಿದೆಯೋ ಅದು ಶಿರಸ್ಸೇ ಆಗಿದೆ ಎಂಬುದು ಹೇಗೆ ಸಿದ್ಧವಾಗುತ್ತದೆ ? ಎಂದರೆ ಈ ಚಮಸವು ಕೆಳಮುಖವಾಗಿದೆ. ಆದರ ಬುಡವು ಮೇಲ್ಮುಖವಾಗಿದೆ ಎಂಬುದಾಗಿ ಶಿರಸ್ಸಿನ ವರ್ಣನೆಯಿದೆ.

**तत्वप्रकाशिका – 'एषः' इति चमसविवक्षया । 'दक्षिणान्नं वनुते यो न आत्मा' इतिवत् । बिलं मुखादि । तस्मादव्यक्तादिशब्दवाच्यो हरिर्भवत्येवेति सर्वशब्दवाच्यत्वं तस्यैवोपपन्नमिति सिद्धम् ।। ९ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् आनुमानिकाधिकरणम् ।।**

'ಶಿರಃ' ಎಂಬ ಶಬ್ದವು ನಪುಂಸಕಲಿಂಗದಲ್ಲಿದೆ. ಅದನ್ನು ಪರಾಮರ್ಶಿಸುವ 'ಏಷಃ' ಎಂಬ ಶಬ್ದವು ಪುಲ್ಲಿಂಗದಲ್ಲಿದೆ. ಇದು ಹೇಗೆ ಕೂಡುತ್ತದೆ ಎಂದರೆ 'ಏಷಃ' ಎಂಬುದು ವಿಧೇಯವಾದ ಚಮಸಶಬ್ದವನ್ನು ಅನುಸರಿಸಿ ಪುಲ್ಲಿಂಗದಲ್ಲಿದೆ ಎಂದು ತಿಳಿಯಬೇಕು. 'ದಕ್ಷಿಣಾನ್ನಂ ವನುತೇ ಯೋ

**तत्वप्रकाशिका – न चान्यत्र प्रसिद्धिविरोधः । यथा खलु चमसशब्दो यज्ञपात्रे प्रसिद्धोऽपि, श्रुतिबलेन शिरोवाचकः, तथाऽव्यक्तादिशब्दानां प्रधानादौ प्रसिद्धानामपि श्रुतिबलेन विष्णुवाचकत्वनिश्चयात् ।**

ಹಾಗಾದರೆ ಲೋಕಪ್ರಸಿದ್ಧಿಯ ವಿರೋಧ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಯಾವರೀತಿಯಾಗಿ 'ಚಮಸ' ಎಂಬ ಶಬ್ದವು ಯಜ್ಞಪಾತ್ರೆಯ ವಿಶೇಷದಲ್ಲಿ ಪ್ರಸಿದ್ಧವಾಗಿದ್ದರೂ 'ಇದಂ ತಚ್ಛಿರಃ' ಎಂಬ ಶ್ರುತಿಯ ಬಲದಿಂದ ಶಿರಸ್ಸನ್ನು ಪ್ರತಿಪಾದನೆ ಮಾಡುತ್ತದೋ, ಅದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಲೋಕತಃ ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ 'ಅವ್ಯಕ್ತಮಚಲಮ್' ಎಂಬ ಶ್ರುತಿಯ ಬಲದಿಂದ ವಿಷ್ಣುವಾಚಕವೆಂದು ನಿಶ್ಚಯಿಸಬೇಕು.

**तत्वप्रकाशिका – नच वक्तव्यं 'प्रयोगमात्रस्य वृत्त्यन्तरेणापि सम्भवात्, न चमसशब्दः शिरोवाचकः' इति । अभिधानादाविवानुशासनरूपत्वात् । नहि गौण्यादिवृत्तीनामनुशासनमस्ति । अन्यथा कलशकारीरादिशब्दानामनुशासन-सिद्धानां घटाद्यवाचकत्वप्रसङ्गात् ।**

'ಚಮಸ' ಶಬ್ದಪ್ರಯೋಗವನ್ನು ಶಿರಸ್ಸಿನಲ್ಲಿ ಗೌಣೀವೃತ್ತಿಯಿಂದ ಮಾಡಬಹುದಾದ್ದರಿಂದ ಶಿರಸ್ಸನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಕೋಶಾದಿಗಳಂತೆ ಶ್ರುತಿಯು ಅನುಶಾಸನ ಮಾಡುತ್ತಿದೆ. ಗೌಣೀ ವೃತ್ತಿಗಳಲ್ಲಿ ಅನುಶಾಸನವು ಸರ್ವಥಾ ಇರುವುದಿಲ್ಲ. ಹೀಗೊಪ್ಪದಿದ್ದರೆ ಕಲಶ, ಕಾರೀರ ಮೊದಲಾದ ಶಬ್ದಗಳೂ ಕೂಡ ಕೋಶ ಹಾಗೂ ಅನುಶಾಸನಗಳ ಬಲದಿಂದ ಘಟವನ್ನು ಪ್ರತಿಪಾದನೆ ಮಾಡುತ್ತವೆಂದೂ ಕೂಡ ಸಿದ್ಧವಾಗದಿರ-ಬೇಕಾದೀತು.

**तत्वप्रकाशिका – अथापि स्यात् – अनुशासनरुपत्वात् श्रुतिबलेन चमसशब्दस्य शिरोवाचकत्वेऽपि, न तथाऽव्यक्तदिशब्दानां परमात्मवाचित्वम् ? 'नामानि' इति प्रयोगस्य वृत्त्यन्तरेणापि सम्भवादिति ।।**

ಪ್ರಶ್ನೆ - ಶ್ರುತಿಯು ಅನುಶಾಸನರೂಪವಾಗಿರುವುದರಿಂದ 'ಚಮಸ' ಶಬ್ದವು ಶಿರಸ್ಸನ್ನು ಪ್ರತಿಪಾದನೆ ಮಾಡಬಹುದು. ಅದರಂತೆ 'ಅವ್ಯಕ್ತ' ಮೊದಲಾದ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಸಿದ್ಧವಾಗುವುದಿಲ್ಲ. ಏಕೆಂದರೆ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಸರ್ವಶಬ್ದವಾಚ್ಯತ್ವವನ್ನು ಗೌಣ್ಯಾದಿವೃತ್ತಿಗಳಿಂದಲೂ ಕೂಡ ಪ್ರತಿಪಾದನೆ ಮಾಡುವಂತಹ ಅವಕಾಶವಿರುತ್ತದಲ್ಲವೇ?

**तत्वप्रकाशिका – मैवम् । 'नामानि सर्वाणि' इति श्रुतेरप्यनुशासनरूपत्वेन-तत् श्रुतेरविशेषात् । तद्वदस्याप्यनुशासनरूपत्वात् ।**

ಉತ್ತರ - ಈ ಪ್ರಶ್ನೆಯು ಸರಿಯಲ್ಲ. ಏಕೆಂದರೆ 'ನಾಮಾಣಿ ಸರ್ವಾಣಿ' ಎಂಬ ಶ್ರುತಿಯೂ ಕೂಡ ಅನುಶಾಸನರೂಪವೇ ಆಗಿರುತ್ತವೆ. 'ಇದಂ ತಚ್ಛಿರಃ' ಎಂಬ ಶ್ರುತಿಯಂತೆ.

**तत्वप्रकाशिका – न चात्राव्यक्तादिशब्दाश्रवणादोषः । सर्वशब्दसद्भावात् । सङ्कोचे कारणाभावादिति भावः ।**

ಅವ್ಯಕ್ತಶಬ್ದವು ವಿಷ್ಣುಪರವಾಗಿದೆ ಎಂಬ ವಿಷಯದಲ್ಲಿ ಯಾವುದೇ ಉಲ್ಲೇಖವಿಲ್ಲದ ಕಾರಣ ಶ್ರುತಿಯು ಅನುಶಾಸನರೂಪ ಎಂದು ಹೇಗೆ ಹೇಳುತ್ತೀರಿ? ಎಂದು ಪ್ರಶ್ನಿಸಬಾರದು. ಏಕೆಂದರೆ ಶ್ರುತಿಯಲ್ಲಿ ಸರ್ವಶಬ್ದವಿರುತ್ತದೆ. ಈ ಸರ್ವಶಬ್ದಕ್ಕೆ ಅವ್ಯಕ್ತಶಬ್ದವನ್ನು ಬಿಟ್ಟು ಎಂಬುದಾಗಿ ಸಂಕೋಚ ಮಾಡಲು ಯಾವುದೇ ಕಾರಣವಿರುವುದಿಲ್ಲ.

**तत्वप्रकाशिका – 'अर्वाग्बिलश्चमस ऊर्ध्वबुध्नः' इति व्याख्येयमन्त्रे यदुक्तं तदिदं = प्रतीयमानं शिरः कुतः । एष ह्यर्वाग्बिलश्चमस ऊर्ध्वबुध्नः इत्यर्थः ।**

'ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ವ್ಯಾಖ್ಯಾನ ಮಾಡಲು ಯೋಗ್ಯವಾಗಿರುವ ಈ ಮಂತ್ರದಲ್ಲಿ ಯಾವುದು ಪ್ರಸಿದ್ಧವಾಗುತ್ತಿದೆಯೋ ಅದು ಶಿರಸ್ಸೇ ಆಗಿದೆ ಎಂಬುದು ಹೇಗೆ ಸಿದ್ಧವಾಗುತ್ತದೆ ? ಎಂದರೆ ಈ ಚಮಸವು ಕೆಳಮುಖವಾಗಿದೆ. ಅದರ ಬುಡವು ಮೇಲ್ಮುಖವಾಗಿದೆ ಎಂಬುದಾಗಿ ಶಿರಸ್ಸಿನ ವರ್ಣನೆಯಿದೆ.

**तत्वप्रकाशिका – 'एषः' इति चमसविवक्षया । 'दक्षिणान्नं वनुते यो न आत्मा' इतिवत् । बिलं मुखादि । तस्मादव्यक्तादिशब्दवाच्यो हरिर्भवत्येवेति सर्वशब्दवाच्यत्वं तस्यैवोपपन्नमिति सिद्धम् ।। १ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम् आनुमानिकाधिकरणम् ।।**

'ಶಿರಃ' ಎಂಬ ಶಬ್ದವು ನಪುಂಸಕಲಿಂಗದಲ್ಲಿದೆ. ಅದನ್ನು ಪರಾಮರ್ಶಿಸುವ 'ಏಷಃ' ಎಂಬ ಶಬ್ದವು ಪುಲ್ಲಿಂಗದಲ್ಲಿದೆ. ಇದು ಹೇಗೆ ಕೂಡುತ್ತದೆ ಎಂದರೆ 'ಏಷಃ' ಎಂಬುದು ವಿಧೇಯವಾದ ಚಮಸಶಬ್ದವನ್ನು ಅನುಸರಿಸಿ ಪುಲ್ಲಿಂಗದಲ್ಲಿದೆ ಎಂದು ತಿಳಿಯಬೇಕು. 'ದಕ್ಷಿಣಾನ್ನಂ ವನುತೇ ಯೋ

ನ ಆತ್ಮಾ' ಎಂಬ ಶ್ರುತಿಯಲ್ಲಿ 'ಅನ್ನ' ಎಂಬ ಶಬ್ದವು ನಪುಂಸಕಲಿಂಗ ಶಬ್ದವಾಗಿದೆ. 'ಯಃ' ಎಂಬುದು ಪುಲ್ಲಿಂಗದಲ್ಲಿದೆ. ಆದರೂ ವಿಧೇಯವಾದ ಆತ್ಮಶಬ್ದವನ್ನು ಅನುಸರಿಸಿ ಪುಲ್ಲಿಂಗದಲ್ಲಿ ಪ್ರಯೋಗ ಮಾಡಿದಂತೆ ಇಲ್ಲಿಯೂ ಕೂಡ ತಿಳಿಯಬೇಕು. 'ಬಿಲಂ' ಎಂದರೆ 'ಮುಖಾದಿ ರಂಧ್ರ' ಎಂದು ಅರ್ಥ. ಆದ್ದರಿಂದ ಈ ಅಧಿಕರಣದಲ್ಲಿ ಅವ್ಯಕ್ತ, ಜೀವ ಮೊದಲಾದ ಶಬ್ದಗಳಿಂದ ಪರಮಾತ್ಮನು ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು. ಆದ್ದರಿಂದ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಹೇಳುವಂತೆ ಸಕಲಶಬ್ದಗಳಿಂದಲೂ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂಬ ಸಿದ್ಧಾಂತವು ಸ್ಥಾಪಿತವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಆನುಮಾನಿಕಾಧಿಕರಣವು ಸಮಾಪ್ತವಾಯಿತು.

## ಭಾವದೀಪ

दर्शयति च इत्याद्यसूत्रखण्डेन गतार्थत्वमाशङ्क्याऽऽह – **न च वक्तव्यमिति** ।।

ಪ್ರಥಮಸೂತ್ರದಲ್ಲಿರುವ 'ದರ್ಶಯತಿ ಚ' ಎಂಬ ಭಾಗದಿಂದ ಪುನರುಕ್ತಿ ಬರುತ್ತದಲ್ಲವೆ ? ಎಂಬ ಆಶಂಕೆಗೆ 'ನ ಚ ವಕ್ತವ್ಯಮ್' ಎಂಬ ಟೀಕೆಯಿಂದ ಉತ್ತರಿಸುತ್ತಿದ್ದಾರೆ.

**भावदीपः** – सूक्ष्मं तु इत्यादिनाऽगतार्थत्वमाह – **नच योगयुक्तेत्यादिना** ।। **सहनवतीति** ।। षहमर्षण इति धातुजत्त्वमभ्युपेत्यवादोऽयम् ।

'ಸೂಕ್ಷ್ಮಂ ತು' ಇತ್ಯಾದಿ ಸೂತ್ರದಿಂದ ಬರುವ ಪುನರುಕ್ತಿದೋಷವನ್ನು 'ನಚ ಯೋಗಯುಕ್ತ' ಇತ್ಯಾದಿ ಟೀಕೆಯಿಂದ ಪರಿಹರಿಸುತ್ತಿದ್ದಾರೆ. 'ಸಹನವತಿ' ಎಂಬ ಟೀಕೆಯಲ್ಲಿ ಸಹನೆ ಇರುವ ಪುರುಷನಲ್ಲಿ ಸಿಂಹಶಬ್ದದ ಪ್ರಯೋಗವಿದ್ದರೂ ಮುಖ್ಯಪ್ರತಿಪಾದ್ಯತ್ವ ಇರುವುದಿಲ್ಲವೆಂದು ಹೇಳಿದ್ದಾರೆ. ಸಿಂಹ ಶಬ್ದಕ್ಕೆ ಸಹನೆ ಇರುವವನು ಎಂಬರ್ಥವಿದೆ. ಎಂದರೆ 'ಷಹ ಮರ್ಷಣೇ' ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದರಿಂದ ಅಂಗೀಕಾರಮಾಡಿ ಹೇಳಿದ್ದಾರೆ ಎಂದು ತಿಳಿಯಬೇಕು.

**भावदीपः** – जातिनिमित्तकत्वात् सिंहशब्दस्य । अविशेषात् श्रुतेरित्येतद् व्यावर्त्यपूर्वं व्याचष्टे – **अथापि स्यादिति** ।। भाष्योक्तश्रुत्यर्थमाह – **इति व्याख्येयमन्त्र इति** ।।

ಪರಿಪೂರ್ಣಚಂದ್ರಿಕಾ

ಸಿಂಹ ಶಬ್ದವು ಸಿಂಹಜಾತಿಯ ಪ್ರಾಣಿಗಳನ್ನು ಪ್ರತಿಪಾದನೆ ಮಾಡುವ ಶಬ್ದವಾಗಿದೆ; ಹೊರತು ಯೋಗಿಕವಾದ ಶಬ್ದವಲ್ಲ.

'ಅವಿಷೇಶಾತ್' ಎಂಬ ಸೂತ್ರಭಾಗದಿಂದ ವ್ಯಾವೃತ್ತವಾಗುವ ಅಂಶವನ್ನು ಉಲ್ಲೇಖಿಸುವ ಮೂಲಕ 'ಅಥಾಪಿ ಸ್ಯಾತ್' ಇತ್ಯಾದಿ ಟೀಕೆಯಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः** – काण्वश्रुतौ चतुर्थेऽध्याये शिशुब्राह्मणे सप्ताक्षिविद्यायामुक्तेऽर्थ सम्मतित्वेन 'तदेष श्लोको भवति अर्वाग्बिलश्चमस ऊर्ध्वबुध्नस्तस्मिन् यशो निहितं विश्वरूपम्' इत्यादि मन्त्रमुदाहृत्य पादं पादमुपादाय स व्याक्रियते ।

ಭಾಷ್ಯದಲ್ಲಿ ಹೇಳಿದ ಶ್ರುತ್ಯರ್ಥವನ್ನು 'ಇತಿ ವ್ಯಾಖ್ಯೇಯಮಂತ್ರೇ' ಎಂದು ನಿರೂಪಣೆ ಮಾಡಿದ್ದಾರೆ ಕಾಣ್ವಶ್ರುತಿಯ ಚತುರ್ಥಾಧ್ಯಾಯದ ಶಿಶುಬ್ರಾಹ್ಮಣದಲ್ಲಿ ಸಪ್ತಾಕ್ಷಿ ವಿದ್ಯೆಯು ಪ್ರಸಕ್ತವಾಗಿದೆ. ಆ ಸಂದರ್ಭದಲ್ಲಿ "ತದೇಷ ಶ್ಲೋಕೋ ಭವತಿ ಅರ್ವಾಗ್‌ಬಿಲಶ್ಚಮಸ ಊರ್ಧ್ವಬುಧ್ನಸ್ತಸ್ಮಿನ್ ಯಶೋ ನಿಹಿತಂ ವಿಶ್ವರೂಪಮ್' ಇತ್ಯಾದಿ ಮಂತ್ರವಿದೆ ಅದನ್ನು ಉದಾಹರಿಸಿ ಪ್ರತ್ಯೇಕ ಪ್ರತ್ಯೇಕ ಪಾದಗಳನ್ನು ಸ್ವೀಕರಿಸಿ ವ್ಯಾಖ್ಯಾನ ಮಾಡಲಾಗಿದೆ.

**भावदीपः** – तत्रार्वाग्बिलश्चमस ऊर्ध्वबुध्न इत्याद्यपादव्याख्यानपरे वाक्ये इत्यन्तस्यार्थः इति व्याख्येयमन्त्र इति । तच्छब्दार्थो यदुक्तं तदिति । इदं शब्दार्थः प्रतीयमानमिति ।

ಆ ಸಂದರ್ಭದಲ್ಲಿ 'ಅರ್ವಾಗ್‌ಬಿಲಶ್ಚಮಸ ಊರ್ಧ್ವಬುಧ್ನಃ' ಎಂಬ ಮೊದಲನೆಯ ಪಾದವನ್ನು ವ್ಯಾಖ್ಯಾನ ಮಾಡುವ ವಾಕ್ಯದಲ್ಲಿ ಎಂದು ವ್ಯಾಖ್ಯೇಯಮಂತ್ರದ ಅಭಿಪ್ರಾಯವಾಗಿದೆ. ಪ್ರತಿಶಬ್ದದ ಅರ್ಥವನ್ನು 'ಯದುಕ್ತಮ್' ಇತ್ಯಾದಿಯಾಗಿ ನಿರೂಪಣೆ ಮಾಡಿದ್ದಾರೆ. 'ಇದಂ' ಶಬ್ದದ ಅರ್ಥವನ್ನು 'ಪ್ರತೀಯಮಾನಮ್' ಎಂದು ಹೇಳಿರುತ್ತಾರೆ.

**भावदीपः** – शिरः परामर्शित्वे एतदित्येव स्यात् कथमेष इति पुल्लिङ्गमित्यतः एषः इतीति ।। **दक्षिणेति** ।।

ಶಿರಸ್ಸನ್ನು ಪರಾಮರ್ಶೆ ಮಾಡುವುದಾದರೆ 'ಏತತ್' ಎಂದು ನಪುಂಸಕಲಿಂಗದಲ್ಲಿ ಪ್ರಯೋಗ ಮಾಡಬೇಕಿತ್ತು. 'ಏಷಃ' ಎಂದು ಪುಲ್ಲಿಂಗಪ್ರಯೋಗವು ಹೇಗೆ ಕೂಡುತ್ತದೆ ? ಎಂಬ ಪ್ರಶ್ನೆಗೆ 'ಏಷಃ ಇತಿ' ಎಂಬುದರಿಂದ ಉತ್ತರಿಸಿದ್ದಾರೆ.

**भावदीपः** – ऐतरेये यथाऽस्मिन् वाक्ये य इत्यस्यान्नपरत्वेऽपि विधेयात्मविवक्षया पुल्लिङ्गं तथेहापीत्यर्थः । सूत्रार्थोपसंहारपूर्वं भाष्यार्थमुपसंहरति – **तस्मादिति** ।।

ಐತರೇಯೋಪನಿಷತ್ತಿನಲ್ಲಿ ಪ್ರಸಕ್ತವಾದ ವಾಕ್ಯದಲ್ಲಿರುವ 'ಯಃ' ಎಂಬ ಶಬ್ದವು ಅನ್ಯಪರವಾದರೂ ವಿಧೇಯವಾದ ಆತ್ಮನನ್ನು ವಿವಕ್ಷಿಸಿದಾಗ ಪುಲ್ಲಿಂಗವು ಹೇಗೆ ಯುಕ್ತವಾಗುತ್ತದೋ ಅದರಂತೆ ಇಲ್ಲಿಯೂ ತಿಳಿಯಬೇಕು. ಸೂತ್ರದ ಅರ್ಥವನ್ನು ಉಪಸಂಹಾರ ಮಾಡುವ ಮೂಲಕ ಭಾಷ್ಯದ ಅರ್ಥವನ್ನು ಉಪಸಂಹಾರ ಮಾಡುತ್ತಿದ್ದಾರೆ 'ತಸ್ಮಾದ್' ಇತ್ಯಾದಿಯಾಗಿ

**भावदीपः – प्रयोगप्रवृत्तिनिमित्तादिसाधकभावादवरत्वादिबाधकाभावाच्चेत्यर्थः ।। तत्तु समन्वयादित्यादिभाष्योपसंहारः सर्वशब्देत्यादि ।।९।।**

**।। इति श्रीराघवेन्द्रयतिकृते भावदीपे आनुमानिकाधिकरणम् ।।**

ಪ್ರಯೋಗ ಪ್ರವೃತ್ತಿನಿಮಿತ್ತ ಮೊದಲಾದ ಸಾಧಕಗಳು ಇರುವುದರಿಂದ ಅವರತ್ವಾದಿ ಬಾಧಕಗಳು ಇಲ್ಲದಿರುವುದರಿಂದ ಎಂಬುದು 'ತಸ್ಮಾದ್' ಎಂಬ ಪದದ ಅರ್ಥ. 'ತತ್ತು ಸಮನ್ವಯಾತ್' ಇತ್ಯಾದಿ ಭಾಷ್ಯವನ್ನು 'ಸರ್ವಶಬ್ದ' ಇತ್ಯಾದಿಯಾಗಿ ಉಪಸಂಹಾರ ಮಾಡಿದ್ದಾರೆ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಆನುಮಾನಿಕಾಧಿಕರಣವು ಸಮಾಪ್ತವಾಯಿತು.

## ಆನುಮಾನಿಕಾಧಿಕರಣ

## (೧-೪-೧)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## प्रथमाध्यायस्य चतुर्थः पादः

## अथ आनुमानिकाधिकरणम्

### ನಾಲ್ಕನೆಯ ಪಾದಕ್ಕೆ ಸಾರ್ಥಕ್ಯ ಚಿಂತನೆ

**आनुमानिकमप्येकेषामिति चेन्न शरीररूपकविन्यस्तगृहीतेर्दर्शयति च ॥**

**अत्र –**

**अस्तु विष्णोः कारणत्वं न तु सर्वसमन्वयः ।**
**चतुर्थसूत्रे कथित इति शङ्का निवार्यते ॥ १ ॥**

ಅನುವಾದ - 'ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇ-ರ್ದರ್ಶಯತಿ ಚ' ಎಂಬುದಾಗಿ ಪ್ರಥಮಾಧ್ಯಾಯದ ನಾಲ್ಕನೇ ಪಾದದಲ್ಲಿ ಆನುಮಾನಿಕಾಧಿಕರಣವು ಪ್ರಾರಂಭವಾಗುತ್ತಿದೆ.

ಈ ಸಮಗ್ರ ಪಾದದಲ್ಲಿ ಏನು ಹೇಳಿದೆ ?

ಹಿಂದಿನ ಮೂರು ಪಾದಗಳಿಂದ ವಿಷ್ಣುವಿನಲ್ಲಿ ಜಗತ್‌ಕಾರಣತ್ವವೇನೋ ಸಿದ್ಧವಾಯಿತು. ಆದರೆ ನಾಲ್ಕನೆಯ ಸಮನ್ವಯ ಸೂತ್ರದಲ್ಲಿ ಪ್ರತಿಜ್ಞೆಗೈದ ಸರ್ವಶಬ್ದಸಮನ್ವಯವು ಸಿದ್ಧವಾಗಲಿಲ್ಲ; ಈ ಶಂಕೆಯ ಈ ಪಾದದ ನಿರಾಕರಣೆಯೇ ಉದ್ದೇಶ.

**एवं तावत् त्रिपाद्यां जन्मादिसूत्रे कण्ठोक्तकारणत्वतत् सङ्गतानन्दमयत्वादि-गुणान्तरप्रतिपादकवाक्यस्थशब्दसमन्वय उक्तः ।**

"ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಲ್ಲಿ ಜಗತ್‌ಕಾರಣತ್ವವನ್ನು ವಿಷ್ಣುವಿನ ಲಕ್ಷಣವೆಂದು ಕಂಠತಃ ಹೇಳಿದ್ದಾರೆ. ಆದರೆ ಮುಖ್ಯಲಕ್ಷಣವೆಂದರೆ ಗುಣಪೂರ್ಣತ್ವ. ಜಗತ್‌ಕಾರಣತ್ವಕ್ಕೆ ಸಂಗತವಾದ ಆನಂದಮಯತ್ವಾದಿಗುಣಗಳನ್ನು ಆನಂದಮಯಾಧಿಕರಣವೇ ಮೊದಲಾದ ಅಧಿಕರಣಗಳಲ್ಲಿ ಸಮನ್ವಯ ಮಾಡಲಾಯಿತು. ತತ್‌ಪ್ರತಿಪಾದಕವಾದ ಶ್ರುತಿಯನ್ನು ಸಮನ್ವಯ ಮಾಡಲಾಯಿತು. ಒಟ್ಟು ಹಿಂದಿನ ಮೂರು ಪಾದಗಳಲ್ಲಿ ಜನ್ಮಾದಿಕಾರಣತ್ವಕ್ಕೆ ಉಪಪಾದಕವಾದ ಗುಣಗಳನ್ನೆಲ್ಲ ಸಮನ್ವಯ ಮಾಡಿದಂತಾಯಿತು.

**अत्र तु पादे जिज्ञासासूत्रे ब्रह्मशब्दोक्तसर्वगुणपूर्तिमत्तया जिज्ञासोक्तेः जन्मादिसूत्रे च पूर्णगुणत्वोपपादककारणत्वमुखेन पूर्णगुणत्वस्यैव लक्षणत्वेन विवक्षितत्वात् शास्त्रयोनिसूत्रे च तत् स्फूर्तये सर्वशास्त्रप्रामाण्यप्रतिज्ञानात् समन्वयसूत्रे च तदर्थं समन्वयप्रतिज्ञानात् सर्वसमन्वयनिर्वाहायान्यत्रैव प्रसिद्धाव्यक्तादिशब्दसमन्वय उच्यत इति नाप्रतिज्ञातोक्तिः ।**

ಹಾಗಾದರೆ ನಾಲ್ಕನೆಯ ಪಾದವು ವ್ಯರ್ಥವಲ್ಲವೇ? ಎಂಬ ಶಂಕೆಗೆ ಅವಕಾಶವಿಲ್ಲ. ಈ ಪಾದದ ಸಾರ್ಥಕ್ಯವನ್ನು ಹೀಗೆ ತಿಳಿಯಬೇಕು - "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬ ಸೂತ್ರದಲ್ಲಿ ಬ್ರಹ್ಮಶಬ್ದದಿಂದ ಸಕಲಗುಣಪರಿಪೂರ್ಣತ್ವವನ್ನು ಬ್ರಹ್ಮನ ಲಕ್ಷಣವೆಂದು ಹೇಳಿದ್ದಾರೆ. ಮತ್ತು ಬ್ರಹ್ಮನನ್ನು ಸಕಲಗುಣಪರಿಪೂರ್ಣನೆಂದೇ ಜಿಜ್ಞಾಸೆ ಮಾಡಬೇಕೆಂದಿದ್ದಾರೆ. ಇದಕ್ಕೆ ಅನುಗುಣವಾಗಿ ಎರಡನೆಯ ಸೂತ್ರವು ಜನ್ಮಾದಿಕಾರಣತ್ವವನ್ನು ಬ್ರಹ್ಮನಲ್ಲಿ ಸಮರ್ಥಿಸುತ್ತಾ ಸಕಲಗುಣಪರಿಪೂರ್ಣತ್ವಲಕ್ಷಣವನ್ನೇ ಸಮರ್ಥಿಸಿದೆ. ಇದನ್ನೇ ಉತ್ತೇಜಿಸುತ್ತಾ ಶಾಸ್ತ್ರಯೋನಿತ್ವಸೂತ್ರವು ಹೊರಟಿದೆ. ಸಕಲ-ಗುಣಪರಿಪೂರ್ಣತ್ವವಿಷಯದಲ್ಲಿ ಸಕಲ ಸಚ್ಛಾಸ್ತ್ರಗಳೂ ಪ್ರಮಾಣಗಳಾಗಿವೆಯೆಂದು ಪ್ರತಿಜ್ಞೆ ಮಾಡಿದೆ. ಅನಂತರ ನಾಲ್ಕನೆಯ ಸಮನ್ವಯ ಸೂತ್ರವು ಬ್ರಹ್ಮನು ಸಕಲಗುಣಪರಿಪೂರ್ಣನಾಗಬೇಕಾದರೆ ಸಕಲ-ಶಬ್ದಗಳ ಸಮನ್ವಯವು ಅವನಲ್ಲೇ ಸಿದ್ಧವಾಗಬೇಕು. ಸಕಲಶಬ್ದಗಳೂ ಅವನನ್ನೇ ಕೊಂಡಾಡುತ್ತವೆಂದು ಸರ್ವಶಬ್ದಸಮನ್ವಯದ ಪ್ರತಿಜ್ಞೆಯನ್ನು ಮಾಡಿದೆ.

ಪ್ರಕೃತ ಈ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ 'ಅವ್ಯಕ್ತ' ಮೊದಲಾದ ಶಬ್ದಗಳ ಸಮನ್ವಯ ಮಾಡಲಾಗಿದೆ. ಇದರಿಂದ ಸಕಲಶಬ್ದಗಳ ಸಮನ್ವಯ ಮೂಲಕ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಹೀಗೆ ಸಮನ್ವಯ ಸೂತ್ರದಲ್ಲಿ ಪ್ರತಿಜ್ಞೆಗೈದಿದ್ದನ್ನೇ ಇಲ್ಲಿ ಸಮರ್ಥಿಸಿದ್ದರಿಂದ ಪ್ರತಿಜ್ಞೆ ಮಾಡದ್ದನ್ನು ಹೇಳಿದೆಯೆಂಬ ದೋಷಕ್ಕೆ ಆಸ್ಪದವಿಲ್ಲ.

**तथाचैकैकहेतुत्वस्य लक्षणत्वसम्भवेऽपि मुमुक्षुणा समुदितजन्मादिहेतुत्वं ज्ञेयमित्यादि ज्ञापयितुं समुदितहेतुत्वोक्तिः तथैकैकगुणपूर्तेस्तत्सम्भवेऽपि सर्वगुणपूर्त्युक्तिः ।**

ಆನುಮಾನಿಕಾಧಿಕರಣ (೧-೪-೧)

ಸಕಲಗುಣಪರಿಪೂರ್ಣತ್ವಜ್ಞಾನದ ಅವಶ್ಯಕತೆಯೇ ಇಲ್ಲವೆಂದು ಹೇಳಬಾರದು. ಯಾವರೀತಿಯಾಗಿ ಜನ್ಮಾದ್ಯಷ್ಟಕಗಳಲ್ಲಿ ಕೇವಲ ಜನ್ಮಕಾರಣತ್ವವನ್ನೂ ಅಥವಾ ಸೃಷ್ಟಿಕಾರಣತ್ವವನ್ನೂ, ಬ್ರಹ್ಮನ ಲಕ್ಷಣವನ್ನಾಗಿ ಹೇಳಿದರೆ ಸಾಕಾಗುತ್ತಿತ್ತು. ಆದರೂ ಸಹ ಮುಮುಕ್ಷು ಆದವನು ಸಮುದಿತವಾದ ಜನ್ಮಾದಿಕಾರಣತ್ವವನ್ನು ಅವಶ್ಯ ತಿಳಿಯಬೇಕೋ, ಅದೇ ರೀತಿಯಾಗಿ ನಿರತಿಶಯವಾದ ಏಕಗುಣದಿಂದ ಪರಿಪೂರ್ಣನೆಂದು ಸಿದ್ಧನಾದರೂ ಈ ಗುಣವು ಜೀವರಲ್ಲಿ ಇಲ್ಲದ ಕಾರಣ ಜೀವಭೇದವೇನೋ, ಸಿದ್ಧವಾಗುತ್ತದೆ. ಆದರೆ ಮುಮುಕ್ಷು ಆದವನು ಅತ್ಯವಶ್ಯಕವಾಗಿ ಸಕಲಗುಣಪರಿಪೂರ್ಣನೆಂದು ತಿಳಿಯಲೇಬೇಕು. ಅದಕ್ಕೋಸ್ಕರ ಸಂಪೂರ್ಣ ಈ ಪ್ರಥಮಾಧ್ಯಾಯದಲ್ಲಿ ಸಕಲಗುಣಪರಿಪೂರ್ಣತ್ವವನ್ನು ಸಮರ್ಥಿಸಲಾಗಿದೆ.

ಹೀಗೆ ಪ್ರಥಮಸೂತ್ರೋಕ್ತವಾದ ಗುಣಪರಿಪೂರ್ಣತ್ವದ ಸಮರ್ಥನೆಗೋಸ್ಕರ ಸಮಸ್ತ ಅಧ್ಯಾಯವು ಹೊರಟಿದೆ, ಹೊರತು ಜಗತ್ಕಾರಣತ್ವದ ಸಮರ್ಥನೆಗೋಸ್ಕರ ಅಲ್ಲ.

**यदि च कारणत्वमेव लक्षणं तत्रैव च कारणे शास्त्रं प्रमाणं तत्प्रामाण्यं च कारणवाक्यसमन्वयादिति जन्मादिसूत्रत्रयेऽभिप्रेतं स्यात् तर्ह्याद्यपादे ''अन्तः'' ''ज्योतिः'' इत्यादौ द्वितीये ''सर्वत्र'' ''अन्तर'' इत्यादौ तृतीये ''भूमा'' ''दहर'' इत्यादौ चतुर्थे ''वाक्यान्वयात्'' इत्यादावकारणवाक्यसमन्वयसूत्रणं न स्यात् । तच्च परैरपि स्वीकृतम् ।**

ಒಂದು ವೇಳೆ ಜಗತ್ಕಾರಣತ್ವವೇ ಬ್ರಹ್ಮನ ಲಕ್ಷಣ; ಅಂತಹ ಕಾರಣತ್ವದಲ್ಲಿಯೇ ಶಾಸ್ತ್ರವು ಪ್ರಮಾಣ; ಅಂತಹ ಶಾಸ್ತ್ರಪ್ರಾಮಾಣ್ಯಕ್ಕೋಸ್ಕರವೇ ಕಾರಣವಾಕ್ಯಗಳ ಸಮನ್ವಯವನ್ನೇ ಜನ್ಮಾದ್ಯಸ್ಯ ಮೊದಲಾದ ಮೂರು ಸೂತ್ರಗಳು ಹೇಳುತ್ತಿವೆ, ಎನ್ನುವುದಾದರೆ ಅನೇಕ ಬಾಧಕಗಳು ಬರುತ್ತವೆ. ಅಂತಸ್ತದ್ಧರ್ಮೋಪದೇಶಾತ್ (೧-೧-೨೦), ಜ್ಯೋತಿಶ್ಚರಣಾಭಿಧಾನಾತ್ (೧-೧-೨೪) ಸರ್ವತ್ರಪ್ರಸಿದ್ಧೋಪದೇಶಾತ್ (೧-೨-೧), ಅಂತರ ಉಪಪತ್ತೇಃ (೧-೨-೧೩), ಭೂಮಾ ಸಂಪ್ರಸಾದಾದಧ್ಯುಪದೇಶಾತ್ (೧-೩-೮), ದಹರ ಉತ್ತರೇಭ್ಯಃ (೧-೩-೧೪) ವಾಕ್ಯಾನ್ವಯಾತ್ (೧-೪-೨೦) ಇವೇ ಮೊದಲಾದ ಸೂತ್ರಗಳಲ್ಲಿ ಜಗತ್ಕಾರಣತ್ವವನ್ನು ಹೇಳದ ಶ್ರುತಿವಾಕ್ಯಗಳನ್ನು ಸಮನ್ವಯ ಮಾಡಿದ್ದು ತಪ್ಪಾಗಬೇಕಾದೀತು. ಅದ್ವೈತಿಗಳೂ ಸಹ ಈ ಎಲ್ಲಾ ಅಧಿಕರಣಗಳು ಅಕಾರಣ ವಾಕ್ಯಗಳನ್ನೇ ಸನಮ್ವಯ ಮಾಡುತ್ತಿವೆಯೆಂದು ಸಮರ್ಥಿಸಿದ್ದಾರೆ.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – ।। आनुमानिकमप्येकेषामिति चेन्न शरीररूपकविन्यस्त-गृहीतेर्दर्शयति च ।।** अत्र टीकायां ''एतत्पादप्रतिपाद्यमाह'' इत्यादिना ''प्राबल्यादियमुक्तिः'' इत्यन्तेन बलवच्छ्रुतिलिङ्गादिभिरन्यत्रैव प्रसिद्धसमन्वय-परत्वेनैतत्पादसार्थक्यमुक्त्वा ''पूर्वं स्रष्टृत्वादिगुणाभिधायकानां शब्दानां तत्सङ्गतानां च समन्वयो निगदितोऽत्र पुनस्स्वरवर्णपदात्मकानां समस्तशब्दानामिति वाऽवैयर्थ्यम्'' इति ग्रन्थेन प्रकारान्तरेणापि साफल्यमुक्तम् ।

ವಿವರಣೆ - ಪ್ರಥಮಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಸಮನ್ವಯವನ್ನು ಮಾಡಿದರು. ದ್ವಿತೀಯಪಾದದಲ್ಲಿ ಅನ್ಯತ್ರಪ್ರಸಿದ್ಧವಾದ ಲಿಂಗಾತ್ಮಕಶಬ್ದಸಮನ್ವಯವನ್ನು ತೃತೀಯಪಾದದಲ್ಲಿ ಉಭಯತ್ರ-ಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಸಮನ್ವಯವನ್ನು ಮಾಡಿದ್ದಾಯಿತು. ಈ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ ಶಬ್ದಸಮನ್ವಯವನ್ನು ಮಾಡಲು ಪ್ರಾರಂಭಿಸಿದ್ದಾರೆ.

ಪ್ರಾರಂಭದಲ್ಲಿ ಈ ಪಾದದ ಸಾರ್ಥಕ್ಯವನ್ನು ಸಮರ್ಥಿಸುತ್ತಿದ್ದಾರೆ. ಹಿಂದಿನ ಮೂರುಪಾದಗಳಿಂದ ಗತಾರ್ಥವಾಗದ ಶಬ್ದಗಳ ಸಮನ್ವಯವನ್ನು ಈ ಪಾದದಲ್ಲಿ ಮಾಡಲಾಗಿದೆ. ಇಲ್ಲಿ ಮಾಡುವ ಶಬ್ದಗಳ ಸಮನ್ವಯದಿಂದಲೇ ವಿಷ್ಣುವಿನಲ್ಲಿ ಸಕಲಶಬ್ದಸಮನ್ವಯವನ್ನು ಮಾಡಿದಂತಾಗುತ್ತದೆ. ಸಮನ್ವಯಸೂತ್ರದಲ್ಲಿ ಮಾಡಿದ ಪ್ರತಿಜ್ಞೆಯೂ ಅರ್ಥವತ್ ಆಗುತ್ತದೆ. ಮತ್ತು ವಿಷ್ಣುವಿನಲ್ಲಿ ಸಕಲ ಗುಣಪರಿಪೂರ್ಣತ್ವವೂ ಇದರಿಂದಲೇ ನಿರ್ಣಯವಾಗುತ್ತದೆ. ಇವೇ ಮೊದಲಾದ ವಿಚಾರಗಳನ್ನು ಹೇಳುತ್ತಾ ಪ್ರಾರಂಭದಲ್ಲಿ ಪಾದದ ಸಾರ್ಥಕ್ಯವನ್ನು ವಿಮರ್ಶಿಸುತ್ತಿದ್ದಾರೆ.

ಚತುರ್ಥಪಾದದ ಸಾರ್ಥಕ್ಯಸಮರ್ಥನೆ ಹೀಗಿದೆ - ಈ ನಾಲ್ಕನೆಯ ಪಾದವು ಸಾರ್ಥಕವಾಗಿದೆ, ಎಂಬುದನ್ನು ಎರಡು ಪ್ರಕಾರಗಳಲ್ಲಿ ಟೀಕಾರಾಯರು ಸಮರ್ಥಿಸಿದ್ದಾರೆ -

೧) ಶ್ರುತಿ ಮತ್ತು ಲಿಂಗಗಳ ಬಲದಿಂದ ಕೆಲವು ಶಬ್ದಗಳು ಬೇರೆ ಪದಾರ್ಥಗಳಲ್ಲಿಯೇ ಪ್ರಸಿದ್ಧಗಳಾಗಿ ವಿಷ್ಣುವನ್ನು ಸರ್ವಥಾ ಪ್ರತಿಪಾದಿಸಲಾರವು ಎಂಬ ಶಂಕೆಯನ್ನು ಈ ಪಾದದಲ್ಲಿ ನಿರಾಕರಿಸಲಾಗಿದೆ. ಹೀಗೆ ಅತ್ಯಂತ ಪ್ರಬಲವಾದ ಶ್ರುತಿಲಿಂಗಗಳ ಸಮನ್ವಯವನ್ನು ಮತ್ತು ಅದಕ್ಕೆ ಸಂಬಂಧಪಟ್ಟ ಎಲ್ಲಾ ಶಬ್ದಗಳ ಸಮನ್ವಯವನ್ನೂ ಮಾಡುತ್ತಿರುವುದರಿಂದ ಈ ಪಾದವು ಸಾರ್ಥಕ.

ಆನುಮಾನಿಕಾಧಿಕರಣ (೧-೪-೧)

೨) ಹಿಂದಿನ ಮೂರು ಪಾದಗಳಲ್ಲಿ ಜಗಜ್ಜನ್ಮಾದಿಕಾರಣತ್ವಕ್ಕೆ ಉಪಪಾದಕವಾದ ಅನೇಕಶಬ್ದಗಳ ಸಮನ್ವಯವನ್ನು ಮಾಡಲಾಯಿತು. ಈ ಪಾದದಲ್ಲಿ ಸ್ವರ, ವರ್ಣ, ಪದರೂಪವಾದ ಸಕಲಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಆದ್ದರಿಂದಲೂ ಈ ಪಾದವು ಸಾರ್ಥಕವಾಗಿದೆ.

ಹೀಗೆ ಟೀಕೆಯಲ್ಲಿ ಎರಡು ಪ್ರಕಾರದ ಸಾರ್ಥಕ್ಯವನ್ನು ಈ ಪಾದಕ್ಕೆ ಹೇಳಿದ್ದಾರೆ - ಟೀಕೆಯಲ್ಲಿ 'ಏತತ್ 'ಪಾದಪ್ರತಿಪಾದ್ಯಮಾಹ' ಎಂದು ಪ್ರಾರಂಭದಿಂದ 'ಪ್ರಾಬಲ್ಯಾದಿಯಮುಕ್ತಿಃ' ಎಂಬ ವಾಕ್ಯದ ತನಕ ಈ ವಿಷಯವನ್ನು ಹೇಳಿದ್ದಾರೆ.

**प्रकाशः –** तत्राद्यमानन्दमयनये पादोपाधिसमर्थनप्रस्तावे विवृतं मत्वा द्वितीयं समाधिं विवरीतुकामस्तं तावत् सङ्गृह्णाह – **अस्तु विष्णोरिति** ।।

ಈ ಎರಡು ಪ್ರಕಾರದ ಸಾರ್ಥಕ್ಯಗಳಲ್ಲಿ ಗ್ರಂಥಕಾರರು ಎರಡನೆಯದನ್ನಷ್ಟೇ ವಿವರಿಸಿದ್ದಾರೆ. ಏಕೆಂದರೆ ಆನಂದಮಯಾಧಿಕರಣದಲ್ಲಿ ಮೊದಲನೆಯ ಪ್ರಕಾರವನ್ನು ಈಗಾಗಲೇ ವಿವರಿಸಿದ್ದಾಗಿದೆ. ಪುನಃ ಅದರ ವಿವರಣೆ ಅನಾವಶ್ಯಕ. ಸಮಸ್ತ ಈ ಪಾದದ ಅರ್ಥವನ್ನು ಶ್ಲೋಕರೂಪದಲ್ಲಿ ಸಂಗ್ರಹಿಸಿದ್ದಾರೆ.

**प्रकाशः –** 'शङ्का निवार्यते' इत्यस्यात्रेति पूर्वं श्रुतपदेनान्वयः । अत्र पाद इत्यर्थः ।

ಶ್ಲೋಕದಲ್ಲಿರುವ 'ಶಂಕಾ ನಿವಾರ್ಯತೇ' "ಶಂಕೆಯ ನಿರಾಕರಣೆಯಿದೆ' ಎಂಬುದಕ್ಕೆ 'ಅತ್ರ' 'ಈ ಪಾದದಲ್ಲಿ' ಎಂಬುದರ ಜೊತೆ ಅನ್ವಯಿಸಬೇಕು.

**प्रकाशः –** 'सर्वसमन्वयोऽत्र निगद्यते' इति यथाटीकमनुवादे कार्ये 'नतु सर्वसमन्वयः' इत्यादिरूपेणानुवादः सर्वसमन्वयोक्तिर्व्यर्थेति टीकायामुत्पन्नशङ्का-निरासाय ।

ಗ್ರಂಥಕಾರರು ಶ್ಲೋಕದಲ್ಲಿರುವ 'ನತು ಸರ್ವಸಮನ್ವಯಃ' ಇತ್ಯಾದಿಯಾಗಿ ಹೇಳಿದ್ದಾರೆ. ವಸ್ತುತಃ ಟೀಕೆಗೆ ಅನುಸಾರಿಯಾಗಿ 'ಸರ್ವಸಮನ್ವಯೋಽತ್ರ ನಿಗದ್ಯತೇ' ಎಂದೇ ಅನುವಾದ ಮಾಡಬೇಕಿತ್ತು. ಆದರೆ ಸರ್ವಸಮನ್ವಯದ ಉಕ್ತಿಯು ವ್ಯರ್ಥವಲ್ಲವೇ? ಎಂಬ ಟೀಕೆಯ ಮೇಲೆ ಬರುವ ಆಶಂಕೆಯನ್ನು ಪರಿಹರಿಸಬೇಕಾಗಿದೆ.

**प्रकाशः –** ननु न समस्तसमन्वयोक्तिरुपपन्ना । वैयर्थ्यात् । जन्माद्यस्येत्युक्त-जन्मादिकारणत्वे हि शास्त्रं प्रमाणीकृतम् । जन्मादिकारणताभिधायकवाक्यानामेव परमात्मपरत्वं चतुर्थसूत्रे प्रतिज्ञातम् । तच्चातीतैः पादैस्समर्थितमित्येवं टीकोक्तशङ्कां हृदि कृत्वा –

जन्माद्यस्येति सूत्रेण गुणसर्वस्वसिद्धये ।
ब्रह्मणो लक्षणं प्रोक्तं शास्त्रमूलं यतस्ततः ।।
अन्वयस्सर्वशब्दानां गुणसर्वस्ववेदकः ।
शब्दप्रवृत्तिहेतूनां तस्मिन्मुख्यसमन्वयात् ।।

इत्यानन्दमयनयानुव्याख्यानसुधयोः ''चतुर्थसूत्रेऽपि'' इत्यादिनाऽत्रत्योत्तरटीकायां चोक्तरीत्या शङ्कासमाधिं विवक्षुस्सङ्ग्रहं तात्पर्यतो विवृण्वन् ''पूर्वं स्रष्टृत्व'' इत्यादिटीकां विवृणोति – एवं तावदिति ।।

ಶಂಕೆ - ''ಜನ್ಮಾದ್ಯಸ್ಯ'' ಎಂಬ ಸೂತ್ರವು ಜಗತ್ಕಾರಣತ್ವವೇ ವಿಷ್ಣುವಿನ ಲಕ್ಷಣವೆಂದಿತು. ಶಾಸ್ತ್ರಗಳೆಲ್ಲವೂ ಜಗತ್ಕಾರಣತ್ವವಿಷಯದಲ್ಲಿಯೇ ಪ್ರಮಾಣಗಳಾಗಿವೆಯೆಂದು ಹೇಳಲು ''ಶಾಸ್ತ್ರಯೋನಿತ್ವಸೂತ್ರವು ಹೊರಟಿತು. ಜಗತ್ಕಾರಣತ್ವಪ್ರತಿಪಾದಕವಾದ ಸಕಲ ಶ್ರುತಿವಾಕ್ಯಗಳೂ ವಿಷ್ಣುವಿನಲ್ಲೇ ಸಮನ್ವಯವಾಗುತ್ತವೆ. ಆದ್ದರಿಂದಲೇ ಜಗತ್ಕಾರಣತ್ವವಿಷಯಕ ಶಾಸ್ತ್ರಪ್ರಾಮಾಣ್ಯವು ಸಿದ್ಧವಾಗುತ್ತದೆಂದು ನಾಲ್ಕನೆಯ ಸೂತ್ರದಲ್ಲಿ ಸಮರ್ಥಿಸಲಾಯಿತು. ಜಗತ್ಕಾರಣತ್ವಪ್ರತಿಪಾದಕ ಶ್ರುತಿಗಳನ್ನೇ ಮೂರು ಪಾದಗಳಲ್ಲಿ ಸಮರ್ಥಿಸಿದರು. ಆದ್ದರಿಂದ ಸಮನ್ವಯಸೂತ್ರದಲ್ಲಿ ಸಕಲಶಬ್ದಗಳ ಸಮನ್ವಯಪ್ರತಿಜ್ಞೆಯನ್ನು ಮಾಡಿಯೇ ಇಲ್ಲ. ಕೇವಲ ಜಗತ್ಕಾರಣತ್ವವಿಷಯಕಶಬ್ದಸಮನ್ವಯದ ಪ್ರತಿಜ್ಞೆಯನ್ನಷ್ಟೇ ಮಾಡಲಾಗಿದೆ. ಪ್ರಕೃತ ಈ ಪಾದದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಪರಿಪೂರ್ಣಮಾಡಲು ಹೊರಟಿದ್ದೀರಿ. ಇದು ಪ್ರತಿಜ್ಞೆಗೆ ವಿರುದ್ಧವಾಯಿತು.

ಸಮಾಧಾನ - ಪ್ರಥಮಸೂತ್ರದಲ್ಲಿ ಗುಣಪೂರ್ಣತ್ವವನ್ನು ವಿಷ್ಣುವಿನ ಲಕ್ಷಣವೆಂದು ಹೇಳಲಾಗಿದೆ. ಅದನ್ನೇ ಉಪಪಾದಿಸಲು ಜಗತ್ಕಾರಣತ್ವಾದಿಲಕ್ಷಣಗಳನ್ನು ಹೇಳಿದೆ. ಆದ್ದರಿಂದ ವಿಷ್ಣುವಿನಲ್ಲಿರುವ ಸಮಸ್ತಗುಣಪರಿಪೂರ್ಣತ್ವವನ್ನು ಉಪಪಾದಿಸಲು ಪ್ರಥಮಾಧ್ಯಾಯವು ಹೊರಟಿದೆ ಹೊರತು ಜಗತ್ ಕಾರಣತ್ವವನ್ನು ಸಮರ್ಥಿಸುವುದಕ್ಕಾಗಿ ಅಲ್ಲ. ಒಂದು ವೇಳೆ ಜಗತ್ಕಾರಣತ್ವದ ಪ್ರತಿಪಾದನೆಯೇ ಮುಖ್ಯ ಉದ್ದೇಶವಾಗಿದ್ದಲ್ಲಿ ಈ ಪಾದವು ವ್ಯರ್ಥವಾಗುತ್ತಿತ್ತು. ಸಕಲಗುಣಪರಿಪೂರ್ಣತ್ವವು ಸಿದ್ಧವಾಗಬೇಕಾದರೆ ಸಕಲಶಬ್ದಗಳೂ ವಿಷ್ಣುಪರವಾಗಬೇಕು. ಅದಕ್ಕೋಸ್ಕರ ಈ ಪಾದವು ಸಾರ್ಥಕವಾಗಿದೆ.

ಈ ರೀತಿಯಾದ ಸಮಾಧಾನವನ್ನು ಅನುವ್ಯಾಖ್ಯಾನ, ನ್ಯಾಯಸುಧೆ, ತತ್ವಪ್ರಕಾಶಿಕೆಗಳಲ್ಲಿ ಹೇಳಿದ್ದಾರೆ. ಅನುವ್ಯಾಖ್ಯಾನದ ಶ್ಲೋಕ ಹೀಗಿದೆ -

ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ಶಾಸ್ತ್ರಮೂಲಂ ಯತಸ್ತತಃ ॥
ಅನ್ವಯಸ್ಸರ್ವಶಬ್ದಾನಾಂ ಗುಣಸರ್ವಸ್ವವೇದಕಃ
ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ ಮುಖ್ಯಸಮನ್ವಯಾತ್ ॥
ಆನುಮಾನಿಕಾಧಿಕರಣ (೧-೪-೧)

ಗುಣಪೂರ್ಣತ್ವಸಿದ್ಧಿಗೋಸ್ಕರವೇ "ಜನ್ಮಾದ್ಯಸ್ಯ ಯತಃ" ಎಂಬ ಸೂತ್ರದಿಂದ ಬ್ರಹ್ಮನ ಲಕ್ಷಣವು ಹೇಳಲ್ಪಟ್ಟಿದೆ. ಈ ಲಕ್ಷಣವು ಶಾಸ್ತ್ರಮೂಲವಾದ್ದರಿಂದ ಅತಿವ್ಯಾಪ್ತಿ ಮೊದಲಾದ ದೋಷಗಳಿಗೆ ಅವಕಾಶವಿಲ್ಲ. ಸಕಲ ಶಬ್ದಗಳ ಸಮನ್ವಯದಿಂದಲೇ ಬ್ರಹ್ಮನ ಗುಣಪೂರ್ಣತ್ವವು ಸಿದ್ಧವಾಗುತ್ತದೆ. ವಿಷ್ಣುವಿನಲ್ಲೇ ಸಕಲಶಬ್ದಗಳ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ಸಮನ್ವಯವಾಗುತ್ತದೆ.

ಇದನ್ನೇ ನ್ಯಾಯಸುಧೆಯಲ್ಲಿಯೂ "ಅಥಾತೋ ಬ್ರಹ್ಮಜಿಜ್ಞಾಸಾ ಇತಿ ಪ್ರಥಮಸೂತ್ರೇ ಬ್ರಹ್ಮಶಬ್ದೇನ ಜಿಜ್ಞಾಸ್ಯಸ್ಯ ಸಕಲಗುಣಪೂರ್ಣತ್ವಂ ಜೀವಾದಿವ್ಯಾವೃತ್ತ್ಯರ್ಥಮುಪಾತ್ತಮ್" ಇತ್ಯಾದಿಯಾಗಿ ಹೇಳಿದ್ದಾರೆ.

ಟೀಕೆಯಲ್ಲಿಯೂ "ಚತುರ್ಥಸೂತ್ರೇಽಪಿ ಸರ್ವಶಬ್ದಾನಾಂ ಪರಮಾತ್ಮಪರತ್ವಸ್ಯ ಪ್ರತಿಜ್ಞಾತತ್ವಾತ್" "ಸಮನ್ವಯ ಸೂತ್ರದಲ್ಲಿ ಪರಮಾತ್ಮಪರತ್ವವನ್ನೇ ಸಕಲಶಬ್ದಗಳಿಗೆ ಪ್ರತಿಜ್ಞೆ ಮಾಡಲಾಗಿದೆ" ಎಂದು ಹೇಳಿದ್ದಾರೆ.

ಈ ಶಂಕೆಯನ್ನು ಮತ್ತು ಸಮಾಧಾನವನ್ನು ಟೀಕೆಯಲ್ಲಿ ವಿವರವಾಗಿ ಹೇಳಿದೆ. ಅದರ ತಾತ್ಪರ್ಯವನ್ನೇ ಗ್ರಂಥಕಾರರು ಸಂಗ್ರಹಿಸಿದ್ದಾರೆ. ಮತ್ತು "ಪೂರ್ವಂ ಸ್ರಷ್ಟೃತ್ವಾದಿ ಗುಣಾಭಿಧಾಯಕಾನಾಂ ಶಬ್ದಾನಾಂ" ಇತ್ಯಾದಿ ಟೀಕಾ ಮಾತುಗಳನ್ನು ವ್ಯಾಖ್ಯಾನಿಸುತ್ತಿದ್ದಾರೆ 'ಏವಂ ತಾವತ್' ಇತ್ಯಾದಿ ವಾಕ್ಯಗಳಿಂದ.

**प्रकाशः – तत्सङ्गतेति ।। "यतो वा" इति वाक्ये जगत्कारणब्रह्मजिज्ञासा कार्येत्युक्तमयुक्तम् । ब्रह्मणोऽब्रह्मभूतानन्दमयावयवत्वप्रतीतेरित्याशङ्कानिरासायानन्दमयादिशब्दसमन्वयाद्वा आनन्दमयस्यान्यत्वे "सोऽकामयत बहु स्याम्" इत्युक्तकारणत्वस्यातिव्याप्तेरिति शङ्कानिरासाद्वा सङ्गतत्वं ध्येयम् ।**

ಜನ್ಮಾಧಿಕರಣದಲ್ಲಿ ಜಗತ್‌ಕಾರಣತ್ವವೆಂಬ ಗುಣವನ್ನು ವಿಷ್ಣುವಿನ ಲಕ್ಷಣವೆಂದು ಹೇಳಿದ್ದಾರೆ. ಇದಕ್ಕೆ ಉಪಪಾದಕವಾಗಿ ಆನಂದಮಯಾಧಿಕರಣವೇ ಮೊದಲಾದವುಗಳು ಹೊರಟಿವೆ. ಆದ್ದರಿಂದ ಜಗತ್ ಕಾರಣತ್ವಕ್ಕೆ ಆನಂದಮಯತ್ವಾದಿಗಳು ಸಂಗತಗಳಾಗಿವೆ. ಅದು ಹೀಗೆ - "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿ ಶ್ರುತಿಯಲ್ಲಿ ಜಗತ್‌ಕಾರಣನಾದ ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಲಾಗಿದೆ. ಇದು ತಪ್ಪು. "ಬ್ರಹ್ಮ ಪುಚ್ಛಂ ಪ್ರತಿಷ್ಠಾ" ಎಂಬ ಶ್ರುತಿಯು ಬ್ರಹ್ಮನನ್ನು ಆನಂದಮಯನ ಅವಯವವೆಂದು ಹೇಳಿದೆ. ಆನಂದಮಯನಂತೂ ಬ್ರಹ್ಮನಲ್ಲ. ಹಾಗಾಗಿ ಬ್ರಹ್ಮನ ಜಿಜ್ಞಾಸೆ ಮಾಡಬೇಕಾಗಿಲ್ಲ ಎಂಬ ಶಂಕೆಯು ಬಂದರೆ ಆನಂದಮಯಾಧಿಕರಣದಲ್ಲಿ ಆನಂದಮಯ ಶಬ್ದದ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಿದ್ದಾರೆ. ಇದರಿಂದ ಜಗತ್‌ಕಾರಣತ್ವವನ್ನೂ ಬ್ರಹ್ಮನಲ್ಲಿ ಉಪಪಾದಿಸಿದಂತಾಗುತ್ತದೆ. ಅಥವಾ "ಸೋಽಕಾಮಯತ ಬಹು ಸ್ಯಾಂ" ಎಂಬ ಶ್ರುತಿಯಲ್ಲಿ ಜಗತ್‌ಕಾರಣತ್ವವನ್ನು ಬ್ರಹ್ಮನಿಗೆ ಹೇಳಿದ್ದಾರೆ. ಆನಂದಮಯನು ಅನ್ಯನಾದಲ್ಲಿ ಜಗತ್‌ಕಾರಣನೂ ಅನ್ಯನಾಗುತ್ತಾನೆ ಎಂದು ಜಗತ್‌ಕಾರಣತ್ವಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ. ಇದರ ಪರಿಹಾರಕ್ಕೋಸ್ಕರ ಆನಂದಮಯಾಧಿಕರಣವು ಹೊರಟಿದೆ. ಹೀಗೆ ಜಗತ್ ಕಾರಣತ್ವಕ್ಕೆ ಆನಂದಮಾಯಾದಿಗಳು ಸಂಗತವಾಗಿವೆ.

ಪರಿಪೂರ್ಣಚಂದ್ರಿಕಾ

**प्रकाशः** – आदिपदेन तत्र तत्रोक्तरीत्या सङ्गतानामन्तस्स्थत्वादिगुणान्तराणां ग्रहणम् ।।

ಇದರಂತೆ ಅಂತಃಸ್ಥತ್ವಾದಿಗುಣಗಳೂ ಸಹ ಜನ್ಮಾದಿಕಾರಣತ್ವಕ್ಕೇ ಸಂಬಂಧಪಟ್ಟವೆಯೆಂದು ಆದಿಪದದಿಂದ ತಿಳಿಯುತ್ತಿದೆ - ''ಇಂದ್ರೋ ರಾಜಾ ಜಗತೋ ಯ ಈಶೇ'' ಎಂಬ ಶ್ರುತಿಯ ಬಲದಿಂದ ಇಂದ್ರಾದಿಗಳೇ ಅಂತಃಸ್ಥರಾಗುತ್ತಾರೆ. ಅದೃಶ್ಯಾದಿಗಳೂ ಅದೃಶ್ಯತ್ವಯುಕ್ತನಾದ ಆನಂದಮಯಾದಿಗಳೂ ಇಂದ್ರಾದಿಗಳೇ ಆಗುತ್ತಾರೆ. ಆದ್ದರಿಂದಲೇ ಜಗತ್ಕಾರಣರೂ ಇಂದ್ರಾದಿಗಳೇ ಆಗುತ್ತಾರೆ ಹೊರತು ವಿಷ್ಣುವು ಆಗುವುದಿಲ್ಲ ಎಂಬ ಪೂರ್ವಪಕ್ಷದ ಪರಿಹಾರಕ್ಕೋಸ್ಕರ ಅಂತಸ್ಥತ್ವಾಧಿಕರಣವು ಹೊರಟಿದೆ. ಹೀಗೆ ಜಗತ್ಕಾರಣತ್ವಗುಣಕ್ಕೆ ಸಂಬಂಧಿಸಿದ ಗುಣಗಳೆಲ್ಲವನ್ನೂ ಹಿಂದಿನ ಮೂರು ಪಾದಗಳಲ್ಲಿ ಸಮರ್ಥಿಸಿದ್ದಾಯಿತು.

**प्रकाशः – अन्यत्रैव प्रसिद्धेति** ।। एतेन टीकायां ''स्वरवर्णपदात्मकानाम्'' इत्यस्य 'अन्यत्रैव प्रसिद्धानामव्यक्तादिपदात्मकानाम्' इत्यर्थ उक्तो भवति । तेनान्यत्रैव प्रसिद्धिपादे स्वरादिसमन्वयो न युक्त इति शङ्काऽनवकाशः ।

ಹಾಗಾದರೆ ಜಗತ್ಕಾರಣತ್ವೋಪಯುಕ್ತವಾದ ಸಕಲಗುಣಗಳನ್ನು ಹೇಳಿದ್ದಾಯಿತು. ಪುನಃ ಈ ಪಾದವು ಏಕೆ? ಎಂಬ ಹಿಂದಿನ ಶಂಕೆಗೆ ಏನು ಉತ್ತರ ? ಎಂದರೆ, ಗ್ರಂಥದಲ್ಲಿ 'ಅತ್ರತು' ಇತ್ಯಾದಿ ಮಾತುಗಳಿಂದ ಉತ್ತರಿಸುತ್ತಿದ್ದಾರೆ. ಇದರ ಅಭಿಪ್ರಾಯ ಇಷ್ಟು - ಮೊದಲನೆಯ ಸೂತ್ರದಲ್ಲಿ ಗುಣಪರಿಪೂರ್ಣತ್ವವನ್ನು ವಿಷ್ಣುವಿನ ಪ್ರಧಾನಲಕ್ಷಣವೆಂದು ಹೇಳಿದೆ. ಅದರ ಸಮರ್ಥನೆಯಾಗಿಯೇ ಸಮಸ್ತ ಅಧ್ಯಾಯವು ಹೊರಟಿದೆ. ಪ್ರಕೃತ ಈ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧವಾದ ಅವ್ಯಕ್ತಾದಿ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಇದರಿಂದ ಸಕಲಶಬ್ದಸಮನ್ವಯವು ಸಿದ್ಧವಾಗಿ ಸಕಲಗುಣಪರಿಪೂರ್ಣತ್ವವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ.

ಟೀಕೆಯಲ್ಲಿ ಹೀಗೆ ಹೇಳಿದೆ - ''ಹಿಂದಿನ ಪಾದಗಳಲ್ಲಿ ಜಗತ್ಕಾರಣತ್ವವನ್ನು ಅದಕ್ಕೆ ಸಂಬಂಧಪಟ್ಟ ಗುಣಗಳನ್ನೂ ಸಮನ್ವಯ ಮಾಡಿದ್ದಾಯಿತು. ಈ ಪಾದದಲ್ಲಿ ಸ್ವರ, ವರ್ಣ, ಪದಾತ್ಮಕವಾದ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದ ಈ ಪಾದವು ಸಾರ್ಥಕವಾಗಿದೆ'' ಎಂದು. ಟೀಕೆಯಲ್ಲಿರುವ ''ಸ್ವರವರ್ಣಪದಾತ್ಮಕಾನಾಂ'' ಎಂಬುದರ ಅರ್ಥವನ್ನು ಗ್ರಂಥಕಾರರು ''ಅನ್ಯತ್ರೈವ ಪ್ರಸಿದ್ಧಾನಾಂ ಅವ್ಯಕ್ತಾದಿಪದಾತ್ಮಕಾನಾಂ'' ಎಂಬುದರಿಂದ ಸ್ಪಷ್ಟಪಡಿಸಿದ್ದಾರೆ. ಅಂದರೆ ಅನ್ಯತ್ರೈವಪ್ರಸಿದ್ಧವಾದದ್ದು ಅವ್ಯಕ್ತಾದಿ ಪದಗಳೇ ಹೊರತು ಸ್ವರವರ್ಣಾದಿಗಳಲ್ಲ. ಆದ್ದರಿಂದ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳನ್ನು ಸಮನ್ವಯ ಮಾಡಲು ಹೊರಟಿರುವ ಈ ಪಾದದಲ್ಲಿ ಸ್ವರವರ್ಣಾದಿಗಳ ಸಮನ್ವಯವು ಅಸಂಗತವಾಗುತ್ತದೆಂಬ ಆಶಂಕೆಗೆ ಅವಕಾಶವಿಲ್ಲ.

**प्रकाशः** – ननु जिज्ञास्यस्य जीवादिव्यावृत्त्यर्थं ब्रह्मशब्देन गुणपूर्णत्व-लक्षणसूचनेऽपि न सर्वगुणपूर्त्यर्थं सर्वसमन्वयो वाच्यः । एकगुणपूर्णत्वग्रहणेनापि

जीवव्यावृत्त्युपपत्तेरित्यत आह – **यथाचेति** ।। **मुमुक्षुणेति** ।। विवृतमेतत्तत्रैवेति भावः ।।

ಇಷ್ಟು ಹೇಳಿದ್ದರಿಂದ ಏನು ತಿಳಿಯಿತೆಂದರೆ ಪ್ರಥಮಾಧ್ಯಾಯದ ಪ್ರಮೇಯ ಸಕಲಗುಣಪರಿಪೂರ್ಣತ್ವವೇ ಹೊರತು ಜನ್ಮಾದಿಕಾರಣತ್ವವೇ ಮೊದಲಾದ ಬೇರೆ ಯಾವ ಗುಣಗಳೂ ಅಲ್ಲ. ಇಂತಹ ಸಕಲಗುಣಪರಿಪೂರ್ಣತ್ವದ ಸಿದ್ಧಿಗಾಗಿ ಸಕಲಶಬ್ದಸಮನ್ವಯವನ್ನು ತಿಳಿಯಲೇಬೇಕು. ಆದ್ದರಿಂದ ಈ ಪಾದವು ಸಾರ್ಥಕವಾಗುತ್ತದೆ. ಮತ್ತು ವಿಷ್ಣುವಿನಲ್ಲಿ ಸಕಲಗುಣಪರಿಪೂರ್ಣತ್ವವನ್ನು ತಿಳಿಯುವುದರಿಂದ ಜೀವಭೇದವೂ ತಿಳಿಯುತ್ತದೆ ಎಂದು.

ಶಂಕೆ - ಬ್ರಹ್ಮಶಬ್ದವು ಗುಣಪೂರ್ಣತ್ವವೆಂಬ ವಿಷ್ಣುವಿನ ಲಕ್ಷಣವನ್ನು ಹೇಳುತ್ತದೆ. ಹೊರತು ಸಕಲಗುಣಪರಿಪೂರ್ಣತ್ವವನ್ನು ಹೇಳುತ್ತಿಲ್ಲ. ಯಾವುದಾದರೂ ಒಂದು ಗುಣದಿಂದ ವಿಷ್ಣುವು ಪರಿಪೂರ್ಣನಾಗಿದ್ದಾನೆಂದು ಹೇಳಿದರೂ ಸಾಕು. ಇಷ್ಟರಿಂದಲೇ ಜೀವಭೇದವು ಸಿದ್ಧವಾಗುತ್ತದೆ. ಸಕಲ ಗುಣಪರಿಪೂರ್ಣತ್ವವನ್ನು ಹೇಳುವ ಅವಶ್ಯಕತೆಯಿಲ್ಲ. ಆದ್ದರಿಂದಲೇ ಸಕಲಶಬ್ದಸಮನ್ವಯವನ್ನೂ ಹೇಳಬೇಕಾಗಿಲ್ಲ.

ಸಮಾಧಾನ - ಒಂದೇ ಗುಣದಿಂದ ಪೂರ್ಣವಾದರೂ ಜೀವಭೇದವು ಸಿದ್ಧವಾಗುತ್ತದೆ. ಆದರೆ ವಿಷ್ಣುವು ಸಕಲಗುಣಪೂರ್ಣನಾಗಿದ್ದಾನೆಂದು ತಿಳಿದರೆ ಮಾತ್ರ ಮೋಕ್ಷವಾಗಲು ಸಾಧ್ಯ. ಮೋಕ್ಷಕ್ಕೋಸ್ಕರ ಸಕಲಶಬ್ದ ಸಮನ್ವಯವು ಅತ್ಯವಶ್ಯವಾಗಿದೆ. ಹೇಗೆಂದರೆ ಜನ್ಮಕಾರಣತ್ವವೆಂಬ ಒಂದು ಗುಣವನ್ನು ವಿಷ್ಣುವಿನಲ್ಲಿ ತಿಳಿದರೂ ಸಾಕು. ಜನ್ಮಾದ್ಯಷ್ಟಕಗಳನ್ನು ತಿಳಿಯಬೇಕಿಲ್ಲ. ಆದರೂ ಸೂತ್ರಕಾರರು ಜನ್ಮಾದ್ಯಷ್ಟಕಗಳನ್ನು ಮುಮುಕ್ಷುವು ಅತ್ಯವಶ್ಯವಾಗಿ ತಿಳಿಯಬೇಕಾದ್ದರಿಂದ ಪ್ರತ್ಯೇಕವಾಗಿ ಹೇಳಿರುತ್ತಾರೆ. ಈ ವಿಷಯವನ್ನು ಜನ್ಮಾಧಿಕರಣದಲ್ಲಿ ವಿವರಿಸಲಾಗಿದೆ.

ಹೀಗೆ ಸರ್ವಸಮನ್ವಯವು ಅತ್ಯವಶ್ಯವಾದ್ದರಿಂದ ಈ ಪಾದವು ಸಾರ್ಥಕವೂ ಆರಂಭಣೀಯವೂ ಆಗಿದೆ.

**प्रकाशः – तदिति** ।। लक्षणत्वसम्भवेऽपीत्यर्थः । निरतिशयैकगुणपूर्तेरन्यत्रा-सम्भवादिति भावः । प्रागुक्तरीतिरेव कुतो न स्यादित्यत आह – **यदिचेति** ।।

ಗ್ರಂಥದಲ್ಲಿ 'ತತ್ಸಂಭವೇऽಪಿ' ಎಂದರೆ 'ಏಕೈಕಗುಣಪೂರ್ಣತ್ವ' ಎಂಬುದು ಲಕ್ಷಣವಾದರೂ ಕೂಡ ಎಂದರ್ಥ. ನಿರತಿಶಯವಾದ ಏಕಗುಣಪೂರ್ಣತ್ವವು ಪರಮಾತ್ಮನನ್ನು ಬಿಟ್ಟು ಬೇರೆ ಎಲ್ಲಿಯೂ ಬರುವುದಿಲ್ಲವೆಂದು ಅಭಿಪ್ರಾಯ. ಹಿಂದೆ ಹೇಳಿದಂತೆ ಜಗತ್ಕಾರಣತ್ವವೇ ಪ್ರಧಾನಲಕ್ಷಣ ಏಕಾಗಬಾರದು ? ಎಂಬ ಆಶಂಕೆಗೆ 'ಯದಿಚ' ಇತ್ಯಾದಿ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः – अन्तर्ज्योतिरित्यादाविति** ।। स्वपरमतयोरधिकरणशरीराणि विषयवाक्यानि च पूर्वत्रैव व्यक्तानि। ''वाक्यान्वयात्'' इत्यस्य परमतेऽधिकरणान्तरत्वात् ''आत्मा वा

अरे द्रष्टव्यः'' इत्यकारणवाक्यविचारपरत्वाच्च वाक्यान्वयादित्युक्तिः ।। तच्चेति ।। अकारणवाक्यसमन्वयपरत्वमित्यर्थः ।

ಗ್ರಂಥದಲ್ಲಿ ಉಲ್ಲೇಖಿಸಲ್ಪಟ್ಟ ಅಂತಸ್ಥತ್ವಾಧಿಕರಣವೇ ಮೊದಲಾದವುಗಳನ್ನು ಪರವಾದಿಗಳು ಹೇಗೆ ರಚಿಸಿದ್ದಾರೆಂಬುದನ್ನು ಮತ್ತು ಆಯಾ ಅಧಿಕರಣಗಳಲ್ಲಿ ಯಾವ ವಿಷಯವಾಕ್ಯಗಳನ್ನು ಹೇಳುತ್ತಾರೆಂಬುದನ್ನು ಆಯಾ ಅಧಿಕರಣಗಳಲ್ಲಿಯೇ ತೋರಿಸಿದ್ದೇವೆ.

'ವಾಕ್ಯಾನ್ವಯಾತ್' ಎಂಬುದು ಸಮಾಕರ್ಷಾಧಿಕರಣದ ಗುಣಸೂತ್ರವೆಂದು ನಾವು ಹೇಳುತ್ತೇವೆ. ಆದರೆ ಅದ್ವೈತಿಗಳು ಈ ಸೂತ್ರವನ್ನು ಪ್ರತ್ಯೇಕ ಅಧಿಕರಣವೆಂದು ಪರಿಗಣಿಸಿ 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಅಕಾರಣವಾಕ್ಯವನ್ನು ವಿಷಯವೆಂದು ಹೇಳುತ್ತಾರೆ. ಆದ್ದರಿಂದ ಗ್ರಂಥಕಾರರು 'ವಾಕ್ಯಾನ್ವಯಾತ್' ಎಂಬುದನ್ನು ಪ್ರತ್ಯೇಕ ಪರಿಗಣಿಸಿದ್ದು ತಪ್ಪಲ್ಲ.

'ತಚ್ಚ' ಎಂದರೆ ಅಕಾರಣ ವಾಕ್ಯಗಳನ್ನೇ ಈ ಅಧಿಕರಣಗಳು ಸಮನ್ವಯ ಮಾಡುತ್ತವೆಂದು ಅರ್ಥ.




ಅನ್ಯತ್ರೈವಪ್ರಸಿದ್ಧ ಶಬ್ದ ಸಮನ್ವಯವನ್ನು ಮಾಡಲು ಹೊರಟಿರುವ ನಾಲ್ಕನೆಯ ಪಾದವು ಪ್ರಾರಂಭವಾಗುತ್ತಿದೆ. ಮೊದಲಿನ ಎರಡು ಪಾದಗಳಲ್ಲಿ ಅನ್ಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡಲಾಯಿತು. ಮೂರನೆಯ ಪಾದದಲ್ಲಿ ಉಭಯತ್ರಪ್ರಸಿದ್ಧವಾದ ನಾಮಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಾಡಿದ್ದಾಯಿತು. ಪ್ರಕೃತ ಈ ಅಧಿಕರಣದಲ್ಲಿ ಅನ್ಯತ್ರೈವಪ್ರಸಿದ್ಧವಾದ ಅವ್ಯಕ್ತಾದಿ ಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

ವಾಸ್ತವಿಕವಾಗಿ ಶಬ್ದಗಳಲ್ಲಿ 'ಅನ್ಯತ್ರಪ್ರಸಿದ್ಧ' ಹಾಗೂ 'ಉಭಯತ್ರಪ್ರಸಿದ್ಧ' ಮತ್ತು 'ತತ್ರಪ್ರಸಿದ್ಧ' ಎಂಬ ಮೂರು ಬಗೆಯ ವಿಭಾಗಗಳನ್ನಷ್ಟೇ ಹೇಳಲು ಸಾಧ್ಯ. 'ತತ್ರಪ್ರಸಿದ್ಧ' ಎಂದರೆ ವಿಷ್ಣು ನಾರಾಯಣ ಮೊದಲಾದ ಶಬ್ದಗಳು ಇವುಗಳ ಸಮನ್ವಯ ಮಾಡುವ ಆವಶ್ಯಕತೆಯಿರುವುದಿಲ್ಲ. ಅನ್ಯತ್ರಪ್ರಸಿದ್ಧವಾದ ಶಬ್ದಗಳೆಂದರೆ ಇಂದ್ರಾದಿ ಶಬ್ದಗಳು ಇವುಗಳನ್ನು ಮೊದಲಿನೆರಡು ಪಾದದಲ್ಲಿ ಸಮನ್ವಯ ಮಾಡಿದ್ದಾಗಿದೆ. ಉಭಯತ್ರಪ್ರಸಿದ್ಧವೆಂದರೆ ವಿಷ್ಣು ಹಾಗೂ ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾಗಿರುವ ಶಬ್ದಗಳು ಇದನ್ನು ಮೂರನೆಯ ಪಾದದಲ್ಲಿ ಸಮನ್ವಯ ಮಾಡಲಾಗಿದೆ. ಈ ಮೂರು ಬಗೆಯ ಶಬ್ದಗಳನ್ನು ಬಿಟ್ಟು, ಪುನಃ ಅನ್ಯತ್ರಪ್ರಸಿದ್ಧ ಎಂಬ ನಾಲ್ಕನೆಯ ಪ್ರಕಾರವು ಇರುವುದಿಲ್ಲ. ಇದು ಅನ್ಯತ್ರಪ್ರಸಿದ್ಧದಲ್ಲೇ ಗತಾರ್ಥವಾಗುತ್ತದೆ. ಏಕೆಂದರೆ ಅನ್ಯತ್ರಪ್ರಸಿದ್ಧ ಶಬ್ದವೆಂದರೂ ಅನ್ಯತ್ರೈವಪ್ರಸಿದ್ಧ ಶಬ್ದವೆಂದರೂ ಒಂದೇ ಅರ್ಥ. ಒಂದು ವೇಳೆ ಅನ್ಯತ್ರಪ್ರಸಿದ್ಧ ಎಂಬುದಕ್ಕೆ ಜಗತ್ತಿನಲ್ಲೂ ಪ್ರಸಿದ್ಧವಾಗಿದೆ, ವಿಷ್ಣುವಿನಲ್ಲೂ ಪ್ರಸಿದ್ಧವಾಗಿದೆ ಎಂಬರ್ಥವನ್ನೇನಾದರೂ ಹೇಳುವುದಾದರೆ ಆವಾಗ ಅದು ಅನ್ಯತ್ರಾಪಿಪ್ರಸಿದ್ಧ ಎಂದೇ ಅರ್ಥವನ್ನು ನೀಡುತ್ತದೆ. ಆವಾಗ ಉಭಯತ್ರಪ್ರಸಿದ್ಧದಲ್ಲೇ ಸೇರಿಸಿದಂತಾಗುತ್ತದೆ. ಹೀಗೆ ಅನ್ಯತ್ರೈವಪ್ರಸಿದ್ಧವೆಂಬ ಪ್ರತ್ಯೇಕ ವಿಭಾಗವೇ ಇಲ್ಲದ ಕಾರಣ, ಈ ಪಾದವನ್ನು ಸೂತ್ರಕಾರರು ಏಕೆ ಪ್ರತ್ಯೇಕವಾಗಿ ರಚನೆ ಮಾಡುತ್ತಿದ್ದಾರೆ? ಎಂಬ ಪ್ರಬಲವಾದ ಪ್ರಶ್ನೆ ಬರುತ್ತದೆ.

ಆನುಮಾನಿಕಾಧಿಕರಣ (೧-೪-೧)

ಈ ಪ್ರಶ್ನೆಗೆ ಟೀಕೆಯಲ್ಲಿ ಎರಡು ರೀತಿಯ ಸಮಾಧಾನಗಳನ್ನು ನೀಡಿರುತ್ತಾರೆ. ಅಂದರೆ ಅನ್ಯತ್ರಪ್ರಸಿದ್ಧವೆಂದರೂ, ಅನ್ಯತ್ರೈವಪ್ರಸಿದ್ಧಶಬ್ದವೆಂದರೂ ಒಂದೇ ಅರ್ಥ ಎಂಬುದು ಸರಿಯಾದ ವಿಚಾರವೇ ಆಗಿದೆ. ಆದರೆ ಪ್ರಥಮ ಪಾದದಲ್ಲಿ ಯಾವ ಇಂದ್ರಾದಿ ಶಬ್ದಗಳನ್ನು ಸಮನ್ವಯ ಮಾಡಲಾಯಿತೋ, ಅವುಗಳನ್ನು ಅನ್ಯತ್ರಪ್ರಸಿದ್ಧವೆನ್ನಲು ಶ್ರುತಿಲಿಂಗಾದಿಗಳು ಪ್ರಮಾಣವಾಗಿರಲಿಲ್ಲ. ಆದರೆ ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಅವ್ಯಕ್ತಾದಿ ಶಬ್ದಗಳು, ಶ್ರುತಿಲಿಂಗಾದಿಗಳ ಬಲದಿಂದಲೇ ಅನ್ಯತ್ರಪ್ರಸಿದ್ಧವೆಂದು ಕಾಣಿಸುತ್ತಿವೆ. ಈ ದೃಷ್ಟಿಯಿಂದ 'ಅನ್ಯತ್ರೈವಪ್ರಸಿದ್ಧಿ' ಎಂಬುದನ್ನು ಪ್ರತ್ಯೇಕವಾಗಿ ಪರಿಗಣಿಸಲಾಗಿದೆ. ಅಥವಾ ಇಂದ್ರಾದಿ ಶಬ್ದಗಳು ಅನ್ಯತ್ರಪ್ರಸಿದ್ಧವೆನ್ನಲು ಶ್ರುತಿಲಿಂಗಾದಿ ಪ್ರಮಾಣಗಳಿರಬಹುದು. ಆದರೆ ಈ ಪಾದದಲ್ಲಿ ಸಮನ್ವಯ ಮಾಡುತ್ತಿರುವ ಅವ್ಯಕ್ತಾದಿ ಶಬ್ದಗಳು ಅನ್ಯತ್ರಪ್ರಸಿದ್ಧವೆನ್ನಲು ಬಲಿಷ್ಠವಾದ ಶ್ರುತಿಲಿಂಗಾದಿಗಳು ಪ್ರಮಾಣವಾಗಿವೆ. ಈ ದೃಷ್ಟಿಯಿಂದಲೂ ಅನ್ಯತ್ರಪ್ರಸಿದ್ಧವೆಂಬ ವಿಭಾಗವನ್ನು ಮಾಡಲಾಗಿದೆ. ಆದ್ದರಿಂದ ಈ ಪಾದವು ಸಾರ್ಥಕವಾಗಿದೆ.

ಅಥವಾ ಮತ್ತೊಂದು ಬಗೆಯಲ್ಲಿ ಈ ಪಾದಕ್ಕೆ ಸಾರ್ಥಕ್ಯವನ್ನು ತಿಳಿಯಬಹುದು. ಹಿಂದಿನ ಮೂರು ಪಾದಗಳಲ್ಲಿ ಜಗತ್ಕಾರಣತ್ವಕ್ಕೆ ಉಪಯುಕ್ತವಾದ ಪ್ರತಿಯೊಂದು ಶ್ರುತಿವಾಕ್ಯಗಳ ಸಮನ್ವಯವನ್ನು ತಿಳಿದಿದ್ದಾಯಿತು. ಈ ಪಾದದಲ್ಲಿ ಗುಣಪೂರ್ಣತ್ವಕ್ಕೆ ಉಪಯುಕ್ತವಾದ ಅವ್ಯಕ್ತಾದಿಶಬ್ದಗಳ ಸಮನ್ವಯವನ್ನು ತಿಳಿಸಲಾಗಿದೆ. ಪ್ರಥಮ ಸೂತ್ರದಲ್ಲಿ ಗುಣಪರಿಪೂರ್ಣತ್ವವೇ ಬ್ರಹ್ಮನ ಮುಖ್ಯಲಕ್ಷಣವೆಂದು ಹೇಳಿದ್ದಾರೆ. ಅದನ್ನು ಸಮರ್ಥಿಸಲು ಎರಡನೆಯ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವು ಹೊರಟಿದೆ. ಅದೇ ವಿಷಯದಲ್ಲಿ ಶಾಸ್ತ್ರಗಳು ಪ್ರಮಾಣವಾಗಿವೆ ಎಂದು ಮೂರನೆಯ ಸೂತ್ರವು ಸಮರ್ಥನೆ ಮಾಡಿದರೆ, ನಾಲ್ಕನೇ ಸೂತ್ರವು ಗುಣಪರಿಪೂರ್ಣತ್ವಕ್ಕಾಗಿಯೇ ಸಕಲಶಬ್ದಗಳ ಸಮನ್ವಯವನ್ನು ಪ್ರತಿಜ್ಞೆಮಾಡಿದೆ. ಜಗತ್ಕಾರಣತ್ವಕ್ಕೆ ಉಪಯುಕ್ತವಾದ ಶಬ್ದಗಳ ಸಮನ್ವಯವನ್ನು ಮೊದಲಿನ ಮೂರು ಪಾದಗಳಲ್ಲಿ ತಿಳಿದ ಮಾತ್ರಕ್ಕೆ ಸಮನ್ವಯಾಧಿಕರಣದ ಪ್ರತಿಜ್ಞೆಯು ಪೂರ್ತಿಯಾಗುವುದಿಲ್ಲ. ಅದಕ್ಕೋಸ್ಕರ ಈ ಪಾದವು ಸ್ವರ, ವರ್ಣ, ಪದ ಮೊದಲಾದ ಸಕಲಶಬ್ದಗಳ ಸಮನ್ವಯವನ್ನು ಮಾಡಲು ಹೊರಟಿರುವುದರಿಂದ, ವಿಷ್ಣುವಿನ ಗುಣಪರಿಪೂರ್ಣತ್ವ ಎಂಬ ಲಕ್ಷಣವು ಸಿದ್ಧವಾಗುತ್ತದೆ. ಆದ್ದರಿಂದಲೂ ಈ ಪಾದವು ಸಾರ್ಥಕ.

ವಾಸ್ತವಿಕವಾಗಿ ಮಹಾವಿಷ್ಣುವು ಒಂದು ಗುಣದಿಂದ ಪೂರ್ಣನಾಗಿದ್ದಾನೆಂದು ಹೇಳಿದರೂ ಸಾಕು. ಆ ಗುಣದಲ್ಲಿ ನಿರತಿಶಯತ್ವಾದಿಗಳು ಇರುವ ಕಾರಣ ಅತಿವ್ಯಾಪ್ತ್ಯಾದಿದೋಷಗಳು ಬರುವುದಿಲ್ಲ. ಅದರಿಂದಲೇ ಜೀವಭೇದವು ಸಿದ್ಧವಾಗುತ್ತದೆ. ಆದರೆ ಮುಮುಕ್ಷುವಾದವನು ಒಂದೇ ಗುಣದಿಂದ ಪೂರ್ಣನೆಂದು ತಿಳಿದರೆ ಸಾಲದು, ಎಲ್ಲಾ ಗುಣಗಳಿಂದಲೂ ಕೂಡ ಭಗವಂತನು ಪೂರ್ಣನಾಗಿದ್ದಾನೆಂದು ತಿಳಿಯಬೇಕು. ಆದ್ದರಿಂದಲೇ ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಜನ್ಮಕರ್ತೃತ್ವ ಎಂಬ ಲಕ್ಷಣವನ್ನು ಹೇಳದೇ ಅಷ್ಟಕರ್ತೃತ್ವ ಲಕ್ಷಣವನ್ನು ಹೇಳಿರುತ್ತಾರೆ. ಆದ್ದರಿಂದ ಸಕಲಗುಣಪರಿಪೂರ್ಣತ್ವವನ್ನು ತಿಳಿಯಬೇಕೆಂದರೆ ಸಕಲಶಬ್ದವಾಚ್ಯತ್ವವನ್ನು ಪರಮಾತ್ಮನಲ್ಲಿ ಅತ್ಯವಶ್ಯವಾಗಿ ತಿಳಿಯಲೇ ಬೇಕು.

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಯಾವ ಜಗಜ್ಜನ್ಮಾದಿಕಾರಣತ್ವ ಲಕ್ಷಣವನ್ನು ಹೇಳಿರುತ್ತಾರೋ ಅದಕ್ಕೋಸ್ಕರವೇ ಈ ಸಮಸ್ತ ಅಧ್ಯಾಯವು ಹೊರಟಿದೆ ಎಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ ಅಂತಸ್ತದ್ಧರ್ಮೋಪದೇಶಾತ್, ಜ್ಯೋತಿಶ್ಚರಣಾಭಿಧಾನಾತ್, ಸರ್ವತ್ರಪ್ರಸಿದ್ಧೋಪದೇಶಾತ್ ಇವೇ ಮೊದಲಾದ ಸೂತ್ರಗಳಲ್ಲಿ ಯಾವ ವಿಷಯವಾಕ್ಯವನ್ನು ಸಮನ್ವಯ ಮಾಡಲಾಗಿದೆಯೋ, ಆ ವಾಕ್ಯಗಳಲ್ಲಿ ಜನ್ಮಕಾರಣತ್ವಲಕ್ಷಣವು ಕಾಣಿಸುತ್ತಲೇ ಇಲ್ಲ. ಆದ್ದರಿಂದ ಅನಿವಾರ್ಯವಾಗಿ ಗುಣಪರಿಪೂರ್ಣತ್ವದ ಉದ್ದೇಶವೇ ಈ ಅಧ್ಯಾಯಕ್ಕೆ ಇರುತ್ತದೆಂಬುದನ್ನು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

## ಚತುರ್ಥಪಾದದಲ್ಲಿ ಎಷ್ಟು ಅಧಿಕರಣಗಳು ?

**तात्पर्यचन्द्रिका**

**अत्रानुव्याख्याने –**

**विरोधिसर्वबाहुल्यकारणस्त्रीनिषेधिनाम् ।**
**पृथक् समन्वयार्थानि स्थानान्येतानि सर्वशः ।।**

ಅನುವಾದ -

ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್ ।
ಪೃಥಕ್‌ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥

ವಿರೋಧಿ, ಸರ್ವ, ಬಾಹುಲ್ಯ , ಕಾರಣ, ಸ್ತ್ರೀ , ನಿಷೇಧ ಈ ಅರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಪ್ರತ್ಯೇಕ, ಪ್ರತ್ಯೇಕವಾಗಿ ಮಾಡಲಾಗಿದೆ.

**इत्यापादसमाप्त्यधिकरणोपाधयो दर्शिताः । तद् व्याख्यातं सुधायां आद्येऽधिकरणे परमैश्वर्यविरोध्यवरत्वाद्यर्थानां द्वितीय उक्तवक्ष्यमाणातिरिक्तानां सर्वेषां तृतीये बहुत्वविशिष्टार्थानां चतुर्थेऽवान्तरकारणार्थानां प्रकृतिश्चेत्यत्र स्त्रीलिङ्गानां एतेनेत्यत्र निषेधार्थानां शून्यादिशब्दानां समन्वय इति ।**

ಹೀಗೆ ಅನುವ್ಯಾಖ್ಯಾನದಲ್ಲಿ ಈ ನಾಲ್ಕನೆಯ ಪಾದವು ಮುಗಿಯುವ ತನಕ ಇರುವಂತಹ ಎಲ್ಲ ಅಧಿಕರಣಗಳ ಉಪಾಧಿಗಳನ್ನು ಸಂಗ್ರಹಿಸಲಾಗಿದೆ. ಅನುವ್ಯಾಖ್ಯಾನದ ಈ ಶ್ಲೋಕವನ್ನು ನ್ಯಾಯಸುಧೆಯಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಮೊದಲನೆಯ ಆನುಮಾನಿಕಾಧಿಕರಣದಲ್ಲಿ ಪರಮೈಶ್ವರ್ಯಕ್ಕೆ ವಿರೋಧಿಯಾದ ಅವರತ್ವ ಮೊದಲಾದ ಧರ್ಮಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಎರಡನೆಯ ಜ್ಯೋತಿರುಪಕ್ರಮಾಧಿಕರಣದಲ್ಲಿ ಹಿಂದಿನ ಅಧಿಕರಣಗಳಲ್ಲಿ ಹಾಗೂ ಮುಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡಿದ ಶಬ್ದಗಳನ್ನು ಬಿಟ್ಟು, ಎಲ್ಲಾ ಶಬ್ದಗಳನ್ನೂ ಕೂಡ ಸಮನ್ವಯ ಮಾಡಲಾಗಿದೆ. ಮೂರನೆಯ ನಸಂಖ್ಯೋಪಸಂಗ್ರಹಾಧಿಕರಣದಲ್ಲಿ ಬಹುತ್ವ ವಿಶಿಷ್ಟವಾಚಕವಾದ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ನಾಲ್ಕನೆಯ ಆಕಾಶಾಧಿಕರಣದಲ್ಲಿ ಅವಾಂತರಕಾರಣವಾಚಕಶಬ್ದಗಳ ಸಮನ್ವಯವನ್ನೂ, ಐದನೆಯ ಪ್ರಕೃತ್ಯಧಿಕರಣದಲ್ಲಿ ಸ್ತ್ರೀಲಿಂಗವಾಚಕ ಶಬ್ದಗಳನ್ನೂ, ಆರನೆಯ ಏತೇನಾಧಿಕರಣದಲ್ಲಿ ನಿಷೇಧವಾಚಕವಾದ ಶೂನ್ಯಾದಿಶಬ್ದಗಳನ್ನು ಸಮನ್ವಯ ಮಾಡಲಾಗಿದೆ ಎಂದು.

ಆನುಮಾನಿಕಾಧಿಕರಣ (೧-೪-೧)

**तत्र यदा ''समाकर्षात्'' इत्यादिसूत्राष्टकस्य ''कारणत्वेन'' इति चतुर्थाधिकरणशेषता तदैतत्पादीयाधिकरणानि षडित्युपाधिषट्कोक्तिर्युक्ता ।**

ಸಮಾಕರ್ಷಾಧಿಕರಣವು ಪ್ರತ್ಯೇಕವೋ ಅಥವಾ ಆಕಾಶಾಧಿಕರಣದಲ್ಲಿ ಸೇರಿದೆಯೋ? ಎಂಬ ಗೊಂದಲವಿದೆ. ಒಂದುವೇಳೆ ತ್ರಿವಿಕ್ರಮಪಂಡಿತಾಚಾರ್ಯರು ಹೇಳುವಂತೆ, ಸಮಾಕರ್ಷಾಧಿಕರಣದ ಎಂಟು ಸೂತ್ರಗಳು ಹಿಂದಿನ 'ಕಾರಣತ್ವೇನ ಚ ಆಕಾಶಾದಿಷು' ಎಂಬ ನಾಲ್ಕನೆಯ ಆಕಾಶಾಧಿಕರಣದ ಗುಣಸೂತ್ರಗಳಾಗಿವೆಯೆಂದು ಪರಿಗಣಿಸುವುದಾದಲ್ಲಿ ಆವಾಗ ಈ ಪಾದದಲ್ಲಿರುವ ಅಧಿಕರಣಗಳು ಕೇವಲ ಆರು ಎಂದು ಹೇಳಿದಂತಾಗುತ್ತದೆ. ಅನುವ್ಯಾಖ್ಯಾನದಲ್ಲಿ ಆರು ಉಪಾಧಿಗಳನ್ನು ಹೇಳಿದ್ದೂ ಸಹ ಯುಕ್ತವೇ ಆಗುತ್ತದೆ.

**यदा तु सूत्राष्टकस्य पृथगधिकरणता तदाऽधिकरणानि सप्त । तत्र ''समाकर्षात्'' इति पञ्चमाधिकरणोपाध्यनुक्तिस्तु पञ्चमस्यापि द्वितीयवत् सर्वविषयत्वेन तदुपाधितः पृथगुपाध्यभावात् । न्यायभेदमात्रेण त्वधिकरणभेदः ।**

ಒಂದು ವೇಳೆ 'ಸಮಾಕರ್ಷಾತ್' ಇವೇ ಮೊದಲಾದ ಎಂಟುಸೂತ್ರಗಳು ಪ್ರತ್ಯೇಕವಾಗಿ ಸಮಾಕರ್ಷಾಧಿಕರಣ ಎಂದೇ ಕರೆಸಿಕೊಳ್ಳುತ್ತವೆ ಎಂದಾದಲ್ಲಿ, ಈ ಪಾದದಲ್ಲಿ ಒಟ್ಟು ಏಳು ಅಧಿಕರಣಗಳಿವೆ ಎಂದಂತಾಗುತ್ತದೆ. ಹಾಗಾದರೆ ಅನುವ್ಯಾಖ್ಯಾನದಲ್ಲಿ ಐದನೆಯ ಸಮಾಕರ್ಷಾಧಿ-ಕರಣದ ಉಪಾಧಿಯನ್ನು ಏಕೆ ಉಲ್ಲೇಖಿಸಿಲ್ಲ ಎಂದರೆ, ಎರಡನೆಯ ಜ್ಯೋತಿರುಪಾಕ್ರಮಾಧಿಕರಣದ 'ಸರ್ವ' ಎಂಬ ಉಪಾಧಿಯೇ ಐದನೆಯ ಸಮಾಕರ್ಷಾಧಿಕರಣಕ್ಕೂ ಸಂಬಂಧ ಪಡುತ್ತದೆ. ಸರ್ವವಿಷಯತ್ವವು ಎರಡನೆಯ ಅಧಿಕರಣಕ್ಕೆ ಉಪಾಧಿಯಾದಂತೆ, ಐದನೆಯ ಅಧಿಕರಣಕ್ಕೂ ಕೂಡ ಉಪಾಧಿಯಾಗುತ್ತದೆ. ಕೇವಲ ನ್ಯಾಯಭೇದದಿಂದ ಅಧಿಕರಣಭೇದವನ್ನು ಪರಿಗಣಿಸಬೇಕು.

**द्वितीयेऽपि हि योगवृत्त्या सर्वेषां पदवर्णादीनां समन्वय उक्तः । सुधायामुक्त-वक्ष्यमाणातिरिक्तग्रहणं तु अवरत्वादिलिङ्गानां पञ्चजनादिशब्दानां येन वाक्यरूपेण पूर्वत्र चोत्तरत्र च विचार्यता तेन रूपेण द्वितीये न विचार्यता, किन्तु पदादिरूपेणेत्यभिप्रेत्य ।**

ಎರಡನೆಯ ಜ್ಯೋತಿರುಪಕ್ರಮಾಧಿಕರಣದಲ್ಲಿ ಶ್ರುತಿಯಲ್ಲಿರುವ ಪ್ರತಿಯೊಂದು ಪದ, ವರ್ಣ ಇವುಗಳ ಸಮನ್ವಯವನ್ನು ಯೋಗವೃತ್ತಿಯಿಂದ ಮಾಡಿದ್ದಾರೆ. ಹಾಗಾದರೆ ನ್ಯಾಯಸುಧೆಯಲ್ಲಿ ಉಕ್ತವಕ್ಷ್ಯಮಾಣ ಅತಿರಿಕ್ತವಾದ ಸರ್ವಶಬ್ದಸಮನ್ವಯವನ್ನು ತಿಳಿಯಬೇಕೆಂದು ಏಕೆ ಹೇಳಿದ್ದಾರೆಂದರೆ ಅವರತ್ವಾದಿ ಲಿಂಗಗಳನ್ನು ಪಂಚಜನ ಮೊದಲಾದ ಶಬ್ದಗಳನ್ನೂ ಹಿಂದಿನ ಅಧಿಕರಣಗಳಲ್ಲಿ

ವಾಕ್ಯರೂಪದಿಂದ ವಿಚಾರ ಮಾಡಲಾಗಿತ್ತು. ಮುಂದೆಯೂ ಕೂಡ ವಾಕ್ಯರೂಪದಿಂದಲೇ ಅನೇಕ ಶ್ರುತಿಗಳನ್ನು ಸಮನ್ವಯ ಮಾಡಲಾಗುತ್ತದೆ. ಆದರೆ ಈ ಎರಡನೆಯ ಅಧಿಕರಣದಲ್ಲಿ ವಾಕ್ಯರೂಪದಿಂದ ವಿಚಾರ ಮಾಡದೇ, ಪದ, ವರ್ಣ ಮೊದಲಾದವುಗಳ ರೂಪದಿಂದ ವಿಚಾರ ಮಾಡುತ್ತಿದ್ದಾರೆ.

**अन्यथोक्तवक्ष्यमाणातिरिक्तसर्वविषयत्वस्य सर्वाधिकरणसाधारण्यात् विशिष्योक्तिर्न स्यात् । अनुव्याख्याने व्युत्पत्तेरप्यशक्यत्वं च द्वितीये पूर्वपक्षहेतुत्वेन नोच्येत । जीत्याद्यवयवानामब्रह्मपरत्वेन ज्योतिरित्यादिसमुदायस्य ब्रह्मणि व्युत्पत्तिसम्भवात् ।**

ಹೀಗೆ ನ್ಯಾಯಸುಧೆಗೆ ಅರ್ಥವನ್ನು ಮಾಡದಿದ್ದರೆ, 'ಉಕ್ತವಕ್ಷ್ಯಮಾಣಾತಿರಿಕ್ತಸರ್ವವಿಷಯತ್ವ' ಎಂಬ ಉಪಾಧಿಯು ಎಲ್ಲಾ ಅಧಿಕರಣಗಳಲ್ಲಿಯೂ ಸಾಧಾರಣವಾದ ಧರ್ಮವಾಗಿದೆ. ಆವಾಗ ವಿಶೇಷವಾಗಿ ಎರಡನೆಯ ಅಧಿಕರಣದ ಉಪಾಧಿಯೆಂದು ಹೇಳಿದ್ದೇ ವ್ಯರ್ಥವಾಗುತ್ತಿತ್ತು. ಆದ್ದರಿಂದ ಎಲ್ಲಾ ಶ್ರುತಿಗಳನ್ನು ಪದ ಹಾಗೂ ವರ್ಣ ಮೊದಲಾದ ರೂಪಗಳಿಂದ ಸಮನ್ವಯ ಮಾಡುತ್ತಿದ್ದಾರೆಂದೇ ವ್ಯಾಖ್ಯಾನ ಮಾಡಬೇಕು. ಮತ್ತು ಅನುವ್ಯಾಖ್ಯಾನದಲ್ಲಿ 'ವ್ಯುತ್ಪತ್ತೇರಪ್ಯಶಕ್ಯತ್ವಂ' ಎಂಬುದನ್ನು ಪೂರ್ವಪಕ್ಷ ಹೇತುವನ್ನಾಗಿ ಹೇಳಿದ್ದೂ ಕೂಡ ತಪ್ಪಾಗುತ್ತಿತ್ತು. ಏಕೆಂದರೆ 'ಜ್ಯೋತಿ' ಎಂಬ ಪದವನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕೆಂದರೆ 'ಜಿ' ಮತ್ತು 'ಓತಿ' ಎಂಬ ಅವಯವಗಳು ಬ್ರಹ್ಮಪರವಾಗಬಾರದು. ಆವಾಗ ಮಾತ್ರ 'ಜ್ಯೋತಿ' ಎಂಬ ಸಮುದಾಯವು ಬ್ರಹ್ಮನಲ್ಲಿ ಸಮನ್ವಯವಾಗುತ್ತದೆ ಎಂಬುದಾಗಿ ಬ್ರಹ್ಮನಲ್ಲಿ ವ್ಯುತ್ಪತ್ತಿಯನ್ನು ತೋರಿಸಲು ಸಾಧ್ಯವಿದೆ.

**प्रकाशः –**

अत्र टीकारीत्याऽधिकरणसप्तताप्रतीतेर्विषयमालायामुपाधिषट्कोक्तिरयुक्तेत्यतस्त द्विवरणपूर्वकं षट्कोक्तेर्युक्ततामाह – **अत्रेति** ।। **निषेधिनामिति** ।। **द्वंद्वात्परोऽयमिनिप्रत्ययः** । विरोध्यादयोऽर्था वाच्या एषां सन्तीति तथोक्ताः तेषाम्। शब्दानामिति शेषः । **एतानि** एतत्पादगतानि । सर्वशस्स्थानानि अधिकरणानि ।।

ವಿವರಣೆ - ಇಲ್ಲಿಯ ತನಕ ಪಾದಸಾರ್ಥಕ್ಯವನ್ನು ಸಮರ್ಥಿಸುವ ಟೀಕೆಯನ್ನು ವ್ಯಾಖ್ಯಾನಿಸಿದಂತಾಯಿತು. ಮುಂದೆ ಚತುರ್ಥಪಾದದ ಉಪಾಧಿಗಳ ಬಗ್ಗೆ ವಿಚಾರ ಮಾಡಲಾಗಿದೆ.

ಈ ಪಾದದಲ್ಲಿ ಒಟ್ಟು ಏಳು ಅಧಿಕರಣಗಳಿವೆ -

೧. ಆನುಮಾನಿಕಾಧಿಕರಣ.

೨. ಜ್ಯೋತಿರುಪಕ್ರಮಾಧಿಕರಣ.

೩. ನ ಸಂಖ್ಯೋಪಸಂಗ್ರಹಾಧಿಕರಣ.

೪. ಆಕಾಶಾಧಿಕರಣ.

೫. ಸಮಾಕರ್ಷಾಧಿಕರಣ.

೬. ಪ್ರಕೃತ್ಯಧಿಕರಣ.

೭. ಏತೇನಾಧಿಕರಣ.

ಈ ಏಳು ಅಧಿಕರಣಗಳ ಉಪಾಧಿಯನ್ನು ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು "ವಿರೋಧಿ ಸರ್ವಬಾಹುಲ್ಯ" ಇತ್ಯಾದಿ ಕಾರಿಕೆಯಿಂದ ವಿವರಿಸುತ್ತಿದ್ದಾರೆ. ಆದರೆ ಈ ಕಾರಿಕೆಯಲ್ಲಿ ಕೇವಲ ಆರೇ ಉಪಾಧಿಗಳನ್ನು ಹೇಳಿದ್ದಾರೆ. ಏಳು ಅಧಿಕರಣಗಳಿಗೆ ಏಳು ಉಪಾಧಿಗಳನ್ನು ಹೇಳದೇ ಆರು ಉಪಾಧಿ ಹೇಳಿದ್ದು ಹೇಗೆ ಸರಿ ಹೊಂದುತ್ತದೆ ?

ಈ ಶಂಕೆಯನ್ನು "ಅತ್ರಾಽನುವ್ಯಾಖ್ಯಾನೇ" ಇತ್ಯಾದಿಯಾಗಿ ಗ್ರಂಥಕಾರರು ವಿಮರ್ಶಿಸುತ್ತಿದ್ದಾರೆ.

ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್ ।
ಪೃಥಕ್ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥

ಸಮಾಸವನ್ನು ಹೀಗೆ ತಿಳಿಯಬೇಕು - "ವಿರೋಧಿ ಚ ಸರ್ವಂ ಚ ಬಾಹುಲ್ಯಂ ಚ ಕಾರಣಂ ಚ ಸ್ತ್ರೀ ಚ ನಿಷೇಧಶ್ಚ" "ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಾಃ" ಎಂದು ದ್ವಂದ್ವಸಮಾಸ. ವಿರೋಧಿ ಮೊದಲಾದ ಅರ್ಥಗಳನ್ನು ಯಾವ ಶಬ್ದಗಳು ಪ್ರತಿಪಾದಿಸುತ್ತವೆಯೋ ಅಂತಹ ಶಬ್ದಗಳು ಎಂಬರ್ಥದಲ್ಲಿ ದ್ವಂದ್ವದ ಮುಂದೆ 'ಇನಿ' ಪ್ರತ್ಯಯವು ಬಂದಿದೆ. ಈ ಪಾದದಲ್ಲಿ ಇಂತಹ ಶಬ್ದಗಳನ್ನೆಲ್ಲಾ ಸಮನ್ವಯ ಮಾಡಲಾಗಿದೆ ಎಂದಭಿಪ್ರಾಯ.

**प्रकाशः – तदिति** ।। अनुव्याख्यानं व्याख्यातमित्यर्थः ।। **यदात्विति** ।। तत्वप्रकाशिकाकृत्पक्ष इत्यर्थः ।। **पृथगुपाध्यभावादिति** ।। अत एव सुधायां "सर्वेत्यनेनैव समाकर्षाधिकरणार्थोऽपि सङ्गृहीतः। तस्य ज्योतिरधिकरणाक्षेप-परिहारार्थत्वात्" इत्युक्तमिति भावः ।

ಆರು ಉಪಾಧಿಗಳನ್ನಷ್ಟೇ ಹೇಗೆ ಹೇಳಿದರೆಂಬ ಶಂಕೆಗೆ ಗ್ರಂಥಕಾರರು ಎರಡು ರೀತಿಯ ಸಮಾಧಾನವನ್ನು ಹೇಳುತ್ತಿದ್ದಾರೆ -

೧. ಸಮಾಕರ್ಷಾಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸಲೇಬೇಕಾಗಿಲ್ಲ. ಏಕೆಂದರೆ ಅನುವ್ಯಾಖ್ಯಾನದಲ್ಲಿ ವಿರೋಧಿ ಇತ್ಯಾದಿ ಉಪಾಧಿಗಳನ್ನು ಹೇಳುವಾಗ ಸಮಾಕರ್ಷಾಧಿಕರಣಕ್ಕೆ ಉಪಾಧಿಯನ್ನು ಹೇಳಿಲ್ಲ. ಮತ್ತು "ಸರ್ವಮಾನ್ಯೈರ್ವಿರೋಧಶ್ಚ" ಇತ್ಯಾದಿಯಾಗಿ ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳನ್ನು ಸಂಗ್ರಹಿಸುವಾಗ ಈ ಅಧಿಕರಣಕ್ಕೆ ಪ್ರತ್ಯೇಕ ಯುಕ್ತಿಯನ್ನು ಹೇಳಿಲ್ಲ. ಭಾಷ್ಯದಲ್ಲಿಯೂ ಈ ಅಧಿಕರಣದಿಂದ ಹೊಸದಾದ

ಶಬ್ದಗಳನ್ನೇನು ಸಮನ್ವಯ ಮಾಡಿಲ್ಲ. ಆದ್ದರಿಂದ ಹಿಂದಿನ ಆಕಾಶಾಧಿಕರಣಕ್ಕೆ "ಸಮಾಕರ್ಷಾತ್" ಮೊದಲಾದ ಎಂಟು ಸೂತ್ರಗಳು ಸಂಬಂಧಪಟ್ಟಿವೆಯೆಂದು ಹೇಳಬೇಕು. ಅಂದರೆ ಹಿಂದಿನ ಅಧಿಕರಣದ ಗುಣಸೂತ್ರಗಳೆಂದು ಹೇಳಬೇಕು. ತತ್ವಪ್ರದೀಪದಲ್ಲಿ ತ್ರಿವಿಕ್ರಮಪಂಡಿತಾಚಾರ್ಯರೂ ಸಹ ಹೀಗೆಯೇ ಹೇಳಿದ್ದಾರೆ.

ಆದ್ದರಿಂದ ಈ ಪಾದದಲ್ಲಿ ಕೇವಲ ಆರು ಅಧಿಕರಣಗಳೆಂದು ಹೇಳಿದಂತಾಯಿತು. ಆರು ಅಧಿಕರಣಗಳಿಗೆ ಆರು ಉಪಾಧಿಗಳನ್ನು ಹೇಳಿದ್ದು ಸಮಂಜಸವೇ ಆಗಿದೆ.

೨. 'ಸಮಾಕರ್ಷಾತ್' ಮೊದಲಾದ ಎಂಟು ಸೂತ್ರಗಳು ಸೇರಿ ಸಮಾಕರ್ಷಾಧಿಕರಣವೆಂದು ಪ್ರತ್ಯೇಕವಾಗಿ ಹೇಳಬಹುದು. ಸಮಾಕರ್ಷಾಧಿಕರಣವು ಪ್ರತ್ಯೇಕ ಅಧಿಕರಣವಾದಲ್ಲಿ ಅನುವ್ಯಾಖ್ಯಾನದಲ್ಲಿ ಪ್ರತ್ಯೇಕ ಉಪಾಧಿಯನ್ನು ಹೇಳಬೇಕಿತ್ತು ಎಂದರೆ ಎರಡು ಮತ್ತು ಐದನೆಯ ಅಧಿಕರಣಕ್ಕೆ 'ಸರ್ವ' ಎಂಬ ಒಂದೇ ಉಪಾಧಿಯನ್ನು ವಿವಕ್ಷಿಸಬೇಕು.

**ಪ್ರಕಾಶಃ** – तर्हि कथं भेद इत्यत आह – **न्यायेति** ।। द्वितीये शब्दार्थानेकत्वरूपो न्यायः । पञ्चमे वृत्तितारतम्योपपादकसमाकर्षादिरूपो न्याय इति न्यायभेदोऽग्रे स्पष्ट इति भावः । एकोपाधिकत्वमेव व्यनक्ति – **द्वितीयेऽपीति** ।। सुधाविरोधमाशङ्क्य तदभिप्रायमाह – **सुधायामिति** ।।

ಪ್ರಶ್ನೆ - ಎರಡೂ ಅಧಿಕರಣಗಳಿಗೆ 'ಸರ್ವ' ಎಂದು ಒಂದೇ ಉಪಾಧಿಯಾದಲ್ಲಿ ಅಧಿಕರಣವೂ ಒಂದೇ ಆಗಬೇಕು. ಅಧಿಕರಣಭೇದಕ್ಕೆ ಏನು ಕಾರಣ?

ಉತ್ತರ - ಉಪಾಧಿಯು ಒಂದೇ ಆದರೂ ಸಹ ನ್ಯಾಯಭೇದದಿಂದ ಅಧಿಕರಣಭೇದವು ಯುಕ್ತವಾಗುತ್ತದೆ. ಪೂರ್ವಮೀಮಾಂಸೆಯಲ್ಲಿ "ಹೇತುದರ್ಶನಾಚ್ಚ" ಎಂಬ ಗುಣಸೂತ್ರವು ವಿರೋಧಾಧಿಕರಣಶೇಷವಾಗಿದ್ದರೂ ಪ್ರತ್ಯೇಕವಾದ ನ್ಯಾಯವನ್ನು ಸೂಚಿಸಿರುವುದರಿಂದ ಅಧಿಕರಣಭೇದವನ್ನು ಅಂಗೀಕರಿಸಲಾಗಿದೆ. ಅದರಂತೆ ಇಲ್ಲಿಯೂ ಸಹ ನ್ಯಾಯಭೇದದಿಂದ ಅಧಿಕರಣಭೇದವನ್ನು ಸಮರ್ಥಿಸಬಹುದು. ಎರಡನೆಯ ಅಧಿಕರಣದಲ್ಲಿ "ಶಬ್ದಾರ್ಥಾನೇಕತ್ವ" ಎಂಬ ನ್ಯಾಯವನ್ನು ಐದನೆಯ ಅಧಿಕರಣದಲ್ಲಿ ವೃತ್ತಿತಾರತಮ್ಯೋಪಪಾದಕವಾದ "ಸಮಾಕರ್ಷ" ಎಂಬ ನ್ಯಾಯವನ್ನು ತಿಳಿಯಬೇಕು. ನ್ಯಾಯಭೇದದ ವಿವರಣೆಯನ್ನು ಮುಂದೆ ಗ್ರಂಥಕಾರರೇ ವಿವರಿಸುತ್ತಾರೆ.

ಟೀಕಾರಾಯರ ಅಭಿಪ್ರಾಯದಂತೆ ಸಮಾಕರ್ಷಾಧಿಕರಣವು ಪ್ರತ್ಯೇಕವಾಗಿದೆ. ತ್ರಿವಿಕ್ರಮಪಂಡಿತರ ಅಭಿಪ್ರಾಯದಂತೆ ಪ್ರತ್ಯೇಕವಾದ ಸಮಾಕರ್ಷಾಧಿಕರಣವು ಇರುವುದಿಲ್ಲ. ಇಲ್ಲಿರುವ ಎಂಟು ಸೂತ್ರಗಳು ಹಿಂದಿನ ಆಕಾಶಾಧಿಕರಣಕ್ಕೆ ಸಂಬಂಧಪಟ್ಟಿವೆ. ಈ ಸೂಕ್ಷ್ಮತೆಯನ್ನು ಗಮನಿಸಬೇಕು. ಪ್ರಕೃತ ಗ್ರಂಥಕಾರರು ಇಬ್ಬರ ಪಕ್ಷವನ್ನೂ ಸ್ವೀಕರಿಸಿ ವಿರೋಧ ಬಾರದಂತೆ ಸಮರ್ಥಿಸಿದ್ದಾರೆ.

ಆನುಮಾನಿಕಾಧಿಕರಣ (೧-೪-೧)

ಸರ್ವಶಬ್ದದ ಅರ್ಥ ವಿವರಣೆ

ಪ್ರಶ್ನೆ - ಎರಡನೆಯ ಜ್ಯೋತಿರುಪಕ್ರಮಾಧಿಕರಣದಲ್ಲಿ 'ಸರ್ವ' ಎಂಬುದೇ ಉಪಾಧಿಯಾಗಿದೆ. 'ಸರ್ವವಿಷಯತ್ವ' ಎಂದು ಇದರರ್ಥ. ಇಲ್ಲಿ ಸರ್ವವಿಷಯತ್ವ ಎಂದರೆ ಅಸಂಕುಚಿತಸರ್ವವಿಷಯತ್ವ ಎಂದು ಅರ್ಥವೋ? ಅಥವಾ ಉಕ್ತವಕ್ಷ್ಯಮಾಣಾತಿರಿಕ್ತಸರ್ವವಿಷಯತ್ವ ಎಂದು ಅರ್ಥವೋ? ಮೊದಲನೆಯ ಪಕ್ಷವನ್ನು ಅಂಗೀಕರಿಸಿದರೆ ಸುಧಾವಿರೋಧ ಬರುತ್ತದೆ. ಎರಡನೆಯ ಪಕ್ಷವನ್ನು ಅಂಗೀಕರಿಸಿದರೆ ಈ ಉಪಾಧಿಯು ಸರ್ವಾಧಿಕರಣಸಾಧಾರಣವಾಗಿದೆ. ಮತ್ತು ಅನುವ್ಯಾಖ್ಯಾನದಲ್ಲಿ ಎಲ್ಲಾ ಅಧಿಕರಣಗಳ ಪೂರ್ವಪಕ್ಷಯುಕ್ತಿಗಳನ್ನು ಹೇಳುವಾಗ "ವ್ಯುತ್ಪತ್ತೇರಪ್ಯಶಕ್ಯತಾ" ಎಂದಿದ್ದಾರೆ. ಇದೂ ತಪ್ಪಾಗುತ್ತದೆ. ಏಕೆಂದರೆ 'ಜಿ' 'ಓತಿ' ಮೊದಲಾದ ಅವಯವಗಳು ಬ್ರಹ್ಮಪರವಾಗದ ಕಾರಣ 'ಜ್ಯೋತಿ' ಎಂಬ ಸಮುದಾಯವು ಬ್ರಹ್ಮಪರವಾಗುತ್ತದೆ. ಆದ್ದರಿಂದ ವ್ಯುತ್ಪತ್ತಿಯು ಶಕ್ಯವೇ ಆಗಿರುವುದರಿಂದ ಅಶಕ್ಯವೇನಲ್ಲ. ಹೀಗಾದ ಕಾರಣ ನೀವು ಹೇಳಿದ ಪೂರ್ವಪಕ್ಷಯುಕ್ತಿಯು ಅಸಮಂಜಸವಾಗಿದೆ. ಆದ್ದರಿಂದ 'ಸರ್ವ' ಎಂಬುದು ಉಪಾಧಿಯಾಗದು.

ಉತ್ತರ - ಜ್ಯೋತಿರುಪಕ್ರಮಾಧಿಕರಣದಲ್ಲಿ ಉಕ್ತವಕ್ಷ್ಯಮಾಣವಾದ ಸಕಲ ಶಬ್ದಗಳ ಸಮನ್ವಯವನ್ನು ಮಾಡಿದ್ದಾರೆ. ಆದರೆ ಸುಧೆಯಲ್ಲಿ ಉಕ್ತವಕ್ಷ್ಯಮಾಣ ಅತಿರಿಕ್ತವಾದದ್ದನ್ನು ವಿಷಯವೆಂದು ಹೇಳಿದ್ದಾರೆ. ಹಾಗಾಗಿ ವಿರೋಧ ಬರುತ್ತದಲ್ಲವೆ? ಎಂಬ ಶಂಕೆಗೆ ಹೀಗೆ ಉತ್ತರಿಸಬೇಕು - 'ಉಕ್ತ' ಎಂದರೆ ಸನ್ನಿಹಿತವಾದ ಈ ಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಯಾವ ಅವ್ಯಕ್ತಾದಿ ಶಬ್ದಗಳು ಅವರತ್ವಾದಿ ಶಬ್ದಗಳು ಎಂದರ್ಥ. 'ವಕ್ಷ್ಯಮಾಣ' ಎಂದರೆ ಮುಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡುವ ಪಂಚಜನಾದಿ ಶಬ್ದಗಳು ಎಂದರ್ಥ. ಈ ಎಲ್ಲಾ ಶಬ್ದಗಳನ್ನು ಹಿಂದಿನ ಮುಂದಿನ ಅಧಿಕರಣಗಳಲ್ಲಿ ವಾಕ್ಯರೂಪದಿಂದ ವಿಚಾರ ಮಾಡಿದ್ದಾರೆ. ಆದರೆ ಜ್ಯೋತಿರುಪಕ್ರಮಾಧಿಕರಣದಲ್ಲಿ ಪದಾದಿರೂಪದಿಂದ ವಿಚಾರ ಮಾಡುತ್ತಿದ್ದಾರೆ ಎಂದರ್ಥ.

**प्रकाशः – यथाऽन्नमयादीनां विकारार्थकमयड्युक्तत्वादिरूपेणानन्दमयनये विचार्यत्वेऽपि गुहामित्यत्र बहुत्वसंख्यायुक्तत्वेन रूपेण विचार्यता;**

ವಿವಕ್ಷಾಭೇದದಿಂದ ಒಂದೇ ಶಬ್ದವನ್ನು ಅನೇಕ ಬಾರಿ ಸಮನ್ವಯ ಮಾಡುವುದು ಕಂಡಿದೆ. ಉದಾಹರಣೆ- ಆನಂದಮಯಾಧಿಕರಣದಲ್ಲಿ ವಿಕಾರಾರ್ಥವುಳ್ಳ ಮಯಟ್ ಪ್ರತ್ಯಯವಿರುವ ಪ್ರಯುಕ್ತ ಅನ್ನಮಯ ಮೊದಲಾದ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಿಲ್ಲ ಎಂಬ ಆಶಂಕೆಯು ಪ್ರಾಪ್ತವಾದರೆ, ಅದನ್ನು ನಿರಾಕರಿಸುತ್ತಾ ಅನ್ನಮಯಾದಿ ಶಬ್ದಗಳ ಸಮನ್ವಯವನ್ನು ಮಾಡಿರುತ್ತಾರೆ. ಪುನಃ ಅದೇ ಶಬ್ದಗಳನ್ನೇ ಗುಹಾಧಿಕರಣದಲ್ಲಿಯೂ ಕೂಡ ಸಮನ್ವಯ ಮಾಡಿದ್ದಾರೆ. ಪಂಚತ್ವಸಂಖ್ಯೆಯನ್ನು ಹೊಂದಿರುವ ಅನ್ನಮಯಾದಿಶಬ್ದಗಳು ಒಬ್ಬನೇ ಬ್ರಹ್ಮನಲ್ಲಿ ಬರಲು ಹೇಗೆ ಸಾಧ್ಯ ? ಎಂಬ ಆಶಂಕೆಗೆ ದ್ವಿತ್ವ, ತ್ರಿತ್ವ, ಪಂಚತ್ವ ಮೊದಲಾದ ಸಂಖ್ಯೆಗಳಿಗೂ ವಿಷ್ಣು ಆಶ್ರಯನಾಗಿರುತ್ತಾನೆಂದು ಗುಹಾಧಿಕರಣದಲ್ಲಿ ಅನ್ನಮಯಾದಿಶಬ್ದಗಳ ಸಮನ್ವಯವನ್ನು ಮಾಡಿರುತ್ತಾರೆ.

ಪರಿಪೂರ್ಣಚಂದ್ರಿಕಾ

**प्रकाशः** – यथा वा छन्दस्सूत्रे रूढत्वेनान्यत्र विचारितानामप्याकाशादिशब्दानां विष्णौ प्रयोगे प्रयोजनं नेत्येवंरूपेण विचार्यता

ಮತ್ತು ಒಮ್ಮೆ ಸಮನ್ವಯ ಮಾಡಿದ ಆಕಾಶಶಬ್ದವನ್ನು ಪುನಃ ಛಂದಃಸೂತ್ರದಲ್ಲಿಯೂ ಸಮನ್ವಯ ಮಾಡಿದ್ದಾರೆ. ಅನ್ಯತ್ರರೂಢವಾದ ಆಕಾಶಶಬ್ದವು ವಿಷ್ಣುವನ್ನು ಹೇಗೆ ಪ್ರತಿಪಾದನೆ ಮಾಡುತ್ತದೆ ? ಎಂಬ ಆಶಂಕೆಗೆ ಉತ್ತರಿಸಲು ಆಕಾಶಾಧಿಕರಣವು ಹೊರಟಿರುತ್ತದೆ. ಇಂತಹ ಅನ್ಯತ್ರಪ್ರಸಿದ್ಧವಾದ ಶಬ್ದಸಮನ್ವಯವನ್ನು ವಿಷ್ಣುವಿನಲ್ಲಿ ತಿಳಿಯುವುದರಿಂದ ಯಾವುದೇ ಪ್ರಯೋಜನವಿಲ್ಲ ಎಂಬ ಆಶಂಕೆಗೆ ಉತ್ತರಿಸಲು ಛಂದೋಧಿಕರಣವು ಹೊರಟಿರುತ್ತದೆ. ಹೀಗೆ ಒಂದೇ ಆಕಾಶಶಬ್ದವನ್ನು ಅನ್ಯತ್ರಪ್ರಸಿದ್ಧವೆಂಬ ವಿವಕ್ಷೆಯಿಂದ ಆಕಾಶಾಧಿಕರಣದಲ್ಲಿ ಸಮನ್ವಯ ಮಾಡಿದ್ದರೂ ಪ್ರಯೋಜನವಿಲ್ಲವೆಂಬ ವಿವಕ್ಷೆಯಿಂದ ಛಂದೋಧಿಕರಣ-ದಲ್ಲಿಯೂ ಸಮನ್ವಯ ಮಾಡಲಾಗಿದೆ.

**प्रकाशः** – यथा चाकाशशब्दस्यान्यत्र प्रसिद्धत्वेन ''आकाशस्तल्लिङ्गात्'' इत्यत्राद्यपाद उभयत्रप्रसिद्धत्वेन रूपेण ''आकाशोऽर्थान्तरत्वादिव्यपदेशात्'' इत्यत्र

ಮತ್ತು 'ಆಕಾಶಸ್ತಲ್ಲಿಂಗಾತ್' ಎಂಬ ಪ್ರಥಮ ಪಾದದ ಅಧಿಕರಣದಲ್ಲಿ ಅನ್ಯತ್ರಪ್ರಸಿದ್ಧವಾಗಿದೆಯೆಂಬ ವಿವಕ್ಷೆಯಿಂದ ಆಕಾಶ ಶಬ್ದವನ್ನು ಸಮನ್ವಯ ಮಾಡಿದ್ದರೂ, ಪುನಃ ಅದೇ ಆಕಾಶಶಬ್ದವನ್ನು ಉಭಯತ್ರಪ್ರಸಿದ್ಧವೆಂಬ ವಿವಕ್ಷೆಯಿಂದ 'ಆಕಾಶೋಽರ್ಥಾಂತರತ್ವಾದಿವ್ಯಪದೇಶಾತ್' ಎಂಬ ಮೂರನೆಯ ಪಾದದಲ್ಲಿಯೂ ಕೂಡ ಸಮನ್ವಯ ಮಾಡಲಾಗಿದೆ.

**प्रकाशः** – यथा वाऽग्निहोत्रादिशब्दानां नामधेयतयाऽऽद्यस्य चतुर्थे नामधेयपादे समुदायानुवादापवादतया द्वितीयस्य द्वितीये शब्दान्तरपादे तद्वदिति भावः ।

ಮತ್ತು ಪೂರ್ವಮೀಮಾಂಸೆಯಲ್ಲಿಯೂ ಇಂತಹ ದೃಷ್ಟಾಂತವು ಕಂಡಿದೆ. ಪ್ರಥಮಾಧ್ಯಾಯದ ನಾಲ್ಕನೆಯ ನಾಮಧೇಯಪಾದದಲ್ಲಿ 'ಅಗ್ನಿಹೋತ್ರ' ಎಂಬ ಶಬ್ದವು ನಾಮಧೇಯವೆಂದು ನಿರ್ಧರಿಸಿದ್ದಾರೆ. ಅಂದರೆ ಅಗ್ನಿಹೋತ್ರಶಬ್ದಕ್ಕೆ ಯೌಗಿಕಾರ್ಥವನ್ನು ಆಶ್ರಯಿಸಿ ಗುಣವಿಧಾಯಕವೆಂದು ಹೇಳಬೇಕೋ? ಅಥವಾ ಕೇವಲ ಯಾಗದ ಹೆಸರೆಂದು ವಿವಕ್ಷಿಸಬೇಕೋ? ಎಂಬ ಸಂಶಯವುಂಟಾದಾಗ ಅಗ್ನಿಯೆಂಬ ದೇವತಾಗುಣಕ್ಕೆ ಇದು ವಿಧಾಯಕವಲ್ಲ. , ಯಾಗವಿಶೇಷದ ನಾಮಧೇಯವಾಗಿದೆಯೆಂದು ನಾಮಧೇಯಪಾದದಲ್ಲಿ ಅಗ್ನಿಹೋತ್ರಶಬ್ದದ ಬಗ್ಗೆ ವಿಚಾರ ಮಾಡಿದ್ದಾರೆ. ಪುನಃ ಅದೇ ಅಗ್ನಿಹೋತ್ರ ಶಬ್ದದ ಬಗ್ಗೆ ಎರಡನೆಯ ಅಧ್ಯಾಯದ ಎರಡನೆಯ ಶಬ್ದಾಂತರ ಪಾದದಲ್ಲಿಯೂ ವಿಚಾರ ಮಾಡಿದ್ದಾರೆ. 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬ ವಿಷಯವಾಕ್ಯವು ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾಗಿದೆ. ದರ್ಶಪೂರ್ಣಮಾಸ ಎಂಬ ಶಬ್ದವು ಹುಣ್ಣಿಮೆ ಹಾಗೂ ಅಮಾವಾಸ್ಯೆಗಳಲ್ಲಿ ನಡೆಸುವ ಅನೇಕ ಯಾಗಗಳ ಸಮುದಾಯವನ್ನು ಅನುವಾದ ಮಾಡುತ್ತಿದೆ. ಅದರಂತೆ ಈ ಅಗ್ನಿಹೋತ್ರಶಬ್ದವೂ ಕೂಡ ಅನೇಕ ಯಾಗಗಳ ಸಮುದಾಯವನ್ನು ಅನುವಾದ ಮಾಡಬಹುದಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾದರೆ ಅಗ್ನಿಹೋತ್ರಶಬ್ದವು ಅನೇಕ ಯಾಗಗಳ ಸಮುದಾಯವನ್ನು ಅನುವಾದ ಮಾಡುತ್ತಿಲ್ಲವೆಂದು ಸಿದ್ಧಾಂತ

ಮಾಡಿರುತ್ತಾರೆ. ಹೀಗೆ ಒಂದೇ ಅಗ್ನಿಹೋತ್ರಶಬ್ದವನ್ನು ನಾಮಧೇಯ ಪಾದದಲ್ಲಿ ಹಾಗೂ ಶಬ್ದಾಂತರ ಪಾದದಲ್ಲಿ ವಿಚಾರ ಮಾಡಿರುವುದು ಕಂಡಿದೆ. ಅದರಂತೆ ಪ್ರಕೃತದಲ್ಲಿಯೂ ಹಿಂದಿನ-ಮುಂದಿನ ಅಧಿಕರಣಗಳಲ್ಲಿ ವಾಕ್ಯರೂಪದಿಂದ ಶ್ರುತಿಸಮನ್ವಯವನ್ನು ಮಾಡಿದ್ದರೂ, ಪದ, ವರ್ಣ ಮೊದಲಾದವುಗಳ ವಿವಕ್ಷೆಯಿಂದ ಎರಡನೆಯ ಜ್ಯೋತಿರುಪಕ್ರಮಾಧಿಕರಣದಲ್ಲಿ ಸಮನ್ವಯ ಮಾಡುವುದು ತಪ್ಪಾಗುವುದಿಲ್ಲ.

**प्रकाशः** – तथाच वैदिकशब्दमात्रस्य तत्र विचारोक्तौ न सुधाविरोध इति भावः ।

ಆದ್ದರಿಂದ ವೇದದಲ್ಲಿರುವ ಎಲ್ಲಾ ಶಬ್ದಗಳ ಸಮನ್ವಯವನ್ನು ಪದ ಹಾಗೂ ಸ್ವರ ಮೊದಲಾದ ವಿವಕ್ಷೆಯಿಂದ ಎರಡನೆಯ ಜ್ಯೋತಿರುಪಕ್ರಮಾಧಿಕರಣದಲ್ಲಿ ವಿಚಾರವನ್ನು ಮಾಡುತ್ತಿದ್ದಾರೆ ಎಂದು ಹೇಳಿದಾಗ ನ್ಯಾಯಸುಧೆಯ ವಿರೋಧವೂ ಕೂಡ ಬರುವುದಿಲ್ಲ.

**प्रकाशः** – बाधकान्तरमाह – **अनुव्याख्यान इति** ।। अन्यथेत्यनुवर्तते । पदवर्णादिरूपेण विचार्यत्वाभाव इत्यर्थः । तदेव व्यनक्ति ।। **जीतीति** ।। ''जातमोतं हरौ यस्मात्'' इत्यादिना ज्योतिश्शब्दव्युत्पत्तिरुच्यते ।

ಮತ್ತೊಂದು ಬಾಧಕವನ್ನು 'ಅನುವ್ಯಾಖ್ಯಾನೇ' ಎಂಬುದರಿಂದ ಹೇಳುತ್ತಿದ್ದಾರೆ. 'ಅನ್ಯಥಾ' ಎಂಬ ಪದವು ಇಲ್ಲಿಯೂ ವಿವಕ್ಷಿಸಬೇಕು. ಒಂದು ವೇಳೆ ಪದ, ವರ್ಣ ಎಂಬ ವಿವಕ್ಷೆಯಿಂದ ಶಬ್ದಗಳ ವಿಚಾರವನ್ನು ಮಾಡದಿದ್ದಲ್ಲಿ ಅನುವ್ಯಾಖ್ಯಾನದಲ್ಲಿ ಮಾಡಿಕೊಂಡ ಪೂರ್ವಪಕ್ಷಹೇತುವೂ ಕೂಡ ಅಸಾಧುವಾಗಬೇಕಾದೀತು ಎಂದಭಿಪ್ರಾಯ.

**प्रकाशः** – तत्र यद्युक्तरीत्या सर्वसमन्वयो नाभिमतस्स्यात् तदा ज्योतिश्शब्दावयवानां ब्रह्मपरत्वाऽनावश्यकत्वात् व्युत्पत्तेरप्यशक्यत्वं पूर्वपक्षयुक्तित्वेन नोच्येतेत्यर्थः ।

ಹಿಂದೆ ಹೇಳಿದಂತೆ ಸರ್ವಶಬ್ದ ಸಮನ್ವಯಗಳೂ ವಿವಕ್ಷಿತವಾಗದಿದ್ದಲ್ಲಿ, 'ಜ್ಯೋತಿಷ್' ಶಬ್ದದ ಅವಯವಗಳೆನಿಸಿದ 'ಜಿ' 'ಓತಿ' ಎಂಬುದೂ ಕೂಡ ಬ್ರಹ್ಮಪರವಲ್ಲವೆಂದೇ ಸಿದ್ಧವಾಗುತ್ತದೆ. ಹೀಗಿರುವಾಗ ಎಲ್ಲಾ ಪದಗಳು ಹರಿಪರವಾದರೆ ವ್ಯುತ್ಪತ್ತಿಯೂ ಕೂಡುವುದಿಲ್ಲ ಎಂಬ 'ವ್ಯುತ್ಪತ್ತೇರಪ್ಯಶಕ್ಯತ್ವಮ್' ಎಂಬ ಪೂರ್ವಪಕ್ಷ ಹೇತುವನ್ನೂ ಹೇಳಬೇಕಾಗಿರಲಿಲ್ಲ. ಯಾವ ಕಾರಣದಿಂದ ಶ್ರೀಮದಾಚಾರ್ಯರು 'ವ್ಯುತ್ಪತ್ತೇರಪ್ಯಶಕ್ಯತ್ವಮ್' ಎಂಬುದನ್ನು ಪೂರ್ವಪಕ್ಷ ಹೇತುವನ್ನಾಗಿ ಹೇಳಿದ್ದಾರೋ, ಅದರಿಂದಲೇ ಪದ, ವರ್ಣಾದಿ ರೂಪದಿಂದ ಸಮನ್ವಯವೂ ವಿವಕ್ಷಿತವಾಗಿದೆ ಎಂದು ತಿಳಿಯುತ್ತದೆ.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम्** – ।। **आनुमानिकमप्येकेषामिति चेन्न शरीररूपकविन्यस्तगृहीतेर्दर्शयति च** ।। ननु जन्मादिसूत्रे कारणत्वमेव लक्षणमुक्तम्। तत्रैव तृतीये शास्त्रं प्रमाणीकृतम् । चतुर्थे तु तत्प्रामाण्यं कारणवाक्यसमन्वयादित्युक्तम् । एवं च सर्वशब्दसमन्वयस्याप्रतिज्ञातत्वात् तत्प्रतिपादनेऽप्रतिज्ञातोक्तिरित्यत आह – **अत्रेति**।। न चैकगुणपूर्णत्वस्यैव लक्षणत्वसम्भवात्सर्वगुणपूर्त्युक्तिर्व्यर्थेत्यत आह – **यथा चेति** ।। सूत्रणं सूत्रकरणम् । नन्वेवं समाकर्षाधिकरणस्य ज्योतिरधिकरणस्य च सर्वविषयत्वे प्रतिपाद्यैक्याद्भेदो न स्यादित्यत आह – **न्यायभेदेति** ।। पूर्वपक्षसिद्धान्तन्यायभेदेनेत्यर्थः । ननु द्वितीयाधिकरणस्य सर्वविषयत्वं नामासङ्कुचितसर्वविषयत्वं वोक्तवक्ष्यमाणातिरिक्तसर्वविषयत्वं वा । नाद्यः । सुधाविरोधात् । न द्वितीयः । अधिकरणमात्रसाधारण्यादित्यत आह – **द्वितीयेऽपीति** ।।




ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್ ।
ಪೃಥಕ್‌ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥

ವಿರೋಧಿ, ಸರ್ವ, ಬಾಹುಲ್ಯ, ಕಾರಣ, ಸ್ತ್ರೀ, ನಿಷೇಧ ಈ ಅರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಪ್ರತ್ಯೇಕ, ಪ್ರತ್ಯೇಕವಾಗಿ ಮಾಡಲಾಗಿದೆ. ಅನುವ್ಯಾಖ್ಯಾನದ ಈ ಶ್ಲೋಕವನ್ನು ಗಮನಿಸಿದಾಗ ಆರು ಉಪಾಧಿಗಳು ಕಾಣಸುತ್ತಿವೆ. ಆದ್ದರಿಂದ ಈ ಪಾದದಲ್ಲಿ ಆರು ಅಧಿಕರಣಗಳಿವೆ ಎಂದೇ ತಿಳಿಯುತ್ತದೆ. ತ್ರಿವಿಕ್ರಮಾಪಂಡಿತಾಚಾರ್ಯರೂ ಕೂಡ ಹಾಗೆಯೇ ಆರು ಅಧಿಕರಣಗಳೆಂದು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಸುಧಾಕಾರರು ಏಳು ಅಧಿಕರಣಗಳೆಂದು ಪರಿಗಣಿಸಿದ್ದಾರೆ 'ಸಮಾಕರ್ಷಾತ್' ಇತ್ಯಾದಿ ಎಂಟುಸೂತ್ರಗಳು ಹಿಂದಿನ ಆಕಾಶಾಧಿಕರಣದ ಗುಣಸೂತ್ರವಲ್ಲ. ಪ್ರತ್ಯೇಕ ಅಧಿಕರಣವೆಂಬುದು ಸುಧಾಕಾರರ ಪಕ್ಷ. ಅನುವ್ಯಾಖ್ಯಾನದಲ್ಲಿ ಎರಡನೆಯ ಅಧಿಕರಣದ 'ಸರ್ವ' ಎಂಬ ಉಪಾಧಿಯೇ ಐದನೆಯ ಸಮಾಕರ್ಷಾಧಿಕರಣಕ್ಕೂ

ಸಂಬಂಧ ಪಡುವುದರಿಂದ ಪ್ರತ್ಯೇಕವಾಗಿ ಉಪಾಧಿಯನ್ನು ಉಲ್ಲೇಖಿಸಿಲ್ಲ. ಕೇವಲ ಉಪಾಧಿಯು ಒಂದೇ ಆಗಿದ್ದರೂ, ನ್ಯಾಯದಲ್ಲಿ ವ್ಯತ್ಯಾಸವಿರುವ ಕಾರಣ ಅಧಿಕರಣ ಭೇದವನ್ನು ಸಮರ್ಥಿಸಬೇಕು.

ಎರಡನೆಯ ಅಧಿಕರಣದಲ್ಲಿ ಎಲ್ಲಾ ಶಬ್ದಗಳನ್ನೂ ಸಮನ್ವಯ ಮಾಡುತ್ತಾರೆಂದರೆ ಶ್ರುತಿಯಲ್ಲಿರುವ ಪದ, ವರ್ಣಗಳ ಸಮನ್ವಯವೆಂದು ತಿಳಿಯಬೇಕು. ಹೊರತು, ವಾಕ್ಯಗಳ ಸಮನ್ವಯವು ಉದ್ದೇಶವಾಗಿಲ್ಲ. ಅಂದರೆ ಯಾವಶ್ರುತಿಗಳನ್ನು ವಾಕ್ಯರೂಪದಿಂದ ಹಿಂದಿನ, ಮುಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡಿರುತ್ತಾರೋ, ಅದೇ ಶ್ರುತಿಗಳಲ್ಲಿರುವ ಪ್ರತಿಯೊಂದು ಪದಗಳನ್ನು, ವರ್ಣಗಳನ್ನು ಸಮನ್ವಯ ಮಾಡಲು ಎರಡನೆಯ ಜ್ಯೋತಿರುಪಕ್ರಮಾಧಿಕರಣವು ಹೊರಟಿರುತ್ತದೆ.

////////////////////////////////////////////////

• • • • •

## ದೋಷವಾಚಕಶಬ್ದಗಳ ಸಮನ್ವಯ ಆವಶ್ಯಕವೇ ?

## तात्पर्यचन्द्रिका

**ननु ''अव्यक्तात् पुरुषः परः'' ''जीवा एव तु दुःखिनः'' इत्यवरत्वदुःखित्वादि-दोषवाचिशब्दसमन्वयानुक्तावपि गुणपूर्तिः सेत्स्यति ।**

ಅನುವಾದ - ಆಕ್ಷೇಪ - 'ದುಃಖೀ' 'ಅವರ' ಮೊದಲಾದ ಶಬ್ದಗಳ ಸಮನ್ವಯವು ನಿಷ್ಪ್ರಯೋಜಕವಾಗಿದೆ. ''ಅವ್ಯಕ್ತಾತ್ ಪುರುಷಃ ಪರಃ'' ''ಜೀವಾ ಏವ ತು ದುಃಖಿನಃ'' ಇತ್ಯಾದಿ ಶ್ರುತಿಗಳಲ್ಲಿರುವ 'ಅವರತ್ವ' 'ದುಃಖಿತ್ವ' ಮೊದಲಾದವುಗಳನ್ನು ಹೇಳುವ ಶಬ್ದಗಳ ಸಮನ್ವಯವು ಅನಾವಶ್ಯಕ. ಈ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡದಿದ್ದರೂ ಗುಣಪೂರ್ಣತ್ವವು ಸಿದ್ಧವಾಗುತ್ತದೆ.

**नच समन्वयः स्वरूपेण फलम् । दुःख्यादिशब्दसमभिव्याहृतजीवादिशब्द-प्रवृत्तिनिमित्तप्राणधारकत्वादिगुणास्तु ''अनेन जीवेनात्मना'' इत्यादिवाक्यस्थ-जीवादिशब्दसमन्वयेनापि सेत्स्यन्ति ।**

ಶಬ್ದಸಮನ್ವಯವೇ ಮುಖ್ಯಪ್ರಯೋಜನವಲ್ಲ. ಶಬ್ದಸಮನ್ವಯದ ಮೂಲಕ ಗುಣಗಳ ಸಮನ್ವಯವೇ ಮುಖ್ಯಪ್ರಯೋಜನ. ಪ್ರಕೃತ ದುಃಖ್ಯಾದಿಶಬ್ದಗಳ ಜೊತೆಗಿರುವ ಜೀವಾದಿಶಬ್ದಗಳ ಪ್ರವೃತ್ತಿನಿಮಿತ್ತವಾದ ಪ್ರಾಣಧಾರಕತ್ವವು ''ಜೀವಾ ಏವ ತು ದುಃಖಿನಃ'' ಎಂಬ ಶ್ರುತಿಯ ಸಮನ್ವಯದಿಂದ ವಿಷ್ಣುವಿನಲ್ಲಿ ಹೇಳಿದಂತೆ ಆಗುತ್ತದೆಂದು ನೀವು ಹೇಳಬೇಕು. ಆದರೆ ''ಅನೇನ ಜೀವೇನಾತ್ಮನಾ'' ಇತ್ಯಾದಿ ವಾಕ್ಯದಲ್ಲಿರುವ ಜೀವಾದಿಶಬ್ದಗಳ ಸಮನ್ವಯದಿಂದಲೂ ವಿಷ್ಣುವಿನಲ್ಲಿ ಈ ಪ್ರಾಣಧಾರಕತ್ವಾದಿಗುಣಗಳು ಸಿದ್ಧವಾಗುತ್ತವೆ.

ಪರಿಪೂರ್ಣಚಂದ್ರಿಕಾ

**नच "आकाशात् वायुः" इत्यादिवाक्यसमन्वयेनेश्वरस्यावान्तरकारणत्वमिव "महतः परमव्यक्तमव्यक्तात् पुरुषः परः" इत्यादिवाक्यसमन्वयेनावान्तरपरत्वादि सेत्स्यतीति वाच्यम् ।**

ಪ್ರಶ್ನೆ - ದೋಷವಾಚಕ ಶಬ್ದಗಳ ಸಮನ್ವಯಕ್ಕೆ ಮತ್ತೊಂದು ಪ್ರಯೋಜನವಿದೆ - "ಆಕಾಶಾದ್ ವಾಯುಃ" ಇತ್ಯಾದಿ ವಾಕ್ಯ ಸಮನ್ವಯದಿಂದ ವಿಷ್ಣುವಿನಲ್ಲಿ ಅವಾಂತರಕಾರಣತ್ವವು ಸಿದ್ಧವಾಗುತ್ತದೆ. ವಾಯುವಿನ ಜನನಕ್ಕೆ ಆಕಾಶವು ಅವಾಂತರಕಾರಣವಾಗಿದೆ. ಅವಾಂತರಕಾರಣತ್ವವೂ ಒಂದು ಗುಣವಾದ್ದರಿಂದ ಈ ಗುಣವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಬೇಕು. ಈ ಗುಣದ ಸಿದ್ಧಿಗೋಸ್ಕರ ಆಕಾಶಶಬ್ದದ ಸಮನ್ವಯವನ್ನು ಮಾಡಲಾಗಿದೆ. ಅದರಂತೆ 'ಮಹತಃ ಪರಮವ್ಯಕ್ತಂ ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ವಾಕ್ಯಸಮನ್ವಯದಿಂದ ವಿಷ್ಣುವಿಗೆ ಅವಾಂತರಪರತ್ವವು ಸಿದ್ಧವಾಗುತ್ತದೆ. ಅವ್ಯಕ್ತ ಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾದರೆ ಮಾತ್ರ ಅವಾಂತರತತ್ವವೆನಿಸಿದ ಮಹತ್ತತ್ವಕ್ಕಿಂತ ಪರತ್ವವನ್ನು ವಿಷ್ಣುವಿನಲ್ಲಿ ಹೇಳಿದಂತಾಗುತ್ತದೆ. ಒಂದು ವೇಳೆ ಅವ್ಯಕ್ತಶಬ್ದವಾಚ್ಯತ್ವವನ್ನು ಹೇಳದಿದ್ದಲ್ಲಿ ಅವಾಂತರಪರತ್ವವು ಸಿದ್ಧವಾಗುವುದಿಲ್ಲ.

**पितामहस्य पितृत्वाभाववत् तदुत्तमादुत्तमस्य तदुत्तमत्वाभावादर्शनेन महत्पराव्यक्तात्परस्य पुरुषस्य महत्परत्वाभावशङ्काऽनुदयात् ।**

ಉತ್ತರ - ಅವ್ಯಕ್ತಶಬ್ದಪ್ರತಿಪಾದ್ಯತ್ವವನ್ನು ಒಪ್ಪದಿದ್ದರೂ ಮಹತ್‌ಪರತ್ವವು ಸಿದ್ಧವಾಗುತ್ತದೆ. ಹೇಗೆಂದರೆ ಮಗನಿಗಿಂತ ತಂದೆಯು ಉತ್ತಮ, ತಂದೆಗಿಂತ ಪಿತಾಮಹನು ಉತ್ತಮ. ಇಂತಹ ಪಿತಾಮಹನಲ್ಲಿ ಪಿತೃತ್ವವು ಇಲ್ಲದಿರಬಹುದು. ಅಂದಮಾತ್ರಕ್ಕೆ ಮೊಮ್ಮಗನಿಗಿಂತ ಉತ್ತಮನಲ್ಲ-ವೆಂದೇನಿಲ್ಲ. ಉತ್ತಮನಿಗಿಂತ ಉತ್ತಮನಾದ ಪಿತಾಮಹನು ಮೊಮ್ಮಗನಿಗೆ ಉತ್ತಮನೂ ಆಗುತ್ತಾನೆ. ಅದರಂತೆ ಮಹತ್‌ಗಿಂತ ಶ್ರೇಷ್ಠವಾದದ್ದು ಅವ್ಯಕ್ತ. ಅವ್ಯಕ್ತಕ್ಕಿಂತ ಶ್ರೇಷ್ಠನಾದವನು ವಿಷ್ಣು. ಹೀಗೆ ಉತ್ತಮಕ್ಕಿಂತ ಉತ್ತಮನಾದ ವಿಷ್ಣುವು ಮಹತ್ತತ್ವಕ್ಕಿಂತಲೂ ಉತ್ತಮನೇ ಆಗುತ್ತಾನೆ. ಆದ್ದರಿಂದ 'ಮಹತ್‌ಪರತ್ವವು ವಿಷ್ಣುವಿನಲ್ಲಿ ಬರುವುದಿಲ್ಲ' ಎಂದು ಆಶಂಕಿಸಿ ಉತ್ತರಿಸಿದ್ದು ಅಸಾಧುವಾಗಿದೆ.

**नच दुःख्यादिशब्दानां गुणप्रकाशकापूर्वयोगकल्पनया गुणसिद्धिः । दोषवाचितामुपेत्य तदधीनत्वेनैव सिद्धान्तोक्तेः ।**

ಪ್ರಶ್ನೆ - 'ದುಃಖೀ' ಮೊದಲಾದ ಶಬ್ದಗಳಿಗೆ ಅಪೂರ್ವವಾದ ಯೋಗವೃತ್ತಿಯನ್ನು ಕಲ್ಪಿಸಿ ಗುಣವಾಚಕತ್ವವನ್ನು ಹೇಳುತ್ತೇವೆ. ಆದ್ದರಿಂದ ದುಃಖ್ಯಾದಿಶಬ್ದಗಳ ಸಮನ್ವಯದಿಂದ ಗುಣವನ್ನೇ ವಿಷ್ಣುವಿನಲ್ಲಿ ಹೇಳಿದಂತಾಗುತ್ತದೆ.

ಉತ್ತರ - ಹೀಗೆ ಹೇಳಲಾಗದು. ದುಃಖೀ ಮೊದಲಾದ ಶಬ್ದಗಳು ದೋಷವಾಚಕಗಳೇ ಆಗಿವೆ. ಆ ದೋಷಗಳಾದರೂ ವಿಷ್ಣುವಿನ ಅಧೀನವಾದ್ದರಿಂದ ದುಃಖ್ಯಾದಿಶಬ್ದಗಳಿಂದ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂದು ನೀವೇ ಸಿದ್ಧಾಂತ ಮಾಡಿದ್ದೀರಿ. ಆದ್ದರಿಂದ ದುಃಖ್ಯಾದಿಶಬ್ದಗಳು ಗುಣವಾಚಕಗಳೆಂದು ಹೇಳುವುದು ತಪ್ಪಾಗುತ್ತದೆ.

**सर्वनियामकत्वं चान्तर्याम्यधिकरणादिभिरेव सिद्धम् । तस्मादव्यक्तदुःख्यादि-शब्दसमन्वयो निष्फल इति चेत्**

ಪ್ರಶ್ನೆ - ನೀವು ಹೇಳಿದಂತೆ ದುಃಖಾದಿಗಳು ಈಶ್ವರನ ಅಧೀನಗಳಾಗಿವೆ. ದುಃಖ್ಯಾದಿಶಬ್ದಗಳ ಸಮನ್ವಯದಿಂದ ಸರ್ವನಿಯಾಮಕತ್ವವೆಂಬ ಮಹಿಮೆಯನ್ನು ವಿಷ್ಣುವಿನಲ್ಲಿ ಹೇಳಿದಂತಾಗುತ್ತದೆ.

ಉತ್ತರ - ಅಂತರ್ಯಾಮ್ಯಧಿಕರಣದಿಂದಲೇ 'ಸರ್ವನಿಯಾಮಕತ್ವ' ಎಂಬ ಮಹಿಮೆಯು ವಿಷ್ಣುವಿನಲ್ಲಿ ಸಿದ್ಧವಾಗಿದೆ. ಆದಕ್ಕೋಸ್ಕರ ಪುನಃ ದುಃಖ್ಯಾದಿಶಬ್ದಗಳನ್ನು ಸಮನ್ವಯ ಮಾಡುವುದರಲ್ಲಿ ಅರ್ಥವೇ ಇಲ್ಲ.

ಆದ್ದರಿಂದ 'ದುಃಖೀ' 'ಅವ್ಯಕ್ತ' ಇವೇ ಮೊದಲಾದ ಶಬ್ದಗಳ ಸಮನ್ವಯವು ಅನಾವಶ್ಯಕ ಮತ್ತು ನಿಷ್ಪ್ರಯೋಜಕ - ಇಷ್ಟು ಆಕ್ಷೇಪ.

**मैवम् । ब्रह्मणो गुणान्तरपूर्तिरिव सर्वशब्दवाच्यतापि मुमुक्षुणा ज्ञेया ।**

ಪರಿಹಾರ - ಇಲ್ಲಿಯ ತನಕ ಮಾಡಿದ ಆಕ್ಷೇಪವು ಅತ್ಯಂತ ಅಸಮಂಜಸವಾಗಿದೆ. ಏಕೆಂದರೆ ಸರ್ವಶಬ್ದಗಳನ್ನು ಸಮನ್ವಯ ಮಾಡುವುದೇ ಮುಖ್ಯವಲ್ಲ ಗುಣಪೂರ್ಣತ್ವವನ್ನು ಹೇಳುವುದೇ ಪ್ರಧಾನವೆಂದು ಮೊಟ್ಟಮೊದಲಿಗೆ ಏನು ಹೇಳಿದಿರೋ ಅದೇ ಸರಿಯಿಲ್ಲ. ಮುಮುಕ್ಷು ಆದವನು ಸಕಲಗುಣಪರಿಪೂರ್ಣತ್ವವನ್ನು ಹೇಗೆ ಅವಶ್ಯವಾಗಿ ತಿಳಿದುಕೊಳ್ಳಬೇಕೋ, ಅದರಂತೆ ಸರ್ವಶಬ್ದ ವಾಚ್ಯತ್ವವನ್ನೂ ಸಹ ತಿಳಿದುಕೊಳ್ಳಬೇಕು.

**प्रकाशः –**

एवं पादसाफल्योक्तिपरटीकां पादोपाधींश्च विवृत्येदानीमाद्यनयस्य साफल्यं वक्तुमाक्षिपति – **नन्विति** ।।

ವಿವರಣೆ - ಇಲ್ಲಿಯ ತನಕ ಚತುರ್ಥಪಾದದ ಸಾರ್ಥಕ್ಯವನ್ನು ಸಮರ್ಥಿಸುವ ಟೀಕೆಯನ್ನು ವಿವರಿಸಿದರು. ಮತ್ತು ಈ ಪಾದದಲ್ಲಿ ಬರುವ ಉಪಾಧಿಗಳ ಬಗ್ಗೆಯೂ ವಿಮರ್ಶಿಸಿದ್ದಾಯಿತು. ಈಗ

ಪ್ರಾರಂಭದ ಆನುಮಾನಿಕಾಧಿಕರಣದ ಸಾರ್ಥಕ್ಯವನ್ನು ಉಪಪಾದಿಸಬೇಕಾಗಿದೆ. ಅದಕ್ಕೋಸ್ಕರ ಮೊದಲು ಆಕ್ಷೇಪಿಸುತ್ತಿದ್ದಾರೆ.

**प्रकाशः – अवरत्वेति ।।** परावधित्वार्थकपञ्चम्याक्षिप्तावरत्वदोषवाचीत्यर्थः । एतेन यद् भाष्यादौ समन्वयसूत्रोक्तसर्वशब्दसमन्वयाक्षेपः पूर्वपक्षे तत्समाधिश्च सिद्धान्ते फलमित्युक्तं तदप्याक्षिप्तं भवति । सर्वसमन्वयस्य स्वरूपेणाफलत्वात् तत्फलस्य गुणपूर्तेश्च दोषवाचिव्यतिरिक्तसर्वसमन्वयेऽपि सम्भवेन समन्वयसूत्रेऽपि गुणवाचिसर्वसमन्वयस्यैव प्रतिज्ञातत्वेन वाच्यत्वादिति भावः ।

''ಅವ್ಯಕ್ತಾತ್ ಪುರುಷಃ ಪರಃ'' ''ಅವ್ಯಕ್ತಕ್ಕಿಂತ ಪುರುಷನು ಶ್ರೇಷ್ಠ'' ಈ ಶ್ರುತಿಯಲ್ಲಿ ಪಂಚಮಿವಿಭಕ್ತಿಯು ಕೇಳಿಸುತ್ತಿದೆ. ''ಅವಧಿ'' ಎಂಬರ್ಥದಲ್ಲಿ ಪಂಚಮಿಯು ಬಂದಿದೆ. ಪರತ್ವಕ್ಕೆ ಅವ್ಯಕ್ತವು ಅವಧಿಯಾಗಿದೆ. 'ಯತ್ರ ಅನ್ಯಗತಪರತ್ವಾವಧಿತ್ವಂ ತತ್ರ ಅವರತ್ವಂ' ಎಂಬ ವ್ಯಾಪ್ತಿಯ ಬಲದಿಂದ ಅವರತ್ವವು ಆಕ್ಷಿಪ್ತವಾಗಿದೆ. ಅರ್ಥಾತ್ ಅವ್ಯಕ್ತವು ಅವರ ಎಂದಂತಾಗುತ್ತದೆ. ಹೀಗೆ ಆಕ್ಷೇಪದ ಬಲದಿಂದ ಲಭ್ಯವಾಗುವ 'ಅವರ' ಎಂಬ ದೋಷವಾಚಕ ಪದದಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗುತ್ತಾನೆಂದು ಹೇಳುತ್ತಿದ್ದೀರಿ. ಆದರೆ ಇದು ಸರಿಯಲ್ಲ. ಇಂತಹ ದೋಷವಾಚಕಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗದಿದ್ದರೆ ಯಾವುದೇ ಹಾನಿಯಿಲ್ಲ. ಅವನಲ್ಲಿರುವ ಗುಣಪೂರ್ಣತ್ವವೇನು ನಾಶವಾಗುವುದಿಲ್ಲ. ದೋಷಕ್ಕೆ ಅವಕಾಶವಿಲ್ಲದೇ ಅನುಕೂಲವೇ ಆಗುತ್ತದೆ.

ಇದರಂತೆ ''ಜೀವಾ ಏವತು ದುಃಖಿನಃ'' ''ಜೀವರಷ್ಟೇ ದುಃಖಿಗಳಾಗಿದ್ದಾರೆ'' ಎಂಬ ಶ್ರುತಿಯಲ್ಲಿ ''ದುಃಖೀ'' ಎಂಬ ಶಬ್ದವು ಕೇಳಿಸುತ್ತಿದೆ. ಈ 'ದುಃಖೀ' ಎಂಬ ಪದದಿಂದಲೂ ವಿಷ್ಣುವು ಪ್ರತಿಪಾದ್ಯನಾಗಲಾರ. ಈ ಪದದಿಂದ ಸಾಕ್ಷಾತ್ತಾಗಿಯೇ ದುಃಖ ಎಂಬ ದೋಷವು ಶ್ರುತವಾಗುತ್ತಿದೆ. ಇಂತಹ ಪದಗಳ ಸಮನ್ವಯದಿಂದ ವಿಷ್ಣುವಿನ ಗುಣಪೂರ್ಣತ್ವಕ್ಕೆ ಯಾವ ಉಪಕಾರವೂ ಆಗುವುದಿಲ್ಲ.

ಆದ್ದರಿಂದಲೇ ಭಾಷ್ಯದಲ್ಲಿ ಹೇಳಿದ ಮಾತುಗಳೂ ತಪ್ಪಾಗಿವೆ. ''ತತ್ತು ಸಮನ್ವಯಾತ್ ಇತಿ ಸರ್ವಶಬ್ದಾನಾಂ ಪರಮೇಶ್ವರೇ ಸಮನ್ವಯಃ ಉಕ್ತಃ ತನ್ನ ಯುಜ್ಯತೇ'' ಸಮನ್ವಯ ಸೂತ್ರದಲ್ಲಿ ಸರ್ವಶಬ್ದ ಸಮನ್ವಯ ಮಾಡಬೇಕೆಂದು ಹೇಳಿದ್ದು ತಪ್ಪು ಎಂಬ ಆಕ್ಷೇಪವನ್ನೇ ಪೂರ್ವಪಕ್ಷದ ಫಲವನ್ನಾಗಿ ಹೇಳಿದ್ದಾರೆ. ಇದರ ಸಮಾಧಾನವನ್ನೇ ಸಿದ್ಧಾಂತದ ಫಲವನ್ನಾಗಿ ಹೇಳಿದ್ದಾರೆ. ಇವೆರಡೂ ಅಸಮಂಜಸವಾಗಿವೆ. ಏಕೆಂದರೆ ಸರ್ವಶಬ್ದಸಮನ್ವಯದಿಂದ ಸ್ವರೂಪತಃ ಯಾವ ಪ್ರಯೋಜನವಿಲ್ಲ. ಸಕಲಗುಣಗಳನ್ನು ವಿಷ್ಣುವಿನಲ್ಲಿ ಹೇಳುವುದೇ ಪ್ರಯೋಜನ. ಆದ್ದರಿಂದ ಪ್ರಥಮಾಧ್ಯಾಯದ ಉದ್ದೇಶ ಸಕಲಗುಣಪರಿಪೂರ್ಣತ್ವದ ಪ್ರತಿಪಾದನೆಯೇ ಹೊರತು ಸಕಲಶಬ್ದಗಳ ಸಮನ್ವಯವಲ್ಲ. ಗುಣಪರಿಪೂರ್ಣತ್ವವಾದರೂ ದೋಷವಾಚಿಯಲ್ಲದ ಶಬ್ದಗಳ ಸಮನ್ವಯದಿಂದಲೂ ಸಿದ್ಧವಾಗುತ್ತದೆ. ''ತತ್ತು ಸಮನ್ವಯಾತ್'' ಎಂಬ ಸೂತ್ರದಲ್ಲಿಯೂ ಕೇವಲ ಗುಣವಾಚಕವಾದ ಸರ್ವಶಬ್ದಗಳ ಸಮನ್ವಯವನ್ನಷ್ಟೇ ಪ್ರತಿಜ್ಞೆ ಮಾಡಲಾಗಿದೆ. ಹೊರತು ದೋಷವಾಚಕ ಶಬ್ದಸಮನ್ವಯದ ಪ್ರತಿಜ್ಞೆಯನ್ನು ಮಾಡಿಯೇ ಇಲ್ಲ. ಆದ್ದರಿಂದ 'ದುಃಖೀ' 'ಅವರ' ಇತ್ಯಾದಿ ದುಷ್ಟಶಬ್ದಗಳ ಸಮನ್ವಯವನ್ನು ಮಾಡಬೇಕಾಗಿಲ್ಲ.

**प्रकाशः – एतत्समन्वयस्यापि त्रेधा गुणसिद्धिफलकत्वमाशङ्क्य निराकरोति – दुःख्यादीत्यादिना ।। प्राणेति ।। 'जीव प्राणधारणे' इति धातोरिति भावः ।। अवान्तरेति ।। तस्यापि गुणत्वादिति भावः ।। महत्परत्वाभावशङ्केति ।। अत एव ''प्रकरणात्'' इति सूत्रटीकायां ''यो बुद्धेः परतस्तु स इत्यादाविव महत्परत्वसम्भवात्'' इत्युक्तमिति भावः ।**

ಮತ್ತು ಯಾವ ಪ್ರಯೋಜನಕ್ಕಾಗಿ 'ದುಃಖೀ' ಮೊದಲಾದ ಶಬ್ದಗಳ ಸಮನ್ವಯವನ್ನು ನೀವು ಮಾಡುತ್ತೀರಿ ?

'ದುಃಖೀ' ಮೊದಲಾದ ಶಬ್ದಗಳ ಸಮನ್ವಯವೇ ಮುಖ್ಯ ಪ್ರಯೋಜನವೆಂದೋ? ಅಥವಾ 'ದುಃಖೀ' ಶಬ್ದದ ಜೊತೆಗಿರುವ ಜೀವ ಶಬ್ದದ ಸಮನ್ವಯಕ್ಕೋಸ್ಕರವೆಂದೋ? ಅಥವಾ ಅಪೂರ್ವವಾದ ಯೋಗವೃತ್ತಿಯ ಕಲ್ಪನೆಯಿಂದ 'ದುಃಖೀ' ಮೊದಲಾದ ಶಬ್ದಗಳೂ ಗುಣಗಳನ್ನು ಹೇಳುತ್ತವೆ ಎಂದೋ?

ಮೊದಲನೆಯ ಪಕ್ಷವನ್ನು ಗ್ರಂಥದಲ್ಲಿ 'ನಚ ಸಮನ್ವಯಃ ಸ್ವರೂಪೇಣ ಫಲಮ್' ಎಂಬ ವಾಕ್ಯದಿಂದ ನಿರಾಕರಿಸಿದ್ದಾರೆ. ಎರಡನೆಯ ಪಕ್ಷವನ್ನು 'ದುಃಖ್ಯಾದಿಶಬ್ದ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ. ಮೂರನೆಯ ಪಕ್ಷವನ್ನು 'ನಚ ದುಃಖ್ಯಾದಿಶಬ್ದಾನಾಂ' ಇತ್ಯಾದಿ ವಾಕ್ಯದಿಂದ ನಿರಾಕರಿಸಿದ್ದಾರೆ.

ಅಥವಾ ದುಃಖ್ಯಾದಿಶಬ್ದಗಳ ಸಮನ್ವಯದಿಂದ ಮೂರು ಪ್ರಕಾರದಲ್ಲಿ ಗುಣಸಿದ್ಧಿಯನ್ನು ಹೇಳಬೇಕು. ಆದರೆ ಆ ಮೂರು ಪ್ರಕಾರಗಳೂ ಕೂಡುವುದಿಲ್ಲವೆಂದು ''ದುಃಖ್ಯಾದಿಶಬ್ದ'' ಇತ್ಯಾದಿ ವಾಕ್ಯದಿಂದ ಆಶಂಕಿಸಿ ನಿರಾಕರಿಸುತ್ತಿದ್ದಾರೆ. ಒಟ್ಟಾರೆ ಯಾವ ನಿಟ್ಟಿನಲ್ಲಿಯೂ ದುಃಖ್ಯಾದಿಶಬ್ದಗಳ ಸಮನ್ವಯವು ಅನಾವಶ್ಯಕವೆಂದು ಅಭಿಪ್ರಾಯ.

ಯಾವುದಾದರೂ ಒಂದು ಪ್ರಕಾರದಲ್ಲಿ ದುಃಖ್ಯಾದಿಶಬ್ದಗಳು ಗುಣವಾಚಕಗಳೆಂದು ನಿಮಗೆ ಹೇಳಲಾಗದು. ಹಾಗಾದಲ್ಲಿ ಅಪಸಿದ್ಧಾಂತ ಬರುತ್ತದೆ. ಏಕೆಂದರೆ ''ದುಃಖ್ಯಾದಿಶಬ್ದಗಳೆಲ್ಲವೂ ದೋಷವಾಚಿಗಳಾಗಿವೆ. ಅಂತಹ ದೋಷಗಳು ವಿಷ್ಣುವಿನ ಅಧೀನಗಳಾದ್ದರಿಂದ ವಿಷ್ಣುವು ದುಃಖ್ಯಾದಿ-ಶಬ್ದಪ್ರತಿಪಾದ್ಯನಾಗಿದ್ದಾನೆ'' ಎಂದು ಸಿದ್ಧಾಂತದಲ್ಲಿ ನೀವೇ ಹೇಳಿದ್ದೀರಿ.

ಪ್ರಶ್ನೆ - ದೋಷಗಳೆಲ್ಲವೂ ವಿಷ್ಣುವಿನ ಅಧೀನವೇ ಆಗಿವೆ. ಈ ವಿಷಯವು ಸಿದ್ಧವಾಗಬೇಕಾದರೆ ವಿಷ್ಣುವಿನಲ್ಲಿ ಸರ್ವನಿಯಂತೃತ್ವ ಸಿದ್ಧಿಯಾಗಬೇಕು. ಅದಕ್ಕೋಸ್ಕರ ದುಷ್ಟಶಬ್ದಗಳ ಸಮನ್ವಯವು ಆವಶ್ಯಕವೆಂದು ಹೇಳುತ್ತೇವೆ.

ಉತ್ತರ - ಇದೂ ತಪ್ಪು. ಸರ್ವನಿಯಾಮಕತ್ವಗುಣವು ವಿಷ್ಣುವಿಗೆ ಅಂತರ್ಯಾಮ್ಯಧಿಕರಣದಿಂದಲೇ ಸಿದ್ಧವಾಗಿದೆ. ಹೀಗಿರುವಾಗ ಈ ಅಧಿಕರಣದಲ್ಲಿ ದುಃಖ್ಯಾದಿಶಬ್ದಗಳನ್ನು ಸಮನ್ವಯ ಮಾಡುವುದರಲ್ಲಿ ಅರ್ಥವೇ ಇಲ್ಲ.

ಆದ್ದರಿಂದಲೇ 'ಪ್ರಕರಣಾತ್' ಎಂಬ ಸೂತ್ರದ ಟೀಕೆಯಲ್ಲಿ 'ಯೋ ಬುದ್ಧೇಃ ಪರತಸ್ತು ಸ ಇತ್ಯಾದಾವಿವ ಮಹತ್ಪರತ್ವಸಂಭವಾತ್' ಎಂದು ಹೇಳಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – ननु तस्य सर्वनियन्तृत्वे तदधीनत्वं सिध्यतीति तदर्थमेतत् समन्वयोऽस्त्वित्यत आह – **सर्वेति** ।। प्राण ऋचः प्राणप्रतिपादिन्य इत्यर्थः । अत एवोत्तरनये ''कल्पन'' इति सूत्रटीकायां ''सर्वशब्दवाच्यत्वमीश्वरस्य चोपासनार्थमेव ह्युपदिश्यते । प्राण ऋच इत्येव विद्यादित्यादेः'' इत्युक्तिरिति भावः ।।

ದೋಷವಾಚಕಶಬ್ದ ಪ್ರತಿಪಾದ್ಯನೆಂದು ಮುಮುಕ್ಷುವು ಅವಶ್ಯ ತಿಳಿಯಬೇಕು

ಇಲ್ಲಿಯ ತನಕ ಮಾಡಿದ ಆಕ್ಷೇಪವು ಅಸಮೀಚೀನವಾಗಿದೆ. ಏಕೆಂದರೆ ಗುಣಪೂರ್ಣತ್ವದ ಸಮರ್ಥನೆಯಷ್ಟೇ ಪ್ರಥಮಾಧ್ಯಾಯದ ಉದ್ದೇಶವಲ್ಲ. ಸರ್ವಶಬ್ದವಾಚ್ಯತ್ವವೂ ಸಹ ಪ್ರಥಮಾಧ್ಯಾಯದ ಉದ್ದೇಶವಾಗಿದೆ. ಮುಮುಕ್ಷು ಆದವನು ಸಕಲಗುಣಪರಿಪೂರ್ಣತ್ವವನ್ನು ಹೇಗೆ ಅವಶ್ಯವಾಗಿ ತಿಳಿಯಬೇಕೋ ಅದರಂತೆ ಸಕಲಶಬ್ದವಾಚ್ಯತ್ವವನ್ನೂ ಅವಶ್ಯವಾಗಿ ತಿಳಿಯಬೇಕು. ಇಲ್ಲವಾದರೆ ಮೋಕ್ಷ ಆಗಲಾರದು. ಆದ್ದರಿಂದ ಉಪಾಸನೆಗೋಸ್ಕರ ಸಕಲಶಬ್ದವಾಚ್ಯತ್ವವನ್ನು ತಿಳಿಯಬೇಕು. ಇದನ್ನೇ ಟೀಕಾರಾಯರು ಮುಂದಿನ ಅಧಿಕರಣದ 'ಕಲ್ಪನೋಪದೇಶಾಚ್ಚ' ಇತ್ಯಾದಿ ಸೂತ್ರದ ಟೀಕೆಯಲ್ಲಿ ಹೀಗೆ ಹೇಳಿದ್ದಾರೆ - ''ಸರ್ವಶಬ್ದವಾಚ್ಯತ್ವಮೀಶ್ವರಸ್ಯ ಚೋಪಾಸನಾರ್ಥಮೇವ ಹ್ಯುಪದಿಶ್ಯತೇ । ಪ್ರಾಣ ಋಚ ಇತ್ಯೇವ ವಿದ್ಯಾದಿತ್ಯಾದೇಃ'' ಎಂದು. ಈ ವಾಕ್ಯದಿಂದಲೂ ಉಪಾಸನೆಗಾಗಿ ಸರ್ವಶಬ್ದವಾಚ್ಯತ್ವವನ್ನು ತಿಳಿಯಬೇಕೆಂದು ಗೊತ್ತಾಗುತ್ತದೆ.

**प्रकाशः** – **नामायत्तेति** ।। ''तत् वियूय कवयोऽन्वविन्दन् नामायत्ते'' इत्यैतरेयश्रुतौ। नामायत्तानि नामप्रकाश्यतया नामाधीनानि तत्तच्छब्दप्रवृत्तिनिमित्तानि। अन्वविन्दन्नित्युक्तवेदने शृते परिपक्वे सति । समतृप्यन् सम्यक् तृप्ता मुक्ता अभूवन्नित्यर्थः ।। **मूलेति** ।। अन्यत्र निरूढेन्द्रादिशब्दान्यविषयत्वेनापि सङ्कोच-सम्भवात्कल्पकाभावेनेन्द्रादिशब्दानां विष्णौ वृत्तिर्न स्यात् ।

ಸರ್ವಶಬ್ದವಾಚ್ಯತ್ವವನ್ನು ವಿಷ್ಣುವಿನಲ್ಲಿ ತಿಳಿಯುವುದರಿಂದಲೇ ಮೋಕ್ಷವಾಗುತ್ತದೆಂಬುದನ್ನು ಐತರೇಯ ಶ್ರುತಿಯು ಸ್ಪಷ್ಟವಾಗಿ ಹೀಗೆ ಹೇಳುತ್ತಿದೆ -

ತದ್ ವಿಯೂಯ ಕವಯೋ ಅನ್ವವಿಂದನ್ ।
ನಾಮಾಯತ್ತಾ ಸಮತೃಪ್ಯಂಛೃತೇऽಧಿ ॥
ಯಸ್ಮಿನ್ ನಾಮಾ ಸಮತೃಪ್ಯಂಛೃತೇऽಧಿ ॥
ತತ್ರ ದೇವಾಃ ಸರ್ವಯುಜೋ ಭವಂತಿ ॥
ತೇನ ಪಾಪ್ಮಾನಮಪಹತ್ಯ ಬ್ರಹ್ಮಣಾ ।
ಸ್ವರ್ಗಂ ಲೋಕಮಪ್ಯೇತಿ ವಿದ್ವಾನ್ ॥

ಆನುಮಾನಿಕಾಧಿಕರಣ (೧-೪-೧)

ದೇವತೆಗಳು ನಾಮಗಳನ್ನು ಚೆನ್ನಾಗಿ ವಿಚಾರ ಮಾಡಿ ಅವುಗಳಿಂದ ಭಗವಂತನ ಮಹಿಮೆಗಳನ್ನು ತಿಳಿದುಕೊಂಡರು. ಮತ್ತು ಜ್ಞಾನವು ಪಕ್ವವಾದಾಗ ಮುಕ್ತರಾಗಿ ಅತ್ಯಂತ ತೃಪ್ತರಾದರು. ಕೃತಕೃತ್ಯರಾದರು. ನಾಮಗಳು ಕೇವಲ ಶಬ್ದಜಾಲಗಳಾಗಿವೆಯೆಂದು ಬಿಟ್ಟುಬಿಡಲಿಲ್ಲ.

ಯಾವ ವಿಷ್ಣುವಿನ ವಿಷಯದಲ್ಲಿ ಎಲ್ಲ ಶಬ್ದಗಳನ್ನು ವಾಚಕಗಳೆಂದು ತಿಳಿದು ಆ ಜ್ಞಾನವು ಪಕ್ವವಾದಾಗ ಮುಕ್ತರಾಗಿ ಅತ್ಯಂತ ತೃಪ್ತರಾದರೋ, ಕೃತಕೃತ್ಯರಾದರೋ, ಅಂತಹ ವಿಷ್ಣುವಿನಲ್ಲಿಯೇ ದೇವತೆಗಳು ಮನಸ್ಸು, ವಾಕ್, ಕಾಯಗಳಿಂದ ಸರ್ವಾತ್ಮನಾ ಆಸಕ್ತರಾಗುವರು. ಹೀಗೆ ತಿಳಿದವನು ಭಗವಂತನ ಅನುಗ್ರಹದಿಂದ ಪಾಪವನ್ನೂ ಅಪ್ರಾರಬ್ಧ ಅನಿಷ್ಟಪುಣ್ಯವನ್ನೂ ಅಪರೋಕ್ಷಜ್ಞಾನದ ಬಲದಿಂದ ನಾಶಮಾಡಿಕೊಂಡು ಪ್ರಾರಬ್ಧವನ್ನೂ ಭೋಗ ಮತ್ತು ಉಪಮರ್ದಗಳಿಂದ ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ.

ಉಪನಿಷತ್ತಿನ ಈ ಮಾತಿನಂತೆ ಸರ್ವಶಬ್ದವಾಚ್ಯತ್ವವನ್ನು ಅವಶ್ಯ ತಿಳಿಯಬೇಕು. ''ನಾಮಾನಿ ಸರ್ವಾಣಿ ಯಮಾವಿಶಂತಿ'' ಎಂಬಲ್ಲಿರುವ ಸರ್ವಶಬ್ದಕ್ಕೆ ಸಂಕೋಚ ಮಾಡಬಾರದು. ಇಷ್ಟಾದರೂ 'ಸರ್ವ' ಶಬ್ದಕ್ಕೆ 'ದುಃಖ್ಯಾದಿಶಬ್ದಾತಿರಿಕ್ತ' ಎಂದು ಸಂಕೋಚ ಮಾಡುವುದಾದರೆ ಮತ್ತಷ್ಟು ಸಂಕೋಚ ಮಾಡಬಹುದು. ಇಂದ್ರಾದಿಶಬ್ದಗಳು ದೇವೇಂದ್ರಾದಿಗಳಲ್ಲಿ ರೂಢವಾಗಿವೆ. ಆದ್ದರಿಂದ ಇಂದ್ರಾದಿಶಬ್ದಗಳಿಂದ ದೇವೇಂದ್ರಾದಿಗಳೇ ವಾಚ್ಯರಾಗಿದ್ದಾರೆ. ಹೊರತು ವಿಷ್ಣುವು ವಾಚ್ಯನಾಗಿಲ್ಲ. ''ನಾಮಾನಿ ಸರ್ವಾಣಿ'' ಎಂಬಲ್ಲಿರುವ ಸರ್ವಶಬ್ದಕ್ಕೆ ಇಂದ್ರಾದಿಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳೆಂದು ಸಂಕೋಚ ಮಾಡಬಹುದು.

**प्रकाशः** – नच तत्र सूत्रप्रदर्शितविषयवाक्यस्थन्यायैरेवेन्द्रादिशब्दसमन्वयस्सेत्स्यतीति वाच्यम् । ''नामानि'' इत्यादिश्रुत्या सर्वशब्दसमन्वये श्रौते सति तत्र रूढ्यादिना श्रौतसमन्वयानुपपत्तिशङ्कायां तच्छङ्कानिवर्तनेन श्रौतसमन्वयस्थिरीकरणार्थत्वात् सौत्रन्यायानाम् । तथैवानन्दमयनयेऽभिधानात् । ननु च ''यो देवानां नामधा'' इत्येतन्मूलस्तत्समन्वयो भविष्यतीति चेत् तत्रापि सङ्कोचसम्भवात् । आकाशादिशब्दसमन्वयस्य निर्मूलत्वापरिहाराच्च । तात्पर्यमात्रनिर्णायकत्वाल्लिङ्गादीनाम् ।

ಪ್ರಶ್ನೆ - ಸೂತ್ರದಲ್ಲಿ ವಿಷಯವಾಕ್ಯವನ್ನು ಪ್ರದರ್ಶಿಸುತ್ತಾರೆ - ಆ ವಿಷಯವಾಕ್ಯದಲ್ಲಿರುವ ನ್ಯಾಯದಿಂದ ಇಂದ್ರಾದಿಶಬ್ದಗಳ ಸಮನ್ವಯವು ವಿಷ್ಣುವಿನಲ್ಲಿ ಉಪಪನ್ನವಾಗುತ್ತದೆ. ಆದರೆ ದುಃಖ್ಯಾದಿಶಬ್ದಗಳಲ್ಲಿ ಹೀಗೆ ಹೇಳಲಾಗದು.

ಉತ್ತರ - ಇದು ತಪ್ಪು. ''ನಾಮಾನಿ ಸರ್ವಾಣಿ'' ಇತ್ಯಾದಿ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ಸಂಕೋಚ ಮಾಡದಿದ್ದಾಗ ಸರ್ವಶಬ್ದಸಮನ್ವಯವು ಶ್ರುತಿಸಿದ್ಧವಾಗುತ್ತದೆ. ಆವಾಗ ಇಂದ್ರಾದಿಶಬ್ದಗಳು ಅನ್ಯತ್ರರೂಢವಾದ್ದರಿಂದ ಸರ್ವಶಬ್ದಸಮನ್ವಯ ಹೇಗೆ ಸರಿ? ಎಂಬ ಶಂಕೆ ಬರುತ್ತದೆ. ಈ ಶಂಕೆಯನ್ನು ಪರಿಹರಿಸಿ ವಿಷ್ಣುವಿನಲ್ಲೇ ಸರ್ವಶಬ್ದ ಸಮನ್ವಯವನ್ನು ಸಮರ್ಥಿಸಲು ಸೂತ್ರನ್ಯಾಯವು ಹೊರಡುತ್ತದೆ. ನೀವು ಮೊದಲೇ ಸರ್ವಶಬ್ದಕ್ಕೆ

ಸಂಕೋಚ ಮಾಡಿದರೆ ಅನುಪಪತ್ತಿಯ ಶಂಕೆ ಬರಲು ಸಾಧ್ಯವಿಲ್ಲ. ಆದ್ದರಿಂದ ಸೂತ್ರನ್ಯಾಯವು ಹೊರಡುವ ಮೊದಲೇ ಸರ್ವಶಬ್ದಕ್ಕೆ ಮಾಡಿದ ಸಂಕೋಚವು ಅಸಾಧುವಾಗಿದೆ.

ಪ್ರಶ್ನೆ - ''ನಾಮಾನಿ ಸರ್ವಾಣಿ'' ಎಂಬುದು ಮೂಲಪ್ರಮಾಣವಾಗುವುದು ಬೇಡ. ''ಯೋ ದೇವಾನಾಂ ನಾಮಧಾ'' ಎಂಬ ಶ್ರುತಿಯು ಸಕಲ ನಾಮಗಳನ್ನು ವಿಷ್ಣುವೇ ಧರಿಸಿದ್ದಾನೆಂದು ಹೇಳುತ್ತಿದೆ. ಈ ಶ್ರುತಿಯು ಇಂದ್ರಾದಿಶಬ್ದಗಳು ವಿಷ್ಣುವಿನಲ್ಲಿ ಸಮನ್ವಯವಾಗುತ್ತವೆನ್ನಲು ಮೂಲಪ್ರಮಾಣವಾಗುತ್ತದೆ.

ಉತ್ತರ - ''ನಾಮಾನಿ ಸರ್ವಾಣಿ'' ಎಂಬಲ್ಲಿ ಹೇಗೆ ಸಂಕೋಚ ಮಾಡಿದೆವೋ ಅದರಂತೆ ಇಲ್ಲಿಯೂ ಸಂಕೋಚ ಮಾಡಲು ಬರುತ್ತದೆ. ಆದ್ದರಿಂದ ಇಂದ್ರಾದಿ ನಾಮಗಳನ್ನು ಬಿಟ್ಟು ಉಳಿದ ನಾಮಗಳಷ್ಟೇ ವಿಷ್ಣುವಿನ ನಾಮಗಳು ಎಂದು 'ಯೋ ದೇವಾನಾಂ' ಎಂಬ ಶ್ರುತಿಯ ಅರ್ಥವನ್ನು ಸಂಕೋಚ ಮಾಡಬಹುದು.

ಮತ್ತು ಇಂದ್ರಾದಿಶಬ್ದಗಳ ಸಮನ್ವಯಕ್ಕೆ ಹೇಗೆ ಮೂಲಪ್ರಮಾಣವಿಲ್ಲವೋ ಅದರಂತೆ ಆಕಾಶಾದಿಶಬ್ದಗಳ ಸಮನ್ವಯಕ್ಕೂ ಮೂಲಪ್ರಮಾಣವಿಲ್ಲ. ಈ ಶಬ್ದಗಳಿಂದಲೂ ವಿಷ್ಣುವು ಪ್ರತಿಪಾದ್ಯನಾಗಲಾರ ಎಂಬ ಆಪತ್ತಿಯು ನಿಮಗೆ ಅಪರಿಹಾರ್ಯವಾಗಿದೆ.

ಇನ್ನು ಷಡ್ವಿಧತಾತ್ಪರ್ಯಲಿಂಗಗಳಿಂದ ಆಕಾಶಶಬ್ದದ ಪ್ರತಿಪಾದ್ಯತ್ವನ್ನು ನಿರ್ಣಯಿಸುತ್ತೇವೆ ಎನ್ನಬೇಕು. ಆದರೆ ಷಡ್ವಿಧತಾತ್ಪರ್ಯಲಿಂಗಗಳಿಂದ ಕೇವಲ ಶ್ರುತಿಯ ತಾತ್ಪರ್ಯವನ್ನಷ್ಟೇ ನಿರ್ಣಯಿಸಬೇಕು ಹೊರತು ಶಬ್ದಪ್ರತಿಪಾದ್ಯತ್ವವನ್ನು ನಿರ್ಣಯಿಸಬಾರದು.

**ಪ್ರಕಾಶಃ** – श्रुतिमूलत्वे तु श्रुतौ ''आविशन्ति'' इत्याङ्प्रयोगेण मुख्यत्वोक्तेः ''समन्वयात्'' इत्यत्र सम्पदोक्तमुख्यवृत्तिर्लभ्यत इत्याकूतं । एतेन समन्वयसूत्र-प्रतिज्ञातस्सर्वसमन्वयो न सङ्कोचनीय इति भाष्याद्युक्तं तदाक्षेपादिरूपं फलं युक्तमित्युक्तं भवति । नन्वित्यादिना ग्रन्थेनैव ''नच तदवाच्यतयाऽन्यथोपपत्तिः । नामानि सर्वाणि यमाविशन्तीत्यादिश्रुतिविरोधात् । नच सङ्कोचः । सर्वाणीत्यस्य निरवकाशत्वाद्बाधकाभावाच'' इति तदधीनत्वसूत्रटीकास्थवाक्यं विवृतं भवति ।

ಹೀಗೆ ದುಃಖ್ಯಾದಿಶಬ್ದಗಳನ್ನು ಸಮನ್ವಯ ಮಾಡಬೇಕಾಗಿಲ್ಲ. ಇಂದ್ರಾದಿಶಬ್ದಗಳನ್ನು ಸಮನ್ವಯ ಮಾಡಬೇಕೆಂಬ ವಿಷಯದಲ್ಲಿ ಶ್ರುತಿಯು ಮೂಲಪ್ರಮಾಣವಾಗಲಾರದು. ಒಂದು ವೇಳೆ ಶ್ರುತಿಯನ್ನು ಮೂಲಪ್ರಮಾಣವೆಂದು ಹೇಳಿದರೆ ''ನಾಮಾನಿ ಸರ್ವಾಣಿ ಯಮಾವಿಶಂತಿ'' ಎಂಬ ಶ್ರುತಿಯಲ್ಲಿ 'ಆಙ್' ಉಪಸರ್ಗವಿದೆ. ಈ ಉಪಸರ್ಗದಿಂದ ಶಬ್ದಗಳು ವಿಷ್ಣುವಿನಲ್ಲೇ ಮುಖ್ಯವಾಗಿ ಇವೆಯೆಂದು ತಿಳಿಯುತ್ತದೆ. ಆದ್ದರಿಂದಲೇ ''ಸಮನ್ವಯಾತ್'' ಎಂಬ ಸೂತ್ರದಲ್ಲಿ ''ಸಮ್'' ಎಂಬ ಉಪಪದದಿಂದ ಹೇಳಲ್ಪಟ್ಟ ಮುಖ್ಯವೃತ್ತಿಯು ಉಪಪನ್ನವಾಗುತ್ತದೆ ಎಂಬ ಅಭಿಪ್ರಾಯವನ್ನು ತಿಳಿಸಿದಂತಾಯಿತು. ಹೀಗೆ ಹೇಳಿದ್ದರಿಂದ ಮತ್ತೊಂದು ಶಂಕೆಯೂ ಪರಿಹಾರವಾಯಿತು. ಸಮನ್ವಯಸೂತ್ರದಲ್ಲಿ ಮಾಡಿದ ಸರ್ವಸಮನ್ವಯದ ಪ್ರತಿಜ್ಞೆಯು ತಪ್ಪು ಎಂಬ ಆಕ್ಷೇಪವನ್ನು ಪೂರ್ವಪಕ್ಷದ ಫಲವನ್ನಾಗಿ ಭಾಷ್ಯದಲ್ಲಿ ಹೇಳಿದ್ದು ತಪ್ಪೆಂದು

ಶಂಕಿಸಲಾಗಿತ್ತು. ಆದರೆ ಈಗ ನೀವೇ ಶ್ರುತಿಮೂಲತ್ವವನ್ನು ಒಪ್ಪಿಕೊಂಡರೆ ಸಮನ್ವಯಸೂತ್ರದಲ್ಲಿ ಮಾಡಿದ ಸರ್ವಸಮನ್ವಯದ ಪ್ರತಿಜ್ಞೆಯು ಸಾಧುವೇ ಆಗಿದೆ. ಪುನಃ ಅದನ್ನು ಸಂಕೋಚಗೊಳಿಸಬೇಕಾಗಿಲ್ಲವೆಂದು ಹೇಳಿದಂತಾಯಿತು.

ಗ್ರಂಥದಲ್ಲಿರುವ "ನನು ಅವ್ಯಕ್ತಾತ್" ಇತ್ಯಾದಿ ವಾಕ್ಯದಿಂದ ಮಾಡಿದ ಆಕ್ಷೇಪ ಮತ್ತು ಪರಿಹಾರಗಳಿಂದ ಟೀಕೆಯ ಇಷ್ಟು ಮಾತುಗಳನ್ನು ವ್ಯಾಖ್ಯಾನಿಸಿದಂತಾಯಿತು -

"ನಚ ತದವಾಚ್ಯತಯಾऽನ್ಯಥೋಪಪತ್ತಿಃ । ನಾಮಾನಿ ಸರ್ವಾಣಿ ಯಮಾವಿಂಶಂತೀತ್ಯಾದಿ-ಶ್ರುತಿವಿರೋಧಾತ್ । ನಚ ಸಂಕೋಚಃ । ಸರ್ವಾಣೀತ್ಯಸ್ಯ ನಿರವಕಾಶತ್ವಾದ್ಬಾಧಕಾಭಾವಾಚ್ಚ" "ದೋಷವಾಚಕಶಬ್ದಗಳಿಂದ ಅವಾಚ್ಯನಾದ್ದರಿಂದ ಅನ್ಯಥೋಪಪನ್ನವೆನ್ನಬಾರದು. 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. ಸರ್ವಶಬ್ದಕ್ಕೆ ಸಂಕೋಚವನ್ನು ಮಾಡಬಾರದು. "ಸರ್ವಾಣಿ' ಎಂಬ ಶ್ರುತಿಯು ನಿರವಕಾಶವಾಗಿದೆ.. ಅಸಂಕುಚಿತಸರ್ವ ಎಂಬರ್ಥದಲ್ಲಿ ಯಾವ ಬಾಧಕವೂ ಇರುವುದಿಲ್ಲ" ಎಂದು 'ತದಧೀನತ್ವಾದರ್ಥವತ್' ಎಂಬ ಸೂತ್ರಟೀಕೆಯಲ್ಲಿದೆ. ಇದನ್ನು ವಿವರಿಸಿದಂತಾಯಿತು.

**प्रकाशः – नन्वथापि "यो देवानाम्" इत्यादिवद्दोषवाचिशब्दसमन्वयोक्तौ न विशिष्यमानमस्तीत्यतः प्रयोजनद्वयं स्वयमाह – किञ्चेत्यादिना ।।**

ಪ್ರಶ್ನೆ - "ಯೋ ದೇವಾನಾಂ ನಾಮಧಾ" ಇತ್ಯಾದಿ ಶ್ರುತಿಯು ದೇವತೆಗಳ ಸಕಲ ಹೆಸರುಗಳು ವಿಷ್ಣುವಿನದ್ದೇ ಆಗಿವೆಯೆಂದು ಹೇಳುತ್ತಿದೆ. ಆದ್ದರಿಂದ ಮಂಗಳಶಬ್ದಗಳಿಂದೆಲ್ಲ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

ಪ್ರಕೃತ ನೀವು ದೋಷವಾಚಕ ಶಬ್ದಗಳಿಂದಲೂ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂದು ಹೇಳುತ್ತಿದ್ದೀರಿ. ಆದರೆ ದೋಷವಾಚಕ ಶಬ್ದಗಳ ಸಮನ್ವಯ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ.

ಉತ್ತರ - ಪ್ರಮಾಣವಿದೆ. "ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ" ಇತ್ಯಾದಿ ಶ್ರುತಿಯು ದೋಷಶಬ್ದಗಳ ಸಮನ್ವಯವನ್ನು ಪ್ರತಿಪಾದಿಸುತ್ತಿದೆ. ಇಂತಹ ದೋಷಶಬ್ದಗಳ ಸಮನ್ವಯದಿಂದ ಎರಡು ಪ್ರಯೋಜನಗಳಿವೆಯೆಂದು ಗ್ರಂಥಕಾರರು "ಕಿಂಚ ಈಶ್ವರಸ್ಯ" ಇತ್ಯಾದಿ ವಾಕ್ಯದಿಂದ ಪ್ರತಿಪಾದಿಸುತ್ತಿದ್ದಾರೆ.

**प्रकाशः – इत्यादिश्रुतिस्थेत्यादि ।।** एतच्च प्रयोजनं "स्वातन्त्र्यार्थमभिप्रेत्य दोषशब्दाश्च विष्णवि" इत्यनुव्याख्याने, "बन्धादिनियामके तस्मिन्नेव बद्धादिशब्दो मङ्गलात्मकः कार्यकारणबद्धौ ताविष्येते विश्वतैजसावित्यादौ श्रुतः" इति सन्न्यायरत्नावल्यां, 'जीवा एव तु दुःखिन इत्यादौ प्रयुज्यते' इति सुधायां "अवरयतीत्यादिव्युत्पत्त्युपपत्तेश्च । तथा च श्रुतिः – स बद्धस्सदुःखि" इत्यादिटीकायां च सूचितं । तदुक्तिः बन्धादिनियामकत्वनिर्वचनेन बद्धपदप्रयोगोक्तिः। वाचनिकनिर्वचनस्य चानारभ्याधीतस्य निरवकाशतया प्रबलस्य वैदिकतच्छब्दमात्रे रूढित्याजकत्वस्य "कम्पनात्" इत्यत्र व्यवस्थापितत्वादिति भावः ।

ಎರಡು ಪ್ರಯೋಜನಗಳು ಹೀಗಿವೆ -

೧. ಜೀವರಲ್ಲಿರುವ ದುಃಖ, ಬಂಧ ಮೊದಲಾದ ದೋಷಗಳಿಗೆಲ್ಲ ವಿಷ್ಣುವೇ ನಿಯಾಮಕನು.

೨. ಅವ್ಯಕ್ತಾದಿಗಳ ಜ್ಞಾನದಿಂದ ಮೋಕ್ಷವಾಗುತ್ತದೆಂದು ಶ್ರುತಿಯು ಹೇಳುತ್ತಿದೆ. ಜಡದ ಜ್ಞಾನದಿಂದ ಮೋಕ್ಷವಾಗದ ಕಾರಣ ಅವ್ಯಕ್ತಾದಿಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡುವುದು ಸಾರ್ಥಕವಾಗಿದೆ.

ಇವುಗಳಲ್ಲಿ ಮೊದಲನೆಯ ಪ್ರಯೋಜನವನ್ನು ಶ್ರೀಮದಾಚಾರ್ಯರು ಹಾಗೂ ಟೀಕಾರಾಯರೂ ತಮ್ಮ ಗ್ರಂಥಗಳಲ್ಲಿ ಹೀಗೆ ಹೇಳಿದ್ದಾರೆ -

''ಸ್ವಾತಂತ್ರ್ಯಾರ್ಥಮಭಿಪ್ರೇತ್ಯ, ದೋಷಶಬ್ದಾಶ್ಚ ವಿಷ್ಣುವಿ'' 'ಸ್ವಾತಂತ್ರ್ಯ' ಎಂಬ ಮಹಿಮೆಯ ದೃಷ್ಟಿಯಿಂದ ದೋಷಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಬೇಕು. (ಅನುವ್ಯಾಖ್ಯಾನ)

''ಬಂಧಾದಿನಿಯಾಮಕೇ ತಸ್ಮಿನ್ನೇವ ಬದ್ಧಾದಿಶಬ್ದೋ
ಮಂಗಲಾತ್ಮಕಃ ಕಾರ್ಯಕಾರಣಬದ್ಧೌ ತಾವಿಷ್ಯೇತೇ
ವಿಶ್ವತೈಜಸಾವಿತ್ಯಾದೌ ಶ್ರುತಃ ॥

ವಿಷ್ಣುವಿನಲ್ಲಿ ಬದ್ಧಾದಿಶಬ್ದಗಳು ಮಂಗಲಾತ್ಮಕಗಳೇ ಆಗಿವೆಯೆಂದು. ಶ್ರುತಿಯಲ್ಲಿ ಹೇಳಿದೆ - (ಸನ್ನ್ಯಾಯರತ್ನಾವಲೀ)

''ಜೀವಾ ಏವ ತು ದುಃಖಿನ ಇತ್ಯಾದೌ ಪ್ರಯುಜ್ಯಂತೇ''

'ಜೀವರೇ ದುಃಖಿಗಳು' ಎಂದು ಮುಂತಾದ ಕಡೆಯಲ್ಲಿ ಪ್ರಯುಕ್ತವಾಗುತ್ತವೆ. (ನ್ಯಾಯಸುಧಾ)

''ಅವರಯತೀತ್ಯಾದಿ ವ್ಯುತ್ಪತ್ತ್ಯುಪಪತ್ತೇಶ್ಚ ತಥಾಚ ಶ್ರುತಿಃ ಸ ಬದ್ಧಃ ಸ ದುಃಖೀ''

ಮತ್ತೊಬ್ಬರನ್ನು ನೀಚರನ್ನಾಗಿ ಮಾಡುತ್ತಾನೆ ಇತ್ಯಾದಿ ವ್ಯುತ್ಪತ್ತಿಯು ಕೂಡುತ್ತದೆ. ಆದ್ದರಿಂದಲೇ ಶ್ರುತಿಯು ವಿಷ್ಣುವನ್ನು ಬದ್ಧ 'ದುಃಖೀ' ಇತ್ಯಾದಿಯಾಗಿ ಕರೆಯುತ್ತದೆ. (ತತ್ವಪ್ರಕಾಶಿಕಾ)

ನಿರ್ವಚನವು ಸ್ವಕಪೋಲಕಲ್ಪಿತವಲ್ಲ ಹೊರತು ವಾಚನಿಕ. ಸ್ವತಃ ಶ್ರುತಿಯೇ ಮಾಡುವ ನಿರ್ವಚನವು ಅತ್ಯಂತ ಪ್ರಬಲ. ಮತ್ತು ಅನಾರಭ್ಯಾಧೀತವಾಗಿದೆ. ಎಂದರೆ ಒಂದು ವಾಕ್ಯಕ್ಕೆ ಸಂಬಂಧಪಟ್ಟಂತೆ ಹೇಳದ ಕಾರಣ ಬಾಧಕವಿಲ್ಲದಿದ್ದಲ್ಲಿ ಎಲ್ಲೆಡೆಯೂ ವಿವಕ್ಷಿಸಬಹುದು. ಹೀಗೆ ನಿರವಕಾಶವಾಗಿ ಪ್ರಬಲವಾದ ನಿರ್ವಚನವು ವೈದಿಕಶಬ್ದಗಳೆಲ್ಲಲ್ಲಾ ಅನ್ಯತ್ರರೂಢಿಯನ್ನು ಅಪಲಾಪ ಮಾಡುತ್ತದೆ. ಹೀಕೆ ಕಂಪನಾಧಿಕರಣದಲ್ಲಿ ವ್ಯವಸ್ಥೆ ಮಾಡಲಾಗಿದೆ.

**प्रकाशः** – दुःख्यादिशब्दसाधारण्येन प्रयोजनमभिधायाव्यक्तादिशब्दसमन्वये विशिष्य प्रयोजनमाह – **किञ्च महत इति** ।। **इत्यत्रेति** ।। इदमेवाव्यक्तादित्यत्र वाच्यमिति भावः ।। **अब्रह्मज्ञानादपीति** ।। तथाच ''तमेवं विद्वानमृत इह भवति'' इत्युक्तिः ''नेतरोऽनुपपत्तेः'' इत्युक्तयुक्तिश्चायुक्ता स्यादिति भावः ।

ಆನುಮಾನಿಕಾಧಿಕರಣ (೧-೪-೧)

'ದುಃಖೀ' ಮೊದಲಾದ ಶಬ್ದಗಳ ಸಮನ್ವಯದ ಪ್ರಯೋಜನವನ್ನು ಹೇಳಿದ್ದಾಯಿತು. ಈಗ ಅವ್ಯಕ್ತಾದಿಶಬ್ದಸಮನ್ವಯದಿಂದ ಆಗುವ ವಿಶೇಷ ಪ್ರಯೋಜನವನ್ನು "ಕಿಂಚ ಮಹತಃ" ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

ಜಡವಾದ ಅವ್ಯಕ್ತದ ಜ್ಞಾನದಿಂದ ಮೋಕ್ಷವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ "ತಮೇವಂ ವಿದ್ವಾನಮೃತ ಇಹ ಭವತಿ" ಪರಮಾತ್ಮನ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳುವ ಶ್ರುತಿಯ ವಿರೋಧ ಬರುತ್ತದೆ. "ನೇತರೋಽನುಪಪತ್ತೇಃ" ಎಂಬ ಸೂತ್ರದ ವಿರೋಧವೂ ಬರುತ್ತದೆ.

**प्रकाशः** – एतच्च ''ज्ञेयत्वावचनाच्च'' इत्यादिसूत्रसूचितमिति भाति । अत एव तत्र टीका ''पूर्वं महत्परत्वेन परमात्मनोऽप्रकृतत्वात् प्रधानस्य तद्भावात्तमिति परामर्शेनैतत्सिद्धमित्युक्तार्थ विस्मरणविजृम्भितम्'' इत्यादिका ।। **अव्यक्तादीति** ।। पञ्चम्यन्ताव्यक्तादिशब्देत्यर्थः ।

ಈ ವಿಷಯವು 'ಜ್ಞೇಯತಾವಚನಾಚ್ಚ' ಇತ್ಯಾದಿ ಸೂತ್ರಸೂಚಿತವಾಗಿದೆಯೆಂದು ಅನಿಸುತ್ತದೆ. ಆದ್ದರಿಂದಲೇ ಆ ಸೂತ್ರದ ಟೀಕೆಯಲ್ಲಿ "ಪೂರ್ವಂ ಮಹತ್‌ಪರತ್ವೇನ ಪರಮಾತ್ಮನೋಽಪ್ರಕೃತತ್ವಾತ್ ಪ್ರಧಾನಸ್ಯ ತದ್ಭಾವಾತ್ತಮಿತಿ ಪರಾಮರ್ಶೇನೈತತ್ಸಿದ್ಧಮಿತ್ಯುಕ್ತಾರ್ಥ ವಿಸ್ಮರಣವಿಜೃಂಭಿತಮ್" "ಹಿಂದೆ ಮಹತ್ ಪರತ್ವದಿಂದ ಪರಮಾತ್ಮನು ಪ್ರಕೃತನಾಗಿಲ್ಲ, ಪ್ರಧಾನವು ಪ್ರಕೃತವಾಗಿದೆ. ಆದ್ದರಿಂದ 'ತಮ್' ಎಂಬ ಪರಾಮರ್ಶದಿಂದ ಇದು ಸಿದ್ಧವಾಗಿದೆಯೆಂದು ಹಿಂದೆ ಹೇಳಿದ್ದರ ವಿಸ್ಮರಣೆಯ ವಿಜೃಂಭಣೆ" ಇತ್ಯಾದಿಯಾಗಿ ಹೇಳಿದ್ದಾರೆ. 'ಅವ್ಯಕ್ತಾತ್' ಎಂದರೆ ಪಂಚಮ್ಯಂತವಾದ 'ಅವ್ಯಕ್ತಾತ್' ಎಂಬ ಶಬ್ದದಿಂದ ಎಂದರ್ಥ.

**प्रकाशः** – नन्वेवं ''अव्यक्तात् पुरुषः पर'' इत्यत्राव्यक्तशब्दस्याब्रह्मपरत्वेऽपि ''अनाद्यनन्तम्'' इति वाक्ये तच्छब्देन ब्रह्मपरामर्शो युज्यते । ''सोऽध्वनः परमाप्नोति तद् द्विष्णोः परमं पदम्'' इत्येतत्प्रकरणार्थोपासकस्य विष्णुपदप्राप्त्या प्रकरणस्य तदीयत्वावगमेन ब्रह्मणः प्राकरणिकत्वात् ।

ಆಕ್ಷೇಪ - 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಅವ್ಯಕ್ತಶಬ್ದದಿಂದ ಪ್ರಧಾನವು ವಾಚ್ಯ, ಬ್ರಹ್ಮನಲ್ಲವೆಂದು ಹೇಳಿದರೆ ಯಾವ ಬಾಧಕವೂ ಇಲ್ಲ. ಹಾಗಾದರೆ 'ಅನಾದ್ಯನಂತಂ' ಇತ್ಯಾದಿ ಶ್ರುತಿಯು ಹೇಳುವಂತೆ ಅವ್ಯಕ್ತದ ಜ್ಞಾನದಿಂದ ಮೋಕ್ಷವಾಗಬೇಕಾದೀತು ಎಂಬ ಬಾಧಕ ಬರುತ್ತದಲ್ಲವೆ? ಎನ್ನಬಾರದು. ಏಕೆಂದರೆ ಈ ವಾಕ್ಯದಲ್ಲಿರುವ 'ತತ್' ಶಬ್ದದಿಂದ ಅವ್ಯಕ್ತವನ್ನು ಪರಾಮರ್ಶ ಮಾಡಿದರೆ ಮಾತ್ರ ಬಾಧಕಕ್ಕೆ ಅವಕಾಶ. 'ತತ್' ಶಬ್ದದಿಂದ ಬ್ರಹ್ಮನ ಪರಾಮರ್ಶ ಮಾಡಿದಾಗ ಏನೂ ಸಮಸ್ಯೆ ಇಲ್ಲ. "ಮಹತಃ ಪರಂ" ಎಂದು ಶ್ರುತಿಯಿರುವುದರಿಂದ 'ತತ್' ಶಬ್ದದಿಂದ ಅವ್ಯಕ್ತವನ್ನೇ ಗ್ರಹಣ ಮಾಡಬೇಕು ಎನ್ನಬಾರದು. ಇದು ಸಮಗ್ರ ಬ್ರಹ್ಮಪ್ರಕರಣವಾಗಿದೆ. ಬ್ರಹ್ಮಪ್ರಕರಣದಲ್ಲಿ ಈ ವಾಕ್ಯವು ಬಂದಿರುವುದರಿಂದ 'ತತ್' ಶಬ್ದದಿಂದ ಬ್ರಹ್ಮನನ್ನೇ ಗ್ರಹಣ ಮಾಡಬೇಕು.

ಕಾಠಕೋಪನಿಷತ್ತಿನ ಪ್ರಥಮಾಧ್ಯಾಯದ ಮೂರನೆಯ ವಲ್ಲಿಯಲ್ಲಿ ಈ ವಾಕ್ಯಗಳು ಬಂದಿವೆ -

ಸೋಽಧ್ವನಃ ಪಾರಮಾಪ್ನೋತಿ ತದ್ ವಿಷ್ಣೋಃ ಪರಮಂ ಪದಮ್ ।
ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ ಪರಃ ।
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥

ಹೀಗೆ ಮೂರು ಶ್ಲೋಕದ ಅನಂತರ ಈ ಶ್ಲೋಕವಿದೆ -

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾಽರಸಂ ನಿತ್ಯಮಗಂಧವಚ್ಚ ಯತ್ ।
ಅನಾದ್ಯನಂತಂ ಮಹತಃ ಪರಂ ಧ್ರುವಂ
ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ ॥

ಹೀಗೆ ಪ್ರಾರಂಭದಲ್ಲಿ "ಸೋಽಧ್ವನಃ" ಎಂದು ವಿಷ್ಣುವಿನ ಬಗ್ಗೆ ಪ್ರಸಕ್ತವಾಗಿರುವುದರಿಂದ ಮುಂದಿನ ವಾಕ್ಯಗಳೆಲ್ಲವೂ ವಿಷ್ಣುವನ್ನು ಕುರಿತೇ ಹೊರಟಿವೆ. ಆದ್ದರಿಂದ "ನಿಚಾಯ್ಯ ತಂ" ಎಂಬಲ್ಲಿಯೂ 'ತತ್' ಶಬ್ದದಿಂದ ಬ್ರಹ್ಮನನ್ನು ವಿವಕ್ಷಿಸುವುದೇ ಸೂಕ್ತವಾಗಿದೆ.

**ಪ್ರಕಾಶಃ** – नच "स यद्यदेवासृजत तत्तदत्तुमध्रियत" इत्यत्र स इति तच्छब्दस्य व्यवहितप्राकरणिकमृत्युत्यागेन "स तया वाचा तेनात्मना" इति तृतीयान्ततच्छब्देन सन्निहितसंवत्सराख्यचतुर्मुखपरत्वमिवेहापि व्यवहितविष्णुपदनिर्दिष्टब्रह्मत्यागेन सन्निहिताव्यक्तपरत्वमेव वाच्यमिति युक्तम् । नपुंसकलिङ्गनिर्दिष्टस्याव्यक्तस्य तमिति पुल्लिङ्गेन परामर्शानुपपत्तेः ।

ಪ್ರಶ್ನೆ - 'ತತ್' ಶಬ್ದದಿಂದ ಪೂರ್ವಪ್ರಸಕ್ತವಾದ್ದನ್ನು ತೆಗೆದುಕೊಳ್ಳಬೇಕೋ ? ಅಥವಾ ಪ್ರಕರಣದಿಂದ ಪ್ರತಿಪಾದ್ಯವಾದ್ದನ್ನು ತೆಗೆದುಕೊಳ್ಳಬೇಕೋ? ಎಂದು ವಿಚಾರ ಮಾಡಬೇಕಾಗಿದೆ. ಪೂರ್ವಪ್ರಸಕ್ತವಾದ್ದನ್ನೇ ತೆಗೆದುಕೊಳ್ಳಬೇಕೆನ್ನಲು ಉದಾಹರಣೆ ಕಂಡಿದೆ - ಅತ್ತ್ರಾಧಿಕರಣದಲ್ಲಿ "ಅತ್ತಾ ಚರಾಚರಗ್ರಹಣಾತ್" ಎಂಬ ಸೂತ್ರದ ಪೂರ್ವಪಕ್ಷದಲ್ಲಿ "ಸ ಯದ್ಯದೇವಾಸೃಜತ ತತ್ತದತ್ತುಮಧ್ರಿಯತ" ಎಂಬ ವಿಷಯವಾಕ್ಯದಲ್ಲಿರುವ 'ಸಃ' ಎಂಬ ತಚ್ಛಬ್ದದಿಂದ ಯಾವುದನ್ನು ಪರಾಮರ್ಶ ಮಾಡಬೇಕೆಂದು ಹೀಗೆ ವಿಚಾರ ಮಾಡಿದ್ದಾರೆ. 'ಸ ತಯಾ ವಾಚಾ ತೇನ ಆತ್ಮನೇದಂ ಸರ್ವಮಸೃಜತ ಇತ್ಯುಕ್ತಸ್ಯೈವ ಸ ಯದ್ಯದೇವ ಇತ್ಯನುವಾದಾತ್ । ತತ್ರ ಚ ವಿರಿಂಚಸ್ಯ ತೃತೀಯಯಾ ಪ್ರಕೃತ್ವಾದಾದಿತ್ಯಾಖ್ಯಮೃತ್ಯೋರೇವ ಪ್ರಥಮಯಾ ಪ್ರಕೃತತ್ವಾತ್' ಎಂದು. 'ಸ ತಯಾ' ಎಂಬಲ್ಲಿ ತೃತೀಯಾಂತವಾದ ತಚ್ಛಬ್ದದಿಂದ ಚತುರ್ಮುಖಬ್ರಹ್ಮನನ್ನು ಪರಿಗಣಿಸಲಾಗಿದೆ. ಹೀಗೆ ಪ್ರಸಕ್ತನಾದ ಚತುರ್ಮುಖನನ್ನೇ 'ಸ ಯದ್ಯದೇವ' ಎಂಬಲ್ಲಿ ತಚ್ಛಬ್ದದಿಂದ ಇಟ್ಟುಕೊಳ್ಳಬೇಕು. ಆದಿತ್ಯವೆಂಬ ಮೃತ್ಯುವು ಪ್ರಕರಣತಃ ಪ್ರಾಪ್ತವಾಗಿದ್ದರೂ ವ್ಯವಹಿತವಾದ್ದರಿಂದ ಇಲ್ಲಿ

ಪರಿಗಣಿಸಬಾರದು ಎಂದು ಹೇಳಿದೆ. ಅದರಂತೆ ಪ್ರಕೃತ ಪ್ರಕರಣದಿಂದ ವಿಷ್ಣುವು ಪ್ರಾಪ್ತನಾಗಿರಬಹುದು. ಆದರೆ ವ್ಯವಹಿತನಾದ್ದರಿಂದ ವಿಷ್ಣುವನ್ನು ಬಿಡಬೇಕು. ಸನ್ನಿಹಿತವಾದ ಅವ್ಯಕ್ತವನ್ನೇ ಪರಾಮರ್ಶ ಮಾಡಬೇಕು.

ಉತ್ತರ - ದೃಷ್ಟಾಂತವು ವಿಷಮವಾಗಿದೆ. ಅವ್ಯಕ್ತವು ನಪುಂಸಕಲಿಂಗದಿಂದ ನಿರ್ದಿಷ್ಟವಾಗಿದೆ. 'ತಮ್' ಎಂದು ದ್ವಿತೀಯಾ ವಿಭಕ್ತಿಯ ಪುಲ್ಲಿಂಗ ತಚ್ಛಬ್ದದಿಂದ ಅವ್ಯಕ್ತವನ್ನು ಪರಾಮರ್ಶ ಮಾಡಿಕೊಳ್ಳಲು ಬರುವುದಿಲ್ಲ. ಅವ್ಯಕ್ತಶಬ್ದವು ನಿತ್ಯನಪುಂಸಕಲಿಂಗ. ವಿಷ್ಣುಶಬ್ದವು ನಿತ್ಯಪುಲ್ಲಿಂಗ. ಆದ್ದರಿಂದ ಪ್ರಕರಣದಿಂದ ಪ್ರಾಪ್ತನಾದ ವಿಷ್ಣುವನ್ನೇ ಪರಾಮರ್ಶ ಮಾಡಬೇಕು.

**प्रकाशः** – नच ''तमेव भान्तमनुभाति सर्वम्'' इत्यत्र तच्छब्देन ''कथं नु तत् विजानीयाम्'' इति सन्निहितानिर्देश्यसुखात्मकभगवद्रूपपरामर्श इवाव्यक्तस्यापि तमिति परामर्शो युज्यते । गुणभूतप्रत्ययार्थलिङ्गानुरोधेन तमिति प्रातिपदिकस्य स्वतःप्राप्तसन्निहितपरत्वत्यागायोगादिति वाच्यम् ।

ಪ್ರಶ್ನೆ - ಅವ್ಯಕ್ತಶಬ್ದವು ನಪುಂಸಕಲಿಂಗವಾಗಿದ್ದರೂ ಪುಲ್ಲಿಂಗದ ತಚ್ಛಬ್ದದಿಂದ ಪರಾಮರ್ಶ ಮಾಡಬಹುದು. ಈ ರೀತಿಯಾದ ದೃಷ್ಟಾಂತವು ಕಂಡಿದೆ -

ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಮ್ ॥
ಕಥಂ ನು ತದ್ ವಿಜಾನೀಯಾಂ ಕಿಮು ಭಾತಿ ನ ಭಾತಿ ವಾ ।
ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್ ।
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ
ತಮೇವ ಭಾಂತಮನುಭಾತಿ ಸರ್ವಂ
ತಸ್ಯ ಭಾಸಾ ಸರ್ವಮಿದಂ ವಿಭಾತಿ (ಕಾಠಕೋಪನಿಷತ್)

ಇಲ್ಲಿ "ತಮೇವ ಭಾಂತಮನುಭಾತಿ ಸರ್ವಂ" ಎಂದು ಪುಲ್ಲಿಂಗದ 'ತತ್' ಶಬ್ದದಿಂದ 'ಪರಮಂ ಸುಖಮ್' ಎಂಬಲ್ಲಿ ಪ್ರಸಕ್ತವಾದ ಸುಖರೂಪನಾದ ಪರಮಾತ್ಮನನ್ನು ಪರಾಮರ್ಶ ಮಾಡಲಾಗಿದೆ. ಸುಖಶಬ್ದವು ನಪುಂಸಕಲಿಂಗವಾಗಿದ್ದರೂ ಅದನ್ನು ಪುಲ್ಲಿಂಗ ಶಬ್ದದಿಂದ ಪರಾಮರ್ಶಿಸಿದ್ದಾರೆ. ಅದರಂತೆ ಇಲ್ಲಿಯೂ ಸಹ ಅವ್ಯಕ್ತವನ್ನು 'ತತ್' ಶಬ್ದದಿಂದ ಪರಾಮರ್ಶಿಸಬಹುದು.

ಮತ್ತು 'ತಮ್' ಎಂಬಲ್ಲಿರುವ ಪ್ರಾತಿಪದಿಕದಿಂದ ಅವ್ಯಕ್ತವು ಸ್ವತಃ ಪ್ರಾಪ್ತವಾಗುತ್ತಿದೆ. ಈ ಸಂದರ್ಭದಲ್ಲಿ ಲಿಂಗವನ್ನು ಉಪೇಕ್ಷಿಸಬೇಕು. ಏಕೆಂದರೆ "ಗೌಣವಾದ ಪ್ರತ್ಯಯಾರ್ಥ ಮತ್ತು ಲಿಂಗಗಳಿಗಿಂತ ಸ್ವತಃ ಪ್ರಾಪ್ತವಾದ ಪ್ರಾತಿಪದಿಕಾರ್ಥವೇ ಗ್ರಾಹ್ಯ" ಎಂಬ ನಿಯಮವಿದೆ.

**प्रकाशः** – तथापि ''पुरुषःपरः'' इत्यव्यक्तादपि सन्निहितपुरुषपदनिर्दिष्टविष्णु-परामर्शेनोभयस्वारस्यसम्भवेनाव्यक्तशब्दस्य ब्रह्मपरत्वाभावेपि क्षतेरभावादिति चेन्नैवम् ।

ಉತ್ತರ - 'ತತ್' ಶಬ್ದಕ್ಕೆ ಅವ್ಯಕ್ತಕ್ಕಿಂತ ಅತ್ಯಂತ ಸನ್ನಿಹಿತವಾದದ್ದು ಪುರುಷಪದ. ಈ ಪುರುಷಪದದಿಂದ ವಾಚ್ಯನಾದವನು ವಿಷ್ಣು. ಇಂತಹ ವಿಷ್ಣುವನ್ನು ಸುಲಭವಾಗಿ ಪರಾಮರ್ಶಿಸಬಹುದು. ಬ್ರಹ್ಮಪ್ರಕರಣವಾದ್ದರಿಂದ ಇದು ಸೂಕ್ತವಾಗಿದೆ. ಮತ್ತು ಅವ್ಯಕ್ತ ಶಬ್ದಕ್ಕೆ ಲೋಕಸಿದ್ಧವಾದ ಪ್ರಧಾನ ಎಂಬರ್ಥವನ್ನು ಇಟ್ಟುಕೊಳ್ಳಬಹುದು. ಆದ್ದರಿಂದ ಅವ್ಯಕ್ತಶಬ್ದಕ್ಕೆ ವಿಷ್ಣು ಎಂಬರ್ಥವನ್ನು ಮಾಡಬೇಕಿಲ್ಲ. ಪ್ರಧಾನವೆಂಬರ್ಥವನ್ನು ಹೇಳಿದರೂ ಪ್ರಧಾನದ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಿದಂತಾಗುವುದಿಲ್ಲ. 'ತಮ್' ಎಂಬ ಪದವು ವಿಷ್ಣುವನ್ನೇ ಹೇಳುತ್ತಿರುವುದರಿಂದ ವಿಷ್ಣುವಿನ ಜ್ಞಾನದಿಂದಲೇ ಮೋಕ್ಷವೆಂದು ಶ್ರುತಿಯು ಹೇಳುತ್ತಿದೆ.

**प्रकाशः** – तमिति परामृश्यमानस्य ''महतःपरम्'' इति महत्परत्वविशेषणेन लिङ्गेन महतः परमिति महत्परत्वेन प्रागुक्ताव्यक्तस्यैव बुद्धिविपरिवृत्त्या तत्परामर्शस्यैव युक्तत्वादिति । नच सर्वतःपरस्यापि पुरुषस्य महत्परत्वं प्रागुक्तरीत्याऽस्तीति पुरुषपदनिर्दिष्टमेव तमिति परामृश्य ''महतः परः'' इति श्रुतिर्विशिनष्टीति वाच्यम् । विशिष्य महत्परत्वोक्त्या तथैव प्राङ्निर्दिष्टवस्तु-प्रत्यभिज्ञानस्य स्वरसतः प्राप्तत्वात् । प्रधानपरस्यापि विष्णोः ''यो बुद्धेः परतस्तु सः'' इत्यादाविव महत्परत्वोक्तिसम्भवाच्चेति तात्पर्यात् । एतेनाव्यक्तशब्दस्याब्रह्मपरत्वं वदन्तो निरस्ताः ।

## ಅವ್ಯಕ್ತಶಬ್ದವು ಬ್ರಹ್ಮಪರ

ಸಿದ್ಧಾಂತ - ''ತಮ್'' ಎಂಬ ಶಬ್ದದಲ್ಲಿ ''ಮಹತಃ ಪರಮ್'' ಎಂಬುದು ವಿಶೇಷಣವಾಗಿದೆ. ಆದ್ದರಿಂದ ತಚ್ಛಬ್ದವನ್ನು ಕೇಳಿದಾಗ ಅವ್ಯಕ್ತದ ಸ್ಮರಣೆಯೇ ಬರುತ್ತದೆ. ವಿಷ್ಣುವಿನ ಸ್ಮರಣೆ ಬರುವುದಿಲ್ಲ. ಹೀಗಿರುವಾಗ ವಿಷ್ಣುವಿನ ಪರಾಮರ್ಶವು ಯುಕ್ತವಾಗುವುದಿಲ್ಲ.

ಪ್ರಶ್ನೆ - ಪುರುಷನು ಮಹತ್ತತ್ತ್ವ ಅವ್ಯಕ್ತತತ್ತ್ವ ಎಲ್ಲದಕ್ಕಿಂತ ಉತ್ತಮನಾಗಿದ್ದಾನೆ. ಇಂತಹ ಪುರುಷನಲ್ಲಿ ಮಹತ್‌ಪರತ್ವವು ಇದ್ದೇ ಇದೆ. ಇದನ್ನೇ ಶ್ರುತಿಯು ''ಮಹತಃ ಪರಂ'' ಎಂದು ಹೇಳುತ್ತಿದೆ. ಪುರುಷಪದದಿಂದ ಪ್ರತಿಪಾದ್ಯನಾದವನನ್ನೇ 'ತಮ್' ಎಂದು ಪರಾಮರ್ಶಿಸಿ ಮಹತ್‌ಪರತ್ವವನ್ನು ಹೇಳುತ್ತಿದೆ.

ಉತ್ತರ - ಇದು ಸರಿಯಲ್ಲ. ''ಮಹತಃ ಪರಮ್'' ಎಂದು ಶ್ರುತಿಯು ವಿಶೇಷವಾಗಿ ಹೇಳುತ್ತಿದೆ. ಹಿಂದಿನ ವಾಕ್ಯದಲ್ಲಿ ಅವ್ಯಕ್ತವನ್ನು ಮಹತ್‌ಪರವೆಂದು ಹೇಳಿದಾಗ ಇಲ್ಲಿ 'ಮಹತ್ ಪರ' ಶಬ್ದ ಕೇಳಿದ ಕೂಡಲೇ ಅವ್ಯಕ್ತದ ಪ್ರತ್ಯಭಿಜ್ಞಾನವೇ ಬರುತ್ತದೆ. ಹೊರತು ವಿಷ್ಣುವು ಎಲ್ಲದಕ್ಕಿಂತ ಉತ್ತಮನಾಗಿದ್ದಾನೆಂದು ವಿಷ್ಣುವಿನ ಪ್ರತ್ಯಭಿಜ್ಞಾನ ಬರಲು ಸಾಧ್ಯವಿಲ್ಲ. ಸ್ವರಸವಾಗಿ ಪ್ರಾಪ್ತವಾಗುವ ಅವ್ಯಕ್ತವನ್ನು ಬಿಟ್ಟು ಬಲಾತ್ ಪ್ರಾಪ್ತವಾಗುವ ವಿಷ್ಣುವನ್ನು ಸ್ವೀಕರಿಸುವುದು ಅನ್ಯಾಯ. ವಸ್ತುತಃ ವಿಷ್ಣು ಪ್ರಕೃತಿಗಿಂತ ಉತ್ತಮನಾಗಿದ್ದಾನೆ. ಆದರೂ ಮಹತ್ತತ್ತ್ವಕ್ಕಿಂತ ಉತ್ತಮನಾಗಿದ್ದಾನೆಂದು ಹೇಳಬಹುದು. 'ಯೋ ಬುದ್ಧೇಃ ಪರತಸ್ತು ಸಃ' ಎಂಬಲ್ಲಿ

ಹೇಗೋ ಅದರಂತೆ ಇಲ್ಲಿಯೂ ತಿಳಿಯಬೇಕು. ಹೀಗೆ ಹೇಳಿದ್ದರಿಂದ ಅವ್ಯಕ್ತಶಬ್ದವು ಬ್ರಹ್ಮಪರವಲ್ಲವೆಂಬ ವಾದವನ್ನೂ ನಿರಾಕರಿಸಿದಂತಾಯಿತು.

**प्रकाशः** – ननु वैश्वानरविद्यायां ''को न आत्मा किं ब्रह्म'' इति प्रकरणेनान्तःप्रतिष्ठानादिलिङ्गकृताग्निप्रत्यभिज्ञानमिवेहापि प्रागुक्तब्रह्मप्रकरणेन महत्परत्वलिङ्गकृतप्रकृताव्यक्तप्रत्यभिज्ञानं बाध्यताम् । तथाचाव्यक्तस्याब्रह्मत्वेऽपि न दोष इति चेन्न ।

ಪ್ರಶ್ನೆ - 'ತಮ್' ಶಬ್ದದಿಂದ ಅವ್ಯಕ್ತದ ಪ್ರತ್ಯಭಿಜ್ಞಾನವು ಬರುವುದಿಲ್ಲ. ಉದಾಹರಣೆ - ವೈಶ್ವಾನರಾಧಿಕರಣದಲ್ಲಿ 'ವೈಶ್ವಾನರ' ಶಬ್ದದಿಂದ ವಿಷ್ಣುವಿನ ಪ್ರತ್ಯಭಿಜ್ಞಾನ ಬರುತ್ತದೋ? ಅಗ್ನಿಯ ಪ್ರತ್ಯಭಿಜ್ಞಾನ ಬರುತ್ತದೋ? ಎಂದು ಸಂಶಯ. ಹೋಮಾಧಿಕರಣತ್ವ ಗಾರ್ಹಪತ್ಯಾದ್ಯಂಗತ್ವ. ಅಂತಃಪ್ರತಿಷ್ಠಾನತ್ವ (ಪಾಚಕನಾಗಿ ಒಳಗೆ ಇರುವಿಕೆ) ಇತ್ಯಾದಿ ಲಿಂಗಗಳಿಂದ ವೈಶ್ವಾನರ ಶಬ್ದದಿಂದ ಅಗ್ನಿಯ ಪ್ರತ್ಯಭಿಜ್ಞಾನ ಬರುತ್ತದೆಂದು ಪೂರ್ವಪಕ್ಷ. "ಕೋ ನ ಆತ್ಮಾ ಕಿಂ ಬ್ರಹ್ಮ" ಎಂದು ಬ್ರಹ್ಮಶಬ್ದದ ಮೂಲಕ ಪ್ರಾರಂಭವಾದ ಪ್ರಕರಣದಲ್ಲಿ ವೈಶ್ವಾನರಶಬ್ದವು ಬಂದಿದೆ. ಈ ಬ್ರಹ್ಮಪ್ರಕರಣದಿಂದ ಅಗ್ನಿಪ್ರತ್ಯಭಿಜ್ಞಾನವು ಬಾಧ್ಯವಾಗುತ್ತದೆಂದು ಸಿದ್ಧಾಂತ ಮಾಡಲಾಗಿದೆ.

ಇದರಂತೆ ಪ್ರಕೃತದಲ್ಲಿ ಮಹತ್‌ಪರತ್ವವೆಂಬ ಲಿಂಗದಿಂದ ಅವ್ಯಕ್ತದ ಪ್ರತ್ಯಭಿಜ್ಞಾನವು 'ತಮ್' ಪದದಿಂದ ಬರುತ್ತದೆ. ಆದರೆ ಬ್ರಹ್ಮಪ್ರಕರಣದಲ್ಲಿ ಇದು ಬಂದಿರುವುದರಿಂದ ಅವ್ಯಕ್ತದ ಪ್ರತ್ಯಭಿಜ್ಞಾನವು ಬಾಧ್ಯವಾಗುತ್ತದೆ.

**प्रकाशः** – तत्र लिङ्गस्य सावकाशतया निरवकाशप्रकरणेन बाधेऽपीह विशिष्य महत्परत्वरूपलिङ्गस्य निरवकाशतया तत्कृताव्यक्तप्रत्यभिज्ञानस्य बाधायोगात्। अत एव द्युभ्वादिनयपूर्वपक्षे निरवकाशजायमानत्वलिङ्गेन प्रकरणस्यैव बाध उक्तः ।

ಆದ್ದರಿಂದ ಅವ್ಯಕ್ತಶಬ್ದಕ್ಕೆ ಬ್ರಹ್ಮನೆಂದು ಅರ್ಥೈಸಬೇಕಿಲ್ಲ. ಪ್ರಧಾನಪರತ್ವವನ್ನು ಹೇಳಿದರೆ ಯಾವ ದೋಷವೂ ಬರಲಾರದು.

ಉತ್ತರ - ನೀವು ನೀಡಿದ ದೃಷ್ಟಾಂತವು ವಿಷಮವಾಗಿದೆ. ವೈಶ್ವಾನರಾಧಿಕರಣದಲ್ಲಿರುವ ಬ್ರಹ್ಮಪ್ರಕರಣವು ನಿರವಕಾಶವಾಗಿದೆ. ಲಿಂಗವು ಸಾವಕಾಶವಾಗಿದೆ. ನಿರವಕಾಶವಾದ ಶ್ರುತಿಯಿಂದ ಸಾವಕಾಶವಾದ ಲಿಂಗವೇ ಬಾಧ್ಯವಾಗುತ್ತದೆ. ಆದರೆ ಇಲ್ಲಿ ಮಹತ್‌ಪರತ್ವವೆಂಬ ಲಿಂಗವು ನಿರವಕಾಶವಾಗಿದೆ. ಶ್ರುತಿಯು ಸಾವಕಾಶವಾಗಿದೆ. ನಿರವಕಾಶಲಿಂಗದಿಂದ ಸಿದ್ಧವಾದ ಅವ್ಯಕ್ತದ ಪ್ರತ್ಯಭಿಜ್ಞಾನವು ಬಾಧ್ಯವಾಗಲು ಸಾಧ್ಯವಿಲ್ಲ. ದುಭ್ವಾದ್ಯಧಿಕರಣದ ಪೂರ್ವಪಕ್ಷದಲ್ಲಿ ನಿರವಕಾಶವಾದ ಜಾಯಮಾನತ್ವಲಿಂಗದಿಂದ ಪ್ರಕರಣಕ್ಕೆ ಬಾಧ್ಯತ್ವವನ್ನು ಹೇಳಿದ್ದಾರೆ. ಹಾಗೆಯೇ ಇಲ್ಲಿ ಹೇಳಿದರೆ ತಪ್ಪಾಗುವುದಿಲ್ಲ.

**प्रकाशः** – नचैवं महत्परत्वलिङ्गेन वाक्यमब्रह्मपरमेव स्यादिति वाच्यम् । सिद्धान्ते महत्परत्वस्य सावकाशयितव्यतया पूर्वत्रोक्ताव्यक्तस्य अब्रह्मत्वे तस्यैव

तमित्युत्तरवाक्ये परामर्शे प्रकरणविरोधात् । अतोऽव्यक्तस्य ब्रह्मत्वमवश्यं समर्थनीयमिति ।

ಪ್ರಶ್ನೆ - ಮಹತ್‌ಪರತ್ವವು ಅವ್ಯಕ್ತದಲ್ಲೇ ಬರುತ್ತದೆ, ಬ್ರಹ್ಮನಲ್ಲಿ ಬರುವುದಿಲ್ಲ. ಈ ಲಿಂಗದ ಬಲದಿಂದ ವಾಕ್ಯವು ಪ್ರಕೃತಿಪರವೇ ಆಗುತ್ತದಲ್ಲವೇ?

ಉತ್ತರ - ಸಿದ್ಧಾಂತದಲ್ಲಿ ಮಹತ್‌ಪರತ್ವಲಿಂಗವನ್ನು ವಿಷ್ಣುವಿನಲ್ಲಿ ಸಾವಕಾಶ ಮಾಡುತ್ತೇವೆ. ಒಂದುವೇಳೆ ಮೊದಲಿರುವ ಅವ್ಯಕ್ತಶಬ್ದವು ಅನ್ಯಪರವಾದರೆ ಅದನ್ನೇ ಮುಂದೆ 'ತಮ್' ಎಂಬ ಶಬ್ದದಿಂದ ಪರಾಮರ್ಶ ಮಾಡಬೇಕಾಗುತ್ತದೆ. ಆವಾಗ ಪ್ರಕರಣವಿರೋಧ ಬರುತ್ತದೆ. ಆದ್ದರಿಂದ ಅವ್ಯಕ್ತಶಬ್ದವು ಬ್ರಹ್ಮಪರವೆಂದು ಅವಶ್ಯ ಸಮರ್ಥಿಸಬೇಕು.




ನಾಲ್ಕನೆಯ ಈ ಪಾದದಲ್ಲಿ ದೋಷವಾಚಕಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಆದರೆ ಇಂಥ ಶಬ್ದಗಳ ಸಮನ್ವಯವು ಆವಶ್ಯಕವೇ? ಎಂಬುದನ್ನು ವಿಚಾರ ಮಾಡಬೇಕು. ಪರಮಾತ್ಮನು ಗುಣಪರಿಪೂರ್ಣನಾಗಿದ್ದಾನೆಂಬ ಅರಿವಿಗಾಗಿ 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳ ಸಮನ್ವಯವು ಅನಾವಶ್ಯಕ.

ಅಪೂರ್ವವಾದ ಯೋಗವೃತ್ತಿಯನ್ನು 'ದುಃಖೀ' ಮೊದಲಾದ ಶಬ್ದಗಳಿಗೆ ಕಲ್ಪನೆ ಮಾಡಿ, ಇವುಗಳೂ ಕೂಡ ಗುಣವಾಚಕವಾಗಿವೆಯೆಂದು ಸಮರ್ಥನೆ ಮಾಡಬೇಕು. ಆದರೆ ಈ ಶಬ್ದಗಳು ದೋಷವಾಚಕಗಳೇ ಆಗಿವೆ. ಈ ದೋಷಗಳೆಲ್ಲವೂ ವಿಷ್ಣುವಿನ ಅಧೀನವಾಗಿವೆ ಎಂದು ಸಿದ್ಧಾಂತಿಗಳಾದ ನೀವೇ ಸಮರ್ಥನೆ ಮಾಡುತ್ತೀರಿ. ಹೀಗಿರುವಾಗ ಬೇರೆ ಪ್ರವೃತ್ತಿನಿಮಿತ್ತವನ್ನು ಒಪ್ಪಿ ಗುಣವಾಚಕಗಳೆಂದು ಸಮರ್ಥನೆ ಮಾಡಲು ಸಾಧ್ಯವಿಲ್ಲ.

ಇತರರಲ್ಲಿರುವ ದುಃಖಕ್ಕೆ ಭಗವಂತನು ಸ್ವಾಮಿಯಾಗಿರುವುದರಿಂದ ಸರ್ವನಿಯಾಮಕತ್ವ ಎಂಬ ಮಹಿಮೆಯ ಸಿದ್ಧಿಗೋಸ್ಕರ ಇಂಥ ದೋಷವಾಚಕಶಬ್ದಗಳ ಸಮನ್ವಯವನ್ನು ಮಾಡುವುದು ಸಾರ್ಥಕವಲ್ಲವೇ? ಎಂಬ ಪ್ರಶ್ನೆಯೂ ಕೂಡ ಅಸಾಧುವಾಗಿದೆ. ಈ ಸರ್ವನಿಯಾಮಕತ್ವವೆಂಬ ಗುಣವು ಅಂತರ್ಯಾಮ್ಯಧಿಕರಣದ ನ್ಯಾಯದಿಂದಲೇ ಮಹಾವಿಷ್ಣುವಿನಲ್ಲಿ ಸಿದ್ಧವಾಗಿದೆ. ಪುನಃ ಆನುಮಾನಿಕಾಧಿಕರಣದಲ್ಲಿ ಇತರ ಸಮರ್ಥನೆ ಅನಾವಶ್ಯಕ. ಇಷ್ಟು ಆಕ್ಷೇಪ.

ಈ ಆಕ್ಷೇಪವು ಅಸಾಧುವಾಗಿವೆ. ಪರಮಾತ್ಮನಲ್ಲಿ ಸಕಲಗುಣಪರಿಪೂರ್ಣತ್ವವನ್ನು ತಿಳಿಯುವುದೇ ಮುಖ್ಯ ಉದ್ದೇಶವಲ್ಲ. ಸಕಲಶಬ್ದಗಳಿಂದ ವಾಚ್ಯನಾಗಿದ್ದಾನೆ ಎಂಬುದನ್ನೂ ಕೂಡ ತಿಳಿದುಕೊಳ್ಳಬೇಕು. ವೇದದಲ್ಲಿರುವ ಪ್ರತಿಯೊಂದು ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ತಿಳಿದಾಗ ಮಾತ್ರ ಮೋಕ್ಷವಾಗಲು ಸಾಧ್ಯ. ಈ ಕಾರಣಕ್ಕಾಗಿ ದೋಷವಾಚಕಶಬ್ದಗಳ ಸಮನ್ವಯಕ್ಕಾಗಿ ಈ ಅಧಿಕರಣವು ಹೊರಟಿದೆ. ಆದ್ದರಿಂದ ಆನುಮಾನಿಕಾಧಿಕರಣದ ಪ್ರಾರಂಭವನ್ನು ಅನಾವಶ್ಯಕವೆಂದು ಹೇಳಬಾರದು.

////////////////////////////////////////////////

ಆನುಮಾನಿಕಾಧಿಕರಣ (೧-೪-೧)

"ನಾಮಾನಿ ಸರ್ವಾಣಿ" ಎಂಬಲ್ಲಿರುವ ಸರ್ವಪದದ ಅರ್ಥವನ್ನು ಸಂಕೋಚ ಮಾಡಬಾರದು

**तात्पर्यचन्द्रिका**

**अन्यथा 'नामानि' इत्यादिश्रुतौ तद्वाच्यतोक्तिः तथा "प्राण ऋच इत्येव विद्यात्" इत्यादिश्रुतौ वाच्यत्वस्य ज्ञेयत्वोक्तिः तथा "नामायत्ता समतृप्यंच्छ्रुतेधि" इति श्रुतौ तज्ज्ञानान्मोक्षोक्तिश्च न स्यात् ।**

ಅನುವಾದ - ಮುಮುಕ್ಷು ಆದವನು ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವವನ್ನು ಅವಶ್ಯವಾಗಿ ತಿಳಿಯಲೇ ಬೇಕು. ಇಲ್ಲದಿದ್ದರೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯಲ್ಲಿ ಸರ್ವಶಬ್ದವಾಚ್ಯತ್ವವನ್ನು ಹೇಳಿದ್ದು ವ್ಯರ್ಥವಾಗಬೇಕಾದೀತು. ಮತ್ತು 'ಪ್ರಾಣ ಋಚ ಇತ್ಯೇವ ವಿದ್ಯಾತ್' 'ಪ್ರಾಣ' ಶಬ್ದವಾಚ್ಯನಾದ ವಿಷ್ಣುವಿನಲ್ಲಿ ಎಲ್ಲ 'ಋಜ್' ಮಂತ್ರಗಳು ಸಮನ್ವಯಗೊಳ್ಳುತ್ತವೆ ಎಂದು ಅವಶ್ಯವಾಗಿ ತಿಳಿಯಬೇಕು ಎಂಬುದಾಗಿ ಸರ್ವಶಬ್ದವಾಚ್ಯತ್ವದ ಜ್ಞೇಯತ್ವವನ್ನು ಹೇಳಿದ್ದೂ ಕೂಡ ತಪ್ಪಾಗಬೇಕಾದೀತು. ಇದರಂತೆ ಐತರೇಯ ಶ್ರುತಿಯಲ್ಲಿಯೂ 'ನಾಮಾಯತ್ತಾ ಸಮತೃಪ್ಯಂಚ್ಛ್ರುತೇಧಿ' ಸಕಲ ದೇವತೆಗಳು ಎಲ್ಲಾ ಶಬ್ದಗಳು ಹರಿನಾಮಗಳೆಂದು ತಿಳಿದು ಮೋಕ್ಷವನ್ನು ಪಡೆದರು ಎಂಬ ವಚನವೂ ಕೂಡ ತಪ್ಪಾಗಬೇಕಾದೀತು. ಆದ್ದರಿಂದ ಸಕಲಶಬ್ದವಾಚ್ಯತ್ವವನ್ನು ಶ್ರೀಹರಿಯಲ್ಲಿ ತಿಳಿಯಬೇಕೆಂದರೆ 'ದುಃಖೀ' 'ಬದ್ಧಃ', 'ಅವ್ಯಕ್ತ' ಮೊದಲಾದ ಶಬ್ದಗಳಿಂದಲೂ ವಿಷ್ಣು ಪ್ರತಿಪಾದ್ಯನೆಂಬುದನ್ನು ಅವಶ್ಯವಾಗಿ ತಿಳಿಯಲೇ ಬೇಕು.

**अन्यथा "नामानि सर्वाणि" इत्यादिश्रुतेर्दुःख्यादिशब्दान्यविषयत्वेन सङ्कोचे मूलप्रमाणाभावादिन्द्रादिशब्दानामपि समन्वयो न सिध्येत् । किन्तु ब्रह्मलिङ्गैर-मुख्यवृत्त्या ब्रह्मपरत्वमात्रं स्यात् ।**

ಒಂದು ವೇಳೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಗಳಿಗೆ ದೋಷವಾಚಕ ಶಬ್ದಗಳನ್ನು ಬಿಟ್ಟು, ಉಳಿದ ಶಬ್ದವಾಚ್ಯತ್ವವಷ್ಟೇ ವಿವಕ್ಷಿತವೆಂದು ಸಂಕೋಚ ಮಾಡುವುದಾದರೆ, ಅತಿಪ್ರಸಂಗ ಬರುತ್ತದೆ. ಏಕೆಂದರೆ 'ದುಃಖೀ' ಮೊದಲಾದ ಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳನ್ನು ಮಾತ್ರ ಈ ಶ್ರುತಿಯು ಸಮನ್ವಯ ಮಾಡುತ್ತಿದೆಯೆಂದು ಸಂಕೋಚ ಮಾಡಲು ಯಾವುದೇ ಮೂಲಪ್ರಮಾಣವಿರುವುದಿಲ್ಲ. ಆದ್ದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಲ್ಪಟ್ಟ ಇಂದ್ರಾದಿ ಶಬ್ದಗಳನ್ನು ಬಿಟ್ಟು ಉಳಿದ ಶಬ್ದಗಳ ಸಮನ್ವಯವನ್ನಷ್ಟೇ ಈ ಶ್ರುತಿಯು ಹೇಳುತ್ತಿದೆಯೆಂದಾಗ-ಬೇಕಾದೀತು. ಆದ್ದರಿಂದ ನಾಲ್ಕನೆಯ ಪಾದವು ದೋಷವಾಚಕಶಬ್ದಗಳ ಸಮನ್ವಯಕ್ಕಾಗಿ ಹೊರಟಿರುವುದು ಹೇಗೆ ವ್ಯರ್ಥವೋ? ಅದರಂತೆ ಇಂದ್ರಾದಿಶಬ್ದಗಳ ಸಮನ್ವಯಕ್ಕಾಗಿ ಪ್ರಥಮಪಾದವು ಹೊರಟಿದ್ದೂ

ಕೂಡ ವ್ಯರ್ಥವಾಗಬೇಕಾದೀತು. ಆದ್ದರಿಂದ ಇಂದ್ರಾದಿ ಶಬ್ದಗಳು ವಿಷ್ಣುವಿನ ನಾಮಗಳೆಂದು ಸಿದ್ಧವಾಗದೇ ಕೇವಲ ಬ್ರಹ್ಮನ ಲಿಂಗಗಳಿರುವ ಕಾರಣ ಅಮುಖ್ಯವೃತ್ತಿಯಿಂದ ಬ್ರಹ್ಮನಲ್ಲಿ ತಾತ್ಪರ್ಯವನ್ನು ಮಾತ್ರ ಹೊಂದಿವೆ ಎಂದು ಹೇಳಬೇಕಾದೀತು.

**किं चेश्वरस्य शक्रादिगतैश्वर्यादेः स्वाधीनत्वात् ''इन्द्रोराजा जगतो य ईशे'' इत्यादाविन्द्रादिशब्दवाच्यतेव जीवगतबन्धादेः स्वाधीनत्वात् ''कार्यकारणबद्धौ तौ'' इत्यादिश्रुतिस्थबद्धादिशब्दवाच्यताऽपि ज्ञेया ।**

ಮತ್ತು ಇಂದ್ರಾದಿಗಳಲ್ಲಿ ಯಾವ ಐಶ್ವರ್ಯಾದಿಗಳಿವೆಯೋ, ಅವುಗಳು ವಿಷ್ಣುವಿನ ಅಧೀನವೇ ಆಗಿವೆ. ಆದ್ದರಿಂದ 'ಇಂದ್ರೋ ರಾಜಾ ಜಗತೋ ಯ ಈಶೇ' ಇತ್ಯಾದಿ ಶ್ರುತಿಗಳಲ್ಲಿರುವ ಇಂದ್ರಾದಿ ಶಬ್ದವಾಚ್ಯತ್ವವು ವಿಷ್ಣುವಿನಲ್ಲಿ ಬರುತ್ತದೆ. ಇದರಂತೆ ಜೀವರಲ್ಲಿ ಯಾವ ಬಂಧನವಿದೆಯೋ, ಅದೂ ಕೂಡ ವಿಷ್ಣುವಿನ ಅಧೀನವೇ ಆಗಿರುತ್ತದೆ. ಹಾಗಾಗಿ 'ಕಾರ್ಯಕಾರಣಬದ್ಧೌ ತೌ' ಇತ್ಯಾದಿ ಶ್ರುತಿಗಳಲ್ಲಿರುವ ಬದ್ಧಾದಿಶಬ್ದವಾಚ್ಯತ್ವವೂ ಕೂಡ ವಿಷ್ಣುವಿನಲ್ಲಿ ಬರುತ್ತದೆಂಬುದನ್ನೂ ಕೂಡ ತಿಳಿಯಬೇಕು. ಹೀಗೆ ಇಂದ್ರಾದಿಶಬ್ದಗಳ ಸಮನ್ವಯವಿದ್ದಂತೆ 'ದುಃಖೀ' 'ಬದ್ಧಃ' ಇತ್ಯಾದಿ ದೋಷವಾಚಕ ಶಬ್ದಗಳ ಸಮನ್ವಯವೂ ಕೂಡ ವಿಷ್ಣುವಿನಲ್ಲಿ ತಿಳಿಯಬೇಕು.

**अन्यथा ''स बद्धः स दुःखी स बन्धयति स दुःखयति'' इत्यादिश्रुतिषु तदुक्तिर्न स्यात् ।**

'ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' ಇತ್ಯಾದಿ ಶ್ರುತಿಗಳಲ್ಲಿ ಬದ್ಧಾದಿಶ್ರುತಿಗಳ ನಿರ್ವಚನವನ್ನು ಹೇಳಿದ್ದೇ ತಪ್ಪಾಗಬೇಕಾದೀತು.

ಅಭಿಪ್ರಾಯ ಹೀಗಿದೆ - 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯನ್ನು ಇಂದ್ರಾದಿಶಬ್ದಗಳ ಸಮನ್ವಯ ವಿಷಯದಲ್ಲಿ ಬಿಟ್ಟು, ಉಳಿದ ಶಬ್ದಗಳ ಸಮನ್ವಯ ವಿಷಯದಲ್ಲಿ ಸಂಕೋಚ ಮಾಡಲು ಸಾಧ್ಯವಿಲ್ಲ. ಏಕೆಂದರೆ 'ಇಂದ್ರೋ ರಾಜಾ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಇಂದ್ರಾದಿಶಬ್ದಗಳ ಸಮನ್ವಯವನ್ನು ಹೇಳುತ್ತಿದೆ. ಮತ್ತು 'ಯೋ ದೇವಾನಾಮ್ ನಾಮಧಾ' ಎಂಬ ಶ್ರುತಿಯೂ ಕೂಡ ಇಂದ್ರಾದಿಶಬ್ದಗಳ ಸಮನ್ವಯವು ವಿಷ್ಣುವಿನಲ್ಲಿ ತಿಳಿಸುತ್ತಿದೆ. ಆದ್ದರಿಂದ ಸಂಕೋಚ ಮಾಡಲಾಗದೆಂದು ಹೇಳಿದರೆ, ಅದೇ ಕಾರಣದಿಂದಲೇ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳ ಸಮನ್ವಯ ವಿಷಯದಲ್ಲಿಯೂ ಸಂಕೋಚ ಮಾಡಬಾರದು. ಏಕೆಂದರೆ 'ಸ ಬದ್ಧಃ ಸ ದುಃಖೀ ಸ ಬಂಧಯತಿ' ಎಂಬ ಶ್ರುತಿಯು 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ವಿಷ್ಣುವಿನಲ್ಲಿ ಹೇಳುವ ಮೂಲಕ ಆಯಾ ಶಬ್ದಗಳ ಸಮನ್ವಯವನ್ನು ತಿಳಿಸುತ್ತಿದೆ. ಆದ್ದರಿಂದ ಈ ವಿಷಯದಲ್ಲಿಯೂ ಸಂಕೋಚ ಮಾಡಬಾರದು.

ಆನುಮಾನಿಕಾಧಿಕರಣ (೧-೪-೧)

**किञ्च ''महतःपरमव्यक्तम्'' इत्यत्राव्यक्तशब्दस्याब्रह्मपरत्वे ''अनाद्यनन्तं महतः परं ध्रुवं निचाय्य तं मृत्युमुखात्प्रमुच्यते'' इत्युत्तरवाक्येऽपि तच्छब्देन प्रकृतस्याब्रह्मण एव परामर्शादब्रह्मज्ञानादपि मोक्षः स्यादिति सफलाऽव्यक्तादिशब्दसमन्वयोक्तिः ।**

ಈ ಅಧಿಕರಣದಲ್ಲಿ ಅವ್ಯಕ್ತಶಬ್ದದ ಸಮನ್ವಯವನ್ನೇ ಪ್ರಥಮಸೂತ್ರದಲ್ಲಿ ವಿವಕ್ಷಿಸಲು ಕಾರಣ ಹೀಗಿದೆ - ಒಂದು ವೇಳೆ 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯಲ್ಲಿರುವ ಅವ್ಯಕ್ತಶಬ್ದವು ಬ್ರಹ್ಮಪರವಾಗದಿದ್ದಲ್ಲಿ 'ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ಉತ್ತರವಾಕ್ಯದಲ್ಲಿರುವ ತತ್‌ಶಬ್ದದಿಂದಲೂ ಬ್ರಹ್ಮನನ್ನು ಪರಾಮರ್ಶಿಸಲು ಸಾಧ್ಯವಾಗುವುದಿಲ್ಲ. ಆವಾಗ ಬ್ರಹ್ಮನ ಜ್ಞಾನವಿಲ್ಲದೆ ಉಳಿದ ಪದಾರ್ಥದ ಜ್ಞಾನದಿಂದಲೇ ಮೋಕ್ಷವಾಗಬೇಕಾದೀತು. ಒಂದು ವೇಳೆ ಅವ್ಯಕ್ತಶಬ್ದದಿಂದ ವಿಷ್ಣು ಪ್ರತಿಪಾದ್ಯನಾದರೆ ಅವನನ್ನೇ 'ತತ್' ಶಬ್ದದಿಂದ ಪರಾಮರ್ಶಿಸಬಹುದಾದ್ದರಿಂದ ವಿಷ್ಣುವಿನ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳುವುದು ಸ್ವರಸವಾಗುತ್ತದೆ. ಈ ಕಾರಣದಿಂದ ಅವ್ಯಕ್ತಶಬ್ದದ ಸಮನ್ವಯವನ್ನೇ ಈ ಅಧಿಕರಣದಲ್ಲಿ ಕಂಠತಃ ಹೇಳಿರುತ್ತಾರೆ.

**प्रकाशः –**

पूर्वपादान्त्यस्योत्तरपादाद्यस्याधिकरणस्य नावान्तरसङ्गत्यपेक्षेत्युक्तत्वात्तत्रावान्तर-सङ्गत्यनुक्तिः । अन्यथा ''अगोत्रमवर्णम्'' इति वर्णशून्यतया श्रुतेऽपि विष्णौ यथा वर्णवाचितया प्रसिद्धस्य ब्राह्मणशब्दस्य निमित्तान्तरकथनेन विष्णौ वृत्तिस्तथेहापि ''अदुःखमसुखम्'' इति दुःखादिशून्यतया श्रुतेऽपि स्वातन्त्र्यरूपनिमित्तान्तरोक्त्या दुःखादिशब्दवृत्तिरुच्यत इति वा

ವಿವರಣೆ - ಎಲ್ಲೆಡೆ ಹಿಂದಿನ ಪಾದದ ಕೊನೆಯ ಅಧಿಕರಣದಿಂದ ಮುಂದಿನ ಪಾದದ ಪ್ರಥಮಾಧಿಕರಣಕ್ಕೆ ಸಂಗತಿಯ ಅಪೇಕ್ಷೆ ಇರುವುದಿಲ್ಲವೆಂದು ಹಿಂದೆ ಪ್ರತಿಪಾದಿಸಿದ್ದಾರೆ. ಆದ್ದರಿಂದ ಈ ಅಧಿಕರಣದ ಪ್ರಾರಂಭದಲ್ಲಿ ಹಿಂದಿನ ಅಧಿಕರಣದಿಂದ ಸಂಗತಿಯನ್ನು ಹೇಳಿಲ್ಲ.

ಈ ಪಾದಕ್ಕೂ ಅಧಿಕರಣಸಂಗತಿ ಹೇಳಲೇಬೇಕೆಂದರೆ ಹೀಗೆ ಉಪಪಾದಿಸಬಹುದು - 'ಅಗೋತ್ರಮವರ್ಣಂ' ಎಂಬ ಶ್ರುತಿಯು ಪರಮಾತ್ಮನಿಗೆ ಬ್ರಾಹ್ಮಣಾದಿವರ್ಣಗಳನ್ನು ನಿಷೇಧಿಸುತ್ತಿದೆ. ಹಾಗಾದರೆ ಬ್ರಾಹ್ಮಣಾದಿಶಬ್ದಗಳಿಂದ ವಿಷ್ಣುವು ಹೇಗೆ ವಾಚ್ಯನಾಗುತ್ತಾನೆ ? ಎಂದರೆ ಬೇರೆ ಪ್ರವೃತ್ತಿನಿಮಿತ್ತವನ್ನು ಅಂಗೀಕರಿಸಿ ಬ್ರಾಹ್ಮಣಾದಿಶಬ್ದಗಳನ್ನು ಹಿಂದಿನ ಅಧಿಕರಣದಲ್ಲಿ ಸಮನ್ವಯಗೊಳಿಸಿದೆ. ಅದರಂತೆ ಇಲ್ಲಿಯೂ ಸಹ ''ಅದುಃಖಮಸುಖಮ್'' ಎಂಬ ಶ್ರುತಿಯಿಂದ ಪರಮಾತ್ಮನು ದುಃಖಾದಿರಹಿತನೆಂದು ತಿಳಿದರೂ

''ಸ್ವಾತಂತ್ರ್ಯ'' ಎಂಬ ಪ್ರವೃತ್ತಿನಿಮಿತ್ತದಿಂದ ದುಃಖಾದಿಶಬ್ದಗಳ ವಾಚ್ಯತ್ವವು ಪರಮಾತ್ಮನಲ್ಲಿ ಕೂಡುತ್ತದೆ. ಹೀಗೆ ಹಿಂದಿನ ಪಾದದಲ್ಲಿ ಬಂದಿರುವ ಅಧಿಕರಣದಿಂದ ಸಂಗತಿಯನ್ನು ಹೇಳಬಹುದು.

**प्रकाशः** – ''सुषुप्त्युत्क्रान्त्योः'' इत्यत्र जीवमात्रे प्रसिद्धस्य स्वप्नद्रष्टृत्वस्य समन्वयः, ''पत्यादि'' इत्यत्र जीवोत्तमे चतुर्मुखे स्वतोवाऽजशब्दसाहित्येन वा प्रसिद्धस्य ब्राह्मणशब्दस्य, इह तु ततोऽप्युत्तमश्रीतत्ववाचितया प्रसिद्धाव्यक्तशब्दस्य स उच्यत इति वा

ಅಥವಾ ಮತ್ತೊಂದು ಬಗೆಯಲ್ಲಿ ಅಧಿಕರಣಸಂಗತಿಯನ್ನು ಹೇಳಬಹುದು. ''ಸುಷುಪ್ತ್ಯುತ್ ಕ್ರಾಂತ್ಯೋರ್ಭೇದೇನ'' ಎಂಬ ಸೂತ್ರದಲ್ಲಿ ''ಸ್ವಪ್ನದ್ರಷ್ಟೃತ್ವ'' ಎಂಬ ಧರ್ಮವನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದ್ದಾರೆ. ''ಸ್ವಪ್ನದ್ರಷ್ಟೃತ್ವ''ವು ಜೀವನಲ್ಲಷ್ಟೇ ಲೋಕಪ್ರಸಿದ್ಧವಾಗಿದೆ. ಆದರೂ ಬೇರೆ ಪ್ರವೃತ್ತಿನಿಮಿತ್ತದಿಂದ ಪರಮಾತ್ಮನಲ್ಲಿಯೂ ಬರುತ್ತದೆ. ''ಪತ್ಯಾದಿಶಬ್ದೇಭ್ಯಃ'' ಎಂಬ ಸೂತ್ರದಲ್ಲಿ ಬ್ರಾಹ್ಮಣ ಶಬ್ದವನ್ನು ಪರಮಾತ್ಮನಲ್ಲಿ ಸಮನ್ವಯಗೊಳಿಸಿದ್ದಾರೆ. ಶ್ರುತಿಯಲ್ಲಿ 'ಅಜ' ಶಬ್ದದ ಜೊತೆಗಿರುವ ಬ್ರಾಹ್ಮಣ ಶಬ್ದವು ಜೀವೋತ್ತಮನಾದ ಚತುರ್ಮುಖಬ್ರಹ್ಮನಲ್ಲಿಯೇ ಉಪಪನ್ನವಾಗುವುದು. ಆದರೂ ಸಹ ಪ್ರವೃತ್ತಿನಿಮಿತ್ಯಂತರದಿಂದ ಪರಮಾತ್ಮನಲ್ಲಿ ಬ್ರಾಹ್ಮಣ ಶಬ್ದದ ಸಮನ್ವಯವನ್ನು ಮಾಡಿದ್ದಾರೆ. ಈ ಅಧಿಕರಣದಲ್ಲಾದರೂ ಚತುರ್ಮುಖನಿಗಿಂತ ಉತ್ತಮವಾದ ಶ್ರೀತತ್ವವಾಚಿಯಾದ ಅವ್ಯಕ್ತಶಬ್ದದ ಸಮನ್ವಯವನ್ನು ಮಾಡುತ್ತಿದ್ದಾರೆ. ಹೀಗೆ ಮೊದಲು ಜೀವನಲ್ಲಿ ಪ್ರಸಿದ್ಧವಾದ ಸಮನ್ವಯ, ಅನಂತರ ಜೀವನಿಗಿಂತ ಉತ್ತಮನಾದ ಚತುರ್ಮುಖನಲ್ಲಿ ಪ್ರಸಿದ್ಧವಾದ ಬ್ರಾಹ್ಮಣಶಬ್ದದ ಸಮನ್ವಯ, ಅನಂತರ ಚತುರ್ಮುಖನಿಗಿಂತಲೂ ಉತ್ತಮವಾದ ಶ್ರೀತತ್ವದಲ್ಲಿ ಪ್ರಸಿದ್ಧವಾದ ಅವ್ಯಕ್ತ ಶಬ್ದದ ಸಮನ್ವಯ. ಹೀಗೆ ತಾರತಮ್ಯಾನುಸಾರವಾದ ಶಬ್ದಗಳ ಸಮನ್ವಯವು ಅತ್ಯಂತ ಸಂಗತವಾಗಿದೆ. ಆದ್ದರಿಂದ ಹಿಂದಿನ ಅಧಿಕರಣಗಳಿಂದ ಈ ಅಧಿಕರಣಕ್ಕೆ ಸಂಗತಿಯು ಅತ್ಯಂತ ಸ್ಪಷ್ಟ.

**प्रकाशः** – ''अव्यक्तात्'' इति पञ्चम्यन्तादिपदवाच्यत्वे प्रागुक्तसर्वाधिपतित्वादि-विरोधापत्तेरिति पूर्वपक्षोत्थानादित्यादिरूपाया वा सङ्गतेस्सम्भवात्तदुक्तिस्स्यादेवेति विषयसंशयटीकां व्यनक्ति – अत्रेति ।।

ಅಥವಾ ಮೂರನೆಯ ಬಗೆಯಲ್ಲಿ ಈ ಅಧಿಕರಣಕ್ಕಿರುವ ಅವಾಂತರಸಂಗತಿಯನ್ನು ತಿಳಿಯಬೇಕು - ಹಿಂದಿನ ಪಾದದಲ್ಲಿರುವ ಅಧಿಕರಣದಲ್ಲಿ ''ಸರ್ವಾಧಿಪತಿತ್ವ'' ಎಂಬ ಧರ್ಮವನ್ನು ಪರಮಾತ್ಮನಲ್ಲಿ ಸಮನ್ವಯಗೊಳಿಸಿದೆ. ಇದರ ಮೇಲೆ ಪುನಃ ಆಕ್ಷೇಪವು ಬರುತ್ತದೆ. - ''ಅವ್ಯಕ್ತಾತ್ ಪುರುಷಃ ಪರಃ'' ''ಅವ್ಯಕ್ತತತ್ವಕ್ಕಿಂತ ಪುರುಷನು ಶ್ರೇಷ್ಠನು'' ಎಂಬ ಶ್ರುತಿಯಲ್ಲಿ ಅವ್ಯಕ್ತ ಶಬ್ದವು ಪಂಚಮ್ಯಂತವಾಗಿ ಕೇಳಿಸುತ್ತಿದೆ. ಸರ್ವಶಬ್ದವಾಚ್ಯನಾದ ವಿಷ್ಣುವು ಈ ಅವ್ಯಕ್ತ ಶಬ್ದದಿಂದಲೂ ವಾಚ್ಯನಾದಲ್ಲಿ ಹಿಂದೆ ಸಮರ್ಥಿಸಿದ ಸರ್ವಾಧಿಪತಿತ್ವವು ಕೂಡುವುದಿಲ್ಲ. ಏಕೆಂದರೆ ಪಂಚಮೀ ವಿಭಕ್ತಿಯು ಶಬ್ದಪ್ರತಿಪಾದ್ಯವಾದ ವಿಷಯದಲ್ಲಿ ಅವರತ್ವವನ್ನು ಹೇಳುತ್ತದೆ. ಇಂತಹ ಪಂಚಮ್ಯಂತವಾದ ಅವ್ಯಕ್ತ ಶಬ್ದದಿಂದ ವಿಷ್ಣುವು ವಾಚ್ಯನಾದಲ್ಲಿ ಹಿಂದಿನ

ಅಧಿಕರಣದಲ್ಲಿ ಹೇಳಿದ ಸರ್ವಾಧಿಪತಿತ್ವಕ್ಕೆ ವಿರೋಧ ಬರುತ್ತದೆ. ಈ ರೀತಿಯಾದ ಆಕ್ಷೇಪದ ಪರಿಹಾರಕ್ಕೋಸ್ಕರ ಈ ಅಧಿಕರಣವು ಹೊರಟಿದೆ. ಹೀಗೆ ಹಿಂದಿನ ಪಾದದಲ್ಲಿರುವ ಅಧಿಕರಣಗಳಿಂದ ಬಹುವಿಧದಲ್ಲಿ ಸಂಗತಿಗಳನ್ನು ಹೇಳಬಹುದು. ಇದು ಸ್ಪಷ್ಟವಾದ್ದರಿಂದ ಗ್ರಂಥಕಾರರು ಸಂಗತಿಯ ವಿಷಯದಲ್ಲಿ ಮೌನವಹಿಸಿ ವಿಷಯ ಮತ್ತು ಸಂಶಯಗಳ ಬಗ್ಗೆ ಇರುವ ಟೀಕೆಯನ್ನು "ಅತ್ರ" ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – अत्रादिपदप्रयोगस्य प्रागुक्तविषयतावच्छेदकाक्रान्तमात्रपरत्वान्नाति-प्रसङ्गः ।

"ಕಿಂ ಪ್ರಧಾನಜೀವಾದಿಃ ಕಿಂ ವಾ ವಿಷ್ಣುಃ?" ಎಂಬಲ್ಲಿ ಆದಿಪದವನ್ನು ಪ್ರಯೋಗಿಸಿದ್ದಾರೆ. ಆದಿಪದಗ್ರಾಹ್ಯತಾವಚ್ಛೇದಕವಾದದ್ದು ಯಾವುದು ಎಂದು ತಿಳಿಯುವುದಿಲ್ಲ ಘಟಪಟಾದಿಗಳನ್ನು ಇಟ್ಟುಕೊಂಡರೆ ಅತಿಪ್ರಸಂಗವು ಬರುತ್ತದಲ್ಲವೇ? ಎಂಬ ಪ್ರಶ್ನೆ ಬಂದರೆ. ಪ್ರಾಗುಕ್ತವಿಷಯವತಾವಚ್ಛೇದಕ-ವಾದುದನ್ನೇ ಆದಿಪದದಿಂದ ಸ್ವೀಕರಿಸಬೇಕು. ಹಿಂದೆ ಪ್ರಸಕ್ತವಾಗಿರುವ ಚತುರ್ಮುಖ ಮೊದಲಾದವರನ್ನು ಇಟ್ಟುಕೊಂಡಾಗ ಅತಿಪ್ರಸಕ್ತಿಗೆ ಅವಕಾಶವಿಲ್ಲ.

**प्रकाशः** – काठके तृतीयेऽध्याये "अव्यक्तात् पुरुषः परः" इत्यव्यक्तशब्दः "अदुःखमितरत्सर्वं जीवा एव तु दुःखिनः" इति श्रुत्यन्तरे दुःखिशब्दः "कार्यकारणबद्धौ तौ" इति माण्डूके बद्धशब्दश्श्रुतः । अत्रान्यस्यामुख्यवृत्त्या प्रतिपाद्यत्वमुपेत्य मुख्यप्रतिपाद्यत्वस्यैव निरासान्मुख्यार्थ इत्युक्तम् । अन्यथा तारतम्याद्यसिद्धिप्रसङ्गात् । एतेन टीकायां "अव्यक्तजीवादिपदवाच्यम्" इति वाच्यपदप्रयोगतात्पर्यं विवृतम् ।

ಗ್ರಂಥದಲ್ಲಿ "ಅತ್ರ ಅವ್ಯಕ್ತ-ದುಃಖೀ-ಬದ್ಧ-ಅವರಾದಿಶಬ್ದಮುಖ್ಯಾರ್ಥಃ" ಎಂಬಲ್ಲಿ 'ಮುಖ್ಯಾರ್ಥ'ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದರ ಸ್ವಾರಸ್ಯ ಹೀಗಿದೆ - "ಅವ್ಯಕ್ತಾತ್ ಪುರುಷಃ ಪರಃ" (ಕಾಠಕ -೩ನೇ ಅಧ್ಯಾಯ) - ಇಲ್ಲಿರುವ ಅವ್ಯಕ್ತ ಶಬ್ದವು ಮತ್ತು "ಅದುಃಖಮಿತರತ್ ಸರ್ವಂ ಜೀವಾ ಏವತು ದುಃಖಿನಃ" ಎಂಬ ಮತ್ತೊಂದು ಶ್ರುತಿಯಲ್ಲಿ ದುಃಖಿಶಬ್ದವು ಹಾಗೆಯೇ ಮಾಂಡೂಕೋಪನಿಷತ್ತಿನ "ಕಾರ್ಯಕಾರಣಬದ್ಧೌ ತೌ" ಎಂಬ ವಾಕ್ಯದಲ್ಲಿ ಬದ್ಧ ಶಬ್ದವು ಕೇಳಿಸುತ್ತಿದೆ. ಈ ಅವ್ಯಕ್ತಾದಿ ಶಬ್ದಗಳಿಂದ ಮುಖ್ಯಪ್ರತಿಪಾದ್ಯನಾದವನು ಯಾರೆಂಬುದನ್ನಷ್ಟೇ, ಈ ಅಧಿಕರಣದಲ್ಲಿ ವಿಮರ್ಶಿಸಲಾಗಿದೆ. 'ಅಮುಖ್ಯವೃತ್ತಿಯಿಂದ ಅವ್ಯಕ್ತಶಬ್ದವು ಪ್ರಕೃತಿಪರವಾಗಿದೆ. 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳು ಜೀವಪರವಾಗಿವೆ.' ಎಂಬ ವಿಷಯದಲ್ಲಿ ವಿಪ್ರತಿಪತ್ತಿ ಇಲ್ಲ. ಸಿದ್ಧಾಂತಿಗಳು ಇದನ್ನು ಒಪ್ಪಿಕೊಂಡು ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದವನು ಯಾರು? ಎಂದಷ್ಟೇ ವಿಮರ್ಶಿಸಿದ್ದಾರೆ. ಮುಂದೆ ಸಿದ್ಧಾಂತದಲ್ಲಿ ಮುಖ್ಯಪ್ರತಿಪಾದ್ಯತ್ವವನ್ನೇ ಪ್ರಧಾನಾದಿಗಳಲ್ಲಿ ನಿರಾಕರಣೆ ಮಾಡುತ್ತಾರೆ. ಈ ಸೂಕ್ಷ್ಮತೆಯನ್ನು ತಿಳಿಸುವ ಅಭಿಪ್ರಾಯದಿಂದ ಗ್ರಂಥಕಾರರು. "ಮುಖ್ಯಾರ್ಥಃ" ಎಂಬ ಪದಪ್ರಯೋಗವನ್ನು ಮಾಡಿದರು. ಒಂದು ವೇಳೆ ಅಮುಖ್ಯವೃತ್ತಿಪ್ರತಿಪಾದ್ಯತ್ವವನ್ನು ಪ್ರಧಾನಾದಿಗಳಲ್ಲಿ

ಒಪ್ಪದಿದ್ದರೆ ತಾರತಮ್ಯವನ್ನು ಹೇಳಲು ಹೇಗೆ ಸಾಧ್ಯವಾಗುತ್ತಿತ್ತು. ಮಹತ್ತತ್ವಕ್ಕಿಂತ ಅವ್ಯಕ್ತವು ಶ್ರೇಷ್ಠ ಅವ್ಯಕ್ತಕ್ಕಿಂತ ಪುರುಷನಾದ ಶ್ರೀಹರಿಯು ಶ್ರೇಷ್ಠ ಎಂಬ ತಾರತಮ್ಯವು ಸಿದ್ಧವಾಗಬೇಕಾದರೆ ಅವ್ಯಕ್ತಾದಿ ಶಬ್ದಗಳಿಂದ ಅವ್ಯಕ್ತಾದಿಗಳಲ್ಲಿ ಶಬ್ದಪ್ರತಿಪಾದ್ಯತ್ವವನ್ನು ಅಂಗೀಕರಿಸಲೇಬೇಕು. ಇದರಿಂದ ಟೀಕೆಯ ಮಾತನ್ನು ವಿವರಿಸಿದಂತಾಗುತ್ತದೆ. - "ಅವ್ಯಕ್ತಜೀವಾದಿಪದವಾಚ್ಯಮ್" ಎಂಬಲ್ಲಿ 'ವಾಚ್ಯ' ಎಂಬ ಪದವನ್ನು ಪ್ರಯೋಗಿಸಲು ಟೀಕಾಕಾರರಿಗಿರುವ ತಾತ್ಪರ್ಯವು ಸ್ಪಷ್ಟವಾಗುತ್ತದೆ. ಅಮುಖ್ಯವೃತ್ತಿಯನ್ನು ಪ್ರಧಾನಾದಿಗಳಲ್ಲಿ ಒಪ್ಪಿ ಮುಖ್ಯವೃತ್ತಿಯಲ್ಲಷ್ಟೇ ವಿವಾದವೆಂಬುದು ಟೀಕಾಕಾರರ ಅಭಿಪ್ರಾಯ.

**प्रकाशः** – आद्यसूत्राभिमतप्रतिज्ञांशसूचितचिन्तामुक्त्वा "तदधीनत्वात्" इति सूत्रांशसूचितं चिन्तात्रयमाह – **तदर्थमव्यक्तादितीति** ।।

ಗ್ರಂಥದಲ್ಲಿ ನಾಲ್ಕು ಹಂತದ ಸಂಶಯಕೋಟಿಗಳನ್ನು ಪ್ರದರ್ಶಿಸಿದ್ದಾರೆ. ಮೊದಲಿನ ಸಂಶಯಕೋಟಿಯು "ಆನುಮಾನಿಕಮಪ್ಯೇಕೇಷಾಂ" ಇತ್ಯಾದಿ ಸೂತ್ರದಲ್ಲಿರುವ ಪ್ರತಿಜ್ಞಾಂಶದಿಂದ ಸೂಚಿತವಾಗಿದೆ. ಅನಂತರದ ಮೂರು ಬಗೆಯ ಸಂಶಯಕೋಟಿಗಳು ಎರಡನೆಯ ಸೂತ್ರದ "ತದಧೀನತ್ವಾತ್" ಎಂಬ ಅಂಶದಿಂದ ಸೂಚಿತವಾಗಿದೆ.

**प्रकाशः** – अत्रान्तिमचिन्ताप्रदर्शनं प्रधानाद्यपेक्षया हरावेवाव्यक्तादिशब्द-वृत्तिर्मुख्येति सूचनाय । यथोक्तमनुव्याख्याने "स्वातन्त्र्यं तत्र मुख्यं स्यात्" इति । यदाऽऽश्रयत्वमेव मुख्यं तदा तस्य "निरनिष्टो निरवद्यः" इत्यादिना ब्रह्मण्ययोगात्प्रधानादिरेव । द्वितीये तु ब्रह्मण्यपि सम्भवाद्विष्णुरेवेति वक्ष्यमाणपूर्वोत्तरपक्षपर्यालोचनया स्पष्टः फलफलिभाव इति भावः ।

"ತತ್ರಾಪಿ ಕಿಮಾಶ್ರಯತ್ವಂ ಮುಖ್ಯನಿಮಿತ್ತಮುತ ಸ್ವಾತಂತ್ರ್ಯಮೇವ" ಎಂಬ ಕೊನೆಯ ಸಂಶಯವನ್ನು ತೋರಿಸಲು ಒಂದು ಸ್ವಾರಸ್ಯವಿದೆ. ಅವ್ಯಕ್ತಾದಿ ಶಬ್ದಗಳು ಪ್ರಧಾನಾದಿಗಳಿಗಿಂತ ಶ್ರೀಹರಿಯಲ್ಲಿಯೇ ಮುಖ್ಯವಾಗಿವೆ ಎಂದು. ಇದನ್ನೇ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ - "ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್" "ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ ವಿಷ್ಣುವಿನಲ್ಲಿಯೇ ದುಃಖ್ಯಾದಿಶಬ್ದಗಳು ಮುಖ್ಯವಾಗಿ ಇವೆ." ಶ್ರೀಮದಾಚಾರ್ಯರ ಈ ಮಾತನ್ನು ಕೊನೆಯ ಸಂಶಯಕೋಟಿಯಿಂದ ವ್ಯಾಖ್ಯಾನಿಸಿದಂತಾಯಿತು.

ಪೂರ್ವಪಕ್ಷದ ಮತ್ತು ಸಿದ್ಧಾಂತದ ಫಲಫಲಿಭಾವವನ್ನು ಹೀಗೆ ತಿಳಿಯಬೇಕು - ದುಃಖಿತ್ವಾದಿಗಳನ್ನು ಕುರಿತು ಆಶ್ರಯತ್ವವು ಮುಖ್ಯಕಾರಣವೆಂದು ಹೇಳಿದರೆ. ಪರಮಾತ್ಮನಲ್ಲಿ ಬರುವುದಿಲ್ಲ. ಏಕೆಂದರೆ 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. ಆವಾಗ ಪ್ರಧಾನಾದಿಗಳೇ ಅವ್ಯಕ್ತಾದಿ ಶಬ್ದವಾಚ್ಯಗಳಾಗುತ್ತವೆಂದು ಪೂರ್ವಪಕ್ಷದ ಫಲಫಲಿಭಾವ.

ಆಶ್ರಯತ್ವವು ಮುಖ್ಯಕಾರಣವಾಗದೇ ಸ್ವಾತಂತ್ರ್ಯವೇ ಮುಖ್ಯಕಾರಣವಾದಲ್ಲಿ ವಿಷ್ಣುವಿನಲ್ಲೂ ದುಃಖ್ಯಾದಿಶಬ್ದಗಳು ಉಪಪನ್ನವಾಗುತ್ತವೆಂಬ ಸಿದ್ಧಾಂತದ ಫಲಫಲಿಭಾವವನ್ನು ಸ್ಪಷ್ಟವಾಗಿ ತಿಳಿಯಬೇಕು.

ಆನುಮಾನಿಕಾಧಿಕರಣ (೧-೪-೧)

ಅಧಿಕರಣದಲ್ಲಿ ಹೇಳಿದ ಸರ್ವಾಧಿಪತಿತ್ವಕ್ಕೆ ವಿರೋಧ ಬರುತ್ತದೆ. ಈ ರೀತಿಯಾದ ಆಕ್ಷೇಪದ ಪರಿಹಾರಕ್ಕೋಸ್ಕರ ಈ ಅಧಿಕರಣವು ಹೊರಟಿದೆ. ಹೀಗೆ ಹಿಂದಿನ ಪಾದದಲ್ಲಿರುವ ಅಧಿಕರಣಗಳಿಂದ ಬಹುವಿಧದಲ್ಲಿ ಸಂಗತಿಗಳನ್ನು ಹೇಳಬಹುದು. ಇದು ಸ್ಪಷ್ಟವಾದ್ದರಿಂದ ಗ್ರಂಥಕಾರರು ಸಂಗತಿಯ ವಿಷಯದಲ್ಲಿ ಮೌನವಹಿಸಿ ವಿಷಯ ಮತ್ತು ಸಂಶಯಗಳ ಬಗ್ಗೆ ಇರುವ ಟೀಕೆಯನ್ನು "ಅತ್ರ" ಇತ್ಯಾದಿ ವಾಕ್ಯಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः –** अत्रादिपदप्रयोगस्य प्रागुक्तविषयतावच्छेदकाक्रान्तमात्रपरत्वान्नातिप्रसङ्गः ।

"ಕಿಂ ಪ್ರಧಾನಜೀವಾದಿಃ ಕಿಂ ವಾ ವಿಷ್ಣುಃ?" ಎಂಬಲ್ಲಿ ಆದಿಪದವನ್ನು ಪ್ರಯೋಗಿಸಿದ್ದಾರೆ. ಆದಿಪದಗ್ರಾಹ್ಯತಾವಚ್ಛೇದಕವಾದದ್ದು ಯಾವುದು ಎಂದು ತಿಳಿಯುವುದಿಲ್ಲ ಘಟಪಟಾದಿಗಳನ್ನು ಇಟ್ಟುಕೊಂಡರೆ ಅತಿಪ್ರಸಂಗವು ಬರುತ್ತದಲ್ಲವೇ? ಎಂಬ ಪ್ರಶ್ನೆ ಬಂದರೆ. ಪ್ರಾಗುಕ್ತವಿಷಯವತಾವಚ್ಛೇದಕವಾದುದನ್ನೇ ಆದಿಪದದಿಂದ ಸ್ವೀಕರಿಸಬೇಕು. ಹಿಂದೆ ಪ್ರಸಕ್ತವಾಗಿರುವ ಚತುರ್ಮುಖ ಮೊದಲಾದವರನ್ನು ಇಟ್ಟುಕೊಂಡಾಗ ಅತಿಪ್ರಸಕ್ತಿಗೆ ಅವಕಾಶವಿಲ್ಲ.

**प्रकाशः –** काठके तृतीयेऽध्याये "अव्यक्तात् पुरुषः परः" इत्यव्यक्तशब्दः "अदुःखमितरत्सर्वं जीवा एव तु दुःखिनः" इति श्रुत्यन्तरे दुःखिशब्दः "कार्यकारणबद्धौ तौ" इति माण्डूके बद्धशब्दश्श्रुतः । अत्रान्यस्यामुख्यवृत्त्या प्रतिपाद्यत्वमुपेत्य मुख्यप्रतिपाद्यत्वस्यैव निरासान्मुख्यार्थ इत्युक्तम् । अन्यथा तारतम्याद्यसिद्धिप्रसङ्गात् । एतेन टीकायां "अव्यक्तजीवादिपदवाच्यम्" इति वाच्यपदप्रयोगतात्पर्यं विवृतम् ।

ಗ್ರಂಥದಲ್ಲಿ "ಅತ್ರ ಅವ್ಯಕ್ತ-ದುಃಖೀ-ಬದ್ಧ-ಅವರಾದಿಶಬ್ದಮುಖ್ಯಾರ್ಥಃ" ಎಂಬಲ್ಲಿ 'ಮುಖ್ಯಾರ್ಥ'ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಇದರ ಸ್ವಾರಸ್ಯ ಹೀಗಿದೆ - "ಅವ್ಯಕ್ತಾತ್ ಪುರುಷಃ ಪರಃ" (ಕಾಠಕ -೩ನೇ ಅಧ್ಯಾಯ) - ಇಲ್ಲಿರುವ ಅವ್ಯಕ್ತ ಶಬ್ದವು ಮತ್ತು "ಅದುಃಖಮಿತರತ್ ಸರ್ವಂ ಜೀವಾ ಏವತು ದುಃಖಿನಃ" ಎಂಬ ಮತ್ತೊಂದು ಶ್ರುತಿಯಲ್ಲಿ ದುಃಖಿಶಬ್ದವು ಹಾಗೆಯೇ ಮಾಂಡೂಕೋಪನಿಷತ್ತಿನ "ಕಾರ್ಯಕಾರಣಬದ್ಧೌ ತೌ" ಎಂಬ ವಾಕ್ಯದಲ್ಲಿ ಬದ್ಧ ಶಬ್ದವು ಕೇಳಿಸುತ್ತಿದೆ. ಈ ಅವ್ಯಕ್ತಾದಿ ಶಬ್ದಗಳಿಂದ ಮುಖ್ಯಪ್ರತಿಪಾದ್ಯನಾದವನು ಯಾರೆಂಬುದನ್ನಷ್ಟೇ, ಈ ಅಧಿಕರಣದಲ್ಲಿ ವಿಮರ್ಶಿಸಲಾಗಿದೆ. 'ಅಮುಖ್ಯವೃತ್ತಿಯಿಂದ ಅವ್ಯಕ್ತಶಬ್ದವು ಪ್ರಕೃತಿಪರವಾಗಿದೆ. 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳು ಜೀವಪರವಾಗಿವೆ.' ಎಂಬ ವಿಷಯದಲ್ಲಿ ವಿಪ್ರತಿಪತ್ತಿ ಇಲ್ಲ. ಸಿದ್ಧಾಂತಿಗಳು ಇದನ್ನು ಒಪ್ಪಿಕೊಂಡು ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದವನು ಯಾರು? ಎಂದಷ್ಟೇ ವಿಮರ್ಶಿಸಿದ್ದಾರೆ. ಮುಂದೆ ಸಿದ್ಧಾಂತದಲ್ಲಿ ಮುಖ್ಯಪ್ರತಿಪಾದ್ಯತ್ವವನ್ನೇ ಪ್ರಧಾನಾದಿಗಳಲ್ಲಿ ನಿರಾಕರಣೆ ಮಾಡುತ್ತಾರೆ. ಈ ಸೂಕ್ಷ್ಮತೆಯನ್ನು ತಿಳಿಸುವ ಅಭಿಪ್ರಾಯದಿಂದ ಗ್ರಂಥಕಾರರು. "ಮುಖ್ಯಾರ್ಥಃ" ಎಂಬ ಪದಪ್ರಯೋಗವನ್ನು ಮಾಡಿದರು. ಒಂದು ವೇಳೆ ಅಮುಖ್ಯವೃತ್ತಿಪ್ರತಿಪಾದ್ಯತ್ವವನ್ನು ಪ್ರಧಾನಾದಿಗಳಲ್ಲಿ

ಒಪ್ಪದಿದ್ದರೆ ತಾರತಮ್ಯವನ್ನು ಹೇಳಲು ಹೇಗೆ ಸಾಧ್ಯವಾಗುತ್ತಿತ್ತು. ಮಹತ್ತತ್ವಕ್ಕಿಂತ ಅವ್ಯಕ್ತವು ಶ್ರೇಷ್ಠ ಅವ್ಯಕ್ತಕ್ಕಿಂತ ಪುರುಷನಾದ ಶ್ರೀಹರಿಯು ಶ್ರೇಷ್ಠ ಎಂಬ ತಾರತಮ್ಯವು ಸಿದ್ಧವಾಗಬೇಕಾದರೆ ಅವ್ಯಕ್ತಾದಿ ಶಬ್ದಗಳಿಂದ ಅವ್ಯಕ್ತಾದಿಗಳಲ್ಲಿ ಶಬ್ದಪ್ರತಿಪಾದ್ಯತ್ವವನ್ನು ಅಂಗೀಕರಿಸಲೇಬೇಕು. ಇದರಿಂದ ಟೀಕೆಯ ಮಾತನ್ನು ವಿವರಿಸಿದಂತಾಗುತ್ತದೆ. - "ಅವ್ಯಕ್ತಜೀವಾದಿಪದವಾಚ್ಯಮ್" ಎಂಬಲ್ಲಿ 'ವಾಚ್ಯ' ಎಂಬ ಪದವನ್ನು ಪ್ರಯೋಗಿಸಲು ಟೀಕಾಕಾರರಿಗಿರುವ ತಾತ್ಪರ್ಯವು ಸ್ಪಷ್ಟವಾಗುತ್ತದೆ. ಅಮುಖ್ಯವೃತ್ತಿಯನ್ನು ಪ್ರಧಾನಾದಿಗಳಲ್ಲಿ ಒಪ್ಪಿ ಮುಖ್ಯವೃತ್ತಿಯಲ್ಲಷ್ಟೇ ವಿವಾದವೆಂಬುದು ಟೀಕಾಕಾರರ ಅಭಿಪ್ರಾಯ.

**प्रकाशः** – आद्यसूत्राभिमतप्रतिज्ञांशसूचितचिन्तामुक्त्वा "तदधीनत्वात्" इति सूत्रांशसूचितं चिन्तात्रयमाह – **तदर्थमव्यक्तादितीति** ।।

ಗ್ರಂಥದಲ್ಲಿ ನಾಲ್ಕು ಹಂತದ ಸಂಶಯಕೋಟಿಗಳನ್ನು ಪ್ರದರ್ಶಿಸಿದ್ದಾರೆ. ಮೊದಲಿನ ಸಂಶಯಕೋಟಿಯು "ಆನುಮಾನಿಕಮಪ್ಯೇಕೇಷಾಂ" ಇತ್ಯಾದಿ ಸೂತ್ರದಲ್ಲಿರುವ ಪ್ರತಿಜ್ಞಾಂಶದಿಂದ ಸೂಚಿತವಾಗಿದೆ. ಅನಂತರದ ಮೂರು ಬಗೆಯ ಸಂಶಯಕೋಟಿಗಳು ಎರಡನೆಯ ಸೂತ್ರದ "ತದಧೀನತ್ವಾತ್" ಎಂಬ ಅಂಶದಿಂದ ಸೂಚಿತವಾಗಿದೆ.

**प्रकाशः** – अत्रान्तिमचिन्ताप्रदर्शनं प्रधानाद्यपेक्षया हरावेवाव्यक्तादिशब्द-वृत्तिर्मुख्येति सूचनाय । यथोक्तमनुव्याख्याने "स्वातन्त्र्यं तत्र मुख्यं स्यात्" इति । यदाऽऽश्रयत्वमेव मुख्यं तदा तस्य "निरनिष्टो निरवद्यः" इत्यादिना ब्रह्मण्ययोगात्प्रधानादिरेव । द्वितीये तु ब्रह्मण्यपि सम्भवाद्विष्णुरेवेति वक्ष्यमाणपूर्वोत्तरपक्षपर्यालोचनया स्पष्टः फलफलिभाव इति भावः ।

"ತತ್ರಾಪಿ ಕಿಮಾಶ್ರಯತ್ವಂ ಮುಖ್ಯನಿಮಿತ್ತಮುತ ಸ್ವಾತಂತ್ರ್ಯಮೇವ" ಎಂಬ ಕೊನೆಯ ಸಂಶಯವನ್ನು ತೋರಿಸಲು ಒಂದು ಸ್ವಾರಸ್ಯವಿದೆ. ಅವ್ಯಕ್ತಾದಿ ಶಬ್ದಗಳು ಪ್ರಧಾನಾದಿಗಳಿಗಿಂತ ಶ್ರೀಹರಿಯಲ್ಲಿಯೇ ಮುಖ್ಯವಾಗಿವೆ ಎಂದು. ಇದನ್ನೇ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ - "ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್" "ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ ವಿಷ್ಣುವಿನಲ್ಲಿಯೇ ದುಃಖ್ಯಾದಿಶಬ್ದಗಳು ಮುಖ್ಯವಾಗಿ ಇವೆ." ಶ್ರೀಮದಾಚಾರ್ಯರ ಈ ಮಾತನ್ನು ಕೊನೆಯ ಸಂಶಯಕೋಟಿಯಿಂದ ವ್ಯಾಖ್ಯಾನಿಸಿದಂತಾಯಿತು.

ಪೂರ್ವಪಕ್ಷದ ಮತ್ತು ಸಿದ್ಧಾಂತದ ಫಲಫಲಿಭಾವವನ್ನು ಹೀಗೆ ತಿಳಿಯಬೇಕು - ದುಃಖಿತ್ವಾದಿಗಳನ್ನು ಕುರಿತು ಆಶ್ರಯತ್ವವು ಮುಖ್ಯಕಾರಣವೆಂದು ಹೇಳಿದರೆ. ಪರಮಾತ್ಮನಲ್ಲಿ ಬರುವುದಿಲ್ಲ. ಏಕೆಂದರೆ 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಯ ವಿರೋಧ ಬರುತ್ತದೆ. ಆವಾಗ ಪ್ರಧಾನಾದಿಗಳೇ ಅವ್ಯಕ್ತಾದಿ ಶಬ್ದವಾಚ್ಯಗಳಾಗುತ್ತವೆಂದು ಪೂರ್ವಪಕ್ಷದ ಫಲಫಲಿಭಾವ.

ಆಶ್ರಯತ್ವವು ಮುಖ್ಯಕಾರಣವಾಗದೇ ಸ್ವಾತಂತ್ರ್ಯವೇ ಮುಖ್ಯಕಾರಣವಾದಲ್ಲಿ ವಿಷ್ಣುವಿನಲ್ಲೂ ದುಃಖ್ಯಾದಿಶಬ್ದಗಳು ಉಪಪನ್ನವಾಗುತ್ತವೆಂಬ ಸಿದ್ಧಾಂತದ ಫಲಫಲಿಭಾವವನ್ನು ಸ್ಪಷ್ಟವಾಗಿ ತಿಳಿಯಬೇಕು.

ಆನುಮಾನಿಕಾಧಿಕರಣ (೧-೪-೧)

**प्रकाशः** – अत्र विष्णुरिति चिन्तानन्तरं तदर्थं विष्णुश्चेत्तत्र श्रौतस्मार्तप्रयोगप्रवृत्तिनिमित्तादिकं नास्त्युतास्तीति चिन्ता तदर्थं प्रयोगप्रवृत्ति-निमित्तज्ञेयत्वोक्त्यादिबलाद्धरेर्मुख्यार्थत्वे प्रधानादावव्यक्तादिशब्दव्यवहारो न युक्त उत युक्त इत्यपि चिन्तापरंपरा प्रथमद्वितीयचतुर्थादिसूत्रसूचिता वक्तव्येति भाति यद्यपि ।

ಪ್ರಶ್ನೆ - ಗ್ರಂಥಕಾರರು ನಾಲ್ಕು ಹಂತದ ಸಂಶಯ ಕೋಟಿಗಳನ್ನು ತೋರಿಸಿದ್ದಾರೆ. ಇವುಗಳ ಮಧ್ಯದಲ್ಲಿ ಇನ್ನೂ ಎರಡು ಬಗೆಯ ಸಂಶಯಕೋಟಿಗಳನ್ನು ತೋರಿಸಬೇಕಿತ್ತು. ಪ್ರಥಮ ಸಂಶಯಕೋಟಿಯ ನಂತರ ಹೇಳಬೇಕಾದ ಎರಡು ಪ್ರಕಾರದ ಸಂಶಯಕೋಟಿಗಳು ಹೀಗಿವೆ - "ತದರ್ಥಂ ವಿಷ್ಣುಶ್ಚೇತ್ತತ್ರ ಶ್ರೌತಸ್ಮಾರ್ತ ಪ್ರಯೋಗ ಪ್ರವೃತ್ತಿನಿಮಿತ್ತಾದಿಕಂ ನಾಸ್ತ್ಯುತಾಸ್ತಿ ಇತಿ ಚಿಂತಾ, ತದರ್ಥಂ ಪ್ರಯೋಗಪ್ರವೃತ್ತಿನಿಮಿತ್ತ-ಜ್ಞೇಯತ್ವೋಕ್ತ್ಯಾದಿಬಲಾದ್ಧರೇರ್ಮುಖ್ಯಾರ್ಥತ್ವೇ ಪ್ರಧಾನಾದಾವವ್ಯಕ್ತಾದಿಶಬ್ದವ್ಯವಹಾರೋ ನ ಯುಕ್ತ ಉತ ಯುಕ್ತಃ?" "ಪ್ರಥಮ ಸಂಶಯಕೋಟಿಯು ನಿಶ್ಚಯವಾಗಬೇಕಾದರೆ ಈ ಸಂಶಯಕೋಟಿಯು ನಿಶ್ಚಯವಾಗಬೇಕು. ವಿಷ್ಣುವು ಮುಖ್ಯಾರ್ಥನಾದರೆ ಶ್ರುತಿ ಹಾಗೂ ಸ್ಮೃತಿಗಳಲ್ಲಿ ಇರುವ ಶಬ್ದಪ್ರಯೋಗದ ಪ್ರವೃತ್ತಿನಿಮಿತ್ತಾದಿಗಳು ವಿಷ್ಣುವಿನಲ್ಲಿ ಇಲ್ಲವೋ? ಅಥವಾ ಇದೆಯೋ? ಎಂಬ ಸಂಶಯ ಪರಿಹಾರವಾಗಬೇಕು. ಈ ಸಂಶಯಕೋಟಿಯು ಪರಿಹಾರವಾಗಬೇಕಾದರೆ ಮುಂದಿನ ಸಂಶಯಕೋಟಿಯು ಪರಿಹಾರವಾಗಬೇಕು. ಶಬ್ದಪ್ರಯೋಗಗಳ ಪ್ರವೃತ್ತಿನಿಮಿತ್ತಗಳನ್ನು ತಿಳಿದುಕೊಳ್ಳಬೇಕು ಎಂಬ ಮಾತಿನಂತೆ ವಿಷ್ಣುವೇ ಶಬ್ದಗಳ ಮುಖ್ಯಾರ್ಥನಾದರೆ ಪ್ರಧಾನಾದಿಗಳಲ್ಲಿ ಅವ್ಯಕ್ತಾದಿ ಶಬ್ದಗಳ ವ್ಯವಹಾರವು ಕೂಡುವುದಿಲ್ಲವೋ? ಅಥವಾ ಕೂಡುತ್ತದೋ?"

ಹೀಗೆ ಎರಡು ಬಗೆಯ ಚಿಂತಾಪ್ರಕಾರವನ್ನು ತೋರಿಸುವುದರಿಂದ ಮೊದಲನೆಯ ಎರಡನೆಯ, ಮತ್ತು ನಾಲ್ಕನೆಯ ಸೂತ್ರದ ಅಂಶವನ್ನು ವ್ಯಾಖ್ಯಾನಿಸಿದಂತಾಗುತ್ತದೆ. ಸೂತ್ರಸೂಚಿತವಾದ ಈ ಚಿಂತಾ ಪರಂಪರೆಗಳನ್ನು ಗ್ರಂಥಕಾರರು ಏಕೆ ತೋರಿಸಿಲ್ಲ?

**प्रकाशः** – तथापि सा स्पष्टेति वा तदधीनत्वसूत्रार्थस्यैवाग्रे पूर्वोत्तरपक्षाभ्यां प्रपञ्चयिष्यमाणत्वेन तदुपयुक्ततया वा श्रौतस्मार्तप्रयोगसूक्ष्मत्वादिरूपप्रवृत्तिनिमित्त ज्ञेयत्वोक्त्यादिसाधकप्रमाणान्यत्र व्यवहारापत्तिरूपबाधकपरिहारैर्हरेरव्यक्तादि-शब्दमुख्यार्थत्वसम्भवेऽपीहाव्यक्तादिति पञ्चम्यन्ताव्यक्तादिशब्दमुख्यार्थो न हरिरिति विशिष्याक्षेपे सति तस्य तदधीनसूत्रेणैव परिहार्यत्वेन तस्य प्राधान्येन तत्प्रपञ्चनस्यैवावश्यं कार्यत्वाट्टीकायां पूर्वपक्षस्य तथैव प्रवृत्तेस्तदधीनत्वसूत्रोपयुक्तैव चिन्तापरम्परोक्तेति भावः । केचित्तु द्वितीयचिन्तयैव ''सूक्ष्मन्तु'' इति सूत्रार्थोपयुक्ता चिन्ताप्युक्तैवेत्याहुः ।

ಉತ್ತರ - ವಸ್ತುತಸ್ತು ಸೂತ್ರಸೂಚಿತವಾದ ಈ ಚಿಂತೆಗಳನ್ನು ಹೇಳಬೇಕು. ಆದರೂ ಅತ್ಯಂತ ಸ್ಪಷ್ಟವಾಗಿ ತಿಳಿಯುವುದರಿಂದ ಗ್ರಂಥಕಾರರು ಉಲ್ಲೇಖಿಸಿಲ್ಲ.

ಅಥವಾ ''ತದಧೀನತ್ವಾತ್'' ಇತ್ಯಾದಿ ಸೂತ್ರವನ್ನೇ ಪೂರ್ವಪಕ್ಷ ಹಾಗೂ ಸಿದ್ಧಾಂತಗಳ ಮೂಲಕವಾಗಿ ಮುಂದೆ ವಿವರಿಸುತ್ತಾರೆ. ಅದಕ್ಕೆ ಉಪಯುಕ್ತವಾದ ಚಿಂತೆಗಳನ್ನಷ್ಟೇ ಉಲ್ಲೇಖಿಸುವುದು ಶಿಷ್ಯರಿಗೆ ಅನುಕೂಲವಾಗುತ್ತದೆ. ಅವ್ಯಕ್ತಶಬ್ದದ ಪ್ರಯೋಗವು ಪರಮಾತ್ಮನಲ್ಲಿ ಪ್ರಸಿದ್ಧವಾಗಿದೆ. ಮತ್ತು ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಸೂಕ್ಷ್ಮತ್ವವು ನಿರವಧಿಕವಾಗಿ ಇದೆಯೆಂದು ಸೂತ್ರಕಾರರು ಹೇಳಿದ್ದಾರೆ. ಇಂತಹ ಪ್ರವೃತ್ತಿನಿಮಿತ್ತಗಳೆಲ್ಲವೂ ಪರಮಾತ್ಮನಲ್ಲಿ ಮುಖ್ಯವಾಗಿರುತ್ತವೆಂದು ತಿಳಿಯಬೇಕೆನ್ನಲು ಅನೇಕ ಶ್ರುತಿ-ಸ್ಮೃತಿಗಳು ಪ್ರಮಾಣವಾಗಿವೆ. ಹಾಗಾದರೆ ಎಲ್ಲಾ ಶಬ್ದಗಳೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುವುದಾದರೆ ಬೇರೆ ವಸ್ತುಗಳನ್ನು ಪ್ರತಿಪಾದಿಸುವ ಶಬ್ದವೇ ಇಲ್ಲದಂತಾಗುತ್ತದಲ್ಲವೆ? ಎಂಬ ಆಶಂಕೆಗೆ ಅಮುಖ್ಯವೃತ್ತಿಯಿಂದ ಪ್ರಯೋಗಿಸಬೇಕೆಂದು ಉತ್ತರಿಸಿದ್ದಾರೆ. ಇದರಿಂದ ಪರಮಾತ್ಮನಲ್ಲೇ ಎಲ್ಲಾ ಶಬ್ದಗಳು ಪರಮ ಮುಖ್ಯವೃತ್ತಿಯಿಂದ ಪ್ರಸಿದ್ಧವಾಗಿವೆಯೆಂದು ಉತ್ತರಿಸಿದಂತಾಗುತ್ತದೆ. ಆದರೆ ಪ್ರಕೃತ ಪೂರ್ವಪಕ್ಷಿಯ ಆಕ್ಷೇಪ ಬೇರೆಯೇ ಆಗಿದೆ - 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಪಂಚಮೀವಿಭಕ್ತಿಯಿಂದ ತಿಳಿಯಲ್ಪಡುವ ಅವರತ್ವವು ಸರ್ವಥಾ ಪರಮಾತ್ಮನಲ್ಲಿ ಬರುವುದಿಲ್ಲ. ಇಂತಹ ಪಂಚಮ್ಯಂತವಾದ ಅವ್ಯಕ್ತಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲವೆಂಬುದು ಪೂರ್ವಪಕ್ಷಿಯ ಅಭಿಪ್ರಾಯ ಹೊರತು, ಬೇರೆ ಕಡೆಯಿರುವ ಅವ್ಯಕ್ತಶಬ್ದದಿಂದ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲವೆಂಬ ಆಕ್ಷೇಪವನ್ನು ಅವನು ಮಾಡುತ್ತಲೇ ಇಲ್ಲ. ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡಬೇಕೆಂದರೆ ತದಧೀನತ್ವನ್ಯಾಯವನ್ನೇ ಹೇಳಬೇಕು. ಆದ್ದರಿಂದ ಅದಕ್ಕೆ ಉಪಯುಕ್ತವಾದ ಚಿಂತೆಯನ್ನೇ ಇಲ್ಲಿ ತೋರಿಸಿದ್ದಾರೆ.

ಕೆಲವರು ಎರಡನೆಯ ಚಿಂತೆಯನ್ನು ತೋರಿಸಿದ್ದರಿಂದಲೇ 'ಸೂಕ್ಷ್ಮಂತು' ಇತ್ಯಾದಿ ಸೂತ್ರಾರ್ಥಕ್ಕೆ ಉಪಯುಕ್ತವಾದ ಚಿಂತೆಯನ್ನು ಗ್ರಂಥಕಾರರು ತೋರಿಸಿದ್ದಾರೆ ಎಂದು ವ್ಯಾಖ್ಯಾನಿಸುತ್ತಾರೆ.

**गुरुराजीयम्** – ननु दुःख्यादिशब्दसमन्वयोक्तिर्व्यर्था । तथा हि । साकिं स्वरूपेणैव फलत्वाद्वा किं तत्समभिव्याहृतजीवशब्दसमन्वयसिद्ध्यर्थं वा दुःखादि-शब्दगुणप्रकाशापूर्वयोगकल्पनया गुणसिद्ध्यर्थं वा । नाद्य इत्याहुः – **नचेति** ।। न द्वितीय इत्याह – **दुःख्यादिशब्देति** ।। **तृतीयं प्रत्याह** ।। नच दुःख्यादिशब्दानामिति ।। नन्वेवं तदधीनत्वसिद्ध्यर्थं दुःख्यादिशब्दसमन्वयोक्तिरस्त्वित्यत आह – **सर्वनियामकत्वं चेति** ।।




ಮೋಕ್ಷವನ್ನು ಬಯಸುವ ಸಾಧಕನು ಪ್ರತಿಯೊಂದು ಶಬ್ದಗಳೂ ಕೂಡ ಹರಿನಾಮಗಳಾಗಿವೆ ಎಂಬುದನ್ನು ಅವಶ್ಯವಾಗಿ ತಿಳಿಯಲೇ ಬೇಕು. 'ನಾಮಾಯತ್ತಾ ಸಮತ್ರ್ಯಪ್ಯಂಚ್ಛ್ರುತೇಧಿ' ಎಂಬ ಶ್ರುತಿಯು ಇದನ್ನು ಸಾರುತ್ತಿದೆ. ಇದನ್ನು

ಆನುಮಾನಿಕಾಧಿಕರಣ (೧-೪-೧)

ತಿಳಿಯಬೇಕೆಂದರೆ 'ದುಃಖೀ', 'ಬದ್ಧಃ' 'ಅವ್ಯಕ್ತ' ಮೊದಲಾದ ಶಬ್ದಗಳೂ ಕೂಡ ಹರಿನಾಮಗಳೇ ಆಗಿವೆಯೆಂದು ತಿಳಿಯಲೇ ಬೇಕು.

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯು ಎಲ್ಲಾ ವಿಧವಾದ ವೈದಿಕಶಬ್ದಗಳು ಭಗವಂತನಲ್ಲೇ ಸಮನ್ವಯ ಹೊಂದುತ್ತವೆಂದು ಹೇಳುತ್ತಿದೆ. ಈ ಶ್ರುತಿಯಲ್ಲಿರುವ ಸರ್ವಶಬ್ದಕ್ಕೆ ದೋಷವಾಚಕಶಬ್ದಗಳನ್ನು ಬಿಟ್ಟು, ಉಳಿದ ಶಬ್ದಗಳು ಮಾತ್ರ ಸಮನ್ವಯವಾಗುತ್ತವೆಂದು ಸಂಕೋಚ ಮಾಡಬಾರದು. ಹಾಗಾದಲ್ಲಿ ಇಂದ್ರಾದಿ ಶಬ್ದಗಳ ಸಮನ್ವಯವನ್ನೂ ಕೂಡ ಕೈ ಬಿಡಬೇಕಾಗುತ್ತದೆ. ಇಂದ್ರಾದಿಶಬ್ದಗಳನ್ನು ಸಮನ್ವಯ ಮಾಡುವಾಗ ದೇವೇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗಳು ಭಗವದಧೀನವಾಗಿವೆ ಎಂದು ಹೇಗೆ ವ್ಯಾಖ್ಯಾನ ಮಾಡಿ, ಸಮನ್ವಯ ಮಾಡಲಾಗುತ್ತದೋ, ಅದೇ ರೀತಿಯಾಗಿ ಇತರರಲ್ಲಿರುವ ದುಃಖ, ಬಂಧನ ಮೊದಲಾದವೂ ಕೂಡ ಭಗವದಧೀನವಾದ್ದರಿಂದ ಭಗವಂತನು 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂದು ತಿಳಿಯಬೇಕು.

'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯನ್ನು ಇಂದ್ರಾದಿಶಬ್ದಗಳ ಸಮನ್ವಯ ವಿಷಯದಲ್ಲಿ ಬಿಟ್ಟು, ಉಳಿದ ಶಬ್ದಗಳ ಸಮನ್ವಯ ವಿಷಯದಲ್ಲಿ ಸಂಕೋಚ ಮಾಡಲು ಸಾಧ್ಯವಿಲ್ಲ. ಏಕೆಂದರೆ 'ಇಂದ್ರೋ ರಾಜಾ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಇಂದ್ರಾದಿಶಬ್ದಗಳ ಸಮನ್ವಯವನ್ನು ಹೇಳುತ್ತಿದೆ. ಮತ್ತು 'ಯೋ ದೇವಾನಾಮ್ ನಾಮಧಾ' ಎಂಬ ಶ್ರುತಿಯೂ ಕೂಡ ಇಂದ್ರಾದಿಶಬ್ದಗಳ ಸಮನ್ವಯವು ವಿಷ್ಣುವಿನಲ್ಲಿ ತಿಳಿಸುತ್ತಿದೆ. ಆದ್ದರಿಂದ ಸಂಕೋಚ ಮಾಡಲಾಗದೆಂದು ಹೇಳಿದರೆ, ಅದೇ ಕಾರಣದಿಂದಲೇ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳ ಸಮನ್ವಯ ವಿಷಯದಲ್ಲಿಯೂ ಸಂಕೋಚ ಮಾಡಬಾರದು. ಏಕೆಂದರೆ 'ಸ ಬದ್ಧಃ ಸ ದುಃಖೀ ಸ ಬಂಧಯತಿ' ಎಂಬ ಶ್ರುತಿಯು 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ವಿಷ್ಣುವಿನಲ್ಲಿ ಹೇಳುವ ಮೂಲಕ ಆಯಾ ಶಬ್ದಗಳ ಸಮನ್ವಯವನ್ನು ತಿಳಿಸುತ್ತಿದೆ. ಆದ್ದರಿಂದ ಈ ವಿಷಯದಲ್ಲಿಯೂ ಸಂಕೋಚ ಮಾಡಬಾರದು.



## ಅಧಿಕರಣದ ಸಂಶಯ ಪರಂಪರೆ

## ದೋಷವಾಚಕಶಬ್ದಗಳು ಶ್ರೀಹರಿಯಲ್ಲಿ ಬರುವುದಿಲ್ಲವೆಂದು ಪೂರ್ವಪಕ್ಷ

## तात्पर्यचन्द्रिका

**अत्राव्यक्तदुःखिबद्धावरादिशब्दमुख्यार्थः किं प्रधानजीवादिः किं वा विष्णुरिति चिन्ता ।**

ಅನುವಾದ - ಈ ಅಧಿಕರಣದಲ್ಲಿ 'ಅವ್ಯಕ್ತಾತ್ ಪುರುಷಃ ಪರಃ' ಎಂಬುದು ವಿಷಯವಾಕ್ಯವಾಗಿದೆ. ಈ ವಾಕ್ಯಗಳಲ್ಲಿ ಶ್ರುತವಾದ 'ಅವ್ಯಕ್ತ', 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳ ಮುಖ್ಯಾರ್ಥವು ಪ್ರಕೃತಿ ಜೀವ ಮೊದಲಾದವರೋ ಅಥವಾ ವಿಷ್ಣುವೋ? ಎಂಬುದು ಪ್ರಧಾನ ಸಂಶಯ.

ಪರಿಪೂರ್ಣಚಂದ್ರಿಕಾ

**तदर्थं "अव्यक्तात्" इति पञ्चम्या दुःख्यादिप्रातिपदिकानां च प्रवृत्तिनिमित्तं किं ब्रह्मणि न युक्तमुत युक्तमिति ।**

ಹಿಂದಿನ ಸಂಶಯ ಪರಿಹಾರಕ್ಕಾಗಿ 'ಅವ್ಯಕ್ತಾತ್' ಎಂಬ ಪಂಚಮೀ ವಿಭಕ್ತಿ ಮತ್ತು 'ದುಃಖೀ' ಮೊದಲಾದ ಪ್ರಾತಿಪದಿಕಗಳ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವೋ ಅಥವಾ ಯುಕ್ತವಾಗುತ್ತದೋ ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थं किमवधित्वदुःखित्वादिकं प्रत्याश्रयत्वमेव पञ्चमी दुःख्यादिशब्दनिमित्तं किं वा तत्प्रति स्वातन्त्र्यमपीति ।**

ಅದಕ್ಕಾಗಿ ಅವಧಿತ್ವ, ದುಃಖಿತ್ವ ಮೊದಲಾದವುಗಳನ್ನು ಕುರಿತು ಯಾವ ಆಶ್ರಯತ್ವವಿದೆಯೋ, ಅದು ಪಂಚಮೀವಿಭಕ್ತಿ ಹಾಗೂ 'ದುಃಖೀ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೋ ? ಅಥವಾ ಅವಧಿತ್ವಾದಿಗಳಿಗೆ ಸ್ವಾತಂತ್ರ್ಯವೂ ಕೂಡ ಪ್ರವೃತ್ತಿನಿಮಿತ್ತವೋ?

**तत्रापि किमाश्रयत्वं मुख्यनिमित्तमुत स्वातंत्र्यमेवेति ।।**

ಹಿಂದಿನ ಸಂಶಯವು ಪರಿಹಾರವಾಗಬೇಕೆಂದರೆ ಆಶ್ರಯತ್ವವು ಮುಖ್ಯವಾದ ಪ್ರವೃತ್ತಿನಿಮಿತ್ತವೋ? ಅಥವಾ ಸ್ವಾತಂತ್ರ್ಯವೇ ಮುಖ್ಯವಾದ ಪ್ರವೃತ್ತಿನಿಮಿತ್ತವೋ ? ಎಂಬ ಸಂಶಯವು ಪರಿಹಾರವಾಗಬೇಕು.

**पूर्वपक्षस्तु ।। अव्यक्तजीवादिशब्दमुख्यार्थो न ब्रह्म । अव्यक्तादिशब्दानां प्रधानादौ प्रसिद्धेः ।**

ಈ ಅಧಿಕರಣದ ಪೂರ್ವಪಕ್ಷ - 'ಅವ್ಯಕ್ತ', 'ಜೀವ', 'ದುಃಖೀ', ಇವೇ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಬ್ರಹ್ಮನು ಪ್ರತಿಪಾದ್ಯನಾಗುವುದಿಲ್ಲ. ಪ್ರಧಾನ, ಜೀವ ಇವುಗಳಲ್ಲಿ ಅವ್ಯಕ್ತಾದಿ ಶಬ್ದಗಳು ಪ್ರಸಿದ್ಧವಾಗಿವೆ. ಆದ್ದರಿಂದ ಪ್ರಧಾನಾದಿಗಳೇ ಮುಖ್ಯಾರ್ಥಗಳಾಗುತ್ತವೆ.

**अव्यक्ते पञ्चम्युक्तेन परत्वावधित्वेनार्थादाक्षिप्तस्यावरत्वस्य जीवे श्रुतस्य दुःखित्वादेश्च ब्रह्मणि सर्वप्रमाणविरुद्धत्वात् ।**

ಒಂದು ವೇಳೆ ಬ್ರಹ್ಮನಲ್ಲಿ ಅವ್ಯಕ್ತಾದಿಶಬ್ದಗಳ ಸಮನ್ವಯವನ್ನು ಮಾಡಿದರೆ ಸಕಲ ಪ್ರಮಾಣಗಳ ವಿರೋಧವು ಬರುತ್ತದೆ. ''ಅವ್ಯಕ್ತಾತ್ ಪುರುಷಃ ಪರಃ'' ಎಂಬಲ್ಲಿರುವ ಪಂಚಮಿಯು 'ಪರತ್ವ ಅವಧಿತ್ವ' ಎಂಬರ್ಥವನ್ನು ಹೇಳುತ್ತಿದೆ. ಇದರಿಂದ ಅವರತ್ವವು ಆಕ್ಷೇಪದಿಂದ ಅವ್ಯಕ್ತದಲ್ಲಿ ತಿಳಿಯುತ್ತದೆ. ವಿಷ್ಣು ಉತ್ತಮನಾದರೂ ಅವರತ್ವವನ್ನು ಹೇಳಲಾಗದು. 'ಜೀವಾ ಏವ ತು ದುಃಖಿನಃ'

ಎಂಬ ಶ್ರುತಿಯಲ್ಲಿಯೂ ಕೂಡ ದುಃಖಿತ್ವವನ್ನು ಜೀವನಲ್ಲಷ್ಟೇ ಹೇಳಿದ್ದಾರೆ. ದುಃಖವಿಲ್ಲದ ಬ್ರಹ್ಮನಲ್ಲಿ 'ದುಃಖೀ' ಮೊದಲಾದ ಶಬ್ದಗಳ ಸಮನ್ವಯ ಸರ್ವಪ್ರಮಾಣವಿರುದ್ಧ.

**पूर्वाधिकरणोक्तसर्वाधिपतित्वादिविरुद्धत्वाच्च । तदुक्तं न्यायविवरणे ''सर्वमानविरोध'' इति ।**

ಮತ್ತು ಹಿಂದಿನ ಅಧಿಕರಣದಲ್ಲಿ ವಿಷ್ಣುವನ್ನು ಸರ್ವಾಧಿಪತಿ ಎಂದು ಸಾಧಿಸಲಾಗಿದೆ. ಈಗ ಅವರಾದಿ ಶಬ್ದಗಳ ಸಮನ್ವಯದಿಂದ ನೀಚತ್ವವನ್ನು ಹೇಳಿದರೆ. ಹಿಂದಿನ ಅಧಿಕರಣಕ್ಕೆ ವಿರುದ್ಧವಾಗುತ್ತದೆ. ಇದನ್ನೇ ನ್ಯಾಯವಿವರಣದಲ್ಲಿ ''ಅವ್ಯಕ್ತಾದಿ ಶಬ್ದಗಳು ಪರಮಾತ್ಮವಿಷಯಗಳಾಗಿವೆ ಎಂದು ಹೇಳಿದರೆ ಸರ್ವಪ್ರಮಾಣಗಳ ವಿರೋಧವು ಬರುತ್ತದೆ'' ಎಂದು ಹೇಳಿದ್ದಾರೆ.

**''अक्षरात् परतः परः'' इत्यत्र तु न पञ्चम्यन्तोऽक्षरशब्दो ब्रह्मणि । किन्तु ''तदक्षरमधिगम्यते'' इति प्रथमान्तः ।**

ಪ್ರಶ್ನೆ - ಪಂಚಮ್ಯಂತವಾದ ಅವ್ಯಕ್ತ ಶಬ್ದವನ್ನು ಸಮನ್ವಯ ಮಾಡಲಾಗದು ಹಾಗಾದಲ್ಲಿ ಅರ್ಥಾತ್ ಆಕ್ಷಿಪ್ತವಾದ ಅವರತ್ವವು ಬ್ರಹ್ಮನಲ್ಲಿ ಬರುತ್ತದೆ ಎಂದು ಹೇಳಿದಿರಿ ಆದರೆ ''ಅಕ್ಷರಾತ್ ಪರತಃ ಪರಃ'' ಎಂಬಲ್ಲಿರುವ ಅಕ್ಷರಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ಹೇಗೆ ಹೇಳುತ್ತೀರಿ. ಇಲ್ಲಿಯೂ ಪಂಚಮೀವಿಭಕ್ತಿ ಇರುವುದರಿಂದ ಅಕ್ಷರವು ಅವರವೆಂದು ಅರ್ಥಾತ್ ತಿಳಿಯುತ್ತದೆ. ಇಂತಹ ಅಕ್ಷರ ಶಬ್ದವನ್ನು ಬ್ರಹ್ಮನಲ್ಲಿ ಹೇಳಲಾಗದಲ್ಲವೇ?

ಉತ್ತರ - ''ಅಕ್ಷರಾತ್ ಪರತಃ ಪರಃ'' ಎಂಬಲ್ಲಿ ಪಂಚಮ್ಯಂತವಾದ ಅಕ್ಷರಶಬ್ದವು ಬ್ರಹ್ಮವಾಚಕವೇ ಅಲ್ಲ ಹೊರತು ಲಕ್ಷ್ಮೀವಾಚಕವಾಗಿದೆ ಆದರೆ ''ತದಕ್ಷರಮಧಿಗಮ್ಯತೇ'' ಎಂಬಲ್ಲಿರುವ ಪ್ರಥಮಾಂತವಾದ ಅಕ್ಷರಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆ.

**नन्ववधित्वादिकं प्रत्याश्रयत्वमेव न पञ्चम्यादि निमित्तम् । किन्तु तत्प्रति स्वातन्त्र्यमपि । भृत्यगतजयस्य राजाधीनत्वमात्रेण राजा जयीति प्रयोगात् । तथाच ब्रह्मण्यवधित्वादिकं प्रति स्वातन्त्र्यस्य सत्त्वादवरादिशब्दो युक्तः ।**

ಶಂಕೆ - ಅವಧಿತ್ವಾದಿಗಳನ್ನು ಕುರಿತು ಆಶ್ರಯತ್ವವೇ ಪಂಚಮಿವಿಭಕ್ತಿಯ ನಿಮಿತ್ತವಲ್ಲ ಹೊರತು ಅವಧಿತ್ವಾದಿಗಳನ್ನು ಕುರಿತು ಸ್ವಾತಂತ್ರ್ಯವೂ ಸಹ ಪಂಚಮೀವಿಭಕ್ತಿಯ ನಿಮಿತ್ತವಾಗಿದೆ. ಇಂತಹ ಸ್ವಾತಂತ್ರ್ಯವು ವಿಷ್ಣುವಿನಲ್ಲಿರುವುದರಿಂದ ವಿಷ್ಣುವು ಅವ್ಯಕ್ತಶಬ್ದ ಪ್ರತಿಪಾದ್ಯನಾಗಲು ಏನೂ ತೊಂದರೆ ಇಲ್ಲ. ಹೇಗೆಂದರೆ ಭೃತ್ಯನು ರಾಜಾಧೀನನಾಗಿದ್ದಾನೆ. ಆದ್ದರಿಂದ ಭೃತ್ಯನಿಗೆ ಜಯವಾದರೆ ''ರಾಜಾ

ಜಯೀ'' ''ರಾಜನು ಗೆದ್ದನು'' ಎಂಬ ಪ್ರಯೋಗವು ಲೋಕಪ್ರಸಿದ್ಧವಾಗಿದೆ. ಈ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಕಾರಣ ಹೊರತು ಬೇರೇನೂ ಅಲ್ಲ.

**एतेन यत्रावरादिशब्दोऽस्ति तत्रास्तु तस्य स्वातन्त्र्याभिप्रायत्वम् । इह तु पञ्चम्युक्तपरत्वावधित्वेनाक्षिप्तमवरत्वं न तदभिप्रायम् । नहि शब्द इवानुपपत्तिरपि व्याख्यानार्हेति निरस्तम् । परत्वावधित्वं प्रत्याश्रयत्वस्यैवार्थादवरत्वाक्षेपकत्वेन तत्प्रति स्वातन्त्र्यस्य तदनाक्षेपकत्वादिति चेन्न ।**

ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು. ಆ ಆಕ್ಷೇಪ ಹೀಗಿದೆ - ಯಾವ ಶ್ರುತಿಯಲ್ಲಿ 'ಅವರ' ಎಂಬ ಶಬ್ದವೇ ಸಾಕ್ಷಾತ್ತಾಗಿ ಇರುತ್ತದೋ ಅಂತಹ ಸ್ಥಳದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿ ನಿಮಿತ್ತದಿಂದ ವಿಷ್ಣುವಿನಲ್ಲಿ ಅವರಾದಿ ಶಬ್ದಗಳು ಉಪಪನ್ನವಾಗುತ್ತವೆ. ಆದರೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಅವರತ್ವವು ಪಂಚಮೀಯಿಂದ ತಿಳಿಯುವ 'ಪರತ್ವಾವಧಿತ್ವ'-ದಿಂದ ಆಕ್ಷಿಪ್ತವಾಗಿದೆ. ಇಂತಹ ಅವರತ್ವದಿಂದ ವಿಷ್ಣುವು ಪ್ರತಿಪಾದ್ಯನಾಗಲಾರ. ಶ್ರುತಿಗೂ ಸಹ ವಿಷ್ಣು ಪ್ರತಿಪಾದನೆಯ ಅಭಿಪ್ರಾಯವಿರುವುದಿಲ್ಲ. ಆದ್ದರಿಂದ ಇಂತಹ 'ಅವರ' ಶಬ್ದವನ್ನು ವಿಷ್ಣುವಿನಲ್ಲಿ ವ್ಯಾಖ್ಯಾನಿಸುವುದು ಯೋಗ್ಯವಲ್ಲ 'ನಹಿ ಶಬ್ದ ಇವ ಅನುಪಪತ್ತಿರಪಿ ವ್ಯಾಖ್ಯಾನರ್ಹಾ' ಶಬ್ದದಂತೆ ಅರ್ಥಾಪತ್ತಿಯು ವ್ಯಾಖ್ಯಾನಯೋಗ್ಯವಲ್ಲ.

**भृत्यदैर्घ्येण ह्रस्वेऽपि राज्ञि दीर्घशब्दस्य राजाधीनेन शत्रुगतदुःखेन राज्ञि दुःखिशब्दस्य राजाधीनभृत्यगतबन्धादिना राज्ञि बद्धादिशब्दस्य चापातात् । तेषाममङ्गलत्वाद्राज्ञि प्रयोगो न चेद्ब्रह्मण्यपि स नस्यादिति ।**

ಸಮಾಧಾನ - ಈ ಶಂಕೆಯು ಸರಿಯಲ್ಲ. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದರೆ ಅನೇಕ ಬಾಧಕಗಳು ಬರುತ್ತವೆ. ಭೃತ್ಯನು ಉದ್ದನಾಗಿರುತ್ತಾನೆ. ರಾಜನು ಕುಳ್ಳನಾಗಿರುತ್ತಾನೆ. ಭೃತ್ಯನು ರಾಜನ ಅಧೀನನಾದ್ದರಿಂದ ರಾಜನೂ ಸಹ ಉದ್ದನಾಗಬೇಕಾದೀತು. ಅದರಂತೆ ಶತ್ರುವಿನಲ್ಲಿ ಸೋಲಿನ ದುಃಖವಿದೆ. ಆ ಶತ್ರುವು ರಾಜಾಧೀನನಾದಾಗ ಅವನ ದುಃಖವು ರಾಜನಲ್ಲಿಯೂ ಬರಬೇಕಾದೀತು. ಮತ್ತು ಭೃತ್ಯನು ಅಪರಾಧ ಮಾಡಿ ಕಾರಾಗೃಹಕ್ಕೆ ಹೋಗುತ್ತಾನೆ. ಅಂತಹ ಭೃತ್ಯನು ರಾಜಾಧೀನನಾದ್ದರಿಂದ ರಾಜನೂ ಸಹ ಕಾರಾಗೃಹವನ್ನು ಪ್ರವೇಶಿಸಿದನು ಎಂದಾಗಬೇಕಾದೀತು.

ದುಃಖ, ಬಂಧನ, ಇವುಗಳೆಲ್ಲವೂ ಅಮಂಗಳ ಶಬ್ದಗಳು. ಇಂತಹ ಶಬ್ದಗಳ ಪ್ರಯೋಗವನ್ನು ರಾಜನಲ್ಲಿ ಮಾಡುವುದು ತಪ್ಪು. ಮಂಗಳ ಶಬ್ದಗಳನ್ನಷ್ಟೇ ರಾಜನಲ್ಲಿ ಪ್ರಯೋಗಿಸುವುದು ಶ್ರೇಯಸ್ಕರ ಎಂದು ಉತ್ತರಿಸಿದರೆ ಬ್ರಹ್ಮನಲ್ಲಿಯೂ ಇದು ಸಮಾನ. ಅತ್ಯಂತ ಶ್ರೇಷ್ಠನಾದ ಬ್ರಹ್ಮನಲ್ಲಿ ದುಃಖ್ಯಾದಿ

ಶಬ್ದಗಳ ಸಮನ್ವಯವನ್ನು ಮಾಡುವುದು ತಪ್ಪು. ಮಂಗಳಮಯವಾದ ಆನಂದಾದಿ ಶಬ್ದಗಳನ್ನಷ್ಟೇ ಪ್ರಯೋಗಿಸುವುದು ಶ್ರೇಯಸ್ಕರ.

ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಬ್ರಹ್ಮನು ದುಃಖ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲ. ಜೀವಾದಿಗಳೇ ಮುಖ್ಯಪ್ರತಿಪಾದ್ಯರಾಗುತ್ತಾರೆ.

**प्रकाशः –**

**''प्रधानाद्येवाव्यक्तादिपदवाच्यम्'' इत्यादिटीकां विवृण्वन्नाद्यचिन्तास्थाद्य कोटिमाह – अव्यक्तेति ।।**

ವಿವರಣೆ - ಇಲ್ಲಿಯ ತನಕ ಪಾದಸಂಗತಿ, ಅಧಿಕರಣಸಂಗತಿಗಳನ್ನು ಹೇಳಲಾಯಿತು.

ಮತ್ತು ಪಾದದ ಸಾರ್ಥಕ್ಯ ಪಾದದ ಉಪಾಧಿಗಳನ್ನೂ ವಿವರಿಸಿ ಆನುಮಾನಿಕಾಧಿಕರಣದ ಸಾರ್ಥಕ್ಯವನ್ನು ಸಮರ್ಥಿಸಿ ಅಧಿಕರಣದ ಸಂಶಯಕೋಟಿಗಳನ್ನು ಹೇಳಿದ್ದಾಯಿತು. ಈಗ ಅಧಿಕರಣದ ಪೂರ್ವಪಕ್ಷವನ್ನು ಪ್ರದರ್ಶಿಸುತ್ತಿದ್ದಾರೆ 'ಅವ್ಯಕ್ತ' ಇತ್ಯಾದಿಯಾಗಿ.

**प्रकाशः – पञ्चम्यन्ताव्यक्तशब्ददुःखिपदसमानाधिकरणजीवशब्दबद्धादिशब्दमुख्यार्थ इत्यर्थः । द्वितीयचिन्तास्थाद्यकोटिं वक्तुं टीकोक्तहेतुमाह – अव्यक्तादीति ।। ''नच तेषां विष्णावपि सावकाशतेति वाच्यम्'' इति टीकास्थशङ्कां हृदि कृत्वा ''तत्राव्यक्तस्य पुरुषावरत्वश्रवणात्'' इत्यादिटीकां तन्निवर्तनपरां विवृण्वन् द्वितीयचिन्तास्थाद्यकोटिं हेतूक्तया व्यनक्ति ।। अव्यक्त इति ।।**

'ಪ್ರಧಾನಾದ್ಯೇವಾವ್ಯಕ್ತಾದಿಪದವಾಚ್ಯಮ್' ಪ್ರಧಾನಾದಿಗಳೇ ಅವ್ಯಕ್ತಾದಿ ಪದಗಳಿಂದ ಪ್ರತಿಪಾದ್ಯಗಳು ಇತ್ಯಾದಿ ಟೀಕೆಯನ್ನು ಪ್ರಾರಂಭದಲ್ಲಿ ವಿವರಿಸುತ್ತಿದ್ದಾರೆ. ಮತ್ತು ಹಿಂದೆ ತೋರಿಸಿದ ಬಹುಬಗೆಯ ಸಂಶಯದ ಪ್ರಕಾರಗಳಲ್ಲಿ ಮೊದಲನೆಯ ಸಂಶಯದ ಮೊದಲನೆಯ ಕೋಟಿಯನ್ನು ಪೂರ್ವಪಕ್ಷವನ್ನಾಗಿ ಹೇಳುತ್ತಿದ್ದಾರೆ 'ಅವ್ಯಕ್ತ' ಇತ್ಯಾದಿ ಪದಗಳಿಂದ, 'ಅವ್ಯಕ್ತಾದಿ ಶಬ್ದಾನಾಮ್' ಇತ್ಯಾದಿ ವಾಕ್ಯದಿಂದ ಎರಡನೆಯ ಪ್ರಕಾರದ ಸಂಶಯದ ಮೊದಲನೆಯ ಕೋಟಿಯನ್ನು ಹೇಳಲು ಟೀಕೆಯಲ್ಲಿ ಹೇಳಿದ ಹೇತುವನ್ನೇ ಹೇಳಿದ್ದಾರೆ. ಟೀಕೆಯಲ್ಲಿರುವ ಶಂಕಾ ಮಾತು ಹೀಗಿದೆ - 'ನಚ ತೇಷಾಂ ವಿಷ್ಣಾವಪಿ ಸಾವಕಾಶತೇತಿ ವಾಚ್ಯಮ್' ಅವ್ಯಕ್ತಾದಿ ಶಬ್ದಗಳು ವಿಷ್ಣುವಿನಲ್ಲಿಯೂ ಸಾವಕಾಶಗಳಾಗಿವೆ ಎಂದು ಹೇಳಬಾರದು ಎಂದು. ಮತ್ತು ಶಂಕೆಯನ್ನು ಪರಿಹರಿಸುವ ಟೀಕಾ ಮಾತು ಹೀಗಿದೆ - 'ತತ್ರ ಅವ್ಯಕ್ತಸ್ಯ ಪುರುಷಾವರತ್ವಶ್ರವಣಾತ್' 'ಅವ್ಯಕ್ತದಲ್ಲಿ ಪುರುಷನಿಗಿಂತ ನೀಚತ್ವವು ಕೇಳಿಸುತ್ತಿದೆ' ಎಂದು. ಈ ಎರಡು ವಿಧವಾದ ಟೀಕಾ ಮಾತುಗಳನ್ನು ವಿವರಿಸುವ ಮೂಲಕ ದ್ವಿತಿಯ ಚಿಂತೆಯ ಮೊದಲನೆಯ ಕೋಟಿಯನ್ನು ಕಾರಣಪುರಸ್ಸರವಾಗಿ 'ಅವ್ಯಕ್ತೇ ಪಂಚಮ್ಯುಕ್ತೇನ' ಇತ್ಯಾದಿ ಮಾತುಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ.

**प्रकाशः** – ''न तत्समश्चाभ्यधिकश्च दृश्यत इत्यादिप्रमाणविरोधात्'' इति टीकार्थः ।। **सर्वप्रमाणेति** ।। टीकास्थादिपदेनैव ''सर्वाधिपतिः'' इत्यादिवाक्यस्यापि ग्रह इति भावेनाह – **पूर्वेति** ।। भाष्यानुक्तस्यापि टीकायामुक्तौ मूलमाह – **तदुक्तमिति** ।।

ಗ್ರಂಥದಲ್ಲಿ ಸರ್ವಪ್ರಮಾಣವಿರೋಧವನ್ನು ಹೇಳಿದ್ದಾರೆ. ಇದರಿಂದ 'ನ ತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ' ಇತ್ಯಾದಿ ಪ್ರಮಾಣಗಳ ವಿರೋಧವನ್ನು ತಿಳಿಯತಕ್ಕದ್ದು. ಟೀಕೆಯಲ್ಲಿರುವ ಆದಿಪದದಿಂದ 'ಸರ್ವಾಧಿಪತಿಃ' ಇತ್ಯಾದಿ ವಾಕ್ಯವನ್ನು ಸ್ವೀಕರಿಸಬೇಕೆಂಬ ಭಾವನೆಯಿಂದ 'ಪೂರ್ವಾಧಿಕರಣ' ಇತ್ಯಾದಿ ಮಾತುಗಳನ್ನು ಹೇಳಿದ್ದಾರೆ. ಸರ್ವಪ್ರಮಾಣ ವಿರೋಧವನ್ನು ಟೀಕೆಯಲ್ಲಷ್ಟೇ ಹೇಳಿದ್ದಾರೆ. ಭಾಷ್ಯದಲ್ಲಿ ಹೇಳದ್ದನ್ನು ಟೀಕೆಯಲ್ಲಿ ಹೇಗೆ ಹೇಳಿದರು ? ಎಂಬ ಪ್ರಶ್ನೆಗೆ ಉತ್ತರವಾಗಿ 'ತದುಕ್ತಮ್' ಇತ್ಯಾದಿ ಮಾತುಗಳು ಹೊರಟಿವೆ. ಭಾಷ್ಯದಲ್ಲಿ ಹೇಳದಿದ್ದರೂ ನ್ಯಾಯವಿವರಣದಲ್ಲಿ ಹೇಳಿದ್ದರಿಂದ ದೋಷವಿಲ್ಲ.

**प्रकाशः** – अव्यक्तादिशब्दानां परमात्मविषयत्वाङ्गीकार इति न्यायविवरण-पूर्वशेषः । अदृश्यत्वनयेन गतार्थत्वभ्रान्तिं निराह – **अक्षरात्परत इति** ।। इत्यत्र त्वित्युक्तया ''अक्षरात्सम्भवतीह विश्वम्'' इत्यत्र पञ्चम्यन्तोऽक्षरशब्दो ब्रह्मणीति सूचयति । तथैव वाच्ये इति प्रथमान्त इत्युक्तिस्तु प्राचीनं पञ्चम्यन्तं परविद्या-विषयत्वरूपब्रह्मलिङ्गोपेतं उत्तरं पञ्चम्यन्ताक्षरपदं परत्वावधित्वाख्या-ब्रह्मलिङ्गोपेतमिति सूचनाय ।

'ಅಕ್ಷರಾತ್ ಪರತಃ ಪರಃ ಇತ್ಯತ್ರ ತು'' ಎಂಬಲ್ಲಿ 'ತು' ಶಬ್ದದಿಂದ ಇದು ತಿಳಿಯುತ್ತದೆ. 'ಅಕ್ಷರಾತ್ ಸಂಭವತೀಹ ವಿಶ್ವಂ' 'ಅಕ್ಷರನಿಂದ ಜಗತ್ತು ಹುಟ್ಟಿದೆ' ಎಂಬಲ್ಲಿಯ ಪಂಚಮ್ಯಂತವಾದ ಅಕ್ಷರ ಶಬ್ದವಿದೆ. ಈ ಅಕ್ಷರಶಬ್ದ ವಾಚ್ಯನಾದವನು ವಿಷ್ಣು ಎಂಬಲ್ಲಿ ವಿವಾದವಿಲ್ಲ ಇಲ್ಲಿರುವ ಪಂಚಮೀ ವಿಭಕ್ತಿಯು 'ಪರತ್ವಾವಧಿತ್ವ'ವನ್ನು ಹೇಳುತ್ತಿಲ್ಲ. ಆದ್ದರಿಂದ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿರುವ ಅಕ್ಷರ ಶಬ್ದವಷ್ಟೇ ವಿವಾದಾಸ್ಪದವಾಗಿದೆ. ಈ ಸೂಕ್ಷ್ಮತೆಯನ್ನು ತಿಳಿಸುವುದಕ್ಕಾಗಿಯೇ ಗ್ರಂಥಕಾರರು 'ತು' ಶಬ್ದವನ್ನು ಹೇಳಿದರು. ಅದರಂತೆ 'ಇತಿ ಪ್ರಥಮಾಂತಃ' ಎಂದು ಹೇಳಿದರು. ಹೀಗೇಕೆ ಹೇಳಿದರೆಂದರೆ 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬಲ್ಲಿರುವ ಪಂಚಮ್ಯಂತವಾದ ಅಕ್ಷರ ಶಬ್ದವು ಪರವಿದ್ಯಾವಿಷಯನಾದ ಬ್ರಹ್ಮಲಿಂಗೋಪೇತವಾಗಿದೆ. ಮುಂದಿರುವ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿರುವ ಪಂಚಮ್ಯಂತವಾದ ಅಕ್ಷರ ಶಬ್ದವು 'ಪರತ್ವಾವಧಿತ್ವ' ಎಂಬ ಅಬ್ರಹ್ಮಲಿಂಗದಿಂದ ಯುಕ್ತವಾಗಿದೆ. ಈ ಸೂಕ್ಷ್ಮತೆಯನ್ನು ತಿಳಿಸುವುದಕ್ಕಾಗಿ ಗ್ರಂಥಕಾರರು 'ಇತಿ ಪ್ರಥಮಾಂತಃ' ಎಂದು ಹೇಳಿದರು.

**प्रकाशः** – एवं यथाटीकं न्यायविवरणोक्तमुक्त्वा -

ಶಬ್ದಗಳ ಸಮನ್ವಯವನ್ನು ಮಾಡುವುದು ತಪ್ಪು. ಮಂಗಳಮಯವಾದ ಆನಂದಾದಿ ಶಬ್ದಗಳನ್ನಷ್ಟೇ ಪ್ರಯೋಗಿಸುವುದು ಶ್ರೇಯಸ್ಕರ.

ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಬ್ರಹ್ಮನು ದುಃಖ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲ. ಜೀವಾದಿಗಳೇ ಮುಖ್ಯಪ್ರತಿಪಾದ್ಯರಾಗುತ್ತಾರೆ.

**प्रकाशः –**

''प्रधानाद्येवाव्यक्तादिपदवाच्यम्'' इत्यादिटीकां विवृण्वन्नाद्यचिन्तास्थाद्य कोटिमाह – **अव्यक्तेति** ।।

ವಿವರಣೆ - ಇಲ್ಲಿಯ ತನಕ ಪಾದಸಂಗತಿ, ಅಧಿಕರಣಸಂಗತಿಗಳನ್ನು ಹೇಳಲಾಯಿತು.

ಮತ್ತು ಪಾದದ ಸಾರ್ಥಕ್ಯ ಪಾದದ ಉಪಾಧಿಗಳನ್ನೂ ವಿವರಿಸಿ ಆನುಮಾನಿಕಾಧಿಕರಣದ ಸಾರ್ಥಕ್ಯವನ್ನು ಸಮರ್ಥಿಸಿ ಅಧಿಕರಣದ ಸಂಶಯಕೋಟಿಗಳನ್ನು ಹೇಳಿದ್ದಾಯಿತು. ಈಗ ಅಧಿಕರಣದ ಪೂರ್ವಪಕ್ಷವನ್ನು ಪ್ರದರ್ಶಿಸುತ್ತಿದ್ದಾರೆ 'ಅವ್ಯಕ್ತ' ಇತ್ಯಾದಿಯಾಗಿ.

**प्रकाशः** – पञ्चम्यन्ताव्यक्तशब्ददुःखिपदसमानाधिकरणजीवशब्दबद्धादिशब्दमुख्यार्थ इत्यर्थः । द्वितीयचिन्तास्थाद्यकोटिं वक्तुं टीकोक्तहेतुमाह – **अव्यक्तादीति** ।। ''नच तेषां विष्णावपि सावकाशतेति वाच्यम्'' इति टीकास्थशङ्कां हृदि कृत्वा ''तत्राव्यक्तस्य पुरुषावरत्वश्रवणात्'' इत्यादिटीकां तन्निवर्तनपरां विवृण्वन् द्वितीयचिन्तास्थाद्यकोटिं हेतूक्तया व्यनक्ति ।। **अव्यक्त इति** ।।

'ಪ್ರಧಾನಾದ್ಯೇವಾವ್ಯಕ್ತಾದಿಪದವಾಚ್ಯಮ್' ಪ್ರಧಾನಾದಿಗಳೇ ಅವ್ಯಕ್ತಾದಿ ಪದಗಳಿಂದ ಪ್ರತಿಪಾದ್ಯಗಳು ಇತ್ಯಾದಿ ಟೀಕೆಯನ್ನು ಪ್ರಾರಂಭದಲ್ಲಿ ವಿವರಿಸುತ್ತಿದ್ದಾರೆ. ಮತ್ತು ಹಿಂದೆ ತೋರಿಸಿದ ಬಹುಬಗೆಯ ಸಂಶಯದ ಪ್ರಕಾರಗಳಲ್ಲಿ ಮೊದಲನೆಯ ಸಂಶಯದ ಮೊದಲನೆಯ ಕೋಟಿಯನ್ನು ಪೂರ್ವಪಕ್ಷವನ್ನಾಗಿ ಹೇಳುತ್ತಿದ್ದಾರೆ 'ಅವ್ಯಕ್ತ' ಇತ್ಯಾದಿ ಪದಗಳಿಂದ, 'ಅವ್ಯಕ್ತಾದಿ ಶಬ್ದಾನಾಮ್' ಇತ್ಯಾದಿ ವಾಕ್ಯದಿಂದ ಎರಡನೆಯ ಪ್ರಕಾರದ ಸಂಶಯದ ಮೊದಲನೆಯ ಕೋಟಿಯನ್ನು ಹೇಳಲು ಟೀಕೆಯಲ್ಲಿ ಹೇಳಿದ ಹೇತುವನ್ನೇ ಹೇಳಿದ್ದಾರೆ. ಟೀಕೆಯಲ್ಲಿರುವ ಶಂಕಾ ಮಾತು ಹೀಗಿದೆ - 'ನಚ ತೇಷಾಂ ವಿಷ್ಣಾವಪಿ ಸಾವಕಾಶತೇತಿ ವಾಚ್ಯಮ್' ಅವ್ಯಕ್ತಾದಿ ಶಬ್ದಗಳು ವಿಷ್ಣುವಿನಲ್ಲಿಯೂ ಸಾವಕಾಶಗಳಾಗಿವೆ ಎಂದು ಹೇಳಬಾರದು ಎಂದು. ಮತ್ತು ಶಂಕೆಯನ್ನು ಪರಿಹರಿಸುವ ಟೀಕಾ ಮಾತು ಹೀಗಿದೆ - 'ತತ್ರ ಅವ್ಯಕ್ತಸ್ಯ ಪುರುಷಾವರತ್ವಶ್ರವಣಾತ್' 'ಅವ್ಯಕ್ತದಲ್ಲಿ ಪುರುಷನಿಗಿಂತ ನೀಚತ್ವವು ಕೇಳಿಸುತ್ತಿದೆ' ಎಂದು. ಈ ಎರಡು ವಿಧವಾದ ಟೀಕಾ ಮಾತುಗಳನ್ನು ವಿವರಿಸುವ ಮೂಲಕ ದ್ವಿತಿಯ ಚಿಂತೆಯ ಮೊದಲನೆಯ ಕೋಟಿಯನ್ನು ಕಾರಣಪುರಸ್ಸರವಾಗಿ 'ಅವ್ಯಕ್ತೇ ಪಂಚಮ್ಯುಕ್ತೇನ' ಇತ್ಯಾದಿ ಮಾತುಗಳಿಂದ ವ್ಯಾಖ್ಯಾನಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – ''न तत्समश्चाभ्यधिकश्च दृश्यत इत्यादिप्रमाणविरोधात्'' इति टीकार्थः ।। **सर्वप्रमाणेति** ।। टीकास्थादिपदेनैव ''सर्वाधिपतिः'' इत्यादिवाक्यस्यापि ग्रह इति भावेनाह – **पूर्वेति** ।। भाष्यानुक्तस्यापि टीकायामुक्तौ मूलमाह – **तदुक्तमिति** ।।

ಗ್ರಂಥದಲ್ಲಿ ಸರ್ವಪ್ರಮಾಣವಿರೋಧವನ್ನು ಹೇಳಿದ್ದಾರೆ. ಇದರಿಂದ 'ನ ತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ' ಇತ್ಯಾದಿ ಪ್ರಮಾಣಗಳ ವಿರೋಧವನ್ನು ತಿಳಿಯತಕ್ಕದ್ದು. ಟೀಕೆಯಲ್ಲಿರುವ ಆದಿಪದದಿಂದ 'ಸರ್ವಾಧಿಪತಿಃ' ಇತ್ಯಾದಿ ವಾಕ್ಯವನ್ನು ಸ್ವೀಕರಿಸಬೇಕೆಂಬ ಭಾವನೆಯಿಂದ 'ಪೂರ್ವಾಧಿಕರಣ' ಇತ್ಯಾದಿ ಮಾತುಗಳನ್ನು ಹೇಳಿದ್ದಾರೆ. ಸರ್ವಪ್ರಮಾಣ ವಿರೋಧವನ್ನು ಟೀಕೆಯಲ್ಲಷ್ಟೇ ಹೇಳಿದ್ದಾರೆ. ಭಾಷ್ಯದಲ್ಲಿ ಹೇಳದ್ದನ್ನು ಟೀಕೆಯಲ್ಲಿ ಹೇಗೆ ಹೇಳಿದರು ? ಎಂಬ ಪ್ರಶ್ನೆಗೆ ಉತ್ತರವಾಗಿ 'ತದುಕ್ತಮ್' ಇತ್ಯಾದಿ ಮಾತುಗಳು ಹೊರಟಿವೆ. ಭಾಷ್ಯದಲ್ಲಿ ಹೇಳದಿದ್ದರೂ ನ್ಯಾಯವಿವರಣದಲ್ಲಿ ಹೇಳಿದ್ದರಿಂದ ದೋಷವಿಲ್ಲ.

**प्रकाशः** – अव्यक्तादिशब्दानां परमात्मविषयत्वाङ्गीकार इति न्यायविवरण-पूर्वशेषः । अदृश्यत्वनयेन गतार्थत्वभ्रान्तिं निराह – **अक्षरात्परत इति** ।। इत्यत्र त्वित्युक्तया ''अक्षरात्सम्भवतीह विश्वम्'' इत्यत्र पञ्चम्यन्तोऽक्षरशब्दो ब्रह्मणीति सूचयति । तथैव वाच्ये इति प्रथमान्त इत्युक्तिस्तु प्राचीनं पञ्चम्यन्तं परविद्या-विषयत्वरूपब्रह्मलिङ्गोपेतं उत्तरं पञ्चम्यन्ताक्षरपदं परत्वावधित्वाख्या-ब्रह्मलिङ्गोपेतमिति सूचनाय ।

'ಅಕ್ಷರಾತ್ ಪರತಃ ಪರಃ ಇತ್ಯತ್ರ ತು'' ಎಂಬಲ್ಲಿ 'ತು' ಶಬ್ದದಿಂದ ಇದು ತಿಳಿಯುತ್ತದೆ. 'ಅಕ್ಷರಾತ್ ಸಂಭವತೀಹ ವಿಶ್ವಂ' 'ಅಕ್ಷರನಿಂದ ಜಗತ್ತು ಹುಟ್ಟಿದೆ' ಎಂಬಲ್ಲಿಯ ಪಂಚಮ್ಯಂತವಾದ ಅಕ್ಷರ ಶಬ್ದವಿದೆ. ಈ ಅಕ್ಷರಶಬ್ದ ವಾಚ್ಯನಾದವನು ವಿಷ್ಣು ಎಂಬಲ್ಲಿ ವಿವಾದವಿಲ್ಲ ಇಲ್ಲಿರುವ ಪಂಚಮೀ ವಿಭಕ್ತಿಯು 'ಪರತ್ವಾವಧಿತ್ವ'ವನ್ನು ಹೇಳುತ್ತಿಲ್ಲ. ಆದ್ದರಿಂದ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿರುವ ಅಕ್ಷರ ಶಬ್ದವಷ್ಟೇ ವಿವಾದಾಸ್ಪದವಾಗಿದೆ. ಈ ಸೂಕ್ಷ್ಮತೆಯನ್ನು ತಿಳಿಸುವುದಕ್ಕಾಗಿಯೇ ಗ್ರಂಥಕಾರರು 'ತು' ಶಬ್ದವನ್ನು ಹೇಳಿದರು. ಅದರಂತೆ 'ಇತಿ ಪ್ರಥಮಾಂತಃ' ಎಂದು ಹೇಳಿದರು. ಹೀಗೇಕೆ ಹೇಳಿದರೆಂದರೆ 'ಅಕ್ಷರಾತ್ ಸಂಭವತೀಹ ವಿಶ್ವಂ' ಎಂಬಲ್ಲಿರುವ ಪಂಚಮ್ಯಂತವಾದ ಅಕ್ಷರ ಶಬ್ದವು ಪರವಿದ್ಯಾವಿಷಯನಾದ ಬ್ರಹ್ಮಲಿಂಗೋಪೇತವಾಗಿದೆ. ಮುಂದಿರುವ 'ಅಕ್ಷರಾತ್ ಪರತಃ ಪರಃ' ಎಂಬಲ್ಲಿರುವ ಪಂಚಮ್ಯಂತವಾದ ಅಕ್ಷರ ಶಬ್ದವು 'ಪರತ್ವಾವಧಿತ್ವ' ಎಂಬ ಅಬ್ರಹ್ಮಲಿಂಗದಿಂದ ಯುಕ್ತವಾಗಿದೆ. ಈ ಸೂಕ್ಷ್ಮತೆಯನ್ನು ತಿಳಿಸುವುದಕ್ಕಾಗಿ ಗ್ರಂಥಕಾರರು 'ಇತಿ ಪ್ರಥಮಾಂತಃ' ಎಂದು ಹೇಳಿದರು.

**प्रकाशः** – एवं यथाटीकं न्यायविवरणोक्तमुक्त्वा -

भृत्यबन्धादिकं राज्ञि राज्ञो बन्धादियोग्यतः ।
कारणं संशयस्य स्यादिति नैव प्रयुज्यते ।।

इति तदधीनत्वन्यायव्यभिचारनिरासपरानुव्याख्यानव्यावर्त्यरूपं तृतीयचिन्तास्थाद्यकोटौ हेतुभूतं पूर्वपक्षं वक्तुं सिद्धान्तिशङ्कामाह – **नन्वित्यादिना इति चेदित्यन्तेन** ।।

ಇಲ್ಲಿಯ ತನಕ ಟೀಕೆಯಲ್ಲಿ ಉಲ್ಲೇಖಿಸಿದ ನ್ಯಾಯವಿವರಣದ ಅಭಿಪ್ರಾಯವನ್ನು ಹೇಳಿದ್ದಾಯಿತು. ಈಗ ಅನುವ್ಯಾಖ್ಯಾನದಲ್ಲಿರುವ ಆಚಾರ್ಯರ ಮಾತನ್ನು ಉಲ್ಲೇಖಿಸುತ್ತಾ ಸಿದ್ಧಾಂತಿಗಳ ಶಂಕೆಯನ್ನು 'ನನು' ಇತ್ಯಾದಿ ಮಾತುಗಳಿಂದ ಅನುವಾದಿಸುತ್ತಿದ್ದಾರೆ. ಮೂರನೆಯ ಪ್ರಕಾರದ ಸಂಶಯದ ಮೊದಲನೆಯ ಕೋಟಿಯನ್ನು ಪೂರ್ವಪಕ್ಷವನ್ನಾಗಿ ಸಮರ್ಥಿಸಬೇಕಾಗಿದೆ. ಆ ಪೂರ್ವಪಕ್ಷಕ್ಕೆ ಕಾರಣವನ್ನು ಉಪಪಾದಿಸಲು ಸಿದ್ಧಾಂತಿಗಳ ಈ ಶಂಕೆಯು ಅನುಕೂಲವಾಗಿದೆ. ಸಿದ್ಧಾಂತಿಗಳ ಈ ಶಂಕೆಯಾದರೂ ಅನುವ್ಯಾಖ್ಯಾನದಲ್ಲಿ ಸೂಚಿತವಾಗಿದೆ. ಅದು ಹೀಗೆ -

'ಭೃತ್ಯಬಂಧಾದಿಕಂ ರಾಜ್ಞಿ ರಾಜ್ಞೋ ಬಂಧಾದಿಯೋಗ್ಯತಃ।
ಕಾರಣಮ್ ಸಂಶಯಸ್ಯ ಸ್ಯಾದೀತಿ ನೈವ ಪ್ರಯುಜ್ಯತೇ ॥

ಭೃತ್ಯನಲ್ಲಿರುವ ಬಂಧನಾದಿಗಳನ್ನು ರಾಜನಲ್ಲಿ ಹೇಳಬಾರದು. ರಾಜನಲ್ಲಿಯೂ ಬಂಧನಾದಿಗಳ ಅರ್ಹತೆಯಿರುವುದರಿಂದ ಬಂಧನವು ರಾಜನಿಗೋ ? ಭೃತ್ಯನಿಗೋ ? ಎಂಬ ಸಂಶಯಕ್ಕೆ ಆಸ್ಪದವಿದೆ. ಆ ಕಾರಣದಿಂದ 'ಜಯೀ' ಮೊದಲಾದ ಶಬ್ದಪ್ರಯೋಗವನ್ನು ರಾಜನಲ್ಲಿ ಮಾಡುವಂತೆ 'ಬದ್ಧಃ' ಇತ್ಯಾದಿ ಶಬ್ದ ಪ್ರಯೋಗವನ್ನು ಮಾಡಬಾರದು.

ಸ್ವಾತಂತ್ರ್ಯವನ್ನೇ ಪ್ರವೃತ್ತಿ ನಿಮಿತ್ತವೆಂದು ಹೇಳಿದರೆ ರಾಜನಲ್ಲಿ 'ಬದ್ಧಃ' ಮೊದಲಾದ ಶಬ್ದಗಳು ಬರಲಿ ಎಂದು ತದಧೀನತ್ವನ್ಯಾಯಕ್ಕೆ ವ್ಯಭಿಚಾರ ಬರುತ್ತದೆ. ಆ ವ್ಯಭಿಚಾರದ ಪರಿಹಾರದ ಸಲುವಾಗಿ ಮೇಲಿನ ಅನುವ್ಯಾಖ್ಯಾನ ಕಾರಿಕೆ ಹೊರಟಿದೆ. ವ್ಯಭಿಚಾರಕ್ಕೆ ಅವಕಾಶವಿಲ್ಲದ ಕಾರಣ ಸ್ವಾತಂತ್ರ್ಯವು ಪ್ರವೃತ್ತಿ ನಿಮಿತ್ತವಾಗಬಹುದು, ಇತ್ಯಾದಿಯಾಗಿ ಸಿದ್ಧಾಂತಿಗಳ ಅಭಿಪ್ರಾಯ.

**प्रकाशः** – स्यादेषा व्याख्या यत्र शब्दादवरत्वादिप्रतीतिः । यत्र पुनः ''अव्यक्तात् पुरुषः परः'' इत्यादावर्थादवरत्वादिप्राप्तिस्तत्र कथम् । नहि शब्दवदुपपत्तिर्व्याख्यानमर्हति'' इति सुधोक्तामाशङ्कामनूद्य तत्रोक्तसमाधिना निराह – **एतेनेति** ।।

'ಏತೇನ' ಇತ್ಯಾದಿ ವಾಕ್ಯಗಳಿಂದ ಸುಧೆಯಲ್ಲಿ ಹೇಳಿದ ಮತ್ತೊಂದು ಶಂಕಾವನ್ನು ಅನುವಾದಿಸಿ ಅಲ್ಲೇ ಹೇಳಿದ ಸಮಾಧಾನದಿಂದ ನಿರಾಕರಿಸುತ್ತಿದ್ದಾರೆ. ಅದು ಹೀಗೆ - 'ಸ್ವಾತಂತ್ರ್ಯ' ಎಂಬ ಅವರಾದಿ ಶಬ್ದಗಳನ್ನು ಪರಮಾತ್ಮನಲ್ಲಿ ವ್ಯಾಖ್ಯಾನಿಸುವುದು ಎಲ್ಲಿ ಶಬ್ದದಿಂದ ಸ್ಪಷ್ಟವಾಗಿ ಅವರತ್ವಾದಿಗಳ ಪ್ರತೀತಿ ಬರುತ್ತದೋ ಅಲ್ಲಿ ಮಾತ್ರ ಯುಕ್ತವಾಗುತ್ತದೆ. ಎಲ್ಲಿ ಅರ್ಥಾತ್ ಅವರತ್ವಾದಿಗಳ ಪ್ರತೀತಿ ಬರುತ್ತದೋ ಅಲ್ಲಿ ವ್ಯಾಖ್ಯಾನಿಸುವುದು

ಯುಕ್ತವಲ್ಲ. ಪ್ರಕೃತ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಪಂಚಮಿಯಿಂದ ಅವರತ್ವವು ಅರ್ಥಾತ್ ತಿಳಿಯುತ್ತದೆ. ಇಂತಹ ಅವರತ್ವಾದಿಗಳನ್ನು ಭಗವಂತನಲ್ಲಿ ಸಮನ್ವಯ ಮಾಡುವುದು ಹೇಗೆ? 'ನಹಿ ಶಬ್ದವದ್ ಉಪಪತ್ತಿಃ ವ್ಯಾಖ್ಯಾನಮರ್ಹತಿ' ಶಬ್ದದಂತೆ ಯುಕ್ತಿಯು ವ್ಯಾಖ್ಯಾನ ಅರ್ಹವಲ್ಲ. ಹೀಗೆ ಸುಧೆಯಲ್ಲಿ ಹೇಳಿದೆ. ಇದನ್ನೇ ಗ್ರಂಥಕಾರರೂ ಸಹ ಇಲ್ಲಿ ಹೇಳಿದ್ದಾರೆ.

**प्रकाशः – परत्वावधित्वमिति ।।** परत्वं प्रत्यवधित्वं यन्निष्ठं तस्यावरत्वमर्थादापद्यताम्। परत्वावधित्वं प्रति परगतं यत्स्वातन्त्र्यं तस्यावरत्वं प्रत्यपि तस्य स्वातन्त्र्याक्षेपकत्वमेव । नत्ववरत्वाक्षेपकत्वमित्यर्थः । अवधित्वदुःखित्वादिकं प्रत्याश्रयत्वमेव पञ्चमी दुःख्यादिशब्दप्रवृत्तिनिमित्तमित्येवंरूपमुक्तानुव्याख्यानव्यावर्त्य-चोद्यमुक्तशङ्कोपमर्दकतयाह – **भृत्येति ।।**

ದೇವದತ್ತನಿಗಿಂತ ಯಜ್ಞದತ್ತನು ನೀಚನಾಗಿರುತ್ತಾನೆ. ಆವಾಗ ದೇವದತ್ತನಲ್ಲಿರುವ ಪರತ್ವಕ್ಕೆ ಯಜ್ಞದತ್ತನು ಅವಧಿಯಾಗಿದ್ದಾನೆ. ಈ ಯಜ್ಞದತ್ತನಲ್ಲಿ ಅವರತ್ವವು ಅರ್ಥಾತ್ ಸಿದ್ಧವಾಗುತ್ತದೆ. ಆದರೆ ಪರವತ್ವಾವಧಿತ್ವವು ಯಜ್ಞದತ್ತನಲ್ಲಿ ಇಲ್ಲದೇ ಬೇರೆ ಯಾರಲ್ಲಿಯೋ ಇದ್ದಾಗ ಅಂತಹ ಪರವತ್ವಾವಧಿತ್ವಕ್ಕೆ ಬೇರೆಯವರಲ್ಲಿರುವ ಅವಧಿತ್ವಕ್ಕೆ ದೇವದತ್ತನು ಸ್ವತಂತ್ರನಾಗಿದ್ದಾನೆ ಎಂಬ ಮಾತ್ರದಿಂದ, ದೇವದತ್ತನಲ್ಲಿ ಅವರತ್ವವು ಬರುವುದಿಲ್ಲವಷ್ಟೇ. ಅಂದರೆ ಅವರತ್ವವನ್ನು ಕುರಿತು ಸ್ವಾತಂತ್ರ್ಯವು ದೇವದತ್ತನಲ್ಲಿ ಬರುತ್ತದೆ ಹೊರತು, ಅವರತ್ವವು ದೇವದತ್ತನಲ್ಲಿ ಸರ್ವಥಾ ಬರುವುದಿಲ್ಲ. ಆದ್ದರಿಂದ ಶಬ್ದವನ್ನು ವ್ಯಾಖ್ಯಾನ ಮಾಡಿದಂತೆ ಅರ್ಥಾಪತ್ತಿಯನ್ನು ವ್ಯಾಖ್ಯಾನ ಮಾಡಲು ಆಗುವುದಿಲ್ಲ ಆದ್ದರಿಂದ ಅನ್ಯಥಾನುಪಪತ್ತಿಯಿಂದ ಅವರತ್ವವು ಆಕ್ಷಿಪ್ತವಾಗುತ್ತದೆಂದು ಹೇಳುವುದೇ ಅಸಿದ್ಧವೆಂಬುದು ನಮ್ಮ ಅಭಿಪ್ರಾಯ. ಏಕೆಂದರೆ ಪಂಚಮೀವಿಭಕ್ತಿಯಿಂದ ತತ್ಪ್ರತಿ ಸ್ವಾತಂತ್ರ್ಯವು ಸಿದ್ಧವಾಗುತ್ತದೆ. ಅರ್ಥಾಪತ್ತಿಯಿಂದಲೂ ಕೂಡ ಇಂತಹ ಅವರತ್ವವನ್ನು ಕುರಿತು ಸ್ವಾತಂತ್ರ್ಯವು ಆಕ್ಷಿಪ್ತವಾಗುತ್ತದೆ ಹೊರತು, ಅವರತ್ವವು ಆಕ್ಷಿಪ್ತವಾಗುವುದಿಲ್ಲ. ಹೀಗೆ ಸಿದ್ಧಾಂತಿಯ ಆಶಂಕೆಯನ್ನು ಪೂರ್ವಪಕ್ಷದಲ್ಲಿ 'ಭೃತ್ಯಗತದೈರ್ಘ್ಯೇಣ' ಇತ್ಯಾದಿ ವಾಕ್ಯಗಳಿಂದ ನಿರಾಕರಿಸುತ್ತಿದ್ದಾರೆ. ಅಂದರೆ 'ಅವರತ್ವ', 'ದುಃಖಿತ್ವ' ಮೊದಲಾದವುಗಳಿಗೆ ಆಶ್ರಯತ್ವವೇ ಪ್ರವೃತ್ತಿನಿಮಿತ್ತವಾಗಿದೆ. ಪಂಚಮೀವಿಭಕ್ತಿಯಿಂದ ತಿಳಿಯಲ್ಪಟ್ಟ ಅವಧಿತ್ವಕ್ಕೆ ದುಃಖೀಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ದುಃಖಿತ್ವಕ್ಕಾಗಲೀ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಬಾರದು. ಹಿಂದೆ ಉದಾಹರಿಸಿದ ಅನುವ್ಯಾಖ್ಯಾನದಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಈ ವಾಕ್ಯಗಳಲ್ಲಿ ಸಮರ್ಥನೆ ಮಾಡಿದ್ದಾರೆ. ಆದ್ದರಿಂದ ರಾಜನಲ್ಲಿಯೂ ಕೂಡ 'ದುಃಖೀ' ಇತ್ಯಾದಿ ಪ್ರಯೋಗಗಳು ಬರಲಿ ಎಂಬ ಆಕ್ಷೇಪವು ಸಿದ್ಧಾಂತಿಗಳಿಗೆ ತಪ್ಪಿದ್ದಲ್ಲ. ಇಷ್ಟು ಪೂರ್ವಪಕ್ಷ.

**गुरुराजीयम् –** नन्वक्षराधिकरणेऽक्षरशब्दस्य ब्रह्मपरत्वेन निर्णीतत्वात्तत्रैव पञ्चम्युक्तावधित्वस्य ब्रह्मणि समर्थितत्वेन तन्न्यायेनाव्यक्तादिति पञ्चम्युक्तावधित्वमपि ब्रह्मणि सम्भवत्येवेति कथं तद्बाधकमित्यत आह – **अक्षरादिति ।।** ननु भृत्यगतदैर्घ्येण राज्ञः स्वातन्त्र्यमिति कथं तत्प्रयोगापादनमित्यतो दृष्टान्तोत्तरमाह – **राजाधीनेनेति ।।**




ಶ್ರುತಿಯಲ್ಲಿರುವ 'ಅವ್ಯಕ್ತಾತ್ ಪುರುಷಃ ಪರಃ' 'ಜೀವಾ ಏವ ತು ದುಃಖಿನಃ' ಎಂಬಲ್ಲಿ ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರಕೃತಿ, ಜೀವ ಇವರೇ ಪ್ರತಿಪಾದ್ಯರಾಗುತ್ತಾರೆ ಹೊರತು, ಬ್ರಹ್ಮನಲ್ಲ. ಏಕೆಂದರೆ ಅವ್ಯಕ್ತ, ಜೀವ ಮೊದಲಾದ ಶಬ್ದಗಳು ಪ್ರಕೃತಿ ಜೀವಾದಿಗಳಲ್ಲಿಯೇ ಪ್ರಸಿದ್ಧವಾಗಿವೆ. ಅನೇಕ ಪ್ರಮಾಣಗಳಿಂದ ಇವರೇ ಪ್ರತಿಪಾದ್ಯರಾಗುತ್ತಾರೆಂದು ಸಿದ್ಧವಾಗಿದೆ. 'ಅಕ್ಷರಾತ್ ಪರತಃ ಪರಃ' ಎಂಬಲ್ಲಿ ಪಂಚಮ್ಯಂತವಾದ ಅಕ್ಷರಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡಿದಂತೆ, ಇಲ್ಲಿಯೂ 'ಅವ್ಯಕ್ತಾತ್' ಎಂಬ ಪಂಚಮ್ಯಂತ ಪದವು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತದೆನ್ನಬಾರದು. ಅಕ್ಷರಾಧಿಕರಣದಲ್ಲಿ ಪಂಚಮ್ಯಂತವಾದ ಅಕ್ಷರಶಬ್ದದ ಸಮನ್ವಯವನ್ನು ಮಾಡಿಯೇ ಇಲ್ಲ. , 'ತದಕ್ಷರಮಧಿಗಮ್ಯತೇ' ಎಂಬಲ್ಲಿರುವ ಅಕ್ಷರಶಬ್ದದ ಸಮನ್ವಯವನ್ನು ಮಾಡಿದ್ದಾರೆ.

'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಪಂಚಮೀವಿಭಕ್ತಿಯು ಕೇಳಿಸುತ್ತಿದೆ. ಅವ್ಯಕ್ತವು ಪುರುಷನಿಗಿಂತ 'ಅವರ' ಎಂದು ಇದರಿಂದ ಸೂಚಿತವಾಗಿದೆ. ಒಂದುವೇಳೆ ಅವ್ಯಕ್ತಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾದರೆ, ಅವರತ್ವವು ಬ್ರಹ್ಮನಲ್ಲಿ ಬಂದಂತಾಗುತ್ತದೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಈ ಅವಧಿತ್ವವು ಬ್ರಹ್ಮನಲ್ಲಿ ಬರುತ್ತದೆನ್ನಬಾರದು. ಒಂದುವೇಳೆ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಪರಿಗಣಿಸುವುದಾದರೆ, ಭೃತ್ಯನಲ್ಲಿರುವ ಅಪಜಯ, ಬಂಧನ ಮೊದಲಾದವುಗಳು ರಾಜನ ಅಧೀನವಾದ್ದರಿಂದ ರಾಜನಲ್ಲಿಯೂ 'ಬದ್ಧಃ' 'ಪರಾಜಿತಃ' ಮೊದಲಾದ ಶಬ್ದಪ್ರಯೋಗಗಳು ಬರಬೇಕಾಗುತ್ತದೆ. ಒಂದು ವೇಳೆ ಅಮಂಗಲವಾದ್ದರಿಂದ ರಾಜನಲ್ಲಿ ಇಂತಹ ಶಬ್ದಗಳನ್ನು ಪ್ರಯೋಗಿಸಬಾರದು ಎನ್ನುವುದಾದರೆ, ಬ್ರಹ್ಮನಲ್ಲಿಯೂ ಕೂಡ ಇಂತಹ ಪ್ರಯೋಗಗಳನ್ನು ಮಾಡಬಾರದು.



## ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ದೋಷವಾಚಕಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬೇಕು

### तात्पर्यचन्द्रिका

**सिद्धान्तस्तु –**

**स्वातन्त्र्यं तद्गतत्वं च शब्दवृत्तेर्हि कारणम् ।**
**स्वातन्त्र्यं तत्र मुख्यं स्यात् कुतो राज्ञि जयोऽन्यथा ॥**

**इत्यनुव्याख्यान उक्तः ।**

ಅನುವಾದ - ಈ ಅಧಿಕರಣದ ಸಿದ್ಧಾಂತವು ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಹೀಗಿದೆ - 'ಸ್ವಾತಂತ್ರ್ಯ' ಮತ್ತು 'ಆಶ್ರಯತ್ವ' ಎರಡೂ ಶಬ್ದವ್ಯವಹಾರಕ್ಕೆ ಕಾರಣವಾಗುತ್ತವೆ. ಅವುಗಳಲ್ಲಿ ಸ್ವಾತಂತ್ರ್ಯವೇ ಮುಖ್ಯಕಾರಣ. ಹಾಗಾದಲ್ಲಿ ರಾಜನಲ್ಲಿ 'ಜಯ' ಶಬ್ದದ ವ್ಯವಹಾರ ಹೇಗೆ?

**अयं भावः – स्वातन्त्र्यस्य निमित्तत्वेऽपि न राज्ञि बद्धादिशब्दाः । यतः स्वातन्त्र्यं नाम नियामकत्वे सति तदाश्रयत्वप्रयुक्तनीचत्वायोग्यत्वमिह विवक्षितम्। एवं च भृत्यादिगतदुःखादिकं प्रति राज्ञो न स्वातन्त्र्यम् । तदाश्रयत्वप्रयुक्त-नीचत्वयोग्यत्वात् । किन्तु जयादिकं प्रत्येव । तदयोग्यत्वात् ।**

ಅಭಿಪ್ರಾಯ ಹೀಗಿದೆ - ಸ್ವಾತಂತ್ರ್ಯವು ಶಬ್ದ ಪ್ರವೃತ್ತಿನಿಮಿತ್ತವಾಗಿದ್ದರೂ ರಾಜನಲ್ಲಿ ಬದ್ಧಾದಿ ಶಬ್ದ ಪ್ರಯೋಗಗಳನ್ನು ಮಾಡಬೇಕಾಗಿಲ್ಲ. ಏಕೆಂದರೆ ಸ್ವಾತಂತ್ರ್ಯದ ಲಕ್ಷಣ ಹೀಗಿದೆ - 'ನಿಯಾಮಕತ್ವೇ ಸತಿ ತದಾಶ್ರಯತ್ವಪ್ರಯುಕ್ತನೀಚತ್ವಾಯೋಗ್ಯತ್ವಮ್' 'ನಿಯಾಮಕನಾಗಿದ್ದು ಧರ್ಮಗಳ ಆಶ್ರಯತ್ವ ಪ್ರಯುಕ್ತವಾಗಿ ನೀಚತ್ವವು ಬರಲು ಅರ್ಹತೆ ಇಲ್ಲದಿರುವಿಕೆ' ಎಂದು ಈ ರೀತಿಯಾದ ವಿವಕ್ಷೆಯಿದ್ದಾಗ ಭೃತ್ಯಾದಿಗಳಲ್ಲಿರುವ ದುಃಖಾದಿಗಳಿಗೆ ರಾಜನು ಸ್ವಾಮಿಯಾಗಲಾರನು. ಏಕೆಂದರೆ ದುಃಖಕ್ಕೆ ರಾಜನು ಆಶ್ರಯನೆಂದು ಹೇಳಿದರೆ ತತ್ಪ್ರಯುಕ್ತವಾದ ನೀಚತ್ವ ಬರುವ ಯೋಗ್ಯತೆಯು ರಾಜನಿಗಿದೆ. ಸ್ವಾತಂತ್ರ್ಯದ ಲಕ್ಷಣವು ಬರಲಿಲ್ಲವಾದ್ದರಿಂದ ದುಃಖಾದಿಶಬ್ದಪ್ರಯೋಗದಲ್ಲಿ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗದು ಹೊರತು 'ಜಯ' ಮೊದಲಾದ ಶಬ್ದಪ್ರಯೋಗದಲ್ಲಷ್ಟೇ ಸ್ವಾತಂತ್ರ್ಯವು ನಿಮಿತ್ತವಾಗುತ್ತದೆ. ಜಯ ಮೊದಲಾದ ಧರ್ಮಗಳು ರಾಜನಲ್ಲಿ ಬಂದಾಗ ನೀಚತ್ವವು ಸುತರಾಂ ಬರಲಾರದು. ಆದ್ದರಿಂದ ನಿರಾತಂಕವಾಗಿ ಭೃತ್ಯನು ಗೆದ್ದಾಗ ರಾಜನು ಗೆದ್ದ ಎಂದು ಪ್ರಯೋಗಿಸಬಹುದು. ಇಲ್ಲಿ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾಗಲು ಯಾವ ತೊಂದರೆಯೂ ಇರುವುದಿಲ್ಲ. ರಾಜನ ವಿಷಯದಲ್ಲಿ ಮಾತ್ರ ಹೀಗೆ.

**ब्रह्मणस्तु तदयोग्यत्वादस्ति तत्प्रत्यपि स्वातन्त्र्यम् । इन्द्रादिशब्दनिमित्तैश्वर्यं प्रति तु ब्रह्मणो योग्यत्वेऽपि तस्य नीचत्वाप्रयोजकत्वादेवास्ति तत्प्रत्यपि स्वातन्त्र्यम् । आश्रयत्वपक्षेऽपि हि नाश्रयत्वमात्रं निमित्तम् । रूपदण्डाद्याधारे कालादौ रूपीत्याद्यप्रयोगात् ।**

ಪರಮಾತ್ಮನ ವಿಷಯದಲ್ಲಿ ವ್ಯತ್ಯಾಸವಿದೆ. ಜೀವರಲ್ಲಿರುವಂತಹ ದುಃಖಾದಿಗಳಿಗೆ ಪರಮಾತ್ಮನು ನಿಯಾಮಕನಾಗಿದ್ದಾನೆ ಮತ್ತು ದುಃಖಕ್ಕೆ ಆಶ್ರಯನೆಂದು ಹೇಳಿದಾಗ ನೀಚತ್ವವು ಪರಮಾತ್ಮನಲ್ಲಿ ಬರುವುದಿಲ್ಲ. ನೀಚತ್ವವು ಬರುವ ಯೋಗ್ಯತೆಯೇ ಅವನಲ್ಲಿ ಇರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, 'ದುಃಖೀ' ಮೊದಲಾದ ಶಬ್ದಗಳನ್ನು ಪರಮಾತ್ಮನಲ್ಲಿ ಪ್ರಯೋಗಿಸಬಹುದು.

ಆಶ್ರಯತ್ವಪಕ್ಷದಲ್ಲಿಯೂ ಕೂಡ ಕೇವಲ ಆಶ್ರಯತ್ವವನ್ನೇ ಪ್ರವೃತ್ತಿನಿಮಿತ್ತವೆನ್ನಲಾಗದು. ಹಾಗೇನಾದರೂ ಹೇಳಿದರೆ ರೂಪ ಹಾಗೂ ದಂಡಗಳಿಗೆ ಆಶ್ರಯವಾದ ಕಾಲದಲ್ಲಿಯೂ 'ರೂಪೀ',

'ದಂಡೀ' ಎಂಬ ಪ್ರಯೋಗಗಳು ಬರಬೇಕಾದೀತು. ಆದರೆ ಕಾಲದಲ್ಲಿ 'ರೂಪೀ' ಎಂಬ ಪ್ರಯೋಗವು ಲೋಕದಲ್ಲಿ ಎಲ್ಲಿಯೂ ಇರುವುದಿಲ್ಲ.

**प्रकाशः –**

तदधीनत्वसूत्रव्यावर्त्यपूर्वपक्षस्यैवेह प्रपञ्चनात् तत् व्याख्यानपरानुव्याख्यान-तात्पर्यविवरणेन पूर्वपक्षप्रतिक्षेपमाह – **सिद्धान्तस्त्विति** ।।

ವಿವರಣೆ - 'ತದಧೀನತ್ವಾದರ್ಥವತ್' ಎಂಬ ಸೂತ್ರದಿಂದ ಯಾವ ಪೂರ್ವಪಕ್ಷವು ನಿರಾಕೃತವಾಗುತ್ತದೋ, ಆ ಪೂರ್ವಪಕ್ಷವನ್ನಷ್ಟೇ ಇಲ್ಲಿಯ ತನಕ ಸಮರ್ಥಿಸಿದರು. ಈ ಪೂರ್ವಪಕ್ಷದ ನಿರಾಕರಣೆಯನ್ನು ಮಾಡುತ್ತಾ ಅಧಿಕರಣದ ಸಿದ್ಧಾಂತವನ್ನು ಅನುವ್ಯಾಖ್ಯಾನದಲ್ಲಿ "ಸ್ವಾತಂತ್ರ್ಯಂ ತದ್ಗತತ್ವಂ ಚ" ಇತ್ಯಾದಿ ಮಾತುಗಳಿಂದ ಹೇಳಿದ್ದಾರೆ. ಅನುವ್ಯಾಖ್ಯಾನದ ತಾತ್ಪರ್ಯವನ್ನೇ ಗ್ರಂಥಕಾರರು "ಸಿದ್ಧಾಂತಸ್ತು" ಇತ್ಯಾದಿ ಮಾತುಗಳಿಂದ ವಿವರಿಸುತ್ತಿದ್ದಾರೆ.

**प्रकाशः –** उक्त इत्यन्वयः । स च प्रागेव विवृत इति भावः । नन्वेतावता पूर्वोक्तातिप्रसङ्गो न परिहृत इत्यत आह – **अयं भाव इति** ।।

ಶಬ್ದವು ಯಾವ ಧರ್ಮವನ್ನು ಬೋಧಿಸುತ್ತದೋ, ಆ ಧರ್ಮ ಇರುವವನು ಶಬ್ದಪ್ರತಿಪಾದ್ಯನಾಗುತ್ತಾನೆ. ಆ ಧರ್ಮದ ನಿಯಾಮಕನೂ ಶಬ್ದಪ್ರತಿಪಾದ್ಯನಾಗುತ್ತಾನೆ ಎಂದು ಅನುವ್ಯಾಖ್ಯಾನದ ಪ್ರಕಾರ ಉತ್ತರಿಸಿದಂತಾಯಿತು. ಹೀಗೆ ಹೇಳಿದ ಮಾತ್ರದಿಂದ ಹಿಂದಿನ ಅತಿಪ್ರಸಂಗವೇನು ಪರಿಹಾರವಾಗಲಿಲ್ಲವಲ್ಲ ? ಎಂದು ಪ್ರಶ್ನಿಸಿದರೆ ಗ್ರಂಥಕಾರರು "ಅಯಂ ಭಾವಃ" ಎಂದು ಸ್ಪಷ್ಟವಾಗಿ ವಿವರಿಸುತ್ತಾ ಅತಿಪ್ರಸಂಗವನ್ನು ಪರಿಹರಿಸಿದ್ದಾರೆ.

**प्रकाशः –** "राज्ञो बन्धादियोग्यतः" इत्याद्युत्तरानुव्याख्यानानुरोधेन स्वातन्त्र्यं निरुच्यातिप्रसङ्गं निराह – **यत इति** ।। उत्तरवाक्येनान्वयः । अतो नेति पूर्वेण योज्यम् ।। **तदिति** ।। यत्प्रति स्वातन्त्र्यमुच्यते तदाश्रयत्वप्रयुक्तेत्यर्थः । बुद्धिस्थदुःखबन्धैश्वर्यादिस्तच्छब्दार्थः ।

ಸ್ವಾಮಿತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದರೆ ಭೃತ್ಯನಿಗೆ ದುಃಖವಾದರೆ ರಾಜನಲ್ಲಿ 'ದುಃಖೀ' ಇತ್ಯಾದಿ ಪ್ರಯೋಗವನ್ನು ಮಾಡಬೇಕಾದೀತು ಎಂಬ ಅತಿಪ್ರಸಂಗವನ್ನು ಹಿಂದೆ ಹೇಳಲಾಗಿತ್ತು. ಇದಕ್ಕೆ ಉತ್ತರವಿಷ್ಟೇ - 'ಸ್ವಾತಂತ್ರ್ಯ' ಶಬ್ದಾರ್ಥವನ್ನು ಸ್ಪಷ್ಟವಾಗಿ ತಿಳಿದುಕೊಂಡರೆ ಯಾವ ಅತಿಪ್ರಸಂಗವೂ ಬರುವುದಿಲ್ಲ. "ಸ್ವಾತಂತ್ರ್ಯ" ಎಂದರೆ "ನಿಯಾಮಕತ್ವೇ ಸತಿ ತದಾಶ್ರಯತ್ವಪ್ರಯುಕ್ತನೀಚತ್ವಾಯೋಗ್ಯತ್ವಮ್" ಎಂದು.

"ರಾಜ್ಞೋ ಬಂಧಾದಿಯೋಗ್ಯತಃ" "ರಾಜನು ಬಂಧನಾದಿ ದೋಷಗಳಿಗೆ ಅರ್ಹನಾಗಿದ್ದಾನೆ" ಇತ್ಯಾದಿ ಅನುವ್ಯಾಖ್ಯಾನದಿಂದ ಈ ಸ್ವಾತಂತ್ರ್ಯದ ಲಕ್ಷಣವು ತಿಳಿಯುತ್ತದೆ. ಈ ಸ್ವಾತಂತ್ರ್ಯಲಕ್ಷಣವು ಬಾರದ ಕಾರಣ ಬದ್ಧಾದಿಶಬ್ದಪ್ರಯೋಗವು ರಾಜನಲ್ಲಿ ಕೂಡಲಾರದು.

ಲಕ್ಷಣದ ಭಾವ ಹೀಗಿದೆ - ಶಬ್ದಗಳ ಪ್ರಯೋಗಕ್ಕೆ ಪ್ರವೃತ್ತಿನಿಮಿತ್ತವು ಅತ್ಯಾವಶ್ಯಕ. ದುಃಖಾದಿಶಬ್ದಗಳನ್ನು ವಿಷ್ಣುವಿನಲ್ಲಿ ಪ್ರಯೋಗಿಸಬೇಕಾದರೆ "ಸ್ವಾಮಿತ್ವ"ವೇ ಪ್ರವೃತ್ತಿನಿಮಿತ್ತ, ಜೀವರಲ್ಲಿರುವ ದುಃಖಾದಿಗಳಿಗೆ ನಿಯಾಮಕನಾಗಿರಬೇಕು ಮತ್ತು ಅಂತಹ ದುಃಖಗಳು ತನ್ನಲ್ಲಿ ಬರುವುದರಿಂದ ತಾನು ನೀಚನಾಗಬಾರದು. ಭಗವಂತನಾದರೂ ಸಹ ಜೀವನಲ್ಲಿರುವ ದುಃಖಾದಿಗಳಿಗೆ ನಿಯಾಮಕನಾಗಿದ್ದಾನೆ. ದುಃಖಾದಿಗಳು ಬರುವುದರಿಂದ ನೀಚತ್ವವನ್ನು ಹೊಂದಲು ಅರ್ಹನಾಗಿಲ್ಲ. ಆದ್ದರಿಂದ ಭಗವಂತನನ್ನು 'ದುಃಖೀ' ಎಂದು ಕರೆಯಬಹುದು. ಇಲ್ಲಿ ಸ್ವಾತಂತ್ರ್ಯ ಎಂಬ ಧರ್ಮವು ಪ್ರವೃತ್ತಿನಿಮಿತ್ತವಾಗುತ್ತದೆ. ಹೀಗೆಯೇ ಇಂದ್ರಾದಿಗಳಲ್ಲಿರುವ ಐಶ್ವರ್ಯಾದಿಗಳಿಗೂ ನಿಯಾಮಕನಾಗಿದ್ದಾನೆ. ಅಂತಹ ಐಶ್ವರ್ಯ ತನ್ನಲ್ಲಿ ಬರುವುದರಿಂದ ನೀಚತ್ವವು ಬರಲಾರದು. ಇಲ್ಲಿಯೂ ಸಹ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಇಂದ್ರಾದಿ ಶಬ್ದಗಳನ್ನು ಪ್ರಯೋಗಿಸಬಹುದು.

**प्रकाशः** – तदाश्रयत्वप्रयुक्तनीचत्वायोग्यत्वं च तत्प्रयुक्तनीचत्वस्य काप्यप्रसिद्ध्यावा क्वचित्प्रसिद्धत्वेप्यन्यत्रानाश्रयत्वादिना द्वेधा । तत्राद्ये गुणरूपैश्वर्यादीनिन्द्रादिशब्द-प्रवृत्तिहेतून् प्रति विष्णोस्स्वातन्त्र्यसिद्धिः । ऐश्वर्यादिप्रयुक्तनीचत्वस्य काप्यभावात्। द्वितीये दोषरूपदुःखबन्धादीन् दुःखिबद्धादिशब्दप्रवृत्तिहेतून् प्रति स्वातन्त्र्यसिद्धिः। तदाश्रयत्वप्रयुक्तनीचत्वस्य चेतनान्तरे सम्भवेऽपीह विष्णोस्तदनाश्रयत्वेन तत्प्रयुक्त-नीचत्वायोग्यत्वात् ।

ಲಕ್ಷಣದಲ್ಲಿ 'ತದಾಶ್ರಯತ್ವಪ್ರಯುಕ್ತನೀಚತ್ವಾಯೋಗ್ಯತ್ವಮ್' ಎಂದು ಇದೆ. ಇದು ಎರಡು ವಿಧವಾಗಿದೆ -

೧. ಧರ್ಮಗಳ ಪ್ರಯುಕ್ತವಾಗಿ ನೀಚತ್ವವು ಅಪ್ರಸಿದ್ಧವಾಗಿರುವಿಕೆ.

೨. ಕೆಲವಡೆ ಪ್ರಸಿದ್ಧವಾಗಿದ್ದರೂ ಬೇರೆಡೆ ಅನಾಶ್ರಯವಾಗಿರುವಿಕೆ ಎಂದು.

ಮೊದಲನೆಯ ಪಕ್ಷದಲ್ಲಿ ಇಂದ್ರಾದಿ ಶಬ್ದಗಳ ಪ್ರವೃತ್ತಿನಿಮಿತ್ತವಾದ ಗುಣರೂಪವಾದ ಐಶ್ವರ್ಯಾದಿಗಳನ್ನು ಕುರಿತು ವಿಷ್ಣುವಿಗೆ ಸ್ವಾತಂತ್ರ್ಯವು ಸಿದ್ಧವಾಗುತ್ತದೆ. ಏಕೆಂದರೆ ಐಶ್ವರ್ಯಪ್ರಯುಕ್ತವಾದ ನೀಚತ್ವವು ಎಲ್ಲಿಯೂ ಕಂಡಿಲ್ಲ. ಆದ್ದರಿಂದ ಸ್ವಾತಂತ್ರ್ಯ ಲಕ್ಷಣವು ಬರುತ್ತದೆಂದು ಇಂದ್ರಾದಿಶಬ್ದಗಳನ್ನು ಭಗವಂತನಲ್ಲಿ ವ್ಯವಹರಿಸಬಹುದು. ಎರಡನೆಯ ಪಕ್ಷದಲ್ಲಿ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳ ಪ್ರವೃತ್ತಿ ಹೇತುಗಳಾದ ದೋಷರೂಪವಾದ ದುಃಖಬಂಧಾದಿಗಳನ್ನು ಕುರಿತು ಸ್ವಾತಂತ್ರ್ಯವು ಸಿದ್ಧವಾಗುತ್ತದೆ. ಇಂತಹ ದೋಷಾದಿಗಳಿಗೆ ಯಾವ ಚೇತನನು ಆಶ್ರಯನಾಗಿರುತ್ತಾನೋ ಅವನಲ್ಲಿ ಸಹಜವಾದ ನೀಚತ್ವವು ಬರುತ್ತದೆ. ಆದರೆ ವಿಷ್ಣುವಿನಲ್ಲಿ ಇಂತಹ ದುಃಖಾದಿಗಳು ಇಲ್ಲದ ಕಾರಣ ತತ್‌ಪ್ರಯುಕ್ತವಾದ ನೀಚತ್ವವು ಬರಲಾರದು.

ಐಶ್ವರ್ಯಾದಿಗಳು ವಿಷ್ಣುವಿನಲ್ಲಿ ಬರುತ್ತವೆ. ಇಂತಹ ಧರ್ಮಗಳಿಂದ ವಿಷ್ಣುವಿನಲ್ಲಿ ಉಚ್ಚತ್ವವೇ ಬರುತ್ತದೆ ಹೊರತು ನೀಚತ್ವ ಬರುವುದಿಲ್ಲ. ಆದ್ದರಿಂದ 'ಐಶ್ವರ್ಯಾಶ್ರಯತ್ವಪ್ರಯುಕ್ತನೀಚತ್ವಾಯೋಗ್ಯತ್ವವು' ವಿಷ್ಣುವಿನಲ್ಲಿ ಬಂತು. ಹಾಗೆಯೇ 'ದುಃಖೀ' ಮೊದಲಾದ ಶಬ್ದಗಳಲ್ಲಿ ಹೇಳಲು ಬರುವುದಿಲ್ಲ. ದುಃಖಾದಿಗಳೇ ಭಗವಂತನಲ್ಲಿ ಇಲ್ಲ. ಆದ್ದರಿಂದ ತದಾಶ್ರಯತ್ವ ಪ್ರಯುಕ್ತವಾದ ನೀಚತ್ವವು ಭಗವಂತನಲ್ಲಿ ಬರುವುದಿಲ್ಲ. ಹೀಗೆ ವ್ಯತ್ಯಾಸವಿದೆ. ಅಂತೂ ಎರಡು ಕಡೆ ಲಕ್ಷಣವು ಬರುವುದರಿಂದ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವು ಇಂದ್ರಶಬ್ದದಲ್ಲಿ 'ದುಃಖೀ' ಮೊದಲಾದ ಶಬ್ದಗಳಲ್ಲಿ ಸಮಾನವಾಗಿದೆ. ಇಂದ್ರಶಬ್ದದ ಸಮನ್ವಯದಿಂದ ಭಗವಂತನಲ್ಲಿ ಮಹಿಮಾಧಿಕ್ಯ ಬಂದಂತೆ 'ದುಃಖೀ' ಶಬ್ದದ ಸಮನ್ವಯದಿಂದಲೂ ಮಹಿಮಾಧಿಕ್ಯ ಬಂದೇ ಬರುತ್ತದೆ. ಆದ್ದರಿಂದ ದುಷ್ಟ ಶಬ್ದಗಳ ಸಮನ್ವಯ ಬೇಡ ಮಂಗಳ ಶಬ್ದಗಳ ಸಮನ್ವಯ ಸಾಕು ಎಂಬ ಆಕ್ಷೇಪಕ್ಕೆ ಅರ್ಥವೇ ಇಲ್ಲ.

**ಪ್ರಕಾಶಃ** – नन्वाद्ये तस्यैवाप्रसिद्धत्वे कथं तद्योग्यत्वनिषेधः । क्वचित्प्रसिद्धस्यैव निषेधादिति चेन्न ।

ಪ್ರಶ್ನೆ - ಮೊದಲನೆಯ ಪಕ್ಷದಲ್ಲಿ ಐಶ್ವರ್ಯಪ್ರಯುಕ್ತವಾದ ನೀಚತ್ವವನ್ನು ಅಪ್ರಸಿದ್ಧವೆಂದು ಹೇಳಿದಿರಿ. ಐಶ್ವರ್ಯ ಬರುವುದರಿಂದ ನೀಚತ್ವವು ಎಲ್ಲಿಯೂ ಬರಲಾರದು ಎಂದು ಇದರ ಭಾವ. ಐಶ್ವರ್ಯ ಪ್ರಯುಕ್ತವಾದ ನೀಚತ್ವವೇ ಅತ್ಯಂತ ಅಪ್ರಸಿದ್ಧವಾಗಿರಬೇಕಾದರೆ ನಿಷೇಧ ಮಾಡಲು ಹೇಗೆ ಸಾಧ್ಯ? ಪ್ರಸಿದ್ಧವಾದದ್ದಷ್ಟೇ ನಿಷೇಧಕ್ಕೆ ಅರ್ಹ ಎಲ್ಲಿಯೂ ಪ್ರಸಿದ್ಧವಾಗದ್ದನ್ನು ನಿಷೇಧ ಮಾಡಲು ಸಾಧ್ಯವಿಲ್ಲ.

**ಪ್ರಕಾಶಃ** – सिद्धान्तेऽप्रसिद्धस्यापि निषेधात् । ''तस्य नीचत्वाप्रयोजकत्वात्'' इत्यग्रिमवाक्यपर्यालोचनयाऽस्यैवार्थस्य पर्यवसानात् । उक्तं च तर्कताण्डवे व्याप्तिलक्षणोक्तिप्रस्तावे ''नच केवलान्वयिन्यव्याप्तिः । तत्र साध्याभावस्यासत्त्वादेव साध्याभावे सति साधनस्य योपपत्तिः तदभावरूपानुपपत्तेस्सत्वात् । मन्मतेऽप्रामाणिकस्यापि निषेधप्रतियोगित्वात्'' इति ।

ಉತ್ತರ - ಅಪ್ರಸಿದ್ಧವಾದುದನ್ನೂ ಸಹ ನಿಷೇಧ ಮಾಡುವುದು ಸಿದ್ಧಾಂತದಲ್ಲಿ ಒಪ್ಪಲಾಗಿದೆ. 'ತಸ್ಯ ನೀಚತ್ವಾಪ್ರಯೋಜಕತ್ವಾತ್' ಗ್ರಂಥಕಾರರು ಹೇಳುವ ಮುಂದಿನ ಈ ವಾಕ್ಯವನ್ನು ಗಮನಿಸಿದಾಗ ಅಪ್ರಸಿದ್ಧವಾದುದನ್ನು ನಿಷೇಧಿಸಬಹುದೆಂದು ತಿಳಿಯುತ್ತದೆ. ಮತ್ತು ತರ್ಕತಾಂಡವದಲ್ಲಿ ವ್ಯಾಪ್ತಿಲಕ್ಷಣವನ್ನು ಹೇಳುವಾಗ ಗ್ರಂಥಕಾರರೇ ಹೀಗೆ ಸಮರ್ಥಿಸಿದ್ದಾರೆ - 'ನಚ ಕೇವಲಾನ್ವಯಿನ್ಯವ್ಯಾಪ್ತಿಃ' ''ತತ್ರ ಸಾಧ್ಯಾಭಾವಸ್ಯ ಅಸತ್ತ್ವಾದೇವ ಸಾಧ್ಯಾಭಾವೇ ಸತಿ ಸಾಧನಸ್ಯ ಯೋಪಪತ್ತಿಃ ತದಭಾವರೂಪಾನುಪಪತ್ತೇಃ ಸತ್ವಾತ್'' ಈ ವಾಕ್ಯದ ಅಭಿಪ್ರಾಯ ಹೀಗಿದೆ - ''ಸಾಧ್ಯಂ ವಿನಾ ಸಾಧನಸ್ಯ ಅನುಪಪತ್ತಿಃ ಅವಿನಾಭಾವಃ'' ಎಂದು ವ್ಯಾಪ್ತಿಯ ಲಕ್ಷಣ. ಸಾಧ್ಯವನ್ನು ಬಿಟ್ಟು ಹೇತುವು ಇರುವುದಿಲ್ಲ ಎಂದು ವ್ಯಾಪ್ತಿ ಲಕ್ಷಣವನ್ನು ಹೇಳಿದರೆ ''ಇದಂ ವಾಚ್ಯಂ ಜ್ಞೇಯತ್ವಾತ್'' ಎಂಬ ಕೇವಲಾನ್ವಯಿ ಅನುಮಾನದಲ್ಲಿ ಅವ್ಯಾಪ್ತಿ ಬರುತ್ತದೆ. ಕೇವಲಾನ್ವಯಿ ಅನುಮಾನದಲ್ಲಿ ಸಾಧ್ಯಾಭಾವವೇ ಅಪ್ರಸಿದ್ಧ. ವಾಚ್ಯತ್ವವು ಎಲ್ಲೆಡೆ ಇರುವುದರಿಂದ ಅದರ

ಅಭಾವವನ್ನು ಎಲ್ಲಿಯೂ ಹೇಳಲಾಗದು. ಆದರೂ ಸಹ ಸಾಧ್ಯಾಭಾವದಿಂದ ಸಾಧನಾಭಾವಕ್ಕೆ ವ್ಯಾಪ್ತಿಯನ್ನು ಹೇಳಿ ತದಭಾವರೂಪ ಅನುಪಪತ್ತಿಯನ್ನು ಹೇಳಿದ್ದಾರೆ. ಸಾಧ್ಯಾಭಾವವಿದ್ದು ಸಾಧನದ ಇರುವಿಕೆಯು ಎಲ್ಲಿ ಇರುತ್ತದೋ ತದಭಾವರೂಪವಾದ ಅನುಪಪತ್ತಿಯನ್ನು ಹೇಳಿದ್ದಾರೆ. ಇಲ್ಲಿ ಸಾಧ್ಯಾಭಾವವೇ ಅಪ್ರಸಿದ್ಧವಾಗಿರುವಾಗ ಪುನಃ ಅದರ ಅಭಾವರೂಪವಾದ ಅನುಪಪತ್ತಿಯನ್ನು ಹೇಳಿದ್ದರಿಂದ ಅಪ್ರಸಿದ್ಧವಾದುದನ್ನು ನಿಷೇಧ ಮಾಡಬಹುದೆಂದು ಸಿದ್ಧಾಂತಿಗಳು ಒಪ್ಪಿದ್ದಾರೆ ಎಂದು ತಿಳಿಯಬೇಕು. ''ಮನ್ಮತೇ ಅಪ್ರಾಮಾಣಿಕಸ್ಯಾಪಿ ನಿಷೇಧಪ್ರತಿಯೋಗಿತ್ವಾತ್'' ಎಂದು ಗ್ರಂಥಕಾರರು ಅಲ್ಲಿಯೇ ಮುಂದೆ ಹೇಳಿದ್ದಾರೆ. ಪ್ರಕೃತ ಐಶ್ವರ್ಯ ಪ್ರಯುಕ್ತವಾದ ನೀಚತ್ವವು ಅಪ್ರಸಿದ್ಧವಾಗಿದ್ದರೂ ಸಹ ನಿಷೇಧ ಮಾಡುವುದು ತಪ್ಪಲ್ಲ.

**प्रकाशः** – एवं चैतस्य गुणदोषस्वातन्त्र्यसाधारणतया नाव्याप्तिचोद्यावकाशः । तत्र घटादे रूपाद्याश्रयत्वप्रयुक्तनीचत्वायोग्यत्वमस्ति । रूपाद्याश्रयत्वस्य नीचत्वाप्रयोजकत्वात् । एवं च घटादेरपि रूपादिस्वातन्त्र्यापत्त्या तत्र रूपादिपद-प्रयोगस्स्यादतस्सत्यन्तम् । नियामकत्वं च विनियोजकत्वादिः कश्चन चेतनधर्मः ।

ದಲಕೃತ್ಯ ವಿಚಾರ - ''ನಿಯಾಮಕತ್ವೇ ಸತಿ ತದಾಶ್ರಯತ್ವ ಪ್ರಯುಕ್ತ ನೀಚತ್ವಾಯೋಗ್ಯತ್ವಮ್'' ಎಂದು ಸ್ವಾತಂತ್ರ್ಯದ ಲಕ್ಷಣ. ಇಲ್ಲಿ ನಿಯಾಮಕತ್ವವೆಂಬ ಸತ್ಯಂತ ದಲವನ್ನು ಹೇಳದಿದ್ದರೆ ಘಟದಲ್ಲಿ ರೂಪಪದಪ್ರಯೋಗವು ಬರಲಿ ಎಂಬ ಅತಿವ್ಯಾಪ್ತಿ ಬರುತ್ತದೆ. ಘಟವು ರೂಪವೆಂಬ ಧರ್ಮಕ್ಕೆ ಆಶ್ರಯವಾಗಿದೆ. ಆದರೆ ತತ್ಪ್ರಯುಕ್ತವಾದ ನೀಚತ್ವವೇನು ಘಟದಲ್ಲಿ ಬರುವುದಿಲ್ಲ. ರೂಪಾದ್ಯಾಶ್ರಯತ್ವವು ನೀಚತ್ವಕ್ಕೆ ಪ್ರಯೋಜಕವಲ್ಲ ಆದ್ದರಿಂದ ರೂಪಾದ್ಯಾಶ್ರಯತ್ವಪ್ರಯುಕ್ತನೀಚತ್ವಾಯೋಗ್ಯತ್ವವು ಘಟದಲ್ಲಿಯೂ ಬಂತು. ಹೀಗೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಘಟದಲ್ಲಿಯೂ ರೂಪಪದದ ಪ್ರಯೋಗವನ್ನು ಮಾಡಬೇಕಾದೀತು. ಅದಕ್ಕೋಸ್ಕರ ನಿಯಾಮಕತ್ವವೆಂಬ ವಿಶೇಷಣವನ್ನು ಉಪಯೋಗಿಸಬೇಕು. ನಿಯಾಮಕತ್ವ ಎಂದರೆ ವಿನಿಯೋಜಕತ್ವವೆಂದರ್ಥ. ಮತ್ತೊಂದನ್ನು ಕಾರ್ಯದಲ್ಲಿ ತೊಡಗಿಸುವಂತೆ ಪ್ರೇರಣೆ ಮಾಡುವ ವಿನಿಯೋಜಕತ್ವವು ಆತ್ಮನಲ್ಲಿರುವ ಒಂದು ಧರ್ಮ. ಘಟವು ಚೇತನವಲ್ಲದ ಕಾರಣ. ಇಂತಹ ವಿನಿಯೋಜಕತ್ವವು ಬರುವುದಿಲ್ಲ. ಆದ್ದರಿಂದ ಘಟದಲ್ಲಿ ರೂಪಪದ ಪ್ರಯೋಗವು ಬರಲಿ ಎಂಬ ಅತಿಪ್ರಸಂಗವು ಇಲ್ಲ.

**प्रकाशः** – तावत्युक्ते राज्ञोऽपि भृत्यगतबन्धादिस्वातन्त्र्यापत्त्याऽतिप्रसङ्गस्तदवस्थ इत्युत्तरभागोपादानम् ।

'ನಿಯಾಮಕತ್ವಮ್' ಎಂದಷ್ಟೇ ಸ್ವಾತಂತ್ರ್ಯಲಕ್ಷಣವನ್ನು ಹೇಳಿದರೆ ಭೃತ್ಯನಲ್ಲಿರುವ ಬದ್ಧಾದಿ ಶಬ್ದ ಪ್ರಯೋಗಗಳು ರಾಜನಲ್ಲಿ ಬರಲಿ ಎಂಬ ಅತಿಪ್ರಸಂಗ ಬರುತ್ತದೆ. ಭೃತ್ಯನಿಗೆ ರಾಜನು ನಿಯಾಮಕನಾಗಿದ್ದಾನೆ. ಈ ಅತಿಪ್ರಸಂಗವನ್ನು ಪರಿಹಾರ ಮಾಡುವುದಕ್ಕಾಗಿ ''ತದಾಶ್ರಯತ್ವಪ್ರಯುಕ್ತನೀಚತ್ವಾಯೋಗ್ಯತ್ವಮ್'' ಎಂಬ ವಿಶೇಷ್ಯವನ್ನು ನೀಡಬೇಕು. ಬಂಧ ಮೊದಲಾದ ಧರ್ಮಗಳಿಗೆ ರಾಜನು ಆಶ್ರಯನೆಂದು ಹೇಳಿದರೆ

ತತ್ ಪ್ರಯುಕ್ತವಾದ ನೀಚತ್ವವು ರಾಜನಲ್ಲಿ ಬರುವ ಸಾಧ್ಯತೆ ಇದೆ. ತದಾಶ್ರಯತ್ವ ಪ್ರಯುಕ್ತವಾದ ನೀಚತ್ವಾಯೋಗ್ಯತ್ವವು ರಾಜನಲ್ಲಿ ಬರುವುದಿಲ್ಲ. ಹಾಗಾಗಿ ಭೃತ್ಯನಲ್ಲಿರುವ ಬಂಧಾದಿಗಳು ರಾಜನಲ್ಲಿ ಬರಲಿ ಎಂಬ ಅತಿಪ್ರಸಂಗ ಇಲ್ಲ.

**प्रकाशः** – सहनशक्तिमति राजनि भृत्यगतदुःखादिनियामकत्वे सति दुःखाश्रयत्वप्रयुक्तनीचत्वाभावोऽपि कदाचिदस्तीति योग्यतान्तर्भावः । नीचत्वं च स्वरूपसङ्कोचरूपोऽपकर्षः । ''न कर्मणा वर्धते नो कनीयान्'' इत्यादिश्रुतिप्रतिपन्नो ह्रासशब्दितः ।

ಇಷ್ಟು ಹೇಳಿದರೂ ಪುನಃ ಅತಿಪ್ರಸಂಗವು ಬರುತ್ತದೆ. ಸಹನಶಕ್ತಿಯುಳ್ಳ ರಾಜನಲ್ಲಿ ದುಃಖಾಶ್ರಯತ್ವ ಪ್ರಯುಕ್ತವಾದ ನೀಚತ್ವವು ಬರುವುದಿಲ್ಲ. ಭೃತ್ಯನಲ್ಲಿರುವ ದುಃಖಾದಿಗಳಿಗೆ ನಿಯಾಮಕನಾಗಿದ್ದಾನೆ. ಸಹನ ಶಕ್ತಿಯಿರುವುದರಿಂದ ಕೆಲವೊಮ್ಮೆ ದುಃಖಾಶ್ರಯತ್ವ ಪ್ರಯುಕ್ತವಾದ ನೀಚತ್ವವು ಬರುವುದಿಲ್ಲ. ಹೀಗೆ ಸ್ವಾತಂತ್ರ್ಯ ಲಕ್ಷಣವು ಪುನಃ ರಾಜನಲ್ಲಿ ಬರುವುದರಿಂದ ಭೃತ್ಯನಲ್ಲಿರುವ ದುಃಖಾದಿಗಳು ರಾಜನಲ್ಲಿಯೂ ಬರಲಿ ಎಂಬ ಅತಿಪ್ರಸಂಗ ಬರುತ್ತದೆ. ಇದರ ಪರಿಹಾರಕ್ಕೋಸ್ಕರ ಲಕ್ಷಣದಲ್ಲಿ ''ಯೋಗ್ಯತಾ'' ಎಂಬುದನ್ನು ನಿವೇಶಿಸಿದ್ದಾರೆ. ಸಹನಶಕ್ತಿಯಿದ್ದಾಗಲಷ್ಟೇ ರಾಜನಲ್ಲಿ ದುಃಖಾದಿದೋಷಪ್ರಯುಕ್ತವಾದ ನೀಚತ್ವ ಬರುವುದಿಲ್ಲ. ಆದರೆ ದುಃಖಾಶ್ರಯತ್ವ ಪ್ರಯುಕ್ತವಾಗಿ ನೀಚತ್ವ ಬರುವಂಥ ಅರ್ಹತೆಯು (ಯೋಗ್ಯತೆ) ರಾಜನಿಗೆ ಇದೆ. ಸಹನಶಕ್ತಿಯಿಲ್ಲದ ಸಂದರ್ಭದಲ್ಲಿ ದುಃಖಾದಿ ದೋಷಗಳಿಂದಾಗಿ ಅವನಲ್ಲಿ ಉಂಟಾದ ನೀಚತ್ವದಿಂದ, ನೀಚತ್ವ ಬರುವಂಥ ಯೋಗ್ಯತೆಯು ರಾಜನಲ್ಲಿ ಸದಾಕಾಲ ಇರುತ್ತದೆ ಎಂದು ನಿರ್ಣಯಿಸಬಹುದು.

ನೀಚತ್ವ ಲಕ್ಷಣ - ನೀಚತ್ವವೆಂದರೆ ''ಸ್ವರೂಪಸಂಕೋಚರೂಪೋಽಪಕರ್ಷಃ'' ಇದರ ಅಭಿಪ್ರಾಯ ಹೀಗಿದೆ - ನಮಗೆ ಬೇಡವಾದದ್ದು ಲಭಿಸಿದಾಗ ಮನಸ್ಸು ದುಃಖರೂಪವಾಗಿ ಪರಿಣಾಮ ಹೊಂದುತ್ತದೆ. ಆವಾಗ ಸ್ವಾಮಿತ್ವ ಅಥವಾ ಅಭಿಮಾನಿತ್ವ ಎಂಬ ಸಂಬಂಧದಿಂದ ಆತ್ಮನ ಸ್ವರೂಪವು ಸಂಕೋಚವಾಗುತ್ತದೆ. ಉಲ್ಲಾಸಭರಿತನಾದ ಆತ್ಮನು ಕುಗ್ಗುತ್ತಾನೆಂದರ್ಥ. ಇದನ್ನೇ ನೀಚತ್ವ ಶಬ್ದದಿಂದ ಗ್ರಂಥಕಾರರು ವ್ಯವಹರಿಸಿದ್ದಾರೆ. ಪರಮಾತ್ಮನನ್ನು ಬಿಟ್ಟು ಉಳಿದ ಸಕಲ ಜೀವರಲ್ಲಿ ಇಂತಹ ಸ್ವರೂಪಾಪಕರ್ಷರೂಪವಾದ ನೀಚತ್ವದ ಅರ್ಹತೆಯು ಇದ್ದೇ ಇರುತ್ತದೆ. ಇಂತಹ ನೀಚತ್ವವನ್ನೇ ಹ್ರಾಸವೆಂದು ಶ್ರುತಿಯು ಕರೆಯುತ್ತದೆ. ''ನ ಕರ್ಮಣಾ ವರ್ಧತೇ ನೋ ಕನಿಯಾನ್'' ಕರ್ಮದಿಂದ ಆತ್ಮನು ಹಿಗ್ಗುವುದಿಲ್ಲ, ಕುಗ್ಗುವುದಿಲ್ಲ. ಇತ್ಯಾದಿ ಶ್ರುತಿಯಲ್ಲಿ ಹಿಂದೆ ಹೇಳಿದ ವಿಷಯವನ್ನು ಸಮರ್ಥಿಸಲಾಗಿದೆ.

**प्रकाशः** – समयचरणे क्षपणकपरीक्षायां -

नानित्यतास्मत्पक्षे तु चैतन्यादेर्विशेषिणः।
लक्षणस्य निवृत्तौ तु स्यान्न तच्चेतने क्वचित् ।।

ಪರಿಪೂರ್ಣಚಂದ್ರಿಕಾ

इत्यनुव्याख्यानव्याख्यावसरे सुधायां ''नन्वस्मन्मत इव भवन्मतेऽप्यात्मनोऽन्यथाभावोऽस्त्येव । सुखदुःखाभ्यामुच्चनीचत्वाभ्युपगमात्'' इत्यादिना श्लोकमवतार्य व्याख्याय ''यस्य वस्तुनो यल्लक्षणं तन्निवृत्तिरूपोऽन्यथाभाव एव तदनित्यता निबन्धनम् नान्यथाभावमात्रम्'' इति तात्पर्यमुक्तम् । उक्तं च नयचन्द्रिकायामेतच्छ्लोकव्याख्यानावसर एव नारायणपण्डिताचार्यैरपि ''सङ्कोचविकासरूपान्यथाभावमात्रान्न नाशः'' इति । सन्न्यायरत्नावल्यां च ''ह्रासवृद्ध्यादिविकारवतोऽपि'' इति ।

ಆತ್ಮನಲ್ಲಿ ಉಚ್ಚನೀಚತ್ವವನ್ನು ಒಪ್ಪುವುದು ಪ್ರಾಮಾಣಿಕ. ಈ ರೀತಿಯಾಗಿ ಒಪ್ಪಿದಾಗ ಆತ್ಮನು ಅನಿತ್ಯನಾಗಲಾರನು. ಈ ವಿಷಯವು ಅನುವ್ಯಾಖ್ಯಾನದಲ್ಲಿ ಹೀಗಿದೆ -

ನಾನಿತ್ಯತಾಸ್ಮತ್ಪಕ್ಷೇ ತು ಚೈತನ್ಯಾದೇರ್ವಿಶೇಷಿಣಃ।
ಲಕ್ಷಣಸ್ಯ ನಿವೃತ್ತೌ ತು ಸ್ಯಾನ್ನ ತಚ್ಚೇತನೇ ಕ್ವಚಿತ್ ॥

ನಮ್ಮ ಸಿದ್ಧಾಂತದಲ್ಲಿ ಆತ್ಮನು ಅನ್ಯಥಾಭಾವವುಳ್ಳವನಾದರೂ ಅನಿತ್ಯನಾಗಲಾರ. ಏಕೆಂದರೆ ಚೈತನ್ಯ ಮೊದಲಾದ ಲಕ್ಷಣಗಳು ನಿವೃತ್ತಿಯಾದಾಗಲೇ ಅಂತಹ ಲಕ್ಷಣವುಳ್ಳ ವಸ್ತುವಿಗೆ ಅನಿತ್ಯತ್ವ ಬರುತ್ತದೆ. ಆದರೆ ಚೇತನನಲ್ಲಿ ಇರುವ ಅಂತಹ ಲಕ್ಷಣವು ನಿವೃತ್ತಿಯಾಗುವುದಿಲ್ಲ. ಆದ್ದರಿಂದ ಅನಿತ್ಯತ್ವವೂ ಇಲ್ಲ.

ಈ ಅನುವ್ಯಾಖ್ಯಾನಕ್ಕೆ ವ್ಯಾಖ್ಯಾನ ಮಾಡುವ ಮೊದಲು ಸುಧೆಯಲ್ಲಿ ಅವತಾರಿಕೆಯನ್ನು ಹೀಗೆ ಹೇಳಿದ್ದಾರೆ -

''ನನ್ವಸ್ಮನ್ಮತೇ ಇವ ಭವನ್ಮತೇऽಪ್ಯಾತ್ಮನೋऽನ್ಯಥಾಭಾವೋऽಸ್ತ್ಯೇವ। ಸುಖದುಃಖಾಭ್ಯಾಮುಚ್ಚನೀಚತ್ವಾಭ್ಯುಪಗಮಾತ್ । ಅನ್ಯಥಾಭಾವಿನಶ್ಚ ದೇಹಾದೇರನಿತ್ಯತೋಪಲಬ್ಧಾ । ತಸ್ಮಾದ್ ಭವನ್ಮತೇऽಪ್ಯಾತ್ಮನೋऽನಿತ್ಯತಾ ದುರ್ವಾರೇತ್ಯತ ಆಹ - ನೇತಿ ॥''

''ಜೈನರ ಮತದಲ್ಲಿ ಆತ್ಮನಿಗೆ ಬದಲಾವಣೆಯೆಂಬ ಅನ್ಯಥಾಭಾವವಿರುವಂತೆ ಸಿದ್ಧಾಂತಿಗಳ ಮತದಲ್ಲಿಯೂ ಆತ್ಮನಿಗೆ ಅನ್ಯಥಾಭಾವವಿದ್ದೇ ಇದೆ. ಏಕೆಂದರೆ ಸಿದ್ಧಾಂತದಲ್ಲಿ ಆತ್ಮನಿಗೆ ಸುಖದುಃಖಗಳಿಂದ ನೀಚೋಚ್ಚತ್ವಗಳನ್ನು ಅಂಗೀಕರಿಸಲಾಗಿದೆ. ಮತ್ತು ಅನ್ಯಥಾಭಾವಿಯಾದ ದೇಹಾದಿಗಳಿಗೆ ಅನಿತ್ಯತ್ವ ಕಂಡಿದೆ. ಆದ್ದರಿಂದ ಸಿದ್ಧಾಂತದ ಪ್ರಕಾರವೂ ಕೂಡ ಆತ್ಮನಲ್ಲಿ (ಅನ್ಯಥಾಭಾವವಿರುವುದರಿಂದ) ಅನಿತ್ಯತ್ವವು ಅನಿವಾರ್ಯ.

ಹೀಗೆ ಅವತಾರಿಕೆಯನ್ನು ನೀಡಿ ಅನುವ್ಯಾಖ್ಯಾನದ ಶ್ಲೋಕಕ್ಕೆ ತಾತ್ಪರ್ಯವನ್ನು ಹೀಗೆ ಬರೆದಿದ್ದಾರೆ - ''ಯಸ್ಯ ವಸ್ತುನೋ ಯಲ್ಲಕ್ಷಣಂ ತನ್ನಿವೃತ್ತಿರೂಪೋऽನ್ಯಥಾಭಾವ ಏವ ತದನಿತ್ಯತಾನಿಬಂಧನಂ ನಾನ್ಯಥಾಭಾವಮಾತ್ರಮ್'' ''ಯಾವ ವಸ್ತುವಿನ ಲಕ್ಷಣವಿದೆಯೋ, ಅಂತಹ ಲಕ್ಷಣದ ನಾಶರೂಪವಾದ ಅನ್ಯಥಾಭಾವವೇ ಆ ಲಕ್ಷಣವುಳ್ಳ ವಸ್ತುವಿನ ನಾಶಕ್ಕೆ ಕಾರಣವಾಗುತ್ತದೆ. ಕೇವಲ ಅನ್ಯಥಾಭಾವವಲ್ಲ''.

ನಾರಾಯಣಪಂಡಿತಾಚಾರ್ಯರು ರಚಿಸಿದ ನಯಚಂದ್ರಿಕೆಯಲ್ಲಿ ಅನುವ್ಯಾಖ್ಯಾನದ ಈ ಶ್ಲೋಕವನ್ನು ವ್ಯಾಖ್ಯಾನಿಸುತ್ತಾ ಹೀಗೆ ಹೇಳಿದ್ದಾರೆ - ''ಸಂಕೋಚವಿಕಾಸರೂಪಾನ್ಯಥಾಭಾವಮಾತ್ರನ್ನ ನಾಶಃ''. ಆತ್ಮನಿಗೆ ಸಂಕೋಚ ಹಾಗೂ ವಿಕಾಸರೂಪವಾದ ಪರಿಣಾಮವು ಆಗುತ್ತದೆ. ಇಷ್ಟು ಮಾತ್ರದಿಂದ ಆತ್ಮನ ನಾಶ ಆಗುವುದಿಲ್ಲ. ಸನ್ಯಾಯರತ್ನಾವಲಿಯಲ್ಲಿಯೂ ಇದನ್ನೇ ಹೇಳಿದ್ದಾರೆ. ''ಹ್ರಾಸವೃದ್ಧ್ಯಾದಿ ವಿಕಾರವತೋಽಪಿ'' ಆತ್ಮನಿಗೆ ಹ್ರಾಸ ಹಾಗೂ ವೃದ್ಧಿರೂಪವಾದ ವಿಕಾರವಿದ್ದರೂ ನಿತ್ಯನಾಗಿದ್ದಾನೆ ಎಂದು.

**प्रकाशः – तथा च तूलपिण्डस्येव स्वरूपस्यैवासङ्कोचसङ्कोचावुच्चनीचत्वशब्दार्थ इति वदन्ति ।**

ಒಂದೇ ಪ್ರಮಾಣವುಳ್ಳ ಹತ್ತಿಯಲ್ಲಿ ಸಂಕೋಚ ವಿಕಾಸಗಳು ಆಗುತ್ತವೆ. ಹತ್ತಿಯನ್ನು ಸಣ್ಣದನ್ನಾಗಿಯೂ ಮಾಡಬಹುದು. ಹಾಗೆಯೇ ದೊಡ್ಡದನ್ನಾಗಿಯೂ ಮಾಡಬಹುದು. ಅದರಂತೆ ಆತ್ಮನಲ್ಲಿಯೂ ಸಂಕೋಚ ವಿಕಾಸಗಳು ಆಗುತ್ತವೆ. ಉಚ್ಚ-ನೀಚ ಶಬ್ದಕ್ಕೆ ಇಷ್ಟೇ ಅರ್ಥ, ಹೊರತು ಅನಿತ್ಯವೆಂದರ್ಥವಲ್ಲ. ಮೇಲೆ ಹೇಳಿದ ಅನೇಕ ಆಧಾರಗಳಿಂದ ಆತ್ಮಸ್ವರೂಪದಲ್ಲಿ ಉತ್ಕರ್ಷ ಅಪಕರ್ಷಗಳು ಉಂಟಾದರೂ ಸಹ ನಿತ್ಯನಾಗಿಯೇ ಇರುತ್ತಾನೆ ಎಂದು ನಿರ್ಣಯವಾಯಿತು. ಪ್ರಕೃತ ಮನಸ್ಸಿಗೆ ಆದ ದುಃಖಾದಿಗಳನ್ನು ನೋಡಿ ಆತ್ಮನಲ್ಲಿ ನೀಚತ್ವವು (ಅಪಕರ್ಷವು) ಬರುತ್ತದೆ ಎಂದು ನಿರ್ಣಯವಾಯಿತು.

**प्रकाशः – एतेन नीचत्वं नाम यदि रोदनाक्रन्दनादिकं तदा तस्य धीरोदात्तपुरुषेऽभावादव्याप्तिरित्यादिना बहुप्रकारविकल्पेन कस्यचिन्नूतनस्य खण्डनं प्रत्युक्तम् । प्रागुक्तातिप्रसङ्गमुद्धरति ।। एवञ्चेति ।।**

ನೀಚತ್ವವನ್ನು ಹೀಗೆ ವಿವರಿಸಿದ್ದರಿಂದ ಕೆಲವು ಅರ್ವಾಚೀನರ ವಾದವನ್ನು ಖಂಡಿಸಿದಂತಾಯಿತು. ಅರ್ವಾಚೀನರ ವಾದ ಹೀಗಿದೆ - ನೀಚತ್ವವೆಂದರೆ ಅಳುವುದು, ಕೂಗುವುದು, ಹೊಡೆಯುವುದು, ಬಯ್ಯುವುದು, ಇತ್ಯಾದಿ ವಿಕಾರಗಳು. ಅಂದರೆ ಒಬ್ಬ ಮನುಷ್ಯನಿಗೆ ದುಃಖವಾದಾಗ ಅಳುತ್ತಾನೆ. ಅಥವಾ ಕೂಗುತ್ತಾನೆ. ಅಥವಾ ಮತ್ತೊಬ್ಬರನ್ನು ನಿಂದಿಸುತ್ತಾನೆ. ಆದ್ದರಿಂದ ನೀಚಶಬ್ದಕ್ಕೆ ರೋಧನಾದಿಗಳನ್ನೇ ಅರ್ಥವೆನ್ನಬೇಕು. ಆದರೆ ಯಾವ ಮನುಷ್ಯನು ಧೀರನಾಗಿ ದುಃಖಗಳು ಬಂದಾಗ ಸಹನ ಶಕ್ತಿಯಿಂದ ಇರುತ್ತಾನೋ ಅಂತಹ ವ್ಯಕ್ತಿಯು ಅಳುವುದು, ಕೂಗುವುದು ಇತ್ಯಾದಿಗಳನ್ನು ಮಾಡುವುದಿಲ್ಲ. ಆದ್ದರಿಂದ ರೋಧನಾದಿಗಳನ್ನೇ ನೀಚತ್ವ ಲಕ್ಷಣವನ್ನಾಗಿ ಹೇಳಿದರೆ ಅವ್ಯಾಪ್ತಿ ದೋಷ ಬರುತ್ತದೆ. ಇತ್ಯಾದಿಯಾಗಿ ನೀಚತ್ವಲಕ್ಷಣವನ್ನು ಬಹುವಿಧದಲ್ಲಿ ವಿಕಲ್ಪಿಸಿ ಖಂಡಿಸುತ್ತಾರೆ. ''ಸ್ವರೂಪಸಂಕೋಚರೂಪೋಽಪಕರ್ಷಃ ನೀಚತ್ವಮ್'' ಎಂದು ಸಿದ್ಧಾಂತಿಗಳು ಹೇಳಿದ ನೀಚತ್ವ ಲಕ್ಷಣದಿಂದ ಅರ್ವಾಚೀನರ ಈ ವಾದವು ನಿರಾಕೃತವಾಯಿತು.

ಭೃತ್ಯನಲ್ಲಿ ಉಂಟಾಗುವ ದುಃಖಾದಿಗಳು ರಾಜನಲ್ಲಿಯೂ ಬರಲಿ ಎಂದು ಅತಿಪ್ರಸಂಗವನ್ನು ''ಏವಂಚ'' ಇತ್ಯಾದಿ ವಾಕ್ಯಗಳಿಂದ ಗ್ರಂಥಕಾರರು ನಿರಾಕರಣೆ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – लक्ष्ये तदाह – ब्रह्मणस्त्विति ।।** ''न कर्मणा वर्धते नो कनीयान्'' ''निरनिष्टः'' इत्यादिश्रुतेः सम्भोगसूत्रोक्तवैशेष्ययुक्तेश्चेति भावः । अन्याप्तिं निराह – **इन्द्रेति ।।**

ಗುಣ ಮತ್ತು ದೋಷಗಳಿಗೆ ಬ್ರಹ್ಮನು ಸ್ವಾಮಿಯಾಗಿದ್ದಾನೆ ಎಂದು ''ಬ್ರಹ್ಮಣಸ್ತು'' ಇತ್ಯಾದಿ ವಾಕ್ಯಗಳಿಂದ ಲಕ್ಷ್ಯದಲ್ಲಿ ಸಮನ್ವಯ ಮಾಡುತ್ತಿದ್ದಾರೆ.

''ನ ಕರ್ಮಣಾ ವರ್ಧತೇ ನೋ ಕನಿಯಾಮ್'' 'ಕರ್ಮದಿಂದ ವರ್ಧಿಸುವುದಿಲ್ಲ ಕನಿಷ್ಠನೂ ಆಗುವುದಿಲ್ಲ' ''ನಿರನಿಷ್ಟೋ ನಿರವದ್ಯಃ'' 'ಯಾವ ಅನಿಷ್ಟಗಳೂ ಯಾವ ದೋಷಗಳು ಇಲ್ಲ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನು ಯಾವ ದೋಷಗಳಿಗೂ ಒಳಪಡುವುದಿಲ್ಲ ಎಂದು ಸ್ಪಷ್ಟವಾಗುತ್ತದೆ. ಮತ್ತು ಸೂತ್ರವು ಹೀಗಿದೆ -

॥ ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್ ॥

''ಜೀವನಂತೆ ನಾರಾಯಣನು ಹೃದಯಗುಹಾಸ್ಥಿತನಾದರೆ ಜೀವನಿಗೆ ಉಂಟಾಗುವ ದುಃಖಾದಿ ಭೋಗಗಳು ಸರ್ವಗತನಾದ ನಾರಾಯಣನಿಗೂ ಉಂಟಾಗಲಿ ಎಂಬ ಶಂಕೆಯು ಸರಿಯಲ್ಲ. ನಾರಾಯಣನಿಗೆ ಸ್ವಾತಂತ್ರ್ಯರೂಪವಾದ ಸಾಮರ್ಥ್ಯವಿಶೇಷವಿರುವುದರಿಂದ ಅವನಿಗೆ ದುಃಖಾದಿಭೋಗವು ಉಂಟಾಗುವುದಿಲ್ಲ''. ಹೀಗೆ ಈ ಎಲ್ಲ ಪ್ರಮಾಣಗಳಿಂದ ನೀಚತ್ವ ಅಯೋಗ್ಯತ್ವವು ಬ್ರಹ್ಮನಲ್ಲಿ ಸಿದ್ಧಿಸುತ್ತವೆ.

ಗ್ರಂಥಕಾರರು ಅವ್ಯಾಪ್ತಿಯನ್ನು 'ಇಂದ್ರಾದಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ. ಇದರಿಂದ ದೋಷವಾಚಕಪದಗಳಿಗಷ್ಟೇ ಅಲ್ಲ ಗುಣವಾಚಕ ಪದಗಳಿಗೂ ಕೂಡ ಸ್ವಾತಂತ್ರ್ಯವು ಪ್ರವೃತ್ತಿ ನಿಮಿತ್ತವಾಗುತ್ತದೆ. ಈ ಪ್ರವೃತ್ತಿ ನಿಮಿತ್ತವು ಬ್ರಹ್ಮನಲ್ಲಿ ಇರುವುದರಿಂದ ಸಕಲಗುಣವಾಚಕ ಶಬ್ದಗಳಿಂದ ಮತ್ತು ಸಕಲ ದೋಷವಾಚಕ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ನಿರ್ಣಯವಾಯಿತು.

**प्रकाशः** – ननु किमेवं विवक्षया । अतिप्रसङ्गात् स्वातन्त्र्यमनिमित्तमित्येवोच्यतामित्यत आह – **आश्रयत्वेति** ।। तथाच तदपि निमित्तं न स्यात् । केवलस्यातिप्रसङ्गात् । किन्तु रूपसमवायित्वाद्येव वाच्यमिति भावः ।।

ಪ್ರಶ್ನೆ - ಸ್ವಾತಂತ್ರ್ಯವನ್ನು ಪ್ರವೃತ್ತಿ ನಿಮಿತ್ತವೆಂದು ಹೇಳಿದಾಗ ಅತಿಪ್ರಸಂಗಾದಿ ದೋಷಗಳು ಬಂದರೆ ಲಕ್ಷಣವನ್ನು ಪರಿಷ್ಕರಿಸಿ ಪರಿಹರಿಸಿದಿರಿ. ಈ ರೀತಿಯಾದ ವಿವಕ್ಷೆಯನ್ನು ಏಕೆ ಮಾಡಬೇಕು ? ಅತಿಪ್ರಸಂಗ ಬರುವುದರಿಂದ ಸ್ವಾತಂತ್ರ್ಯವು ಪ್ರವೃತ್ತಿ ನಿಮಿತ್ತವೇ ಅಲ್ಲ ಎಂದು ಹೇಳಬಹುದಲ್ಲವೆ ?

ಉತ್ತರ - ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವಲ್ಲವೆಂದರೆ ಆಶ್ರಯತ್ವವನ್ನಷ್ಟೇ ಪ್ರವೃತ್ತಿನಿಮಿತ್ತವೆಂದು ಹೇಳಿದಂತಾಯಿತು. ಆದರೆ ಆಶ್ರಯತ್ವವನ್ನೂ ಪ್ರವೃತ್ತಿ ನಿಮಿತ್ತವೆನ್ನಲಾಗದು. ಕೇವಲ ಆಶ್ರಯತ್ವವು ಪ್ರವೃತ್ತಿ ನಿಮಿತ್ತವಾದಲ್ಲಿ ಅತಿಪ್ರಸಂಗ ಬಂದೇ ಬರುತ್ತದೆ. ರೂಪಕ್ಕೆ ಘಟವು ಆಶ್ರಯವಾದಂತೆ ಕಾಲವು ಆಶ್ರಯವಾಗಿದೆ. ಆಶ್ರಯತ್ವವೆಂಬ ಪ್ರವೃತ್ತಿನಿಮಿತ್ತವು ಕಾಲದಲ್ಲಿ ಬಂತು. ಆದ್ದರಿಂದ ''ಕಾಲಃ ರೂಪೀ'' ಎಂಬ ಪ್ರಯೋಗವು

ಬರಲಿ, ಮತ್ತು ದಂಡವು ದೇವದತ್ತನಲ್ಲಿ ಆಶ್ರಿತವಾಗಿದೆ. ಅದರಂತೆ "ಸರ್ವಾಧಾರಃ ಕಾಲಃ" ಎಂಬ ನಿಯಮದಂತೆ ಕಾಲದಲ್ಲಿಯೂ ದಂಡವಿದೆ. ಆದ್ದರಿಂದ "ದಂಡೀ ದೇವದತ್ತಃ" ಎಂಬ ಪ್ರಯೋಗದಂತೆ "ದಂಡೀ ಕಾಲಃ" ಎಂಬ ಪ್ರಯೋಗವು ಬರಲಿ. ಈ ಅತಿಪ್ರಸಂಗದ ಪರಿಹಾರಕ್ಕೋಸ್ಕರ ಆಶ್ರಯತ್ವವನ್ನಷ್ಟೇ ಪ್ರವೃತ್ತಿನಿಮಿತ್ತವೆನ್ನದೆ ಪರಿಷ್ಕಾರ ಮಾಡಿ ಹೇಳಬೇಕು. "ರೂಪೀ" ಎಂಬ ಪ್ರತೀತಿಗೆ "ರೂಪಸಮವಾಯಿತ್ವಮ್" ಎಂಬುದು ಪ್ರವೃತ್ತಿನಿಮಿತ್ತ. "ದಂಡೀ" ಎಂಬ ಪ್ರತೀತಿಗೆ "ದಂಡಸಂಯೋಗಿತ್ವಮ್" ಎಂಬುದು ಪ್ರವೃತ್ತಿನಿಮಿತ್ತವೆನ್ನಬೇಕು. ಕಾಲದಲ್ಲಿ ಕಾಲಿಕ ಸಂಬಂಧದಿಂದ ರೂಪ ದಂಡಗಳು ಇವೆಯೇ ಹೊರತು ಸಮವಾಯ ಸಂಯೋಗ ಸಂಬಂಧಗಳಿಂದ ಇರುವುದಿಲ್ಲ. "ರೂಪೀ ಕಾಲಃ" "ದಂಡೀ ಕಾಲಃ" ಇತ್ಯಾದಿ ಪ್ರಯೋಗಗಳು ಬರುವುದಿಲ್ಲ. ಹೀಗೆ ಆಶ್ರಯತ್ವವನ್ನು ಪರಿಷ್ಕರಿಸುವುದೂ ಸಹ ಅನಿವಾರ್ಯ. ಆದ್ದರಿಂದ ಸ್ವಾತಂತ್ರ್ಯಲಕ್ಷಣವನ್ನು ಪರಿಷ್ಕರಿಸಿ ಅತಿಪ್ರಸಂಗಾದಿಗಳನ್ನು ಪರಿಹರಿಸುವುದರಲ್ಲಿ ತಪ್ಪೇನಿಲ್ಲ.




ಸ್ವಾತಂತ್ರ್ಯಮ್ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಮ್ ।
ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್ ಕುತೋ ರಾಜ್ಞಿ ಜಯೋಽನ್ಯಥಾ ॥

ಸ್ವಾತಂತ್ರ್ಯ ಮತ್ತು ಆಶ್ರಯತ್ವ ಇವೆರಡೂ ಶಬ್ದವೃತ್ತಿಯಲ್ಲಿ ಕಾರಣವಾಗಿವೆ. ಆದರೆ ಸ್ವಾತಂತ್ರ್ಯವೇ ಇವೆರಡರಲ್ಲಿ ಬಹಳ ಮುಖ್ಯವಾದದ್ದು. ಇಲ್ಲದಿದ್ದರೆ ರಾಜನಲ್ಲಿ 'ಜಯಿ' ಎಂಬ ಪ್ರಯೋಗವು ಹೇಗೆ ತಾನೇ ಬರುತ್ತದೆ ಎಂಬ ಈ ಅನುವ್ಯಾಖ್ಯಾನದ ಶ್ಲೋಕದಲ್ಲಿ ಈ ಅಧಿಕರಣದ ಸಂಪೂರ್ಣ ಸಿದ್ಧಾಂತವನ್ನು ಸಂಗ್ರಹಿಸಿದ್ದಾರೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಎಲ್ಲಾ ಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬೇಕು. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನುವುದಾದರೆ ಭೃತ್ಯನನ್ನು ಬಂಧಿಸುವ ರಾಜನಲ್ಲಿಯೂ 'ಬದ್ಧಃ' ಎಂಬ ಪ್ರಯೋಗವು ಬರಬೇಕಾಗುತ್ತದಲ್ಲವೇ? ಎಂದು ಆಕ್ಷೇಪಿಸಬಾರದು. ಸ್ವಾತಂತ್ರ್ಯ ಶಬ್ದಕ್ಕೆ 'ನಿಯಾಮಕತ್ವೇ ಸತಿ ತದಾಶ್ರಯತ್ವಪ್ರಯುಕ್ತ ನೀಚತ್ವಾಯೋಗ್ಯತ್ವಮ್' ಎಂಬರ್ಥವನ್ನು ವಿವಕ್ಷಿಸುತ್ತೇವೆ. ನಿಯಾಮಕನಾಗಿರಬೇಕು. ಮತ್ತು ಅಂತಹ ಪ್ರವೃತ್ತಿನಿಮಿತ್ತ ಬರುವುದರಿಂದ ತಾನು ನೀಚನಾಗಬಾರದು. ಅಂತಹ ಸ್ವಾತಂತ್ರ್ಯವಷ್ಟೇ ಶಬ್ದಪ್ರಯೋಗಕ್ಕೆ ಕಾರಣವಾಗುತ್ತದೆ. ಭೃತ್ಯನಲ್ಲಿರುವ ದುಃಖಕ್ಕೆ ರಾಜನು ನಿಯಾಮಕನಾಗಿರಬಹುದು. ಆದರೆ ಅಂತಹ ದುಃಖವು ರಾಜನಲ್ಲಿ ಬಂದಾಗ ನೀಚತ್ವಕ್ಕೆ ಯೋಗ್ಯನೇ ಆಗುತ್ತಾನೆ. ಆದ್ದರಿಂದ ಸ್ವಾತಂತ್ರ್ಯದ ಲಕ್ಷಣವು ಬಾರದ ಕಾರಣ, ರಾಜನಲ್ಲಿ 'ದುಃಖೀ' ಎಂಬ ಶಬ್ದವನ್ನು ಪ್ರಯೋಗಿಸಲು ಸಾಧ್ಯವಾಗುವುದಿಲ್ಲ. ಆದರೆ ದುಃಖಕ್ಕೆ ನಿಯಾಮಕನಾದ ಪರಮಾತ್ಮನಲ್ಲಿ 'ದುಃಖೀ' ಎಂಬ ಶಬ್ದವನ್ನು ಹೇಳಿದಾಗ ಯಾವುದೇ ಬಗೆಯ ನೀಚತ್ವವು ಸರ್ವಥಾ ಬರುವುದಿಲ್ಲ. ಆದ್ದರಿಂದ 'ನಿಯಾಮಕತ್ವೇ ಸತಿ ತದಾಶ್ರಯತ್ವಪ್ರಯುಕ್ತ ನೀಚತ್ವಾಯೋಗ್ಯತ್ವಮ್' ಎಂಬ ಲಕ್ಷಣವು ಬರುವುದರಿಂದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ 'ದುಃಖೀ' ಇತ್ಯಾದಿ ಶಬ್ದಗಳನ್ನು ನಿರಾತಂಕವಾಗಿ ವ್ಯವಹರಿಸಬಹುದು. ಭೃತ್ಯನು ಗೆದ್ದಾಗ ರಾಜನನ್ನು 'ಜಯಿ' ಎನ್ನಲು ತೊಂದರೆಯಿಲ್ಲ. ಏಕೆಂದರೆ ಭೃತ್ಯನಲ್ಲಿರುವ ಜಯಕ್ಕೆ ರಾಜನು ನಿಯಾಮಕನಾಗಿದ್ದಾನೆ. ಅಂಥ ಜಯಕ್ಕೆ ರಾಜನು ಆಶ್ರಯನಾಗಿದ್ದಾನೆಂದು ಹೇಳಿದಾಗ, ತಾನು

ನೀಚನೂ ಕೂಡ ಆಗುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯಲಕ್ಷಣವು ಎಲ್ಲಿ ಬರುತ್ತದೋ, ಅಲ್ಲಿ ಮಾತ್ರ ಆ ಶಬ್ದಪ್ರಯೋಗಗಳನ್ನು ಮಾಡಬೇಕು. ಮತ್ತು ಆಶ್ರಯತ್ವವನ್ನೇ ಪ್ರವೃತ್ತಿನಿಮಿತ್ತವೆನ್ನುವುದಾದರೂ ದೋಷವು ತಪ್ಪಿದ್ದಲ್ಲ. ಸಕಲ ಪದಾರ್ಥಗಳಿಗೆ ಆಧಾರವಾದ ಕಾಲದಲ್ಲಿ ರೂಪ ಹಾಗೂ ದಂಡಗಳು ಇರುತ್ತವೆ. ಆಶ್ರಯತ್ವವೆಂಬ ಪ್ರವೃತ್ತಿನಿಮಿತ್ತದಿಂದ ಕಾಲವನ್ನು 'ರೂಪೀ', 'ದಂಡೀ' ಇತ್ಯಾದಿಯಾಗಿ ವ್ಯವಹರಿಸಬೇಕಾದ ಸ್ಥಿತಿ ಉಂಟಾಗುತ್ತದೆ. ಆದ್ದರಿಂದ ಅಲ್ಲಿಯೂ ಕೂಡ ಪರಿಷ್ಕಾರದ ಅವಶ್ಯಕತೆ ಇದ್ದೇ ಇದೆ.



## ಸ್ವಾತಂತ್ರ್ಯಪ್ರವೃತ್ತಿನಿಮಿತ್ತದ ಎರಡನೆಯ ಪರಿಷ್ಕಾರ

### तात्पर्यचन्द्रिका

**यद्वा स्वगतत्वयोग्यत्वे सति यद्दोषत्वं तद्रहितं प्रति स्वातन्त्र्यं निमित्तम् । कार्यबलेन तथा कल्पनात् ।**

ಅನುವಾದ - ಅಥವಾ ಸ್ವಾತಂತ್ರ್ಯದ ಲಕ್ಷಣವನ್ನು ಹೀಗೂ ಹೇಳಬಹುದು. 'ಸ್ವಗತತ್ವಯೋಗ್ಯತ್ವೇ ಸತಿ ಯದ್ದೋಷತ್ವಂ ತದ್ರಹಿತಂ ಪ್ರತಿ ಸ್ವಾತಂತ್ರ್ಯಂ ನಿಮಿತ್ತಮ್' ಎಂದು. ಈ ಲಕ್ಷಣವು ವಿಶಿಷ್ಟಾಭಾವರೂಪವಾಗಿದೆ. ಸ್ವಗತತ್ವ ಯೋಗ್ಯವಾಗಿ ದೋಷವೂ ಆಗಿದ್ದಲ್ಲಿ ತದ್ರಾಹಿತ್ಯರೂಪವಾದ ಸ್ವಾತಂತ್ರ್ಯವನ್ನು ಹೇಳಲಾಗದು. ಆದರೆ ಇವೆರಡರಲ್ಲಿ ಒಂದು ಇಲ್ಲದಿದ್ದರೂ ಅಥವಾ ಎರಡೂ ಇಲ್ಲದಿದ್ದರೂ ಕೂಡ ಸ್ವಾತಂತ್ರ್ಯದ ಲಕ್ಷಣವು ಬರುತ್ತದೆ. ಅಂತಹ ಸ್ಥಳದಲ್ಲಿ ಶಬ್ದಪ್ರಯೋಗಗಳನ್ನು ಮಾಡಬಹುದು. 'ಬದ್ಧಃ' ಎಂಬ ಪ್ರಯೋಗವು ವಿಷ್ಣುವಿನಲ್ಲಿ ಇರುತ್ತದೆ. ಆದರೆ ರಾಜನಲ್ಲಿ ಇರುವುದಿಲ್ಲ. 'ಬದ್ಧಃ' ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಬಂಧನದ ಸ್ವಾತಂತ್ರ್ಯವು ಇಬ್ಬರಲ್ಲಿ ಸಾಧಾರಣವಾಗಿದ್ದರೂ ಪ್ರಯೋಗದ ಇರುವಿಕೆ, ಹಾಗೂ ಇಲ್ಲದಿರುವಿಕೆಯೆಂಬ ಕಾರ್ಯದ ಬಲದಿಂದ ಹೀಗೆ ಪರಿಷ್ಕಾರವನ್ನು ಮಾಡುವುದು ಅನಿವಾರ್ಯ.

**एवं च जयादेर्बन्धनादेश्च राजगतत्वयोग्यत्वेऽपि जयादेर्दोषत्वराहित्यात् तत्प्रति स्वातन्त्र्यं निमित्तम् । बन्धनादेस्तु दोषत्वान्न तत्प्रति स्वातन्त्र्यं निमित्तम्।**

ಭೃತ್ಯನಲ್ಲಿರುವ ಜಯವು ರಾಜನಲ್ಲಿರಲು ಯೋಗ್ಯವಾಗಿರುವುದರಿಂದ ಸ್ವಗತತ್ವಯೋಗ್ಯತ್ವವೆಂಬ ವಿಶೇಷಣವು ಜಯದಲ್ಲಿದೆ. ಆದರೆ ಜಯವು ಗುಣವಾಗಿರುವುದರಿಂದ ದೋಷವಲ್ಲ. ಆದ್ದರಿಂದ ಸ್ವಗತತ್ವಯೋಗ್ಯತ್ವವೆಂಬ ವಿಶೇಷಣವಿದ್ದರೂ 'ಯದ್ದೋಷತ್ವಂ' ಎಂಬ ವಿಶೇಷಣವು ಜಯದಲ್ಲಿರುವುದಿಲ್ಲ. ಹಾಗಾಗಿ ತದ್ರಾಹಿತ್ಯವೆಂಬ ವಿಶಿಷ್ಟಾಭಾವವು ಜಯದಲ್ಲಿ ಬರುತ್ತದೆ. ಇಂತಹ ಜಯಕ್ಕೆ ರಾಜನು ಸ್ವತಂತ್ರನಾದ್ದರಿಂದ 'ರಾಜಾ ಜಯೀ' ಎಂಬ ಪ್ರಯೋಗವನ್ನು ಮಾಡಬಹುದು. ಆದರೆ ಭೃತ್ಯನಲ್ಲಿರುವ ಬಂಧನವು ರಾಜನಲ್ಲಿರಲು ಯೋಗ್ಯವಾಗಿದೆ. ಮತ್ತು ದೋಷವೂ ಆಗಿದೆ.

ಆದ್ದರಿಂದ ತದ್ರಾಹಿತ್ಯವೆಂಬ ವಿಶಿಷ್ಟಾಭಾವವು ಬರುವುದಿಲ್ಲ. ಇಂತಹ ಬಂಧನದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ರಾಜನಲ್ಲಿ ಬಾರದ ಕಾರಣ ಭೃತ್ಯನು ಬಂಧಿತನಾದರೆ 'ರಾಜಾ ಬದ್ಧಃ' ಎಂಬ ಪ್ರಯೋಗವು ಬರುವುದಿಲ್ಲ.

**ब्रह्मणि त्विन्द्रादिशब्दनिमित्तैश्वर्यादेः स्वगतत्वयोग्यत्वेपि दोषत्वराहित्यात् बन्धनादेश्च दोषत्वेऽपि स्वगतत्वयोग्यत्वराहित्यादुभयं प्रति स्वातन्त्र्यं निमित्तम् ।**

ಬ್ರಹ್ಮನ ವಿಷಯದಲ್ಲಿ ಇಂದ್ರಾದಿಶಬ್ದಗಳನ್ನು ಸಮನ್ವಯ ಮಾಡುವಾಗ ಪರಮೈಶ್ವರ್ಯವೆಂಬ ಯಾವ ಪ್ರವೃತ್ತಿನಿಮಿತ್ತವಿದೆಯೋ, ಅದು ಬ್ರಹ್ಮನಲ್ಲಿರಲು ಯೋಗ್ಯವಾಗಿದೆ. ಆದರೆ ದೋಷವಾಗಿಲ್ಲ. ಆದ್ದರಿಂದ 'ಸ್ವಗತತ್ವಯೋಗ್ಯತ್ವ' ಎಂಬ ವಿಶೇಷಣವಿದ್ದರೂ, 'ಯದ್ದೋಷತ್ವಂ' ಎಂಬ ವಿಶೇಷ್ಯವು ಇರುವುದಿಲ್ಲ. ಹಾಗಾಗಿ ತದಭಾವರೂಪವಾದ ವಿಶಿಷ್ಟಾಭಾವವು ಪರಮೈಶ್ವರ್ಯಾದಿಗಳಲ್ಲಿ ಬರುವುದರಿಂದ ಅಂತಹ ಪರಮೈಶ್ವರ್ಯಕ್ಕೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗುತ್ತದೆ. ಬ್ರಹ್ಮನಲ್ಲಿ ಇಂದ್ರಾದಿಶಬ್ದಗಳನ್ನು ಪ್ರಯೋಗಿಸಬಹುದು. ಇದರಂತೆ ಭೃತ್ಯನಲ್ಲಿರುವ ಬಂಧನಾದಿಗಳು ಪರಮಾತ್ಮನಲ್ಲಿರಲು ಯೋಗ್ಯವಾಗಿರುವುದಿಲ್ಲ. ಆದರೆ ದೋಷವಾಗಿರುತ್ತದೆ. ಆದ್ದರಿಂದ 'ಯದ್ದೋಷತ್ವಂ' ಎಂಬ ವಿಶೇಷ್ಯವು ಬಂಧನಾದಿಗಳಲ್ಲಿ ಬಂದರೂ ಕೂಡ ಸ್ವಗತತ್ವಯೋಗ್ಯತ್ವವೆಂಬ ವಿಶೇಷಣವು ಬರುವುದಿಲ್ಲ. ಆದ್ದರಿಂದ ವಿಶೇಷಣಾಭಾವಪ್ರಯುಕ್ತವಾಗಿ ವಿಶಿಷ್ಟಾಭಾವವು ಬಂಧನಾದಿಗಳಲ್ಲಿ ಬರುತ್ತದೆ. ಇಂತಹ ಬಂಧನಾದಿಗಳ ವಿಷಯದಲ್ಲೂ ಕೂಡ ಪ್ರವೃತ್ತಿನಿಮಿತ್ತವಾಗಬಹುದು. ಆದ್ದರಿಂದ ಪರಿಷ್ಕೃತವಾದ ಸ್ವಾತಂತ್ರ್ಯಲಕ್ಷಣವು ವಿಷ್ಣುವಿನಲ್ಲಿ ಬರುವುದರಿಂದ 'ಬದ್ಧಾದಿ' ಶಬ್ದ ಪ್ರಯೋಗಗಳು ಬರುತ್ತವೆ. ರಾಜನಲ್ಲಿ ಬಾರದ ಕಾರಣ ಬದ್ಧಾದಿ ಶಬ್ದದ ಪ್ರಯೋಗಗಳು ಬರುವುದಿಲ್ಲ.

**अत एवानुव्याख्याने ''राज्ञो बन्धादियोग्यतः'' इति राज्ञो बन्धादिदोषयोग्यता, ''दोषात्यस्पृष्टिनियमः'' इति विष्णौ दोषायोग्यताचोक्ता ।**

ಪರಿಷ್ಕೃತವಾದ ಈ ಸ್ವಾತಂತ್ರ್ಯದ ಲಕ್ಷಣವನ್ನು ವಿವಕ್ಷಿಸಬೇಕೆಂಬ ದೃಷ್ಟಿಯಿಂದಲೇ 'ರಾಜ್ಞೋ ಬಂಧಾದಿಯೋಗ್ಯತಃ' ಎಂಬುದಾಗಿ ಬಂಧನಾದಿ ದೋಷಗಳಿಗೆ ವಿಷ್ಣು ಯೋಗ್ಯನಾಗಿದ್ದಾನೆಂದು ಹೇಳಿದ್ದಾರೆ. ಅಂದರೆ ಭೃತ್ಯನಲ್ಲಿರುವ ಬಂಧನಾದಿಗಳಿಗೆ ವಿಷ್ಣು ಸ್ವತಂತ್ರನಾಗಿದ್ದಾನೆಂದು ಅಭಿಪ್ರಾಯ. 'ದೋಷಾತ್ಯಸ್ಪೃಷ್ಟಿನಿಯಮಃ' ಎಂಬಲ್ಲಿಯೂ ವಿಷ್ಣುವಿನಲ್ಲಿ ಬಂಧಾದಿದೋಷಗಳ ಯೋಗ್ಯತೆಯಿರುವುದಿಲ್ಲವೆಂದು ಹೇಳಿದ್ದರಿಂದಲೂ ಈ ವಿಷಯವು ಸ್ಪಷ್ಟವಾಗುತ್ತದೆ.

ಪರಮಾತ್ಮನ ವಿಷಯದಲ್ಲಿ ವ್ಯತ್ಯಾಸವಿದೆ. ಜೀವರಲ್ಲಿರವ ದುಃಖಾದಿಗಳಿಗೆ ಪರಮಾತ್ಮನು ನಿಯಾಮಕನಾಗಿದ್ದಾನೆ. ಮತ್ತು ದುಃಖಕ್ಕೆ ಆಶ್ರಯನೆಂದು ಹೇಳಿದರೆ ಯಾವ ನೀಚತ್ವವೂ ಬರುವುದಿಲ್ಲ.

ನೀಚತ್ವ ಬರುವ ಯೋಗ್ಯತೆಯೇ ಪರಮಾತ್ಮನಲ್ಲಿರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿ ನಿಮಿತ್ತವನ್ನು ಆಕ್ಷೇಪಿಸಿ ದುಃಖಾದಿ ಶಬ್ದಗಳನ್ನು ಪರಮಾತ್ಮನಲ್ಲಿ ಪ್ರಯೋಗಿಸಬಹುದು.

**प्रकाशः –**

**स्वातन्त्र्यं निमित्तमिति ।। तच्छब्दप्रवृत्ताविति शेषः । विष्णौ बद्धादिशब्द-वृत्त्यनापत्तेस्सत्यन्तम् । राजादौ भृत्यादिगतबन्धादिना बद्धादिपदप्रयोगापत्तेरुत्तर-भागः ।**

ವಿವರಣೆ - ಅಥವಾ ಸ್ವಾತಂತ್ರ್ಯಲಕ್ಷಣವನ್ನು ಮತ್ತೊಂದು ಬಗೆಯಲ್ಲಿ ಹೇಳಬಹುದು - "ಸ್ವಗತತ್ವಯೋಗ್ಯತ್ವೇ ಸತಿ ಯದ್ದೋಷತ್ವಂ ತದ್ರಹಿತಂ ಪ್ರತಿ ಸ್ವಾತಂತ್ರ್ಯಂ ನಿಮಿತ್ತಮ್" ಎಂದು.

ದಲಕೃತ್ಯ ವಿಚಾರ - 'ಯದ್ದೋಷತ್ವಂ ತದ್ರಹಿತಂ ಪ್ರತಿ ಸ್ವಾತಂತ್ರ್ಯಂ ಪ್ರವೃತ್ತಿನಿಮಿತ್ತಮ್' ಎಂದಷ್ಟೇ ಹೇಳಿ ಸ್ವಗತತ್ವಯೋಗ್ಯತ್ವವೆಂಬ ವಿಶೇಷಣ ಕೊಡದಿದ್ದರೆ ವಿಷ್ಣುವಿನಲ್ಲಿ ಬದ್ಧಾದಿಶಬ್ದಗಳ ಪ್ರಯೋಗವು ಬಾರದಿರಬೇಕಾದೀತು. ಬದ್ಧಾದಿಶಬ್ದಪ್ರತಿಪಾದ್ಯವಾದ ಬಂಧಾದಿಗಳು ದೋಷವೇ ಆಗಿರುವುದರಿಂದ ತದಭಾವವನ್ನು ಕುರಿತು ಸ್ವಾತಂತ್ರ್ಯವನ್ನು ಹೇಳಲಾಗದು. ಇದರ ಪರಿಹಾರಕ್ಕಾಗಿ "ಸ್ವಗತತ್ವಯೋಗ್ಯತ್ವ" ಎಂಬ ವಿಶೇಷಣವನ್ನು ಕೊಡಬೇಕು. ಬಂಧಾದಿಗಳು ವಿಷ್ಣುವಿನಲ್ಲಿರಲು ಯೋಗ್ಯಗಳಾಗಿಲ್ಲವಾದ್ದರಿಂದ ವಿಶೇಷಣವು ಬರುವುದಿಲ್ಲ. ವಿಶೇಷ್ಯವಿದ್ದರೂ ವಿಶೇಷಣಾಭಾವ ಪ್ರಯುಕ್ತವಾಗಿ ವಿಶಿಷ್ಟಾಭಾವ ಬರುತ್ತದೆ.

ಇನ್ನು ಸ್ವಗತತ್ವಯೋಗ್ಯತ್ವವೆಂಬ ವಿಶೇಷಣವನ್ನಷ್ಟೇ ಹೇಳಿ ವಿಶೇಷ್ಯವನ್ನು ಹೇಳದಿದ್ದರೆ ಭೃತ್ಯನಲ್ಲಿರುವ ಬಂಧನಾದಿಗಳಿಂದ ರಾಜನಲ್ಲಿ ಬದ್ಧಾದಿಶಬ್ದಗಳ ಪ್ರಯೋಗವು ಬರಬೇಕಾದೀತು. ಏಕೆಂದರೆ ಬಂಧನಾದಿಗಳು ರಾಜನಲ್ಲಿರಲು ಯೋಗ್ಯಗಳಾಗಿವೆ. ಅದರ ಪರಿಹಾರಕ್ಕೋಸ್ಕರ 'ತದ್ರಹಿತಂ' ಎಂದು ಹೇಳಬೇಕು. ಬಂಧಾದಿಗಳು ದೋಷವೇ ಆಗಿರುವುದರಿಂದ ತದಭಾವರೂಪವಾಗಿಲ್ಲ. ಆದ್ದರಿಂದ ಸ್ವಾತಂತ್ರ್ಯದ ಲಕ್ಷಣವು ಬಾರದ ಕಾರಣವ ಅತಿಪ್ರಸಂಗವಿಲ್ಲ. 'ಸ್ವಗತತ್ವಯೋಗ್ಯತ್ವೇ ಸತಿ ತದ್ರಹಿತಮ್' ಎಂದಷ್ಟೇ ಹೇಳಿದರೆ ರಾಜನಲ್ಲಿ 'ಜಯೀ' ಎಂಬ ಪ್ರಯೋಗವೂ ಬಾರದಿರಬೇಕಾದೀತು. ಏಕೆಂದರೆ ಜಯವು ರಾಜಗತವಾಗಲು ಯೋಗ್ಯವೇ ಆಗಿದೆ. ತದಭಾವರೂಪವಾಗಿಲ್ಲ. ಇದರ ಪರಿಹಾರಕ್ಕಾಗಿ 'ಯದ್ದೋಷತ್ವಂ' ಎಂಬ ವಿಶೇಷ್ಯವಾಚಕಪದವನ್ನು ನೀಡಬೇಕು. ಪ್ರಕೃತ ರಾಜನಲ್ಲಿರುವ ಜಯವು ದೋಷವಲ್ಲದ ಕಾರಣ ವಿಶೇಷ್ಯಾಭಾವಪ್ರಯುಕ್ತವಾಗಿ ವಿಶಿಷ್ಟಾಭಾವವು ಬರುತ್ತದೆ.

(ಇಲ್ಲಿ ಪ್ರಕಾಶದ ವಾಕ್ಯ ತ್ರುಟಿತವಾಗಿರಬಹುದು. ಏಕೆಂದರೆ 'ರಾಜಾದೌ ಭೃತ್ಯಾದಿಗತಬಂಧಾದೀನಾ ಬದ್ಧಾದಿಪದಪ್ರಯೋಗಾಪತ್ತೇರುತ್ತರಭಾಗಃ' ಎಂಬ ವಾಕ್ಯವನ್ನು ಯಥಾಶ್ರುತವಾಗಿ ವಿವಕ್ಷಿಸಿದರೆ ಅನುಪಪತ್ತಿ ಗೋಚರವಾಗುತ್ತದೆ. ಏಕೆಂದರೆ ರಾಜನಲ್ಲಿಯೂ 'ಬದ್ಧಃ' ಮೊದಲಾದ ಶಬ್ದಪ್ರಯೋಗಗಳು ಬರಲಿ ಎಂಬ ಅತಿಪ್ರಸಂಗದ ಪರಿಹಾರಕ್ಕೆ ಕೇವಲ 'ತದ್ರಹಿತಂ' ಎಂದಷ್ಟೇ ಹೇಳಿದರೆ ಸಾಕು. ಬದ್ಧಾದಿಗಳು ರಾಜನಲ್ಲಿರಲು

ಯೋಗ್ಯವಾಗಿರುವುದಿಂದ ತದಭಾವವನ್ನು ಹೇಳಲಾಗದು. ಹೀಗೆಯೇ ಅತಿವ್ಯಾಪ್ತಿಯು ಪರಿಹಾರವಾಗುತ್ತಿರಲು 'ಯದ್ದೋಷತ್ವಂ' ಎಂಬ ವಿಶೇಷಣವು ಬೇಕಾಗಿರುವುದಿಲ್ಲ. ಆದ್ದರಿಂದ 'ಸ್ವಗತತತ್ವಯೋಗ್ಯತ್ವೇ ಸತಿ ತದ್ರಹಿತಮ್' ಎಂದಷ್ಟೇ ಹೇಳಿದಾಗ ಪುನಃ ರಾಜನಲ್ಲಿ 'ಜಯೀ' ಎಂಬ ಪ್ರಯೋಗವು ಬಾರದಿರಬೇಕಾದೀತು ಎಂಬ ಅತಿಪ್ರಸಂಗ ಬರುತ್ತದೆ. ಇದರ ಪರಿಹಾರಕ್ಕಾಗಿ 'ಯದ್ದೋಷತ್ವಂ' ಎಂಬ ವಿಶೇಷ್ಯವಾಚಕಪದವನ್ನು ನಿವೇಶಿಸಬೇಕು. ಈ ಅಭಿಪ್ರಾಯವು ಕೇವಲ ಈ ವಾಕ್ಯದಿಂದ ತಿಳಿಯುತ್ತಿಲ್ಲ.

ಅಥವಾ 'ಭೃತ್ಯಾದಿಗತಬಂಧಾದೀನಾ' ಎಂಬಲ್ಲಿರುವ ಆದಿಪದದಿಂದ ಎರಡನೆಯ ಈ ಅತಿಪ್ರಸಂಗದ ಪರಿಹಾರವನ್ನು ವಿವಕ್ಷಿಸಬೇಕು. ಆವಾಗ 'ರಾಜಾದೌ' ಎಂಬ ವಾಕ್ಯದಿಂದಲೇ ಈ ಅಭಿಪ್ರಾಯವು ಪ್ರತಿಬಿಂಬಿತವಾಗುತ್ತಿದೆಂಬುದನ್ನು ಸಜ್ಜನರು ವಿಚಾರ ಮಾಡಿ ತಿಳಿಯಬೇಕು.)

**ಪ್ರಕಾಶಃ** – स्वगतत्वयोग्यत्वे सति यद्दोषत्वं तद्रहितमित्यत्र सतिसप्तमीमहिम्ना स्वगतत्वयोग्यत्वसमानाधिकरणं यद्दोषत्वं तद्रहितमित्युक्तम् । विशिष्टराहित्यं विशेषणराहित्येन विशेष्यराहित्येन च द्वेधा । तत्राद्ये दोषशब्दप्रवृत्तिहेतून् प्रति विष्णोस्स्वातन्त्र्यं तच्छब्दप्रवृत्तौ निमित्ततया सिध्यति । अन्ते गुणवाचीन्द्रादिशब्द-प्रवृत्तिहेतून् प्रति तस्य स्वातन्त्र्यं तच्छब्दप्रवृत्तौ निमित्तं सिध्यतीति न काप्यव्याप्तिः ।

"ಸ್ವಗತತತ್ವಯೋಗ್ಯತ್ವೇ ಸತಿ" ಎಂಬಲ್ಲಿ ಸತಿಸಪ್ತಮಿ ಇದೆ. ಇದರ ಮಹಿಮೆಯಿಂದ ಸ್ವಗತತತ್ವಯೋಗ್ಯತ್ವ ಹಾಗೂ ದೋಷತ್ವಗಳು ಒಂದೇ ಅಧಿಕರಣದಲ್ಲಿರಬೇಕೆಂದು (ಸಮಾನಾಧಿಕರಣವಾಗಿರಬೇಕೆಂದು) ತಿಳಿಯುತ್ತದೆ. ಸ್ವಗತತತ್ವ ಯೋಗ್ಯತ್ವವು ಯಾವ ಧರ್ಮದಲ್ಲಿರುತ್ತದೋ ದೋಷತ್ವವು ಅಲ್ಲೇ ಇರಬೇಕು. ಲಕ್ಷಣವು ವಿಶಿಷ್ಟಾಭಾವರೂಪವಾಗಿದೆ. ವಿಶಿಷ್ಟಾಭಾವವು ವಿಶೇಷಣಾಭಾವಪ್ರಯುಕ್ತವಾಗಿ ಅಥವಾ ವಿಶೇಷ್ಯಾಭಾವಪ್ರಯುಕ್ತವಾಗಿ ಹೇಳಬಹುದು. ಬದ್ಧಾದಿ ಶಬ್ದಗಳನ್ನು ವಿಷ್ಣುವಿನಲ್ಲಿ ಹೇಳಬೇಕಾದರೆ ವಿಶೇಷಣಾಭಾವಪ್ರಯುಕ್ತವಾದ ಸ್ವಾತಂತ್ರ್ಯಲಕ್ಷಣವನ್ನು ಸಮನ್ವಯ ಮಾಡಬೇಕು. ಆದ್ದರಿಂದ 'ದುಃಖೀ', 'ಬದ್ಧಃ', ಇತ್ಯಾದಿ ಶಬ್ದಗಳ ಪ್ರವೃತ್ತಿಹೇತುಗಳೆಂದರೆ ದುಃಖಾದಿಗಳು. ಇಂತಹ ದುಃಖಾದಿಗಳಿಗೆ ವಿಷ್ಣುವಿನಲ್ಲಿರುವ ಸ್ವಾತಂತ್ರ್ಯವು ನಿಮಿತ್ತವಾಗಿದೆ. ದುಃಖಾದಿಶಬ್ದಗಳ ಪ್ರವೃತ್ತಿನಿಮಿತ್ತ ಸ್ವಾತಂತ್ರ್ಯವೇ ಆಗಿದೆಯೆಂದು ಇದರಿಂದ ಸಿದ್ಧವಾಯಿತು.

ಮಹಿಮಾವಾಚಕವಾದ ಇಂದ್ರಾದಿಶಬ್ದಗಳ ಸಮನ್ವಯವು ಸಿದ್ಧವಾಗಬೇಕಾದರೆ ವಿಶೇಷ್ಯಾಭಾವ ಪ್ರಯುಕ್ತವಾದ ವಿಶಿಷ್ಟಾಭಾವವನ್ನು ಹೇಳಬೇಕು. ಗುಣವಾಚಕವಾದ ಇಂದ್ರಾದಿಶಬ್ದಗಳ ಪ್ರವೃತ್ತಿಗೆ ಕಾರಣವಾದವು ಐಶ್ವರ್ಯಾದಿಗಳು. ಇಂತಹ ಐಶ್ವರ್ಯಾದಿಗಳು ವಿಷ್ಣುವಿನ ಅಧೀನವಾದ್ದರಿಂದ ವಿಷ್ಣುವಿನಲ್ಲಿರುವ ಸ್ವಾತಂತ್ರ್ಯವು ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವಾಗುತ್ತವೆ. ಆದ್ದರಿಂದ ಅವ್ಯಾಪ್ತಿಗೆ ಅವಕಾಶವಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – ननु कुत एवं कल्पना स्वातन्त्र्यं व्यभिचारादनिमित्तमित्येव वा स्वातन्त्र्यमात्रं निमित्तमिति वा कल्प्यतामित्यत आह – **कार्येति** ।। प्रयोगभावाभावरूपकार्येत्यर्थः ।

ಪ್ರಶ್ನೆ - ಹೀಗೇಕೆ ಕಲ್ಪಿಸುತ್ತೀರಾ ? ವ್ಯಭಿಚಾರ ಬರುವುದರಿಂದ ಸ್ವಾತಂತ್ರ್ಯವನ್ನು ಕಾರಣವೆಂದು ಹೇಳುವುದು ಬೇಡ ಅಥವಾ ಸ್ವಾತಂತ್ರ್ಯಮಾತ್ರವನ್ನು ಕಾರಣವನ್ನಾಗಿ ಹೇಳಿದರೆ ಸಾಕು. ಪರಿಷ್ಕೃತವಾದ ಸ್ವಾತಂತ್ರ್ಯ ಲಕ್ಷಣದ ಅವಶ್ಯಕತೆಯು ಇರುವುದಿಲ್ಲ.

ಉತ್ತರ - 'ಬದ್ಧಃ' ಎಂಬ ಪ್ರಯೋಗ ವಿಷ್ಣುವಿನಲ್ಲಿದೆ. ರಾಜನಲ್ಲಿ ಇರುವುದಿಲ್ಲ. ಈ ಪ್ರಯೋಗದ ಇರುವಿಕೆ ಹಾಗೂ ಇಲ್ಲದಿರುವಿಕೆಯಿಂದ ಇಂತಹ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲೇಬೇಕು.

**प्रकाशः** – विशिष्टराहित्यसम्पादनेन राजादौ स्वातन्त्र्यस्य निमित्तत्वानिमित्तत्वे विशेषणमुपेत्य विशेष्यभावाभावाभ्यामुपपादयति ।। **एवञ्चेति** ।। विशिष्टाभावसम्पादने सतीत्यर्थः । ब्रह्मण्युभयाभावेन निमित्ततामेवाह – **ब्रह्मणि त्विति** ।।

ವಿಶಿಷ್ಟಭಾವರೂಪವಾದ ಸ್ವಾತಂತ್ರ್ಯವನ್ನು ಹೇಳಿದ್ದರಿಂದ ರಾಜನಲ್ಲಿ ದುಃಖೀ, ಬದ್ಧಾದಿ ಶಬ್ದಗಳ ಪ್ರಯೋಗ ಬರುವುದಿಲ್ಲ ಜಯಾದಿ ಶಬ್ದಗಳ ಪ್ರಯೋಗ ಬರುತ್ತದೆ ಎಂದು ಸುಲಭವಾಗಿ ಹೇಳಬಹುದು. ಅಂದರೆ ಭೃತ್ಯನಲ್ಲಿರುವ ಬಂಧನಾದಿಗಳಿಗೆ ರಾಜನ ಸ್ವಾತಂತ್ರ್ಯವು ಕಾರಣವಾಗಿಲ್ಲ. ಭೃತ್ಯನಲ್ಲಿರುವ ಜಯಾದಿಗಳಿಗೆ ರಾಜನಲ್ಲಿರುವ ಸ್ವಾತಂತ್ರ್ಯವು ಕಾರಣವಾಗಿದೆ ಎಂಬುದನ್ನು ಎರಡು ಕಡೆಯೂ ವಿಶೇಷಣವನ್ನು ಒಪ್ಪಿ ಒಂದು ಕಡೆ ವಿಶೇಷ್ಯದ ಇರುವಿಕೆ ಮತ್ತೊಂದು ಕಡೆ ವಿಶೇಷ್ಯದ ಇಲ್ಲದಿರುವಿಕೆಯಿಂದ ಕೂಡಿಸಬಹುದು. ಅದು ಹೀಗೆ - ಭೃತ್ಯನಲ್ಲಿರುವ ಜಯಾದಿಗಳು ರಾಜನಲ್ಲಿ ಇರಲು ಯೋಗ್ಯಗಳಾಗಿವೆ. ಆದರೆ ದೋಷರೂಪಗಳಾಗಿಲ್ಲ. ತದಭಾವವನ್ನು ಕುರಿತು ಸ್ವಾತಂತ್ರ್ಯವು ಕಾರಣವಾಗುತ್ತದೆ. ಇಲ್ಲಿ ವಿಶೇಷಣವಿದ್ದರೂ ಸಹ ದೋಷತ್ವವೆಂಬ ವಿಶೇಷ್ಯ ಇರುವುದಿಲ್ಲ ಆದ್ದರಿಂದ ವಿಶಿಷ್ಟಾಭಾವವು ಬಂತು. ಅಂತಹ ವಿಶಿಷ್ಟಾಭಾವಕ್ಕೆ ರಾಜನ ಸ್ವಾತಂತ್ರ್ಯವು ಕಾರಣವಾದ್ದರಿಂದ ಭೃತ್ಯನು ಗೆದ್ದಾಗ ರಾಜನು ಗೆದ್ದ ಎಂದು ಹೇಳಬಹುದು. ಆದರೆ ಬಂಧನಾದಿಗಳಲ್ಲಿ ಹೀಗೆ ಹೇಳಲಾಗುವುದಿಲ್ಲ. ಬಂಧನಾದಿಗಳು ರಾಜನಲ್ಲಿ ಇರಲು ಯೋಗ್ಯಗಳಾಗಿವೆ. ಆದ್ದರಿಂದ ಸ್ವಗತತ್ವ ಯೋಗ್ಯತ್ವವೆಂಬ ವಿಶೇಷಣ ಸಮಾನವಾಗಿದೆ. ಆದರೆ ಬಂಧನಾದಿಗಳು ದೋಷವೇ ಆಗಿರುವುದರಿಂದ ಬಂಧನಾದಿಗಳನ್ನು ಕುರಿತು ರಾಜನ ಸ್ವಾತಂತ್ರ್ಯವು ನಿಮಿತ್ತವಾಗಲಾರದು.

ಬ್ರಹ್ಮನಲ್ಲಿಯಾದರೂ ಬದ್ಧಾದಿ ಶಬ್ದಗಳನ್ನು ಮತ್ತು ಇಂದ್ರಾದಿಶಬ್ದಗಳನ್ನು ಪ್ರಯೋಗಿಸಬಹುದು. ಅದು ಹೀಗೆ - ಇಂದ್ರಾದಿ ಶಬ್ದದ ಪ್ರವೃತ್ತಿನಿಮಿತ್ತ ಐಶ್ವರ್ಯಾದಿಗಳು. ಈ ಐಶ್ವರ್ಯಾದಿಗಳು ಬ್ರಹ್ಮನಲ್ಲಿ ಇರಲು ಅರ್ಹವಾಗಿದೆ. ಆದ್ದರಿಂದ ಐಶ್ವರ್ಯಾದಿಗಳಲ್ಲಿ ಸ್ವಗತತ್ವಯೋಗ್ಯತ್ವ ಎಂಬ ವಿಶೇಷಣವು ಬಂದಿತು. ಆದರೆ ಐಶ್ವರ್ಯಾದಿಗಳು ಗುಣಗಳಾದ್ದರಿಂದ ದೋಷತ್ವವೆಂಬ ವಿಶೇಷ್ಯವು ಬರಲಾರದು. ತದಭಾವವನ್ನು ಕುರಿತು ಸ್ವಾತಂತ್ರ್ಯವು ಕಾರಣವಾಗುತ್ತದೆ. ಇನ್ನು ಬಂಧನಾದಿಗಳು ದೋಷಗಳಾಗಿದ್ದರೂ ವಿಷ್ಣುವಿನಲ್ಲಿರಲು ಯೋಗ್ಯಗಳಾಗಿಲ್ಲ. ಆದ್ದರಿಂದ ಬಂಧನಾದಿಗಳಲ್ಲಿ ದೋಷತ್ವವೆಂಬ ವಿಶೇಷ್ಯವಿದ್ದರೂ ಸ್ವಗತತ್ವ

ಯೋಗ್ಯತೆಯೆಂಬ ವಿಶೇಷಣ ಇರುವುದಿಲ್ಲ. ಹೀಗೆ ಇಂದ್ರಾದಿ ಶಬ್ದಗಳಲ್ಲಿ ವಿಶೇಷ್ಯಾಭಾವಪ್ರಯುಕ್ತವಾಗಿ ಬಂಧನಾದಿಶಬ್ದಗಳಲ್ಲಿ ವಿಶೇಷಣಭಾವಪ್ರಯುಕ್ತವಾಗಿ ವಿಶಿಷ್ಟಾಭಾವವನ್ನು ಹೇಳಬಹುದು. ಹೀಗೆ ವಿಷ್ಣುವಿನಲ್ಲಿ ಸ್ವಾತಂತ್ರ್ಯದ ಎರಡನೆಯ ಲಕ್ಷಣವೂ ಕೂಡ ಬರುತ್ತದಾದ್ದರಿಂದ ದೋಷವಾಚಕ ಶಬ್ದಗಳನ್ನು ಮತ್ತು ಗುಣವಾಚಕ ಶಬ್ದಗಳನ್ನು ಸಮನ್ವಯ ಮಾಡಬಹುದು.

**प्रकाशः** – **यद्यपि गुणवाचीन्द्रादिशब्दानां तत्प्रवृत्तिनिमित्तस्य विष्णुगतत्वेनैव तत्र प्रवृत्तिस्सम्भवति । न स्वातन्त्र्यरूपनिमित्तानुसरणं तत्र कार्यम् । अन्यथा स्वातन्त्र्याख्यगुणस्यैव लाभेनापर्यायानन्तशब्दानां समन्वयेन तत्तच्छब्दप्रवृत्ति-निमित्तानन्तगुणासिद्धिप्रसङ्गात् । दोषवाचिनान्तु शब्दानां प्रवृत्तिनिमित्तस्य विष्णुगतस्यैव तत्र शब्दप्रवृत्तिहेतुत्वे विष्णोर्दोषितापत्तेः श्रुत्यादिविरोधप्रसङ्गात् स्वातन्त्र्यमेव तत्र दोषवाचिशब्दवृत्तौ निमित्तमनुसर्तव्यम् । आह च अयं सूत्रकारोऽत्रैव दोषवाचिशब्दोदाहरणकेऽधिकरणे तदधीनत्वन्यायम् । भाष्यकारोपि ''स्वातन्त्र्यादेव वर्तन्ते दोषशब्दाश्च विष्णवि'' इति । तथाचोभयसाधारण्येन स्वातन्त्र्यनिरुक्तिक्लेशो विफलः ।**

ಪ್ರಶ್ನೆ - ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಿ ಗುಣವಾಚಕ ಶಬ್ದಗಳನ್ನು ಸಮನ್ವಯ ಮಾಡುತ್ತಿದ್ದೀರಿ. ಹಾಗಾದಲ್ಲಿ ವಿಷ್ಣುವಿನಲ್ಲಿ ಅನಂತಗುಣಪರಿಪೂರ್ಣತ್ವವೇ ಸಿದ್ಧವಾಗದಿರಬೇಕಾದೀತು. ಏಕೆಂದರೆ ಯಾವುದೇ ಗುಣವಾಚಕ ಶಬ್ದಗಳನ್ನು ಸಮನ್ವಯ ಮಾಡಬೇಕಾದರೆ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನುತ್ತೀರಿ. ಇದರಿಂದ ಸ್ವಾತಂತ್ರ್ಯ ಎಂಬ ಗುಣಸಮನ್ವಯವನ್ನೇ ಮಾಡಿದಂತಾಯಿತು. ಇಂದ್ರ ಶಬ್ದದ ಸಮನ್ವಯದಿಂದ ಭಗವಂತನಲ್ಲಿ ಸ್ವಾತಂತ್ರ್ಯಗುಣವನ್ನೇ ಹೇಳಿದಂತಾಯಿತು ಹೊರತು, ಐಶ್ವರ್ಯಗುಣವನ್ನು ಹೇಳಿದಂತಾಗುವುದಿಲ್ಲ. ಹೀಗೆ ಸಕಲಗುಣವಾಚಕಶಬ್ದಗಳಿಂದ ಪುನಃ ಪುನಃ ಸ್ವಾತಂತ್ರ್ಯವೆಂಬ ಗುಣಸಮನ್ವಯವನ್ನು ಮಾಡಿದಂತಾಗುತ್ತದೆ ಹೊರತು ಅನಂತಗುಣಪರಿಪೂರ್ಣತ್ವದ ಸಮನ್ವಯವನ್ನು ಮಾಡಿದಂತಾಗುವುದಿಲ್ಲ. ದೋಷವಾಚಕವಾದ ಶಬ್ದಗಳ ಸಮನ್ವಯ ಮಾಡಬೇಕಾದರೆ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲಾಗದು. ಹಾಗಾದಲ್ಲಿ ವಿಷ್ಣುವು ದೋಷಿಯೆಂದಾಗಬೇಕಾಗುತ್ತದೆ. ಅವನು ದೋಷಿಯಾದರೆ ಶ್ರುತಿವಿರೋಧ ತಪ್ಪಿದ್ದಲ್ಲ. ಆದಕ್ಕೋಸ್ಕರ ದೋಷವಾಚಕಶಬ್ದಗಳ ಸಮನ್ವಯದಲ್ಲಿ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನುವುದು ಅನಿವಾರ್ಯವೆಂದು ಸೂತ್ರಕಾರರೇ "ತದಧೀನತ್ವಾತ್ ಅರ್ಥವತ್" ಎಂಬ ಸೂತ್ರದಲ್ಲಿ ಹೇಳಿದ್ದಾರೆ. ಭಾಷ್ಯಕಾರರೂ ಸಹ "ಸ್ವಾತಂತ್ರ್ಯಾದೇವ ವರ್ತಂತೇ ದೋಷಶಬ್ದಾಶ್ಚ ವಿಷ್ಣವಿ" ದೋಷ ಶಬ್ದಗಳು ವಿಷ್ಣುವಿನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೇ ಇರುತ್ತವೆ ಎಂದು ಹೇಳಿದ್ದಾರೆ. ಆದ್ದರಿಂದ ಗುಣವಾಚಕಶಬ್ದಗಳ ಸಮನ್ವಯ ಮಾಡುವಾಗ ಸ್ವಾತಂತ್ರ್ಯದ ಅವಶ್ಯಕತೆಯಿಲ್ಲ. ಕೇವಲ ದೋಷವಾಚಕಶಬ್ದಗಳನ್ನು ಸಮನ್ವಯ ಮಾಡುವಾಗ ಸ್ವಾತಂತ್ರ್ಯವನ್ನು ನಿಮಿತ್ತವೆಂದು ವಿವಕ್ಷಿಸಿದರೆ ಉಚಿತವಲ್ಲವೇ?

ಪರಿಪೂರ್ಣಚಂದ್ರಿಕಾ

**प्रकाशः – तथापि श्रुतिस्मृत्योः**

शब्दप्रवृत्तिहेतूनां तस्मिन्मुख्यसमन्वयात् ।
अन्यार्थेष्वल्पताहेतोस्तन्निमित्तत्वतस्तथा ।।

इत्यानन्दमयनयानुव्याख्याने प्रतिनयं टीकायां च गुणवाचिशब्दानामपि भगवति वृत्तौ स्वातन्त्र्यस्यापि निमित्तत्वेनोपपादनात् साधारण्येनैवमुक्तिः ।

ಉತ್ತರ - ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಪ್ರತಿಯೊಂದು ಶಬ್ದಗಳ ಸಮನ್ವಯವಿಷಯದಲ್ಲಿಯೂ ಕೂಡ ಹೇಳಲೇಬೇಕು. ಈ ವಿಷಯದಲ್ಲಿ ಶ್ರುತಿ-ಸ್ಮೃತಿಗಳೇ ಆಧಾರವಾಗಿವೆ. ಇದನ್ನು ಆನಂದಮಯಾಧಿಕರಣದ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೀಗೆ ಹೇಳಿದ್ದಾರೆ -

ಶಬ್ದ ಪ್ರವೃತ್ತಿಹೇತೂನಾಂ ತಸ್ಮಿನ್ ಮುಖ್ಯಸಮನ್ವಯಾತ್ ।
ಅನ್ಯಾರ್ಥೇಷ್ವಲ್ಪತಾಹೇತೋಸ್ತನ್ನಿಮಿತ್ತತ್ವತಸ್ತಥಾ ॥

ಯಾವುದೇ ಶಬ್ದಗಳ ಪ್ರವೃತ್ತಿನಿಮಿತ್ತಗಳು ವಿಷ್ಣುವಿನಲ್ಲಿಯೇ ಮುಖ್ಯವಾಗಿಯೇ ಇರುತ್ತವೆ. ಉಳಿದವರಲ್ಲಿ ಅಲ್ಪವಾಗಿರುತ್ತವೆ ಮತ್ತು ಭಗವದಧೀನವಾಗಿರುತ್ತವೆ.

ಅಷ್ಟೇ ಅಲ್ಲದೆ ಪ್ರತಿಯೊಂದು ಅಧಿಕರಣಗಳ ಟೀಕೆಯಲ್ಲಿಯೂ ಗುಣವಾಚಕವಾದ ಶಬ್ದಗಳನ್ನು ಸಮನ್ವಯ ಮಾಡುವ ಸಂದರ್ಭದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಭಗವಂತನಲ್ಲಿ ಸಮರ್ಥಿಸಿದ್ದಾರೆ. ಆದ್ದರಿಂದ ಕೇವಲ ದೋಷವಾಚಕ ಶಬ್ದಗಳ ಸಮನ್ವಯವಿಷಯದಲ್ಲಿ ಮಾತ್ರ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ತಿಳಿಯಬಾರದು. ಗುಣವಾಚಕಶಬ್ದಗಳ ಸಮನ್ವಯವಿಷಯದಲ್ಲಿಯೂ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ತಿಳಿಯಬೇಕು. ಗುಣವಾಚಕಶಬ್ದಗಳ ಸಮನ್ವಯವನ್ನು ಮಾಡುವಾಗ ತದ್ಗತತ್ವವೆಂಬ ಪ್ರವೃತ್ತಿನಿಮಿತ್ತವನ್ನು ನಾವೇನು ಬಿಟ್ಟಿರುವುದಿಲ್ಲ. ಹಾಗೇನಾದರೂ ಬಿಟ್ಟಿದ್ದಲ್ಲಿ ಅನಂತಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲ ಎಂಬ ದೋಷಕ್ಕೆ ಅವಕಾಶವಿರುತ್ತಿತ್ತು. ತದ್ಗತತ್ವದ ಜೊತೆಗೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸುತ್ತಿರುವುದರಿಂದ ಅನಂತಗುಣಪರಿಪೂರ್ಣತ್ವದ ಜೊತೆಗೆ ಸ್ವಾತಂತ್ರ್ಯವೂ ಕೂಡ ಸಿದ್ಧವಾಗುತ್ತದೆ.

**प्रकाशः – यद्यप्येवं सुधादौ नोक्तम् । तथापि तदपरित्यागेन प्रौढ्या तात्पर्यान्तरवर्णनमेतदित्यदोषः ।**

ಗ್ರಂಥಕಾರರು ಪರಿಷ್ಕರಿಸಿದ ಈ ಸ್ವಾತಂತ್ರ್ಯದ ಎರಡು ಲಕ್ಷಣಗಳನ್ನು ನ್ಯಾಯಸುಧಾದಿ ಗ್ರಂಥಗಳಲ್ಲಿ ಹೇಳಿರುವುದಿಲ್ಲ. ಆದರೂ ಸಹ ಗ್ರಂಥಕಾರರು ಪ್ರೌಢಿವಾದದಿಂದ ಸ್ವಾತಂತ್ರ್ಯದ ಮತ್ತೊಂದು ತಾತ್ಪರ್ಯದ ವರ್ಣನೆಯನ್ನು ಹೀಗೆ ಮಾಡಿರುತ್ತಾರೆ. ಹೀಗೆ ಪರಿಷ್ಕಾರ ಮಾಡಿದ ಮಾತ್ರಕ್ಕೆ ಸುಧೆಯ ಅಭಿಪ್ರಾಯವನ್ನು ಬಿಟ್ಟಿದ್ದಾರೆಂದೇನೂ ಅಲ್ಲ. ಸುಧೆಯ ವಾದವನ್ನು ಒಪ್ಪಿ ಪ್ರೌಢಿವಾದದಿಂದ ಈ ಪರಿಷ್ಕಾರವನ್ನು

ಮಾಡಿರುತ್ತಾರೆಂದು ತಿಳಿಯಬೇಕು. ಆದ್ದರಿಂದ ಸ್ವಾತಂತ್ರ್ಯದ ಎರಡುವಿಧ ಲಕ್ಷಣಗಳಲ್ಲಿ ಯಾವುದೇ ದೋಷಗಳು ಇರುವುದಿಲ್ಲ.

**ಗುರುರಾಜೀಯಮ್** – राजाधीनेन शत्रुगतदुःखेन राज्ञि दुःखिशब्दस्य राजाधीनेन भृत्यगतबन्धेन राज्ञि बन्धादिशब्दस्य चापातादित्यतोऽभिप्रायमाह – **अयं भाव इति** ॥ नन्वेवमनुव्याख्यानविरोधः । तत्र राज्ञो बन्धादियोग्यत इत्यादिना राज्ञःसाक्षाद्बन्धादि-रूपदोषयोग्यत्वस्यैवोक्तत्वात् । भवद्भिश्च तत्प्रयुक्तनीचत्वाभिधानादित्य-रुच्याऽऽह – **यद्वेति** ॥




ಅಥವಾ 'ಸ್ವಗತತ್ವಯೋಗ್ಯತ್ವೇ ಸತಿ ಯದ್ದೋಷತ್ವಂ ತದ್ರಹಿತಂ ಪ್ರತಿ ಸ್ವಾತಂತ್ರ್ಯಂ ನಿಮಿತ್ತಮ್' ಎಂದು ಹೇಳುತ್ತೇವೆ. ಯಾವ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸುತ್ತೇವೋ, ಅದು ಎರಡು ಕಾರಣಗಳಿಂದ ಶಬ್ದದ ವ್ಯವಹಾರಕ್ಕೆ ಹೇತುವಾಗುತ್ತದೆ. ರಾಜನಲ್ಲಿ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸಬಹುದು. ಏಕೆಂದರೆ ಜಯವು ರಾಜನಲ್ಲಿರಲು ಯೋಗ್ಯವಾಗಿದೆ. ಆದರೆ ಅದು ದೋಷವಲ್ಲ. ಆದ್ದರಿಂದ ತದ್ರಾಹಿತ್ಯವು ಬರುವುದರಿಂದ ಸ್ವಾತಂತ್ರ್ಯವನ್ನು ಇಲ್ಲಿ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಬಹುದು. ಆದರೆ 'ಬದ್ಧಃ' ಎಂಬ ಪ್ರಯೋಗವನ್ನು ರಾಜನಲ್ಲಿ ಮಾಡಲಾಗದು. ಬದ್ಧಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಬಂಧನವು ರಾಜನಲ್ಲಿರಲು ಯೋಗ್ಯವೇ ಆಗಿದೆ. ಮತ್ತು ದೋಷವೂ ಆಗಿದೆ. ಹಾಗಾಗಿ ತದಭಾವವು ಬಾರದ ಕಾರಣ ಸ್ವಾತಂತ್ರ್ಯವನ್ನು ಅಲ್ಲಿ ಪ್ರವೃತ್ತಿನಿಮಿತ್ತವೆಂದು ಪರಿಗಣಿಸಲು ಬರುವುದಿಲ್ಲ. ಆದರೆ ವಿಷ್ಣುವಿನ ವಿಷಯದಲ್ಲಿ ಸಕಲಶಬ್ದಗಳನ್ನು ಈ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ವ್ಯವಹರಿಸಲು ಬರುತ್ತದೆ. ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಪರಮೈಶ್ವರ್ಯಾದಿಗಳು ವಿಷ್ಣುವಿನಲ್ಲಿರಲು ಯೋಗ್ಯವಾಗಿವೆ. ಆದರೆ ದೋಷವಲ್ಲದ ಕಾರಣ ತದ್ರಾಹಿತ್ಯವು ಬರುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನು ಇಂದ್ರಾದಿಶಬ್ದಗಳ ವಿಷಯದಲ್ಲಿಯೂ ಪ್ರವೃತ್ತಿನಿಮಿತ್ತವೆನ್ನಬಹುದು. ಇದರಂತೆ 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳ ಪ್ರಯೋಗವಿಷಯದಲ್ಲಿಯೂ ಪ್ರವೃತ್ತಿನಿಮಿತ್ತ-ವೆನ್ನಬಹುದು. ಏಕೆಂದರೆ ಇವುಗಳ ಪ್ರವೃತ್ತಿನಿಮಿತ್ತವೆನಿಸಿದ ದುಃಖ, ಬಂಧನ ಮೊದಲಾದವು ವಿಷ್ಣುವಿನಲ್ಲಿರಲು ಯೋಗ್ಯವಾಗಿರುವುದಿಲ್ಲ. ಆದ್ದರಿಂದ ದೊಷವಾಗಿದ್ದರೂ ಸ್ವಗತತ್ವ-ಯೋಗ್ಯತ್ವ ಎಂಬ ವಿಶೇಷ್ಯವಿಲ್ಲದ ಕಾರಣ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಬಹುದು. ಹೀಗೆ ಪರಿಷ್ಕಾರ ಮಾಡುವುದರಿಂದ ವಿಷ್ಣುವಿನಲ್ಲಿ 'ದುಃಖೀ'-'ಬದ್ಧ' ಮೊದಲಾದ ಶಬ್ದಪ್ರಯೋಗದಂತೆ ರಾಜನಲ್ಲಿಯೂ ಅಂತಹ ಶಬ್ದಪ್ರಯೋಗವು ಬರಲಿ ಎಂಬ ಅತಿಪ್ರಸಂಗಕ್ಕೆ ಲವಲೇಶವೂ ಅವಕಾಶವಿರುವುದಿಲ್ಲ.



## ಅಥವಾ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತ

**तात्पर्यचन्द्रिका**

**अथवा स्वातन्त्र्यमात्रं निमित्तम् ।**
**सर्वान्तर्यामिणि हरावस्मच्छब्दविभक्तयः ।**
**युष्मच्छब्दगताश्चैव सर्वास्तच्छब्दगा अपि ।।**
**सर्वशब्दगताश्चैव वचनान्यखिलान्यपि ।**
**स्वातन्त्र्यात् सम्प्रवर्तन्ते ........ ।।**

**इत्यादिश्रुतेः**

ಅನುವಾದ -

ಅಥವಾ ಸ್ವಾತಂತ್ರ್ಯಮಾತ್ರಂ ನಿಮಿತ್ತಮ್ ।
ಸರ್ವಾಂತರ್ಯಾಮಿಣಿ ಹರಾವಸ್ಮಚ್ಛಬ್ದವಿಭಕ್ತ್ಯಃ ।
ಯುಷ್ಮಚ್ಛಬ್ದಗತಾಶ್ಚೈವ ಸರ್ವಾಸ್ತಚ್ಛಬ್ದಗಾ ಅಪಿ ॥
ಸರ್ವಶಬ್ದಗತಾಶ್ಚೈವ ವಚನಾನ್ಯಖಿಲಾನ್ಯಪಿ ।
ಸ್ವಾತಂತ್ರ್ಯಾತ್ ಸಂಪ್ರವರ್ತಂತೇ ॥

ಅಥವಾ ಸ್ವಾತಂತ್ರ್ಯವನ್ನೇ ಶಬ್ದಗಳ ಪ್ರವೃತ್ತಿನಿಮಿತ್ತವನ್ನಾಗಿ ಹೇಳುತ್ತೇವೆ. ಸರ್ವಾಂತರ್ಯಾಮಿಯಾದ ಶ್ರೀಹರಿಯಲ್ಲಿ 'ಅಸ್ಮತ್' ಶಬ್ದದ ಎಲ್ಲಾ ವಿಭಕ್ತಿಗಳು ಮತ್ತು 'ಯುಷ್ಮತ್' ಶಬ್ದದ ಎಲ್ಲಾ ವಿಭಕ್ತಿಗಳು 'ತತ್' ಶಬ್ದದ ಎಲ್ಲಾ ವಿಭಕ್ತಿಗಳು, ಅಷ್ಟೇ ಅಲ್ಲದೇ ಉಳಿದೆಲ್ಲಾ ಶಬ್ದಗಳ ಸಕಲ ವಿಭಕ್ತಿಗಳು, ವಚನಗಳೂ ಕೂಡ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಉಪಪನ್ನವಾಗುತ್ತವೆ. ಹೀಗೆ ಅನೇಕ ಶ್ರುತಿಗಳು ಸಾರುತ್ತಿವೆ.

(ಉದಾ:- ದೇವದತ್ತೇನ ಎಂಬಲ್ಲಿರುವ ತೃತೀಯಾ ವಿಭಕ್ತಿಯಿಂದ ತಿಳಿಯುವ ಕರ್ತೃತ್ವವಾಗಲೀ, ಏಕವಚನದಿಂದ ತಿಳಿಯುವ ಏಕತ್ವವಾಗಲೀ, ದೇವದತ್ತನಲ್ಲಿರುವ ದೇವದತ್ತತ್ವವಾಗಲೀ, ಎಲ್ಲವೂ ಪರಮಾತ್ಮನಲ್ಲಿ ಮುಖ್ಯವಾಗಿ ಉಪಪನ್ನವಾಗುತ್ತವೆ. ಏಕೆಂದರೆ ವಿಭಕ್ತ್ಯರ್ಥ, ಏಕವಚನಾರ್ಥ ಹಾಗೂ ಪ್ರಾತಿಪದಿಕಾರ್ಥ ಇವೆಲ್ಲದರ ಪ್ರವೃತ್ತಿನಿಮಿತ್ತವು ಸ್ವಾತಂತ್ರ್ಯವೇ ಆಗಿದೆ. ಇವು ಪರಮಾತ್ಮನಲ್ಲೇ ಮುಖ್ಯವಾಗಿರುವುದರಿಂದ ವಿಭಕ್ತಿ, ವಚನ, ಪ್ರಾತಿಪದಿಕಗಳಿಂದೆಲ್ಲಾ ಅವನೇ ಪ್ರತಿಪಾದ್ಯನಾಗುತ್ತಾನೆ.)

**"सर्वस्य तदधीनत्वात् सर्वशब्दाभिधेयता" इत्यादिस्मृतेश्च ।**

'ಸರ್ವಸ್ಯ ತದಧೀನತ್ವಾತ್ ಸರ್ವಶಬ್ದಾಭಿಧೇಯತಾ' ಎಂಬುದಾಗಿ ವಿಷ್ಣುತತ್ವನಿರ್ಣಯದಲ್ಲಿ ಉದಾಹರಿಸಿದ ಶ್ರುತಿಯು ಸಕಲಶಬ್ದಗಳ ಪ್ರವೃತ್ತಿನಿಮಿತ್ತವು ಸ್ವಾತಂತ್ರ್ಯವೇ ಆಗಿರುವುದರಿಂದ ಶ್ರೀಹರಿಯೇ ಸಕಲ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ ಎಂದು ಹೇಳುತ್ತಿದೆ.

**न चैवं राज्ञि बद्धादिशब्दापातः ।**

ಪ್ರಶ್ನೆ - ಸ್ವಾತಂತ್ರ್ಯವನ್ನೇ ಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳುವುದಾದರೆ, ರಾಜನಲ್ಲಿಯೂ 'ಬದ್ಧಃ' ಇತ್ಯಾದಿ ಪ್ರಯೋಗಗಳು ಬರಬೇಕಾಗುತ್ತದಲ್ಲವೇ? ಏಕೆಂದರೆ ಭೃತ್ಯನು ರಾಜನ ಅಧೀನನಾದ್ದರಿಂದ ಭೃತ್ಯನು ಬಂಧಿತನಾದಾಗ ರಾಜನೇ ಬಂಧಿತನಾಗಿದ್ದಾನೆಂಬ ಪ್ರಯೋಗ ಬರಬೇಕಾದೀತು.

**तद्गतत्वस्य निमित्तत्वेऽपि धनादिवाहके 'धनी' इत्यादिशब्दापातात् ।**

ಉತ್ತರ - ನೀವು ಹೇಳಿದ ಅತಿಪ್ರಸಂಗಕ್ಕೆ ಪ್ರತಿಬಂಧಿಯಾಗಿ ನಾವೂ ಕೂಡ ಮತ್ತೊಂದು ಅತಿಪ್ರಸಂಗವನ್ನು ಹೇಳುತ್ತೇವೆ. ಲೋಕದಲ್ಲಿ ಧನಸ್ವಾಮಿಯಲ್ಲಿಯೇ 'ಧನೀ' ಎಂಬ ವ್ಯವಹಾರವಿದೆ. ಆದರೆ ನಿಮ್ಮ ಪ್ರಕಾರ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆನ್ನುವುದಾದರೆ ಧನವನ್ನು ಹೊತ್ತುಕೊಂಡು ಬರುತ್ತಿರುವ ಪುರುಷನಲ್ಲಾಗಲೀ, ಕತ್ತೆ, ಕುದುರೆ ಮೊದಲಾದ ಪ್ರಾಣಿಗಳಲ್ಲಾಗಲೀ 'ಧನೀ' ಎಂಬ ವ್ಯವಹಾರವನ್ನು ಮಾಡಬೇಕಾದೀತು. ಆದ್ದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದಾಗ ಅತಿಪ್ರಸಂಗ ಬರುವಂತೆ. ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗಲೂ ಅತಿಪ್ರಸಂಗವು ಬಂದೇ ಬರುತ್ತದೆ.

**अथ 'रूपी' 'दण्डी' इत्यादौ तद्गतत्वं निमित्तम् । 'धनी' 'गृही' इत्यादौ तु स्वातन्त्र्यमिति चेत्**

'ರೂಪೀ' ರೂಪವುಳ್ಳವನು, 'ದಂಡೀ' ದಂಡವುಳ್ಳವನು ಇತ್ಯಾದಿ ಶಬ್ದಪ್ರಯೋಗದಲ್ಲಿ ತದ್ಗತತ್ವವೇ ಪ್ರವೃತ್ತಿನಿಮಿತ್ತವಾಗಿರುತ್ತದೆ. ಆದರೆ 'ಧನೀ' ಧನವುಳ್ಳವನು, 'ಗೃಹೀ' ಗೃಹವುಳ್ಳವನು ಇತ್ಯಾದಿ ಪ್ರಯೋಗದಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವಾಗದೇ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾಗುತ್ತದೆ. ಆದ್ದರಿಂದ ಧನಾದಿವಾಹಕ ಪದಾರ್ಥಗಳಲ್ಲಿಯೂ 'ಧನೀ' ಇತ್ಯಾದಿ ಪ್ರಯೋಗಗಳು ಬರಲಿ ಎಂಬ ಅತಿಪ್ರಸಂಗವು ನಮಗೆ ಬರುವುದಿಲ್ಲ.

**तर्हि जयीत्यादौ स्वातन्त्र्यमपि निमित्तम् । 'दुःखी' इत्यादौ तु लोके तद्गतत्वमेवेत्यस्तु ।**

ಉತ್ತರ - ನಾವೂ ಸಹ ನಿಮ್ಮಂತೆ ಉತ್ತರಿಸುತ್ತೇವೆ. 'ಜಯೀ' ಇತ್ಯಾದಿ ಶಬ್ದಗಳಲ್ಲಿ ತದ್ಗತತ್ವದಂತೆ ಸ್ವಾತಂತ್ರ್ಯವೂ ಸಹ ಪ್ರವೃತ್ತಿನಿಮಿತ್ತವಾಗಿರುತ್ತದೆ. 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಪ್ರಯೋಗಗಳಲ್ಲಿ ತದ್ಗತತ್ವವೇ ಪ್ರವೃತ್ತಿನಿಮಿತ್ತವಾಗಿರುತ್ತದೆ. ಆದ್ದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ, ರಾಜನಲ್ಲಿಯೂ ಬದ್ಧಾದಿ ಶಬ್ದಪ್ರಯೋಗಗಳು ಬರಬೇಕಾದೀತು ಎಂಬ ಅತಿಪ್ರಸಂಗವು ನಮಗೂ ಸಹ ಬರುವುದಿಲ್ಲ.

**ननु 'धनी' इत्यादौ न धनं निमित्तम् । किन्तु तत्स्वामित्वम् । तच्च धनिगतमेवेति चेत्**

'ಧನೀ' ಇತ್ಯಾದಿ ಪ್ರಯೋಗಗಳಲ್ಲಿ ಧನವು ಪ್ರವೃತ್ತಿನಿಮಿತ್ತವೇ ಅಲ್ಲ. , 'ಧನೀ' ಎಂಬಲ್ಲಿ ಯಾವ 'ಇನಿ' ಪ್ರತ್ಯಯವು ಶ್ರುತವಾಗಿದೆಯೋ ಅದಕ್ಕೆ 'ಸ್ವಾಮಿತ್ವ' ಎಂದರ್ಥ. ಇಂತಹ ಸ್ವಾಮಿತ್ವವೇ ಧನ ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಈ ಸ್ವಾಮಿತ್ವವಾದರೂ ಶ್ರೀಮಂತನಾದ ವ್ಯಕ್ತಿಯಲ್ಲಿಯೇ ಹೊರತು, ಧನಾದಿವಾಹಕ ಪದಾರ್ಥಗಳಲ್ಲಿ ಸರ್ವಥಾ ಇರುವುದಿಲ್ಲ. ಆದ್ದರಿಂದ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದಾಗ 'ಧನೀ' ಎಂಬಲ್ಲಿ ಅತಿಪ್ರಸಂಗವನ್ನು ಹೇಗೆ ಹೇಳುತ್ತೀರಿ.

**तर्हि जयीत्यादावपि तत्स्वामित्वं निमित्तम् ।**

ಉತ್ತರ - ಹಾಗಾದರೆ ನಾವೂ ಸಹ 'ಜಯೀ' ಇತ್ಯಾದಿ ಶಬ್ದಪ್ರಯೋಗಗಳಲ್ಲಿ ಸ್ವಾಮಿತ್ವವೇ ಪ್ರವೃತ್ತಿನಿಮಿತ್ತವೆಂದು ಹೇಳುತ್ತೇವೆ. ಇಂತಹ ಸ್ವಾಮಿತ್ವವಾದರೂ ರಾಜನಲ್ಲಷ್ಟೇ ಇರುತ್ತದೆ ಹೊರತು, ಭೃತ್ಯನಲ್ಲಿರುವುದಿಲ್ಲ. ಆದರೆ 'ದುಃಖೀ' ಇತ್ಯಾದಿ ಪ್ರಯೋಗಗಳಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವಾಗಿರುತ್ತದೆ. ಯಾವರೀತಿಯಾಗಿ 'ರೂಪೀ', 'ದಂಡೀ' ಇತ್ಯಾದಿ ಪ್ರಯೋಗಗಳಲ್ಲಿ ನೀವು ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆನ್ನುತ್ತೀರೋ, ಅದರಂತೆ ನಾವೂ ಸಹ 'ದುಃಖೀ' ಇತ್ಯಾದಿ ಶಬ್ದಪ್ರಯೋಗಗಳಲ್ಲಿ ತದ್ಗತತ್ವವೇ ಪ್ರವೃತ್ತಿನಿಮಿತ್ತವಾಗಿರುತ್ತದೆ ಹೊರತು, ಆಶ್ರಯತ್ವವಲ್ಲ.

**तच्च राजगतमेव । दुःखीत्यादौ तु रूपीत्यादाविव लोक आश्रयत्वमेव निमित्तम् । ब्रह्मणि तु स्वातन्त्र्यमित्यस्तु ''स बद्धः स दुःखी स बन्धयति स दुःखयति'' इत्यादिश्रुतेः ।**

ಪ್ರಶ್ನೆ - ಲೋಕದಲ್ಲಿ ದೋಷವಾಚಕಶಬ್ದಗಳನ್ನು ಸಮನ್ವಯ ಮಾಡುವಾಗ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ಗುಣವಾಚಕ ಶಬ್ದಗಳನ್ನು ಸಮನ್ವಯ ಮಾಡುವಾಗ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳುತ್ತಿದ್ದೀರಿ. ಆದರೆ ಬ್ರಹ್ಮನಲ್ಲಿ ದೋಷವಾಚಕವಾದ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳನ್ನು ಸಮನ್ವಯ ಮಾಡುವಾಗ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ವಿವಕ್ಷಿಸದೇ ಸ್ವಾತಂತ್ರ್ಯವನ್ನೇ ಪ್ರವೃತ್ತಿನಿಮಿತ್ತವೆಂದು ವಿವಕ್ಷಿಸುತ್ತಿದ್ದೀರಿ. ಈ ವೈಷಮ್ಯವು ತಪ್ಪಲ್ಲವೇ?

ಉತ್ತರ - ಲೋಕದಲ್ಲಿ ಹಾಗೇ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳುವುದು ಅನಿವಾರ್ಯ. ಆದರೆ ಬ್ರಹ್ಮನಲ್ಲಿ ದೋಷವಾಚಕಶಬ್ದಗಳ ಸಮನ್ವಯ ಮಾಡುವಾಗ ಸ್ವಾತಂತ್ರ್ಯವನ್ನೇ ಪ್ರವೃತ್ತಿನಿಮಿತ್ತವೆಂದು ಹೇಳಲು ಶ್ರುತಿಪ್ರಮಾಣವಿದೆ. 'ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' ಇತ್ಯಾದಿ ಶ್ರುತಿಯು ಮತ್ತೊಬ್ಬರನ್ನು ಬಂಧನ ಮಾಡುತ್ತನಾದ್ದರಿಂದ ಪರಮಾತ್ಮನನ್ನು ಬದ್ಧನೆಂದು, ಮತ್ತೊಬ್ಬರಿಗೆ ದುಃಖವನ್ನು ನೀಡುತ್ತನಾದ್ದರಿಂದ 'ದುಃಖೀ' ಎಂದು ಶ್ರುತಿಯಲ್ಲಿ ಪ್ರಯೋಗಿಸಲಾಗಿದೆ. ಆದ್ದರಿಂದ ಲೋಕದ ನಿಯಮವೇ ಬೇರೆ, ಬ್ರಹ್ಮನಲ್ಲಿ ವಿವಕ್ಷಿಸಬೇಕಾದ ನಿಯಮವೇ ಬೇರೆಯಾಗಿರುತ್ತದೆ.

**न चैकस्यैकत्रैकं निमित्तं चेदन्यत्रापि तथेति नियमः । एकस्यैव धनवच्छब्दस्य 'धनवद्गृहम्' इत्यादावाश्रयत्वनिमित्तकत्वेऽपि 'धनवान्पुरुषः' इत्यादौ स्वामित्वनिमित्तकत्वात् ।**

ಪ್ರಶ್ನೆ - ಲೋಕದಲ್ಲಿ ಶಬ್ದಪ್ರಯೋಗಗಳಿಗೆ ಯಾವುದನ್ನು ಪ್ರವೃತ್ತಿನಿಮಿತ್ತವೆನ್ನುತ್ತೀರೋ ಅದನ್ನೇ ಬ್ರಹ್ಮನ ವಿಷಯದಲ್ಲಿಯೂ ಕೂಡ ಹೇಳಬೇಕಲ್ಲವೇ? ಒಂದೊಂದು ಕಡೆ ಒಂದೊಂದು ಪ್ರವೃತ್ತಿನಿಮಿತ್ತವನ್ನು ಒಂದೇ ಶಬ್ದಕ್ಕೆ ಹೇಳುವುದು ತಪ್ಪಾಗುತ್ತದಲ್ಲವೇ?

ಉತ್ತರ - ಹಾಗೇನು ನಿಯಮವಿಲ್ಲ. ಒಂದೇ ಶಬ್ದಕ್ಕೆ ಪ್ರವೃತ್ತಿನಿಮಿತ್ತಗಳೂ ಕೂಡ ಬೇರೆ ಬೇರೆಯಾಗಿಯೇ ಇರಬಹುದು. ಉದಾಹರಣೆ - 'ಧನವದ್ಗೃಹಂ' ಎಂಬ ಪ್ರಯೋಗದಲ್ಲಿ 'ಧನವತ್' ಶಬ್ದಕ್ಕೆ ಆಶ್ರಯತ್ವವು ಪ್ರವೃತ್ತಿನಿಮಿತ್ತವಾಗಿದೆ. ಆದರೂ ಸಹ 'ಧನವಾನ್ ಪುರುಷಃ' ಎಂಬಲ್ಲಿ ಸ್ವಾಮಿತ್ವವೇ ಪ್ರವೃತ್ತಿನಿಮಿತ್ತವಾಗಿದೆ. ಹೀಗೆ ಒಂದೇ 'ಧನವತ್' ಶಬ್ದಕ್ಕೆ ಬೇರೆ ಬೇರೆ ಸ್ಥಳಗಳಲ್ಲಿ ಪ್ರವೃತ್ತಿನಿಮಿತ್ತಗಳೂ ಕೂಡ ಭಿನ್ನವಾಗಿರುವುದು ಕಂಡಿದೆ. ಅದರಂತೆ 'ದುಃಖೀ-ಬದ್ಧಃ' ಇತ್ಯಾದಿ ದೋಷವಾಚಕ ಶಬ್ದಗಳಿಗೆ ಲೋಕದಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವೆಂದು, ಬ್ರಹ್ಮನಲ್ಲಿ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದರೆ ಯಾವ ದೋಷವೂ ಬರುವುದಿಲ್ಲ.

**प्रकाशः –**

**केवलस्वातन्त्र्यस्य निमित्तत्वेऽपि न राज्ञि बद्धादिशब्दप्रयोगः । लोके तच्छब्दप्रयोगे स्वातन्त्र्यस्यानिमित्तत्वादित्याह – अथवेति ।।**

ವಿವರಣೆ - 'ನಿಯಾಮಕತ್ವೇ ಸತಿ ತದಾಶ್ರಯಾತ್ವಪ್ರಯುಕ್ತ ನೀಚತ್ವಾಯೋಗ್ಯತ್ವಂ' ಎಂಬುದು ಶಬ್ದದ ಪ್ರವೃತ್ತಿನಿಮಿತ್ತವನ್ನು ಮೊದಲು ಸಮರ್ಥನೆ ಮಾಡಿದರು. ಅನಂತರ 'ಸ್ವಗತತ್ವಯೋಗ್ಯತ್ವೇ ಸತಿ ಯದ್ದೋಷತ್ವಂ ತದ್ರಹಿತಂ ಪ್ರತಿ ಸ್ವಾತಂತ್ರ್ಯಮ್' ಎಂಬುದಾಗಿ ಪರಿಷ್ಕಾರ ಮಾಡಿದರು. ಪ್ರಕೃತ ಕೇವಲ ಸ್ವಾಮಿತ್ವರೂಪವಾದ ಸ್ವಾತಂತ್ರ್ಯವೇ ಶಬ್ದಪ್ರಯೋಗದ ಪ್ರವೃತ್ತಿನಿಮಿತ್ತವೆಂದು ಸಮರ್ಥನೆ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

ಕೇವಲ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗಲೂ ರಾಜನಲ್ಲಿ ಬದ್ಧಾದಿಶಬ್ದ ಪ್ರಯೋಗಗಳು ಬರುವುದಿಲ್ಲ. ಏಕೆಂದರೆ ಪರಮಾತ್ಮನ ವಿಷಯದಲ್ಲಿ ಮಾತ್ರ ಸ್ವಾತಂತ್ರ್ಯವು ಸಾಧಾರಣವಾದ ಪ್ರವೃತ್ತಿನಿಮಿತ್ತವಾಗುತ್ತದೆ. ಆದರೆ ಲೋಕದಲ್ಲಿ ಬದ್ಧಾದಿಶಬ್ದಗಳ ಪ್ರಯೋಗ ಮಾಡಬೇಕೆಂದರೆ ಸ್ವಾತಂತ್ರ್ಯವು ನಿಮಿತ್ತವಾಗುವುದಿಲ್ಲ , ತದಾಶ್ರಯತ್ವವೇ ನಿಮಿತ್ತವಾಗುತ್ತದೆ. ಹೀಗೆ 'ಅಥವಾ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡಲು ಹೊರಟಿದ್ದಾರೆ.

**प्रकाशः** – नन्वव्यभिचरितप्रयोगाद्धि निमित्तताज्ञानम् । प्रयोगश्च स्वातन्त्र्यं व्यभिचरतीत्यतो मास्तु प्रयोगात् तत् ज्ञानं किं त्वन्यत इति भावेनाव्यक्तादित्यादिविभक्तिवृत्तौ स्वातन्त्र्यं निमित्तमित्यत्र विष्णुतत्वनिर्णयोक्तश्रुति माह – **सर्वेति** ।।

ಪ್ರಶ್ನೆ - ಅವ್ಯಭಿಚರಿತವಾದ ಪ್ರಯೋಗದಿಂದಷ್ಟೇ ಪ್ರವೃತ್ತಿನಿಮಿತ್ತವನ್ನು ತಿಳಿಯಬೇಕು. ಪ್ರಕೃತ ಲೌಕಿಕಪ್ರಯೋಗವು ಸ್ವಾತಂತ್ರ್ಯವೆಂಬ ನಿಮಿತ್ತವನ್ನು ಅಪೇಕ್ಷಿಸಿ ಹೊರಟಿರುವುದಿಲ್ಲ. ಆದ್ದರಿಂದ ಪ್ರಯೋಗವೇ ಸ್ವಾತಂತ್ರ್ಯವನ್ನು ವ್ಯಭಿಚರಿಸುತ್ತಿದೆಯಲ್ಲವೇ?

ಉತ್ತರ - ಲೌಕಿಕಪ್ರಯೋಗದಿಂದ ಪ್ರವೃತ್ತಿನಿಮಿತ್ತವನ್ನು ತಿಳಿಯುವುದಾದಲ್ಲಿ ಹೀಗೆ ವ್ಯಭಿಚಾರವನ್ನು ಹೇಳಬಹುದು. ಆದರೆ ಶ್ರುತಿ-ಸ್ಮೃತಿಗಳಿಂದಲೇ ಪ್ರವೃತ್ತಿನಿಮಿತ್ತವು ನೇರವಾಗಿ ತಿಳಿಯುತ್ತಿದೆ. ಒಂದುವೇಳೆ ಲೌಕಿಕಪ್ರಯೋಗದಿಂದ ನಿಮಿತ್ತವನ್ನು ತಿಳಿಯುವುದಾದಲ್ಲಿ, ಅನುಮಾನದ ಅಪೇಕ್ಷೆಯಿರುತ್ತದೆ. ಆದರೆ ಶ್ರುತಿ-ಸ್ಮೃತಿಗಳಿಂದ ನಿಮಿತ್ತವನ್ನು ತಿಳಿಯುವಾಗ ಅನುಮಾನದ ಅಪೇಕ್ಷೆಯಿರುವುದಿಲ್ಲ. ಮತ್ತು 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಸ್ಥಳದಲ್ಲಿ 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯು ಪರಮಾತ್ಮನಲ್ಲಿದೆ ಎಂಬ ವಿಷಯದಲ್ಲಿ ಸ್ವಾತಂತ್ರ್ಯವೇ ನಿಮಿತ್ತವಾಗಿರುತ್ತದೆ. ಇದನ್ನು ಸಮರ್ಥಿಸಲೂ ಕೂಡ ವಿಷ್ಣುತತ್ತ್ವವಿನಿರ್ಣಯದಲ್ಲಿ ಉದಾಹರಿಸಿದ ಶ್ರುತಿಯನ್ನೇ ಆಧಾರವನ್ನಾಗಿ ನೀಡುತ್ತಿದ್ದಾರೆ 'ಸರ್ವಶಬ್ದಗತಾಶ್ಚೈವ' ಇತ್ಯಾದಿಯಾಗಿ.

**प्रकाशः** – "स्वतन्त्रत्वात् प्रवर्तन्ते" इत्येव वाच्ये शेषोक्तिः कर्त्रादिप्रदर्शनाय। श्रुतौ विभक्तिवृत्तावेव स्वातन्त्र्यस्य निमित्ततोक्तेः शब्दवृत्तौ निमित्तताज्ञापनायैतत्पा दान्तिमभाष्योक्तस्मृतिमाह – **सर्वस्येति** ।।

ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ತಿಳಿಸಲು 'ಸ್ವತಂತ್ರತ್ವಾತ್ ಪ್ರವರ್ತಂತೇ' ಎಂದಷ್ಟೇ ಶ್ರುತಿಯನ್ನು ಉಲ್ಲೇಖಿಸಿದ್ದರೆ ಸಾಕಾಗುತ್ತಿತ್ತು. ಆದರೂ ಕರ್ತೃಕಾರಕ ಹಾಗೂ ಅಧಿಕರಣಕಾರಕ ಇವುಗಳನ್ನು ತೋರಿಸುವುದಕ್ಕಾಗಿ 'ಸರ್ವಶಬ್ದಗತಾಶ್ಚೈವ ವಚನಾನ್ಯಖಿಲಾನ್ಯಪಿ' ಎಂಬ ಹಿಂದಿನ ವಾಕ್ಯವನ್ನು ಉದಾಹರಿಸಿದ್ದು ಸಾರ್ಥಕವಾಗಿದೆ.

ಆನುಮಾನಿಕಾಧಿಕರಣ (೧-೪-೧)

ಶ್ರುತಿಯಲ್ಲಿ ಸಕಲವಿಭಕ್ತಿಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳಲು ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತ-ವಾಗಿವೆಯೆಂದು ಹೇಳಲಾಯಿತು. ಆದರೆ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆನ್ನಲು ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಶ್ರುತಿಯಲ್ಲಿ ಹೇಳಿರುವುದಿಲ್ಲ. ಅದಕ್ಕೋಸ್ಕರ ಈ ಪಾದದ ಕೊನೆಯಲ್ಲಿ ಭಾಷ್ಯಕಾರರೇ ಉದಾಹರಿಸಿದ ಸ್ಮೃತಿಯನ್ನು ಉಲ್ಲೇಖಿಸುತ್ತಿದ್ದಾರೆ 'ಸರ್ವಸ್ಯ ತದಧೀನತ್ವಾತ್ ಸರ್ವಶಬ್ದಾಭಿಧೇಯತಾ' ಎಂಬುದಾಗಿ.

**प्रकाशः – इत्यादाविति ।। शब्दप्रयोग इति शेषः ।। तद्गतत्वमेवेति ।।** तथाच न राज्ञिबद्धादिप्रयोग इति भावः । लोक इत्युक्त्या न विष्णाविति प्राप्तम् । तदाह **– ब्रह्मणीति ।।**

'ಇತ್ಯಾದೌ' ಎಂಬಲ್ಲಿ ಶಬ್ದಪ್ರಯೋಗೇ ಎಂಬುದಾಗಿ ಶೇಷಪೂರಣ ಮಾಡಿಕೊಳ್ಳಬೇಕು. ಇವೇ ಮೊದಲಾದ ಶಬ್ದಪ್ರಯೋಗಗಳಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವಾಗಿದೆ ಎಂದು ಅಭಿಪ್ರಾಯ. 'ತದ್ಗತತ್ವಮೇವ' ಎಂದು ಹೇಳಿದ್ದರಿಂದ ರಾಜನಲ್ಲಿ ಬದ್ಧಾದಿಪ್ರಯೋಗಗಳು ಬರಬೇಕಾದೀತು ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಏಕೆಂದರೆ ಲೋಕದಲ್ಲಿ ತದ್ಗತತ್ವವೇ ಪ್ರವೃತ್ತಿನಿಮಿತ್ತವಾಗಿರುತ್ತದೆ. ಲೋಕದಲ್ಲಿ ಎಂದು ಹೇಳಿದ್ದರಿಂದ ವಿಷ್ಣುವಿನಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವಲ್ಲ ಹೊರತು, ಸ್ವಾತಂತ್ರ್ಯವೆಂದು ತಿಳಿಸಿದಂತಾಯಿತು. ಅದನ್ನೇ 'ಬ್ರಹ್ಮಣಿ' ಇತ್ಯಾದಿ ವಾಕ್ಯದಿಂದ ನಿರೂಪಿಸಿದ್ದಾರೆ.

**प्रकाशः –** किमत्र कल्पकमित्यत आह – **सबद्ध इति ।।** प्राक् श्रुतिस्मृत्युक्तावपि विशिष्यनियामकापेक्षायां ''स बद्धः'' इति श्रुत्युक्तिः । एतेन टीकायामेतच्छ्रुत्युक्ते-रुपयोग उक्तो भवति । ''निरनिष्टो निरवद्य'' इत्यादिश्रुतेश्चेत्यपि ध्येयम् ।

ಬ್ರಹ್ಮನಲ್ಲಿ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತ, ಲೋಕದಲ್ಲಿ ತದ್ಗತತ್ವವು ಪ್ರವೃತ್ತಿನಿಮಿತ್ತವೆಂಬ ವೈಷಮ್ಯಕ್ಕೆ ಏನು ಕಾರಣ? ಎಂಬ ಪ್ರಶ್ನೆಗೆ 'ಸ ಬದ್ಧಃ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ವಾಸ್ತವಿಕವಾಗಿ ಹಿಂದೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವೆನ್ನಲು ಶ್ರುತಿ ಹಾಗೂ ಸ್ಮೃತಿಗಳನ್ನು ಪ್ರಮಾಣವನ್ನಾಗಿ ನೀಡಿದ್ದಾಗಿದೆ. ಆದರೂ ಕೂಡ ವಿಶೇಷವಾಗಿ ನಿಯಾಮಕನ ಅಪೇಕ್ಷೆಯು ಉಂಟಾದಾಗ 'ಸ ಬದ್ಧಃ' ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ. ಹೀಗೆ ಹೇಳಿದ್ದರಿಂದ ಟೀಕೆಯಲ್ಲಿಯೂ ಈ ಶ್ರುತಿಯನ್ನು ಉದಾಹರಿಸಲು ಉಪಯೋಗವೇನೆಂಬುದನ್ನು ತೋರಿಸಿದಂತಾಯಿತು. 'ನಿರನಿಷ್ಟಃ ನಿರವದ್ಯಃ' ಇತ್ಯಾದಿ ಶ್ರುತಿಯನ್ನೂ ಕೂಡ ಇಲ್ಲಿ ಅನುಸಂಧಾನ ಮಾಡಿಕೊಳ್ಳಬೇಕು.

**प्रकाशः –** यदत्र कश्चिदाह विविधकृष्णादिप्रतिमानिर्मातरि शिल्पिनि तत्तत्प्रतिमासु कृष्णादिशब्दप्रवृत्तिनिमित्तं कृष्णाद्याकारं प्रति स्वातन्त्र्ये सत्यपि तस्मिन् कृष्णादिशब्दाप्रयोगान्नेदं निमित्तमिति

ಕೆಲವರ ಆಕ್ಷೇಪ - ಸ್ವಾತಂತ್ರ್ಯವು ಸಕಲಶಬ್ದಗಳ ಪ್ರವೃತ್ತಿನಿಮಿತ್ತವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ವ್ಯಭಿಚಾರ ಬರುತ್ತದೆ - ಒಬ್ಬ ಶಿಲ್ಪಿಯು ಕೃಷ್ಣ, ರಾಮ ಮೊದಲಾದ ಅನೇಕ ಪ್ರತಿಮೆಗಳನ್ನು ನಿರ್ಮಾಣ ಮಾಡುತ್ತಾನೆ. ಆಯಾ ಪ್ರತಿಮೆಗಳನ್ನು 'ಕೃಷ್ಣ' 'ರಾಮ' ಎಂದೇ ಎಲ್ಲರೂ ವ್ಯವಹರಿಸುತ್ತಾರೆ. 'ಕೃಷ್ಣ' 'ರಾಮ' ಮೊದಲಾದ ಪರಮಾತ್ಮನ ಆಕಾರವನ್ನು ಹೊಂದಿರುವ ಪ್ರತಿಮೆಯಲ್ಲಿ ಮಾಡುವ ವ್ಯವಹಾರಕ್ಕೆ ಸ್ವಾತಂತ್ರ್ಯವೇ ಕಾರಣವಾಗಿದೆ. ಇದೇ ಸ್ವಾತಂತ್ರ್ಯವು ಶಿಲ್ಪಿಯಲ್ಲಿಯೂ ಕೂಡ ಇರುತ್ತದೆ. ಏಕೆಂದರೆ 'ಕೃಷ್ಣ' 'ರಾಮ' ಮೊದಲಾದ ಪ್ರತಿಮೆಗಳು ಶಿಲ್ಪಿಯ ಅಧೀನವಾದ್ದರಿಂದ ಈ ಪ್ರತಿಮೆಗಳಲ್ಲಿ ಮಾಡುವ ವ್ಯವಹಾರಕ್ಕೆ ಯಾವ ಪ್ರವೃತ್ತಿನಿಮಿತ್ತವಿದೆಯೋ, ಅಂತಹ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ಶಿಲ್ಪಿಯಲ್ಲಿ ಇರುತ್ತದೆಂಬುದು ಸರ್ವಸಮ್ಮತವಾಗಿದೆ. ಆದರೂ ಸಹ ಶಿಲ್ಪಿಯನ್ನು ಯಾರೂ ಸಹ 'ಕೃಷ್ಣ' 'ರಾಮ' ಎಂದು ವ್ಯವಹರಿಸುವುದಿಲ್ಲ. ಪ್ರತಿಮೆಯನ್ನಷ್ಟೇ 'ಕೃಷ್ಣ' 'ರಾಮ' ಎಂದು ವ್ಯವಹರಿಸುತ್ತಾರೆ. ಆದ್ದರಿಂದ ಶಿಲ್ಪಿಯಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿದ್ದರೂ ಕೃಷ್ಣಾದಿ ಶಬ್ದಗಳ ಪ್ರಯೋಗವಿರುವುದಿಲ್ಲ. ಹೀಗೆ ವ್ಯಭಿಚಾರ ಬರುವ ಕಾರಣ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಗೆ ಹೇಳುತ್ತೀರಿ?

**प्रकाशः – तन्न । कृष्णादिशब्दानां प्रतिमादावमुख्यत्वात् ।**

ಸಮಾಧಾನ - ಪ್ರತಿಮೆಗಳಲ್ಲಿ ಮಾಡುವ ಕೃಷ್ಣ, ರಾಮ ಮೊದಲಾದ ವ್ಯವಹಾರಗಳಿಗೆ ಕೃಷ್ಣಾದ್ಯಾಕಾರವು ಪ್ರವೃತ್ತಿನಿಮಿತ್ತವಾಗಿದೆ. ಅಂತಹ ಆಕಾರವು ಶಿಲ್ಪಿಯ ಅಧೀನವೆಂದು ಹೇಳಿದಿರಿ. ಆದರೆ ಆಕಾರವು ಕೃಷ್ಣಾದಿ ಪದಗಳ ಪ್ರವೃತ್ತಿನಿಮಿತ್ತವೇ ಅಲ್ಲ. ಕೃಷ್ಣ ಎಂಬ ಶಬ್ದಕ್ಕೆ ಭೂಮಿಗೆ ಸುಖವನ್ನು ಕೊಡುವವನು. ಅಥವಾ ಎಲ್ಲರನ್ನು ಆಕರ್ಷಿಸುವವನು ಎಂಬುದು ಪ್ರವೃತ್ತಿನಿಮಿತ್ತವಾಗುತ್ತದೆ. ಇಂತಹ ಪ್ರವೃತ್ತಿನಿಮಿತ್ತವು ಪ್ರತಿಮೆಗಳಲ್ಲಿ ಸರ್ವಥಾ ಇರುವುದಿಲ್ಲ. ಆದ್ದರಿಂದ ಪ್ರತಿಮಾದಿಗಳಲ್ಲಿ ಮಾಡುವಂತಹ ವ್ಯವಹಾರವು ಅಮುಖ್ಯವಾದದ್ದು (ಗೌಣವ್ಯವಹಾರ) ಎಂದೇ ಒಪ್ಪಬೇಕು. ಒಂದುವೇಳೆ ಮುಖ್ಯವ್ಯವಹಾರವಾಗಿದ್ದಲ್ಲಿ, ನೀವು ಹೇಳಿದ ವ್ಯಭಿಚಾರ ದೋಷಕ್ಕೆ ಅವಕಾಶವಿರುತ್ತಿತ್ತು.

**प्रकाशः – नच ''इवे प्रतिकृतौ'' इत्यधिकारे विहितस्य कन्प्रत्ययस्य ''जीविकार्थे चापण्ये'' इति लुपि सति कृष्णादिशब्दानां कृष्णादिसदृशाकारप्रतिमा-वाचकत्वमिति वाच्यम् ।**

ಪ್ರಶ್ನೆ - ಪ್ರತಿಮೆಗಳಲ್ಲಿ ಮಾಡುವಂತಹ 'ಕೃಷ್ಣಃ' ಇತ್ಯಾದಿ ಪ್ರಯೋಗಗಳು ಗೌಣವಲ್ಲ. ಏಕೆಂದರೆ ಪಾಣಿನಿಯ ಸೂತ್ರದಂತೆ ಕೃಷ್ಣಾದಿ ಶಬ್ದಗಳು ಪ್ರತಿಮೆಗಳಲ್ಲಿ ವಾಚಕಗಳೇ ಆಗಿರುತ್ತವೆಂದು ತಿಳಿಯುತ್ತದೆ. ಅದು ಹೀಗೆ -

'ಇವೇ ಪ್ರತಿಕೃತೌ (೫-೩-೯೬)'[೧]

(೧) 'ಕನ್' ಇತ್ಯನುವರ್ತತೇ, ಇವಾರ್ಥೇ ಯತ್ ಪ್ರಾತಿಪದಿಕಂ ವರ್ತತೇ ತಸ್ಮಾತ್ ಕನ್ ಪ್ರತ್ಯಯೋ ಭವತಿ. ಇವಾರ್ಥಃ ಸಾದೃಶ್ಯಂ ತಸ್ಯ ವಿಶೇಷಣಂ ಪ್ರತಿಕೃತಿಗ್ರಹಣಮ್. ಪ್ರತಿಕೃತಿಃ ಪ್ರತಿರೂಪಕಂ ಪ್ರತಿಚ್ಛಂದಕಮ್. ಅಶ್ವ ಇವಾಯಮಶ್ವಪ್ರತಿಕೃತಿಃ ಅಶ್ವಕಃ; ಉಷ್ಟ್ರಕಃ. - ಹಿಂದಿನ ಸೂತ್ರದಿಂದ 'ಕನ್' ಎಂಬುದು ಈ ಸೂತ್ರದಲ್ಲಿ ಅನುವೃತ್ತಿ ಮಾಡಿಕೊಳ್ಳಬೇಕು. ಸಾದೃಶ್ಯಾರ್ಥದಲ್ಲಿ

'ಇವೇ ಪ್ರತಿಕೃತೌ' ಎಂಬ ಅಧಿಕಾರ ಸೂತ್ರದಲ್ಲಿ ಪ್ರತಿಮೆಗಳಲ್ಲಿ ಮಾಡಲ್ಪಟ್ಟ ಕೃಷ್ಣಾದಿ ಶಬ್ದಗಳ ಮೇಲೆ 'ಕನ್' ಪ್ರತ್ಯಯವನ್ನು ವಿಧಿಸಲಾಗಿದೆ. ಅನಂತರ ಮುಂದಿನ ಸೂತ್ರದಲ್ಲಿ

'ಜೀವಿಕಾರ್ಥೇ ಚಾಪಣ್ಯೇ' (೫-೩-೯೯)'[೧]

'ಜೀವಿಕಾರ್ಥೇ ಚಾಪಣ್ಯೇ' ಎಂಬಲ್ಲಿ ಆ 'ಕನ್' ಪ್ರತ್ಯಯಕ್ಕೆ ಲೋಪವನ್ನು ಹೇಳಿರುತ್ತಾನೆ. ಕೃಷ್ಣಶಬ್ದಕ್ಕೆ 'ಕನ್' ಪ್ರತ್ಯಯವನ್ನು ಹೇಳಿದಾಗ 'ಕೃಷ್ಣಕಃ' ಎಂದಾಗುತ್ತದೆ. ಪುನಃ ಲೋಪ ಮಾಡಿದ ಮೇಲೆ 'ಕೃಷ್ಣಃ' ಎಂದೇ ಉಳಿಯುತ್ತದೆ. ಇಂತಹ 'ಕೃಷ್ಣಃ' ಎಂಬ ಶಬ್ದವು ಕೃಷ್ಣನಂತೆ ಆಕಾರವನ್ನು ಹೊಂದಿರುವ ಪ್ರತಿಮೆಗೆ ವಾಚಕವೇ ಆಗಿರುತ್ತದೆ. ಹೀಗಿರುವಾಗ ಪ್ರತಿಮೆಗಳಲ್ಲಿ 'ಕೃಷ್ಣಃ' ಇತ್ಯಾದಿ ಪ್ರಯೋಗಗಳನ್ನು ಗೌಣವೆಂದು ಹೇಗೆ ಹೇಳುತ್ತೀರಿ?

**प्रकाशः** – वाचकत्वे तत्सूत्रस्याप्रमाणत्वात् । अन्यथा कृष्णादिशब्दस्य नानार्थत्वप्रसङ्गात् ।

ಉತ್ತರ - ಪ್ರತಿಮೆಗಳಲ್ಲಿ ಕೃಷ್ಣಾದಿ ಶಬ್ದಗಳಿಗೆ ವಾಚಕತ್ವವನ್ನು ಹೇಳಲು ನೀವು ಉಲ್ಲೇಖಿಸಿದ ಪಾಣಿನಿ ಸೂತ್ರಗಳು ಆಧಾರವಾಗುವುದಿಲ್ಲ. ಹಾಗೇನಾದರೂ 'ಕೃಷ್ಣಃ' ಇತ್ಯಾದಿ ಪದಗಳೇ ಪ್ರತಿಮೆಗಳನ್ನು ಪ್ರತಿಪಾದನೆ ಮಾಡುವುದಾದರೆ ಪ್ರಮಾಣವಿಲ್ಲದೇ ಕೃಷ್ಣಾದಿ ಶಬ್ದಗಳಿಗೆ ಅನೇಕಾರ್ಥವನ್ನು ಒಪ್ಪಬೇಕಾಗುತ್ತದೆ.

**प्रकाशः** – चित्रलिखितसिंहादौ सिंहादिशब्दप्रयोगो गौण इति सर्वसम्मतत्वाच्च । अनुशासनस्य साधुतामात्रप्रदर्शनपरत्वेनाप्युपपत्तेः । नहि वाचकत्वगर्भमेव साधुत्वम् । लक्षकपदमात्रासाधुत्वापत्तेः ।

ಚಿತ್ರದಲ್ಲಿರುವ ಸಿಂಹವನ್ನು ಎಲ್ಲರೂ 'ಸಿಂಹ' ಎಂದೇ ಕರೆಯುತ್ತಾರೆ. ಇಲ್ಲಿ ಮಾಡುವ 'ಸಿಂಹ' ಶಬ್ದ ಪ್ರಯೋಗವು ಗೌಣವೆಂಬುದು ಎಲ್ಲರಿಗೂ ತಿಳಿದ ವಿಚಾರ. ಅದರಂತೆ ಪ್ರತಿಮೆಗಳಲ್ಲಿ ಮಾಡಲ್ಪಡುವ 'ಕೃಷ್ಣಃ' ಇತ್ಯಾದಿ ಶಬ್ದಪ್ರಯೋಗಗಳೂ ಕೂಡ ಗೌಣವೆಂದೇ ಒಪ್ಪಬೇಕು ಹೊರತು, ವಾಚಕವೆಂದು ಒಪ್ಪಬಾರದು.

ಹಾಗಾದರೆ ಪಾಣಿನಿಯ ಅನುಶಾಸನವಿದೆಯಲ್ಲವೇ? ಎಂಬ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ

ಯಾವ ಪ್ರಾತಿಪದಿಕವಿರುತ್ತದೋ, ಅದರ ಮುಂದೆ 'ಕನ್' ಪ್ರತ್ಯಯವು ಬರುತ್ತದೆ. ಅಶ್ವದಂತೆ ಇರುವಂತಹ ಅಶ್ವ ಪ್ರತಿಕೃತಿಯಲ್ಲಿ 'ಅಶ್ವಕಃ' ಎಂಬ ಶಬ್ದವನ್ನು ಪ್ರಯೋಗಿಸಬೇಕು. ಉಷ್ಟ್ರದಂತೆ ಇರುವ ಪ್ರತಿಕೃತಿಯಲ್ಲಿ 'ಉಷ್ಟ್ರಕಃ' ಎಂಬ ಶಬ್ದವನ್ನು ಪ್ರಯೋಗಿಸಬೇಕು.

(೧) ಜೀವಿಕಾರ್ಥೇ ಯದಪಣ್ಯಂ ತಸ್ಮಿನ್ನಭಿಧೇಯೇ ಕನೋ ಲುಪ್ ಭವತಿ, ವಿಕ್ರೀಯತೇ ಯತ್ತತ್ಪಣ್ಯಮ್ । ವಾಸುದೇವಃ, ಶಿವಃ ವಿಷ್ಣುಃ - ಜೀವನಕ್ಕೋಸ್ಕರ ಯಾವ ವಿಕ್ರಯಣ ಮಾಡಲ್ಪಡದ ಪದಾರ್ಥವಿರುತ್ತದೋ, ಅಂತಹ ಪದಾರ್ಥವು ವಾಚ್ಯವಾಗುತ್ತಿರುವಾಗ ತತ್ ಪ್ರತಿಪಾದಕವಾದ ಶಬ್ದದ ಮುಂದೆ ಹೇಳಲ್ಪಟ್ಟ 'ಕನ್' ಪ್ರತ್ಯಯಕ್ಕೆ ಲೋಪ ಬರುತ್ತದೆ. ವಾಸುದೇವ ಶಬ್ದದ ಮೇಲೆ 'ಕನ್' ಪ್ರತ್ಯಯವನ್ನು 'ಇವೇ ಪ್ರತಿಕೃತೌ' ಎಂಬ ಸೂತ್ರವು ನಿರ್ದೇಶಿಸಿದಾಗ ಅದಕ್ಕೆ ಈ ಸೂತ್ರವು ಲೋಪವನ್ನು ಹೇಳುತ್ತಿದೆ. ಆದ್ದರಿಂದ ವಾಸುದೇವನ ಪ್ರತಿಮೆಯಲ್ಲಿಯೂ 'ವಾಸುದೇವಃ' ಎಂಬ ಪ್ರಯೋಗವನ್ನೇ ತಿಳಿಯಬೇಕು.

ಕೇವಲ ಶಬ್ದಸಾಧುತ್ವಕ್ಕೋಸ್ಕರ ಪಾಣಿನಿಯು ಹಾಗೇ ಸೂತ್ರಗಳಲ್ಲಿ ಹೇಳಿರುತ್ತಾನೆ. ಯಾವುದೇ ಶಬ್ದಕ್ಕೆ ಸಾಧುತ್ವವನ್ನು ಪ್ರದರ್ಶಿಸಬೇಕೆಂದರೆ ಆ ಶಬ್ದಗಳಿಗೆ ಪದಾರ್ಥಗಳಲ್ಲಿ ವಾಚಕತ್ವವನ್ನೇ ಒಪ್ಪಬೇಕೆಂದೇನೂ ನಿಯಮವಿರುವುದಿಲ್ಲ. ಹಾಗೇನಾದರೂ ವಾಚಕತ್ವವಿದ್ದಲ್ಲಿ ಮಾತ್ರ ಶಬ್ದಸಾಧುತ್ವವು ಯುಕ್ತವಾಗುತ್ತದೆಂದು ಹೇಳಿದರೆ ಲಕ್ಷಕಪದಗಳು ಅಸಾಧುವೆಂದಾಗಬೇಕಾಗುತ್ತದೆ. ಹಾಗಾಗಿ ವ್ಯಾಕರಣಶಾಸ್ತ್ರದಲ್ಲಿ ಯಾವ ಯಾವ ಶಬ್ದಗಳಿಗೆ ಸಾಧುತ್ವವನ್ನು ಸಮರ್ಥಿಸಲಾಗಿದೆಯೋ, ಆ ಎಲ್ಲಾ ಶಬ್ದಗಳು ವಾಚಕವೇ ಆಗಿರಬೇಕಾಗಿಲ್ಲ. ಲಕ್ಷಕವೂ ಆಗಿರುತ್ತವೆ. ಅಥವಾ ಗೌಣೀವೃತ್ತಿಯನ್ನು ಕೂಡ ಒಳಗೊಂಡಿರುತ್ತವೆ. ಪ್ರಕೃತ ಪ್ರತಿಮೆಗಳಲ್ಲಿ ಯಾವ ಕೃಷ್ಣಾದಿ ಶಬ್ದಗಳ ಪ್ರಯೋಗವನ್ನು ತೋರಿಸಲಾಗಿದೆಯೋ, ಇಂತಹ ಶಬ್ದಗಳು ಗೌಣವಾಗಿವೆ ಹೊರತು, ವಾಚಕಗಳಾಗಿವೆಯೆನ್ನಲು ಸೂತ್ರವು ಆಧಾರವಾಗುವುದಿಲ್ಲ.

**प्रकाशः –** अत एव मञ्जर्यां पञ्चमस्य तृतीयपादे ''इवे प्रतिकृतौ'' इत्यत्र ''प्रतिकृतिरूपं यत्सदृशं तत्र कन्प्रत्ययः'' इत्यर्थमुक्त्वा ''अश्व इवायमश्वप्रतिकृतिरश्वकः'' इति वृत्तिगतोदाहरणे ''सादृश्यनिबन्धनाभेदोपचाराद्वौर्वाहिक इतिवदश्वशब्द एव प्रतिकृतौ वर्तते । 'कन्' प्रत्ययस्तु तस्यैवौपचारिकत्वस्य द्योतकः'' इति ग्रन्थेनाश्वप्रतिकृतावश्वकशब्दस्यौपचारिकत्वमुक्तम् ।

ಮೇಲೆ ಹೇಳಿದ ವಿಷಯದಲ್ಲಿ ಪದಮಂಜರಿಕಾರನೂ ಕೂಡ ಸಮ್ಮತಿಸಿದ್ದಾನೆ. ಐದನೆಯ ಅಧ್ಯಾಯದ ಮೂರನೆಯ ಪಾದದಲ್ಲಿರುವ 'ಇವೇ ಪ್ರತಿಕೃತೌ' ಎಂಬ ಪಾಣಿನಿಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಪ್ರತಿಕೃತಿರೂಪಂ ಯತ್‌ಸದೃಶಂ ತತ್ರ ಕನ್ ಪ್ರತ್ಯಯಃ' ಪ್ರತಿಕೃತಿಯೆಂಬ ಯಾವ ಸದೃಶ ಪದಾರ್ಥವಿದೆಯೋ, ಅದನ್ನು ಹೇಳುವ ಶಬ್ದದ ಮುಂದೆ 'ಕನ್' ಪ್ರತ್ಯಯವು ಬರುತ್ತದೆ ಎಂಬರ್ಥವನ್ನು ಹೇಳಿ, ಅನಂತರ 'ಅಶ್ವ ಇವಾಯಮಶ್ವಪ್ರತಿಕೃತಿರಶ್ವಕಃ' ಅಶ್ವದಂತೆ ಇರುವಂತಹ ಪ್ರತಿಕೃತಿಯನ್ನು 'ಅಶ್ವಕಃ' ಎಂದು ಕರೆಯಬೇಕು ಎಂಬುದಾಗಿ ಕಾಶಿಕಾವೃತ್ತಿಯಲ್ಲಿ ಉದಾಹರಣೆಯನ್ನೂ ಕೂಡ ನೀಡಲಾಗಿದೆ. ಈ ಸಂದರ್ಭದಲ್ಲಿ ಮಂಜರಿಯ ವಾಕ್ಯಗಳು ಹೀಗಿವೆ - 'ಸಾದೃಶ್ಯನಿಬಂಧನಾಭೇದೋಪಚಾರಿಕಾದ್ವೌರ್ವಾಹಿಕ ಇತಿವತ್ ಅಶ್ವಶಬ್ದ ಏವ ಪ್ರತಿಕೃತೌ ವರ್ತತೇ 'ಕನ್' ಪ್ರತ್ಯಯಸ್ತು ತಸ್ಯೈವೌಪಚಾರಿಕತ್ವಸ್ಯ ದ್ಯೋತಕಃ' ಯಾವರೀತಿಯಾಗಿ ಸಾದೃಶ್ಯ ಪ್ರಯುಕ್ತವಾಗಿ ಅಭೇದವನ್ನು ಔಪಚಾರಿಕವಾಗಿ ವಿವಕ್ಷಿಸಿ, 'ದೌರ್ವಾಹಿಕಃ' ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೋ, ಅದರಂತೆ ಅಶ್ವದಂತೆ ಇರುವಂತಹ ಪ್ರತಿಕೃತಿಯಲ್ಲಿ 'ಕನ್' ಪ್ರತ್ಯಯವನ್ನು ವಿಧಿಸಲಾಗಿದೆ. ಈ 'ಕನ್' ಪ್ರತ್ಯಯವು ಔಪಚಾರಿಕ ಪ್ರಯೋಗಕ್ಕೆ ದ್ಯೋತಕವಾಗಿದೆ'' ಹೀಗೆ ಅಶ್ವಪ್ರತಿಕೃತಿಯಲ್ಲಿ 'ಅಶ್ವಕಃ' ಶಬ್ದಕ್ಕೆ ಔಪಚಾರಿಕತ್ವವನ್ನು ಸ್ಪಷ್ಟವಾಗಿ ಹೇಳಲಾಗಿದೆ.

**प्रकाशः –** ''जीविकार्थे चापण्ये'' इति सूत्रे च ''जीविकार्थं यदपण्यं तस्मिन्नभिधेये कनो लुप् भवति'' इति वृत्तावभिधेये इत्युक्तेरपि प्रतिपाद्यमाने इत्यर्थपरत्वोपपत्तेः । अन्यथा मञ्जर्यामौपचारिकत्वोक्तिविरोधात् ।

ಪ್ರಶ್ನೆ - 'ಜೀವಿಕಾರ್ಥೇ ಚಾಪಣ್ಯೇ' ಎಂಬ ಸೂತ್ರದ ವೃತ್ತಿಯಲ್ಲಿ 'ಜೀವಿಕಾರ್ಥಂ ಯದಪಣ್ಯಂ ತಸ್ಮಿನ್ನಭಿಧೇಯೇ ಕನೋ ಲುಪ್ ಭವತಿ' ಎಂಬುದಾಗಿ ಅಭಿಧೇಯ ಪದವನ್ನು ಪ್ರಯೋಗಿಸಿದ್ದಾರೆ. ಅಂದರೆ ಪ್ರತಿಕೃತಿಯು ಕೃಷ್ಣಾದಿ ಶಬ್ದಗಳಿಂದ ಅಭಿದಾವೃತ್ತಿಯಿಂದಲೇ ಪ್ರತಿಪಾದ್ಯವಾಗುತ್ತದೆಂದು ಹೇಳಿದ್ದಾರಲ್ಲವೇ?

ಉತ್ತರ - ವೃತ್ತಿಯಲ್ಲಿರುವ 'ಅಭಿಧೇಯೇ' ಎಂಬ ಪದಕ್ಕೆ 'ಪ್ರತಿಪಾದ್ಯಮಾನೇ' ಎಂಬರ್ಥವನ್ನು ಹೇಳಬಹುದು ಹೊರತು, ಲಕ್ಷಣಾವೃತ್ತಿಯಿಂದಲೂ ಸಹ ಪ್ರತಿಪಾದ್ಯವಾಗಲು ಸಾಧ್ಯವಿರುವುದರಿಂದ ಯಾವುದೇ ದೋಷವಿರುವುದಿಲ್ಲ. ಒಂದು ವೇಳೆ ವಾಚ್ಯಾರ್ಥವನ್ನೇ ಅಭಿಧೇಯ ಪದದಿಂದ ವಿವಕ್ಷಿಸುವುದಾದಲ್ಲಿ ಪದಮಂಜರಿಯಲ್ಲಿ ಹೇಳಲ್ಪಟ್ಟ ಔಪಚಾರಿಕತ್ವದ ಉಕ್ತಿಗೆ ವಿರೋಧವು ಬರಬೇಕಾದೀತು. ಮಂಜರಿಯಲ್ಲಿ ಸ್ಪಷ್ಟವಾಗಿ ಔಪಚಾರಿಕವೆಂದು ಹೇಳಿದ್ದರಿಂದ ಯಾವ ಗೊಂದಲಕ್ಕೂ ಅವಕಾಶವಿರುವುದಿಲ್ಲ. ಹಾಗಾಗಿ ಪ್ರತಿಮಾದಿಗಳಲ್ಲಿ ಮಾಡಲ್ಪಟ್ಟ ಕೃಷ್ಣಾದಿಶಬ್ದಗಳ ಪ್ರಯೋಗವು ಗೌಣವಾದದ್ದೇ ಹೊರತು, ಮುಖ್ಯವಾದುದ್ದಲ್ಲವೆಂಬ ವಿಚಾರವೇ ಸಾಧುವಾಗುತ್ತದೆ.

**प्रकाशः** – यत्तु ''तदस्यास्त्यस्मिन्'' इत्यर्थे विहिता मत्वर्थीयप्रत्ययाः स्वभावात् केभ्यश्चित् प्रातिपदिकेभ्योऽस्यास्तीति षष्ठयर्थ एव भवन्ति । केभ्यश्चिदस्मिन्नस्तीति सप्तम्यर्थे । षष्ठ्यर्था अपि ''षष्ठीस्थाने योगे'' इति सूत्रे महाभाष्योक्त्या एकशतं सम्बन्धास्सन्ति । तेभ्यस्तेभ्यः प्रातिपदिकेभ्यस्तत्तत्सम्बन्ध-विशेषा एव भवन्ति ।

ಬೇರೆ ಕೆಲವರ ಆಕ್ಷೇಪ - ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ 'ದುಃಖೀ' 'ಬದ್ಧಃ' ಇತ್ಯಾದಿ ದೋಷವಾಚಕ ಪದಗಳಿಂದೆಲ್ಲಾ ಈಶ್ವರನು ಪ್ರತಿಪಾದ್ಯನಾಗಿದ್ದಾನೆಂದು ಹೇಳಲಾಗದು. ಏಕೆಂದರೆ ವ್ಯಾಕರಣಶಾಸ್ತ್ರದಲ್ಲಿ ಲೋಕಪ್ರಯೋಗವನ್ನು ಅನುಸರಿಸಿಯೇ ಶಬ್ದಗಳನ್ನು ನಿಷ್ಪತ್ತಿ ಮಾಡಲಾಗಿದೆ. ಅದು ಹೀಗೆ - 'ತದಸ್ಯಾಸ್ತ್ಯಸ್ಮಿನ್' ಎಂಬರ್ಥದಲ್ಲಿ ಮತ್ವರ್ಥೀಯ ಪ್ರತ್ಯಯಗಳನ್ನು ವಿಧಿಸಲಾಗಿದೆ. ಆದ್ದರಿಂದ ಸ್ವಾಭಾವಿಕವಾಗಿ ಕೆಲವು ಪ್ರಾತಿಪದಿಕಗಳು 'ಅಸ್ಯ ಅಸ್ತಿ' ಎಂಬ ಷಷ್ಠ್ಯರ್ಥದಲ್ಲೇ ಬರುತ್ತವೆ. ಇನ್ನೂ ಕೆಲವು ಪ್ರಾತಿಪದಿಕಗಳು 'ಅಸ್ಮಿನ್ನಸ್ತಿ' ಎಂಬ ಸಪ್ತಮ್ಯರ್ಥದಲ್ಲಿ ಬರುತ್ತದೆ. ಷಷ್ಠ್ಯರ್ಥದಲ್ಲಿಯೂ ಕೂಡ ಬರುವಂತಹ ಪ್ರತ್ಯಯಗಳಿಗೆ 'ಷಷ್ಠೀಸ್ಥಾನೇ ಯೋಗೇ' ಎಂಬ ಸೂತ್ರವನ್ನು ವ್ಯಾಖ್ಯಾನಿಸುವಾಗ ಮಹಾಭಾಷ್ಯದಲ್ಲಿ ನೂರೊಂದು ಸಂಬಂಧಗಳನ್ನು ಹೇಳಲಾಗಿದೆ. ಆದ್ದರಿಂದ ಆಯಾ ಸಂದರ್ಭಕ್ಕನುಗುಣವಾಗಿ ಆಯಾ ಪ್ರಾತಿಪದಿಕಗಳಿಗೆ ಬೇರೆ ಬೇರೆ ಸಂಬಂಧಗಳ ವಿವಕ್ಷೆಯಿದ್ದಾಗ ಮತ್ವರ್ಥೀಯ ಪ್ರತ್ಯಯಗಳು ಬರುತ್ತವೆ.

**प्रकाशः** – केभ्यश्चित् षष्ठ्यर्थे सप्तम्यर्थे च भवन्ति । इयं च व्यवस्थाप्रयोगानुसारात् स्वयमेव लभ्यत इति लाघवार्थं ''तदस्यास्त्यस्मिन्'' इति सामान्येन विधानम् । यथा ''पाय्यसान्नाय्यनिकाय्यधाय्याः मानहविर्निवास-सामिधेनीः'' इत्यादि सूत्रेषु हविर्विशेषसामिधेनीविशेषादिवाचकानां सान्नाय्यादि-शब्दानां सामान्येन हविराद्यर्थेषु विधानम् ।

ಮತ್ವರ್ಥೀಯ ಪ್ರತ್ಯಯಗಳು ಕೆಲವೆಡೆ ಷಷ್ಠ್ಯರ್ಥದಲ್ಲಿ ಇನ್ನೂ ಕೆಲವೆಡೆ ಸಪ್ತಮ್ಯರ್ಥದಲ್ಲಿ ಬರುತ್ತವೆ. ಹಾಗಾದರೆ ಮತ್ವರ್ಥೀಯ ಪ್ರತ್ಯಯಗಳನ್ನು ಯಾವ ಸಂದರ್ಭದಲ್ಲಿ ಹೇಗೆ ತಿಳಿಯಬೇಕೆಂದು ಹೇಳುವುದು ಅತ್ಯಂತ ಕಠಿಣ. ಹಾಗಾಗಿ ಲೋಕಪ್ರಯೋಗವನ್ನು ಅನುಸರಿಸಿ ಆಯಾ ಪ್ರತ್ಯಯಗಳ ವ್ಯವಸ್ಥೆಯನ್ನು ತಿಳಿಯಬೇಕೆಂದು ವ್ಯಾಕರಣಶಾಸ್ತ್ರದಲ್ಲಿ ಹೇಳಿದ್ದಾರೆ. ಲೋಕಪ್ರಯೋಗಾನುಸಾರಿಯಾಗಿ ಸ್ವತಃ ಈ ವ್ಯವಸ್ಥೆಯನ್ನು ತಿಳಿಯುವುದು ಕಠಿಣವಾಗುವುದಿಲ್ಲ. ಆದರೆ ಸೂತ್ರದಲ್ಲಿ ಲಾಘವಕ್ಕೋಸ್ಕರ 'ತದಸ್ಯಾಸ್ತ್ಯಸ್ಮಿನ್' ಎಂದು ಸಾಮಾನ್ಯವಾಗಿ ಮತ್ವರ್ಥೀಯ ಪ್ರತ್ಯಯಗಳನ್ನು ಹೇಳಿದ್ದಾರೆ.

ಅರ್ಥವಿಶೇಷ ಪ್ರತಿಪಾದಕವಾದ ಶಬ್ದಗಳನ್ನು ಹೀಗೆ ಸಾಮಾನ್ಯವಾಗಿ ನಿರ್ದೇಶಿಸುವುದೂ ಕೂಡ ವ್ಯಾಕರಣದಲ್ಲಿಯೇ ಕಂಡಿದೆ. ಉದಾಹರಣೆ - 'ಪಾಯ್ಯಸಾನ್ನಾಯ್ಯನಿಕಾಯ್ಯಧಾಯ್ಯಾಃ ಮಾನಹವಿರ್ನಿವಾಸ-ಸಾಮಿಧೇನೀಃ' ಇತ್ಯಾದಿ ಸೂತ್ರದಲ್ಲಿ 'ಸಾಮಿಧೇನಿ' ಎಂಬ ಹವಿರ್ವಿಶೇಷವನ್ನು ಪ್ರತಿಪಾದನೆ ಮಾಡುವ ಸಾನ್ನಾಯ್ಯಾದಿ ಶಬ್ದಗಳಿಗೆ ಕೇವಲ ಹವಿಸ್ಸು ಎಂಬರ್ಥದಲ್ಲಿ ಕಾರ್ಯವನ್ನು ವಿಧಿಸಲಾಗಿದೆ. ಅಂದರೆ 'ಸಾನ್ನಾಯ್ಯ' ಎಂಬ ಪದವು ಕೇವಲ ಹವಿಸ್ಸನ್ನು ಹೇಳದೆ ವಿಶೇಷವಾದ 'ಸಾಮಿಧೇನೀ' ಎಂಬ ಹವಿಸ್ಸನ್ನು ಹೇಳುತ್ತದೆ. ಅದರಂತೆ 'ಧಾಯ್ಯ' ಎಂಬ ಪದವೂ ಕೂಡ ಹವಿರ್ವಿಶೇಷವನ್ನೇ ಹೇಳುತ್ತದೆ. ಆದರೆ ವ್ಯಾಕರಣದಲ್ಲಿ ಸಾಮಾನ್ಯವಾಗಿ ಹವಿಸ್ಸೆಂಬರ್ಥದಲ್ಲಿ ಪ್ರಯೋಗಿಸಿದ್ದಾರೆ.

**प्रकाशः** – एवञ्च धनप्रातिपदिकान्मत्वर्थीयप्रत्ययाष्षष्ठ्यर्थ एव । तत्रापि स्वस्वामिभाव एव भवन्तीति धनवोढर्यपि न धनीति प्रयोगप्रसङ्गः ।

ಆದ್ದರಿಂದ ಪ್ರಕೃತ 'ಧನ' ಎಂಬ ಪ್ರಾತಿಪದಿಕದ ಮೇಲೆ ಯಾವ ಮತ್ವರ್ಥೀಯ ಪ್ರತ್ಯಯವು ಬಂದಿರುತ್ತದೋ ಅದು ಷಷ್ಠ್ಯರ್ಥದಲ್ಲೇ ಬರುತ್ತದೆ. ಪ್ರಕೃತ ಸ್ವಸ್ವಾಮಿಭಾವ ಎಂಬ ಸಂಬಂಧವನ್ನೇ ಷಷ್ಠ್ಯರ್ಥವೆಂದು ತಿಳಿಯಬೇಕು. ಅಂದರೆ ಧನಸ್ವಾಮಿಯಾದವನಲ್ಲಿಯೇ 'ಧನೀ' ಎಂಬ ಪ್ರಯೋಗವನ್ನು ಮಾಡಬೇಕು. ಏಕೆಂದರೆ ಲೋಕದಲ್ಲಿ ಎಲ್ಲರೂ ಕೂಡ ಹಾಗೆಯೇ ವ್ಯವಹರಿಸುತ್ತಾರೆ. ಧನವನ್ನು ಹೊತ್ತುಕೊಂಡಿರುವ ವ್ಯಕ್ತಿಯಲ್ಲಾಗಲೀ, ಪ್ರಾಣಿಗಳಲ್ಲಾಗಲೀ ಯಾರೂ ಸಹ 'ಧನೀ' ಎಂಬ ಪ್ರಯೋಗವನ್ನು ಮಾಡದ ಕಾರಣ ಮತ್ವರ್ಥೀಯ ಪ್ರತ್ಯಯವು ಯಾವ ಷಷ್ಠ್ಯರ್ಥದಲ್ಲಿ ಬಂದಿದೆಯೋ, ಆ ಷಷ್ಠ್ಯರ್ಥವನ್ನು ಆಶ್ರಯತ್ವವೆಂದು ತಿಳಿಯಬಾರದು. ಆದ್ದರಿಂದ ಧನವಾಹಕರಲ್ಲಿ 'ಧನೀ' ಎಂಬ ಪ್ರಯೋಗವು ಬರಬೇಕಾದೀತು ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

**प्रकाशः** – जयप्रातिपदिकात्तु स्वस्वामिभावरूपे षष्ठ्यर्थ आश्रयत्वरूपसप्तम्यर्थे च भवन्तीति न राज्ञि भृत्ये च जयिशब्दप्रयोगानुपपत्तिः ।

ಇದರಂತೆ 'ಜಯ' ಎಂಬ ಪ್ರಾತಿಪದಿಕದ ಮೇಲೆ ಯಾವ ಮತ್ವರ್ಥೀಯ ಪ್ರತ್ಯಯವು ಷಷ್ಠ್ಯರ್ಥದಲ್ಲಿ ಬಂದಿದೆಯೋ, ಅದೂ ಕೂಡ ಸ್ವಸ್ವಾಮಿಭಾವರೂಪವಾದದ್ದೆಂದು ತಿಳಿಯಬೇಕು. ಅಷ್ಟೇ ಅಲ್ಲದೆ, ಆಶ್ರಯತ್ವವೆಂಬ ಸಪ್ತಮ್ಯರ್ಥದಲ್ಲಿಯೂ ಕೂಡ ಮತ್ವರ್ಥೀಯ ಪ್ರತ್ಯಯವು ಇರುತ್ತದೆಂದು ಲೋಕವ್ಯವಹಾರದಂತೆ ಭಾವಿಸಬೇಕು. ಆದ್ದರಿಂದ ಜಯಕ್ಕೆ ಆಶ್ರಯನಾಗಿರುವಂತಹ ಭೃತ್ಯನೂ ಕೂಡ

'ಜಯೀ' ಎಂಬ ಪದದಿಂದ ಪ್ರತಿಪಾದ್ಯನಾಗುತ್ತಾನೆ. ಜಯಸ್ವಾಮಿಯಾದ ರಾಜನೂ ಕೂಡ 'ಜಯೀ' ಎಂಬ ಪದದಿಂದ ಪ್ರತಿಪಾದ್ಯನಾಗುತ್ತಾನೆ. ಹೀಗಿರುವಾಗ ರಾಜನಲ್ಲಿ ಹಾಗೂ ಭೃತ್ಯನಲ್ಲಿ 'ಜಯೀ' ಎಂಬ ಪ್ರಯೋಗವೇ ಇಲ್ಲದಿರಬೇಕಾದೀತು ಎಂಬ ಅನುಪಪತ್ತಿಗೂ ಅವಕಾಶವಿರುವುದಿಲ್ಲ.

**प्रकाशः – अतो न तद्दृष्टान्तेन दुःखिबद्धादिसर्वशब्दानां स्वातन्त्र्येण निमित्तेनेश्वरे वृत्तिकल्पनोपपद्यते । राज्ञि बद्धादिपदाप्रयोगेण व्यभिचारादिति ।**

ಮೇಲೆ ಹೇಳಿದ ಎಲ್ಲಾ ವಿಚಾರಗಳನ್ನು ಗಮನಿಸಿದಾಗ 'ಜಯೀ' ಮೊದಲಾದ ಶಬ್ದಪ್ರಯೋಗಗಳ ದೃಷ್ಟಾಂತದಿಂದ ಪರಮಾತ್ಮನಲ್ಲಿ 'ದುಃಖೀ' 'ಬದ್ಧಃ' ಇತ್ಯಾದಿಯಾಗಿ ದೋಷವಾಚಕ ಶಬ್ದಗಳ ಸಮನ್ವಯವನ್ನು ತಿಳಿಯಬೇಕೆಂದು ಹೇಳಲು ಸರ್ವಥಾ ಬರುವುದಿಲ್ಲ. ಏಕೆಂದರೆ ಲೌಕಿಕ ಪ್ರಯೋಗವನ್ನು ಅನುಸರಿಸಿಯೇ ವ್ಯವಹಾರವು ಸರ್ವಸಮ್ಮತವಾಗಿದೆ. ಅದರಂತೆ ವ್ಯಾಕರಣದಲ್ಲಿ ಸರ್ವಪ್ರಯೋಗಗಳನ್ನು ನಿಷ್ಪತ್ತಿ ಮಾಡಿರುತ್ತಾರೆ. ಹೀಗಿರುವಾಗ 'ಜಯೀ' ಮೊದಲಾದ ಶಬ್ದಗಳಂತೆ ಸ್ವಾತಂತ್ರ್ಯವೆಂಬ ನಿಮಿತ್ತವನ್ನು ಅಪೇಕ್ಷಿಸಿ ಪರಮಾತ್ಮನಲ್ಲಿ 'ದುಃಖೀ' 'ಬದ್ಧಃ' ಇತ್ಯಾದಿ ಪ್ರಯೋಗಗಳನ್ನು ಹೇಗೆ ತಾನೆ ಮಾಡುವಿರಿ? ಭೃತ್ಯನಿಗೆ ರಾಜನು ಸ್ವಾಮಿಯಾಗಿದ್ದರೂ ರಾಜನಲ್ಲಿ 'ಬದ್ಧಃ' ಇತ್ಯಾದಿ ಪ್ರಯೋಗಗಳು ಹೇಗೆ ಇಲ್ಲವೋ? ಅದರಂತೆ ಪರಮಾತ್ಮನಲ್ಲಿಯೂ 'ದುಃಖೀ' 'ಬದ್ಧಃ' ಇತ್ಯಾದಿ ಪ್ರಯೋಗಗಳು ಕೂಡುವುದಿಲ್ಲ. ಆದ್ದರಿಂದ ವ್ಯಭಿಚಾರ ಬರುತ್ತದೆ.

**प्रकाशः – तदप्येतेनैव निरस्तम् । ''कार्यकारणबद्धौ तौ'' इत्यादिश्रुतिषु बद्धादिपदप्रयोगस्य ''ज्ञेयत्वावचनाच्च'' इत्यादिवक्ष्यमाणयुक्तिश्रुत्यादिबलेन हरौ सिद्धत्वात् ।**

ಸಮಾಧಾನ - ಇವರ ಆಕ್ಷೇಪವೂ ಕೂಡ ಹುರುಳಿಲ್ಲದ್ದು ಎಂದು ಹಿಂದಿನ ಮಾತುಗಳಿಂದಲೇ ನಿರಾಕೃತವಾಗಿವೆ. ಏಕೆಂದರೆ ಪ್ರಯೋಗವನ್ನು ಅನುಸರಿಸಿ ಆಯಾ ಪದಾರ್ಥಗಳಲ್ಲಿ ಶಬ್ದಗಳನ್ನು ವ್ಯವಹರಿಸಬೇಕೆಂಬುದು ಇವರ ವಾದ. ಅನೇಕ ಶ್ರುತಿ-ಸ್ಮೃತಿಗಳಲ್ಲಿ ಪರಮಾತ್ಮನಲ್ಲಿಯೂ ಕೂಡ ದೋಷವಾಚಕ ಶಬ್ದಗಳ ಪ್ರಯೋಗವು ಕಂಡಿದೆ. ಆದ್ದರಿಂದ ನಾವೂ ಕೂಡ ಪ್ರಯೋಗವನ್ನು ಅನುಸರಿಸಿಯೇ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡುತ್ತಿದ್ದೇವೆ. 'ಕಾರ್ಯಕಾರಣಬದ್ಧೌ ತೌ' ಇತ್ಯಾದಿ ಶ್ರುತಿಗಳಲ್ಲಿ ಬದ್ಧಾದಿ ಪದಗಳ ಪ್ರಯೋಗವು 'ಜ್ಞೇಯತ್ವಾವಚನಾಚ್ಚ' ಇತ್ಯಾದಿಯಾಗಿ ಮುಂದೆ ಹೇಳುವ ಯುಕ್ತಿಯ ಬಲದಿಂದ ಹಾಗೂ ಶ್ರುತಿಗಳ ಬಲದಿಂದ ಶ್ರೀಹರಿಯಲ್ಲಿ ದೋಷವಾಚಕ ಶಬ್ದಗಳು ಪ್ರಸಿದ್ಧವಾಗಿವೆ.

**प्रकाशः – तस्य ''निरनिष्टो निरवद्यः'' इत्यादिश्रुत्यादिभिर्निर्दोषत्वावगमाच्च । तदाश्रयत्वेन तच्छब्दानां हरौ वृत्त्ययोगात् ।**

ಪರಿಪೂರ್ಣಚಂದ್ರಿಕಾ

ಇಂತಹ ದೋಷವಾಚಕ ಶಬ್ದಗಳ ಪ್ರಯೋಗವನ್ನು ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ನಿಮಿತ್ತದಿಂದಲೇ ಸಮನ್ವಯ ಮಾಡಬೇಕೇ ಹೊರತು, ಆಶ್ರಯತ್ವವೆಂಬ ನಿಮಿತ್ತದಿಂದ ಸಮನ್ವಯ ಮಾಡಬಾರದು. ಏಕೆಂದರೆ 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನು ನಿರ್ದುಷ್ಟನಾಗಿದ್ದಾನೆಂದು ಪ್ರತಿಪಾದಿಸಲಾಗಿದೆ. ಒಂದು ವೇಳೆ ಆಶ್ರಯತ್ವಪ್ರಯುಕ್ತವಾಗಿ ಶಬ್ದಪ್ರಯೋಗವನ್ನು ಮಾಡಿದರೆ, ದುಃಖಾದಿ ದೋಷಗಳು ಪರಮಾತ್ಮನಲ್ಲಿ ಇರುತ್ತವೆಂದು ಹೇಳಿದಂತಾಗುತ್ತದೆ.

**प्रकाशः** – ''स्वतन्त्रत्वात् प्रवर्तन्ते'' ''सर्वस्य तदधीनत्वात्'' ''स बन्धयति'' इत्यादिश्रुत्यादिबलाच्च 'जयी' 'धनी' इत्यादिशब्दानां राजादाविव स्वामित्वलक्षणस्वातन्त्र्येणैव निमित्तेन दुःख्यादिशब्दानां हरौ वृत्तिः ।

'ಸ್ವತಂತ್ರತ್ವಾತ್ ಪ್ರವರ್ತಂತೇ' 'ಸರ್ವಸ್ಯ ತದಧೀನತ್ವಾತ್' 'ಸ ಬಂಧಯತಿ' ಇವೇ ಮೊದಲಾದ ಶ್ರುತಿಗಳಿಂದ ಸ್ವಾತಂತ್ರ್ಯ ಪ್ರಯುಕ್ತವಾಗಿಯೇ 'ದುಃಖೀ' ಮೊದಲಾದ ಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬೇಕು. ಯಾವರೀತಿಯಾಗಿ 'ಜಯೀ' 'ಧನೀ' ಇತ್ಯಾದಿ ಶಬ್ದಗಳನ್ನು ಲೋಕದಲ್ಲಿ ಸ್ವಾತಂತ್ರ್ಯ ಪ್ರಯುಕ್ತವಾಗಿ ವ್ಯವಹರಿಸಲಾಗುತ್ತದೋ, ಅದರಂತೆ ಪರಮಾತ್ಮನಲ್ಲಿಯೂ ಕೂಡ 'ದುಃಖೀ' ಮೊದಲಾದ ಶಬ್ದಪ್ರಯೋಗಗಳನ್ನು ಮಾಡಬೇಕು.

**प्रकाशः** – अन्यत्र तु भृत्यादौ जयिशब्दादिवत्तदाश्रयत्वेन निमित्तेन वृत्तिः । अन्यस्य दोषात्यस्पृष्टिनियमाभावात् । 'स बन्धयति' इत्यादिवत् प्रमाणाभावाच्चेत्युक्तौ दोषाभावात् ।

'ದುಃಖೀ' 'ಬದ್ಧಃ' ಮೊದಲಾದ ದೋಷವಾಚಕ ಶಬ್ದಗಳನ್ನು ಪರಮಾತ್ಮನನ್ನು ಬಿಟ್ಟು, ಇತರರಲ್ಲಿ ಆಶ್ರಯತ್ವ ನಿಮಿತ್ತವಾಗಿಯೇ ಸಮನ್ವಯ ಮಾಡಬೇಕು. ಯಾವರೀತಿಯಾಗಿ ರಾಜಭೃತ್ಯರಲ್ಲಿ 'ಜಯೀ' ಎಂಬ ಶಬ್ದಪ್ರಯೋಗವು ಆಶ್ರಯತ್ವಪ್ರಯುಕ್ತವಾಗಿ ಯುಕ್ತವಾಗುತ್ತದೋ, ಅದರಂತೆ. ಏಕೆಂದರೆ ಪರಮಾತ್ಮನಲ್ಲಿ ದೋಷಲೇಷಕ್ಕೂ ಕೂಡ ಅವಕಾಶವಿರುವುದಿಲ್ಲ. ಆದ್ದರಿಂದ ಆಶ್ರಯತ್ವ ಪ್ರಯುಕ್ತವಾದ ಶಬ್ದಪ್ರಯೋಗವನ್ನು ಪರಮಾತ್ಮನಲ್ಲಿ ಮಾಡುವುದು ತಪ್ಪಾಗುತ್ತದೆ. ಆದರೆ ಪರಮಾತ್ಮನನ್ನು ಬಿಟ್ಟು, ಬೇರೆಯವರಲ್ಲಿ ದೋಷಗಳಿರುವುದರಿಂದ ಆಶ್ರಯತ್ವ ಪ್ರಯುಕ್ತವಾಗಿ ಶಬ್ದಪ್ರಯೋಗವನ್ನು ಮಾಡುವುದು ತಪ್ಪಾಗುವುದಿಲ್ಲ. ಅಷ್ಟೇ ಅಲ್ಲದೇ ಸ್ವಾತಂತ್ರ್ಯವನ್ನೇ ಪರಮಾತ್ಮನಲ್ಲಿ ಪ್ರವೃತ್ತಿನಿಮಿತ್ತವನ್ನಾಗಿ ವಿವಕ್ಷಿಸಬೇಕೆನ್ನಲು 'ಸ ಬಂಧಯತಿ' ಇತ್ಯಾದಿ ಪ್ರಮಾಣಗಳಿರುವಂತೆ ಇತರರಲ್ಲಿ ಅಂತಹ ಪ್ರಮಾಣಗಳೇನೂ ಕೂಡ ಇರುವುದಿಲ್ಲ.

**प्रकाशः** – जयिशब्दस्य राज्ञि लाक्षणिकत्वं तु ''तदस्यास्ति'' इत्यादिनिमित्तसाम्यादयुक्तम् । अन्यथा वैपरीत्यस्याप्यापातादिति सुधायामेवोक्तम्। वक्ष्यते चात्रापि लोक इत्यादि ।

ಆನುಮಾನಿಕಾಧಿಕರಣ (೧-೪-೧)

ಹಾಗಾದರೆ ರಾಜನಲ್ಲಿಯೂ ಕೂಡ 'ಜಯೀ' ಎಂಬ ಶಬ್ದವು ಲಾಕ್ಷಣಿಕವಾಗಲಿ ಎಂಬ ಆಕ್ಷೇಪವನ್ನು ಮಾಡಬಾರದು. ಏಕೆಂದರೆ 'ಜಯೀ' ಎಂಬಲ್ಲಿರುವ ಇನ್ ಪ್ರತ್ಯಯವು 'ತದಸ್ಯಾಸ್ತಿ' ಎಂಬ ಅರ್ಥದಲ್ಲಿರುತ್ತದೆ. ಈ ಸಂಬಂಧವನ್ನು ಸ್ವಸ್ವಾಮ್ಯಭಾವರೂಪವಾಗಿಯೇ ವಿವಕ್ಷಿಸಲು ಬರುವುದರಿಂದ, ಮುಖ್ಯವಾಚ್ಯತ್ವವನ್ನೇ ಸುಲಭವಾಗಿ ಹೇಳಬಹುದು. ಆದ್ದರಿಂದ ಲಕ್ಷಣಾ ಮಾಡುವ ಅನಿವಾರ್ಯತೆಯಿರುವುದಿಲ್ಲ. ಆದರೂ ಕೂಡ ಲಕ್ಷಣಾ ಮಾಡುವುದಾದಲ್ಲಿ ಭೃತ್ಯನಲ್ಲಿಯೇ 'ಜಯೀ' ಶಬ್ದವನ್ನು ಲಕ್ಷಣಯಾ ವಿವಕ್ಷಿಸಿ, ರಾಜನಲ್ಲಿ ಮುಖ್ಯವಾಗಿ ಹೇಳಬಹುದಲ್ಲವೇ? ಎಂಬ ನಮ್ಮ ಪ್ರತಿಬಂಧಿಗೆ ನಿಮ್ಮಿಂದ ಉತ್ತರಿಸಲಾಗದು. ಈ ಎಲ್ಲ ವಿಷಯಗಳನ್ನು ನ್ಯಾಯಸುಧೆಯಲ್ಲಿ ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ. ಮುಂದೆಯೂ ಕೂಡ ಗ್ರಂಥಕಾರರು ಈ ವಿಷಯವನ್ನು ಪ್ರತಿಪಾದನೆ ಮಾಡುತ್ತಾರೆ. 'ಜಯೀ' ಶಬ್ದಕ್ಕೆ ಸ್ವಾತಂತ್ರ್ಯ ಹಾಗೂ ಆಶ್ರಯತ್ವ ಎಂಬೆರಡು ಪ್ರವೃತ್ತಿನಿಮಿತ್ತಗಳು ಇರುತ್ತವೆ. ಆದರೆ ಬದ್ಧಾದಿ ಶಬ್ದಗಳಲ್ಲಿ ಕೇವಲ ಆಶ್ರಯತ್ವವು ಪ್ರವೃತ್ತಿನಿಮಿತ್ತ-ವಾಗಿರುತ್ತದೆಂದು ತಿಳಿಯಬೇಕು. ಈ ಎಲ್ಲಾ ಕಾರಣಗಳಿಂದ ಪರಮಾತ್ಮನಲ್ಲಿ ದೋಷವಾಚಕ ಶಬ್ದಗಳ ಸಮನ್ವಯ ಮಾಡಲು ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ಕಾರಣವಾಗಿರುತ್ತದೆಂಬ ವಿಷಯವು ಸ್ಪಷ್ಟವಾಯಿತು.




ಪ್ರತಿಯೊಂದು ಶಬ್ದಗಳ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾಗಿದೆ. ಆದ್ದರಿಂದ ಸಕಲ-ಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗುತ್ತಾನೆ. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ ರಾಜನಲ್ಲಿಯೂ ಬದ್ಧಾದಿ ಶಬ್ದಪ್ರಯೋಗಗಳು ಬರಬೇಕಾದೀತು ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ ಲೋಕದಲ್ಲಿ ದೋಷವಾಚಕ ಶಬ್ದಗಳ ಪ್ರಯೋಗಕ್ಕೆ ತದ್ಗತತ್ವವು ಪ್ರವೃತ್ತಿನಿಮಿತ್ತವಾಗಿದೆ. ಗುಣವಾಚಕ ಶಬ್ದಪ್ರಯೋಗಗಳಿಗೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗಿದೆ. ಬ್ರಹ್ಮನ ವಿಷಯದಲ್ಲಿ ಮಾತ್ರ ಪ್ರತಿಯೊಂದು ಶಬ್ದಗಳ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತ ಹೊರತು, ತದ್ಗತತ್ವವಲ್ಲ. ಹಾಗಾಗಿ ಲೋಕದ ದೃಷ್ಟಾಂತವನ್ನು ವಿವಕ್ಷಿಸಿ, ಬ್ರಹ್ಮನಲ್ಲಿ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗುವುದಿಲ್ಲವೆಂದು ಆಕ್ಷೇಪಿಸಲಾಗದು. ಸ್ವಾತಂತ್ರ್ಯವೇ ಬ್ರಹ್ಮನ ವಿಷಯದಲ್ಲಿ ಪ್ರವೃತ್ತಿನಿಮಿತ್ತವೆನ್ನಲು 'ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' ಇವೇ ಮೊದಲಾದ ಅನೇಕ ಶ್ರುತಿಗಳು ಆಧಾರವಾಗಿವೆ.



## ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ಶಬ್ದಗಳನ್ನು ಪ್ರಯೋಗಿಸಬಾರದು

### तात्पर्यचन्द्रिका

**किञ्च यथा मृत्तिकादौ द्रव्यत्वसामान्ये द्वेषादौ च गुणत्वसामान्ये सत्यपि सुवर्णादाविव ज्ञानादाविव च द्रव्यमिति गुण इति च न प्रयोगः,**

ಅನುವಾದ - ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ಶಬ್ದಗಳನ್ನು ಪ್ರಯೋಗಿಸಬೇಕೆಂದೇನೂ ನಿಯಮವಿಲ್ಲ. ಈ ವಿಷಯದಲ್ಲಿ ಅನೇಕ ದೃಷ್ಟಾಂತಗಳು ಲೋಕದಲ್ಲಿವೆ - ಮಣ್ಣು ಮೊದಲಾದ

ಪದಾರ್ಥಗಳು ದ್ರವ್ಯವೇ ಆಗಿವೆ. ಆದರೆ ಕಲ್ಲು, ಮಣ್ಣು ಇವುಗಳನ್ನು ಯಾರೂ ಸಹ ದ್ರವ್ಯವೆನ್ನಲಾರರು. ಹೊರತು, ಸುವರ್ಣ, ಬೆಳ್ಳಿ ಮೊದಲಾದ ಬೆಲೆಬಾಳುವ ಪದಾರ್ಥಗಳನ್ನಷ್ಟೇ ದ್ರವ್ಯಶಬ್ದಗಳಿಂದ ವ್ಯವಹರಿಸುತ್ತಾರೆ. ತಾರ್ಕಿಕರು ಹೇಳುವಂತೆ ದ್ವೇಷವೂ ಸಹ ಗುಣವೇ ಆಗಿದೆ. ಆದರೂ ಲೋಕದಲ್ಲಿ ಜ್ಞಾನಾದಿಗಳನ್ನಷ್ಟೇ ಗುಣವೆನ್ನುತ್ತಾರೆ. ಮಣ್ಣು, ದ್ವೇಷ ಮೊದಲಾದವುಗಳಲ್ಲಿ ದ್ರವ್ಯತ್ವ-ಗುಣತ್ವ ಮೊದಲಾದ ನಿಮಿತ್ತಗಳಿದ್ದರೂ ಪ್ರಯೋಗವು ಲೋಕದಲ್ಲಿರುವುದಿಲ್ಲ.

**यथा च धेनुशब्दनिमित्तस्य ''धेट इच'' इति व्याकरणोक्तस्य धानकर्मत्वस्य महिष्यादौ सत्वेऽपि तत्र तदप्रयोगः,**

ಅಥವಾ 'ಧೇಟ ಇಚ್ಚ' ಎಂಬ ಸೂತ್ರದಿಂದ ಧೇನು ಶಬ್ದದ ನಿಷ್ಪತ್ತಿಯನ್ನು ವ್ಯಾಕರಣದಲ್ಲಿ ಹೇಳಲಾಗಿದೆ. ಇಂತಹ ಧೇನು ಶಬ್ದವು 'ಧಾನಕರ್ಮತ್ವ' ಎಂಬ ಪ್ರವೃತ್ತಿನಿಮಿತ್ತವುಳ್ಳದ್ದಾಗಿದೆ. ಈ ಧಾನಕರ್ಮತ್ವವು ಗೋವುಗಳಲ್ಲಿರುವಂತೆ ಮಹಿಷಾದಿಗಳಲ್ಲಿಯೂ ಇರುತ್ತದೆ. ಆದರೂ ಸಹ ಮಹಿಷ್ಯಾದಿಗಳನ್ನು ಯಾರೂ ಸಹ ಧೇನು ಎಂದು ವ್ಯವಹರಿಸುವುದಿಲ್ಲ. ಮೊದಲೆರಡು ದೃಷ್ಟಾಂತಗಳು ತಾರ್ಕಿಕಮತದಂತೆ; ಧೇನು ಶಬ್ದದ ದೃಷ್ಟಾಂತ ವೈಯ್ಯಾಕರಣರ ಮತದಂತೆ ತಿಳಿಯಬೇಕು. ಅಥವಾ ರೂಢವಾದ ಶಬ್ದಗಳಲ್ಲಿ ನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆಂದು ಮೊದಲೆರಡು ದೃಷ್ಟಾಂತಗಳಲ್ಲಿ ಯೌಗಿಕವಾದ ಶಬ್ದಗಳಲ್ಲಿ ನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆನ್ನಲು ಧೇನು ಶಬ್ದದ ದೃಷ್ಟಾಂತವನ್ನು ಹೇಳಿದ್ದಾರೆಂದು ತಿಳಿಯಬೇಕು.

**यथाच निमित्ते सत्यपि कुलाले कुम्भकारशब्दस्येवोदञ्चनकारादिशब्दानामप्रयोगः, अभिधानादिलक्षणा हि कृत्तद्धितसमासाः ।**

ಒಂದೇ ಧೇನು ಎಂಬ ಶಬ್ದಕ್ಕೆ ನಿಮಿತ್ತವಿದ್ದರೂ ಮಹಿಷ್ಯಾದಿಗಳಲ್ಲಿ ಪ್ರಯೋಗವಿರುವುದಿಲ್ಲವೆಂದು ಹೇಳಿದ್ದಾಯಿತು. ಈಗ ಒಂದೇ ಸ್ಥಳದಲ್ಲಿ ನಿಮಿತ್ತವಿದ್ದರೂ ಕೆಲವು ಶಬ್ದಗಳನ್ನಷ್ಟೇ ಪ್ರಯೋಗಿಸುತ್ತಾರೆ, ಕೆಲವು ಶಬ್ದಗಳನ್ನು ಪ್ರಯೋಗಿಸುವುದಿಲ್ಲ. ಉದಾಹರಣೆ ಕುಲಾಲನಲ್ಲಿ ಕುಂಭಕರ್ತೃತ್ವ, ಉದಂಚನಕರ್ತೃತ್ವ ಮೊದಲಾದ ಅನೇಕ ನಿಮಿತ್ತಗಳಿರುತ್ತವೆ. ಆದರೆ ಕುಂಭಕಾರನೆಂದಷ್ಟೇ ಕುಲಾಲನನ್ನು ಕರೆಯುತ್ತಾರೆ ಹೊರತು, ಉದಂಚನಕಾರನೆಂದು ಯಾರೂ ಕರೆಯುವುದಿಲ್ಲ.

ಹೀಗೆ ನಿಮಿತ್ತವಿದ್ದರೂ ಪ್ರಯೋಗವೇಕೆ ಈ ಸ್ಥಳಗಳಲ್ಲಿ ಇರುವುದಿಲ್ಲವೆಂದರೆ 'ಅಭಿಧಾನಲಕ್ಷಣಾ ಹಿ ಕೃತ್ತದ್ಧಿತಸಮಾಸಾಃ' ಕೃದಂತ ಶಬ್ದಗಳು, ತದ್ಧಿತಾಂತ ಶಬ್ದಗಳು ಹಾಗೂ ಸಮಸ್ತ ಪದಗಳು ಯಾವ ಅರ್ಥದಲ್ಲಿ ಅಭಿಧಾನವನ್ನು ಹೊಂದಿರುತ್ತವೋ, ಅಲ್ಲಷ್ಟೇ ಪ್ರಯೋಗಿಸಲು ಅರ್ಹವಾಗಿರುತ್ತವೆ.

**यथा पङ्कजादिशब्दानां यौगिकत्वपक्षे योगरूढत्वपक्षे च कुमुदादौ योगस्य सत्त्वेऽपि तत्र तदप्रयोगः,**

ಹಾಗಾದರೆ ರಾಜನಲ್ಲಿಯೂ ಕೂಡ 'ಜಯೀ' ಎಂಬ ಶಬ್ದವು ಲಾಕ್ಷಣಿಕವಾಗಲಿ ಎಂಬ ಆಕ್ಷೇಪವನ್ನು ಮಾಡಬಾರದು. ಏಕೆಂದರೆ 'ಜಯೀ' ಎಂಬಲ್ಲಿರುವ ಇನ್ ಪ್ರತ್ಯಯವು 'ತದಸ್ಯಾಸ್ತಿ' ಎಂಬ ಅರ್ಥದಲ್ಲಿರುತ್ತದೆ. ಈ ಸಂಬಂಧವನ್ನು ಸ್ವಸ್ವಾಮ್ಯಭಾವರೂಪವಾಗಿಯೇ ವಿವಕ್ಷಿಸಲು ಬರುವುದರಿಂದ, ಮುಖ್ಯವಾಚ್ಯತ್ವವನ್ನೇ ಸುಲಭವಾಗಿ ಹೇಳಬಹುದು. ಆದ್ದರಿಂದ ಲಕ್ಷಣಾ ಮಾಡುವ ಅನಿವಾರ್ಯತೆಯಿರುವುದಿಲ್ಲ. ಆದರೂ ಕೂಡ ಲಕ್ಷಣಾ ಮಾಡುವುದಾದಲ್ಲಿ ಭೃತ್ಯನಲ್ಲಿಯೇ 'ಜಯೀ' ಶಬ್ದವನ್ನು ಲಕ್ಷಣಯಾ ವಿವಕ್ಷಿಸಿ, ರಾಜನಲ್ಲಿ ಮುಖ್ಯವಾಗಿ ಹೇಳಬಹುದಲ್ಲವೇ? ಎಂಬ ನಮ್ಮ ಪ್ರತಿಬಂಧಿಗೆ ನಿಮ್ಮಿಂದ ಉತ್ತರಿಸಲಾಗದು. ಈ ಎಲ್ಲ ವಿಷಯಗಳನ್ನು ನ್ಯಾಯಸುಧೆಯಲ್ಲಿ ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ. ಮುಂದೆಯೂ ಕೂಡ ಗ್ರಂಥಕಾರರು ಈ ವಿಷಯವನ್ನು ಪ್ರತಿಪಾದನೆ ಮಾಡುತ್ತಾರೆ. 'ಜಯೀ' ಶಬ್ದಕ್ಕೆ ಸ್ವಾತಂತ್ರ್ಯ ಹಾಗೂ ಆಶ್ರಯತ್ವ ಎಂಬೆರಡು ಪ್ರವೃತ್ತಿನಿಮಿತ್ತಗಳು ಇರುತ್ತವೆ. ಆದರೆ ಬದ್ಧಾದಿ ಶಬ್ದಗಳಲ್ಲಿ ಕೇವಲ ಆಶ್ರಯತ್ವವು ಪ್ರವೃತ್ತಿನಿಮಿತ್ತ-ವಾಗಿರುತ್ತದೆಂದು ತಿಳಿಯಬೇಕು. ಈ ಎಲ್ಲಾ ಕಾರಣಗಳಿಂದ ಪರಮಾತ್ಮನಲ್ಲಿ ದೋಷವಾಚಕ ಶಬ್ದಗಳ ಸಮನ್ವಯ ಮಾಡಲು ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ಕಾರಣವಾಗಿರುತ್ತದೆಂಬ ವಿಷಯವು ಸ್ಪಷ್ಟವಾಯಿತು.




ಪ್ರತಿಯೊಂದು ಶಬ್ದಗಳ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾಗಿದೆ. ಆದ್ದರಿಂದ ಸಕಲ-ಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗುತ್ತಾನೆ. ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದಾಗ ರಾಜನಲ್ಲಿಯೂ ಬದ್ಧಾದಿ ಶಬ್ದಪ್ರಯೋಗಗಳು ಬರಬೇಕಾದೀತು ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಏಕೆಂದರೆ ಲೋಕದಲ್ಲಿ ದೋಷವಾಚಕ ಶಬ್ದಗಳ ಪ್ರಯೋಗಕ್ಕೆ ತದ್ಗತತ್ವವು ಪ್ರವೃತ್ತಿನಿಮಿತ್ತವಾಗಿದೆ. ಗುಣವಾಚಕ ಶಬ್ದಪ್ರಯೋಗಗಳಿಗೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗಿದೆ. ಬ್ರಹ್ಮನ ವಿಷಯದಲ್ಲಿ ಮಾತ್ರ ಪ್ರತಿಯೊಂದು ಶಬ್ದಗಳ ಪ್ರಯೋಗಕ್ಕೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತ ಹೊರತು, ತದ್ಗತತ್ವವಲ್ಲ. ಹಾಗಾಗಿ ಲೋಕದ ದೃಷ್ಟಾಂತವನ್ನು ವಿವಕ್ಷಿಸಿ, ಬ್ರಹ್ಮನಲ್ಲಿ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗುವುದಿಲ್ಲವೆಂದು ಆಕ್ಷೇಪಿಸಲಾಗದು. ಸ್ವಾತಂತ್ರ್ಯವೇ ಬ್ರಹ್ಮನ ವಿಷಯದಲ್ಲಿ ಪ್ರವೃತ್ತಿನಿಮಿತ್ತವೆನ್ನಲು 'ಸ ಬದ್ಧಃ ಸ ದುಃಖೀ ಸ ಬಂಧಯತಿ ಸ ದುಃಖಯತಿ' ಇವೇ ಮೊದಲಾದ ಅನೇಕ ಶ್ರುತಿಗಳು ಆಧಾರವಾಗಿವೆ.



## ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ಶಬ್ದಗಳನ್ನು ಪ್ರಯೋಗಿಸಬಾರದು

## तात्पर्यचन्द्रिका

**किञ्च यथा मृत्तिकादौ द्रव्यत्वसामान्ये द्वेषादौ च गुणत्वसामान्ये सत्यपि सुवर्णादाविव ज्ञानादाविव च द्रव्यमिति गुण इति च न प्रयोगः,**

ಅನುವಾದ - ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ಶಬ್ದಗಳನ್ನು ಪ್ರಯೋಗಿಸಬೇಕೆಂದೇನೂ ನಿಯಮವಿಲ್ಲ. ಈ ವಿಷಯದಲ್ಲಿ ಅನೇಕ ದೃಷ್ಟಾಂತಗಳು ಲೋಕದಲ್ಲಿವೆ - ಮಣ್ಣು ಮೊದಲಾದ

ಪದಾರ್ಥಗಳು ದ್ರವ್ಯವೇ ಆಗಿವೆ. ಆದರೆ ಕಲ್ಲು, ಮಣ್ಣು ಇವುಗಳನ್ನು ಯಾರೂ ಸಹ ದ್ರವ್ಯವೆನ್ನಲಾರರು. ಹೊರತು, ಸುವರ್ಣ, ಬೆಳ್ಳಿ ಮೊದಲಾದ ಬೆಲೆಬಾಳುವ ಪದಾರ್ಥಗಳನ್ನಷ್ಟೇ ದ್ರವ್ಯಶಬ್ದಗಳಿಂದ ವ್ಯವಹರಿಸುತ್ತಾರೆ. ತಾರ್ಕಿಕರು ಹೇಳುವಂತೆ ದ್ವೇಷವೂ ಸಹ ಗುಣವೇ ಆಗಿದೆ. ಆದರೂ ಲೋಕದಲ್ಲಿ ಜ್ಞಾನಾದಿಗಳನ್ನಷ್ಟೇ ಗುಣವೆನ್ನುತ್ತಾರೆ. ಮಣ್ಣು, ದ್ವೇಷ ಮೊದಲಾದವುಗಳಲ್ಲಿ ದ್ರವ್ಯತ್ವ-ಗುಣತ್ವ ಮೊದಲಾದ ನಿಮಿತ್ತಗಳಿದ್ದರೂ ಪ್ರಯೋಗವು ಲೋಕದಲ್ಲಿರುವುದಿಲ್ಲ.

**यथा च धेनुशब्दनिमित्तस्य "धेट इच" इति व्याकरणोक्तस्य धानकर्मत्वस्य महिष्यादौ सत्वेऽपि तत्र तदप्रयोगः,**

ಅಥವಾ 'ಧೇಟ ಇಚ್ಚ' ಎಂಬ ಸೂತ್ರದಿಂದ ಧೇನು ಶಬ್ದದ ನಿಷ್ಪತ್ತಿಯನ್ನು ವ್ಯಾಕರಣದಲ್ಲಿ ಹೇಳಲಾಗಿದೆ. ಇಂತಹ ಧೇನು ಶಬ್ದವು 'ಧಾನಕರ್ಮತ್ವ' ಎಂಬ ಪ್ರವೃತ್ತಿನಿಮಿತ್ತವುಳ್ಳದ್ದಾಗಿದೆ. ಈ ಧಾನಕರ್ಮತ್ವವು ಗೋವುಗಳಲ್ಲಿರುವಂತೆ ಮಹಿಷಾದಿಗಳಲ್ಲಿಯೂ ಇರುತ್ತದೆ. ಆದರೂ ಸಹ ಮಹಿಷ್ಯಾದಿಗಳನ್ನು ಯಾರೂ ಸಹ ಧೇನು ಎಂದು ವ್ಯವಹರಿಸುವುದಿಲ್ಲ. ಮೊದಲೆರಡು ದೃಷ್ಟಾಂತಗಳು ತಾರ್ಕಿಕಮತದಂತೆ; ಧೇನು ಶಬ್ದದ ದೃಷ್ಟಾಂತ ವೈಯ್ಯಾಕರಣರ ಮತದಂತೆ ತಿಳಿಯಬೇಕು. ಅಥವಾ ರೂಢವಾದ ಶಬ್ದಗಳಲ್ಲಿ ನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆಂದು ಮೊದಲೆರಡು ದೃಷ್ಟಾಂತಗಳಲ್ಲಿ ಯೌಗಿಕವಾದ ಶಬ್ದಗಳಲ್ಲಿ ನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆನ್ನಲು ಧೇನು ಶಬ್ದದ ದೃಷ್ಟಾಂತವನ್ನು ಹೇಳಿದ್ದಾರೆಂದು ತಿಳಿಯಬೇಕು.

**यथाच निमित्ते सत्यपि कुलाले कुम्भकारशब्दस्येवोदञ्चनकारादिशब्दानामप्रयोगः, अभिधानादिलक्षणा हि कृत्तद्धितसमासाः ।**

ಒಂದೇ ಧೇನು ಎಂಬ ಶಬ್ದಕ್ಕೆ ನಿಮಿತ್ತವಿದ್ದರೂ ಮಹಿಷ್ಯಾದಿಗಳಲ್ಲಿ ಪ್ರಯೋಗವಿರುವುದಿಲ್ಲವೆಂದು ಹೇಳಿದ್ದಾಯಿತು. ಈಗ ಒಂದೇ ಸ್ಥಳದಲ್ಲಿ ನಿಮಿತ್ತವಿದ್ದರೂ ಕೆಲವು ಶಬ್ದಗಳನ್ನಷ್ಟೇ ಪ್ರಯೋಗಿಸುತ್ತಾರೆ, ಕೆಲವು ಶಬ್ದಗಳನ್ನು ಪ್ರಯೋಗಿಸುವುದಿಲ್ಲ. ಉದಾಹರಣೆ ಕುಲಾಲನಲ್ಲಿ ಕುಂಭಕರ್ತೃತ್ವ, ಉದಂಚನಕರ್ತೃತ್ವ ಮೊದಲಾದ ಅನೇಕ ನಿಮಿತ್ತಗಳಿರುತ್ತವೆ. ಆದರೆ ಕುಂಭಕಾರನೆಂದಷ್ಟೇ ಕುಲಾಲನನ್ನು ಕರೆಯುತ್ತಾರೆ ಹೊರತು, ಉದಂಚನಕಾರನೆಂದು ಯಾರೂ ಕರೆಯುವುದಿಲ್ಲ.

ಹೀಗೆ ನಿಮಿತ್ತವಿದ್ದರೂ ಪ್ರಯೋಗವೇಕೆ ಈ ಸ್ಥಳಗಳಲ್ಲಿ ಇರುವುದಿಲ್ಲವೆಂದರೆ 'ಅಭಿಧಾನಲಕ್ಷಣಾ ಹಿ ಕೃತ್ತದ್ಧಿತಸಮಾಸಾಃ' ಕೃದಂತ ಶಬ್ದಗಳು, ತದ್ಧಿತಾಂತ ಶಬ್ದಗಳು ಹಾಗೂ ಸಮಸ್ತ ಪದಗಳು ಯಾವ ಅರ್ಥದಲ್ಲಿ ಅಭಿಧಾನವನ್ನು ಹೊಂದಿರುತ್ತವೋ, ಅಲ್ಲಷ್ಟೇ ಪ್ರಯೋಗಿಸಲು ಅರ್ಹವಾಗಿರುತ್ತವೆ.

**यथा पङ्कजादिशब्दानां यौगिकत्वपक्षे योगरूढत्वपक्षे च कुमुदादौ योगस्य सत्त्वेऽपि तत्र तदप्रयोगः,**

ಉದಾಹರಣೆ - ಪಂಕಜಶಬ್ದವು ಯೌಗಿಕವೆಂದು ಮೀಮಾಂಸಕರು ಹೇಳುತ್ತಾರೆ. ತಾರ್ಕಿಕರು ಯೋಗರೂಢವೆನ್ನುತ್ತಾರೆ. ಇಬ್ಬರ ಪಕ್ಷದಲ್ಲಿಯೂ ಕೂಡ ಕುಮುದದಲ್ಲಿ ಪಂಕಜಶಬ್ದದ ಯೋಗಾರ್ಥವು ಇರುತ್ತದೆ. ಆದರೂ ಸಹ ಕುಮುದವನ್ನು ಯಾರೂ ಕೂಡ ಪಂಕಜವೆಂದು ಕರೆಯುವುದಿಲ್ಲ. , ಕಮಲವನ್ನಷ್ಟೇ 'ಪಂಕಜ' ಎನ್ನುತ್ತಾರೆ.

**यथा च घटपटसंयोगस्यैकत्वेन घटेऽपि घटसंयोगस्य सत्त्वेऽपि घटे घटसंयुक्तशब्दाप्रयोगः,**

ಅಥವಾ ನಮ್ಮ ಸಿದ್ಧಾಂತದಲ್ಲಿ ಸಂಯೋಗವು ಒಂದೇ ಪದಾರ್ಥದಲ್ಲಿರುತ್ತದೆಂದು ಒಪ್ಪಿದರೂ ತಾರ್ಕಿಕರು ಎರಡು ಪದಾರ್ಥಗಳಲ್ಲಿ ಇರುತ್ತದೆಂದು ಒಪ್ಪಿದ್ದಾರೆ. ಆದ್ದರಿಂದ ಘಟಸಂಯೋಗವು ಪಟದಲ್ಲಿರುವಂತೆ ಘಟದಲ್ಲಿಯೂ ಇರುತ್ತದೆ. ಆದರೆ ಪಟದಲ್ಲಷ್ಟೇ ಘಟಸಂಯೋಗವಿದೆಯೆಂದು ವ್ಯವಹರಿಸುತ್ತಾರೆ ಹೊರತು, ಘಟದಲ್ಲಿ ಘಟಸಂಯೋಗವಿದೆಯೆಂದು ಯಾರೂ ವ್ಯವಹರಿಸುವುದಿಲ್ಲ. ಹೀಗೆ ಪಂಕಜ ಅಥವಾ ಸಂಯೋಗ ಎಂಬ ಕೃದಂತ ಶಬ್ದಗಳು ವ್ಯವಹಾರವನ್ನನುಸರಿಸಿ ಪ್ರಯೋಗಿಸಲ್ಪಡುತ್ತವೆ.

**तथा राज्ञि सत्यपि निमित्ते बद्धादिशब्दाप्रयोगोऽस्तु ।**

ಈ ಎಲ್ಲಾ ದೃಷ್ಟಾಂತಗಳಂತೆ ಪ್ರಕೃತ ರಾಜನಲ್ಲಿಯೂ ಸ್ವಾತಂತ್ರ್ಯವೆಂಬ ಬದ್ಧಶಬ್ದದ ಪ್ರವೃತ್ತಿನಿಮಿತ್ತವಿದ್ದರೂ ಬದ್ಧಾದಿ ಶಬ್ದಗಳನ್ನೇನು ಪ್ರಯೋಗಿಸಬೇಕಾಗಿಲ್ಲ.

**प्राज्ञानां मृत्तिकादौ द्रव्यादिशब्दप्रयोग उचित इति चेत्**

ಪ್ರಶ್ನೆ - ಮಣ್ಣು ಮೊದಲಾದವುಗಳಲ್ಲಿ ದ್ರವ್ಯಾದಿಶಬ್ದಗಳ ಪ್ರಯೋಗವನ್ನು ಅಜ್ಞರು ಮಾಡದಿದ್ದರೂ ಪ್ರಾಜ್ಞರು ಮಾಡುತ್ತಾರೆ. ಆದ್ದರಿಂದ ನಿಮಿತ್ತವಿದ್ದರೆ ಪ್ರಯೋಗವಿರಬೇಕಲ್ಲವೇ?

**प्रकृतेऽपि समम् । उक्तश्रुतेः । "यदधीनो गुणो यस्य तद् गुणी सोऽभिधीयते" इति स्मृतेश्च ।**

ಉತ್ತರ - ಇಂತಹ ಪ್ರಾಜ್ಞವ್ಯವಹಾರವನ್ನು ಪ್ರಕೃತ ಪರಮಾತ್ಮನ ವಿಷಯದಲ್ಲೂ ನಾವು ಹೇಳುತ್ತೇವೆ. ಏಕೆಂದರೆ 'ಸ್ವತಂತ್ರತ್ವಾತ್ ಪ್ರವರ್ತಂತೇ' ಎಂಬ ಹಿಂದೆ ಹೇಳಿದ ಶ್ರುತಿಯಂತೆ ಮತ್ತು 'ಯದಧೀನೋ ಗುಣೋ ಯಸ್ಯ ತದ್ಗುಣೀ ಸೋಽಭಿಧೀಯತೇ' ಎಂಬ ಸ್ಮೃತಿಯಿಂದಲೂ ಪರಮಾತ್ಮನಲ್ಲಿ 'ಬದ್ಧಃ' 'ದುಃಖೀ' ಇತ್ಯಾದಿ ಪ್ರಾಜ್ಞವ್ಯವಹಾರವು ಇರುತ್ತದೆ.

ಪರಿಪೂರ್ಣಚಂದ್ರಿಕಾ

**ननु यौगिकत्वपक्षे पङ्कजादिशब्दानां कुमुदादौ पूर्वपूर्वप्रयोगाभावादेवावयवशक्तिप्रतिबन्धः कल्प्यते । यथोक्तं "अप्रयोगादेवाप्रयोगः" इति । योगरूढत्वपक्षे तु पद्मे रूढिः कुमुदादौ योगप्रतिबन्धिकेति चेदि**

ಪ್ರಶ್ನೆ - ಮೀಮಾಂಸಕ ಮತದಂತೆ ಪಂಕಜ ಶಬ್ದವನ್ನು ಯೌಗಿಕವೆಂದು ವಿವಕ್ಷಿಸುವುದಾದಲ್ಲಿ ಅಥವಾ ತಾರ್ಕಿಕಮತದಂತೆ ಯೋಗರೂಢವೆಂಬ ಪಕ್ಷವನ್ನು ವಿವಕ್ಷಿಸಿದರೂ ಅತಿಪ್ರಸಂಗ ಬರುವುದಿಲ್ಲ. ಏಕೆಂದರೆ ಯೌಗಿಕತ್ವ ಪಕ್ಷದಲ್ಲಿ ಕುಮುದದಲ್ಲೇಕೆ ಪಂಕಜಶಬ್ದವನ್ನು ಪ್ರಯೋಗಿಸುವುದಿಲ್ಲವೆಂದರೆ ಹಿಂದಿನವರು ಯಾರೂ ಸಹ ಕುಮುದವನ್ನು ಪಂಕಜವೆಂದು ಕರೆದಿಲ್ಲ. ಆದ್ದರಿಂದ ಅವಯವಶಕ್ತಿಯನ್ನು ವಿವಕ್ಷಿಸಲು ಪ್ರತಿಬಂಧಕವಾದ ಪೂರ್ವಪೂರ್ವಪ್ರಯೋಗಾಭಾವವು ಇರುತ್ತದೆ. ಇದನ್ನೇ ಪ್ರಭಾಕರರು 'ಅಪ್ರಯೋಗಾದೇವ ಅಪ್ರಯೋಗಃ' ಪ್ರಾಚೀನರು ಪ್ರಯೋಗ ಮಾಡದ ಕಾರಣ, ನವೀನರೂ ಕೂಡ ಪ್ರಯೋಗ ಮಾಡುವುದಿಲ್ಲ ಎಂದು ಹೇಳಿದಾದರೆ. ತಾರ್ಕಿಕರು ಹೇಳುವಂತೆ ಪಂಕಜ ಶಬ್ದವು ಯೋಗ ರೂಢವಾದಲ್ಲಿ, ಕುಮುದದಲ್ಲಿ ಯೌಗಿಕಾರ್ಥವನ್ನು ವಿವಕ್ಷಿಸಲು ರೂಢಿಯು ಪ್ರತಿಬಂಧಕವಾಗಿದೆ. ಆದ್ದರಿಂದ ಪಂಕಜಶಬ್ದವನ್ನು ಪದ್ಮದಲ್ಲಷ್ಟೇ ವ್ಯವಹರಿಸುವುದು ಯುಕ್ತವಾಗುತ್ತದಲ್ಲವೇ?

**इहापि तर्हि राज्ञि बद्धादिशब्दानां पूर्वपूर्वप्रयोगाभावो वा बद्धत्वाश्रये रूढिर्वा प्रतिबन्धिकास्तु । ब्रह्मणि तु श्रौतरूढिरस्तीत्युक्तम्।**

ಉತ್ತರ - ಹಾಗಾದರೆ ಪ್ರಕೃತದಲ್ಲಿಯೂ ರಾಜನಲ್ಲಿ 'ಬದ್ಧಃ' 'ದುಃಖೀ' ಮೊದಲಾದ ಶಬ್ದಗಳನ್ನು ಹಿಂದಿನವರ್‍ಯಾರೂ ಸಹ ಪ್ರಯೋಗಿಸಿರುವುದಿಲ್ಲ. ಭೃತ್ಯನಲ್ಲಷ್ಟೇ 'ಬದ್ಧಃ' ಇತ್ಯಾದಿ ಪ್ರಯೋಗಗಳನ್ನು ಮಾಡಿರುತ್ತಾರೆ. ಆದ್ದರಿಂದ ರಾಜನಲ್ಲಿ ಬದ್ಧಾದಿ ಶಬ್ದಗಳನ್ನು ಪ್ರಯೋಗಿಸಲು ಪೂರ್ವಪೂರ್ವಪ್ರಯೋಗಾಭಾವ ಎಂಬುದಾಗಲೀ, ಅಥವಾ ಬದ್ಧಾತ್ವಾಶ್ರಯನಲ್ಲಿ ಮಾಡುವಂತಹ ರೂಢಿಯಾಗಲಿ ಪ್ರತಿಬಂಧಿಕವಾಗಿರುತ್ತದೆಂದು ಹೇಳುತ್ತೇವೆ. ಹಾಗಾದರೆ ಬ್ರಹ್ಮನಲ್ಲಿಯೂ ಕೂಡ 'ಬದ್ಧಃ' ಇತ್ಯಾದಿ ಪ್ರಯೋಗಗಳು ಬರುವುದಿಲ್ಲವಲ್ಲವೇ? ಎಂದು ಪ್ರಶ್ನಿಸಬಾರದು. ಬ್ರಹ್ಮನ ವಿಷಯದಲ್ಲಿ ಶ್ರೌತರೂಢಿಯಿರುವುದರಿಂದ ಯಾವುದೇ ದೋಷಕ್ಕೆ ಅವಕಾಶವಿರುವುದಿಲ್ಲ.

ಆದ್ದರಿಂದ ಪ್ರಯೋಗವಿರುವುದರಿಂದ ನಿಮಿತ್ತವನ್ನು ಅನುಸರಿಸಬೇಕೇ ಹೊರತು, ನಿಮಿತ್ತವಿದೆಯೆಂಬ ಮಾತ್ರದಿಂದ ಪ್ರಯೋಗವನ್ನು ಮಾಡಬಾರದೆಂಬ ವಿಷಯವು ಸಿದ್ಧವಾಯಿತು.

**प्रकाशः —**

बद्धादिपदप्रयोगे तदाश्रयत्वमेव निमित्तम् । नतु स्वातन्त्र्यमित्युपेत्य निमित्ताभावेन राज्ञि भृत्यबन्धादिना बद्धादिपदप्रयोगोपात्तिदोषः परिहृतः । अथेदानीं

**''प्रयोगे सति निमित्तानुसरणं नतु निमित्तमस्तीति प्रयोगः'' इति सन्न्यायरत्नावल्युक्तसमाध्यन्तरं विवृण्वन् राजादौ स्वातन्त्र्यरूपनिमित्तसत्त्वेऽपि बद्धादिशब्दाप्रयोगो युक्त इति भावेनाह – किञ्चेति ।।**

ವಿವರಣೆ - 'ಬದ್ಧಃ' ಇತ್ಯಾದಿ ಪದಗಳ ಪ್ರಯೋಗಕ್ಕೆ ತದಾಶ್ರಯತ್ವವೇ ಪ್ರವೃತ್ತಿನಿಮಿತ್ತವಾಗಿರುತ್ತದೆ ಹೊರತು, ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗಿರುವುದಿಲ್ಲ ಎಂದು ಅಂಗೀಕರಿಸಿ ಪ್ರವೃತ್ತಿನಿಮಿತ್ತವೇ ಇಲ್ಲದ ಕಾರಣ ರಾಜನಲ್ಲಿ ಭೃತ್ಯನು ಬಂಧಿತನಾದರೂ 'ಬದ್ಧಃ' ಇತ್ಯಾದಿ ಪದಪ್ರಯೋಗಗಳು ಬರುವುದಿಲ್ಲವೆಂದು ಇಲ್ಲಿಯ ತನಕ ಸಮರ್ಥಿಸಿ ದೋಷವನ್ನು ಪರಿಹರಿಸಿದ್ದಾಯಿತು. ಪ್ರಕೃತ 'ಪ್ರಯೋಗೇ ಸತಿ ನಿಮಿತ್ತಾನುಸರಣಂ ನತು ನಿಮಿತ್ತಮಸ್ತೀತಿ ಪ್ರಯೋಗಃ' ಪ್ರಯೋಗವಿದ್ದರೆ ಅದನ್ನು ಉಪಪಾದನೆ ಮಾಡುವುದಕ್ಕಾಗಿ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕು. ಆದರೆ ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ಹಾಗೇ ಪ್ರಯೋಗ ಮಾಡಬೇಕೆಂದೇನೂ ನಿಯಮವಿರುವುದಿಲ್ಲ ಎಂಬುದಾಗಿ ಸನ್ನ್ಯಾಯರತ್ನಾವಳಿಯಲ್ಲಿ ಹೇಳಿರುತ್ತಾರೆ. ಈ ಮತ್ತೊಂದು ಸಮಾಧಾನವನ್ನು ವಿವರಿಸಲು ಹೊರಟಿದ್ದಾರೆ. ಆದ್ದರಿಂದ ರಾಜಾದಿಗಳಲ್ಲಿ ಭೃತ್ಯಬಂಧಕ್ಕೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿರಬಹುದು. ಆದರೂ ಸಹ ಭೃತ್ಯನು ಬಂಧಿತನಾದಾಗ ರಾಜನಲ್ಲಿ 'ಬದ್ಧಃ' ಇತ್ಯಾದಿ ಶಬ್ದ ಪ್ರಯೋಗಗಳು ಯುಕ್ತವಾಗುವುದಿಲ್ಲ. ಈ ಅಭಿಪ್ರಾಯದಿಂದ 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – यथेति न्यायमते । यथाचेति शाब्दिकादिमते ।**

ಗ್ರಂಥದಲ್ಲಿ 'ಯಥಾ ಮೃತ್ತಿಕಾದೌ' ಇತ್ಯಾದಿ ವಾಕ್ಯದಿಂದ ಎರಡು ದೃಷ್ಟಾಂತಗಳನ್ನು ನೀಡಿ, ನಿಮಿತ್ತವಿದ್ದ ಮಾತ್ರದಿಂದ ಪ್ರಯೋಗವಿರುವುದಿಲ್ಲವೆಂಬುದನ್ನು ತೋರಿಸಿದ್ದಾರೆ. ಅನಂತರ 'ಯಥಾಚ' ಇತ್ಯಾದಿ ವಾಕ್ಯದಿಂದ ಎಮ್ಮೆಯಲ್ಲಿಯೂ ಧಾನಕರ್ಮತ್ವವೆಂಬ ಪ್ರವೃತ್ತಿನಿಮಿತ್ತವಿದ್ದರೂ 'ಧೇನುಃ' ಎಂಬ ಶಬ್ದಪ್ರಯೋಗವು ಇರುವುದಿಲ್ಲವೆಂದು ಮತ್ತೊಂದು ಉದಾಹರಣೆಯನ್ನು ನೀಡಿದ್ದಾರೆ. ಒಂದೇ ವಿಷಯದಲ್ಲಿ ಹೀಗೆ ಅನೇಕ ಉದಾಹರಣೆಗಳನ್ನು ನೀಡಿದ್ದು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಈ ಉದಾಹರಣೆಗಳಲ್ಲಿಯೂ ಬಹಳ ಅರ್ಥವಿದೆ ಮತ್ತು ವೈಲಕ್ಷಣ್ಯವಿದೆ. 'ಯಥಾ ಮೃತ್ತಿಕಾದೌ' ಇತ್ಯಾದಿ ವಾಕ್ಯದಲ್ಲಿ ನೀಡಿದ ಎರಡು ಉದಾಹರಣೆಗಳು ತಾರ್ಕಿಕಮತದ ಪ್ರಕಾರ ಹೇಳಿದ್ದಾರೆ. ಆದರೆ ವೈಯ್ಯಾಕರಣರು ದ್ವೇಷದಲ್ಲಿ ಗುಣತ್ವಾದಿಗಳನ್ನು ಒಪ್ಪದ ಕಾರಣ ಅವರಿಗೋಸ್ಕರ 'ಯಥಾ ಚ' ಇತ್ಯಾದಿ ವಾಕ್ಯದಿಂದ ವ್ಯಾಕರಣದ ದೃಷ್ಟಾಂತವನ್ನೇ ನೀಡಿರುತ್ತಾರೆ. ಹೀಗೆ ದೃಷ್ಟಾಂತಗಳಲ್ಲಿರುವ ವೈಲಕ್ಷಣ್ಯವನ್ನು ಗಮನಿಸಬೇಕು.

**प्रकाशः – यद्वा रूढशब्दो यथेति दृष्टान्तितः । यथाचेति यौगिकः ।**

ಅಥವಾ ಮೃತ್ತಿಕೆಯಲ್ಲಿ ದ್ರವ್ಯತ್ವ ಜಾತಿಯಿದ್ದರೂ ಯಾರೂ ಸಹ ಮೃತ್ತಿಕೆಯನ್ನು ದ್ರವ್ಯವೆಂದು ಕರೆಯುವುದಿಲ್ಲ. ಸುವರ್ಣವನ್ನೇ ದ್ರವ್ಯವೆನ್ನುತ್ತಾರೆ. ಅದರಂತೆ ದ್ವೇಷವು ಗುಣವಾಗಿದ್ದರೂ ಜ್ಞಾನಾದಿಗಳನ್ನೇ ಗುಣವೆನ್ನುತ್ತಾರೆ ಎಂಬೆರಡು ದೃಷ್ಟಾಂತಗಳು 'ರೂಢ' ಶಬ್ದಕ್ಕೆ ಸಂಬಂಧ ಪಟ್ಟಿವೆ. ಅಂದರೆ ರೂಢವಾದ ಶಬ್ದಗಳಲ್ಲಿ ಪ್ರವೃತಿನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆನ್ನಲು ದೃಷ್ಟಾಂತವಾಗಿದೆ. ಮುಂದಿನ 'ಧೇನುಃ'

ಎಂಬ ಪದದ ದೃಷ್ಟಾಂತವು ಯೌಗಿಕವಾದ ಶಬ್ದದಲ್ಲಿ ಪ್ರವೃತ್ತಿನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆನ್ನಲು ತಿಳಿಸಿದ್ದಾರೆ. ಹೀಗೆ ಒಂದು ದೃಷ್ಟಾಂತವು ರೂಢಶಬ್ದಕ್ಕೆ ಸಂಬಂಧಪಟ್ಟಿದ್ದರೆ, ಮತ್ತೊಂದು ದೃಷ್ಟಾಂತವು ಯೌಗಿಕ ಶಬ್ದಕ್ಕೆ ಸಂಬಂಧಪಟ್ಟಿರುತ್ತದೆ.

**प्रकाशः – तत्रापि गुणगतजात्यनङ्गीकाराङ्गीकारवादयोर्यथाक्रमं द्वयम् ।**

ಇದರಲ್ಲೂ ವ್ಯತ್ಯಾಸವಿದೆ. ಗುಣದಲ್ಲಿ ಗುಣತ್ವ ಮೊದಲಾದ ಜಾತಿಯನ್ನು ಅಂಗೀಕರಿಸಿದರೆ ಮಾತ್ರ ಮೊದಲನೆಯ ದೃಷ್ಟಾಂತವು ಸರಿಹೊಂದುತ್ತದೆ. ಆದರೆ ಮೀಮಾಂಸಕರೇ ಮೊದಲಾದವರು ದ್ವೇಷಾದಿ ಗುಣಗಳಲ್ಲಿ ಗುಣತ್ವಜಾತಿಯನ್ನು ಅಂಗೀಕಾರ ಮಾಡಿರುವುದಿಲ್ಲ. ಆದಕ್ಕೋಸ್ಕರ 'ಧೇನು' ಶಬ್ದದ ದೃಷ್ಟಾಂತವನ್ನು ನೀಡಿರುತ್ತಾರೆಂದು ತಿಳಿಯಬೇಕು.

**प्रकाशः – द्वितीये चैकस्य शब्दस्यान्यत्र निमित्ते सत्यप्रयोगे धेनुशब्दः । एकत्रैव सत्यपि निमित्ते केचिदेव प्रयुज्यन्ते केचिन्नेत्यत्रोदञ्चनकारादिशब्दो बोध्यः ।**

'ಯಥಾ ಚ' ಇತ್ಯಾದಿ ವಾಕ್ಯದಿಂದ 'ಧೇನು' ಶಬ್ದದ ಪ್ರಯೋಗವನ್ನು ಅದರಂತೆ ಉದಂಚನಕಾರ ಮೊದಲಾದ ಶಬ್ದಗಳ ದೃಷ್ಟಾಂತವನ್ನು ನೀಡಿರುತ್ತಾರೆ. ಒಂದೇ ಧೇನುವೆಂಬ ಶಬ್ದಕ್ಕೆ 'ಧಾನಕರ್ಮತ್ವ' ಎಂಬ ಯಾವ ಪ್ರವೃತ್ತಿನಿಮಿತ್ತವಿದೆಯೋ, ಅದು ಹಸುವಿನಲ್ಲಿರುವಂತೆ ಎಮ್ಮೆಯಲ್ಲಿಯೂ ಇರುತ್ತದೆ. ಆದರೂ 'ಧೇನು' ಶಬ್ದವನ್ನು ಎಮ್ಮೆಯಲ್ಲಿ ಪ್ರಯೋಗಿಸದೇ ಹಸುವಿನಲ್ಲಿ ಪ್ರಯೋಗಿಸುತ್ತಾರೆ. ಆದ್ದರಿಂದ ಒಂದೇ ಶಬ್ದಕ್ಕೆ ಬೇರೆ ಕಡೆ ನಿಮಿತ್ತವಿದ್ದರೂ ಪ್ರಯೋಗವಿರುವುದಿಲ್ಲವೆನ್ನಲು ಮೊದಲನೆಯ ದೃಷ್ಟಾಂತವಾಗಿದೆ. ಎರಡನೆಯ ದೃಷ್ಟಾಂತವು ಒಂದೇ ಕಡೆ ಪ್ರವೃತ್ತಿನಿಮಿತ್ತವಿದ್ದರೂ ಕೆಲವು ಶಬ್ದಗಳನ್ನಷ್ಟೇ ಪ್ರಯೋಗಿಸುತ್ತಾರೆ. ಇನ್ನು ಕೆಲವು 'ಉದಂಚನಕಾರ' ಮೊದಲಾದ ಶಬ್ದಗಳನ್ನು ಪ್ರಯೋಗಿಸುವುದಿಲ್ಲವೆನ್ನಲು ದೃಷ್ಟಾಂತವಾಗಿದೆ. ಒಬ್ಬನೇ ಕುಲಾಲನಲ್ಲಿ 'ಕುಂಭಕರ್ತೃತ್ವ', 'ಉದಂಚನಕರ್ತೃತ್ವ' ಮೊದಲಾದ ಅನೇಕ ಪ್ರವೃತ್ತಿನಿಮಿತ್ತಗಳಿದ್ದರೂ 'ಕುಂಭಕಾರಃ' ಮೊದಲಾದ ಶಬ್ದಗಳನ್ನಷ್ಟೇ ಪ್ರಯೋಗಿಸುತ್ತಾರೆ. ಹೊರತು, 'ಉದಂಚನಕಾರಃ' ಮೊದಲಾದ ಶಬ್ದಗಳನ್ನು ಪ್ರಯೋಗಿಸುವುದಿಲ್ಲ. ಹೀಗೆ ಈ ದೃಷ್ಟಾಂತಗಳಲ್ಲಿಯೂ ವೈಲಕ್ಷಣ್ಯಗಳನ್ನು ತಿಳಿಯಬೇಕು.

**प्रकाशः – तेन हरौ राज्ञि च स्वातन्त्र्ये सत्यपि रूढयौगिकबद्धदुःख्यादि-पदप्रयोगाप्रयोगौ तथा राज्ञि सत्यपि स्वातन्त्र्ये जयिशब्दप्रयोगो बद्धादिशब्दाप्रयोगश्च युक्त इति भावः ।**

ಮೇಲಿನ ದೃಷ್ಟಾಂತಗಳನ್ನು ಗಮನಿಸಿದಾಗ ಭಗವಂತನಲ್ಲಿ ಮತ್ತು ರಾಜನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿದ್ದರೂ ರೂಢವಾದ ಮತ್ತು ಯೌಗಿಕವಾದ 'ಬದ್ಧಃ' 'ದುಃಖೀ' ಮೊದಲಾದ ಪ್ರಯೋಗಗಳು ರಾಜನಲ್ಲಿರುವುದಿಲ್ಲ, ಪರಮಾತ್ಮನಲ್ಲಿರುತ್ತದೆ. ಯಾವರೀತಿಯಾಗಿ 'ಧೇನು' ಎಂಬ ಒಂದೇ ಶಬ್ದವು ಮಹಿಷ್ಯಾದಿಗಳಲ್ಲಿ ಪ್ರವೃತ್ತಿನಿಮಿತ್ತವನ್ನು ಹೊಂದಿದ್ದರೂ ಅವುಗಳಲ್ಲಿ 'ಧೇನು' ಎಂಬ ಶಬ್ದ ಪ್ರಯೋಗವು ಇರುವುದಿಲ್ಲವೋ, ಅದರಂತೆ ಶ್ರೀಹರಿಯಲ್ಲಿ ಮತ್ತು ರಾಜನಲ್ಲಿ ಸ್ವಾತಂತ್ರ್ಯವೆಂಬ ಒಂದೇ

ಪ್ರವೃತ್ತಿನಿಮಿತ್ತವಿದ್ದರೂ 'ಧೇನು' ಶಬ್ದವನ್ನು ಹಸುವಿನಲ್ಲಿ ಮಾತ್ರ ಪ್ರಯೋಗಿಸುವಂತೆ, 'ದುಃಖೀ' 'ಬದ್ಧಃ' ಇತ್ಯಾದಿ ಪದಗಳನ್ನು ಶ್ರೀಹರಿಯಲ್ಲಿ ಮಾತ್ರ ಪ್ರಯೋಗಿಸಬೇಕು, ಹೊರತು, ರಾಜನಲ್ಲಿ ಪ್ರಯೋಗಿಸಬಾರದು.

ಇದರಂತೆ 'ಕುಂಭಕರ್ತೃತ್ವ', 'ಉದಂಚನಕರ್ತೃತ್ವ' ಮೊದಲಾದ ಅನೇಕ ಪ್ರವೃತ್ತಿನಿಮಿತ್ತಗಳು ಒಬ್ಬನೇ ಕುಲಾಲನಲ್ಲಿದ್ದರೂ 'ಕುಂಭಕಾರಃ' ಎಂದಷ್ಟೇ ಪ್ರಯೋಗಿಸುವಂತೆ ರಾಜನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿದ್ದರೂ 'ಜಯೀ' ಎಂಬ ಶಬ್ದವನ್ನಷ್ಟೇ ಪ್ರಯೋಗಿಸಬೇಕು. 'ಬದ್ಧಃ' 'ದುಃಖೀ' ಮೊದಲಾದ ಶಬ್ದಗಳನ್ನು ಪ್ರಯೋಗಿಸಬಾರದು. ಹೀಗೆ ದೃಷ್ಟಾಂತ ದಾರ್ಷ್ಟಾಂತಿಕ ಭಾವವನ್ನು ಸ್ಪಷ್ಟವಾಗಿ ತಿಳಿಯಬೇಕು.

**प्रकाशः – 'धेट् पाने' इत्यस्माद्धातोः ''धेट इच्च'' इति सूत्रेण ''दाभाभ्यां नुः'' इत्यतोऽनुवृत्त 'नु' प्रत्यये कृते धातोरिकारादेशे ''सार्वधातुकार्धधातुकयोः'' इति गुणे कृते धेनुरिति रूपम् ।**

'ಧೇನು' ಶಬ್ದದ ನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು - 'ಧೇಟ್ ಪಾನೇ' ಎಂಬ ಧಾತುವಿನ ಮೇಲೆ 'ಧೇಟ್ ಇಚ್ಚ' ಎಂಬ ಸೂತ್ರದಿಂದ 'ನು' ಪ್ರತ್ಯಯವು ಬರುತ್ತದೆ. ಮತ್ತು 'ಇ' ಕಾರವು ಅಂತಾದೇಶವಾಗಿ ಬರುತ್ತದೆ. 'ದಾಭಾಭ್ಯಾಂ ನುಃ' ಎಂಬ ಹಿಂದಿನ ಸೂತ್ರದಿಂದ 'ನುಃ' ಎಂಬುದು ಅನುವೃತ್ತವಾಗುವ ಕಾರಣ 'ಧೇಟ ಇಚ್ಚ' ಎಂಬ ಸೂತ್ರವು 'ಇ'ಕಾರದ ಜೊತಗೆ 'ನು' ಪ್ರತ್ಯಯವನ್ನು ಕೂಡ ವಿಧಿಸುತ್ತದೆ. ಅನಂತರ 'ಸಾರ್ವಧಾತುಕಾರ್ಧಧಾತುಕಯೋಃ' ಎಂಬ ಸೂತ್ರದಿಂದ ಗುಣ ಬಂದರೆ 'ಧೇನುಃ' ಎಂಬ ರೂಪವು ಸಿದ್ಧವಾಗುತ್ತದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - 'ಧೇಟ್' ಎಂಬಲ್ಲಿ 'ಟ'ಕಾರವು ಇತ್ತಾದಮೇಲೆ 'ಧೇ' ಎಂದಷ್ಟೇ ಉಳಿಯುತ್ತದೆ. ಅನಂತರ 'ಆದೇಚೋಽಪದೇಶೋಽಶಿತಿ' ಎಂಬ ಸೂತ್ರವು ಉಪದೇಶವಾದ ಶಿತ್ತಾದ ಪ್ರತ್ಯಯವು ಪರದಲ್ಲಿಲ್ಲದಿದ್ದರೆ 'ಏಚ್' ಅಕ್ಷರಗಳಿಗೆ 'ಆ' ಅಕ್ಷರವನ್ನು ವಿಧಿಸುತ್ತದೆ. ಪ್ರಕೃತ 'ಧೇ' ಎಂಬುದು ಏಕಾರಾಂತವಾಗಿರುವುದರಿಂದ, 'ಆ' ಎಂಬ ಅಕ್ಷರವು ಬಂದರೆ 'ಧಾ' ಎಂದಾಗುತ್ತದೆ. ಹೀಗಿರುವಾಗ 'ಧೇಟ ಇಚ್ಚ' ಎಂಬ ಸೂತ್ರವು ಧಾತುವಿನ ಅಂತಾದೇಶವಾಗಿ 'ಇ'ಕಾರವನ್ನು ವಿಧಿಸುವುದರಿಂದ 'ಧಿ ಆ' ಎಂದಾಗುತ್ತದೆ. ಮತ್ತು 'ನು' ಪ್ರತ್ಯಯವನ್ನೂ ಕೂಡ ವಿಧಿಸುತ್ತದೆ. ಅನಂತರ 'ಸಾರ್ವಧಾತುಕಾರ್ಧಧಾತುಕಯೋಃ' ಎಂಬ ಸೂತ್ರದಿಂದ 'ಇ'ಕಾರಕ್ಕೂ 'ಆ'ಕಾರಕ್ಕೂ ಗುಣಾಕ್ಷರ ಬಂದರೆ 'ಧೇನು' ಎಂಬ ರೂಪವು ಸಿದ್ಧವಾಗುತ್ತದೆ. 'ಸು' ಪ್ರತ್ಯಯ ರುತ್ವವಿಸರ್ಗಗಳು ಬಂದಮೇಲೆ 'ಧೇನುಃ' ಎಂಬ ರೂಪಗಳು ಸಂಪೂರ್ಣವಾಗಿ ಸಿದ್ಧವಾಗುತ್ತದೆ.[೧]

(೧) 'ಧೇಟ ಇಚ್ಚ' (ಉಣಾದಿ ಪಾದ - ೩, ಸೂತ್ರ - ೩೪)

'ಧೇಟ್ ಪಾನೇ ಇತ್ಯಸ್ಮಾತ್ 'ನು' ಪ್ರತ್ಯಯಃ ಸ್ಯಾತ್ ಇಕಾರಶ್ಚ ಅಂತಾದೇಶಃ ಆದೇಚೋ ಉಪದೇಶೋಽಷಿತಿ ಇತಿ ಆತ್ವೇ ಪ್ರಸಕ್ತೇ ತದಪವಾದೋಽಯಂ'.

'ಧೇನು' ಶಬ್ದದ ಪ್ರವೃತ್ತಿನಿಮಿತ್ತ ಧಾನಕರ್ಮತ್ವ. ಇದು ಗೋವುಗಳಲ್ಲಿರುವಂತೆ ಮಹಿಷ್ಯಾದಿಗಳಲ್ಲಿಯೂ ಇರುತ್ತದೆ. ಆದರೂ ಗೋವುಗಳನ್ನು ಮಾತ್ರ ಧೇನುವೆಂದು ವ್ಯವಹರಿಸುತ್ತಾರೆ ಹೊರತು, ಮಹಿಷ್ಯಾದಿಗಳನ್ನು ಯಾರೂ ಸಹ 'ಧೇನು' ಎಂದು ವ್ಯವಹರಿಸುವುದಿಲ್ಲ.

**प्रकाशः – ''अतः कृकमिकंसकुम्भपात्रकुशाकर्णीष्वनव्ययस्य'' इति सूत्रे कमीत्युक्त्यैव सिद्धौ पुनः कंसग्रहणेनौणादिकस्याव्युत्पन्नत्वपक्षस्यापि ज्ञापिततया रूढ्याऽतिप्रसङ्गनिरासस्स्यादित्याशयाद्वा यथाचेत्युदाहरणान्तरम् ॥**

'ಅತಃ ಕೃಕಮಿಕಂಸಕುಂಭಪಾತ್ರಕುಶಾಕರ್ಣೀಷ್ವನವ್ಯಯಸ್ಯ' ಎಂಬ ಸೂತ್ರದಲ್ಲಿ 'ಕಮಿ' ಎಂಬುದರಿಂದಲೇ 'ಕಂಸ' ಎಂಬ ಶಬ್ದವು ಸಂಗ್ರಹಿತವಾಗುತ್ತದೆ. ಅಂದರೆ 'ಕಂ' ಶಬ್ದಕ್ಕೆ 'ಸ' ಎಂಬ ಪ್ರತ್ಯಯವು ಸೇರಿದಾಗ 'ಕಂಸ' ಎಂಬ ರೂಪವು ಸಿದ್ಧವಾಗುತ್ತದೆ. ಆದರೂ ಸಹ ಸೂತ್ರದಲ್ಲಿ 'ಕಂಸ' ಎಂಬ ಶಬ್ದವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದಾರೆ. ಇದರಿಂದ ಏನು ತಿಳಿಯುತ್ತದೆಂದರೆ ಔಣಾದಿಕಗಳು ಅವ್ಯುತ್ಪನ್ನಪಕ್ಷದಲ್ಲಿಯೂ ಕೂಡ ಬರುತ್ತವೆಂದು ತಿಳಿಯುತ್ತದೆ. ಆದ್ದರಿಂದ 'ಧೇನು' ಎಂಬ ಶಬ್ದವು ಧಾನಕರ್ಮತ್ವವನ್ನೇನು ತಿಳಿಸಬೇಕಾಗಿಲ್ಲ. ಆದ್ದರಿಂದ ಎಲ್ಲಿ 'ಧೇನು' ಶಬ್ದದ ರೂಢಿಯಿರುತ್ತದೋ, ಅಲ್ಲಿ ಮಾತ್ರ ವ್ಯವಹಾರವು ಯುಕ್ತವಾಗುತ್ತದೆ. ಮಹಿಷ್ಯಾದಿಗಳಲ್ಲಿ 'ಧೇನು' ಶಬ್ದದ ರೂಢಿಯಿರುವುದಿಲ್ಲ. ಹೀಗೆ ಅತಿಪ್ರಸಂಗವನ್ನು ಪರಿಹರಿಸಬಹುದು. ಒಂದು ವೇಳೆ 'ಧೇನು' ಶಬ್ದವು ಧಾನಕರ್ಮತ್ವವಿಶಿಷ್ಟವಾದ ಪದಾರ್ಥವನ್ನೇ ಸಮರ್ಥಿಸುತ್ತದೆಂದು ಹೇಳುವುದಾದಲ್ಲಿ ಮಹಿಷ್ಯಾದಿಗಳಲ್ಲಿ ನಿಮಿತ್ತವಿದ್ದರೂ ಪ್ರಯೋಗವಿಲ್ಲವೆಂದು ಅತಿಪ್ರಸಂಗವೆಂದು ಹೇಳಬಹುದಿತ್ತು. ಆದರೆ ಉಣಾದಿ ಗಣದಲ್ಲಿ ಪಠಿತವಾದ ಶಬ್ದಗಳಿಗೆ ವ್ಯುತ್ಪತ್ತಿಪಕ್ಷ ಹಾಗೂ ಅವ್ಯುತ್ಪತ್ತಿಪಕ್ಷವನ್ನು ಒಪ್ಪಿರುವುದರಿಂದ ದೋಷವಿಲ್ಲ. ಈ ಶಂಕೆಯನ್ನು ಪರಿಹರಿಸುವುದಕ್ಕಾಗಿ ಗ್ರಂಥಕಾರರು 'ಯಥಾಚ' ಎಂಬುದರಿಂದ ಮತ್ತೊಂದು ಉದಾಹರಣೆಯನ್ನು ನೀಡಿದ್ದಾರೆ.

**प्रकाशः – निमित्त इति । कुम्भोदश्चनादिकर्तृत्वरूपनिमित्ते सतीत्यर्थः । कुम्भादिशब्द उपपदे करोतेः ''कर्मण्यण्'' इत्यणि कृते कुम्भकारादिशब्दनिष्पत्तिः ।**

ಒಬ್ಬನೇ ಕುಲಾಲನಲ್ಲಿ 'ಕುಂಭಕರ್ತೃತ್ವ' ಮತ್ತು 'ಉದಂಚನಕರ್ತೃತ್ವ' ಮೊದಲಾದ ಪ್ರವೃತ್ತಿನಿಮಿತ್ತಗಳಿದ್ದರೂ ಅವನನ್ನು ಕುಂಭಕಾರನೆಂದೇ ವ್ಯವಹರಿಸುತ್ತಾರೆ ಹೊರತು, ಉದಂಚನಕಾರನೆಂದು ಯಾರೂ ವ್ಯವಹರಿಸುವುದಿಲ್ಲ. 'ಉದಂಚನಕರ್ತೃತ್ವ' ಎಂಬ ನಿಮಿತ್ತವಿದ್ದರೂ 'ಉದಂಚನಕಾರ' ಎಂಬ ಪ್ರಯೋಗವಿರುವುದಿಲ್ಲ. 'ಕುಂಭ' ಎಂಬ ಉಪಪದದ ಮುಂದೆ 'ಕೃ' ಧಾತುವಿಗೆ 'ಕರ್ಮಣ್ಯಣ್' ಎಂಬುದರಿಂದ 'ಅಣ್' ಪ್ರತ್ಯಯ ಬಂದು 'ಕುಂಭಕಾರ' ಎಂಬ ಶಬ್ದವು ನಿಷ್ಪನ್ನವಾಗಿದೆ.

---

'ದಾಭಾಭ್ಯಾಂ ನುಃ' (ಉಣಾದಿ ಪಾದ - ೩, ಸೂತ್ರ - ೩೨)

**प्रकाशः** – कुत इत्यतस्तत्र ''प्रयोगानुसारित्वात् कृत्तद्धितसमासानाम्'' इति सुधोक्तं प्रयोगमूलत्वं हेतुमाह – **अभिधानेति** ।।

ಮೇಲೆ ಹೇಳಿದ ದೃಷ್ಟಾಂತಗಳಲ್ಲಿ ನಿಮಿತ್ತವಿದ್ದರೂ ಪ್ರಯೋಗವಿಲ್ಲದಿರಲು ಕಾರಣವೇನು? ಎಂಬ ಪ್ರಶ್ನೆಗೆ 'ಪ್ರಯೋಗಾನುಸಾರಿತ್ವಾತ್ ಕೃತ್ತದ್ಧಿತಸಮಾಸಾನಾಮ್' ಎಂಬ ಸುಧೆಯ ಮಾತನ್ನು ಉಲ್ಲೇಖಿಸುತ್ತಾ ಉತ್ತರಿಸುತ್ತಿದ್ದಾರೆ. ಅಂದರೆ ಕೃದಂತಶಬ್ದಗಳು ತದ್ಧಿತಾಂತ ಶಬ್ದಗಳು ಹಾಗೂ ಸಮಾಸಗಳು ಪ್ರಯೋಗದ ಅಧೀನವಾಗಿವೆ.

**प्रकाशः** – कृदादयो यमर्थमभिदधति तत्रैव प्रयुज्यन्ते नान्यत्र सत्यपि निमित्त इत्यभिधाननिमित्तकाः कृत्तद्धितसमासा इत्यर्थः ।

'ಕೃತ್' ಮೊದಲಾದ ಪ್ರತ್ಯಯಗಳು ಯಾವ ಅರ್ಥವನ್ನು ಪ್ರತಿಪಾದಿಸುತ್ತವೋ, ಆ ಅರ್ಥದಲ್ಲಷ್ಟೇ ಪ್ರಯುಕ್ತವಾಗುತ್ತವೆ. ಹೊರತು, ಬೇರೆಡೆ ಅಲ್ಲ. ಅಂದರೆ ಬೇರೆ ಪದಾರ್ಥಗಳಲ್ಲಿ ಪ್ರವೃತ್ತಿನಿಮಿತ್ತವಿದ್ದರೂ ಆ ಶಬ್ದಗಳು ಅಲ್ಲಿ ಪ್ರಯುಕ್ತವಾಗುವುದಿಲ್ಲ. ಹೀಗೆ ಕೃತ್ತದ್ಧಿತಸಮಾಸಗಳು ಪ್ರಯೋಗವನ್ನೇ ಅನುಸರಿಸಿ ಇರುತ್ತವೆ.

**प्रकाशः** – यथा कृदन्तो धेनुशब्दस्सास्नावत्येव नान्यत्र । यथा वा सान्नाय्यादिशब्दो दधिपयोरूपहविर्विशेषादावेव नान्यत्र प्रयुज्यते । मत्वर्थीयतद्धितान्तो 'धनी' इत्यादिशब्दो धनिके पुरुषे एव नतु धनवोढरि ''तदस्यास्त्यस्मिन्'' इति निमित्तसत्त्वेऽपि । एवं समासेऽपि ध्येयम् ।

ಕೃತ್‌ಪ್ರತ್ಯಯಾಂತವಾದ 'ಧೇನು' ಶಬ್ದವು ಸಾಸ್ನಾದಿಮತ್ತಾದ ಗೋವಿನಲ್ಲಷ್ಟೇ ಪ್ರಯುಕ್ತವಾಗುತ್ತದೆ ಹೊರತು, ಮಹಿಷ್ಯಾದಿಗಳಲ್ಲಿ ಅಲ್ಲ. ಅದರಂತೆ ಸಾನ್ನಾಯ್ಯ ಮೊದಲಾದ ಕೃದಂತ ಶಬ್ದಗಳು ದಧಿ-ಪಯಸ್ಸು ಎಂಬ ಹವಿರ್ವಿಶೇಷದಲ್ಲಷ್ಟೇ ಪ್ರಯುಕ್ತವಾಗುತ್ತದೆ. ಹೊರತು, ಬೇರೆ ಹವಿಸ್ಸು ಪದಾರ್ಥಗಳಲ್ಲಲ್ಲ. ಮತ್ವರ್ಥೀಯವಾದ ತದ್ಧಿತಾಂತ ಪ್ರತ್ಯಯವುಳ್ಳ 'ಧನೀ' ಮೊದಲಾದ ಶಬ್ದಗಳೂ ಕೂಡ ಧನಿಕನಾದ ಪುರುಷನಲ್ಲಷ್ಟೇ ಪ್ರಯೋಗಿಸಲು ಅರ್ಹವಾಗಿದೆ ಹೊರತು, ಧನವಾಹಕ ಪದಾರ್ಥಗಳಲ್ಲಿ ಪ್ರಯೋಗಿಸಲು ಅರ್ಹವಾಗಿರುವುದಿಲ್ಲ. 'ತದಸ್ಯಾಸ್ತ್ಯಸ್ಮಿನ್' ಎಂಬ ಪ್ರವೃತ್ತಿನಿಮಿತ್ತವಿದ್ದರೂ ಅಲ್ಲಿ 'ಧನೀ' ಎಂಬ ಶಬ್ದಪ್ರಯೋಗವಿರುವುದಿಲ್ಲ. ಹೀಗೆ ಕೃದಂತ-ತದ್ಧಿತಾಂತ ಶಬ್ದಗಳಲ್ಲಿ ಹೇಳಿದಂತೆ ಸಮಾಸದಲ್ಲಿಯೂ ಕೂಡ ತಿಳಿಯಬೇಕು.

**प्रकाशः** – प्राभाकरपक्षमाह – **यौगिकत्वपक्ष इति** ।। नैयायिकादिपक्षमाह – **योगरूढत्वपक्ष इति** ।। एकत्वेनेति मतान्तराभिप्रायेण । स्वमते घटसंयोगः पटे पटसंयोगो घट इत्यनेकत्वोपगमात् ।

'ಪಂಕಜ' ಶಬ್ದವನ್ನು ಪ್ರಾಭಾಕರರು ಕೇವಲ ಯೌಗಿಕವೆನ್ನುತ್ತಾರೆ. ಅವರ ಮತವನ್ನು ಆಶ್ರಯಿಸಿ 'ಯೌಗಿಕತ್ವಪಕ್ಷೇ' ಎಂದು ಗ್ರಂಥದಲ್ಲಿ ಹೇಳಿದ್ದಾರೆ. ತಾರ್ಕಿಕರು 'ಪಂಕಜ' ಶಬ್ದವನ್ನು ಯೋಗರೂಢವೆನ್ನುತ್ತಾರೆ.

ಅವರ ಪಕ್ಷವನ್ನು ಆಶ್ರಯಿಸಿ, 'ಯೋಗರೂಢತ್ವಪಕ್ಷೇ' ಎಂದಿದ್ದಾರೆ. ಘಟಪಟಸಂಯೋಗವು ಒಂದೇ ಎಂಬುದಾಗಿ ತಾರ್ಕಿಕರು ಹೇಳುತ್ತಾರೆ. ಅವರ ಮತವನ್ನು ವಿವಕ್ಷಿಸಿ 'ಏಕತ್ವೇನ' ಎಂದು ಹೇಳಿದ್ದಾರೆ. ಸ್ವಮತದಲ್ಲಿ ಘಟಸಂಯೋಗವು ಪಟದಲ್ಲಿ, ಪಟಸಂಯೋಗವು ಘಟದಲ್ಲಿ ಎಂದು ಒಂದೇ ಸಂಯೋಗವನ್ನು ಅನೇಕವೆಂದು ಒಪ್ಪಲಾಗಿದೆ.

**प्रकाशः – सम्बन्धनिमित्तदुःख्यादिशब्दे निष्ठान्ते बद्धादिशब्दे वा निमित्तसत्त्वे प्रयोगावश्यकत्वशङ्काव्युदासायायं दृष्टान्त इत्याहुः ।।**

'ದುಃಖೀ' ಎಂಬ ಶಬ್ದವು ಸಂಬಂಧಾರ್ಥವುಳ್ಳ 'ಇನ್' ಪ್ರತ್ಯಯಾಂತವಾಗಿದೆ. 'ಬದ್ಧಃ' ಎಂಬ ಶಬ್ದವು ನಿಷ್ಠಾರ್ಥದಲ್ಲಿರುವ 'ಕ' ಪ್ರತ್ಯಯಾಂತವಾದ ಶಬ್ದವಾಗಿದೆ. ಈ ಎರಡೂ ಸ್ಥಳಗಳಲ್ಲಿ ನಿಮಿತ್ತವಿದ್ದಾಗ ಪ್ರಯೋಗವನ್ನೂ ಕೂಡ ಅವಶ್ಯವಾಗಿ ಮಾಡಬೇಕೆಂಬ ಆಶಂಕೆಯು ಪ್ರಾಪ್ತವಾದರೆ ಅದನ್ನು ಪರಿಹರಿಸಲು 'ಸಂಯೋಗೀ ಘಟಃ' ಎಂಬಲ್ಲಿ ಮತ್ತು 'ಸಂಯುಕ್ತಃ ಘಟಃ' ಎಂಬಲ್ಲಿ ನಿಮಿತ್ತವಿದ್ದರೂ ಪ್ರಯೋಗಿವಿರುವುದಿಲ್ಲವೆಂದು ಉದಾಹರಣಪುರಸ್ಸರವಾಗಿ ಉತ್ತರಿಸಿದ್ದಾರೆ. ಅಂದರೆ 'ದುಃಖೀ' ಎಂಬ ಶಬ್ದದಲ್ಲಿ ಹೇಗೆ ಸಂಬಂಧಾರ್ಥಕವಾದ 'ಇನ್' ಪ್ರತ್ಯಯವಿದೆಯೋ, ಅದರಂತೆ 'ಸಂಯೋಗೀ' ಎಂಬಲ್ಲಿ ಸಂಬಂಧಾರ್ಥಕವಾಗಿ 'ಇನ್' ಪ್ರತ್ಯಯವಿದೆ. ಆದರೆ ಘಟದಲ್ಲಿ ಸಂಯೋಗವಿದ್ದರೂ ಘಟಸಂಯೋಗವನ್ನು ಘಟದಲ್ಲಿ ಯಾರೂ ಕೂಡ ಹೇಳುವುದಿಲ್ಲ. ಅದರಂತೆ 'ಬದ್ಧಃ' ಎಂಬಲ್ಲಿ ನಿಷ್ಠಾರ್ಥದಲ್ಲಿ 'ಕ್ತ' ಪ್ರತ್ಯಯವಿರುತ್ತದೆ. ಹೀಗೆ ನಿಮಿತ್ತವಿದ್ದರೂ ಘಟದಲ್ಲಿ ಸಂಯೋಗವನ್ನು ಯಾರೂಕೂಡ ಒಪ್ಪುವುದಿಲ್ಲ. ಹೀಗೆ ದೃಷ್ಟಾಂತವನ್ನು ತಿಳಿಯಬೇಕೆಂದು ನಮ್ಮಲ್ಲೇ ಕೆಲವರು ಹೇಳುತ್ತಾರೆ.

**प्रकाशः – बद्धादिशब्देति ।।** भृत्यादौ तस्य शब्दस्य जातिनिमित्तकत्वे वा यौगिकत्वे वा योगरूढत्वे वा सम्बन्धनिमित्तकत्वे वेति भावः ।।

'ಬದ್ಧಾದಿಶಬ್ದ ಅಪ್ರಯೋಗಸ್ತು' 'ಬದ್ಧಾದಿ' ಶಬ್ದದ ಪ್ರಯೋಗವು ಬರುವುದು ಬೇಡ ಎಂದು ಗ್ರಂಥದಲ್ಲಿ ಹೇಳಿದ್ದಾರೆ. ಅಂದರೆ ಭೃತ್ಯಾದಿಗಳಲ್ಲಿ 'ಬದ್ಧಃ' ಎಂಬ ಶಬ್ದವು ಜಾತಿನಿಮಿತ್ತಕವಾಗಿ, ಅಥವಾ ಯೌಗಿಕವಾಗಿ, ಅಥವಾ ಯೋಗರೂಢವಾಗಿ, ಅಥವಾ ಸಂಬಂಧನಿಮಿತ್ತಕವಾಗಿ ಬಂದರೂ ಕೂಡ ರಾಜನಲ್ಲಿ ಪ್ರವೃತ್ತಿನಿಮಿತ್ತವಿದ್ದರೂ 'ಬದ್ಧಃ' ಎಂಬ ಶಬ್ದ ಪ್ರಯೋಗವು ಇರಬೇಕಾಗಿಲ್ಲ ಎಂದಭಿಪ್ರಾಯ.

**प्रकाशः – उक्तेति ।।** "स्वतन्त्रत्वात् प्रवर्तन्ते" इति श्रुतेरित्यर्थः । श्रुतिर्लक्षणाबीजस्वस्वामिभावरूपसम्बन्धबोधेन चरितार्थेति वा विभक्तिवृत्तिनिमित्त-परा नतु शब्दवृत्ताविति वाऽन्यथासिद्धेत्यत आह – **यदधीन इति ।।**

'ಸ್ವತಂತ್ರತ್ವಾತ್ ಪ್ರವರ್ತಂತೇ' ಎಂಬ ಹಿಂದೆ ಉದಾಹರಿಸಿದ ಶ್ರುತಿಯಂತೆ ಪರಮಾತ್ಮನಲ್ಲಿಯೂ 'ಬದ್ಧಃ' 'ದುಃಖೀ' ಮೊದಲಾದ ಶಬ್ದಪ್ರಯೋಗಗಳನ್ನು ಮಾಡಬಹುದು. ಶ್ರುತಿಯು ಶಕ್ತಿವೃತ್ತಿಯಿಂದ ಪರಮಾತ್ಮನಲ್ಲಿ ದುಃಖಾದಿಶಬ್ದಗಳನ್ನು ಪ್ರಯೋಗಿಸುತ್ತಿಲ್ಲ. , ಲಕ್ಷಣಾವೃತ್ತಿಯಿಂದ ಪ್ರಯೋಗಿಸುತ್ತಿದೆ. ಲಕ್ಷಣಾ ಮಾಡಲು

ಬೀಜವನ್ನು ಸ್ವಸ್ವಾಮಿಭಾವರೂಪ ಸಂಬಂಧವನ್ನು ತಿಳಿಸುವ ಮೂಲಕ ಹೇಳುವುದರಲ್ಲಿ ಕೃತಾರ್ಥವಾಗಿದೆ. ಅಥವಾ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳ ವಿಭಕ್ತಿಗಳು ಹರಿಪರವಾಗಿವೆ ಎಂಬುದನ್ನು ತಿಳಿಸಲು ಚರಿತಾರ್ಥವಾಗಿವೆ ಹೊರತು, 'ದುಃಖೀ-ಬದ್ಧಃ' ಮೊದಲಾದ ಶಬ್ದಗಳ ಸಮನ್ವಯದ ಉದ್ದೇಶದಿಂದ ಹಾಗೇ ಹೇಳಿರುವುದಿಲ್ಲ. ಹೀಗೆ ಅನ್ಯಥಾಸಿದ್ಧಿಯೆಂಬ ದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಯದಧೀನಃ' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – अत्र भाष्योक्तस्मृतौ तद्गुणीतद्गुणनिमित्तकशब्दवाच्योऽभिधीयते इत्युक्तेरिति भावः ।। **यथोक्तमिति** ।। प्राभाकरैरित्यर्थः ।

ಭಾಷ್ಯದಲ್ಲಿ ಉದಾಹರಿಸಿದ ಸ್ಮೃತಿಯಲ್ಲಿ 'ತದ್ಗುಣೀ' ಎಂಬುದರಿಂದ ತದ್ಗುಣನಿಮಿತ್ತಕವಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂದು ಹೇಳಿದ್ದಾರೆಂದು ತಿಳಿಯಬೇಕು. 'ಯಥೋಕ್ತಮ್' ಎಂದರೆ ಪ್ರಾಭಾಕರರಿಂದ ಹೇಳಲ್ಪಟ್ಟಿದೆ ಎಂದರ್ಥ.

**प्रकाशः** – बन्धाश्रये रूढत्वेन राजादावप्रयोगे हरावपि प्रयोगो न स्यादित्यत आह – **ब्रह्मणीति** ।। "स्वतन्त्रत्वात्प्रवर्तन्ते स बद्धस्सबन्धयति" इत्यादिश्रौतरूढिरित्यर्थः । साचाङ्गरूढितोऽपि बलवतीति भावः ।

'ಬದ್ಧಃ' ಎಂಬ ಪ್ರಯೋಗವು ಬಂಧಕ್ಕೆ ಆಶ್ರಯನಾದ ಪುರುಷನಲ್ಲೇ ರೂಢವಾದ್ದರಿಂದ ರಾಜನಲ್ಲಿ ಪ್ರಯೋಗವಿರುವುದಿಲ್ಲವೆಂದು ಉತ್ತರಿಸಿದರೆ ಶ್ರೀಹರಿಯಲ್ಲಿಯೂ ಕೂಡ 'ಬದ್ಧಃ' ಇತ್ಯಾದಿ ಪ್ರಯೋಗಗಳನ್ನು ಹೇಳಲು ಹೇಗೆ ಸಾಧ್ಯ ? ಎಂಬ ಪ್ರಶ್ನೆಗೆ 'ಬ್ರಹ್ಮಣಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಸ್ವತಂತ್ರತ್ವಾತ್ ಪ್ರವರ್ತಂತೇ ಸ ಬದ್ಧಃ ಸಃ ಬಂಧಯತಿ' ಇತ್ಯಾದಿ ಶ್ರೌತರೂಢಿಯಿರುವುದರಿಂದ 'ಬದ್ಧಃ' ಇತ್ಯಾದಿ ಪ್ರಯೋಗವನ್ನು ಶ್ರೀಹರಿಯಲ್ಲಿ ಮಾಡಬಹುದು. ಅಜ್ಞರೂಢಿಗಿಂತ ಶ್ರೌತರೂಢಿಯು ಅತ್ಯಂತ ಬಲಿಷ್ಠವಾಗಿರುತ್ತದೆ.

**गुरुराजीयम्** – पक्षद्वयेऽपि स्वातन्त्र्यस्य पारिभाषिकत्वं भवतीत्यतः पक्षान्तरमाह – **अथवेति** ।। पूर्वं सामान्यतः सर्वशब्दप्रवृत्तौ स्वातन्त्र्यमित्युक्तम् । इदानीं दुःख्यादिशब्दप्रवृत्तौ स्वातन्त्र्यं निमित्तमित्यत्र प्रमाणमाह – **स बद्ध इति** ।। ननु ब्रह्मणि दुःख्यादिशब्दप्रवृत्तौ स्वातन्त्र्यं नियामकं चेद्राज्ञ्यपि तथा स्यात् । तत्र तदाश्रयत्वं निमित्तं चेद्ब्रह्मण्यपि तत्स्यादित्यत आह – **नचेति** ।। ब्रह्मणिदुःख्यादिशब्दप्रवृत्तौ स्वातन्त्र्यं निमित्तं राज्ञि तु जयिशब्दप्रवृत्तौ स्वातन्त्र्यं बद्धादिशब्दप्रयोगे तु तद्गतत्वमिति कल्पने कल्पनागौरवं स्यादिति चेन्न । प्रमाणस्योक्तत्वेन तस्यादोषत्वात् । किञ्च गौरवमपि नास्तीत्याह – **किञ्चेति** ।। **धेट इचेतीति** ।। धेट् पान इत्यस्माद्धेट इचेति नुप्रत्यये तस्य इटिचसति आदेच

उपदेशेऽशितीत्यात्त्वे गुणे च सति धेनुशब्दनिष्पत्तिरिति ज्ञेयम् । उक्तश्रुतेरिति सम्बन्धः । स बन्धयति स दुःखयतीत्युक्तश्रुतेरित्यर्थः । यदुक्तं पङ्कजादिशब्दानां यौगिकत्वपक्षे योगरूढत्वपक्षे वा कुमुदादौ प्रवृत्तिनिमित्तस्य सत्त्वेऽपि तत्र पङ्कजादिशब्दाप्रयोग इति तत्र वृत्तिनिमित्तमात्रं न शब्दप्रयोगे निमित्तम् । किन्तु पूर्वयोगविशिष्टमेव । तथाच नोक्तदोष इत्याशङ्क्ते ।। **नन्विति** ।। **यथोक्तमिति** ।। अत्र पूर्वपूर्वेषामिति उत्तरोत्तरेषामिति च शेषः। तथा च पूर्वेषामप्रयोगादेवोत्तरेषाम प्रयोग इति संमतिग्रन्थार्थः । अत्र प्रष्टव्यम् । किं बद्धादिशब्दा यौगिका उत योगरूढाः । आद्य आह – **पूर्वेति** ।। पूर्वप्रयोगसहकृतप्रवृत्तिनिमित्ताभावादेव बद्धादिशब्दाप्रयोग इति भावः । द्वितीय आह – **बद्धत्वेति** ।। राज्ञि योगप्रतिबन्धिकेति शेषः । नन्वेवं राज्ञि बद्धादिशब्दानां योगसत्त्वेऽपि बद्धत्वाश्रय-रूढेर्योगप्रतिबन्धकत्वात्तत्र बद्धादिशब्दाप्रयोग इव बद्धत्वाश्रये रूढेर्ब्रह्मण्यपि योगप्रतिबन्धकत्वाद्ब्रह्मण्यपि बद्धादिशब्दप्रयोगो न स्यादित्यत आह – **ब्रह्मणित्विति** ।। स बद्धः स दुःखीत्यादिप्रमाणोदाहरणेनेति शेषः ।



ಬದ್ಧಾದಿ ಶಬ್ದಗಳಿಗೆ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾದಲ್ಲಿ, ರಾಜನನ್ನೂ ಕೂಡ 'ಬದ್ಧಃ', 'ದುಃಖೀ' ಇತ್ಯಾದಿಯಾಗಿ ವ್ಯವಹರಿಸಬೇಕಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಬಗೆಯಲ್ಲಿ ಉತ್ತರಿಸುತ್ತಿದ್ದಾರೆ. ಲೋಕಪ್ರಯೋಗವನ್ನು ನೋಡಿಕೊಂಡು ಶಬ್ದಗಳ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕು ಹೊರತು, ಪ್ರವೃತ್ತಿನಿಮಿತ್ತವಿದೆಯೆಂದ ಮಾತ್ರದಿಂದ ಶಬ್ದಗಳನ್ನು ಆಯಾ ಪದಾರ್ಥಗಳಲ್ಲಿ ಪ್ರಯೋಗಿಸುವುದು ಮೂರ್ಖತನ. ಏಕೆಂದರೆ ಮಣ್ಣು ಎಂಬುದು ದ್ರವ್ಯವಾಗಿದ್ದರೂ ಸುವರ್ಣಾದಿಗಳನ್ನೇ ದ್ರವ್ಯವೆನ್ನುತ್ತಾರೆ. ಅಥವಾ ತಾರ್ಕಿಕರು ದ್ವೇಷವನ್ನು ಗುಣವೆಂದು ಒಪ್ಪಿದರೂ ಲೋಕದಲ್ಲಿ ಯಾರೂ ಸಹ ದ್ವೇಷವನ್ನು ಗುಣವೆಂದು ಹೇಳುವುದಿಲ್ಲ ಜ್ಞಾನಾದಿಗಳನ್ನೇ ಗುಣವೆನ್ನುತ್ತಾರೆ. ಅಥವಾ 'ಧಾನಕರ್ಮತ್ವ' ಎಂಬ ಧೇನುಶಬ್ದದ ಪ್ರವೃತ್ತಿನಿಮಿತ್ತವು ಮಹಿಷ್ಯಾದಿಗಳಲ್ಲಿದ್ದರೂ ಹಸುಗಳನ್ನಷ್ಟೇ ಧೇನುವೆಂದು ವ್ಯವಹರಿಸುತ್ತಾರೆ. ಕುಂಬಾರನಲ್ಲಿ ಉದಂಚನ ಕರ್ತೃತ್ವ ಎಂಬ ಪ್ರವೃತ್ತಿನಿಮಿತ್ತವಿದ್ದರೂ ಉದಂಚನಕಾರನೆಂದು ಯಾರೂ ವ್ಯವಹರಿಸುವುದಿಲ್ಲ. ಆದ್ದರಿಂದ ಲೋಕವ್ಯವಹಾರ ಹೇಗಿರುತ್ತದೋ, ಅದಕ್ಕನುಗುಣವಾಗಿ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕಾಗುತ್ತದೆ. ಹೊರತು ಪ್ರವೃತ್ತಿನಿಮಿತ್ತವಿದ್ದ ಮಾತ್ರದಿಂದ ವ್ಯವಹರಿಸಲು ಹೊರಟರೆ, ಎಮ್ಮೆಯನ್ನೂ ಕೂಡ ಧೇನುವೆಂದು ಕರೆಯಬೇಕಾಗುತ್ತದೆ. ದ್ವೇಷವನ್ನೂ ಕೂಡ ಗುಣವೆಂದು ಕರೆಯಬೇಕಾಗುತ್ತದೆ.

## ವ್ಯಾಕರಣಶಾಸ್ತ್ರದ ದೃಷ್ಟಾಂತದಿಂದ ಬದ್ಧಾದಿ ಶಬ್ದ ಪ್ರಯೋಗದ ಸಮರ್ಥನೆ

**तात्पर्यचन्द्रिका**

**किञ्च व्याकरणे त्वामतिक्रान्तानामित्याद्यर्थे अतित्वाकमतित्वयामित्यादयः, मामतिक्रान्तानामित्याद्यर्थे अतिमाकमतिमयामित्यादयश्च लक्षणतो व्युत्पादिताः ।**

ಅನುವಾದ - ಮತ್ತು ವಾಕ್ಯರಣ ಶಾಸ್ತ್ರದಲ್ಲಿ 'ತ್ವಾಮತಿಕ್ರಾಂತಾನಾಮ್' 'ನಿನ್ನನ್ನು ದಾಟಿದವರಿಗೆ' ಎಂಬರ್ಥದಲ್ಲಿ 'ಅತಿತ್ವಾಕಮ್' ಎಂಬುದಾಗಿ ಅಥವಾ 'ಅತಿತ್ವಯಾಮ್' ಎಂಬುದಾಗಿ ಪ್ರಯೋಗಿಸಲಾಗಿದೆ. ಅದರಂತೆ 'ನನ್ನನ್ನು ಅತಿಕ್ರಮಣ ಮಾಡಿದವರಿಗೆ' ಎಂಬರ್ಥದಲ್ಲಿ 'ಅತಿಮಾಕಮ್' ಎಂಬುದಾಗಿ, ಅಥವಾ 'ಅತಿಮಯಾಮ್' ಎಂಬುದಾಗಿ ಶಬ್ದವನ್ನು ನಿಷ್ಪತ್ತಿ ಮಾಡಲಾಗಿದೆ.

**नच तेषां प्रयोगोऽस्ति । तद्वदिहाप्यस्तु ।**

ಆದರೆ ಲೋಕದಲ್ಲಿ ಎಲ್ಲಿಯೂ ಕೂಡ 'ಅತಿತ್ವಾಕಮ್' 'ಅತಿತ್ವಯಾಮ್' 'ಅತಿಮಾಕಮ್' 'ಅತಿಮಯಾಮ್' ಈ ಶಬ್ದಗಳ ಪ್ರಯೋಗವಿರುವುದಿಲ್ಲ. ಅದರಂತೆ ಪ್ರಕೃತ ರಾಜನಲ್ಲಿ ಬದ್ಧಾದಿ ಶಬ್ದಗಳ ಪ್ರವೃತ್ತಿನಿಮಿತ್ತವಿದ್ದರೂ ಪ್ರಯೋಗವಿರಬೇಕಾಗಿಲ್ಲ.

**अदर्शनेऽपि व्याकरणस्मृत्या व्युत्पादितत्वात् प्रयोगयोग्यताऽस्तीति चेत्तर्हीहाप्यत्त्या श्रुत्या स्मृत्या च व्युत्पादितत्वाद्योग्यताऽस्तीति समम् ।**

'ಅತಿತ್ವಾಕಮ್' ಇವೇ ಮೊದಲಾದ ಶಬ್ದಪ್ರಯೋಗಗಳು ಲೋಕದಲ್ಲಿ ಕಾಣದೇ ಇದ್ದರೂ ವ್ಯಾಕರಣಸ್ಮೃತಿಯಲ್ಲಿ ರೂಪನಿಷ್ಪತ್ತಿಗಳನ್ನು ಮಾಡಿದ್ದಾರೆ. ಇದರಿಂದ ಆ ಶಬ್ದಗಳನ್ನು ಎಲ್ಲಿಯಾದರೂ ಪ್ರಯೋಗಿಸಿರುತ್ತಾರೆ. ಅಥವಾ ಪ್ರಯೋಗಿಸಲು ಅರ್ಹವಾಗಿವೆ ಎಂದು ಹೇಳಬಹುದಲ್ಲವೇ? ಎಂದರೆ ಪ್ರಕೃತದಲ್ಲಿಯೂ ಇದು ಸಮಾನ. ಈಗಾಗಲೇ ನಾವು ಉಲ್ಲೇಖಿಸಿದ ಶ್ರುತಿಗಳಿಂದ ಹಾಗೂ ಸ್ಮೃತಿಗಳಿಂದ ಬದ್ಧಾದಿಶಬ್ದಗಳ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ಎಲ್ಲಿ ಇರುತ್ತದೋ, ಅಲ್ಲಿ ಆ ಶಬ್ದಗಳನ್ನು ಪ್ರಯೋಗಿಸಬಹುದು. ಬದ್ಧಾದಿ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಸ್ವಾತಂತ್ರ್ಯಾದಿಗಳು ರಾಜನಲ್ಲಿರುವುದರಿಂದ 'ಬದ್ಧ' ಶಬ್ದಪ್ರಯೋಗದ ಯೋಗ್ಯತೆಯು ಅವನಲ್ಲಿ ಇರಬಹುದೆಂದು ಉತ್ತರಿಸುತ್ತೇವೆ.

**प्रकाशः –**

स्वातन्त्र्यस्य निमित्तत्वे राज्ञि बद्धादिशब्दप्रयोगापातं प्रकारान्तरेण परिहरति ॥ **किञ्च व्याकरण इति ॥**

ವಿವರಣೆ - ಸ್ವಾತಂತ್ರ್ಯವನ್ನೇ ಪ್ರವೃತ್ತಿನಿಮಿತ್ತವೆಂದು ಹೇಳಿದರೆ ರಾಜನಲ್ಲಿ 'ಬದ್ಧಃ' ಇತ್ಯಾದಿ ಪ್ರಯೋಗಗಳು ಬರಬೇಕಾದೀತು ಎಂಬ ಆಕ್ಷೇಪವನ್ನು ಮತ್ತೊಂದು ಬಗೆಯಲ್ಲಿ ಪರಿಹರಿಸುತ್ತಿದ್ದಾರೆ 'ಕಿಂಚ ವ್ಯಾಕರಣೇ' ಇತ್ಯಾದಿ ಗ್ರಂಥದಿಂದ.

**प्रकाशः – अतित्वाकमिति ।। अतियुष्मत् आम् इति स्थिते ''त्वमावेकवचने'' इति मपर्यन्तस्य त्वादेशेकृते ''आमि सर्वनाम्नस्सुट्'' इति सुडागमे ''साम आकम्'' इत्याकमादेशे शेषे लोपे च सत्यतित्वाकमिति रूपम् ।**

ವ್ಯಾಕರಣಶಾಸ್ತ್ರದಲ್ಲಿ 'ನಿನ್ನನ್ನು ದಾಟಿರುವ' ಎಂಬರ್ಥದಲ್ಲಿ 'ಅತಿತ್ವಾಕಮ್' 'ಅತಿತ್ವಯಾಮ್' ಇವೇ ಮೊದಲಾದ ಪ್ರಯೋಗಗಳನ್ನು ಮಾಡಲಾಗಿದೆ. 'ಅತಿತ್ವಾಕಮ್' ಎಂಬ ಶಬ್ದದ ನಿಷ್ಪತ್ತಿಯನ್ನು ಹೀಗೆ ತಿಳಿಯಬೇಕು - 'ಯುಷ್ಮತ್' ಶಬ್ದದ ಮೊದಲು 'ಅತಿಕ್ರಾಂತ' ಎಂಬರ್ಥದಲ್ಲಿ 'ಅತಿ' ಎಂಬ ಉಪಪದ ಬರುತ್ತದೆ. ಅನಂತರ ಷಷ್ಠೀವಿಭಕ್ತಿಯ ಬಹುವಚನದ ಪ್ರತ್ಯಯವೆನಿಸಿದ 'ಆಮ್' ಎಂಬುದು ಪ್ರಾತಿಪದಿಕಕ್ಕೆ ಬರುತ್ತದೆ. ಆವಾಗ 'ಅತಿ ಯುಷ್ಮತ್ ಆಮ್' ಎಂದಾಗುತ್ತದೆ. ಅನಂತರ 'ತ್ವಮಾವೇಕವಚನೇ' ಎಂಬ ಸೂತ್ರದಿಂದ ಮಕಾರದ ತನಕ ಇರುವ 'ಯುಷ್ಮತ್' ಶಬ್ದಕ್ಕೆ 'ತ್ವ' ಎಂಬ ಆದೇಶವು ಬರುತ್ತದೆ. ಆವಾಗ 'ಯುಷ್ಮ' ಎಂಬುದು ಹೋಗಿ 'ತ್ವ' ಎಂಬ ಆದೇಶ ಬಂದು 'ಅತಿ-ತ್ವಾತ್-ಆಮ್' ಎಂದಾಗುತ್ತದೆ. ಅನಂತರ 'ಆಮಿ ಸರ್ವನಾಮ್ನಃ ಸುಟ್' ಎಂಬ ಸೂತ್ರದಿಂದ 'ಆಮ್' ಪ್ರತ್ಯಯಪರದಲ್ಲಿದ್ದಾಗ ಸರ್ವನಾಮಶಬ್ದಗಳಿಗೆ 'ಸುಟ್' ಎಂಬ ಆಗಮವು ಪ್ರಾಪ್ತವಾಗುತ್ತದೆ. ಟಿತ್ತಾದ್ದರಿಂದ ಆದ್ಯವಯವಾಗಿ ಬಂದರೆ, 'ಅತಿ-ತ್ವಾತ್-ಸಾಮ್' ಎಂದಾಗುತ್ತದೆ. ಅನಂತರ 'ಸಾಮ ಆಕಮ್' ಎಂಬ ಸೂತ್ರದಿಂದ 'ಸಾಮ್' ಎಂಬುದಕ್ಕೆ 'ಆಕಮ್' ಎಂಬುದು ಆದೇಶವಾಗಿ ಬಂದರೆ 'ಅತಿತ್ವಾತ್ ಆಕಮ್' ಎಂದಾಗುತ್ತದೆ. ಅನಂತರ 'ಶೇಷೇ ಲೋಪಃ' ಎಂಬುದರಿಂದ 'ಅತ್' ಎಂಬುದು ಲೋಪವಾದರೆ, 'ಅತಿತ್ವಾಕಮ್' ಎಂಬ ರೂಪವು ಸಿದ್ಧವಾಗುತ್ತದೆ.

**प्रकाशः – मतान्तरे तु गौणतायामसर्वनामत्वेन सुडभावात् ''साम आकम्'' इत्यस्याप्रवृत्तेः ''योऽचि'' इति यकारादेशे अतित्वयामिति सिध्यति ।**

ವೈಯಾಕರಣರಲ್ಲಿ ಕೆಲವರು ಇದನ್ನು ಸರ್ವನಾಮಶಬ್ದವೆಂದು ಒಪ್ಪುವುದಿಲ್ಲ. ಏಕೆಂದರೆ 'ನೀನು', 'ನಾನು' ಇತ್ಯಾದ್ಯರ್ಥದಲ್ಲಿ ಸರ್ವನಾಮವಾಗುತ್ತದೆ ಹೊರತು, ನಿನ್ನನ್ನು ಮೀರಿದವನು ಎಂಬರ್ಥದಲ್ಲಿ ಸರ್ವನಾಮಸಂಜ್ಞೆ ಬರಲು ಸಾಧ್ಯವಿಲ್ಲ. ಆದ್ದರಿಂದ ಈ ಶಬ್ದವು ಗೌಣವಾದ್ದರಿಂದ ಅಸರ್ವನಾಮವೆನಿಸುತ್ತದೆ. ಹಾಗಾಗಿ 'ಆಮಿ ಸರ್ವನಾಮ್ನಃ ಸುಟ್' ಎಂಬ ಸೂತ್ರದಿಂದ ಸುಟ್ ಆಗಮವೂ ಕೂಡ ಪ್ರಾಪ್ತವಾಗುವುದಿಲ್ಲ ಇವರ ಪಕ್ಷದಲ್ಲಿ 'ಯುಷ್ಮತ್' ಶಬ್ದಕ್ಕೆ 'ಅತಿ' ಎಂಬ ಉಪಪದವು ಕೂಡಿದಾಗ 'ತ್ವಮಾವೇಕವಚನೇ' ಎಂಬ ಸೂತ್ರದಿಂದ 'ತ್ವ' ಆದೇಶವು ಬಂದಮೇಲೆ 'ಅತಿ-ತ್ವಾತ್-ಆಮ್' ಎಂದಾಗುತ್ತದೆ. ಅನಂತರ ಸುಟ್ ಆಗಮವು ಪ್ರಾಪ್ತವಾಗದ ಕಾರಣ 'ಸಾಮ ಆಕಮ್' ಎಂಬ ಸೂತ್ರದಿಂದ 'ಆಕಮ್' ಎಂಬ ಪ್ರತ್ಯಯವೂ ಕೂಡ ಬರುವುದಿಲ್ಲ. 'ಯೋಽಚಿ' ಎಂಬ ಸೂತ್ರವು ಅಚಕ್ಷರಪರದಲ್ಲಿದ್ದಾಗ ಕೊನೆಯಲ್ಲಿರುವ 'ಅತ್' ಎಂಬುದಕ್ಕೆ 'ಯ'ಕಾರವನ್ನು ವಿಧಿಸುತ್ತದೆ. ಆವಾಗ 'ಅತಿತ್ವಯಾಮ್' ಎಂಬ ರೂಪವು ಸಿದ್ಧವಾಗುತ್ತದೆ.

**प्रकाशः – एवमस्मच्छब्देऽप्युक्तप्रक्रियायामतिमाकमतिमयामिति षष्ठीबहुवचने रूपं भवति ।।**

ಹೀಗೆ 'ಯುಷ್ಮತ್' ಶಬ್ದದಲ್ಲಿ 'ಅತಿತ್ವಾಕಮ್' ಮತ್ತು 'ಅತಿತ್ವಯಾಮ್' ಎಂಬ ರೂಪಗಳ ನಿಷ್ಪತ್ತಿಯನ್ನು ತಿಳಿದಂತೆ 'ಅಸ್ಮತ್' ಶಬ್ದದಲ್ಲಿಯೂ ಕೂಡ 'ತ್ವಮಾವೇಕವಚನೇ' ಇತ್ಯಾದಿ ಸೂತ್ರಗಳು ಪ್ರಾಪ್ತವಾಗಿ 'ಅತಿಮಾಕಮ್' 'ಅತಿಮಯಾಮ್' ಎಂಬೆರಡು ರೂಪಗಳ ನಿಷ್ಪತ್ತಿಯನ್ನು ತಿಳಿದುಕೊಳ್ಳಬೇಕು. ಇವೆರಡೂ ಸಹ ಷಷ್ಠೀವಿಭಕ್ತಿಯ ಬಹುವಚನ ರೂಪಗಳೇ ಆಗಿರುತ್ತವೆ.

ಹೀಗೆ ವ್ಯಾಕರಣದಲ್ಲಿ 'ಅತಿತ್ವಾಕಮ್' ಇತ್ಯಾದಿ ರೂಪಗಳ ನಿಷ್ಪತ್ತಿಯನ್ನು ಮಾಡಿದ್ದಾರೆ. ಆದರೆ ಲೋಕದಲ್ಲಿ ಯಾರೂ ಸಹ ಇದನ್ನು ಪ್ರಯೋಗ ಮಾಡುವುದಿಲ್ಲ. ಆದ್ದರಿಂದ ಶಬ್ದವು ಇರುವ ಮಾತ್ರದಿಂದ ಪ್ರಯೋಗಿಸಬೇಕೆಂದೇನೂ ನಿಯಮವಿರುವುದಿಲ್ಲ.

**प्रकाशः – लक्षणत इति ।। ''त्वमावेकवचने'' इत्यत्र ''वक्तीति वचनं कृत्यल्युटो बहुलमिति कर्तरि ल्युटि कृते एकस्यार्थस्य वचने युष्मदस्मदि'' इत्युक्त्या एकत्वाद्यर्थवाचिवचनग्रहणाद् व्युत्पादिताः । ''साम आकम्'' इत्यादिसामान्यलक्षणतश्च व्युत्पादिता इत्यर्थः ।। नच तेषामिति ।।**

ಗ್ರಂಥದಲ್ಲಿ 'ಲಕ್ಷಣತಃ ವ್ಯುತ್ಪಾದಿತಃ' ಎಂಬುದಾಗಿ ಸೂತ್ರಗಳಿಂದ ಈ ರೂಪಗಳ ನಿಷ್ಪತ್ತಿಯನ್ನು ಮಾಡಲಾಗಿದೆಯೆಂದು ಹೇಳಿದ್ದಾರೆ. ಅದು ಹೀಗೆ - 'ತ್ವಮಾವೇಕವಚನೇ' ಎಂಬ ಸೂತ್ರದಲ್ಲಿ 'ಏಕವಚನೇ' ಎಂಬ ಶಬ್ದಗ್ರಹಣದಿಂದ ಈ ರೂಪಗಳು ಸಿದ್ಧವಾಗಿವೆ. ವಾಸ್ತವಿಕವಾಗಿ ವಚನ ಶಬ್ದವು ಲ್ಯುಡಂತವಾಗಿದೆ. 'ಲ್ಯುಟ್' ಪ್ರತ್ಯಯವು 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಂತೆ ಕರಣ, ಅಧಿಕರಣ ಹಾಗೂ ಭಾವಾರ್ಥದಲ್ಲಿ ಬರುತ್ತದೆ. ಆದರೂ 'ಕೃತ್ಯಲ್ಯುಟೋ ಬಹುಲಂ' ಎಂಬಲ್ಲಿ ಬಹುಲ ಗ್ರಹಣವನ್ನು ಮಾಡಿದ್ದರಿಂದ ಕರ್ತೃತ್ವಾರ್ಥದಲ್ಲಿಯೂ ಲ್ಯುಟ್ ಪ್ರತ್ಯಯವು ಬರುತ್ತದೆ. ಆದ್ದರಿಂದ ಪ್ರಕೃತ ಇಲ್ಲಿರುವ 'ಏಕವಚನೇ' ಎಂಬ ಶಬ್ದವು 'ಏಕಸ್ಯ ಅರ್ಥಸ್ಯ ವಚನೇ' ಎಂಬ ನಿಷ್ಪತ್ತಿಯಿಂದ ಒಂದು ಅರ್ಥವನ್ನು ಹೇಳುವ 'ಯುಷ್ಮತ್' ಶಬ್ದ ಹಾಗೂ 'ಅಸ್ಮತ್' ಶಬ್ದ ಎಂಬರ್ಥವನ್ನು ನೀಡುತ್ತದೆ. ಆದ್ದರಿಂದ 'ತ್ವಮಾವೇಕವಚನೇ' ಎಂಬ ಸೂತ್ರದಲ್ಲಿ 'ವಕ್ತೀತಿ ವಚನಂ ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಲ್ಯುಟಿ ಕೃತೇ ಏಕಸ್ಯಾರ್ಥಸ್ಯ ವಚನೇ ಯುಷ್ಮದಸ್ಮದಿ' ಎಂದು.

ಪ್ರಶ್ನೆ - 'ತ್ವಮಾವೇಕವಚನೇ' ಎಂಬ ಸೂತ್ರದಲ್ಲಿ 'ಮ' ಎಂಬ ಅಕ್ಷರದ ತನಕ ಇರುವ 'ಯುಷ್ಮತ್' ಶಬ್ದಕ್ಕೆ 'ತ್ವ' ಎಂಬ ಆದೇಶವನ್ನು ಏಕವಚನದಲ್ಲಿ ಹೇಳಲಾಗಿದೆ. ಆದರೆ 'ಅತಿತ್ವಾಕಮ್' ಎಂಬಲ್ಲಿ 'ಆಮ್' ಎಂಬ ಬಹುವಚನ ಪ್ರತ್ಯಯವು ಪರದಲ್ಲಿದೆ. ಹೀಗಿರುವಾಗ 'ತ್ವಮಾವೇಕವಚನೇ' ಎಂಬ ಸೂತ್ರದಿಂದ 'ತ್ವ' ಎಂಬ ಆದೇಶವನ್ನು ಹೇಗೆ ಹೇಳುತ್ತೀರಿ?

ಉತ್ತರ - ಹೀಗೆ ಪ್ರಶ್ನಿಸಬಾರದು. ಈಗಾಗಲೇ ಹೇಳಿದಂತೆ 'ಏಕವಚನೇ' ಎಂಬ ಪದಕ್ಕೆ ಏಕವಚನ ಪ್ರತ್ಯಯವು ಪರದಲ್ಲಿರುವಾಗ ಎಂದರ್ಥವಲ್ಲ. ಒಂದು ಅರ್ಥವನ್ನು ಹೇಳುವ 'ಯುಷ್ಮದಸ್ಮದ್' ಶಬ್ದಗಳಿಗೆ

'ತ್ವ' ಮತ್ತು 'ಮ' ಎಂಬೆರಡು ಆದೇಶಗಳು ಬರುತ್ತವೆಂದು ಸೂತ್ರದ ಅಭಿಪ್ರಾಯ. ಪ್ರಕೃತ 'ತ್ವಾಂ ಅತಿಕ್ರಾಂತಾನಾಮ್' ಎಂಬಲ್ಲಿ ಒಂದೇ ಅರ್ಥವನ್ನು 'ಯುಷ್ಮತ್' ಶಬ್ದವು ಹೇಳುತ್ತಿರುವುದರಿಂದ 'ತ್ವ' ಎಂಬ ಆದೇಶವು ಬಂದಿದೆ. ಆದರೆ 'ಯುಷ್ಮಾನ್ ಅತಿಕ್ರಾಂತಾನಾಮ್' ಎಂಬಲ್ಲಿ 'ತ್ವ' ಎಂಬ ಆದೇಶವು ಬರುವುದಿಲ್ಲ. ಏಕೆಂದರೆ ಇಲ್ಲಿರುವ 'ಯುಷ್ಮತ್' ಶಬ್ದವು 'ಯುಷ್ಮಾನ್' ಎಂಬುದಾಗಿ ಅನೇಕ ವ್ಯಕ್ತಿಗಳನ್ನು ಹೇಳುತ್ತಿರುವುದರಿಂದ ಒಂದೇ ಅರ್ಥವು ಪ್ರತಿಪಾದ್ಯವಾಗಿಲ್ಲ.

ಇಷ್ಟು ವಿಷಯವು ಸೂತ್ರದಲ್ಲಿ ಮಾಡಿದ ವಚನಗ್ರಹಣದಿಂದ ಲಭ್ಯವಾಗಿದೆ.

ಗ್ರಂಥದಲ್ಲಿರುವ 'ಲಕ್ಷಣತಃ ವ್ಯುತ್ಪಾದಿತಃ' ಎಂಬುದಕ್ಕೆ ತ್ವಮಾವೇಕವಚನೇ ಎಂಬ ಸೂತ್ರದಿಂದ ವ್ಯುತ್ಪತ್ತಿ ಮಾಡಲಾಗಿದೆಯೆಂಬುದು ಒಂದು ಅರ್ಥ. ಮತ್ತೊಂದು ಅರ್ಥ - 'ಸಾಮ ಆಕಮ್' ಎಂಬ ಸಾಮಾನ್ಯ ಸೂತ್ರದಿಂದಲೂ 'ಅತಿತ್ವಾಕಮ್' ಇತ್ಯಾದಿ ರೂಪಗಳು ನಿಷ್ಪನ್ನವಾಗಿವೆ ಎಂದು.

**ಪ್ರಕಾಶಃ – ननु महाभाष्ये पस्पशाग्रन्थे ऊष तेर चक्र इत्यादिलिण्मध्यमपुरुष-बहुवचनान्तशब्दानामप्रयोगमाशङ्क्य "सर्वे देशान्तरे" इत्यनेन सर्वशब्दानां प्रयोगोऽस्तीत्युक्तम् । तत्कथमेवमुक्तमिति चेत्**

ಶಂಕೆ - 'ಅತಿತ್ವಾಕಮ್' 'ಅತಿತ್ವಯಾಮ್' ಇವೇ ಮೊದಲಾದ ಪ್ರಯೋಗಗಳು ಲೋಕದಲ್ಲಿ ಎಲ್ಲೂ ಸಹ ಇರುವುದಿಲ್ಲವೆಂದು ಹೇಳುತ್ತಿದ್ದೀರಿ. ಇದು ತಪ್ಪು. ಏಕೆಂದರೆ ಮಹಾಭಾಷ್ಯದಲ್ಲಿ ಪತಂಜಲಿಕಾರರು 'ಪಸ್ಪಶಾಹ್ನಿಕ' ಗ್ರಂಥದಲ್ಲಿ ವ್ಯಾಕರಣದಲ್ಲಿ ನಿಷ್ಪತ್ತಿ ಮಾಡಿದ ಯಾವುದೇ ಶಬ್ದಗಳೂ ಕೂಡ ಅಪ್ರಸಿದ್ಧವಲ್ಲವೆಂದು ಸಾಧಿಸಿದ್ದಾರೆ. ಉದಾಹರಣೆ - 'ವಸ ನಿವಾಸೇ' ಧಾತುವಿನ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನದಲ್ಲಿ 'ಊಷ' ಎಂಬ ರೂಪವು ಸಿದ್ಧವಾಗುತ್ತದೆ. ಇದನ್ನು ಲೋಕದಲ್ಲಿ ಯಾರೂ ಸಹ ಪ್ರಯೋಗಿಸುವುದಿಲ್ಲ. 'ಊಷ' ಎಂದು ಪ್ರಯೋಗಿಸುವ ಬದಲು 'ಕ್ವ ಯೂಯಂ ಉಷಿತಾಃ' 'ನೀವು ಎಲ್ಲಿ ವಾಸವಾಗಿದ್ದಿರಿ?' ಎಂದೇ ಪ್ರಯೋಗಿಸುತ್ತಾರೆ. ಅದರಂತೆ ಕೃಧಾತುವಿನ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನದಲ್ಲಿ 'ತೇರ' ಎಂಬ ರೂಪವು ಸಿದ್ಧವಾಗುತ್ತದೆ. ಇದನ್ನೂ ಸಹ ಲೋಕದಲ್ಲಿ ಯಾರೂ ಕೂಡ ಪ್ರಯೋಗಿಸುವುದಿಲ್ಲ. ಇದರ ಬದಲು 'ಕ್ವ ಯೂಯಂ ತೀರ್ಣಾಃ' 'ನೀವು ಎಲ್ಲಿ ದಾಟಿದಿರಿ ?' ಎಂದು ಪ್ರಶ್ನಿಸುತ್ತಾರೆ. ಇದರಂತೆ 'ಕೃನ್' ಧಾತುವಿನ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನದಲ್ಲಿ 'ಚಕ್ರ' ಎಂಬ ರೂಪವು ಸಿದ್ಧವಾಗುತ್ತದೆ. ಇದನ್ನೂ ಕೂಡ ಯಾರೂ ಪ್ರಯೋಗಿಸದೇ ಇದರ ಬದಲು 'ಕ್ವ ಯೂಯಂ ಕೃತವಂತಃ' 'ನೀವು ಎಲ್ಲಿ ಮಾಡಿದಿರಿ?' ಎಂದೇ ಪ್ರಯೋಗಿಸುತ್ತಾರೆ. ಆದ್ದರಿಂದ 'ಊಷ' 'ತೇರ' 'ಚಕ್ರ' ಇವೇ ಮೊದಲಾದ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನ ಪ್ರಯೋಗಗಳು ಎಲ್ಲಿಯೂ ಕಾಣಿಸುತ್ತಿಲ್ಲ. ಆದ್ದರಿಂದ ಈ ಶಬ್ದಗಳ ರೂಪನಿಷ್ಪತ್ತಿಯನ್ನು ವ್ಯಾಕರಣಶಾಸ್ತ್ರದಲ್ಲಿ ಏಕೆ ತೋರಿಸಬೇಕು? ಎಂಬುದಾಗಿ. ಹೀಗೆ ಮಹಾಭಾಷ್ಯದಲ್ಲಿ ಆಕ್ಷೇಪ ಮಾಡಿಕೊಂಡು ವಾರ್ತಿಕಕಾರರು ಹೀಗೆ ಉತ್ತರಿಸುತ್ತಾರೆ -

'ಸರ್ವೇ ದೇಶಾಂತರೇ'[೧] (ವಾರ್ತಿಕ)

(೧) "ಸರ್ವೇ ಖಲು ಅಪಿ ಏತೇ ಶಬ್ದಾಃ ದೇಶಾಂತರೇ ಪ್ರಯುಜ್ಯಂತೇ । ನಚೈತೇ ಉಪಲಭ್ಯಂತೇ । ಉಪಲಬ್ಧೌ ಯತ್ನಃ ಆನುಮಾನಿಕಾಧಿಕರಣ (೧-೪-೧)

**प्रकाशः – एवमस्मच्छब्देऽप्युक्तप्रक्रियायामतिमाकमतिमयामिति षष्ठीबहुवचने रूपं भवति ।।**

ಹೀಗೆ 'ಯುಷ್ಮತ್' ಶಬ್ದದಲ್ಲಿ 'ಅತಿತ್ವಾಕಮ್' ಮತ್ತು 'ಅತಿತ್ವಯಾಮ್' ಎಂಬ ರೂಪಗಳ ನಿಷ್ಪತ್ತಿಯನ್ನು ತಿಳಿದಂತೆ 'ಅಸ್ಮತ್' ಶಬ್ದದಲ್ಲಿಯೂ ಕೂಡ 'ತ್ವಮಾವೇಕವಚನೇ' ಇತ್ಯಾದಿ ಸೂತ್ರಗಳು ಪ್ರಾಪ್ತವಾಗಿ 'ಅತಿಮಾಕಮ್' 'ಅತಿಮಯಾಮ್' ಎಂಬೆರಡು ರೂಪಗಳ ನಿಷ್ಪತ್ತಿಯನ್ನು ತಿಳಿದುಕೊಳ್ಳಬೇಕು. ಇವೆರಡೂ ಸಹ ಷಷ್ಠೀವಿಭಕ್ತಿಯ ಬಹುವಚನ ರೂಪಗಳೇ ಆಗಿರುತ್ತವೆ.

ಹೀಗೆ ವ್ಯಾಕರಣದಲ್ಲಿ 'ಅತಿತ್ವಾಕಮ್' ಇತ್ಯಾದಿ ರೂಪಗಳ ನಿಷ್ಪತ್ತಿಯನ್ನು ಮಾಡಿದ್ದಾರೆ. ಆದರೆ ಲೋಕದಲ್ಲಿ ಯಾರೂ ಸಹ ಇದನ್ನು ಪ್ರಯೋಗ ಮಾಡುವುದಿಲ್ಲ. ಆದ್ದರಿಂದ ಶಬ್ದವು ಇರುವ ಮಾತ್ರದಿಂದ ಪ್ರಯೋಗಿಸಬೇಕೆಂದೇನೂ ನಿಯಮವಿರುವುದಿಲ್ಲ.

**प्रकाशः – लक्षणत इति ।। ''त्वमावेकवचने'' इत्यत्र ''वक्तीति वचनं कृत्यल्युटो बहुलमिति कर्तरि ल्युटि कृते एकस्यार्थस्य वचने युष्मदस्मदि'' इत्युक्त्या एकत्वाद्यर्थवाचिवचनग्रहणाद् व्युत्पादिताः । ''साम आकम्'' इत्यादिसामान्यलक्षणतश्च व्युत्पादिता इत्यर्थः ।। नच तेषामिति ।।**

ಗ್ರಂಥದಲ್ಲಿ 'ಲಕ್ಷಣತಃ ವ್ಯುತ್ಪಾದಿತಃ' ಎಂಬುದಾಗಿ ಸೂತ್ರಗಳಿಂದ ಈ ರೂಪಗಳ ನಿಷ್ಪತ್ತಿಯನ್ನು ಮಾಡಲಾಗಿದೆಯೆಂದು ಹೇಳಿದ್ದಾರೆ. ಅದು ಹೀಗೆ - 'ತ್ವಮಾವೇಕವಚನೇ' ಎಂಬ ಸೂತ್ರದಲ್ಲಿ 'ಏಕವಚನೇ' ಎಂಬ ಶಬ್ದಗ್ರಹಣದಿಂದ ಈ ರೂಪಗಳು ಸಿದ್ಧವಾಗಿವೆ. ವಾಸ್ತವಿಕವಾಗಿ ವಚನ ಶಬ್ದವು ಲ್ಯುಡಂತವಾಗಿದೆ. 'ಲ್ಯುಟ್' ಪ್ರತ್ಯಯವು 'ಕರಣಾಧಿಕರಣಯೋಶ್ಚ' ಎಂಬ ಸೂತ್ರದಂತೆ ಕರಣ, ಅಧಿಕರಣ ಹಾಗೂ ಭಾವಾರ್ಥದಲ್ಲಿ ಬರುತ್ತದೆ. ಆದರೂ 'ಕೃತ್ಯಲ್ಯುಟೋ ಬಹುಲಂ' ಎಂಬಲ್ಲಿ ಬಹುಲ ಗ್ರಹಣವನ್ನು ಮಾಡಿದ್ದರಿಂದ ಕರ್ತೃತ್ವಾರ್ಥದಲ್ಲಿಯೂ ಲ್ಯುಟ್ ಪ್ರತ್ಯಯವು ಬರುತ್ತದೆ. ಆದ್ದರಿಂದ ಪ್ರಕೃತ ಇಲ್ಲಿರುವ 'ಏಕವಚನೇ' ಎಂಬ ಶಬ್ದವು 'ಏಕಸ್ಯ ಅರ್ಥಸ್ಯ ವಚನೇ' ಎಂಬ ನಿಷ್ಪತ್ತಿಯಿಂದ ಒಂದು ಅರ್ಥವನ್ನು ಹೇಳುವ 'ಯುಷ್ಮತ್' ಶಬ್ದ ಹಾಗೂ 'ಅಸ್ಮತ್' ಶಬ್ದ ಎಂಬರ್ಥವನ್ನು ನೀಡುತ್ತದೆ. ಆದ್ದರಿಂದ 'ತ್ವಮಾವೇಕವಚನೇ' ಎಂಬ ಸೂತ್ರದಲ್ಲಿ 'ವಕ್ತೀತಿ ವಚನಂ ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಲ್ಯುಟಿ ಕೃತೇ ಏಕಸ್ಯಾರ್ಥಸ್ಯ ವಚನೇ ಯುಷ್ಮದಸ್ಮದಿ' ಎಂದು.

ಪ್ರಶ್ನೆ - 'ತ್ವಮಾವೇಕವಚನೇ' ಎಂಬ ಸೂತ್ರದಲ್ಲಿ 'ಮ' ಎಂಬ ಅಕ್ಷರದ ತನಕ ಇರುವ 'ಯುಷ್ಮತ್' ಶಬ್ದಕ್ಕೆ 'ತ್ವ' ಎಂಬ ಆದೇಶವನ್ನು ಏಕವಚನದಲ್ಲಿ ಹೇಳಲಾಗಿದೆ. ಆದರೆ 'ಅತಿತ್ವಾಕಮ್' ಎಂಬಲ್ಲಿ 'ಆಮ್' ಎಂಬ ಬಹುವಚನ ಪ್ರತ್ಯಯವು ಪರದಲ್ಲಿದೆ. ಹೀಗಿರುವಾಗ 'ತ್ವಮಾವೇಕವಚನೇ' ಎಂಬ ಸೂತ್ರದಿಂದ 'ತ್ವ' ಎಂಬ ಆದೇಶವನ್ನು ಹೇಗೆ ಹೇಳುತ್ತೀರಿ?

ಉತ್ತರ - ಹೀಗೆ ಪ್ರಶ್ನಿಸಬಾರದು. ಈಗಾಗಲೇ ಹೇಳಿದಂತೆ 'ಏಕವಚನೇ' ಎಂಬ ಪದಕ್ಕೆ ಏಕವಚನ ಪ್ರತ್ಯಯವು ಪರದಲ್ಲಿರುವಾಗ ಎಂದರ್ಥವಲ್ಲ. ಒಂದು ಅರ್ಥವನ್ನು ಹೇಳುವ 'ಯುಷ್ಮದಸ್ಮದ್' ಶಬ್ದಗಳಿಗೆ

'ತ್ವ' ಮತ್ತು 'ಮ' ಎಂಬೆರಡು ಆದೇಶಗಳು ಬರುತ್ತವೆಂದು ಸೂತ್ರದ ಅಭಿಪ್ರಾಯ. ಪ್ರಕೃತ 'ತ್ವಾಂ ಅತಿಕ್ರಾಂತಾನಾಮ್' ಎಂಬಲ್ಲಿ ಒಂದೇ ಅರ್ಥವನ್ನು 'ಯುಷ್ಮತ್' ಶಬ್ದವು ಹೇಳುತ್ತಿರುವುದರಿಂದ 'ತ್ವ' ಎಂಬ ಆದೇಶವು ಬಂದಿದೆ. ಆದರೆ 'ಯುಷ್ಮಾನ್ ಅತಿಕ್ರಾಂತಾನಾಮ್' ಎಂಬಲ್ಲಿ 'ತ್ವ' ಎಂಬ ಆದೇಶವು ಬರುವುದಿಲ್ಲ. ಏಕೆಂದರೆ ಇಲ್ಲಿರುವ 'ಯುಷ್ಮತ್' ಶಬ್ದವು 'ಯುಷ್ಮಾನ್' ಎಂಬುದಾಗಿ ಅನೇಕ ವ್ಯಕ್ತಿಗಳನ್ನು ಹೇಳುತ್ತಿರುವುದರಿಂದ ಒಂದೇ ಅರ್ಥವು ಪ್ರತಿಪಾದ್ಯವಾಗಿಲ್ಲ.

ಇಷ್ಟು ವಿಷಯವು ಸೂತ್ರದಲ್ಲಿ ಮಾಡಿದ ವಚನಗ್ರಹಣದಿಂದ ಲಭ್ಯವಾಗಿದೆ.

ಗ್ರಂಥದಲ್ಲಿರುವ 'ಲಕ್ಷಣತಃ ವ್ಯುತ್ಪಾದಿತಃ' ಎಂಬುದಕ್ಕೆ ತ್ವಮಾವೇಕವಚನೇ ಎಂಬ ಸೂತ್ರದಿಂದ ವ್ಯುತ್ಪತ್ತಿ ಮಾಡಲಾಗಿದೆಯೆಂಬುದು ಒಂದು ಅರ್ಥ. ಮತ್ತೊಂದು ಅರ್ಥ - 'ಸಾಮ ಆಕಮ್' ಎಂಬ ಸಾಮಾನ್ಯ ಸೂತ್ರದಿಂದಲೂ 'ಅತಿತ್ವಾಕಮ್' ಇತ್ಯಾದಿ ರೂಪಗಳು ನಿಷ್ಪನ್ನವಾಗಿವೆ ಎಂದು.

**प्रकाशः – ननु महाभाष्ये पस्पशाग्रन्थे ऊष तेर चक्र इत्यादिलिण्मध्यमपुरुष-बहुवचनान्तशब्दानामप्रयोगमाशङ्क्य ''सर्वे देशान्तरे'' इत्यनेन सर्वशब्दानां प्रयोगोऽस्तीत्युक्तम् । तत्कथमेवमुक्तमिति चेत्**

ಶಂಕೆ - 'ಅತಿತ್ವಾಕಮ್' 'ಅತಿತ್ವಯಾಮ್' ಇವೇ ಮೊದಲಾದ ಪ್ರಯೋಗಗಳು ಲೋಕದಲ್ಲಿ ಎಲ್ಲೂ ಸಹ ಇರುವುದಿಲ್ಲವೆಂದು ಹೇಳುತ್ತಿದ್ದೀರಿ. ಇದು ತಪ್ಪು. ಏಕೆಂದರೆ ಮಹಾಭಾಷ್ಯದಲ್ಲಿ ಪತಂಜಲಿಕಾರರು 'ಪಸ್ಪಶಾಹ್ನಿಕ' ಗ್ರಂಥದಲ್ಲಿ ವ್ಯಾಕರಣದಲ್ಲಿ ನಿಷ್ಪತ್ತಿ ಮಾಡಿದ ಯಾವುದೇ ಶಬ್ದಗಳೂ ಕೂಡ ಅಪ್ರಸಿದ್ಧವಲ್ಲವೆಂದು ಸಾಧಿಸಿದ್ದಾರೆ. ಉದಾಹರಣೆ - 'ವಸ ನಿವಾಸೇ' ಧಾತುವಿನ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನದಲ್ಲಿ 'ಊಷ' ಎಂಬ ರೂಪವು ಸಿದ್ಧವಾಗುತ್ತದೆ. ಇದನ್ನು ಲೋಕದಲ್ಲಿ ಯಾರೂ ಸಹ ಪ್ರಯೋಗಿಸುವುದಿಲ್ಲ. 'ಊಷ' ಎಂದು ಪ್ರಯೋಗಿಸುವ ಬದಲು 'ಕ್ವ ಯೂಯಂ ಉಷಿತಾಃ' 'ನೀವು ಎಲ್ಲಿ ವಾಸವಾಗಿದ್ದಿರಿ?' ಎಂದೇ ಪ್ರಯೋಗಿಸುತ್ತಾರೆ. ಅದರಂತೆ ಕೃಧಾತುವಿನ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನದಲ್ಲಿ 'ತೇರ' ಎಂಬ ರೂಪವು ಸಿದ್ಧವಾಗುತ್ತದೆ. ಇದನ್ನೂ ಸಹ ಲೋಕದಲ್ಲಿ ಯಾರೂ ಕೂಡ ಪ್ರಯೋಗಿಸುವುದಿಲ್ಲ. ಇದರ ಬದಲು 'ಕ್ವ ಯೂಯಂ ತೀರ್ಣಾಃ' 'ನೀವು ಎಲ್ಲಿ ದಾಟಿದಿರಿ ?' ಎಂದು ಪ್ರಶ್ನಿಸುತ್ತಾರೆ. ಇದರಂತೆ 'ಕೃನ್' ಧಾತುವಿನ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನದಲ್ಲಿ 'ಚಕ್ರ' ಎಂಬ ರೂಪವು ಸಿದ್ಧವಾಗುತ್ತದೆ. ಇದನ್ನೂ ಕೂಡ ಯಾರೂ ಪ್ರಯೋಗಿಸದೇ ಇದರ ಬದಲು 'ಕ್ವ ಯೂಯಂ ಕೃತವಂತಃ' 'ನೀವು ಎಲ್ಲಿ ಮಾಡಿದಿರಿ?' ಎಂದೇ ಪ್ರಯೋಗಿಸುತ್ತಾರೆ. ಆದ್ದರಿಂದ 'ಊಷ' 'ತೇರ' 'ಚಕ್ರ' ಇವೇ ಮೊದಲಾದ ಲಿಟ್‌ಲಕಾರದ ಮಧ್ಯಮಪುರುಷದ ಬಹುವಚನ ಪ್ರಯೋಗಗಳು ಎಲ್ಲಿಯೂ ಕಾಣಸುತ್ತಿಲ್ಲ. ಆದ್ದರಿಂದ ಈ ಶಬ್ದಗಳ ರೂಪನಿಷ್ಪತ್ತಿಯನ್ನು ವ್ಯಾಕರಣಶಾಸ್ತ್ರದಲ್ಲಿ ಏಕೆ ತೋರಿಸಬೇಕು? ಎಂಬುದಾಗಿ. ಹೀಗೆ ಮಹಾಭಾಷ್ಯದಲ್ಲಿ ಆಕ್ಷೇಪ ಮಾಡಿಕೊಂಡು ವಾರ್ತಿಕಕಾರರು ಹೀಗೆ ಉತ್ತರಿಸುತ್ತಾರೆ -

'ಸರ್ವೇ ದೇಶಾಂತರೇ'[೧] (ವಾರ್ತಿಕ)

(೧) ''ಸರ್ವೇ ಖಲು ಅಪಿ ಏತೇ ಶಬ್ದಾಃ ದೇಶಾಂತರೇ ಪ್ರಯುಜ್ಯಂತೇ । ನಚೈತೇ ಉಪಲಭ್ಯಂತೇ । ಉಪಲಬ್ಧೌ ಯತ್ನಃ ಆನುಮಾನಿಕಾಧಿಕರಣ (೧-೪-೧)

ಎಂದು. ನಾವು ಕಾಣುವಂತಹ ದೇಶದಲ್ಲಿ 'ಊಷ' ತೇರ' ಇತ್ಯಾದಿ ಪ್ರಯೋಗಗಳು ಕಾಣಿಸದೇ ಇರಬಹುದು. ನಾವು ಕಾಣದ ದೇಶದಲ್ಲಿ ಇಂತಹ ಪ್ರಯೋಗಗಳು ಇರಬಹುದಲ್ಲವೇ? ಇಲ್ಲವೆಂದು ಊಹಿಸುವುದು ತಪ್ಪಾಗುತ್ತದೆ. ಆದ್ದರಿಂದ ವ್ಯಾಕರಣ ಶಾಸ್ತ್ರದಲ್ಲಿ ಯಾವುದೇ ರೂಪಗಳನ್ನು ನಿಷ್ಪತ್ತಿ ಮಾಡಿದರೂ ಸಹ ಅವುಗಳು ವಿಶಾಲವಾದ ಜಗತ್ತಿನಲ್ಲಿ ಎಲ್ಲಾದರು ಒಂದೆಡೆ ಪ್ರಯೋಗಕ್ಕೆ ವಿಷಯವೇ ಆಗಿರುತ್ತವೆ. ಹೀಗಿರುವಾಗ ಪ್ರಕೃತದಲ್ಲಿ 'ಆತಿತ್ವಾಕಮ್' ಇತ್ಯಾದಿ ಪ್ರಯೋಗಗಳು ಎಲ್ಲೂ ಕೂಡ ಇಲ್ಲವೆಂದು ಗ್ರಂಥಕಾರರು ಆಶಂಕಿಸುತ್ತಿರುವುದು ತಪ್ಪಲ್ಲವೇ?

**प्रकाशः – सम्भावनाभिप्रायेण तदुक्तेः । अत एव ''ष्णान्ता षट्'' इति सूत्रे ''यथालक्षणमप्रयुक्ते'' इति भाष्य एवाप्रयोगोऽप्युक्तः ।**

ಸಮಾಧಾನ - ಗ್ರಂಥಕಾರರು ಕೇವಲ ಸಂಭಾವನಾಭಿಪ್ರಾಯದಿಂದ ಹಾಗೇ ಪ್ರಯೋಗವಿಲ್ಲವೆಂದಿದ್ದಾರೆ ಹೊರತು, ಸರ್ವಥಾ ಪ್ರಯೋಗವಿಲ್ಲವೆಂಬುದು ಗ್ರಂಥಕಾರರ ಅಭಿಪ್ರಾಯವಲ್ಲ. ಈ ಸಂಭಾವನಾಭಿಪ್ರಾಯ-ದಿಂದಲೇ ಕೆಲವೊಮ್ಮೆ ವ್ಯಾಕರಣಶಾಸ್ತ್ರದಲ್ಲಿಯೂ ಕೆಲವು ಶಬ್ದಗಳ ಪ್ರಯೋಗವಿಲ್ಲವೆಂದು ಹೇಳಿರುತ್ತಾರೆ. (ಉದಾಹರಣೆ - 'ಷ್ಣಾಂತಾಃ ಷಟ್' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ಈ ವಿಷಯವು ಪ್ರಾಸಂಗಿಕವಾಗಿ ಬಂದಿರುತ್ತದೆ. ಆದ್ದರಿಂದ ಸೂತ್ರದ ನೇರವಾದ ಅರ್ಥವೆಂದು ತಿಳಿಯಬಾರದು.)

'ಯಥಾಲಕ್ಷಣಮಪ್ರಯುಕ್ತೇ' (ಮಹಾಭಾಷ್ಯ)[೧]

---

ಕ್ರಿಯತಾಮ್ । ಮಹಾನ್ ಹಿ ಶಬ್ದಸ್ಯ ಪ್ರಯೋಗವಿಷಯಃ । ಸಪ್ತದ್ವೀಪಾಃ ವಸುಮತೀ, ತ್ರಯೋ ಲೋಕಾಃ, ಚತ್ವಾರೋ ವೇದಾಃ ಸಾಂಗಾಃ ಸರಹಸ್ಯಾಃ ಬಹುಧಾ ವಿಭಿನ್ನಾಃ । ಏಕಶತಂ ಅಧ್ವರ್ಯುಶಾಖಾಃ, ಸಹಸ್ರವರ್ತ್ಮಾ ಸಾಮವೇದಃ ಏಕವಿಂಶತಿಧಾ ಬಾಹ್ವೃತ್ಯಂ, ನವಧಾ ಅಥರ್ವಣವೇದಃ, ವಾಕೋ ವಾಕಂ, ಇತಿಹಾಸಃ, ಪುರಾಣಂ, ವೈದ್ಯಶಾಸ್ತ್ರಂ ಇತ್ಯೇತಾವಾನ್ ಶಬ್ದಸ್ಯ ಪ್ರಯೋಗವಿಷಯಃ । ಏತಾವಂತಂ ಶಬ್ದಸ್ಯ ಪ್ರಯೋಗವಿಷಯಂ ಅನನುನಿಶಮ್ಯ ಸಂತಿ ಅಪ್ರಯುಕ್ತಾಂ ಇತಿ ವಚನಂ ಕೇವಲಂ ಸಾಹಸಮಾತ್ರಮ್ ।''

'ಊಷ' 'ತೇರ' ಇವೇ ಮೊದಲಾದ ಶಬ್ದಗಳು ಬೇರೆ ದೇಶದಲ್ಲಿ ಪ್ರಯೋಗ ಮಾಡಲ್ಪಡುತ್ತವೆ. ಎಲ್ಲಿಯೂ ಕೂಡ ಪ್ರಯೋಗ ಕಾಣಿಸುತ್ತಿಲ್ಲವಲ್ಲ? ಎಂದು ಗೊಂದಲ ಪಡಬೇಡ. ಪ್ರಯೋಗವನ್ನು ಹುಡುಕುವುದರಲ್ಲಿ ಪ್ರಯತ್ನ ಮಾಡು. ಏಕೆಂದರೆ ಶಬ್ದಗಳ ಪ್ರಯೋಗವನ್ನು ಹುಡುಕುವುದು ದೊಡ್ಡ ಸಾಹಸ. ಏಕೆಂದರೆ ಈ ಭೂಮಂಡಲವು ಸಪ್ತದ್ವೀಪದಿಂದ ಕೂಡಿದೆ. ಮತ್ತು ಊರ್ಧ್ವಲೋಕ, ಮರ್ತ್ಯಲೋಕ, ಅಧೋಲೋಕ ಎಂಬ ಮೂರು ಲೋಕಗಳನ್ನೊಳಗೊಂಡಿದೆ. ಇಷ್ಟು ವಿಶಾಲವಾದ ಜಗತ್ತಿನಲ್ಲಿ ಎಲ್ಲಾದರೂ ಒಂದು ಪ್ರದೇಶದಲ್ಲಿ ಈ ಪ್ರಯೋಗಗಳು ಇದ್ದೇ ಇರುತ್ತವೆ. ಅಥವಾ ಶಾಸ್ತ್ರಗಳೂ ಕೂಡ ಬಹಳ ವಿಶಾಲವಾಗಿವೆ. ನಾಲ್ಕು ವೇದಗಳು. ವೇದಾಂಗಗಳೆನಿಸಿದ ಷಡಂಗಗಳು ಇವೆಲ್ಲವೂ ವಿಭಿನ್ನವಾಗಿವೆ, ಅನಂತವಾಗಿವೆ. ಯರ್ಜುವೇದವು ನೂರೊಂದು ಶಾಖೆಗಳಿಂದ ಕೂಡಿದೆ. ಸಾಮವೇದವು ಸಹಸ್ರಶಾಖೆಗಳಿಂದ ಕೂಡಿದೆ. ಋಗ್ವೇದವು ಇಪ್ಪತ್ತೊಂದು ಶಾಖೆಗಳಿಂದ ಕೂಡಿದೆ. ಅಥರ್ವಣವೇದವು ಒಂಭತ್ತು ಶಾಖೆಗಳಿಂದ ಕೂಡಿದೆ. ಅಷ್ಟೇ ಅಲ್ಲದೇ ಇತಿಹಾಸ ಪುರಾಣ, ವೈದ್ಯಶಾಸ್ತ್ರ ಹೀಗೆ ಅನೇಕ ಶಾಸ್ತ್ರಗಳು ಹೇರಳವಾಗಿವೆ. ಆ ಎಲ್ಲಾ ಶಾಸ್ತ್ರಗಳಲ್ಲಿ ಎಲ್ಲಾದರೂ ಒಂದೆಡೆ ಇಂತಹ ಪ್ರಯೋಗಗಳು ಇದ್ದೇ ಇರುತ್ತವೆ. ಇಷ್ಟೆಲ್ಲಾ ವಿಶಾಲವಾದ ಭೂಮಂಡಲ, ಹಾಗೂ ವಿಶಾಲವಾದ ಶಾಸ್ತ್ರಗಳನ್ನು ತಿಳಿಯದೆ ನಿನ್ನ ಬುದ್ಧಿಗೆ ತೋಚಿದ ಮಾತ್ರಕ್ಕೆ ಶಬ್ದಪ್ರಯೋಗವು ಎಲ್ಲಿಯೂ ಇಲ್ಲ ಎಂಬ ಹೇಳಿಕೆಯು ಅತ್ಯಂತ ಸಾಹಸದ ಮಾತು.

(೧) 'ಯಸ್ಯ ವಿಶಿಷ್ಟಃ ಪ್ರಯೋಗಃ ನ ಸ್ಮರ್ಯತೇ ನಾಪಿ ಪ್ರಯೋಗವಿಷಯಃ ಸ್ಮೃತಿಃ ತತ್ ಯಥಾಲಕ್ಷಣಂ ಅನುಗಂತವ್ಯಮ್ ।'
'ಯಾವ ಶಬ್ದದ ವಿಶಿಷ್ಟ ಪ್ರಯೋಗವು ಎಲ್ಲಿಯೂ ಕಾಣದಿದ್ದಾಗ, ಲೋಕದಲ್ಲಿಯೂ ವ್ಯವಹರಿಸದಿದ್ದಾಗ, ಸೂತ್ರದಲ್ಲಿರುವಂತೆ

ಎಂಬುದು ಮಹಾಭಾಷ್ಯದ ಮಾತು. ಅಪ್ರಯುಕ್ತವಾದ ಶಬ್ದಗಳು ಲೋಕದಲ್ಲಿದ್ದರೆ, ಅದನ್ನು ಸೂತ್ರದಲ್ಲಿ ಇರುವಂತೆ ನಿಷ್ಪತ್ತಿ ಮಾಡಬೇಕು ಎಂದು ಈ ಭಾಷ್ಯದ ಅಭಿಪ್ರಾಯ.

**प्रकाशः – नच प्रयोगमूलत्वात् व्याकरणस्याप्रयुक्तानां कथं व्युत्पादनमिति वाच्यम्।**

**''अप्रयुक्ते दीर्घसत्रवत्'' इति पस्पशाभाष्य एव समाहितत्वादिति भावः ।।**

ಶಂಕೆ - ವ್ಯಾಕರಣ ಶಾಸ್ತ್ರವು ಪ್ರಯೋಗ ಮೂಲಕವಾಗಿದೆ. ಅಂದರೆ ಲೋಕದಲ್ಲಿರುವ ಶಬ್ದಪ್ರಯೋಗಗಳನ್ನು ಸಮರ್ಥಿಸಲು ವ್ಯಾಕರಣ ಶಾಸ್ತ್ರವು ಹೊರಟಿರುತ್ತದೆ. ಹೀಗಿರುವಾಗ ಯಾರೂ ಪ್ರಯೋಗ ಮಾಡದ ಶಬ್ದಗಳನ್ನು ವ್ಯಾಕರಣ ಶಾಸ್ತ್ರದಲ್ಲಿ ನಿಷ್ಪತ್ತಿ ಮಾಡುವುದು ಅನುಪಯುಕ್ತವಲ್ಲವೇ?

ಸಮಾಧಾನ - ಈ ಆಶಂಕೆಗೆ

ಅಪ್ರಯುಕ್ತೇ ದೀರ್ಘಸತ್ರವತ್[೧]

ಎಂಬ ಪಸ್ಪಶಾಹ್ನಿಕದ ಭಾಷ್ಯದಲ್ಲಿಯೇ ಉತ್ತರ ನೀಡಿದ್ದಾರೆ.

**प्रकाशः – उक्त्येति ।। ''स्वतन्त्रत्वात् प्रवर्तन्ते'' इति श्रुत्या ''सर्वस्य तदधीनत्वादिति स्मृत्या'' इत्यर्थः । यद्वा 'स बद्धस्स बन्धयति' इत्यादिश्रुत्या ''यदधीनो गुणो यस्य'' इति स्मृत्या व्युत्पादितत्वात् राजादावपि भृत्यगतबन्धादिस्वातन्त्र्येण बद्धादिशब्दयोग्यताऽस्त्वित्यर्थः ।**

ಗ್ರಂಥದಲ್ಲಿ 'ಉಕ್ತ್ಯಾ ಶ್ರುತ್ಯಾ' ಎಂದು ಹೇಳಿದ್ದಾರೆ. ಈಗಾಗಲೇ ಹಿಂದೆ ಉಲ್ಲೇಖ ಮಾಡಿದ 'ಸ್ವತಂತ್ರತ್ವಾತ್ ಪ್ರವರ್ತಂತೇ' ಎಂಬ ಶ್ರುತಿಯಿಂದ ಮತ್ತು 'ಸರ್ವಸ್ಯ ತದಧೀನತ್ವಾತ್' ಎಂಬ ಸ್ಮೃತಿಯಿಂದ ಎಂದು ಇದರ ಅರ್ಥ. ಅಥವಾ 'ಸ ಬದ್ಧಃ ಸ ಬಂಧಯತಿ' ಇತ್ಯಾದಿ ಶ್ರುತಿಯಿಂದ 'ಯದಧೀನೋ ಗುಣೋ ಯಸ್ಯ' ಎಂಬ ಸ್ಮೃತಿಯಿಂದ ಎಂದರ್ಥ. ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ರಾಜಾದಿಗಳಲ್ಲಿಯೂ

ತಿಳಿಯಬೇಕು.

(೧) 'ಯದ್ಯಪಿ ಅಪ್ರಯುಕ್ತಃ ಅವಶ್ಯಂ ದೀರ್ಘಸತ್ರವತ್ ಲಕ್ಷಣೇನ ಅನುವಿಧೇಯಾಃ । ಯಥಾ ದೀರ್ಘಸತ್ರಾಣಿ ವಾರ್ಷಶತಕಾನಿ ವಾರ್ಷಸಹಸ್ರಕಾಣಿ ಚ । ನಚ ಅಧ್ಯತ್ವೇ ಕಶ್ಚಿದಪಿ ಆಹರತಿ ಕೇವಲಂ ಋಷಿಸಂಪ್ರದಾಯೋ ಧರ್ಮಃ ಇತಿ ಕೃತ್ವಾ ಯಾಜ್ಞಿಕಾಃ ಶಾಸ್ತ್ರೇಣ ಅನುವಿದಧತೇ ।'
'ವೇದದಲ್ಲಿ ನೂರು ವರ್ಷದ ಯಾಗಗಳನ್ನು, ಸಾವಿರ ವರ್ಷದ ಯಾಗಗಳನ್ನು ವಿಧಿಸಲಾಗಿದೆ. ಆದರೆ ಈಗಿನ ಕಾಲದಲ್ಲಿ ಯಾರೂ ಕೂಡ ಅಂತಹ ಯಾಗಗಳನ್ನು ಆಚರಿಸಲು ಸಾಧ್ಯವೇ ಇಲ್ಲ. ಆದರೂ ಕೂಡ ಅವುಗಳ ಸಂಪೂರ್ಣ ಕ್ರಮವನ್ನು ಸ್ಪಷ್ಟವಾಗಿ ನಿರೂಪಣೆ ಮಾಡಲಾಗಿರುತ್ತದೆ. ಅದರಂತೆ ಪ್ರಯೋಗದಲ್ಲಿ ಎಲ್ಲಿಯೂ ಕೂಡ ಶಬ್ದಗಳ ಪ್ರಯೋಗವಿಲ್ಲವೆಂದು ತಿಳಿದು ಅಂತಹ ಶಬ್ದಗಳ ರೂಪನಿಷ್ಪತ್ತಿಯನ್ನು ಮಾಡದೇ ಇರಬಾರದು. ಈಗಿನ ಕಾಲದಲ್ಲಿ, ಈಗಿನ ದೇಶದಲ್ಲಿ ಪ್ರಯೋಗ ಮಾಡದಿದ್ದರೂ ಮುಂದೆ ಯಾವಾಗಲಾದರೂ, ಅಥವಾ ಬೇರೆ ದೇಶದಲ್ಲಿ ಅಂತಹ ಶಬ್ದಪ್ರಯೋಗಗಳು ಇದ್ದೇ ಇರುತ್ತವೆ'.

ಎಂದು. ನಾವು ಕಾಣುವಂತಹ ದೇಶದಲ್ಲಿ 'ಊಷ' ತೇರ' ಇತ್ಯಾದಿ ಪ್ರಯೋಗಗಳು ಕಾಣಿಸದೇ ಇರಬಹುದು. ನಾವು ಕಾಣದ ದೇಶದಲ್ಲಿ ಇಂತಹ ಪ್ರಯೋಗಗಳು ಇರಬಹುದಲ್ಲವೇ? ಇಲ್ಲವೆಂದು ಊಹಿಸುವುದು ತಪ್ಪಾಗುತ್ತದೆ. ಆದ್ದರಿಂದ ವ್ಯಾಕರಣ ಶಾಸ್ತ್ರದಲ್ಲಿ ಯಾವುದೇ ರೂಪಗಳನ್ನು ನಿಷ್ಪತ್ತಿ ಮಾಡಿದರೂ ಸಹ ಅವುಗಳು ವಿಶಾಲವಾದ ಜಗತ್ತಿನಲ್ಲಿ ಎಲ್ಲಾದರು ಒಂದೆಡೆ ಪ್ರಯೋಗಕ್ಕೆ ವಿಷಯವೇ ಆಗಿರುತ್ತವೆ. ಹೀಗಿರುವಾಗ ಪ್ರಕೃತದಲ್ಲಿ 'ಅತಿತ್ವಾಕಮ್' ಇತ್ಯಾದಿ ಪ್ರಯೋಗಗಳು ಎಲ್ಲೂ ಕೂಡ ಇಲ್ಲವೆಂದು ಗ್ರಂಥಕಾರರು ಆಶಂಕಿಸುತ್ತಿರುವುದು ತಪ್ಪಲ್ಲವೇ?

**प्रकाशः – सम्भावनाभिप्रायेण तदुक्तेः । अत एव ''ष्णान्ता षट्'' इति सूत्रे ''यथालक्षणमप्रयुक्ते'' इति भाष्य एवाप्रयोगोऽप्युक्तः ।**

ಸಮಾಧಾನ - ಗ್ರಂಥಕಾರರು ಕೇವಲ ಸಂಭಾವನಾಭಿಪ್ರಾಯದಿಂದ ಹಾಗೇ ಪ್ರಯೋಗವಿಲ್ಲವೆಂದಿದ್ದಾರೆ ಹೊರತು, ಸರ್ವಥಾ ಪ್ರಯೋಗವಿಲ್ಲವೆಂಬುದು ಗ್ರಂಥಕಾರರ ಅಭಿಪ್ರಾಯವಲ್ಲ. ಈ ಸಂಭಾವನಾಭಿಪ್ರಾಯ-ದಿಂದಲೇ ಕೆಲವೊಮ್ಮೆ ವ್ಯಾಕರಣಶಾಸ್ತ್ರದಲ್ಲಿಯೂ ಕೆಲವು ಶಬ್ದಗಳ ಪ್ರಯೋಗವಿಲ್ಲವೆಂದು ಹೇಳಿರುತ್ತಾರೆ. (ಉದಾಹರಣೆ - 'ಷ್ಣಾಂತಾಃ ಷಟ್' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ಈ ವಿಷಯವು ಪ್ರಾಸಂಗಿಕವಾಗಿ ಬಂದಿರುತ್ತದೆ. ಆದ್ದರಿಂದ ಸೂತ್ರದ ನೇರವಾದ ಅರ್ಥವೆಂದು ತಿಳಿಯಬಾರದು.)

'ಯಥಾಲಕ್ಷಣಮಪ್ರಯುಕ್ತೇ' (ಮಹಾಭಾಷ್ಯ)(೧)

---

ಕ್ರಿಯತಾಮ್ । ಮಹಾನ್ ಹಿ ಶಬ್ದಸ್ಯ ಪ್ರಯೋಗವಿಷಯಃ । ಸಪ್ತದ್ವೀಪಾಃ ವಸುಮತೀ, ತ್ರಯೋ ಲೋಕಾಃ, ಚತ್ವಾರೋ ವೇದಾಃ ಸಾಂಗಾಃ ಸರಹಸ್ಯಾಃ ಬಹುಧಾ ವಿಭಿನ್ನಾಃ । ಏಕಶತಂ ಅಧ್ವರ್ಯುಶಾಖಾಃ, ಸಹಸ್ರವರ್ತ್ಮಾ ಸಾಮವೇದಃ ಏಕವಿಂಶತಿಧಾ ಬಾಹ್ವೃಚ್ಯಂ, ನವಧಾ ಅಥರ್ವಣವೇದಃ, ವಾಕೋ ವಾಕಂ, ಇತಿಹಾಸಃ, ಪುರಾಣಂ, ವೈದ್ಯಶಾಸ್ತ್ರಂ ಇತ್ಯೇತಾವಾನ್ ಶಬ್ದಸ್ಯ ಪ್ರಯೋಗವಿಷಯಃ । ಏತಾವಂತಂ ಶಬ್ದಸ್ಯ ಪ್ರಯೋಗವಿಷಯಂ ಅನನುನಿಶಮ್ಯ ಸಂತಿ ಅಪ್ರಯುಕ್ತಾಂ ಇತಿ ವಚನಂ ಕೇವಲಂ ಸಾಹಸಮಾತ್ರಮ್ ।''

'ಊಷ' 'ತೇರ' ಇವೇ ಮೊದಲಾದ ಶಬ್ದಗಳು ಬೇರೆ ದೇಶದಲ್ಲಿ ಪ್ರಯೋಗ ಮಾಡಲ್ಪಡುತ್ತವೆ. ಎಲ್ಲಿಯೂ ಕೂಡ ಪ್ರಯೋಗ ಕಾಣಿಸುತ್ತಿಲ್ಲವಲ್ಲ? ಎಂದು ಗೊಂದಲ ಪಡಬೇಡ. ಪ್ರಯೋಗವನ್ನು ಹುಡುಕುವುದರಲ್ಲಿ ಪ್ರಯತ್ನ ಮಾಡು. ಏಕೆಂದರೆ ಶಬ್ದಗಳ ಪ್ರಯೋಗವನ್ನು ಹುಡುಕುವುದು ದೊಡ್ಡ ಸಾಹಸ. ಏಕೆಂದರೆ ಈ ಭೂಮಂಡಲವು ಸಪ್ತದ್ವೀಪದಿಂದ ಕೂಡಿದೆ. ಮತ್ತು ಊರ್ಧ್ವಲೋಕ, ಮರ್ತ್ಯಲೋಕ, ಅಧೋಲೋಕ ಎಂಬ ಮೂರು ಲೋಕಗಳನ್ನೊಳಗೊಂಡಿದೆ. ಇಷ್ಟು ವಿಶಾಲವಾದ ಜಗತ್ತಿನಲ್ಲಿ ಎಲ್ಲಾದರೂ ಒಂದು ಪ್ರದೇಶದಲ್ಲಿ ಈ ಪ್ರಯೋಗಗಳು ಇದ್ದೇ ಇರುತ್ತವೆ. ಅಥವಾ ಶಾಸ್ತ್ರಗಳೂ ಕೂಡ ಬಹಳ ವಿಶಾಲವಾಗಿವೆ. ನಾಲ್ಕು ವೇದಗಳು. ವೇದಾಂಗಗಳೆನಿಸಿದ ಷಡಂಗಗಳು ಇವೆಲ್ಲವೂ ವಿಭಿನ್ನವಾಗಿವೆ, ಅನಂತವಾಗಿವೆ. ಯರ್ಜುವೇದವು ನೂರೊಂದು ಶಾಖೆಗಳಿಂದ ಕೂಡಿದೆ. ಸಾಮವೇದವು ಸಹಸ್ರಶಾಖೆಗಳಿಂದ ಕೂಡಿದೆ. ಋಗ್ವೇದವು ಇಪ್ಪತ್ತೊಂದು ಶಾಖೆಗಳಿಂದ ಕೂಡಿದೆ. ಅಥರ್ವಣವೇದವು ಒಂಭತ್ತು ಶಾಖೆಗಳಿಂದ ಕೂಡಿದೆ. ಅಷ್ಟೇ ಅಲ್ಲದೇ ಇತಿಹಾಸ ಪುರಾಣ, ವೈದ್ಯಶಾಸ್ತ್ರ ಹೀಗೆ ಅನೇಕ ಶಾಸ್ತ್ರಗಳು ಹೇರಳವಾಗಿವೆ. ಆ ಎಲ್ಲಾ ಶಾಸ್ತ್ರಗಳಲ್ಲಿ ಎಲ್ಲಾದರೂ ಒಂದೆಡೆ ಇಂತಹ ಪ್ರಯೋಗಗಳು ಇದ್ದೇ ಇರುತ್ತವೆ. ಇಷ್ಟೆಲ್ಲಾ ವಿಶಾಲವಾದ ಭೂಮಂಡಲ, ಹಾಗೂ ವಿಶಾಲವಾದ ಶಾಸ್ತ್ರಗಳನ್ನು ತಿಳಿಯದೆ ನಿನ್ನ ಬುದ್ಧಿಗೆ ತೋಚಿದ ಮಾತ್ರಕ್ಕೆ ಶಬ್ದಪ್ರಯೋಗವು ಎಲ್ಲಿಯೂ ಇಲ್ಲ ಎಂಬ ಹೇಳಿಕೆಯು ಅತ್ಯಂತ ಸಾಹಸದ ಮಾತು.

(೧) 'ಯಸ್ಯ ವಿಶಿಷ್ಟಃ ಪ್ರಯೋಗಃ ನ ಸ್ಮರ್ಯತೇ ನಾಪಿ ಪ್ರಯೋಗವಿಷಯಃ ಸ್ಮೃತಿಃ ತತ್ ಯಥಾಲಕ್ಷಣಂ ಅನುಗಂತವ್ಯಮ್ ।'

'ಯಾವ ಶಬ್ದದ ವಿಶಿಷ್ಟ ಪ್ರಯೋಗವು ಎಲ್ಲಿಯೂ ಕಾಣದಿದ್ದಾಗ, ಲೋಕದಲ್ಲಿಯೂ ವ್ಯವಹರಿಸದಿದ್ದಾಗ, ಸೂತ್ರದಲ್ಲಿರುವಂತೆ

ಎಂಬುದು ಮಹಾಭಾಷ್ಯದ ಮಾತು. ಅಪ್ರಯುಕ್ತವಾದ ಶಬ್ದಗಳು ಲೋಕದಲ್ಲಿದ್ದರೆ, ಅದನ್ನು ಸೂತ್ರದಲ್ಲಿ ಇರುವಂತೆ ನಿಷ್ಪತ್ತಿ ಮಾಡಬೇಕು ಎಂದು ಈ ಭಾಷ್ಯದ ಅಭಿಪ್ರಾಯ.

**प्रकाशः – नच प्रयोगमूलत्वात् व्याकरणस्याप्रयुक्तानां कथं व्युत्पादनमिति वाच्यम्।**

**''अप्रयुक्ते दीर्घसत्रवत्'' इति पस्पशाभाष्य एव समाहितत्वादिति भावः ।।**

ಶಂಕೆ - ವ್ಯಾಕರಣ ಶಾಸ್ತ್ರವು ಪ್ರಯೋಗ ಮೂಲಕವಾಗಿದೆ. ಅಂದರೆ ಲೋಕದಲ್ಲಿರುವ ಶಬ್ದಪ್ರಯೋಗಗಳನ್ನು ಸಮರ್ಥಿಸಲು ವ್ಯಾಕರಣ ಶಾಸ್ತ್ರವು ಹೊರಟಿರುತ್ತದೆ. ಹೀಗಿರುವಾಗ ಯಾರೂ ಪ್ರಯೋಗ ಮಾಡದ ಶಬ್ದಗಳನ್ನು ವ್ಯಾಕರಣ ಶಾಸ್ತ್ರದಲ್ಲಿ ನಿಷ್ಪತ್ತಿ ಮಾಡುವುದು ಅನುಪಯುಕ್ತವಲ್ಲವೇ?

ಸಮಾಧಾನ - ಈ ಆಶಂಕೆಗೆ

ಅಪ್ರಯುಕ್ತೇ ದೀರ್ಘಸತ್ರವತ್[೧]

ಎಂಬ ಪಸ್ಪಶಾಹ್ನಿಕದ ಭಾಷ್ಯದಲ್ಲಿಯೇ ಉತ್ತರ ನೀಡಿದ್ದಾರೆ.

**प्रकाशः – उक्त्येति ।। ''स्वतन्त्रत्वात् प्रवर्तन्ते'' इति श्रुत्या ''सर्वस्य तदधीनत्वादिति स्मृत्या'' इत्यर्थः । यद्वा 'स बद्धस्स बन्धयति' इत्यादिश्रुत्या ''यदधीनो गुणो यस्य'' इति स्मृत्या व्युत्पादितत्वात् राजादावपि भृत्यगतबन्धादिस्वातन्त्र्येण बद्धादिशब्दयोग्यताऽस्त्वित्यर्थः ।**

ಗ್ರಂಥದಲ್ಲಿ 'ಉಕ್ತ್ಯಾ ಶ್ರುತ್ಯಾ' ಎಂದು ಹೇಳಿದ್ದಾರೆ. ಈಗಾಗಲೇ ಹಿಂದೆ ಉಲ್ಲೇಖ ಮಾಡಿದ 'ಸ್ವತಂತ್ರತ್ವಾತ್ ಪ್ರವರ್ತಂತೇ' ಎಂಬ ಶ್ರುತಿಯಿಂದ ಮತ್ತು 'ಸರ್ವಸ್ಯ ತದಧೀನತ್ವಾತ್' ಎಂಬ ಸ್ಮೃತಿಯಿಂದ ಎಂದು ಇದರ ಅರ್ಥ. ಅಥವಾ 'ಸ ಬದ್ಧಃ ಸ ಬಂಧಯತಿ' ಇತ್ಯಾದಿ ಶ್ರುತಿಯಿಂದ 'ಯದಧೀನೋ ಗುಣೋ ಯಸ್ಯ' ಎಂಬ ಸ್ಮೃತಿಯಿಂದ ಎಂದರ್ಥ. ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ರಾಜಾದಿಗಳಲ್ಲಿಯೂ

ತಿಳಿಯಬೇಕು.

(೧) 'ಯದ್ಯಪಿ ಅಪ್ರಯುಕ್ತಃ ಅವಶ್ಯಂ ದೀರ್ಘಸತ್ರವತ್ ಲಕ್ಷಣೇನ ಅನುವಿಧೇಯಾಃ । ಯಥಾ ದೀರ್ಘಸತ್ರಾಣಿ ವಾರ್ಷಶತಕಾನಿ ವಾರ್ಷಸಹಸ್ರಕಾಣಿ ಚ । ನಚ ಅಘತ್ವೇ ಕಶ್ಚಿದಪಿ ಆಹರತಿ ಕೇವಲಂ ಋಷಿಸಂಪ್ರದಾಯೋ ಧರ್ಮಃ ಇತಿ ಕೃತ್ವಾ ಯಾಜ್ಞಿಕಾಃ ಶಾಸ್ತ್ರೇಣ ಅನುವಿದಧತೇ ।'
'ವೇದದಲ್ಲಿ ನೂರು ವರ್ಷದ ಯಾಗಗಳನ್ನು, ಸಾವಿರ ವರ್ಷದ ಯಾಗಗಳನ್ನು ವಿಧಿಸಲಾಗಿದೆ. ಆದರೆ ಈಗಿನ ಕಾಲದಲ್ಲಿ ಯಾರೂ ಕೂಡ ಅಂತಹ ಯಾಗಗಳನ್ನು ಆಚರಿಸಲು ಸಾಧ್ಯವೇ ಇಲ್ಲ. ಆದರೂ ಕೂಡ ಅವುಗಳ ಸಂಪೂರ್ಣ ಕ್ರಮವನ್ನು ಸ್ಪಷ್ಟವಾಗಿ ನಿರೂಪಣೆ ಮಾಡಲಾಗಿರುತ್ತದೆ. ಅದರಂತೆ ಪ್ರಯೋಗದಲ್ಲಿ ಎಲ್ಲಿಯೂ ಕೂಡ ಶಬ್ದಗಳ ಪ್ರಯೋಗವಿಲ್ಲವೆಂದು ತಿಳಿದು ಅಂತಹ ಶಬ್ದಗಳ ರೂಪನಿಷ್ಪತ್ತಿಯನ್ನು ಮಾಡದೇ ಇರಬಾರದು. ಈಗಿನ ಕಾಲದಲ್ಲಿ, ಈಗಿನ ದೇಶದಲ್ಲಿ ಪ್ರಯೋಗ ಮಾಡದಿದ್ದರೂ ಮುಂದೆ ಯಾವಾಗಲಾದರೂ, ಅಥವಾ ಬೇರೆ ದೇಶದಲ್ಲಿ ಅಂತಹ ಶಬ್ದಪ್ರಯೋಗಗಳು ಇದ್ದೇ ಇರುತ್ತವೆ'.

ಭೃತ್ಯನಲ್ಲಿರುವ ಬಂದಾಧಿಗಳಿಗೆ ಸ್ವಾಮಿತ್ವವಿರುವ ಪ್ರಯುಕ್ತ ಬದ್ಧಾದಿ ಶಬ್ದಪ್ರಯೋಗದ ಯೋಗ್ಯತೆಯು ಇರುವಿಕೆಯು ಸಮಾನವಾಗಿದೆ ಎಂದರ್ಥ.




ವ್ಯಾಕರಣಶಾಸ್ತ್ರದಲ್ಲಿ 'ಅತಿತ್ವಾಕಮ್ ಅತಿತ್ವಯಾಮ್' 'ನಿನ್ನನ್ನು ಮೀರಿಸಿದವರಿಗೆ' ಇತ್ಯಾದಿ ಶಬ್ದಗಳನ್ನು ನಿಷ್ಪತ್ತಿಮಾಡಿದ್ದಾರೆ. ಆದರೆ ಲೋಕದಲ್ಲಿ ಎಲ್ಲಿಯೂ ಸಹ ಇಂತಹ ಪ್ರಯೋಗಗಳನ್ನು ನಾವು ಕಾಣುತ್ತಿಲ್ಲ. ಅದರಂತೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿದ್ದರೂ ರಾಜನಲ್ಲಿ ಬದ್ಧಾದಿ ಶಬ್ದಗಳನ್ನು ಪ್ರಯೋಗಿಸಬೇಕಾಗಿಲ್ಲ. ಒಂದು ವೇಳೆ ವ್ಯಾಕರಣಶಾಸ್ತ್ರದಲ್ಲಿ ಉದಾಹರಿಸಿದ 'ಅತಿತ್ವಾಕಮ್' ಇತ್ಯಾದಿ ಪ್ರಯೋಗಗಳು ಎಲ್ಲಿಯಾದರೂ ಇದ್ದೇ ಇರುತ್ತವೆಂದು ಊಹಿಸುವುದಾದಲ್ಲಿ, ನಾವೂ ಸಹ ಹಿಂದೆ ಉಲ್ಲೇಖಿಸಿದ ಶ್ರುತಿ-ಸ್ಮೃತಿಗಳ ಆಧಾರದಿಂದ ಭೃತ್ಯನಲ್ಲಿರುವ ಬಂಧಾದಿಗಳಿಗೆ ರಾಜನು ಸ್ವಾಮಿಯಾದ್ದರಿಂದ ಬದ್ಧಾದಿ ಶಬ್ದಗಳ ಪ್ರಯೋಗದ ಯೋಗ್ಯತೆಯು ಇದ್ದೇ ಇರುತ್ತದೆ.



• • • • •

## ಶಬ್ದಪ್ರಯೋಗಗಳ ನಿಯಮವಿಷಯದಲ್ಲಿ ವ್ಯಾಕರಣದ ಮತ್ತೊಂದು ದೃಷ್ಟಾಂತ

### तात्पर्यचन्द्रिका

**किञ्च यथा द्वन्द्वस्योभयार्थत्वेऽपि प्राण्यङ्गादौ समाहारस्यैव विवक्षा । दधिपय आदावितरेतरयोगस्यैव । तथा दुःखीत्यादेरुभयार्थत्वेऽपि लोके आश्रयत्वस्यैव विवक्षा । ब्रह्मणि तु स्वातन्त्र्यस्येत्यस्तु ।**

ಅನುವಾದ - ಮತ್ತು ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ 'ದುಃಖೀ' 'ಬದ್ಧಃ' ಇತ್ಯಾದಿ ಪ್ರಯೋಗಗಳನ್ನು ಮಾಡಬಹುದು. ರಾಜನಲ್ಲಿ ಇದೇ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, 'ಬದ್ಧಃ' ಇತ್ಯಾದಿ ಪ್ರಯೋಗಗಳನ್ನು ಮಾಡಬಾರದು. ಈ ವಿಷಯದಲ್ಲಿ ವ್ಯಾಕರಣದ ಮತ್ತೊಂದು ದೃಷ್ಟಾಂತವನ್ನು ಹೀಗೆ ತಿಳಿಯಬಹುದು. ದ್ವಂದ್ವಸಮಾಸವು 'ಸಮಾಹಾರ' ಹಾಗೂ 'ಇತರೇತರ ಯೋಗ' ಎಂಬೆರಡರ್ಥದಲ್ಲಿ ವಿಹಿತವಾಗಿದೆ. ಆದರೂ ಸಹ ಪ್ರಾಣ್ಯಂಗಾದಿಗಳಲ್ಲಿ ಇತರೇತರಯೋಗವನ್ನು ನಿಷೇಧಿಸಿ ಸಮಾಹಾರರೂಪವಾದ ದ್ವಂದ್ವಸಮಾಸವನ್ನೇ ಪಾಣಿನಿಯು ವಿಧಿಸಿದ್ದಾನೆ. 'ದಧಿಪಯಃ' ಇತ್ಯಾದಿ ಸ್ಥಳಗಳಲ್ಲಿ 'ಇತರೇತರಯೋಗ' ಎಂಬ ಸಮಾಸವನ್ನೇ ವಿಧಿಸಲಾಗಿದೆ. ವ್ಯಾಕರಣ ಶಾಸ್ತ್ರದಲ್ಲಿ ಕೆಲವು ಶಬ್ದಗಳ ಸಮಾಸವನ್ನು ಹೀಗೆಯೇ ಮಾಡಬೇಕು. ಇದೇ ಅರ್ಥಗಳನ್ನೇ ತಿಳಿಯಬೇಕು ಎಂದು ಹೇಗೆ ವಿಧಿಸಿದ್ದಾರೋ, ಅದರಂತೆ ಪ್ರಕೃತದಲ್ಲಿಯೂ 'ದುಃಖೀ' ಇತ್ಯಾದಿ ಶಬ್ದಗಳಲ್ಲಿ 'ತದ್ಗತತ್ವ' 'ಸ್ವಾತಂತ್ರ್ಯ' ಎಂಬೆರಡು ಪ್ರವೃತ್ತಿನಿಮಿತ್ತಗಳನ್ನು ತಿಳಿದು ಎರಡು ಬಗೆಯ ಅರ್ಥವನ್ನು ಹೇಳಬಹುದಾದರೂ ಲೋಕದಲ್ಲಿ (ಭೃತ್ಯಾದಿಗಳಲ್ಲಿ) ತದ್ಗತತ್ವವೆಂಬ

ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸಬೇಕು. ಬ್ರಹ್ಮನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸಬೇಕು. ಹೀಗೆ 'ತದಸ್ಯಸ್ತ್ಯಸ್ಮಿನ್' ಎಂಬ ಅನುಶಾಸನವು ನಿಯಮ ಮಾಡುತ್ತಿದೆಯೆಂದು ಹೇಳಬಹುದು.

**प्रकाशः –**

एवं ''प्रयोगे सति निमित्तानुसरणम्'' इत्यादिसन्न्यायरत्नावल्युक्तेः ''किञ्च यथा मृत्तिकादौ'' इत्यादिना द्वेधा तात्पर्यविवरणेन राजादौ बद्धादिपदप्रयोगापातदोषो निरस्तः । अथेदानीं यत् प्राक् धनीत्यादिशब्ददृष्टान्तेन लोके तद्गतत्वं निमित्तमीश्वरे तु स्वातन्त्र्यं निमित्तं दुःख्यादिपदप्रयोगे इत्युक्तम् । तदयुक्तमिव । ''तदस्यास्त्यस्मिन्'' इत्यनुशासनेन षष्ठीसप्तमीरूपोभयार्थकस्य मत्वर्थीयप्रत्ययस्य विषयभेदकल्पना न दृष्टचरेत्यतः प्रागुक्तमेव दृष्टान्तान्तरेण व्यनक्ति – **किञ्च यथा द्वन्द्वस्येति** ।।

ವಿವರಣೆ - ಇಲ್ಲಿಯ ತನಕ 'ಪ್ರಯೋಗೇ ಸತಿ ನಿಮಿತ್ತಾನುಸರಣಮ್' ಲೋಕದಲ್ಲಿ ಪ್ರಯೋಗವಿದ್ದರೆ ಮಾತ್ರ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕು. ಇವೇ ಮೊದಲಾದ ಸನ್ನ್ಯಾಯರತ್ನಾವಳಿಯ ಮಾತುಗಳನ್ನು ವ್ಯಾಖ್ಯಾನಿಸಿದ್ದಾಯಿತು. 'ಕಿಂಚ ಯಥಾ ಮೃತ್ತಿಕಾದೌ' ಇತ್ಯಾದಿ ಗ್ರಂಥದಿಂದ ಸನ್ನ್ಯಾಯರತ್ನಾವಳಿಯ ಎರಡು ಅಭಿಪ್ರಾಯಗಳನ್ನು ತೋರಿಸಿದರು. ತನ್ಮೂಲಕವಾಗಿ ರಾಜನಲ್ಲಿ ಬರುವ 'ಬದ್ಧಃ' ಮೊದಲಾದ ಶಬ್ದ ಪ್ರಯೋಗಗಳೆಂಬ ಅತಿಪ್ರಸಂಗವನ್ನು ನಿರಾಕರಿಸದ್ದಾಯಿತು.

ಹಿಂದೆ 'ಧನೀ' ಮೊದಲಾದ ಶಬ್ದಗಳ ದೃಷ್ಟಾಂತದಿಂದ ಲೋಕದಲ್ಲಿ ತದ್ಗತತ್ವವೇ ಪ್ರವೃತ್ತಿನಿಮಿತ್ತವೆಂದು ಅನುಭೂತವಾಗಿದೆ. ಆದರೆ ಈಶ್ವರನಲ್ಲಿ 'ದುಃಖೀ' ಮೊದಲಾದ ಶಬ್ದಗಳನ್ನು ಪ್ರಯೋಗಿಸುವಾಗ ಸ್ವಾತಂತ್ರ್ಯವು ನಿಮಿತ್ತವಾಗಿದೆಯೆಂದು ಹೇಳಲಾಗಿತ್ತು. ಇದರ ಮೇಲೆ ಆಶಂಕಿಸಿ ಪ್ರಕೃತ ಉತ್ತರಿಸುತ್ತಿದ್ದಾರೆ. ಅಂದರೆ 'ತದಸ್ಯಾಸ್ತ್ಯಸ್ಮಿನ್' ಎಂಬ ಅನುಶಾಸನದಂತೆ ಒಂದೇ ಪ್ರತ್ಯಯಕ್ಕೆ ಎರಡು ಅರ್ಥಗಳನ್ನು ಕಲ್ಪಿಸಿ, ವಿಷಯಭೇದವನ್ನು ಹೇಳುವುದು ಎಲ್ಲಿಯೂ ಕೂಡ ಕಂಡಿಲ್ಲ. ಅಂದರೆ 'ದುಃಖಮ್ ಅಸ್ಯ ಅಸ್ತಿ' ಎಂಬುದಾಗಿ ನಿಷ್ಪತ್ತಿ ಮಾಡಿದಾಗ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗುತ್ತದೆ. 'ದುಃಖಮ್‌ಅಸ್ಮಿನ್ ಅಸ್ತಿ' ಎಂದು ನಿಷ್ಪತ್ತಿ ಮಾಡಿದಾಗ ತದ್ಗತತ್ವವು ಪ್ರವತ್ತಿನಿಮಿತ್ತವಾಗಿದೆ. ಹೀಗೆ ಒಂದೇ ಮತ್ವರ್ಥೀಯ 'ಇನ್ ಪ್ರತ್ಯಯಕ್ಕೆ ಎರಡು ಅರ್ಥಗಳನ್ನು ಹೇಳಬಹುದೆಂದು ಕಲ್ಪಿಸಬೇಕು. ಆದರೆ ಹೀಗೆ ಎಲ್ಲಿಯೂ ಕೂಡ ಕಂಡಿಲ್ಲವಲ್ಲ? ಎಂಬ ಪ್ರಶ್ನೆಗೆ ಹಿಂದೆ ಹೇಳಿದ ವಿಷಯವನ್ನೇ ಪುನಃ ಸ್ಪಷ್ಟಪಡಿಸುತ್ತಾ, ಬೇರೆ ದೃಷ್ಟಾಂತವನ್ನು ನೀಡುತ್ತಿದ್ದಾರೆ 'ಕಿಂಚ ಯಥಾ ದ್ವಂದ್ವಸ್ಯ' ಇತ್ಯಾದಿ ಗ್ರಂಥದಿಂದ.

**प्रकाशः –** ''चार्थे द्वन्द्वः'' इत्यत्रान्वाचयसमुच्चययोरसामर्थ्येन समासाभावात् समाहारेतरेतरयोगरूपार्थद्वय एव द्वन्द्वस्य विधानमिति वृत्त्यादावुक्तेरुभयार्थत्वेऽ-पीत्युक्तम् ।

ಪ್ರಶ್ನೆ - ದ್ವಂದ್ವಸಮಾಸದಲ್ಲಿ ಉಭಯಾರ್ಥತ್ವವಿದ್ದರೂ ಸಮಾಹಾರವನ್ನೇ ವಿವಕ್ಷಿಸಿದ್ದಾರೆಂದು ಗ್ರಂಥದಲ್ಲಿ ಹೇಳಿದ್ದಾರೆ. ಇದು ತಪ್ಪಲ್ಲವೇ? ನಾಲ್ಕು ಅರ್ಥಗಳಲ್ಲಿ 'ಚ'ಶಬ್ದವಿರುತ್ತದೆ. ಆ ನಾಲ್ಕೂ ಅರ್ಥಗಳಲ್ಲಿ ದ್ವಂದ್ವಸಮಾಸವನ್ನು 'ಚಾರ್ಥೇ ದ್ವಂದ್ವಃ' (೨-೨-೨೯)[೧] ಎಂಬ ಸೂತ್ರವು ವಿಧಿಸುತ್ತಿದೆ. ಹೀಗಿರುವಾಗ ಗ್ರಂಥದಲ್ಲಿ ಎರಡು ಅರ್ಥಗಳಲ್ಲಿ ಮಾತ್ರ ದ್ವಂದ್ವಸಮಾಸವೆಂದು ಹೇಗೆ ಹೇಳಿದರು ?

ಉತ್ತರ - ೧. ಅನ್ವಾಚಯ, ೨. ಸಮುಚ್ಚಯ, ೩. ಸಮಾಹಾರ, ೪. ಇತರೇತರಯೋಗ ಎಂಬುದಾಗಿ 'ಚ'ಶಬ್ದಕ್ಕೆ ನಾಲ್ಕು ಅರ್ಥಗಳಿರುತ್ತವೆ.

೧. ಅನ್ವಾಚಯ - 'ಭಿಕ್ಷಾಂ ಅಟ ಗಾಂ ಚ ಆನಯ' 'ಭಿಕ್ಷೆಯನ್ನು ಬೇಡು, ಹಸುವನ್ನು ಕರೆದು ತಾ'.

ಇಲ್ಲಿ ಭಿಕ್ಷಾಟನಕ್ಕೂ, ಗವಾನಯನಕ್ಕೂ ಪರಸ್ಪರ ಸಂಬಂಧವಿರುವುದಿಲ್ಲ. ಭಿಕ್ಷೆಗೂ ಗೋವಿಗೂ ಪರಸ್ಪರ ಸಾಮರ್ಥ್ಯವಿಲ್ಲದ ಕಾರಣ ಸಮಾಸವಾಗುವುದಿಲ್ಲ.

೨. ಸಮುಚ್ಚಯ - 'ಈಶ್ವರಂ ಗುರುಂ ಚ ಭಜಸ್ವ' 'ಈಶ್ವರನನ್ನು ಹಾಗೂ ಗುರುವನ್ನು ಭಜನೆ ಮಾಡು'.

ಇಲ್ಲಿಯೂ ಕೂಡ ಈಶ್ವರನಿಗೂ ಹಾಗೂ ಗುರುವಿಗೂ ಸಾಮರ್ಥ್ಯವಿರದ ಕಾರಣ ಸಮಾಸವಾಗುವುದಿಲ್ಲ.

೩. ಸಮಾಹಾರ - 'ಸಂಜ್ಞಾ ಚ ಪರಿಭಾಷಾ ಚ ಅನಯೋಃ ಸಮಾಹಾರಃ ಸಂಜ್ಞಾಪರಿಭಾಷಂ' 'ಸಂಜ್ಞೆ ಹಾಗೂ ಪರಿಭಾಷೆಗಳ ಸಮಾಹಾರವೇ ಸಂಜ್ಞಾಪರಿಭಾಷೆ' ಎನಿಸುತ್ತದೆ. ಇಲ್ಲಿ ಸಂಜ್ಞೆಗೂ ಪರಿಭಾಷೆಗೂ ಸಾಮರ್ಥ್ಯವಿರುವ ಕಾರಣ ಸಮಾಸವಾಗುತ್ತದೆ.

೪. ಇತರೇತರಯೋಗ - 'ಧವಶ್ಚ ಖದಿರಶ್ಚ ದವಖದಿರೌ' 'ಧವ ಖದಿರಗಳಿಗೆ ಪರಸ್ಪರ ಸಾಪೇಕ್ಷೆಯಿರುವುದರಿಂದ ಸಮಾಸವಾಗುತ್ತದೆ.

ಮೇಲಿನ ನಾಲ್ಕು ಅರ್ಥಗಳಲ್ಲಿ ಮೊದಲೆರಡು ಅರ್ಥಗಳಿಗೆ ಸಾಮರ್ಥ್ಯವಿರದ ಕಾರಣ ಸಮಾಸವಾಗುವುದಿಲ್ಲ. ಸಮಾಹಾರ ಹಾಗೂ ಇತರೇತರ ಎಂಬರ್ಥಗಳಲ್ಲಿ ಸಾಮರ್ಥ್ಯವಿರುವ ಕಾರಣ ಸಮಾಸವಾಗುತ್ತದೆ. ಇಷ್ಟು ವಿಷಯವನ್ನು ಕಾಶಿಕಾವೃತ್ತಿಯಲ್ಲಿ ಹೇಳಿದ್ದಾರೆ. ಆದ್ದರಿಂದ ದ್ವಂದ್ವಸಮಾಸವು ಎರಡರ್ಥದಲ್ಲಷ್ಟೇ ಇರುತ್ತದೆಂದು ಗ್ರಂಥಕಾರರು ಹೇಳುವುದು ತಪ್ಪಾಗುವುದಿಲ್ಲ.

---

(೧) ಅನೇಕಮಿತಿ ವರ್ತತೇ । ಅನೇಕಂ ಸುಬಂತಂ ಚಾರ್ಥೇ ವರ್ತಮಾನಂ ಸಮಸ್ಯತೇ, ದ್ವಂದ್ವಸಂಜ್ಞಶ್ಚ ಸಮಾಸೋ ಭವತಿ । ಸಮುಚ್ಚಯಾನ್ವಾಚಯೇತರೇತರಯೋಗಸಮಾಹಾರಾಶ್ಚಾರ್ಥಾಃ । ತತ್ರ ಸಮುಚ್ಚಯಾನ್ವಾಚಯೋರಸಾಮರ್ಥ್ಯಾನ್ನಾಸ್ತಿ ಸಮಾಸಃ । ಇತರೇತರಯೋಗೇ ಸಮಾಹಾರೇ ಚ ಸಮಾಸೋ ವಿಧೀಯತೇ ।

'ಅನೇಕಂ' ಎಂಬುದು ಅನುವೃತ್ತವಾಗುತ್ತದೆ. ಅನೇಕವಾದ ಸುಬಂತಗಳು 'ಚ' ಎಂಬರ್ಥದಲ್ಲಿದ್ದಾಗ ಸಮಾಸವನ್ನು ಹೊಂದುತ್ತವೆ. ದ್ವಂದ್ವ ಎಂಬ ಸಮಾಸವನ್ನು ತಿಳಿಯಬೇಕು. 'ಸಮುಚ್ಚಯ', 'ಅನ್ವಾಚಯ', 'ಇತರೇತರಯೋಗ', 'ಸಮಾಹಾರ' ಎಂಬುದಾಗಿ 'ಚ' ಶಬ್ದಕ್ಕೆ ನಾಲ್ಕು ಅರ್ಥಗಳಿವೆ. ಇವುಗಳಲ್ಲಿ ಸಮುಚ್ಚಯ ಹಾಗೂ ಅನ್ವಾಚಯಗಳಿಗೆ ಸಮಾರ್ಥ್ಯವಿಲ್ಲದ ಕಾರಣ ಸಮಾಸವಿರುವುದಿಲ್ಲ. ಇತರೇತರಯೋಗ ಹಾಗೂ ಸಮಾಹಾರಗಳಲ್ಲಿ ಸಮಾರ್ಥ್ಯವಿರುವ ಕಾರಣ ಸಮಾಸವನ್ನು ವಿಧಿಸಲಾಗಿದೆ.

ಪರಿಪೂರ್ಣಚಂದ್ರಿಕಾ

प्रकाशः – ''द्वन्द्वश्च प्राणितूर्यसेनाङ्गानाम्'' इति सूत्रे ''द्विगुरेकवचनम्'' इत्यत एकवचनमिति पदमनुवर्त्य प्राण्यङ्गानां तूर्याङ्गानां सेनाङ्गानां च द्वन्द्व एकवद्भवतीत्यर्थमुक्त्वा शिरोग्रीवं मार्दङ्गिकपाणविकं रथिकाश्वारोहमित्युदाहृत्योक्तं वृत्तौ ''इतरेतरयोगे समाहारे च द्वन्द्वो विहितः । तत्र समाहारस्यैकत्वात् सिद्धमेवैकवचनम् । इदं तु प्रकरणं विषयविभागार्थम् । प्राण्यङ्गादीनां समाहार एव द्वन्द्वः । दधिपयआदीनामितरेतरयोग एव । वृक्षमृगादीनामुभयत्रेति'' इति ॥

'ದ್ವಂದ್ವಶ್ಚ ಪ್ರಾಣಿತೂರ್ಯಸೇನಾಂಗಾನಾಮ್' ಎಂಬ ಸೂತ್ರದಲ್ಲಿ 'ದ್ವಿಗುರೇಕವಚನಮ್' ಎಂಬ ಹಿಂದಿನ ಸೂತ್ರದಿಂದ 'ಏಕವಚನಮ್' ಎಂಬ ಪದವು ಅನುವೃತ್ತವಾಗಿದೆ. ಆದ್ದರಿಂದ ಪ್ರಾಣ್ಯಂಗಗಳಿಗೆ ವಾದ್ಯಗಳ ಅಂಗಗಳಿಗೆ, ಸೇನೆಯ ಅಂಗಗಳಿಗೆ ಸಮಾಸ ಮಾಡುವಾಗ ದ್ವಂದ್ವಸಮಾಸದಲ್ಲಿ ಏಕವಚನವು ಬರುತ್ತದೆಂಬ ಅರ್ಥವು ಲಭ್ಯವಾಗುತ್ತದೆ.

೧. ಪ್ರಾಣ್ಯಂಗಗಳಿಗೆ ಉದಾಹರಣೆ - 'ಶಿರಶ್ಚ ಗ್ರೀವಾಚ ಶಿರೋಗ್ರೀವಂ'.

೨. ತೂರ್ಯಾಂಗಗಳಿಗೆ ಉದಾಹರಣೆ - 'ಮೃದಂಗದ ಅವಯವವನ್ನು 'ಮಾರ್ದಂಗಿಕ' ಎನ್ನುತ್ತಾರೆ. 'ಪಣವ' ಎಂಬ ವಾದ್ಯದ ಅಂಗಕ್ಕೆ 'ಪಾಣವಿಕ' ಎನ್ನುತ್ತಾರೆ. 'ಮೃದಂಗಸ್ಯ ಇದಂ ಮಾರ್ದಂಗಿಕಂ' 'ಪಣವಸ್ಯ ಇದಂ ಪಾಣವಿಕಂ' ಎಂದು ತಿಳಿಯಬೇಕು. ಈ ಮಾರ್ದಂಗಿಕ ಹಾಗೂ ಪಾಣವಿಕ ಶಬ್ದಗಳಿಗೆ ದ್ವಂದ್ವಸಮಾಸ ಮಾಡಿದಾಗ 'ಮಾರ್ದಂಗಿಕಂ ಚ ಪಾಣವಿಕಂ ಚ ಮಾರ್ದಂಗಿಕಪಾಣವಿಕಂ' ಎಂದು ಏಕವದ್ಭಾವವು ಪ್ರಾಪ್ತವಾಗುತ್ತದೆ.

೩. ಸೇನಾಂಗಕ್ಕೆ ಉದಾಹರಣೆ - 'ರಥಿಕಾಶ್ಚ ಅಶ್ವಾರೋಹಾಶ್ಚ ರಥಿಕಾಶ್ವರೋಹಂ' ಇಲ್ಲಿಯೂ ಕೂಡ ರಥಿಕರು ಹಾಗೂ ಅಶ್ವಾರೋಹಿಗಳು ಸೇನೆಯ ಅಂಗವಾದ್ದರಿಂದ ಸಮಾಸದಲ್ಲಿ ಈ ಪದವು ಏಕವದ್ಭಾವವನ್ನು ಹೊಂದುತ್ತದೆ.

ಹೀಗೆ ಉದಾಹರಣೆಗಳನ್ನು ನೀಡಿ ಕಾಶಿಕಾವೃತ್ತಿಯಲ್ಲಿ ಮುಂದೆ ಹೀಗೆ ಹೇಳಲಾಗಿದೆ - 'ಇತರೇತರಯೋಗೇ ಸಮಾಹಾರೇ ಚ ದ್ವಂದ್ವೋ ವಿಹಿತಃ । ತತ್ರ ಸಮಾಹಾರಸ್ಯೈಕತ್ವಾತ್ ಸಿದ್ಧಮೇವೈಕವಚನಮ್ । ಇದಂ ತು ಪ್ರಕರಣಂ ವಿಷಯವಿಭಾಗಾರ್ಥಮ್ । ಪ್ರಾಣ್ಯಂಗಾದೀನಾಂ ಸಮಾಹಾರ ಏವ ದ್ವಂದ್ವಃ । ದಧಿಪಯಆದೀನಾಮಿತರೇತರಯೋಗ ಏವ । ವೃಕ್ಷಮೃಗಾದೀನಾಮುಭಯತ್ರೇತಿ' ಇತರೇತರಯೋಗ ಹಾಗೂ ಸಮಾಹಾರಗಳಲ್ಲಿ ದ್ವಂದ್ವಸಮಾಸವನ್ನು ವಿಧಿಸಲಾಗಿದೆ. ಇವೆರಡರಲ್ಲಿ ಸಮಾಹಾರವು ಸಮುದಾಯರೂಪವಾಗಿರುತ್ತದೆ. ಸಮುದಾಯವು ಒಂದೇ ಆಗಿರುವುದರಿಂದ ಏಕವಚನವು ಸ್ವಾಭಾವಿಕವಾಗಿಯೇ ಬರುತ್ತದೆ. ಸಮುದಾಯಿಗಳು ಅನೇಕವಾಗಿದ್ದರೂ ಸಮುದಾಯ ಒಂದೇ ಆಗಿರುವುದರಿಂದ ಏಕವಚನವೇ ಬರಬೇಕು. ಹೀಗಿದ್ದಾಗ 'ಪ್ರಾಣಿತೂರ್ಯಸೇನಾಂಗಾನಾಮ್' ಎಂಬ ಸೂತ್ರದಲ್ಲಿ ಸಮಾಹಾರಕ್ಕೆ ಏಕವಚನವನ್ನು ವಿಧಿಸುವುದು ವ್ಯರ್ಥವಲ್ಲವೇ?

ಹೀಗೆ ಶಂಕಿಸಬಾರದು. ಏಕೆಂದರೆ ದ್ವಂದ್ವಸಮಾಸದ ವಿಷಯದಲ್ಲಿ ಹೊರಟಿರುವ ಈ ಪ್ರಕರಣವು ಕೇವಲ ವಿಷಯ ವಿಭಾಗಕ್ಕೋಸ್ಕರವಿರುತ್ತದೆ. ಅಂದರೆ ಪ್ರಾಣ್ಯಂಗವಾಚಕಶಬ್ದಗಳಿಗೆ ಸಮಾಹಾರದಲ್ಲಿ ಮಾತ್ರ ದ್ವಂದ್ವಸಮಾಸವು ಪ್ರಾಪ್ತವಾಗುತ್ತದೆ. ದಧಿ, ಪಯ ಮೊದಲಾದವುಗಳಿಗೆ ಇತರೇತರಯೋಗದಲ್ಲಿ ಮಾತ್ರ ಸಮಾಸವು ಪ್ರಾಪ್ತವಾಗುತ್ತದೆ. ವೃಕ್ಷ ಮೃಗಾದಿಗಳಿಗೆ ಸಮಾಹಾರ ಹಾಗೂ ಇತರೇತರಯೋಗ ಎರಡರಲ್ಲಿಯೂ ಸಮಾಸವು ಪ್ರಾಪ್ತವಾಗುತ್ತದೆ. ಆದ್ದರಿಂದ 'ದ್ವಂದ್ವಶ್ಚ ಪ್ರಾಣಿತೂರ್ಯ' (೨-೨-೪)[1] ಇತ್ಯಾದಿ ಸೂತ್ರವು ಏಕವಚನದ ವಿಧಿಗೋಸ್ಕರ ಹೊರಟಿರುವುದಿಲ್ಲ. ಏಕೆಂದರೆ ಸಮಾಹಾರ ಮಾಡಿದಾಗ ಏಕವಚನವು ಸ್ವತಃ ಏವ ಸಿದ್ಧವಾಗುತ್ತದೆ. ಪ್ರಾಣ್ಯಂಗಾದಿಗಳಲ್ಲಿ ಮಾತ್ರ ಸಮಾಹಾರವನ್ನು ಮಾಡಬೇಕು. ಆವಾಗ ಏಕವಚನವು ಇದ್ದೇ ಇರುತ್ತದೆಂದು ಸೂತ್ರದ ಅಭಿಪ್ರಾಯ.

ಇಷ್ಟು ವಿಷಯವನ್ನು ಕಾಶಿಕವೃತ್ತಿಯಲ್ಲಿ ಹೇಳಿದ್ದಾರೆ.

**प्रकाशः –** ततश्च ''द्वन्द्वश्च प्राणितूर्य'' इत्यारभ्यैकवद्भावतद्विकल्पतन्निषेध-परानेकसूत्रसन्दर्भात्मकमिदं प्रकरणमारभमाणस्य पाणिनेर्यथा क्वचित् प्राण्यङ्गादौ समाहारविवक्षा दधिपयआदावितरेतरयोगविवक्षा । ''न दधिपयआदीनि'' इत्येकवद्भावनिषेधात् । तथेहापि दुःखीत्यादिमत्वर्थीयप्रत्ययान्तशब्दस्य ''तदस्या-स्त्यस्मिन्'' इत्यनुशासनेन षष्ठीसप्तम्यर्थरूपस्वातन्त्र्यतदाश्रयत्वलक्षणोभयार्थत्वे विषयभेदेन निमित्तभेदविवक्षाऽस्तु । तथा च न राज्ञि बद्धादिशब्दप्रयोगापातः ।

ಆದ್ದರಿಂದ 'ದ್ವಂದ್ವಶ್ಚ ಪ್ರಾಣಿತೂರ್ಯ' ಇತ್ಯಾದಿ ಸೂತ್ರದಿಂದ ಪ್ರಾರಂಭಿಸಿ ಅನೇಕ ಸೂತ್ರಗಳಲ್ಲಿ ಏಕವದ್ಭಾವ, ಏಕವದ್ಭಾವದ ವಿಕಲ್ಪ, ತನ್ನಿಷೇಧ, ಇವುಗಳನ್ನು ಪಾಣಿನಿಯು ವಿಧಿಸಿದ್ದಾನೆ. ಅಂದರೆ ಪ್ರಾಣ್ಯಂಗಾದಿಗಳಲ್ಲಿ ಕೇವಲ ಸಮಾಹಾರರೂಪವಾದ ದ್ವಂದ್ವಸಮಾಸವನ್ನೇ ಮಾಡಬೇಕು. ದಧಿ, ಪಯ ಇತ್ಯಾದಿ ಸ್ಥಳಗಳಲ್ಲಿ ಇತರೇತರಯೋಗವನ್ನಷ್ಟೇ ಮಾಡಬೇಕು. ಏಕೆಂದರೆ 'ನ ದಧಿಪಯಆದೀನಿ' ಎಂಬುದಾಗಿ ಏಕವದ್ಭಾವದ ನಿಷೇಧವನ್ನು ಮಾಡಿರುವುದರಿಂದ. ಅಂದರೆ ಕೆಲವೆಡೆ ಮಾತ್ರ ಸಮಾಹಾರದ್ವಂದ್ವವು ಬರುತ್ತದೆ. ಇನ್ನು ಕೆಲವು ಕಡೆ ಬರುವುದೇ ಇಲ್ಲವೆಂದು ಪಾಣಿನಿಯು ವ್ಯವಸ್ಥೆಯನ್ನು ಮಾಡಿರುತ್ತಾನೆ. ಅದರಂತೆ ಪ್ರಕೃತದಲ್ಲಿ 'ದುಃಖೀ' ಮೊದಲಾದ ಮತ್ವರ್ಥೀಯ ಪ್ರತ್ಯಯಾಂತವಾದ ಶಬ್ದಗಳಲ್ಲಿಯೂ ತಿಳಿಯಬೇಕು. 'ತದಸ್ಯಾಸ್ತ್ಯಸ್ಮಿನ್' ಎಂಬ ಅನುಶಾಸನದ ಪ್ರಕಾರ ಷಷ್ಠ್ಯರ್ಥವು ವಿವಕ್ಷಿತವಾದಾಗ

(೧) ಏಕವಚನಮಿತಿ ವರ್ತತೇ । ಅಂಗಶಬ್ದಸ್ಯ ಪ್ರತ್ಯೇಕಂ ವಾಕ್ಯಪರಿಸಮಾಪ್ತ್ಯಾ ತ್ರೀಣೀ ವಾಕ್ಯಾನಿ ಸಂಪದ್ಯಂತೇ । ಪ್ರಾಣ್ಯಂಗಾನಾಂ ದ್ವಂದ್ವೇ ಏಕವದ್ ಭವತಿ, ತಥಾ ತೂರ್ಯಾಂಗಾನಾಂ ಸೇನಾಂಗಾನಾಂ ಚ । ಪ್ರಾಣ್ಯಂಗಾನಾಂ ತಾವತ್ - ಪಾಣಿಪಾದಮ್, ಶಿರೋಗ್ರೀವಮ್ । ತೂರ್ಯಾಂಗಾನಾಮ್ - ಮಾರ್ದಂಗಿಕಪಾಣಾವಿಕಮ್, ವೀಣಾವಾದಕಪರಿವಾದಕಮ್ । ಸೇನಾಂಗಾನಾಂ - ರಥಿಕಾಶ್ವಾರೋಹಮ್, ರಥಿಕಪಾದಾತಮ್ । ಹಸ್ತ್ಯಶ್ವಾದಿಷು ಪರತ್ವಾತ್ - ಪಶುದ್ವಂದ್ವೇ ವಿಭಾಷಯೈಕವದ್ ಭವತಿ ಇತರೇತರಯೋಗೇ ಸಮಾಹಾರೇ ಚ ದ್ವಂದ್ವೋ ವಿಹಿತ; ತತ್ರ ಸಮಾಹಾರಸ್ಯೈಕತ್ವಾತ್ ಸಿದ್ಧಮೇವೈಕವಚನಮ್ । ಇದಂ ತು ಪ್ರಕರಣಂ ವಿಷಯವಿಭಾಗಾರ್ಥಮ್ - ಪ್ರಾಣ್ಯಂಗಾದೀನಾಂ ಸಮಾಹಾರ ಏವ ದ್ವಂದ್ವಃ; ದಧಿಪಯಆದೀನಾಮಿತರೇತರಯೋಗ ಏವ ವೃಕ್ಷಮೃಗಾದೀನಾಮುಭಯತ್ರೇತಿ ॥

ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿರುತ್ತದೆ. ಸಪ್ತಮ್ಯರ್ಥವು ವಿವಕ್ಷಿತವಾದಾಗ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತ ಮಾತ್ರವಿರುತ್ತದೆ. ಒಂದು ವೇಳೆ ಎರಡೂ ಅರ್ಥಗಳು ವಿವಕ್ಷಿತವಾದಾಗ ವಿಷಯಭೇದದಿಂದ ಎರಡೂ ವಿಧದ ಪ್ರವೃತ್ತಿನಿಮಿತ್ತಗಳನ್ನು ವಿವಕ್ಷಿಸಬೇಕು. ಆದ್ದರಿಂದ ರಾಜನಲ್ಲಿ 'ಬದ್ಧಃ' ಎಂಬ ಶಬ್ದವನ್ನು ಪ್ರಯೋಗ ಮಾಡಲೇ ಬಾರದು. ಪರಮಾತ್ಮನಲ್ಲಿ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವೂ ಬರುತ್ತದೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವೂ ಬರುತ್ತದೆ. ಆದರೆ ರಾಜನ ವಿಷಯದಲ್ಲಿ 'ಬದ್ಧಃ' ಎಂಬ ಶಬ್ದ ಪ್ರಯೋಗವನ್ನು 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ವಿವಕ್ಷಿಸಿ ಹೇಳಬಾರದು. ಹೀಗೆ ನಿಯಮವನ್ನು 'ತದಸ್ಯಾಸ್ತ್ಯಸ್ಮಿನ್' ಎಂಬ ಅನುಶಾಸನವು ಮಾಡುತ್ತಿದೆ.

**प्रकाशः – जयीति शब्दप्रयोगोऽपि राज्ञि स्वातन्त्र्यविवक्षया भृत्ये तद्गतत्वविवक्षया चोपपन्न इति भावः ।**

ಮತ್ತು 'ಜಯೀ' ಎಂಬ ಶಬ್ದಪ್ರಯೋಗವು ರಾಜನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಯುಕ್ತವಾಗುತ್ತದೆ. ಭೃತ್ಯನಲ್ಲಿ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ಯುಕ್ತವಾಗುತ್ತದೆಂದು ತಿಳಿಯಬೇಕು.




ವ್ಯಾಕರಣಶಾಸ್ತ್ರದಲ್ಲಿ ದ್ವಂದ್ವಸಮಾಸವನ್ನು ವಿಧಿಸುವಾಗ ಪ್ರಾಣ್ಯಂಗಾದಿಗಳಲ್ಲಿ ಸಮಾಹಾರ-ದ್ವಂದ್ವಸಮಾಸವನ್ನೇ ಮಾಡಬೇಕು. 'ದಧಿಪಯೇ' ಎಂಬಲ್ಲಿ 'ಇತರೇತರಯೋಗ' ಸಮಾಸವನ್ನೇ ಮಾಡಬೇಕು ಎಂಬ ನಿಯಮವನ್ನು ಮಾಡಿದ್ದಾರೆ. ವಾಸ್ತವಿಕವಾಗಿ 'ದಧಿಪಯೇ' ಎಂಬಲ್ಲಿಯೂ ಸಮಾಹಾರ ದ್ವಂದ್ವವನ್ನು ಮಾಡಬಹುದು. ಪ್ರಾಣ್ಯಂಗಾದಿಗಳಲ್ಲಿ 'ಇತರೇತರಯೋಗ' ದ್ವಂದ್ವಸಮಾಸವನ್ನು ಮಾಡಬಹುದು. ಇದನ್ನು ನಿಷೇಧಿಸಿ ಪ್ರಾಣ್ಯಂಗಾದಿಗಳಲ್ಲಿ ಸಮಾಹಾರ ದ್ವಂದ್ವಸಮಾಸವನ್ನೇ ಮಾಡಬೇಕು. 'ದಧಿಪಯೇ' ಎಂಬಲ್ಲಿ ಇತರೇತರೇ ಸಮಾಸವನ್ನೇ ಮಾಡಬೇಕೆಂದು ನಿಯಮ ಮಾಡಿರುತ್ತಾರೆ. ಅದರಂತೆ ಪ್ರಕೃತ 'ದುಃಖೀ' ಎಂಬ ಶಬ್ದದಲ್ಲಿ ದುಃಖವುಳ್ಳವನು ಹಾಗೂ ದುಃಖಕ್ಕೆ ಸ್ವಾಮಿಯು ಎಂಬೆರಡರ್ಥವು ಇದ್ದರೂ ಲೋಕದಲ್ಲಿರುವ ಜನರಲ್ಲಿ ದುಃಖವುಳ್ಳವನು ಎಂಬರ್ಥದಲ್ಲಿಯೇ 'ದುಃಖೀ' ಎಂಬ ಶಬ್ದವನ್ನು ಪ್ರಯೋಗಿಸಬೇಕು. ಪರಮಾತ್ಮನು ದುಃಖಕ್ಕೆ ಸ್ವಾಮಿಯಾದ್ದರಿಂದ 'ದುಃಖೀ' ಎಂಬ ಶಬ್ದವನ್ನು ಪ್ರಯೋಗಿಸಬೇಕು ಹೊರತು, ಲೋಕದಲ್ಲಿ ದುಃಖಸ್ವಾಮಿಯೆಂಬರ್ಥದಲ್ಲಿ 'ದುಃಖೀ' ಶಬ್ದವನ್ನು ದುಃಖಕ್ಕೆ ಆಶ್ರಯನು ಎಂಬರ್ಥದಿಂದ ಪರಮಾತ್ಮನಲ್ಲಿ 'ದುಃಖೀ' ಎಂಬರ್ಥವನ್ನು ಪ್ರಯೋಗಿಸಬಾರದು.



## ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವೆಂಬ ಪಕ್ಷದಲ್ಲಿ ಯಾವುದೇ ಅತಿಪ್ರಸಂಗವಿಲ್ಲ

### तात्पर्यचन्द्रिका

**यद्वा राज्ञो बन्धनादियोग्यत्वात् तत्रामङ्गलधीर्मा भूदिति बद्धाद्यप्रयोगः ।**

ಅನುವಾದ - 'ರಾಜನಲ್ಲಿಯೂ 'ಬದ್ಧಃ' ಮೊದಲಾದ ಶಬ್ದಗಳ ಪ್ರಯೋಗವು ಬರಬೇಕಾದೀತು' ಎಂಬ ಅತಿಪ್ರಸಂಗವನ್ನು ಮತ್ತೊಂದು ಬಗೆಯಲ್ಲಿ ಪರಿಹರಿಸುತ್ತಿದ್ದಾರೆ -

ರಾಜನಿಗೆ ಬಂಧನಾದಿಗಳಾಗುವ ಸಾಧ್ಯತೆಯಿರುವ ಕಾರಣ, ಭೃತ್ಯನು ಬಂಧಿತನಾದರೆ, ರಾಜನಲ್ಲಿ 'ಬದ್ಧಃ' ಎಂಬ ಪ್ರಯೋಗವನ್ನು ಮಾಡಬಾರದು. ಏಕೆಂದರೆ ಇಂತಹ ಶಬ್ದವು ರಾಜನಲ್ಲಿ ಪ್ರಯೋಗಿಸುವುದು ಅಮಂಗಳಕರವಾಗಿದೆ.

**ब्रह्मणस्तु दोषातिदूरत्वात् प्राज्ञानां तद्धीर्नास्तीति स्वातन्त्र्यविवक्षया तत्प्रयोगेऽप्यदोषः ।**

ಬ್ರಹ್ಮನಿಗೆ ಬಂಧನಾದಿಗಳಾಗುವ ಸಾಧ್ಯತೆ ಸರ್ವಥಾ ಇರುವುದಿಲ್ಲ. ಸಕಲ ದೋಷಗಳಿಂದ ಅತಿದೂರನಾದ್ದರಿಂದ ಪ್ರಾಜ್ಞರಿಗೆ ಪರಮಾತ್ಮನಲ್ಲಿ ಬಂಧನಾದಿಗಳ ಬುದ್ಧಿಯೇ ಬರುವುದಿಲ್ಲ. ಹಾಗಾಗಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ 'ಬದ್ಧಃ' 'ದುಃಖೀ' ಇತ್ಯಾದಿ ಶಬ್ದಗಳನ್ನು ಪರಮಾತ್ಮನಲ್ಲಿ ಪ್ರಯೋಗಿಸುವುದು ಅಮಂಗಳಕರವಾಗುವುದಿಲ್ಲ. ಮತ್ತು ಬೇರೆ ಯಾವುದೇ ದೋಷಗಳೂ ಕೂಡ ಬರುವುದಿಲ್ಲ.

**न चोत्कर्षेण वर्तनस्यापि जयिधात्वर्थत्वात्तदाश्रयत्वस्य च राज्ञि सम्भवान्न स्वातन्त्र्यं तत्र निमित्तमिति वाच्यम् ।**

ಪ್ರಶ್ನೆ - 'ಜಯಃ ಅಸ್ಯ ಅಸ್ತೀತಿ ಜಯೀ' ಎಂಬುದು 'ಜಯೀ' ಶಬ್ದದ ನಿಷ್ಪತ್ತಿ. 'ಜಯ' ಶಬ್ದಕ್ಕೆ 'ಉತ್ಕೃಷ್ಟೋ ವರ್ತತೇ' (ಉತ್ಕೃಷ್ಟನಾಗಿದ್ದಾನೆಂದರ್ಥ.) ಭೃತ್ಯನು ಗೆದ್ದರೆ ರಾಜನು ಉತ್ಕೃಷ್ಟನಾಗಿದ್ದಾನೆ ಎಂದರ್ಥ. ಉತ್ಕರ್ಷೇಣ ವಿದ್ಯಮಾನತ್ವಕ್ಕೆ ರಾಜನು ಆಶ್ರಯನೇ ಆಗಿರುತ್ತಾನೆ. ಆದ್ದರಿಂದ 'ಜಯೀ' ಎಂಬ ಶಬ್ದವನ್ನು 'ಆಶ್ರಯತ್ವ' ಎಂಬ ಪ್ರವೃತ್ತಿನಿಮಿತ್ತದಿಂದಲೇ ರಾಜನಲ್ಲಿ ಕೂಡಿಸಬಹುದು. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಹೇಳುವ ಅವಶ್ಯಕತೆಯೇ ಇರುವುದಿಲ್ಲ.

(ಅಭಿಪ್ರಾಯವಿಷ್ಟು - ಇಲ್ಲಿಯ ತನಕ 'ಜಯೀ' ಎಂಬ ಶಬ್ದಪ್ರಯೋಗವನ್ನು ಸ್ವಾತಂತ್ರ್ಯ-ಪ್ರಯುಕ್ತವಾಗಿ ರಾಜನಲ್ಲಿ ಹೇಳಬಹುದು. ಆದರೆ ಬದ್ಧಃ' ಎಂಬ ಪ್ರಯೋಗವನ್ನು ಸ್ವಾತಂತ್ರ್ಯ-ಪ್ರಯುಕ್ತವಾಗಿ ಹೇಳಬಾರದೆನ್ನಲಾಯಿತು. ಪ್ರಕೃತ 'ಜಯೀ' ಎಂಬ ಶಬ್ದವನ್ನು ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತ ಪ್ರಯುಕ್ತವಾಗಿ ಹೇಳುವ ಅವಶ್ಯಕತೆಯಿರುವುದಿಲ್ಲ. 'ಆಶ್ರಯತ್ವ' ಎಂಬ ಪ್ರವೃತ್ತಿನಿಮಿತ್ತದಿಂದಲೇ ಹೇಳಬಹುದು ಎಂದು ಪ್ರಶ್ನಿಸಲಾಗಿದೆ.)

ಪರಿಪೂರ್ಣಚಂದ್ರಿಕಾ

**'राजा शत्रूञ्जयति' इत्यभिभवाभिप्रायेणापि तत्प्रयोगात् ।**

ಉತ್ತರ - 'ಜಯೀ' ಎಂಬಲ್ಲಿ 'ಜಿ' ಧಾತುವಿಗೆ 'ಉತ್ಕರ್ಷ' ಎಂಬರ್ಥವನ್ನು ವಿವಕ್ಷಿಸಬಹುದು. ಆದರೆ 'ರಾಜಾ ಶತ್ರೂನ್ ಜಯತಿ' (ರಾಜನು ಶತ್ರುಗಳನ್ನು ಜಯಿಸುತ್ತಾನೆ.) ಎಂಬ ಪ್ರಯೋಗದಲ್ಲಿರುವ 'ಜಿ' ಧಾತುವಿಗೆ ಉತ್ಕರ್ಷ ಎಂಬರ್ಥವನ್ನು ವಿವಕ್ಷಿಸಲು ಸಾಧ್ಯವೇ ಇಲ್ಲ. ಅಭಿಭವ' ಎಂಬರ್ಥವನ್ನೇ ವಿವಕ್ಷಿಸಬೇಕು. ಏಕೆಂದರೆ 'ಶತ್ರೂನ್' ಎಂಬುದಾಗಿ ಕರ್ಮವಾಚಕಪದವು ಶ್ರುತವಾಗಿರುವುದರಿಂದ ಇಲ್ಲಿರುವ 'ಜಿ' ಧಾತು ಅತಿಭವ' ಎಂಬರ್ಥದಲ್ಲಿಯೇ ಇರುತ್ತದೆ. 'ಉತ್ಕರ್ಷ' ಎಂಬರ್ಥದಲ್ಲಿರುವ 'ಜಿ' ಧಾತು ಅಕರ್ಮಕವಾದ್ದರಿಂದ ಅದನ್ನು ಇಲ್ಲಿ ವಿವಕ್ಷಿಸಲಾಗದು. ಆದ್ದರಿಂದ ಪ್ರಕೃತ 'ಶತ್ರೂನ್ ಜಯತಿ' ಎಂಬಲ್ಲಿ 'ಅತಿಭವ' ಎಂಬರ್ಥವನ್ನು ವಿವಕ್ಷಿಸಬೇಕಾದ್ದರಿಂದ ರಾಜನಂತೂ ಶತ್ರುಗಳನ್ನು ನೇರವಾಗಿ ಸೋಲಿಸಿಲ್ಲ , ಭೃತ್ಯನೇ ಶತ್ರುಗಳನ್ನು ಸೋಲಿಸಿದ್ದಾನೆ. ಆದರೂ ಸಹ 'ರಾಜಾ ಶತ್ರೂನ್ ಜಯತಿ' ಎಂದು ಪ್ರಯೋಗಿಸುತ್ತೇವೆ. ಈ ಸಂದರ್ಭದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸಿ, 'ಜಯತಿ' ಎಂಬ ಪ್ರಯೋಗವನ್ನು ಕೂಡಿಸಬೇಕು ಹೊರತು, 'ತದಾಶ್ರಯತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, 'ಜಯತಿ' ಎಂಬ ಪ್ರಯೋಗವನ್ನು ಕೂಡಿಸಲು ಸಾಧ್ಯವಿಲ್ಲ.

**नापि जयाश्रयभृत्यसम्बन्धात् राज्ञि लाक्षणिकः ।**

ಪ್ರಶ್ನೆ - ಜಯಕ್ಕೆ ಆಶ್ರಯನಾದವನು ಭೃತ್ಯನಾಗಿದ್ದಾನೆ. ಅವನ ಸಂಬಂಧ ರಾಜನಲ್ಲಿರುವುದರಿಂದ ರಾಜನಲ್ಲಿ 'ಜಯೀ' ಎಂಬ ಶಬ್ದವು ಲಾಕ್ಷಣಿಕವಾಗಿದೆ. ಹೀಗೆ ವಿವಕ್ಷಿಸಿದಾಗಲೂ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವು ಸಿದ್ಧವಾಗುವುದಿಲ್ಲವೇ?

**भृत्यसम्बधिनि पुरुषान्तरे तदप्रयोगात् ।**

ಉತ್ತರ - ಇದು ಸರಿಯಲ್ಲ. ಏಕೆಂದರೆ ಭೃತ್ಯನ ಸಂಬಂಧವಿರುವ ಪ್ರಯುಕ್ತ, ರಾಜನಲ್ಲಿ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸುವುದಾದರೆ, ಆದೇ ಭೃತ್ಯನ ಸಂಬಂಧವು ಭೃತ್ಯನ ಹೆಂಡತಿ ಹಾಗೂ ಅವನ ಮಕ್ಕಳಲ್ಲಿಯೂ ಇರುವುದರಿಂದ ಅವರಲ್ಲಿಯೂ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸಬೇಕಾದೀತು. ಆದರೆ ಯಾರೂ ಸಹ ಭೃತ್ಯನ ಹೆಂಡತಿ ಮತ್ತು ಮಕ್ಕಳಲ್ಲಿ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸುವುದಿಲ್ಲ.

**जयाश्रयभृत्यधीपूर्वकत्वाभावाच्च ।**

ಮತ್ತು ಲಕ್ಷಣಾ ಮಾಡುವಾಗ ಮೊದಲು ಮುಖ್ಯಾರ್ಥಜ್ಞಾನವು ಬಂದು, ಆದರಲ್ಲಿ ಅನುಪಪತ್ತಿಯ ಅನುಸಂಧಾನದ ಅನಂತರ ಲಾಕ್ಷಣಿಕಾರ್ಥದಲ್ಲಿ ಲಕ್ಷಣಾ ಮಾಡಲಾಗುತ್ತದೆ. ಉದಾಹರಣೆ 'ಗಂಗಾಯಾಂ ಘೋಷಃ' ಎಂಬಲ್ಲಿ 'ಗಂಗಾ' ಪದಕ್ಕೆ ಪ್ರವಾಹ ಎಂಬರ್ಥವನ್ನು

ವಿವಕ್ಷಿಸಿದರೆ ಪ್ರವಾಹದಲ್ಲಿ ಘೋಷವು ಇರಲು ಸಾಧ್ಯವಿಲ್ಲವೆಂಬ ಅನುಪಪತ್ತಿಯ ಜ್ಞಾನವು ಬಂದು, ಅದಕ್ಕೋಸ್ಕರ ಗಂಗಾಶಬ್ದಕ್ಕೆ ತೀರವೆಂರ್ಥವನ್ನು ಮಾಡುವುದು ಅನಿವಾರ್ಯವಾಗುತ್ತದೆ. ಆದರೆ ಪ್ರಕೃತದಲ್ಲಿ ಜಯಕ್ಕೆ ಆಶ್ರಯನಾದವನು ಭೃತ್ಯನಾಗಿದ್ದಾನೆ ಎಂಬ ಮುಖ್ಯಾರ್ಥಜ್ಞಾನವು ಮೊದಲು ಪ್ರಾಪ್ತವಾದಾಗ ಯಾವುದೇ ಅನುಪಪತ್ತಿಯು ಇರುವುದಿಲ್ಲ. ಹೀಗಿರುವಾಗ ರಾಜನಲ್ಲಿ ಲಕ್ಷಣಾ ಮಾಡಲು ಕಾರಣವಿರುವುದಿಲ್ಲ.

**नहि भृत्यस्य विजयिशब्दस्तावत् प्रयुज्यते ।**
**यावद्राज्ञ्यन्यगत्वेऽपि स्वातन्त्र्याभासमात्रतः ।।**

**इत्यनुव्याख्याने भृत्यादपि राज्ञि प्रयोगप्राचुर्याद्युक्तेश्च ।**

ನಹಿ ಭೃತ್ಯಸ್ಯ ವಿಜಯಿಶಬ್ದಸ್ತಾವತ್ ಪ್ರಯುಜ್ಯತೇ ।
ಯಾವದ್ರಾಜ್ಞ್ಯನ್ಯಗತ್ವೇಽಪಿ ಸ್ವಾತಂತ್ರ್ಯಾಭಾಸಮಾತ್ರತಃ ।।

ಭೃತ್ಯನು ಶತ್ರುಗಳನ್ನು ಗೆದ್ದಾಗ ಭೃತ್ಯನಲ್ಲಿ ಯಾವ 'ವಿಜಯೀ' ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೋ, ಅದಕ್ಕಿಂತ ಹೆಚ್ಚಿನ ಪ್ರಯೋಗವನ್ನು ರಾಜನಲ್ಲಿ ಮಾಡಲಾಗುತ್ತದೆ. ವಾಸ್ತವಿಕವಾಗಿ ವಿಜಯವು ಭೃತ್ಯಗತವಾಗಿದ್ದರೂ ಕೇವಲ ಸ್ವಾತಂತ್ರ್ಯಾಭಾಸದಿಂದ ರಾಜನಲ್ಲಿ ಹೆಚ್ಚಿನ ಪ್ರಯೋಗವಿರುವುದು ಕಂಡಿದೆ.

ಹೀಗೆ ಅನುವ್ಯಾಖ್ಯಾನದಲ್ಲಿ ಭೃತ್ಯನಿಗಿಂತಲೂ ಹೆಚ್ಚಿನ ಪ್ರಯೋಗಪ್ರಾಚುರ್ಯವನ್ನು ರಾಜನಲ್ಲಿ ಸ್ವಾತಂತ್ರ್ಯಾಭಾಸಮಾತ್ರದಿಂದಲೇ ಹೇಳಿದ್ದಾರೆ. ಇನ್ನು ನಿಜವಾದ ಸ್ವಾತಂತ್ರ್ಯವಿರುವ ಪರಮಾತ್ಮನಲ್ಲಿ ಇನ್ನೂ ಹೆಚ್ಚಿನ ಪ್ರಯೋಗವಿರುತ್ತದೆಂದು ಪ್ರತ್ಯೇಕ ಹೇಳಬೇಕೇನು?

**'धनी' इत्यादौ स्वातन्त्र्येऽपि मुख्यत्वदर्शनाच्च ।**

ಮತ್ತು 'ಧನೀ' ಇತ್ಯಾದಿ ಶಬ್ದಪ್ರಯೋಗಗಳಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸಿ ಮುಖ್ಯಪ್ರಯೋಗವನ್ನೇ ಮಾಡಿರುವುದು ಕಂಡಿದೆ. , ಧನಕ್ಕೆ ಆಶ್ರಯನಾದ ಧನವಾಹಕನಲ್ಲಿ 'ಧನೀ' ಎಂಬ ಪ್ರಯೋಗವಿರುವುದು ಕಂಡಿಲ್ಲ.

**''यदधीनः'' इति स्मृतावभिधोक्तेश्च ।**

ಮತ್ತು 'ಯದಧೀನೋ ಗುಣೋ ಯಸ್ಯ ತದ್ಗುಣೇ ಸೋಽಭಿಧೀಯತೇ' ಎಂಬ ಸ್ಮೃತಿಯಲ್ಲಿ 'ಅಭಿಧೀಯತೇ' ಎಂಬ ಪದದಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿದ್ದಲ್ಲೇ ಶಬ್ದದ ಶಕ್ತಿವೃತ್ತಿ-ಯಿರುತ್ತದೆಂದು ಸ್ಪಷ್ಟವಾಗಿ ಹೇಳಲಾಗಿದೆ.

ಪರಿಪೂರ್ಣಚಂದ್ರಿಕಾ

**''तदस्यास्ति'' इत्याद्यनुशासनस्याश्रयत्वस्वातन्त्र्ययोः समत्वाच्च ।**

ಮತ್ತು 'ತದಸ್ಯಾಸ್ತಿ' ಎಂಬ ಅನುಶಾಸನವು ಆಶ್ರಯತ್ವದಲ್ಲಿ ಹೇಗೆ ಮುಖ್ಯವಾಗಿರುತ್ತದೋ? ಅದರಂತೆ ಸ್ವಾತಂತ್ರ್ಯವೆಂಬರ್ಥದಲ್ಲಿಯೂ ಮುಖ್ಯವಾಗಿಯೇ ಇರುತ್ತದೆ. ಹೀಗಿರುವಾಗ ಸ್ವಾತಂತ್ರ್ಯವು ಮುಖ್ಯಾರ್ಥವಲ್ಲ, ಆಶ್ರಯತ್ವ ಮಾತ್ರ ಮುಖ್ಯಾರ್ಥವೆಂದು ಹೇಗೆ ಹೇಳುತ್ತಾರೆ ?

**न्यायविवरणे मृत्युनियामके मृत्युपदस्याभिधानादिसिद्धत्वेन मुख्यत्वस्योपपादितत्वाच्च ।**

ಮತ್ತು ನ್ಯಾಯವಿವರಣದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವಿರುವೆಡೆ ಶಬ್ದವನ್ನು ಪ್ರಯೋಗಿಸಲಾಗಿದೆ. ಉದಾಹರಣೆ - ಮೃತ್ಯುಶಬ್ದಕ್ಕೆ ಮರಣವೆಂದರ್ಥ. ಆದರೆ ಮರಣಕ್ಕೆ ನಿಯಾಮಕನಾದವನನ್ನೂ ಕೂಡ 'ಮೃತ್ಯು' ಎಂದೇ ಕರೆಯಲಾಗುತ್ತದೆ. ಮರಣಕ್ಕೆ ನಿಯಾಮಕನಾದ ಯಮ, ಭಗವಂತ ಮೊದಲಾದವರಲ್ಲಿಯೂ ಮೃತ್ಯುಶಬ್ದವನ್ನು ಕೋಶವು ಪ್ರಯೋಗಿಸುತ್ತಿದೆ. ಇಂತಹ ಮೃತ್ಯುನಿಯಾಮಕರಲ್ಲಿ ಮೃತ್ಯು ಶಬ್ದವು ಮುಖ್ಯವೇ ಆಗಿರುತ್ತದೆಂದು ನ್ಯಾಯವಿವರಣದಲ್ಲಿ ಉಪಪಾದನೆ ಮಾಡಿದ್ದಾರೆ. ಆದ್ದರಿಂದ ಸ್ವಾತಂತ್ರ್ಯವನ್ನೇ ಪ್ರವೃತ್ತಿನಿಮಿತ್ತವೆಂದು ಹೇಳಬೇಕು.

**एवञ्च -**

**दुःखादेर्जीवगस्यापि स्वाधीनत्वेन हेतुना ।**
**दुःखीति गीयते ब्रह्म धनस्वामी धनी यथा ।। १ ।।**

ಇಲ್ಲಿಯ ತನಕ ಹೇಳಿದ ವಿಷಯದ ಸಂಗ್ರಹ ಹೀಗಿದೆ -

ದುಃಖಾದೇರ್ಜೀವಗಸ್ಯಾಪಿ ಸ್ವಾಧೀನತ್ವೇನ ಹೇತುನಾ ।
ದುಃಖೀತಿ ಗೀಯತೇ ಬ್ರಹ್ಮ ಧನಸ್ವಾಮೀ ಧನೀ ಯಥಾ ॥೧॥

ಧನಕ್ಕೆ ಸ್ವಾಮಿಯಾದ ಕಾರಣದಿಂದ 'ಧನೀ' ಎಂಬ ವ್ಯವಹಾರವನ್ನು ಲೋಕದಲ್ಲಿ ಮಾಡುವುದು ಕಂಡಿದೆ. ಅದರಂತೆ ದುಃಖಾದಿಗಳು ಜೀವನಲ್ಲೇ ಇರುತ್ತವೆ. ಆ ದುಃಖಾದಿಗಳಿಗೆ ಪರಮಾತ್ಮನು ಸ್ವಾಮಿಯಾದ್ದರಿಂದ ಅವನನ್ನು 'ದುಃಖೀ' ಎಂದು ಶ್ರುತಿಗಳಲ್ಲಿ ಕರೆಯಲಾಗುತ್ತದೆ.

**प्रकाशः —**

एवं ''भृत्यबन्धादिकं राज्ञि'' इति श्लोकतात्पर्यविवरणेन पूर्वपक्ष्युक्तातिप्रसङ्गं निरस्येदानीं

अमङ्गलत्वाच्छब्दानां राज्ञो योगादमङ्गले ।
अप्रियत्वात्तु शब्दस्य स्यात् प्रयोगनिवर्तनम् ।।

इत्यनुव्याख्यानोक्तं समाध्यन्तरं व्यनक्ति – यद्वेति ।। तद्धीः दोषधीरित्यर्थः ।

ವಿವರಣೆ - ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದರೆ ರಾಜನಲ್ಲಿಯೂ 'ಬದ್ಧಃ' ಇತ್ಯಾದಿ ಪ್ರಯೋಗಗಳು ಬರಬೇಕಾದೀತು ಎಂಬುದಾಗಿ ಪೂರ್ವಪಕ್ಷಿ ಹೇಳಿದ ಅತಿಪ್ರಸಂಗವನ್ನು ಇಲ್ಲಿಯ ತನಕ ನಿರಾಕರಿಸಿದ್ದಾಯಿತು. 'ಭೃತ್ಯಬಂಧಾದಿಕಂ ರಾಜ್ಞಿ' ಎಂಬ ಅನುವ್ಯಾಖ್ಯಾನದ ಶ್ಲೋಕವನ್ನೂ ಕೂಡ ವಿವರಿಸಿದ್ದಾಯಿತು. ಪ್ರಕೃತ

ಅಮಂಗಲತ್ವಾಚ್ಛಬ್ದಾನಾಂ ರಾಜ್ಞೋ ಯೋಗಾದಮಂಗಲೇ।
ಅಪ್ರಿಯತ್ವಾತ್ತು ಶಬ್ದಸ್ಯ ಸ್ಯಾತ್ ಪ್ರಯೋಗನಿವರ್ತನಮ್ ॥

'ಬದ್ಧಃ' ಇತ್ಯಾದಿ ಶಬ್ದಗಳನ್ನು ರಾಜನಲ್ಲಿ ಪ್ರಯೋಗಿಸುವುದು ಅಮಂಗಳಕರ. ರಾಜನಿಗೆ ಹಾಗೇ ಹೇಳುವುದು ಅಪ್ರಿಯವೂ ಕೂಡ. ಆದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ರಾಜನಲ್ಲಿ 'ಬದ್ಧಃ' ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಬಾರದು ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ ಮತ್ತೊಂದು ಸಮಾಧಾನವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಯದ್ವಾ' ಇತ್ಯಾದಿ ಗ್ರಂಥದಿಂದ. 'ತದ್ಧೀಃ' ಎಂಬ ಪದಕ್ಕೆ ದೋಷಜ್ಞಾನ ಎಂದರ್ಥ.

**प्रकाशः** – ननु स्यादेवं यदि स्वातन्त्र्यं शब्दप्रवृत्तौ निमित्तं स्यात् । तदेवासिद्धम् । मानाभावात् । यदत्रोक्तमनुव्याख्याने ''कुतो राज्ञि जयोऽन्यथा'' इति स्वातन्त्र्यस्याहेतुत्वे राज्ञि जयो जयनिमित्तको जयिशब्दः कुतः कथं स्यादिति जयिशब्दाप्रयोगापत्तिरूपं बाधकं, तन्न तद्गतत्वेनैव तत्र प्रयोगोपपत्तेः । तथा हि जयिधातुः द्व्यर्थःप्रसिद्धः । यथोक्तं -

जयेर्जयाभिभवयोराद्येऽर्थेऽसावकर्मकः ।
उत्कर्षप्राप्तिराद्योऽर्थो द्वितीयेऽर्थे सकर्मकः ।। इति ।

तथा चोत्कृष्टत्वहेतुकत्वेन जयीति प्रयोगः । किञ्च गङ्गासम्बन्धात्तीरे गङ्गाशब्द-प्रयोगवद्भृत्यसम्बन्धात्तद्गतजयिशब्दस्य लक्षणयापि प्रयोगोऽस्तु । तथा च तत्र स्वातन्त्र्यं मुख्यमित्यपि दूरापास्तमित्यतो उत्कृष्टहेतुत्वं तावदाशङ्क्य समाधत्ते – नचेति ।।

ಆಕ್ಷೇಪ - ಒಂದು ವೇಳೆ ಸ್ವಾತಂತ್ರ್ಯವೇ ಶಬ್ದದ ಪ್ರವೃತ್ತಿನಿಮಿತ್ತವಾಗಿದ್ದಲ್ಲಿ ನೀವು ಹೇಳಿದ್ದು ಸರಿಯಾಗುತ್ತಿತ್ತು. ಆದರೆ ಸ್ವಾತಂತ್ರ್ಯವು ಶಬ್ದದ ಪ್ರವೃತ್ತಿನಿಮಿತ್ತವೇ ಅಲ್ಲ. ಈ ವಿಷಯದಲ್ಲಿ ಯಾವುದೇ

ಪ್ರಮಾಣಗಳು ಇರುವುದಿಲ್ಲ. ಇನ್ನು ಅನುವ್ಯಾಖ್ಯಾನದಲ್ಲಿ 'ಕುತೋ ರಾಜ್ಞಿ ಜಯೋಽನ್ಯಥಾ' ಎಂಬ ಮಾತಿನಿಂದ 'ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗದಿದ್ದಲ್ಲಿ ಜಯನಿಮಿತ್ತಕವಾದ 'ಜಯೀ' ಎಂಬ ಶಬ್ದಪ್ರಯೋಗವು ರಾಜನಲ್ಲಿ ಯಾವ ಕಾರಣದಿಂದ ಬರಲು ಸಾಧ್ಯ ?' ಎಂಬುದಾಗಿ 'ಜಯೀ' ಶಬ್ದದ ಅಪ್ರಯೋಗಾಪತ್ತಿಯೆಂಬ ಬಾಧಕವನ್ನು ಹೇಳಿದ್ದಾರೆ. ಅದೂ ಸಹ ಸರಿಯಲ್ಲ. ಏಕೆಂದರೆ ರಾಜನಲ್ಲಿ 'ಜಯೀ' ಎಂಬ ಶಬ್ದ ಪ್ರಯೋಗವನ್ನು 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತದಿಂದಲೇ ಕೂಡಿಸಬಹುದು. ಅದು ಹೀಗೆ - 'ಜಯೀ' ಎಂಬ ಧಾತುವು ಎರಡು ಅರ್ಥದಲ್ಲಿ ಪ್ರಸಿದ್ಧವಾಗಿದೆ. ಈ ವಿಷಯದಲ್ಲಿ ಪ್ರಸಿದ್ಧವಾದ ಮಾತು ಹೀಗಿದೆ -

ಜಯೇರ್ಜಯಾಭಿಭವಯೋರಾದ್ಯೇಽರ್ಥೇಽಸಾವಕರ್ಮಕಃ ।
ಉತ್ಕರ್ಷಪ್ರಾಪ್ತಿರಾದ್ಯೋಽರ್ಥೋ ದ್ವಿತೀಯೇಽರ್ಥೇ ಸಕರ್ಮಕಃ ॥

'ಜಿ' ಧಾತುವಿಗೆ 'ಜಯ' ಮತ್ತು 'ಅಭಿಭವ' ಎಂಬುದಾಗಿ ಎರಡು ಅರ್ಥಗಳಿವೆ. 'ಜಯ' ಎಂಬರ್ಥದಲ್ಲಿ ಅಕರ್ಮಕವಾಗಿರುತ್ತದೆ. ಮೊದಲನೆಯ ಅರ್ಥ ಎಂದರೆ 'ಉತ್ಕರ್ಷಪ್ರಾಪ್ತಿ' ಎಂದು. ಎರಡನೆಯ 'ಅಭಿಭವ' ಎಂಬರ್ಥದಲ್ಲಿ ಇದೇ ಧಾತು ಸಕರ್ಮಕವಾಗುತ್ತದೆ.

ಆದ್ದರಿಂದ 'ಉತ್ಕೃಷ್ಟಹೇತುತ್ವ' ಎಂಬ ಪ್ರವೃತ್ತಿನಿಮಿತ್ತದಿಂದ ರಾಜನಲ್ಲಿ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸಬಹುದು. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೇ ಪ್ರಯೋಗಿಸಬೇಕೆಂಬ ನಿಯಮವಿಲ್ಲ. ಮತ್ತು 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾ ಸಂಬಂಧವಿರುವ ಪ್ರಯುಕ್ತ 'ಗಂಗಾ' ಎಂಬ ಶಬ್ದವನ್ನು ತೀರದಲ್ಲಿ ಹೇಗೆ ಪ್ರಯೋಗಿಸುತ್ತೇವೋ, ಅದರಂತೆ ಭೃತ್ಯನ ಸಂಬಂಧವಿರುವ ಪ್ರಯುಕ್ತ ಭೃತ್ಯನಲ್ಲಿರುವ 'ಜಯೀ' ಎಂಬ ಶಬ್ದವನ್ನು ರಾಜನಲ್ಲಿ ಲಕ್ಷಣಯಾ ಪ್ರಯೋಗಿಸಲಾಗುತ್ತದೆ.

ಹೀಗೆ ಎರಡು ರೀತಿಯಲ್ಲಿ 'ಜಯೀ' ಎಂಬ ಶಬ್ದವನ್ನು ಕೂಡಿಸಬಹುದಾದ್ದರಿಂದ ಸ್ವಾತಂತ್ರ್ಯವಿದ್ದಲ್ಲೇ ಮುಖ್ಯವಾದ ಪ್ರಯೋಗವಿರುತ್ತದೆಂಬ ವಿಚಾರವು ನಿರಸ್ತವಾಯಿತು.

ಸಮಾಧಾನ - ಹೀಗೆ ಆಕ್ಷೇಪಿಸಿದರೆ 'ಉತ್ಕೃಷ್ಟಹೇತುತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದಾಗ ಬರುವ ಬಾಧಕವನ್ನು ತೋರಿಸುತ್ತಾ ಸಮಾಧಾನವನ್ನು ನೀಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – सकर्मकत्वादभिभवेत्युक्तम् । तथा च तस्य भृत्यगतत्वेन राजगतत्वाभावात् स्वातन्त्र्यमेवोपेयमिति भावः ।

ಅಭಿಭವಾರ್ಥದಲ್ಲಿ 'ಜಿ' ಧಾತುವು ಸಕರ್ಮಕವಾಗಿದೆ. ಆದ್ದರಿಂದ 'ಅಭಿಭವಕರ್ತೃಕತ್ವ' ಎಂಬ ಪ್ರವೃತ್ತಿನಿಮಿತ್ತವು ಭೃತ್ಯನಲ್ಲೇ ಇದೆ ಹೊರತು, ರಾಜನಲ್ಲಿ ಇರುವುದಿಲ್ಲ. ಆದ್ದರಿಂದ ರಾಜನಲ್ಲಿ 'ಜಯೀ' ಎಂಬ ಶಬ್ದಪ್ರಯೋಗವು ಯುಕ್ತವಾಗುವುದಿಲ್ಲ. ಅದಕ್ಕೋಸ್ಕರ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸುವುದು ಅತ್ಯಂತ ಉಚಿತ.

ಆನುಮಾನಿಕಾಧಿಕರಣ (೧-೪-೧)

**प्रकाशः** – 'लक्षणयाऽपि प्रयोगोऽस्त्विति चेन्न । तदस्यास्तीत्यादिनिमित्तसाम्यात्' इति सुधावाक्यं विवृण्वन्नमुख्यार्थत्वमाशङ्क्य निराह – **नापीति** ॥

ನ್ಯಾಯಸುಧಾಗ್ರಂಥದಲ್ಲಿ 'ಲಕ್ಷಣಯಾಽಪಿ ಪ್ರಯೋಗೋಽಸ್ತ್ವಿತಿ ಚೇನ್ನ । ತದಸ್ಯಾಸ್ತೀತ್ಯಾದಿನಿಮಿತ್ತ-ಸಾಮ್ಯಾತ್' ಲಕ್ಷಣದಿಂದಲೂ ರಾಜನಲ್ಲಿ 'ಜಯೀ' ಶಬ್ದ ಪ್ರಯೋಗವು ಬರಲಿ ಎಂದು ಆಕ್ಷೇಪಿಸಬಾರದು. 'ತದಸ್ಯಸ್ಯಾಸ್ಮಿನ್' ಎಂಬ ಪ್ರವೃತ್ತಿನಿಮಿತ್ತವು ಎರಡೂ ಕಡೆ ಸಮಾನವಾಗಿವೆ ಎಂದು ಹೇಳಿದ್ದಾರೆ. ರಾಜನಲ್ಲಿ 'ಜಯೀ' ಎಂಬ ಶಬ್ದವನ್ನು ಲಕ್ಷಣಯಾ ಪ್ರಯೋಗಿಸಲಾಗಿದೆ. ಸೂತ್ರದಲ್ಲಿ ಷಷ್ಠ್ಯರ್ಥದಲ್ಲಿ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು, ಸಪ್ತಮ್ಯರ್ಥದಲ್ಲಿ ತದ್ಗತತ್ವವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲಾಗಿದೆ. ಆದ್ದರಿಂದ ಸ್ವಾತಂತ್ರ್ಯ ಹಾಗೂ ಆಶ್ರಯತ್ವ ಎರಡೂ ಕೂಡ ಅನುಶಾಸನದಿಂದ ಸಿದ್ಧವಾಗಿರುವಾಗ ಆಶ್ರಯತ್ವವನ್ನೇ ವಿವಕ್ಷಿಸಿ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ನೀವು ಹೇಳಿದರೆ ನಾವು ವಿಪರೀತವಾಗಿ ಸ್ವಾತಂತ್ರ್ಯವನ್ನೇ ಪ್ರವೃತ್ತಿನಿಮಿತ್ತವೆಂದು ಹೇಳಿ, ಆಶ್ರಯತ್ವವನ್ನು ಪ್ರವೃತ್ತಿನಿಮಿತ್ತವಲ್ಲವೆಂದು ಹೇಳುತ್ತೇವೆ ಎಂದಭಿಪ್ರಾಯ.

**प्रकाशः** – सम्बन्धविशेषस्य विवक्षितत्वान्नातिप्रसङ्ग इत्यत आह – **जयेति** ॥

'ಸ್ವಾಮಿತಾ' ಎಂಬ ಸಂಬಂಧವಿಶೇಷವೇ ವಿವಕ್ಷಿತವಾದ್ದರಿಂದ ಭೃತ್ಯಸಂಬಂಧಿಯಾದ ಉಳಿದ ಪುರುಷರಲ್ಲಿಯೂ 'ಜಯೀ' ಶಬ್ದಪ್ರಯೋಗವೂ ಬರಲಿ ಎಂಬ ಅತಿಪ್ರಸಂಗಕ್ಕೆ ಅವಕಾಶವಿರುವುದಿಲ್ಲವೇ? ಎಂಬ ಆಶಂಕೆಗೆ 'ಜಯ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः** – नन्वेतदेवासिद्धमित्यतस्स्वातन्त्र्यं मुख्यवृत्त्या शब्दप्रयोग एव निमित्तम् । नतु लक्षणया तत्प्रयोगे सम्बन्धरूपतयेत्यत्रानुव्याख्यानोक्तं हेतुमाह – **नहीति** ॥

'ಜಯೀ' ಎಂಬ ಶಬ್ದವನ್ನು ರಾಜನಲ್ಲಿ ಲಕ್ಷಣಯಾ ಪ್ರಯೋಗಿಸಬೇಕಾದರೆ ಜಯಕ್ಕೆ ಆಶ್ರಯನಾದವನು ಭೃತ್ಯನು ಎಂಬ ಜ್ಞಾನವು ಬಂದು, ಅನಂತರ ಭೃತ್ಯನಲ್ಲಿ ಅನುಪಪತ್ತಿಜ್ಞಾನ ಬರುವುದರಿಂದ ರಾಜನಲ್ಲಿ ಲಕ್ಷಣಾ ಮಾಡಬೇಕೆಂದು ಹೇಳಬೇಕು. ಆದರೆ ಯಾರಿಗೂ ಕೂಡ ಹೀಗೆ ಭೃತ್ಯಜ್ಞಾನಪೂರ್ವಕತ್ವದ ಅನುಭವವು ಬರುತ್ತಿಲ್ಲವೆಂದು ಗ್ರಂಥದಲ್ಲಿ ಹೇಳಿದ್ದಾರೆ. ಆದರೆ ಇದೇ ಅಸಿದ್ಧವಾಗಿದೆ. ಏಕೆಂದರೆ ಜಯಕ್ಕೆ ಆಶ್ರಯನಾದವನು ಭೃತ್ಯನೆಂದು ತಿಳಿದಾಗ ಅನುಪಪತ್ತಿಯು ಕಾಣಿಸುತ್ತದೆ. ಅನಂತರವೇ ರಾಜನಲ್ಲಿ 'ಜಯೀ' ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆಂದು ಹೇಳಿದರೆ ಏನು ತಪ್ಪು? ಎಂದು ಪ್ರಶ್ನಿಸಬಾರದು. ಏಕೆಂದರೆ ಶಬ್ದವನ್ನು ಪ್ರಯೋಗಿಸುವಾಗ ಸ್ವಾತಂತ್ರ್ಯವೇ ಮುಖ್ಯವೃತ್ತಿಯಿಂದ ಪ್ರವೃತ್ತಿನಿಮಿತ್ತವೆನಿಸುತ್ತದೆ. ಹೊರತು, ಲಕ್ಷಣಯಾ ಶಬ್ದಪ್ರಯೋಗ ಮಾಡುವಾಗ ಸ್ವಾತಂತ್ರ್ಯವು ಸಂಬಂಧರೂಪವಾಗಿ ಕಾರಣವಾಗುವುದಿಲ್ಲ. ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಈ ಹೇತುವನ್ನು 'ನಹಿ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – जयस्यान्यगत्वेऽपि भृत्यगतत्वेऽपि तं जयं प्रति स्वातन्त्र्याभासमात्रेण राज्ञि विजयिशब्दो यावत् प्रयुज्यते तावज्जयाधिकरणस्यापि भृत्यस्य सम्बन्धितया

न प्रयुज्यते हि यस्मात् तस्मात्स्वातन्त्र्यं मुख्यत्वे हेतुरित्यर्थः । भृत्यधीपूर्वकत्वनियमे चैतन्न स्यादिति भावः ।

'ನಹಿ ಭೃತ್ಯಸ್ಯ' ಇತ್ಯಾದಿ ಶ್ಲೋಕದ ಅಭಿಪ್ರಾಯವು ಹೀಗಿದೆ - ಜಯವು ಭೃತ್ಯನಲ್ಲಿ ಇದ್ದರೂ ಭೃತ್ಯನಲ್ಲಿರುವ ಜಯಕ್ಕೆ ರಾಜನು ಸ್ವತಂತ್ರನಾಗಿದ್ದಾನೆ. ಹೀಗೆ ಸ್ವಾತಂತ್ರ್ಯಾಭಾಸದಿಂದ ರಾಜನಲ್ಲಿ 'ವಿಜಯೀ' ಎಂಬ ಶಬ್ದವನ್ನು ಎಷ್ಟು ಪ್ರಯೋಗಿಸುತ್ತಾರೋ ಅಷ್ಟು ಜಯಕ್ಕೆ ಅಧಿಕರಣನಾದ ಭೃತ್ಯನಲ್ಲೇ ಮಾಡುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನೇ ಮುಖ್ಯವಾದ ಪ್ರವೃತ್ತಿನಿಮಿತ್ತವೆಂದು ಒಪ್ಪಬೇಕು. ಒಂದು ವೇಳೆ ರಾಜನಲ್ಲಿ 'ವಿಜಯೀ' ಎಂಬ ಶಬ್ದಪ್ರಯೋಗವನ್ನು ಭೃತ್ಯಜ್ಞಾನಪೂರ್ವಕವೆಂದು ಹೇಳಿದರೆ ಇದು ಕೂಡದೇ ಹೋಗಬೇಕಾದೀತು. ಏಕೆಂದರೆ ಭೃತ್ಯನಿಗಿಂತ ಹೆಚ್ಚಾಗಿ ರಾಜನಲ್ಲೇ 'ವಿಜಯೀ' ಎಂಬ ಶಬ್ದದ ಪ್ರಯೋಗವಿರುತ್ತದೆ.

**प्रकाशः** – स्वातन्त्र्यादिति वाच्ये 'स्वातन्त्र्याभासमात्रतः' इत्युक्तिः किमुतानुपचरितस्वातन्त्र्ये हराविति कैमुत्यद्योतनाय ।

ಅನುವ್ಯಾಖ್ಯಾನದಲ್ಲಿ 'ಸ್ವಾತಂತ್ರ್ಯಾತ್' ಎಂದೇ ಹೇಳಬಹುದಿತ್ತು. 'ಸ್ವಾತಂತ್ರ್ಯಾಭಾಸಮಾತ್ರತಃ' ಎಂದು ಹೇಳಿದ್ದರಿಂದ ಆಪಾತತಃ ಸ್ವಾತಂತ್ರ್ಯವುಳ್ಳ ರಾಜನಲ್ಲೇ 'ವಿಜಯೀ' ಶಬ್ದದ ಪ್ರಯೋಗವು ಹೆಚ್ಚಾಗಿ ಕಂಡಿರಬೇಕಾದರೆ ಮುಖ್ಯವಾದ ಸ್ವಾತಂತ್ರ್ಯವುಳ್ಳ ಶ್ರೀಹರಿಯಲ್ಲಿ ಅತ್ಯಧಿಕವಾದ ಪ್ರಯೋಗಗಳಿರುತ್ತವೆ ಎಂದು ಪ್ರತ್ಯೇಕ ಹೇಳಬೇಕೇನು ಎಂಬ ಕೈಮುತ್ಯವನ್ನು ಸೂಚಿಸಿದ್ದಾರೆ.

**प्रकाशः** – एतेन ''न चान्यगतशब्दप्रवृत्तिनिमित्तप्रेरके शब्दवृत्तिरमुख्या । राजनि विजयशब्दस्य बहुलप्रयोगात्'' इति टीकैतदनुव्याख्यानमूलेति सूचितम् ।

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ 'ನ ಚಾನ್ಯಗತಶಬ್ದಪ್ರವೃತ್ತಿನಿಮಿತ್ತಪ್ರೇರಕೇ ಶಬ್ದವೃತ್ತಿರಮುಖ್ಯಾ । ರಾಜನಿ ವಿಜಯಶಬ್ದಸ್ಯ ಬಹುಲಪ್ರಯೋಗಾತ್' 'ಬೇರೆಡೆ ಇರುವ ಶಬ್ದಗಳ ಪ್ರವೃತ್ತಿನಿಮಿತ್ತಕ್ಕೆ ಪ್ರೇರಕನಾದವನಲ್ಲಿ ಅಮುಖ್ಯವಾದ ಶಬ್ದವೃತ್ತಿಯನ್ನು ಹೇಳಬಾರದು. ಏಕೆಂದರೆ ರಾಜನಲ್ಲಿ 'ವಿಜಯೀ' ಎಂಬ ಶಬ್ದದ ಪ್ರಯೋಗವು ಬಹಳವಾಗಿರುತ್ತದೆ' ಎಂಬ ಟೀಕೆಯ ಮಾತು ಅನುವ್ಯಾಖ್ಯಾನದ ವ್ಯಾಖ್ಯಾನ-ರೂಪವಾಗಿದೆಯೆಂದು ಸೂಚಿಸಿದಂತಾಯಿತು.

**प्रकाशः** – ननु भृत्याज्ञाननिमित्तं राज्ञि प्रयोगप्राचुर्यमिति चेन्न । तज्ज्ञानेऽपि तदुपलम्भात् ।

ರಾಜನಲ್ಲಿ 'ವಿಜಯೀ' ಎಂಬ ಶಬ್ದವನ್ನು ಹೆಚ್ಚು ಪ್ರಯೋಗಿಸಲು ಕಾರಣ ಹೀಗಿದೆ - ರಾಜನು ನಿಜವಾಗಿಯೂ ಗೆದ್ದಿದ್ದಾನೆ ಭೃತ್ಯನು ಗೆದ್ದಿಲ್ಲ ಎಂಬ ಅಜ್ಞಾನನಿಮಿತ್ತಕವಾಗಿದೆ. ಆದ್ದರಿಂದ ಭೃತ್ಯರಿಗಿಂತ ಹೆಚ್ಚಾಗಿ ರಾಜನಲ್ಲೇ 'ವಿಜಯೀ' ಎಂಬ ಶಬ್ದಪ್ರಯೋಗವಿರುತ್ತದೆಂದು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಭೃತ್ಯನು ಗೆದ್ದಿದ್ದಾನೆ ಎಂಬ ಅರಿವಿದ್ದಾಗಲೂ ರಾಜನಲ್ಲಿಯೇ 'ವಿಜಯೀ' ಎಂಬ ಶಬ್ದಪ್ರಯೋಗವು

ಕಾಣಿಸುತ್ತಿದೆ.

**प्रकाशः** – ननु न प्रयोगप्राचुर्यं मुख्यतायां हेतुः । अज्ञातमुख्यलाक्षणिकादिप्रयोगेष्वपि दर्शनात् । अनुव्याख्यानं तु प्रयोगप्राचुर्यात् तद्गतत्वमेव मुख्यम् । न स्वातन्त्र्यम् । तदप्राचुर्यादमुख्यमिति परेण चोदिते परहेतोरसिद्धिकथनायैव प्रवृत्तम्। नतु प्रयोगप्राचुर्येण मुख्यत्वं साधयितुम् । अभिधानप्रवृत्तावेव स्वातन्त्र्यतद्गतत्वयोर्निर्धारणायां स्वातन्त्र्यं मुख्यमित्यत्र प्रयोगप्राचुर्यस्य हेतुत्वाभिधानाय वा प्रवृत्तम्। तथैव सुधायामुक्तेरित्यतो हेत्वन्तराण्याह – **धनीत्यादिना** ।।

ಶಬ್ದದ ಮುಖ್ಯಾರ್ಥಕ್ಕೆ ಪ್ರಯೋಗಪ್ರಾಚುರ್ಯವು ಕಾರಣವಲ್ಲ. ಏಕೆಂದರೆ ಯಾವ ಸ್ಥಳದಲ್ಲಿ ಮುಖ್ಯಾರ್ಥವು ತಿಳಿಯದೇ ಇದ್ದು ಲಾಕ್ಷಣಿಕವಾದ ಅರ್ಥದಲ್ಲಿ ಪ್ರಯೋಗ ಪ್ರಾಚುರ್ಯವಿರುತ್ತದೋ ಅಂತಹ ಸ್ಥಳದಲ್ಲಿಯೂ ಶಬ್ದವೃತ್ತಿಯು ಮುಖ್ಯವಾಗಿದೆಯೆಂದು ಒಪ್ಪಬೇಕಾದೀತು.

ಹಾಗಾದರೆ ಅನುವ್ಯಾಖ್ಯಾನದಲ್ಲಿ ಪ್ರಯೋಗಪ್ರಾಚುರ್ಯದಿಂದಲೇ ಮುಖ್ಯತ್ವವನ್ನು ಸಾಧಿಸಿದ್ದಾರಲ್ಲವೇ? ಎಂದು ಪ್ರಶ್ನಿಸಬಾರದು. ಅನುವ್ಯಾಖ್ಯಾನವು ಪ್ರಯೋಗಪ್ರಾಚುರ್ಯವೆಂಬ ನಿಮಿತ್ತದಿಂದ ಶಬ್ದವೃತ್ತಿಯಲ್ಲಿ ಮುಖ್ಯತ್ವವನ್ನು ಸಾಧಿಸುತ್ತಿಲ್ಲ. ಪರೋಕ್ತಹೇತುವಿಗೆ ಅಸಿದ್ಧಿಯನ್ನು ಹೇಳುವ ದೃಷ್ಟಿಯಿಂದಲೇ ಹೊರಟಿರುತ್ತದೆಂದು ಟೀಕೆಯಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ. (ಪೂರ್ವಪಕ್ಷಿಯು ಪ್ರಯೋಗಪ್ರಾಚುರ್ಯವಿರುವುದರಿಂದ ತದ್ಗತತ್ವವನ್ನು ಮುಖ್ಯವೆಂದು ಹೇಳಿರುತ್ತಾನೆ. ಅವನಿಗೆ ಅಸಿದ್ಧಿಯನ್ನು ಹೇಳುವುದಕ್ಕಾಗಿ ಸ್ವಾತಂತ್ರ್ಯದಲ್ಲೇ ಪ್ರಯೋಗಪ್ರಾಚುರ್ಯವಿರುತ್ತದೆ ಹೊರತು, ತದ್ಗತತ್ವದಲ್ಲಿ ಪ್ರಯೋಗಪ್ರಾಚುರ್ಯವಿರುವುದಿಲ್ಲ ಎಂದು ಸಾಧಿಸಲಾಗಿದೆ.)

ಅಥವಾ ಶಬ್ದದ ಅಭಿಧಾನಪ್ರವೃತ್ತಿಯಲ್ಲಿ ಸ್ವಾತಂತ್ರ್ಯ ಹಾಗೂ ತದ್ಗತತ್ವ ಇವೆರಡರ ನಡುವೆ ಯಾವುದು ಪ್ರಧಾನ? ಎಂಬ ಸಂಶಯವುಂಟಾದಾಗ ಸ್ವಾತಂತ್ರ್ಯವೇ ಪ್ರಧಾನವಾಗಿದೆಯೆಂದು ಹೇಳಬೇಕಾಗಿದೆ. ಅದಕ್ಕೋಸ್ಕರ ಸ್ವಾತಂತ್ರ್ಯಕ್ಕೆ ಪ್ರಾಧಾನ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ ಪ್ರಯೋಗಪ್ರಾಚುರ್ಯವನ್ನು ಹೇಳಿರುತ್ತಾರೆ. ಹೀಗೆ ನ್ಯಾಯಸುಧೆಯಲ್ಲಿ ಸಮರ್ಥನೆ ಮಾಡಿದ್ದಾರೆ. ಈ ಆಕ್ಷೇಪಕ್ಕೂ ಅನೇಕ ಹೇತುಗಳನ್ನು ಹೇಳುವ ಮೂಲಕ ಉತ್ತರಿಸಲು 'ಧನೀ' ಇತ್ಯಾದಿ ಗ್ರಂಥ ಹೊರಟಿದೆ.

**प्रकाशः** – **अनुशासनस्येति** ।। ''तदस्यास्त्यस्मिन्निति मतुब्'' इत्यत्रेति शब्दस्यार्थनिर्देशार्थत्वादस्मिन्नित्यनेनाश्रयत्वलाभेऽपि अस्येति षष्ठ्या स्वस्वामिभावादिसम्बन्धसामान्यस्यैव प्राप्तेरिति भावः । आदिपदेनास्मिन्नेवार्थे प्रवृत्तं ''अत इनिठनौ'' इति सूत्रं गृह्यते ।।

ಆಶ್ರಯತ್ವ ಹಾಗೂ ಸ್ವಾತಂತ್ರ್ಯ ಎರಡರಲ್ಲಿಯೂ ಅನುಶಾಸನವು ಸಮಾನವಾಗಿದೆ - 'ತದಸ್ಯಾಸ್ತ್ಯಸ್ಮಿನ್ ಇತಿ ಮತುಬ್' ಎಂಬಲ್ಲಿ ಶಬ್ದವು ಅರ್ಥನಿರ್ದೇಶಕ್ಕಾಗಿ ವಿನಿಯೋಗಿಸಿದ್ದರಿಂದ 'ಅಸ್ಮಿನ್' ಎಂಬುದರಿಂದ

ಆಶ್ರಯತ್ವವನ್ನು 'ಅಸ್ಯ' ಎಂಬ ಷಷ್ಠಿಯಿಂದ ಸ್ವಸ್ವಾಮ್ಯಭಾವರೂಪಸಂಬಂಧವನ್ನು ವಿವಕ್ಷಿಸಿದ್ದಾರೆ. ಆದ್ದರಿಂದ ಆಶ್ರಯತ್ವ ಹಾಗೂ ಸ್ವಸ್ವಾಮ್ಯಭಾವ ಎರಡೂ ಕೂಡ ಮುಖ್ಯವಾಗಿ ಪ್ರಾಪ್ತವಾಗಿವೆ ಎಂದರ್ಥ. ಗ್ರಂಥದಲ್ಲಿರುವ ಆದಿಪದದಿಂದ ಇದೇ ಅರ್ಥದಲ್ಲಿ ಪ್ರವೃತ್ತವಾದ 'ಅತ ಇನಿ ಠನೌ' ಎಂಬ ಸೂತ್ರವನ್ನು ಸ್ವೀಕರಿಸಬೇಕು. ಅದಂತವಾದ ಶಬ್ದಗಳಿಗೆ 'ಇನ್' ಪ್ರತ್ಯಯ ಬರುವುದರಿಂದ 'ಧನೀ' ಇತ್ಯಾದಿ ರೂಪಗಳು ಸಿದ್ಧವಾಗಿವೆ.

**प्रकाशः – न्यायेति ।।** ''मृत्युशब्दादिषु प्रसिद्धेश्च'' इति न्यायविवरण इत्यर्थः । एतेन ''यमादौ मृत्युप्रमुखशब्दानां च तथात्वात्'' इति टीका न्यायविवरणमूलेति सूचितम् । ''अयं भावः'' इत्यादिनोक्तं तदधीनत्वसूत्रविवरण-परानुव्याख्यानतात्पर्यं सङ्गृह्णाह – **एवञ्चेति ।।**

'ಮೃತ್ಯುಶಬ್ದಾದಿಷು ಪ್ರಸಿದ್ಧೇಶ್ಚ' ಎಂಬ ನ್ಯಾಯವಿವರಣದಲ್ಲಿ ಮೃತ್ಯುನಿಯಾಮಕನಲ್ಲಿಯೂ ಮೃತ್ಯುಶಬ್ದವನ್ನು ಪ್ರಯೋಗಿಸಲಾಗಿದೆ. ಹೀಗೆ ಹೇಳಿದ್ದರಿಂದ 'ಯಮಾದೌ ಮೃತ್ಯುಪ್ರಮುಖಶಬ್ದಾನಾಂ ಚ ತಥಾತ್ವಾತ್' ಎಂಬ ಟೀಕೆಯು ನ್ಯಾಯವಿವರಣದ ವ್ಯಾಖ್ಯಾನರೂಪವಾಗಿದೆಯೆಂದು ಸೂಚಿಸಿದಂತಾಯಿತು. 'ಅಯಂ ಭಾವಃ' ಎಂಬಲ್ಲಿಂದ ಪ್ರಾರಂಭಿಸಿ, ಇಲ್ಲಿಯತನಕ 'ತದಧೀನತ್ವ' ಸೂತ್ರದ ವಿವರಣರೂಪವಾದ ಅನುವ್ಯಾಖ್ಯಾನದ ತಾತ್ಪರ್ಯವನ್ನು ಸ್ಪಷ್ಟಪಡಿಸಿದರು. ಅದನ್ನೇ ಗ್ರಂಥಕಾರರು ಪುನಃ ಸಂಗ್ರಹಿಸಿ 'ಏವಂಚ' ಎಂಬ ಶ್ಲೋಕದಿಂದ ಹೇಳುತ್ತಿದ್ದಾರೆ.

**प्रकाशः – स्वातन्त्र्यस्य निर्बाधं निमित्तत्वे सिद्धे सतीत्यर्थः ।**

'ಏವಂಚ' ಎಂದರೆ ಸ್ವಾತಂತ್ರ್ಯವು ನಿರ್ಬಾಧಿತವಾಗಿ ಪ್ರವೃತ್ತಿನಿಮಿತ್ತವಾಗಿದೆಯೆಂದು ಸಿದ್ಧವಾಗುತ್ತಿರಲು ಎಂದರ್ಥ.




'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಲು ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಲಾಯಿತು. ಹಾಗಾದಲ್ಲಿ ರಾಜನಲ್ಲಿಯೂ 'ಬದ್ಧಃ' ಇತ್ಯಾದಿ ಪ್ರಯೋಗಗಳು ಬರಬೇಕಲ್ಲವೆ? ಎಂಬ ಅತಿಪ್ರಸಂಗವನ್ನು ಆಕ್ಷೇಪಿಸಬಾರದು. ಏಕೆಂದರೆ ರಾಜನಿಗೂ ಪರಮಾತ್ಮನಿಗೂ ವ್ಯತ್ಯಾಸವಿದೆ. ಒಂದು ವೇಳೆ ಭೃತ್ಯನು ಬಂಧಿತನಾದಾಗ ರಾಜನಲ್ಲಿ 'ಬದ್ಧಃ' ಎಂಬ ಪದವನ್ನು ಪ್ರಯೋಗಿಸಿದರೆ ರಾಜನಲ್ಲಿ ಬಂಧನಾದಿ ಯೋಗ್ಯತೆಗಳು ಇರುವುದರಿಂದ ಅಮಂಗಳ ಪ್ರಯೋಗವೆನಿಸುತ್ತವೆ. ಆ ಮಂಗಳ ಶಬ್ದಗಳನ್ನು ಕೇಳಿದ ರಾಜನಿಗೆ ಕೋಪ ಮೊದಲಾದವುಗಳು ಬರಬಹುದು. ಆದರೆ ಯಾವುದೇ ದೋಷಗಳಿಗೆ ಅವಕಾಶವಿಲ್ಲದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಇಂತಹ 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳನ್ನು ಪ್ರಯೋಗಿಸಲು

ಯಾವುದೇ ತೊಂದರೆಯಿರುವುದಿಲ್ಲ. ರಾಜನಲ್ಲಿ ಬಂಧನಾದಿಗಳ ಯೋಗ್ಯತೆಯಿರುವಂತೆ ಪರಮಾತ್ಮನಲ್ಲಿ ಅಂತಹ ಬಂಧನಾದಿಗಳ ಯೋಗ್ಯತೆ ಸರ್ವಥಾ ಇರುವುದಿಲ್ಲ.

ಉದಾಹರಣೆ - ಶಿಷ್ಯನು ಬಹಳ ಚೆನ್ನಾಗಿ ಸಭೆಗಳಲ್ಲಿ ತನ್ನ ವಿದ್ಯಾಚಾತುರ್ಯವನ್ನು ಪ್ರದರ್ಶನ ಮಾಡಿದಾಗ ಎಲ್ಲರೂ ಗುರುಗಳನ್ನೇ ಪ್ರಶಂಸಿಸುತ್ತಾರೆ. ಆದರೆ ಶಿಷ್ಯನು ಏನಾದರೂ ತಪ್ಪು ಹೇಳಿದರೆ, ಶಿಷ್ಯನ ತಪ್ಪೆಂದು. ಇದು ಲೋಕದಲ್ಲಿರುವ ನಿಯಮ. ಸಣ್ಣ ಮಗು ಉತ್ತಮವಾದ ಗುಣಗಳಿಂದ ಬೇರೆಯವರನ್ನು ಆಕರ್ಷಿಸಿದಾಗ ತಂದೆ-ತಾಯಿಯಂದಿರನ್ನು ಪ್ರಶಂಸಿಸುತ್ತಾರೆ. ಅದೇ ಮಗು ಕೆಟ್ಟ ವರ್ತನೆಯನ್ನು ಮಾಡಿದಾಗ ಯಾರೂ ಸಹ ತಂದೆ-ತಾಯಿಯಂದಿರನ್ನು ನಿಂದಿಸುವುದಿಲ್ಲ. ಅದರಂತೆ ಇಲ್ಲಿಯೂ ಕೂಡ ಭೃತ್ಯರು ಯುದ್ಧದಲ್ಲಿ ಗೆದ್ದಾಗ ರಾಜನು ಗೆದ್ದಿದ್ದಾನೆಂದು ಹೇಳಬಹುದು. ಆದರೆ ಭೃತ್ಯರು ಸೋತಾಗ, ರಾಜನು ಸೋತನೆಂದು ಸರ್ವಥಾ ಹೇಳಬಾರದು. ಇದು ಲೋಕದ ನೀತಿ. ಆದರೆ ಪರಮಾತ್ಮನ ವಿಷಯದಲ್ಲಿ ಇದು ಸಂಬಂಧಪಡುವುದಿಲ್ಲ. ಅವನು ಲೋಕವಿಲಕ್ಷಣನಾದ್ದರಿಂದ ಉಳಿದವರ ದುಃಖ ಬಂಧನ ಮೊದಲಾದವುಗಳಿಗೆ ನಿಯಾಮಕನಾದ್ದರಿಂದ 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಬಹುದು.

ದುಃಖಾದೇರ್ಜೀವಗಸ್ಯಾಪಿ ಸ್ವಾಧೀನತ್ವೇನ ಹೇತುನಾ ।
ದುಃಖೀತಿ ಗೀಯತೇ ಬ್ರಹ್ಮ ಧನಸ್ವಾಮೀ ಧನೀ ಯಥಾ ॥೧॥

ಧನಕ್ಕೆ ಸ್ವಾಮಿಯಾದ ಕಾರಣದಿಂದ 'ಧನೀ' ಎಂಬ ವ್ಯವಹಾರವನ್ನು ಲೋಕದಲ್ಲಿ ಮಾಡುವುದು ಕಂಡಿದೆ. ಅದರಂತೆ ದುಃಖಾದಿಗಳು ಜೀವನಲ್ಲೇ ಇರುತ್ತವೆ. ಆ ದುಃಖಾದಿಗಳಿಗೆ ಪರಮಾತ್ಮನು ಸ್ವಾಮಿಯಾದ್ದರಿಂದ ಅವನನ್ನು 'ದುಃಖೀ' ಎಂದು ಶ್ರುತಿಗಳಲ್ಲಿ ಕರೆಯಲಾಗುತ್ತದೆ.



## ಮುಖ್ಯಾರ್ಥದ ನಿರ್ಣಾಯಕ ಪ್ರವೃತ್ತಿನಿಮಿತ್ತವೇ ಹೊರತು ಪ್ರಯೋಗಪ್ರಾಚುರ್ಯವಲ್ಲ

### तात्पर्यचन्द्रिका

**स्वातन्त्र्याश्रयत्वयोः सम्बन्धयोर्भेदेऽपि निमित्तस्य दुःखबन्धावरत्वादेरेकत्वा-त्तदाश्रितेऽपि तदधीनत्वस्यानुगतत्वाच्च न नानार्थता ।**

ಅನುವಾದ - ಅಥವಾ ಹೀಗೆ ಹೇಳಬಹುದು. 'ದುಃಖೀ' ಬದ್ಧಃ' ಇವೇ ಮೊದಲಾದ ಶಬ್ದಗಳಲ್ಲಿ ಸ್ವಾತಂತ್ರ್ಯ ಹಾಗೂ ತದ್ಗತತ್ವಗಳು ಪ್ರವೃತ್ತಿನಿಮಿತ್ತವೇ ಅಲ್ಲ. 'ದುಃಖ', 'ಬಂಧ', 'ಅವರತ್ವ' ಇವುಗಳೇ ಪ್ರವೃತ್ತಿನಿಮಿತ್ತಗಳಾಗಿವೆ. ಸ್ವಾತಂತ್ರ್ಯ ಹಾಗೂ ತದ್ಗತತ್ವಗಳು ಸಂಬಂಧರೂಪವಾಗಿವೆ. 'ದುಃಖೀ' ಎಂಬ ಶಬ್ದಕ್ಕೆ ದುಃಖವೇ ಪ್ರವೃತ್ತಿನಿಮಿತ್ತ, ಇದು ಸ್ವಾತಂತ್ರ್ಯ ಎಂಬ ಸಂಬಂಧದಿಂದ ಪರಮಾತ್ಮನಲ್ಲಿದೆ. 'ತದ್ಗತತ್ವ' ಎಂಬ ಸಂಬಂಧದಿಂದ ಜೀವರಲ್ಲಿದೆ. ಇದರಂತೆ 'ಬದ್ಧಃ' 'ಅವರಃ' ಮೊದಲಾದ ಶಬ್ದಗಳಲ್ಲಿಯೂ ತಿಳಿಯಬೇಕು. ಆದ್ದರಿಂದ 'ದುಃಖೀ' ಇತ್ಯಾದಿ ಶಬ್ದಗಳಲ್ಲಿ ಎರಡು

ಪ್ರವೃತ್ತಿನಿಮಿತ್ತಗಳನ್ನು ಹೇಳುವುದೇ ಇಲ್ಲ. ದುಃಖ ಮೊದಲಾದ ಒಂದೇ ಪ್ರವೃತ್ತಿನಿಮಿತ್ತವನ್ನು ಹೇಳುತ್ತೇವೆ. ಮತ್ತು ದುಃಖ-ಬಂಧ ಇವುಗಳಿಗೆ ಆಶ್ರಯನಾದ ವ್ಯಕ್ತಿಯಲ್ಲಿಯೂ ತದಧೀನತ್ವವು ಅನುಗತವಾಗಿರುತ್ತದೆ. ಎಲ್ಲಿ ದುಃಖಾದಿಗಳಿಲ್ಲವೋ, ಅಂತಹ ಪರಮಾತ್ಮನಲ್ಲಿಯೂ ತದಧೀನತ್ವವು ಇದೆ. ದುಃಖಾದಿಗಳಿಗೆ ಆಶ್ರಯರಾದ ಜೀವಾದಿಗಳಲ್ಲಿಯೂ ತದಧೀನತ್ವವು ಇರುತ್ತದೆ. ಹೀಗೆ ತದಧೀನತ್ವವು ಎರಡೂ ಕಡೆ ಅನುಗತವಾದ್ದರಿಂದ 'ದುಃಖೀ' ಮೊದಲಾದ ಶಬ್ದಗಳು ನಾನಾರ್ಥಕಗಳಾಗುವುದಿಲ್ಲ.

**अत एवानुव्याख्याने स्वातन्त्र्ये मुख्यत्वोक्तिर्युक्ता ।**

ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ ಸ್ವಾತಂತ್ರ್ಯವಿರುವ ವ್ಯಕ್ತಿಯಲ್ಲಿಯೇ ಶಬ್ದವು ಮುಖ್ಯವಾಗಿರುತ್ತದೆಂದು ಹೇಳಿರುತ್ತಾರೆ. ಪರಮಾತ್ಮನಲ್ಲಿ ತದ್ಗತತ್ವವಿಲ್ಲದೆ ಸ್ವಾತಂತ್ರ್ಯಮಾತ್ರ ಇರುವ ಕಾರಣ ಶಬ್ದವು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆಂಭಿಪ್ರಾಯ.

**नहि नानार्थेष्वक्षादिशब्देष्वेकत्रार्थे मुख्यता ।**

ನಾನಾರ್ಥಕವಾದ 'ಅಕ್ಷ', 'ಗೋ' ಮೊದಲಾದ ಶಬ್ದಗಳು ಒಂದೇ ಅರ್ಥದಲ್ಲಿ ಮುಖ್ಯವಾಗಿರುವುದಿಲ್ಲ. ಏಕೆಂದರೆ ಪ್ರವೃತ್ತಿನಿಮಿತ್ತಗಳು ಭಿನ್ನ-ಭಿನ್ನವಾಗಿರುವುದರಿಂದ ಬೇರೆ ಬೇರೆ ಅರ್ಥಗಳಲ್ಲಿ ಮುಖ್ಯವಾಗಿರುತ್ತದೆ. ಆದರೆ ಪ್ರಕೃತ 'ದುಃಖೀ' ಮೊದಲಾದ ಶಬ್ದಗಳಲ್ಲಿ ಸ್ವಾತಂತ್ರ್ಯವೆಂಬ ಅನುಗತವಾದ ಪ್ರವೃತ್ತಿನಿಮಿತ್ತವಿರುವ ಕಾರಣ ಒಂದೇ ಅರ್ಥದಲ್ಲಿ ಮುಖ್ಯವಾಗುತ್ತದೆ.

**एवञ्च रूढस्य वा यौगिकस्य वा यस्य शब्दस्य प्रवृत्तिनिमित्तमाश्रितत्वेन वा यथेष्टविनियोक्तृत्वरूपस्वातन्त्र्यविषयत्वेन वा यदधीनं स तस्य वाचकः ।**

ಆದ್ದರಿಂದ ರೂಢವಾದ ಅಥವಾ ಯೌಗಿಕವಾದ ಯಾವ ಶಬ್ದವಿರುತ್ತದೋ ಅದರ ಪ್ರವೃತ್ತಿನಿಮಿತ್ತವು ಆಶ್ರಿತತ್ವ ರೂಪವಾಗಿ ಅಥವಾ ಯಥೇಷ್ಟವಿನಿಯೋಕ್ತೃತ್ವರೂಪವಾದ ಸ್ವಾತಂತ್ರ್ಯಕ್ಕೆ ವಿಷಯವಾಗಿ ಅಧೀನವಾದ ವಸ್ತುವಿಗೆ ವಾಚಕವಾಗುತ್ತದೆ.

**तत्राप्याश्रयादपि स्वतन्त्रं प्रत्यधीनत्वस्य मुख्यत्वात्तद्वाचिता मुख्या ।**

ದುಃಖಾದಿಗಳಿಗೆ ಆಶ್ರಯನಾದ ವ್ಯಕ್ತಿಗಿಂತಲೂ ಆಯಾ ಧರ್ಮಗಳಿಗೆ ಸ್ವತಂತ್ರನಾದ ವ್ಯಕ್ತಿಯಲ್ಲಿ ಶಬ್ದವು ಮುಖ್ಯವಾಗಿ ಸಮನ್ವಯವಾಗುತ್ತದೆ.

**एवञ्च दुःख्यादिशब्दानां स्वातन्त्र्यादेवेशे वृत्तिः ।**

ಆದ್ದರಿಂದ 'ದುಃಖೀ' ಮೊದಲಾದ ಶಬ್ದಗಳು ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದಲೇ ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆ.

**अव्यक्तादिशब्दानां त्वाश्रयत्वादपि । तन्निमित्ताव्यक्तत्वस्य परमसूक्ष्मे ब्रह्मण्येव मुख्यत्वात् ।**

ಅವ್ಯಕ್ತಾದಿಶಬ್ದಗಳಾದರೂ ಆಶ್ರಯತ್ವವೆಂಬ ನಿಮಿತ್ತದಿಂದ ಹಾಗೂ ಸ್ವಾತಂತ್ರ್ಯವೆಂಬ ನಿಮಿತ್ತದಿಂದ ಪ್ರಕೃತ್ಯಾದಿಗಳನ್ನು ಪ್ರತಿಪಾದನೆ ಮಾಡುತ್ತವೆ. ಆದರೆ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಪರಮಸೂಕ್ಷ್ಮನಾದ ಬ್ರಹ್ಮನಲ್ಲಿಯೇ ಮುಖ್ಯವಾಗಿರುತ್ತದೆ ಆದ್ದರಿಂದ, ಅವ್ಯಕ್ತಶಬ್ದವು ಮುಖ್ಯವಾಗಿ ಪರಮಾತ್ಮನನ್ನು ಪ್ರತಿಪಾದಿಸಿದರೆ, ಅಮುಖ್ಯವಾಗಿ ಪ್ರಕೃತಿಯನ್ನು ಪ್ರತಿಪಾದಿಸುತ್ತದೆ.

**नच निमित्ताधिक्यान्न मुख्यत्वम् । अतिसहनवति पुंसि सिंहशब्दस्याल्पपङ्कजादप्यधिकपङ्कजे पद्मे पङ्कजशब्दस्य मुख्यत्वप्रसङ्गादिति वाच्यम्।**

ಪ್ರಶ್ನೆ - ಪ್ರವೃತ್ತಿನಿಮಿತ್ತದ ಆಧಿಕ್ಯದಿಂದ ಶಬ್ದಕ್ಕೆ ಮುಖ್ಯಾರ್ಥತ್ವವನ್ನು ಹೇಳುತ್ತಿದ್ದೀರಿ. ಇದು ಸರಿಯಲ್ಲ. ಹಾಗಾದಲ್ಲಿ ಅತ್ಯಂತ ಸಹನಶೀಲನಾದ ಪುರುಷನಲ್ಲಿ ಸಿಂಹಶಬ್ದವು ಮುಖ್ಯವಾಗಬೇಕಾದೀತು. ಅಥವಾ ಸ್ವಲ್ಪ ಕೆಸರಿನಲ್ಲಿ ಹುಟ್ಟಿದ ಪದ್ಮದಲ್ಲಿ ಪಂಕಜ ಶಬ್ದವನ್ನು ಪ್ರಯೋಗಿಸುವುದಕ್ಕಿಂತ ಹೆಚ್ಚು ಕೆಸರಿನಲ್ಲಿ ಹುಟ್ಟಿದ ಪದ್ಮದಲ್ಲಿ ಪಂಕಜ ಶಬ್ದವನ್ನು ಮುಖ್ಯವಾಗಿ ಪ್ರಯೋಗಿಸಬೇಕಾದೀತು. ಆದರೆ ಅತಿಸಹನಾಶೀಲನಾದ ಪುರುಷನಲ್ಲಿ ಸಿಂಹಶಬ್ದವನ್ನು ಗೌಣವಾಗಿಯೇ ತಾರತಮ್ಯವಿಲ್ಲದೇ ಪ್ರಯೋಗಿಸುತ್ತೇವೆ. ಎರಡು ಬಗೆಯ ಕೆಸರಿನಲ್ಲಿ ಹುಟ್ಟಿದ ಪದ್ಮದಲ್ಲಿಯೂ ಪಂಕಜ ಶಬ್ದವನ್ನು ತಾರತಮ್ಯವಿಲ್ಲದೇ ಪ್ರಯೋಗಿಸುತ್ತೇವೆ?

**तत्र सिंहत्वजातेः पद्मत्वजातेश्च निमित्तत्वेन विवक्षितत्वात् । तयोश्च तत्रातिशयाभावात् ।**

ಉತ್ತರ - ಸಿಂಹಶಬ್ದದಲ್ಲಿ ಸಿಂಹತ್ವಜಾತಿ ಪ್ರವೃತ್ತಿನಿಮಿತ್ತವಾಗಿದೆ. ಪಂಕಜಶಬ್ದದಲ್ಲಿ ಪದ್ಮತ್ವಜಾತಿ ಪ್ರವೃತ್ತಿನಿಮಿತ್ತವಾಗಿದೆ. ಈ ಸಿಂಹತ್ವಜಾತಿಯಾಗಲೀ, ಅಥವಾ ಪದ್ಮತ್ವಜಾತಿಯಾಗಲೀ, ಎಲ್ಲೆಡೆಯೂ ಒಂದೇರೀತಿಯಾಗಿರುತ್ತದೆ ಹೊರತು, ಯಾವುದೇ ಅತಿಶಯವಿರುವುದಿಲ್ಲ.

**अल्पज्ञादपि बहुज्ञे विद्वच्छब्दस्य मण्डलाधिपादपि सार्वभौमे भूपशब्दस्य मुख्यत्वदर्शनाच्च ।**

ಮತ್ತು ಸ್ವಲ್ಪ ತಿಳಿದ ವ್ಯಕ್ತಿಯಲ್ಲಿ 'ವಿದ್ವಾನ್' ಎಂಬ ಶಬ್ದವನ್ನು ಪ್ರಯೋಗಿಸುತ್ತೇವೆ. ಅದಕ್ಕಿಂತ ಹೆಚ್ಚು ತಿಳಿದವನಲ್ಲಿಯೂ 'ವಿದ್ವಾನ್' ಎಂಬ ಶಬ್ದವನ್ನು ಮುಖ್ಯವಾಗಿ ಪ್ರಯೋಗಿಸುತ್ತೇವೆ. ಅಥವಾ

ಒಂದು ನಗರಕ್ಕೆ ಮಂತ್ರಿಯಾದವನಲ್ಲಿ 'ಭೂಪ' ಎಂಬ ಶಬ್ದವನ್ನು ಪ್ರಯೋಗಿಸುತ್ತೇವೆ. ಸಮಗ್ರ ದೇಶಕ್ಕೆ ಮಂತ್ರಿಯಾದವನಲ್ಲಿಯೂ 'ಭೂಪ' ಎಂಬ ಶಬ್ದವನ್ನು ಪ್ರಯೋಗಿಸುತ್ತೇವೆ. ಹೀಗೆ 'ವಿದ್ವಾನ್' ಎಂಬ ಶಬ್ದದಲ್ಲಿ ಹಾಗೂ 'ಭೂಪ' ಎಂಬ ಶಬ್ದದಲ್ಲಿ ವ್ಯಕ್ತಿಶಃ ತಾರತಮ್ಯವಿರುವುದು ನಮಗೆ ಕಂಡಿದೆ. ಆದರಂತೆ ಅವ್ಯಕ್ತಾದಿ ಶಬ್ದಗಳೂ ಸಹ ಸೂಕ್ಷ್ಮವಾದ ಪ್ರಕೃತ್ಯಾದಿಗಳಲ್ಲಿ ಹೇಗೆ ಇರುತ್ತವೋ, ಅದಕ್ಕಿಂತ ಮುಖ್ಯವಾಗಿ ಪರಮಸೂಕ್ಷ್ಮನಾದ ಪರಮಾತ್ಮನಲ್ಲಿ ಇರುತ್ತವೆಂದು ತಿಳಿಯಬೇಕು.

**''इति शङ्का निरस्ता भवति'' इति टीकायां त्वव्यक्तत्वं न केवलमीशेऽधिकं किन्तु प्रधानगतमपि तदधीनमिति परिहारान्तरस्य भाष्यस्थचशब्दादिसूचितस्य सद्भावादयं परिहारो नोक्तः ।**

ಆದರೆ ಟೀಕೆಯಲ್ಲಿ 'ಇತಿ ಶಂಕಾ ನಿರಸ್ತಾ ಭವತಿ' ಎಂಬುದಾಗಿ ಬೇರೆ ಪರಿಹಾರವನ್ನೇ ನೀಡಿದ್ದಾರೆ. ಅವ್ಯಕ್ತತ್ವವು ಕೇವಲ ಈಶ್ವರನಲ್ಲಷ್ಟೇ ಅಧಿಕವಾಗಿರುವುದಲ್ಲ. ಪ್ರಧಾನದಲ್ಲಿಯೂ ಇರುತ್ತದೆ. ಆದರೆ ಪ್ರಧಾನದಲ್ಲಿರುವ ಅವ್ಯಕ್ತತ್ವವು ಈಶ್ವರನ ಅಧೀನವಾಗಿರುವ ಕಾರಣ ಪ್ರಧಾನವು ಅಮುಖ್ಯವಾಗಿ ಪ್ರತಿಪಾದ್ಯವಾಗುತ್ತದೆ. ಈಶ್ವರನಲ್ಲಿರುವ ಅವ್ಯಕ್ತತ್ವವು ಮುಖ್ಯವಾಗಿರುವ ಕಾರಣ, ಈಶ್ವರನು ಮುಖ್ಯವಾಗಿ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಸಮಾಧಾನವನ್ನು ನೀಡಿರುತ್ತಾರೆ. ಈ ಸಮಾಧಾನವನ್ನು ಏಕೆ ಹೇಳಿಲ್ಲ ? ಎಂದರೆ ಭಾಷ್ಯದಲ್ಲಿ 'ಚ' ಶಬ್ದಾದಿಗಳಿಂದ ಈ ಸಮಾಧಾನವು ಸೂಚಿತವಾಗಿದೆ ಎಂಬ ಅಭಿಪ್ರಾಯದಿಂದ ಮತ್ತೊಂದು ಸಮಾಧಾನವನ್ನು ಟೀಕೆಯಲ್ಲಿ ಹೇಳಿದ್ದಾರೆಂದು ತಿಳಿಯಬೇಕು.

**शब्दस्य मुख्यत्वे च निमित्तमुख्यत्वं हेतुः । नतु प्रयोगप्राचुर्यम् । रूढलक्षणादौ तत्प्राचुर्येऽपि मुख्यत्वादर्शनात् । नूतनयौगिकशब्देषु तत्प्राचुर्याभावेऽपि मुख्यत्वदर्शनाच्च ।।**

ಶಬ್ದವು ಮುಖ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡಲು ಪ್ರವೃತ್ತಿನಿಮಿತ್ತದ ಮುಖ್ಯತ್ವವು ಕಾರಣವಾಗುತ್ತದೆ ಪ್ರಯೋಗಪ್ರಾಚುರ್ಯವು ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕವಲ್ಲ. ಒಂದು ವೇಳೆ ಪ್ರಯೋಗಪ್ರಾಚುರ್ಯವೇ ಮುಖ್ಯವಾಗುವುದಾದಲ್ಲಿ 'ಮಂಚಾಃ ಕ್ರೋಶಂತಿ' 'ಮಾರ್ಗಾಶ್ಚಲಂತಿ' ಇತ್ಯಾದಿ ರೂಢಲಕ್ಷಣ ಸ್ಥಳಗಳಲ್ಲಿ ಪ್ರಯೋಗಪ್ರಾಚುರ್ಯವಿರುವ ಕಾರಣ ಮುಖ್ಯಪ್ರಯೋಗವೆಂದು ಒಪ್ಪಬೇಕಾಗುತ್ತದೆ. ಆದರೆ ಇಂತಹ ರೂಢಲಕ್ಷಣಗಳನ್ನು ಯಾರೂ ಸಹ ಮುಖ್ಯವೆಂದು ಹೇಳುವುದಿಲ್ಲ. ಮತ್ತು ಪರ್ವತವೆಂದು ಹೇಳುವ ಬದಲು 'ವಸುಮತಿಧೃತಿಹೇತುಃ' ಇತ್ಯಾದಿ ಹೊಸ ಯೌಗಿಕಶಬ್ದಗಳಲ್ಲಿಯೂ ಪ್ರಯೋಗಪ್ರಾಚುರ್ಯವಿರುವುದಿಲ್ಲ. ಆದರೆ ಮುಖ್ಯಾರ್ಥತ್ವವೇ

ಇರುವುದು ಕಂಡಿದೆ. ಆದ್ದರಿಂದ ಶಬ್ದದ ಮುಖ್ಯಾರ್ಥಕ್ಕೆ ಪ್ರವೃತ್ತಿನಿಮಿತ್ತದ ಮುಖ್ಯತ್ವವೇ ಕಾರಣವಾಗಿದೆಯೆಂದು ಸಿದ್ಧವಾಯಿತು.

**प्रकाशः –**

**नन्वेवं प्रवृत्तिनिमित्तभेदेनानेकार्थकत्वं स्यादित्यत आह – स्वातन्त्र्येति ।।**

**ವಿವರಣೆ** - 'ತದ್ಗತತ್ವವು ಪ್ರವೃತ್ತಿನಿಮಿತ್ತವೆಂದು ಒಪ್ಪುವುದು ಅನಿವಾರ್ಯ. ಆದರೆ ಪರಮಾತ್ಮನಲ್ಲಿ 'ದುಃಖೀ' 'ಬದ್ಧಃ' ಇವೇ ಮೊದಲಾದ ಶಬ್ದಗಳ ಸಮನ್ವಯಕ್ಕಾಗಿ ಸ್ವಾತಂತ್ರ್ಯ ಎಂಬುದನ್ನೂ ಕೂಡ ಪ್ರವೃತ್ತಿನಿಮಿತ್ತವೆಂದು ಸಮರ್ಥಿಸಲಾಯಿತು. ಹೀಗಾದಲ್ಲಿ ಎರಡು ಪ್ರವೃತ್ತಿನಿಮಿತ್ತಗಳನ್ನು ಒಂದೇ ಶಬ್ದಕ್ಕೆ ಹೇಳಿದಂತಾಗುತ್ತದೆ. ಆದ್ದರಿಂದ ಶಬ್ದಗಳೂ ಕೂಡ ಅನೇಕಾರ್ಥವುಳ್ಳವುಗಳಾಗಬೇಕಲ್ಲವೇ? ಎಂಬ ಪ್ರಶ್ನೆಗೆ 'ಸ್ವಾತಂತ್ರ್ಯ' ಇತ್ಯಾದಿ ಮೂಲದಿಂದ ಉತ್ತರಿಸುತ್ತಿದ್ದಾರೆ.

**प्रकाशः – दुःखबन्धेति ।। सम्बन्ध एव च ''तदस्यास्त्यस्मिन्'' इति द्वेधा पाणिनिना विवेचित इति दुःखबन्धावरत्वाद्यप्येकरूपमेव सत् सम्बन्धभेदाद्धरौ तदन्यत्र शब्दप्रवृत्तौ निमित्तमिति नानेकार्थत्वं दुःखिबद्धादिशब्दानामित्यर्थः ।**

ಬೇರೆ ಬೇರೆ ಪ್ರವೃತ್ತಿನಿಮಿತ್ತಗಳನ್ನು ಒಪ್ಪುತ್ತಿಲ್ಲ. ತದಾಶ್ರಯತ್ವ ಮತ್ತು ತದ್ಗತತ್ವವನ್ನು ಸಂಬಂಧರೂಪವೆಂದು ಹೇಳಿ ಸಂಬಂಧಗಳನ್ನು ಮಾತ್ರ ಬೇರೆ ಬೇರೆ ಎಂದು ಒಪ್ಪಲಾಗಿದೆ. ಪಾಣಿನಿಯೂ ಕೂಡ 'ತದಸ್ಯಾಸ್ತ್ಯಸ್ಮಿನ್' ಎಂಬುದಾಗಿ ತದ್ಗತತ್ವ ಹಾಗೂ ಸ್ವಾತಂತ್ರ್ಯಗಳನ್ನು ಸಂಬಂಧರೂಪವಾಗಿಯೇ ಪರಿಗಣಿಸಿದ್ದಾನೆ. ಆದ್ದರಿಂದ ದುಃಖ ಎಂಬುದು 'ದುಃಖೀ' ಶಬ್ದದ ಪ್ರವೃತ್ತಿನಿಮಿತ್ತವಾಗಿದೆ. ಇದು ತದ್ಗತತ್ವ ಎಂಬ ಸಂಬಂಧದಿಂದ ಜೀವರಲ್ಲಿ, ಸ್ವಾಮಿತ್ವವೆಂಬ ಸಂಬಂಧದಿಂದ ಪರಮಾತ್ಮನಲ್ಲಿ ಸಮನ್ವಯವಾಗುತ್ತದೆ. ಇದರಂತೆ 'ಬದ್ಧಃ' ಎಂಬ ಶಬ್ದಕ್ಕೆ ಬಂಧನ ಎಂಬುದು ಪ್ರವೃತ್ತಿನಿಮಿತ್ತವಾಗಿದೆ. 'ಅವರ' ಶಬ್ದಕ್ಕೆ ಅವರತ್ವವು ಪ್ರವೃತ್ತಿನಿಮಿತ್ತವಾಗಿದೆ. ಈ ಶಬ್ದಗಳೂ ಕೂಡ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಶ್ರೀಹರಿಯಲ್ಲಿ ತದ್ಗತತ್ವ ಎಂಬ ಪ್ರವೃತ್ತಿನಿಮಿತ್ತದಿಂದ ಜೀವರಲ್ಲಿ ಸಮನ್ವಯವಾಗುತ್ತವೆ. ಹೀಗಿರುವಾಗ ಶಬ್ದಗಳಿಗೆ ಅನೇಕಾರ್ಥತ್ವವು ಬರಬೇಕಾದೀತು ಎಂಬ ಆಕ್ಷೇಪವನ್ನು ಮಾಡಲು ಸಾಧ್ಯವಿಲ್ಲ.

**प्रकाशः – अस्तु सर्वत्र स्वातन्त्र्यमेकमेव निमित्तमनुगतम् । नच दुःखाद्याश्रयेऽव्याप्तिः । तत्रापि स्वाश्रितं दुःखबन्धादिकं प्रति तदाश्रयस्य जीवस्य स्वातन्त्र्यसत्त्वादिति भावेनाह – तदाश्रितेऽपीति ।।**

ಪ್ರತಿಯೊಂದು ಶಬ್ದಗಳಲ್ಲಿಯೂ ಸ್ವಾತಂತ್ರ್ಯ ಎಂಬ ಒಂದೇ ಪ್ರವೃತ್ತಿನಿಮಿತ್ತವನ್ನು ಅನುಗತವಾಗಿ ಒಪ್ಪಬಹುದು. ಹೀಗೆ ಒಪ್ಪಿದಾಗ ದುಃಖಾದಿಗಳಿಗೆ ಆಶ್ರಯರಾದ ಜೀವರಲ್ಲಿ 'ದುಃಖೀ' ಇತ್ಯಾದಿ ಶಬ್ದಗಳ ಪ್ರಯೋಗವೇ ಬರಲು ಸಾಧ್ಯವಿಲ್ಲವಾದ್ದರಿಂದ ಅವ್ಯಾಪ್ತಿದೋಷ ಬರುತ್ತದಲ್ಲವೇ? ಈ ಶಂಕೆಗೆ ಅವಕಾಶವಿಲ್ಲ.

ಏಕೆಂದರೆ ಜೀವಾದಿಗಳಲ್ಲಿಯೂ ಕೂಡ ದುಃಖವು ಆಶ್ರಿತವಾಗಿದೆ. ಅಂತಹ ದುಃಖಾದಿಗಳಿಗೆ ಆಶ್ರಯರಾದ ಜೀವರು ಸ್ವತಂತ್ರರೇ ಆಗಿರುತ್ತಾರೆ. ಆದ್ದರಿಂದ ಪರಮಾತ್ಮನು ಹೇಗೆ 'ದುಃಖೀ' ಇತ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೋ, ಅದರಂತೆ ಜೀವಾದಿಗಳೂ ಕೂಡ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಪ್ರತಿಪಾದ್ಯರಾಗಬಹುದಲ್ಲವೇ? (ಆಶ್ರಿತವಾದ ದುಃಖಕ್ಕೆ ಜೀವರು ಉಪಜೀವ್ಯ- ರಾಗಿದ್ದಾರೆಂಬ ಕಾರಣದಿಂದ ದುಃಖಾದಿಗಳಿಗೆ ಜೀವರು ಸ್ವತಂತ್ರರೆಂದು ಅಭಿಪ್ರಾಯ.)

ಈ ಅಭಿಪ್ರಾಯದಿಂದ 'ತದಾಶ್ರಿತೇಽಪಿ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – हेतुगर्भमिदम् । ''तदस्यास्त्यस्मिन्'' इति भेदेनोक्तिस्तु ''प्रमाणप्रमेय'' इत्यादिगौतमसूत्रे प्रमाणप्रमेययोरिव व्याप्यव्यापकरूपावान्तर-विशेषद्योतनायेति भावः ।।**

'ತದಾಶ್ರೀತೇಽಪಿ' ಎಂಬುದು ಹೇತುಗರ್ಭಿತವಾದ ವಿಶೇಷಣವೆಂದು ತಿಳಿಯಬೇಕು. ಸ್ವಾತಂತ್ರ್ಯವೆಂಬ ಒಂದೇ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸುವುದಾದಲ್ಲಿ 'ತದಸ್ಯಾಸ್ತ್ಯಸ್ಮಿನ್' ಎಂಬುದಾಗಿ ಪಾಣಿನಿಯು ಎರಡು ಪ್ರವೃತ್ತಿನಿಮಿತ್ತಗಳನ್ನು ಏಕೆ ಹೇಳಿದ್ದಾನೆ ? ಎಂದರೆ ಯಾವರೀತಿಯಾಗಿ ಗೌತಮಸೂತ್ರದಲ್ಲಿ 'ಪ್ರಮಾಣಪ್ರಮೇಯ' ಇತ್ಯಾದಿಯಾಗಿ ಅವಾಂತರವಿಭಾಗವನ್ನು ವಿವಕ್ಷಿಸಿ ಹೇಳಲಾಗಿದೆಯೋ, ಅದರಂತೆ ಪಾಣಿನಿಯೂ ಕೂಡ ಇಲ್ಲಿ ಹೇಳಿರುತ್ತಾನೆಂದು ತಿಳಿಯಬೇಕು. ಅಂದರೆ ಪಾಣಿನಿಸೂತ್ರದಲ್ಲಿ 'ತದಸ್ಯ ಅಸ್ತಿ' ಎಂದಷ್ಟೇ ಹೇಳಿದರೆ ಸಾಕು, 'ತದಸ್ಯ ಅಸ್ಮಿನ್' ಎಂದು ಹೇಳಬೇಕಾಗಿಲ್ಲ.

ಈ ಪ್ರಶ್ನೆಗೆ ಸ್ಪಷ್ಟವಾದ ಉತ್ತರವನ್ನು ಹೀಗೆ ತಿಳಿಯಬೇಕು. ನೈಯಾಯಿಕರ ಪ್ರಕಾರ - ಹದಿನಾರು ಪದಾರ್ಥಗಳನ್ನು ವಿಭಾಗ ಮಾಡುವಾಗ ಗೌತಮಸೂತ್ರದಲ್ಲಿ 'ಪ್ರಮಾಣಪ್ರಮೇಯ' ಇತ್ಯಾದಿಯಾಗಿ ಹೇಳಲಾಗಿದೆ. ಪ್ರಮೇಯವು ಕೇವಲಾನ್ವಯಿಯಾದ್ದರಿಂದ ಜಗತ್ತಿನಲ್ಲಿರುವ ಪ್ರತಿಯೊಂದು ಪದಾರ್ಥಗಳೂ ಕೂಡ ಪ್ರಮೇಯವೇ ಎನಿಸುತ್ತವೆ. ಆದ್ದರಿಂದ ಪ್ರಮಾಣ ಇತ್ಯಾದಿಗಳೂ ಕೂಡ ಪ್ರಮೇಯವೇ ಆಗಿರುವಾಗ ಪುನಃ ಪ್ರಮೇಯ ಪದವನ್ನು ಪ್ರತ್ಯೇಕವಾಗಿ ಪರಿಗಣಿಸಬೇಕಾಗಿರಲಿಲ್ಲ. ಆದರೂ ಕೂಡ ಪ್ರಮೇಯ ಎಂಬುದು ಸಾಮಾನ್ಯವಾಗಿದೆ. 'ಪ್ರಮಾಣ' ಎಂಬುದು ಪ್ರಮೇಯದ ವಿಶೇಷವಾಗಿದೆಯೆಂದು ಅವಾಂತರ ವಿಭಾಗದ ವಿವಕ್ಷೆಯಿಂದ 'ಪ್ರಮಾಣ ಪ್ರಮೇಯ' ಇತ್ಯಾದಿಯಾಗಿ ಹೇಳಿದ್ದು ಸಾರ್ಥಕವಾಗಿದೆ. ಅದರಂತೆ ಪ್ರಕೃತದಲ್ಲಿಯೂ ದುಃಖಾದಿಗಳಿಗೆ ಆಶ್ರಯನಾಗದ ದೇವರಲ್ಲಿ ದುಃಖಾದಿಗಳಿಗೆ ಆಶ್ರಯರಾದ ಜೀವರಲ್ಲಿಯೂ ಸ್ವಾಮಿತ್ವವಿರುತ್ತದೆ. ಈ ಅವಾಂತರ ವಿಭಾಗದ ವಿವಕ್ಷೆಯಿಂದ ಪಾಣಿನಿಯು 'ತದಸ್ಯ ಅಸ್ತಿ' ತದಸ್ಯ ಅಸ್ಮಿನ್' ಎಂಬ ಎರಡು ನಿಮಿತ್ತಗಳನ್ನು ಹೇಳಿದ್ದು ಸಾರ್ಥಕವಾಗಿದೆ. ಇದರಂತೆ ವ್ಯಾಪ್ಯವ್ಯಾಪಕಭಾವವೂ ಕೂಡ ಇರುತ್ತದೆ. 'ಯತ್ರ ಆಶ್ರಯತ್ವಂ ತತ್ರ ಸ್ವಾಮಿತ್ವಮ್' ಎಂಬ ವ್ಯಾಪ್ತಿಯಿದೆ. ಆದರೆ 'ಯತ್ರ ಸ್ವಾಮಿತ್ವಮ್ ತತ್ರ ಆಶ್ರಯತ್ವಮ್' ಎಂಬ ವ್ಯಾಪ್ತಿ ಇರುವುದಿಲ್ಲ. ಹೀಗೆ ವ್ಯಾಪ್ಯವ್ಯಾಪಕಭಾವವನ್ನು ತಿಳಿಸುವುದಕ್ಕಾಗಿಯೂ ಪಾಣಿನಿಯು 'ಅಸ್ಮಿನ್' ಎಂಬ ಪದಗ್ರಹಣ ಮಾಡಿದ್ದು ಸಾರ್ಥಕವಾಗಿದೆ.

ಆನುಮಾನಿಕಾಧಿಕರಣ (೧-೪-೧)

**प्रकाशः – अत एवेति ।।** स्वातन्त्र्यस्य सार्वत्रिकत्वादेवेत्यर्थः । ''स्वातन्त्र्यं तद्गतत्वं च'' इति तदधीनत्वसूत्रानुव्याख्यानोक्तमर्थं प्रवृत्तिनिमित्तैकरूप्यमुपपाद्य ततश्च किमित्यतस्तस्य फलमाह – **एवश्चेति ।।**

'ಅತ ಏವ' ಎಂದರೆ ಸ್ವಾತಂತ್ರ್ಯವು ಎಲ್ಲೆಡೆಯೂ ಮುಖ್ಯವಾದ ಪ್ರವೃತ್ತಿನಿಮಿತ್ತವಾಗಿದೆಯೆಂದು ಹೇಳಿದ್ದರಿಂದಲೇ ಎಂದು ಅರ್ಥ.

'ಸ್ವಾತಂತ್ರ್ಯಂ ತದ್ಗತತ್ವಂ ಚ' ಎಂಬುದಾಗಿ ತದಧೀನತ್ವಸೂತ್ರದ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ವಾಕ್ಯಕ್ಕೆ ಪ್ರವೃತ್ತಿನಿಮಿತ್ತವು ಒಂದೇಯಾಗಿದೆಯೆಂಬ ಅರ್ಥವನ್ನು ಉಪಪಾದನೆ ಮಾಡಿದ್ದಾಯಿತು. ಇದರಿಂದ ಏನು ಸಿದ್ಧವಾಯಿತು? ಎಂಬ ಫಲವನ್ನು 'ಏವಂಚ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः** – स्वातन्त्र्यस्य निमित्तत्वे मुख्यत्वे च सतीत्यर्थः । अव्यक्तजीवादिशब्दाशयेनोक्तं **रूढस्येति ।।** दुःख्यादिशब्दाशयेनोक्तं **यौगिकस्येति ।।**

'ಏವಂಚ' ಎಂದರೆ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗಿದೆ ಮತ್ತು ಮುಖ್ಯವಾಗಿದೆಯೆಂದು ಸಿದ್ಧವಾಗುತ್ತಿರಲು ಎಂದರ್ಥ. ಅವ್ಯಕ್ತ ಜೀವ ಮೊದಲಾದ ಶಬ್ದಗಳು ರೂಢವಾಗಿವೆಯೆಂದು 'ರೂಢಸ್ಯ' ಎಂಬುದರಿಂದ ಹೇಳಿದ್ದಾರೆ. 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳು ಯೌಗಿಕವಾಗಿವೆ ಎಂದು ಯೌಗಿಕಸ್ಯ' ಎಂಬುದರಿಂದ ಹೇಳಿದ್ದಾರೆ.

**प्रकाशः** – एवं सामान्यत उपपाद्य प्रकृतोदाहरणनिष्ठतां दर्शयन् ''तदधीनत्वाच्चाव्यक्तत्वादीनाम्'' इति भाष्यं, ''अत्राव्यक्तत्वग्रहणेनाव्यक्तशब्दस्य द्वेधापि परमात्मनि वृत्तिरिति दर्शयति'' इति टीकां च व्यनक्ति **।। एवश्चेति ।।** प्रवृत्तिनिमित्तस्य तदधीनत्वेन तद्वाचकत्वे सतीत्यर्थः ।

ಇಲ್ಲಿಯ ತನಕ ಪ್ರವೃತ್ತಿನಿಮಿತ್ತದ ಬಗ್ಗೆ ಸಾಮಾನ್ಯವಾಗಿ ಉಪಪಾದನೆ ಮಾಡಿ ಈಗ ಉದಾಹರಣೆಯಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಮತ್ತು 'ತದಧೀನತ್ವಾಚ್ಚಾವ್ಯಕ್ತತ್ವಾದೀನಾಮ್' ಎಂಬ ಭಾಷ್ಯವನ್ನು 'ಅತ್ರಾವ್ಯಕ್ತತ್ವಗ್ರಹಣೇನಾವ್ಯಕ್ತಶಬ್ದಸ್ಯ ದ್ವೇಧಾಪಿ ಪರಮಾತ್ಮನಿ ವೃತ್ತಿರಿತಿ ದರ್ಶಯತಿ' ಎಂಬ ಟೀಕೆಯನ್ನೂ ಕೂಡ ವ್ಯಾಖ್ಯಾನ ಮಾಡುತ್ತಿದ್ದಾರೆ 'ಏವಂಚ' ಇತ್ಯಾದಿ ಗ್ರಂಥದಿಂದ. 'ಏವಂಚ' ಎಂದರೆ ಪ್ರವೃತ್ತಿನಿಮಿತ್ತವು ತದಧೀನವಾಗುವ ಮೂಲಕ ತದ್ವಾಚಕವಾಗಲು ಸಹಕಾರಿಯಾಗುತ್ತದೆಂದು ಸಿದ್ಧವಾದ ಮೇಲೆ ಎಂದರ್ಥ.

**प्रकाशः** – ''अव्यक्तत्वोपयोगिनस्सूक्ष्मत्वस्य तत्र सद्भावात्'' इत्यादिकां ''अतिशयेन प्रवृत्तिनिमित्तवत्येव शब्दस्य मुख्यत्वादित्यन्तां ''सूक्ष्मं तु तदर्हत्वात्'' इति सूत्रभाष्यटीकां हृदि कृत्वाऽऽश्रयत्वादित्युक्तं व्यनक्ति – **तन्निमित्तेति ।।**

'ಅವ್ಯಕ್ತತ್ವೋಪಯೋಗಿನಃ ಸೂಕ್ಷ್ಮತ್ವಸ್ಯ ತತ್ರ ಸದ್ಭಾವಾತ್' ಪರಮಾತ್ಮನಲ್ಲಿ ಸೂಕ್ಷ್ಮವಾದ ಅವ್ಯಕ್ತತ್ವವಿದೆ ಇತ್ಯಾದಿ ಟೀಕೆಯಿಂದ ಪ್ರಾರಂಭಿಸಿ, 'ಅತಿಶಯೇನ ಪ್ರವೃತ್ತಿನಿಮಿತ್ತವತ್ಯೇವ ಶಬ್ದಸ್ಯ ಮುಖ್ಯತ್ವಾತ್' ಅತಿಶಯವಾದ ಪ್ರವೃತ್ತಿನಿಮಿತ್ತವಿರುವ ಕಡೆ ಮಾತ್ರ ಶಬ್ದವು ಮುಖ್ಯವಾಗಿರುತ್ತದೆ ಎಂಬಲ್ಲಿಯ ತನಕ ಇರುವ 'ಸೂಕ್ಷ್ಮಂ ತು ತದರ್ಹತ್ವಾತ್' ಸೂತ್ರಭಾಷ್ಯದ ಟೀಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು 'ತದಾಶ್ರಯತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ತನ್ನಿಮಿತ್ತ' ಇತ್ಯಾದಿ ಗ್ರಂಥದಿಂದ.

**प्रकाशः** – नन्वत्र टीकायां ''अतिशयेन प्रवृत्तिनिमित्तवत्येव'' इत्याद्युक्तिरयुक्ता। तदधीनत्वसूत्रटीकायां प्रधानादेरतिसूक्ष्मत्वाद्यभावेऽपि नामुख्यार्थत्वम् । अल्पपङ्कजेऽपि पद्मे पङ्कजशब्दस्यामुख्यताऽदर्शनादिति शङ्का च निरस्ता भवति'' इत्युक्तेः । तथा चमससूत्रावतरणपरटीकायां ''सहनवति पुंसि प्रयुक्तस्य सिंहशब्दस्य तदवाचकत्वदर्शनात्'' इति ग्रन्थेन योगार्थस्य वाचकत्वाहेतुत्वोक्तेः ।

ಶಂಕೆ - ಟೀಕೆಯಲ್ಲಿ 'ಅತಿಶಯೇನ ಪ್ರವೃತ್ತಿನಿಮಿತ್ತವತ್ಯೇವ' ಅತಿಶಯವಾದ ಪ್ರವೃತ್ತಿನಿಮಿತ್ತವಿರುವೆಡೆ ಮಾತ್ರ ಶಬ್ದವು ಮುಖ್ಯವಾಗಿರುತ್ತದೆಂದು ಹೇಳಿದ್ದಾರೆ. ಇದು ತಪ್ಪು. ಏಕೆಂದರೆ 'ತದಧೀನತ್ವ' ಸೂತ್ರದ ಟೀಕೆಯಲ್ಲಿ ''ಪ್ರಧಾನಾದೇರತಿಸೂಕ್ಷ್ಮತ್ವಾದ್ಯಭಾವೇऽಪಿ ನಾಮುಖ್ಯಾರ್ಥತ್ವಮ್ । ಅಲ್ಪಪಂಕಜೇऽಪಿ ಪದ್ಮೇ ಪಂಕಜಶಬ್ದಸ್ಯಾಮುಖ್ಯತಾऽದರ್ಶನಾದಿತಿ ಶಂಕಾ ಚ ನಿರಸ್ತಾ ಭವತಿ'' ''ಪ್ರಧಾನಾದಿಗಳು ಅತಿಸೂಕ್ಷ್ಮವಾಗದಿದ್ದರೂ ಅಮುಖ್ಯಾರ್ಥವಾಗಿಲ್ಲ ಹೇಗೆಂದರೆ ಸ್ವಲ್ಪವೇ ಕೆಸರಿನಲ್ಲಿ ಹುಟ್ಟಿದ ಪದ್ಮದಲ್ಲಿಯೂ ಪಂಕಜ ಶಬ್ದದ ವ್ಯವಹಾರವಿರುತ್ತದೆ. ಹೆಚ್ಚು ಕೆಸರಿನಲ್ಲಿ ಹುಟ್ಟಿದ ಪದ್ಮದಲ್ಲಿಯೂ 'ಪಕಂಜ' ಎಂಬ ಶಬ್ದವನ್ನು ವ್ಯವಹರಿಸಲಾಗುತ್ತದೆ. ಒಂದು ಪದ್ಮದಲ್ಲಿ ಅಮುಖ್ಯವಾದ ಪ್ರಯೋಗವೆಂದು, ಇನ್ನೊಂದು ಪದ್ಮದಲ್ಲಿ ಮುಖ್ಯವಾದ ಪಂಕಜಶಬ್ದದ ವ್ಯವಹಾರವೆಂದು ಯಾರೂ ಹೇಳುವುದಿಲ್ಲ. ಅದರಂತೆ ಪ್ರಧಾನಾದಿಗಳು ಅತಿಸೂಕ್ಷ್ಮವಾಗಿಲ್ಲವೆಂಬ ಕಾರಣದಿಂದ ಅಮುಖ್ಯಾರ್ಥವಾಗಿದೆಯೆಂದು ತಿಳಿಯುವುದು ತಪ್ಪು'' ಹೀಗೆ ಹೇಳಿದ್ದಾರೆ.

ಮತ್ತು 'ಚಮವಸದವಿಶೇಷಾತ್' ಎಂಬ ಸೂತ್ರಕ್ಕೆ ಅವತಾರಿಕೆ ನೀಡುವ ಟೀಕೆಯಲ್ಲಿಯೂ 'ಸಹನವತಿ ಪುಂಸಿ ಪ್ರಯುಕ್ತಸ್ಯ ಸಿಂಹಶಬ್ದಸ್ಯ ತದವಾಚಕತ್ವದರ್ಶನಾತ್' ಸಹನವುಳ್ಳ ಪುರುಷನಲ್ಲಿ ಸಿಂಹ ಶಬ್ದವನ್ನು ಪ್ರಯೋಗಿಸುವುದು ಕಂಡಿದೆ'' ಇತ್ಯಾದಿಯಾಗಿ ಹೇಳಿದ್ದಾರೆ. ಇದರಿಂದ ಪುರುಷನಲ್ಲಿ ಸಿಂಹಶಬ್ದದ ಯೋಗಾರ್ಥವಿದ್ದರೂ ಸಿಂಹಶಬ್ದಕ್ಕೆ ಪುರುಷನಲ್ಲಿ ವಾಚಕತ್ವವನ್ನು ಒಪ್ಪಬಾರದು. ಗೌಣಾರ್ಥವನ್ನೇ ಒಪ್ಪಬೇಕೆಂದು ಸಾಧಿಸಿದ್ದಾರೆ.

**प्रकाशः** – तथा ''महद्वच्च'' इति सूत्रटीकायां ''अतिसहनवति पुरुषे सिंहशब्दस्यामुख्यत्वात्'' इत्युक्तेश्चेति भावेनाशङ्क्य समाधत्ते – नच निमित्ताधिक्यादिति ।।

ಆನುಮಾನಿಕಾಧಿಕರಣ (೧-೪-೧)

ಮತ್ತು 'ಮಹದ್ವಚ್ಚ' ಎಂಬ ಸೂತ್ರದ ಟೀಕೆಯಲ್ಲಿ 'ಅತಿಸಹನವತಿ ಪುರುಷೇ ಸಿಂಹಶಬ್ದಸ್ಯಾಮುಖ್ಯತ್ವಾತ್' "ಅತ್ಯಂತ ಸಹನವುಳ್ಳ ಪುರುಷನಲ್ಲಿ ಸಿಂಹಶಬ್ದವು ಅಮುಖ್ಯವಾಗಿರುತ್ತದೆ" ಎಂಬುದಾಗಿ ಸ್ವಲ್ಪ ಸಹನೆಯಿದ್ದರೂ ಸಿಂಹ ಶಬ್ದವನ್ನು ಮುಖ್ಯವಾಗಿಯೇ ಗೌಣಾರ್ಥ ಮಾಡಲಾಗುತ್ತದೆ. ಹೆಚ್ಚು ಸಹನೆಯಿರುವ ಪುರುಷನಲ್ಲಿಯೂ ಮುಖ್ಯವಾಗಿಯೇ ಗೌಣಾರ್ಥ ಮಾಡಲಾಗುತ್ತದೆ. ಹೊರತು, ಈ ಗೌಣಾರ್ಥದಲ್ಲೇನೂ ತಾರತಮ್ಯವಿರುವುದಿಲ್ಲ. ಹೀಗೆ ಟೀಕೆಯಲ್ಲಿ ಹೇಳಿರುವಾಗ ಪ್ರಕೃತ ಸೂಕ್ಷ್ಮತ್ವವು ಪರಮಾತ್ಮನಲ್ಲಿ ಹೆಚ್ಚು ಇರುವ ಕಾರಣ ಅವ್ಯಕ್ತಶಬ್ದವು ಮುಖ್ಯವಾಗಿ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತದೆ. ಪ್ರಕೃತ್ಯಾದಿಗಳಲ್ಲಿ ಹೆಚ್ಚು ಸೂಕ್ಷ್ಮತೆಯಿಲ್ಲದ ಕಾರಣ ಅಮುಖ್ಯವಾದ ಶಬ್ದಪ್ರತಿಪಾದ್ಯತ್ವ ಬರುತ್ತದೆಂದು ಹೇಗೆ ಹೇಳುತ್ತೀರಿ?

ಸಮಾಧಾನ - ಈ ಆಶಂಕೆಗೆ ಗ್ರಂಥದಲ್ಲಿ 'ನಚ ನಿಮಿತ್ತಾಧಿಕ್ಯಾತ್' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

**प्रकाशः** – भाष्यस्थचशब्दादिसूचितस्येति ।। "तदधीनत्वाच्चाव्यक्तत्वादीनाम्" इति भाष्यस्थेत्यर्थः । आदिपदस्य "नामानि सर्वाणि यमाविशन्ति" इति वाचकत्वोक्तिपरश्रुत्युक्तिसूचितस्येत्यर्थः ।। **अयमिति** ।। सिंहत्वजातेरित्यादिनोक्तः ।

'ಭಾಷ್ಯಸ್ಥಚಶಬ್ದಾದಿಸೂಚಿತಸ್ಯ' ಎಂದರೆ 'ತದಧೀನತ್ವಾಚ್ಚಾವ್ಯಕ್ತತ್ವಾದೀನಾಮ್' ಎಂಬ ಭಾಷ್ಯದಲ್ಲಿರುವ 'ಚ' ಶಬ್ದದಿಂದ ಈ ಸಮಾಧಾನವು ಸೂಚಿತವಾಗಿದೆಯೆಂದಭಿಪ್ರಾಯ. ಆದಿಪದದಿಂದ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿಯಾದ ವಾಚಕತ್ವಪರವಾದ ಶ್ರುತ್ಯುಕ್ತಿಯ ಸೂಚನೆಯನ್ನು ತಿಳಿಯಬೇಕು. 'ಅಯಮ್' ಎಂದರೆ 'ಸಿಂಹತ್ವಜಾತೇಃ' ಇತ್ಯಾದಿಯಾಗಿ ಹೇಳಲ್ಪಟ್ಟ ವಿಚಾರ ಎಂದರ್ಥ.

**प्रकाशः** – "यदुक्तं विष्णोरेव मुख्यतोऽव्यक्तादिशब्दवाच्यत्वमिति तदयुक्तम् । अव्यक्तादिशब्दानां प्रधानादावेव प्रसिद्धत्वात् । नच वाच्यं शब्दप्रवृत्तिनिमित्तस्येश्वरे मुख्यत्वेन तत्र शब्दानां मुख्यत्वमुक्तमिति । नहि यत्र प्रसिद्धश्शब्दस्तत्रामुख्योमुख्यतः प्रवृत्तिनिमित्तवति च मुख्य इति दृष्टचरम्" इति टीकोक्तचोद्यरीत्या "अव्यक्तादि-शब्दानां त्वाश्रयत्वादपि" इत्यादि प्रागुक्तमयुक्तमित्याशङ्कां हृदि कृत्वा "महद्वच्च" इति सूत्रभाष्यटीकाभिप्रेतहेतूक्त्या प्रागुक्तं समर्थयते – **शब्दस्येति** ।।

"ಯದುಕ್ತಂ ವಿಷ್ಣೋರೇವ ಮುಖ್ಯತೋಽವ್ಯಕ್ತಾದಿಶಬ್ದವಾಚ್ಯತ್ವಮಿತಿ ತದಯುಕ್ತಮ್ । ಅವ್ಯಕ್ತಾದಿ-ಶಬ್ದಾನಾಂ ಪ್ರಧಾನಾದಾವೇವ ಪ್ರಸಿದ್ಧತ್ವಾತ್ । ನಚ ವಾಚ್ಯಂ ಶಬ್ದಪ್ರವೃತ್ತಿನಿಮಿತ್ತಸ್ಯೇಶ್ವರೇ ಮುಖ್ಯತ್ವೇನ ತತ್ರ ಶಬ್ದಾನಾಂ ಮುಖ್ಯತ್ವಮುಕ್ತಮಿತಿ । ನಹಿ ಯತ್ರ ಪ್ರಸಿದ್ಧಃ ಶಬ್ದಸ್ತತ್ರಾಮುಖ್ಯೋ ಮುಖ್ಯತಃ ಪ್ರವೃತ್ತಿನಿಮಿತ್ತವತಿ ಚ ಮುಖ್ಯ ಇತಿ ದೃಷ್ಟಚರಮ್"

"ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯನಾಗಿದ್ದಾನೆಂದು ಹೇಳಿದ್ದು ಸರಿಯಲ್ಲ. ಏಕೆಂದರೆ ಅವ್ಯಕ್ತಾದಿ ಶಬ್ದಗಳೂ ಪ್ರಧಾನಾದಿಗಳಲ್ಲೇ ಪ್ರಸಿದ್ಧವಾಗಿವೆ. ಇದರ ಮೇಲೆ ಹೀಗೆ ಪ್ರಶ್ನಿಸಬಹುದು. ಶಬ್ದಪ್ರವೃತ್ತಿಯು ಈಶ್ವರನಲ್ಲಿ ಮುಖ್ಯವಾಗಿರುವುದರಿಂದ ಶಬ್ದಗಳು ಈಶ್ವರನಲ್ಲೇ ಮುಖ್ಯವಾಗಿವೆಯೆಂದು. ಆದರೆ ಇದು

ಸರಿಯಲ್ಲ. ಏಕೆಂದರೆ ಎಲ್ಲಿ ಶಬ್ದವು ಪ್ರಸಿದ್ಧವಾಗಿರುತ್ತದೋ, ಅಲ್ಲಿ ಆ ಶಬ್ದವು ಅಮುಖ್ಯವಾಗಿರುತ್ತದೆ. ಎಲ್ಲಿ ಪ್ರವೃತ್ತಿನಿಮಿತ್ತವು ಮುಖ್ಯವಾಗಿರುತ್ತದೋ, ಅಲ್ಲಿಯೇ ಶಬ್ದವು ಮುಖ್ಯವಾಗಿರುತ್ತದೆಂದು ಲೋಕದಲ್ಲಿ ಕಂಡಿದೆ''.

ಹೀಗೆ ಟೀಕೆಯಲ್ಲಿ ಯಾವ ಆಶಂಕೆಯನ್ನು ಮಾಡಿದ್ದಾರೋ, ಅದರ ಪ್ರಕಾರ ''ಅವ್ಯಕ್ತಾದಿಶಬ್ದಾನಾಂ ತು ಆಶ್ರಯತ್ವಾದಪಿ'' ಅವ್ಯಕ್ತಾದಿಶಬ್ದಗಳು ಆಶ್ರಯತ್ವವೆಂಬ ಪ್ರವೃತ್ತಿನಿಮಿತ್ತಕ್ಕಿಂತಲೂ ಸ್ವಾಮಿತ್ವ ಪ್ರವೃತ್ತಿ-ನಿಮಿತ್ತವಿದ್ದಲ್ಲೇ ಮುಖ್ಯವಾಗಿವೆ ಎಂಬುದಾಗಿ ಹೇಳಿದ್ದು ಅಯುಕ್ತವಾಗಿದೆಯಲ್ಲವೇ? ಎಂಬ ಆಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ''ಮಹದ್ವಚ್ಚ'' ಇತ್ಯಾದಿ ಸೂತ್ರ ಭಾಷ್ಯದ ಟೀಕೆಯಲ್ಲಿ ಅಭಿಪ್ರೇತವಾದ ಹೇತುಗಳನ್ನು ಹೇಳುವ ಮೂಲಕ ತಾವೇ ಹಿಂದೆ ಹೇಳಿದ ವಿಷಯವನ್ನು ಸಮರ್ಥನೆ ಮಾಡುತ್ತಿದ್ದಾರೆ 'ಶಬ್ದಸ್ಯ'' ಇತ್ಯಾದಿ ಗ್ರಂಥದಿಂದ.

**प्रकाशः** – न त्वित्युक्तमेवान्वयतो व्यतिरेकतश्च व्यभिचारेण व्यनक्ति – **रूढेति** ।। मार्गाश्चलन्ति, मञ्चाः क्रोशन्तीत्यादिशब्द इत्यर्थः ।

'ನತು' ಇತ್ಯಾದಿಯಾಗಿ ಹೇಳಿದ್ದನ್ನೇ ಅನ್ವಯವ್ಯಭಿಚಾರ ಹಾಗೂ ವ್ಯತಿರೇಕವ್ಯಭಿಚಾರಗಳ ಮೂಲಕ ವ್ಯಾಖ್ಯಾನ ಮಾಡುತ್ತಿದ್ದಾರೆ 'ರೂಢ' ಇತ್ಯಾದಿ ಗ್ರಂಥದಿಂದ. ರೂಢಲಕ್ಷಣಕ್ಕೆ 'ಮಾರ್ಗಾಶ್ಚಲಂತಿ', 'ಮಂಚಾಃ ಕ್ರೋಶಂತಿ' ಇತ್ಯಾದಿ ಶಬ್ದಗಳೇ ಉದಾಹರಣೆಯಾಗಿವೆ. ಈ ರೂಢಲಕ್ಷಣ ಸ್ಥಳಗಳಲ್ಲಿ ಪ್ರಯೋಗ-ಪ್ರಾಚುರ್ಯವಿದ್ದರೂ ಶಬ್ದವು ಮುಖ್ಯವಾಗಿ ಅರ್ಥವನ್ನು ಪ್ರತಿಪಾದನೆ ಮಾಡುವುದಿಲ್ಲ.

**प्रकाशः** – ''प्रयोगप्राचुर्यं च न मुख्यताहेतुः । अज्ञातमुख्यलाक्षणिकादि-प्रयोगेष्वपि दर्शनात्'' इति सुधोक्तेरिति भावः ।। **नूतनयौगिकेति** ।। पर्वताद्यर्थकेषु वसुमतीधृतिहेतुरित्यादिशब्देष्वित्यर्थः ।

'ಪ್ರಯೋಗಪ್ರಾಚುರ್ಯಂ ಚ ನ ಮುಖ್ಯತಾಹೇತುಃ । ಅಜ್ಞಾತಮುಖ್ಯಲಾಕ್ಷಣಿಕಾದಿಪ್ರಯೋಗೇಷ್ವಪಿ ದರ್ಶನಾತ್' ಪ್ರಯೋಗಪ್ರಾಚುರ್ಯವು ಮುಖ್ಯತ್ವಕ್ಕೆ ಹೇತುವಲ್ಲ. ಹಾಗಾದಲ್ಲಿ ಅಜ್ಞಾತಮುಖ್ಯಲಾಕ್ಷಣಿಕ ಪ್ರಯೋಗಗಳಲ್ಲಿ ವ್ಯಭಿಚಾರ ಬರುತ್ತದೆ ಇತ್ಯಾದಿಯಾಗಿ ಸುಧೆಯಲ್ಲಿ ಹೇಳಿದ್ದಾರೆಂದು ತಿಳಿಯಬೇಕು. 'ನೂತನಯೌಗಿಕವಾದ ಶಬ್ದಗಳೆಂದರೆ 'ಪರ್ವತ' ಎಂಬರ್ಥದಲ್ಲಿ 'ವಸುಮತೀಧೃತಿಹೇತುಃ' ಭೂಮಿಯ ಧಾರಣೆಗೆ ಕಾರಣವಾದದ್ದು. ಇವೇ ಮೊದಲಾದ ಶಬ್ದಗಳನ್ನು ಹೊಸದಾಗಿ ಪ್ರಯೋಗಿಸಲಾಗುತ್ತದೆ. ಇಂತಹ ಶಬ್ದಗಳಲ್ಲಿ ಪ್ರಯೋಗಪ್ರಾಚುರ್ಯವಿಲ್ಲದಿದ್ದರೂ ಮುಖ್ಯಾರ್ಥತ್ವವೇ ಇರುತ್ತದೆಂದು ಅಭಿಪ್ರಾಯ.

**गुरुराजीयम्** – एवं ब्रह्मणि प्रयोगाभावमभ्युपेत्य समाहितम् । इदानीं प्रयोगाभावेऽपि योग्यताऽस्त्येवेति न दोष इत्याह – **किञ्चेति** ।। उक्तया श्रुत्या स बद्धः स दुःखी स बन्धयति स दुःखयतीत्युक्तश्रुत्येत्यर्थः ।। **स्मृत्या चेति** ।। यदधीनो गुणो यस्य तद्गुणी सोऽभिधीयत इति स्मृत्या चेत्यर्थः । नन्वतित्वाक-

मित्यादेर्लोकेऽप्रयोगेऽपि व्याकरणस्मृत्या व्युत्पादितत्वाद् ब्रह्मण्युक्तश्रुतिस्मृतिभ्यां व्युत्पादितत्वात्तत्र बद्धादिशब्दप्रयोगयोग्यतासत्त्वेऽपि राज्ञि बद्धादिशब्दस्य कदाप्यभावेन तद्योग्यताया एव ज्ञातुमशक्यत्वात्कथं प्रयोगयोग्यताऽस्तीत्यरुच्याऽऽह – **किञ्चेति** ।। **उभयार्थत्वेऽपीति** ।। दुःखाश्रयत्वदुःखस्वातन्त्र्यरूपोभयार्थत्वेऽपीत्यर्थः । ननु लोके दुःखादिशब्दप्रयोगे आश्रयत्वस्यैव ब्रह्मणि तु स्वातन्त्र्यस्यैव विवक्षायां किं नियामकम् । नच लोके प्रयोगो ब्रह्मण्यप्रयोग एव नियामक इति वाच्यम् । शब्दप्रवृत्तिनिमित्तसत्त्वेन तस्यैवापादितत्वेनाप्रयोगस्य नियामकत्वासम्भवादित्यतोऽनुव्याख्यानोक्तं पक्षान्तरमाह – **यद्वेति** ।।

ननु न स्वातन्त्र्यविवक्षया ब्रह्मणि दुःख्यादिशब्दप्रयोगः । स्वातन्त्र्यापेक्षया शब्दप्रयोगस्य कुत्राप्यदृष्टत्वात् । नच राज्ञि स्वातन्त्र्यविवक्षया जयिशब्दो दृष्ट इति वाच्यम् । तत्रापि जयिशब्दार्थभूतोत्कर्षस्य राजगतत्वेनैव राजा जयीति प्रयोगोपपत्तेरित्याशङ्कते ।। **न चेति** ।। **अभिभवाभिप्रायेणेति** ।। अभिभवश्च न राजगत इति स्वातन्त्र्यमेव तत्र निमित्तमिति भावः । ननु तथापि राज्ञि जयिशब्दस्य लाक्षणिकत्वान्न तत्प्रति स्वातन्त्र्यं निमित्तमित्यत आह – **नापीति** ।। लक्षणाबीजभूतशक्यसम्बन्धोपपादनं जयाश्रयभृत्यसम्बन्धादिति ।। अनतिप्रसक्त एव शक्यसम्बन्धो लक्षणाबीजम् । प्रकृते च भृत्यसम्बन्धस्यातिप्रसक्तत्वान्न लक्षणाबीजत्वमित्याह – **भृत्यसम्बन्धिनीति** ।। सर्वत्र लक्षणायाः मुख्यार्थोपस्थितिपूर्वकत्वं दृष्टम् । नच प्रकृते तदस्तीत्याह – **जयाश्रयेति** ।। किञ्च जयिशब्दस्य भृत्ये मुख्यत्वे राजापेक्षया प्रयोगबाहुल्यं स्यात् । नच तदस्तीत्याह – **न हीति** ।। ननु राजा जयीत्यादिवद्धनीत्यादिप्रयोगोऽपि लाक्षणिक एवेत्यत आह – **स्वातन्त्र्याश्रयत्वयोरिति** ।। किञ्चाक्षादिशब्दानामिव परस्परासंसृष्टार्थत्वे नानार्थत्वं स्यान्न च तदस्तीत्याह – **तदाश्रितेऽपीति** ।। **अत एवेति** ।। परस्परासंसृष्टार्थत्वाभावेन नानार्थत्वाभावादेवेत्यर्थः । ब्रह्मणि शब्दप्रयोगे स्वातन्त्र्यं निमित्तमित्युक्तया सर्वेषामपि शब्दानां प्रयोगे स्वातन्त्र्यस्यैव निमित्तत्वं प्राप्तम् । तन्निराकरोति ।। **एवञ्चेति** ।। अपिशब्देन स्वातन्त्र्यपरामर्शः । नन्वव्यक्तादिशब्दानां त्वाश्रयत्वादपि भगवति प्रवृत्तिरित्ययुक्तम्। अव्यक्तादिशब्दप्रवृत्तिनिमित्तस्य भगवति गतत्वाभावेनाश्रयत्वासम्भवेन स्वातन्त्र्यस्यैव वक्तव्यत्वादित्यत आह – **तन्निमित्तेति** ।। नन्वधिकपङ्कजे पद्मे पङ्कजशब्दप्रवृत्तौ पद्मत्वजातेरेव निमित्तत्वात्

प्रवृत्तिनिमित्ताधिक्यस्य तत्राप्रयोजकत्वेनाल्पपङ्कजादपि न मुख्यत्वमित्युक्तम् । तदयुक्तम् । तथा सति टीकाविरोधःस्यात् । टीकायां प्रवृत्तिनिमित्ताधिक्यस्य शब्दमुख्यत्वेऽल्पपङ्कजशब्दस्यामुख्यत्वशङ्कानिरासायाव्यक्तशब्दप्रवृत्तिनिमित्तस्य भगवतिमुख्यत्वादन्यगतस्यापि भगवदधीनत्वादिति परिहारस्योक्तत्वात् । भवद्भिश्च स्वातन्त्र्यस्यैव प्रयोजकत्वमङ्गीकृत्याधिकपङ्कजे पद्मे पङ्कजशब्दस्य प्रवृत्तौ पद्मत्वजातेरेव निमित्तत्वेन तत्राप्यतिशयाभावेनाल्पपङ्कजेऽपि मुख्यत्वमिति परिहारोक्तेरित्यत आह – **इति शङ्का निरस्ता भवतीति टीकायामिति** ।। ननु तथापि न बद्धादिशब्दानां भगवति मुख्यत्वं सम्भवति । तत्प्रयोजकीभूतप्रयोगप्राचुर्याभावा दित्यतोऽन्वयव्यतिरेकाभ्यां व्यभिचारान्न प्रयोगप्राचुर्यस्य शब्दमुख्यत्वहेतुत्वमित्याह – **शब्दस्य मुख्यत्व इति** ।।




ಇಲ್ಲಿಯ ತನಕ ಸ್ವಾತಂತ್ರ್ಯ ಹಾಗೂ ತದ್ಗತತ್ವ ಎರಡೂ ಸಹ ಶಬ್ದಗಳ ಪ್ರವೃತ್ತಿನಿಮಿತ್ತವಾಗಿರುತ್ತವೆಂದು ಸಮರ್ಥಿಸಲಾಯಿತು. ಹಾಗಾದರೆ ಎರಡು ಪ್ರವೃತ್ತಿನಿಮಿತ್ತಗಳಿಂದ ಪ್ರತಿಯೊಂದು ಶಬ್ದಗಳೂ ನಾನಾರ್ಥಕವಾಗಬೇಕಲ್ಲವೇ ? ಎಂಬ ಪ್ರಶ್ನೆಗೆ ಮತ್ತೊಂದು ಬಗೆಯಲ್ಲಿ ಈಗ ಸಮಾಧಾನ ನೀಡುತ್ತಿದ್ದಾರೆ - 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳಲ್ಲಿ ಸ್ವಾತಂತ್ರ್ಯವಾಗಲೀ, ತದ್ಗತತ್ವವಾಗಲೀ ಪ್ರವೃತ್ತಿನಿಮಿತ್ತವೆಂದು ಹೇಳುವುದೇ ಇಲ್ಲ. ದುಃಖ-ಬಂಧನ ಮೊದಲಾದವುಗಳೇ ಪ್ರವೃತ್ತಿನಿಮಿತ್ತವಾಗುತ್ತವೆ. ಇಂತಹ ಪ್ರವೃತ್ತಿನಿಮಿತ್ತಗಳು ಆಯಾ ಪದಾರ್ಥಗಳಲ್ಲಿ ಬೇರೆ ಬೇರೆ ಸಂಬಂಧಗಳಿಂದ ಬರುತ್ತವೆ. ಅಂದರೆ ಪರಮಾತ್ಮನಲ್ಲಿ ದುಃಖವು ಸ್ವಾತಂತ್ರ್ಯವೆಂಬ ಸಂಬಂಧದಿಂದ ಜೀವನಲ್ಲಿ ತದ್ಗತತ್ವ ಎಂಬ ಸಂಬಂಧದಿಂದ ಬರುತ್ತದೆ. ಆದರೆ ತದ್ಗತತ್ವವಿರುವ ಜೀವನಲ್ಲಿಯೂ ಸ್ವಾತಂತ್ರ್ಯವಿದ್ದೇ ಇರುತ್ತದಾದ್ದರಿಂದ ಶಬ್ದಗಳು ನಾನಾರ್ಥಕವಾಗುವುದಿಲ್ಲ. ಜೀವನಲ್ಲಿ ದುಃಖವು ಆಶ್ರಿತವಾಗಿದ್ದರೂ ಅಂತಹ ದುಃಖಕ್ಕೆ ಜೀವನು ನಿಯಾಮಕನೇ ಆಗಿದ್ದಾನೆ. ಹಾಗಾಗಿ ರೂಢವಾದ ಶಬ್ದವಾಗಲೀ, ಯೌಗಿಕವಾದ ಶಬ್ದವಾಗಲೀ ತದ್ಗತತ್ವವೆಂಬ ಸಂಬಂಧವನ್ನು ಹೊಂದಿದ್ದರೆ, ಅಮುಖ್ಯವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಯಥೇಷ್ಟವಿನಿಯೋಕ್ತೃತ್ವರೂಪಸ್ವಾತಂತ್ರ್ಯವೆಂಬ ಸಂಬಂಧವನ್ನು ಹೊಂದಿದ್ದರೆ ಮುಖ್ಯವಾಗುತ್ತವೆ. ಆಶ್ರಯತ್ವವೆಂಬ ಸಂಬಂಧವಿರುವ ಜೊತೆಗೆ ತದಧೀನತ್ವವಿದ್ದರೂ ಕೂಡ ಗೌಣವಾಗಿರುವ ಕಾರಣ, ಶಬ್ದವು ಆಯಾ ಪದಾರ್ಥಗಳನ್ನು ಗೌಣವಾಗಿಯೇ ಪ್ರತಿಪಾದನೆ ಮಾಡುತ್ತವೆಂದು ತಿಳಿಯಬೇಕು.

ಅವ್ಯಕ್ತ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಪರಮ ಸೂಕ್ಷ್ಮನಾದ ಬ್ರಹ್ಮನಲ್ಲಿ ಮುಖ್ಯವಾಗಿರುತ್ತದೆ. ಪ್ರಕೃತಿಯು ಎಷ್ಟು ಸೂಕ್ಷ್ಮವಾಗಿದೆಯೋ, ಅದಕ್ಕಿಂತ ಹೆಚ್ಚು ಪರಮಾತ್ಮನು ಸೂಕ್ಷ್ಮನಾದ್ದರಿಂದ ಅವ್ಯಕ್ತಶಬ್ದದಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಪರಮಾತ್ಮನೇ ಆಗುತ್ತಾನೆ. ಪ್ರವೃತ್ತಿನಿಮಿತ್ತವು ಎಲ್ಲಿ ಹೆಚ್ಚಾಗಿರುತ್ತದೋ, ಅದೇ ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕವಾಗುತ್ತದೆ. ಉದಾಹರಣೆ - ನೂರಾರು ವಿದ್ವಾಂಸರಲ್ಲಿ 'ವಿದ್ವಾನ್' ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ಕೇವಲ

ವ್ಯಾಕರಣಶಾಸ್ತ್ರವನ್ನು ಓದಿದವನನ್ನೂ 'ವಿದ್ವಾನ್' ಎನ್ನುತ್ತಾರೆ. 'ತರ್ಕ-ವ್ಯಾಕರಣ' ಎರಡು ಶಾಸ್ತ್ರಗಳನ್ನು ಓದಿದವನನ್ನೂ 'ವಿದ್ವಾನ್' ಎನ್ನುತ್ತಾರೆ 'ಚತುಃಶಾಸ್ತ್ರಪಾರಂಗತನನ್ನೂ 'ವಿದ್ವಾನ್' ಎನ್ನುತ್ತಾರೆ. ಆದರೆ ಚತುಃಶಾಸ್ತ್ರಪರಾಂಗತನಲ್ಲಿ 'ವಿದ್ವಾನ್' ಎಂಬ ಶಬ್ದವನ್ನು ಎಷ್ಟು ಮುಖ್ಯವಾಗಿ ಪ್ರಯೋಗಿಸಲಾಗುತ್ತದೋ, ಅಷ್ಟು ಮುಖ್ಯವಾದ ಪ್ರಯೋಗವನ್ನು ಒಂದೇ ಶಾಸ್ತ್ರವನ್ನು ಓದಿದವನಲ್ಲಿ ಮಾಡುವುದಿಲ್ಲ. ಸಣ್ಣ ಪ್ರದೇಶಕ್ಕೆ ಮಂತ್ರಿಯಾದವನನ್ನು ಮಂತ್ರಿಯೆನ್ನುತ್ತಾರೆ. ಸಮಗ್ರ ದೇಶಕ್ಕೆ ಮಂತ್ರಿಯಾದವನನ್ನು ಮಂತ್ರಿಯೆನ್ನುತ್ತಾರೆ. ಎಲ್ಲರೂ ಮಂತ್ರಿಯಾಗಿದ್ದರೂ ಪ್ರತಿಯೊಬ್ಬ ಮಂತ್ರಿಯಲ್ಲಿಯೂ ಪ್ರವೃತ್ತಿನಿಮಿತ್ತದ ತಾರತಮ್ಯದಿಂದ ಶಬ್ದದ ಮುಖ್ಯಾರ್ಥದಲ್ಲಿ ತಾರತಮ್ಯವನ್ನು ನಾವು ಅನುಭವಿಸಿದ್ದೇವೆ. ಆದ್ದರಿಂದ ಪ್ರವೃತ್ತಿನಿಮಿತ್ತದ ಮುಖ್ಯವಾಗಿರುವಿಕೆಯೇ ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕ ಹೊರತು, ಪ್ರಯೋಗಪ್ರಾಚುರ್ಯವಲ್ಲ. ಪ್ರಯೋಗ ಪ್ರಾಚುರ್ಯವೇ ಶಬ್ದದ ಮುಖ್ಯತ್ವಕ್ಕೆ ಪ್ರಯೋಜಕವಾಗಿದ್ದಲ್ಲಿ 'ಮಂಚಾಃ ಕ್ರೋಶಂತಿ' ಇತ್ಯಾದಿ ರೂಢಲಕ್ಷಣವಾದ ವಾಕ್ಯಗಳಲ್ಲಿಯೂ ಪ್ರಯೋಗಪ್ರಾಚುರ್ಯವಿರುವ ಕಾರಣ ಶಬ್ದದ ಮುಖ್ಯತ್ವವನ್ನು ಒಪ್ಪಬೇಕಾದ ಪರಿಸ್ಥಿತಿ ಬರುತ್ತದೆ. ಆದ್ದರಿಂದ ಶಬ್ದದ ಮುಖ್ಯಾರ್ಥತ್ವಕ್ಕೆ ಪ್ರವೃತ್ತಿನಿಮಿತ್ತದ ಮುಖ್ಯತ್ವವೇ ಕಾರಣವೆಂದು ಸಿದ್ಧವಾಯಿತು.



## ದೋಷವಾಚಕಶಬ್ದಗಳಿಂದಲೂ ಪರಮಾತ್ಮನು ಪ್ರತಿಪಾದ್ಯನೆಂಬ ವಿಚಾರವು ಸಿದ್ಧವಾಯಿತು

## तात्पर्यचन्द्रिका

**किञ्च –**

**प्रयोगो ज्ञापकः शक्तेर्निमित्तं तु नियामकम् ।**
**नियामकानुसारित्वं नियम्यस्य च शोभते ।। १ ।।**

ಅನುವಾದ - ಶಬ್ದಶಕ್ತಿ ವಿಷಯದ ಸಂಗ್ರಹವನ್ನು ಹೀಗೆ ತಿಳಿಯಬೇಕು -

ಪ್ರಯೋಗೋ ಜ್ಞಾಪಕಃ ಶಕ್ತೇರ್ನಿಮಿತ್ತಂ ತು ನಿಯಾಮಕಮ್ ।
ನಿಯಾಮಕಾನುಸಾರಿತ್ವಂ ನಿಯಮ್ಯಸ್ಯ ಚ ಶೋಭತೇ ॥೧॥

ಪ್ರಯೋಗಪ್ರಾಚುರ್ಯವು ಶಬ್ದಶಕ್ತಿಗೆ ಕೇವಲ ಜ್ಞಾಪಕವಾಗಿರುತ್ತದೆ. ಆದರೆ ಪ್ರವೃತ್ತಿನಿಮಿತ್ತವು ಮುಖ್ಯವಾದ ನಿಯಾಮಕ. ನಿಯಮ್ಯವಾದ ಶಕ್ತಿಯು ನಿಯಾಮಕವಾದ ಶಬ್ದಶಕ್ತಿಗೆ ಅನುಸಾರಿಯಾಗಿರುತ್ತದೆಂದು ಹೇಳುವುದೇ ಶೋಭಿಸುತ್ತದೆ.

**प्रयोगो हि शक्तेर्ज्ञापक एव । निमित्तं तु शक्तिविषयतावच्छेदकतया तन्नियामकम् । नियम्यं च नियामकानुसारि ।**

ಶ್ಲೋಕದ ವಿವರಣೆ ಹೀಗಿದೆ - ಲೋಕದಲ್ಲಿರುವ ಪ್ರಯೋಗಪ್ರಾಚುರ್ಯವು ಶಕ್ತಿಗೆ ಕೇವಲ ಜ್ಞಾಪಕವಾಗಿರುತ್ತದೆ. ಪ್ರವೃತ್ತಿನಿಮಿತ್ತವಾದರೂ ಶಕ್ತಿವಿಷಯತಾವಚ್ಛೇದಕವಾಗಿ ನಿಯಾಮಕವಾಗುತ್ತದೆ.

ಘಟಶಕ್ತಿಗೆ ವಿಷಯವಾದ ಎಷ್ಟು ಪದಾರ್ಥಗಳಿವೆಯೋ, ಅವುಗಳಲ್ಲೆಲ್ಲಾ ಘಟತ್ವವು ಇರುತ್ತದೆ. ಅಥವಾ ಘಟತ್ವವು ಎಲ್ಲೆಲ್ಲಿ ಇರುತ್ತದೋ, ಅಲ್ಲೆಲ್ಲಾ ಶಬ್ದಶಕ್ತಿವಿಷಯತ್ವವು ಇರುತ್ತದೆ. ಏಕೆಂದರೆ ಅನ್ಯೂನಾನತಿರಿಕ್ತವಾದದ್ದೇ ಅವಚ್ಛೇದಕವಾಗುತ್ತದೆ. 'ಘಟ' ಎಂಬ ಶಬ್ದಕ್ಕೆ ಶಕ್ಯವಾಗಬೇಕಾದರೆ ಘಟತ್ವ ಎಂಬ ಧರ್ಮ ಇರಲೇಬೇಕು. ಶಕ್ತಿವಿಷಯಕ್ಕೆ ಅವಚ್ಛೇದಕವಾಗಿ ನಿಯಾಮಕವಾಗುವ ಧರ್ಮವೇ ಪ್ರವೃತ್ತಿನಿಮಿತ್ತ ಎನಿಸುತ್ತದೆ. ಹೀಗೆ ನಿಯಮ್ಯವಾದ ಶಕ್ತಿಯು ನಿಯಾಮಕವಾದ ಪ್ರವೃತ್ತಿನಿಮಿತ್ತದ ಅನುಸಾರಿಯಾಗುವುದೇ ಉಚಿತವಾಗುತ್ತದೆ.

**नच प्रयोग एव ज्ञापकः । उपदेशादिनापि तज्ज्ञानात् ।**

ಪ್ರಯೋಗವನ್ನು ಶಕ್ತಿಗೆ ನಿಯಾಮಕವೆಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಶಕ್ತಿಗೆ ಪ್ರಯೋಗ ಒಂದೇ ಜ್ಞಾಪಕವಲ್ಲ. ಉಪದೇಶ, ಕೋಶ, ವ್ಯಾಕರಣ ಮೊದಲಾದವುಗಳೂ ಕೂಡ ಜ್ಞಾಪಕವಾಗಿವೆ. ಒಂದು ವೇಳೆ ಪ್ರಯೋಗಮಾತ್ರ ಜ್ಞಾಪಕವಾಗಿದ್ದಲ್ಲಿ ನಿಯಾಮಕವೆನ್ನಬಹುದಿತ್ತು.

**सुलभा च ''प्रातिपदिकाद्धात्वर्थे'' इति ण्यन्तेभ्योऽवरादिशब्देभ्यः पचाद्यचि कृते अवरयतीत्यवर इत्यवरादिशब्दानां ब्रह्मणि व्युत्पत्तिः । तदुक्तं न्यायविवरणे ''प्रसिद्धत्वाच्च कर्तृव्युत्पत्तेः'' इति ।**

'ಪ್ರಾತಿಪದಿಕಾದ್ಧಾತ್ವರ್ಥೇ' ಎಂಬ ಸೂತ್ರದಲ್ಲಿ ಣ್ಯಂತವಾದ ಅವರಾದಿ ಶಬ್ದಗಳಲ್ಲಿ ಪಚಾದಿಗಳ ಅಚ್ ಪ್ರತ್ಯಯವನ್ನು ವಿಧಿಸಲಾಗಿದೆ. ಆದ್ದರಿಂದ 'ಅವರಃ' ಎಂಬ ಶಬ್ದಕ್ಕೆ 'ಅವರಯತಿ' ಎಂದರ್ಥ. ಮತ್ತೊಂದು ಪದಾರ್ಥದ ನೀಚತ್ವಕ್ಕೆ ಕಾರಣನಾಗಿದ್ದಾನೆ ಎಂಬ ಕಾರಣದಿಂದ ಪರಮಾತ್ಮನು ಅವರ ಎನಿಸುತ್ತಾನೆ. ಹೀಗೆ ಅವರಃ, ಬದ್ಧಃ ಮೊದಲಾದ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬಹುದು. ಇದನ್ನೇ ನ್ಯಾಯವಿವರಣದಲ್ಲಿ 'ಪ್ರಸಿದ್ಧತ್ವಾಚ್ಚ ಕರ್ತೃವ್ಯುತ್ಪತ್ತೇಃ' ಕರ್ತ್ರರ್ಥದಲ್ಲಿ ವ್ಯುತ್ಪತ್ತಿಯನ್ನು ಮಾಡುವುದು ಪ್ರಸಿದ್ಧವಾಗಿರುತ್ತದೆಂದು ನ್ಯಾಯವಿವರಣದಲ್ಲಿಯೂ ಹೇಳಿದ್ದಾರೆ.

**सर्वं चैतत् ''नामानि सर्वाणि यमाविशान्ति वचसां वाच्यमुत्तमम्'' इत्यादिश्रुतिस्मृतिबलात् कल्प्यते । आविशन्तीत्यादिना मुख्यवृत्त्युक्तेः ।**

ಇದುವರೆಗೂ ಹೇಳಿದ ಈ ಎಲ್ಲಾ ವಿಷಯಕ್ಕೆ 'ನಾಮಾನಿ ಸರ್ವಾಣಿ ಯಮಾವಿಶಾಂತಿ' ಎಂಬ ಶ್ರುತಿಯು ಆಧಾರವಾಗಿದೆ. 'ಆವಿಶಂತಿ' ಎಂಬಲ್ಲಿ ಆಙ್ ಎಂಬ ಉಪಸರ್ಗದಿಂದ ಮುಖ್ಯವೃತ್ತಿಯನ್ನು ಶ್ರುತಿಯು ತಿಳಿಸುತ್ತಿದೆ. ಅದರಂತೆ 'ವಚಸಾಂ ವಾಚ್ಯಮುತ್ತಮಮ್' ಎಂಬ ಶ್ರುತಿಯು ಉತ್ತಮವಾದ ವಾಚ್ಯತ್ವವೆಂದರೆ ಮುಖ್ಯವೃತ್ತಿಯೆಂದೇ ಹೇಳುತ್ತಿದೆ.

**दृष्टा हि चमसस्वर्गादिशब्दानां शिरः सुखादौ लोक प्रयोगाभावेऽपि ''इदं**

**तच्छिर एष ह्यर्वाग्बिलश्चमसः सुखं स्वर्गपदास्पदम्'' इत्यादिश्रौतानुशासनाच्छिरःसुखादिवाचिता ।**

ಲೋಕದಲ್ಲಿ ಪ್ರಯೋಗವಿಲ್ಲದಿದ್ದರೂ ಅಪೂರ್ವವಾದ ವ್ಯುತ್ಪತ್ತಿಯಿಂದ ಶಬ್ದಗಳನ್ನು ಅರ್ಥೈಸುವುದು ಅನೇಕ ಕಡೆ ಕಂಡಿದೆ. 'ಚಮಸ' ಶಬ್ದವನ್ನು ಶಿರಸ್ಸಿನಲ್ಲಿ ಯಾರೂ ಸಹ ಪ್ರಯೋಗಿಸುವುದಿಲ್ಲ. ಅದರಂತೆ ಸ್ವರ್ಗ ಎಂಬ ಶಬ್ದವನ್ನು ಸುಖದಲ್ಲಿ ಯಾರೂ ಸಹ ಪ್ರಯೋಗಿಸುವುದಿಲ್ಲ. ಆದರೆ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬ ಶ್ರುತಿಯಲ್ಲಿ ಕೆಳಮುಖವುಳ್ಳ ಮೇಲೆ ಉರುಟಾದ ವಸ್ತುವನ್ನು 'ಚಮಸ' ಎಂದು ಯಜ್ಞ ಪ್ರಕ್ರಿಯೆಯಲ್ಲಿ ಹೇಳಲಾಗುತ್ತದೆ. ಈ ಶ್ರೌತವಾದ ಅನುಶಾಸನದ ಬಲದಿಂದ ಶಿರಸ್ಸಿನಲ್ಲಿ 'ಚಮಸ' ಶಬ್ದವನ್ನು ಪ್ರಯೋಗಿಸಲಾಗಿದೆ. ಅದರಂತೆ 'ಸುಖಂ ಸ್ವರ್ಗಪದಾಸ್ಪದಮ್' ಎಂಬ ಶ್ರೌತವಾದ ಅನುಶಾಸನದಿಂದ ಸ್ವರ್ಗಶಬ್ದವನ್ನು ಸುಖದಲ್ಲಿ ಪ್ರಯೋಗಿಸಲಾಗಿದೆ.

**इमौ च पूर्वोत्तरपक्षौ तदधीनत्वरूपमूलहेत्वाश्रितौ । ज्ञेयत्वावचनादिहेत्वन्तराश्रितौ तु भाष्यादौ स्पष्टौ ।**

ಇಲ್ಲಿ ಹೇಳಿದ ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳೆರಡೂ 'ತದಧೀನತ್ವ' ಸೂತ್ರದ ಮೂಲಹೇತುವನ್ನು ಆಶ್ರಯಿಸಿವೆ. 'ಜ್ಞೇಯತ್ವಾವಚನಾತ್' ಎಂಬ ಸೂತ್ರದಲ್ಲಿ ಮತ್ತೊಂದು ಹೇತುವನ್ನು ಹೇಳಿದ್ದಾರೆ. ಆ ಹೇತುವಿನಿಂದ ತಿಳಿಯುವ ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳು ಭಾಷ್ಯ ಹಾಗೂ ಟೀಕೆಗಳಲ್ಲಿ ಸ್ಪಷ್ಟವಾಗಿರುವುದರಿಂದ ಇಲ್ಲಿ ವಿವರಿಸಿಲ್ಲ.

**''ज्योतिर्दर्शनात्'' इत्यत्र टीकायां म्रियमाणादिशब्दोऽन्तर्णीतणिजित्येवोक्तम् । नतु स्वातन्त्र्यं मुख्यनिमित्तमिति ।**

'ಅವರಯತೀತ್ಯವರಃ' ಇತ್ಯಾದಿಯಾಗಿ ಅಂತರ್ಣೀತಣಿಜರ್ಥದಲ್ಲಿ ಶಬ್ದವನ್ನು ನಿಷ್ಪತ್ತಿಗೊಳಿಸಿದರೆ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣದಿಂದ ಪುನರುಕ್ತಿ ಬರುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಜ್ಯೋತಿರ್ದರ್ಶನಾತ್' ಎಂಬ ಅಧಿಕರಣದ ಟೀಕೆಯಲ್ಲಿ ಮ್ರಿಯಮಾಣಾದಿಶಬ್ದಗಳಿಗೆ ಅಂತರ್ಣೀತವಾದ ಣಿಜರ್ಥವನ್ನೇ ಹೇಳಲಾಯಿತು, ಸ್ವಾತಂತ್ರ್ಯವು ಮುಖ್ಯವಾದ ಪ್ರವೃತ್ತಿನಿಮಿತ್ತವೆಂದು ಣಿಜರ್ಥದಿಂದ ಸಿದ್ಧವಾಯಿತೆಂದು ಹೇಳಿರುವುದಿಲ್ಲ. ಅದನ್ನು ಈ ಅಧಿಕರಣದಲ್ಲಿ ಮಾತ್ರ ಸಾಧಿಸಲಾಗಿದೆ.

**अभिमान्यधिकरणेऽपि ''मृदब्रवीत्'' इत्यादौ मृदादिशब्दा देवतापरा इत्येव सिद्धान्तः । देवतायां मुख्यत्वं त्वत्रत्यतदधीनत्वन्यायाधीनमिति न पुनरुक्तिः ।**

ಪರಿಪೂರ್ಣಚಂದ್ರಿಕಾ

ಅಭಿಮಾನ್ಯಧಿಕರಣದಲ್ಲಿ 'ಮೃದಾದಿ' ಶಬ್ದಗಳಿಗೆ ಮುಖ್ಯತ್ವವನ್ನು ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಹೇಳಿದ್ದಾರೆ. ಆದ್ದರಿಂದ ಅಭಿಮಾನ್ಯಧಿಕರಣದಿಂದ ಪುನರುಕ್ತಿ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಅಭಿಮಾನ್ಯಧಿಕರಣದಲ್ಲಿಯೂ ಕೂಡ 'ಮೃದಬ್ರವೀತ್' ಇತ್ಯಾದಿ ಶ್ರುತಿಗಳಲ್ಲಿರುವ 'ಮೃತ್' ಮೊದಲಾದ ಶಬ್ದಗಳು ದೇವತಾಪರವಾಗಿವೆಯೆಂದಷ್ಟೇ ಸಿದ್ಧಾಂತ ಮಾಡಿದ್ದಾರೆ. ಆದರೆ ದೇವತೆಗಳಲ್ಲಿ ಆಯಾ ಶಬ್ದಗಳು ಮುಖ್ಯವಾಗಿರುತ್ತವೆಂದು ಈ ಅಧಿಕರಣದ ತದಧೀನತ್ವನ್ಯಾಯದಿಂದಲೇ ಸಿದ್ಧವಾಗಿದೆ. ಆದ್ದರಿಂದ ಅಭಿಮಾನ್ಯಧಿಕರಣದಿಂದಲೂ ಕೂಡ ಪುನರುಕ್ತಿಯನ್ನು ಆಕ್ಷೇಪಿಸಬಾರದು.

**प्रकाशः –**

**प्रयोगप्राचुर्यस्य मुख्यत्वहेतुत्वं निरस्य ''प्रवृत्तिनिमित्तस्य हरौ मुख्यत्वेन मुख्यत्वोपपत्तेः'' इति टीकां विवृण्वन्निमित्तं मुख्यत्वे हेतुरित्येतदुपपादयति – किञ्चेति ।। नियामकत्वप्रकारं व्यञ्जयञ्श्लोकं व्याचष्टे – प्रयोग इति ।।**

ವಿವರಣೆ - ಇಲ್ಲಿಯ ತನಕ ಶಬ್ದದ ಮುಖ್ಯಾರ್ಥಕ್ಕೆ ಪ್ರಯೋಗಪ್ರಾಚುರ್ಯವು ಕಾರಣವಲ್ಲ ಎಂದು ಸಮರ್ಥಿಸಿ ಪ್ರಕೃತ 'ಪ್ರವೃತ್ತಿನಿಮಿತ್ತಸ್ಯ ಹರೌ ಮುಖ್ಯತ್ವೇನ ಮುಖ್ಯತ್ವೋಪಪತ್ತೇಃ' 'ಪ್ರವೃತ್ತಿನಿಮಿತ್ತವು ಶ್ರೀಹರಿಯಲ್ಲಿ ಮುಖ್ಯವಾದ್ದರಿಂದ ಶಬ್ದವು ಮುಖ್ಯವಾಗುತ್ತದೆ' ಇತ್ಯಾದಿ ಟೀಕೆಯನ್ನು ವಿವರಿಸುತ್ತಿದ್ದಾರೆ. ಮುಖ್ಯಾರ್ಥಕ್ಕೆ ಪ್ರಯೋಗಪ್ರಾಚುರ್ಯವು ನಿಮಿತ್ತವಲ್ಲ. ಏಕೆಂದರೆ ನಿಯಮ್ಯವು ನಿಯಾಮಕದ ಅಧೀನವಾಗಿರುವುದೇ ಭೂಷಣವಾಗಿದೆ ಇತ್ಯಾದಿಯಾಗಿ ಉಪಪಾದನೆ ಮಾಡುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ. ನಿಯಾಮಕತ್ವದ ಪ್ರಕಾರವನ್ನು ಸ್ಪಷ್ಟಪಡಿಸುತ್ತಾ ಸ್ವತಃ ತಾವೇ ಶ್ಲೋಕವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಪ್ರಯೋಗ' ಇತ್ಯಾದಿ ಗ್ರಂಥದಿಂದ.[೧]

(೧) ತರ್ಕತಾಂಡವದಲ್ಲಿ ಸ್ವಾರಸ್ಯಕರವಾದ ಒಂದು ವಿಷಯವಿದೆ - ಯಾವುದು ಪ್ರವೃತ್ತಿನಿಮಿತ್ತವಾಗಿರುತ್ತದೋ. ಅದು ಶಕ್ಯತಾವಚ್ಛೇದಕವಾಗಿರುತ್ತದೆ. ಆದರೆ ಯಾವುದು ಶಕ್ಯತಾವಚ್ಛೇದಕವಾಗಿರುತ್ತದೋ, ಅದು ಪ್ರವೃತ್ತಿನಿಮಿತ್ತವಾಗಿರಬೇಕೆಂಬ ನಿಯಮವಿರುವುದಿಲ್ಲ. ಉದಾಹರಣೆ - ಪೃಥಿವೀ ಶಬ್ದಕ್ಕೆ ಪೃಥಿವೀತ್ವವು ಪ್ರವೃತ್ತಿನಿಮಿತ್ತವಾದಂತೆ ಗಂಧವತ್ವವೂ ಕೂಡ ಪ್ರವೃತ್ತಿನಿಮಿತ್ತವಾಗಿದೆ. ಪೃಥಿವೀತ್ವವು ಪ್ರವೃತ್ತಿನಿಮಿತ್ತವೂ ಆಗುತ್ತದೆ. ಶಕ್ಯತಾವಚ್ಛೇದಕವೂ ಆಗುತ್ತದೆ. ಆದರೆ ಗಂಧವತ್ವವು ಕೇವಲ ಶಕ್ಯತಾವಚ್ಛೇದಕವಾಗುತ್ತದೆ ಹೊರತು, ಪ್ರವೃತ್ತಿನಿಮಿತ್ತವಾಗುವುದಿಲ್ಲ. ಏಕೆಂದರೆ ಗಂಧವತ್ವವು 'ಗಂಧವತೀ' ಎಂಬ ಶಬ್ದಕ್ಕೆ ಪ್ರವೃತ್ತಿನಿಮಿತ್ತವಾಗುತ್ತದೆ ಹೊರತು, 'ಪೃಥಿವೀ' ಎಂಬ ಶಬ್ದಕ್ಕೆ ಪ್ರವೃತ್ತಿನಿಮಿತ್ತವಾಗಲು ಸಾಧ್ಯವಿಲ್ಲ. ಹಾಗಾದರೆ ಯಾವುದನ್ನು ಶಕ್ಯತಾವಚ್ಛೇದಕವೆಂದು ಗುರುತಿಸುವುದು ? ಎಂದರೆ ಶಬ್ದವನ್ನು ಕೇಳುವಾಗ ಯತ್ಪ್ರಕಾರಕವಾದ ಬೋಧವು ಬರುತ್ತದೋ ಅದೇ ಶಕ್ಯತಾವಚ್ಛೇದಕ. 'ಪೃಥಿವೀ' ಎಂಬ ಶಬ್ದವನ್ನು ಕೇಳಿದಾಗ ಪೃಥಿವೀತ್ವಪ್ರಕಾರಕವಾದ ಬೋಧವು ಬರುತ್ತದೆ, ಗಂಧವತ್ವಪ್ರಕಾರಕವಾದ ಬೋಧವು ಬರುವುದಿಲ್ಲ. ಒಂದು ವೇಳೆ 'ಪೃಥಿವೀ' ಎಂಬ ಶಬ್ದದಿಂದ ಗಂಧವತ್ವಪ್ರಕಾರಕವಾದ ಬೋಧವು ಬರುವುದಾದಲ್ಲಿ 'ಗಂಧವತೀ ಪೃಥಿವೀ' ಎಂಬ ವಾಕ್ಯದಲ್ಲಿ ಪುನರುಕ್ತಿ ಬರುತ್ತದೆ. ಆದ್ದರಿಂದ 'ಪೃಥಿವೀ' ಎಂಬ ಶಬ್ದದಿಂದ ಪೃಥಿವೀತ್ವವೇ ಪ್ರಕಾರತಯಾ ತೋರುತ್ತದೆ. ಹಾಗಾಗಿ ಗಂಧವತ್ವವು ಕೇವಲ ಶಕ್ಯತಾವಚ್ಛೇದಕವಾಗುತ್ತದೆ ಹೊರತು,

**प्रकाशः** – ननु ''औत्पत्तिकस्तु शब्दस्यार्थेन सम्बन्धः'' इति जैमिनिसूत्रोक्त्यादेवताधिकरणे ''अत एव च नित्यत्वम्'' इत्यत्र शब्दार्थसम्बन्धानां नित्यत्वोक्त्या च शब्दगतशक्तेरनादिनित्यायाः कथमन्याधीनतेति चेन्न । ''अनादीनां गुणादीनां यथा गुण्यादितन्त्रता'' इत्यादिना गायत्र्यधिकरणोक्तरीत्याऽनादिनित्याया अप्यन्याधीनत्वोपपत्तेः ।

ಪ್ರಶ್ನೆ - 'ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ' ಎಂಬುದಾಗಿ ಜೈಮಿನಿಸೂತ್ರದಲ್ಲಿ ಹಾಗೂ 'ಅತ ಏವ ಚ ನಿತ್ಯತ್ವಮ್' ಎಂಬ ದೇವತಾಧಿಕರಣದ ಬ್ರಹ್ಮಸೂತ್ರದಲ್ಲಿ ಹೇಳಿದಂತೆ ಶಬ್ದ ಹಾಗೂ ಅರ್ಥಗಳ ಸಂಬಂಧ ನಿತ್ಯವಾಗಿರುತ್ತದೆ. ಹೀಗೆ ಶಬ್ದದಲ್ಲಿರುವ ಶಕ್ತಿಯು ಅನಾದಿನಿತ್ಯವಾಗಿರುವಾಗ ಪರಮಾತ್ಮನ ಅಧೀನವಾಗಿರುತ್ತದೆಂದು ಹೇಗೆ ಹೇಳುತ್ತೀರಿ ?

ಉತ್ತರ - 'ಅನಾದೀನಾಂ ಗುಣಾದೀನಾಂ ಯಥಾ ಗುಣ್ಯಾದಿತಂತ್ರತಾ' 'ಅನಾದಿಯಾದ ಗುಣಗಳು ಹೇಗೆ ಗುಣಿಯ ಅಧೀನವಾಗಿರುತ್ತವೋ' ಇತ್ಯಾದಿಯಾಗಿ ಗಾಯತ್ರ್ಯಧಿಕರಣದಲ್ಲಿ ಹೇಳಿರುತ್ತಾರೆ. ಆದ್ದರಿಂದ ಅನಾದಿನಿತ್ಯವಾದ ಪದಾರ್ಥಗಳೂ ಕೂಡ ಗುಣಿಯ ಅಧೀನವಾಗಿರುವಂತೆ ನಿತ್ಯವಾದ ಶಬ್ದಗತ ಶಕ್ತಿಯು ಪರಮಾತ್ಮನ ಅಧೀನವಾಗಬಹುದು.

**प्रकाशः** – ज्ञापकत्वमपि न प्रयोगस्य नियतमित्याह – **नचेति** ।। **किञ्चेति** चार्थः ।। **उपदेशादिनेति** ।। उपमाननिगमनिघण्टुव्याकरणादिरादिपदार्थः ।

ಶಬ್ದಶಕ್ತಿಯ ವಿಷಯದಲ್ಲಿ ಪ್ರಯೋಗವೂ ಕೂಡ ಜ್ಞಾಪಕವಾಗುವುದಿಲ್ಲ. ಏಕೆಂದರೆ ಎಲ್ಲೆಡೆಯೂ ಪ್ರಯೋಗವೇ ಇರುತ್ತದೆಂಬ ನಿಯಮವಿದ್ದಿದ್ದರೆ ಪ್ರಯೋಗವನ್ನು ಜ್ಞಾಪಕವೆನ್ನಬಹುದಿತ್ತು. ಆದರೆ ಪ್ರಯೋಗವು ನಿಯತವಾಗಿರುವುದಿಲ್ಲವೆಂದು 'ನಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ 'ನಚ' ಎಂಬಲ್ಲಿರುವ 'ಚ' ಶಬ್ದಕ್ಕೆ 'ಕಿಂಚ' ಎಂದರ್ಥ. 'ಉಪದೇಶಾದಿನಾ' ಎಂಬಲ್ಲಿರುವ ಆದಿಪದಕ್ಕೆ ಉಪಮಾನ, ನಿಗಮ, ನಿಘಂಟು, ವ್ಯಾಕರಣ ಇವುಗಳಿಂದ ಎಂದರ್ಥ. ಅಂದರೆ ಶಬ್ದವು ಇಂತಹ ಅರ್ಥವನ್ನು ಪ್ರತಿಪಾದಿಸುತ್ತದೆನ್ನಲು ಪ್ರಯೋಗವಷ್ಟೇ ಜ್ಞಾಪಕವಾಗಿರುವುದಿಲ್ಲ. ಉಪದೇಶ, ಉಪಮಾನ, ನಿಗಮ ಇವುಗಳಿಂದಲೂ ಶಬ್ದಗಳು ಅರ್ಥಕ್ಕೆ ಜ್ಞಾಪಕಗಳಾಗಿರುತ್ತವೆ.

**प्रकाशः** – नन्वस्त्वेवमव्यक्तादिशब्देषु गतिः । अतिसूक्ष्मत्वादि तच्छब्दप्रवृत्तिनिमित्तस्य शब्दशक्तिनियामकस्य हरौ सत्त्वात् । बद्धावरादिशब्देषु कथम् । बद्धत्वावरत्वादेर्बद्धावरादिशब्दप्रवृत्तिहेतोर्बद्धादिशब्दशक्तिनियामकस्य हरावभावेन हरेर्बद्धावरादिशब्दमुख्यार्थतानापत्तेरिति चेन्न ।

ಪ್ರವೃತ್ತಿನಿಮಿತ್ತವಾಗುವುದಿಲ್ಲ. ಆದ್ದರಿಂದ ಪ್ರವೃತ್ತಿನಿಮಿತ್ತದ ನಿಷ್ಕರ್ಷವನ್ನು ಹೀಗೆ ತಿಳಿಯಬೇಕು. 'ಯತ್‌ಶಬ್ದಶಕ್ಯತಾವಚ್ಛೇದಕೇ ಸತಿ ಶಬ್ದಜನ್ಯಬೋಧೇ ಪ್ರಕಾರತಯಾ ಭಾಸತೇ ತದೇವ ಪ್ರವೃತ್ತಿನಿಮಿತ್ತಮ್' ಎಂದು.

ಪ್ರಶ್ನೆ - ಅವ್ಯಕ್ತಾದಿ ಶಬ್ದಗಳನ್ನು ಪರಮಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿ ಸಮನ್ವಯ ಮಾಡಬಹುದು. ಏಕೆಂದರೆ ಅವ್ಯಕ್ತ ಶಬ್ದದ ಪ್ರವೃತ್ತಿನಿಮಿತ್ತ ಅತಿಸೂಕ್ಷ್ಮತ್ವ, ಇಂತಹ ಅತಿಸೂಕ್ಷ್ಮತ್ವವು ಶಬ್ದಶಕ್ತಿಗೆ ನಿಯಾಮಕನಾದ ಪರಮಾತ್ಮನಲ್ಲಿರುತ್ತದೆ. ಆದ್ದರಿಂದ ಪರಮಮುಖ್ಯವೃತ್ತಿಯಿಂದ ಅವ್ಯಕ್ತಶಬ್ದಪ್ರತಿಪಾದ್ಯನಾದವನು ಪರಮಾತ್ಮನೇ ಆಗುತ್ತಾನೆ. ಆದರೆ ಬದ್ಧ, ಅವರ ಮೊದಲಾದ ಶಬ್ದಗಳಲ್ಲಿ ಹೀಗೆ ಹೇಳಲಾಗದು. ಏಕೆಂದರೆ ಈ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ 'ಬದ್ಧತ್ವ', 'ಅವರತ್ವ' ಮೊದಲಾದವುಗಳು ಬದ್ಧಾದಿ ಶಬ್ದಶಕ್ತಿಗೆ ನಿಯಾಮಕನಾದ ಶ್ರೀಹರಿಯಲ್ಲಿ ಸರ್ವಥಾ ಇರುವುದಿಲ್ಲ. ಹೀಗಿರುವಾಗ ಬದ್ಧ, ಅವರ ಮೊದಲಾದ ಶಬ್ದಗಳಿಂದ ಪರಮಾತ್ಮನೇ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳಲು ಹೇಗೆ ಸಾಧ್ಯ?

**प्रकाशः** – ''रूढस्य वा यौगिकस्य वा यस्य शब्दस्य'' इत्यादिना प्रागुक्तदिशोपपत्तेः । ''अवरयतीत्यादिव्युत्पत्त्युपपत्तेश्च'' इति टीकां ''किञ्च प्रातिपदिकाद्धात्वर्थ इति ण्यन्तेभ्यः पचाद्यचि कृते सुलभाऽवरादिशब्दप्रवृत्तिः'' इति सुधोक्तरीत्या विवृण्वन् परिहारान्तरं चाह – **सुलभा चेति** ।।

ಉತ್ತರ - 'ರೂಢಸ್ಯ ವಾ ಯೌಗಿಕಸ್ಯ ವಾ ಯಸ್ಯ ಶಬ್ದಸ್ಯ' ಇತ್ಯಾದಿಯಾಗಿ ಹಿಂದೆ ಹೇಳಿದಂತೆ 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳೂ ರೂಢವೇ ಆಗಲೀ, ಯೌಗಿಕವೇ ಆಗಲಿ ಇವುಗಳ ಪ್ರವೃತ್ತಿನಿಮಿತ್ತ ದುಃಖ, ಬಂಧನ ಮೊದಲಾದವು ಆಶ್ರಿತತ್ವೇನ ಅಥವಾ ಸ್ವಾತಂತ್ರ್ಯವಿಷಯತ್ವೇನ ಯಾರ ಅಧೀನವಾಗಿದೆಯೋ, ಅವನಲ್ಲಿ 'ದುಃಖೀ', 'ಬದ್ಧಃ' ಮೊದಲಾದ ಶಬ್ದಗಳು ಸಮನ್ವಯಗೊಳ್ಳುತ್ತವೆ. ಹಿಂದೆ ದುಃಖ, ಬಂಧನ ಮೊದಲಾದ ಪ್ರವೃತ್ತಿನಿಮಿತ್ತಗಳು ಪರಮಾತ್ಮನ ಯಥೇಷ್ಟವಿನಿಯೋಕ್ತೃತ್ವರೂಪವಾದ ಸ್ವಾತಂತ್ರ್ಯಕ್ಕೆ ವಿಷಯವಾದ್ದರಿಂದ ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದ ಸಮನ್ವಯಗೊಳ್ಳುತ್ತವೆಂದು ಸಮಾಧಾನವನ್ನು ಹೇಳಿದ್ದಾಗಿದೆ. ಪ್ರಕೃತ ಮತ್ತೊಂದು ಪರಿಹಾರವನ್ನು ಹೇಳುತ್ತಿದ್ದಾರೆ 'ಅವರಯತೀತ್ಯಾದಿವ್ಯುತ್ಪತ್ತ್ಯುಪಪತ್ತೇಶ್ಚ' ಎಂಬ ಟೀಕಾವಾಕ್ಯದಿಂದ. ಮತ್ತು 'ಕಿಂಚ ಪ್ರಾತಿಪದಿಕಾದ್ಧಾತ್ವರ್ಥ ಇತಿ ಣ್ಯಂತೇಭ್ಯಃ ಪಚಾದ್ಯಚಿ ಕೃತೇ ಸುಲಭಾಽವರಾದಿಶಬ್ದಪ್ರವೃತ್ತಿಃ' ಇತ್ಯಾದಿಯಾಗಿ ನ್ಯಾಯಸುಧೆಯಲ್ಲಿ ಈ ಪರಿಹಾರಾಂತರವನ್ನು ಹೇಳಿದ್ದಾರೆ ಅದನ್ನೇ ಗ್ರಂಥಕಾರರು 'ಸುಲಭಾ ಚ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಿದ್ದಾರೆ.

**प्रकाशः – सुलभा चेति** ।। तृतीयस्याद्यपादे ''सत्यापपाशरूपवीणातूलश्लोकसेनालोमत्वचवर्मवर्णचूर्णचुरादिभ्यो णिच्'' इत्यत्रोक्तचुरादिगणमध्ये ''प्रातिपदिकाद्धात्वर्थे बहुलमिष्टवच्चे'' इति पठितम् । तस्यार्थः । प्रातिपदिकात्करोत्यादिधात्वर्थे विवक्षिते बहुलं णिच्प्रत्ययो भवति । णाविष्टवच्च कार्यं भवतीति ।

'ಸುಲಭಾ ಚ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಅಷ್ಟಾಧ್ಯಾಯದ ಮೂರನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಸತ್ಯಾಪಪಾಶರೂಪವೀಣಾತೂಲಶ್ಲೋಕಸೇನಾಲೋಮತ್ವಚವರ್ಮವರ್ಣಚೂರ್ಣಚುರಾದಿಭ್ಯೋ ಣಿಚ್' ಎಂಬ ಸೂತ್ರವಿದೆ. ಇಲ್ಲಿ ಹೇಳಲ್ಪಟ್ಟ ಚುರಾದಿಗಣದ ಮಧ್ಯದಲ್ಲಿ

'ಪ್ರಾತಿಪಾದಿಕಾದ್ಧಾತ್ವರ್ಥೇ ಬಹುಲಮಿಷ್ಠವಚ್ಚ' ಎಂಬ ಸೂತ್ರವು ಹೇಳಲ್ಪಟ್ಟಿದೆ. ಅಂದರೆ ಪ್ರಾತಿಪದಿಕದ ಮುಂದೆ 'ಕರೋತಿ' ಮೊದಲಾದ ಧಾತ್ವರ್ಥಗಳು ವಿವಕ್ಷಿತವಾದಾಗ 'ಣಿಚ್' ಪ್ರತ್ಯಯವು ವಿಕಲ್ಪವಾಗಿ ಬರುತ್ತದೆ ಮತ್ತು ಇಷ್ಠನ್ ಪ್ರತ್ಯಯವಿದ್ದಾಗ ಏನು ಕೆಲಸವಾಗಬೇಕೋ, 'ಣಿಚ್' ಪ್ರತ್ಯಯವು ಪರದಲ್ಲಿದ್ದಾಗಲೂ ಆ ಕಾರ್ಯವು ಆಗುತ್ತದೆ ಎಂದು ಹೇಳಲಾಗಿದೆ.

**प्रकाशः** – तथा चावरङ्करोति बद्धं करोतीत्याद्यर्थेऽवरबद्धादिशब्दाण्णिचि कृते इष्ठवच्चेत्युक्तेः ''टेः'' इष्ठे मेयः सुपरतष्टेर्लोप इत्युक्तटिलोपे च ण्यन्तात् ''नन्दिग्रहिपचादिभ्यो ल्युणिन्यचः'' इत्यत्र पचादेराकृतिगणत्वस्य ''यङोऽचि च'' इत्यत्राज्ग्रहणेन ज्ञापितत्वात् पचाद्यचि कृते ''णेरनिटि'' इति णिलोपे स्वाद्युत्पत्ताववरो बद्ध इत्यादिरूपमिति भावः ।

ಆದ್ದರಿಂದ 'ಅವರಂಕರೋತಿ', 'ಬದ್ಧಂ ಕರೋತಿ' 'ನೀಚನನ್ನಾಗಿ ಮಾಡುತ್ತಾನೆ'. 'ಬಂಧಿಸುತ್ತಾನೆ'. ಇತ್ಯಾದ್ಯರ್ಥದಲ್ಲಿ ಹಾಗೂ ಅವರ ಬದ್ಧ ಮೊದಲಾದ ಶಬ್ದಗಳ ಮೇಲೆ 'ಣಿಚ್' ಪ್ರತ್ಯಯವನ್ನು ಮಾಡಬೇಕು. ಆವಾಗ 'ಇಷ್ಠವಚ್ಚ' ಎಂದು ಹೇಳಿರುವುದರಿಂದ, 'ಇಷ್ಠನ್' ಪ್ರತ್ಯಯ ಬಂದರೆ ಯಾವ ಕಾರ್ಯವಾಗುತ್ತದೋ, ಅದೇ ಕಾರ್ಯವಾಗುತ್ತದೆ. 'ಇಷ್ಠನ್' ಪ್ರತ್ಯಯ, 'ಇಮನಿಚ್' ಪ್ರತ್ಯಯ, ಹಾಗೂ 'ಈಯಸುನ್' ಪ್ರತ್ಯಯ ಇವುಗಳು ಪರದಲ್ಲಿದ್ದಾಗ 'ಟೇಃ' ಎಂಬ ಸೂತ್ರದಿಂದ ಲೋಪ ಬರುತ್ತದೆಂದು ಹೇಳಿದ್ದಾರೆ. ಪ್ರಕೃತ 'ಣಿಚ್' ಪ್ರತ್ಯಯಕ್ಕೂ ಇಷ್ಠವದ್ಭಾವ ಹೇಳಿರುವುದರಿಂದ 'ಅವರ ಣಿಚ್' ಎಂದಿರುವಾಗ 'ಅವರ' ಎಂಬಲ್ಲಿರುವ 'ಟಿ' ಗೆ ಲೋಪ ಬಂದರೆ 'ಅವರ್ ಣಿಚ್' ಎಂದಾಗುತ್ತದೆ. ಅನಂತರ ಣ್ಯಂತವಾದ ಶಬ್ದದ ಮೇಲೆ 'ಅಚ್' ಪ್ರತ್ಯಯವನ್ನು ಮಾಡಬೇಕು. 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' ಎಂಬ ಸೂತ್ರವು 'ನಂದಿ' ಶಬ್ದಕ್ಕೆ 'ಲ್ಯು' ಪ್ರತ್ಯಯವನ್ನು 'ಗ್ರಹಿ' ಶಬ್ದಕ್ಕೆ 'ಣಿನ್' ಪ್ರತ್ಯಯವನ್ನು 'ಪಚ' ಶಬ್ದಕ್ಕೆ 'ಅಚ್' ಪ್ರತ್ಯಯವನ್ನು ವಿಧಿಸುತ್ತಿದೆ. ಈ ಸೂತ್ರದಲ್ಲಿ ಉಲ್ಲೇಖಿಸಿದ ಪಚಾದಿ ಶಬ್ದವು ಆಕೃತಿಗಣವಾಗಿದೆಯೆಂದು 'ಯಙೋಽಚಿ ಚ' ಎಂಬ ಸೂತ್ರದಲ್ಲಿ ಅಚ್‌ಗ್ರಹಣದಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಪ್ರಕೃತ ಅವರ ಶಬ್ದವನ್ನೂ ಕೂಡ ಆಕೃತಿಗಣವೆಂದು ತಿಳಿದು 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' ಎಂಬ ಸೂತ್ರದಿಂದಲೇ 'ಅಚ್' ಪ್ರತ್ಯಯವನ್ನು ವಿಧಿಸಬಹುದು. ಅನಂತರ 'ಣೇರನಿಟಿ' ಎಂಬ ಸೂತ್ರದಿಂದ ಪರದಲ್ಲಿರುವ 'ಣಿಚ್' ಪ್ರತ್ಯಯಕ್ಕೆ ಲೋಪ ಮಾಡಿದರೆ 'ಅವರ' ಎಂಬ ರೂಪವು ಸಿದ್ಧವಾಗಿ ಅನಂತರ 'ಸು' ಮೊದಲಾದ ಪ್ರತ್ಯಯಗಳು ಬಂದು 'ಅವರಃ' 'ಬದ್ಧಃ' ಇತ್ಯಾದಿ ರೂಪಗಳು ನಿಷ್ಪನ್ನವಾಗುತ್ತವೆ.

**प्रकाशः** – ''अवरयतीत्यादि व्युत्पत्त्युपपत्तेश्च'' इत्यादिटीकां विवृत्य तन्मूलमाह – तदुक्तमिति ।। प्रसिद्धेश्च कर्तृव्युत्पत्तेरिति न्यायविवरणपाठः क्वचिदुपलभ्यते ।

'ಅವರಯತೀತ್ಯಾದಿ ವ್ಯುತ್ಪತ್ತ್ಯುಪಪತ್ತೇಶ್ಚ' ಇತ್ಯಾದಿ ಟೀಕೆಯನ್ನು ವಿವರಿಸಿ ಇದಕ್ಕೆ ಮೂಲ ನ್ಯಾಯವಿವರಣವೇ ಆಗಿದೆಯೆಂದು 'ತದುಕ್ತಮ್' ಎಂಬ ಗ್ರಂಥದಿಂದ ಹೇಳಿದ್ದಾರೆ. ಗ್ರಂಥಕಾರರು 'ಪ್ರಸಿದ್ಧತ್ವಾಚ್ಚ ಕರ್ತೃವ್ಯುತ್ಪತ್ತೇಃ' ಎಂಬ ವಾಕ್ಯವನ್ನು ಸ್ವೀಕರಿಸಿದ್ದಾರೆ. ಕೆಲವೆಡೆ 'ಪ್ರಸಿದ್ಧೇಶ್ಚ ಕರ್ತೃವ್ಯುತ್ಪತ್ತೇಃ' ಎಂದು ಪಾಠ ವ್ಯತ್ಯಾಸವಿದೆ.

ಪರಿಪೂರ್ಣಚಂದ್ರಿಕಾ

**प्रकाशः** – ''ननु भवेदियमव्यक्तादिशब्दानां परमात्मनि मुख्यत्वचिन्ता । यदि तेषां तद्वाचित्वमेव भवेत् । नच तद्युक्तम् । तेषामन्यत्रैव प्रसिद्धत्वात्'' इत्यादिटीकोक्तशङ्कां हृदि कृत्वा तन्निवर्तकतया प्राप्तं ''चमसवदविशेषात्'' इति सूत्रभाष्यटीकार्थं विवृणोति – **सर्वं चैतदिति** ।।

'ನನು ಭವೇದಿಯಮವ್ಯಕ್ತಾದಿಶಬ್ದಾನಾಂ ಪರಮಾತ್ಮನಿ ಮುಖ್ಯತ್ವಚಿಂತಾ । ಯದಿ ತೇಷಾಂ ತದ್ವಾಚಿತ್ವಮೇವ ಭವೇತ್ । ನಚ ತದ್ಯುಕ್ತಮ್ । ತೇಷಾಮನ್ಯತ್ರೈವ ಪ್ರಸಿದ್ಧತ್ವಾತ್' ಅವ್ಯಕ್ತಾದಿಶಬ್ದಗಳು ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದ ಇರುತ್ತವೆಂದು ವಿಚಾರ ಮಾಡಬಹುದಿತ್ತು. ಒಂದುವೇಳೆ ಅವುಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುವುದಾದರೆ ಪರಮಾತ್ಮನಲ್ಲಿ ವಾಚಕಗಳೇ ಆಗದೇ ಅನ್ಯತ್ರಪ್ರಸಿದ್ಧ-ವಾಗಿರುವಾಗ ಮುಖ್ಯತ್ವದ ಚಿಂತನೆಯನ್ನು ಮಾಡುವುದು ತಪ್ಪಲ್ಲವೇ? ಇತ್ಯಾದಿ ಟೀಕೆಯಲ್ಲಿ ಹೇಳಿದ ಆಶಂಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು, 'ಚಮಸವದವಿಶೇಷಾತ್' ಇತ್ಯಾದಿ ಸೂತ್ರಭಾಷ್ಯದ ಟೀಕಾರ್ಥವನ್ನು ವಿವರಿಸುತ್ತಿದ್ದಾರೆ 'ಸರ್ವಂ ಚೈತತ್' ಇತ್ಯಾದಿ ಗ್ರಂಥದಿಂದ.

**प्रकाशः** – ''कार्याणां कारणं पूर्वं वचसां वाच्यमुत्तमम्'' इत्यनुव्याख्यानोक्त-स्मृतिः। श्रुतौ मुख्यत्वलाभप्रकारमाह – **आविशन्तीति** ।। आङस्सम्यक्त्वार्थतया मुख्यत्वलाभ इति भावः ।। **स्पष्टाविति** ।। सूत्रार्थकथनेन किञ्चिदग्रे विवरिष्यते चेति भावः ।।

ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮಮ್ ।
ಯೋಗಾನಾಂ ಪರಮಾಂ ಸಿದ್ಧಿಂ ಪರಮಂ ತೇ ಪದಂ ವಿದುಃ ॥

ಇತ್ಯಾದಿಯಾಗಿ ಅನುವ್ಯಾಖ್ಯಾನದ ಸ್ಮೃತಿಯನ್ನು ಉಲ್ಲೇಖಿಸಿದ್ದಾರೆ. ಶ್ರುತಿಯು ಪರಮಾತ್ಮನಲ್ಲಿ ಮುಖ್ಯವೃತ್ತಿಯನ್ನು ಹೇಗೆ ಹೇಳುತ್ತದೆಂಬುದನ್ನು 'ಆವಿಶಂತಿ' ಎಂಬುದರಿಂದ ತೋರಿಸಿದ್ದಾರೆ. 'ಆವಿಶಂತಿ' ಎಂಬಲ್ಲಿರುವ 'ಆಙ್' ಎಂಬ ಉಪಸರ್ಗವು ಸಮ್ಯಕ್ತ್ವವನ್ನು ಹೇಳುತ್ತಿದೆ. ಇದರಿಂದ ಶಬ್ದಗಳು ಮುಖ್ಯವೃತ್ತಿಯಿಂದ ಪರಮಾತ್ಮನಲ್ಲಿ ಪ್ರವೇಶಿಸಿವೆ ಎಂಬರ್ಥವೂ ದೊರೆಯುತ್ತದೆ. ಭಾಷ್ಯಾದಿಗಳಲ್ಲಿ ಪೂರ್ವೋತ್ತರ ಪಕ್ಷಗಳು ಸ್ಪಷ್ಟವಾಗಿವೆಯೆಂದು ಹೇಳಿದ್ದಾರೆ. ನಾವೂ ಸಹ ಇಲ್ಲಿಯೇ ಮುಂದೆ ಸೂತ್ರಾರ್ಥವನ್ನು ನಿರೂಪಣೆ ಮಾಡುವಾಗ ಹೇಳುತ್ತೇವೆ.

**गुरुराजीयम्** – इतश्च न प्रयोगप्राचुर्यस्य शब्दमुख्यत्वे हेतुत्वमित्याह – **किञ्चेति** ।। ननु शब्दमुख्यत्वस्य प्रवृत्तिनिमित्तरूपनियामकानुसारित्वेन ब्रह्मणि दुःख्यादिशब्दानां मुख्यत्वम् । तन्नियामकीभूतप्रवृत्तिनिमित्तज्ञापकप्रयोगस्याभावादिति शङ्कते ।। **न चेति** ।। स्यादप्येवं यदि सर्वत्र प्रयोग एव प्रवृत्तिनिमित्तज्ञापकतया स्वीक्रियेत । न चैवमित्याह – **उपदेशादिनापीति** ।। न्यायविवरणोक्तां युक्तिमाह –

**सुलभा चेति** ।। प्रातिपदिकाद्धात्वर्थे बहुलमिष्टवच्चेति सूत्रादवरादिशब्देभ्यश्चौरादिके णिचि सति इष्टवद्भावादिष्टे मेयः सुपरतः टिलोपविधानेन टिलोपे सति सनाद्यन्ता धातव इति धातुसंज्ञायां पचाद्यचि णेरनिटीति णिचो लोपेऽवरादिशब्दनिष्पत्तिरिति भावः । दुःख्यादिशब्दानां भगवति मुख्यत्वे बाधकं परिहृत्य साधकमप्याह – **सर्वं चैतदिति** ।। चमसवदविशेषादिति सूत्रोक्तं हेतुमाह – **दृष्टा हीति** ।। ज्ञेयत्वावचनादिति सूत्रोक्तपूर्वपक्षसिद्धान्तानुक्तेर्न्यूनत्वं परिहरति ।। **इमौ चेति** ।। पौनरुक्त्यं परिहरति ।। **ज्योतिरिति** ।।




ಪ್ರಯೋಗೋ ಜ್ಞಾಪಕಃ ಶಕ್ತೇರ್ನಿಮಿತ್ತಂ ತು ನಿಯಾಮಕಮ್ ।
ನಿಯಾಮಕಾನುಸಾರಿತ್ವಂ ನಿಯಮ್ಯಸ್ಯ ಚ ಶೋಭತೇ ॥೧॥

ಪ್ರಯೋಗಪ್ರಾಚುರ್ಯವು ಶಬ್ದಶಕ್ತಿಗೆ ಕೇವಲ ಜ್ಞಾಪಕವಾಗಿರುತ್ತದೆ. ಆದರೆ ಪ್ರವೃತ್ತಿನಿಮಿತ್ತವು ಮುಖ್ಯವಾದ ನಿಯಾಮಕ. ನಿಯಮ್ಯವಾದ ಶಕ್ತಿಯು ನಿಯಾಮಕವಾದ ಶಬ್ದಶಕ್ತಿಗೆ ಅನುಸಾರಿಯಾಗಿರುತ್ತದೆಂದು ಹೇಳುವುದೇ ಶೋಭಿಸುತ್ತದೆ.

'ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮ್' ಇವೇ ಮೊದಲಾದ ಸ್ಮೃತಿಗಳಿಂದ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಗಳಿಂದ ಪರಮಾತ್ಮನಲ್ಲಿ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದ ಇರುತ್ತವೆಂದು ಸಿದ್ಧವಾಗಿವೆ. ಲೋಕದಲ್ಲಿ ಯಾರೂ ಸಹ ಪರಮಾತ್ಮನನ್ನು 'ದುಃಖೀ' 'ಬದ್ಧಃ' ಇತ್ಯಾದಿಯಾಗಿ ಕರೆಯುವುದಿಲ್ಲ. ಹೀಗಿರುವಾಗ ಇಂತಹ ದೋಷವಾಚಕಶಬ್ದಗಳನ್ನು ಪರಮಾತ್ಮನಲ್ಲಿ ಹೇಗೆ ಸಮನ್ವಯ ಮಾಡುತ್ತೀರಿ? ಎಂದು ಪ್ರಶ್ನಿಸಬಾರದು. 'ಚಮಸ' ಶಬ್ದವನ್ನು ಯಾರೂ ಸಹ ಶಿರಸ್ಸಿನಲ್ಲಿ ಪ್ರಯೋಗ ಮಾಡುವುದಿಲ್ಲ. ಆದರೆ ಶ್ರುತಿಯಲ್ಲಿ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬುದಾಗಿ ಕೆಳಮುಖವುಳ್ಳ ಪಾತ್ರಾವಿಶೇಷವನ್ನು 'ಚಮಸ' ಎಂದು ಕರೆಯಲಾಗಿದೆ. ಅದರಂತೆ ಸ್ವರ್ಗಶಬ್ದವನ್ನು ಸುಖ ಎಂಬರ್ಥದಲ್ಲಿ ಯಾರೂ ಪ್ರಯೋಗ ಮಾಡುವುದಿಲ್ಲ. ಆದರೆ 'ಸುಖಂ ಸ್ವರ್ಗಪದಾಸ್ಪದಂ' ಎಂಬ ವಾಕ್ಯವನ್ನು ಸುಖವನ್ನೇ ಸ್ವರ್ಗವೆಂದು ಕರೆಯುತ್ತಿದೆ. ಹೀಗೆ ಲೋಕದಲ್ಲಿರುವ ಪ್ರಯೋಗಗಳು ಶಬ್ದಾರ್ಥನಿರ್ಣಯಕ್ಕೆ ಜ್ಞಾಪಕಗಳಾಗಿರುವುದಿಲ್ಲವೆಂದು ಸಿದ್ಧವಾಗುತ್ತದೆ. ಅದರಂತೆ ಪ್ರಕೃತ 'ದುಃಖೀ' 'ಬದ್ಧಃ' ಮೊದಲಾದ ಪ್ರಯೋಗಗಳು ಪರಮಾತ್ಮನಲ್ಲಿ ಇಲ್ಲವೆನ್ನಲು ಲೋಕದಲ್ಲಿ ಪ್ರಯೋಗ-ವಿಲ್ಲವೆಂಬುದು ಕಾರಣವಾಗುವುದಿಲ್ಲ. ಆದ್ದರಿಂದ ಅವರ ಶಬ್ದದ ಮೇಲೆ ಪಚಾದಿಗಣದಲ್ಲಿ ಪಠಿತವಾದ ಕಾರಣ 'ಣಿಚ್' ಪ್ರತ್ಯಯ ಮುಂದಿರುವಾಗ 'ಅಚ್' ಪ್ರತ್ಯಯವನ್ನು ಹೇಳಿದರೆ 'ಅವರಯತಿ ಇತಿ ಅವರಃ' ಎಂಬ ರೂಪವು ಸಿದ್ಧವಾಗುತ್ತದೆ. ಇಂತಹ ಅವರ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಸುಲಭವಾಗಿ ಸಮನ್ವಯಗೊಳ್ಳುತ್ತವೆ. ಅಂದರೆ ಮತ್ತೊಬ್ಬರನ್ನು ನೀಚರನ್ನಾಗಿ ಮಾಡುತ್ತಾನಾದ್ದರಿಂದ ಪರಮಾತ್ಮನು ನೀಚನೆನಿಸುತ್ತಾನೆ. ಮತ್ತೊಬ್ಬರಿಗೆ ದುಃಖಗಳನ್ನು ನೀಡುತ್ತಾನಾದ್ದರಿಂದ 'ದುಃಖೀ' ಎನಿಸುತ್ತಾನೆ. ಹೀಗೆ ಪ್ರತಿಯೊಂದು ದೋಷವಾಚಕ ಶಬ್ದಗಳು ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದ ಸಮನ್ವಯಗೊಳ್ಳುತ್ತವೆನ್ನಲು ಯಾವುದೇ ಬಾಧಕಗಳಿರುವುದಿಲ್ಲ.

ಪರಿಪೂರ್ಣಚಂದ್ರಿಕಾ

## ಒಂಭತ್ತು ಸೂತ್ರಗಳ ಜೋಡಣೆ ಅತ್ಯಂತ ಸ್ವರಸ

**तात्पर्यचन्द्रिका**

**सूत्रक्रमस्तु ।। आद्ये सूत्रे ब्रह्मणोऽव्यक्तादौ विन्यस्तत्वेनाव्यक्तादेरपि ब्रह्मसम्बन्धत्वात् वाच्यतेति दर्शयितुं विन्यस्तपदम् ।**

ಅನುವಾದ – ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆ. 'ಅದು ಹೀಗಿದೆ - 'ಅನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹಿತೇರ್ದರ್ಶಯತಿ ಚ' ಎಂಬುದು ಪ್ರಥಮಸೂತ್ರ. ಬ್ರಹ್ಮನು ಪ್ರಕೃತ್ಯಾದಿಗಳಲ್ಲಿ ನೆಲೆಸಿರುವ ಕಾರಣ ಅವನ ಸಂಬಂಧದಿಂದ ಪ್ರಕೃತ್ಯಾದಿಗಳೂ ಕೂಡ ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾಗುತ್ತವೆ. ಇದನ್ನು ತಿಳಿಸಲು 'ವಿನ್ಯಸ್ತ' ಎಂಬ ಪದವನ್ನು ಸೂತ್ರದಲ್ಲಿ ಉಲ್ಲೇಖಿಸಿದ್ದಾರೆ.

**नच वाच्यं प्रधानादिसम्बन्धात् ब्रह्मणो वाच्यताऽस्त्विति ।। तस्य ब्रह्मशरीरतुल्यत्वेन तत्तन्त्रत्वादिति दर्शयितुं शरीररूपपदम् ।**

ಬ್ರಹ್ಮನ ಸಂಬಂಧದಿಂದ ಪ್ರಕೃತಿಗೆ ಅವ್ಯಕ್ತಶಬ್ದ ಪ್ರತಿಪಾದ್ಯತ್ವವನ್ನು ಹೇಳುವುದಕ್ಕಿಂತ ಪ್ರಕೃತಿಯ ಸಂಬಂಧದಿಂದಲೇ ಬ್ರಹ್ಮನಲ್ಲಿ ಅವ್ಯಕ್ತಶಬ್ದಪ್ರತಿಪಾದ್ಯತ್ವವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಕೃತಿಯು ಬ್ರಹ್ಮನ ಶರೀರದಂತಿರುವುದರಿಂದ ಅವನ ಅಧೀನವಾಗಿದೆ. ಇದನ್ನು ತಿಳಿಸಲು 'ಶರೀರರೂಪ' ಎಂಬ ಪದವನ್ನು ಸೂತ್ರದಲ್ಲಿ ಉಲ್ಲೇಖಿಸಿದ್ದಾರೆ -

**शरीरस्य रूपमिव रूपं यस्येति विग्रहः । कप्रत्ययेन मुख्यतो नेश्वरशरीरम् । जडत्वादिना कुत्सितत्वादित्युक्तम् ।**

'ಶರೀರಸ್ಯ ರೂಪಮಿವ ರೂಪಂ ಯಸ್ಯ' ಎಂಬುದಾಗಿ ವಿಗ್ರಹ ಮಾಡಬೇಕು. ಪ್ರಕೃತಿಯು ಬ್ರಹ್ಮನ ಶರೀರವಲ್ಲ. ಶರೀರದಂತೆ ಇರುತ್ತದೆ. ಅವನ ಅಧೀನವಾಗಿದೆಯೆಂದರ್ಥ. ರೂಪಕ ಎಂಬಲ್ಲಿರುವ 'ಕ' ಪ್ರತ್ಯಯದಿಂದ ಪ್ರಕೃತಿಯು ಈಶ್ವರನ ಮುಖ್ಯವಾದ ಶರೀರವಲ್ಲವೆಂದು ತಿಳಿಸಿದ್ದಾರೆ. ಏಕೆಂದರೆ ಪರಮಾತ್ಮನು ಅಪ್ರಾಕೃತವಾದ ಶರೀರವುಳ್ಳವನು. ಪ್ರಕೃತಿಯು ಜಡಭೂತವಾದ್ದರಿಂದ ಕುತ್ಸಿತ-ವಾಗಿದೆಯೆಂದು ತಿಳಿಯಬೇಕು.

**दर्शयतिचशब्दाभ्यां तु ब्रह्मग्रहणे हेतुत्वेन भाष्योक्तश्रौतस्मार्तप्रयोगोक्तिः ।**

**सुलभा चेति ।।** प्रातिपदिकाद्धात्वर्थे बहुलमिष्टवच्चेति सूत्रादवरादिशब्देभ्यश्चौरादिके णिचि सति इष्टवद्भावादिष्टे मेयः सुपरतः टिलोपविधानेन टिलोपे सति सनाद्यन्ता धातव इति धातुसंज्ञायां पचाद्यचि णेरनिटीति णिचो लोपेऽवरादिशब्दनिष्पत्तिरिति भावः । दुःख्यादिशब्दानां भगवति मुख्यत्वे बाधकं परिहृत्य साधकमप्याह – **सर्वं चैतदिति ।।** चमसवदविशेषादिति सूत्रोक्तं हेतुमाह – **दृष्टा हीति ।।** ज्ञेयत्वावचनादिति सूत्रोक्तपूर्वपक्षसिद्धान्तानुक्तेर्न्यूनत्वं परिहरति ।। **इमौ चेति ।।** पौनरुक्त्यं परिहरति ।। **ज्योतिरिति ।।**



ಸಾರ

ಪ್ರಯೋಗೋ ಜ್ಞಾಪಕಃ ಶಕ್ತೇರ್ನಿಮಿತ್ತಂ ತು ನಿಯಾಮಕಮ್ ।
ನಿಯಾಮಕಾನುಸಾರಿತ್ವಂ ನಿಯಮ್ಯಸ್ಯ ಚ ಶೋಭತೇ ॥೧॥

ಪ್ರಯೋಗಪ್ರಾಚುರ್ಯವು ಶಬ್ದಶಕ್ತಿಗೆ ಕೇವಲ ಜ್ಞಾಪಕವಾಗಿರುತ್ತದೆ. ಆದರೆ ಪ್ರವೃತ್ತಿನಿಮಿತ್ತವು ಮುಖ್ಯವಾದ ನಿಯಾಮಕ. ನಿಯಮ್ಯವಾದ ಶಕ್ತಿಯು ನಿಯಾಮಕವಾದ ಶಬ್ದಶಕ್ತಿಗೆ ಅನುಸಾರಿಯಾಗಿರುತ್ತದೆಂದು ಹೇಳುವುದೇ ಶೋಭಿಸುತ್ತದೆ.

'ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮ್' ಇವೇ ಮೊದಲಾದ ಸ್ಮೃತಿಗಳಿಂದ 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಗಳಿಂದ ಪರಮಾತ್ಮನಲ್ಲಿ ಎಲ್ಲಾ ಶಬ್ದಗಳೂ ಮುಖ್ಯವೃತ್ತಿಯಿಂದ ಇರುತ್ತವೆಂದು ಸಿದ್ಧವಾಗಿವೆ. ಲೋಕದಲ್ಲಿ ಯಾರೂ ಸಹ ಪರಮಾತ್ಮನನ್ನು 'ದುಃಖೀ' 'ಬದ್ಧಃ' ಇತ್ಯಾದಿಯಾಗಿ ಕರೆಯುವುದಿಲ್ಲ. ಹೀಗಿರುವಾಗ ಇಂತಹ ದೋಷವಾಚಕಶಬ್ದಗಳನ್ನು ಪರಮಾತ್ಮನಲ್ಲಿ ಹೇಗೆ ಸಮನ್ವಯ ಮಾಡುತ್ತೀರಿ? ಎಂದು ಪ್ರಶ್ನಿಸಬಾರದು. 'ಚಮಸ' ಶಬ್ದವನ್ನು ಯಾರೂ ಸಹ ಶಿರಸ್ಸಿನಲ್ಲಿ ಪ್ರಯೋಗ ಮಾಡುವುದಿಲ್ಲ. ಆದರೆ ಶ್ರುತಿಯಲ್ಲಿ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬುದಾಗಿ ಕೆಳಮುಖವುಳ್ಳ ಪಾತ್ರಾವಿಶೇಷವನ್ನು 'ಚಮಸ' ಎಂದು ಕರೆಯಲಾಗಿದೆ. ಅದರಂತೆ ಸ್ವರ್ಗಶಬ್ದವನ್ನು ಸುಖ ಎಂಬರ್ಥದಲ್ಲಿ ಯಾರೂ ಪ್ರಯೋಗ ಮಾಡುವುದಿಲ್ಲ. ಆದರೆ 'ಸುಖಂ ಸ್ವರ್ಗಪದಾಸ್ಪದಂ' ಎಂಬ ವಾಕ್ಯವನ್ನು ಸುಖವನ್ನೇ ಸ್ವರ್ಗವೆಂದು ಕರೆಯುತ್ತಿದೆ. ಹೀಗೆ ಲೋಕದಲ್ಲಿರುವ ಪ್ರಯೋಗಗಳು ಶಬ್ದಾರ್ಥನಿರ್ಣಯಕ್ಕೆ ಜ್ಞಾಪಕಗಳಾಗಿರುವುದಿಲ್ಲವೆಂದು ಸಿದ್ಧವಾಗುತ್ತದೆ. ಅದರಂತೆ ಪ್ರಕೃತ 'ದುಃಖೀ' 'ಬದ್ಧಃ' ಮೊದಲಾದ ಪ್ರಯೋಗಗಳು ಪರಮಾತ್ಮನಲ್ಲಿ ಇಲ್ಲವೆನ್ನಲು ಲೋಕದಲ್ಲಿ ಪ್ರಯೋಗ-ವಿಲ್ಲವೆಂಬುದು ಕಾರಣವಾಗುವುದಿಲ್ಲ. ಆದ್ದರಿಂದ ಅವರ ಶಬ್ದದ ಮೇಲೆ ಪಚಾದಿಗಣದಲ್ಲಿ ಪಠಿತವಾದ ಕಾರಣ 'ಣಿಚ್' ಪ್ರತ್ಯಯ ಮುಂದಿರುವಾಗ 'ಅಚ್' ಪ್ರತ್ಯಯವನ್ನು ಹೇಳಿದರೆ 'ಅವರಯತಿ ಇತಿ ಅವರಃ' ಎಂಬ ರೂಪವು ಸಿದ್ಧವಾಗುತ್ತದೆ. ಇಂತಹ ಅವರ ಮೊದಲಾದ ಶಬ್ದಗಳು ಬ್ರಹ್ಮನಲ್ಲಿ ಸುಲಭವಾಗಿ ಸಮನ್ವಯಗೊಳ್ಳುತ್ತವೆ. ಅಂದರೆ ಮತ್ತೊಬ್ಬರನ್ನು ನೀಚರನ್ನಾಗಿ ಮಾಡುತ್ತಾನಾದ್ದರಿಂದ ಪರಮಾತ್ಮನು ನೀಚನೆನಿಸುತ್ತಾನೆ. ಮತ್ತೊಬ್ಬರಿಗೆ ದುಃಖಗಳನ್ನು ನೀಡುತ್ತಾನಾದ್ದರಿಂದ 'ದುಃಖೀ' ಎನಿಸುತ್ತಾನೆ. ಹೀಗೆ ಪ್ರತಿಯೊಂದು ದೋಷವಾಚಕ ಶಬ್ದಗಳು ಪರಮಾತ್ಮನಲ್ಲಿ ಮುಖ್ಯವೃತ್ತಿಯಿಂದ ಸಮನ್ವಯಗೊಳ್ಳುತ್ತವೆನ್ನಲು ಯಾವುದೇ ಬಾಧಕಗಳಿರುವುದಿಲ್ಲ.

ಪರಿಪೂರ್ಣಚಂದ್ರಿಕಾ

## ಒಂಭತ್ತು ಸೂತ್ರಗಳ ಜೋಡಣೆ ಅತ್ಯಂತ ಸ್ವರಸ

### तात्पर्यचन्द्रिका

**सूत्रक्रमस्तु ।। आद्ये सूत्रे ब्रह्मणोऽव्यक्तादौ विन्यस्तत्वेनाव्यक्तादेरपि ब्रह्मसम्बन्धत्वात् वाच्यतेति दर्शयितुं विन्यस्तपदम् ।**

ಅನುವಾದ – ಸೂತ್ರಗಳ ವಿನ್ಯಾಸಕ್ರಮವು ಅತ್ಯಂತ ಸ್ವರಸವಾಗಿದೆ. 'ಅದು ಹೀಗಿದೆ - 'ಅನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹಿತೇರ್ದರ್ಶಯತಿ ಚ' ಎಂಬುದು ಪ್ರಥಮಸೂತ್ರ. ಬ್ರಹ್ಮನು ಪ್ರಕೃತ್ಯಾದಿಗಳಲ್ಲಿ ನೆಲೆಸಿರುವ ಕಾರಣ ಅವನ ಸಂಬಂಧದಿಂದ ಪ್ರಕೃತ್ಯಾದಿಗಳೂ ಕೂಡ ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾಗುತ್ತವೆ. ಇದನ್ನು ತಿಳಿಸಲು 'ವಿನ್ಯಸ್ತ' ಎಂಬ ಪದವನ್ನು ಸೂತ್ರದಲ್ಲಿ ಉಲ್ಲೇಖಿಸಿದ್ದಾರೆ.

**नच वाच्यं प्रधानादिसम्बन्धात् ब्रह्मणो वाच्यताऽस्त्विति ।। तस्य ब्रह्मशरीरतुल्यत्वेन तत्तन्त्रत्वादिति दर्शयितुं शरीररूपपदम् ।**

ಬ್ರಹ್ಮನ ಸಂಬಂಧದಿಂದ ಪ್ರಕೃತಿಗೆ ಅವ್ಯಕ್ತಶಬ್ದ ಪ್ರತಿಪಾದ್ಯತ್ವವನ್ನು ಹೇಳುವುದಕ್ಕಿಂತ ಪ್ರಕೃತಿಯ ಸಂಬಂಧದಿಂದಲೇ ಬ್ರಹ್ಮನಲ್ಲಿ ಅವ್ಯಕ್ತಶಬ್ದಪ್ರತಿಪಾದ್ಯತ್ವವನ್ನು ಹೇಳಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಕೃತಿಯು ಬ್ರಹ್ಮನ ಶರೀರದಂತಿರುವುದರಿಂದ ಅವನ ಅಧೀನವಾಗಿದೆ. ಇದನ್ನು ತಿಳಿಸಲು 'ಶರೀರರೂಪ' ಎಂಬ ಪದವನ್ನು ಸೂತ್ರದಲ್ಲಿ ಉಲ್ಲೇಖಿಸಿದ್ದಾರೆ -

**शरीरस्य रूपमिव रूपं यस्येति विग्रहः । कप्रत्ययेन मुख्यतो नेश्वरशरीरम् । जडत्वादिना कुत्सितत्वादित्युक्तम् ।**

'ಶರೀರಸ್ಯ ರೂಪಮಿವ ರೂಪಂ ಯಸ್ಯ' ಎಂಬುದಾಗಿ ವಿಗ್ರಹ ಮಾಡಬೇಕು. ಪ್ರಕೃತಿಯು ಬ್ರಹ್ಮನ ಶರೀರವಲ್ಲ. ಶರೀರದಂತೆ ಇರುತ್ತದೆ. ಅವನ ಅಧೀನವಾಗಿದೆಯೆಂದರ್ಥ. ರೂಪಕ ಎಂಬಲ್ಲಿರುವ 'ಕ' ಪ್ರತ್ಯಯದಿಂದ ಪ್ರಕೃತಿಯು ಈಶ್ವರನ ಮುಖ್ಯವಾದ ಶರೀರವಲ್ಲವೆಂದು ತಿಳಿಸಿದ್ದಾರೆ. ಏಕೆಂದರೆ ಪರಮಾತ್ಮನು ಅಪ್ರಾಕೃತವಾದ ಶರೀರವುಳ್ಳವನು. ಪ್ರಕೃತಿಯು ಜಡಭೂತವಾದ್ದರಿಂದ ಕುತ್ಸಿತ-ವಾಗಿದೆಯೆಂದು ತಿಳಿಯಬೇಕು.

**दर्शयतिचशब्दाभ्यां तु ब्रह्मग्रहणे हेतुत्वेन भाष्योक्तश्रौतस्मार्तप्रयोगोक्तिः ।**

ಸೂತ್ರದಲ್ಲಿ 'ದರ್ಶಯತಿ' ಮತ್ತು 'ಚ' ಎಂಬೆರಡು ಶಬ್ದಗಳಿಂದ ಬ್ರಹ್ಮನನ್ನೇ ಅವ್ಯಕ್ತಶಬ್ದ-ಪ್ರತಿಪಾದ್ಯನೆಂದು ತಿಳಿಯಲು ಶ್ರೌತಪ್ರಯೋಗ ಹಾಗೂ ಸ್ಮಾರ್ತಪ್ರಯೋಗಗಳ ಆಧಾರವನ್ನು ತಿಳಿಸಿರುತ್ತಾರೆ.

**द्वितीये प्रयोगमात्रान्न मुख्यतेति शङ्कानिरासाय ब्रह्मण्यव्यक्तादिप्रातिपदिक-निमित्तोक्तिः ।**

'ಸೂಕ್ಷ್ಮಂ ತು ತದರ್ಹತ್ವಾತ್' ಎಂಬುದು ಎರಡನೆಯ ಸೂತ್ರ. ಕೇವಲ ಶ್ರೌತ-ಸ್ಮಾರ್ತ ಪ್ರಯೋಗಗಳಿಂದಷ್ಟೇ ಮುಖ್ಯವಾಗಿ ಅವ್ಯಕ್ತಶಬ್ದ ಪ್ರತಿಪಾದ್ಯನಾದವನು ಬ್ರಹ್ಮನೆಂದು ಸಿದ್ಧವಾಗುವು-ದಿಲ್ಲವೆಂಬ ಆಶಂಕೆಯನ್ನು ನಿರಾಕರಿಸಲು ಅವ್ಯಕ್ತಾದಿ ಪ್ರಾತಿಪದಿಕದಿಂದಲೂ ಅವನೇ ಪ್ರತಿಪಾದ್ಯ-ನಾಗಿದ್ದಾನೆ. ಏಕೆಂದರೆ ಪ್ರಾತಿಪದಿಕದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಅತಿಸೂಕ್ಷ್ಮನಾದ ಪರಮಾತ್ಮನಲ್ಲೇ ಯುಕ್ತವಾಗುತ್ತದೆ ಹೊರತು, ಪ್ರಕೃತ್ಯಾದಿಗಳಲ್ಲಿ ಅಲ್ಲ.

**तृतीये पञ्चमीविभक्त्यादिनिमित्तोक्तिः ।**

'ತದಧೀನತ್ವಾತ್ ಅರ್ಥವತ್' ಎಂಬುದು ಮೂರನೆಯ ಸೂತ್ರ. 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯು ಅವರತ್ವವನ್ನು ತಿಳಿಸುತ್ತಿದೆ. ಇಂತಹ ಅವರತ್ವವು ಪರಮಾತ್ಮನ ಅಧೀನವಾದ್ದರಿಂದ 'ಅವ್ಯಕ್ತಾತ್' ಇತ್ಯಾದಿ ಶಬ್ದಗಳಿಂದಲೂ ಅವನೇ ಪ್ರತಿಪಾದ್ಯನಾಗಿದ್ದಾನೆ. ಎರಡನೆಯ ಸೂತ್ರದಲ್ಲಿ ಪ್ರಾತಿಪದಿಕದ ಸಮನ್ವಯವನ್ನು ಹೇಳಿ, ಮೂರನೆಯ ಈ ಸೂತ್ರದಲ್ಲಿ ವಿಭಕ್ತಿಯ ಸಮನ್ವಯವನ್ನು ಹೇಳಿದ್ದರಿಂದ ದ್ವಿತೀಯಸೂತ್ರದ ಆನಂತರ್ಯವು ಇದಕ್ಕೆ ಯುಕ್ತವಾಗಿದೆ.

**चतुर्थे भावरूपान्तरङ्गनिमित्तरूपहेतूक्त्यनन्तरमभावरूपबहिरङ्गज्ञेयत्वावचन-रूपहेतूक्तिः ।**

'ಜ್ಞೇಯತ್ವಾವಚನಾಚ್ಚ' ಎಂಬುದು ನಾಲ್ಕನೆಯ ಸೂತ್ರ. ಹಿಂದಿನ ಮೂರು ಸೂತ್ರಗಳಲ್ಲಿ ಭಾವರೂಪವಾದ ಅಂತರಂಗವೆನಿಸಿದ ಪ್ರವೃತ್ತಿನಿಮಿತ್ತವೆಂಬ ಹೇತುಗಳನ್ನು ಹೇಳಿ, ಈಗ ಅಭಾವರೂಪವಾದ ಬಹಿರಂಗವಾದ ಜ್ಞೇಯತ್ವಾವಚನವೇ ಮೊದಲಾದ ಹೇತುಗಳನ್ನು ಹೇಳುತ್ತಿದ್ದಾರೆ.

**अस्य च सूत्रस्य ''तमेवैकं जानथ'' इति ब्रह्मण एव मुमुक्षुज्ञेयत्ववचनादन्यस्य च तदभाववचनान्मोक्षफलकानां वेदानां ब्रह्मपरत्वसिद्धेः प्रतिवाक्यं च तत्परत्वस्य ''आदावन्ते च मध्ये च विष्णुः सर्वत्र गीयते'' इत्यादिवचनसिद्धत्वात् स्वतः प्राप्तमुख्यवृत्तित्यागे च हेत्वभावात् ब्रह्मैवाव्यक्तादिशब्दमुख्यार्थ इत्यर्थः ।**

ಪರಿಪೂರ್ಣಚಂದ್ರಿಕಾ

ಈ ಸೂತ್ರದ ಅರ್ಥ ಹೀಗಿದೆ - 'ತಮೇವೈಕಂ ಜಾನಥ ಆತ್ಮಾನಾಂ' ಎಂಬುದಾಗಿ ಮುಮುಕ್ಷುಗಳಿಂದ ಬೇರೆ ತತ್ವಗಳಿಗೆ ಜ್ಞೇಯತ್ವವನ್ನು ಹೇಳದೇ ಬ್ರಹ್ಮನಿಗೆ ಮಾತ್ರ ಜ್ಞೇಯತ್ವವನ್ನು ಹೇಳಲಾಗಿದೆ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥ ವಿಷ್ಣುವೇ ಆಗಿದ್ದಾನೆ ಹೊರತು, ಪ್ರಧಾನಾದಿಗಳಲ್ಲ. ವೇದದಲ್ಲಿರುವ ಪ್ರತಿವಾಕ್ಯಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು 'ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಇತ್ಯಾದಿ ವಾಕ್ಯಗಳಿಂದ ಸಿದ್ಧವಾಗಿದೆ. ಹೀಗೆ ಸ್ವತಃಸಿದ್ಧವಾದ ಮುಖ್ಯವೃತ್ತಿಯನ್ನು ಬಿಟ್ಟು ಅಮುಖ್ಯವೃತ್ತಿಯನ್ನು ಸ್ವೀಕರಿಸಲು ಕಾರಣವಿಲ್ಲ. ಆದ್ದರಿಂದ ಬ್ರಹ್ಮನೇ ಅವ್ಯಕ್ತಾದಿ ಶಬ್ದಗಳ ಮುಖ್ಯಾರ್ಥನಾಗಿದ್ದಾನೆಂದು ಸಿದ್ಧವಾಗುತ್ತದೆ.

**पञ्चमे चतुर्थोक्तज्ञेयत्वावचनमसिद्धम् । ''निचाय्य तं मृत्युमुखात् प्रमुच्यते'' इत्यत्र महत्परत्वेन लिङ्गेन प्रधानस्योक्तेरिति शङ्कायां लिङ्गस्यान्यथासिद्ध्युक्तिः ।**

'ವದತೀತಿ ಚೇನ್ನ ಪ್ರಾಜ್ಞೋ ಹಿ' ಎಂಬುದು ಐದನೆಯ ಸೂತ್ರ. ನಾಲ್ಕನೆಯ ಸೂತ್ರದಲ್ಲಿ ಹೇಳಲ್ಪಟ್ಟ 'ಜ್ಞೇಯತ್ವಾವಚನತ್ವ' ಎಂಬ ಹೇತುವು ಸಿದ್ಧವಾಗಿದೆ. ಏಕೆಂದರೆ 'ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬುದಾಗಿ ಮಹತ್‌ಪರತ್ವವೆಂಬ ಲಿಂಗವು ಪ್ರಧಾನದಲ್ಲಿಯೂ ಕೂಡ ಹೇಳಲ್ಪಟ್ಟಿದೆಯಲ್ಲವೇ? ಎಂದು ಆಶಂಕಿಸಿದರೆ ಮಹತ್‌ಪರತ್ವವೆಂಬ ಲಿಂಗವು ಅನ್ಯಥಾ-ಸಿದ್ಧವೆಂದು ಈ ಸೂತ್ರದಲ್ಲಿ ಹೇಳಿದ್ದಾರೆ. ಸಕಲವಸ್ತುಗಳಿಂದ ಉತ್ತಮನೆಂದು ಹೇಳಿದಾಗ, ಮಹತ್ತತ್ವಕ್ಕಿಂತಲೂ ಉತ್ತಮನೆಂದು ಅರ್ಥಾತ್ ಸಿದ್ಧವಾಗುವಾಗ ಪ್ರಧಾನವು ಮಹತ್ತತ್ವಕ್ಕಿಂತ ಉತ್ತಮವೆಂದು ಸ್ವೀಕರಿಸುವುದು ತಪ್ಪಾಗುತ್ತದೆ.

**षष्ठे निचाय्यवाक्ये प्रधानोक्तौ बाधकोक्तिः ।**

'ಪ್ರಕರಣಾತ್' ಎಂಬುದು ಆರನೆಯ ಸೂತ್ರ. 'ಸೋಽಧ್ವನಃ ಪಾರಮಾಪ್ನೋತಿ' ಎಂಬುದು ವಿಷ್ಣುವಿನ ಪ್ರಕರಣವಾಗಿರುವುದರಿಂದ ಇಲ್ಲಿರುವ 'ಮಹತಃಪರಂ' ಎಂಬ ಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗುತ್ತಾನಾದ್ದರಿಂದ 'ನಿಚಾಯ್ಯ' ವಾಕ್ಯದಲ್ಲಿ ಪ್ರಧಾನವನ್ನು ಸ್ವೀಕರಿಸಿದರೆ ಬಾಧಕವು ಬರುತ್ತದೆಂದು ಹೇಳಿರುತ್ತಾರೆ.

**सप्तमेऽस्यामुपनिषद्येव मुमुक्षुज्ञेयत्वेन प्रधानोक्तौ बाधकोक्तिः ।**

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬುದು ಏಳನೆಯ ಸೂತ್ರ. ಇದೇ ಉಪನಿಷತ್ತಿನಲ್ಲಿ ಪ್ರಕೃತಿಯೇ ಮುಮುಕ್ಷುಗಳಿಂದ ಜ್ಞೇಯವಾಗಬಹುದಲ್ಲವೇ? ಎಂದು ಪ್ರಶ್ನಿಸಿದರೆ ಅದಕ್ಕೆ ಬಾಧಕವನ್ನು ಈ ಸೂತ್ರವು ಹೇಳುತ್ತಿದೆ -

**तत्र च त्रयाणां मध्ये प्रधानमेकमस्त्विति शङ्कां निरसितुं पितृसौमनस्याग्नि-ब्रह्मरूपश्रुत्युक्तप्रकारोक्त्यर्थं सूत्र एवंशब्दः ।**

ಈ ಪ್ರಕರಣದಲ್ಲಿ ಪಿತೃಸೌಮನಸ್ಯ, ಅಗ್ನಿ, ಬ್ರಹ್ಮ ಈ ಮೂವರ ಬಗ್ಗೆ ಪ್ರಶ್ನೆ ಹಾಗೂ ಪ್ರತಿವಚನಗಳಿರುತ್ತವೆ. ಆದ್ದರಿಂದ ಪ್ರಕೃತಿಯು ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. ಸೂತ್ರದಲ್ಲಿ 'ಏವಂ' ಎಂಬ ಪದವನ್ನು ಇದೇ ಉದ್ದೇಶದಿಂದಲೇ ಉಲ್ಲೇಖಿಸಿದ್ದಾರೆ. ಮೂವರ ಬಗ್ಗೆ ಪ್ರಶ್ನೆ ಹಾಗೂ ಪ್ರತಿವಚನಗಳು ಉಪನಿಷತ್ತಿನಲ್ಲಿ ಹೇಳಿದೆಯೆಂದು ಒಪ್ಪಿದರೂ ಕೂಡ ಆ ಮೂರರ ಮಧ್ಯದಲ್ಲಿ ಪ್ರಕೃತಿಯೂ ಕೂಡ ಪ್ರತಿಪಾದ್ಯವಾಗಬಹುದಲ್ಲವೇ? ಎಂಬ ಆಶಂಕೆಯನ್ನು ಈಗ ನಿರಾಕರಿಸಿದಂತಾಯಿತು. ಏಕೆಂದರೆ ಪಿತೃಸೌಮನಸ್ಯ, ಅಗ್ನಿ ಮತ್ತು ಬ್ರಹ್ಮ ಇವರ ಬಗ್ಗೆ ಮಾತ್ರ ಪ್ರಶ್ನೆ ಹಾಗೂ ಪ್ರತಿವಚನಗಳು ಉಪನಿಷತ್ತಿನಲ್ಲಿ ಪ್ರಸಕ್ತವಾಗಿದೆ ಹೊರತು, ಪ್ರಕೃತಿವಿಷಯದಲ್ಲಿ ಅಲ್ಲ.

**प्रश्नस्य प्राथम्येऽपि प्रतिवचनस्थनिचाय्यवाक्यस्य प्रधानपरतायाः शङ्कितत्वात् तन्निरासाय प्रतिवचनस्यादौ निर्देशः ।**

ಪ್ರಕರಣದಲ್ಲಿ ಮೊದಲು ಪ್ರಶ್ನೆ ಅನಂತರ ಉತ್ತರವಿರುತ್ತದೆ. ಅದಕ್ಕನುಗುಣವಾಗಿ ಸೂತ್ರದಲ್ಲಿಯೂ 'ತ್ರಯಾಣಾಮೇವ ಚೈವಮ್ ಪ್ರಶ್ನ ಉಪನ್ಯಾಸಶ್ಚ' ಎಂದೇ ಹೇಳಬೇಕಿತ್ತಲ್ಲವೇ ಎಂದು ಪ್ರಶ್ನಿಸಬಾರದು. ಏಕೆಂದರೆ ಪ್ರಶ್ನಿಸುವ ವಾಕ್ಯದಲ್ಲಿ ಯಾವುದೇ ಆಶಂಕೆಯು ಇರುವುದಿಲ್ಲ. ಆದರೆ ಯಮಧರ್ಮರಾಜರು ಉತ್ತರಿಸುವ ವಾಕ್ಯದಲ್ಲಿ ಪ್ರಧಾನಪರತ್ವದ ಆಶಂಕೆಯು ಪ್ರಾಪ್ತವಾಗುತ್ತಿರುವುದರಿಂದ ಅದನ್ನು ನಿರಾಸ ಮಾಡುವುದಕ್ಕಾಗಿ ಮೊದಲು ಪ್ರತಿವಚನವನ್ನೇ ಸೂತ್ರಕಾರರು ಉಲ್ಲೇಖಿಸಿದ್ದಾರೆ.

**ननु प्रश्नप्रतिवचनयोस्त्रयविषयत्वेऽपि यथा "महतः परमव्यक्तम्" इति वाक्यममुख्यवृत्त्या प्रधानपरं तथा निचाय्यवाक्यमप्यस्तु । तावतैव प्रधानस्य महतः परत्ववन्मोक्षार्थं ज्ञेयत्वं च सेत्स्यतीति चेन्न ।**

ಆಶಂಕೆ - ಪ್ರಶ್ನೆ ಹಾಗೂ ಪ್ರತಿವಚನಗಳು ಪಿತೃಸೌಮನಸ್ಯ, ಅಗ್ನಿ ಹಾಗೂ ಬ್ರಹ್ಮನೆಂಬ ಮೂರು ತತ್ವಗಳನ್ನು ವಿಷಯೀಕರಿಸಿದರೂ ಕೂಡ ಅಮುಖ್ಯವಾಗಿ ಪ್ರಕೃತಿಯನ್ನು ಪ್ರತಿಪಾದಿಸಬಹುದು. ಯಾವರೀತಿಯಾಗಿ 'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯವು ಅಮುಖ್ಯವೃತ್ತಿಯಿಂದ ಪ್ರಕೃತಿಯನ್ನು ಪ್ರತಿಪಾದನೆ ಮಾಡುತ್ತದೋ ಅದರಂತೆ ಈ ನಿಚಾಯ್ಯವಾಕ್ಯವೂ ಕೂಡ ಅಮುಖ್ಯವಾಗಿ ಪ್ರಕೃತಿಯನ್ನು ಪ್ರತಿಪಾದಿಸಬಹುದಲ್ಲವೇ? ಹೀಗೆ ಅಮುಖ್ಯವಾಗಿ ಪ್ರತಿಪಾದನೆ ಮಾಡಿದರೂ ಕೂಡ ಪ್ರಧಾನಕ್ಕೆ ಮಹತ್‌ಪರತ್ವವು ಸಿದ್ಧವಾದಂತೆ ಮೋಕ್ಷಕ್ಕೋಸ್ಕರ ಜ್ಞೇಯತ್ವವೂ ಕೂಡ ಸಿದ್ಧವಾಗುತ್ತದೆ.

**अव्यक्तमिति वाक्यस्य प्रधानपरत्वेऽपि ब्रह्मणि पर्यवसानवन्निचाय्य वाक्यस्य तदभावात् । तत्प्रश्नोत्तरेऽपि हि तदर्थमन्योक्तिर्युक्ता नतु स्वातन्त्र्येण ।**

ಸಮಾಧಾನ - ಹೀಗೆ ಶಂಕಿಸಬಾರದು. ಏಕೆಂದರೆ 'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯವು ಪ್ರಧಾನಪರವಾದರೂ ಕೂಡ 'ಅವ್ಯಕ್ತಾತ್ ಪುರುಷಃ ಪರಃ' ಎಂದು ಮುಂದೆ ಇರುವುದರಿಂದ

ಬ್ರಹ್ಮನಲ್ಲಿ ಸಮನ್ವಯವಾಗುತ್ತದೆ. ಆದ್ದರಿಂದ ಅಮುಖ್ಯವಾಗಿ ಪ್ರಕೃತಿಯು ಪ್ರತಿಪಾದ್ಯವಾಗುತ್ತದೆಂದು ಹೇಳಿದರೆ ಏನೂ ತೊಂದರೆಯಿಲ್ಲ. ಆದರೆ ನಿಚಾಯ್ಯವಾಕ್ಯದಲ್ಲಿ ಪರಮಾತ್ಮನಲ್ಲಿ ಕೊನೆಗೊಳ್ಳುವ ಯಾವುದೇ ವಾಕ್ಯಗಳೂ ಇರುವುದಿಲ್ಲ. ಆದ್ದರಿಂದ ಅಮುಖ್ಯವಾಗಿಯೂ ಕೂಡ ಈ ನಿಚಾಯ್ಯ-ವಾಕ್ಯದಿಂದ ಪ್ರಕೃತಿಯು ಪ್ರತಿಪಾದ್ಯವೆಂದು ನಾವು ಒಪ್ಪುವುದಿಲ್ಲ.

ನಚಿಕೇತನು ಬ್ರಹ್ಮನ ಬಗ್ಗೆ ಪ್ರಶ್ನೆ ಮಾಡಿದ್ದರೂ ಕೂಡ ಉತ್ತರ ನೀಡುವಾಗ ಬ್ರಹ್ಮನ ಜ್ಞಾನಕ್ಕೋಸ್ಕರ ಪ್ರಕೃತಿಯನ್ನು ಹೇಳಿರಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಬ್ರಹ್ಮನ ಬಗ್ಗೆ ಮಾಡುವ ಪ್ರಶ್ನೆಗೆ ಉತ್ತರಿಸುವಾಗ ಬೇರೆ ವಿಷಯವನ್ನು ಅಮುಖ್ಯವಾಗಿ ಹೇಳಬಹುದೇ ಹೊರತು, ಸ್ವಾತಂತ್ರ್ಯದಿಂದ ಹೇಳಲು ಸಾಧ್ಯವಿಲ್ಲ. ಆದ್ದರಿಂದ ನಿಚಾಯ್ಯವಾಕ್ಯವು ಪ್ರಕೃತಿಪರವಾಗಲು ಯಾವುದೇ ಆಧಾರ-ವಿರುವುದಿಲ್ಲ.

**प्रकाशः –**

**आद्य इति ।। आनुमानिकमप्येकेषामिति चेन्न शरीररूपकविन्यस्तगृहीतेर्दर्शयति चेत्यत्र ।**

ವಿವರಣೆ - ಸೂತ್ರಗಳ ವಿನ್ಯಾಸ ಕ್ರಮವು ಅತ್ಯಂತ ಸ್ವರಸವಾಗಿದೆಯೆಂದು ಸಮರ್ಥಿಸುತ್ತಿದ್ದಾರೆ. 'ಅನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹಿತೇರ್ದರ್ಶಯತಿ ಚ' ಎಂಬುದು ಪ್ರಥಮ ಸೂತ್ರ.

**प्रकाशः – अस्यार्थः । एकेषां शाखिनां शाखासु ''महतः परमव्यक्तमव्यक्तात् पुरुषःपरः'' इत्यव्यक्तशब्देन प्रधानमेवोच्यत इति चेन्न । शरीरसदृशेऽव्यक्तादौ विन्यस्तस्य विष्णोरव्यक्तशब्देन गृहीतेः । अव्यक्तादेः पारतन्त्र्यं परमात्मनस्स्वातन्त्र्यं प्रधानादिविन्यस्तत्वं च ''तुच्छयेनाभ्वपिहितं यदासीत्'' इति दर्शयतीति ।**

ಸೂತ್ರಾರ್ಥ ಹೀಗಿದೆ - ಏಕೇಷಾಂ = ಕೆಲವು ಶಾಖಿಗಳ ಶಾಖೆಯಲ್ಲಿ ಅಂದರೆ ಕಠೋಪನಿಷತ್ತಿನಲ್ಲಿ ಆನುಮಾನಿಕಮಪಿ = 'ಮಹತಃ ಪರಮವ್ಯಕ್ತಮ್ ಅವ್ಯಕ್ತಾತ್ ಪುರುಷಃ ಪರಃ' ಎಂಬುದಾಗಿ ಅವ್ಯಕ್ತ ಶಬ್ದದಿಂದ ಪ್ರಧಾನವೇ ಪ್ರತಿಪಾದ್ಯವಾಗಿದೆ. ಇತಿ ಚೇನ್ನ = ಇದು ತಪ್ಪು. 'ಶರೀರರೂಪಕವಿನ್ಯಸ್ತಸ್ಯ ಗೃಹಿತೇಃ' = ಶರೀರದಂತಿರುವ ಪ್ರಕೃತಿಯಲ್ಲಿ ನೆಲೆಸಿರುವ ವಿಷ್ಣುವೇ ಅವ್ಯಕ್ತಶಬ್ದದಿಂದ ತಿಳಿಯಲು ಯೋಗ್ಯನಾಗಿದ್ದಾನೆ. ದರ್ಶಯತಿ = ಪ್ರಕೃತ್ಯಾದಿಗಳಿಗೆ ಪಾರತಂತ್ರ್ಯವು ಪರಮಾತ್ಮನಿಗೆ ಸ್ವಾತಂತ್ರ್ಯವು ಮತ್ತು ಪ್ರಧಾನಾದಿಗಳಲ್ಲಿ ಪರಮಾತ್ಮನು ಇದ್ದಾನೆಂಬುದು 'ತುಚ್ಛ್ಯೇನಾಭ್ವಪಿಹಿತಂ ಯದಾಸೀತ್' ಇತ್ಯಾದಿ ಶ್ರುತಿ-ಸ್ಮೃತಿಗಳಲ್ಲಿ ಯುಕ್ತವಾಗಿದೆ.

**प्रकाशः – अत्र ब्रह्मगृहीतेरित्येव वाच्ये शरीरेत्याद्युक्तिः किमर्थेत्यतश्शरीरेत्यादि-सूत्रांशभाष्यटीकां ''यथा शरीरं पुरुषतन्त्रमित्यादिकां विवृण्वंस्तदुक्तेः फलमाह – ब्रह्मण इति ।।**

ಸೂತ್ರದಲ್ಲಿ 'ಬ್ರಹ್ಮಗೃಹೀತೇಃ' ಎಂದಷ್ಟೇ ಹೇಳಬಹುದಿತ್ತು. ಅದನ್ನು ಬಿಟ್ಟು 'ಶರೀರರೂಪಕವಿನ್ಯಸ್ತಗೃಹಿತೇಃ' ಎಂದೇಕೆ ಹೇಳಿದ್ದಾರೆ ? ಎಂಬ ಪ್ರಶ್ನೆಗೆ ಈ ಸೂತ್ರಾಂಶಕ್ಕೆ ವ್ಯಾಖ್ಯಾನ ಮಾಡಲು ಹೊರಟಿರುವ ಭಾಷ್ಯ ಹಾಗೂ ಟೀಕೆಗಳಲ್ಲಿ 'ಯಥಾ ಶರೀರಂ ಪುರುಷತಂತ್ರಮ್' ಇತ್ಯಾದಿಯಾಗಿ ಹೇಳಿದ್ದಾರೆ. ಅದನ್ನೇ ವ್ಯಾಖ್ಯಾನ ಮಾಡಲು ಗ್ರಂಥಕಾರರು 'ಬ್ರಹ್ಮಣಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಮತ್ತು 'ಯಥಾಶರೀರಂ' ಇತ್ಯಾದಿಯಾಗಿ ಹೇಳಿದ್ದರ ಫಲವನ್ನೂ ಕೂಡ ಇದರಿಂದ ತೋರಿಸುತ್ತಿದ್ದಾರೆ.

**प्रकाशः – टीकोक्तमर्थान्तरं सूत्रशेषस्याह – दर्शयति चेति ।।** दर्शयतिशब्दच-शब्दाभ्यामित्यर्थः । ''अव्यक्तमचलं शान्तम्'' इति श्रौतः । ''अव्यक्तोऽक्षर उच्यत'' इति स्मार्तः प्रयोगः ।।

'ದರ್ಶಯತಿ ಚ' ಎಂಬುದಕ್ಕೆ ಶ್ರುತಿ-ಸ್ಮೃತಿಗಳಲ್ಲಿ ಪರಮಾತ್ಮನೇ ಪ್ರಧಾನದಲ್ಲಿರುತ್ತಾನೆಂದು ಹೇಳಲಾಗಿದೆಯೆಂಬರ್ಥವನ್ನು ಹೇಳಿದರೂ. ಟೀಕೆಯಲ್ಲಿ ಅವ್ಯಕ್ತಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯ-ನಾಗಿದ್ದಾನೆಂದು ಶ್ರುತಿ-ಸ್ಮೃತಿಗಳಲ್ಲಿ ಹೇಳಲಾಗಿದೆ ಎಂಬ ಮತ್ತೊಂದು ಅರ್ಥವನ್ನು ಹೇಳಿದ್ದಾರೆ. ಅದನ್ನೇ ಗ್ರಂಥಕಾರರು 'ದರ್ಶಯತಿ ಚ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಗ್ರಂಥದಲ್ಲಿ 'ದರ್ಶಯತಿ ಚ ಶಬ್ದಾಭ್ಯಾಂ' ಎಂದು ಹೇಳಿದ್ದಾರೆ. 'ದರ್ಶಯತಿ' ಶಬ್ದದಿಂದ ಹಾಗೂ 'ಚ' ಶಬ್ದದಿಂದ ಎಂದು ಇದರ ಅರ್ಥ. 'ಅವ್ಯಕ್ತಮಚಲಂ ಶಾಂತಮ್' ಎಂಬಲ್ಲಿ ಅವ್ಯಕ್ತಶಬ್ದದ ಶ್ರೌತ ಪ್ರಯೋಗವು ಪರಮಾತ್ಮನಲ್ಲಿದೆ. 'ಅವ್ಯಕ್ತೋಽಕ್ಷರ ಉಚ್ಯತೇ' ಎಂಬುದಾಗಿ ಸ್ಮಾರ್ತ ಪ್ರಯೋಗವೂ ಪರಮಾತ್ಮನಲ್ಲಿದೆ ಎಂದು ತಿಳಿಯಬೇಕು.

**प्रकाशः – द्वितीय इति ।।** सूक्ष्मं तु तदर्हत्वादित्यत्र सूक्ष्ममेवाव्यक्त-शब्देनोच्यते । सूक्ष्मस्यैवाव्यक्तशब्दप्रवृत्तिनिमित्ताव्यक्तताऽर्हत्वात् । ब्रह्मणश्च मुख्यसूक्ष्मत्वादित्युक्तेरिति भावः । प्रयोगोक्तौ तस्य मुख्यतासमर्थनस्य तदानन्तर्यादिति भावः ।।

'ಸೂಕ್ಷ್ಮಂ ತು ತದರ್ಹತ್ವಾತ್' ಎಂಬುದು ಎರಡನೆಯ ಸೂತ್ರ. ಈ ಸೂತ್ರದಲ್ಲಿ ಸೂಕ್ಷ್ಮವಾದ ವಸ್ತುವೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ಸಮರ್ಥಿಸಲಾಗಿದೆ. ಏಕೆಂದರೆ ಸೂಕ್ಷ್ಮವಾದ ವಸ್ತುವಿಗೆ ಮಾತ್ರ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವದ ಅರ್ಹತೆ ಇರುತ್ತದೆ. ಆದ್ದರಿಂದ ಅವ್ಯಕ್ತಶಬ್ದದಿಂದ ಸೂಕ್ಷ್ಮವಾದ ಪದಾರ್ಥವು ಪ್ರತಿಪಾದ್ಯವಾಗುತ್ತದೆಂದು ಹೇಳಿದಂತಾಯಿತು. ಬ್ರಹ್ಮನೇ ಮುಖ್ಯವಾಗಿ ಸೂಕ್ಷ್ಮನಾದ್ದರಿಂದ ಇವನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಹಿಂದಿನ 'ದರ್ಶಯತಿ ಚ' ಎಂಬ ಸೂತ್ರದಲ್ಲಿ ಅವ್ಯಕ್ತಶಬ್ದದ ಪ್ರಯೋಗವು ಪರಮಾತ್ಮನಲ್ಲಿದೆಯೆಂದು ಸಮರ್ಥಿಸಲಾಯಿತು. ಅಂತಹ

ಪ್ರಯೋಗಕ್ಕೆ ಮುಖ್ಯತ್ವವನ್ನು ಸಮರ್ಥನೆ ಮಾಡಲು ಈ ಸೂತ್ರವು ಹೊರಟಿದೆ. ಆದ್ದರಿಂದ ಪ್ರಥಮಸೂತ್ರದ ಅನಂತರ ಈ ಸೂತ್ರವು ಹೊರಟಿದ್ದು ಸಾರ್ಥಕವಾಯಿತು.

**प्रकाशः** – **तृतीय इति** ।। तदधीनत्वादर्थवदित्यत्र । अव्यक्तादिति पञ्चम्याद्युक्तावरत्वादेर्विष्णा वभावेऽप्यन्यगतस्य तस्य तदधीनत्वादव्यक्तादित्यादि-शब्दजातं तस्मिन्नेवार्थवदित्युक्तेरिति भावः । तथाच प्रातिपदिकस्य तद्विभक्तेश्च पौर्वापर्यादस्य तृतीयतेति भावः ।

'ತದಧೀನತ್ವಾದರ್ಥವತ್' ಎಂಬುದು ಮೂರನೆಯ ಸೂತ್ರ. 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀವಿಭಕ್ತಿಯು ಅವರತ್ವವನ್ನು ಹೇಳುತ್ತಿದೆ. ಇದು ಪರಮಾತ್ಮನಲ್ಲಿ ಸರ್ವಥಾ ಬರುವುದಿಲ್ಲ. ಆದರೆ ಬೇರೆ ಕಡೆ ಇರುವ ಅವರತ್ವವು ಪರಮಾತ್ಮನ ಅಧೀನವಾದ್ದರಿಂದ 'ಅವ್ಯಕ್ತಾತ್' ಎಂಬ ಪಂಚಮ್ಯಂತವಾದ ಶಬ್ದವು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆಂದು ಈ ಸೂತ್ರದ ಅಭಿಪ್ರಾಯ.

ಎರಡನೆಯ ಸೂತ್ರದಲ್ಲಿ ಪ್ರಾತಿಪದಿಕದ ಸಮನ್ವಯವನ್ನು ಮಾಡಿ, ಮೂರನೆಯ ಈ ಸೂತ್ರದಲ್ಲಿ ಪ್ರತ್ಯಯದ ಸಮನ್ವಯವನ್ನು ಮಾಡುತ್ತಿದ್ದಾರೆ. ಪ್ರಾತಿಪದಿಕದ ಅನಂತರವೇ ವಿಭಕ್ತಿಯು ಬರುವುದರಿಂದ, ಎರಡನೆಯ ಸೂತ್ರದ ಅನಂತರ ಮೂರನೆಯ ಸೂತ್ರವು ಪ್ರಸಕ್ತವಾಗುತ್ತದೆ.

**प्रकाशः** – चतुर्थे ज्ञेयत्वावचनाच्चेत्यत्र । अस्पष्टत्वात् तदर्थं विवेचयति – **अस्यचेति** ।। **मुमुक्ष्विति** ।। ''अमृतस्यैष सेतुः'' इति वाक्यशेषादिति भावः ।

'ಚತುರ್ಥೇ' ಎಂದರೆ 'ಜ್ಞೇಯತ್ವಾವಚನಾಚ್ಚ' ಎಂಬ ನಾಲ್ಕನೆಯ ಸೂತ್ರದಲ್ಲಿ ಎಂದರ್ಥ. ನಾಲ್ಕನೆಯ ಸೂತ್ರಾರ್ಥವು ಅಸ್ಪಷ್ಟವಾಗಿರುವುದರಿಂದ 'ಅಸ್ಯಚ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಅಮೃತಸ್ಯೈಷ ಸೇತುಃ' ಇತ್ಯಾದಿ ವಾಕ್ಯಶೇಷದಿಂದ ಮುಮುಕ್ಷುಗಳಿಂದ ಬ್ರಹ್ಮನೇ ಜ್ಞೇಯನಾಗಿದ್ದಾನೆಂದು ಹೇಳಲಾಗಿದೆ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥನು ವಿಷ್ಣುವೇ ಆಗುತ್ತಾನೆ ಹೊರತು, ಪ್ರಧಾನಾದಿಗಳಲ್ಲ.

**प्रकाशः** – ननु ''पुरुषः परः'' इत्युक्तपुरुषाधीनतया प्रधानादिपरत्वेऽपि मोक्षफलतोपपद्यत इत्यत आह – **प्रतिवाक्यमिति** ।। **हेत्विति** ।। प्रधानादेस्तत्तारतम्यस्य चामुख्यतोऽन्यपरत्वोपगमेन सिद्धेरिति भावः । अत्रोत्तरत्र च क्रमस्स्पष्टः ।

'ಅವ್ಯಕ್ತಾತ್ ಪುರುಷಃ ಪರಃ' ಎಂಬುದಾಗಿ ಅವ್ಯಕ್ತಕ್ಕೆ ಪುರುಷಾಧೀನತ್ವವನ್ನು ಹೇಳಲಾಗಿದೆ. ಹಾಗಾಗಿ ಅವ್ಯಕ್ತಶಬ್ದದಿಂದ ಪ್ರಕೃತಿಪ್ರತಿಪಾದ್ಯವಾದರೂ, ಪುರುಷನ ಜ್ಞಾನದಿಂದಲೇ ಮೋಕ್ಷ ದೊರೆಯುತ್ತದೆಂಬ ಫಲವೂ ಕೂಡ ಯುಕ್ತವಾಗುತ್ತದೆ. ಹೀಗಿರುವಾಗ, ಅವ್ಯಕ್ತಶಬ್ದದ ಸಮನ್ವಯವನ್ನೇಕೆ ಮಾಡಬೇಕು ? ಎಂಬ ಪ್ರಶ್ನೆಗೆ 'ಪ್ರತಿವಾಕ್ಯಮ್' ಎಂಬುದರಿಂದ ಉತ್ತರಿಸಿದ್ದಾರೆ. ಎಲ್ಲಾ ಶಬ್ದಗಳಿಂದಲೂ ವಿಷ್ಣುವೇ ಪ್ರತಿಪಾದ್ಯನಾದರೆ ತಾರತಮ್ಯವನ್ನೇ ಹೇಳಿದಂತಾಗುವುದಿಲ್ಲ? ಎಂದು ಪ್ರಶ್ನಿಸಬಾರದು. ಅಮುಖ್ಯವೃತ್ತಿಯಿಂದ

ಪ್ರಕೃತ್ಯಾದಿಪರತ್ವವನ್ನೂ ಕೂಡ ಒಪ್ಪುವುದರಿಂದ ತಾರತಮ್ಯವು ಯುಕ್ತವಾಗುತ್ತದೆ. ಭಾವರೂಪವಾದ ಹೇತುವನ್ನು ಹೇಳಿದ ನಂತರ ಅಭಾವರೂಪವಾದ ಹೇತುವನ್ನು ನಾಲ್ಕನೆಯ ಸೂತ್ರದಲ್ಲಿ ಹೇಳಿದ್ದಾರೆ. ಆದ್ದರಿಂದ ಮೂರನೆಯ ಸೂತ್ರದ ಆನಂತರ್ಯವು ಇದಕ್ಕೆ ಯುಕ್ತವಾಗುತ್ತದೆ. ಮುಂದಿನ 'ವದಿತೀತಿ ಚೇನ್ನ' ಇತ್ಯಾದಿ ಸೂತ್ರಗಳಿಗೆ ಆನಂತರ್ಯದ ಕ್ರಮವು ಸ್ಪಷ್ಟವಾಗಿದೆ. ಇಲ್ಲಿ ಹೇಳಿದ ಹೇತುವನ್ನೇ ಸಮರ್ಥನೆ ಮಾಡಲು ಐದನೆಯ ಸೂತ್ರ. ಅದರಲ್ಲಿರುವ ಹೇತುವನ್ನು ಸಮರ್ಥಿಸಲು ಆರನೆಯ ಸೂತ್ರವು ಹೊರಟಿರುತ್ತದೆ. ಇತ್ಯಾದಿಯಾಗಿ ತಿಳಿದುಕೊಳ್ಳಬೇಕು.

**प्रकाशः** – पञ्चमे वदतीति चेन्न प्राज्ञो हीत्यत्र ।। **अन्यथासिद्धीति** ।। सर्वस्मात्परस्य विष्णोर्महत्तत्वात्परत्वस्य प्रासादवासिन्यायेन सम्भवात् विष्णुनिष्ठत्वोक्तिरित्यर्थः ।

'ಪಂಚಮೇ' ಎಂದರೆ 'ವದತೀತಿ ಚೇನ್ನ ಪ್ರಾಜ್ಞೋ ಹಿ' ಎಂಬ ಸೂತ್ರದಲ್ಲಿ ಎಂದರ್ಥ. ಅನ್ಯಥಾಸಿದ್ಧಿಯನ್ನು ಹೀಗೆ ತಿಳಿಯಬೇಕು. ವಿಷ್ಣು ಎಲ್ಲಾ ಪದಾರ್ಥಗಳಿಗಿಂತಲೂ ಉತ್ತಮನಾಗಿದ್ದಾನೆಂದು ಹೇಳಿದಾಗ ಮಹತ್ತತ್ವಕ್ಕಿಂತಲೂ ಉತ್ತಮನಾಗಿದ್ದಾನೆಂಬುದು ಪ್ರಾಸಾದವಾಸಿನ್ಯಾಯದಿಂದ ಸಿದ್ಧವಾಗುತ್ತದೆ. ದೊಡ್ಡ ಮಹಡಿಯುಳ್ಳ ಮನೆಯಲ್ಲಿ ಇದ್ದಾನೆಂದು ಹೇಳಿದರೆ ಪ್ರಾಸಾದದಲ್ಲಿಯೂ ಇರುತ್ತಾನೆಂದು ಹೇಗೆ ಸಿದ್ಧವಾಗುತ್ತದೋ, ಅದರಂತೆ ಸಕಲರಿಗಿಂತಲೂ ಉತ್ತಮನಾಗಿದ್ದಾನೆಂದು ಹೇಳಿದ್ದರಿಂದಲೇ ಮಹತ್ತತ್ವಕ್ಕಿಂತಲೂ ಉತ್ತಮನಾಗಿದ್ದಾನೆಂಬುದು ಸಿದ್ಧವಾಗುತ್ತದೆ.

**प्रकाशः** – षष्ठे प्रकरणादित्यत्र "सोऽध्वनः पारमाप्नोति तद्विष्णोः परमं पदम्" इत्येतत् प्रकरणोक्तार्थोपासकस्य विष्णुपदप्राप्त्युक्त्याऽस्य प्रकरणस्य वैष्णवत्वावगमेन तद्विरोधान्न निचाय्यवाक्ये प्रधानस्य ग्रहणमिति बाधकोक्तिरित्यर्थः।

'ಷಷ್ಠೇ' ಎಂದರೆ 'ಪ್ರಕರಣಾತ್' ಎಂಬ ಸೂತ್ರದಲ್ಲಿ ಎಂದರ್ಥ. 'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' ಎಂಬುದು ವಿಷ್ಣುವಿನ ಪ್ರಕರಣವಾಗಿರುವುದರಿಂದ 'ಮಹತ್‌ಪರ' ಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ಯಾರು ವಿಷ್ಣುವನ್ನು ಉಪಾಸನೆ ಮಾಡುತ್ತಾನೋ, ಅವನಿಗೆ ವಿಷ್ಣುಪದವೇ ದೊರೆಯುತ್ತದೆಂದು ಇದರಲ್ಲಿ ಹೇಳಿದ್ದಾರೆ. ವಿಷ್ಣುಪ್ರಕರಣದಲ್ಲಿರುವ ನಿಚಾಯ್ಯವಾಕ್ಯದಲ್ಲಿ ಪ್ರಕೃತಿಯನ್ನು ಪ್ರತಿಪಾದ್ಯವೆಂದು ಸ್ವೀಕರಿಸಿದರೆ ವಿರೋಧವು ಬರುತ್ತದೆ. ಆದ್ದರಿಂದ ಆರನೆಯ ಸೂತ್ರದಲ್ಲಿ ಪ್ರಧಾನವನ್ನು ಅವ್ಯಕ್ತಶಬ್ದ ಪ್ರತಿಪಾದ್ಯವಾಗಿ ತಿಳಿದರೆ ಬಾಧಕವನ್ನು ಹೇಳಿರುತ್ತಾರೆ.

**प्रकाशः** – सप्तमे त्रयाणामेव चैवमुपन्यासः प्रश्नश्चेत्यत्र ।।

**अग्नीति** ।। स्वर्ग्याग्नीत्यर्थः । निचाय्यवाक्येऽन्यपरत्वमप्याशङ्क्याह – **नन्विति**।। **पर्यवसानवदिति** ।। तद्वाक्योक्ततारतम्यस्य "पुरुषः परः" इत्युक्तसर्वोत्तमे तात्पर्यादिति भावः।

ಪರಿಪೂರ್ಣಚಂದ್ರಿಕಾ

'ಸಪ್ತಮೇ' ಎಂದರೆ 'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಸೂತ್ರದಲ್ಲಿ ಎಂದರ್ಥ. 'ಸ್ವರ್ಗ್ಯಗ್ನಿಂ ನಚಿಕೇತಃ ಪ್ರಧಾನಂ' ಎಂಬುದನ್ನು 'ಅಗ್ನಿ' ಎಂಬುದರಿಂದ ಇಟ್ಟುಕೊಳ್ಳಬೇಕು. ನಿಚಾಯ್ಯವಾಕ್ಯದಲ್ಲಿ ಬೇರೆಯವರೇ ಪ್ರತಿಪಾದ್ಯರಾಗಿರಬಹುದಲ್ಲವೇ ? ಎಂಬ ಆಶಂಕೆಯನ್ನು 'ನನು' ಇತ್ಯಾದಿ ಗ್ರಂಥದಿಂದ ತೋರಿಸಿದ್ದಾರೆ. 'ಪರ್ಯವಸಾನವತ್' ಎಂದರೆ ಆ ವಾಕ್ಯದಲ್ಲಿ ಹೇಳಲ್ಪಟ್ಟ ತಾರತಮ್ಯವು 'ಪುರುಷಃ ಪರಃ' ಎಂಬಲ್ಲಿ ಹೇಳಿದ ಸರ್ವೋತ್ತಮನಾದ ವಿಷ್ಣುವಿನಲ್ಲೇ ತಾತ್ಪರ್ಯವುಳ್ಳದ್ದಾಗಿದೆಯೆಂದು ತಿಳಿಯಬೇಕು.




'ಆನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹಿತೇರ್ದರ್ಶಯತಿ ಚ' ಎಂಬುದು ಮೊದಲನೆಯ ಸೂತ್ರ. ಇದನ್ನು ಸೂತ್ರಕಾರರು ಮೊದಲೇ ನಿರ್ದೇಶಿಸಲು ಕಾರಣ ಹೀಗಿದೆ - 'ಅವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕೋಪನಿಷತ್ತಿನ ವಾಕ್ಯದಲ್ಲಿ ಶ್ರುತವಾದ ಅವ್ಯಕ್ತಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ. ಇಂತಹ ಬ್ರಹ್ಮನ ಸಂಪರ್ಕದಿಂದ ಪ್ರಕೃತಿಯು ಅವ್ಯಕ್ತಶಬ್ದಪ್ರತಿಪಾದ್ಯವಾಗಿದೆ ಹೊರತು, ಪ್ರಕೃತಿಯ ಸಂಬಂಧದಿಂದ ಬ್ರಹ್ಮನು ಅವ್ಯಕ್ತಶಬ್ದವಾಚ್ಯನಾಗಿಲ್ಲ. ಏಕೆಂದರೆ ಅವ್ಯಕ್ತಶಬ್ದವು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತದೆನ್ನಲು 'ಅವ್ಯಕ್ತಮಚಲಂ ಶಾಂತಮ್' ಎಂಬ ಶ್ರೌತ ಪ್ರಯೋಗವು 'ಅವ್ಯಕ್ತೋಽಕ್ಷರ ಉಚ್ಯತೇ' ಎಂಬ ಸ್ಮಾರ್ತ ಪ್ರಯೋಗವು ಆಧಾರವಾಗಿದೆ. ಹೀಗೆ ಅವ್ಯಕ್ತಶಬ್ದಪ್ರತಿಪಾದ್ಯತ್ವವನ್ನು ಮೊದಲು ಸಮನ್ವಯ ಮಾಡಲು ಈ ಸೂತ್ರವನ್ನು ಮೊದಲು ನಿರ್ದೇಶಿಸಿದ್ದಾರೆ.

'ಸೂಕ್ಷ್ಮಂ ತು ತದರ್ಹತ್ವಾತ್' ಎಂಬುದು ಎರಡನೆಯ ಸೂತ್ರ. ಪ್ರಥಮಸೂತ್ರದಲ್ಲಿ ಅವ್ಯಕ್ತಶಬ್ದದ ಪ್ರಯೋಗವು ಬ್ರಹ್ಮನಲ್ಲೇ ಇರುತ್ತದೆಂದು ಹೇಳಿದ ಮೇಲೆ ಮುಖ್ಯವೃತ್ತಿಯಿಂದಲೇ ಬ್ರಹ್ಮನಲ್ಲಿರುತ್ತದೆಂದು ಸಮರ್ಥಿಸಲು ಈ ಸೂತ್ರ ಹೊರಟಿದೆ. ಅವ್ಯಕ್ತಶಬ್ದಕ್ಕೆ ಅವ್ಯಕ್ತತ್ವ ಎಂಬುದು ಪ್ರವೃತ್ತಿನಿಮಿತ್ತವಾಗಿದೆ. ಅತಿಸೂಕ್ಷ್ಮವಾದ ವಸ್ತುವಿನಲ್ಲೇ ಈ ಪ್ರವೃತ್ತಿನಿಮಿತ್ತವು ಬರುವುದರಿಂದ ಪರಮಾತ್ಮನೇ ಮುಖ್ಯವಾಗಿ ಅವ್ಯಕ್ತಶಬ್ದ ಪ್ರತಿಪಾದ್ಯನಾಗುತ್ತಾನೆಂಬುದು ಈ ಸೂತ್ರದ ಅಭಿಪ್ರಾಯ.

'ತದಧೀನತ್ವಾತ್ ಅರ್ಥವತ್' ಎಂಬುದು ಮೂರನೆಯ ಸೂತ್ರ. ಎರಡನೆಯ ಸೂತ್ರದಲ್ಲಿ ಅವ್ಯಕ್ತ ಎಂಬ ಪ್ರಾತಿಪದಿಕ ಶಬ್ದವನ್ನು ಸಮನ್ವಯ ಮಾಡಿದ ಮೇಲೆ 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯಿಂದ ತಿಳಿಯುವ ಅರ್ಥವನ್ನೂ ಕೂಡ ಈ ಸೂತ್ರದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಪ್ರಾತಿಪದಿಕ ಸಮನ್ವಯದ ಅನಂತರ ವಿಭಕ್ತಿಯ ಸಮನ್ವಯ ಮಾಡುವುದು ಸಂಗತವಾಗುವ ಕಾರಣ, ಎರಡನೆಯ ಸೂತ್ರದ ಅನಂತರ ಈ ಸೂತ್ರ ಹೊರಟಿದ್ದು ಅರ್ಥಪೂರ್ಣವಾಗಿದೆ. 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯು ಅವರತ್ವವನ್ನು ಹೇಳುತ್ತದೆ. ಪರಮಾತ್ಮನಲ್ಲಿ ಅವರತ್ವ ಇಲ್ಲದಿದ್ದರೂ ಇತರ ಪದಾರ್ಥಗಳಲ್ಲಿರುವ ಅವರತ್ವಕ್ಕೆ ಸ್ವಾಮಿಯಾದ್ದರಿಂದ ಇವನೂ ಕೂಡ ಅವರನೆನಿಸುತ್ತಾನೆಂಬುದು ಈ ಸೂತ್ರದ ಹೃದಯ.

'ಜ್ಞೇಯತ್ವಾವಚನಾಚ್ಚ' ಎಂಬುದು ನಾಲ್ಕನೆಯ ಸೂತ್ರ. ಭಾವರೂಪವಾದ ಅಂತರಂಗವಾದ ಹೇತುಗಳನ್ನು ಮೊದಲಿನ ಮೂರು ಸೂತ್ರಗಳಲ್ಲಿ ಪ್ರತಿಪಾದನೆ ಮಾಡಿ, ಬಹಿರಂಗವಾದ ಅಭಾವರೂಪವಾದ ಜ್ಞೇಯತ್ವಾವಚನವೆಂಬ

ಹೇತುವನ್ನು ಈ ಸೂತ್ರದಲ್ಲಿ ಹೇಳುತ್ತಿದ್ದಾರೆ. ಆದ್ದರಿಂದ ನಾಲ್ಕನೆಯ ಸ್ಥಾನವು ಯುಕ್ತವಾಗಿದೆ. 'ತಮೇವೈಕಂ ಜಾನಥ' ಎಂಬ ಶ್ರುತಿಯಲ್ಲಿ ಮುಮುಕ್ಷುಗಳಿಂದ ಪರಮಾತ್ಮನೇ ಜ್ಞೇಯನಾಗಿದ್ದಾನೆ. ಇತರ ಯಾವುದೇ ಪದಾರ್ಥಗಳೂ ಕೂಡ ಜ್ಞೇಯವಲ್ಲವೆಂದು ಹೇಳಿದ್ದರಿಂದ ಮೋಕ್ಷಫಲಕವಾದ ವೇದವಾಕ್ಯಗಳೆಲ್ಲವೂ ಬ್ರಹ್ಮಪರವಾಗಿವೆಯೆಂದು ಸಿದ್ಧವಾಗುತ್ತದೆ. ಆದ್ದರಿಂದ ಕಾಠಕೋಪನಿಷತ್ತಿನ ಸಂಪೂರ್ಣಪ್ರಕರಣವು ಬ್ರಹ್ಮನನ್ನು ಪ್ರತಿಪಾದನೆ ಮಾಡಬೇಕು. ಮಧ್ಯದಲ್ಲಿರುವ ಅವ್ಯಕ್ತ ಮೊದಲಾದ ಶಬ್ದಗಳೂ ಕೂಡ 'ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಎಂಬ ಶ್ರುತಿಯ ಆಧಾರದಂತೆ ಬ್ರಹ್ಮನನ್ನೇ ಪ್ರತಿಪಾದನೆ ಮಾಡಬೇಕು ಎಂಬುದೇ ಈ ಸೂತ್ರದ ಅಭಿಪ್ರಾಯ.

'ವದತೀತಿ ಚೇನ್ನ ಪ್ರಾಜ್ಞೋ ಹಿ' ಎಂಬುದು ಐದನೆಯ ಸೂತ್ರ. ಹಿಂದಿನ ನಾಲ್ಕನೆಯ ಸೂತ್ರದಲ್ಲಿ ಜ್ಞೇಯತ್ವದ ಅವಚನವನ್ನು ಹೇಳಿದ್ದು ಅಸಿದ್ಧವಾಗಿದೆ. ಏಕೆಂದರೆ 'ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ಶ್ರುತಿಯಲ್ಲಿ ಮಹತ್‌ಪರತ್ವವೆಂಬ ಲಿಂಗವುಳ್ಳ ಪ್ರಧಾನದಲ್ಲೇ ಮುಮುಕ್ಷು ಜ್ಞೇಯತ್ವವನ್ನು ಹೇಳಿರುತ್ತಾರೆ. ಆದ್ದರಿಂದ ಹಿಂದಿನ ಸೂತ್ರದಲ್ಲಿ ಹೇಳಿದ ಜ್ಞೇಯತ್ವದ ಅವಚನವು ಅಸಿದ್ಧವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಎಲ್ಲಾ ತತ್ವಗಳಿಗಿಂತಲೂ ಉತ್ತಮನಾದ ಬ್ರಹ್ಮನು ಮಹತ್ತತ್ವಕ್ಕಿಂತಲೂ ಉತ್ತಮನೆಂದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ 'ನಿಚಾಯ್ಯ ತಂ' ಎಂಬ ವಾಕ್ಯದಿಂದಲೂ ವಿಷ್ಣುವೇ ಜ್ಞೇಯನೆಂದು ಕರೆಸಿಕೊಳ್ಳುತ್ತಾನೆ. ಹಾಗಾಗಿ, ಹೇತ್ವಸಿದ್ಧಿದೋಷಕ್ಕೆ ಅವಕಾಶವಿರುವುದಿಲ್ಲ.

'ಪ್ರಕರಣಾತ್' ಎಂಬುದು ಆರನೆಯ ಸೂತ್ರ. ನಿಚಾಯ್ಯ ವಾಕ್ಯದಲ್ಲಿ ಪ್ರಧಾನವೇ ಪ್ರತಿಪಾದ್ಯವಾದಲ್ಲಿ, ಬಾಧಕವನ್ನು ಹೇಳಲಾಗಿದೆ. ಏಕೆಂದರೆ 'ಸೋಽಧ್ವನಃ ಪಾರಮಾಪ್ನೋತಿ' ಎಂಬುದು ವಿಷ್ಣುವಿನ ಪ್ರಕರಣವಾದ್ದರಿಂದ ವಿಷ್ಣುವೇ ಇಲ್ಲಿ ಪ್ರತಿಪಾದ್ಯನಾಗಿದ್ದಾನೆ.

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬುದು ಏಳನೆಯ ಸೂತ್ರ. ಉಪನಿಷತ್ತಿನಲ್ಲಿ ಮುಮುಕ್ಷುಗಳಿಂದ ಜ್ಞೇಯವೆಂದು ಹೇಳಲ್ಪಟ್ಟದ್ದು ಪ್ರಧಾನವೇ ಆಗಬಹುದಿಲ್ಲವೇ? ಎಂಬ ಪ್ರಶ್ನೆಗೆ ಬಾಧಕವನ್ನು ಈ ಸೂತ್ರದಲ್ಲಿ ಹೇಳಲಾಗಿದೆ. ನಚಿಕೇತನು ಪಿತೃಸೌಮನಸ್ಯ, ಅಗ್ನಿ, ಬ್ರಹ್ಮ ಮೂವರ ಬಗ್ಗೆ ಮಾತ್ರ ಪ್ರಶ್ನಿಸಿರುತ್ತಾನೆ. ಆದಕ್ಕನುಸಾರಿಯಾಗಿ ಯಮದೇವರು ಬ್ರಹ್ಮನ ಬಗ್ಗೆ ಉತ್ತರಿಸುತ್ತಾರೆ ಹೊರತು, ಪ್ರಕೃತಿಯ ಬಗ್ಗೆ ಉತ್ತರಿಸುವುದು ಸೂಕ್ತವಾಗುವುದಿಲ್ಲ. ಆದ್ದರಿಂದ 'ಪ್ರಕರಣಾತ್' ಎಂಬ ಸೂತ್ರದ ಮೇಲೆ ಬರುವಂತಹ ಆಕ್ಷೇಪಕ್ಕೆ ಉತ್ತರಿಸಲು ಏಳನೆಯ ಸೂತ್ರ ಹೊರಟಿದ್ದರಿಂದ ಏಳನೆಯ ಸ್ಥಾನವು ಇದಕ್ಕೆ ಅತ್ಯಂತ ಸಮಂಜಸವಾಗಿದೆ.

////////////////////////////////////////////////////////////

## ಸ್ವಪಕ್ಷಬಾಧಕದ ಉದ್ಧಾರಕ್ಕಾಗಿ ಕೊನೆಯ ಎರಡು ಸೂತ್ರಗಳು

### तात्पर्यचन्द्रिका

**एवं चतुर्थोक्तस्वपक्षसाधके त्रिभिः स्थापितेऽष्टमे प्रयोगप्राचुर्याभावरूप-स्वपक्षबाधकोद्धाराय तत्प्राचुर्याभावेऽपि प्रवृत्तिनिमित्तातिशयेन मुख्यत्वे महच्छब्ददृशान्तोक्तिः ।**

ಪರಿಪೂರ್ಣಚಂದ್ರಿಕಾ

ಅನುವಾದ - 'ಮಹದ್ವಚ್ಚ' ಎಂಬುದು ಎಂಟನೆಯ ಸೂತ್ರ. 'ಜ್ಞೇಯತ್ವಾವಚನಾಚ್ಚ' ಎಂಬ ನಾಲ್ಕನೆಯ ಸೂತ್ರದಲ್ಲಿ ಹೇಳಿದ ವಿಷಯದಲ್ಲಿ ಸ್ವಪಕ್ಷಸಾಧಕ ಪ್ರಮಾಣಗಳನ್ನು ಹಿಂದಿನ ಮೂರು ಸೂತ್ರಗಳಲ್ಲಿ ಸ್ಥಾಪನೆ ಮಾಡಿದ್ದಾಯಿತು. ಪ್ರಕೃತ ಈ ಎಂಟನೆಯ ಸೂತ್ರದಲ್ಲಿ ಶಬ್ದಗಳ ಪ್ರಯೋಗಪ್ರಾಚುರ್ಯವು ಶ್ರೀಹರಿಯಲ್ಲಿಲ್ಲದ ಕಾರಣ 'ದುಃಖೀ' ಬದ್ಧಃ' ಇತ್ಯಾದಿ ಶಬ್ದಗಳಿಂದ ಪ್ರತಿಪಾದ್ಯನಾಗಲಾರನು ಎಂಬ ಸ್ವಪಕ್ಷದಲ್ಲಿ ಬರುವಂತಹ ಬಾಧಕವನ್ನು ಪರಿಹರಿಸುತ್ತಿದ್ದಾರೆ. ಪ್ರಯೋಗಪ್ರಾಚುರ್ಯವಿಲ್ಲದಿದ್ದರೂ ಅತಿಶಯವಾದ ಪ್ರವೃತ್ತಿನಿಮಿತ್ತವಿದ್ದರೆ ಸಾಕು, ಆ ಶಬ್ದಗಳು ಶ್ರೀಹರಿಯಲ್ಲಿ ಮುಖ್ಯವಾಗುತ್ತವೆ. ಉದಾಹರಣೆ - ಮಹತ್‌ಶಬ್ದವು ಮಹತ್ತತ್ತ್ವದಲ್ಲೇ ಪ್ರಸಿದ್ಧವಾಗಿದೆ. ಆದರೂ 'ಮಹಾಂತಂ ವಿಭುಮಾತ್ಮಾನಮ್' ಇತ್ಯಾದಿಯಾಗಿ ಶ್ರೀಹರಿಯಲ್ಲಿಯೂ ಕೂಡ ಮುಖ್ಯವಾಗಿ ಪ್ರಯೋಗಿಸಲ್ಪಟ್ಟಿವೆ. ಅತಿಶಯವಾಗಿ ಪ್ರವೃತ್ತಿನಿಮಿತ್ತವಿರುವುದೇ ಈ ಪ್ರಯೋಗಕ್ಕೆ ಹೇಗೆ ಕಾರಣವಾಗಿದೆಯೋ, ಅದರಂತೆ ಅವ್ಯಕ್ತಾದಿಶಬ್ದಗಳ ಅತಿಶಯವಾದ ಪ್ರವೃತ್ತಿನಿಮಿತ್ತದಿಂದ ಶ್ರೀಹರಿಯು ಮುಖ್ಯವಾಗಿ ಪ್ರತಿಪಾದ್ಯನಾಗಬಹುದು.

**नवमे महच्छब्दस्य विष्णौ मुख्यत्वमद्याप्यसिद्धमिति मन्वानं प्रत्यनुशासनरूपश्रुतिसद्भावेन मुख्यत्वे चमसशब्ददृष्टान्तोक्तिरिति ।**

'ಚಮಸವದವಿಶೇಷಾತ್' ಎಂಬುದು ಒಂಭತ್ತನೆಯ ಸೂತ್ರ. ಹಿಂದಿನ ಸೂತ್ರದಲ್ಲಿ 'ಮಹತ್' ಶಬ್ದದ ದೃಷ್ಟಾಂತವೇ ಅಸಿದ್ಧವಾಗಿದೆಯೆಂಬ ಆಕ್ಷೇಪಕ್ಕೆ ಇದು ಉತ್ತರಿಸುತ್ತಿದೆ. 'ಮಹತ್' ಶಬ್ದವು ವಿಷ್ಣುವಿನಲ್ಲಿ ಮುಖ್ಯವಾಗಿದೆಯೆಂದು ಇದುವರೆಗೂ ಸಿದ್ಧವಾಗಿಯೇ ಇಲ್ಲ. ಹೀಗಿರುವಾಗ ಅದನ್ನು ದೃಷ್ಟಾಂತವನ್ನಾಗಿ ಹೇಗೆ ಪರಿಗಣಿಸುತ್ತೀರಿ ? ಎಂದರೆ 'ಚಮಸ' ಶಬ್ದದ ದೃಷ್ಟಾಂತವನ್ನು ಈ ಸೂತ್ರದಲ್ಲಿ ನೀಡುತ್ತಿದ್ದಾರೆ. 'ಚಮಸ' ಶಬ್ದವನ್ನು ಲೋಕದಲ್ಲಿ ಯಾರೂ ಸಹ ಶಿರಸ್ಸಿನಲ್ಲಿ ಪ್ರಯೋಗಿಸುವುದಿಲ್ಲ. ಆದರೆ 'ಅರ್ವಾಗ್ಬಿಲಃ ಚಮಸಃ' ಇತ್ಯಾದಿಯಾದ ಅನುಶಾಸನವೆಂಬ ಶ್ರುತಿಯು ಶಿರಸ್ಸಿನಲ್ಲಿ 'ಚಮಸ' ಶಬ್ದವನ್ನು ಪ್ರಯೋಗಿಸುತ್ತಿದೆ. ಅನುಶಾಸನವಿದ್ದಾಗ ಹೀಗೆ ಮುಖ್ಯವಾಗಿ ಪ್ರಯೋಗಿಸಬಹುದೆಂದು ಸಿದ್ಧವಾದಮೇಲೆ ಅವ್ಯಕ್ತಾದಿಶಬ್ದಗಳೂ ವಿಷ್ಣುವಾಚಕವೆಂಬ ವಿಷಯದಲ್ಲಿಯೂ ಅನುಶಾಸನವಿರುವ ಕಾರಣ ಈ ಎಲ್ಲಾ ಶಬ್ದಗಳಿಂದ ಶ್ರೀಹರಿಯೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧವಾಗುತ್ತದೆ.

**प्रकाशः –**

**अष्टमे** महद्वच्चेत्यत्र ।। **महच्छब्देति** ।। महत्त्वरूपप्रवृत्तिनिमित्तातिशयेन ''महान्तं विभुमात्मानम्'' इत्यत्र यथा महच्छब्दो विष्णौ मुख्यस्तथेहापीति महच्छब्ददृष्टान्तोक्तिरित्यर्थः ।

ಅನುವಾದ - ಇಲ್ಲಿಯ ತನಕ ಏಳು ಸೂತ್ರಗಳ ತಾರತಮ್ಯವು ಅತ್ಯಂತ ಸಮಂಜಸವಾಗಿದೆಯೆಂದು ಸಮರ್ಥಿಸಿದ್ದಾಯಿತು. ನಾಲ್ಕನೆಯ ಸೂತ್ರದಲ್ಲಿ ಸ್ವಪಕ್ಷಸಾಧಕಪ್ರಮಾಣವನ್ನು ಹೇಳಿದ್ದರೂ ಅದನ್ನೇ ಮುಂದಿನ ಮೂರು ಸೂತ್ರಗಳಲ್ಲಿ ಪ್ರಸ್ತಾಪಿಸಿದರು. ಪ್ರಕೃತ ಸ್ವಪಕ್ಷಬಾಧಕಪ್ರಮಾಣವನ್ನು ಎಂಟನೆಯ ಸೂತ್ರದಲ್ಲಿ ನಿರಾಕರಿಸುತ್ತಿದ್ದಾರೆ. 'ಅಷ್ಟಮೇ' ಎಂದರೆ 'ಮಹದ್ವಚ್ಚ' ಎಂಬ ಎಂಟನೆಯ ಸೂತ್ರದಲ್ಲಿ ಎಂದರ್ಥ.

'ಮಹತ್' ಶಬ್ದ ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಮಹಚ್ಛಬ್ದವನ್ನು ಹೆಚ್ಚಾಗಿ ಮಹತ್ತತ್ವದಲ್ಲಿ ಪ್ರಯೋಗಿಸುತ್ತಾರೆ. ಆದರೆ 'ಮಹತ್ವ' ಎಂಬ ಪ್ರವೃತ್ತಿನಿಮಿತ್ತದ ಅತಿಶಯವು ಮಹಾವಿಷ್ಣುವಿನಲ್ಲಿರುವ ಕಾರಣ. 'ಮಂಹಾತಂ ವಿಭುಮಾತ್ಮಾನಮ್' ಇತ್ಯಾದಿ ಸ್ಥಳಗಳಲ್ಲಿ ಮಹಾವಿಷ್ಣುವಿನಲ್ಲಿ 'ಮಹತ್' ಶಬ್ದವನ್ನು ಮುಖ್ಯವಾಗಿ ಪ್ರಯೋಗಿಸುವುದು ಕಂಡಿದೆ. ಅದರಂತೆ ಪ್ರಕೃತದಲ್ಲಿಯೂ ಕೂಡ ಅವ್ಯಕ್ತಾದಿಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

**प्रकाशः – नवमे** चमसवदविशेषादित्यत्र । यथा चमसशब्दो यज्ञपात्रे प्रसिद्धोऽपि ''अर्वाग्बिलश्चमस ऊर्ध्वबुध्नः'' इति श्रुतिबलेन शिरोवाचकः तथेहाप्यव्यक्तादिशब्दानां प्रधानादौ प्रसिद्धानामपि ''नामानि सर्वाणि'' इति श्रुतिबलेन विष्णुवाचित्वं निश्चीयते ।

'ನವಮೇ' ಎಂದರೆ 'ಚಮಸವದವಿಶೇಷಾತ್' ಎಂಬ ಒಂಭತ್ತನೆಯ ಸೂತ್ರದಲ್ಲಿ ಎಂದರ್ಥ. ಯಾವರೀತಿಯಾಗಿ 'ಚಮಸ' ಶಬ್ದವು ಯಜ್ಞಪಾತ್ರದಲ್ಲೇ ಪ್ರಸಿದ್ಧವಾಗಿದೆ ಹೊರತು, 'ಶಿರಸ್ಸು' ಎಂಬರ್ಥದಲ್ಲಿ ಪ್ರಸಿದ್ಧವಾಗಿಲ್ಲ. ಆದರೆ 'ಅರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಎಂಬ ಶ್ರುತಿಯಲ್ಲಿ 'ಚಮಸ' ಶಬ್ದವನ್ನು ಶಿರಸ್ಸಿನಲ್ಲಿ ಪ್ರಯೋಗಿಸಲಾಗಿದೆ. ಹೀಗೆ ಅನುಶಾಸನದಿಂದ 'ಚಮಸ' ಶಬ್ದವು ಶಿರಸ್ಸನ್ನು ಹೇಳುವಂತೆ ಪ್ರಕೃತ ಅವ್ಯಕ್ತಾದಿಶಬ್ದಗಳೂ ಕೂಡ ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ 'ನಾಮಾನಿ ಸರ್ವಾಣಿ' ಎಂಬ ಅನುಶಾಸನದ ಬಲದಿಂದ ವಿಷ್ಣುವನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆಂದು ನಿಶ್ಚಯಿಸುತ್ತೇವೆ.

**प्रकाशः –** नामानीति श्रुतेरर्वाग्बिल इति श्रुतेरिवानुशासनरूपत्वाविशेषादित्युक्तेरिति भावः ।

ಯಾವರೀತಿಯಾಗಿ 'ಅರ್ವಾಗ್ಬಿಲಶ್ಚಮಸಃ' ಎಂಬ ಶ್ರುತಿಯು ಅನುಶಾಸನರೂಪವಾಗಿದೆಯೋ, ಅದರಂತೆ 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯೂ ಕೂಡ ಅನುಶಾಸನವೇ ಆಗಿವೆ. ಎರಡೂ ಶ್ರುತಿಗಳು ಅನುಶಾಸನವಾಗಿರುವಾಗ 'ಚಮಸ' ಶಬ್ದವು ಶಿರಸ್ಸನ್ನು ಮುಖ್ಯವಾಗಿ ಹೇಳುವಂತೆ ಈ ಶ್ರುತಿಯೂ ಕೂಡ ಅವ್ಯಕ್ತಾದಿಶಬ್ದಗಳಿಂದ ವಿಷ್ಣುವನ್ನೇ ಮುಖ್ಯವಾಗಿ ಹೇಳುತ್ತದೆ. ಹೀಗೆ ಒಂಭತ್ತು ಸೂತ್ರಗಳಿಂದ ಅವ್ಯಕ್ತಾದಿ ಶಬ್ದಗಳಿಂದ ಮುಖ್ಯವಾಗಿ ಮಹಾವಿಷ್ಣುವೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ.

**प्रकाशः –** यदत्र केनचिदुक्तं पाराशर्यविजये । आद्ये दर्शयतीत्येव सामञ्जस्ये पूर्वखण्डो व्यर्थः ।

ಪರಿಪೂರ್ಣಚಂದ್ರಿಕಾ

ರಾಮಾನುಜಪಂಥದವರು ನಾವು ಹೇಳಿದ ಸೂತ್ರಾರ್ಥಗಳನ್ನು 'ಪಾರಾಶರ್ಯವಿಜಯ' ಎಂಬ ಗ್ರಂಥದಲ್ಲಿ ನಿರಾಕರಿಸಲು ಪ್ರಯತ್ನಪಟ್ಟಿದ್ದಾರೆ. ಪಾರಾಶರ್ಯವಿಜಯದಲ್ಲಿ ಅವರು ಹೇಳಿದ ವಿಷಯಗಳು ಹೀಗಿವೆ -

'ಆನುಮಾನಿಕಂ' ಇತ್ಯಾದಿ ಪ್ರಥಮ ಸೂತ್ರದಲ್ಲಿ 'ದರ್ಶಯತಿ' ಎಂದಷ್ಟೇ ಹೇಳಿದರೆ ಸಾಕು. 'ಶರೀರರೂಪಕವಿನ್ಯಸ್ತ ಗೃಹೀತೇಃ' ಎಂದು ಹೇಳುವುದೇ ಬೇಡ. 'ದರ್ಶಯತಿ' ಎಂಬ ಒಂದೇ ಪದದಿಂದಲೇ ಅವ್ಯಕ್ತಾದಿ ಶಬ್ದಗಳು ಪರಮಾತ್ಮನಲ್ಲಿ ಪ್ರಯೋಗಿಸಲು ಶ್ರುತಿ-ಸ್ಮೃತಿಗಳ ಆಧಾರವನ್ನು ಹೇಳುತ್ತದೆ. ಹೀಗಿರುವಾಗ ಪುನಃ 'ಶರೀರರೂಪಕ' ಇತ್ಯಾದಿ ವಿಶೇಷಣವನ್ನು ಹೇಳಿದ್ದು ವ್ಯರ್ಥವಾಗಿದೆ.

**प्रकाशः – भगवद्वाचकत्वसमर्थनादेव प्रकृतौ प्रयोगस्यानेक शक्तिकल्पनागौरव-भयेन लाक्षणिकताया ज्ञातुं शक्यत्वात् ।**

ಇನ್ನು ಅವ್ಯಕ್ತಶಬ್ದವು ಭಗವದ್ವಾಚಕವಾಗಿದೆ. ಭಗವಂತನ ಸಂಬಂಧದಿಂದ ಪ್ರಕೃತಿಯು ಅವ್ಯಕ್ತಶಬ್ದವಾಚ್ಯವಾಗುತ್ತದೆಂದು ತಿಳಿಸಲು 'ಶರೀರರೂಪಕ' ಇತ್ಯಾದಿ ವಿಶೇಷಣಗಳು ಸಾರ್ಥಕವೆನ್ನಬೇಕು. ಆದರೆ ಅವ್ಯಕ್ತಶಬ್ದವು 'ದರ್ಶಯತಿ' ಎಂಬ ಪದದಿಂದಲೇ ಭಗದ್ವಾಚಕವೆಂದು ತಿಳಿಯುತ್ತದೆ. ಹೀಗೆ ಭಗದ್ವಾಚಕತ್ವದ ಸಮರ್ಥನೆ ಮಾಡುವುದರಿಂದಲೇ ಪ್ರಕೃತಿಯಲ್ಲಿ ಲಾಕ್ಷಣಿಕವೆಂದು ಸ್ಪಷ್ಟವಾಗುತ್ತದೆ. ಏಕೆಂದರೆ ಅವ್ಯಕ್ತಶಬ್ದದಿಂದ ಪರಮಾತ್ಮನೇ ಶಕ್ತಿಯಿಂದ ಪ್ರತಿಪಾದ್ಯನಾದ ಮೇಲೆ ಪುನಃ ಪ್ರಕೃತಿಯೂ ಶಕ್ತಿಯಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ಅನೇಕ ಶಕ್ತಿಯನ್ನು ಕಲ್ಪನೆ ಮಾಡಿದಂತಾಗುತ್ತದೆ. ಹೀಗೆ ಕಲ್ಪನಾಗೌರವ ಬರುವ ಕಾರಣ ಭಗವಂತನೇ ಶಕ್ತಿವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಪ್ರಕೃತಿಯು ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯವಾಗಿದೆಯೆಂದು ತಿಳಿಯುತ್ತದೆ. ಆದ್ದರಿಂದ 'ದರ್ಶಯತಿ' ಎಂದಷ್ಟೇ ಹೇಳಿದರೆ ಸಾಕು.

**प्रकाशः – नच सम्बन्धबोधनार्थः पूर्वखण्डः । ब्रह्मप्रपञ्चसम्बन्धस्य सुप्रसिद्धत्वात् ।**

ಇನ್ನು ಬ್ರಹ್ಮನಿಗೂ ಪ್ರಕೃತಿಗೂ ಸಂಬಂಧವನ್ನು ತಿಳಿಸಿದ್ದರೆ ಮಾತ್ರ ಲಕ್ಷಣಾ ಮಾಡುವುದು ಸಾಧ್ಯ. ಸಂಬಂಧವನ್ನು ತಿಳಿಸುವುದಕ್ಕಾಗಿ 'ಶರೀರರೂಪಕ' ಇತ್ಯಾದಿ ವಿಶೇಷಣಗಳು ಸಾರ್ಥಕವಾಗಿವೆಯೆಂದು ಹೇಳಬೇಕು. ಆದರೆ ಬ್ರಹ್ಮನಿಗೂ ಈ ಪ್ರಂಪಚಕ್ಕೂ ಸಂಬಂಧವು ಸುಪ್ರಸಿದ್ಧವಾದ್ದರಿಂದ ಅದನ್ನು ತಿಳಿಸುವ ಅವಶ್ಯಕತೆಯಿರುವುದಿಲ್ಲ.

**प्रकाशः – शरीररूपकविन्यस्तेत्यस्य शरीररूपकतया शरीरसदृशतया विन्यस्तस्य गृहीतेरित्यर्थप्रतीत्या शरीरे मुख्यस्य शरीरशब्दस्य ब्रह्मणि गौणत्वे निमित्तोक्तिपरत्वस्यैव प्राप्तेश्च ।**

ಆದ್ದರಿಂದ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬುದಕ್ಕೆ ಹೀಗೆ ವ್ಯಾಖ್ಯಾನಿಸಬೇಕು - 'ಶರೀರರೂಪಕತಯಾ' = ಶರೀರ ಸದೃಶನಾಗಿ, ವಿನ್ಯಸ್ತಸ್ಯ = ಇರುವವನೆಂದು, ಗೃಹಿತೇಃ = ತಿಳಿಯಲ್ಪಡುವನಾದ್ದರಿಂದ ಎಂದು. ಶರೀರದಲ್ಲಿ ಶರೀರಶಬ್ದವು ಮುಖ್ಯವಾಗಿರುತ್ತದೆ. ಆದರೆ ಬ್ರಹ್ಮನಲ್ಲಿ ಈ ಶರೀರಶಬ್ದಕ್ಕೆ ಗೌಣವಾದ ಅರ್ಥವನ್ನು ಹೇಳಬೇಕು. ಆದ್ದರಿಂದ ಹಿಂದೆ ಪ್ರಸಕ್ತವಾದ ಅವ್ಯಕ್ತಶಬ್ದದಿಂದ ಶರೀರವು ಪ್ರತಿಪಾದ್ಯವಾಗುತ್ತದೆ. ಶರೀರವೆಂದರೆ ಬ್ರಹ್ಮನೆಂದು ಗೌಣಾರ್ಥ ಮಾಡಬೇಕು. ಈ ವಿಷಯವನ್ನು ತಿಳಿಸುವುದಕ್ಕಾಗಿ 'ಶರೀರರೂಪಕ' ಇತ್ಯಾದಿ ವಿಶೇಷಣವು ಸಾರ್ಥಕವಾಗಿದೆಯೆಂದೇ ವ್ಯಾಖ್ಯಾನ ಮಾಡಬೇಕು.

**प्रकाशः** – कप्रत्ययत्वे च तस्य वैयर्थ्यात् । शरीरस्य कुत्सितत्वोक्त्या हरेरशरीरत्वोक्त्यर्थत्वे च प्रकृताऽनुपयोगः ।

ನಾವು ವ್ಯಾಖ್ಯಾನ ಮಾಡುವಾಗ ರೂಪಕಶಬ್ದಕ್ಕೆ 'ಸದೃಶ' ಎಂಬರ್ಥವನ್ನು ಹೇಳಿದ್ದೇವೆ. ಅದ್ವೈತಿಗಳು 'ಶರೀರರೂಪ' ಎಂದು ಪದಚ್ಛೇದ ಮಾಡಿ ಕುತ್ಸಿತಾರ್ಥದಲ್ಲಿ 'ಕ' ಪ್ರತ್ಯಯವನ್ನು ಹೇಳಿದ್ದಾರೆ. ಇದು ತಪ್ಪು. 'ಶರೀರರೂಪಕ' ಎಂಬಲ್ಲಿ 'ಕ' ಪ್ರತ್ಯಯವಿದೆಯೆಂದು ವಿವಕ್ಷಿಸುವುದಾದರೆ ವ್ಯರ್ಥವಾಗುತ್ತದೆ. ಏಕೆಂದರೆ ಪ್ರಕೃತಿಯು ಬ್ರಹ್ಮನ ಶರೀರದಂತಿದೆ. ಇದು ಕುತ್ಸಿತವಾದದ್ದು ಎಂದು ಹೇಳಿದಾಗ ಶ್ರೀಹರಿಯು ಅಶರೀರನೆಂದು ಹೇಳಿದಂತಾಯಿತು. ಹೀಗೆ ಹೇಳುವುದರಿಂದ ಪ್ರಕೃತಕ್ಕೆ ಏನೂ ಉಪಯೋಗವಿಲ್ಲ.

**प्रकाशः** – शरीरस्य कुत्सितत्वेन तत्र विन्यस्तत्वोक्तिरयुक्ता । वस्तुनः कुत्सितत्वे तत्रानवस्थानस्यैव प्रयोजकत्वेन विन्यस्तेत्यवस्थानोक्त्या शरीरस्याकुत्सितत्वस्यैव प्राप्तेः ।

ಮತ್ತು ಶರೀರವು ಕುತ್ಸಿತವಾದಲ್ಲಿ ಬ್ರಹ್ಮನ ವಿನ್ಯಸ್ತತ್ವವನ್ನು ಹೇಳುವುದೇ ತಪ್ಪಾಗುತ್ತದೆ. ಏಕೆಂದರೆ ಯಾವುದೇ ವಸ್ತು ಕುತ್ಸಿತವಾದಾಗ ಅದರಲ್ಲಿ ಯಾರೂ ಸಹ ಇರಲು ಸಾಧ್ಯವಿಲ್ಲ. ಆದ್ದರಿಂದ ಕುತ್ಸಿತತ್ವವು ಅನವಸ್ಥಾನಕ್ಕೆ ಪ್ರಯೋಜಕ ಹೊರತು, ಅವಸ್ಥಾನಕ್ಕೆ ಪ್ರಯೋಜಕವಾಗಿಲ್ಲ. ಆದರೆ ಸೂತ್ರದಲ್ಲಿ 'ವಿನ್ಯಸ್ತ' ಎಂಬ ಪದದಿಂದ ಅವಸ್ಥಾನವನ್ನು ಹೇಳಿದ್ದರಿಂದ, ಶರೀರವು ಅಕುತ್ಸಿತವಾಗಿದೆಯೆಂದೇ ತಿಳಿಯುತ್ತದೆ. ಆದ್ದರಿಂದ 'ಕ' ಪ್ರತ್ಯಯವು ವ್ಯರ್ಥವಾಯಿತು.

**प्रकाशः** – अत्र "जीवा एव तु दुःखिनः" इत्यादेरुदाहरणत्वे ज्ञापकाभावाच्च । आनुमानिकशब्देनाव्यक्तशब्दस्यैव तथात्वावगमात् ।

ಮತ್ತು 'ಮಹತಃ ಪರಮವ್ಯಕ್ತಮ್' ಇತ್ಯಾದಿ ವಾಕ್ಯಗಳು ಅಧಿಕರಣದ ವಿಷಯವೆಂದು ಹೇಳಿದರೆ ತಪ್ಪಿಲ್ಲ. ಆದರೆ 'ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ' ಇತ್ಯಾದಿ ವಾಕ್ಯಗಳನ್ನೂ ಕೂಡ ನೀವು ವಿಷಯವೆನ್ನುತ್ತಿದ್ದೀರಿ. ಇದಕ್ಕೆ ಯಾವುದೇ ಜ್ಞಾಪಕಗಳೂ ಕೂಡ ಇರುವುದಿಲ್ಲ. ಏಕೆಂದರೆ ಆನುಮಾನಿಕ ಶಬ್ದದಿಂದ ಸೂತ್ರದಲ್ಲಿ ಅವ್ಯಕ್ತಶಬ್ದವನ್ನಷ್ಟೇ ಸ್ವೀಕರಿಸಿದ್ದಾರೆ. 'ದುಃಖೀ' 'ಬದ್ಧಃ' ಇತ್ಯಾದಿ ಶಬ್ದಗಳು ವಿಷಯವೆಂದು ಸೂತ್ರವು ತಿಳಿಸುತ್ತಿಲ್ಲ.

**प्रकाशः** – द्वितीयसूत्रे चाव्यक्तादिशब्दप्रातिपदिकप्रवृत्तिनिमित्तस्य विष्णुनिष्ठतयोपपादने तेनैव विष्णौ मुख्यत्वसिद्ध्याऽऽद्यसूत्रे दर्शयति चेत्युक्तिर्व्यर्था ।

'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಎರಡನೆಯ ಸೂತ್ರದಲ್ಲಿ ಅವ್ಯಕ್ತಾದಿಶಬ್ದ ಪ್ರಾತಿಪದಿಕದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಕೇವಲ ವಿಷ್ಣುವಿನಲ್ಲಿರುತ್ತದೆಂದು ಉಪಪಾದನೆ ಮಾಡಿದ್ದೀರಿ. ಹಾಗಾದರೆ ಇದರಿಂದಲೇ ಅವ್ಯಕ್ತಾದಿಶಬ್ದಗಳು ವಿಷ್ಣುವಿನಲ್ಲಿ ಮುಖ್ಯವಾಗಿರುತ್ತವೆಂದು ಸಿದ್ಧವಾದ ಮೇಲೆ ಪುನಃ ಪ್ರಥಮಸೂತ್ರದಲ್ಲಿ 'ದರ್ಶಯತಿ ಚ' ಎಂದು ಪ್ರಮಾಣವನ್ನು ನೀಡಿದ್ದು ವ್ಯರ್ಥವಾಗುತ್ತದೆ.

**प्रकाशः** – तृतीयसूत्रे प्रथमान्तषष्ठ्यन्तयोरध्याहारापातः ।

ಮತ್ತು 'ತದಧೀನತ್ವಾತ್ ಅರ್ಥವತ್' ಎಂಬ ಮೂರನೆಯ ಸೂತ್ರದಲ್ಲಿ 'ಅವರತ್ವದುಃಖಬಂದಾಧೇಃ' ಎಂಬುದಾಗಿ ಷಷ್ಠ್ಯಂತ ಪದವನ್ನು ಅಧ್ಯಾಹಾರ ಮಾಡುತ್ತಿದ್ದೀರಿ. ಮತ್ತು 'ದುಃಖೀಬದ್ಧಅವರಾದಿ ಶಬ್ದಜಾತಂ' ಎಂಬುದಾಗಿ ಪ್ರಥಮಾಂತವಾದದ್ದನ್ನು ಅಧ್ಯಾಹಾರ ಮಾಡುತ್ತಿದ್ದೀರಿ. ಹೀಗೆ ಅಧ್ಯಾಹಾರ ಮಾಡುವುದೂ ಕೂಡ ತಪ್ಪಾಗುತ್ತದೆ.

**प्रकाशः** – वेतनदानादिनाऽध्यापकप्रवर्तकेऽधीतवेद इति प्रयोगापत्त्या गौरवेण च तदधीनतायाश्शब्दप्रवृत्तावनिमित्तत्वेन तदाश्रयत्वस्यैव निमित्तत्वाच्च ।

ಮತ್ತು ತದ್ಗತತ್ವವಷ್ಟೇ ಪ್ರವೃತ್ತಿನಿಮಿತ್ತವೆನ್ನಬೇಕು ಹೊರತು, ತದಧೀನತ್ವವನ್ನು ಪ್ರವೃತ್ತಿನಿಮಿತ್ತವೆನ್ನಬಾರದು. ಹಾಗಾದರೆ ಯಾರು ಸಂಬಳವನ್ನು ನೀಡಿ, ಅಧ್ಯಾಪಕರಿಂದ ವೇದಾಧ್ಯಯನವನ್ನು ಮಾಡಿಸುತ್ತಾನೋ, ಸ್ವತಃ ತಾನು ವೇದಾಧ್ಯಯನ ಮಾಡಿರುವುದಿಲ್ಲವೋ ಆ ವ್ಯಕ್ತಿಯಲ್ಲಿಯೂ 'ಅತೀತವೇದಃ' ಎಂಬ ಪ್ರಯೋಗವು ಬರಬೇಕಾಗುತ್ತದೆ. ಆದ್ದರಿಂದ ನಿಯಾಮಕತ್ವವು ಶಬ್ದದ ಪ್ರವೃತ್ತಿನಿಮಿತ್ತವೆಂದು ಹೇಳಿದರೆ ಅತಿಪ್ರಸಂಗ ಬರುತ್ತದೆ. ಮತ್ತು ತದ್ಗತತ್ವವನ್ನೇ ಪ್ರವೃತ್ತಿನಿಮಿತ್ತವೆಂದು ಹೇಳಲು ಬರುವಾಗ, ನಿಯಾಮಕತ್ವವನ್ನೂ ಕೂಡ ಪ್ರವೃತ್ತಿನಿಮಿತ್ತವೆಂದು ಹೇಳಿದರೆ ಗೌರವದೋಷವೂ ಕೂಡ ಬರುತ್ತದೆ.

**प्रकाशः** – "यदधीनो गुणो यस्य तद्गुणि" इति स्मृतिरपि तद्गुणी तदुपसर्जनकः तच्छरीरक इत्येवंपरतयोपपन्ना ।

'ಯದಧೀನೋ ಗುಣೋ ಯಸ್ಯ ತದ್ಗುಣೀ ಸೋಽಭಿಧೀಯತೇ' ಎಂಬ ಸ್ಮೃತಿಯೂ ಕೂಡ ತದಧೀನತ್ವವು ಪ್ರವೃತ್ತಿನಿಮಿತ್ತವೆನ್ನಲು ಆಧಾರವಾಗುವುದಿಲ್ಲ, ಘಟದಲ್ಲಿ ಯಾವ ಗುಣವಿದೆಯೋ, ಅಂತಹ ಗುಣವು ಘಟದಲ್ಲಿರುವ ಬ್ರಹ್ಮನ ಅಧೀನವಾಗಿದೆ. ಆದ್ದರಿಂದ ಬ್ರಹ್ಮನು ಘಟದಲ್ಲಿರುವ ಗುಣವುಳ್ಳವನಾಗಿದ್ದಾನೆ. ಎಂಬುದಾಗಿ ವ್ಯಾಖ್ಯಾನಿಸಬೇಕು. ಆದ್ದರಿಂದ 'ತದ್ಗುಣೀ' ಎಂಬುದಕ್ಕೆ ಘಟವನ್ನೇ ಶರೀರವಾಗಿವುಳ್ಳವನು ಎಂದರ್ಥ.

ಆನುಮಾನಿಕಾಧಿಕರಣ (೧-೪-೧)

**प्रकाशः** – त्वदभिमतार्थपरत्वेऽपि तदधीनत्वरूपसम्बन्धात्तद्गुणबोधकशब्दप्रयोग इत्यमुख्यवृत्त्युक्तिपरत्वेनाप्युपपन्ना । ''नामानि सर्वाणि'' इति श्रुतिरपि प्रकारवाचिशब्दानां प्रकारिपर्यंतत्वेनोपपन्ना ।

ನೀವು ಹೇಳುವ ಅರ್ಥವನ್ನು ಈ ಸ್ಮೃತಿವಾಕ್ಯಕ್ಕೆ ವಿವಕ್ಷಿಸಿದರೂ ಕೂಡ ತದಧೀನತ್ವವೆಂಬ ಸಂಬಂಧದಿಂದ ತದ್ಗುಣಬೋಧಕ ಶಬ್ದಪ್ರಯೋಗವನ್ನು ಹೇಳಿದಂತಾಗುತ್ತದೆ. ಅಂದರೆ ಭೃತ್ಯನಲ್ಲಿರುವ ಜಯವು ರಾಜನ ಅಧೀನವಾದ್ದರಿಂದ 'ತದಧೀನತ್ವ' ಎಂಬ ಸಂಬಂಧದಿಂದ 'ಜಯೀ' ಎಂಬ ಶಬ್ದವು ಲಕ್ಷಣಾವೃತ್ತಿಯಿಂದ ರಾಜನನ್ನು ಪ್ರತಿಪಾದನೆ ಮಾಡುತ್ತದೆಂದು ಹೇಳಿದಂತಾಗುತ್ತದೆ. ಆದ್ದರಿಂದ ಅಮುಖ್ಯವೃತ್ತಿಯನ್ನೇ ನೀವೂ ಕೂಡ ಹೇಳಬೇಕು. 'ನಾಮಾನಿ ಸರ್ವಾಣಿ' ಎಂಬ ಶ್ರುತಿವಿರೋಧವೂ ಕೂಡ ಬರುವುದಿಲ್ಲ. ಏಕೆಂದರೆ ಪ್ರಕಾರವಾಚಕವಾದ ಶಬ್ದಗಳು ಪ್ರಕಾರಿಪರ್ಯಂತವೆಂದು ಸಿದ್ಧವಾಗಿದೆ. ಶರೀರವಾಚಕವಾದ ಶಬ್ದಗಳು ಶರೀರಿಯಲ್ಲಿ ಪ್ರಯೋಗಿಸಲಾಗುತ್ತದೆ. ಬ್ರಹ್ಮನಿಗೆ ಪ್ರಪಂಚವು ಶರೀರದಂತಿರುವುದರಿಂದ ಪ್ರಪಂಚವನ್ನು ಪ್ರತಿಪಾದನೆ ಮಾಡುವ ಶಬ್ದಗಳೆಲ್ಲವೂ ಬ್ರಹ್ಮನಲ್ಲಿ ತಾತ್ಪರ್ಯವುಳ್ಳವುಗಳಾಗಿವೆಯೆಂದು ವ್ಯಾಖ್ಯಾನಿಸಬೇಕು.

**प्रकाशः** – स बन्धयतीत्यादिश्रुतिरपि सम्बन्धसामान्ये मतुबित्याशयेति न बद्धादिशब्दवाच्यत्वसिद्धिः ।

'ಸ ಬಂಧಯತಿ' ಇತ್ಯಾದಿ ಶ್ರುತಿಗಳೂ ಸಹ ಬದ್ಧಾದಿಶಬ್ದಗಳಿಂದ ಮುಖ್ಯವೃತ್ತಿಯನ್ನು ಪರಮಾತ್ಮನಲ್ಲಿ ಹೇಳುತ್ತಿಲ್ಲ. ಏಕೆಂದರೆ ಸಂಬಂಧಸಾಮಾನ್ಯಾರ್ಥದಲ್ಲಿ ಮತುಪ್' ಪ್ರತ್ಯಯವು ಬರುವುದರಿಂದ ಬಂಧಾದಿಗಳ ಜೊತೆಗೆ ಸಂಬಂಧವಿದೆಯೆಂದೇ ತಿಳಿಯುತ್ತದೆ, ಮುಖ್ಯಸ್ವಾಮಿಯೆಂದು ತಿಳಿಯುವುದಿಲ್ಲ. ಇದರಿಂದ ಬದ್ಧಾದಿಶಬ್ದಗಳ ವಾಚ್ಯತ್ವವು ಪರಮಾತ್ಮನಲ್ಲಿ ಸಿದ್ಧವಾಗುವುದಿಲ್ಲ.

**प्रकाशः** – चतुर्थं चायुक्तम् । ज्ञेयत्वस्य प्रधानपरत्वाबाधकत्वात् ।

'ಜ್ಞೇಯತ್ವಾವಚನಾಚ್ಚ' ಎಂಬ ಸೂತ್ರದ ವ್ಯಾಖ್ಯಾನವೂ ಕೂಡ ಅಯುಕ್ತವಾಗಿದೆ. ಏಕೆಂದರೆ ಎಲ್ಲಾ ಪದಾರ್ಥಗಳಿಗಿಂತಲೂ ವಿಷ್ಣುವೇ ಉತ್ತಮನಾಗಿದ್ದಾನೆಂದು ಹೇಳುವ ಸಂದರ್ಭದಲ್ಲಿ ಅವ್ಯಕ್ತಶಬ್ದವು ಪ್ರಧಾನಪರವಾಗುವುದು ಬಾಧಕವೇ ಅಲ್ಲ.

**प्रकाशः** – प्रकरणमपि पुरुषशब्दार्थस्य विष्णुत्वमात्रेणोपपन्नमिति नाव्यक्तस्य विष्णुत्वसाधकम् ।

ಪ್ರಕರಣವೂ ಕೂಡ ಅವ್ಯಕ್ತಶಬ್ದವು ವಿಷ್ಣುಪರವೆನ್ನಲು ಸಾಧಕವಾಗುವುದಿಲ್ಲ. ಪುರುಷಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗಲೀ, ತನ್ಮಾತ್ರದಿಂದ ಅವ್ಯಕ್ತಶಬ್ದದಿಂದಲೂ ವಿಷ್ಣುವೇ ಪ್ರತಿಪಾದ್ಯನೆನ್ನಲು ಬರುವುದಿಲ್ಲ.

**प्रकाशः** – अक्षादिनानार्थशब्दानां लोकसिद्धत्वेनेहाव्यक्तादिशब्दानां हरावन्यत्र च प्रयोगे दृष्टान्तनैरपेक्ष्येणान्तिमसूत्रद्वयवैयर्थ्यात् । अन्ते श्रुतेरित्यध्याहार-दोषश्चेति ।

ಮತ್ತು ಅಕ್ಷ, ಗೋ ಮೊದಲಾದ ನಾನಾರ್ಥಕಶಬ್ದಗಳು ಲೋಕದಲ್ಲಿ ಅನೇಕ ಕಂಡಿವೆ. ಅದರಂತೆ ಅವ್ಯಕ್ತಶಬ್ದವೂ ಕೂಡ ಶ್ರೀಹರಿಯಲ್ಲಿ ಮತ್ತು ಪ್ರಕೃತಿಯಲ್ಲಿ ಇರುವುದರಿಂದ ನಾನಾರ್ಥಕವಾಗಿದೆ. ಹೀಗೆ ಲೋಕನ್ಯಾಯದಿಂದಲೇ ಸಿದ್ಧವಾಗುವಾಗ ಸೂತ್ರದಲ್ಲಿ ದೃಷ್ಟಾಂತವನ್ನು ನೀಡಿದ್ದು ವ್ಯರ್ಥ. ಹಾಗಾಗಿ ಕೊನೆಯ ಎರಡು ಸೂತ್ರಗಳೂ ಕೂಡ ನಿಮ್ಮ ಸಿದ್ಧಾಂತದಲ್ಲಿ ಅಯುಕ್ತವಾಗುತ್ತವೆ. ಮತ್ತು ಕೊನೆಯ ಸೂತ್ರದಲ್ಲಿ 'ಅನುಶಾಸನರೂಪ ಶ್ರುತೇಃ' ಎಂದು ಅಧ್ಯಾಹಾರ ಮಾಡುವುದೂ ಕೂಡ ತಪ್ಪಾಗುತ್ತದೆ.

ಹೀಗೆ ರಾಮಾನುಜರು 'ಪಾರಾಶರ್ಯವಿಜಯ' ಗ್ರಂಥದಲ್ಲಿ ನಮ್ಮ ಸೂತ್ರವ್ಯಾಖ್ಯಾನಗಳನ್ನು ನಿರಾಕರಣೆ ಮಾಡಿದ್ದಾರೆ.

**प्रकाशः** – तदेतत्सर्वं स्वमतोन्मूलनावलोकनिमित्तकाग्रहमात्रविजृम्भितमिति तुच्छम् । तथाहि । ब्रह्मणि मुख्यानां शब्दानामन्यत्र प्रयोगो हि ''समाकर्षात्'' इति वक्ष्यमाणदिशा किञ्चिन्न्यूनमुख्यवृत्त्या वाच्यः । स चायुक्तः । परममुख्यवृत्त्या विष्णुवाचकानां शब्दानां किञ्चिन्न्यूनमुख्यवृत्याऽप्यन्यत्र प्रयोगेऽव्यवस्था स्यात् निमित्ताभावादिति शङ्कायां तत्तच्छब्दपरममुख्यार्थेश्वरसम्बन्धस्य निमित्तत्वोक्त्यर्थत्वाच्छरीररूपकेत्याद्यंशस्य । अत एवोक्तं टीकायां ''समाकर्षादिति वक्ष्यमाणन्यायस्यात्राभिमतत्वेन लक्षणानाश्रयणात्'' इतीति । उक्तं च ग्रन्थकृतापि ''अव्यक्तादेरपि ब्रह्मसम्बद्धत्वाद्वाच्यतेति'' इति ।

ಪಾರಾಶರ್ಯವಿಜಯದಲ್ಲಿ ಮಾಡಲ್ಪಟ್ಟ ಆಕ್ಷೇಪಗಳೆಲ್ಲವೂ ಅತ್ಯಂತ ತುಚ್ಛವಾಗಿವೆ. ನಮ್ಮ ಸಿದ್ಧಾಂತವನ್ನು ನಿರಾಕರಣೆ ಮಾಡಬೇಕು ಎಂಬುದರಲ್ಲೇ ದೃಷ್ಟಿಯಿಂದ ಆಗ್ರಹಭರಿತರಾಗಿ ನಿರಾಕರಣೆ ಮಾಡಿದ್ದಾರೆ ಹೊರತು, ವಾಸ್ತವ ವಿಚಾರಕ್ಕೆ ಮನ್ನಣೆ ನೀಡಿ ವಿಚಾರ ಮಾಡಿರುವುದಿಲ್ಲ.

ಪ್ರಥಮಸೂತ್ರದಲ್ಲಿ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ವಿಶೇಷಣವೇ ವ್ಯರ್ಥವೆಂದು ಆಕ್ಷೇಪಿಸಿದ್ದರು. ಇದು ಸರಿಯಲ್ಲ. ಏಕೆಂದರೆ ಎಲ್ಲಾ ಶಬ್ದಗಳೂ ಬ್ರಹ್ಮನಲ್ಲೇ ಮುಖ್ಯವಾಗಿರುವಾಗ 'ಸಮಾಕರ್ಷಾತ್' ಎಂಬ ಮುಂದಿನ ಅಧಿಕರಣದ ಸೂತ್ರದಂತೆ ಬೇರೆ ಪದಾರ್ಥಗಳಲ್ಲಿ ನ್ಯೂನಮುಖ್ಯವೃತ್ತಿಯಿಂದ ವಾಚ್ಯತ್ವವನ್ನು ಹೇಳಬೇಕಾಗುತ್ತದೆ. ಆದರೆ ಇದು ಸರಿಯಲ್ಲ. ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕವಾದ ಶಬ್ದಗಳು ನ್ಯೂನವೃತ್ತಿಯಿಂದ ಬೇರೆ ಪದಾರ್ಥಗಳನ್ನು ಪ್ರತಿಪಾದಿಸಿದರೆ ಅವ್ಯವಸ್ಥೆಯು ಬಂದೇ ಬರುತ್ತದೆ. ಏಕೆಂದರೆ ಎಲ್ಲಾ ಶಬ್ದಗಳೂ ವಿಷ್ಣುವನ್ನೇ ಪ್ರತಿಪಾದನೆ ಮಾಡುವಾಗ ಇಂತಹ ಶಬ್ದವು ಇದೇ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತದೆನ್ನಲು ಯಾವುದೇ ನಿಮಿತ್ತಗಳಿರುವುದಿಲ್ಲ? ಈ ಆಕ್ಷೇಪವನ್ನು ಪರಿಹರಿಸಲು 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ವಿಶೇಷಣವನ್ನು ಸೂತ್ರಕಾರರು ಹೇಳಿದ್ದಾರೆ. ಪ್ರಪಂಚದಲ್ಲಿ ಪ್ರಸಿದ್ಧವಾದ ಅವ್ಯಕ್ತಾದಿಶಬ್ದಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಮಹಾವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. ಅವನ ಸಂಬಂಧದಿಂದ ಇತರ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಬೇಕಾಗಿದೆ.

ಈಶ್ವರಸಂಬಂಧವೆಂಬ ನಿಮಿತ್ತತ್ವವನ್ನು ತಿಳಿಸುವುದಕ್ಕಾಗಿ 'ಶರೀರರೂಪಕ' ಇತ್ಯಾದಿ ವಿಶೇಷಣವು ಸಾರ್ಥಕವಾಗಿದೆಯೆಂದು ತಿಳಿಯಬೇಕು. ಆದ್ದರಿಂದಲೇ ಟೀಕೆಯಲ್ಲಿ 'ಸಮಾಕರ್ಷಾದಿತಿ ವಕ್ಷ್ಯಮಾಣ-ನ್ಯಾಯಸ್ಯಾತ್ರಾಭಿಮತತ್ವೇನ ಲಕ್ಷಣಾऽನಾಶ್ರಯಣಾತ್' 'ಸಮಾಕರ್ಷಾತ್' ಎಂಬ ಮುಂದಿನ ನ್ಯಾಯವು ಇಲ್ಲಿಯೂ ಅಭಿಪ್ರೇತವಾದ್ದರಿಂದ ಶಬ್ದಗಳಿಗೆ ಲಕ್ಷಣಾವನ್ನು ಮಾಡಬೇಕಾಗಿಲ್ಲ ಎಂದು ಹೇಳಲಾಗಿದೆ. ಗ್ರಂಥಕಾರರೂ ಕೂಡ 'ಅವ್ಯಕ್ತಾದೇರಪಿ ಬ್ರಹ್ಮಸಂಬದ್ಧತ್ವಾತ್ ವಾಚ್ಯತಾ' ಅವ್ಯಕ್ತಾದಿಗಳಿಗೂ ಬ್ರಹ್ಮನ ಸಂಬಂಧದಿಂದಷ್ಟೇ ವಾಚ್ಯತ್ವವು ಇರುತ್ತದೆಂದು ಹೇಳಿರುತ್ತಾರೆ.

**प्रकाशः** – तत्र प्रतिपदसार्थक्यस्याद्यसूत्र एव स्पष्टत्वाच्च । त्वयापि सर्वहेयप्रत्यनीकस्यापि ब्रह्मणो विश्वशरीरकत्वस्य विश्वस्मिन् हेयत्वस्य स्वीकारेण कुत्सितत्वस्य भोगायतनत्वरूपमुख्यशरीरत्वाभावमात्रोपपादकत्वेन तत्रानवस्थाना-प्रयोजकतया विन्यस्तेत्युक्त्यविरोधात् ।

ಗ್ರಂಥಕಾರರು ಪ್ರಥಮಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಪ್ರತಿಯೊಂದು ಪದಗಳೂ ಅತ್ಯಂತ ಸಾರ್ಥಕವಾಗಿವೆಯೆಂದು ಸ್ಪಷ್ಟಪಡಿಸಿದ್ದಾರೆ.

ಮತ್ತು 'ವಿನ್ಯಸ್ತ' ಎಂಬ ಪದಕ್ಕೆ ವೈಯರ್ಥ್ಯ ಹೇಳಿದ್ದೂ ಕೂಡ ಸರಿಯಲ್ಲ. ಏಕೆಂದರೆ ಹೇಯವಾದ ಸಕಲ ಪದಾರ್ಥಗಳಿಗೆ ಬ್ರಹ್ಮನು ವಿರುದ್ಧವಾಗಿದ್ದಾನೆಂದು ನೀವೂ ಕೂಡ ಹೇಳುತ್ತೀರಿ. ಆದರೆ ಹೇಯವಾದ ಪ್ರಪಂಚವು ಬ್ರಹ್ಮನಿಗೆ ಶರೀರವೆಂದೂ ಕೂಡ ಹೇಳುತ್ತೀರಿ. ಹೇಯವಾದ ಪದಾರ್ಥವು ಬ್ರಹ್ಮನಿಗೆ ಹೇಗೆ ಶರೀರವಾಗುತ್ತದೆ? ಎಂದು ಪ್ರಶ್ನಿಸಿದರೆ ಭೋಗಾಯತನತ್ವವೆಂಬ ಮುಖ್ಯವಾದ ಶರೀರಭಾವವು ಬ್ರಹ್ಮನಿಗಿರುವುದಿಲ್ಲವೆಂದು ಶರೀರಕ್ಕೆ ಕುತ್ಸಿತತ್ವವನ್ನು ಅವಶ್ಯವಾಗಿ ನೀವು ಹೇಳಲೇ ಬೇಕಾಗುತ್ತದೆ. ಆದ್ದರಿಂದ ಕುತ್ಸಿತತ್ವವು ವಿನ್ಯಸ್ತತ್ವಕ್ಕೆ ಅಪ್ರಯೋಜಕವಾಗುವುದಿಲ್ಲ.

**प्रकाशः** – अशरीरः प्रज्ञात्मेत्यादिश्रुत्यविरोधाय स्वोक्तेरमुख्यशरीरत्वाभिप्रायकत्वस्यावश्यं वाच्यत्वेन प्रकृतोपयोगसम्भवाच्च ।

'ಅಶರೀರಃ ಪ್ರಜ್ಞಾತ್ಮಾ' ಎಂಬ ಶ್ರುತಿಯು ಪರಮಾತ್ಮನು ಅಶರೀರನಾಗಿದ್ದಾನೆಂದು ಹೇಳುತ್ತಿದೆ. ಆದರೆ ಪ್ರಕೃತ ಶ್ರುತಿಯಲ್ಲಿ ಅವ್ಯಕ್ತಾದಿಗಳು ಪರಮಾತ್ಮನ ಶರೀರವೆಂದು ಶ್ರುತವಾಗಿವೆ. 'ಅಶರೀರಃ ಪ್ರಜ್ಞಾತ್ಮಾ' ಎಂಬ ಶ್ರುತಿಯ ವಿರೋಧ ಬರಬಾರದೆಂದರೆ ಅವ್ಯಕ್ತಾದಿಗಳು ಅಮುಖ್ಯವಾದ ಶರೀರವಾಗಿವೆಯೆಂದೇ ವ್ಯಾಖ್ಯಾನ ಮಾಡಬೇಕು. ಹೀಗೆ ಪ್ರಕೃತಕ್ಕೆ ಉಪಯೋಗವಿರುತ್ತದೆ.

**प्रकाशः** – सूत्रस्य विश्वतोमुखत्वेन ''जीवा एव तु'' इत्यादेस्तुल्यन्यायविषय-तयोपलक्षणावश्यम्भावेन तुल्यन्यायत्वस्यैव तदुदाहरणतायां नियामकत्वाच्च ।

ಮತ್ತು 'ಜೀವಾ ಏವ ತು ದುಃಖಿನಃ' ಎಂಬುದು ವಿಷಯವಾಕ್ಯವಲ್ಲವೆಂದು ಆಕ್ಷೇಪಿಸಿದ್ದರು. ಇದೂ ಕೂಡ ತಪ್ಪು. ಸೂತ್ರವು ವಿಶ್ವತೋಮುಖವಾದ್ದರಿಂದ 'ಮಹತಃ ಪರಮವ್ಯಕ್ತಮ್' ಎಂಬುದು ಯಾವ

ನ್ಯಾಯದಿಂದ ವಿಷಯವಾಕ್ಯವಾಗುತ್ತದೋ, ಅದೇ ನ್ಯಾಯವು ಇಲ್ಲಿಯೂ ಸಂಚಾರವಾಗುವ ಕಾರಣ ವಿಷಯವಾಕ್ಯವಾಗಬಹುದು. ಏಕೆಂದರೆ ವಿಷಯವಾಕ್ಯಗಳಿಗೆ ತುಲ್ಯನ್ಯಾಯತ್ವವೇ ನಿಯಾಮಕ **ಹೊರತು**, ಮತ್ತೊಂದಲ್ಲ.

**प्रकाशः** – द्वितीये निमित्तोक्तेः प्रयोगमूलत्वेनाद्ये ''दर्शयतिच'' इत्यनेन भगवति प्रयोगसिद्धौ तदुपजीव्यप्रवृत्तेन निमित्तकथनेन मूलभूतप्रयोगोक्ते-र्वैयर्थ्यचोदनस्यायुक्तत्वात् ।

ಎರಡನೆಯ ಸೂತ್ರವನ್ನು ವಿಮರ್ಶೆ ಮಾಡುವಾಗ ಪ್ರಥಮಸೂತ್ರದಲ್ಲಿ 'ದರ್ಶಯತಿ ಚ' ಎಂಬ ಪದಕ್ಕೆ ವೈಯರ್ಥ್ಯವನ್ನು ಹೇಳಿದ್ದರು. ಇದೂ ಕೂಡ ಸರಿಯಲ್ಲ. ಪ್ರಥಮಸೂತ್ರದಲ್ಲಿ ಶಬ್ದಗಳ ಪ್ರವೃತ್ತಿನಿಮಿತ್ತಕ್ಕೆ ಪ್ರಯೋಗವೇ ಮೂಲವೆಂದು ಹೇಳಲಾಯಿತು. ಶಬ್ದಗಳ ಪ್ರಯೋಗವನ್ನು ನೋಡಿ, ಪ್ರವೃತ್ತಿನಿಮಿತ್ತವನ್ನು ಹುಡುಕಬೇಕೇ ಹೊರತು, ಪ್ರವೃತ್ತಿನಿಮಿತ್ತವಿದೆ ಎಂಬ ಕಾರಣಕ್ಕೆ ಶಬ್ದಪ್ರಯೋಗ ಮಾಡಬಾರದು. ಆದ್ದರಿಂದ ಪ್ರಥಮಸೂತ್ರದಲ್ಲಿ ವಿಷ್ಣುವಿನಲ್ಲಿ ಅವ್ಯಕ್ತಾದಿಶಬ್ದಗಳ ಪ್ರಯೋಗವಿದೆಯೆಂದು ತೋರಿಸಲಾಯಿತು. ಅನಂತರ ಆ ಪ್ರಯೋಗಕ್ಕೆ ಮೂಲಭೂತವಾದ ಪ್ರವೃತ್ತಿನಿಮಿತ್ತವನ್ನು ಎರಡನೆಯ ಸೂತ್ರದಲ್ಲಿ ಹೇಳುತ್ತಿದ್ದಾರೆ. ಪ್ರಯೋಗವು ಸಿದ್ಧವಾದ ಮೇಲಷ್ಟೇ ಅದಕ್ಕೆ ಉಪಜೀವ್ಯವಾದ ಪ್ರವೃತ್ತಿನಿಮಿತ್ತವನ್ನು ಹುಡುಕಬೇಕು.

**प्रकाशः** – अत एव 'प्रयोगमूलं व्याकरणम्' इति प्रसिद्धिः । धानकर्मत्वादि-रूपधेन्वादिपदप्रवृत्तिहेतोर्महिष्यादौ सत्त्वेऽपि धेन्वादिशब्दमुख्यार्थत्वादृष्ट्या प्रयोग-प्रवृत्तिनिमित्ताभ्यामेव मुख्यत्वस्य वाच्यत्वाच्च ।

ಆದ್ದರಿಂದಲೇ 'ಪ್ರಯೋಗಮೂಲಂ ವ್ಯಾಕರಣಮ್' ವ್ಯಾಕರಣವು ಪ್ರಯೋಗಮೂಲಕವಾಗಿದೆ ಎಂಬ ಲೋಕವಾಡಿಕೆಯಿದೆ. ಪ್ರಯೋಗ ಹಾಗೂ ಪ್ರವೃತ್ತಿನಿಮಿತ್ತಗಳೆರಡೂ ಇದ್ದರೆ ಮಾತ್ರ, ಶಬ್ದದ ಮುಖ್ಯವೃತ್ತಿಯನ್ನು ತಿಳಿಯಬೇಕು. ಕೇವಲ ಪ್ರವೃತ್ತಿನಿಮಿತ್ತದಿಂದ ಶಬ್ದಕ್ಕೆ ಮುಖ್ಯವೃತ್ತಿಯನ್ನು ತಿಳಿಯಲು ಸಾಧ್ಯವಿಲ್ಲ. ಏಕೆಂದರೆ 'ಧೇನು' ಶಬ್ದಕ್ಕೆ ಧಾನಕರ್ಮತ್ವವು ಪ್ರವೃತ್ತಿನಿಮಿತ್ತವಾಗಿದೆ. ಈ ಪ್ರವೃತ್ತಿನಿಮಿತ್ತವು ಮಹಿಷ್ಯಾದಿಗಳಲ್ಲಿದ್ದರೂ ಯಾರೂ ಸಹ 'ಧೇನು' ಎಂಬ ಶಬ್ದವನ್ನು ಮಹಿಷ್ಯಾದಿಗಳಲ್ಲಿ ಪ್ರಯೋಗಿಸುವುದಿಲ್ಲ.[೧]

**प्रकाशः** – प्रधानादौ रूढाव्यक्तादिशब्दस्य केवलद्वितीयसूत्रोक्तयोगमात्रेणा-पहारायोगेन श्रौतस्मार्तप्रयोगस्यावश्यमनुसर्तव्यत्वाच्च ।

(೧) 'ಧೇಟ್ ಪಾನೇ' ಎಂಬ ಧಾತುವಿನ ಮೇಲೆ 'ಷ್ಣು' ಪ್ರತ್ಯಯ ಬಂದು 'ಧೇನು' ಎಂಬ ಶಬ್ದವು ನಿಷ್ಪನ್ನವಾಗಿದೆ. 'ಧೇನು' ಎಂದರೆ ಧಾನಕರ್ಮವಾದ ವಸ್ತು ಎಂದರ್ಥ. 'ಧಾನ' ಎಂದರೆ 'ಪಾನ' ಎಂದರ್ಥ. ಪಾನಕ್ಕೆ ಕರ್ಮವಾದದ್ದು ಹಸು ಹೇಗೆ ಆಗಿದೆಯೋ, ಅದರಂತೆ ಎಮ್ಮೆಯೂ ಕೂಡ ಆಗಿದೆ. ಆದರೆ 'ಧೇನು' ಎಂಬ ಪ್ರಯೋಗವನ್ನು ಹಸುವಿನಲ್ಲಷ್ಟೇ ಮಾಡುತ್ತಾರೆ. ಕರುವಿನ ಕ್ಷೀರಪಾನಕ್ಕೆ ಹಸು ಕರ್ಮವಾಗಿದೆಯೆಂದರ್ಥ.

ಎರಡನೆಯ ಸೂತ್ರದಲ್ಲಿ ಅವ್ಯಕ್ತಾದಿಶಬ್ದಗಳಿಗೆ ಅವ್ಯಕ್ತತ್ವವು ಪ್ರವೃತ್ತಿನಿಮಿತ್ತವಾಗಿದೆಯೆಂಬುದಾಗಿ ಯೋಗಾರ್ಥವನ್ನು ಹೇಳಿದ್ದಾರೆ. ಆದರೆ ಪ್ರಧಾನಾದಿಗಳಲ್ಲಿ ರೂಢವಾದ ಅವ್ಯಕ್ತಾದಿಶಬ್ದಗಳನ್ನು ಕೇವಲ ಎರಡನೆಯ ಸೂತ್ರದಲ್ಲಿ ಹೇಳಲ್ಪಟ್ಟ ಯೋಗದಿಂದ ಅಪಹರಿಸಲು ಸಾಧ್ಯವಿಲ್ಲ. ಆ ಕಾರಣದಿಂದ ವಿಷ್ಣುವಿನಲ್ಲಿ ಅವ್ಯಕ್ತಾದಿಶಬ್ದಗಳ ಸ್ಮಾರ್ತಪ್ರಯೋಗ ಹಾಗೂ ಶ್ರೌತಪ್ರಯೋಗಗಳು ಇರುತ್ತವೆಂದು ಪ್ರಥಮಸೂತ್ರದಲ್ಲಿ ಹೇಳಿದ್ದು ಸಾರ್ಥಕವಾಗಿದೆ.

**प्रकाशः –** तृतीयेऽध्याहारस्य त्वन्मतेऽप्यग्रे वक्तव्यत्वात् । सौत्रत्वेन तत्र यावदपेक्षितपूर्तेरदोषत्वाच्च । उक्तं च महाभाष्ये पस्पशग्रन्थे ''उदाहरणं प्रत्युदाहरणं वाक्याध्याहार इत्येतत्समुदितं व्याख्यानम्'' इति ।

ಮೂರನೆಯ ಸೂತ್ರದಲ್ಲಿ ಷಷ್ಠ್ಯಂತವಾದ ಹಾಗೂ ಪ್ರಥಮಾಂತವಾದ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಆಕ್ಷೇಪಿಸಿದ್ದೀರಿ. ಆದರೆ ನಿಮ್ಮಲ್ಲಿಯೂ ಅಧ್ಯಾಹಾರ ಮಾಡುವುದು ಕಂಡಿದೆಯೆಂದು ನಾವು ಮುಂದೆ ಸಮರ್ಥಿಸುತ್ತೇವೆ. ಮತ್ತು ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳುವುದು ದೋಷವೇ ಅಲ್ಲ. ಆಕಾಂಕ್ಷೆಯು ಪೂರ್ತಿಯಾಗಲು ಎಷ್ಟು ಶಬ್ದಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕೋ ಅಷ್ಟು ಶಬ್ದಗಳನ್ನು ಅಧ್ಯಾಹಾರ ಮಾಡಿಕೊಳ್ಳಲೇ ಬೇಕು. ಆದ್ದರಿಂದ ಮಹಾಭಾಷ್ಯದ ಪಸ್ಪಶಾಹ್ನಿಕದಲ್ಲಿ ಹೀಗೆ ಹೇಳಿದ್ದಾರೆ - 'ಉದಾಹರಣಂ ಪ್ರತ್ಯುದಾಹರಣಂ ವಾಕ್ಯಾಧ್ಯಾಹಾರ ಇತ್ಯೇತತ್ ಸಮುದಿತಂ ವ್ಯಾಖ್ಯಾನಮ್' ಉದಾಹರಣೆ, ಪ್ರತ್ಯುದಾಹರಣೆ, ವಾಕ್ಯ ಇವುಗಳನ್ನು ಅಧ್ಯಾಹಾರ ಮಾಡಿಕೊಂಡಾಗಲಷ್ಟೇ ವ್ಯಾಖ್ಯಾನವು ಪೂರ್ಣವಾಗುತ್ತದೆ ಎಂದು.

**प्रकाशः –** स्वातन्त्र्यस्य शब्दवृत्तौ निमित्तत्वस्याव्यभिचारस्य चाकर एव व्युत्पादितत्वाच्च । स्मृतौ तद्गुणक इत्येव पूर्त्या मतुपो व्यर्थतापत्त्यादिनाऽन्यार्थस्यायोगात् ।

ಮತ್ತು 'ತದ್ಗುಣೇ ಸೋಽಭಿಧೀಯತೇ' ಎಂಬ ಶ್ರುತಿಯಲ್ಲಿ ಶ್ರುತವಾದ 'ತದ್ಗುಣೇ' ಎಂಬ ಪದಕ್ಕೆ 'ತದುಪಸರ್ಜನಕಃ ತತ್ ಶರೀರಕಃ' ಎಂದು ವ್ಯಾಖ್ಯಾನ ಮಾಡುವುದು ಯುಕ್ತವಾಗುವುದಿಲ್ಲ. ಹಾಗಾದಲ್ಲಿ 'ತದ್ಗುಣಕಃ' ಎಂದೇ ಹೇಳಬಹುದಿತ್ತು. 'ಮತುಪ್' ಪ್ರತ್ಯಯವನ್ನು ಹಾಕಿದ್ದರಿಂದ ಮುಖ್ಯವಾದ ಗುಣವುಳ್ಳವನು ಎಂಬರ್ಥವೇ ದೊರೆಯುತ್ತದೆ ಹೊರತು, ಗೌಣವಾದ ಗುಣವುಳ್ಳವನು ಎಂಬರ್ಥವನ್ನು ತಿಳಿಯಬಾರದು. 'ನ ಬಹುವ್ರೀಹಿನಿರ್ವಾಹೇ ಭವಂತು ಮತುಪಾದಯಃ' ಬಹುವ್ರೀಹಿಸಮಾಸದಿಂದಲೇ ನಿರ್ವಾಹ ಮಾಡಲು ಬರುವಾಗ ವ್ಯರ್ಥವಾಗಿ 'ಮತುಪಾದಿ' ಪ್ರತ್ಯಯಗಳನ್ನು ಪ್ರಯೋಗಿಸಬಾರದು. 'ಪೀತಾಂಬರಃ' ಎಂದೇ ಹೇಳಲು ಬರುವಾಗ 'ಪೀತಾಂಬರವಾನ್' ಎಂದು ಹೇಳಬಾರದು ಎಂಬ ನ್ಯಾಯದಂತೆ ಪ್ರಕೃತ 'ತದ್ಗುಣಕಃ' ಎಂದು ಹೇಳಲು ಬರುವಾಗ ಅನಾವಶ್ಯಕವಾಗಿ 'ತದ್ಗುಣೇ' ಎಂಬುದಾಗಿ ಮತುಬರ್ಥಕವಾದ 'ಇನಿ' ಪ್ರತ್ಯಯವನ್ನು ಹೇಳಿದ್ದು ವ್ಯರ್ಥವಾಗುತ್ತದೆ ಎಂದಭಿಪ್ರಾಯ.

ಪರಿಪೂರ್ಣಚಂದ್ರಿಕಾ

**प्रकाशः** – श्रुतौ विशिष्य कर्तृव्युत्पत्त्याऽऽङ्प्रयोगेण मुख्यतोक्तेः स्फुटत्वात् । स्मृतौ ''अभिधीयते'' इत्यभिधोक्तेश्च ।

ಮತ್ತು ಶ್ರುತಿಯಲ್ಲಿ 'ಸ ಬಂಧಯತೀತಿ ಬದ್ಧಃ' 'ಸ ದುಃಖಯತೀತಿ ದುಃಖೀ' ಇತ್ಯಾದಿಯಾಗಿ ಕರ್ತ್ರ್ಯವ್ಯುತ್ಪತ್ತಿಯನ್ನು ಮಾಡಿದ್ದರಿಂದ ಲಕ್ಷಣಾ ಮಾಡುವ ಪ್ರಸಂಗವೇ ಇಲ್ಲ. ಮತ್ತು 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬಲ್ಲಿ 'ಆವಿಶಂತಿ' ಎಂಬುದಾಗಿ 'ಆಙ್' ಎಂಬ ಉಪಸರ್ಗವನ್ನು ಪ್ರಯೋಗ ಮಾಡಿದ್ದರಿಂದಲೂ ಮುಖ್ಯತ್ವವೇ ತಿಳಿಯುತ್ತದೆ. ಸ್ಮೃತಿಯಲ್ಲಿಯೂ ಕೂಡ 'ಅಭಿಧೀಯತೇ' ಎಂದು ಹೇಳಿದ್ದರಿಂದ ಪರಮಾತ್ಮನಲ್ಲಿ ಅವ್ಯಕ್ತಾದಿಶಬ್ದಗಳಿಗೆ ಲಕ್ಷಣಾ ಮಾಡಬೇಕೆಂಬುದು ಅತ್ಯಂತ ಅಯುಕ್ತವಾಗುತ್ತದೆ.

**प्रकाशः** – चन्द्रिकोक्तदिशा प्रतिवाक्यं ब्रह्मपरत्वस्य मुख्यतः प्रधानपरत्व-बाधकत्वात् । अव्यक्तस्याब्रह्मत्वेऽपि निचाय्यवाक्यस्य ब्रह्मपरत्वापत्तौ प्रकरणस्यापि साधकत्वाच्च ।

ಮತ್ತು ಚಂದ್ರಿಕೆಯಲ್ಲಿ ಹೇಳಿದಂತೆ ಪ್ರತಿವಾಕ್ಯಗಳೂ ಪ್ರತಿಪದಗಳೂ ಕೂಡ ವಿಷ್ಣುಪರವಾಗಿವೆಯೆನ್ನಲು ಅನೇಕ ಪ್ರಮಾಣಗಳಿವೆ. ಆದ್ದರಿಂದ ಮುಖ್ಯವಾಗಿ ಅವ್ಯಕ್ತಶಬ್ದದಿಂದ ಪ್ರಧಾನವೇ ಪ್ರತಿಪಾದ್ಯವಾಗುತ್ತದೆಂದು ಹೇಳುವುದಕ್ಕೆ ಪ್ರತಿವಾಕ್ಯದ ಸಮನ್ವಯವೇ ಬಾಧಕವಾಗುತ್ತದೆ. ಮತ್ತು ಅವ್ಯಕ್ತಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗದಿದ್ದರೂ ನಿಚಾಯ್ಯವಾಕ್ಯವು ಬ್ರಹ್ಮಪರವಾಗಿದೆಯೆನ್ನಲು ಪ್ರಕರಣವು ಸಾಧಕವಾಗುತ್ತದೆ.

**प्रकाशः** – शब्दानां हरौ मुख्यत्वेन नानार्थत्वाभावाच्च । विप्रतिपन्ने दृष्टान्तोक्तेरावश्यकत्वाच्चेति यत्किञ्चिदेतत् । एवमन्यस्यापि तदीयक्षुद्रोपद्रवस्य निरासः सहृदयं मूलग्रन्थमभिमृशतां न दुष्कर इत्युपरम्यते ॥

ಕೊನೆಯ ಎರಡು ಸೂತ್ರಗಳು ನಾನಾರ್ಥಕವೆನ್ನಲು ಹೊರಟೇ ಇಲ್ಲ. ಶ್ರೀಹರಿಯಲ್ಲಿ ಶಬ್ದಗಳು ಮುಖ್ಯವಾಗಿವೆ ಎಂದು ಸಮರ್ಥಿಸಲು ಹೊರಟಿವೆ. ಹೀಗಿರುವಾಗ ನಾನಾರ್ಥತ್ವಕ್ಕೆ ಪ್ರಸಕ್ತಿಯೇ ಇಲ್ಲ. ಯಾವುದೇ ವಿಷಯದಲ್ಲಿ ವಿಪ್ರತಿಪತ್ತಿ ಬಂದಾಗ ದೃಷ್ಟಾಂತವನ್ನು ನೀಡುವುದು ಅತ್ಯಾವಶ್ಯಕ. ಆದ್ದರಿಂದ ದೃಷ್ಟಾಂತವನ್ನು ನೀಡುವ ಮೂಲಕ ಶಬ್ದಗಳಿಗೆ ಶ್ರೀಹರಿಯಲ್ಲಿ ಮುಖ್ಯಾರ್ಥತ್ವವನ್ನು ಸಮರ್ಥಿಸಲು ಕೊನೆಯ ಎರಡು ಸೂತ್ರಗಳು ಸಾರ್ಥಕವಾಗಿವೆ. ಆದ್ದರಿಂದ ಇವರ ವಾದವೆಲ್ಲವೂ ಅತ್ಯಂತ ತಿರಸ್ಕಾರಾರ್ಹವಾಗಿವೆ.

ಹೀಗೆ ಅವರ ಜೊಳ್ಳು ವಾದಗಳನ್ನೆಲ್ಲಾ ಗ್ರಂಥವನ್ನು ಓದುವವರೇ ಸ್ವತಃ ತಿಳಿದುಕೊಳ್ಳಬೇಕು. ಸಹೃದಯಿಗಳಾಗಿ ಸೂತ್ರ, ಭಾಷ್ಯ, ಟೀಕೆ ಮೊದಲಾದ ಮೂಲಗ್ರಂಥಗಳನ್ನು ಯಾವ ಸಜ್ಜನರು ಅಧ್ಯಯನ ಮಾಡುತ್ತಾರೋ, ವಿಚಾರ ಮಾಡುತ್ತಾರೋ, ಅವರಿಗೆ ಇಂತಹ ದುರ್ವಾದಿಗಳ ಕ್ಷುದ್ರೋಪದ್ರವಗಳನ್ನು ನಿರಾಕರಣೆ ಮಾಡುವುದು ಕಷ್ಟವಾಗುವುದಿಲ್ಲ. ಆದ್ದರಿಂದ ಇವರ ನಿರಾಕರಣೆಯಿಂದ ಉಪರತರಾಗುತ್ತೇವೆ.

ಆನುಮಾನಿಕಾಧಿಕರಣ (೧-೪-೧)



'ಜ್ಞೇಯತ್ವಾವಚನಾಚ್ಚ' ಎಂಬ ನಾಲ್ಕನೆಯ ಸೂತ್ರದಲ್ಲಿ ಹೇಳಿದ ಸ್ವಪಕ್ಷಸಾಧಕ ಪ್ರಮಾಣವನ್ನು ಮುಂದಿನ ಮೂರು ಸೂತ್ರಗಳಲ್ಲಿ ಸಾಧಿಸಲಾಯಿತು. ಎಂಟನೆಯದ್ದು 'ಮಹದ್ವಚ್ಚ' ಎಂಬ ಸೂತ್ರ. ಅವ್ಯಕ್ತಾದಿಶಬ್ದಗಳ ಪ್ರಯೋಗಪ್ರಾಚುರ್ಯವು ಮಹಾವಿಷ್ಣುವಿನಲ್ಲಿ ಇಲ್ಲದಿರುವಾಗ ಮಹಾವಿಷ್ಣುವೇ ಅವ್ಯಕ್ತಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆಂದು ಹೇಗೆ ಹೇಳುತ್ತೀರಿ? ಎಂಬುದಾಗಿ ಸ್ವಪಕ್ಷ ಸ್ಥಾಪನೆಯಲ್ಲಿ ಬಾಧಕಪ್ರಮಾಣವನ್ನು ಆಕ್ಷೇಪಿಸುತ್ತಾರೆ. ಇದಕ್ಕೆ ಉತ್ತರಿಸುವುದಕ್ಕಾಗಿ ಈ ಸೂತ್ರ ಹೊರಟಿದೆ. ಪ್ರಯೋಗಪ್ರಾಚುರ್ಯವಿಲ್ಲದಿದ್ದರೂ ಪ್ರವೃತ್ತಿನಿಮಿತ್ತವು ಅತಿಶಯವಾಗಿದ್ದರೆ ಸಾಕು. ಆ ಶಬ್ದವು ಮಹಾವಿಷ್ಣುವನ್ನು ಮುಖ್ಯವಾಗಿ ಹೇಳುತ್ತದೆ. ಉದಾಹರಣೆ- 'ಮಹಾನ್' ಎಂಬ ಶಬ್ದವು ಮಹತ್ತತ್ವವನ್ನೇ ಮುಖ್ಯವಾಗಿ ಹೇಳುವುದಾದರೆ, ಪ್ರವೃತ್ತಿನಿಮಿತ್ತದ ಅತಿಶಯದಿಂದ ವಿಷ್ಣುವನ್ನೂ ಮುಖ್ಯವಾಗಿ ಹೇಳುತ್ತದೆ. ಅದರಂತೆ ಅವ್ಯಕ್ತಾದಿಶಬ್ದಗಳೂ ಕೂಡ ವಿಷ್ಣುವನ್ನು ಮುಖ್ಯವಾಗಿ ಹೇಳಬಹುದು. ಸ್ವಪಕ್ಷಸಾಧಕಪ್ರಮಾಣಗಳನ್ನು ಹಿಂದಿನ ಸೂತ್ರಗಳಲ್ಲಿ ಸ್ಥಾಪನೆ ಮಾಡಿದ ಮೇಲೆ ಈ ಸೂತ್ರದಲ್ಲಿ ಸ್ವಪಕ್ಷಬಾಧಕಪ್ರಮಾಣವನ್ನು ಉದ್ಧಾರ ಮಾಡುತ್ತಿರುವ ಕಾರಣ ಎಂಟನೆಯ ಸ್ಥಾನವು ಇದಕ್ಕೆ ಯುಕ್ತವಾಗಿದೆ.

'ಚಮಸವದವಿಶೇಷಾತ್' ಎಂಬುದು ಈ ಅಧಿಕರಣದ ಒಂಭತ್ತನೆಯ ಅಂತಿಮ ಸೂತ್ರ. ಮಹಾವಿಷ್ಣುವಿನಲ್ಲಿ 'ಮಹತ್' ಶಬ್ದವು ಮುಖ್ಯವಾಗಿರುತ್ತದೆ ಎಂದು ಇದುವರೆಗೂ ಸಿದ್ಧವಾಗಿಲ್ಲ. ಒಂದು ವೇಳೆ ಈ ಅಧಿಕರಣದ ಪ್ರಮೇಯವು ಸಿದ್ಧವಾದರೆ ಅವ್ಯಕ್ತಾದಿ ಶಬ್ದಗಳಂತೆ 'ಮಹತ್' ಶಬ್ದವೂ ಕೂಡ ಮಹಾವಿಷ್ಣುವನ್ನು ಹೇಳುತ್ತದೆಂದು ಸಿದ್ಧವಾಗುತ್ತಿತ್ತು. ಹಾಗಾಗಿ 'ಮಹತ್' ಶಬ್ದದ ದೃಷ್ಟಾಂತವನ್ನು ಎಂಟನೆಯ ಸೂತ್ರದಲ್ಲಿ ಹೇಳಿದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಮತ್ತೊಂದು ಉದಾಹರಣೆಯನ್ನು ಈ ಸೂತ್ರವು ನೀಡುತ್ತಿದೆ. ಅನುಶಾಸನದ ಬಲದಿಂದ 'ಚಮಸ' ಶಬ್ದವನ್ನು ಶಿರಸ್ಸಿನಲ್ಲಿ ಪ್ರಯೋಗಿಸಲಾಗಿದೆ. ಆದರೆ ಲೋಕದಲ್ಲಿ ಎಲ್ಲಿಯೂ ಕೂಡ ಶಿರಸ್ಸಿನಲ್ಲಿ 'ಚಮಸ' ಶಬ್ದವನ್ನು ಪ್ರಯೋಗಿಸುತ್ತಿಲ್ಲ. ಅದರಂತೆ ಅವ್ಯಕ್ತಾದಿಶಬ್ದಗಳೂ ಕೂಡ ಮಹಾವಿಷ್ಣುವನ್ನು ಹೇಳುತ್ತದೆಂದು ಅನುಶಾಸನವಿರುವಾಗ ಮುಖ್ಯವಾಚಕತ್ವವು ಮಹಾವಿಷ್ಣುವಿಗಿರುವುದಿಲ್ಲವೆಂದು ಹೇಳುವುದು ತಪ್ಪು. ಹಾಗಾಗಿ ಆನುಮಾನಿಕಾಧಿಕರಣದ ಒಂಭತ್ತು ಸೂತ್ರಗಳಿಂದ 'ದುಃಖೀ' 'ಬದ್ಧಃ' 'ಅವರಃ' 'ಅವ್ಯಕ್ತಃ' ಮೊದಲಾದ ಎಲ್ಲಾ ಶಬ್ದಗಳಿಂದಲೂ ಪರಮಾತ್ಮನು ಮುಖ್ಯವಾಗಿ ಪ್ರತಿಪಾದ್ಯನೆಂದು ಸಿದ್ಧವಾಯಿತು.



## ಶಾಂಕರಭಾಷ್ಯ ರಾಮಾನುಜ ಭಾಷ್ಯಗಳಲ್ಲಿರುವ ಅಧಿಕರಣಶರೀರ ವಿಮರ್ಶೆ

### तात्पर्यचन्द्रिका

**यत्तूक्तमुभाभ्यां ईक्षत्यधिकरणोक्तं प्रधानस्याशाब्दत्वमयुक्तम् । महतः परमव्यक्तमिति वाक्ये प्रधानोक्तेरिति प्राप्ते तन्निरासेनेह सिद्धान्त इति ।**

ಅನುವಾದ - ಆನುಮಾನಿಕಾಧಿಕರಣದ ಶರೀರವನ್ನು ಶಾಂಕರಭಾಷ್ಯದಲ್ಲಿ ಹಾಗೂ ರಾಮಾನುಜಭಾಷ್ಯದಲ್ಲಿ ಒಂದೇ ರೀತಿಯಾಗಿ ರಚನೆ ಮಾಡಿದ್ದಾರೆ. ಈಕ್ಷತ್ಯಧಿಕರಣದಲ್ಲಿ ಪ್ರಕೃತಿಯು

ಶಬ್ದಪ್ರತಿಪಾದ್ಯವಲ್ಲವೆಂದು ಹೇಳಲಾಗಿತ್ತು. ಇದು ತಪ್ಪು. ಏಕೆಂದರೆ 'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯದಲ್ಲಿ ಪ್ರಕೃತಿಯು ಶಬ್ದದಿಂದ ಪ್ರತಿಪಾದ್ಯವಾಗುತ್ತಿದೆಯೆಂದು ಪೂರ್ವಪಕ್ಷ. ಅದರ ಪರಿಹಾರಕ್ಕಾಗಿ ಈ ಅಧಿಕರಣವು ಹೊರಟಿದೆಯೆಂದು ಸಿದ್ಧಾಂತ ಮಾಡಿದ್ದಾರೆ.

**तत्र न तावत् प्रधानस्य शाब्दत्वमात्रमिह निरस्यम् । त्वन्मते समन्वयसूत्रे सर्वसमन्वयस्याप्रतिज्ञातत्वेन प्रधानस्याव्यक्तादिश(ब्दमुख्यार्थ)ब्दार्थत्वेऽप्यविरोधेन तन्मात्रनिरसनस्य निष्फलत्वात् ।**

ಇವರ ಈ ಅಧಿಕರಣಶರೀರವೂ ಸರಿಯಲ್ಲ. ಏಕೆಂದರೆ ಪ್ರಧಾನಕ್ಕೆ ಯಾವುದೇ ಶಬ್ದಗಳಿಂದಲೂ ಪ್ರತಿಪಾದ್ಯತ್ವವು ಇಲ್ಲವೆಂದು ಸಿದ್ಧಾಂತ ಮಾಡುತ್ತಿದ್ದಿರೋ, ಅಥವಾ ಜಗತ್ಕಾರಣತ್ವಪ್ರತಿಪಾದಕವಾದ ಶಬ್ದಗಳಿಂದ ಪ್ರತಿಪಾದ್ಯತ್ವವಿಲ್ಲವೆಂದು ಸಿದ್ಧಾಂತ ಮಾಡುತ್ತಿದ್ದೀರೋ, ಪ್ರಧಾನವು ಯಾವುದೇ ಶಬ್ದಗಳಿಂದಲೂ ಕೂಡ ಪ್ರತಿಪಾದ್ಯವಲ್ಲವೆಂದು ನಿರಾಕರಿಸುತ್ತಿದ್ದೇವೆಂಬ ಮೊದಲನೆಯ ಪಕ್ಷವು ಸರಿಯಲ್ಲ. ಏಕೆಂದರೆ ನಿಮ್ಮ ಮತದಲ್ಲಿ ಸಕಲಶಬ್ದಗಳ ಸಮನ್ವಯವು ಈ ಅಧ್ಯಾಯದ ಉದ್ದೇಶವೆಂದು ಸಮನ್ವಯ ಸೂತ್ರದಲ್ಲಿ ಪ್ರತಿಜ್ಞೆ ಮಾಡಿಲ್ಲ. ಆದ್ದರಿಂದ ಪ್ರಧಾನಕ್ಕೆ ಅವ್ಯಕ್ತಾದಿಶಬ್ದ ಪ್ರತಿಪಾದ್ಯತ್ವವನ್ನು ಹೇಳಿದರೂ ಕೂಡ ಸಮನ್ವಯಸೂತ್ರದ ಪ್ರತಿಜ್ಞೆಗೇನೂ ವಿರೋಧ ಬರುವುದಿಲ್ಲ. ಆದ್ದರಿಂದ ಯಾವುದೇ ಶಬ್ದಗಳಿಂದಲೂ ಪ್ರಧಾನವು ಪ್ರತಿಪಾದ್ಯವಲ್ಲವೆಂದು ಸಮರ್ಥನೆ ಮಾಡುವುದರಿಂದ ನಿಮಗೆ ಯಾವುದೇ ರೀತಿಯ ಪ್ರಯೋಜನವೂ ಕೂಡ ಇರುವುದಿಲ್ಲ.

**प्रधानादितत्वानां श्रुत्यादिसिद्धताया वक्ष्यमाणत्वेनाशक्यत्वाच्च । ईक्षतिसूत्रेऽपि निष्फलत्वाशक्यत्वाभ्यां शाब्दत्वमात्राभावोक्त्ययोगाच्च ।**

ಮತ್ತು ಪ್ರಕೃತಿ ಮೊದಲಾದವು ಶ್ರುತಿಪ್ರತಿಪಾದ್ಯವಾಗಿವೆಯೆಂಬುದನ್ನು ಮುಂದೆ ನಾವೇ ಸಮರ್ಥಿಸುತ್ತೇವೆ. ಆದ್ದರಿಂದ ಶಬ್ದಪ್ರತಿಪಾದ್ಯವಲ್ಲವೆಂದು ಸಮರ್ಥಿಸುವುದು ನಿಮ್ಮಿಂದ ಸಾಧ್ಯವಾಗುವುದಿಲ್ಲ. ಮತ್ತು ಈಕ್ಷತ್ಯಧಿಕರಣದ ಸೂತ್ರದಲ್ಲಿಯೂ ಕೂಡ ಪ್ರಧಾನವು ಯಾವುದೇ ಶಬ್ದದಿಂದಲೂ ಪ್ರತಿಪಾದ್ಯವಲ್ಲವೆಂದು ಸಮರ್ಥಿಸುವುದು ಕೂಡುವುದಿಲ್ಲ. ಏಕೆಂದರೆ ಹಾಗೇ ಸಮರ್ಥನೆ ಮಾಡುವುದರಿಂದ ಯಾವುದೇ ಪ್ರಯೋಜನವೂ ಇಲ್ಲ. ಮತ್ತು ಹಾಗೇ ಸಮರ್ಥನೆ ಮಾಡಲು ಸಾಧ್ಯವೂ ಇರುವುದಿಲ್ಲ.

**नापि कारणत्वेन शाब्दत्वं निरस्यम् । इह कारणत्वाभावात् । नच ''महतः-परम्'' इति परशब्देन तद्भानम् । ''अव्यक्तात् पुरुषः परः'' इत्यादाविव तेन तत उत्तमत्वस्यैव प्रतीतेः । तस्मान्न पूर्वपक्षोदयः ।**

ಆನುಮಾನಿಕಾಧಿಕರಣ (೧-೪-೧)

ಇನ್ನು ಜಗತ್ಕಾರಣತ್ವಪ್ರತಿಪಾದಕವಾದ ಶಬ್ದಗಳಿಂದಷ್ಟೇ ಪ್ರಧಾನವು ಪ್ರತಿಪಾದ್ಯವಲ್ಲವೆಂಬ ಎರಡನೆಯ ಪಕ್ಷವನ್ನು ಹೇಳಬೇಕು. ಆದರೆ ಪ್ರಕೃತ 'ಮಹತಃ ಪರಮ್' ಇತ್ಯಾದಿ ಶ್ರುತಿಯು ಜಗತ್ಕಾರಣತ್ವವನ್ನು ಹೇಳುತ್ತಲೇ ಇಲ್ಲ. 'ಮಹತಃ ಪರಮ್' ಎಂಬಲ್ಲಿರುವ ಪರಶಬ್ದದಿಂದ ಕಾರಣತ್ವವು ತಿಳಿಯುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಯಾವರೀತಿಯಾಗಿ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ 'ಪರಃ' ಎಂಬ ಶಬ್ದವು ಕೇವಲ ಉತ್ತಮ ಎಂಬರ್ಥವನ್ನಷ್ಟೇ ಹೇಳುತ್ತಿದೆಯೋ, ಅದರಂತೆ 'ಪರ' ಶಬ್ದವೂ ಕೂಡ ಉತ್ತಮ ಎಂದಷ್ಟೇ ಅರ್ಥವನ್ನು ಹೇಳುತ್ತಿದೆ. ಹೊರತು, ಕಾರಣತ್ವವನ್ನು ಹೇಳುತ್ತಿಲ್ಲ. ಆದ್ದರಿಂದ ಅದ್ವೈತಿಗಳ ಹಾಗೂ ರಾಮಾನುಜರ ಪ್ರಕಾರ ಪೂರ್ವಪಕ್ಷವೇ ಹುಟ್ಟುವುದಿಲ್ಲ.

**प्रकाशः –**

**उभाभ्यामिति ।। तत्रान्येषां मतमेवम् । ''महतः परमव्यक्तमव्यक्तात्पुरुषः पर'' इति वाक्योक्तमव्यक्तं प्रधानमुत शरीरमिति विशये**

ವಿವರಣೆ - ಅದ್ವೈತಿಗಳ ಪ್ರಕಾರ ಅಧಿಕರಣಶರೀರ ಹೀಗಿದೆ - 'ಮಹತಃ ಪರಮವ್ಯಕ್ತಮ್ ಅವ್ಯಕ್ತಾತ್ ಪುರುಷಃ ಪರಃ' ಎಂಬುದೇ ಈ ಅಧಿಕರಣದ ವಿಷಯವಾಕ್ಯ. ಈ ವಾಕ್ಯದಲ್ಲಿ ಶ್ರುತವಾದ ಅವ್ಯಕ್ತ ಶಬ್ದವು ಪ್ರಧಾನವನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಶರೀರವನ್ನೋ? ಎಂದು ಸಂಶಯ.

**प्रकाशः – सांख्यस्मृतावव्यक्तशब्दस्य प्रधाने रूढत्वान्न व्यक्तमव्यक्तमिति रूपादिहीने तस्मिन्नेवावयवव्युत्पत्तिसम्भवाच्चेदमव्यक्तं प्रधानमेवेतीक्षत्यधिकरणोक्तं प्रधानस्याशब्दत्वमयुक्तमिति प्राप्ते**

ಸಾಂಖ್ಯಸ್ಮೃತಿಯಲ್ಲಿ ಅವ್ಯಕ್ತಶಬ್ದವನ್ನು ಪ್ರಕೃತಿಯಲ್ಲೇ ಹೆಚ್ಚಾಗಿ ಪ್ರಯೋಗಿಸುತ್ತಾರೆ. ಆದ್ದರಿಂದ ರೂಪಾದಿಗಳಿಲ್ಲದ ಪ್ರಕೃತಿಯೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗಬೇಕು. 'ನ ವ್ಯಕ್ತಮ್ ಅವ್ಯಕ್ತಮ್' ಎಂಬ ಅವಯವಶಕ್ತಿಯಿಂದ ಪ್ರಕೃತಿಯಲ್ಲಿ ಅವ್ಯಕ್ತಶಬ್ದದ ವ್ಯುತ್ಪತ್ತಿಯು ಉಪಪನ್ನವಾಗುತ್ತದೆ. ಹೀಗೆ ಅವ್ಯಕ್ತಶಬ್ದದಿಂದ ಪ್ರಕೃತಿಯು ವಾಚ್ಯವಾಗುತ್ತಿರುವಾಗ ಈಕ್ಷತ್ಯಧಿಕರಣದಲ್ಲಿ ಪ್ರಕೃತಿಗೆ ಶಬ್ದಾವಾಚ್ಯತ್ವವನ್ನು ಹೇಳಿದ್ದು ಅಯುಕ್ತವಲ್ಲವೇ? ಇಷ್ಟು ಪೂರ್ವಪಕ್ಷ.

**प्रकाशः –** नेदमव्यक्तं प्रधानं किन्तु शरीरमेव । अव्यक्तशब्दस्यालौकिके प्रधाने लौकिकप्रसिद्ध्यभावात्सांख्यप्रसिद्धेश्च पौरुषेयतया गुणवृद्ध्यादिप्रसिद्ध्यादिवद्वेदार्था-निर्णायकत्वाद्योगस्य च शरीरेऽपि सम्भवात्प्रकरणपरिशेषाभ्यां च शरीरस्यैव ग्राह्यत्वाच्चेति सिद्धान्त इति । प्रकरणपरिशेषौ तद्भाष्य एव व्यक्तौ ।

ಶ್ರುತಿಯಲ್ಲಿರುವ ಅವ್ಯಕ್ತಶಬ್ದವು ಪ್ರಧಾನವನ್ನು ಪ್ರತಿಪಾದನೆ ಮಾಡುವುದಿಲ್ಲ, ಶರೀರವನ್ನೇ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ ಅಲೌಕಿಕವಾದ ಪ್ರಕೃತಿಯಲ್ಲಿ ಲೌಕಿಕ ಪ್ರಸಿದ್ಧಿಯನ್ನು ಹೇಳಲು ಸಾಧ್ಯವಿಲ್ಲ. ಸಾಂಖ್ಯಸ್ಮೃತಿಯೂ ಕೂಡ ಪೌರುಷೇಯವಾದ್ದರಿಂದ ಲೌಕಿಕಪ್ರಸಿದ್ಧಿಯೆಂದೇ ಕರೆಸಿಕೊಳ್ಳುತ್ತದೆ. ಸಾಂಖ್ಯಸ್ಮೃತಿಪ್ರಸಿದ್ಧಿಯೂ ವೇದಾರ್ಥನಿರ್ಣಯಕ್ಕೆ ಕಾರಣವಲ್ಲ. ಯಾವರೀತಿಯಾಗಿ ಪಾಣಿನಿ ವ್ಯಾಕರಣದಲ್ಲಿ 'ಅದೇಙ್ ಗುಣಃ' 'ವೃದ್ಧಿರಾದೈಚ್' ಇತ್ಯಾದಿ ಸೂತ್ರಗಳಿಂದ ಗುಣ, ವೃದ್ಧಿ ಮೊದಲಾದ ಸಂಜ್ಞೆಗಳನ್ನು ಹೇಳಲಾಗಿದೆ. ಈ ಸಂಜ್ಞೆಗಳನ್ನು ಲೋಕದಲ್ಲಿ ಗುಣವಂತನು, ಬಹಳ ಅಭಿವೃದ್ಧಿಶೀಲನು ಎಂಬರ್ಥದಲ್ಲಿ ಯಾರೂ ಕೂಡ ಹೇಗೆ ಪ್ರಯೋಗಿಸುವುದಿಲ್ಲವೋ, ಅದರಂತೆ ಸಾಂಖ್ಯಸ್ಮೃತಿ ಪ್ರಸಿದ್ಧಿಯೂ ಸಹ ಆಯಾ ಶಾಸ್ತ್ರಗಳಿಗೆ ಸಂಬಂಧಪಟ್ಟಿದ್ದೇ ಹೊರತು, ವೇದಾರ್ಥನಿರ್ಣಯಕ್ಕೆ ಸಂಬಂಧಪಟ್ಟಿದ್ದಲ್ಲ. ಯೋಗಾರ್ಥವನ್ನು ವಿವಕ್ಷಿಸಿ ಅವ್ಯಕ್ತಶಬ್ದಕ್ಕೆ ಪ್ರಕೃತಿಯೆಂದು ವ್ಯಾಖ್ಯಾನ ಮಾಡುವುದಾದರೆ, ಶರೀರದಲ್ಲಿಯೂ ಯೋಗಾರ್ಥವನ್ನು ಹೇಳಬಹುದು. ಶರೀರಕ್ಕೆ ಕಾರಣವಾಗಿರುವಂತಹ ಭೂತಸೂಕ್ಷ್ಮದಲ್ಲಿಯೂ 'ನ ವ್ಯಕ್ತಮ್ ಅವ್ಯಕ್ತಮ್' ಎಂಬ ನಿಷ್ಪತ್ತಿಯನ್ನು ಮಾಡಲು ಬರುತ್ತದೆ. ಕಾರಣವಾಚಕವಾದ ಶಬ್ದವನ್ನು ಕಾರ್ಯದಲ್ಲಿಯೂ ಪ್ರಯೋಗಿಸಬಹುದಾದ್ದರಿಂದ ಭೂತಸೂಕ್ಷ್ಮವಾಚಿಯಾದ ಅವ್ಯಕ್ತಶಬ್ದವು ಶರೀರವನ್ನೂ ಕೂಡ ಪ್ರತಿಪಾದನೆ ಮಾಡುತ್ತದೆ. ಪ್ರಕರಣ ಹಾಗೂ ಪರಿಶೇಷ ಪ್ರಮಾಣಗಳಿಂದಲೂ ಶರೀರವೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ತಿಳಿಯುತ್ತದೆ. ಇಷ್ಟು ಸಿದ್ಧಾಂತ. ಪ್ರಕರಣ ಹಾಗೂ ಪರಿಶೇಷಪ್ರಮಾಣಗಳ ಬಗ್ಗೆ ಶಾಂಕರಭಾಷ್ಯದಲ್ಲಿಯೇ ಸ್ಪಷ್ಟವಾಗಿ ಹೇಳಿದ್ದಾರೆ.

**प्रकाशः** – केषाञ्चित्तु प्राग्वत् सन्देहे इदमव्यक्तं सांख्यसिद्धं प्रधानमेव । सांख्यतन्त्रप्रत्यभिज्ञानात् । महदव्यक्तपुरुषाः सांख्यतन्त्रे परापरभावेन यथा प्रसिद्धास्तथैव श्रुतौ प्रत्यभिज्ञानात् । ''पुरुषान्न परं किञ्चित्'' इति पञ्चविंशक-पुरुषातिरिक्ततत्वनिषेधाच्चेति प्राप्ते

ರಾಮಾನುಜರ ಅಧಿಕರಣಶರೀರ ಹೀಗಿದೆ - 'ಮಹತಃ ಪರಮವ್ಯಕ್ತಮ್' ಎಂಬುದೇ ವಿಷಯವಾಕ್ಯ. ಈ ವಾಕ್ಯದಲ್ಲಿ ಹೇಳಲ್ಪಟ್ಟ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳುತ್ತದೋ, ಅಥವಾ ಶರೀರವನ್ನು ಹೇಳುತ್ತದೋ ಎಂದು ಸಂದೇಹ. ಅವ್ಯಕ್ತಶಬ್ದವು ಸಾಂಖ್ಯಪ್ರಸಿದ್ಧವಾದ ಪ್ರಧಾನವನ್ನೇ ಹೇಳುತ್ತದೆಂದು ಪೂರ್ವಪಕ್ಷ. ಏಕೆಂದರೆ ಸಾಂಖ್ಯಸ್ಮೃತಿಯಲ್ಲಿ ಪರಾಪರಭಾವದಿಂದ ಯಾವ ಪದಾರ್ಥಗಳು ಹೇಳಲ್ಪಟ್ಟವೆಯೋ, ಅದೇ ರೀತಿಯಾಗಿ ಇಲ್ಲಿಯೂ ಕೂಡ ಮಹದಾದಿ ಪದಾರ್ಥಗಳು ಉಕ್ತವಾಗಿವೆ. ಸಾಂಖ್ಯಸ್ಮೃತಿಯಲ್ಲಿ ಇಂದ್ರಿಯಕ್ಕಿಂತ ವಿಷಯವು ಶ್ರೇಷ್ಠ. ವಿಷಯಕ್ಕಿಂತಲೂ ಮನಸ್ಸು ಶ್ರೇಷ್ಠ. ಮನಸ್ಸಿಗಿಂತಲೂ ಬುದ್ಧಿಯು ಶ್ರೇಷ್ಠ. ಬುದ್ಧಿಗಿಂತಲೂ ಮಹತ್ತತ್ತ್ವ ಶ್ರೇಷ್ಠ. ಮಹತ್ತತ್ತ್ವಕ್ಕಿಂತಲೂ ಅವ್ಯಕ್ತ ಶ್ರೇಷ್ಠ. ಅವ್ಯಕ್ತಕ್ಕಿಂತಲೂ ಪುರುಷ ಶ್ರೇಷ್ಠ ಎಂದು ಸಾಂಖ್ಯಸ್ಮೃತಿಯಲ್ಲಿ ಹೇಳಿದ್ದಾರೆ. ಇದೇ ರೀತಿಯಾಗಿ ಪ್ರಕೃತ ಉಪನಿಷತ್ತಿನಲ್ಲಿಯೂ ಹೇಳುತ್ತಿರುವುದರಿಂದ ಅವ್ಯಕ್ತಶಬ್ದದಿಂದ ಪ್ರಧಾನವೇ ಪ್ರತಿಪಾದ್ಯವೆಂದು ವಿವಕ್ಷಿಸಬೇಕು. ಹೀಗೆ ಸಾಂಖ್ಯಸ್ಮೃತಿ ಪ್ರತ್ಯಭಿಜ್ಞಾನವೆಂಬ ಕಾರಣದಿಂದ ಮತ್ತು 'ಪುರುಷಾನ್ನ ಪರಂ ಕಿಂಚಿತ್' ಎಂಬುದಾಗಿ ಇಪ್ಪತ್ತೈದನೆಯ ಪುರುಷನಿಗಿಂತ

ಇನ್ನು ಜಗತ್ಕಾರಣತ್ವಪ್ರತಿಪಾದಕವಾದ ಶಬ್ದಗಳಿಂದಷ್ಟೇ ಪ್ರಧಾನವು ಪ್ರತಿಪಾದ್ಯವಲ್ಲವೆಂಬ ಎರಡನೆಯ ಪಕ್ಷವನ್ನು ಹೇಳಬೇಕು. ಆದರೆ ಪ್ರಕೃತ 'ಮಹತಃ ಪರಮ್' ಇತ್ಯಾದಿ ಶ್ರುತಿಯು ಜಗತ್ಕಾರಣತ್ವವನ್ನು ಹೇಳುತ್ತಲೇ ಇಲ್ಲ. 'ಮಹತಃ ಪರಮ್' ಎಂಬಲ್ಲಿರುವ ಪರಶಬ್ದದಿಂದ ಕಾರಣತ್ವವು ತಿಳಿಯುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಯಾವರೀತಿಯಾಗಿ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ 'ಪರಃ' ಎಂಬ ಶಬ್ದವು ಕೇವಲ ಉತ್ತಮ ಎಂಬರ್ಥವನ್ನಷ್ಟೇ ಹೇಳುತ್ತಿದೆಯೋ, ಅದರಂತೆ 'ಪರ' ಶಬ್ದವೂ ಕೂಡ ಉತ್ತಮ ಎಂದಷ್ಟೇ ಅರ್ಥವನ್ನು ಹೇಳುತ್ತಿದೆ. ಹೊರತು, ಕಾರಣತ್ವವನ್ನು ಹೇಳುತ್ತಿಲ್ಲ. ಆದ್ದರಿಂದ ಅದ್ವೈತಿಗಳ ಹಾಗೂ ರಾಮಾನುಜರ ಪ್ರಕಾರ ಪೂರ್ವಪಕ್ಷವೇ ಹುಟ್ಟುವುದಿಲ್ಲ.

**प्रकाशः –**

**उभाभ्यामिति ।। तत्रान्येषां मतमेवम् । ''महतः परमव्यक्तमव्यक्तात्पुरुषः पर'' इति वाक्योक्तमव्यक्तं प्रधानमुत शरीरमिति विशये**

ವಿವರಣೆ - ಅದ್ವೈತಿಗಳ ಪ್ರಕಾರ ಅಧಿಕರಣಶರೀರ ಹೀಗಿದೆ - 'ಮಹತಃ ಪರಮವ್ಯಕ್ತಮ್ ಅವ್ಯಕ್ತಾತ್ ಪುರುಷಃ ಪರಃ' ಎಂಬುದೇ ಈ ಅಧಿಕರಣದ ವಿಷಯವಾಕ್ಯ. ಈ ವಾಕ್ಯದಲ್ಲಿ ಶ್ರುತವಾದ ಅವ್ಯಕ್ತ ಶಬ್ದವು ಪ್ರಧಾನವನ್ನು ಪ್ರತಿಪಾದನೆ ಮಾಡುತ್ತಿದೆಯೋ, ಅಥವಾ ಶರೀರವನ್ನೋ? ಎಂದು ಸಂಶಯ.

**प्रकाशः – सांख्यस्मृतावव्यक्तशब्दस्य प्रधाने रूढत्वान्न व्यक्तमव्यक्तमिति रूपादिहीने तस्मिन्नेवावयवव्युत्पत्तिसम्भवाच्चेदमव्यक्तं प्रधानमेवेतीक्षत्यधिकरणोक्तं प्रधानस्याशब्दत्वमयुक्तमिति प्राप्ते**

ಸಾಂಖ್ಯಸ್ಮೃತಿಯಲ್ಲಿ ಅವ್ಯಕ್ತಶಬ್ದವನ್ನು ಪ್ರಕೃತಿಯಲ್ಲೇ ಹೆಚ್ಚಾಗಿ ಪ್ರಯೋಗಿಸುತ್ತಾರೆ. ಆದ್ದರಿಂದ ರೂಪಾದಿಗಳಿಲ್ಲದ ಪ್ರಕೃತಿಯೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗಬೇಕು. 'ನ ವ್ಯಕ್ತಮ್ ಅವ್ಯಕ್ತಮ್' ಎಂಬ ಅವಯವಶಕ್ತಿಯಿಂದ ಪ್ರಕೃತಿಯಲ್ಲಿ ಅವ್ಯಕ್ತಶಬ್ದದ ವ್ಯುತ್ಪತ್ತಿಯು ಉಪಪನ್ನವಾಗುತ್ತದೆ. ಹೀಗೆ ಅವ್ಯಕ್ತಶಬ್ದದಿಂದ ಪ್ರಕೃತಿಯು ವಾಚ್ಯವಾಗುತ್ತಿರುವಾಗ ಈಕ್ಷತ್ಯಧಿಕರಣದಲ್ಲಿ ಪ್ರಕೃತಿಗೆ ಶಬ್ದಾವಾಚ್ಯತ್ವವನ್ನು ಹೇಳಿದ್ದು ಅಯುಕ್ತವಲ್ಲವೇ? ಇಷ್ಟು ಪೂರ್ವಪಕ್ಷ.

**प्रकाशः – नेदमव्यक्तं प्रधानं किन्तु शरीरमेव । अव्यक्तशब्दस्यालौकिके प्रधाने लौकिकप्रसिद्ध्यभावात्सांख्यप्रसिद्धेश्च पौरुषेयतया गुणवृद्ध्यादिप्रसिद्ध्यादिवद्वेदार्था-निर्णायकत्वाद्योगस्य च शरीरेऽपि सम्भवात्प्रकरणपरिशेषाभ्यां च शरीरस्यैव ग्राह्यत्वाच्चेति सिद्धान्त इति । प्रकरणपरिशेषौ तद्भाष्य एव व्यक्तौ ।**

ಶ್ರುತಿಯಲ್ಲಿರುವ ಅವ್ಯಕ್ತಶಬ್ದವು ಪ್ರಧಾನವನ್ನು ಪ್ರತಿಪಾದನೆ ಮಾಡುವುದಿಲ್ಲ, ಶರೀರವನ್ನೇ ಪ್ರತಿಪಾದನೆ ಮಾಡುತ್ತದೆ. ಏಕೆಂದರೆ ಅಲೌಕಿಕವಾದ ಪ್ರಕೃತಿಯಲ್ಲಿ ಲೌಕಿಕ ಪ್ರಸಿದ್ಧಿಯನ್ನು ಹೇಳಲು ಸಾಧ್ಯವಿಲ್ಲ. ಸಾಂಖ್ಯಸ್ಮೃತಿಯೂ ಕೂಡ ಪೌರುಷೇಯವಾದ್ದರಿಂದ ಲೌಕಿಕಪ್ರಸಿದ್ಧಿಯೆಂದೇ ಕರೆಸಿಕೊಳ್ಳುತ್ತದೆ. ಸಾಂಖ್ಯಸ್ಮೃತಿಪ್ರಸಿದ್ಧಿಯೂ ವೇದಾರ್ಥನಿರ್ಣಯಕ್ಕೆ ಕಾರಣವಲ್ಲ. ಯಾವರೀತಿಯಾಗಿ ಪಾಣಿನಿ ವ್ಯಾಕರಣದಲ್ಲಿ 'ಅದೇಙ್ ಗುಣಃ' 'ವೃದ್ಧಿರಾದೈಚ್' ಇತ್ಯಾದಿ ಸೂತ್ರಗಳಿಂದ ಗುಣ, ವೃದ್ಧಿ ಮೊದಲಾದ ಸಂಜ್ಞೆಗಳನ್ನು ಹೇಳಲಾಗಿದೆ. ಈ ಸಂಜ್ಞೆಗಳನ್ನು ಲೋಕದಲ್ಲಿ ಗುಣವಂತನು, ಬಹಳ ಅಭಿವೃದ್ಧಿಶೀಲನು ಎಂಬರ್ಥದಲ್ಲಿ ಯಾರೂ ಕೂಡ ಹೇಗೆ ಪ್ರಯೋಗಿಸುವುದಿಲ್ಲವೋ, ಅದರಂತೆ ಸಾಂಖ್ಯಸ್ಮೃತಿ ಪ್ರಸಿದ್ಧಿಯೂ ಸಹ ಆಯಾ ಶಾಸ್ತ್ರಗಳಿಗೆ ಸಂಬಂಧಪಟ್ಟಿದ್ದೇ ಹೊರತು, ವೇದಾರ್ಥನಿರ್ಣಯಕ್ಕೆ ಸಂಬಂಧಪಟ್ಟಿದ್ದಲ್ಲ. ಯೋಗಾರ್ಥವನ್ನು ವಿವಕ್ಷಿಸಿ ಅವ್ಯಕ್ತಶಬ್ದಕ್ಕೆ ಪ್ರಕೃತಿಯೆಂದು ವ್ಯಾಖ್ಯಾನ ಮಾಡುವುದಾದರೆ, ಶರೀರದಲ್ಲಿಯೂ ಯೋಗಾರ್ಥವನ್ನು ಹೇಳಬಹುದು. ಶರೀರಕ್ಕೆ ಕಾರಣವಾಗಿರುವಂತಹ ಭೂತಸೂಕ್ಷ್ಮದಲ್ಲಿಯೂ 'ನ ವ್ಯಕ್ತಮ್ ಅವ್ಯಕ್ತಮ್' ಎಂಬ ನಿಷ್ಪತ್ತಿಯನ್ನು ಮಾಡಲು ಬರುತ್ತದೆ. ಕಾರಣವಾಚಕವಾದ ಶಬ್ದವನ್ನು ಕಾರ್ಯದಲ್ಲಿಯೂ ಪ್ರಯೋಗಿಸಬಹುದಾದ್ದರಿಂದ ಭೂತಸೂಕ್ಷ್ಮವಾಚಿಯಾದ ಅವ್ಯಕ್ತಶಬ್ದವು ಶರೀರವನ್ನೂ ಕೂಡ ಪ್ರತಿಪಾದನೆ ಮಾಡುತ್ತದೆ. ಪ್ರಕರಣ ಹಾಗೂ ಪರಿಶೇಷ ಪ್ರಮಾಣಗಳಿಂದಲೂ ಶರೀರವೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗುತ್ತದೆಂದು ತಿಳಿಯುತ್ತದೆ. ಇಷ್ಟು ಸಿದ್ಧಾಂತ. ಪ್ರಕರಣ ಹಾಗೂ ಪರಿಶೇಷಪ್ರಮಾಣಗಳ ಬಗ್ಗೆ ಶಾಂಕರಭಾಷ್ಯದಲ್ಲಿಯೇ ಸ್ಪಷ್ಟವಾಗಿ ಹೇಳಿದ್ದಾರೆ.

**ಪ್ರಕಾಶಃ** – केषाञ्चित्तु प्राग्वत् सन्देहे इदमव्यक्तं सांख्यसिद्धं प्रधानमेव । सांख्यतन्त्रप्रत्यभिज्ञानात् । महदव्यक्तपुरुषाः सांख्यतन्त्रे परापरभावेन यथा प्रसिद्धास्तथैव श्रुतौ प्रत्यभिज्ञानात् । ''पुरुषान्न परं किञ्चित्'' इति पञ्चविंशक-पुरुषातिरिक्ततत्वनिषेधाच्चेति प्राप्ते

ರಾಮಾನುಜರ ಅಧಿಕರಣಶರೀರ ಹೀಗಿದೆ - 'ಮಹತಃ ಪರಮವ್ಯಕ್ತಮ್' ಎಂಬುದೇ ವಿಷಯವಾಕ್ಯ. ಈ ವಾಕ್ಯದಲ್ಲಿ ಹೇಳಲ್ಪಟ್ಟ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳುತ್ತದೋ, ಅಥವಾ ಶರೀರವನ್ನು ಹೇಳುತ್ತದೋ ಎಂದು ಸಂದೇಹ. ಅವ್ಯಕ್ತಶಬ್ದವು ಸಾಂಖ್ಯಪ್ರಸಿದ್ಧವಾದ ಪ್ರಧಾನವನ್ನೇ ಹೇಳುತ್ತದೆಂದು ಪೂರ್ವಪಕ್ಷ. ಏಕೆಂದರೆ ಸಾಂಖ್ಯಸ್ಮೃತಿಯಲ್ಲಿ ಪರಾಪರಭಾವದಿಂದ ಯಾವ ಪದಾರ್ಥಗಳು ಹೇಳಲ್ಪಟ್ಟಿವೆಯೋ, ಅದೇ ರೀತಿಯಾಗಿ ಇಲ್ಲಿಯೂ ಕೂಡ ಮಹದಾದಿ ಪದಾರ್ಥಗಳು ಉಕ್ತವಾಗಿವೆ. ಸಾಂಖ್ಯಸ್ಮೃತಿಯಲ್ಲಿ ಇಂದ್ರಿಯಕ್ಕಿಂತ ವಿಷಯವು ಶ್ರೇಷ್ಠ. ವಿಷಯಕ್ಕಿಂತಲೂ ಮನಸ್ಸು ಶ್ರೇಷ್ಠ. ಮನಸ್ಸಿಗಿಂತಲೂ ಬುದ್ಧಿಯು ಶ್ರೇಷ್ಠ. ಬುದ್ಧಿಗಿಂತಲೂ ಮಹತ್ತತ್ತ್ವ ಶ್ರೇಷ್ಠ. ಮಹತ್ತತ್ತ್ವಕ್ಕಿಂತಲೂ ಅವ್ಯಕ್ತ ಶ್ರೇಷ್ಠ. ಅವ್ಯಕ್ತಕ್ಕಿಂತಲೂ ಪುರುಷ ಶ್ರೇಷ್ಠ ಎಂದು ಸಾಂಖ್ಯಸ್ಮೃತಿಯಲ್ಲಿ ಹೇಳಿದ್ದಾರೆ. ಇದೇ ರೀತಿಯಾಗಿ ಪ್ರಕೃತ ಉಪನಿಷತ್ತಿನಲ್ಲಿಯೂ ಹೇಳುತ್ತಿರುವುದರಿಂದ ಅವ್ಯಕ್ತಶಬ್ದದಿಂದ ಪ್ರಧಾನವೇ ಪ್ರತಿಪಾದ್ಯವೆಂದು ವಿವಕ್ಷಿಸಬೇಕು. ಹೀಗೆ ಸಾಂಖ್ಯಸ್ಮೃತಿ ಪ್ರತ್ಯಭಿಜ್ಞಾನವೆಂಬ ಕಾರಣದಿಂದ ಮತ್ತು 'ಪುರುಷಾನ್ನ ಪರಂ ಕಿಂಚಿತ್' ಎಂಬುದಾಗಿ ಇಪ್ಪತ್ತೈದನೆಯ ಪುರುಷನಿಗಿಂತ

ಅತಿರಿಕ್ತವಾದ ತತ್ವವನ್ನು ನಿಷೇಧ ಮಾಡಿದ್ದರಿಂದಲೂ ಅವ್ಯಕ್ತ ಶಬ್ದವು ಪ್ರಕೃತಿಯನ್ನು ಪ್ರತಿಪಾದನೆ ಮಾಡುತ್ತದೆಂಬುದು ಪೂರ್ವಪಕ್ಷ.

**प्रकाशः** – शरीरमेवाव्यक्तम् । पूर्वत्र ''आत्मानं रथिनं विद्धि शरीरं रथमेव च'' इत्यादिनोपासनानिर्वृतये वश्येन्द्रियत्वापादनायात्मशरीरबुद्धिमनइन्द्रियविषयाः रथरथिसारथिप्रग्रहहयगोचरत्वेन रूपिताः । त एवेह ''इन्द्रियेभ्यः पराह्यर्था'' इति प्रत्यभिज्ञायन्ते । श्रौतप्रत्यभिज्ञानं तु प्रत्यासन्नत्वात्स्मार्तप्रत्यभिज्ञानादपि प्रबलमिति रथत्वेन रूपितं शरीरमेवेहाव्यक्तपरिणामित्वादव्यक्तपदेन गृह्यते । ''अव्यक्तात्पुरुषःपर'' इत्युक्तः पुरुषो न पञ्चविंशको जीवः । किन्तु प्राप्यः परमात्मैवेह वशीकार्यकाष्ठात्वेनोक्त इति सिद्धान्त इति ।

ಅವ್ಯಕ್ತಶಬ್ದದಿಂದ ಶರೀರವೇ ಪ್ರತಿಪಾದ್ಯವಾಗುತ್ತದೆಂದು ಸಿದ್ಧಾಂತ. ಏಕೆಂದರೆ 'ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ' ಎಂಬುದಾಗಿ ಇಂದ್ರಿಯಗಳನ್ನು ವಶಮಾಡಿಕೊಳ್ಳಬೇಕೆಂದು ಹೇಳಲಾಗಿದೆ. ಇಂದ್ರಿಯಗಳನ್ನು ವಶಮಾಡಿಕೊಳ್ಳಲು ಶರೀರವನ್ನು ರಥವೆಂದು, ಆತ್ಮನನ್ನು ರಥಿಯೆಂದು ಬುದ್ಧಿಯನ್ನು ಸಾರಥಿಯೆಂದು, ಇಂದ್ರಿಯಗಳನ್ನು ಕುದುರೆಯೆಂದು ವಿಷಯಗಳನ್ನು ಮಾರ್ಗವೆಂದು ರೂಪಕಾಲಂಕಾರದಿಂದ ನಿರೂಪಣೆ ಮಾಡಲಾಗಿದೆ. ಶ್ರುತಿಯಲ್ಲಿ ಹೀಗೆ ಹೇಳಿದ್ದನ್ನೇ ಮುಂದೆ 'ಇಂದ್ರಿಯೇಭ್ಯಃ ಪರಾಹ್ಯರ್ಥಾಃ' ಎಂಬಲ್ಲಿ ಪ್ರತ್ಯಭಿಜ್ಞಾನ ಮಾಡಲಾಗಿದೆ. ಶ್ರುತಿಯಲ್ಲಿ ಶ್ರೌತಪ್ರತ್ಯಭಿಜ್ಞಾನ ಮಾಡುವುದೇ ಹತ್ತಿರವಾದ್ದರಿಂದ ಶ್ರೇಷ್ಠವಾಗುತ್ತದೆ. ಸ್ವಾರ್ಥ ಪ್ರತ್ಯಭಿಜ್ಞಾನವು ದೂರದಲ್ಲಿರುವುದರಿಂದ ದುರ್ಬಲವಾಗಿದೆ. ಆದ್ದರಿಂದ ರಥವೆಂದು ಹೇಳಲ್ಪಟ್ಟ ಶರೀರವೇ ಇಲ್ಲಿ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಅಂದರೆ ಅವ್ಯಕ್ತವೆನಿಸಿದ ಪ್ರಕೃತಿಯ ಪರಿಣಾಮವಾದ್ದರಿಂದ, ಶರೀರವನ್ನು ಅವ್ಯಕ್ತಶಬ್ದದಿಂದ ಕರೆಯಲಾಗಿದೆಯೆಂದು ತಿಳಿಯಬೇಕು. 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಹೇಳಲ್ಪಟ್ಟ ಪುರುಷನೆಂದರೆ ಇಪ್ಪತ್ತೈದನೆಯ ತತ್ವದಲ್ಲಿ ಸೇರುವ ಜೀವನಲ್ಲ. ಹೊಂದಲು ಯೋಗ್ಯನಾದ ಪರಮಾತ್ಮನೇ ವಿವಕ್ಷಿತನಾಗಿದ್ದಾನೆ. ವಶಮಾಡಿಕೊಳ್ಳಲು ಅರ್ಹವಾದ ಇಂದ್ರಿಯ, ಅರ್ಥ ಇವುಗಳ ಕೊನೆಯು ಪರಮಾತ್ಮನಲ್ಲಿ ಪರ್ಯವಸಾನವಾಗುತ್ತದೆ. ಪರಮಾತ್ಮನಿಗೋಸ್ಕರವೇ ಎಲ್ಲವನ್ನೂ ಕೂಡ ವಶಮಾಡಿಕೊಳ್ಳುತ್ತೇವೆ. ಆದ್ದರಿಂದ ಕೊನೆಯಲ್ಲಿ ಪುರುಷಶಬ್ದದಿಂದ ಪರಮಾತ್ಮನನ್ನು ಕರೆಯಲಾಗಿದೆ. ಇಷ್ಟು ಸಿದ್ಧಾಂತ.

**प्रकाशः** – तत्र सिद्धान्ते किं प्रधानस्य शब्दप्रतिपाद्यत्वमेव निरस्यतेऽथ कारणत्वेनेति हृदि विकल्प्य ''न शब्दवाच्यतैवात्र प्रधानस्य निषिध्यते'' इत्यनुव्याख्यानसुधयोरुक्तदोषेणाद्यं निराह – **तत्रेति** ।।

ಶಾಂಕರಭಾಷ್ಯ ಹಾಗೂ ರಾಮಾನುಜಭಾಷ್ಯದ ಸಿದ್ಧಾಂತದಲ್ಲಿ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನೇ ನಿರಾಕರಣೆ ಮಾಡುತ್ತೀರೋ, ಅಥವಾ ಜಗತ್ಕಾರಣತ್ವೇನ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ

ಮಾಡುತ್ತೀರೋ? ಎಂದು ಪ್ರಶ್ನಿಸುತ್ತೇವೆ. 'ನ ಶಬ್ದವಾಚ್ಯತೈವಾತ್ರ ಪ್ರಧಾನಸ್ಯ ನಿಷಿಧ್ಯತೇ' ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನೇ ನಿರಾಕರಣೆ ಮಾಡುತ್ತೇವೆಂಬ ಪ್ರಥಮಪಕ್ಷವು ಯುಕ್ತವಾಗುವುದಿಲ್ಲ ಎಂದು ಅನುವ್ಯಾಖ್ಯಾನ ಹಾಗೂ ಸುಧೆಯಲ್ಲಿ ದೋಷವನ್ನು ಹೇಳಿದ್ದಾರೆ. ಅದನ್ನೇ 'ತತ್ರ' ಇತ್ಯಾದಿ ಗ್ರಂಥದಿಂದ ವಿವರಿಸುತ್ತಿದ್ದಾರೆ.

**प्रकाशः – त्वन्मत इति** ।। उभयमतेपीत्यर्थः । **''सर्ववेदेतिहासेषु पुराणेषु च सङ्ग्रहात्''** इत्यनुव्याख्यानसुधयोरुक्तमाह ।। **प्रधानादीति** ।। **वक्ष्यमाणत्वेनेति** ।। **अत्रैवाग्र इति भावः ।**

'ತ್ವನ್ಮತೇ' ಎಂದರೆ ಶಾಂಕರ ಹಾಗೂ ರಾಮಾನುಜ ಮತದಲ್ಲಿ ಎಂದರ್ಥ. 'ಸರ್ವವೇದೇತಿಹಾಸೇಷು ಪುರಾಣೇಷು ಚ ಸಂಗ್ರಹಾತ್' ಎಂಬ ಅನುವ್ಯಾಖ್ಯಾನ ಹಾಗೂ ಸುಧೆಯಲ್ಲಿ ಹೇಳಲ್ಪಟ್ಟ ವಿಷಯವನ್ನೇ 'ಪ್ರಧಾನಾದಿ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ವಕ್ಷ್ಯಮಾಣತ್ವೇನ' ಎಂದರೆ ಪ್ರಧಾನಾದಿಗಳೂ ಕೂಡ ಶಬ್ದಪ್ರತಿಪಾದ್ಯವೆಂದು ಮುಂದೆ ಹೇಳುತ್ತೇವೆ ಎಂದರ್ಥ.

**प्रकाशः –** ''न शब्दवाच्यतैवात्र प्रधानस्य निषिध्यते । सर्ववेदेतिहासेषु' इति श्लोकेऽत्रेत्यनेन बुद्धिस्थमीक्षत्यधिकरणमुच्यत इत्यर्थान्तरमभिप्रेत्येक्षत्यधिकरणोक्तमित्येतदपि निराह – **ईक्षतीति** ।।

'ನ ಶಬ್ದವಾಚ್ಯತೈವಾತ್ರ ಪ್ರಧಾನಸ್ಯ ನಿಷಿಧ್ಯತೇ । ಸರ್ವವೇದೇತಿಹಾಸೇಷು' ಎಂಬ ಶ್ಲೋಕದಲ್ಲಿ 'ಅತ್ರ' ಎಂಬ ಪದದಿಂದ ಬುದ್ಧಿಸ್ಥವಾದ ಈಕ್ಷತ್ಯಧಿಕರಣವನ್ನು ವಿವಕ್ಷಿಸಿದ್ದಾರೆ. ಹೀಗೆ ಮತ್ತೊಂದು ಅರ್ಥವನ್ನು ಹೇಳಿ, ಈಕ್ಷತ್ಯಧಿಕರಣದಲ್ಲಿ ಶಬ್ದ ಅವ್ಯಾಚ್ಯತ್ವವನ್ನು ಹೇಳಿದ್ದೂ ಕೂಡ ಅಯುಕ್ತವಾಗಿದೆಯೆಂದು 'ಈಕ್ಷತಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः – निष्फलत्वेति** ।। उक्तरीत्येति भावः । कारणत्वेन शब्दवाच्यता नैवात्र निषिध्यत इत्यर्थान्तरमभिप्रेत्य द्वितीयं निराह – **नापीति** ।।

ಪ್ರಧಾನವು ಯಾವುದೇ ಶಬ್ದದಿಂದ ವಾಚ್ಯವಾಗುವುದಿಲ್ಲವೆಂದು ಹೇಳುವುದು ನಿಷ್ಫಲವಾಗಿದೆ. ಹಿಂದೆ ಹೇಳಿದಂತೆ ಇದನ್ನು ತಿಳಿಯಬೇಕು. ಜಗತ್ಕಾರಣತ್ವೇನ ಪ್ರಧಾನವು ಶಬ್ದವಾಚ್ಯವಲ್ಲ ಎಂಬ ಎರಡನೆಯ ಪಕ್ಷವನ್ನು 'ನಾಪಿ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः –** ननु भामत्यां ''न ह्येते प्रधानकारणत्वं जगत आहुः । अपि तु प्रधानसद्भावमात्रम् । नच तत्सद्भावमात्रेण जन्माद्यस्य यत इत्युक्तब्रह्मलक्षणस्य किञ्चित् हीयते'' इति कारणत्वाभावमेवाशङ्क्य ''महतः परमव्यक्तमित्यत्र हि

**परशब्दो विप्रकृष्टपूर्वकालतामाह । तथाच कारणत्वम्'' इति समाहितम् । कल्पतरौ च ''अर्वाचीनमहत्तत्वापेक्षया पूर्वकालत्वमविप्रकृष्टमव्यक्तस्य परशब्द आह । तथाच कारणत्वसिद्धिः । नियतप्राक्सत्वं हि तदित्यर्थः'' इत्युक्तम् । अत एव सुधायां ''कश्चिदाहेत्यादिनैतदेवानूदितमिति भावेन शङ्कते – नचेति ।।**

ಗ್ರಂಥದಲ್ಲಿ 'ನಾಪಿ ಕಾರಣತ್ವೇನ' ಇತ್ಯಾದಿ ವಾಕ್ಯದಿಂದ ಯಾವ ಶಂಕೆಯನ್ನು ಮಾಡಿಕೊಂಡು ಉತ್ತರಿಸಿದ್ದಾರೋ, ಅದಕ್ಕೂ ಕೂಡ ಅದ್ವೈತಿಗಳು ಉತ್ತರಿಸಿದ್ದಾರೆ. ಏಕೆಂದರೆ ಭಾಮತಿಯ ವಾಕ್ಯ ಹೀಗಿದೆ - 'ನ ಹ್ಯೇತೇ ಪ್ರಧಾನಕಾರಣತ್ವಂ ಜಗತಃ ಆಹುಃ । ಅಪಿ ತು ಪ್ರಧಾನಸದ್ಭಾವಮಾತ್ರಮ್ । ನಚ ತತ್ ಸದ್ಭಾವಮಾತ್ರೇಣ ಜನ್ಮಾದ್ಯಸ್ಯ ಯತ ಇತ್ಯುಕ್ತಬ್ರಹ್ಮಲಕ್ಷಣಸ್ಯ ಕಿಂಚಿತ್ ಹೀಯತೇ' 'ಜಗತ್ತಿಗೆ ಕಾರಣವೆಂದು ಹೇಳಿಯೇ ಇಲ್ಲ. ಪ್ರಧಾನವು ಇದೆಯೆಂದಷ್ಟೇ ವಾಕ್ಯದಲ್ಲಿ ಹೇಳಲಾಗಿದೆ. ಇಷ್ಟು ಹೇಳಿದ ಮಾತ್ರದಿಂದ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಿದ ಬ್ರಹ್ಮನ ಲಕ್ಷಣಕ್ಕೆ ಏನೂ ಹಾನಿಯಿಲ್ಲ'. ಹೀಗಿರುವಾಗ ಈ ಅವ್ಯಕ್ತಶಬ್ದವು ಪ್ರಧಾನಪರವಾಗಿದೆಯೆಂಬುದನ್ನು ಏಕೆ ಖಂಡನೆ ಮಾಡಬೇಕು? ಎಂದು ಅದ್ವೈತಿಗಳೇ ಆಶಂಕಿಸಿ ಹೀಗೆ ಉತ್ತರಿಸಿದ್ದರೆ - 'ಮಹತಃ ಪರಮವ್ಯಕ್ತಮಿತ್ಯತ್ರ ಹಿ ಪರಶಬ್ದೋ ವಿಪ್ರಕೃಷ್ಟ-ಪೂರ್ವಕಾಲತಾಮಾಹ । ತಥಾಚ ಕಾರಣತ್ವಮ್' ''ಮಹತಃ ಪರಮವ್ಯಕ್ತಮ್' ಎಂಬಲ್ಲಿರುವ 'ಪರ' ಶಬ್ದಕ್ಕೆ 'ಅವಿಪ್ರಕೃಷ್ಟಪೂರ್ವಕಾಲತ್ವ' ಎಂದರ್ಥ. ಕಾಲತಃ ವಿಪ್ರಕೃಷ್ಟವಾದದ್ದು ಪರಶಬ್ದದಿಂದ ಪ್ರತಿಪಾದ್ಯವಾಗುತ್ತದೆ. ಪ್ರಕೃತ ಮಹತ್ತತ್ವಕ್ಕಿಂತ ಅವ್ಯಕ್ತಶಬ್ದವು ಪರವಾಗಿದೆ ಎಂದು ಹೇಳಿದರೆ ಕಾರಣವಾಗಿದೆಯೆಂದೇ ಹೇಳಿದಂತಾಯಿತು'' ಹೀಗೆ ಸಮಾಧಾನವನ್ನು ಹೇಳಿದ್ದಾರೆ. ಕಲ್ಪತರುವಿನಲ್ಲೂ ಕೂಡ 'ಅರ್ವಾಚೀನಮಹತ್ತತ್ವಾಪೇಕ್ಷಯಾ ಪೂರ್ವಕಾಲತ್ವಮವಿಪ್ರಕೃಷ್ಟಮವ್ಯಕ್ತಸ್ಯ ಪರಶಬ್ದ ಆಹ । ತಥಾಚ ಕಾರಣತ್ವಸಿದ್ಧಿಃ । ನಿಯತಪ್ರಾಕ್ಸತ್ವಂ ಹಿ ತದಿತ್ಯರ್ಥಃ' 'ಅನಂತರ ಬಂದಿರುವ ಮಹತ್ತತ್ವಕ್ಕಿಂತಲೂ ಅವ್ಯಕ್ತವು ಪೂರ್ವಕಾಲದಲ್ಲಿ ಅವಿಪ್ರಕೃಷ್ಟವಾಗಿದೆ ಎಂದು ಹೇಳಿದ್ದರಿಂದ ಕಾರಣತ್ವವು ಸಿದ್ಧವಾಗುತ್ತದೆ. ಏಕೆಂದರೆ ನಿಯಮೇನ ಪೂರ್ವಕ್ಷಣದಲ್ಲಿರುವಿಕೆಯೇ ಕಾರಣದ ಲಕ್ಷಣವಷ್ಟೇ' ಎಂದು. ಆದ್ದರಿಂದಲೇ ಸುಧೆಯಲ್ಲಿ 'ಕಶ್ಚಿದಾಹ' ಇತ್ಯಾದಿ ವಾಕ್ಯದಿಂದ ಭಾಮತಿ ಕಲ್ಪತರುವಿನಲ್ಲಿ ಹೇಳಿದ್ದನ್ನೇ ಅನುವಾದ ಮಾಡಿದ್ದಾರಲ್ಲವೇ? ಎಂಬ ಆಶಂಕೆಗೆ 'ನಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः – स्यादेवं यदि परशब्दादत्राव्यक्तस्य कालाविप्रकर्षधीः । न चैवमित्याह – इत्यादाविवेति ।।**

'ಪರ' ಎಂಬ ಶಬ್ದದಿಂದ ಅವ್ಯವಹಿತಪೂರ್ವಕಾಲೀನತ್ವವು ತಿಳಿಯುವುದೇ ಇಲ್ಲ. ಏಕೆಂದರೆ ಹಿಂದಿನ 'ಪರ' ಶಬ್ದಗಳೆಲ್ಲವೂ ಉತ್ತಮತ್ವವನ್ನೇ ಹೇಳುತ್ತಿರುವಾಗ ಮತ್ತು ಮುಂದಿನ ಪರಶಬ್ದಗಳು ಉತ್ತಮತ್ವವನ್ನೇ ಹೇಳುತ್ತಿರುವಾಗ ಮಧ್ಯದಲ್ಲಿರುವ ಪರಶಬ್ದವೂ ಕೂಡ ಉತ್ತಮವನ್ನೇ ಹೇಳಬೇಕು ಕಾಲತಃ ಅವಿಪ್ರಕೃಷ್ಟತ್ವವನ್ನು ಹೇಳಲು ಸಾಧ್ಯವಿಲ್ಲ ಎಂದು 'ಇತ್ಯಾದಾವಿವ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – पुरुषस्याव्यक्ताजनकत्वेन तत्र श्रुतपरशब्दस्य कालाविप्रकर्षार्थत्वाभावेनोत्तमत्वार्थतया तत्प्रायपाठेन पूर्वत्रापि तदर्थत्वस्यैव प्रतीतेरित्यर्थः । इत्यादावित्यादिपदेन ''इन्द्रियेभ्यः पराह्यर्थाः'' इत्यादिपूर्ववाक्यपरिग्रहः ।

ಪುರುಷನು ಅವ್ಯಕ್ತಕ್ಕೆ ಜನಕವಲ್ಲದ ಕಾರಣ, ಪುರುಷಶಬ್ದದ ಜೊತೆಗೆ ಪಠಿತವಾದ ಪರಶಬ್ದವು ಕಾಲಾವಿಪ್ರಕರ್ಷಾರ್ಥವನ್ನು ಹೇಳದೇ ಉತ್ತಮತ್ವವನ್ನೇ ಹೇಳುತ್ತದೆ. ಅದರ ಪ್ರಾಯಪಾಠದಿಂದ ಮೊದಲಿರುವ ಪರಶಬ್ದವೂ ಕೂಡ ಉತ್ತಮತ್ವವನ್ನೇ ಹೇಳಬೇಕು ಎಂವರ್ಥ. 'ಇತ್ಯಾದೌ' ಎಂಬಲ್ಲಿರುವ ಆದಿಪದದಿಂದ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬ ಹಿಂದಿನ ವಾಕ್ಯವನ್ನು ಸ್ವೀಕರಿಸಬೇಕು.

**प्रकाशः** – यदत्रोक्तं कल्पतरुपरिमळे ''अत्र परशब्दश्श्रैष्ठ्यवचनः । इन्द्रियेभ्यः पराह्यर्था इत्यादिपूर्ववाक्येषु श्रुतस्य तथात्वात् । सांख्यैरप्यव्यक्तात् पुरुषः पर इत्यत्र श्रुतस्य तथैव व्याख्येयत्वात् । प्रधानस्य अकार्यत्वात् । इन्द्रियेभ्यः परं मनो मनसस्सत्वमुत्तमम् । सत्वादधिमहानात्मा महतोऽव्यक्तमुत्तममिति मन्त्रान्तरे परशब्दस्थान उत्तमशब्ददर्शनात्'' इत्याशङ्क्य

ಭಾಮತಿಯ ವ್ಯಾಖ್ಯಾನವೆನಿಸಿದ ಕಲ್ಪತರು ಪರಿಮಳದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ - 'ಅತ್ರ ಪರಶಬ್ದಃ ಶ್ರೈಷ್ಠ್ಯವಚನಃ । ಇಂದ್ರಿಯೇಭ್ಯಃ ಪರಾಹ್ಯರ್ಥಾ ಇತ್ಯಾದಿಪೂರ್ವವಾಕ್ಯೇಷು ಶ್ರುತಸ್ಯ ತಥಾತ್ವಾತ್ । ಸಂಖ್ಯೈರಪ್ಯವ್ಯಕ್ತಾತ್ ಪುರುಷಃ ಪರ ಇತ್ಯತ್ರ ಶ್ರುತಸ್ಯ ತಥೈವ ವ್ಯಾಖ್ಯೇಯತ್ವಾತ್ । ಪ್ರಧಾನಸ್ಯ ಕಾರ್ಯತ್ವಾತ್। ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ವಮುತ್ತಮ್ । ಸತ್ವಾದಧಿಮಹಾನಾತ್ಮಾ ಮಹತೋಽವ್ಯಕ್ತಮುತ್ತಮಮಿತಿ ಮಂತ್ರಾಂತರೇ ಪರಶಬ್ದಸ್ಥಾನ ಉತ್ತಮಶಬ್ದದರ್ಶನಾತ್' ಇಲ್ಲಿರುವ 'ಪರ' ಶಬ್ದವು 'ಉತ್ತಮ' ಎಂಬರ್ಥವನ್ನೇ ಹೇಳುತ್ತಿದೆ. ಏಕೆಂದರೆ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿಯಾದ ಹಿಂದಿನ ವಾಕ್ಯದಲ್ಲಿ ಶ್ರುತವಾದ 'ಪರ' ಶಬ್ದಕ್ಕೆ 'ಉತ್ತಮತ್ವ' ಎಂದೇ ಅರ್ಥ. ಸಾಂಖ್ಯರೂ ಕೂಡ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ 'ಪರ' ಶಬ್ದಕ್ಕೆ 'ಉತ್ತಮ' ಎಂಬರ್ಥವನ್ನೇ ಹೇಳುತ್ತಾರೆ. ಏಕೆಂದರೆ ಜೀವನು ಪ್ರಕೃತಿಗೆ ಕಾರಣನೂ ಅಲ್ಲ. ಪ್ರಕೃತಿಯೆಂಬುದು ಕಾರ್ಯವೂ ಅಲ್ಲ. 'ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ವಮುತ್ತಮ್ ಸತ್ವಾದಧಿಮಹಾನಾತ್ಮಾ ಮಹತೋಽವ್ಯಕ್ತಮುತ್ತಮ್' ಎಂಬುದಾಗಿ ಮತ್ತೊಂದು ಮಂತ್ರದಲ್ಲಿ 'ಪರ' ಎಂಬ ಪದವನ್ನು ಬಳಸುವ ಬದಲು 'ಉತ್ತಮ' ಎಂಬ ಶಬ್ದವನ್ನು ಬಳಸಲಾಗಿದೆ. ಉಳಿದ ಎಲ್ಲಾ ಪದಗಳು ಒಂದೇ ರೀತಿಯಾಗಿವೆ. ಆದ್ದರಿಂದ ಪ್ರಕೃತ ಪರಶಬ್ದಕ್ಕೆ 'ಉತ್ತಮ' ಎಂಬರ್ಥವನ್ನೇ ಹೇಳಬೇಕು. ಹೊರತು 'ಕಾರಣ' ಎಂಬರ್ಥವನ್ನಾಗಲೀ, ಕಾಲವಿಪಕ್ರರ್ಷವನ್ನಾಗಲೀ ಹೇಳಬಾರದು ಎಂದು ಆಶಂಕಿಸಲಾಗಿದೆ.

**प्रकाशः** – ''सत्यमिह पूर्वपूर्वस्मादुत्तरोत्तरस्य श्रैष्ठ्यमुच्यमानम् यस्य यथा सम्भवति तस्य तथैवोपपादनीयम् । अतस्स्मार्तक्रमप्रत्यभिज्ञानादिह महदादिपदानां

स्मार्तमहदादितत्वत्रयपरत्वस्थितौ महत्त्वात्प्रधानस्य श्रैष्ठ्यं कारणत्वेनैव भवतीति पर्यवसितार्थकथनमिदं परशब्दः कारणत्वमाहेति'' इति ।

ಹೀಗೆ ಆಶಂಕಿಸಿ ಕಲ್ಪತರು ಪರಿಮಳದಲ್ಲಿಯೇ ಹೀಗೆ ಉತ್ತರಿಸಿದ್ದಾರೆ - 'ಸತ್ಯಮಿಹ ಪೂರ್ವಪೂರ್ವಸ್ಮಾದುತ್ತರೋತ್ತರಸ್ಯ ಶ್ರೈಷ್ಠ್ಯಮುಚ್ಯಮಾನಮ್ । ಯಸ್ಯ ಯಥಾ ಸಂಭವತಿ ತಸ್ಯ ತಥೈವೋಪಪಾದನೀಯಮ್। ಅತಃ ಸ್ಮಾರ್ತಕ್ರಮಪ್ರತ್ಯಭಿಜ್ಞಾನಾದಿಹ ಮಹದಾದಿಪದಾನಾಂ ಸ್ಮಾರ್ತಮಹದಾದಿತತ್ವತ್ರಯಪರತ್ವಸ್ಥಿತೌ ಮಹತ್ತ್ವಾತ್ ಪ್ರಧಾನಸ್ಯ ಶ್ರೈಷ್ಠ್ಯಂ ಕಾರಣತ್ವೇನೈವ ಭವತೀತಿ ಪರ್ಯವಸಿತಾರ್ಥಕಥನಮಿದಂ ಪರಶಬ್ದಃ ಕಾರಣತ್ವಮಾಹೇತಿ' 'ಪರ' ಶಬ್ದಕ್ಕೆ 'ಉತ್ತಮತ್ವ' ಎಂಬರ್ಥವನ್ನೇ ಸ್ವೀಕರಿಸಬೇಕು. ಆದರೆ ಯಾವುದಕ್ಕೇ ಯಾವರೀತಿಯಾದ ಉತ್ತಮತ್ವವು ಸಂಭಾವಿತವಾಗುತ್ತದೋ, ಅದೇ ರೀತಿಯಾದ ಉತ್ತಮತ್ವವನ್ನು ಸ್ವೀಕರಿಸಬೇಕು. ಪ್ರಕೃತ ಸಾಂಖ್ಯಸ್ಮೃತಿಯ ಪ್ರತ್ಯಭಿಜ್ಞಾನದಿಂದ ಮಹಾನ್, ಅವ್ಯಕ್ತ, ಪುರುಷ ಮೊದಲಾದ ಶಬ್ದಗಳು ಮಹದಾದಿತತ್ವಗಳನ್ನೇ ಹೇಳುತ್ತಿವೆಯೆಂದು ಸಿದ್ಧವಾಗಿದೆ. ಹೀಗಿರುವಾಗ ಮಹತ್ತತ್ವಕ್ಕಿಂತ ಪ್ರಧಾನವು ಶ್ರೇಷ್ಠವೆಂದು ಹೇಳಿದರೆ ಮಹತ್ತತ್ವಕ್ಕೆ ಪ್ರಧಾನವು ಕಾರಣವಾಗಿದೆಯೆಂಬರ್ಥದಲ್ಲೇ ಪರ್ಯವಸಾನವಾಗುತ್ತದೆ. ಆದ್ದರಿಂದ 'ಪರ' ಶಬ್ದವು 'ಕಾರಣತ್ವ' ಎಂಬರ್ಥದಲ್ಲೇ ಇಲ್ಲಿ ಪ್ರಯುಕ್ತವಾಗಿದೆಯೆಂದು ತಿಳಿಯಬೇಕು ಎಂದು.

**प्रकाशः** – तन्न । पूर्वोत्तरमन्त्रान्तराविरोधेनात्राप्युत्कर्षार्थत्वस्य महत्तत्वापेक्षया व्याप्त्याधिक्येनानादिनित्यत्वादिना वोपपत्त्या कारणत्वापर्यवसानात् । ''परशब्दोऽविप्रकृष्टपूर्वकालतामाह'' इति भामत्याद्युक्तिविरोधाच्च ।

ಕಲ್ಪತರು ಪರಿಮಳದಲ್ಲಿ ಸಮರ್ಥಿಸಿದ ಈ ವಿಷಯವೂ ಕೂಡ ಸಾಧುವಲ್ಲ. ಏಕೆಂದರೆ ಕಲ್ಪತರು ಪರಿಮಳದಲ್ಲೇ ಹೇಳಿದಂತೆ ಹಿಂದಿನ ಮುಂದಿನ ಮಂತ್ರಗಳ ಅನುಗುಣ್ಯದಿಂದ 'ಉತ್ತಮ' ಎಂಬರ್ಥವನ್ನೇ 'ಪರ' ಶಬ್ದಕ್ಕೆ ಹೇಳಬೇಕು. 'ಉತ್ತಮ' ಎಂಬರ್ಥವನ್ನು ಹೇಳಿದಾಗ ಕಾರಣತ್ವದಲ್ಲೇ ಪರ್ಯವಸಾನವಾಗಬೇಕೆಂಬ ನಿಯಮವಿರುವುದಿಲ್ಲ. ಏಕೆಂದರೆ ಮಹತ್ತತ್ವಕ್ಕಿಂತಲೂ ಪ್ರಕೃತಿಯು ಉತ್ತಮವಾಗಿದೆ ಎಂದರೆ ಅಧಿಕವಾದ ವ್ಯಾಪ್ತಿಯುಳ್ಳದ್ದಾಗಿದೆ ಎಂದರ್ಥ. ಅಥವಾ ಮಹತ್ತತ್ವವು ಸಾದಿಯಾದ ಪದಾರ್ಥವಾಗಿದೆ. ಪ್ರಕೃತಿಯು ಅನಾದಿನಿತ್ಯವಾದ ಪದಾರ್ಥವಾಗಿದೆ ಎಂಬುದಾಗಿ ಉತ್ತಮತ್ವವನ್ನು ಹೇಳಬಹುದು. ಅಥವಾ ಮಹತ್ತತ್ವವು ಸಂಸಾರಕ್ಕೆ ಕಾರಣವಾಗಿಲ್ಲ. ಪ್ರಕೃತಿಯು ಸಂಸಾರಕ್ಕೆ ಕಾರಣವಾಗಿದೆಯೆಂದೂ ಕೂಡ ಹೇಳಬಹುದು. ಹೀಗೆ ಅನೇಕ ಬಗೆಯಲ್ಲಿ ಉತ್ತಮತ್ವವನ್ನು ಉಪಪಾದಿಸಲು ಬರುವಾಗ ಕಾರಣತ್ವದಲ್ಲೇ ಪರ್ಯವಸಾನ ಮಾಡಬೇಕೆಂಬ ನಿಯಮವಿರುವುದಿಲ್ಲ. ಮತ್ತು 'ಪರ' ಶಬ್ದಕ್ಕೆ 'ಅವಿಪ್ರಕೃಷ್ಟ ಪೂರ್ವಕಾಲತ್ವ' ಎಂಬ ಭಾಮತಿ ಮಾತಿಗೆ ವಿರೋಧವೂ ಕೂಡ ಬರುತ್ತದೆ.

**प्रकाशः** – तत उत्तमत्वस्यैव प्रतीतेरित्युपलक्षणम् । ''किं परशब्दोक्तकालविप्रकर्ष एव कारणत्वमुत तेनानुमेयमथवा सम्भाव्यम् । न प्रथमद्वितीयौ ।

कार्यकारणभावविकलयोरपि परापरभावदर्शनात् । न तृतीयः । सम्भावनामात्रस्येयन्तं सूत्रसन्दर्भं प्रति प्रयोजकत्वायोगात्'' इति सुधोक्तं दूषणान्तरं च ध्येयम् ।

ಗ್ರಂಥದಲ್ಲಿ 'ತತ ಉತ್ತಮತ್ವಸ್ಯೈವ ಪ್ರತೀತೇಃ' ಎಂಬುದು ಉಪಲಕ್ಷಣವೆಂದು ಭಾವಿಸಿ, ಮತ್ತೊಂದು ದೋಷವನ್ನು ಹೀಗೆ ತಿಳಿಯಬೇಕು. 'ಕಿಂ ಪರಶಬ್ದೋಕ್ತಕಾಲವಿಪ್ರಕರ್ಷ ಏವ ಕಾರಣತ್ವಮುತ ತೇನಾನುಮೇಯಮಥವಾ ಸಂಭಾವ್ಯಮ್ । ನ ಪ್ರಥಮದ್ವಿತೀಯೌ । ಕಾರ್ಯಕಾರಣಭಾವವಿಕಲಯೋರಪಿ ಪರಾಪರಭಾವದರ್ಶನಾತ್ । ನ ತೃತೀಯಃ । ಸಂಭಾವನಾಮಾತ್ರಸ್ಯೇಯಂತಂ ಸೂತ್ರಸಂದರ್ಭಂ ಪ್ರತಿ ಪ್ರಯೋಜಕತ್ವಾಯೋಗಾತ್' 'ಪರ' ಶಬ್ದಕ್ಕೆ 'ಕಾಲವಿಪ್ರಕರ್ಷ' ಎಂಬರ್ಥವನ್ನು ಹೇಳುತ್ತಿದ್ದೀರಿ. ಇಂತಹ ಕಾಲವಿಪ್ರಕರ್ಷವನ್ನೇ ಕಾರಣತ್ವವೆನ್ನುತ್ತೀರೋ, ಅಥವಾ ಕಾಲವಿಪ್ರಕರ್ಷದಿಂದ ಕಾರಣತ್ವವನ್ನು ಅನುಮಾನ ಮಾಡುತ್ತೀರೋ, ಅಥವಾ ಕೇವಲ ಸಂಭಾವನಾ ಮಾತ್ರವೋ? ಮೊದಲಿನ ಎರಡು ವಿಕಲ್ಪಗಳು ಸರಿಯಲ್ಲ. ಏಕೆಂದರೆ ಕಾರ್ಯಕಾರಣಭಾವ ಇಲ್ಲದೇ ಇರುವಂತಹ ದೇವದತ್ತ, ಯಜ್ಞದತ್ತರಲ್ಲಿ ಪರಾಪರಭಾವವು ಕಾಣಿಸುತ್ತಿದೆ. ಆದರೂ ಕೂಡ ಕಾರ್ಯಕಾರಣಭಾವವು ತೋರುತ್ತಿಲ್ಲ. ದೇವದತ್ತ ಬಹಳ ಮೊದಲೇ ಹುಟ್ಟಿದ್ದಾನೆ. ಯಜ್ಞದತ್ತನು ಮತ್ತೊಂದು ಕಡೆ ಅನಂತರ ಹುಟ್ಟಿದ್ದಾನೆ. ಇವರಿಬ್ಬರಲ್ಲಿ ಕಾರ್ಯಕಾರಣಭಾವವು ಸುತರಾಂ ಇರುವುದಿಲ್ಲ. ಆದರೂ ಕೂಡ ದೇವದತ್ತನು ಮೊದಲು ಹುಟ್ಟಿದ ಕಾರಣ 'ಪರ' ಎಂಬ ಶಬ್ದದಿಂದ ವಾಚ್ಯನಾಗಿದ್ದಾನೆ. ಯಜ್ಞದತ್ತನು ಅನಂತರ ಹುಟ್ಟಿದ್ದಾನೆಂಬ ಕಾರಣದಿಂದ 'ಅಪರ' ಶಬ್ದವಾಚ್ಯನಾಗಿದ್ದಾನೆ. ಆದ್ದರಿಂದ ಪರಾಪರಭಾವದರ್ಶನವಿದ್ದರೂ ಕಾರ್ಯಕಾರಣಭಾವ ಇರುವುದಿಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ. ಇನ್ನು ಕೇವಲ ಕಾಲವಿಪ್ರಕರ್ಷವನ್ನು ಕಾರಣವೆಂದು ಸಂಭಾವನೆಯಿಂದಷ್ಟೇ ಹೇಳುತ್ತಿದ್ದೇವೆ ಎಂಬ ಮೂರನೆಯ ವಿಕಲ್ಪವನ್ನು ಹೇಳಬೇಕು. ಆದರೆ ಸಂಭಾವನಾ ಮಾತ್ರದಿಂದ ಪೂರ್ವಪಕ್ಷ ಮಾಡಿ, ಇಷ್ಟೊಂದು ಸೂತ್ರಗಳಿಂದ ಅದನ್ನು ನಿರಾಕರಣೆ ಮಾಡುವುದು ಅಸಾಧುವಾಗುತ್ತದೆ. ಸಂಭಾವನಾ ಮಾತ್ರದಿಂದ ಮಾಡಲ್ಪಟ್ಟ ಪೂರ್ವಪಕ್ಷವು ಅನೇಕ ಸೂತ್ರಗಳ ಪ್ರವೃತ್ತಿಗೆ ಪ್ರಯೋಜಕವಾಗುವುದಿಲ್ಲ. ಈ ದೋಷವನ್ನು ಸುಧೆಯಲ್ಲಿ ಹೇಳಿದ್ದಾರೆ ಅದನ್ನೂ ಕೂಡ ಗ್ರಂಥದಲ್ಲಿ ಉಪಲಕ್ಷಣಯಾ ಅನುಸಂಧಾನ ಮಾಡಿಕೊಳ್ಳಬೇಕು.




ಶಾಂಕರಭಾಷ್ಯದ ಪ್ರಕಾರ ಅಧಿಕರಣಶರೀರವನ್ನು ಹೀಗೆ ತಿಳಿಯಬೇಕು - 'ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕೋಪನಿಷತ್ತಿನಲ್ಲಿರುವ ಮಂತ್ರವೇ ವಿಷಯವಾಗಿದೆ. ಇಲ್ಲಿರುವ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳುತ್ತದೋ, ಅಥವಾ ಶರೀರವನ್ನು ಹೇಳುತ್ತದೋ ? ಎಂದು ಸಂಶಯ. 'ನ ವ್ಯಕ್ತಮ್ ಅವ್ಯಕ್ತಮ್' ಎಂಬ ನಿಷ್ಪತ್ತಿಯಿಂದ ಸೂಕ್ಷ್ಮವಾದ ಜಡಪ್ರಕೃತಿಯಲ್ಲಿ ಈ ವ್ಯುತ್ಪತ್ತಿಯು ಉಪಪನ್ನವಾಗುತ್ತದೆ. ಸಾಂಖ್ಯಸ್ಮೃತಿಯ ಪ್ರಕಾರ ಅವ್ಯಕ್ತಶಬ್ದವು ಪ್ರಕೃತಿಯಲ್ಲಿ ರೂಢವೂ ಆಗಿದೆ. ಆದ್ದರಿಂದ ಪ್ರಕೃತಿಯು ಅವ್ಯಕ್ತ ಶಬ್ದದಿಂದ ಪ್ರತಿಪಾದ್ಯವಾಗುತ್ತಿರುವಾಗ ಈಕ್ಷತ್ಯಧಿಕರಣದಲ್ಲಿ 'ಅಶಬ್ದಮ್' ಎಂಬ ಪದದಿಂದ ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವವನ್ನು ನಿರಾಕರಿಸಿದ್ದು ಸರಿಯಲ್ಲ ಎಂದು ಪೂರ್ವಪಕ್ಷ.

ಆನುಮಾನಿಕಾಧಿಕರಣ (೧-೪-೧)

ಅವ್ಯಕ್ತಶಬ್ದದಿಂದ ಶರೀರವೇ ಪ್ರತಿಪಾದ್ಯವಾಗಿದೆ ಹೊರತು, ಪ್ರಕೃತಿಯಲ್ಲ. ಏಕೆಂದರೆ ಅವ್ಯಕ್ತಶಬ್ದಕ್ಕೆ ಅಲೌಕಿಕವಾದ ಪ್ರಕೃತಿಯಲ್ಲಿ ಲೋಕಪ್ರಸಿದ್ಧಿಯಿರುವುದಿಲ್ಲ. ಸಾಂಖ್ಯಸ್ಮೃತಿಯೂ ಕೂಡ ಪೌರುಷೇಯವಾದ್ದರಿಂದ ನಿರ್ಣಾಯಕವಾಗುವುದಿಲ್ಲ. ಆದ್ದರಿಂದ ಪ್ರಕೃತಿಯನ್ನು ಹೇಳುವುದಿಲ್ಲ. ಶರೀರವನ್ನೇ ಹೇಳಬೇಕು. ಏಕೆಂದರೆ 'ಆತ್ಮಾನಾಂ ರಥಿನಂ ವಿದ್ಧಿ ಶರೀರಂ ರಥಮೇವ ಚ' ಎಂಬುದಾಗಿ ನಮ್ಮ ದೇಹವನ್ನು ರಥವನ್ನಾಗಿ ಶ್ರುತಿಯು ನಿರೂಪಣೆ ಮಾಡುತ್ತಿದೆ. ಇಂದ್ರಿಯಗಳು ಕುದುರೆಗಳಾಗಿವೆ. ಆ ಕುದುರೆಗಳು ನಮ್ಮ ಅಧೀನವಾಗಿದ್ದರೆ, 'ಸೋಽಧ್ವನಃ ಪಾರಮಾಪ್ನೋತಿ' ಎಂಬ ಮಾತಿನಂತೆ ಮೋಕ್ಷ ಮಾರ್ಗವನ್ನು ತಲುಪಲು ಸಾಧ್ಯ. ಮೋಕ್ಷಮಾರ್ಗದ ಮುಕ್ತಾಯ ಎಲ್ಲಿ ಆಗುತ್ತದೆ ? ಎಂಬುದನ್ನು ಶ್ರುತಿಯೇ ಮುಂದೆ ವಿವರಿಸುತ್ತದೆ -

ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧಿರಾತ್ಮಾ ಮಹಾನ್ ಪರಃ
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ॥

ಹೀಗೆ ಬ್ರಹ್ಮನೇ ಆತ್ಯಂತಿಕವಾಗಿ ಹೊಂದಲು ಯೋಗ್ಯವಾಗಿದ್ದಾನೆಂದು ಶ್ರುತಿಯು ಹೇಳುತ್ತಿದೆ. ಶರೀರವು ರಥವಾಗಿರುವುದರಿಂದ ಇಂದ್ರಿಯಗಳು, ವಿಷಯಗಳು, ಮನಸ್ಸು, ಬುದ್ಧಿ, ಆತ್ಮ ಇವೆಲ್ಲವೂ ಸಾರಥ್ಯ ಮೊದಲಾದ ಸ್ಥಾನವನ್ನು ಪಡೆಯುತ್ತವೆ. 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿ ಮಂತ್ರದಲ್ಲಿ ಇಂದ್ರಿಯಗಳು ವಿಷಯಗಳು ಇವುಗಳನ್ನೆಲ್ಲ ಹೇಳುವಂತಹ ಶಬ್ದಗಳು ಸ್ಪಷ್ಟವಾಗಿರುತ್ತವೆ. ಆದರೆ ಶರೀರವನ್ನು ಹೇಳುವಂತಹ ಶಬ್ದವೇ ಇಲ್ಲ. ಹಾಗಾಗಿ ಪರಿಶೇಷ ಪ್ರಮಾಣದಿಂದ ಉಳಿದಿರುವ ಅವ್ಯಕ್ತಶಬ್ದವೇ ಶರೀರವನ್ನು ಹೇಳುತ್ತದೆಂದು ನಿರ್ಣಯಿಸಬೇಕು. ಹಾಗಾಗಿ ಜಡಪ್ರಕೃತಿಯನ್ನು ಅವ್ಯಕ್ತಶಬ್ದವು ಹೇಳುತ್ತದೆಂಬುದು ಅಸಂಗತವಾಗುತ್ತದೆ.

ರಾಮಾನುಜರ ಅಧಿಕರಣಶರೀರ ಹೀಗಿದೆ - 'ಅವ್ಯಕ್ತಾತ್ ಪುರುಷಃ ಪರಃ' ಎಂಬುದನ್ನೇ ವಿಷಯವನ್ನಾಗಿ ಉಲ್ಲೇಖಿಸುತ್ತಾರೆ. ಇಲ್ಲಿರುವ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳುತ್ತದೋ, ಅಥವಾ ಶರೀರವನ್ನು ಹೇಳುತ್ತದೋ ಎಂಬ ಸಂಶಯವು ಪ್ರಾಪ್ತವಾದರೆ, ಅವ್ಯಕ್ತಶಬ್ದದಿಂದ ಪ್ರಕೃತಿಯು ಪ್ರತಿಪಾದ್ಯವಾಗಿದೆ. ಏಕೆಂದರೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ ಪುರುಷಶಬ್ದದಿಂದ ಸಾಂಖ್ಯರು ನಿರೂಪಣೆ ಮಾಡುವ ಆತ್ಮನು ಪ್ರತಿಪಾದ್ಯನಾಗಿದ್ದಾನೆ. 'ಪುರುಷಾನ್ನ ಪರಂ ಕಿಂಚಿತ್' ಎಂಬುದಾಗಿ ಇಪ್ಪತ್ತೈದನೆಯ ಪುರುಷನಿಗಿಂತ ಉತ್ತಮವಾದದ್ದು ಮತ್ತೊಂದು ಪದಾರ್ಥ ಇರುವುದಿಲ್ಲ ಎಂದು ನಿಷೇಧ ಮಾಡಿದ್ದರಿಂದ ಪ್ರಕೃತಿಯೇ ಪ್ರತಿಪಾದ್ಯವಾಗಬೇಕು ಎಂದು ಪೂರ್ವಪಕ್ಷ.

ಇದು ಸರಿಯಲ್ಲ. ಶರೀರವನ್ನು ಅವ್ಯಕ್ತಶಬ್ದವು ಪ್ರತಿಪಾದನೆ ಮಾಡುತ್ತದೆ. ಏಕೆಂದರೆ ಪುರುಷಶಬ್ದದಿಂದ ಪ್ರತಿಪಾದ್ಯನಾದವನು ಪರಮಾತ್ಮನೇ ಹೊರತು, ಸಾಂಖ್ಯಸ್ಮೃತಿಸಿದ್ಧನಾದ ಪುರುಷನಲ್ಲ. ಏಕೆಂದರೆ ಕಾಠಕೋಪನಿಷತ್ತಿನಲ್ಲಿ ರೂಪಕಾಲಂಕಾರದ ಮೂಲಕ ಜೀವನನ್ನು ಸಾರಥಿಯೆಂದು, ಶರೀರವನ್ನು ರಥವೆಂದು, ಇಂದ್ರಿಯಗಳನ್ನು ಕುದುರೆಯೆಂದು, ವಿಷಯಗಳನ್ನು ಮಾರ್ಗವೆಂದು, ಮನಸ್ಸನ್ನು ಕಡಿವಾಣವೆಂದು, ಬುದ್ಧಿಯನ್ನು ಸಾರಥಿಯೆಂದು ಹೇಳಲಾಗಿದೆ.

ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧಿರಾತ್ಮಾ ಮಹಾನ್ ಪರಃ
ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ॥

ಪರಿಪೂರ್ಣಚಂದ್ರಿಕಾ

ಎಂದು. ಹೀಗೆ ಹೇಳಿದ್ದರಿಂದ ಶರೀರವೇ ಪ್ರತಿಪಾದ್ಯವಾಗಬೇಕು ಹೊರತು, ಪ್ರಕೃತಿಯಲ್ಲವೆಂದು ಸಿದ್ಧಾಂತ ಮಾಡಿದ್ದಾರೆ.

ಇವರೀರ್ವರ ಅಧಿಕರಣಶರೀರವು ಸರಿಯಲ್ಲ. ಏಕೆಂದರೆ ಪ್ರಧಾನಕ್ಕೆ ಸಕಲಶಬ್ದಪ್ರತಿಪಾದ್ಯತ್ವವನ್ನು ನಿರಾಕರಣೆ ಮಾಡಲು ಹೊರಟಿದ್ದೀರೋ, ಅಥವಾ ಜಗತ್ಕಾರಣತ್ವ ಪ್ರತಿಪಾದಕವಾದ ಶಬ್ದಗಳಿಂದ ಪ್ರತಿಪಾದ್ಯವಲ್ಲವೆಂದು ಹೇಳಲು ಹೊರಟಿದ್ದೀರೋ, ಯಾವುದೇ ಶಬ್ದಗಳಿಂದಲೂ ಪ್ರತಿಪಾದ್ಯವಲ್ಲವೆಂದು ಸಮರ್ಥನೆ ಮಾಡುವುದರಿಂದ ಏನೂ ಪ್ರಯೋಜನವಿಲ್ಲ. ನಾವು ಸಕಲಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವುದರಿಂದ ಪ್ರಕೃತ್ಯಾದಿಗಳು ಶಬ್ದಪ್ರತಿಪಾದ್ಯವಲ್ಲವೆಂದು ಹೇಳಿದರೆ ಪ್ರಯೋಜನವಿದೆ. ಆದರೆ ನಿಮ್ಮ ಮತದಲ್ಲಿ ಸಮನ್ವಯ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ ಸಕಲ ಶಬ್ದಗಳ ಸಮನ್ವಯದ ಪ್ರತಿಜ್ಞೆಯನ್ನು ಬ್ರಹ್ಮನಲ್ಲಿ ಮಾಡಿರುವುದಿಲ್ಲ. ಹೀಗಿರುವಾಗ ಅವ್ಯಕ್ತಾದಿ ಶಬ್ದಪ್ರತಿಪಾದ್ಯತ್ವವನ್ನು ಪ್ರಕೃತಿಯಲ್ಲಿ ನಿಷೇಧ ಮಾಡುವುದರಿಂದ ಯಾವುದೇ ಲಾಭವು ಇರುವುದಿಲ್ಲ. ಮತ್ತು ಈಕ್ಷತ್ಯಧಿಕರಣದಲ್ಲಿಯೂ ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವವನ್ನು ನಿಷೇಧ ಮಾಡಿದ್ದು ವ್ಯರ್ಥವಾಗಿದೆ. ಮತ್ತು ಅಶಕ್ಯವೂ ಆಗಿದೆ. ಇನ್ನು ಜಗತ್ಕಾರಣತ್ವ ಪ್ರತಿಪಾದಕವಾದ ಶಬ್ದಗಳಿಂದ ಪ್ರಧಾನವೂ ಪ್ರತಿಪಾದ್ಯವಲ್ಲವೆಂದು ಸಾಧಿಸಬೇಕು. ಆದರೆ ಪ್ರಕೃತ 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯಲ್ಲಿ ಜಗತ್ಕಾರಣತ್ವವನ್ನು ಹೇಳುತ್ತಲೇ ಇಲ್ಲ. ಮಹತ್ತತ್ವಕ್ಕಿಂತಲೂ ಅವ್ಯಕ್ತತತ್ವವು ಶ್ರೇಷ್ಠವೆಂದಷ್ಟೇ ಹೇಳಲಾಗಿದೆ. ಆದ್ದರಿಂದ ಇವರೀರ್ವರ ಪೂರ್ವಪಕ್ಷವೇ ಹುಟ್ಟಲು ಸಾಧ್ಯವಿಲ್ಲದಾಗ, ಸಿದ್ಧಾಂತದ ಉತ್ಥಾನವು ಸುತರಾಂ ಸಾಧ್ಯವಿಲ್ಲ.



● ● ● ● ●

## ಅದ್ವೈತಿಗಳಿಗೆ ಈ ಅಧಿಕರಣವು ಅನಾರಂಭಣೀಯ

### तात्पर्यचन्द्रिका

**किञ्च अव्यक्तशब्दार्थः किं ब्रह्मेति सिद्धान्त्यते किं वाऽविद्यादिकमिति ।**

ಅನುವಾದ - ಶಾಂಕರಭಾಷ್ಯದಲ್ಲಿ ಹಾಗೂ ರಾಮಾನುಜಭಾಷ್ಯದಲ್ಲಿ ಅವ್ಯಕ್ತಶಬ್ದದಿಂದ ಪ್ರಕೃತಿ ಪ್ರತಿಪಾದ್ಯವಲ್ಲವೆಂದು ಹೇಳಿದ್ದಾರೆ. ಇದು ಸರಿಯಲ್ಲ. ಏಕೆಂದರೆ, ಅವ್ಯಕ್ತಶಬ್ದಕ್ಕೆ ಪ್ರಕೃತಿಯು ಅರ್ಥವಲ್ಲವೆಂದಾದರೆ, ಬ್ರಹ್ಮನೆಂಬರ್ಥವನ್ನು ಹೇಳುತ್ತೀರೋ? ಅಥವಾ ಅವಿದ್ಯಾದಿಗಳನ್ನು ಅರ್ಥವೆಂದು ಹೇಳುತ್ತೀರೋ?

**नाद्यः । अनङ्गीकृतेः । नान्त्यः । ब्रह्मणि समन्वयानुक्त्याऽध्यायासङ्गतेः ।**

ಬ್ರಹ್ಮನೇ ಅವ್ಯಕ್ತಶಬ್ದದ ಅರ್ಥವೆಂದು ನೀವು ಅಂಗೀಕಾರ ಮಾಡಿಲ್ಲ. ಅವಿದ್ಯಾದಿಗಳನ್ನು ಅರ್ಥವೆಂದು ಹೇಳುವುದೂ ಕೂಡ ಸರಿಯಲ್ಲ. ಏಕೆಂದರೆ ಬ್ರಹ್ಮನಲ್ಲಿ ಅವ್ಯಕ್ತಶಬ್ದದ ಸಮನ್ವಯವನ್ನು ಮಾಡದ ಕಾರಣ ಸಮನ್ವಯಾಧ್ಯಾಯದಿಂದ ಅಸಾಂಗತ್ಯ ಬರುತ್ತದೆ.

**प्रधाने ब्रह्मलक्षणस्यातिव्याप्तिपरिहारेऽप्यविद्यादौ तदपरिहाराच्च ।**

ಮತ್ತು ಬ್ರಹ್ಮನ ಲಕ್ಷಣಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿದೋಷವು ಪ್ರಾಪ್ತವಾದಾಗ ಅದರ ಪರಿಹಾರಕ್ಕೆ ಅವಿದ್ಯಾದಿಗಳು ಪ್ರತಿಪಾದ್ಯವೆಂದು ಹೇಳಿದರೆ, ಅವಿದ್ಯಾದಿಗಳಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಪ್ರಧಾನದಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಲು ಹೋಗಿ, ಅವಿದ್ಯಾದಿಗಳಲ್ಲಿ ಅತಿವ್ಯಾಪ್ತಿಯನ್ನು ಒಪ್ಪಿಕೊಂಡಂತಾಯಿತು.

**कारणत्वं प्रधानस्य निरस्य स्थापितं यदि ।**
**अविद्यादेस्तदा कोनु लाभोऽस्ति ब्रह्मवादिनः ।। १ ।।**

ಕಾರಣತ್ವಂ ಪ್ರಧಾನಸ್ಯ ನಿರಸ್ಯ ಸ್ಥಾಪಿತಂ ಯದಿ ।
ಅವಿದ್ಯಾದೇಸ್ತದಾ ಕೋನು ಲಾಭೋಽಸ್ತಿ ಬ್ರಹ್ಮವಾದಿನಃ ॥೧॥

ಬ್ರಹ್ಮವಾದಿಯಾದ ನಿನಗೆ ಕಾರಣತ್ವವನ್ನು ಪ್ರಧಾನದಲ್ಲಿ ನಿರಾಕರಿಸಿ, ಅವಿದ್ಯಾದಿಗಳಲ್ಲಿ ಸ್ಥಾಪನೆ ಮಾಡುವುದಾದರೆ, ಏನು ಲಾಭವಿದೆ ?

**वृकेणापहृतं मेषमादायातिप्रयत्नतः ।**
**स चेद् व्याघ्राय दीयेत को लाभस्तेन सिध्यति ।। २ ।।**

ವೃಕೇಣಾಪಹೃತಂ ಮೇಷಮಾದಾಯಾತಿಪ್ರಯತ್ನತಃ ।
ಸ ಚೇದ್ವ್ಯಾಘ್ರಾಯ ದೀಯೇತ ಕೋ ಲಾಭಸ್ತೇನ ಸಿಧ್ಯತಿ ॥೨॥

ತೋಳದಿಂದ ಕುರಿಯನ್ನು ಮಹಾಪ್ರಯತ್ನದಿಂದ ರಕ್ಷಣೆ ಮಾಡಿ ಹುಲಿಯ ಬಾಯಿಯಲ್ಲಿ ನೀಡಿದರೆ ನಿನಗೇನು ಲಾಭವಾಗುತ್ತದೆ.

**ननु परशब्दस्योत्कर्षार्थत्वादिह कारणत्वधीरेव नेति सिद्धान्त्यते । एवञ्चाऽविद्यादेरव्यक्तशब्दार्थत्वेपि न दोष इति चेत्**

ಶಂಕೆ - 'ಪರ' ಶಬ್ದಕ್ಕೆ ಕೇವಲ 'ಉತ್ಕರ್ಷ' ಎಂದಷ್ಟೇ ಅರ್ಥ. ಹೊರತು, ಕಾರಣತ್ವವೆಂದರ್ಥವಲ್ಲ. ಹೀಗೆ ಸಿದ್ಧಾಂತ ಮಾಡುತ್ತೇವೆ. ಆದ್ದರಿಂದ ಅವಿದ್ಯಾದಿಗಳೂ ಕೂಡ ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯವಾದರೆ, ಅತಿಪ್ರಸಂಗಾದಿ ದೋಷಗಳಿಗೆ ಅವಕಾಶವಿಲ್ಲವಲ್ಲವೇ?

**तर्हि प्रधानस्य तदर्थत्वेपि न दोष इति न तन्निरासः फलम् ।**

ಸಮಾಧಾನ - 'ಪರ'ಶಬ್ದಕ್ಕೆ 'ಉತ್ಕರ್ಷ' ಎಂಬರ್ಥವನ್ನು ಹೇಳುವುದಾದರೆ, ಪ್ರಕೃತಿಯೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗಬಹುದಲ್ಲವೇ? ಪ್ರಕೃತಿಯು ಅವ್ಯಕ್ತಶಬ್ದದಿಂದ ಪ್ರತಿಪಾದ್ಯವೆಂದು

ಹೇಳಿದಾಗ, ಅತಿಪ್ರಸಂಗಾದಿ ದೋಷಗಳಿಗೆ ಅವಕಾಶವೇ ಇಲ್ಲ. ಹೀಗಿರುವಾಗ ಇದರ ಪರಿಹಾರಕ್ಕಾಗಿ ಪ್ರಯಾಸ ಪಡುವುದು ವ್ಯರ್ಥವಾಗುತ್ತದೆ.

**अन्यथा ''इन्द्रियेभ्यः परा ह्यर्था अर्थेभ्यश्च परं मनः'' इत्यादावर्थादिशब्दानां सांख्याभिमतेश्वरानधीनशब्दस्पर्शाद्यर्थत्वं, ''आकाशाद्वायुः'' इत्यादावाकाशादिशब्दानां च तदभिमतेश्वरानधीनाकाशाद्यर्थत्वं च निरस्यं स्यात् ।**

ಒಂದು ವೇಳೆ ಸಾಂಖ್ಯರಿಗೆ ಅಭಿಮತವಾದ ಈಶ್ವರಾನಧೀನವಾದ ಪ್ರಕೃತಿಯನ್ನು ನಿರಾಕರಣೆ ಮಾಡುವ ಉದ್ದೇಶವು ನಿನ್ನದಾಗುವುದಾದರೆ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ' ಇತ್ಯಾದಿ ಸ್ಥಳಗಳಲ್ಲಿಯೂ ಅರ್ಥಾದಿ ಶಬ್ದಗಳಿಗೆ ಸಾಂಖ್ಯರಿಗೆ ಅಭಿಮತವಾದ ಈಶ್ವರಾನಧೀನವಾದಶಬ್ದಸ್ಪರ್ಶಾದ್ಯರ್ಥವನ್ನು ನಿರಾಕರಣೆ ಮಾಡಬೇಕಾದೀತು. ಮತ್ತು 'ಆಕಾಶಾದ್ವಾಯುಃ' ಇತ್ಯಾದಿ ಸ್ಥಳಗಳಲ್ಲಿಯೂ ಈಶ್ವರಾನಧೀನವಾದ ಆಕಾಶಾದ್ಯರ್ಥವನ್ನು ನೀನು ನಿರಾಕರಣೆ ಮಾಡಬೇಕಾದೀತು.

**जगदुपादानस्य गुणत्रयात्मकस्यानादिभावस्याव्यक्तशब्दार्थस्य ''मायां तु प्रकृतिं विद्यात् दैवात्मशक्तिं स्वगुणैर्निगूढां गौरनाद्यन्तवती यस्याव्यक्तं शरीरम्'' इत्यादिश्रुतिभिः, ''सत्वं रजस्तम इति गुणाः प्रकृतिसम्भवाः यत्तत् त्रिगुणमव्यक्तम्'' इत्यादिस्मृतिभिश्च त्वयापि स्वीकृतत्वात् ।**

ಮತ್ತು ಜಗತ್ತಿಗೆ ಉಪದಾನಕಾರಣವಾದ ಪ್ರಕೃತಿಯು ಅನೇಕ ಶ್ರುತಿ-ಸ್ಮೃತಿಗಳಿಂದ ಪ್ರತಿಪಾದ್ಯವಾಗಿದೆಯೆಂದು ನೀನೂ ಕೂಡ ಅಂಗೀಕರಿಸಿರುವಿ. ಅವ್ಯಕ್ತಶಬ್ದದ ಅರ್ಥವೆನಿಸಿದ ಪ್ರಕೃತಿಯು ಗುಣತ್ರಯಾತ್ಮಕವಾಗಿದೆ. ಅನಾದಿಯಾದ ಭಾವರೂಪವಾದ ಪದಾರ್ಥವಾಗಿದೆ. ಇಂತಹ ಪ್ರಕೃತಿತತ್ವವು 'ಮಾಯಾಂ ತು ಪ್ರಕೃತಿಂ ವಿದ್ಯಾತ್' 'ದೈವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ' 'ಗೌರನಾದ್ಯಂತವತೀ' 'ಯಸ್ಯಾವ್ಯಕ್ತಂ ಶರೀರಮ್' ಇವೇ ಮೊದಲಾದ ಶ್ರುತಿಗಳಿಂದ ಮತ್ತು 'ಸತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ' 'ಯತ್ತತ್ತ್ರಿಗುಣಮವ್ಯಕ್ತಮ್' ಇವೇ ಮೊದಲಾದ ಸ್ಮೃತಿಗಳಿಂದಲೂ ಪ್ರತಿಪಾದ್ಯವಾಗಿರುತ್ತದೆ.

**नाममात्रे च विवादायोगात् । ईशानधीनत्वसत्यत्वादेश्चाकाशादेश्चाकाशादेरप्यभावात् ।**

ಈ ಶ್ರುತಿ-ಸ್ಮೃತಿಗಳಲ್ಲಿ ಪ್ರತಿಪಾದ್ಯವಾದದ್ದು ಭೂತಸೂಕ್ಷ್ಮವೆಂದು ನೀನು ವಾದಿಸಬಹುದು. ಹಾಗಾದಲ್ಲಿ ಕೇವಲ ಹೆಸರಿನಲ್ಲಷ್ಟೇ ವಿವಾದ ಮಾಡಿದಂತಾಗುತ್ತದೆ. ಎರಡರ ಲಕ್ಷಣವು ಒಂದೇ

ಆಗಿರುವಾಗ, ತತ್ವದಲ್ಲಿ ಏನೂ ವ್ಯತ್ಯಾಸವಿಲ್ಲದಿದ್ದಾಗ ಹೆಸರಿನಲ್ಲಿ ವಾದ ಮಾಡಿದಂತಾಗುತ್ತದೆ. ಮತ್ತು ಈಶ್ವರಾನಧೀನವಾದ ಸತ್ಯತ್ವಾದಿಗಳು ಆಕಾಶಾದಿಗಳಲ್ಲೂ ಕೂಡ ಇರುವುದಿಲ್ಲ. ಆದ್ದರಿಂದ ಆಕಾಶಾದಿಗಳಲ್ಲಿಯೂ ಕೂಡ ಈಶಾನಧೀನಸತ್ಯತ್ವವನ್ನು ಈ ಅಧಿಕರಣದಲ್ಲಿ ನಿರಾಕರಣೆ ಮಾಡಬಹುದಿತ್ತಲ್ಲವೇ?

**प्रकाशः –**

**ननु ''महतःपरम्'' इति वाक्ये कारणत्वाप्रतीतावपि ''अजामेकां लोहितशुक्ल-कृष्णां बह्वीं प्रजां जनयन्तीं सरूपाम्'' इत्यत्र तत्प्रतीतिरस्तीति चेत्तर्ह्यव्यक्तशब्दे तद्विचारो न स्यात् । अजावाक्यस्याप्युपलक्षणं तदिति चेदस्त्वेवं कथंचित्पूर्वपक्षोदय इत्यभ्युपेत्य ''तत्किं ब्रह्मपरं करिष्यते तेजोबन्नविषयं हि तद्व्याख्यातं भवता । तथा च लौकिकमाभाणकं नातिवर्तते व्याघ्रेणोरणे नीते का हानिर्वृकेण नीते को लाभ इति'' इति सुधोक्तं विवृण्वन् सिद्धान्तं निराह – किञ्चेति ।।**

ವಿವರಣೆ - 'ಮಹತಃ ಪರಮವ್ಯಕ್ತಮ್' ಎಂಬ ವಾಕ್ಯದಲ್ಲಿ ಜಗತ್ಕಾರಣತ್ವವು ಪ್ರತೀತವಾಗದಿರಬಹುದು. ಆದರೆ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಂ ಪ್ರಜಾಂ ಜನಯಂತೀಂ ಸರೂಪಾಮ್' ಎಂಬ ಶ್ರುತಿವಾಕ್ಯದಲ್ಲಿ ಜಗತ್ಕಾರಣತ್ವವು ಪ್ರತೀತವಾಗುತ್ತಿದೆ. ಆದ್ದರಿಂದ ಇಂತಹ ಜಗತ್ಕಾರಣತ್ವವನ್ನು ಪ್ರಕೃತಿಯಲ್ಲಿ ನಿಷೇಧ ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಹಾಗಾದರೆ ಅವ್ಯಕ್ತಶಬ್ದದಲ್ಲಿ ವಿಚಾರವಲ್ಲ. 'ಅಜಾಮೇಕಾಂ' ಎಂಬ ಶ್ರುತಿಯಲ್ಲಿ ವಿಚಾರವೆಂದು ಹೇಳಿದಂತಾಯಿತು. 'ಅಜಾಮೇಕಾಂ' ಎಂಬ ಶ್ರುತಿಯು ಅವ್ಯಕ್ತಶ್ರುತಿಗೆ ಉಪಲಕ್ಷಣವಾಗಬಹುದಲ್ಲವೇ? ಆದ್ದರಿಂದ ಪೂರ್ವಪಕ್ಷದ ಉದಯವು ಆಗುತ್ತದೆಂದು ಆಕ್ಷೇಪಿಸಿದರೆ ಕಥಂಚಿತ್ ಪೂರ್ವಪಕ್ಷೋದಯವನ್ನು ಅಂಗೀಕರಿಸಿ ನಿರಾಕರಿಸುತ್ತಿದ್ದಾರೆ. 'ತತ್ಕಿಂ ಬ್ರಹ್ಮಪರಂ ಕರಿಷ್ಯತೇ । ತೇಜೋಬನ್ನವಿಷಯಂ ಹಿ ತದ್ವ್ಯಾಖ್ಯಾತಂ ಭವತಾ । ತಥಾ ಚ ಲೌಕಿಕಮಾಭಾಣಕಂ ನಾತಿವರ್ತತೇ ವ್ಯಾಘ್ರೇಣೋರಣೇ ನೀತೇ ಕಾ ಹಾನಿರ್ವೃಕೇಣ ನೀತೇ ಕೋ ಲಾಭ ಇತಿ' ಅವ್ಯಕ್ತಶಬ್ದವನ್ನು ಬ್ರಹ್ಮಪರವನ್ನಾಗಿ ಮಾಡುತ್ತೀರೇನು? ಮಾಡುವುದಿಲ್ಲ. ತೇಜೋಬನ್ನವಿಷಯವಾಗಿ ನೀವು ವ್ಯಾಖ್ಯಾನ ಮಾಡಿದ್ದೀರಿ. ಕುರಿಯು ಹುಲಿಯ ಬಾಯಲ್ಲಿ ಬಿದ್ದರೆ ಏನು ನಷ್ಟ? ತೋಳದ ಬಾಯಲ್ಲಿ ಬಿದ್ದರೆ ಏನು ಲಾಭ? ಇತ್ಯಾದಿಯಾಗಿ ಸುಧೆಯಲ್ಲಿ ಹೇಳಿದ ಮಾತುಗಳನ್ನೇ ವಿವರಿಸುತ್ತಾ ಅದ್ವೈತಿಗಳ ಸಿದ್ಧಾಂತವನ್ನು ನಿರಾಕರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः** – अव्यक्तेत्युपलक्षणम् । अव्यक्ताजादिशब्दार्थ इत्यर्थः ।। **अनङ्गीकृतेरिति** ।। ''शरीरं ह्यत्र रथरूपकविन्यस्तमव्यक्तशब्देन परिगृह्यते, प्रकरणात् परिशेषात्'' इति त्वद् भाष्योक्तेरिति भावः ।

ಪರಿಪೂರ್ಣಚಂದ್ರಿಕಾ

ಅವ್ಯಕ್ತಶಬ್ದವು ಉಪಕ್ಷಣವಾಗಿದೆ. ಅಜಾದಿಶಬ್ದಾರ್ಥವನ್ನೂ ಕೂಡ ವಿವಕ್ಷಿಸಬೇಕು. 'ಅನಂಗೀಕೃತೇಃ' ಎಂದರೆ 'ಶರೀರಂ ಹ್ಯತ್ರ ರಥರೂಪಕವಿನ್ಯಸ್ತಮವ್ಯಕ್ತಶಬ್ದೇನ ಪರಿಗೃಹ್ಯತೇ ಪ್ರಕರಣಾತ್ ಪರಿಶೇಷಾತ್' ಅವ್ಯಕ್ತಶಬ್ದದಿಂದ ರಥವೆಂದು ಪರಿಗಣಿಸಲ್ಪಟ್ಟ ಶರೀರವೇ ಪ್ರತಿಪಾದ್ಯವಾಗುತ್ತದೆ. ಏಕೆಂದರೆ ಪ್ರಕರಣ ಹಾಗೂ ಪರಿಶೇಷಪ್ರಮಾಣಗಳಿಂದ ಎಂದು ಶಾಂಕರಭಾಷ್ಯದಲ್ಲಿ ಹೇಳಿರುವುದರಿಂದ.

**प्रकाशः** – 'महतः परम्' इत्यत्र कारणत्वविवक्षास्ति न वेति विकल्पं हृदि कृत्वाऽऽद्य आह – **प्रधान इति** ।। द्वितीयं शङ्कते – **नन्विति** ।।

'ಮಹತಃ ಪರಮವ್ಯಕ್ತಮ್' ಎಂಬಲ್ಲಿ ಕಾರಣತ್ವವು ವಿವಕ್ಷಿತವಾಗಿದೆಯೋ, ಇಲ್ಲವೋ ? ಎಂದು ವಿಕಲ್ಪ ಮಾಡಿ, ಪ್ರಥಮಪಕ್ಷದಲ್ಲಿ 'ಪ್ರಧಾನ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಎರಡನೆಯ ಪಕ್ಷವನ್ನು 'ನನು' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ.

तेजोबन्नात्मकं वाऽपि यद्युपादानमिष्यते ।
अनाद्येवापराधः कः प्रधानमिति चोदितः ।।

इत्यनुभाष्यसुधयोरुक्तं विवृण्वन् विचारवैयर्थ्येन दूषयति – **तर्हीत्यादिना** ।।

ಅವ್ಯಕ್ತಶಬ್ದಕ್ಕೆ 'ತೇಜೋಬನ್ನಾತ್ಮಕವಾದ ತತ್ತ್ವ' ಎಂಬರ್ಥವನ್ನು ಮಾಡಿ, ಅದು ಜಗತ್ತಿಗೆ ಉಪಾದಾನಕಾರಣವೆಂದು ನೀವು ಅಂಗೀಕರಿಸುತ್ತೀರಿ. ಇದರಂತೆ ಅನಾದಿಯಾದ ಪ್ರಕೃತಿಯೂ ಉಪಾದಾನಕಾರಣವೆಂದು ಹೇಳಿದರೆ ಏನು ಅಪರಾಧವಾಗುತ್ತದೆ? ಎಂಬ ಅನುಭಾಷ್ಯ ಹಾಗೂ ಸುಧೆಯಲ್ಲಿ ಹೇಳಿದ ವಿಷಯಗಳನ್ನೇ ವಿವರಿಸುವವರಾಗಿ ವಿಚಾರವೇ ವ್ಯರ್ಥವಾಗುತ್ತದೆಂದು ದೂಷಿಸುತ್ತಿದ್ದಾರೆ 'ತರ್ಹಿ' ಇತ್ಯಾದಿ ಗ್ರಂಥದಿಂದ.

**प्रकाशः** – ननु न प्रधानं स्वरूपेण निषिध्यते किं त्वीश्वरानधीनतया । तथा च स्वतन्त्रं प्रधानमव्यक्तशब्दमिति प्राप्ते ईश्वरशरीरत्वेन तदधीनमव्यक्तशब्दमिति सिद्धान्त्यते । परभाष्यद्वयेऽपि तदधीनत्वसूत्रे तथैवोक्तेरिति चेत्तर्ह्येवंविध-विचारस्येन्द्रियादिष्वपि सम्भवेन विशिष्याव्यक्तवाक्य एव तद्विचारो निष्फलस्स्यादित्याह – **अन्यथेति** ।।

ಪ್ರಕೃತಿಯನ್ನು ಸ್ವರೂಪತಃ ನಾವು ನಿಷೇಧ ಮಾಡುತ್ತಿಲ್ಲ ಈಶ್ವರನ ಅನಧೀನವಾಗಿ ಪ್ರಕೃತಿಯು ಕಾರಣವಲ್ಲವೆಂದಷ್ಟೇ ನಿಷೇಧ ಮಾಡುತ್ತಿದ್ದೇವೆ. ಆದ್ದರಿಂದ ಸ್ವತಂತ್ರವಾದ ಪ್ರಧಾನವೇ ಅವ್ಯಕ್ತಶಬ್ದ ಪ್ರತಿಪಾದ್ಯವೆಂದು ಪೂರ್ವಪಕ್ಷವು ಪ್ರಾಪ್ತವಾದರೆ, ಪ್ರಧಾನವು ಈಶ್ವರನ ಶರೀರವಾದ್ದರಿಂದ ಅವನ ಅಧೀನವಾಗಿದೆಯೆಂದು ಸಿದ್ಧಾಂತ ಮಾಡುತ್ತಾರೆ. ರಾಮಾನುಜಭಾಷ್ಯ ಹಾಗೂ ಶಾಂಕರಭಾಷ್ಯದಲ್ಲಿ ತದಧೀನತ್ವ ಸೂತ್ರಕ್ಕೆ ಪ್ರಕೃತಿಯು ಈಶ್ವರಾಧೀನವಾಗಿದೆಯೆಂದೇ ವ್ಯಾಖ್ಯಾನ ಮಾಡಿರುತ್ತಾರೆ. ಹೀಗಿರುವಾಗ ಪ್ರಕೃತಿಯನ್ನೇ ನಿಷೇಧ ಮಾಡುತ್ತಿದ್ದಾರೆಂದು ಹೇಗೆ ತಿಳಿಯುತ್ತೀರಿ ?

ಹೀಗೆ ಶಂಕಿಸಬಾರದು. ಏಕೆಂದರೆ ಈ ಬಗೆಯ ವಿಚಾರವನ್ನು ಇಂದ್ರಿಯಾದಿಗಳಲ್ಲಿಯೂ ಕೂಡ ಹೇಳಬಹುದು. ಅವುಗಳನ್ನೆಲ್ಲಾ ಬಿಟ್ಟು ಕೇವಲ ಅವ್ಯಕ್ತಶಬ್ದದಲ್ಲಷ್ಟೇ ವಿಚಾರ ಮಾಡುವುದಕ್ಕಾಗಿ ಈ ಅಧಿಕರಣ ಹೊರಟಿದೆಯೆಂದು ಹೇಳುವುದು ನಿಷ್ಫಲವಾಗಿದೆ. ಇದನ್ನೇ ಗ್ರಂಥಕಾರರು 'ಅನ್ಯಥಾ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – स्वतन्त्रप्रधानपरत्वनिरासेन साफल्य इत्यर्थः । आकाशादिसाम्यं व्यनक्ति – **जगदिति** ।।

'ಅನ್ಯಥಾ' ಎಂದರೆ ಸ್ವತಂತ್ರವಾದ ಪ್ರಧಾನಪರತ್ವವನ್ನು ನಿರಾಸ ಮಾಡುವ ಮೂಲಕ ಸಾಫಲ್ಯವನ್ನು ಹೇಳುವುದಾದರೆ ಎಂದರ್ಥ. ಆಕಾಶಾದಿ ಪದಾರ್ಥಗಳಲ್ಲಿಯೂ ಇಂತಹ ವಿಚಾರವು ಸಮಾನವಾಗಿದೆ-ಯೆಂಬುದನ್ನು 'ಜಗತ್' ಇತ್ಯಾದಿ ವಾಕ್ಯದಿಂದ ಪ್ರತಿಪಾದನೆ ಮಾಡುತ್ತಿದ್ದಾರೆ.

**प्रकाशः** – एवं च तत्र यथाऽऽकाशादिस्वरूपाङ्गीकारेण न विचारस्तथात्रापि प्रधानस्वरूपाङ्गीकारादन्यस्योभयत्राप्यनङ्गीकारादिदमपि वाक्यं न विचार्यमित्येतदपि नारभ्यमिति भावः ।

ಆದ್ದರಿಂದ ಆಕಾಶಾದಿಸ್ವರೂಪವನ್ನು ಅಂಗೀಕಾರ ಮಾಡಿ ಅವುಗಳ ವಿಷಯದಲ್ಲಿ ವಿಚಾರವನ್ನು ಹೇಗೆ ಮಾಡುತ್ತಿಲ್ಲವೋ, ಅದರಂತೆ ಇಲ್ಲಿಯೂ ಕೂಡ ಪ್ರಧಾನದ ಸ್ವರೂಪವನ್ನು ಅಂಗೀಕಾರ ಮಾಡಿರುವುದರಿಂದ ಸ್ವಾತಂತ್ರ್ಯ ಹಾಗೂ ಸತ್ಯತ್ವಾದಿಗಳನ್ನು ಆಕಾಶಾದಿಗಳಲ್ಲಿ ಒಪ್ಪಿರುವುದಿಲ್ಲ, ಪ್ರಧಾನಾದಿಗಳಲ್ಲಿಯೂ ಕೂಡ ಒಪ್ಪಿರುವುದಿಲ್ಲ. ಆದ್ದರಿಂದ ಆಕಾಶಾದಿ ವಾಕ್ಯಗಳು ಹೇಗೆ ವಿಚಾರಕ್ಕೆ ಅರ್ಹವಾಗಿಲ್ಲವೋ, ಅದರಂತೆ ಈ ಪ್ರಧಾನಪರವಾದ ವಾಕ್ಯವೂ ಕೂಡ ವಿಚಾರಕ್ಕೆ ಅರ್ಹವಾಗುವುದಿಲ್ಲ. ಆದ್ದರಿಂದ ಅಧಿಕರಣವೇ ಅನಾರಂಭಣೀಯವಾಗುತ್ತದೆ.

**प्रकाशः** – ''सर्ववेदेतिहासेषु पुराणेषु च सङ्ग्रहात्'' इत्यनुव्याख्यानं हृदि कृत्वाऽऽह – **मायामिति** ।। ''मायां तु प्रकृतिं विद्यान्मायिनं तु महेश्वरम्'' इति श्वेताश्वतरश्रुतिः ।। **दैवेति** ।। ''ते ध्यानयोगानुगता अपश्यन् दैव'' इति श्वेताश्वतरश्रुतिः ।।

'ಸರ್ವವೇದೇತಿಹಾಸೇಷು ಪುರಾಣೇಷು ಚ ಸಂಗ್ರಹಾತ್' ಎಂಬ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು 'ಮಾಯಾಮ್' ಇತ್ಯಾದಿ ವಾಕ್ಯದಿಂದ ವಿಷಯವನ್ನು ಮಂಡಿಸುತ್ತಿದ್ದಾರೆ. 'ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್' ಎಂಬುದು ಶ್ವೇತಾಶ್ವತರ ಶ್ರುತಿಯು. 'ತೇ ಧ್ಯಾನಯೋಗಾನುಗತಾ ಅಪಶ್ಯನ್ದೈವಃ' ಎಂಬುದೂ ಕೂಡ ಶ್ವೇತಾಶ್ವತರಶ್ರುತಿಯೇ ಆಗಿದೆ.

ಪರಿಪೂರ್ಣಚಂದ್ರಿಕಾ

**प्रकाशः – गौरिति ।।** इयमग्रे व्यक्ता । ''यस्याव्यक्तम्'' इति वाजसनेयेऽन्तर्यामिब्राह्मणे । ''सत्वं रजस्तमः'' इति गीतायां चतुर्दशेऽध्याये । ''यत्तत्त्रिगुणमव्यक्तं नित्यं सदसदात्मकम्'' इत्यनुव्याख्यानोक्तं भागवतवाक्यम् ।

'ಗೌರನಾದ್ಯನಂತವತಿ' ಎಂಬ ಶ್ರುತಿಯನ್ನು ಮುಂದೆ ಸ್ಪಷ್ಟಪಡಿಸುತ್ತೇವೆ. 'ಯಸ್ಯಾವ್ಯಕ್ತಮ್' ಎಂಬುದು ಬೃಹದಾರಣ್ಯಕದ ಅಂತರ್ಯಾಮಿಬ್ರಾಹ್ಮಣದಲ್ಲಿ ಇರುತ್ತದೆ. 'ಸತ್ವಂ ರಜಸ್ತಮಃ' ಎಂಬುದು ಭಗವದ್ಗೀತೆಯ ಹದಿನಾಲ್ಕನೆಯ ಅಧ್ಯಾಯದಲ್ಲಿರುತ್ತದೆ. 'ಯತ್ತತ್ ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಮ್' ಎಂಬುದು ಅನುವ್ಯಾಖ್ಯಾನದಲ್ಲಿ ಉದಾಹರಿಸಿದ ಭಾಗವತ ಶ್ಲೋಕವಾಗಿದೆ.

**प्रकाशः –** अविद्यादिरेव मायाव्यक्तादिशब्दैरुच्यत इत्यत आह – **नामेति ।। आकाशादेरप्यभावादिति ।।** तस्य तद्भावे ह्यव्यक्ते तदभावेन तदुक्त्यर्थमिदमर्थवत् स्यादिति भावः ।

'ಮಾಯಾ ಅವ್ಯಕ್ತ' ಮೊದಲಾದ ಶಬ್ದಗಳಿಂದ ಅವಿದ್ಯಾದಿಗಳೇ ಪ್ರತಿಪಾದ್ಯವಾಗಬಹುದಲ್ಲವೇ? ಎಂಬ ಪ್ರಶ್ನೆಗೆ 'ನಾಮ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಆಕಾಶಾದೇರಪ್ಯಭಾವಾತ್' ಎಂಬುದರ ಅಭಿಪ್ರಾಯ ಹೀಗಿದೆ - ಒಂದು ವೇಳೆ ಆಕಾಶಾದಿಗಳಿಗೆ ಸ್ವಾತಂತ್ರ್ಯ ಮೊದಲಾದವುಗಳು ಇದ್ದಿದ್ದರೆ ಅವ್ಯಕ್ತಕ್ಕೆ ಅಂತಹ ಸ್ವಾತಂತ್ರ್ಯಾದಿಗಳು ಇಲ್ಲದ ಕಾರಣ ಅಂತಹ ಅವ್ಯಕ್ತಾದಿಗಳ ಪ್ರತಿಪಾದನೆಗೋಸ್ಕರ ಈ ಅಧಿಕರಣವು ಆರಂಭಣೀಯವಾಗುತ್ತಿತ್ತು ಎಂದಭಿಪ್ರಾಯ.




ಕಾರಣತ್ವಂ ಪ್ರಧಾನಸ್ಯ ನಿರಸ್ಯ ಸ್ಥಾಪಿತಂ ಯದಿ ।
ಅವಿದ್ಯಾದೇಸ್ತದಾ ಕೋನು ಲಾಭೋಽಸ್ತಿ ಬ್ರಹ್ಮವಾದಿನಃ ॥೧॥

ಬ್ರಹ್ಮವಾದಿಯಾದ ನಿನಗೆ ಕಾರಣತ್ವವನ್ನು ಪ್ರಧಾನದಲ್ಲಿ ನಿರಾಕರಿಸಿ, ಅವಿದ್ಯಾದಿಗಳಲ್ಲಿ ಸ್ಥಾಪನೆ ಮಾಡುವುದಾದರೆ, ಏನು ಲಾಭವಿದೆ ?

ವೃಕೋಣಾಪಹೃತಂ ಮೇಷಮಾದಾಯಾತಿಪ್ರಯತ್ನತಃ ।
ಸ ಚೇದ್ವ್ಯಾಘ್ರಾಯ ದೀಯೇತ ಕೋ ಲಾಭಸ್ತೇನ ಸಿಧ್ಯತಿ ॥೨॥

ತೋಳದಿಂದ ಕುರಿಯನ್ನು ಮಹಾಪ್ರಯತ್ನದಿಂದ ರಕ್ಷಣೆ ಮಾಡಿ ಹುಲಿಯ ಬಾಯಿಯಲ್ಲಿ ನೀಡಿದರೆ ನಿನಗೇನು ಲಾಭವಾಗುತ್ತದೆ.

ಪ್ರಧಾನವು ಈಶ್ವರನ ಶರೀರದಂತಿರುವುದರಿಂದ ಅವನ ಅಧೀನವಾಗಿದೆ. ಆದರೆ ಶ್ರುತಿಯನ್ನು ನೋಡಿದಾಗ ಸ್ವತಂತ್ರವಾಗಿದೆಯೆಂಬ ಭ್ರಾಂತಿ ಬರುತ್ತದೆ. ಸ್ವಾತಂತ್ರ್ಯಭ್ರಮೆಯನ್ನು ನಿರಾಕರಿಸುವುದಕ್ಕಾಗಿ ಈ ಅಧಿಕರಣ ಹೊರಟಿದೆಯೆಂದು ಅಧಿಕರಣಕ್ಕೆ ನಾವು ಸಾರ್ಥಕ್ಯವನ್ನು ಹೇಳುತ್ತೇವೆಂದು ಅದ್ವೈತಿಗಳು ವಾದಿಸುತ್ತಾರೆ.

ಇದು ಸರಿಯಲ್ಲ. ಹಾಗಾದಲ್ಲಿ ಯಾವ ಪ್ರಕರಣದಲ್ಲಿ ಅವ್ಯಕ್ತದ ಬಗ್ಗೆ ಪ್ರಸಕ್ತಿ ಬಂದಿದೆಯೋ, ಅದೇ ಪ್ರಕರಣದಲ್ಲೇ ಆಕಾಶ, ಇಂದ್ರಿಯ ಮೊದಲಾದವುಗಳೂ ಕೂಡ ಪ್ರಸಕ್ತವಾಗಿವೆ. ಅವ್ಯಕ್ತವು ಈಶ್ವರನ ಅಧೀನವಾಗಿರುವಂತೆ ಆಕಾಶಾದಿಗಳೂ ಈಶ್ವರನ ಅಧೀನವೇ ಆಗಿವೆ. ಆದ್ದರಿಂದ ಈಶ್ವರನ ಅಧೀನವಲ್ಲವೆಂಬ ವಿಷಯವನ್ನು ಆಕಾಶಾದಿಗಳಲ್ಲಿಯೂ ಈ ಅಧಿಕರಣದಿಂದ ನಿರಾಕರಿಸಬಹುದಲ್ಲವೇ? ಅವುಗಳ ವಿಚಾರವನ್ನು ಬಿಟ್ಟು, ಅವ್ಯಕ್ತಶಬ್ದದಲ್ಲಿ ಮಾತ್ರ ಈಶ್ವರನ ಅನಧೀನತ್ವದ ನಿರಾಕರಣೆ ಮಾಡುವುದು ಯುಕ್ತವಾಗುವುದಿಲ್ಲ. ಮತ್ತು ಅವ್ಯಕ್ತವು ಜಗತ್ತಿಗೆ ಉಪಾದಾನ ಕಾರರಣವಾಗಿದೆಯೆಂದು 'ಮಾಯಾಂ ತು ಪ್ರಕೃತಿಂ ವಿದ್ಯಾತ್' ಮೊದಲಾದ ಶ್ರುತಿಗಳೂ, 'ಸತ್ವಂ ರಜಸ್ತಮ ಇತಿ' ಮೊದಲಾದ ಸ್ಮೃತಿಗಳು ಪ್ರತಿಪಾದನೆ ಮಾಡುತ್ತಿವೆ. ಹೀಗಿರುವಾಗ ಜಗತ್ತಿಗೆ ಪ್ರಕೃತಿಯು ಕಾರಣವೇ ಅಲ್ಲ. ಅದು ಶಬ್ದದಿಂದ ಪ್ರತಿಪಾದ್ಯವೂ ಅಲ್ಲ. ಇತ್ಯಾದಿಯಾಗಿ ಅದ್ವೈತಿಗಳು ಸಮರ್ಥಿಸುವುದು ಅತ್ಯಂತ ಅನುಚಿತವಾಗಿದೆ.



• • • • •

## ಪ್ರಥಮ ಸೂತ್ರಾರ್ಥ ವಿಮರ್ಶೆ

## तात्पर्यचन्द्रिका

**यच्चोक्तं पूर्ववाक्ये रथरूपकविन्यस्तशरीरस्यैवेहाव्यक्तशब्देन गृहीतिः ।**

ಅನುವಾದ - ಶಾಂಕರಭಾಷ್ಯದಲ್ಲಿ ಮತ್ತು ಅದ್ವೈತಭಾಷ್ಯದಲ್ಲಿ ಪ್ರಥಮ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡಿದ್ದಾರೆ - 'ಶರೀರರೂಪಕವಿನ್ಯಸ್ತಗೃಹಿತೇಃ' = ಹಿಂದಿನ ವಾಕ್ಯದಲ್ಲಿ ರಥವೆಂದು ಹೇಳಲ್ಪಟ್ಟ ಶರೀರವನ್ನೇ ಇಲ್ಲಿ ಅವ್ಯಕ್ತಶಬ್ದದಿಂದ ವಿವಕ್ಷಿಸಬೇಕು.

**तथाहि । शरीरादीना रथादिरूपक्लृप्तिं दर्शयति शरीरं रथमेवेत्यादि-पूर्ववाक्यमिति प्रथमसूत्रस्थपरिहारभागस्यार्थ इति ।**

'ತಥಾಹಿ' = ಏಕೆಂದರೆ ಶರೀರಾದಿಗಳಿಗೆ ರಥಾದಿರೂಪವನ್ನು, ದರ್ಶಯತಿ = 'ಶರೀರಂ ರಥಮೇವಚ' ಇತ್ಯಾದಿಯಾಗಿ ಹಿಂದಿನ ವಾಕ್ಯದಲ್ಲಿ ಹೇಳಲಾಗಿದೆ. ಹೀಗೆ ಪ್ರಥಮಸೂತ್ರದ ಪರಿಹಾರಭಾಗಕ್ಕೆ ವ್ಯಾಖ್ಯಾನ ಮಾಡುತ್ತಾರೆ.

**तन्न । शरीरगृहीतेरित्येतावतैव पूर्णत्वेन रूपकविन्यस्तपदवैयर्थ्यात् ।**

ಇದು ಸರಿಯಲ್ಲ. ಏಕೆಂದರೆ 'ಶರೀರಗೃಹಿತೇಃ' ಎಂದಷ್ಟೇ ಹೇಳಿದರೂ ಶರೀರವನ್ನೇ ಅವ್ಯಕ್ತ-ಪದದಿಂದ ವಿವಕ್ಷಿಸಬೇಕೆಂದು ತಿಳಿಯುವಾಗ ಸೂತ್ರದಲ್ಲಿ 'ರೂಪಕವಿನ್ಯಸ್ತ' ಪದವು ವ್ಯರ್ಥವಾಗುತ್ತದೆ.

**रूपकविन्यस्तपदस्य शरीरविशेषणत्वेन पूर्वनिपातप्रसङ्गाच्च ।**

ಮತ್ತು 'ರೂಪಕವಿನ್ಯಸ್ತ' ಪದವು ಶರೀರಕ್ಕೆ ವಿಶೇಷಣವಾದ್ದರಿಂದ 'ಉಪಸರ್ಜನಂ ಪೂರ್ವಂ' ಎಂಬುದರಿಂದ ಪೂರ್ವನಿಪಾತವನ್ನು ಹೊಂದಿ, ಶರೀರ ಪದವು ಪರನಿಪಾತವನ್ನು ಹೊಂದಬೇಕಾಗುತ್ತದೆ. ಆದ್ದರಿಂದ 'ಶರೀರರೂಪಕವಿನ್ಯಸ್ತ' ಎಂಬ ವಾಕ್ಯವಿನ್ಯಾಸವೂ ಕೂಡ ನಿಮ್ಮ ಪ್ರಕಾರ ತಪ್ಪಾಗುತ್ತದೆ.

**रूपकविन्यस्तपदेनैव शरीरस्य रथरूपविन्यासस्योक्तत्वेन तथाहि दर्शयतीत्यस्य वैयर्थ्याच्च ।**

ಮತ್ತು ಪೂರ್ವವಾಕ್ಯದಲ್ಲಿ ಶರೀರವು ರಥರೂಪವಾಗಿ ಹೇಳಲ್ಪಟ್ಟಿದೆ ಎಂಬ ವಿಚಾರವು ರೂಪಕವಿನ್ಯಸ್ತ ಪದದಿಂದಲೇ ತಿಳಿಯುತ್ತಿರುವಾಗ 'ತಥಾಹಿ ದರ್ಶಯತಿ' ಎಂಬ ಭಾಗಕ್ಕೆ ಕೃತ್ಯವಿರುವುದಿಲ್ಲ. ಆದ್ದರಿಂದ ಪ್ರಥಮಸೂತ್ರದ ವ್ಯಾಖ್ಯಾನವು ಅಸಾಧುವಾಗಿದೆ.

**प्रकाशः –**

एवं मतद्वयेऽधिकरणशरीरं निरस्य सूत्रार्थानपि दूषयति – **यच्चेत्यादिना** ।। उभाभ्यामित्यस्ति ।

ವಿವರಣೆ - ಇಲ್ಲಿಯ ತನಕ ಅದ್ವೈತಮತದಲ್ಲಿ ಮತ್ತು ರಾಮಾನುಜಮತದಲ್ಲಿ ನಿರೂಪಿಸಲ್ಪಟ್ಟ ಅಧಿಕರಣಶರೀರವನ್ನು ನಿರಾಕರಿಸಿದ್ದಾಯಿತು. ಪ್ರಕೃತ ಅವರ ಸೂತ್ರವ್ಯಾಖ್ಯಾನಗಳನ್ನು ನಿರಾಕರಿಸಲು 'ಯಚ್ಚ' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. 'ಯಚ್ಚೋಕ್ತಮ್' ಎಂಬಲ್ಲಿ 'ಉಭಾಭ್ಯಮ್' ಎಂಬ ಪದವನ್ನು ಶೇಷಪೂರಣ ಮಾಡಿಕೊಳ್ಳಬೇಕು. ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಸೂತ್ರವ್ಯಾಖ್ಯಾನದ ತಾತ್ಪರ್ಯದಲ್ಲಿ ಒಂದೇ ಅಭಿಪ್ರಾಯವುಳ್ಳವರಾಗಿದ್ದಾರೆ. ಆದರೆ ಶಬ್ದಗಳಿಗೆ ವ್ಯಾಖ್ಯಾನ ಮಾಡುವಾಗ ಸ್ವಲ್ಪ ವ್ಯತ್ಯಾಸವೂ ಇದೆ. ವ್ಯತ್ಯಾಸವನ್ನು ಹೀಗೆ ತಿಳಿಯಬೇಕು -

**प्रकाशः** – आनुमानिकमपि सत्वरजस्तमोगुणात्मकजगल्लक्षणकार्यलिङ्गकानुमानसिद्धं त्रिगुणात्मकं प्रधानमपि एकेषां काठकानां शाखायां महतः परमव्यक्तमित्याम्नायते । अत ईक्षत्यधिकरणोक्तं प्रधानस्याशब्दत्वमयुक्तमिति चेन्न । पूर्ववाक्ये शरीरं रथमेव चेति यच्छरीरं रथरूपकतया विन्यस्तं तस्यैवेहाव्यक्तशब्देन गृहीतेर्दर्शयति च शरीरादीनां रथादिरूपकविन्यासं शरीरं रथमेवचेत्यादिवाक्यमित्यन्येषामाद्यसूत्रस्यार्थः ।

ಅದ್ವೈತಿಗಳ ಸೂತ್ರವ್ಯಾಖ್ಯಾನ ಹೀಗಿದೆ - 'ಆನುಮಾನಿಕಮಪಿ' = ಸತ್ವರಜಸ್ತಮೋಗುಣಾತ್ಮಕವಾದ ಈ ಜಗತ್ತೇ ಕಾರ್ಯರೂಪವಾಗಿದೆ. ಈ ಕಾರ್ಯಲಿಂಗಕ ಅನುಮಾನದಿಂದ ತ್ರಿಗುಣಾತ್ಮಕವಾದ ಪ್ರಧಾನವು

ಸಿದ್ಧವಾಗಿದೆಯೆಂದು ಸಾಂಖ್ಯರು ಹೇಳುತ್ತಾರೆ. ಕ್ಷಿತ್ಯಾದಿಕಂ, ಸಕಾರಣಂ, ಕಾರ್ಯತ್ವಾತ್' ಎಂಬ ಅನುಮಾನದಿಂದ ಪ್ರಧಾನವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಹೀಗೆ ಅನುಮಾನದಿಂದ ಸಿದ್ಧವಾದ ಪ್ರಕೃತಿಯನ್ನೂ ಕೂಡ ಕೆಲವು ಕಾಠಕದ ಭಾಗಗಳಲ್ಲಿ 'ಮಹತಃ ಪರಮವ್ಯಕ್ತಮ್' ಇತ್ಯಾದಿಯಾಗಿ ಅವ್ಯಕ್ತಶಬ್ದದಿಂದ ಹೇಳಲಾಗಿದೆ. ಆದ್ದರಿಂದ ಈಕ್ಷತ್ಯಧಿಕರಣದಲ್ಲಿ ಹೇಳಿದಂತೆ ಪ್ರಕೃತಿಯು ಅಶಬ್ದವಾಗಲು ಸಾಧ್ಯವಿಲ್ಲ. ಎಂದರೆ ಶಬ್ದದಿಂದ ಪ್ರತಿಪಾದ್ಯವೇ ಆಗುತ್ತಿರುವಾಗ, ಈಕ್ಷತ್ಯಧಿಕರಣದಲ್ಲಿ ಪ್ರಕೃತಿಯು ಶಬ್ದದಿಂದ ಪ್ರತಿಪಾದ್ಯವೇ ಅಲ್ಲವೆಂಬ ಸಿದ್ಧಾಂತವು ಯುಕ್ತವಾಗುವುದಿಲ್ಲವೆಂದು ಆಶಂಕೆ.

'ಶರೀರರೂಪಕವಿನ್ಯಸ್ತಗೃಹೀತೇಃ' = ಹಿಂದಿನ ವಾಕ್ಯದಲ್ಲಿ 'ಶರೀರಂ ರಥಮೇವ ಚ' ಎಂಬುದಾಗಿ ಶರೀರವನ್ನು ರಥರೂಪಕವೆಂದು ಹೇಳಿದ್ದರಿಂದ, ಅಂತಹ ಶರೀರವನ್ನೇ ಇಲ್ಲಿ ಅವ್ಯಕ್ತಶಬ್ದದಿಂದ ವಿವಕ್ಷಿಸಬೇಕು. 'ದರ್ಶಯತಿ ಚ' = ಶರೀರಾದಿಗಳನ್ನು ರಥರೂಪಕವಾಗಿ 'ಶರೀರಂ ರಥಮೇವಚ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲಾಗಿದೆ. ಇಷ್ಟು ಅದ್ವೈತಿಗಳ ಪ್ರಥಮಸೂತ್ರ ವ್ಯಾಖ್ಯಾನ.

**प्रकाशः** – केषाञ्चित्तु सांख्यानुमानकल्पितं प्रधानं महतः परमव्यक्तमित्याम्नायत इति चेन्न । पूर्वत्रात्मादिषु रथिरथादिरूपकविन्यस्तेषु रथरूपकविन्यस्तशरीरस्याव्यक्त-शब्देन गृहीतेः । दर्शयति चेममर्थमिन्द्रियादीनां नियमनप्रकारं दर्शयन् यच्छेद्वाङ्मनसी इत्यादिवाक्यशेष इति ।

ರಾಮಾನುಜರ ಸೂತ್ರಾರ್ಥ ಹೀಗಿದೆ - 'ಆನುಮಾನಿಕಮಪ್ಯೇಕೇಷಾಮ್' = ಸಾಂಖ್ಯಾನುಮಾನ ಕಲ್ಪಿತವಾದ ಪ್ರಧಾನವು 'ಮಹತಃ ಪರಮವ್ಯಕ್ತಮ್' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯವಾಗಿದೆಯಲ್ಲವೇ? ಇತಿ ಚೇನ್ನ = ಹೀಗೆ ಪ್ರಶ್ನಿಸಬಾರದು. 'ಶರೀರರೂಪಕವಿನ್ಯಸ್ತಗೃಹೀತೇಃ' = ಏಕೆಂದರೆ ಹಿಂದಿನ ವಾಕ್ಯದಲ್ಲಿ ಆತ್ಮ, ಇಂದ್ರಿಯ, ಅರ್ಥ ಇವೆಲ್ಲವೂ ಕೂಡ ರಥ, ಸಾರಥಿ ಇತ್ಯಾದಿಯಾಗಿ ವಿನ್ಯಸ್ತವಾಗಿರುವಾಗ ಅವುಗಳ ಮಧ್ಯದಲ್ಲೇ ರಥರೂಪಕವಾಗಿ ಹೇಳಲ್ಪಟ್ಟಿರುವ ಶರೀರವನ್ನು ಅವ್ಯಕ್ತಶಬ್ದದಿಂದ ತೆಗೆದುಕೊಳ್ಳಬೇಕು. ಏಕೆಂದರೆ 'ದರ್ಶಯತಿ ಚ' ಇಂದ್ರಿಯಾದಿಗಳ ನಿಯಮನ ಪ್ರಕಾರವನ್ನು 'ಯಚ್ಛೇದ್ವಾಙ್ಮನಸೀ' ಇತ್ಯಾದಿಯಾದ ವಾಕ್ಯಶೇಷದಲ್ಲಿ ತೋರಿಸಲಾಗಿದೆ. ಇಷ್ಟು ರಾಮಾನುಜರ ಸೂತ್ರವ್ಯಾಖ್ಯಾನ.

**प्रकाशः** – तत्र दूष्यभागार्थमनूद्य निराह – **पूर्वेति** ।। सुधोक्तमपि दोषमाह – **रूपकविन्यस्तपदस्येति** ।। ''विशेषणं विशेष्येण बहुलम्'' इति सूत्रे विशेषणशब्दस्य प्रथमान्तनिर्दिष्टतया ''प्रथमानिर्दिष्टं समास उपसर्जनम्'' इति सूत्रेणोपसर्जनसंज्ञायां ''उपसर्जनं पूर्वम्'' इत्युपसर्जनस्य पूर्वनिपातविधानादिति भावः ।

ಇವರೀರ್ವರ ಸೂತ್ರವ್ಯಾಖ್ಯಾನದಲ್ಲಿ ಯಾವುದನ್ನು ದೂಷಿಸುತ್ತಾರೋ, ಆ ಸೂತ್ರಭಾಗವನ್ನಷ್ಟೇ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಪೂರ್ವ' ಇತ್ಯಾದಿ ಗ್ರಂಥದಿಂದ. ನ್ಯಾಯಸುಧೆಯಲ್ಲಿ ಹೇಳಿದ

ದೋಷವನ್ನೂ ಕೂಡ 'ರೂಪಕವಿನ್ಯಸ್ತಪದಸ್ಯ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಲ್ಲಿ ವಿಶೇಷಣಶಬ್ದವನ್ನು ಪ್ರಥಮಾಂತವನ್ನಾಗಿ ನಿರ್ದೇಶಿಸಲಾಗಿದೆ. ಆದ್ದರಿಂದ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಎಂಬ ಸೂತ್ರದಿಂದ ಉಪಸರ್ಜನಸಂಜ್ಞೆಯು ಪ್ರಾಪ್ತವಾದರೆ, 'ಉಪಸರ್ಜನಂ ಪೂರ್ವಮ್' ಎಂಬ ಸೂತ್ರದಿಂದ ಉಪಸರ್ಜನಕ್ಕೆ ಪೂರ್ವನಿಪಾತವನ್ನು ವಿಧಿಸಲಾಗಿದೆ. ಹಾಗಾಗಿ ರೂಪಕವಿನ್ಯಸ್ತ ಪದವು ವಿಶೇಷಣವಾದ್ದರಿಂದ ಪೂರ್ವನಿಪಾತವನ್ನು ಹೊಂದಿ, 'ರೂಪಕವಿನ್ಯಸ್ತಶರೀರ' ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಪದಪ್ರಯೋಗವು ಇವರ ಪ್ರಕಾರ ಅಯುಕ್ತವಾಗುತ್ತದೆ.

**ಪ್ರಕಾಶಃ – नन्वेतदेवाशङ्क्य समाहितं श्रुतप्रकाशे अस्मिन् वाक्ये रूपकविन्यस्तं वस्तु प्राधान्येन विवक्षितम् । विशेषणापेक्षया विशेष्यं प्रधानम् । रूपकविन्यस्तपदं विशेष्यसमर्पकम् । कीदृशं तदित्यपेक्षायां शरीराख्यं रूपकविन्यस्तमिति शरीरशब्देन तद्विशेष्यते । अतो न दोष इति चेन्न । गत्यन्तरे सति क्लेशायोगादिति भावः ।**

ಶಂಕೆ - ಶರೀರಪದವು ಅನಂತರ ಬರಬೇಕೆಂದು ಆಕ್ಷೇಪಿಸಿಕೊಂಡು, ಶ್ರುತಪ್ರಕಾಶದಲ್ಲಿ ಸಮಾಧಾನವನ್ನು ಹೀಗೆ ಹೇಳಿದ್ದಾರೆ - 'ರೂಪಕವಿನ್ಯಸ್ತ' ಎಂಬ ವಸ್ತುವೇ ಪ್ರಧಾನವಾಗಿ ವಿವಕ್ಷಿಸಲ್ಪಟ್ಟಿದೆ. ಯಾವುದು ಪ್ರಧಾನವಾಗಿ ವಿವಕ್ಷಿತವಾಗಿರುತ್ತದೋ, ಅದೇ ವಿಶೇಷ್ಯವಾದ್ದರಿಂದ 'ರೂಪಕವಿನ್ಯಸ್ತ' ಎಂಬ ಪದವೇ ವಿಶೇಷ್ಯಸಮರ್ಪಕವಾದ ಪದವಾಗಿದೆ. ರೂಪಕವೆಂದು ವಿನ್ಯಸ್ತವಾದದ್ದು ಯಾವುದು? ಎಂಬ ಪ್ರಶ್ನೆಯು ಪ್ರಾಪ್ತವಾದರೆ, 'ಶರೀರ' ಎಂಬ ಶಬ್ದದಿಂದ ಆಕಾಂಕ್ಷೆಪೂರಣೆ ಮಾಡಲಾಗಿದೆ. ಆದ್ದರಿಂದ ಶರೀರವೆಂಬುದೇ ವಿಶೇಷಣ, 'ರೂಪಕವಿನ್ಯಸ್ತ' ಎಂಬುದೇ ವಿಶೇಷ್ಯವಾಗಿದೆ. ಹೀಗಿರುವಾಗ 'ರೂಪಕವಿನ್ಯಸ್ತ' ಎಂಬ ಪದವು ಮೊದಲು ಬರಬೇಕೆಂಬ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ.[೧]

ಸಮಾಧಾನ - ಇದು ಸರಿಯಲ್ಲ. ಒಂದು ವೇಳೆ ಬೇರೆ ಗತಿಯಿಲ್ಲದಿದ್ದಾಗ ಹೀಗೆ ಕಷ್ಟದಿಂದ ವ್ಯಾಖ್ಯಾನಿಸಬಹುದಿತ್ತು. ಆದರೆ ನಾವು ಹೇಳಿದಂತೆ ವ್ಯಾಖ್ಯಾನ ಮಾಡಲು ಬರುವಾಗ ಅಸ್ವರಸವಾದ ನಿಮ್ಮ ವ್ಯಾಖ್ಯಾನವು ಗ್ರಾಹ್ಯವಲ್ಲ.

(೧) ವಾಕ್ಯಪ್ರಯೋಗದಲ್ಲಿ ವಿಶೇಷ್ಯ ಹಾಗೂ ವಿಶೇಷಣಗಳು ವಕ್ತೃವಿನ ವಿವಕ್ಷಾಧೀನವಾಗಿರುತ್ತವೆ. 'ನೀಲಂ ಘಟಂ ಆನಯ' ಎಂದು ಹೇಳಿದಾಗ ಘಟವು ವಿಶೇಷ್ಯವಾಗಿ ನೈಲ್ಯವು ವಿಶೇಷಣವಾಗಿ ವಿವಕ್ಷಿತವಾಗಿರುತ್ತದೆ. ಒಂದು ವೇಳೆ 'ನೀಲಮಾನಯ' ಎಂದಷ್ಟೇ ವಕ್ತೃವು ಹೇಳಿದಾಗ ನೀಲವೇ ವಿಶೇಷ್ಯವಾಗುತ್ತದೆ. ಅಂತಹ ನೀಲಪದಾರ್ಥವು ಯಾವುದು ? ಎಂದು ಪ್ರಶ್ನಿಸಿದಾಗ, ಘಟವೇ ನೀಲಪದಾರ್ಥವೆಂದು ವಕ್ತೃ ಹೇಳುತ್ತಾನೆ. ಆವಾಗ 'ಘಟಂ ನೀಲಂ ಆನಯ' ಎಂದಾಗುತ್ತದೆ. ಇಲ್ಲಿ ಘಟವೇ ವಿಶೇಷಣವಾಗಿದೆ. ನೈಲ್ಯವು ವಿಶೇಷ್ಯವಾಗಿದೆ. ಹೀಗೆ ವಕ್ತೃವಿನ ವಿವಕ್ಷೆಯಂತೆ ವಿಶೇಷ್ಯ, ವಿಶೇಷಣಗಳು ವ್ಯತ್ಯಾಸವಾಗುತ್ತವೆಂಬುದನ್ನು ವಿವಕ್ಷಿಸಿ, ಇಲ್ಲಿ ಆಕ್ಷೇಪಿಸಲಾಗಿದೆ.

ಸಿದ್ಧವಾಗಿದೆಯೆಂದು ಸಾಂಖ್ಯರು ಹೇಳುತ್ತಾರೆ. ಕ್ಷಿತ್ಯಾದಿಕಂ, ಸಕಾರಣಂ, ಕಾರ್ಯತ್ವಾತ್' ಎಂಬ ಅನುಮಾನದಿಂದ ಪ್ರಧಾನವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಹೀಗೆ ಅನುಮಾನದಿಂದ ಸಿದ್ಧವಾದ ಪ್ರಕೃತಿಯನ್ನೂ ಕೂಡ ಕೆಲವು ಕಾಠಕದ ಭಾಗಗಳಲ್ಲಿ 'ಮಹತಃ ಪರಮವ್ಯಕ್ತಮ್' ಇತ್ಯಾದಿಯಾಗಿ ಅವ್ಯಕ್ತಶಬ್ದದಿಂದ ಹೇಳಲಾಗಿದೆ. ಆದ್ದರಿಂದ ಈಕ್ಷತ್ಯಧಿಕರಣದಲ್ಲಿ ಹೇಳಿದಂತೆ ಪ್ರಕೃತಿಯು ಅಶಬ್ದವಾಗಲು ಸಾಧ್ಯವಿಲ್ಲ. ಎಂದರೆ ಶಬ್ದದಿಂದ ಪ್ರತಿಪಾದ್ಯವೇ ಆಗುತ್ತಿರುವಾಗ, ಈಕ್ಷತ್ಯಧಿಕರಣದಲ್ಲಿ ಪ್ರಕೃತಿಯು ಶಬ್ದದಿಂದ ಪ್ರತಿಪಾದ್ಯವೇ ಅಲ್ಲವೆಂಬ ಸಿದ್ಧಾಂತವು ಯುಕ್ತವಾಗುವುದಿಲ್ಲವೆಂದು ಆಶಂಕೆ.

'ಶರೀರರೂಪಕವಿನ್ಯಸ್ತಗೃಹಿತೇಃ' = ಹಿಂದಿನ ವಾಕ್ಯದಲ್ಲಿ 'ಶರೀರಂ ರಥಮೇವ ಚ' ಎಂಬುದಾಗಿ ಶರೀರವನ್ನು ರಥರೂಪಕವೆಂದು ಹೇಳಿದ್ದರಿಂದ, ಅಂತಹ ಶರೀರವನ್ನೇ ಇಲ್ಲಿ ಅವ್ಯಕ್ತಶಬ್ದದಿಂದ ವಿವಕ್ಷಿಸಬೇಕು. 'ದರ್ಶಯತಿ ಚ' = ಶರೀರಾದಿಗಳನ್ನು ರಥರೂಪಕವಾಗಿ 'ಶರೀರಂ ರಥಮೇವಚ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲಾಗಿದೆ. ಇಷ್ಟು ಅದ್ವೈತಿಗಳ ಪ್ರಥಮಸೂತ್ರ ವ್ಯಾಖ್ಯಾನ.

**प्रकाशः – केषाश्चित्तु सांख्यानुमानकल्पितं प्रधानं महतः परमव्यक्तमित्याम्नायत इति चेन्न । पूर्वत्रात्मादिषु रथिरथादिरूपकविन्यस्तेषु रथरूपकविन्यस्तशरीरस्याव्यक्त-शब्देन गृहीतेः । दर्शयति चेममर्थमिन्द्रियादीनां नियमनप्रकारं दर्शयन् यच्छेद्वाङ्मनसी इत्यादिवाक्यशेष इति ।**

ರಾಮಾನುಜರ ಸೂತ್ರಾರ್ಥ ಹೀಗಿದೆ - 'ಆನುಮಾನಿಕಮಪ್ಯಕೇಷಾಮ್' = ಸಾಂಖ್ಯಾನುಮಾನ ಕಲ್ಪಿತವಾದ ಪ್ರಧಾನವು 'ಮಹತಃ ಪರಮವ್ಯಕ್ತಮ್' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯವಾಗಿದೆಯಲ್ಲವೇ? ಇತಿ ಚೇನ್ನ = ಹೀಗೆ ಪ್ರಶ್ನಿಸಬಾರದು. 'ಶರೀರರೂಪಕವಿನ್ಯಸ್ತಗೃಹಿತೇಃ' = ಏಕೆಂದರೆ ಹಿಂದಿನ ವಾಕ್ಯದಲ್ಲಿ ಆತ್ಮ, ಇಂದ್ರಿಯ, ಅರ್ಥ ಇವೆಲ್ಲವೂ ಕೂಡ ರಥ, ಸಾರಥಿ ಇತ್ಯಾದಿಯಾಗಿ ವಿನ್ಯಸ್ತವಾಗಿರುವಾಗ ಅವುಗಳ ಮಧ್ಯದಲ್ಲೇ ರಥರೂಪಕವಾಗಿ ಹೇಳಲ್ಪಟ್ಟಿರುವ ಶರೀರವನ್ನು ಅವ್ಯಕ್ತಶಬ್ದದಿಂದ ತೆಗೆದುಕೊಳ್ಳಬೇಕು. ಏಕೆಂದರೆ 'ದರ್ಶಯತಿ ಚ' ಇಂದ್ರಿಯಾದಿಗಳ ನಿಯಮನ ಪ್ರಕಾರವನ್ನು 'ಯಚ್ಛೇದ್ವಾಙ್ಮನಸೀ' ಇತ್ಯಾದಿಯಾದ ವಾಕ್ಯಶೇಷದಲ್ಲಿ ತೋರಿಸಲಾಗಿದೆ. ಇಷ್ಟು ರಾಮಾನುಜರ ಸೂತ್ರವ್ಯಾಖ್ಯಾನ.

**प्रकाशः –** तत्र दूष्यभागार्थमनूद्य निराह – **पूर्वेति** ।। सुधोक्तमपि दोषमाह – **रूपकविन्यस्तपदस्येति** ।। ''विशेषणं विशेष्येण बहुलम्'' इति सूत्रे विशेषणशब्दस्य प्रथमान्तनिर्दिष्टतया ''प्रथमानिर्दिष्टं समास उपसर्जनम्'' इति सूत्रेणोपसर्जनसंज्ञायां ''उपसर्जनं पूर्वम्'' इत्युपसर्जनस्य पूर्वनिपातविधानादिति भावः ।

ಇವರೀರ್ವರ ಸೂತ್ರವ್ಯಾಖ್ಯಾನದಲ್ಲಿ ಯಾವುದನ್ನು ದೂಷಿಸುತ್ತಾರೋ, ಆ ಸೂತ್ರಭಾಗವನ್ನಷ್ಟೇ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಪೂರ್ವ' ಇತ್ಯಾದಿ ಗ್ರಂಥದಿಂದ. ನ್ಯಾಯಸುಧೆಯಲ್ಲಿ ಹೇಳಿದ

ದೋಷವನ್ನೂ ಕೂಡ 'ರೂಪಕವಿನ್ಯಸ್ತಪದಸ್ಯ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಲ್ಲಿ ವಿಶೇಷಣಶಬ್ದವನ್ನು ಪ್ರಥಮಾಂತವನ್ನಾಗಿ ನಿರ್ದೇಶಿಸಲಾಗಿದೆ. ಆದ್ದರಿಂದ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಎಂಬ ಸೂತ್ರದಿಂದ ಉಪಸರ್ಜನಸಂಜ್ಞೆಯು ಪ್ರಾಪ್ತವಾದರೆ, 'ಉಪಸರ್ಜನಂ ಪೂರ್ವಮ್' ಎಂಬ ಸೂತ್ರದಿಂದ ಉಪಸರ್ಜನಕ್ಕೆ ಪೂರ್ವನಿಪಾತವನ್ನು ವಿಧಿಸಲಾಗಿದೆ. ಹಾಗಾಗಿ ರೂಪಕವಿನ್ಯಸ್ತ ಪದವು ವಿಶೇಷಣವಾದ್ದರಿಂದ ಪೂರ್ವನಿಪಾತವನ್ನು ಹೊಂದಿ, 'ರೂಪಕವಿನ್ಯಸ್ತಶರೀರ' ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಪದಪ್ರಯೋಗವು ಇವರ ಪ್ರಕಾರ ಅಯುಕ್ತವಾಗುತ್ತದೆ.

**प्रकाशः** – नन्वेतदेवाशङ्क्य समाहितं श्रुतप्रकाशे अस्मिन् वाक्ये रूपकविन्यस्तं वस्तु प्राधान्येन विवक्षितम् । विशेषणापेक्षया विशेष्यं प्रधानम् । रूपकविन्यस्तपदं विशेष्यसमर्पकम् । कीदृशं तदित्यपेक्षायां शरीराख्यं रूपकविन्यस्तमिति शरीरशब्देन तद्विशेष्यते । अतो न दोष इति चेन्न । गत्यन्तरे सति क्लेशायोगादिति भावः ।

ಶಂಕೆ - ಶರೀರಪದವು ಅನಂತರ ಬರಬೇಕೆಂದು ಆಕ್ಷೇಪಿಸಿಕೊಂಡು, ಶ್ರುತಪ್ರಕಾಶದಲ್ಲಿ ಸಮಾಧಾನವನ್ನು ಹೀಗೆ ಹೇಳಿದ್ದಾರೆ - 'ರೂಪಕವಿನ್ಯಸ್ತ' ಎಂಬ ವಸ್ತುವೇ ಪ್ರಧಾನವಾಗಿ ವಿವಕ್ಷಿಸಲ್ಪಟ್ಟಿದೆ. ಯಾವುದು ಪ್ರಧಾನವಾಗಿ ವಿವಕ್ಷಿತವಾಗಿರುತ್ತದೋ, ಅದೇ ವಿಶೇಷ್ಯವಾದ್ದರಿಂದ 'ರೂಪಕವಿನ್ಯಸ್ತ' ಎಂಬ ಪದವೇ ವಿಶೇಷ್ಯಸಮರ್ಪಕವಾದ ಪದವಾಗಿದೆ. ರೂಪಕವೆಂದು ವಿನ್ಯಸ್ತವಾದದ್ದು ಯಾವುದು? ಎಂಬ ಪ್ರಶ್ನೆಯು ಪ್ರಾಪ್ತವಾದರೆ, 'ಶರೀರ' ಎಂಬ ಶಬ್ದದಿಂದ ಆಕಾಂಕ್ಷೆಪೂರಣೆ ಮಾಡಲಾಗಿದೆ. ಆದ್ದರಿಂದ ಶರೀರವೆಂಬುದೇ ವಿಶೇಷಣ, 'ರೂಪಕವಿನ್ಯಸ್ತ' ಎಂಬುದೇ ವಿಶೇಷ್ಯವಾಗಿದೆ. ಹೀಗಿರುವಾಗ 'ರೂಪಕವಿನ್ಯಸ್ತ' ಎಂಬ ಪದವು ಮೊದಲು ಬರಬೇಕೆಂಬ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ.[೧]

ಸಮಾಧಾನ - ಇದು ಸರಿಯಲ್ಲ. ಒಂದು ವೇಳೆ ಬೇರೆ ಗತಿಯಿಲ್ಲದಿದ್ದಾಗ ಹೀಗೆ ಕಷ್ಟದಿಂದ ವ್ಯಾಖ್ಯಾನಿಸಬಹುದಿತ್ತು. ಆದರೆ ನಾವು ಹೇಳಿದಂತೆ ವ್ಯಾಖ್ಯಾನ ಮಾಡಲು ಬರುವಾಗ ಅಸ್ವರಸವಾದ ನಿಮ್ಮ ವ್ಯಾಖ್ಯಾನವು ಗ್ರಾಹ್ಯವಲ್ಲ.

(೧) ವಾಕ್ಯಪ್ರಯೋಗದಲ್ಲಿ ವಿಶೇಷ್ಯ ಹಾಗೂ ವಿಶೇಷಣಗಳು ವಕ್ತೃವಿನ ವಿವಕ್ಷಾಧೀನವಾಗಿರುತ್ತವೆ. 'ನೀಲಂ ಘಟಂ ಆನಯ' ಎಂದು ಹೇಳಿದಾಗ ಘಟವು ವಿಶೇಷ್ಯವಾಗಿ ನೈಲ್ಯವು ವಿಶೇಷಣವಾಗಿ ವಿವಕ್ಷಿತವಾಗಿರುತ್ತದೆ. ಒಂದು ವೇಳೆ 'ನೀಲಮಾನಯ' ಎಂದಷ್ಟೇ ವಕ್ತೃವು ಹೇಳಿದಾಗ ನೀಲವೇ ವಿಶೇಷ್ಯವಾಗುತ್ತದೆ. ಅಂತಹ ನೀಲಪದಾರ್ಥವು ಯಾವುದು ? ಎಂದು ಪ್ರಶ್ನಿಸಿದಾಗ, ಘಟವೇ ನೀಲಪದಾರ್ಥವೆಂದು ವಕ್ತೃ ಹೇಳುತ್ತಾನೆ. ಆವಾಗ 'ಘಟಂ ನೀಲಂ ಆನಯ' ಎಂದಾಗುತ್ತದೆ. ಇಲ್ಲಿ ಘಟವೇ ವಿಶೇಷಣವಾಗಿದೆ. ನೈಲ್ಯವು ವಿಶೇಷ್ಯವಾಗಿದೆ. ಹೀಗೆ ವಕ್ತೃವಿನ ವಿವಕ್ಷೆಯಂತೆ ವಿಶೇಷ್ಯ, ವಿಶೇಷಣಗಳು ವ್ಯತ್ಯಾಸವಾಗುತ್ತವೆಂಬುದನ್ನು ವಿವಕ್ಷಿಸಿ, ಇಲ್ಲಿ ಆಕ್ಷೇಪಿಸಲಾಗಿದೆ.

ಸಿದ್ಧವಾಗಿದೆಯೆಂದು ಸಾಂಖ್ಯರು ಹೇಳುತ್ತಾರೆ. ಕ್ಷಿತ್ಯಾದಿಕಂ, ಸಕಾರಣಂ, ಕಾರ್ಯತ್ವಾತ್' ಎಂಬ ಅನುಮಾನದಿಂದ ಪ್ರಧಾನವು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಹೀಗೆ ಅನುಮಾನದಿಂದ ಸಿದ್ಧವಾದ ಪ್ರಕೃತಿಯನ್ನೂ ಕೂಡ ಕೆಲವು ಕಾಠಕದ ಭಾಗಗಳಲ್ಲಿ 'ಮಹತಃ ಪರಮವ್ಯಕ್ತಮ್' ಇತ್ಯಾದಿಯಾಗಿ ಅವ್ಯಕ್ತಶಬ್ದದಿಂದ ಹೇಳಲಾಗಿದೆ. ಆದ್ದರಿಂದ ಈಕ್ಷತ್ಯಧಿಕರಣದಲ್ಲಿ ಹೇಳಿದಂತೆ ಪ್ರಕೃತಿಯು ಅಶಬ್ದವಾಗಲು ಸಾಧ್ಯವಿಲ್ಲ. ಎಂದರೆ ಶಬ್ದದಿಂದ ಪ್ರತಿಪಾದ್ಯವೇ ಆಗುತ್ತಿರುವಾಗ, ಈಕ್ಷತ್ಯಧಿಕರಣದಲ್ಲಿ ಪ್ರಕೃತಿಯು ಶಬ್ದದಿಂದ ಪ್ರತಿಪಾದ್ಯವೇ ಅಲ್ಲವೆಂಬ ಸಿದ್ಧಾಂತವು ಯುಕ್ತವಾಗುವುದಿಲ್ಲವೆಂದು ಆಶಂಕೆ.

'ಶರೀರರೂಪಕವಿನ್ಯಸ್ತಗೃಹೀತೇಃ' = ಹಿಂದಿನ ವಾಕ್ಯದಲ್ಲಿ 'ಶರೀರಂ ರಥಮೇವ ಚ' ಎಂಬುದಾಗಿ ಶರೀರವನ್ನು ರಥರೂಪಕವೆಂದು ಹೇಳಿದ್ದರಿಂದ, ಅಂತಹ ಶರೀರವನ್ನೇ ಇಲ್ಲಿ ಅವ್ಯಕ್ತಶಬ್ದದಿಂದ ವಿವಕ್ಷಿಸಬೇಕು. 'ದರ್ಶಯತಿ ಚ' = ಶರೀರಾದಿಗಳನ್ನು ರಥರೂಪಕವಾಗಿ 'ಶರೀರಂ ರಥಮೇವಚ' ಎಂಬ ಹಿಂದಿನ ವಾಕ್ಯದಲ್ಲಿ ಹೇಳಲಾಗಿದೆ. ಇಷ್ಟು ಅದ್ವೈತಿಗಳ ಪ್ರಥಮಸೂತ್ರ ವ್ಯಾಖ್ಯಾನ.

**प्रकाशः – केषाञ्चित्तु सांख्यानुमानकल्पितं प्रधानं महतः परमव्यक्तमित्याम्नायत इति चेन्न । पूर्वत्रात्मादिषु रथिरथादिरूपकविन्यस्तेषु रथरूपकविन्यस्तशरीरस्याव्यक्त-शब्देन गृहीतेः । दर्शयति चेममर्थमिन्द्रियादीनां नियमनप्रकारं दर्शयन् यच्छेद्वाङ्मनसी इत्यादिवाक्यशेष इति ।**

ರಾಮಾನುಜರ ಸೂತ್ರಾರ್ಥ ಹೀಗಿದೆ - 'ಆನುಮಾನಿಕಮಪ್ಯೇಕೇಷಾಮ್' = ಸಾಂಖ್ಯಾನುಮಾನ ಕಲ್ಪಿತವಾದ ಪ್ರಧಾನವು 'ಮಹತಃ ಪರಮವ್ಯಕ್ತಮ್' ಇತ್ಯಾದಿ ಶ್ರುತಿಯಿಂದ ಪ್ರತಿಪಾದ್ಯವಾಗಿದೆಯಲ್ಲವೇ? ಇತಿ ಚೇನ್ನ = ಹೀಗೆ ಪ್ರಶ್ನಿಸಬಾರದು. 'ಶರೀರರೂಪಕವಿನ್ಯಸ್ತಗೃಹೀತೇಃ' = ಏಕೆಂದರೆ ಹಿಂದಿನ ವಾಕ್ಯದಲ್ಲಿ ಆತ್ಮ, ಇಂದ್ರಿಯ, ಅರ್ಥ ಇವೆಲ್ಲವೂ ಕೂಡ ರಥ, ಸಾರಥಿ ಇತ್ಯಾದಿಯಾಗಿ ವಿನ್ಯಸ್ತವಾಗಿರುವಾಗ ಅವುಗಳ ಮಧ್ಯದಲ್ಲೇ ರಥರೂಪಕವಾಗಿ ಹೇಳಲ್ಪಟ್ಟಿರುವ ಶರೀರವನ್ನು ಅವ್ಯಕ್ತಶಬ್ದದಿಂದ ತೆಗೆದುಕೊಳ್ಳಬೇಕು. ಏಕೆಂದರೆ 'ದರ್ಶಯತಿ ಚ' ಇಂದ್ರಿಯಾದಿಗಳ ನಿಯಮನ ಪ್ರಕಾರವನ್ನು 'ಯಚ್ಛೇದ್ವಾಙ್ಮನಸೀ' ಇತ್ಯಾದಿಯಾದ ವಾಕ್ಯಶೇಷದಲ್ಲಿ ತೋರಿಸಲಾಗಿದೆ. ಇಷ್ಟು ರಾಮಾನುಜರ ಸೂತ್ರವ್ಯಾಖ್ಯಾನ.

**प्रकाशः – तत्र दूष्यभागार्थमनूद्य निराह – पूर्वेति ।। सुधोक्तमपि दोषमाह – रूपकविन्यस्तपदस्येति ।।** ''विशेषणं विशेष्येण बहुलम्'' इति सूत्रे विशेषणशब्दस्य प्रथमान्तनिर्दिष्टतया ''प्रथमानिर्दिष्टं समास उपसर्जनम्'' इति सूत्रेणोपसर्जनसंज्ञायां ''उपसर्जनं पूर्वम्'' इत्युपसर्जनस्य पूर्वनिपातविधानादिति भावः ।

ಇವರೀರ್ವರ ಸೂತ್ರವ್ಯಾಖ್ಯಾನದಲ್ಲಿ ಯಾವುದನ್ನು ದೂಷಿಸುತ್ತಾರೋ, ಆ ಸೂತ್ರಭಾಗವನ್ನಷ್ಟೇ ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಪೂರ್ವ' ಇತ್ಯಾದಿ ಗ್ರಂಥದಿಂದ. ನ್ಯಾಯಸುಧೆಯಲ್ಲಿ ಹೇಳಿದ

ದೋಷವನ್ನೂ ಕೂಡ 'ರೂಪಕವಿನ್ಯಸ್ತಪದಸ್ಯ' ಎಂಬ ವಾಕ್ಯದಿಂದ ಹೇಳಿದ್ದಾರೆ. 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಎಂಬ ಸೂತ್ರದಲ್ಲಿ ವಿಶೇಷಣಶಬ್ದವನ್ನು ಪ್ರಥಮಾಂತವನ್ನಾಗಿ ನಿರ್ದೇಶಿಸಲಾಗಿದೆ. ಆದ್ದರಿಂದ 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಎಂಬ ಸೂತ್ರದಿಂದ ಉಪಸರ್ಜನಸಂಜ್ಞೆಯು ಪ್ರಾಪ್ತವಾದರೆ, 'ಉಪಸರ್ಜನಂ ಪೂರ್ವಮ್' ಎಂಬ ಸೂತ್ರದಿಂದ ಉಪಸರ್ಜನಕ್ಕೆ ಪೂರ್ವನಿಪಾತವನ್ನು ವಿಧಿಸಲಾಗಿದೆ. ಹಾಗಾಗಿ ರೂಪಕವಿನ್ಯಸ್ತ ಪದವು ವಿಶೇಷಣವಾದ್ದರಿಂದ ಪೂರ್ವನಿಪಾತವನ್ನು ಹೊಂದಿ, 'ರೂಪಕವಿನ್ಯಸ್ತಶರೀರ' ಎಂದೇ ಹೇಳಬೇಕಾಗುತ್ತದೆ. ಆದ್ದರಿಂದ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಪದಪ್ರಯೋಗವು ಇವರ ಪ್ರಕಾರ ಅಯುಕ್ತವಾಗುತ್ತದೆ.

**प्रकाशः** – नन्वेतदेवाशङ्क्य समाहितं श्रुतप्रकाशे अस्मिन् वाक्ये रूपकविन्यस्तं वस्तु प्राधान्येन विवक्षितम् । विशेषणापेक्षया विशेष्यं प्रधानम् । रूपकविन्यस्तपदं विशेष्यसमर्पकम् । कीदृशं तदित्यपेक्षायां शरीराख्यं रूपकविन्यस्तमिति शरीरशब्देन तद्विशेष्यते । अतो न दोष इति चेन्न । गत्यन्तरे सति क्लेशायोगादिति भावः ।

ಶಂಕೆ - ಶರೀರಪದವು ಅನಂತರ ಬರಬೇಕೆಂದು ಆಕ್ಷೇಪಿಸಿಕೊಂಡು, ಶ್ರುತಪ್ರಕಾಶದಲ್ಲಿ ಸಮಾಧಾನವನ್ನು ಹೀಗೆ ಹೇಳಿದ್ದಾರೆ - 'ರೂಪಕವಿನ್ಯಸ್ತ' ಎಂಬ ವಸ್ತುವೇ ಪ್ರಧಾನವಾಗಿ ವಿವಕ್ಷಿಸಲ್ಪಟ್ಟಿದೆ. ಯಾವುದು ಪ್ರಧಾನವಾಗಿ ವಿವಕ್ಷಿತವಾಗಿರುತ್ತದೋ, ಅದೇ ವಿಶೇಷ್ಯವಾದ್ದರಿಂದ 'ರೂಪಕವಿನ್ಯಸ್ತ' ಎಂಬ ಪದವೇ ವಿಶೇಷ್ಯಸಮರ್ಪಕವಾದ ಪದವಾಗಿದೆ. ರೂಪಕವೆಂದು ವಿನ್ಯಸ್ತವಾದದ್ದು ಯಾವುದು? ಎಂಬ ಪ್ರಶ್ನೆಯು ಪ್ರಾಪ್ತವಾದರೆ, 'ಶರೀರ' ಎಂಬ ಶಬ್ದದಿಂದ ಆಕಾಂಕ್ಷೆಪೂರಣೆ ಮಾಡಲಾಗಿದೆ. ಆದ್ದರಿಂದ ಶರೀರವೆಂಬುದೇ ವಿಶೇಷಣ, 'ರೂಪಕವಿನ್ಯಸ್ತ' ಎಂಬುದೇ ವಿಶೇಷ್ಯವಾಗಿದೆ. ಹೀಗಿರುವಾಗ 'ರೂಪಕವಿನ್ಯಸ್ತ' ಎಂಬ ಪದವು ಮೊದಲು ಬರಬೇಕೆಂಬ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ.[೧]

ಸಮಾಧಾನ - ಇದು ಸರಿಯಲ್ಲ. ಒಂದು ವೇಳೆ ಬೇರೆ ಗತಿಯಿಲ್ಲದಿದ್ದಾಗ ಹೀಗೆ ಕಷ್ಟದಿಂದ ವ್ಯಾಖ್ಯಾನಿಸಬಹುದಿತ್ತು. ಆದರೆ ನಾವು ಹೇಳಿದಂತೆ ವ್ಯಾಖ್ಯಾನ ಮಾಡಲು ಬರುವಾಗ ಅಸ್ವರಸವಾದ ನಿಮ್ಮ ವ್ಯಾಖ್ಯಾನವು ಗ್ರಾಹ್ಯವಲ್ಲ.

(೧) ವಾಕ್ಯಪ್ರಯೋಗದಲ್ಲಿ ವಿಶೇಷ್ಯ ಹಾಗೂ ವಿಶೇಷಣಗಳು ವಕ್ತೃವಿನ ವಿವಕ್ಷಾಧೀನವಾಗಿರುತ್ತವೆ. 'ನೀಲಂ ಘಟಂ ಆನಯ' ಎಂದು ಹೇಳಿದಾಗ ಘಟವು ವಿಶೇಷ್ಯವಾಗಿ ನೈಲ್ಯವು ವಿಶೇಷಣವಾಗಿ ವಿವಕ್ಷಿತವಾಗಿರುತ್ತದೆ. ಒಂದು ವೇಳೆ 'ನೀಲಮಾನಯ' ಎಂದಷ್ಟೇ ವಕ್ತೃವು ಹೇಳಿದಾಗ ನೀಲವೇ ವಿಶೇಷ್ಯವಾಗುತ್ತದೆ. ಅಂತಹ ನೀಲಪದಾರ್ಥವು ಯಾವುದು ? ಎಂದು ಪ್ರಶ್ನಿಸಿದಾಗ, ಘಟವೇ ನೀಲಪದಾರ್ಥವೆಂದು ವಕ್ತೃ ಹೇಳುತ್ತಾನೆ. ಆವಾಗ 'ಘಟಂ ನೀಲಂ ಆನಯ' ಎಂದಾಗುತ್ತದೆ. ಇಲ್ಲಿ ಘಟವೇ ವಿಶೇಷಣವಾಗಿದೆ. ನೈಲ್ಯವು ವಿಶೇಷ್ಯವಾಗಿದೆ. ಹೀಗೆ ವಕ್ತೃವಿನ ವಿವಕ್ಷೆಯಂತೆ ವಿಶೇಷ್ಯ, ವಿಶೇಷಣಗಳು ವ್ಯತ್ಯಾಸವಾಗುತ್ತವೆಂಬುದನ್ನು ವಿವಕ್ಷಿಸಿ, ಇಲ್ಲಿ ಆಕ್ಷೇಪಿಸಲಾಗಿದೆ.



'ಆನುಮಾನಿಕಮಪ್ಯೇಕೇಷಾಮ್ ಇತಿ ಚೇನ್ನ ಶರೀರರೂಪಕವಿನ್ಯಸ್ತಗೃಹಿತೇರ್ದರ್ಶಯತಿ ಚ' ಎಂಬ ಪ್ರಥಮಸೂತ್ರಕ್ಕೆ ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಒಂದೇ ಪ್ರಕಾರದಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ. 'ಆನುಮಾನಿಕಮಪ್ಯಕೇಷಾಮ್ ಇತಿ ಚೇನ್ನ' ಎಂಬ ಸೂತ್ರದ ಪೂರ್ವಾರ್ಧಕ್ಕೆ ನಮ್ಮಂತೆ ವ್ಯಾಖ್ಯಾನ ಮಾಡುತ್ತಾರಾದ್ದರಿಂದ ವಿವಾದವಿರುವುದಿಲ್ಲ. ಆದರೆ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಪದಕ್ಕೆ ನಾವು ಪರಮಾತ್ಮನ ಶರೀರದಂತಿರುವ (ಕುತ್ಸಿತಾರ್ಥದಲ್ಲಿ 'ಕ' ಪ್ರತ್ಯಯ) ಪ್ರಕೃತಿಯಲ್ಲಿ ಪರಮಾತ್ಮನ ರೂಪವಿಶೇಷವು ಇರುವುದರಿಂದ ಪರಮಾತ್ಮನು ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ವ್ಯಾಖ್ಯಾನಿಸಿ 'ದರ್ಶಯತಿ ಚ' ಎಂಬ ಪದಕ್ಕೆ ಈ ವಿಷಯದಲ್ಲಿ ಶ್ರುತಿ-ಸ್ಮೃತಿಗಳು ಆಧಾರವಾಗಿವೆಯೆಂದು ವ್ಯಾಖ್ಯಾನ ಮಾಡುತ್ತೇವೆ. ಆದರೆ ಅವರು ಮಾತ್ರ ಬಹಳ ಕಷ್ಟಪಟ್ಟು ವ್ಯಾಖ್ಯಾನ ಮಾಡುತ್ತಿದ್ದಾರೆ. 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬಲ್ಲಿ 'ರೂಪಕವಿನ್ಯಸ್ತ' ಎಂಬುದನ್ನು ವಿಶೇಷಣವೆಂದು, ಶರೀರವನ್ನು ವಿಶೇಷ್ಯವೆಂದು ಪರಿಗಣಿಸುತ್ತಾರೆ. 'ರೂಪಕವಿನ್ಯಸ್ತಂ ಚ ತತ್ ಶರೀರಂಚ ಶರೀರರೂಪಕವಿನ್ಯಸ್ತಂ' ಎಂಬುದಾಗಿ ಶರೀರಶಬ್ದಕ್ಕೆ ಪೂರ್ವನಿಪಾತ ಮಾಡಬೇಕು. ಯಾವರೀತಿಯಾಗಿ 'ವ್ಯಂಸಕಾಶ್ಚತೇ ಮಯೂರಾಶ್ಚ ಮಯೂರವ್ಯಂಸಕಾಃ' ಎಂಬುದಾಗಿ ವಿಶೇಷ್ಯವಾಚಕಶಬ್ದಕ್ಕೆ ಪೂರ್ವನಿಪಾತ ಮಾಡಲಾಗುತ್ತದೋ, ಅದರಂತೆ ಇಲ್ಲಿಯೂ ತಿಳಿಯಬೇಕು. ಶರೀರವನ್ನೇ ರಥವನ್ನಾಗಿ ತಿಳಿ ಎಂಬುದಾಗಿ ರೂಪಕಾಲಂಕಾರವನ್ನು ಹೇಳಲಾಗಿದೆ. ಆದ್ದರಿಂದ ರಥರೂಪದಿಂದ ಹೇಳಲ್ಪಟ್ಟ ಶರೀರವನ್ನೇ ಅವ್ಯಕ್ತಶಬ್ದದಿಂದ ನಾವು ಸ್ವೀಕರಿಸುತ್ತಿದ್ದೇವೆ.

ಇವರ ಈ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ಅವ್ಯಕ್ತಪದದಿಂದ ಪ್ರಕೃತಿಯನ್ನು ಸ್ವೀಕರಿಸುವುದಿಲ್ಲ. , ಶರೀರವನ್ನೇ ಸ್ವೀಕರಿಸುತ್ತೇವೆ ಎಂದು ಹೇಳಬೇಕಾದರೆ ಸೂತ್ರದಲ್ಲಿ 'ಶರೀರಗೃಹಿತೇಃ' ಎಂದಷ್ಟೇ ಹೇಳಿದರೆ ಸಾಕು. ರೂಪಕವಿನ್ಯಸ್ತತ್ವಕ್ಕೆ ಕೃತ್ಯವಿರುವುದಿಲ್ಲ. ಮತ್ತು 'ವಿಶೇಷಣಂ ವಿಶೇಷ್ಯೇಣ ಬಹುಲಂ' ಎಂಬ ಸೂತ್ರದಂತೆ 'ವಿಶೇಷಣಂ' ಎಂಬುದಾಗಿ ಪ್ರಥಮಾಂತವಾಗಿ ನಿರ್ದೇಶಿಸಲ್ಪಟ್ಟಿದೆ. ಯಾವುದು ಪ್ರಥಮಾನಿರ್ದಿಷ್ಟವಾಗಿರುತ್ತದೋ, ಅದು ಸಮಾಸದಲ್ಲಿ ಉಪಸರ್ಜನವಾಗಿರುತ್ತದೆಂದು ನಿಯಮ. ಆವಾಗ 'ಉಪಸರ್ಜನಂ ಪೂರ್ವಂ' ಎಂಬ ಸೂತ್ರದಂತೆ ವಿಶೇಷಣ ವಾಚಕವಾದ ರೂಪಕವಿನ್ಯಸ್ತ ಪದವು ಮೊದಲು ಬರಬೇಕು. ವಿಶೇಷ್ಯವಾಚಕವಾದ ಪದವು ಅನಂತರ ಬರಬೇಕು. ಮತ್ತು 'ತಥಾಹಿ ದರ್ಶಯತಿ' ಎಂಬುದೂ ಕೂಡ ವ್ಯರ್ಥವಾಗುತ್ತದೆ. ಏಕೆಂದರೆ 'ರೂಪಕವಿನ್ಯಸ್ತಗೃಹಿತೇಃ' ಎಂಬುದಕ್ಕೆ ರಥವೆಂದು ಹೇಳಲ್ಪಟ್ಟ ಶರೀರವನ್ನು ಇಲ್ಲಿ ತೆಗೆದುಕೊಳ್ಳುತ್ತೇವೆ ಎಂದು ನೀವು ವ್ಯಾಖ್ಯಾನ ಮಾಡಿದ್ದೀರಿ. ಆದ್ದರಿಂದ ಪೂರ್ವವಾಕ್ಯದಲ್ಲಿ ಹೇಳಲ್ಪಟ್ಟಿದೆ ಎಂಬ ವಿಚಾರವು ಇದರಿಂದಲೇ ತಿಳಿಯುವಾಗ ಪುನಃ 'ತಥಾಹಿ ದರ್ಶಯತಿ' ಎಂಬ ಪದಕ್ಕೆ ಕೃತ್ಯವಿರುವುದಿಲ್ಲ. ಆದ್ದರಿಂದ 'ರೂಪಕವಿನ್ಯಸ್ತ' ಎಂಬುದನ್ನು ಹೇಳಿದರೆ 'ದರ್ಶಯತಿ' ಎಂಬ ಪದವು ಬೇಕಾಗುವುದಿಲ್ಲ. 'ದರ್ಶಯತಿ' ಎಂಬ ಪದವನ್ನು ಹೇಳಿದರೆ 'ರೂಪಕವಿನ್ಯಸ್ತ' ಎಂಬ ಪದವು ಬೇಕಾಗುವುದಿಲ್ಲ.



## ದ್ವಿತೀಯ ಸೂತ್ರಾರ್ಥವಿಮರ್ಶೆ

### तात्पर्यचन्द्रिका

**यच्चोक्तं शरीरस्य स्थूलत्वादव्यक्तशब्दार्थत्वं न युक्तमिति न शङ्क्यम् ।**

ಅನುವಾದ - 'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಎರಡನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡಿದ್ದಾರೆ - ಶರೀರವು ಸ್ಥೂಲವಾಗಿರುವ ಕಾರಣ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗಿರುವುದಿಲ್ಲವೆಂದು ಆಶಂಕಿಸಬಾರದು.

**शरीरकारणस्यानभिव्यक्तनामरूपस्य प्रागवस्थारूपस्य बीजस्य सूक्ष्मत्वेनाव्यक्तशब्दार्हतया शरीरस्याप्यमुख्यवृत्त्याऽव्यक्तशब्दार्थत्वादिति द्वितीयार्थ इति**

ಏಕೆಂದರೆ ಶರೀರಕ್ಕೆ ಭೂತಸೂಕ್ಷ್ಮವು ಕಾರಣವಾಗಿದೆ. ಶರೀರವು ನಾಮ ಹಾಗೂ ರೂಪಗಳಿಂದ ಅಭಿವ್ಯಕ್ತವಾಗಿದ್ದರೂ ಕೂಡ ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವು ನಾಮದಿಂದಾಗಲೀ, ರೂಪದಿಂದಾಗಲೀ ಅಭಿವ್ಯಕ್ತವಾಗಿಲ್ಲ. ಹೀಗೆ ಅನಭಿವ್ಯಕ್ತಸ್ವರೂಪದಲ್ಲಿ ಶರೀರವು ಮೊದಲು ಇರುತ್ತದೆ. ಹೀಗೆ ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವು ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗಲು ಅರ್ಹವಾಗಿದೆ, ಆದ್ದರಿಂದ ತತ್ಕಾರ್ಯವಾದ ಶರೀರವೂ ಕೂಡ ಅಮುಖ್ಯವೃತ್ತಿಯಿಂದ ಅವ್ಯಕ್ತಶಬ್ದಪ್ರತಿಪಾದ್ಯವಾಗುತ್ತದೆಂದು ಎರಡನೆಯ ಸೂತ್ರಾರ್ಥ.

**तन्न । यस्य कारणस्य सूक्ष्मत्वं तस्यैव मुख्याव्यक्तस्य महतः परमित्यत्र ग्रहणे सम्भवति ''शरीरं रथमेव च'' इति पूर्वत्र प्रकृतत्वेऽपि महत्परत्वरहितस्यामुख्याव्यक्तस्य शरीरस्य ग्रहणायोगात् ।**

ಇದೂ ಕೂಡ ಸರಿಯಲ್ಲ. ಶರೀರಕ್ಕೆ ಕಾರಣವಾಗಿರುವ ಭೂತಸೂಕ್ಷ್ಮವನ್ನೇ 'ಮಹತಃ ಪರಮವ್ಯಕ್ತಂ' ಎಂಬಲ್ಲಿರುವ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವೆಂದು ಹೇಳಲು ಬರುತ್ತದೆ. ಹೀಗಿರುವಾಗ ಶರೀರವನ್ನು ಅವ್ಯಕ್ತಶಬ್ದದಿಂದ ಸ್ವೀಕರಿಸಿ ಗೌಣಾರ್ಥ ಮಾಡುವುದು ಯುಕ್ತವಾಗುವುದಿಲ್ಲ. ವಾಸ್ತವಿಕವಾಗಿ 'ಶರೀರಂ ರಥಮೇವ ಚ' ಎಂಬುದಾಗಿ ಹಿಂದೆ ಶರೀರವು ಪ್ರಕೃತವಾಗಿದ್ದರೂ ಮಹತ್ ಪರತ್ವವನ್ನು ಅಂತಹ ಶರೀರದಲ್ಲಿ ಹೇಳಲು ಸಾಧ್ಯವಿಲ್ಲ. ಮತ್ತು ಅವ್ಯಕ್ತತ್ವವನ್ನೂ ಕೂಡ ಶರೀರದಲ್ಲಿ ಹೇಳಲು ಸಾಧ್ಯವಿಲ್ಲ. ಆದರೆ ಭೂತಸೂಕ್ಷ್ಮದಲ್ಲಿ ಮಹತ್‌ಪರತ್ವವಾಗಲೀ, ಅವ್ಯಕ್ತತ್ವವಾಗಲೀ ಇರುವ

ಕಾರಣ, ಇದನ್ನೇ ಅವ್ಯಕ್ತಶಬ್ದಪ್ರತಿಪಾದ್ಯವೆಂದು ಹೇಳಬಹುದಿತ್ತು.

**ननु तर्हि भाष्यानुरोधादविद्यैवाव्यक्तशब्दस्यार्थ इति चेन्न । सौत्रशरीरशब्दविरोधात् ।**

ಹಾಗಾದರೆ ಶರೀರವನ್ನಾಗಲೀ, ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವನ್ನಾಗಲೀ, ಅವ್ಯಕ್ತಶಬ್ದದಿಂದ ಪ್ರತಿಪಾದ್ಯವೆಂದು ಹೇಳುವುದಿಲ್ಲ. ಶಾಂಕರಭಾಷ್ಯಕ್ಕೆ ಅನುಸಾರಿಯಾಗಿ ಅವಿದ್ಯೆಯನ್ನೇ ಅವ್ಯಕ್ತ-ಶಬ್ದಾರ್ಥವೆಂದು ಹೇಳಬಹುದಲ್ಲವೇ ? ಎಂದೂ ಕೂಡ ಶಂಕಿಸಬಾರದು. ಅವಿದ್ಯೆಯನ್ನು ಅವ್ಯಕ್ತಶಬ್ದದಿಂದ ಸ್ವೀಕರಿಸಿದಲ್ಲಿ ಸೂತ್ರದಲ್ಲಿರುವ ಶರೀರಶಬ್ದದ ವಿರೋಧ ಬರುತ್ತದೆ. ಶರೀರಶಬ್ದಕ್ಕೆ ಅವಿದ್ಯೆಯೆಂಬರ್ಥವನ್ನಂತೂ ಮಾಡಲು ಸುತರಾಂ ಸಾಧ್ಯವಿಲ್ಲ.

**प्रकृतशरीरत्यागेनाप्रकृताविद्यापरत्वे सांख्याभिमतप्रधानपरत्वानिवारणाच्च ।**

ಮತ್ತು ನೀವೇ ಹೇಳಿದಂತೆ ಹಿಂದಿನ ಪ್ರಕರಣದಲ್ಲಿ ಶರೀರವೇ ಪ್ರಕೃತವಾಗಿದೆ. ಮತ್ತು ಪರಿಶೇಷಪ್ರಮಾಣದಿಂದ ಶರೀರವೇ ವಿವಕ್ಷಿತವಾಗಿದೆ. ಇಂತಹ ಶರೀರವನ್ನು ಬಿಟ್ಟು, ಅವಿದ್ಯಾಪರತ್ವವನ್ನು ಹೇಳುವುದಾದರೆ, ಸಾಂಖ್ಯರಿಗೆ ಅಭಿಮತವಾದ ಪ್ರಧಾನಪರತ್ವವನ್ನೇ ಹೇಳಬಹುದಲ್ಲವೇ? ಅಂತಹ ಪ್ರಧಾನವನ್ನು ಬಿಟ್ಟು ಅವಿದ್ಯಾಪರತ್ವವನ್ನು ಹೇಳುವುದರಲ್ಲಿ ಏನು ಅರ್ಥವಿದೆ?

**किं चाविद्यायाः सदा साक्षिसिद्धत्वेन व्यक्तत्वान्नाव्यक्तत्वम् । न वा तत्प्रयोजकं सूक्ष्मत्वम् ।**

ಮತ್ತು ಅವಿದ್ಯೆಯು ಸಾಕ್ಷಿಸಿದ್ಧವಾಗಿ ಯಾವಾಗಲೂ ವ್ಯಕ್ತವೇ ಆಗಿರುತ್ತದೆ. ಹೀಗಿರುವಾಗ ಅವ್ಯಕ್ತತ್ವ ಎಂಬ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವು ಅವಿದ್ಯೆಯಲ್ಲಿ ಸರ್ವಥಾ ಬರುವುದಿಲ್ಲ. ಅವ್ಯಕ್ತತ್ವಕ್ಕೆ ಪ್ರಯೋಜಕವಾದ ಸೂಕ್ಷ್ಮತ್ವವೂ ಕೂಡ ಅವಿದ್ಯೆಯಲ್ಲಿರುವುದಿಲ್ಲ.

**प्रकाशः –**

‘‘सूक्ष्मं तु तदर्हत्वात्’’ इति सूत्रार्थं निराह – **यच्चेति** ।।

ವಿವರಣೆ - ಇಲ್ಲಿಯ ತನಕ ‘ಆನುಮಾನಿಕಮಪ್ಯೇಕೇಷಾಂ’ ಇತ್ಯಾದಿಯಾದ ಪ್ರಥಮಸೂತ್ರವ್ಯಾಖ್ಯಾನವನ್ನು ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಶಾಂಕರಭಾಷ್ಯದಲ್ಲಿ ಹಾಗೂ ರಾಮಾನುಜಭಾಷ್ಯದಲ್ಲಿ ‘ಸೂಕ್ಷ್ಮಂ ತು ತದರ್ಹತ್ವಾತ್’ ಎಂಬ ಎರಡನೆಯ ಸೂತ್ರದ ವ್ಯಾಖ್ಯಾನವನ್ನೇನು ಮಾಡಿದ್ದಾರೋ, ಅದನ್ನು ‘ಯಚ್ಚ’ ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – यद्यपीदं शरीरं स्थूलत्वात् व्यक्तम् । तथाप्यस्य यन्मूलमुपादानकारणं तेजोबन्नलक्षणं भूतसूक्ष्मं तत् तावदव्यक्तम् । अनादेस्तस्य सूक्ष्मस्याव्यक्तताऽर्हत्वात्।

ವಾಸ್ತವಿಕವಾಗಿ ಈ ಶರೀರವು ಸ್ಥೂಲವಾದ್ದರಿಂದ ವ್ಯಕ್ತವೇ ಆಗಿದೆ. ಆದರೂ ಸಹ ಈ ಶರೀರಕ್ಕೆ ಮೂಲಭೂತವಾದ ಯಾವ ಉಪಾದಾನಕಾರಣವಿದೆಯೋ, ಅದು ತೇಜೋಬನ್ನಲಕ್ಷಣವಾದ ಭೂತಸೂಕ್ಷ್ಮವಾಗಿದೆ. ಭೂತಸೂಕ್ಷ್ಮವಾದರೂ ಸಹ ಅವ್ಯಕ್ತರೂಪದಲ್ಲಿದೆ. ಅನಾದಿಯಾದ ಇಂತಹ ಸೂಕ್ಷ್ಮವಾದ ಭೂತಪದಾರ್ಥದಲ್ಲಿ ಅವ್ಯಕ್ತಶಬ್ದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಇರಬಹುದು.

**प्रकाशः** – कार्यकारणशब्दानां च "गोभिः श्रिणीत मत्सरम्" इत्यादौ साङ्कर्यदर्शनात् । कारणस्याव्यक्तशब्दार्थतया कार्यं शरीरमप्यमुख्यवृत्त्याऽव्यक्तमुच्यत इत्यर्थः ।

ಕಾರ್ಯದಲ್ಲಿ ಕಾರಣವಾಚಕ ಪದವನ್ನು ಪ್ರಯೋಗಿಸುವುದು ತಪ್ಪಲ್ಲ. 'ಗೋಭಿಃ ಶ್ರೀಣೀತ ಮತ್ಸರಮ್' ಎಂಬ ಶ್ರುತಿಯಲ್ಲಿ ಹಸುವಿನ ಕಾರ್ಯವೆನಿಸಿದ ಹಾಲಿನಿಂದ ಎಂಬರ್ಥವನ್ನು ಹೇಳುವುದಕ್ಕಾಗಿ, ಹಾಲಿಗೆ ಕಾರಣವಾದ 'ಗೋಭಿಃ' 'ಹಸುಗಳಿಂದ' ಎಂಬ ಪದಗಳನ್ನೇ ಬಳಸಲಾಗಿದೆ. ಅದರಂತೆ ಪ್ರಕೃತ ಭೂತಸೂಕ್ಷ್ಮವು ಅವ್ಯಕ್ತರೂಪವಾದ್ದರಿಂದ, ಶರೀರವನ್ನು ಅವ್ಯಕ್ತವೆಂದು ಶ್ರುತಿಯು ಹೇಳುತ್ತಿದೆ. ಕಾರಣವು ಅವ್ಯಕ್ತಶಬ್ದದ ಅರ್ಥವಾಗಿರುವುದರಿಂದ ಕಾರ್ಯವಾದ ಶರೀರವೂ ಕೂಡ ಅಮುಖ್ಯವೃತ್ತಿಯಿಂದ ಅವ್ಯಕ್ತಶಬ್ದದ ಅರ್ಥವಾಗುತ್ತದೆಂದು ಅಭಿಪ್ರಾಯ.

**प्रकाशः** – ननु प्रकृतपरित्यागभयाच्छरीरं ग्राह्यमित्यत आह – **शरीरमिति** ।। महत्परत्वलिङ्गेन मुख्यार्थत्वलाभेन च प्रकरणबाधोपपत्तेरिति भावः ।

'ಶರೀರಂ ರಥಮೇವ ಚ' ಎಂಬುದಾಗಿ ಹಿಂದೆ ಶರೀರವು ಪ್ರಕೃತವಾದ್ದರಿಂದ, ಶರೀರವನ್ನೇ ಇಲ್ಲಿ ಸ್ವೀಕರಿಸಬೇಕು ಎಂಬ ಪ್ರಶ್ನೆಗೆ 'ಶರೀರಮ್' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ. ಮಹತ್ವಪರತ್ವವೆಂಬ ಲಿಂಗದಿಂದ ತೇಜೋಬನ್ನಾತ್ಮಕವಾದ ಭೂತಸೂಕ್ಷ್ಮವನ್ನೇ ತೆಗೆದುಕೊಳ್ಳಬೇಕು. ಇದರಿಂದ ಮುಖ್ಯಾರ್ಥದ ಲಾಭವೂ ಆಗುತ್ತದೆ. ಈ ಮುಖ್ಯಾರ್ಥದಿಂದ ಪ್ರಕರಣವನ್ನೇ ಬಾಧಿಸಬಹುದು. ಆದ್ದರಿಂದ ಪ್ರಕರಣದ ಬಲದಿಂದ ಶರೀರವನ್ನು ತೆಗೆದುಕೊಳ್ಳುತ್ತೇವೆಂಬ ನಿಲುವು ಸರಿಯಲ್ಲ.

**प्रकाशः** – ननूभयानुगुण्यादविद्यैवाव्यक्तशब्दार्थोस्तु । तदधीनसूत्रे "अविद्यात्मिका हि सा बीजशक्तिरव्यक्तशब्दनिर्देश्यः" इति परभाष्योक्तेरित्याशङ्क्य निराह – **नन्विति** ।।

ಹಾಗಾದರೆ ಅವ್ಯಕ್ತಶಬ್ದದಿಂದ ಅವಿದ್ಯೆಯನ್ನೇ ತೆಗೆದುಕೊಳ್ಳುತ್ತೇವೆ. ಇಂತಹ ಅವಿದ್ಯೆಯಲ್ಲಿ ಮಹತ್ಪರತ್ವವೂ ಇರುತ್ತದೆ. ಮತ್ತು ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವೂ ಕೂಡ ಇರುತ್ತದೆ.

ಹೀಗೆ ಉಭಯಾನುಗುಣ್ಯವಿರುವ ಪ್ರಯುಕ್ತ ಅವಿದ್ಯೆಯೇ ಅವ್ಯಕ್ತಶಬ್ದದ ಅರ್ಥವೆಂದು ಹೇಳಬಹುದು. ತದಧೀನಸೂತ್ರದಲ್ಲಿ 'ಅವಿದ್ಯಾತ್ಮಿಕಾ ಹಿ ಸಾ ಬೀಜಶಕ್ತಿರವ್ಯಕ್ತಶಬ್ದನಿರ್ದೇಶ್ಯಃ' ಅವಿದ್ಯಾತ್ಮಕವಾದ ಬೀಜಶಕ್ತಿಯೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗಿದೆಯೆಂದು ಶಾಂಕರಭಾಷ್ಯದಲ್ಲಿ ಹೇಳಿದೆಯಲ್ಲವೇ ? ಎಂಬ ಆಶಂಕೆಯನ್ನು 'ನನು' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ.

**प्रधानेति ।। तस्य महत्परत्वमुख्याव्यक्तत्वयोस्सम्भवादिति भावः । तदुक्तमनुव्याख्याने ''अपराधः कः प्रधानमिति चोदिते'' इति । तत्प्रयोजकं अव्यक्तताप्रयोजकम् ।**

ಪ್ರಧಾನವನ್ನು ಅವ್ಯಕ್ತಶಬ್ದಪ್ರತಿಪಾದ್ಯವೆಂದು ಹೇಳಿದಾಗ ಮಹತ್ಪರತ್ವ ಹಾಗೂ ಮುಖ್ಯವಾದ ಅವ್ಯಕ್ತತ್ವ ಎರಡೂ ಕೂಡ ಉಪಪನ್ನವಾಗುತ್ತವೆ. ಹೀಗಿರುವಾಗ ಪ್ರಕೃತಿಪರತ್ವವನ್ನು ಬಿಟ್ಟು, ಅವಿದ್ಯಾಪರತ್ವವನ್ನು ಹೇಳುವುದರಲ್ಲಿ ಅರ್ಥವಿಲ್ಲ. ಇದನ್ನೇ ಅನುವ್ಯಾಖ್ಯಾನದಲ್ಲಿ 'ಅಪರಾಧಃ ಕಃ ಪ್ರಧಾನಮಿತಿ ಚೋದಿತೇ' ಪ್ರಧಾನವೆಂದು ಹೇಳಿದರೆ ಏನು ಅಪರಾಧವಾಗುತ್ತದೆ ? ಎಂದು ಹೇಳಿರುತ್ತಾರೆ. 'ತತ್ಪ್ರಯೋಜಕಂ' ಎಂದರೆ ಅವ್ಯಕ್ತತ್ವಕ್ಕೆ ಪ್ರಯೋಜಕವಾದದ್ದು ಎಂದರ್ಥ.




'ಮಹತಃ ಪರಮವ್ಯಕ್ತಮ್' ಎಂಬಲ್ಲಿರುವ ಅವ್ಯಕ್ತಶಬ್ದದಿಂದ ಶರೀರವು ಪ್ರತಿಪಾದ್ಯವಾಗಲು ಸಾಧ್ಯವಿಲ್ಲ. ಏಕೆಂದರೆ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಈ ಶರೀರದಲ್ಲಿಲ್ಲವೆಂದು ಶಂಕಿಸಬಾರದು. ಏಕೆಂದರೆ ಶರೀರವು ವ್ಯಕ್ತರೂಪದಲ್ಲಿದ್ದರೂ ಅದಕ್ಕೆ ಕಾರಣವಾಗಿರುವ ಭೂತಸೂಕ್ಷ್ಮವು ಅವ್ಯಕ್ತವಾಗಿದೆ. ಇಂತಹ ಭೂತಸೂಕ್ಷ್ಮದಲ್ಲಿ ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅವ್ಯಕ್ತತ್ವವು ಇರುತ್ತದೆ. ಕಾರ್ಯದಲ್ಲಿ ಕಾರಣವಾಚಕಶಬ್ದಗಳನ್ನು ಪ್ರಯೋಗಿಸುವುದು 'ಗೋಭಿಃ ಶ್ರೀಣೀತ ಮತ್ಸರಮ್' ಇತ್ಯಾದಿ ಸ್ಥಳದಲ್ಲಿ ಕಂಡಿದೆ. ಅದರಂತೆ ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವನ್ನು ಹೇಳುವ ಅವ್ಯಕ್ತಶಬ್ದವನ್ನು ಕಾರ್ಯರೂಪವಾದ ಶರೀರದಲ್ಲಿ ಪ್ರಯೋಗಿಸಲಾಗಿದೆ. ಇಷ್ಟು 'ಸೂಕ್ಷ್ಮಂ ತು ತದರ್ಹತ್ವಾತ್' ಎಂಬ ಎರಡನೆಯ ಸೂತ್ರ ವ್ಯಾಖ್ಯಾನ.

ಇದು ಸರಿಯಲ್ಲ. ಶರೀರಕ್ಕೆ ಕಾರಣವಾದ ಯಾವ ಭೂತಸೂಕ್ಷ್ಮವಿದೆಯೋ, ಅದನ್ನೇ ಅವ್ಯಕ್ತಶಬ್ದ ಪ್ರತಿಪಾದ್ಯವೆಂದು ಹೇಳಲು ಬರುವಾಗ, ಶರೀರವನ್ನು ಅವ್ಯಕ್ತಶಬ್ದಪ್ರತಿಪಾದ್ಯವೆಂದು ಹೇಳುವುದರಲ್ಲಿ ಅರ್ಥವಿಲ್ಲ. ಮತ್ತು ಶರೀರವು ಹಿಂದೆ ಪ್ರಸಕ್ತವಾಗಿದ್ದರೂ ಅಂತಹ ಶರೀರದಲ್ಲಿ ಮಹತ್ ಪರತ್ವವಾಗಲೀ, ಅವ್ಯಕ್ತತ್ವವಾಗಲೀ, ಸರ್ವಥಾ ಇರುವುದಿಲ್ಲ. ಆದ್ದರಿಂದ ಭೂತಸೂಕ್ಷ್ಮವನ್ನು ವಿವಕ್ಷಿಸುವುದೇ ಉಚಿತ. ಶಾಂಕರಭಾಷ್ಯದಲ್ಲಿ ಅವಿದ್ಯೆಯನ್ನು ಅವ್ಯಕ್ತಶಬ್ದಾರ್ಥವೆಂದು ವ್ಯಾಖ್ಯಾನಿಸಲಾಗಿದೆ. ಹೀಗೆ ಹೇಳುವುದಂತೂ ಬಹಳ ತಪ್ಪಾಗುತ್ತದೆ. ಏಕೆಂದರೆ ನಿರಂತರವಾಗಿ 'ಅಹಮಜ್ಞಃ' ಇತ್ಯಾದಿ ಪ್ರತೀತಿಗಳಿಂದ ನಮ್ಮಲ್ಲಿ ಅವಿದ್ಯೆಯು

ಸಾಕ್ಷಿಸಿದ್ಧವಾಗಿದೆ. ಆದ್ದರಿಂದ ವ್ಯಕ್ತವಾದ ಈ ಅವಿದ್ಯೆಯನ್ನು ಅವ್ಯಕ್ತವೆಂದು ಹೇಳಲು ಸಾಧ್ಯವಿಲ್ಲ. ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವಕ್ಕೆ ಪ್ರಯೋಜಕವಾದ ಸೂಕ್ಷ್ಮತ್ವವು ಇಂತಹ ಅವಿದ್ಯೆಯಲ್ಲಿ ಸುತರಾಂ ಇರುವುದಿಲ್ಲ. ಆದ್ದರಿಂದ ಶರೀರವಾಗಲೀ, ಶರೀರಕ್ಕೆ ಕಾರಣವಾದ ಭೂತಸೂಕ್ಷ್ಮವಾಗಲೀ, ಅಥವಾ ಅವಿದ್ಯೆಯಾಗಲೀ, ಅವ್ಯಕ್ತಶಬ್ದ ಪ್ರತಿಪಾದ್ಯವಾಗುವುದಿಲ್ಲ. ಹೀಗೆ ಅವ್ಯಕ್ತಶಬ್ದದಿಂದ ಯಾವುದು ಪ್ರತಿಪಾದ್ಯವೆಂದು ಅದ್ವೈತಿಗಳನ್ನು ಪ್ರಶ್ನಿಸಿದರೆ, ಅವರಿಗೆ ಬಹಳ ಗೊಂದಲವಿದೆ. ಒಮ್ಮೆ ಶರೀರವೆನ್ನುತ್ತಾರೆ, ಮತ್ತೊಮ್ಮೆ ಭೂತಸೂಕ್ಷ್ಮವೆನ್ನುತ್ತಾರೆ, ಮತ್ತೊಮ್ಮೆ ಅವಿದ್ಯೆಯೆನ್ನುತ್ತಾರೆ. ಗೊಂದಲಕ್ಕೀಡಾದ ಇವರು ಹೇಗೆ ತಾನೆ ಭಾಷ್ಯಕಾರರಾಗುತ್ತಾರೆ ?

• • • • •

## ಮೂರನೆಯ ಮತ್ತು ನಾಲ್ಕನೆಯ ಸೂತ್ರಾರ್ಥ ವಿಮರ್ಶೆ

### तात्पर्यचन्द्रिका

**यच्चोक्तं यदि बीजात्मकं प्रागवस्थारूपमव्याकृतमव्यक्तशब्दार्हं स्वीकृतं तर्हि सांख्यमतापत्तिः । जगतः प्रागवस्थाया एव सांख्यैः प्रधानत्वाभ्युपगमादिति न शङ्क्य म् ।**

ಅನುವಾದ - 'ತದಧೀನತ್ವಾದರ್ಥವತ್' ಎಂಬ ಮೂರನೆಯ ಸೂತ್ರವನ್ನು ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಬೀಜರೂಪವಾದ ಶರೀರಾದಿಕಾರ್ಯಗಳಿಗೆ ಪ್ರಾಗವಸ್ಥಾರೂಪವಾದ, ಅವ್ಯಾಕೃತವಾದ = ಅನಾದಿಯಾದ, ಅವ್ಯಕ್ತಶಬ್ದಕ್ಕೆ ಅರ್ಹವಾದ ಒಂದು ವಸ್ತುವನ್ನು ನೀವು ಸ್ವೀಕಾರ ಮಾಡುವುದಾದರೆ, ಸಾಂಖ್ಯಮತವನ್ನು ಪ್ರವೇಶಿಸಿದಂತಾಯಿತಲ್ಲವೇ? ಏಕೆಂದರೆ ಸಾಂಖ್ಯರೂ ಕೂಡ ಜಗತ್ತಿನ ಪ್ರಾಗವಸ್ಥಾನವನ್ನೇ ಪ್ರಧಾನವೆಂದು ಕರೆಯುತ್ತಾರೆ. ಹೀಗೆ ಶಂಕಿಸಬಾರದು.

**अस्माभिः स्वीकृतायाः प्रागवस्थायाः परमेश्वराधीनत्वेन स्वतन्त्रप्रधानवादि-सांख्यमताऽनापत्तेः ।**

ಏಕೆಂದರೆ ನಾವು ಅಂಗೀಕರಿಸುತ್ತಿರುವ ಪ್ರಾಗವಸ್ಥೆಯು ಪರಮೇಶ್ವರನ ಅಧೀನವಾಗಿದೆ. ಆದರೆ ಸಾಂಖ್ಯರು ಹೇಳುವ ಪ್ರಧಾನವು ಪರಮೇಶ್ವರನ ಅನಧೀನವಾಗಿ ಸ್ವತಂತ್ರವಾಗಿರುವಂತಹದ್ದು. ಹಾಗಾಗಿ ಸಾಂಖ್ಯಮತಪ್ರವೇಶದೋಷವು ಬರುವುದಿಲ್ಲ.

**अर्थवच्च तद्बीजात्मकम् । तेन विनेश्वरस्य स्रष्टृत्वासिद्धेरिति तृतीयार्थ इति**

ಪ್ರಾಗವಸ್ಥಾಪನ್ನವಾದ ಭೂತಸೂಕ್ಷ್ಮವನ್ನು ಒಪ್ಪುವುದು ವ್ಯರ್ಥವಲ್ಲ. ಬೀಜರೂಪವಾದ ಆ ವಸ್ತುವು ಸಾರ್ಥಕವೇ ಆಗಿದೆ. ಏಕೆಂದರೆ ಭೂತಸೂಕ್ಷ್ಮವಿಲ್ಲದೇ ಈ ಜಗತ್ತನ್ನು ಸೃಷ್ಟಿಸಲು ಈಶ್ವರನಿಗೆ

ಸಾಧ್ಯವಾಗುವುದಿಲ್ಲ. ಆದ್ದರಿಂದ ಉಪಾದಾನಕಾರಣಕ್ಕೋಸ್ಕರ ಬೀಜರೂಪವಾದ ವಸ್ತುವನ್ನು ಒಪ್ಪಲೇಬೇಕು.

**तन्न । त्वन्मते पूर्वस्मिन् सूत्रद्वय ईश्वरस्याप्रकृतत्वेन तच्छब्दस्याप्रकृतपरत्वापातात् । तदधीनत्वादिति हेतोः श्रुतार्थवत्त्वरूपसाध्यत्यागेन सांख्यमतापत्ति नेत्यध्याहृतसाध्यान्वयायोगाच्च ।**

ಈ ಸೂತ್ರವ್ಯಾಖ್ಯಾನವೂ ಸರಿಯಿಲ್ಲ. ಏಕೆಂದರೆ ನಿಮ್ಮ ಮತದ ಪ್ರಕಾರ ಹಿಂದಿನ ಎರಡು ಸೂತ್ರಗಳಲ್ಲಿ ಈಶ್ವರನು ಪ್ರಕೃತನೇ ಆಗಿಲ್ಲ. ಹೀಗಿರುವಾಗ 'ತತ್' ಶಬ್ದದಿಂದ ಅಪ್ರಕೃತವಾದದ್ದನ್ನು ಪರಾಮರ್ಶ ಮಾಡಿದಂತಾಗುತ್ತದೆ. ಮತ್ತು 'ತದಧೀನತ್ವಾತ್' ಎಂಬ ಹೇತುವಿಗೆ ಅಲ್ಲಿಯೇ ಶ್ರುತವಾದ 'ಅರ್ಥವತ್ವ' ಎಂಬ ಸಾಧ್ಯದ ಜೊತೆಗೆ ಅನ್ವಯ ಮಾಡದೇ 'ಸಾಂಖ್ಯಮತಾಪತ್ತಿಃ ನ' ಎಂಬುದನ್ನು ಅಧ್ಯಾಹಾರ ಮಾಡಿಕೊಂಡು, ಅಂತಹ ಸಾಧ್ಯದಲ್ಲಿ ಅನ್ವಯ ಮಾಡುವುದು ಕೂಡುವುದಿಲ್ಲ.

**"यस्याव्यक्तं शरीरम" इत्यादिश्रुत्या प्रधानस्वातन्त्र्यस्यैव निराकर्तव्यतया तस्याव्यक्तशब्दार्थत्वनिरासायोगाच्च ।**

'ಯಸ್ಯಾವ್ಯಕ್ತಂ ಶರೀರಮ್' ಇವೇ ಮೊದಲಾದ ಶ್ರುತಿಗಳ ಆಧಾರದಲ್ಲಿ ಪ್ರಕೃತಿಗೆ ನೀವು ಸ್ವಾತಂತ್ರ್ಯವನ್ನಷ್ಟೇ ಅಲ್ಲಗಳೆಯಬೇಕು. ಇದನ್ನು ಬಿಟ್ಟು ಪ್ರಕೃತಿಯು ಅವ್ಯಕ್ತಶಬ್ದದಿಂದ ಪ್ರತಿಪಾದ್ಯವೇ ಅಲ್ಲವೆಂಬ ನಿರಾಕರಣೆ ಅಯುಕ್ತ.

**यच्चोक्तं गुणपुरुषान्तरज्ञानान्मोक्ष इति वदद्भिः सांख्यैः प्रधानस्य ज्ञेयत्वाभ्युपगमादिह चाव्यक्तस्य ज्ञेयत्वावचनान्नेदमव्यक्तं प्रधानमिति चतुर्थोऽर्थ इति**

ಅದ್ವೈತಿಗಳು ನಾಲ್ಕನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸುತ್ತಾರೆ - ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿ ಹಾಗೂ ಜೀವ ಈ ಎರಡು ಪದಾರ್ಥಗಳ ಭೇದಜ್ಞಾನದಿಂದ ಮೋಕ್ಷವಾಗುತ್ತದೆಂದು ಸಾಂಖ್ಯರು ಹೇಳುತ್ತಾರೆ. ಇವರ ಈ ಮಾತಿನಿಂದ ಪ್ರಕೃತಿಯೂ ಕೂಡ ಜ್ಞೇಯವೆಂಬುದು ಸಾಂಖ್ಯರ ಅಭಿಪ್ರಾಯವೆಂದು ತಿಳಿಯುತ್ತದೆ. ಆದರೆ ಪ್ರಕೃತ ಶ್ರುತಿಯಲ್ಲಿರುವ ಅವ್ಯಕ್ತಕ್ಕೆ ಜ್ಞೇಯತ್ವವನ್ನು ಹೇಳಿರುವುದಿಲ್ಲ. ಆದ್ದರಿಂದ ಇಲ್ಲಿರುವ ಅವ್ಯಕ್ತಶಬ್ದವು ಪ್ರಕೃತಿಪರವಾಗುವುದಿಲ್ಲ.

**तन्न । ज्ञेयमित्यनुक्तावपि "महतः परमव्यक्तम्" इति ज्ञापनेनैव ज्ञेयत्वसिद्धेः।**

ಇದೂ ಕೂಡ ತಪ್ಪು. ಶ್ರುತಿಯಲ್ಲಿ 'ಜ್ಞೇಯಂ' ಎಂದು ಹೇಳದ್ದಿದರೂ 'ಮಹತಃ ಪರಮವ್ಯಕ್ತಮ್' ಎಂದು ಹೇಳಿರುವುದರಿಂದಲೇ ಪ್ರಕೃತಿಗೆ ಜ್ಞೇಯತ್ವವು ಸಿದ್ಧವಾಗುತ್ತದೆ.

ಪರಿಪೂರ್ಣಚಂದ್ರಿಕಾ

"अव्यक्तात् पुरुषः परः" इति प्रकृतिपुरुषयोरन्तरस्य ज्ञापनाच्च । अनृतविविक्तत्वेन ब्रह्मज्ञानार्थं त्वयाप्यविद्याया ज्ञेयत्वाभ्युपगमाच्च ।

ಮತ್ತು 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿರುವ 'ಪರ' ಶಬ್ದಕ್ಕೆ 'ವಿಲಕ್ಷಣ' ಎಂಬರ್ಥವು ಇರುವುದರಿಂದ ಪ್ರಕೃತಿಗಿಂತಲೂ ಪುರುಷನು ವಿಲಕ್ಷಣನೆಂದು ಶ್ರುತಿಯಲ್ಲಿ ತಿಳಿಸಲಾಗಿದೆ. ಮತ್ತು ಬ್ರಹ್ಮನನ್ನು ಅನೃತಕ್ಕಿಂತ ಭಿನ್ನನೆಂದು ತಿಳಿಯಬೇಕೆಂದು ನೀವು ಒಪ್ಪಿದ್ದೀರಿ. 'ಅನೃತ' ಎಂದರೆ ಅವಿದ್ಯೆಯೆಂದರ್ಥ. ಇದರಿಂದ ಅವಿದ್ಯೆಗೂ ಜ್ಞೇಯತ್ವವನ್ನು ನೀವು ಒಪ್ಪಲೇಬೇಕು.

त्वदभिप्रेताविद्यास्वभावस्यानिर्वाच्यत्वादेरपीहावचनाच्च ।

ಮತ್ತು ಅವ್ಯಕ್ತಶಬ್ದದಿಂದ ಪ್ರಕೃತಿಯನ್ನು ಸ್ವೀಕರಿಸದೇ ಅವಿದ್ಯೆಯನ್ನು ಸ್ವೀಕರಿಸಬೇಕೆಂದು ನೀವು ಹೇಳುವುದಾದರೆ, ಅವಿದ್ಯೆಯ ಸ್ವಭಾವವೆನಿಸಿದ ಅನಿರ್ವಾಚ್ಯತ್ವ, ಜಗದುಪಾನತ್ವ ಇವುಗಳನ್ನೂ ಕೂಡ ಶ್ರುತಿಯಲ್ಲಿ ಹೇಳಿರುವುದಿಲ್ಲ.

**प्रकाशः –**

तदधीनत्वसूत्रार्थं प्रत्याचष्टे – **यच्चेति** ।। मन्मते प्राक् प्रकृतत्वान्न दोष इति भावेनाह – **त्वन्मत इति** ।। यदत्रोक्तं "शास्त्रमात्रे ब्रह्मणो बुद्धिस्थत्वादाद्यसूत्रेऽपिपदेन समुच्चेतव्यतया प्रकृतत्वात् तत् शब्दस्य ब्रह्मनामत्वाद्वा तच्छब्देन परमपुरुषपरामर्शसंम्भवः" इति ।

ಆಶಂಕೆ - ಅದ್ವೈತಿಗಳು ಮಾಡಿದ 'ತದಧೀನತ್ವಾದರ್ಥವತ್' ಎಂಬ ಮೂರನೆಯ ಸೂತ್ರದ ವ್ಯಾಖ್ಯಾನವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ. ನಮ್ಮ ಮತದ ಪ್ರಕಾರ ಈಶ್ವರನು ಹಿಂದೆ ಪ್ರಕೃತನಾದ್ದರಿಂದ ದೋಷವಿಲ್ಲ. ಆದರೆ ಅದ್ವೈತಿಗಳ ಮತದಲ್ಲಿ ಈಶ್ವರನು ಹಿಂದೆ ಪ್ರಸಕ್ತನಾಗದ ಕಾರಣ 'ತ್ವನ್ಮತೇ' ಇತ್ಯಾದಿ ವಾಕ್ಯದಿಂದ ದೋಷವನ್ನು ಹೇಳುತ್ತಿದ್ದಾರೆ.

'ಶಾಸ್ತ್ರಮಾತ್ರೇ ಬ್ರಹ್ಮಣೋ ಬುದ್ಧಿಸ್ಥತ್ವಾದಾದ್ಯಸೂತ್ರೇಽಪಿಪದೇನ ಸಮುಚ್ಚೇತವ್ಯತಯಾ ಪ್ರಕೃತತ್ವಾತ್ ತತ್ ಶಬ್ದಸ್ಯ ಬ್ರಹ್ಮನಾಮತ್ವಾದ್ವಾ ತಚ್ಛಬ್ದೇನ ಪರಮಪುರುಷಪರಾಮರ್ಶಸಂಭವಃ' ಇದು ಬ್ರಹ್ಮಮೀಮಾಂಸಾಶಾಸ್ತ್ರವಾದ್ದರಿಂದ ಬ್ರಹ್ಮನು ಪ್ರತಿಯೊಂದು ಸೂತ್ರಗಳಲ್ಲಿಯೂ ಬುದ್ಧಿಸ್ಥನಾಗಿಯೂ ಇರುತ್ತಾನೆ. ಆದ್ದರಿಂದ ಆನುಮಾನಿಕಸೂತ್ರದಲ್ಲಿ ಅಪಿಶಬ್ದದಿಂದ ಬ್ರಹ್ಮನನ್ನು ಸಮುಚ್ಚಯ ಮಾಡಬೇಕು. ಹೀಗೆ ಪ್ರಥಮಸೂತ್ರದಲ್ಲಿ ಪ್ರಸ್ತಕನಾದ ಬ್ರಹ್ಮನನ್ನೇ ಇಲ್ಲಿ 'ತತ್' ಶಬ್ದದಿಂದ ಪರಾಮರ್ಶ ಮಾಡಲಾಗಿದೆ. ಅಥವಾ 'ಏಕೋಽನೇಕಃ ಸಃ ಕಃ ಕಿಂ ಯತ್ತತ್ ಪದಮನುತ್ತಮಮ್' ಇತ್ಯಾದಿ ಪ್ರಮಾಣದ ಆಧಾರದಂತೆ 'ತತ್' ಎಂಬ ಪದವೂ ಕೂಡ ಬ್ರಹ್ಮನ ಹೆಸರೇ ಆಗಿದೆ. ಈ 'ತತ್' ಶಬ್ದದಿಂದ ಬ್ರಹ್ಮನನ್ನು ವಿವಕ್ಷಿಸಬಹುದಲ್ಲವೇ?

**प्रकाशः** – तन्न । ब्रह्मणो बुद्धिस्थत्वे ''अर्भकौकस्त्वात् तद्व्यपदेशात्'' ''तद्दर्शनात्'' इत्यादावपि ब्रह्मपरामर्शापत्तेः ।

ಇದು ತಪ್ಪು. ಹೀಗೆ ಬ್ರಹ್ಮನು ಬುದ್ಧಿಸ್ಥನಾಗಿರುವುದಾದಲ್ಲಿ 'ಅರ್ಭಕೌಕಸ್ತ್ವಾತ್ ತದ್ವ್ಯಪದೇಶಾತ್' 'ತದ್ದರ್ಶನಾತ್' ಇತ್ಯಾದಿ ಸೂತ್ರಗಳಲ್ಲಿರುವ 'ತತ್' ಶಬ್ದದಿಂದಲೂ ಬ್ರಹ್ಮನನ್ನೇ ನೀವು ಪರಾಮರ್ಶ ಮಾಡಬೇಕಿತ್ತು.

**प्रकाशः** – आद्यसूत्रे ''न केवलं ब्रह्माव्यक्तम् किन्तु आनुमानिकमपि'' इत्युक्तेरव्यक्तशब्दस्यार्थद्वयानभ्युपगमेनापिना ब्रह्मसमुच्चयायोगात् ।

ಮತ್ತು ಪ್ರಥಮಸೂತ್ರದಲ್ಲಿ 'ನ ಕೇವಲಂ ಬ್ರಹ್ಮಾವ್ಯಕ್ತಮ್ । ಕಿಂ ತ್ವಾನುಮಾನಿಕಮಪಿ' ಕೇವಲ ಬ್ರಹ್ಮಮಾತ್ರ ಅವ್ಯಕ್ತನಲ್ಲ, ಅನುಮಾನಸಿದ್ಧವಾದ ವಸ್ತುವೂ ಕೂಡ ಅವ್ಯಕ್ತವಾಗಿದೆ ಎಂಬುದಾಗಿ ಅವ್ಯಕ್ತಶಬ್ದಕ್ಕೆ ಎರಡು ಅರ್ಥಗಳನ್ನು ನೀವು ಅಂಗೀಕಾರ ಮಾಡಿಯೇ ಇಲ್ಲ. ಹಾಗೇನಾದರೂ ಎರಡು ಅರ್ಥಗಳನ್ನು ನೀವು ಹೇಳಿದ್ದರೆ 'ಅಪಿ' ಶಬ್ದದಿಂದ ಬ್ರಹ್ಮನನ್ನು ಸಮುಚ್ಚಯ ಮಾಡಬಹುದಿತ್ತು. ಆದರೆ ಪ್ರಕೃತಿಯನ್ನು ವಿವಕ್ಷಿಸದ ಕಾರಣ ಅದರ ಜೊತೆಗೆ ಬ್ರಹ್ಮನನ್ನು ಸಮುಚ್ಚಯ ಮಾಡಲು ಬರುವುದಿಲ್ಲ.

**प्रकाशः** – यथा 'यतो वा इमानि' इत्यादौ ब्रह्म तथाऽव्यक्तपदेन कारणतया प्रधानमपीत्युक्तावपीह कारणत्वाप्रतीत्या तेन रूपेणापि ब्रह्मसमुच्चयायोगात् ।

ಶಂಕೆ - ಯಾವರೀತಿಯಾಗಿ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿಯಲ್ಲಿ ಜಗತ್ಕಾರಣತ್ವೇನ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೋ ಅದರಂತೆ 'ಮಹತ್ಪರಮವ್ಯಕ್ತಮ್' ಎಂಬಲ್ಲಿರುವ ಅವ್ಯಕ್ತಪದದಿಂದ ಪ್ರಧಾನವೂ ಕೂಡ ಜಗತ್ಕಾರಣತ್ವೇನ ಶಬ್ದಪ್ರತಿಪಾದ್ಯವಾಗಿದೆ. ಹೀಗೆ 'ಅಪಿ' ಪದದಿಂದ ಸಮುಚ್ಚಯ ಮಾಡಬಹುದಲ್ಲವೇ?

ಸಮಾಧಾನ - ಹೀಗೆ ಆಶಂಕಿಸಬಾರದು. ಏಕೆಂದರೆ 'ಯತೋ ವಾ ಇಮಾನಿ' ಇತ್ಯಾದಿ ಸ್ಥಳದಲ್ಲಿ ಜಗತ್ಕಾರಣತ್ವವು ಪ್ರತೀತವಾದಂತೆ, 'ಮಹತಃ ಪರಮವ್ಯಕ್ತಮ್' ಎಂಬ ಸ್ಥಳದಲ್ಲಿ ಅಂತಹ ಕಾರಣತ್ವವು ಪ್ರತೀತವಾಗುತ್ತಿಲ್ಲ. ಈ ವಿಷಯವನ್ನು ನಾವು ಈಗಾಗಲೇ ಹಿಂದೆ ನಿರೂಪಣೆ ಮಾಡಿದ್ದೇವೆ. ಆದ್ದರಿಂದ ಜಗತ್ಕಾರಣತ್ವರೂಪದಿಂದಲೂ ಬ್ರಹ್ಮನನ್ನು ಸಮುಚ್ಚಯ ಮಾಡಲು ಸಾಧ್ಯವಿಲ್ಲ.

**प्रकाशः** – एवमपि प्राधान्येन मन्मत इव त्वन्मतेऽप्रकृतत्वात् । तच्छब्दस्य ब्रह्मनामत्वेन तद्ग्रहेतु ''तेन रक्तं रागात् । तद्व्यपदेशात्'' इत्यादावपि तद्ग्रहप्रसङ्गादिति ध्येयम् ।

ಒಂದುವೇಳೆ 'ಅಪಿ'ಪದದಿಂದ ಬ್ರಹ್ಮನು ಸಮುಚ್ಚಿತನಾಗಿದ್ದಾನೆಂದು ನೀವು ಒಪ್ಪಿದರೂ ಕೂಡ ನಾವು ಹೇಳುವಂತೆ ಬ್ರಹ್ಮನು ಮುಖ್ಯವಾಗಿ ಪ್ರಕೃತನಾಗುವುದಿಲ್ಲ ಸಮುಚ್ಚಿತನಾಗಿ ಮಾತ್ರ ಪ್ರಕೃತನಾಗುತ್ತಾನೆ.

ಹಾಗಾಗಿ ಮುಖ್ಯವಾಗಿ ಅಪ್ರಕೃತನೇ ಆಗಿದ್ದಾನೆಂಬ ದೋಷ ನಿಮಗೆ ತಪ್ಪಿದ್ದಲ್ಲ. ಮತ್ತು 'ತತ್' ಶಬ್ದವು ಬ್ರಹ್ಮನ ನಾಮ ಎಂದು ವಿವಕ್ಷಿಸುವುದಾದರೆ 'ತೇನ ರಕ್ತಂ ರಾಗಾತ್' ಮತ್ತು 'ತದ್‌ವ್ಯಪದೇಶಾತ್' ಇತ್ಯಾದಿ ಸೂತ್ರಗಳಲ್ಲಿರುವ 'ತತ್' ಶಬ್ದದಿಂದಲೂ ಬ್ರಹ್ಮನನ್ನೇ ಸ್ವೀಕರಿಸಬೇಕಾದೀತು.

(ಹಿಂದಿನ ಸೂತ್ರಗಳಲ್ಲಿಯೂ ಬ್ರಹ್ಮನು ಪ್ರಕೃತನಾಗಿದ್ದಾನೆ. ಅವನನ್ನೇ ಇಲ್ಲಿರುವ 'ತತ್' ಶಬ್ದದಿಂದ ಪರಾಮರ್ಶ ಮಾಡಬೇಕೆಂದು ಹೇಳುವುದೇ ಸ್ವರಸ. ಇದನ್ನು ಬಿಟ್ಟು. 'ತತ್' ಶಬ್ದವು ಬ್ರಹ್ಮನ ನಾಮವಾದ್ದರಿಂದ ಎಲ್ಲಿ ಬೇಕಾದರೂ 'ತತ್' ಶಬ್ದದಿಂದ ಬ್ರಹ್ಮನನ್ನು ಸ್ವೀಕರಿಸಬಹುದೆಂದು ಹೇಳುವುದು ಅತಿವ್ಯಾಪ್ತಿಗೆ ಕಾರಣವಾಗುತ್ತದೆ. ಮತ್ತು ಸಮುಚ್ಚಿತನಾಗಿ ಪ್ರಕೃತನಾಗಿದ್ದಾನೆಂದು ಹೇಳುವುದಾದರೆ, ಯಾವುದರ ಜೊತೆಗೆ ಸಮುಚ್ಚಿತನಾಗಿದ್ದಾನೆಂದು ನಿರೂಪಣೆ ಮಾಡಲು ಬರುವುದಿಲ್ಲ. ಬ್ರಹ್ಮನು ಹೇಗೆ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಅನುಮಾನದಿಂದ ಸಿದ್ಧವಾದ ವಸ್ತುವೂ ಕೂಡ ಅವ್ಯಕ್ತವಾಗಿದೆ ಎಂಬುದನ್ನು ಪೂರ್ವಪಕ್ಷಿಯಾಗಲೀ, ಸಿದ್ಧಾಂತಿಯಾಗಲೀ ಒಪ್ಪಿರುವುದಿಲ್ಲ. ಬ್ರಹ್ಮನು ಹೇಗೆ ಜಗತ್ಕಾರಣತ್ವೇನ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಪ್ರಧಾನವೂ ಕೂಡ ಜಗತ್ಕಾರಣತ್ವೇನ ಪ್ರತಿಪಾದ್ಯವಾಗಿದೆಯೆಂದು ಹೇಳಲು ಹೊರಟರೆ, ಪ್ರಕೃತ ಪ್ರಧಾನಕ್ಕೆ ಜಗತ್ಕಾರಣತ್ವವನ್ನು ಹೇಳಿಯೇ ಇಲ್ಲ. ಒಂದು ವೇಳೆ ಸಮುಚ್ಚಯತ್ವೇನ ಪ್ರಕೃತನಾಗಿದ್ದರೂ ಪ್ರಾಧಾನ್ಯೇನ ಪ್ರಸಕ್ತನಾಗಿಲ್ಲ. ಇತ್ಯಾದಿಯಾದ ಹಲವು ದೋಷಗಳಿರುವುದರಿಂದ ಮೂರನೆಯ ಸೂತ್ರವ್ಯಾಖ್ಯಾನವನ್ನು ನಾವು ಹೇಳುವಂತೆಯೇ ತಿಳಿಯಬೇಕು.)

**प्रकाशः** – ''ज्ञेयत्वावचनाच्च'' इति सूत्रार्थं निराह – **यच्चेति ।। गुणेति ।।** सत्वादिगुणात्मक प्रकृतिजीवभेदज्ञानादित्यर्थः ।

'ಜ್ಞೇಯತ್ವಾವಚನಾಚ್ಚ' ಎಂಬ ಸೂತ್ರವ್ಯಾಖ್ಯಾನವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ. 'ಗುಣಪುರುಷಾಂತರಜ್ಞಾನಾತ್' ಎಂದರೆ ಸತ್ವಾದಿಗುಣಾತ್ಮಕವಾದ ಪ್ರಕೃತಿ ಹಾಗೂ ಜೀವ ಇವರಿಬ್ಬರ ಭೇದಜ್ಞಾನದಿಂದ ಎಂದರ್ಥ.

**प्रकाशः** – ''ज्ञेयं ब्रह्म सनातनम्'' इत्यादाविव ज्ञेयं प्रधानमिति साक्षादुक्तिर्नेति उतार्थादपि तस्यात्र ज्ञेयत्वोक्तिर्नेति अथ पुरुषविविक्ततया ज्ञेयत्वोक्तिर्नेतीति हृदि विकल्प्याद्यमप्रयोजकमिति वदन् द्वितीयमसिद्धमित्याह – **ज्ञेयमिति ।।**

'ಜ್ಞೇಯಂ ಬ್ರಹ್ಮ ಸನಾತನಮ್' ಎಂಬಲ್ಲಿ ಯಾವರೀತಿಯಾಗಿ ಬ್ರಹ್ಮನನ್ನು ಜ್ಞೇಯನೆಂದು ಹೇಳಲಾಗಿದೆಯೋ, ಅದರಂತೆ ಪ್ರಧಾನಕ್ಕೆ ಜ್ಞೇಯತ್ವವನ್ನು ನೇರವಾಗಿ ಹೇಳಿಲ್ಲವೆಂದು ನಿಮ್ಮ ಆಕ್ಷೇಪವೋ? ಅಥವಾ ಅರ್ಥಾತ್ ಜ್ಞೇಯತ್ವವನ್ನು ಹೇಳುತ್ತಿಲ್ಲವೆಂದೋ? ಅಥವಾ ಪುರುಷನಿಗಿಂತ ಭಿನ್ನವಾಗಿ ಜ್ಞೇಯವಾಗಿದೆಯೆಂದು ಹೇಳುತ್ತಿಲ್ಲವೆಂದೋ? ಹೀಗೆ ಮೂರು ವಿಕಲ್ಪಗಳನ್ನು ಮಾಡಿ, ಮೊದಲನೇ ವಿಕಲ್ಪವು ಅಪ್ರಯೋಜಕವಾಗಿದೆ ಎಂದು ಹೇಳುತ್ತಾ, ಎರಡನೆಯ ವಿಕಲ್ಪಕ್ಕೆ ಅಸಿದ್ಧಿದೋಷವನ್ನು 'ಜ್ಞೇಯಮ್' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः** – महत्परत्वरूपप्रधानधर्मोक्तयैव तस्य ज्ञेयत्वसिद्धेः । अन्यथा धूमोक्तेर्वह्नेर्ज्ञेयत्वाभावापातादिति भावः । तृतीयमप्यसिद्धमित्याह – **अव्यक्तादिति**।। पञ्चमीप्रथमाभ्यामित्यर्थः ।

ಪ್ರಕೃತಿಯು ಮಹತ್ತತ್ವಕ್ಕಿಂತ ಶ್ರೇಷ್ಠವಾಗಿದೆಯೆಂಬುದಾಗಿ ಮಹತ್ಪರತ್ವವೆಂಬ ಪ್ರಕೃತಿಯ ಧರ್ಮವೆಂದು ಹೇಳಿದ್ದರಿಂದಲೇ ಪ್ರಕೃತಿಯು ಜ್ಞೇಯವೆಂದು ಹೇಳಿದಂತಾಗುತ್ತದೆ. ಹೀಗೆ ಹೇಳಿದರೂ ಪ್ರಕೃತಿಯಲ್ಲಿ ಜ್ಞೇಯತ್ವವು ಸಿದ್ಧವಾಗದಿದ್ದರೆ ಪರ್ವತದಲ್ಲಿ ಧೂಮವಿದೆಯೆಂದು ಹೇಳಿದಾಗ, ವಹ್ನಿಯನ್ನು ತಿಳಿದುಕೋ ಎಂಬ ಅಭಿಪ್ರಾಯ ಇಲ್ಲವೆಂದು ಹೇಳಬೇಕಾದೀತು. ಧೂಮವಿದೆಯೆಂದು ಹೇಳಿದರೆ ವಹ್ನಿಯನ್ನು ತಿಳಿಸುವ ಉದ್ದೇಶ ವಕ್ತೃವಿಗೆ ಇದೆಯೆಂದು ಹೇಗೆ ನಿಶ್ಚಯಿಸುತ್ತೇವೋ, ಅದರಂತೆ ಪ್ರಧಾನವು ಮಹತ್ಪರವಾಗಿದೆಯೆಂದು ಹೇಳಿದರೆ ಅದನ್ನು ತಿಳಿದುಕೋ ಎಂಬ ಅಭಿಪ್ರಾಯ ಶ್ರುತಿಗೆ ಇದ್ದೇ ಇರುತ್ತದೆಂದು ತಿಳಿಯಬೇಕು. ಮೂರನೆಯ ಪಕ್ಷವೂ ಕೂಡ ಅಸಿದ್ಧವೆಂದು 'ಅವ್ಯಕ್ತಾತ್' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ. 'ಅವ್ಯಕ್ತಾತ್' ಎಂಬ ಪಂಚಮೀ ವಿಭಕ್ತಿಯಿಂದ ಪ್ರಕೃತಿಯನ್ನು 'ಪುರುಷಃ' ಎಂಬ ಪ್ರಥಮಾವಿಭಕ್ತಿಯಿಂದ ಪುರುಷನನ್ನು ಹೇಳಿದ್ದರಿಂದ ಪ್ರಕೃತಿ ಹಾಗೂ ಪುರುಷರ ವಿವೇಕವನ್ನು ಪಡೆಯಬೇಕೆಂದು ಹೇಳಿದಂತಾಗುತ್ತದೆ. ಎಂದಭಿಪ್ರಾಯ.

**प्रकाशः** – किञ्च ज्ञेयत्वावचनयुक्तया प्रधानापाकरणं स्वव्याहतम् । ज्ञेयतया त्वदभ्युपगताया अविद्याया इह ज्ञेयतया वचनाभावेन तस्या अप्यव्यक्तशब्दार्थत्व-निरासापातादित्याह – **अनृतेति** ।।

ಮತ್ತು ಅವ್ಯಕ್ತವನ್ನು ಮೋಕ್ಷಕ್ಕೋಸ್ಕರ ತಿಳಿಯಬೇಕೆಂದು ಹೇಳಿರುವುದಿಲ್ಲ. ಸಾಂಖ್ಯರಾದರೂ ಮೋಕ್ಷಕ್ಕೋಸ್ಕರ ಪ್ರಧಾನವನ್ನು ತಿಳಿಯಬೇಕೆಂದು ಹೇಳುತ್ತಾರೆ. ಆದ್ದರಿಂದ ಶ್ರುತಿಯಲ್ಲಿ ಪ್ರಸಕ್ತವಾದ ಅವ್ಯಕ್ತಶಬ್ದವು ಪ್ರಧಾನಪರವಲ್ಲ ಎಂದು ನೀನು ಪ್ರಶ್ನಿಸಬೇಕು. ಆದರೆ ಇದೂ ಕೂಡ ಸರಿಯಲ್ಲ. ಸಾಂಖ್ಯರು ಯಾವರೀತಿಯಾಗಿ ಮೋಕ್ಷಕ್ಕೋಸ್ಕರ ಪ್ರಧಾನವನ್ನು ತಿಳಿಯಬೇಕೆನ್ನುತ್ತಾರೋ ಅದರಂತೆ ನೀನೂ ಸಹ ಮೋಕ್ಷಕ್ಕೋಸ್ಕರ ಅವಿದ್ಯೆಯನ್ನು ತಿಳಿಯಬೇಕೆಂದು ಹೇಳುವಿ. ಮೋಕ್ಷಕ್ಕೋಸ್ಕರ ಅವಿದ್ಯೆಯನ್ನು ಏಕೆ ತಿಳಿಯಬೇಕೆಂದರೆ ಬ್ರಹ್ಮನು ಅನೃತವಿವಿಕ್ತನಾಗಿದ್ದಾನೆಂದು ತಿಳಿಯಲು ಮೊದಲು ಅನೃತವನ್ನು ತಿಳಿಯಬೇಕೆಂದು ನೀನು ಉತ್ತರಿಸುವಿ. ಆದರೆ ಶ್ರುತಿಯಲ್ಲಿ ಅವಿದ್ಯೆಯನ್ನು ಮೋಕ್ಷಕ್ಕೋಸ್ಕರ ತಿಳಿಯಬೇಕೆಂದು ಹೇಳಿರುವುದಿಲ್ಲ. ಆದ್ದರಿಂದ ಅವ್ಯಕ್ತಶಬ್ದದಿಂದ ಅವಿದ್ಯೆಯನ್ನೂ ಕೂಡ ತೆಗೆದುಕೊಳ್ಳಬಾರದೆಂದು ನಾನು ಹೇಳುತ್ತೇನೆ. ಈ ಪ್ರತಿಬಂಧಿಗೆ ನಿನ್ನಲ್ಲಿ ಉತ್ತರವಿಲ್ಲ. ಇದನ್ನು 'ಅನೃತ' ಇತ್ಯಾದಿ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – अविद्याया अप्यनृतत्वादिति भावः । इहाव्यक्तशब्देन तदुक्तिरस्तीत्यत उक्तं – **त्वदभिप्रेतेति** ।। इदं चाद्वैतिमते । रामानुजमते तु सकलहेयप्रत्यनीकतया ब्रह्मज्ञानार्थं प्रधानस्य ज्ञेयत्वाभ्युपगमात् । त्वदभिप्रेतप्रधानस्वभावस्य भगवच्छरीरकत्वादेश्चेहावचनाच्चेति ध्येयम् ।

ಪರಿಪೂರ್ಣಚಂದ್ರಿಕಾ

ಅವಿದ್ಯೆಯೂ ಕೂಡ ಅನ್ಯತಸ್ವರೂಪವಾಗಿದೆಯೆಂಬ ಅಭಿಪ್ರಾಯವನ್ನು ಇಟ್ಟುಕೊಳ್ಳಬೇಕು. ಅವ್ಯಕ್ತಶಬ್ದದಿಂದ ಅವಿದ್ಯೆಯನ್ನು ಹೇಳಿದ್ದಾರಲ್ಲವೇ? ಎಂಬ ಪ್ರಶ್ನೆಗೆ 'ತ್ವದಭಿಪ್ರೇತ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಅವಿದ್ಯೆಯ ಅಸಾಧಾರಣ ಧರ್ಮವಾದ ಅನಿರ್ವಾಚ್ಯತ್ವಾದಿಗಳನ್ನು ಹೇಳಿರುವುದಿಲ್ಲ ಎಂದು ತಿಳಿಯಬೇಕು. ಗ್ರಂಥದಲ್ಲಿರುವ ಈ ದೋಷವು ಅದ್ವೈತಿಗಳಿಗೆಂದು ತಿಳಿಯಬೇಕು.

ರಾಮಾನುಜರಿಗೆ ಬೇರೆ ರೀತಿಯಲ್ಲಿಯೇ ದೋಷವನ್ನು ಹೇಳಬೇಕು. ಸಕಲ ಹೇಯಪದಾರ್ಥಗಳಿಗಿಂತ ಭಿನ್ನನಾಗಿ ಬ್ರಹ್ಮನನ್ನು ತಿಳಿಯಬೇಕೆಂದು ರಾಮಾನುಜರು ಹೇಳುತ್ತಾರೆ. ಸಕಲ ಹೇಯಪದಾರ್ಥಗಳಲ್ಲಿ ಪ್ರಧಾನವೂ ಕೂಡ ಪ್ರಸಕ್ತವಾಗಿವುದರಿಂದ ಪ್ರಧಾನವನ್ನು ತಿಳಿಯಬೇಕೆಂದು ಹೇಳಿದಂತಾಯಿತು. ಹೀಗೆ ಪ್ರಧಾನವೂ ಕೂಡ ಮೋಕ್ಷಕ್ಕೋಸ್ಕರ ಜ್ಞೇಯವೆಂದು ನೀವೂ ಕೂಡ ಒಪ್ಪುತ್ತೀರಿ. ಆದರೆ ಪ್ರಕೃತ ಶ್ರುತಿಯಲ್ಲಿ ಮೋಕ್ಷಕ್ಕೋಸ್ಕರ ಪ್ರಧಾನವನ್ನು ತಿಳಿಯಬೇಕೆಂದು ಹೇಳಿರುವುದಿಲ್ಲ. ಮತ್ತು ನೀವು ಪ್ರಧಾನವನ್ನು ಪರಮಾತ್ಮನ ಶರೀರವೆಂದು ಹೇಳುತ್ತೀರಿ. ಆದರೆ ಇಲ್ಲಿರುವ ಪ್ರಧಾನವು ಭಗವಂತನ ಶರೀರವೆಂದು ಹೇಳಿರುವುದಿಲ್ಲ. ಆದ್ದರಿಂದ ಇಲ್ಲಿರುವ ಅವ್ಯಕ್ತಶಬ್ದದಿಂದ ನಿಮಗೆ ಅಭಿಪ್ರೇತವಾದ ಪ್ರಧಾನವನ್ನು ವಿವಕ್ಷಿಸಲು ಬರುವುದಿಲ್ಲ. ಹಾಗಾಗಿ ಅದ್ವೈತಿಗಳಂತೆ ನಿಮ್ಮ ಮತದಲ್ಲಿಯೂ 'ಜ್ಞೇಯತ್ವಾವಚನಾಚ್ಚ' ಎಂಬ ಸೂತ್ರವ್ಯಾಖ್ಯಾನವು ಸಮಂಜಸವಾಗಿಲ್ಲ.

**गुरुराजीयम् – श्रुत्यादिसिद्धताया वक्ष्यमाणत्वेनेति** ।। मायां तु प्रकृतिं विद्यात्, देवात्मशक्तिं स्वगुणैर्निगूढां, गौरनाद्यन्तवती यस्याव्यक्तं शरीरमित्यादिश्रुत्या सिद्धताया वक्ष्यमाणत्वेनेत्यर्थः । नवा तत्प्रयोजकं सूक्ष्मत्वमिति ।। अव्यक्तत्व-प्रयोजकं सूक्ष्मत्वमप्यविद्याया न सम्भवति । अपरिच्छिन्नत्वाभ्युपगमादिति भावः।। **गुणपुरुषान्तरज्ञानादिति** ।। गुणास्सत्वादयः पुरुषश्च तयोरन्तरं विवेकः तज्ज्ञानान्मोक्षः प्रकृतिपुरुषविवेकज्ञानान्मोक्ष इति यावत् ।। **ज्ञेयत्वाभ्युपगमादिति**।। तथा चात्र ज्ञेयत्वावचनान्नेदमव्यक्तमविद्येति भावः । ननु नेदमव्यक्तं प्रधानं त्रिगुण त्वादिप्रधानधर्मानुक्तेरित्यत आह – **त्वदभिप्रेतेति** ।।




'ತದಧೀನತ್ವಾದರ್ಥವತ್' ಎಂಬ ಮೂರನೆಯ ಸೂತ್ರಕ್ಕೆ ಪರವಾದಿಗಳ ವ್ಯಾಖ್ಯಾನ ಹೀಗಿದೆ - ದೇಹಕ್ಕೆ ಕಾರಣವಾದ ಭೂತಸೂಕ್ಷ್ಮಗಳು ಅವ್ಯಕ್ತವಾದ್ದರಿಂದ ಅವ್ಯಕ್ತಶಬ್ದಪ್ರತಿಪಾದ್ಯವಾಗಿವೆ. ಹಾಗಾದರೆ ಸಾಂಖ್ಯರು ಒಪ್ಪುವ ಪ್ರಕೃತಿಯನ್ನು ನೀವೂ ಕೂಡ ಒಪ್ಪಿದಂತಾಯಿತಲ್ಲವೇ? ಎಂದು ಪ್ರಶ್ನಿಸಬಾರದು. ಸಾಂಖ್ಯರು ಈಶ್ವರನ ಅನಧೀನವಾದ ಸ್ವತಂತ್ರವಾದ ಪ್ರಕೃತಿತತ್ವವನ್ನು ಒಪ್ಪುತ್ತಾರೆ. ಆದರೆ ನಾವು ಈಶ್ವರನ ಅಧೀನವಾದ ಪ್ರಕೃತಿಯನ್ನು

ಒಪ್ಪುತ್ತೇವೆ. ಪ್ರಕೃತಿಯೆಂಬ ಉಪಾದಾನಕಾರಣವಿಲ್ಲದೇ, ಜಗತ್ತನ್ನು ಸೃಷ್ಟಿ ಮಾಡಲೂ ಕೂಡ ಸಾಧ್ಯವಿಲ್ಲ. ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ಹಿಂದಿನ ಎರಡು ಸೂತ್ರಗಳಲ್ಲಿ ಈಶ್ವರನು ಅಪ್ರಕೃತನಾಗಿರುವಾಗ ಮೂರನೆಯ ಸೂತ್ರದಲ್ಲಿರುವ 'ತತ್' ಶಬ್ದದಿಂದ ಈಶ್ವರನನ್ನು ಪರಾಮರ್ಶಿಸುವುದು ತಪ್ಪಾಗುತ್ತದೆ. ಮತ್ತು 'ಯಸ್ಯಾವ್ಯಕ್ತಮ್ ಶರೀರಂ' ಇತ್ಯಾದಿ ಸೂತ್ರದಿಂದ ಪ್ರಧಾನಕ್ಕೆ ಸ್ವಾತಂತ್ರ್ಯವನ್ನೇ ನೀವು ನಿರಾಕರಣೆ ಮಾಡಬೇಕು. ಅದನ್ನು ಬಿಟ್ಟು ಅವ್ಯಕ್ತಶಬ್ದಾರ್ಥತ್ವವನ್ನು ನಿರಾಕರಣೆ ಮಾಡುವುದೂ ಕೂಡ ತಪ್ಪಾಗುತ್ತದೆ.

'ಜ್ಞೇಯತ್ವಾವಚನಾಚ್ಚ' ಎಂಬ ನಾಲ್ಕನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾರೆ - ಸಾಂಖ್ಯರು ಪ್ರಕೃತಿ-ಪುರುಷ ವಿವೇಕಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳುತ್ತಾರೆ. ಇದರಿಂದ ಪ್ರಕೃತಿಯನ್ನು ಅವಶ್ಯ ತಿಳಿಯಬೇಕೆಂಬುದು ಸಾಂಖ್ಯರ ಅಭಿಪ್ರಾಯ. ಆದರೆ ಉಪನಿಷತ್ತಿನಲ್ಲೆಲ್ಲೂ ಕೂಡ ಪ್ರಕೃತಿಯನ್ನು ತಿಳಿಯಬೇಕೆಂದು ಹೇಳಿರುವುದಿಲ್ಲ. ಆದ್ದರಿಂದ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯು ಇಲ್ಲಿರುವ ಶ್ರುತಿಯಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲವೆಂದು. ಈ ವ್ಯಾಖ್ಯಾನವೂ ಕೂಡ ಸರಿಯಲ್ಲ. ಏಕೆಂದರೆ ಪ್ರಕೃತಿಯನ್ನು ತಿಳಿಯಬೇಕೆಂದು ಹೇಳದಿದ್ದರೂ ಕೂಡ 'ಮಹತಃ ಪರಮವ್ಯಕ್ತಮ್' ಎಂಬ ತಿಳಿಸುವಿಕೆಯಿಂದಲೇ ಪ್ರಕೃತಿಯನ್ನು ತಿಳಿಯಬೇಕೆಂದು ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲದೇ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಪ್ರಕೃತಿ ಪುರುಷರ ವಿವೇಕವನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಅಷ್ಟೇ ಅಲ್ಲದೇ ಯಾವ ಅವಿದ್ಯೆಯು ಈ ಶ್ರುತಿಯಲ್ಲಿ ಪ್ರತಿಪಾದ್ಯವೆಂದು ನೀನು ಒಪ್ಪುತ್ತೀಯೋ, ಅಂತಹ ಅವಿದ್ಯೆಯಲ್ಲಿ ಅವಿದ್ಯೆಯ ಲಕ್ಷಣವೇ ಇರುವುದಿಲ್ಲ. ಆದ್ದರಿಂದ ಅವಿದ್ಯೆಯೂ ಕೂಡ ಇಲ್ಲಿ ಪ್ರತಿಪಾದ್ಯವಾಗದೇ ಇರಬೇಕಾದೀತು. ಆದ್ದರಿಂದ ಅದ್ವೈತಿಗಳ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ.

ರಾಮಾನುಜರಿಗೆ ಬೇರೆ ರೀತಿಯಲ್ಲಿಯೇ ದೋಷವನ್ನು ಹೇಳಬೇಕು. ಸಕಲ ಹೇಯಪದಾರ್ಥಗಳಿಗಿಂತ ಭಿನ್ನನಾಗಿ ಬ್ರಹ್ಮನನ್ನು ತಿಳಿಯಬೇಕೆಂದು ರಾಮಾನುಜರು ಹೇಳುತ್ತಾರೆ. ಸಕಲ ಹೇಯಪದಾರ್ಥಗಳಲ್ಲಿ ಪ್ರಧಾನವೂ ಕೂಡ ಹೇಳಿರುವುದರಿಂದ ಪ್ರಧಾನವನ್ನು ತಿಳಿಯಬೇಕೆಂದು ಹೇಳಿದಂತಾಯಿತು. ಹೀಗೆ ಪ್ರಧಾನವೂ ಕೂಡ ಮೋಕ್ಷಕ್ಕೋಸ್ಕರ ಜ್ಞೇಯವೆಂದು ನೀವೂ ಕೂಡ ಒಪ್ಪುತ್ತೀರಿ. ಆದರೆ ಪ್ರಕೃತ ಶ್ರುತಿಯಲ್ಲಿ ಮೋಕ್ಷಕ್ಕೋಸ್ಕರ ಪ್ರಧಾನವನ್ನು ತಿಳಿಯಬೇಕೆಂದು ಹೇಳಿರುವುದಿಲ್ಲ. ಮತ್ತು ನೀವು ಪ್ರಧಾನವನ್ನು ಪರಮಾತ್ಮನ ಶರೀರವೆಂದು ಹೇಳುತ್ತೀರಿ. ಆದರೆ ಇಲ್ಲಿರುವ ಪ್ರಧಾನವು ಭಗವಂತನ ಶರೀರವೆಂದು ಹೇಳಿರುವುದಿಲ್ಲ. ಆದ್ದರಿಂದ ಇಲ್ಲಿರುವ ಅವ್ಯಕ್ತಶಬ್ದದಿಂದ ನಿಮಗೆ ಅಭಿಪ್ರೇತವಾದ ಪ್ರಧಾನವನ್ನು ವಿವಕ್ಷಿಸಲು ಬರುವುದಿಲ್ಲ. ಹಾಗಾಗಿ ಅದ್ವೈತಿಗಳಂತೆ ನಿಮ್ಮ ಮತದಲ್ಲಿಯೂ 'ಜ್ಞೇಯತ್ವಾವಚನಾಚ್ಚ' ಎಂಬ ಸೂತ್ರವ್ಯಾಖ್ಯಾನವು ಸಮಂಜಸವಾಗಿಲ್ಲ.

• • • • •

ಐದು ಮತ್ತು ಆರನೆಯ ಸೂತ್ರಾರ್ಥ ವಿಮರ್ಶೆ

## तात्पर्यचन्द्रिका

**यच्चोक्तं ''निचाय्य तं मृत्युमुखात् प्रमुच्यते'' इति प्रधानस्य ज्ञेयत्वं वदतीति चेन्न । प्राज्ञो हि परमात्मा तत्र ज्ञेयत्वेन निर्दिष्टः । प्रकरणादिति पञ्चमार्थ इति**

ಅನುವಾದ - 'ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್' ಎಂಬ ಐದನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ -

''ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬುದಾಗಿ ಮಹತ್ತತ್ವಕ್ಕಿಂತಲೂ ಪ್ರಕೃತಿಯು ಉತ್ತಮವಾಗಿದೆಯೆಂದು ತಿಳಿಯಬೇಕು'. ಹೀಗೆ ಶ್ರುತಿಯು ಹೇಳುತ್ತಿದೆಯೆಂದ ಮೇಲೆ, ಪ್ರಧಾನವು ಜ್ಞೇಯವೆಂದು ಹೇಳಿದಂತಾಯಿತಲ್ಲವೇ ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಮಹತಃ ಪರಮ್' ಎಂಬುದಾಗಿ ಬ್ರಹ್ಮನನ್ನು ಹೇಳಿ, ಅವನನ್ನೇ ಜ್ಞೇಯನನ್ನಾಗಿ ನಿರ್ದೇಶಿಸಲಾಗಿದೆ. ಏಕೆಂದರೆ ಇದು 'ಸಾ ಕಾಷ್ಠಾ ಸಾ ಪರಾ ಗತಿಃ' ಎಂಬುದಾಗಿ ಬ್ರಹ್ಮನ ಪ್ರಕರಣವೇ ಆಗಿರುತ್ತದೆ. ಇಷ್ಟು ಐದನೆಯ ಸೂತ್ರಾರ್ಥ.

**तन्न । त्वन्मते ज्ञातृत्वादिरहितशुद्धतुरीयज्ञानस्यैव मोचकत्वेन सूत्रे प्रज्ञावद्वाचकप्राज्ञपदायोगात् ।**

ಇದು ತಪ್ಪು. ಏಕೆಂದರೆ ನಿಮ್ಮ ಮತದಲ್ಲಿ ಜ್ಞಾತೃತ್ವಾದಿ ಧರ್ಮಗಳಿಂದ ರಹಿತನಾದ, ಶುದ್ಧನಾದ ತುರೀಯ ಬ್ರಹ್ಮನ ಜ್ಞಾನವೇ ಮೋಕ್ಷಕ್ಕೆ ಕಾರಣವೆಂದು ಒಪ್ಪಲಾಗಿದೆ. ಆದರೆ ಸೂತ್ರದಲ್ಲಿ ಜ್ಞಾತೃತ್ವಾದಿ ಧರ್ಮಗಳನ್ನು ಹೇಳುವಂತಹ 'ಪ್ರಜ್ಞಾವತ್' ಎಂಬ ಅರ್ಥದಲ್ಲಿರುವ 'ಪ್ರಾಜ್ಞ' ಎಂಬ ಪದವನ್ನು ಪ್ರಯೋಗಿಸಲಾಗಿದೆ.

**''प्रज्ञा श्रद्धार्चाभ्यो णः'' इति हि व्याकरणसूत्रम् ।**

'ಪ್ರಜ್ಞಾ ಶ್ರದ್ಧಾರ್ಚಾಭ್ಯೋ ಣಃ' ಎಂಬ ವ್ಯಾಕರಣ ಸೂತ್ರದಲ್ಲಿ ಪ್ರಜ್ಞಾಶಬ್ದದ ಮೇಲೆ ಮತ್ವರ್ಥದಲ್ಲಿ 'ಅಣ್' ಪ್ರತ್ಯಯವು ಬಂದು 'ಪ್ರಾಜ್ಞ' ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ಪ್ರಾಜ್ಞಶಬ್ದಕ್ಕೆ ಜ್ಞಾತೃತ್ವಾದಿ ಧರ್ಮಗಳುಳ್ಳವನು ಎಂಬರ್ಥ ತಿಳಿಯುತ್ತದೆ.

**श्रुतिरपि परस्य प्रतिकूलैव । महतःपरत्वादिविशिष्टज्ञानस्यैव मोचकत्वोक्तेः ।**

'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯೂ ಕೂಡ ಅದ್ವೈತಿಗಳಿಗೆ ಪ್ರತಿಕೂಲವೇ ಆಗಿದೆ. ಏಕೆಂದರೆ ಮಹತ್ತತ್ವಕ್ಕಿಂತ ಶ್ರೇಷ್ಠನಾಗಿದ್ದಾನೆಂಬ ವಿಶಿಷ್ಟಾಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ಶುದ್ಧಬ್ರಹ್ಮನ ಜ್ಞಾನದಿಂದ ಮೋಕ್ಷವಾಗುತ್ತದೆಂಬ ಅದ್ವೈತ ಮತ ಶ್ರುತಿಗೆ ವಿರುದ್ಧವಾಗಿದೆ.

**यच्चोक्तं त्रयाणामेवाग्निजीवेश्वराणामेवेह प्रकरणे ''सत्वमग्निम्'' इति ''येयं प्रेते'' इति ''अन्यत्र धर्मात्'' इति प्रश्नादुपन्यासाच्च प्रधानं नाव्यक्तशब्दार्थ इति त्रयाणामित्यादिसूत्रार्थ इति ।**

ಆನುಮಾನಿಕಾಧಿಕರಣ (೧-೪-೧)

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಆರನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ -

ಕಾಠಕೋಪನಿಷತ್ತಿನಲ್ಲಿ ನಚಿಕೇತನು ಮೂರರ ಬಗ್ಗೆ ಮಾತ್ರ ಪ್ರಶ್ನಿಸಿದ್ದಾನೆ. 'ಸತ್ವಮಗ್ನಿಮ್' ಎಂಬುದಾಗಿ ಅಗ್ನಿಯ ಬಗ್ಗೆ, 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬುದಾಗಿ ಮರಣವನ್ನು ಹೊಂದಿದ ಜೀವನ ಬಗ್ಗೆ 'ಅನ್ಯತ್ರ ಧರ್ಮಾತ್' ಎಂಬುದರಿಂದ ಬ್ರಹ್ಮನ ಬಗ್ಗೆ ನಚಿಕೇತನು ಪ್ರಶ್ನಿಸಿದ್ದಾನೆ. ಅದಕ್ಕನುಗುಣವಾಗಿ ಯಮನು ಉತ್ತರಿಸಿದ್ದಾನೆ. ಹೀಗಿರುವಾಗ ಜಡಪ್ರಕೃತಿಯ ನಿರೂಪಣೆಯ ಪ್ರಸಂಗವೇ ಇಲ್ಲಿ ಕಾಣಿಸುವುದಿಲ್ಲ. ಇಷ್ಟು ಆರನೆಯ ಸೂತ್ರ ವ್ಯಾಖ್ಯಾನ.

**तन्न, त्रयाणामेव प्रश्नेपि ''इन्द्रियेभ्यः परा ह्यर्थाः'' इत्यादौ त्रयातिरिक्तस्येन्द्रियादेरिव प्रधानस्याप्युक्तिसम्भवात् ।**

ಈ ಸೂತ್ರ ವ್ಯಾಖ್ಯಾನವೂ ಕೂಡ ಸರಿಯಿಲ್ಲ. ಏಕೆಂದರೆ ಶ್ರುತಿಯಲ್ಲಿ ನಚಿಕೇತನು ಮೂರರ ಬಗ್ಗೆ ಮಾತ್ರ ಪ್ರಶ್ನಿಸಿದ್ದರೂ ಉತ್ತರ ನೀಡುವ ವಾಕ್ಯದಲ್ಲಿ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿಯಾಗಿ ಮೂರು ವಿಷಯಗಳಿಗಿಂತ ಅತಿರಿಕ್ತವಾದ ಇಂದ್ರಿಯಾದಿಗಳೂ ಪ್ರಸಕ್ತವಾಗಿವೆ. ಅದರಂತೆ ಪ್ರಕೃತಿಯ ಬಗ್ಗೆಯೂ ಕೂಡ ಹೇಳಿರಬಹುದಲ್ಲವೇ?

**अनन्यार्थतयोक्तिस्तु प्रधानेपि न ''अव्यक्तात् पुरुषः परः'' इति पुरुषोक्त्यर्थमेव तदुक्तेः । अन्यथाऽविद्याया अपि त्रितयातिरिक्तत्वादव्यक्तशब्देनोक्तिर्न स्यात् ।**

ಮುಖ್ಯವಾಗಿ ಇಂದ್ರಿಯಗಳನ್ನು ನಿರೂಪಣೆ ಮಾಡಿಲ್ಲ. ಬ್ರಹ್ಮನ ಬಗ್ಗೆ ಹೇಳಲು ಅಂಗತ್ವೇನ ಇಂದ್ರಿಯಾದಿಗಳನ್ನು ನಿರೂಪಣೆ ಮಾಡಿದ್ದಾನೆಂದು ಉತ್ತರಿಸುವುದಾದರೆ, ಪ್ರಧಾನದಲ್ಲಿಯೂ ಕೂಡ 'ಅವ್ಯಕ್ತಾತ್ ಪುರುಷಃ ಪರಃ' ಎಂಬುದಾಗಿ ಪುರುಷನ ಬಗ್ಗೆ ಹೇಳುವುದಕ್ಕಾಗಿ ಎಂದು ಉತ್ತರಿಸಬಹುದು. ಅಪ್ರಧಾನವಾಗಿ ಪ್ರಧಾನವು ಪ್ರತಿಪಾದ್ಯವೆಂದು ಹೇಳಲು ಯಾವ ಬಾಧಕವೂ ಇಲ್ಲ. ಹೀಗೊಪ್ಪದಿದ್ದರೆ ಅವ್ಯಕ್ತಶಬ್ದದಿಂದ ಅವಿದ್ಯೆಯು ಪ್ರತಿಪಾದ್ಯವೆಂದು ನೀವು ಹೇಳುತ್ತೀರಿ. ಅದೂ ಸಹ ಮೂರು ವಿಷಯಗಳಿಗಿಂತ ಅತಿರಿಕ್ತವಾದ್ದರಿಂದ ಅವ್ಯಕ್ತಶಬ್ದ ಪ್ರತಿಪಾದ್ಯವಾಗಲು ಹೇಗೆ ಸಾಧ್ಯ? ಆದ್ದರಿಂದ ನಿಮ್ಮ ಮಾತು ಸ್ವವಚನ ವಿರೋಧಗ್ರಸ್ತವಾಗಿದೆ.

**किञ्च श्रुतौ ''त्रीन् वरान् वृणीष्व'' इति ''प्रथमं वरं वृणे'' इति ''द्वितीयेन वृणे वरेण'' इति ''वराणामेष वृतस्तृतीयः'' इति च त्रिशब्देन प्रथमादिशब्दैश्चोक्त-पितृसौमनस्याग्नीश्वराणां त्यागेन सौत्रस्य त्रिशब्दस्यान्यपरत्वमयुक्तम् ।**

ಮತ್ತು ಶ್ರುತಿಯಲ್ಲಿ 'ತ್ರೀನ್ ವರಾನ್ ವೃಣಿಷ್ವ' ಎಂದು ಮೂರು ವರಗಳನ್ನು ಬೇಡು ಎಂದು ಯಮನು ಹೇಳಿದಾಗ, ನಚಿಕೇತನು 'ಪ್ರಥಮಂ ವರಂ ವೃಣೇ' ಎಂದು ಮೊದಲನೆಯ ವರವನ್ನು, ತಂದೆಯ ಮನಶ್ಶಾಂತಿಯ ಬಗ್ಗೆ 'ದ್ವಿತಿಯೇನ ವೃಣೇ ವರೇಣ' ಎಂಬುದಾಗಿ ಸ್ವರ್ಗಕಾರಣವಾದ ಅಗ್ನಿಯಲ್ಲಿರುವ ಪರಮಾತ್ಮನ ಬಗ್ಗೆ, 'ವರಾಣಾಮೇಷ ವೃತಸ್ತೃತೀಯಃ' ಎಂಬುದರಿಂದ ಮುಕ್ತನಿಯಾಮಕನಾದ ಪರಮಾತ್ಮನ ಬಗ್ಗೆ ವರವನ್ನು ಕೇಳಿದ್ದಾನೆ. ಆದ್ದರಿಂದ 'ತ್ರಿಶಬ್ದದಿಂದ ಮತ್ತು ಪ್ರಥಮಾದಿಶಬ್ದಗಳಿಂದ ಹೇಳಲ್ಪಟ್ಟ ಪಿತೃಸೌಮನಸ್ಯ ಅಗ್ನಿ ಮತ್ತು ಈಶ್ವರ ಈ ಮೂವರನ್ನು ಬಿಟ್ಟು ಸೂತ್ರದಲ್ಲಿರುವ ತ್ರಿಶಬ್ದಕ್ಕೆ ಬೇರೆ ಅರ್ಥವನ್ನು ನೀವು ಮಾಡುತ್ತಿರುವುದು ಅಯುಕ್ತವಾಗುತ್ತದೆ.

**किञ्च ''येयं प्रेते विचिकित्सा'' इति प्रश्नस्य देहातिरिक्तजीवविषयत्वमयुक्तम् ।**

ಮತ್ತು 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬ ಶ್ರುತಿಗೆ ದೇಹಾತಿರಿಕ್ತನಾದ ಜೀವನ ಬಗ್ಗೆ ಪ್ರಶ್ನಿಸಲಾಗಿದೆ. ಮರಣವನ್ನು ಹೊಂದಿದ ಅನಂತರ ದೇಹಾತಿರಿಕ್ತನಾದ ಜೀವನು ಲೋಕಾಂತರವನ್ನು ಕುರಿತು ಹೋಗುತ್ತಾನೆ. ಅಂತಹ ಜೀವನು ದೇಹಾತಿರಿಕ್ತನಾಗಿ ಇರುತ್ತಾನೆಂದು ಕೆಲವರು ಹೇಳುತ್ತಾರೆ. ಇಲ್ಲವೆಂದು ಇನ್ನು ಕೆಲವರು ಹೇಳುತ್ತಾರೆ. ಆದ್ದರಿಂದ ಲೋಕಾಂತರವನ್ನು ಕುರಿತು ಹೋಗುವ ಜೀವನು ದೇಹಾತಿರಿಕ್ತನಾಗಿ ಇದ್ದಾನೋ, ಇಲ್ಲವೋ ? ಎಂಬುದರ ಬಗ್ಗೆ ನನಗೆ ಉತ್ತರ ನೀಡಿ, ಎಂದು ನಚಿಕೇತನ ಅಭಿಪ್ರಾಯವೆಂದು ನೀವು ವ್ಯಾಖ್ಯಾನ ಮಾಡುತ್ತೀರಿ. ಇದು ಸರಿಯಲ್ಲ.

**नहि मृत्वा यमलोकं गत्वा यमात् पितृसौमनस्यरूपप्रथमवरग्रहणकाल एव ''उभे तीर्त्वा अशनायापिपासे शोकातिगो मोदते स्वर्गलोके'' इत्यादिश्रुतवतः, तथा ''स त्वमग्निं स्वर्ग्यमध्येषि मृत्यो प्रब्रूहि तम्'' इति द्वितीयं वरं याचितवतः, तथा ''स्वर्ग्यमग्निं नचिकेतः प्रजानन्, त्रिकर्मकृत्तरति जन्ममृत्यू'' इत्यादिकं च श्रुतवतः, तथा ''इमा रामाः सरथाः सतूर्याः'' इत्यादिना मृत्युना तैस्तैर्वस्तुभिर्विप्रलोभ्यमानस्यापि तत्त्यागेन ''नान्यं तस्मान्नचिकेतो वृणीते'' इत्यादि वदतो नचिकेतसस्तृतीयवरग्रहणकाले देहातिरिक्तात्मनि सन्देहोऽस्ति ।**

ಸ್ವತಃ ನಚಿಕೇತನೇ ಮರಣವನ್ನು ಹೊಂದಿ ಯಮಲೋಕವನ್ನು ಕುರಿತು ಹೋಗಿರುವಾಗ ದೇಹಾತಿರಿಕ್ತನಾದ ಜೀವನ ಬಗ್ಗೆ ಪ್ರಶ್ನೆ ಬರಲು ಸಾಧ್ಯವೇ ಇಲ್ಲ. ಮತ್ತು ಯಮನ ಬಳಿಯಿಂದ ಪಿತೃಸೌಮನಸ್ಯದ ಬಗ್ಗೆ ಮೊದಲನೆಯ ವರವನ್ನು ಸ್ವೀಕರಿಸುವಾಗ 'ಉಭೇ ತೀರ್ತ್ವಾ ಅಶನಾಯಾಪಿಪಾಸೇ ಶೋಕಾತಿಗೋ ಮೋದತೇ ಸ್ವರ್ಗಲೋಕೇ' ಎಂದು ಕೇಳಿರುತ್ತಾನೆ. ಹಸಿವು, ನೀರಡಿಕೆ, ದುಃಖ ಎಲ್ಲವನ್ನೂ ದಾಟಿ, ಸ್ವರ್ಗಲೋಕದಲ್ಲಿ ಸಂತೋಷ ಪಡುತ್ತಾನೆ ಎಂದು ಇದರ ಅರ್ಥ. ದೇಹವೇ ಆತ್ಮವಾದರೆ ಎಲ್ಲವನ್ನು ದಾಟಿ ಸ್ವರ್ಗಲೋಕವನ್ನು ಪಡೆಯಲು ಹೇಗೆ ಸಾಧ್ಯ ?

ಮತ್ತು ಎರಡನೆಯ ವರವನ್ನು ಕೇಳುವಾಗ 'ಸ ತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಮ್' ಎಂದು ಪ್ರಾರ್ಥಿಸಿದ್ದಾನೆ. ಸ್ವರ್ಗಸಾಧನವಾದ ಅಗ್ನಿಯನ್ನು ಮತ್ತು ಅಂತಹ ಅಗ್ನಿಯಲ್ಲಿರುವ ಪರಮಾತ್ಮನನ್ನು ನೀವು ತಿಳಿದಿದ್ದೀರಾ? ತಿಳಿದಿರುವುದಾದರೆ ಅಂತಹ ಪರಮಾತ್ಮನ ಬಗ್ಗೆ ನನಗೆ ತಿಳಿಸಿರಿ ಎಂದು ಇದರ ಅರ್ಥ. ಇಲ್ಲಿ 'ಸ್ವರ್ಗ' ಎಂಬ ಪದದಿಂದ ಸ್ವರ್ಗಸಾಧನವಾದದ್ದು ಎಂದು ಹೇಳಿದ್ದರಿಂದ, ದೇಹಾತಿರಿಕ್ತನಾದ ಜೀವನಿದ್ದಾನೆಂದು ತಿಳಿಯುತ್ತದೆ. ಮತ್ತು ಯಮನೇ ಸ್ವತಃ 'ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್, ತ್ರಿಕರ್ಮಕೃತ್ತರತಿ ಜನ್ಮಮೃತ್ಯೂ' ಎಂದು ಹೇಳಿದ್ದಾನೆ. ಎಲೈ ನಚಿಕೇತನೇ ! ಸ್ವರ್ಗಸಾಧನವಾದ ಅಗ್ನಿಯನ್ನು ತಿಳಿದವನಾಗಿ ಮೂರು ರೀತಿಯ ಕರ್ಮಗಳನ್ನು ಮಾಡಿದವನಾಗಿ, ಜನ್ಮ ಹಾಗೂ ಮರಣಗಳನ್ನು ದಾಟುವಂತಹವನಾಗು ಎಂದು ಹೇಳಿರುತ್ತಾನೆ. ಇಲ್ಲಿಯೂ ಕೂಡ ಜನ್ಮ ಮತ್ತು ಮರಣಗಳನ್ನು ದಾಟಿ, ಸ್ವರ್ಗವನ್ನು ಪಡೆಯುತ್ತಾನೆಂದು ಹೇಳಿದ್ದರಿಂದ ದೇಹಾತಿರಿಕ್ತನಾದ ಜೀವನಿದ್ದಾನೆಂದು ತಿಳಿಯುತ್ತದೆ. ಮತ್ತು 'ಇಮಾ ರಾಮಾಃ ಸರಥಾಃ ಸ ತೂರ್ಯಾಃ' ಇತ್ಯಾದಿಯಾಗಿ ಮೂರನೆಯ ವರವನ್ನು ಕೇಳಿದ ನಚಿಕೇತನಿಗೆ ಯಮನು ಈ ಸ್ತ್ರೀಯರನ್ನು, ರಥಗಳನ್ನು, ವಾದ್ಯಗಳನ್ನು ಬೇಕಾದರೆ ಸ್ವೀಕರಿಸು, ಆದರೆ ಮೂರನೆಯ ವರವನ್ನು ನೀಡುವುದು ಬಹಳ ಕಠಿಣವಾಗುತ್ತದೆಂದು ಉತ್ತರಿಸಿದ್ದಾನೆ. ಆವಾಗ ನಚಿಕೇತನು ಅಂತಹ ವಸ್ತುಗಳನ್ನು ಯಾಚನೆ ಮಾಡದೇ ಪರಮಾತ್ಮನ ಬಗ್ಗೆಯೇ ವರವನ್ನು ಕೇಳುತ್ತಾನೆಂದು 'ನಾನ್ಯಂ ತಸ್ಮಾನ್ನಚಿಕೇತೋ ವೃಣೀತೇ' ಇತ್ಯಾದಿಯಾಗಿ ಹೇಳಲಾಗಿದೆ. ಹೀಗೆ ಪ್ರಾರ್ಥಿಸುತ್ತಿರುವ ನಚಿಕೇತನು ಮೂರನೆಯ ವರವನ್ನು ಕೇಳುವ ಸಂದರ್ಭದಲ್ಲಿ ದೇಹಾತಿರಿಕ್ತನಾದ ಆತ್ಮನ ವಿಷಯದಲ್ಲಿ ಸಂದೇಹವನ್ನು ಹೊಂದಲು ಸಾಧ್ಯವೇ ಇಲ್ಲ.

**तस्मात् ''येयं प्रेते'' इति प्रश्नो मुक्तनियामकभगवद्विषयः । विस्तृतं चैतत् काठकभाष्ये ।**

ಆದ್ದರಿಂದ 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬ ಪ್ರಶ್ನೆಯು ಮುಕ್ತನಿಯಾಮಕನಾದ ಭಗವದ್ವಿಷಯಕವಾದದ್ದು ಎಂದೇ ತಿಳಿಯಬೇಕು. ಇನ್ನೂ ಹೆಚ್ಚಿನ ವಿಚಾರವನ್ನು ಕಾಠಕಭಾಷ್ಯದಲ್ಲಿ ವಿವರಿಸಲಾಗಿದೆ.

**प्रकाशः –**

मतद्वयेपि 'वदतीति चेन्न प्राज्ञो हि प्रकरणात्' इत्येकं सूत्रम् । तदर्थमनूद्याद्वैतिमते दोषमाह – **यच्चेति** ।।

ವಿವರಣೆ - ಅದ್ವೈತಮತದಲ್ಲಿ ಹಾಗೂ ವಿಶಿಷ್ಟಾದ್ವೈತ ಮತದಲ್ಲಿ 'ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್' ಎಂಬುದು ಒಂದೇ ಸೂತ್ರವಾಗಿದೆ. 'ಪ್ರಕರಣಾತ್' ಎಂಬುದನ್ನು ನಮ್ಮಂತೆ ಇವರು ಪ್ರತ್ಯೇಕ

ಸೂತ್ರವೆಂದು ಪರಿಗಣಿಸುವುದಿಲ್ಲ. ಆದ್ದರಿಂದ ಅವರ ಮತವನ್ನು ಅನುವಾದ ಮಾಡಿ, ಮೊದಲು ಅದ್ವೈತಿಗಳಿಗಿರುವ ದೋಷವನ್ನು 'ಯಚ್ಚ' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡುತ್ತಿದ್ದಾರೆ.

**प्रकाशः** – प्राज्ञशब्दस्य प्रज्ञावद्वाचकत्वे सम्मतिमाह – **प्रज्ञेति** ।। प्रज्ञाशब्दान्मत्वर्थे णप्रत्यये ''तद्धितेष्वचामादेः'' इत्याद्यचो वृद्धौ ''यस्येति च'' इत्यकारलोपे प्राज्ञ इति रूपम् । ''प्रज्ञादिभ्यश्च'' इति स्वार्थिकाण्प्रत्ययान्तत्वे तु लाघवात् प्रज्ञ इत्येवोक्तिस्स्यात् । नतु प्राज्ञ इतीति भावः ।

ಪ್ರಾಜ್ಞಶಬ್ದಕ್ಕೆ ಪ್ರಜ್ಞಾವುಳ್ಳವನು ಜ್ಞಾತೃತ್ವಧರ್ಮವುಳ್ಳವನು ಎಂದರ್ಥ. ಇದಕ್ಕೆ ವ್ಯಾಕರಣಸೂತ್ರದ ಸಮ್ಮತಿಯನ್ನು 'ಪ್ರಜ್ಞಾಶಬ್ದಾನ್ಮತ್ವರ್ಥೇಭ್ಯೋ ಣಃ' ಎಂದಿದ್ದಾರೆ. ಪ್ರಜ್ಞಾಶಬ್ದದ ಮುಂದೆ ಮತ್ವರ್ಥದಲ್ಲಿ 'ಣ' ಎಂಬ ಪ್ರತ್ಯಯವು ಪ್ರಾಪ್ತವಾಗುತ್ತದೆ. ಅನಂತರ 'ಣ್' ಎಂಬುದು 'ಅಚತುರ' ಇತ್ಯಾದಿ ಸೂತ್ರದಿಂದ ಇತ್ತಾದ ಮೇಲೆ 'ಪ್ರಜ್ಞಅ' ಎಂದಾಗುತ್ತದೆ. ಅನಂತರ 'ತದ್ಧಿತೇಷ್ವಚಾಮಾದೇಃ' ಎಂಬ ಸೂತ್ರದಿಂದ ಆದಿವೃದ್ಧಿಯು ಪ್ರಾಪ್ತವಾದಾಗ ಪ್ರಾಜ್ಞಾ ಎಂದಾಗುತ್ತದೆ. ಅನಂತರ 'ಯಸ್ಯೇತಿ ಚ' ಎಂಬ ಸೂತ್ರದಿಂದ ಕೊನೆಯ ಅಕಾರಕ್ಕೆ ಲೋಪವು ಪ್ರಾಪ್ತವಾದರೆ 'ಪ್ರಾಜ್ಞಃ' ಎಂಬ ರೂಪವು ಸಿದ್ಧವಾಗುತ್ತದೆ. ಹೀಗೆ 'ಪ್ರಾಜ್ಞಃ' ಎಂಬ ಪದಕ್ಕೆ ಪ್ರಜ್ಞೆಯುಳ್ಳವನು ಎಂಬರ್ಥವನ್ನೇ ಹೇಳಬೇಕು. ಒಂದು ವೇಳೆ 'ಪ್ರಜ್ಞಾದಿಭ್ಯಶ್ಚ' ಎಂಬ ಸೂತ್ರದಲ್ಲಿ ಸ್ವಾರ್ಥದಲ್ಲಿ 'ಅಣ್' ಪ್ರತ್ಯಯವನ್ನು ಮಾಡುವುದಾದರೆ 'ಪ್ರಜ್ಞಃ' ಎಂದೇ ಹೇಳಬೇಕಿತ್ತು 'ಪ್ರಾಜ್ಞಃ' ಎಂದು ಹೇಳುವ ಅವಶ್ಯಕತೆಯಿರುವುದಿಲ್ಲ.

**प्रकाशः** – परस्य अद्वैतिनः । ''महतः परं ध्रुवम्'' इति श्रवणान्महतः परत्वादिविशिष्टेत्युक्तम् । यद्वा नित्यसापेक्षत्वात् समासः ।

'ಪರಸ್ಯ' ಎಂದರೆ ಅದ್ವೈತಿಗಳಿಗೆ ಎಂದರ್ಥ. ಗ್ರಂಥದಲ್ಲಿ 'ಮಹತ್‌ಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂದು ಹೇಳಬೇಕಿತ್ತೇ ಹೊರತು, 'ಮಹತಃಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂದು ಹೇಳಬಾರದಿತ್ತು. ಏಕೆಂದರೆ 'ಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂಬುದು ಸಮಸ್ತಪದವಾಗಿದೆ. ಇಲ್ಲಿರುವ 'ಪರ' ಎಂದರೆ ಯಾವುದಕ್ಕಿಂತ 'ಪರ' ಎಂಬ ಪ್ರಶ್ನೆಯು ಪ್ರಾಪ್ತವಾಗುತ್ತದೆ. ಆವಾಗ ಮಹತ್ತತ್ವಕ್ಕಿಂತ ಪರವಾದದ್ದು ಎಂಬುದಾಗಿ 'ಮಹತಃ' ಎಂಬ ಹಿಂದಿನ ಪದದಿಂದ ತಿಳಿಯುತ್ತದೆ. ಆದರೆ ಸಮಾಸಾಂತರ್ಗತವಾದ 'ಪರ' ಶಬ್ದವು ಸಮಾಸಕ್ಕಿಂತ ಬಹಿರ್ಭೂತವಾದ 'ಮಹತಃ' ಎಂಬ ಪದದ ಜೊತೆಗೆ ಸಾಪೇಕ್ಷವಾಗುತ್ತದೆ. ಆವಾಗ ಸಾಮರ್ಥ್ಯವಿಲ್ಲದ ಕಾರಣ ಸಮಾಸವಾಗುವುದಿಲ್ಲವಲ್ಲವೇ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ ಕೇವಲ ಅನುಕರಣಕ್ಕಾಗಿ 'ಮಹತಃ ಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂದು ಹೇಳಿದ್ದಾರೆ. ಶ್ರುತಿಯಲ್ಲಿ 'ಮಹತಃ ಪರಂ ಧ್ರುವಮ್' ಎಂದು ಕೇಳಿಸುತ್ತಿದೆ. ಆದ್ದರಿಂದ ಆ ಶ್ರುತಿಯನ್ನು ಜ್ಞಾಪಿಸುವುದಕ್ಕಾಗಿ, ಇಲ್ಲಿಯೂ ಕೂಡ 'ಮಹತಃ ಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂದು ಹೇಳಿರುತ್ತಾರೆ. ಅಥವಾ ನಿತ್ಯಸಾಪೇಕ್ಷವಾದ್ದರಿಂದಲೂ ಸಮಾಸವೆಂದು ಹೇಳಬಹುದು. 'ದೇವದತ್ತಸ್ಯ

ಗುರುಕುಲಂ' ಎಂಬಂತೆ ಇಲ್ಲಿಯೂ ಕೂಡ 'ಕಸ್ಮಾತ್ ಪರಃ' ಎಂಬ ಆಕಾಂಕ್ಷೆಯು ಹುಟ್ಟುವುದರಿಂದ 'ಮಹತಃ ಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂದು ಸಮಾಸ ಮಾಡಬಹುದು.

**प्रकाशः** – ''त्रयाणामेव च' इति सूत्रार्थमद्वैत्यभिमतं निराह – **यच्चेति** ।।

'ತ್ರಯಾಣಾಮೇವಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಸೂತ್ರಕ್ಕೆ ಅದ್ವೈತಿಗಳಿಗೆ ಅಭಿಮತವಾದ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ.

**प्रकाशः** – ''सत्वमग्निं स्वर्ग्यमध्येषि मृत्यो प्रब्रूहि तं श्रद्धधानाय मह्यम्'' इत्यग्निविषयः प्रश्नः । येयं प्रेते विचिकित्सा मनुष्ये अस्तीत्येके नायमस्तीति चैके । एतद्विद्यामनुशिष्टस्त्वयाऽहं वराणामेष वृतस्तृतीयः । इति जीवविषयः । ''अन्यत्र धर्मादन्यत्राधर्मात्'' इति तु परमात्मविषयो बोध्यः ।

'ಸತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ ಶ್ರದ್ಧಧಾನಾಯ ಮಹ್ಯಮ್' ಎಂಬುದು ಅಗ್ನಿವಿಷಯಕವಾದ ಪ್ರಶ್ನೆಯಾಗಿದೆ. ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ। ಏತದ್ವಿದ್ಯಾಮನುಶಿಷ್ಟಸ್ತ್ವಯಾऽಹಂ ವರಾಣಾಮೇಷ ವೃತಸ್ತೃತೀಯಃ' ಎಂಬುದು ಜೀವವಿಷಯಕವಾದ ಪ್ರಶ್ನೆಯಾಗಿದೆ. 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಎಂಬುದು ಪರಮಾತ್ಮವಿಷಯಕವಾದ ಪ್ರಶ್ನೆಯಾಗಿದೆ.

**प्रकाशः** – **उपन्यासादिति** ।। ''लोकादिमग्निं तमुवाच तस्मै या इष्टका यावतीर्वा यथा वा'' इत्यग्निविषयः । ''हन्त त इदं प्रवक्ष्यामि गुह्यं ब्रह्म सनातनम् । यथामरणं प्राप्यात्मा भवति गौतम'' इति जीवविषयः । ''न जायते म्रियते वा विपश्चित्'' इत्यादिपरमात्मविषय उपन्यासो ध्येयः ।

'ಉಪನ್ಯಾಸಾತ್' ಎಂದರೆ ಮೇಲಿನ ಪ್ರಶ್ನೆಗಳಿಗೆ ಯಮದೇವರು 'ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ' ಎಂಬುದರಿಂದ ಅಗ್ನಿವಿಷಯಕವಾಗಿ ಉತ್ತರಿಸಿದ್ದಾರೆ. 'ಹಂತ ತೇ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ । ಯಥಾಮರಣಂ ಪ್ರಾಪ್ಯಾತ್ಮಾ ಭವತಿ ಗೌತಮ' ಎಂಬುದರಿಂದ ಜೀವವಿಷಯಕವಾಗಿ ಉತ್ತರಿಸಿದ್ದಾರೆ. 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಎಂಬುದರಿಂದ ಪರಮಾತ್ಮವಿಷಯಕವಾಗಿ ಉತ್ತರಿಸಿದ್ದಾರೆಂದು ತಿಳಿಯಬೇಕು.

**प्रकाशः** – अपृष्टस्योक्तिरेवायुक्तेति प्रधानमव्यक्तशब्देन नोच्यत इत्युच्यतेऽथ प्राधान्येनोक्तिरयुक्तेति । आद्य आह – **त्रयाणामिति** ।।

'ನಾಪೃಷ್ಟಃ ಕಸ್ಯಚಿದ್ ಬ್ರೂಯಾತ್' ಎಂಬ ಮಾತಿನಂತೆ ಪ್ರಶ್ನೆ ಮಾಡದವನಿಗೆ ಉತ್ತರಿಸಬಾರದು. ಆದ್ದರಿಂದ ನಚಿಕೇತನು ಪ್ರಧಾನದ ಬಗ್ಗೆ ಪ್ರಶ್ನೆಯನ್ನೇ ಮಾಡಿಲ್ಲದ ಕಾರಣ, ಅವ್ಯಕ್ತಶಬ್ದದಿಂದ ಪ್ರಧಾನವನ್ನು ಹೇಳಬಾರದೆಂದು ನಿಮ್ಮ ಅಭಿಪ್ರಾಯವೋ? ಅಥವಾ ಪ್ರಧಾನವನ್ನು ಮುಖ್ಯವಾಗಿ ಹೇಳುವುದು

ಅಯುಕ್ತವಾಗುತ್ತದೆಂಬುದು ನಿಮ್ಮ ಅಭಿಪ್ರಾಯವೋ? ಮೊದಲನೆಯ ಪಕ್ಷದಲ್ಲಿ 'ತ್ರಯಾಣಾಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – अन्त्यात्वसिद्धेत्याह – **अनन्यार्थतयेति** ।। इन्द्रियादेरर्थाद्युत्त्यर्थं कथनेपि प्रधानस्य किमर्थमुक्तिरित्यत आह – **अव्यक्तादिति** ।। **अन्यथेति** ।। अपृष्टस्य कथञ्चिदप्युत्त्ययोग इत्यर्थः ।

ಪ್ರಧಾನವನ್ನು ಮುಖ್ಯವಾಗಿ ಹೇಳಿಲ್ಲ ಎಂಬುದಂತೂ ಅಸಿದ್ಧವಾಗಿದೆಯೆಂಬುದನ್ನು 'ಅನನ್ಯಾರ್ಥತಯಾ' ಎಂಬುದರಿಂದ ಹೇಳಿದ್ದಾರೆ. ಅರ್ಥಾದಿಗಳಿಗೆ ಪರತ್ವವನ್ನು ಹೇಳುವುದಕ್ಕಾಗಿ, ಇಂದ್ರಿಯಾದಿಗಳನ್ನು ಹೇಳಿದ್ದಾರೆ. ಪ್ರಧಾನಕ್ಕೆ ಪರತ್ವವನ್ನು ಹೇಳುವುದಕ್ಕಾಗಿ ಅರ್ಥವನ್ನು ಹೇಳಿದ್ದಾರೆ. ಆದರೆ ಪ್ರಧಾನವನ್ನು ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ 'ಅವ್ಯಕ್ತಾತ್' ಎಂಬುದರಿಂದ ಉತ್ತರಿಸಿದ್ದಾರೆ. ಪುರುಷನಿಗೆ ಪರತ್ವವನ್ನು ಹೇಳುವುದಕ್ಕಾಗಿ ಅವ್ಯಕ್ತವನ್ನು ಹೇಳಿದ್ದಾರೆಂದು ಅಭಿಪ್ರಾಯ. 'ಪ್ರಶ್ನೆ ಮಾಡದವನಿಗೆ ಅವಿದ್ಯೆಯ ಬಗ್ಗೆ ಉತ್ತರಿಸುವುದು ತಪ್ಪಾಗುತ್ತದೆಂದು ಹೇಳುವುದಾದರೆ' ಎಂಬುದನ್ನು 'ಅನ್ಯಥಾ' ಎಂಬ ಪದವು ಹೇಳುತ್ತದೆ.

**प्रकाशः** – प्रश्नोपन्यासाभ्यां सिसाधयिषितमर्थं निरस्य तयोरग्निजीवेश्वरपरत्व-वर्णनं चायुक्तमित्याह – **किञ्चेति** ।।

ಪ್ರಶ್ನೆ ಹಾಗೂ ಉತ್ತರದ ವಾಕ್ಯಗಳಿಂದ ಅವ್ಯಕ್ತಶಬ್ದದಿಂದ ಪ್ರಕೃತಿಯನ್ನು ತೆಗೆದುಕೊಳ್ಳಬಾರದೆಂಬ ಅರ್ಥವನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಪ್ರಶ್ನೆ ಹಾಗೂ ಉಪನ್ಯಾಸಗಳಿಗೆ ಅದ್ವೈತಿಗಳು ಮಾಡಿರುವ ಅಗ್ನಿ, ಜೀವ ಹಾಗೂ ಈಶ್ವರಪರವಾದ ವ್ಯಾಖ್ಯಾನವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः** – वृणीष्वेति यमेनोक्तो नचिकेता ब्रूते ''त्वत्प्रसृष्टं माभिवदेत् प्रतीत एतत्त्रयाणां प्रथमं वरं वृणे । यथा पुरस्ताद्भविता प्रतीत औद्दालकिरारुणिर्मत्प्रसृष्टः'' इति । तथा ''सत्वमग्निं स्वर्ग्यमध्येषि मृत्यो प्रब्रूहि तं श्रद्दधानाय मह्यम् । स्वर्गलोका अमृतत्वं भजन्ते एतद्द्वितीयेन वृणे वरेण'' इति । तथा ''येयं प्रेते विचिकित्सा मनुष्येऽस्तीत्येके नायमस्तीति चैके । एतद्विद्यामनुशिष्टस्त्वयाऽहं वराणामेष वृतस्तृतीय'' इति च । तथाचास्मद्दिशा तत्त्रितयपरत्वे सम्भवत्यनेवं-रूपाग्निजीवेश्वरपरत्वमयुक्तमित्यर्थः ।

'ವೃಣೀಷ್ವ' ಎಂಬುದಾಗಿ ಯಮನು ವರವನ್ನು ಕೇಳಿದನೆಂದು ನಚಿಕೇತನಿಗೆ ಹೇಳಿದಾಗ,

'ತ್ವತ್ಪ್ರಸೃಷ್ಟಂ ಮಾಭಿವದೇತ್ ಪ್ರತೀತ ಏತತ್ತ್ರಯಾಣಾಂ ಪ್ರಥಮಂ ವರಂ ವೃಣೇ ।
ಯಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ ॥
ಆನುಮಾನಿಕಾಧಿಕರಣ (೧-೪-೧)

ಗುರುಕುಲಂ' ಎಂಬಂತೆ ಇಲ್ಲಿಯೂ ಕೂಡ 'ಕಸ್ಮಾತ್ ಪರಃ' ಎಂಬ ಆಕಾಂಕ್ಷೆಯು ಹುಟ್ಟುವುದರಿಂದ 'ಮಹತಃ ಪರತ್ವಾದಿವಿಶಿಷ್ಟಜ್ಞಾನಸ್ಯೈವ' ಎಂದು ಸಮಾಸ ಮಾಡಬಹುದು.

**प्रकाशः** – ''त्रयाणामेव च' इति सूत्रार्थमद्वैत्यभिमतं निराह – **यच्चेति** ।।

'ತ್ರಯಾಣಾಮೇವಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಸೂತ್ರಕ್ಕೆ ಅದ್ವೈತಿಗಳಿಗೆ ಅಭಿಮತವಾದ ಅರ್ಥವನ್ನು ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ಗ್ರಂಥದಿಂದ.

**प्रकाशः** – ''सत्वमग्निं स्वर्ग्यमध्येषि मृत्यो प्रब्रूहि तं श्रद्धधानाय मह्यम्'' इत्यग्निविषयः प्रश्नः । येयं प्रेते विचिकित्सा मनुष्ये अस्तीत्येके नायमस्तीति चैके । एतद्विद्यामनुशिष्टस्त्वयाऽहं वराणामेष वृतस्तृतीयः । इति जीवविषयः । ''अन्यत्र धर्मादन्यत्राधर्मात्'' इति तु परमात्मविषयो बोध्यः ।

'ಸತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ ಶ್ರದ್ಧಧಾನಾಯ ಮಹ್ಯಮ್' ಎಂಬುದು ಅಗ್ನಿವಿಷಯಕವಾದ ಪ್ರಶ್ನೆಯಾಗಿದೆ. ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ। ಏತದ್ವಿದ್ಯಾಮನುಶಿಷ್ಟಸ್ತ್ವಯಾऽಹಂ ವರಾಣಾಮೇಷ ವೃತಸ್ತೃತೀಯಃ' ಎಂಬುದು ಜೀವವಿಷಯಕವಾದ ಪ್ರಶ್ನೆಯಾಗಿದೆ. 'ಅನ್ಯತ್ರ ಧರ್ಮಾದನ್ಯತ್ರಾಧರ್ಮಾತ್' ಎಂಬುದು ಪರಮಾತ್ಮವಿಷಯಕವಾದ ಪ್ರಶ್ನೆಯಾಗಿದೆ.

**प्रकाशः** – **उपन्यासादिति** ।। ''लोकादिमग्निं तमुवाच तस्मै या इष्टका यावतीर्वा यथा वा'' इत्यग्निविषयः । ''हन्त त इदं प्रवक्ष्यामि गुह्यं ब्रह्म सनातनम् । यथामरणं प्राप्यात्मा भवति गौतम'' इति जीवविषयः । ''न जायते म्रियते वा विपश्चित्'' इत्यादिपरमात्मविषय उपन्यासो ध्येयः ।

'ಉಪನ್ಯಾಸಾತ್' ಎಂದರೆ ಮೇಲಿನ ಪ್ರಶ್ನೆಗಳಿಗೆ ಯಮದೇವರು 'ಲೋಕಾದಿಮಗ್ನಿಂ ತಮುವಾಚ ತಸ್ಮೈ ಯಾ ಇಷ್ಟಕಾ ಯಾವತೀರ್ವಾ ಯಥಾ ವಾ' ಎಂಬುದರಿಂದ ಅಗ್ನಿವಿಷಯಕವಾಗಿ ಉತ್ತರಿಸಿದ್ದಾರೆ. 'ಹಂತ ತೇ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ । ಯಥಾಮರಣಂ ಪ್ರಾಪ್ಯಾತ್ಮಾ ಭವತಿ ಗೌತಮ' ಎಂಬುದರಿಂದ ಜೀವವಿಷಯಕವಾಗಿ ಉತ್ತರಿಸಿದ್ದಾರೆ. 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಎಂಬುದರಿಂದ ಪರಮಾತ್ಮವಿಷಯಕವಾಗಿ ಉತ್ತರಿಸಿದ್ದಾರೆಂದು ತಿಳಿಯಬೇಕು.

**प्रकाशः** – अपृष्टस्योक्तिरेवायुक्तेति प्रधानमव्यक्तशब्देन नोच्यत इत्युच्यतेऽथ प्राधान्येनोक्तिरयुक्तेति । आद्य आह – **त्रयाणामिति** ।।

'ನಾಪೃಷ್ಟಃ ಕಸ್ಯಚಿದ್ ಬ್ರೂಯಾತ್' ಎಂಬ ಮಾತಿನಂತೆ ಪ್ರಶ್ನೆ ಮಾಡದವನಿಗೆ ಉತ್ತರಿಸಬಾರದು. ಆದ್ದರಿಂದ ನಚಿಕೇತನು ಪ್ರಧಾನದ ಬಗ್ಗೆ ಪ್ರಶ್ನೆಯನ್ನೇ ಮಾಡಿಲ್ಲದ ಕಾರಣ, ಅವ್ಯಕ್ತಶಬ್ದದಿಂದ ಪ್ರಧಾನವನ್ನು ಹೇಳಬಾರದೆಂದು ನಿಮ್ಮ ಅಭಿಪ್ರಾಯವೋ? ಅಥವಾ ಪ್ರಧಾನವನ್ನು ಮುಖ್ಯವಾಗಿ ಹೇಳುವುದು

ಅಯುಕ್ತವಾಗುತ್ತದೆಂಬುದು ನಿಮ್ಮ ಅಭಿಪ್ರಾಯವೋ? ಮೊದಲನೆಯ ಪಕ್ಷದಲ್ಲಿ 'ತ್ರಯಾಣಾಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – अन्त्यात्वसिद्धेत्याह – **अनन्यार्थतयेति** ।। इन्द्रियादेरर्थाद्युत्त्यर्थं कथनेपि प्रधानस्य किमर्थमुक्तिरित्यत आह – **अव्यक्तादिति** ।। **अन्यथेति** ।। अपृष्टस्य कथञ्चिदप्युत्तययोग इत्यर्थः ।

ಪ್ರಧಾನವನ್ನು ಮುಖ್ಯವಾಗಿ ಹೇಳಿಲ್ಲ ಎಂಬುದಂತೂ ಅಸಿದ್ಧವಾಗಿದೆಯೆಂಬುದನ್ನು 'ಅನನ್ಯಾರ್ಥತಯಾ' ಎಂಬುದರಿಂದ ಹೇಳಿದ್ದಾರೆ. ಅರ್ಥಾದಿಗಳಿಗೆ ಪರತ್ವವನ್ನು ಹೇಳುವುದಕ್ಕಾಗಿ, ಇಂದ್ರಿಯಾದಿಗಳನ್ನು ಹೇಳಿದ್ದಾರೆ. ಪ್ರಧಾನಕ್ಕೆ ಪರತ್ವವನ್ನು ಹೇಳುವುದಕ್ಕಾಗಿ ಅರ್ಥವನ್ನು ಹೇಳಿದ್ದಾರೆ. ಆದರೆ ಪ್ರಧಾನವನ್ನು ಏಕೆ ಹೇಳಿದ್ದಾರೆ? ಎಂಬ ಪ್ರಶ್ನೆಗೆ 'ಅವ್ಯಕ್ತಾತ್' ಎಂಬುದರಿಂದ ಉತ್ತರಿಸಿದ್ದಾರೆ. ಪುರುಷನಿಗೆ ಪರತ್ವವನ್ನು ಹೇಳುವುದಕ್ಕಾಗಿ ಅವ್ಯಕ್ತವನ್ನು ಹೇಳಿದ್ದಾರೆಂದು ಅಭಿಪ್ರಾಯ. 'ಪ್ರಶ್ನೆ ಮಾಡದವನಿಗೆ ಅವಿದ್ಯೆಯ ಬಗ್ಗೆ ಉತ್ತರಿಸುವುದು ತಪ್ಪಾಗುತ್ತದೆಂದು ಹೇಳುವುದಾದರೆ' ಎಂಬುದನ್ನು 'ಅನ್ಯಥಾ' ಎಂಬ ಪದವು ಹೇಳುತ್ತದೆ.

**प्रकाशः** – प्रश्नोपन्यासाभ्यां सिसाधयिषितमर्थं निरस्य तयोरग्निजीवेश्वरपरत्व-वर्णनं चायुक्तमित्याह – **किञ्चेति** ।।

ಪ್ರಶ್ನೆ ಹಾಗೂ ಉತ್ತರದ ವಾಕ್ಯಗಳಿಂದ ಅವ್ಯಕ್ತಶಬ್ದದಿಂದ ಪ್ರಕೃತಿಯನ್ನು ತೆಗೆದುಕೊಳ್ಳಬಾರದೆಂಬ ಅರ್ಥವನ್ನು ಇಲ್ಲಿಯತನಕ ನಿರಾಕರಣೆ ಮಾಡಿದ್ದಾಯಿತು. ಪ್ರಕೃತ ಪ್ರಶ್ನೆ ಹಾಗೂ ಉಪನ್ಯಾಸಗಳಿಗೆ ಅದ್ವೈತಿಗಳು ಮಾಡಿರುವ ಅಗ್ನಿ, ಜೀವ ಹಾಗೂ ಈಶ್ವರಪರವಾದ ವ್ಯಾಖ್ಯಾನವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः** – वृणीष्वेति यमेनोक्तो नचिकेता ब्रूते "त्वत्प्रसृष्टं माभिवदेत् प्रतीत एतत्त्रयाणां प्रथमं वरं वृणे । यथा पुरस्ताद्भविता प्रतीत औद्दालकिरारुणिर्मत्प्रसृष्टः" इति । तथा "सत्वमग्निं स्वर्ग्यमध्येषि मृत्यो प्रब्रूहि तं श्रद्दधानाय मह्यम् । स्वर्गलोका अमृतत्वं भजन्ते एतद्द्वितीयेन वृणे वरेण" इति । तथा "येयं प्रेते विचिकित्सा मनुष्येऽस्तीत्येके नायमस्तीति चैके । एतद्विद्यामनुशिष्टस्त्वयाऽहं वराणामेष वृतस्तृतीय" इति च । तथाचास्मद्दिशा तत्त्रितयपरत्वे सम्भवत्यनेवं-रूपाग्निजीवेश्वरपरत्वमयुक्तमित्यर्थः ।

'ವೃಣೀಷ್ವ' ಎಂಬುದಾಗಿ ಯಮನು ವರವನ್ನು ಕೇಳಿದನೆಂದು ನಚಿಕೇತನಿಗೆ ಹೇಳಿದಾಗ,

'ತ್ವತ್ಪ್ರಸೃಷ್ಟಂ ಮಾಭಿವದೇತ್ ಪ್ರತೀತ ಏತತ್ತ್ರಯಾಣಾಂ ಪ್ರಥಮಂ ವರಂ ವೃಣೇ ।
ಯಥಾ ಪುರಸ್ತಾದ್ಭವಿತಾ ಪ್ರತೀತ ಔದ್ದಾಲಕಿರಾರುಣಿರ್ಮತ್ಪ್ರಸೃಷ್ಟಃ ॥

ಎಂಬುದಾಗಿ ಮೊದಲನೆಯ ವರವನ್ನು ಅದರಂತೆ "ಸತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಂ ಶ್ರದ್ಧಧಾನಾಯ ಮಹ್ಯಮ್ ಸ್ವರ್ಗಲೋಕಾ ಅಮೃತತ್ವಂ ಭಜಂತೇ ಏತದ್ದ್ವಿತೀಯೇನ ವೃಣೇ ವರೇಣ" ಎಂಬುದರಿಂದ ಎರಡನೆಯ ವರವನ್ನು, ಅದರಂತೆ 'ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇಽಸ್ತೀತ್ಯೇಕೇ ನಾಯಮಸ್ತೀತಿ ಚೈಕೇ । ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಂ ವರಾಣಾಮೇಷ ವೃತಸ್ತೃತೀಯಃ' ಎಂಬುದರಿಂದ ಮೂರನೆಯ ವರವನ್ನು ಕೇಳಿರುತ್ತಾನೆ. ಈ ಮೂರು ವಾಕ್ಯಗಳಿಗೆ ನಾವು ಹೇಳುವಂತೆ ವ್ಯಾಖ್ಯಾನ ಮಾಡುವುದೇ ಸೂಕ್ತವಾಗುತ್ತದೆ. ಅದನ್ನು ಬಿಟ್ಟು ಅಗ್ನಿ, ಜೀವ ಹಾಗೂ ಈಶ್ವರಪರತ್ವವನ್ನು ಹೇಳುವುದು ತಪ್ಪಾಗುತ್ತದೆಂದು ಅಭಿಪ್ರಾಯ.

**प्रकाशः** – ननु पितृसौमनस्यादेर्वरत्वेन प्रार्थनस्यैव श्रवणात्कथं प्रश्नतेति चेन्न । ''अविज्ञातप्रार्थनं च प्रश्न इत्यभिधीयते'' इति भाष्य एव परिहृतत्वात् ।

ಪಿತೃಸೌಮನಸ್ಯಾದಿಗಳನ್ನು ವರವೆಂದು ನಚಿಕೇತನು ಪ್ರಾರ್ಥನೆ ಮಾಡಿದ್ದಾನೆ. ಹೀಗಿರುವಾಗ ಅದರ ಬಗ್ಗೆ ಪ್ರಶ್ನೆಯೆಂದು ವ್ಯಾಖ್ಯಾನ ಮಾಡುವುದು ಹೇಗೆ ಯುಕ್ತವಾಗುತ್ತದೆ ? ಎಂದು ಆಶಂಕಿಸಬಾರದು. ಏಕೆಂದರೆ 'ಅವಿಜ್ಞಾತಪ್ರಾರ್ಥನಂ ಚ ಪ್ರಶ್ನ ಇತ್ಯಭಿಧೀಯತೇ' ತಿಳಿಯದರ ಬಗ್ಗೆ ಪ್ರಾರ್ಥನೆ ಮಾಡುವುದೂ ಕೂಡ ಪ್ರಶ್ನೆಯೆಂದೇ ಕರೆಸಿಕೊಳ್ಳುತ್ತದೆ ಎಂಬುದಾಗಿ ಉಪನಿಷದ್ಭಾಷ್ಯದಲ್ಲಿ ಇದಕ್ಕೆ ಪರಿಹಾರವನ್ನು ನೀಡಿರುತ್ತಾರೆ.

**प्रकाशः** – ननु तथापि ''येयं प्रेते'' इति तृतीयप्रश्नस्य मृतजीवास्तित्वविषयतया कथमीश्वरविषयत्वमित्यतः काठकभाष्योक्तदिशा परमतखण्डनपूर्वं तत्साधयति ।। किञ्चेति ।।

ಆದರೂ ಸಹ 'ಯೇಯಂ ಪ್ರೇತೇ' ಎಂಬ ಮೂರನೆಯ ಪ್ರಶ್ನೆಯು ಮೃತನಾದ ಜೀವನಿಗೆ ಅಸ್ತಿತ್ವ ಇದೆಯೋ? ಇಲ್ಲವೋ? ಎಂದು ಇರುವುದರಿಂದ ಈಶ್ವರವಿಷಯಕವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ ಕಾಠಕಭಾಷ್ಯದಲ್ಲಿ ಹೇಳಿದಂತೆ ಪರಮತಖಂಡನ ಪೂರ್ವಕವಾಗಿ ಸ್ವಮತವನ್ನು ಸ್ಥಾಪನೆ ಮಾಡುತ್ತಿದ್ದಾರೆಂದು 'ಕಿಂಚ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.




ಅದ್ವೈತಿಗಳು 'ವದತೀತಿ ಚೇನ್ನ ಪ್ರಾಜ್ಞೋ ಹಿ ಪ್ರಕರಣಾತ್' ಐದನೆಯ ಸೂತ್ರಕ್ಕೆ ಹೀಗೆ ವ್ಯಾಖ್ಯಾನಿಸಿದ್ದಾರೆ -

''ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ಶ್ರುತಿಯು ಪ್ರಕೃತಿಗೆ ಉತ್ತಮತ್ವವನ್ನು ಹೇಳುತ್ತಿದೆ. ಆದ್ದರಿಂದ ಪ್ರಕೃತಿಯೇ ಜ್ಞೇಯವಾಗುತ್ತದೆ. ಇಷ್ಟು ಪೂರ್ವಪಕ್ಷ. 'ಮಹತಃ ಪರಮ್' ಎಂಬುದಾಗಿ ಬ್ರಹ್ಮನನ್ನು ಹೇಳಿ,

ಅವನಲ್ಲಿ ಜ್ಞೇಯತ್ವವನ್ನು ಹೇಳುತ್ತಿರುವುದರಿಂದ ಪ್ರಕೃತಿಯು ಜ್ಞೇಯವಲ್ಲ. 'ಸಾ ಕಾಷ್ಠಾ ಸಾ ಪರಾ ಗತಿಃ' ಎಂಬುದಾಗಿ ಇದು ಬ್ರಹ್ಮನ ಪ್ರಕರಣವೇ ಪ್ರಕರಣವೇ ಆಗಿರುತ್ತದೆ. ಇಷ್ಟು ಸಿದ್ಧಾಂತ.

ಅದ್ವೈತಿಗಳ ಈ ವ್ಯಾಖ್ಯಾನ ತಪ್ಪು. ಏಕೆಂದರೆ ಅದ್ವೈತ ಮತದಲ್ಲಿ ಜ್ಞಾತೃತ್ವಾದಿ ಧರ್ಮಗಳಿಂದ ರಹಿತನಾದ, ಶುದ್ಧನಾದ ತುರೀಯ ಬ್ರಹ್ಮನ ಜ್ಞಾನವೇ ಮೋಕ್ಷಕ್ಕೆ ಕಾರಣವೆಂದು ಒಪ್ಪಲಾಗಿದೆ. ಆದರೆ ಸೂತ್ರದಲ್ಲಿ ಜ್ಞಾತೃತ್ವಾದಿ ಧರ್ಮಗಳನ್ನು ಹೇಳುವಂತಹ 'ಪ್ರಜ್ಞಾವತ್' ಎಂಬ ಅರ್ಥದಲ್ಲಿರುವ 'ಪ್ರಾಜ್ಞಾ' ಎಂಬ ಪದವನ್ನು ಪ್ರಯೋಗಿಸಲಾಗಿದೆ. 'ಮಹತಃ ಪರಮವ್ಯಕ್ತಮ್' ಎಂಬ ಶ್ರುತಿಯೂ ಕೂಡ ಅದ್ವೈತಿಗಳಿಗೆ ಪ್ರತಿಕೂಲವೇ ಆಗಿದೆ. ಏಕೆಂದರೆ ಮಹತ್ತತ್ವಕ್ಕಿಂತ ಶ್ರೇಷ್ಠನಾಗಿದ್ದಾನೆಂಬ ವಿಶಿಷ್ಟಾಜ್ಞಾನದಿಂದಲೇ ಮೋಕ್ಷವು ದೊರೆಯುತ್ತದೆಂದು ಶ್ರುತಿ ಹೇಳುತ್ತಿದೆ. ಹೀಗಿರುವಾಗ ಶುದ್ಧಬ್ರಹ್ಮನ ಜ್ಞಾನದಿಂದ ಮೋಕ್ಷವಾಗುತ್ತದೆಂಬ ಅದ್ವೈತ ಮತ ಶ್ರುತಿಗೆ ವಿರುದ್ಧವಾಗಿದೆ.

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಎಂಬ ಆರನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ -

ಕಾಠಕೋಪನಿಷತ್ತಿನಲ್ಲಿ ನಚಿಕೇತನು ಮೂರರ ಬಗ್ಗೆ ಮಾತ್ರ ಪ್ರಶ್ನಿಸಿದ್ದಾನೆ. 'ಸತ್ವಮಗ್ನಿಮ್' ಎಂಬುದಾಗಿ ಅಗ್ನಿಯ ಬಗ್ಗೆ, 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬುದಾಗಿ ಮರಣವನ್ನು ಹೊಂದಿದ ಜೀವನ ಬಗ್ಗೆ 'ಅನ್ಯತ್ರ ಧರ್ಮಾತ್' ಎಂಬುದರಿಂದ ಬ್ರಹ್ಮನ ಬಗ್ಗೆ ನಚಿಕೇತನು ಪ್ರಶ್ನಿಸಿದ್ದಾನೆ. ಅದಕ್ಕನುಗುಣವಾಗಿ ಯಮನು ಉತ್ತರಿಸಿದ್ದಾನೆ. ಹೀಗಿರುವಾಗ ಜಡಪ್ರಕೃತಿಯ ನಿರೂಪಣೆಯ ಪ್ರಸಂಗವೇ ಇಲ್ಲಿ ಕಾಣಿಸುವುದಿಲ್ಲ. ಇಷ್ಟು ಆರನೆಯ ಸೂತ್ರ ವ್ಯಾಖ್ಯಾನ.

ಈ ಸೂತ್ರ ವ್ಯಾಖ್ಯಾನವೂ ಕೂಡ ಸರಿಯಿಲ್ಲ. ಏಕೆಂದರೆ ಶ್ರುತಿಯಲ್ಲಿ ನಚಿಕೇತನು ಮೂರರ ಬಗ್ಗೆ ಮಾತ್ರ ಪ್ರಶ್ನಿಸಿದ್ದರೂ ಉತ್ತರ ನೀಡುವ ವಾಕ್ಯದಲ್ಲಿ 'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಇತ್ಯಾದಿಯಾಗಿ ಮೂರು ವಿಷಯಗಳಿಗಿಂತ ಅತಿರಿಕ್ತವಾದ ಇಂದ್ರಿಯಾದಿಗಳೂ ಪ್ರಸಕ್ತವಾಗಿವೆ.

ಮತ್ತು ಶ್ರುತಿಯಲ್ಲಿ 'ತ್ರೀನ್ ವರಾನ್ ವೃಣೀಷ್ವ' ಎಂದು ಮೂರು ವರಗಳನ್ನು ಬೇಡು ಎಂದು ಯಮನು ಹೇಳಿದಾಗ, ನಚಿಕೇತನು 'ಪ್ರಥಮಂ ವರಂ ವೃಣೇ' ಎಂದು ಮೊದಲನೆಯ ವರವನ್ನು, ತಂದೆಯ ಮನಶ್ಶಾಂತಿಯ ಬಗ್ಗೆ 'ದ್ವಿತಿಯೇನ ವೃಣೇ ವರೇಣ' ಎಂಬುದಾಗಿ ಸ್ವರ್ಗಕಾರಣವಾದ ಅಗ್ನಿಯಲ್ಲಿರುವ ಪರಮಾತ್ಮನ ಬಗ್ಗೆ, 'ವರಾಣಾಮೇಷ ವೃತಸ್ತೃತೀಯಃ' ಎಂಬುದರಿಂದ ಮುಕ್ತನಿಯಾಮಕನಾದ ಪರಮಾತ್ಮನ ಬಗ್ಗೆ ವರವನ್ನು ಕೇಳಿದ್ದಾನೆ. ಆದ್ದರಿಂದ 'ತ್ರಿಶಬ್ದದಿಂದ ಮತ್ತು ಪ್ರಶ್ನಾದಿಶಬ್ದಗಳಿಂದ ಹೇಳಲ್ಪಟ್ಟ ಪಿತೃಸೌಮನಸ್ಯ, ಅಗ್ನಿ ಮತ್ತು ಈಶ್ವರ ಈ ಮೂವರನ್ನು ಬಿಟ್ಟು ಸೂತ್ರದಲ್ಲಿರುವ ತ್ರಿಶಬ್ದಕ್ಕೆ ಬೇರೆ ಅರ್ಥವನ್ನು ನೀವು ಮಾಡುತ್ತಿರುವುದು ಅಯುಕ್ತವಾಗುತ್ತದೆ. ಆದ್ದರಿಂದ 'ಯೇಯಂ ಪ್ರೇತೇ ವಿಚಿಕಿತ್ಸಾ' ಎಂಬ ಪ್ರಶ್ನೆಯು ಮುಕ್ತನಿಯಾಮಕನಾದ ಭಗವದ್ವಿಷಯಕವಾದದ್ದು ಎಂದೇ ತಿಳಿಯಬೇಕು. ಇನ್ನೂ ಹೆಚ್ಚಿನ ವಿಚಾರವನ್ನು ಕಾಠಕಭಾಷ್ಯದಲ್ಲಿ ವಿವರಿಸಲಾಗಿದೆ.



ಆನುಮಾನಿಕಾಧಿಕರಣ (೧-೪-೧)

## ರಾಮಾನುಜರ ಸೂತ್ರಾರ್ಥ ವಿಮರ್ಶೆ

**तात्पर्यचन्द्रिका**

**केचित्तु ''अन्यत्र धर्मादन्यत्राधर्मादन्यत्रास्मात् कृताकृतात् । अन्यत्र भूताच्च भव्याच्च यत्तत्पश्यसि तद्वद'' इति प्रश्नश्लोके धर्मशब्दस्य प्रसिद्धोपायपरत्वादधर्मशब्दस्य च प्रसिद्धोपेयपरत्वादस्मादित्यस्य च बुद्धिस्थोपेतृपरत्वादन्यत्रशब्देन च वैलक्षण्योक्तेः प्रसिद्धोपायोपेतृविलक्षणानामप्रसिद्धोपायादीनां त्रयाणां पृष्टत्वात्, ''यमेवैष वृणुते तेन लभ्यः'' इति च भक्तिरूपस्योपायस्य ''अणोरणीयान्'' इत्यादिनोपेयस्य विष्णोः ''न जायते म्रियते वा विपश्चित्'' इत्यादिनोपेतुजीवस्योपन्यासात् सौत्रं त्रयाणामिति पदमुपायादित्रयपरमित्याहुः ।**

ಅನುವಾದ - ರಾಮಾನುಜರ ಸೂತ್ರ ವ್ಯಾಖ್ಯಾನ ಹೀಗಿದೆ -

ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ ।
ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥

ಎಂಬುದು ವಿಷ್ಣುಪರವಾದ ಶ್ಲೋಕವಾಗಿದೆ. ಇಲ್ಲಿರುವ ಧರ್ಮಶಬ್ದ ಪ್ರಸಿದ್ಧವಾದ ಉಪಾಯ (ಉಪಾಸನಾ) ಎಂಬರ್ಥದಲ್ಲಿ ಇರುತ್ತದೆ. 'ಅಧೀನ' ಶಬ್ದವು ಲೋಕದಲ್ಲಿ ಪ್ರಸಿದ್ಧವಾದ ಉಪಾಸ್ಯವಾದದ್ದನ್ನು ಹೇಳುತ್ತದೆ. 'ಅಸ್ಮಾತ್' ಎಂಬುದು ಬುದ್ಧಿಸ್ಥವಾದ ಉಪಾಸಕನನ್ನು ಹೇಳುತ್ತದೆ. ಅನ್ಯತ್ರ ಎಂಬ ಶಬ್ದವು ವೈಲಕ್ಷಣ್ಯವನ್ನು ಹೇಳಿದ್ದರಿಂದ ಲೋಕಪ್ರಸಿದ್ಧವಾದ ಉಪಾಸನೆ, ಉಪಾಸ್ಯ, ಉಪಾಸಕ ಇವುಗಳಿಗಿಂತ ವಿಲಕ್ಷಣವಾದ ಅಪ್ರಸಿದ್ಧವಾದ ಉಪಾಯ ಮೊದಲಾದ ಮೂರರ ಬಗ್ಗೆ ಪ್ರಶ್ನಿಸಲಾಗಿದೆ. 'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬುದರಿಂದ ಭಕ್ತಿಯೆಂಬ ಉಪಾಸನದ ಬಗ್ಗೆ 'ಅಣೋರಣೀಯಾನ್' ಇತ್ಯಾದಿ ವಾಕ್ಯದಿಂದ ಉಪೇಯನಾದ ವಿಷ್ಣುವಿನ ಬಗ್ಗೆ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಇತ್ಯಾದಿ ವಾಕ್ಯದಿಂದ ಉಪೇತೃವಾದ ಜೀವನ ಬಗ್ಗೆ ಯಮನು ಉತ್ತರಿಸಿದ್ದಾನೆ. ಆದ್ದರಿಂದ ಸೂತ್ರದಲ್ಲಿರುವ 'ತ್ರಯಾಣಾಮ್' ಎಂಬ ಪದವು 'ಉಪಾಯ', 'ಉಪೇಯ', 'ಉಪಾಸಕ' ಎಂಬ ಮೂರು ಅರ್ಥವುಳ್ಳದ್ದಾಗಿದೆ. ಇಷ್ಟು ರಾಮಾನುಜರ ವ್ಯಾಖ್ಯಾನ.

**तन्न । उक्तदोषत्वात् ।**

ಇವರ ಈ ವ್ಯಾಖ್ಯಾನವೂ ಕೂಡ ಸಾಧುವಲ್ಲ. ಏಕೆಂದರೆ ಹಿಂದೆ ಹೇಳಿದ ದೋಷ ಇವರಿಗೂ ಸಮಾನವಾಗಿದೆ. 'ತ್ರೀನ್ ವರಾನ್ ವೃಣೀಷ್ವ' ಎಂದು ಯಮದೇವರು ಹೇಳಿದ ಅನಂತರ ನಚಿಕೇತನು ಪ್ರಥಮ ವರಂ ವೃಣೇ, ದ್ವಿತಿಯೇನ ವೃಣೇ ವರೇನ, 'ವರಾಣಾಮೇಷ ವೃತಸ್ತೃತೀಯಃ' ಎಂಬುದಾಗಿ ಮೂರು ವರಗಳ ಕ್ರಮವನ್ನು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಅದನ್ನೇ 'ತ್ರಯಾಣಾಮ್'

ಎಂಬ ಪದದಿಂದ ಸ್ವೀಕರಿಸಬೇಕು. ಇದನ್ನು ಬಿಟ್ಟು ಉಪಾಯ, ಉಪೇಯ, ಉಪಾಸಕ ಇವುಗಳಿಗಿಂತ ವಿಲಕ್ಷಣವಾದ ಅರ್ಥವನ್ನು ಹೇಳುವುದು ಸರಿಯಲ್ಲ.

**'प्रब्रूहि तं श्रद्धानाय मह्यम्'' इत्यादावग्न्यादिविषयेषु प्रश्नेषु ''प्रते ब्रवीमि तदु मे निबोध स्वर्ग्यमग्निं नचिकेतः'' इत्यादिप्रतिवचनेषु च स्फुटेषु तत्त्यागेनैकत्रैव श्लोके क्लेशेन त्रयाणां प्रश्नादिकं सम्पाद्य सौत्रस्य त्रयाणामित्यस्य तत्परत्वोक्त्य-योगाच्च ।**

'ಪ್ರಬ್ರೂಹಿ ತಂ ಶ್ರದ್ಧಧಾನಾಯ ಮಹ್ಯಮ್' ಇತ್ಯಾದಿ ವಾಕ್ಯಗಳಲ್ಲಿ ಅಗ್ನ್ಯಾದಿ ವಿಷಯಕವಾದ ಪ್ರಶ್ನೆಯಿರುತ್ತದೆ. 'ಪ್ರತೇ ಬ್ರವೀಮಿ ತದು ಮೇ ನಿಬೋಧ ಸ್ವರ್ಗ್ಯಮಗ್ನಿಂ ನಚಿಕೇತಃ' ಉತ್ತರವಾಕ್ಯಗಳಲ್ಲಿ ಸ್ಪಷ್ಟವಾಗಿ ಅಗ್ನ್ಯಾದಿಗಳ ವಿಷಯವೇ ಇರುತ್ತದೆ. ಇದನ್ನು ಬಿಟ್ಟು ಒಂದೇ ಶ್ಲೋಕದಲ್ಲಿ ಉಪಾಯ, ಉಪೇತೃ, ಉಪೇಯಗಳ ಪ್ರಶ್ನೆಗಳನ್ನು ನೀವು ಕಷ್ಟದಿಂದ ಸಂಪಾದನೆ ಮಾಡಿ, ಸೂತ್ರದಲ್ಲಿರುವ 'ತ್ರಯಾಣಾಮ್' ಎಂಬ ಪದಕ್ಕೆ ತತ್ಪರತ್ವವನ್ನು ಹೇಳುವುದು ಯುಕ್ತವಾಗುವುದಿಲ್ಲ.

**त्वदुक्तोपायादिविलक्षणाग्निप्रश्नादेरपि सत्त्वेन त्रयाणामेवेत्यवधारणायोगाच्च ।**

ಮತ್ತು ನೀವು ಹೇಳಿದ ಉಪಾಯಾದಿಗಳಿಗಿಂತ ವಿಲಕ್ಷಣವಾದ ಅಗ್ನ್ಯಾದಿಗಳ ಬಗ್ಗೆಯೂ ಪ್ರಶ್ನೆಗಳಿರುವ ಕಾರಣ 'ತ್ರಯಾಣಾಮೇವ' ಎಂಬಲ್ಲಿರುವ ಅವಧಾರಣೆಯು ಅಯುಕ್ತವಾಗುತ್ತದೆ.

**यच्चोक्तमुभाभ्यां यथा ''वेदाहमेतं पुरुषं महान्तम्'' इत्यादौ महच्छब्दो न तान्त्रिकमहत्त्ववाची एवमव्यक्तशब्दोऽपि न तान्त्रिकप्रधानवाचीति ''महद्वच्च'' इति सूत्रार्थ इति**

'ಮಹದ್ವಚ್ಚ' ಎಂಬ ಏಳನೆಯ ಸೂತ್ರಾರ್ಥವನ್ನು ರಾಮಾನುಜರು ಹಾಗೂ ಶಂಕರರು ಹೀಗೆ ಹೇಳುತ್ತಾರೆ - 'ವೇದಾಹಮೇತಂ ಪುರುಷಂ ಮಹಾಂತಮ್' ಎಂಬಲ್ಲಿರುವ 'ಮಹತ್' ಶಬ್ದವು ಸಾಂಖ್ಯಸ್ಮೃತಿಸಿದ್ಧವಾದ ಮಹತ್ತತ್ತ್ವವನ್ನು ಹೇಗೆ ಪ್ರತಿಪಾದನೆ ಮಾಡುವುದಿಲ್ಲವೋ, ಅದರಂತೆ ಅವ್ಯಕ್ತಶಬ್ದವೂ ಕೂಡ ಸಾಂಖ್ಯಸ್ಮೃತಿಸಿದ್ಧವಾದ ಪ್ರಕೃತಿಯನ್ನು ಹೇಳುವುದಿಲ್ಲ. ಇಷ್ಟು 'ಮಹದ್ವಚ್ಚ' ಎಂಬ ಸೂತ್ರದ ಅರ್ಥ.

**तन्न । तद्वदिह प्रधानवाचित्वे बाधकाभावात् ।**

ಇದು ತಪ್ಪು. 'ವೇದಾಹಮೇತಂ' ಇತ್ಯಾದಿ ವಾಕ್ಯದಲ್ಲಿ 'ಆದಿತ್ಯವರ್ಣಮ್' ಇತ್ಯಾದಿಯಾದ ಬಾಧಕಗಳಿರುವ ಕಾರಣ ಮಹತ್ತತ್ತ್ವವನ್ನು ಸ್ವೀಕರಿಸಲು ಬರುವುದಿಲ್ಲ. ಆದರೆ ಅವ್ಯಕ್ತಶಬ್ದದಿಂದ ಪ್ರಧಾನವನ್ನು ಸ್ವೀಕರಿಸಲು ಅಂತಹ ಯಾವುದೇ ಬಾಧಕಗಳಿದಿರುವುದಿಲ್ಲ.

**ननु महच्छब्द आत्मशब्दसामानाधिकरण्यादात्मपरः । आत्मनश्च परत्वं प्रधानेन युक्तमिति चेन्न । त्वदभिप्रेताविद्यायामप्यात्मनः परत्वायोगात् ।**

ಆಶಂಕೆ - ಆತ್ಮಶಬ್ದದ ಸಾಮಾನಾಧಿಕರಣ್ಯವಿರುವ ಪ್ರಯುಕ್ತ ಮಹತ್‌ಶಬ್ದವು ಆತ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಮಹತ್ತತ್ವವನ್ನು ಹೇಳುವುದಿಲ್ಲ. ಆದರೆ ಮುಂದಿರುವ ಅವ್ಯಕ್ತಶಬ್ದದಿಂದ ಪ್ರಕೃತಿಯನ್ನು ಸ್ವೀಕರಿಸಲು ಸಾಧ್ಯವಿಲ್ಲ. ಏಕೆಂದರೆ ಆತ್ಮನಿಗಿಂತ ಉತ್ತಮತ್ವವನ್ನು ಪ್ರಕೃತಿಯಲ್ಲಿ ಹೇಳಲು ಹೇಗೆ ಸಾಧ್ಯ ? ಹೀಗೆ ಬಾಧಕವಿರುವ ಕಾರಣ ಅವ್ಯಕ್ತಶಬ್ದವು ಪ್ರಕೃತಿಯನ್ನು ಹೇಳಲು ಸಾಧ್ಯವಿಲ್ಲವಲ್ಲವೇ?

ಸಮಾಧಾನ - ಅವ್ಯಕ್ತಶಬ್ದಕ್ಕೆ ಪ್ರಕೃತಿಪರತ್ವವನ್ನು ನೀವು ಒಪ್ಪದಿದ್ದರೂ ಅವಿದ್ಯಾಪರವೆನ್ನುತ್ತೀರಿ. ಇಂತಹ ಅವಿದ್ಯೆಯೂ ಕೂಡ ಆತ್ಮನಿಗಿಂತ ಉತ್ತಮವಾಗಲು ಹೇಗೆ ಸಾಧ್ಯ? ಆದ್ದರಿಂದ ಪ್ರಕೃತಿಪರವಲ್ಲವೆಂದು ಹೇಳುವ ನಿಮಗೆ ದೋಷವು ತಪ್ಪಿದ್ದಲ್ಲ.

**"अव्यक्तात् पुरुषः परः" इति पुरुषादव्यक्तस्यावरत्वप्रतीतेश्च । आत्मशब्दस्य स्वरूपार्थत्वादिनाप्युपपत्तेर्महच्छब्दस्यात्मार्थत्वाभावाच्चेति ।।**

ನಿಜವಾಗಿ ವಿಚಾರ ಮಾಡಿದರೆ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಪುರುಷನಿಗಿಂತ ಅವ್ಯಕ್ತವು ಅಧಮವಾಗಿದೆಯೆಂದು ಹೇಳಿದ್ದರಿಂದ ಪ್ರಕೃತಿಯನ್ನು ವಿವಕ್ಷಿಸಲು ಯಾವುದೇ ತೊಂದರೆಯೂ ಇರುವುದಿಲ್ಲ. ಆತ್ಮಶಬ್ದಕ್ಕೆ 'ಸ್ವರೂಪ' ಎಂಬರ್ಥವನ್ನೂ ಕೂಡ ಹೇಳಬಹುದಾದ್ದರಿಂದ 'ಮಹತ್' ಶಬ್ದಕ್ಕೆ ಆತ್ಮಶಬ್ದದ ಸಾಮಾನಾಧಿಕರಣ್ಯವಿದೆಯೆಂಬ ಕಾರಣದಿಂದ 'ಮಹತ್' ಶಬ್ದವು ಆತ್ಮನನ್ನೇ ಹೇಳಬೇಕೆಂಬ ನಿಯಮವಿಲ್ಲ.

**टीकाक्षरार्थस्तु ।। नच मञ्चादावुक्तव्यभिचार इति ।। पारतन्त्र्यादमुख्यत्वमिति व्यभिचरितम् । मञ्चातन्त्रेऽपि पुरुषे मञ्चशब्दस्यामुख्यार्थत्वदर्शनादिति न शङ्क्यम्। मुख्यवृत्तावेव हीनत्वे प्रवृत्तिनिमित्तपारतन्त्र्यं हेतुरित्येवाभिप्रेतत्वेन पारतन्त्र्याभावेपि मञ्चादिशब्दे लक्षणासम्भवादित्यर्थः ।।**

ಟೀಕೆಯ ಕೆಲವು ಕಠಿಣಪದಾರ್ಥಗಳು ಹೀಗಿವೆ - 'ನಚ ಮಂಚಾದಾವುಕ್ತವ್ಯಭಿಚಾರಃ' ಎಂಬುದಾಗಿ ಟೀಕೆಯಲ್ಲಿ ಹೇಳಿರುತ್ತಾರೆ. ಇದರ ಅಭಿಪ್ರಾಯ ಹೀಗಿದೆ - ಪರಮಾತ್ಮನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಅವನ ಸಂಬಂಧವು ಪ್ರಕೃತಿಯಲ್ಲಿರುವುದರಿಂದ, ಪ್ರಕೃತಿಯೂ ಕೂಡ ಅವ್ಯಕ್ತಶಬ್ದದಿಂದ ಅಮುಖ್ಯವಾಗಿ ಪ್ರತಿಪಾದ್ಯವಾಗುತ್ತದೆಂದು ಹೇಳಿದರೆ ಮಂಚಾದಿಗಳಲ್ಲಿ ವ್ಯಭಿಚಾರ ಬರುತ್ತದಲ್ಲವೇ? ಏಕೆಂದರೆ ಎಲ್ಲಿ ಪಾರತಂತ್ರ್ಯವಿರುತ್ತದೋ ಅಲ್ಲಿ ಅಮುಖ್ಯವೃತ್ತಿಯಿರುತ್ತದೆಂದು ನೀವು ವ್ಯಾಪ್ತಿ ಹೇಳಿದಂತಾಯಿತು. ಆದರೆ ಪುರುಷನು ಮಂಚದ

ಅಧೀನವಾಗದಿದ್ದರೂ ಮಂಚ ಶಬ್ದವನ್ನು ಅಮುಖ್ಯವಾಗಿ ಪ್ರಯೋಗಿಸುವುದು ಕಂಡಿದೆಯಲ್ಲವೇ? ಆದ್ದರಿಂದ 'ಯತ್ರ ಪಾರತಂತ್ರ್ಯಾಭಾವಃ ತತ್ರ ಶಬ್ದಮುಖ್ಯಾರ್ಥತ್ವಮ್' ಎಂಬ ವ್ಯಾಪ್ತಿಗೆ ವ್ಯತಿರೇಕ ವ್ಯಭಿಚಾರ ಬರುತ್ತದೆಂದು ಅಭಿಪ್ರಾಯ. ಹೀಗೆ ಆಶಂಕಿಸಬಾರದು. ಏಕೆಂದರೆ ಮುಖ್ಯವೃತ್ತಿಯಲ್ಲಿರುವ ಪ್ರವೃತ್ತಿನಿಮಿತ್ತ ಹೀನತ್ವಕ್ಕೆ ಪಾರತಂತ್ರ್ಯವು ಕಾರಣವೆಂದು ನಮ್ಮ ಅಭಿಪ್ರಾಯ. ಆದ್ದರಿಂದ ಪಾರತಂತ್ರ್ಯವಿಲ್ಲದಿದ್ದರೂ ಮಂಚಾದಿ ಶಬ್ದದಲ್ಲಿ ಲಕ್ಷಣಾವನ್ನು ಮಾಡಬಹುದು.

**अल्पत्वमिति ।। पारतन्त्र्यमित्यर्थः ।। इत्युक्तार्थविस्मरणविजृम्भितमिति ।। इति चोद्यमुक्तविस्मरणविजृम्भितम् । निचाय्यवाक्यात्पूर्वस्मिन् ''महतः परम्'' इति वाक्ये ब्रह्मैवोच्यत इत्यानुमानिकसूत्र एवोक्तत्वादित्यर्थः ।।**

ಟೀಕೆಯಲ್ಲಿರುವ 'ಅಲ್ಪತ್ವಮ್' ಎಂಬ ಪದಕ್ಕೆ 'ಪಾರತಂತ್ರ್ಯ' ಎಂದರ್ಥ. 'ಇತ್ಯುಕ್ತಾರ್ಥ-ವಿಸ್ಮರಣವಿಜೃಂಭಿತಮ್' ಎಂದು ಟೀಕೆಯಲ್ಲಿದೆ. ನೀನು ಆಕ್ಷೇಪ ಮಾಡುತ್ತಿರುವುದು ಹಿಂದೆ ಹೇಳಿದರ ವಿಸ್ಮರಣವಿಜೃಂಭಣೆಯಿಂದಷ್ಟೇ ಎಂದು ತಿಳಿಯಬೇಕು. ಏಕೆಂದರೆ ನಿಚಾಯ್ಯವಾಕ್ಯದ ಹಿಂದೆ 'ಮಹತಃ ಪರಮ್' ಎಂಬ ವಾಕ್ಯದಲ್ಲಿ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಆನುಮಾನಿಕಸೂತ್ರದಲ್ಲೇ ಹೇಳಿದ್ದಾಗಿದೆ. ಅದನ್ನು ಮರೆತು ಪುನಃ ಆಕ್ಷೇಪಿಸುತ್ತಿರುವಿ ಎಂದಭಿಪ್ರಾಯ.

**दक्षिणान्नं वनुते यो न आत्मेतिवदिति ।। अस्मिन् वाक्ये य इत्यस्यान्नपरत्वेऽपि विधेयात्मविवक्षया पुल्लिङ्गत्ववदिहाप्येष इत्यस्य शिरःपरत्वेऽपि चमसविवक्षया पुल्लिङ्गत्वमित्यर्थः ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् आनुमानिकाधिकरणं सम्पूर्णम् ।।१।।**

'ದಕ್ಷಿಣಾನ್ನಂ ವನುತೇ ಯೋ ನ ಆತ್ಮೇತಿವತ್' ಎಂದು ಟೀಕೆಯಲ್ಲಿ ಹೇಳಿದ್ದಾರೆ. ಈ ವಾಕ್ಯದಲ್ಲಿ ವಿಧೇಯವಾದ ಆತ್ಮಶಬ್ದವು ಪುಲ್ಲಿಂಗದಲ್ಲಿರುವುದರಿಂದ ಅನ್ನವನ್ನು ಹೇಳುವ 'ಯಃ' ಎಂಬುದೂ ಕೂಡ ಪುಲ್ಲಿಂಗದಲ್ಲೇ ಇರುತ್ತದೆ. ಅದರಂತೆ 'ಏಷಃ' ಎಂಬುದು ಶಿರಸ್ಸನ್ನು ಹೇಳುವುದಾದರೂ ಚಮಸ ಎಂಬ ಪದವು ಪುಲ್ಲಿಂಗದಲ್ಲಿರುವುದರಿಂದ ಇದೂ ಕೂಡ ಪುಲ್ಲಿಂಗದಲ್ಲೇ ಇರುವುದು ಯುಕ್ತವೇ ಆಗಿದೆ.

ಇಲ್ಲಿಗೆ ಶ್ರೀಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದರ ಶಿಷ್ಯಂದಿರಾದ ಶ್ರೀವ್ಯಾಸತೀರ್ಥಯತಿಗಳಿಂದ ರಚಿತವಾದ ತಾತ್ಪರ್ಯಚಂದ್ರಿಕೆಯಲ್ಲಿ ಆನುಮಾನಿಕಾಧಿರಣದ ಕನ್ನಡಾನುವಾದವು ಸಂಪೂರ್ಣವಾಯಿತು

**प्रकाशः –**

रामानुजाभिमतमप्येतत् सूत्रार्थं निराह – **केचित्त्विति** ।। उपायोपेयोपेतृशब्दैरुपासनोपास्योपासका उच्यन्ते ।। **प्रसिद्धेति** ।। ज्योतिष्टोमस्वर्गादिरूपेत्यर्थः ।। **उक्तेति** ।। श्रुतौ "त्रीन् वरान् वृणीष्व" इत्यादिनोक्तदोषत्वादित्यर्थः।।

ವಿವರಣೆ - 'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಇತ್ಯಾದಿ ಸೂತ್ರಗಳಿಗೆ ರಾಮಾನುಜರ ಮತದ ಪ್ರಕಾರ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ. 'ಉಪಾಯ' ಶಬ್ದಕ್ಕೆ 'ಉಪಾಸನಾ' ಎಂದರ್ಥ, 'ಉಪೇಯ' ಶಬ್ದಕ್ಕೆ 'ಉಪಾಸ್ಯ' ಎಂದರ್ಥ, 'ಉಪೇತೃ' ಶಬ್ದಕ್ಕೆ 'ಉಪಾಸಕರು' ಎಂದರ್ಥ. 'ಪ್ರಸಿದ್ಧ' ಎಂದರೆ ಜ್ಯೋತಿಷ್ಟೋಮಸ್ವರ್ಗಾದಿಗಳಲ್ಲಿ ಇಂತಹ ಉಪಾಯಾದಿಶಬ್ದಗಳು ಪ್ರಸಿದ್ಧವಾಗಿವೆ ಎಂದರ್ಥ. 'ಉಕ್ತ' ಎಂದರೆ ಶ್ರುತಿಯಲ್ಲಿ 'ತ್ರೀನ್ ವರಾನ್ ವೃಣೀಷ್ವ' ಇತ್ಯಾದಿಯಾಗಿ ಹೇಳಿದ್ದರಿಂದ ಹಿಂದೆ ಹೇಳಿದ ದೋಷವು ಬರುತ್ತದೆಂದರ್ಥ.

**प्रकाशः –** "महद्वच्च" इति सप्तमस्यार्थमनूद्यापास्यति – **यच्चेति** ।। **तद्वदिति**।। मुक्तिहेतुज्ञानविषयत्वस्य "महान्तं विभुमात्मानम्" इत्यत्र "आत्मा महान् परः" इत्यत्र चात्मशब्दसामानाधिकरण्यस्येवेह बाधकस्याभावादित्यर्थः । अत्रापि बाधकमाशङ्कते – **नन्विति** ।।

'ಮಹದ್ವಚ್ಚ' ಎಂಬ ಏಳನೆಯ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಯಚ್ಚೋಕ್ತಮ್' ಇತ್ಯಾದಿ ಗ್ರಂಥದಿಂದ. 'ತದ್ವತ್' ಎಂದರೆ ಮುಕ್ತಿಹೇತುಜ್ಞಾನವಿಷಯತ್ವವು 'ಮಹಾಂತಂ ವಿಭುಮಾತ್ಮಾನಮ್' ಎಂಬ ಶ್ರುತಿಯಲ್ಲಿ ಮತ್ತು 'ಆತ್ಮಾ ಮಹಾನ್ ಪರಃ' ಎಂಬಲ್ಲಿಯೂ ಆತ್ಮಶಬ್ದ ಸಾಮಾನಾಧಿಕರಣ್ಯವಿರುವಂತೆ ಪ್ರಕೃತಿಯಲ್ಲಿ ಇಂತಹ ಬಾಧಕವಿರುವುದಿಲ್ಲವೆಂದು ತಿಳಿಯಬೇಕು. ಆದರೆ ಪೂರ್ವಪಕ್ಷಿಯು ಇಲ್ಲಿಯೂ ಬಾಧಕವಿದೆಯೆಂದು ಆಶಂಕಿಸುತ್ತಿದ್ದಾನೆ 'ನನು' ಇತ್ಯಾದಿ ಗ್ರಂಥದಿಂದ.

**प्रकाशः – त्वदिति** ।। तथा चाविद्यापरत्वं च न स्यादित्यर्थः । चमससूत्रार्थस्त्वग्रे निरसिष्यते ।

'ತ್ವದಭಿಪ್ರೇತಾವಿದ್ಯಾಯಾಮಪಿ' ಎಂಬ ವಾಕ್ಯದಿಂದ ಅವಿದ್ಯಾಪರತ್ವವನ್ನೂ ಕೂಡ ಬಾಧಿಸಿರುವ ಕಾರಣ ನಿನಗೆ ಹೇಳಲಾಗದು ಎಂದರ್ಥ. 'ಚಮಸವದವಿಶೇಷಾತ್' ಎಂಬ ಸೂತ್ರವನ್ನು ಮುಂದಿನ ಅಧಿಕರಣದಲ್ಲಿ ಇವರು ಸೇರಿಸಿರುವ ಕಾರಣ ಅಲ್ಲಿಯೇ ಅದನ್ನು ನಿರಾಕರಣೆ ಮಾಡುತ್ತೇವೆ.

**प्रकाशः –** एतेन यत् केनचिदुक्तं पूर्वोक्तदिशा स्मार्तप्रत्यभिज्ञाव्यक्तपदरूढिभ्यां प्रधानमव्यक्तशब्दमिति प्राप्ते प्रकरणपरिशेषाभ्यां शरीरमेवाव्यक्तमिति सिद्धान्त इति

ಶೈವರೂ ಕೂಡ ಈ ಅಧಿಕರಣವನ್ನು ಅದ್ವೈತಿಗಳಂತೆ ರಚನೆ ಮಾಡಿದ್ದಾರೆ. ಹಿಂದೆ ಹೇಳಿದ ಪ್ರಕಾರ ಸಾಂಖ್ಯಸ್ಮೃತಿಸಿದ್ಧವಾದ ಪ್ರಕೃತಿಯಲ್ಲಿಯೇ ಅವ್ಯಕ್ತಶಬ್ದದ ರೂಢಿಯಿರುವ ಕಾರಣ ಶ್ರುತಿಯಲ್ಲಿರುವ ಅವ್ಯಕ್ತಶಬ್ದವು ಅದನ್ನೇ ಹೇಳುತ್ತದೆಂದು ಪೂರ್ವಪಕ್ಷ. ಪ್ರಕರಣ ಹಾಗೂ ಪರಿಶೇಷಗಳಿಂದ ಶರೀರವೇ ಅವ್ಯಕ್ತಶಬ್ದಪ್ರತಿಪಾದ್ಯವಾಗುತ್ತದೆಂದು ಸಿದ್ಧಾಂತ ಮಾಡಿದ್ದಾರೆ.

**प्रकाशः** – तन्निरस्तम् । अध्यायासङ्गत्यादेः प्रागुक्तदोषस्यापरिहारात् । सूत्रार्थोपि प्रायः परारीत्यविशेषात्तथैव निरस्यः ।

ಇವರ ಅಧಿಕರಣ ಶರೀರವೂ ಕೂಡ ಸರಿಯಲ್ಲ. ಏಕೆಂದರೆ ಹಿಂದೆ ಹೇಳಿದಂತೆ ಸಮನ್ವಯಾಧ್ಯಾಯದಲ್ಲಿ ಈ ಅಧಿಕರಣವು ಅಸಂಗತವಾಗುತ್ತದೆ. ಹಾಗೂ ಅದ್ವೈತಿಗಳಿಗೆ ಹೇಳಿದ ಎಲ್ಲಾ ದೋಷಗಳು ಇವರಿಗೂ ಬರುತ್ತವೆ. ಇವರು ವ್ಯಾಖ್ಯಾನ ಮಾಡುವ ಸೂತ್ರಾರ್ಥಗಳೆಲ್ಲವೂ ಪ್ರಾಯಶಃ ಅದ್ವೈತಿಗಳಂತೆ ಇರುತ್ತದೆ. ಆದ್ದರಿಂದ ಅದ್ವೈತಮತ ನಿರಾಕರಣೆ ಮಾಡಿದಂತೆ ಇವರ ಮತವನ್ನೂ ಕೂಡ ನಿರಾಕರಣೆ ಮಾಡಬೇಕು.

**प्रकाशः** – आनुमानिकसूत्रे टीकावाक्यं "नच मञ्चादावुक्तव्यभिचारश्शङ्कनीयः समाकर्षादिति वक्ष्यमाणन्यायस्यात्राभिप्रेतत्वेन लक्षणाऽनाश्रयणात्" इति ।

'ಆನುಮಾನಿಕಮಪ್ಯೇಕೇಷಾಮ್' ಇತ್ಯಾದಿ ಸೂತ್ರದ ಟೀಕೆಯಲ್ಲಿ 'ನಚ ಮಂಚಾದಾವುಕ್ತವ್ಯಭಿಚಾರಃ ಶಂಕನೀಯಃ ಸಮಕರ್ಷಾತ್ ಇತಿ ವಕ್ಷ್ಯಮಾಣನ್ಯಾಯಸ್ಯಾತ್ರಾಭಿಪ್ರೇತತ್ವೇನ ಲಕ್ಷಣಾನಾಽಶ್ರಯಣಾತ್' ಮಂಚಾದಿಗಳಲ್ಲಿ ವ್ಯಭಿಚಾರವನ್ನು ಆಶಂಕಿಸಬಾರದು. 'ಸಮಾಕರ್ಷಾತ್' ಎಂಬ ಮುಂದೆ ಹೇಳುವ ನ್ಯಾಯವು ಇಲ್ಲಿ ಅಭಿಪ್ರೇತವಾದ್ದರಿಂದ ಲಕ್ಷಣಾಕ್ಕೆ ಅವಕಾಶವಿರುವುದಿಲ್ಲ ಎಂದು ಹೇಳಲಾಗಿದೆ.

**प्रकाशः** – तत्र विन्यस्तगृहीतेरित्यस्य तत्सम्बन्धेनान्यत्रापि शब्दवृत्तेरित्याशयो वर्णितः पूर्वम् । तत्र यदि तत्सम्बन्धिनि तच्छब्दस्य लक्षणेत्यभिमतं तदा मञ्चान्विते पुंसि मञ्चशब्दस्य लक्षणोपलम्भेन व्यभिचारशङ्काऽनवकाशः । यदि शक्तिरिति तदा लक्षणानाश्रयणादित्युत्तरवाक्यासङ्गतिरित्यतो वक्ति – पारतन्त्र्यादिति ।।

ಈ ಆನುಮಾನಿಕಾಧಿಕರಣದ 'ವಿನ್ಯಸ್ತಗೃಹಿತೇಃ' ಎಂಬ ಪದದಿಂದ ಪರಮಾತ್ಮನ ಸಂಬಂಧದಿಂದ ಅದೇ ಶಬ್ದಗಳು ಬೇರೆ ವಸ್ತುಗಳನ್ನೂ ಕೂಡ ಹೇಳುತ್ತವೆಂಬ ಅಭಿಪ್ರಾಯವನ್ನು ವರ್ಣಿಸಲಾಗಿದೆ. ಹಾಗಾದಲ್ಲಿ ತತ್ಸಂಬಂಧಿಯಾದ ವಸ್ತುವಿನಲ್ಲಿ ಆ ಶಬ್ದಕ್ಕೆ ಲಕ್ಷಣಾವನ್ನು ಮಾಡಿದಂತಾಯಿತು. ಮಂಚದಲ್ಲಿರುವ ಪುರುಷನಲ್ಲಿಯೂ ಮಂಚಶಬ್ದಕ್ಕೆ ಲಕ್ಷಣಾವನ್ನು ಮಾಡುವುದರಿಂದ ವ್ಯಭಿಚಾರಶಂಕೆಗೆ ಅವಕಾಶವೇ ಇರುವುದಿಲ್ಲ. ಒಂದು ವೇಳೆ ಶಕ್ತಿಯೆಂದು ವಿವಕ್ಷಿಸುವುದಾದರೆ, ಲಕ್ಷಣಾವನ್ನು ಆಶ್ರಯಿಸಬೇಕಾಗುವುದಿಲ್ಲ-ವಾದ್ದರಿಂದ ಮುಂದಿನ ವಾಕ್ಯದಿಂದ ಅಸಂಗತಿಯು ಬರುತ್ತದಲ್ಲವೇ? ಈ ಆಕ್ಷೇಪಕ್ಕೆ 'ಪಾರತಂತ್ರ್ಯಾತ್' ಎಂಬುದರಿಂದ ಉತ್ತರಿಸಿದ್ದಾರೆ.

ಆನುಮಾನಿಕಾಧಿಕರಣ (೧-೪-೧)

**प्रकाशः –**

रामानुजाभिमतमप्येतत् सूत्रार्थं निराह – **केचित्त्विति** ।। उपायोपेयोपेतृशब्दैरुपासनोपास्योपासका उच्यन्ते ।। **प्रसिद्धेति** ।। ज्योतिष्टोमस्वर्गादिरूपेत्यर्थः ।। **उक्तेति** ।। श्रुतौ ''त्रीन् वरान् वृणीष्व'' इत्यादिनोक्तदोषत्वादित्यर्थः।।

ವಿವರಣೆ - 'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ' ಇತ್ಯಾದಿ ಸೂತ್ರಗಳಿಗೆ ರಾಮಾನುಜರ ಮತದ ಪ್ರಕಾರ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ. 'ಉಪಾಯ' ಶಬ್ದಕ್ಕೆ 'ಉಪಾಸನಾ' ಎಂದರ್ಥ, 'ಉಪೇಯ' ಶಬ್ದಕ್ಕೆ 'ಉಪಾಸ್ಯ' ಎಂದರ್ಥ, 'ಉಪೇತೃ' ಶಬ್ದಕ್ಕೆ 'ಉಪಾಸಕರು' ಎಂದರ್ಥ. 'ಪ್ರಸಿದ್ಧ' ಎಂದರೆ ಜ್ಯೋತಿಷ್ಟೋಮಸ್ವರ್ಗಾದಿಗಳಲ್ಲಿ ಇಂತಹ ಉಪಾಯಾದಿಶಬ್ದಗಳು ಪ್ರಸಿದ್ಧವಾಗಿವೆ ಎಂದರ್ಥ. 'ಉಕ್ತ' ಎಂದರೆ ಶ್ರುತಿಯಲ್ಲಿ 'ತ್ರೀನ್ ವರಾನ್ ವೃಣೀಷ್ವ' ಇತ್ಯಾದಿಯಾಗಿ ಹೇಳಿದ್ದರಿಂದ ಹಿಂದೆ ಹೇಳಿದ ದೋಷವು ಬರುತ್ತದೆಂದರ್ಥ.

**प्रकाशः** – ''महद्वच्च'' इति सप्तमस्यार्थमनूद्यापास्यति – **यच्चेति** ।। **तद्वदिति**।। मुक्तिहेतुज्ञानविषयत्वस्य ''महान्तं विभुमात्मानम्'' इत्यत्र ''आत्मा महान् परः'' इत्यत्र चात्मशब्दसामानाधिकरण्यस्येवेह बाधकस्याभावादित्यर्थः । अत्रापि बाधकमाशङ्कते – **नन्विति** ।।

'ಮಹದ್ವಚ್ಚ' ಎಂಬ ಏಳನೆಯ ಸೂತ್ರಾರ್ಥವನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ 'ಯಚ್ಚೋಕ್ತಮ್' ಇತ್ಯಾದಿ ಗ್ರಂಥದಿಂದ. 'ತದ್ವತ್' ಎಂದರೆ ಮುಕ್ತಿಹೇತುಜ್ಞಾನವಿಷಯತ್ವವು 'ಮಹಾಂತಂ ವಿಭುಮಾತ್ಮಾನಮ್' ಎಂಬ ಶ್ರುತಿಯಲ್ಲಿ ಮತ್ತು 'ಆತ್ಮಾ ಮಹಾನ್ ಪರಃ' ಎಂಬಲ್ಲಿಯೂ ಆತ್ಮಶಬ್ದ ಸಾಮಾನಾಧಿಕರಣ್ಯವಿರುವಂತೆ ಪ್ರಕೃತಿಯಲ್ಲಿ ಇಂತಹ ಬಾಧಕವಿರುವುದಿಲ್ಲವೆಂದು ತಿಳಿಯಬೇಕು. ಆದರೆ ಪೂರ್ವಪಕ್ಷಿಯು ಇಲ್ಲಿಯೂ ಬಾಧಕವಿದೆಯೆಂದು ಆಶಂಕಿಸುತ್ತಿದ್ದಾನೆ 'ನನು' ಇತ್ಯಾದಿ ಗ್ರಂಥದಿಂದ.

**प्रकाशः – त्वदिति** ।। तथा चाविद्यापरत्वं च न स्यादित्यर्थः । चमससूत्रार्थस्त्वग्रे निरसिष्यते ।

'ತ್ವದಭಿಪ್ರೇತಾವಿದ್ಯಾಯಾಮಪಿ' ಎಂಬ ವಾಕ್ಯದಿಂದ ಅವಿದ್ಯಾಪರತ್ವವನ್ನೂ ಕೂಡ ಬಾಧಿಸಿರುವ ಕಾರಣ ನಿನಗೆ ಹೇಳಲಾಗದು ಎಂದರ್ಥ. 'ಚಮಸವದವಿಶೇಷಾತ್' ಎಂಬ ಸೂತ್ರವನ್ನು ಮುಂದಿನ ಅಧಿಕರಣದಲ್ಲಿ ಇವರು ಸೇರಿಸಿರುವ ಕಾರಣ ಅಲ್ಲಿಯೇ ಅದನ್ನು ನಿರಾಕರಣೆ ಮಾಡುತ್ತೇವೆ.

**प्रकाशः** – एतेन यत् केनचिदुक्तं पूर्वोक्तदिशा स्मार्तप्रत्यभिज्ञाव्यक्तपदरूढिभ्यां प्रधानमव्यक्तशब्दमिति प्राप्ते प्रकरणपरिशेषाभ्यां शरीरमेवाव्यक्तमिति सिद्धान्त इति

ಶೈವರೂ ಕೂಡ ಈ ಅಧಿಕರಣವನ್ನು ಅದ್ವೈತಿಗಳಂತೆ ರಚನೆ ಮಾಡಿದ್ದಾರೆ. ಹಿಂದೆ ಹೇಳಿದ ಪ್ರಕಾರ ಸಾಂಖ್ಯಸ್ಮೃತಿಸಿದ್ಧವಾದ ಪ್ರಕೃತಿಯಲ್ಲಿಯೇ ಅವ್ಯಕ್ತಶಬ್ದದ ರೂಢಿಯಿರುವ ಕಾರಣ ಶ್ರುತಿಯಲ್ಲಿರುವ ಅವ್ಯಕ್ತಶಬ್ದವು ಅದನ್ನೇ ಹೇಳುತ್ತದೆಂದು ಪೂರ್ವಪಕ್ಷ. ಪ್ರಕರಣ ಹಾಗೂ ಪರಿಶೇಷಗಳಿಂದ ಶರೀರವೇ ಅವ್ಯಕ್ತಶಬ್ದಪ್ರತಿಪಾದ್ಯವಾಗುತ್ತದೆಂದು ಸಿದ್ಧಾಂತ ಮಾಡಿದ್ದಾರೆ.

**प्रकाशः** – तन्निरस्तम् । अध्यायासङ्गत्यादेः प्रागुक्तदोषस्यापरिहारात् । सूत्रार्थोपि प्रायः पररीत्यविशेषात्तथैव निरस्यः ।

ಇವರ ಅಧಿಕರಣ ಶರೀರವೂ ಕೂಡ ಸರಿಯಲ್ಲ. ಏಕೆಂದರೆ ಹಿಂದೆ ಹೇಳಿದಂತೆ ಸಮನ್ವಯಾಧ್ಯಾಯದಲ್ಲಿ ಈ ಅಧಿಕರಣವು ಅಸಂಗತವಾಗುತ್ತದೆ. ಹಾಗೂ ಅದ್ವೈತಿಗಳಿಗೆ ಹೇಳಿದ ಎಲ್ಲಾ ದೋಷಗಳು ಇವರಿಗೂ ಬರುತ್ತವೆ. ಇವರು ವ್ಯಾಖ್ಯಾನ ಮಾಡುವ ಸೂತ್ರಾರ್ಥಗಳೆಲ್ಲವೂ ಪ್ರಾಯಶಃ ಅದ್ವೈತಿಗಳಂತೆ ಇರುತ್ತದೆ. ಆದ್ದರಿಂದ ಅದ್ವೈತಮತ ನಿರಾಕರಣೆ ಮಾಡಿದಂತೆ ಇವರ ಮತವನ್ನೂ ಕೂಡ ನಿರಾಕರಣೆ ಮಾಡಬೇಕು.

**प्रकाशः** – आनुमानिकसूत्रे टीकावाक्यं "नच मञ्चादावुक्तव्यभिचारश्शङ्कनीयः समाकर्षादिति वक्ष्यमाणन्यायस्यात्राभिप्रेतत्वेन लक्षणाऽनाश्रयणात्" इति ।

'ಆನುಮಾನಿಕಮಪ್ಯೇಕೇಷಾಮ್' ಇತ್ಯಾದಿ ಸೂತ್ರದ ಟೀಕೆಯಲ್ಲಿ 'ನಚ ಮಂಚಾದಾವುಕ್ತವ್ಯಭಿಚಾರಃ ಶಂಕನೀಯಃ ಸಮಕರ್ಷಾತ್ ಇತಿ ವಕ್ಷ್ಯಮಾಣನ್ಯಾಯಸ್ಯಾತ್ರಾಭಿಪ್ರೇತತ್ವೇನ ಲಕ್ಷಣಾನಾಽಶ್ರಯಣಾತ್' ಮಂಚಾದಿಗಳಲ್ಲಿ ವ್ಯಭಿಚಾರವನ್ನು ಆಶಂಕಿಸಬಾರದು. 'ಸಮಾಕರ್ಷಾತ್' ಎಂಬ ಮುಂದೆ ಹೇಳುವ ನ್ಯಾಯವು ಇಲ್ಲಿ ಅಭಿಪ್ರೇತವಾದ್ದರಿಂದ ಲಕ್ಷಣಾಕ್ಕೆ ಅವಕಾಶವಿರುವುದಿಲ್ಲ ಎಂದು ಹೇಳಲಾಗಿದೆ.

**प्रकाशः** – तत्र विन्यस्तगृहीतेरित्यस्य तत्सम्बन्धेनान्यत्रापि शब्दवृत्तेरित्याशयो वर्णितः पूर्वम् । तत्र यदि तत्सम्बन्धिनि तच्छब्दस्य लक्षणेत्यभिमतं तदा मञ्चान्विते पुंसि मञ्चशब्दस्य लक्षणोपलम्भेन व्यभिचारशङ्काऽनवकाशः । यदि शक्तिरिति तदा लक्षणानाश्रयणादित्युत्तरवाक्यासङ्गतिरित्यतो वक्ति – पारतन्त्र्यादिति ।।

ಈ ಆನುಮಾನಿಕಾಧಿಕರಣದ 'ವಿನ್ಯಸ್ತಗೃಹಿತೇಃ' ಎಂಬ ಪದದಿಂದ ಪರಮಾತ್ಮನ ಸಂಬಂಧದಿಂದ ಅದೇ ಶಬ್ದಗಳು ಬೇರೆ ವಸ್ತುಗಳನ್ನೂ ಕೂಡ ಹೇಳುತ್ತವೆಂಬ ಅಭಿಪ್ರಾಯವನ್ನು ವರ್ಣಿಸಲಾಗಿದೆ. ಹಾಗಾದಲ್ಲಿ ತತ್ಸಂಬಂಧಿಯಾದ ವಸ್ತುವಿನಲ್ಲಿ ಆ ಶಬ್ದಕ್ಕೆ ಲಕ್ಷಣಾವನ್ನು ಮಾಡಿದಂತಾಯಿತು. ಮಂಚದಲ್ಲಿರುವ ಪುರುಷನಲ್ಲಿಯೂ ಮಂಚಶಬ್ದಕ್ಕೆ ಲಕ್ಷಣಾವನ್ನು ಮಾಡುವುದರಿಂದ ವ್ಯಭಿಚಾರಶಂಕೆಗೆ ಅವಕಾಶವೇ ಇರುವುದಿಲ್ಲ. ಒಂದು ವೇಳೆ ಶಕ್ತಿಯೆಂದು ವಿವಕ್ಷಿಸುವುದಾದರೆ, ಲಕ್ಷಣಾವನ್ನು ಆಶ್ರಯಿಸಬೇಕಾಗುವುದಿಲ್ಲ-ವಾದ್ದರಿಂದ ಮುಂದಿನ ವಾಕ್ಯದಿಂದ ಅಸಂಗತಿಯು ಬರುತ್ತದಲ್ಲವೇ? ಈ ಆಕ್ಷೇಪಕ್ಕೆ 'ಪಾರತಂತ್ರ್ಯಾತ್' ಎಂಬುದರಿಂದ ಉತ್ತರಿಸಿದ್ದಾರೆ.

**प्रकाशः** – ''प्रधानादेर्भगवत्तन्त्रत्वेनोभयोर्मुख्यवाच्यत्वस्योक्तविपर्ययस्य चायोगात्'' इति पूर्ववाक्ये पारतन्त्र्यादमुख्यत्वमित्यस्याभिमतत्वादिति भावः ।

'ಪ್ರಧಾನಾದೇರ್ಭಗವತ್ತಂತ್ರತ್ವೇನೋಭಯೋರ್ಮುಖ್ಯವಾಚ್ಯತ್ವಸ್ಯೋಕ್ತವಿಪರ್ಯಯಸ್ಯ ಚ ಅಯೋಗಾತ್' ಪ್ರಕೃತ್ಯಾದಿಗಳು ಪರಮಾತ್ಮನ ಅಧೀನವಾಗಿರುವುದರಿಂದ ಎರಡೂ ಪದಾರ್ಥಗಳಿಗೂ ಮುಖ್ಯವಾಚ್ಯತ್ವವನ್ನು ಹೇಳುವುದು ಕೂಡುವುದಿಲ್ಲ ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಪಾರತಂತ್ರ್ಯವಿರುವ ಕಾರಣ ಅಮುಖ್ಯಾರ್ಥವನ್ನು ಹೇಳಬೇಕೆಂದು ವಿವಕ್ಷಿಸಲಾಗಿದೆ ಎಂದು ಅಭಿಪ್ರಾಯ.

('ಯತ್ರ ದಂಡಾದಿಃ ತತ್ರ ಘಟಃ' 'ಯತ್ರ ದಂಡಾದ್ಯಭಾವಃ ತತ್ರ ಘಟಾಭಾವಃ' ಎಂದು ವ್ಯಾಪ್ಯವ್ಯಾಪಕಭಾವವನ್ನು ಹೇಳುತ್ತೇವೆ. ಅದರಂತೆ 'ಯತ್ರ ಪಾರತಂತ್ರ್ಯಮ್ ತತ್ರ ಶಬ್ದಸ್ಯ ಅಮುಖ್ಯಾರ್ಥತ್ವಮ್' 'ಯತ್ರ ಪಾರತಂತ್ರ್ಯಭಾವಃ ತತ್ರ ಶಬ್ದಸ್ಯ ಮುಖ್ಯಾರ್ಥತ್ವಮ್' ಎಂಬುದಾಗಿ ವ್ಯಾಪ್ಯವ್ಯಾಪಕಭಾವವನ್ನು ತಿಳಿಯಬೇಕು. 'ಯತ್ರ ಪಾರತಂತ್ರ್ಯಮ್ ತತ್ರ ಶಬ್ದಸ್ಯ ಅಮುಖ್ಯಾರ್ಥತ್ವಮ್' ಎಂಬ ವ್ಯಾಪ್ತಿಗೆ ಮಂಚದಲ್ಲಿ ವ್ಯಭಿಚಾರ ಬರುತ್ತದೆ. 'ಯತ್ರ ಪಾರತಂತ್ರ್ಯಾಭಾವಃ ತತ್ರ ಶಬ್ದಸ್ಯ ಮುಖ್ಯಾರ್ಥತ್ವಮ್' ಎಂಬ ಎರಡನೆಯ ವ್ಯಾಪ್ತಿಗೆ ಪುರುಷನಲ್ಲಿ ವ್ಯತಿರೇಕ ವ್ಯಭಿಚಾರ ಬರುತ್ತದೆ. ಗ್ರಂಥದಲ್ಲಿ ವ್ಯತಿರೇಕ ವ್ಯಭಿಚಾರವನ್ನು ಹೇಳಿದ್ದಾರೆಂದು ತಿಳಿಯಬೇಕು. ಇದರ ಬಗ್ಗೆ ಇನ್ನೂ ಹೆಚ್ಚಿನ ವಿಚಾರವನ್ನು ತತ್ವಪ್ರಕಾಶಿಕೆಯ ಟಿಪ್ಪಣಿಯಾದ ಭಾವಬೋಧದಲ್ಲಿ ತಿಳಿಯಬೇಕು. ಅಥವಾ ತಾಮ್ರಪರ್ಣಿ ಆಚಾರ್ಯರು ಬರೆದಿರುವ ಟಿಪ್ಪಣಿಯಲ್ಲಿಯೂ ತಿಳಿಯಬಹುದು.)

**प्रकाशः** – उत्तरवाक्यं विवृणोति – **मुख्येति** ।। एतदग्रेतनवाक्ये ''प्रधानादेरल्पत्वं परमात्मनस्स्वतन्त्रत्वं प्रधानादिविन्यस्तत्वं च भवेत्'' इत्यत्राल्पत्वमित्यनुवादो न युक्तः । प्राक् परिच्छिन्नत्वेनानुक्तेरित्यत आह – **अल्पत्वमितीति** ।।

ಮುಂದಿನ ಉತ್ತರಿಸುವ ವಾಕ್ಯವನ್ನು ಗ್ರಂಥಕಾರರು ವಿವರಿಸುತ್ತಿದ್ದಾರೆ 'ಮುಖ್ಯ' ಇತ್ಯಾದಿಯಾಗಿ. ಮುಂದಿನ ವಾಕ್ಯದಲ್ಲಿ 'ಪ್ರಧಾನಾದೇರಲ್ಪತ್ವಂ ಪರಮಾತ್ಮನಃ ಸ್ವತಂತ್ರತ್ವಂ ಪ್ರಧಾನಾದಿವಿನ್ಯಸ್ತತ್ವಂ ಚ ಭವೇತ್' ಎಂಬುದಾಗಿ 'ಅಲ್ಪತ್ವಮ್' ಎಂದು ಅನುವಾದ ಮಾಡಿದ್ದು ಯುಕ್ತವಲ್ಲ. ಏಕೆಂದರೆ ಪ್ರಧಾನವು ಪರಿಚ್ಛಿನ್ನವಾಗಿದೆಯೆಂದು ಹೇಳಿಯೇ ಇಲ್ಲವಲ್ಲ ? ಎಂಬ ಪ್ರಶ್ನೆಗೆ 'ಅಲ್ಪತ್ವಮ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – ''प्रकरणात्'' इति सूत्रे ''इत्युक्तार्थविस्मरणविजृम्भितं साधकमस्माकं न परस्य'' इति वाक्यं भावानवगमात् विवृणोति – **इत्युक्तार्थेति** ।।

अधिकरणान्ते "एष इति चमसविवक्षया । दक्षिणान्नं वनुते यो न आत्मेतिवत्" इत्युक्तं दुर्गमत्वात् व्यनक्ति ।। **दक्षिणेति ।।**

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे आनुमानिकाधिकरणं सम्पूर्णम् ।।१।।**

'ಪ್ರಕರಣಾತ್' ಎಂಬ ಸೂತ್ರದಲ್ಲಿ 'ಇತ್ಯುಕ್ತಾರ್ಥವಿಸ್ಮರಣವಿಜೃಂಭಿತಂ ಸಾಧಕಮಸ್ಮಾಕಂ ನ ಪರಸ್ಯ' ಎಂಬ ವಾಕ್ಯವಿದೆ. ಇದರ ಅಭಿಪ್ರಾಯವು ಸ್ಪಷ್ಟವಾಗದ ಕಾರಣ ಸ್ವತಃ ಗ್ರಂಥಕಾರರು ವಿವರಿಸುತ್ತಿದ್ದಾರೆ 'ಇತ್ಯುಕ್ತಾರ್ಥ' ಇತ್ಯಾದಿಯಾಗಿ. ಅಧಿಕರಣದ ಕೊನೆಯಲ್ಲಿ 'ಏಷ ಇತಿ ಚಮಸವಿವಕ್ಷಯಾ । ದಕ್ಷಿಣಾನ್ನಂ ವನುತೇ ಯೋ ನ ಆತ್ಮೇತಿವತ್' ಎಂದು ಹೇಳಿದ್ದಾರೆ. ಇದರ ಅರ್ಥವು ದುರ್ಗಮವಾದ್ದರಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ 'ದಕ್ಷಿಣ' ಇತ್ಯಾದಿಯಾಗಿ.

ಇಲ್ಲಿಗೆ ಸರ್ವತಂತ್ರ ಸ್ವತಂತ್ರರಾದ ಶ್ರೀಸುಧೀಂದ್ರತೀರ್ಥರ ಗುರುಪಾದರ ಶಿಷ್ಯಂದಿರಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ರಚಿತವಾದ ಪ್ರಕಾಶಟಿಪ್ಪಣಿಯಲ್ಲಿ ಅನುಮಾನಿಕಾಧಿಕರಣದ ಕನ್ನಡಾನುವಾದದಲ್ಲಿ ಮುಕ್ತಾಯವಾಯಿತು.

**गुरुराजीयम्** – ननु प्रज्ञाशब्दस्य प्रज्ञावद्वाचकत्वं कुत इत्यतो व्याकरणस्मृतेरित्याह – **प्रज्ञेति** ।। ननु प्रज्ञ एव प्राज्ञ इति स्वार्थिकोऽण्प्रत्ययः किं न स्यात् । तथाच न प्राज्ञशब्दस्य प्रज्ञावद्वाचकत्वसिद्धिरिति चेत्तर्हि प्रकर्षेण जानातीति प्रज्ञ इति प्रज्ञशब्देनैव प्रज्ञावत्त्वसिद्धेः स्वार्थो वैयर्थ्यापरपर्यायश्चेतीदमेवोदाहृतम् ।। **उक्तदोषत्वादिति** ।। त्रयाणामेव प्रश्नेपि इन्द्रियेभ्यः परा ह्यर्था इत्यादौ त्रयातिरिक्तस्यन्द्रियादेरिव प्रधानस्याप्युक्तिसंभवात्तस्यान्यार्थमुक्तौ च प्रधानस्याप्य व्यक्तात्पुरुषः पर इत्यत्र पुरुषोक्तयर्थमियमुक्तिरस्त्वित्युक्तदोषत्वादित्यर्थः।।

।। इति श्रीकेशवभट्टारकेण विरचितायां भावदीपिकायाम् आनुमानिकाधिकरणं सम्पूर्णम् ।। १।।




'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬುದರಿಂದ ಭಕ್ತಿಯೆಂಬ ಉಪಾಸನದ ಬಗ್ಗೆ 'ಅಣೋರಣೀಯಾನ್' ಇತ್ಯಾದಿ ವಾಕ್ಯದಿಂದ ಉಪೇಯನಾದ ವಿಷ್ಣುವಿನ ಬಗ್ಗೆ 'ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್' ಇತ್ಯಾದಿ ವಾಕ್ಯದಿಂದ ಉಪೇತೃವಾದ ಜೀವನ ಬಗ್ಗೆ ಯಮನು ಉತ್ತರಿಸಿದ್ದಾನೆ. ಆದ್ದರಿಂದ ಸೂತ್ರದಲ್ಲಿರುವ 'ತ್ರಯಾಣಾಮ್' ಎಂಬ ಪದವು 'ಉಪಾಯ', 'ಉಪೇಯ', 'ಉಪಾಸಕ' ಎಂಬ ಮೂರು ಅರ್ಥವುಳ್ಳದ್ದಾಗಿದೆ. ಆದ್ದರಿಂದ

**ಅನ್ಯತ್ರ ಧರ್ಮಾದನ್ಯತ್ರಾಧರ್ಮಾದನ್ಯತ್ರಾಸ್ಮಾತ್ ಕೃತಾಕೃತಾತ್ ।**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ ಯತ್ತತ್ಪಶ್ಯಸಿ ತದ್ವದ ॥**

ಎಂಬುದು ವಿಷ್ಣುಪರವಾದ ಶ್ಲೋಕವಾಗಿದೆ.

ರಾಮಾನುಜರ ಸೂತ್ರ ವ್ಯಾಖ್ಯಾನವು ತಪ್ಪು. 'ತ್ರೀನ್ ವರಾನ್ ವೃಣೀಷ್ವ' ಎಂದು ಯಮದೇವರು ಹೇಳಿದ ಅನಂತರ ನಚಿಕೇತನು ಪ್ರಥಮ ವರಂ ವೃಣೇ, ದ್ವಿತಿಯೇನ ವೃಣೇ ವರೇನ, 'ವರಾಣಾಮೇಷ ವೃತಸ್ತೃತೀಯಃ' ಎಂಬುದಾಗಿ ಮೂರು ವರಗಳ ಕ್ರಮವನ್ನು ಉಪನಿಷತ್ತಿನಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಅದನ್ನೇ 'ತ್ರಯಾಣಾಮ್' ಎಂಬ ಪದದಿಂದ ಸ್ವೀಕರಿಸಬೇಕು. ಇದನ್ನು ಬಿಟ್ಟು ಉಪಾಯ, ಉಪೇಯ, ಉಪಾಸಕ ಇವುಗಳಿಗಿಂತ ವಿಲಕ್ಷಣವಾದ ಅರ್ಥವನ್ನು ಹೇಳುವುದು ಸರಿಯಲ್ಲ.

'ಮಹದ್ವಚ್ಚ' ಎಂಬ ಏಳನೆಯ ಸೂತ್ರಾರ್ಥವನ್ನು ರಾಮಾನುಜರು ಹಾಗೂ ಶಂಕರರು ಹೀಗೆ ಹೇಳುತ್ತಾರೆ - 'ವೇದಾಹಮೇತಂ ಪುರುಷಂ ಮಹಾಂತಮ್' ಎಂಬಲ್ಲಿರುವ 'ಮಹತ್' ಶಬ್ದವು ಸಾಂಖ್ಯಸ್ಮೃತಿಸಿದ್ಧವಾದ ಮಹತ್ತತ್ವವನ್ನು ಹೇಗೆ ಪ್ರತಿಪಾದನೆ ಮಾಡುವುದಿಲ್ಲವೋ, ಅದರಂತೆ ಅವ್ಯಕ್ತಶಬ್ದವೂ ಕೂಡ ಸಾಂಖ್ಯಸ್ಮೃತಿ- ಸಿದ್ಧವಾದ ಪ್ರಕೃತಿಯನ್ನು ಹೇಳುವುದಿಲ್ಲ. ಇಷ್ಟು 'ಮಹದ್ವಚ್ಚ' ಎಂಬ ಸೂತ್ರದ ಅರ್ಥ.

ಇದು ತಪ್ಪು. 'ವೇದಾಹಮೇತಂ' ಇತ್ಯಾದಿ ವಾಕ್ಯದಲ್ಲಿ 'ಆದಿತ್ಯವರ್ಣಮ್' ಇತ್ಯಾದಿಯಾದ ಬಾಧಕಗಳಿರುವ ಕಾರಣ ಮಹತ್ತತ್ವವನ್ನು ಸ್ವೀಕರಿಸಲು ಬರುವುದಿಲ್ಲ. ಆದರೆ ಅವ್ಯಕ್ತಶಬ್ದದಿಂದ ಪ್ರಧಾನವನ್ನು ಸ್ವೀಕರಿಸಲು ಅಂತಹ ಯಾವುದೇ ಬಾಧಕಗಳಿದಿರುವುದಿಲ್ಲ. ಆದ್ದರಿಂದ ಅದ್ವೈತಿಗಳ ಹಾಗೂ ವಿಶಿಷ್ಟಾದ್ವೈತಿಗಳ ಸೂತ್ರಾರ್ಥಗಳು ಅಯುಕ್ತವಾಗಿವೆ ಎಂಬುದು ನಿರ್ಣಯವಾಯಿತು.



# ಆನುಮಾನಿಕಾಧಿಕರಣ

(೧-೪-೧)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣ ಭಾವಬೋಧ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणम्

## अथ चतुर्थः पादः

### अनुमानिकाधिकरणम् (२।४।१)

न्या.वि. — अवरत्वादिधर्मनियन्तृत्वं तत्तादात्म्यवत्त्वं चेति द्विविधं ह्यवरत्वादि । 'निरनिष्टो निरवद्यः' इत्यादिश्रुतेस्तत्तद्दोषतादात्म्यात्यस्पृष्टिनियमात् विष्णोः 'नामानि सर्वाणि यमाविशन्ति' इति श्रुतिबलाच्च नियन्तृत्वमवरत्वादिकमित्यापतति । श्रुतिद्वयस्यापि निरवकाशत्वात् ।

मृत्युशब्दादिषु प्रसिद्धेश्च । प्रसिद्धत्वात्कर्तृव्युत्पत्तेः ।

तमेव मृत्युममृतं, तात दैवं सर्वात्मना वै हि परं परायणमित्यादेश्च ।

उपचारकल्पनायाश्च क्लिष्टत्वात् । प्रमाणाभावाच्च ।

नाव्यक्तादिशब्दानां परमात्मविषयत्वाङ्गीकारे सर्वमानविरोधः ।। १ ।।

ನ್ಯಾಯವಿವರಣೆ

೧. ಬೇರೆ ಪದಾರ್ಥಗಳಲ್ಲಿರುವ ಅವರತ್ವ ಮೊದಲಾದ ಧರ್ಮಗಳ ನಿಯಾಮಕತ್ವ.

೨. ಅವರಾದಿ ವಸ್ತುಗಳ ಅಭೇದ.

ಇವೆರಡು ಅವರಾದಿಶಬ್ದದ ಪ್ರವೃತ್ತಿನಿಮಿತ್ತವಾಗಿವೆ. 'ಯದಧೀನಾ ಗುಣಾ ಯಸ್ಯ ತದ್ಗುಣೀ ಸೋಽಭಿಧೀಯತೇ' ಇತ್ಯಾದಿ ಪ್ರಮಾಣದಿಂದ ಇದು ಸಿದ್ಧವಾಗಿದೆ. ಪರಮಾತ್ಮನಿಗೆ ಅವರತ್ವಾದಿಧರ್ಮಗಳು

ಇರುವ ಕಾರಣ ಅವರಾದಿ ಶಬ್ದವಾಚ್ಯತ್ವವು ಬರುವುದಿಲ್ಲ. ಹೊರತಾಗಿ, ಪ್ರಕೃತ್ಯಾದಿಗಳಲ್ಲಿರುವ ಅವರತ್ವಾದಿಧರ್ಮಗಳಿಗೆ ನಿಯಾಮಕನಾದ್ದರಿಂದಲೇ ಅವರಾದಿಶಬ್ದಗಳ ಪ್ರತಿಪಾದ್ಯತ್ವ ಬರುತ್ತದೆ. ಈ ಅಭಿಪ್ರಾಯದಿಂದ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. 'ನಿರನಿಷ್ಟಃ ನಿರವದ್ಯಃ' ಇವೇ ಮೊದಲಾದ ಶ್ರುತಿಗಳಿಂದ ವಿಷ್ಣುವಿಗೆ ಯಾವುದೇ ದೋಷಗಳ ಸಂಪರ್ಕವಿಲ್ಲವೆಂದು ಸಿದ್ಧವಾಗಿದೆ. ಮತ್ತು 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಶ್ರುತಿಯ ಆಧಾರದಿಂದ ಬೇರೆ ಪದಾರ್ಥಗಳಲ್ಲಿರುವ ಧರ್ಮಗಳ ನಿಯಾಮಕತ್ವದಿಂದಲೂ ಅವರಾದಿ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆಂದು ವಿವಕ್ಷಿಸಬೇಕು. ಅಂದರೆ 'ನಿರನಿಷ್ಟಃ ನಿರವದ್ಯಃ' ಎಂಬ ಶ್ರುತಿಗಾಗಲೀ, 'ನಾಮಾನಿ ಸರ್ವಾಣಿ' ಎಂಬ ಶ್ರುತಿಗಾಗಲೀ ಅರ್ಥಸಂಕೋಚವನ್ನು ಮಾಡಿ ಸಾವಕಾಶತ್ವವನ್ನು ಹೇಳಬಾರದು. ಎರಡೂ ಶ್ರುತಿಗಳು ನಿರವಕಾಶವೇ ಆಗಿರುತ್ತವೆ. ಬೇರೆಡೆ ಇರುವ ಪ್ರವೃತ್ತಿನಿಮಿತ್ತಕ್ಕೆ ಯಾರು ಪ್ರೇರಕನಾಗಿರುತ್ತಾನೋ, ಅವನಲ್ಲಿ ಆ ಶಬ್ದವು ಸಮನ್ವಯವಾಗುತ್ತದೆ. ಉದಾ : 'ಮೃತ್ಯು' ಶಬ್ದಕ್ಕೆ 'ಮರಣ' ಎಂದರ್ಥ. ಆದರೆ ಬೇರೆಯವರ ಮರಣಕ್ಕೆ ಕಾರಣನಾಗಿರುವುದರಿಂದ ಯಮದೇವರನ್ನು 'ಮೃತ್ಯು' ಎಂದು ಎಲ್ಲರೂ ಕರೆಯುತ್ತಾರೆ. ವಿಷ್ಣುವಿನಲ್ಲಿ ಅವರಾದಿಶಬ್ದವಾಚ್ಯತ್ವ ಮಾತ್ರವಲ್ಲ. 'ಸ ಬದ್ಧಃ, ಸ ದುಃಖಿ, ಸ ಬಂಧ ಇತಿ, ಸ ಬಂಧಯತಿ' ಇತ್ಯಾದಿ ಶ್ರುತಿವಾಕ್ಯದಂತೆ ಪರಮಾತ್ಮನು ಸಂಸಾರಿಗಳನ್ನು ಬಂಧನ ಮಾಡುತ್ತಾನಾದ್ದರಿಂದ ಬದ್ಧನೆಂದು, ದುಃಖವನ್ನು ನೀಡುತ್ತಾನಾದ್ದರಿಂದ 'ದುಃಖೀ' ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ಅನೇಕ ಶ್ರುತಿಗಳು ಬದ್ಧಾದಿ ಶಬ್ದಗಳಿಗೆ ಮಹಾವಿಷ್ಣುವಿನಲ್ಲಿ ಕರ್ತೃವ್ಯುತ್ಪತ್ತಿಯನ್ನು ತಿಳಿಸುತ್ತಿವೆ.

ಶ್ರೀಹರಿಯನ್ನು ಸಂಸಾರದಿಂದ ಮೋಚಕನನ್ನಾಗಿ ತಿಳಿಯಬೇಕು. ವಿಷ್ಣುವು ಎಲ್ಲ ವಿಧಗಳಿಂದಲೂ ಸರ್ವೋತ್ತಮನಾಗಿದ್ದಾನೆ. ಮುಖ್ಯಾರ್ಥನಾಗಿದ್ದಾನೆ. ಇವೇ ಮೊದಲಾದ ಸ್ಮೃತಿಗಳಿಂದಲೂ ಅನ್ಯಗತ ಪ್ರವೃತ್ತಿನಿಯಾಮಕತ್ವವು ವಿಷ್ಣುವಿನಲ್ಲಿ ಸಿದ್ಧವಾಗುತ್ತದೆ.

'ಮೃತ್ಯು' ಮೊದಲಾದ ಶಬ್ದಗಳನ್ನು ಔಪಚಾರಿಕವೆಂದು ಕಲ್ಪಿಸಬಾರದು. ಹಾಗಾದಲ್ಲಿ 'ಸಿಂಹೋ ದೇವದತ್ತಃ' ಎಂಬಲ್ಲಿಯೂ ದೇವದತ್ತನು ಸಿಂಹಸದೃಶನು ಎಂಬರ್ಥದಲ್ಲಿ ಗೌಣಾರ್ಥವನ್ನು ಮಾಡದೇ ಇರಬೇಕಾದೀತು ಎಂದರೆ ಮುಖ್ಯವಾದ ಅರ್ಥಕ್ಕೆ ಬಾಧವು ಇರುತ್ತದೆ. ಬಾಧವೆಂಬ ಪ್ರಮಾಣವಿರುವ ಪ್ರಯುಕ್ತ ಸಿಂಹಶಬ್ದಕ್ಕೆ ಗೌಣಾರ್ಥದ ಕಲ್ಪನೆಯನ್ನು ಮಾಡಬೇಕು. ಆದರೆ ಪ್ರಕೃತ ಅಂತಹ ಪ್ರಮಾಣವಿಲ್ಲದ ಕಾರಣ ಗೌಣಪ್ರಯೋಗವೆಂದು ಕಲ್ಪಿಸಬಾರದು.

'ಅವ್ಯಕ್ತಾತ್ ಪುರುಷಃ ಪರಃ' ಇವೇ ಮೊದಲಾದ ವಾಕ್ಯಗಳಲ್ಲಿ ಅವ್ಯಕ್ತ ಮೊದಲಾದ ಶಬ್ದಗಳಿಗೆ ಭಗವದ್ವಿಷಯಕತ್ವವನ್ನು ಅಂಗೀಕಾರ ಮಾಡಿದರೆ ಪುರುಷನಲ್ಲಿರುವ ಪರತ್ವಕ್ಕೆ ಅವಧಿಯಾಗಿ ಅವರತ್ವಾದಿಗಳು ಬರುತ್ತವೆ. ಅಂದರೆ ಅವ್ಯಕ್ತನು ನೀಚನು, ಪುರುಷನು ಶ್ರೇಷ್ಠನು ಎಂದು ಅವ್ಯಕ್ತನಿಗಿಂತ ಪುರುಷನು ಶ್ರೇಷ್ಠನೆಂದಾಗುತ್ತಾನೆ. ಆದ್ದರಿಂದ 'ನತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ' ಶ್ರೀಹರಿಗೆ ಸಮಾನನಾಗಲೀ, ಅಧಿಕನಾಗಲೀ ಯಾರೂ ಇರುವುದಿಲ್ಲ. ಇವೇ ಮೊದಲಾದ ಸಕಲಪ್ರಮಾಣಗಳಿಂದ ವಿರೋಧವು

ಪ್ರಾಪ್ತವಾಗುತ್ತದೆ. ಆದ್ದರಿಂದ ವಿಷ್ಣುವೇ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನೆಂದು ಹೇಳಿದಾಗ ಅವನಲ್ಲಿ ಅವರತ್ವಾದಿಗಳು ಬರಬೇಕಾಗುತ್ತವೆ. ಆವಾಗಲೇ ಸರ್ವಪ್ರಮಾಣಗಳ ವಿರೋಧವೂ ಕೂಡ ಬರುತ್ತದೆ. ಆದ್ದರಿಂದ ಪ್ರಧಾನಾದಿಗಳೇ ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯವೆಂಬ ಪೂರ್ವಪಕ್ಷವು ಪ್ರಾಪ್ತವಾಗುತ್ತದೆ. ಈ ಪೂರ್ವಪಕ್ಷಕ್ಕೆ ದೋಷಗಳ ಸಂಪರ್ಕವೇ ಇರುವುದಿಲ್ಲ ಎಂಬ ನಿಯಮದಿಂದ ವಿಷ್ಣುವು ಅವ್ಯಕ್ತಾದಿಶಬ್ದಗಳಿಗೆ ನಿಯಾಮಕನಾಗಿರುವ ಕಾರಣ ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯನೆಂಬ ಸಿದ್ಧಾಂತವು ಸ್ಥಾಪಿತವಾಗುತ್ತದೆ.

## ನ್ಯಾಯವಿವರಣೆ ಟೀಕೆ

### ನಾಲ್ಕನೆಯ ಪಾದ ಪ್ರಾರಂಭ

**भा.बो.—** अन्यत्रैव प्रसिद्धाव्यक्तादिशब्दसमन्वयार्थं चतुर्थः पादः प्रवृत्तः । एतत्पादीयाधिकरणपूर्वपक्षसिद्धान्तन्यायाः सङ्ग्रहेण अनुव्याख्यायामुक्ताः ।

ಅನ್ಯತ್ರೈವಪ್ರಸಿದ್ಧವಾದ ಅವ್ಯಕ್ತ ಮೊದಲಾದ ಶಬ್ದಗಳ ಸಮನ್ವಯಕ್ಕಾಗಿ ನಾಲ್ಕನೆಯ ಈ ಪಾದವು ಹೊರಟಿದೆ. ಈ ಪಾದದಲ್ಲಿರುವ ಎಲ್ಲಾ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತ ನ್ಯಾಯಗಳನ್ನು ಅನುವ್ಯಾಖ್ಯಾನದಲ್ಲಿ ಸಂಗ್ರಹಿಸಿದ್ದಾರೆ.

सर्वमानविरोधश्च व्युत्पत्तेरप्यशक्यता ।
परस्परविरोधश्च विरोधः कार्यतद्वतोः ।
स्त्रीलिङ्गत्वं निषेधश्च युक्तयः पूर्वपक्षगाः ।।
दोषात्यस्पृष्टिनियमः शब्दार्थाऽनेकता तथा ।
बहुरूपत्वमीशस्य व्यक्ताऽव्यक्तिविशेषिता ।।
उत्पादनं स्वदेहाच्च दुर्जनाव्यक्तता तथा ।
इत्याद्या युक्तयः साक्षात् सिद्धान्तस्थापका इह ।। इति ।

ಸರ್ವಪ್ರಮಾಣವಿರೋಧ, ವ್ಯುತ್ಪತ್ತಿಯು ಅಶಕ್ಯವಾಗುವುದು, ಪರಸ್ಪರ ವಿರೋಧ, ಕಾರ್ಯಕಾರಣ ವಿರೋಧ, ಸ್ತ್ರೀಲಿಂಗ, ನಿಷೇಧ ಇವು ಪೂರ್ವಪಕ್ಷಸಾಧಕಯುಕ್ತಿಗಳು.

ಸರ್ವಥಾ ದೋಷಸ್ಪರ್ಶವಿಲ್ಲದಿರುವುದು, ಶಬ್ದಾರ್ಥಗಳು ಅನೇಕವಾಗಿರುವುದು, ಪರಮಾತ್ಮನಿಗೆ ಅನೇಕ ರೂಪಗಳಿರುವುದು, ವ್ಯಕ್ತತ್ವ ಅವ್ಯಕ್ತತ್ವಗಳಿಂದ ವಿಶೇಷವಿರುವುದು, ತನ್ನ ಶರೀರದಿಂದ ನೇರವಾಗಿ ಸೃಷ್ಟಿ ಮಾಡುವುದು, ದುಷ್ಟರಿಗೆ ವ್ಯಕ್ತವಾಗದಿರುವುದು ಇವೇ ಮೊದಲಾದವು ಸಿದ್ಧಾಂತಸ್ಥಾಪಕಯುಕ್ತಿಗಳು.

ಪರಿಪೂರ್ಣಚಂದ್ರಿಕಾ

।। आनुमानिकमप्यकेषामिति चेन्न शरीररूपकविन्यस्तगृहीतेर्दर्शयति च ।। इत्यत्र 'अव्यक्तात् पुरुषः परः' इति वाक्यगताव्यक्तादिशब्दवाच्यं किं प्रधानादि उत विष्णुरिति अवरत्वादिलिङ्गापादितान्यत्रप्रसिद्धिसमन्वयसूत्राभ्यां सन्देहे प्रधानाद्येवेति पूर्वः पक्षः । विष्णुरेवेति सिद्धान्तः ।

• 'ಆನುಮಾನಿಕಮಪ್ಯಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇರ್ದರ್ಶಯತಿ ಚ' ಎಂಬುದಾಗಿ ಈ ಪಾದದ ಮೊದಲನೆಯ ಆನುಮಾನಿಕಾಧಿಕರಣವು ಹೊರಟಿದೆ. ಈ ಅಧಿಕರಣದಲ್ಲಿ 'ಅವ್ಯಕ್ತಾತ್ ಪುರುಷಃ ಪರಃ' ಎಂಬ ವಾಕ್ಯದಲ್ಲಿರುವ ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರಕೃತ್ಯಾದಿಗಳು ಪ್ರತಿಪಾದ್ಯವಾಗುತ್ತವೋ ? ಅಥವಾ ವಿಷ್ಣುವೋ? ಏಕೆಂದರೆ ಅವರತ್ವಾದಿಲಿಂಗಗಳಿಂದ ಅನ್ಯತ್ರಪ್ರಸಿದ್ಧಿಯು ಆಪಾದಿತವಾಗಿದೆ. ಸಮನ್ವಯಸೂತ್ರದಿಂದ ವಿಷ್ಣು ಅವ್ಯಕ್ತಶಬ್ದ ಪ್ರತಿಪಾದ್ಯನೆಂದು ತಿಳಿಯುತ್ತಿದೆ. ಆದ್ದರಿಂದ ಸಂದೇಹವು ಪ್ರಾಪ್ತವಾಗುತ್ತಿದೆ. ಪ್ರಧಾನಾದಿಗಳೇ ಅವ್ಯಕ್ತಶಬ್ದ ಪ್ರತಿಪಾದ್ಯಗಳೆಂದು ಪೂರ್ವಪಕ್ಷ. ವಿಷ್ಣುವೇ ಅವ್ಯಕ್ತಶಬ್ದ ಪ್ರತಿಪಾದ್ಯನೆಂದು ಸಿದ್ಧಾಂತ.

तत्र 'सर्वमानविरोधश्च' इति, 'दोषात्यस्पृष्टिनियमः' इति, उक्तपूर्वपक्ष-सिद्धान्तन्यायौ बाध्यबाधकभावं दर्शयन् विवृणोति – अवरत्वादीत्यादिना ।।

ಈ ಅಧಿಕರಣದಲ್ಲಿ 'ಸರ್ವಮಾನವಿರೋಧಶ್ಚ' ಎಂಬುದು ಪೂರ್ವಪಕ್ಷ ಸಾಧಕ ಯುಕ್ತಿಯಾಗಿದೆ. 'ದೋಷಾತ್ಯಸ್ಪೃಷ್ಟಿನಿಯಮಃ' ಎಂಬುದು ಸಿದ್ಧಾಂತ ಸ್ಥಾಪಕ ಯುಕ್ತಿಯಾಗಿದೆ. ಈ ಎರಡು ಯುಕ್ತಿಗಳಲ್ಲಿ ಬಾಧ್ಯಬಾಧಕಭಾವವನ್ನು ತೋರಿಸುತ್ತಾ ವಿವರಿಸಲು 'ಅವರತ್ವಾದಿ' ಎಂಬ ನ್ಯಾಯವಿವರಣವು ಹೊರಟಿದೆ.

ಮೊದಲನೆಯ ಈ ಅಧಿಕರಣದಲ್ಲಿ ಪರಮಾತ್ಮನ ಐಶ್ವರ್ಯಕ್ಕೆ ವಿರೋಧಿಯಾದ 'ದುಃಖೀ', 'ಬದ್ಧಃ', 'ಅವರಃ' ಮೊದಲಾದ ಎಲ್ಲ ಬಗೆಯ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ.

ಪೂರ್ವಪಕ್ಷ - ಸರ್ವಶಬ್ದಗಳಿಗೂ ಪರಮಾತ್ಮನಲ್ಲಿ ಸಮನ್ವಯವನ್ನು 'ತತ್ತು ಸಮನ್ವಯಾತ್' ಎಂಬಲ್ಲಿ ಪ್ರತಿಜ್ಞೆ ಮಾಡಲಾಗಿದೆ. ಆದರೆ 'ಅವ್ಯಕ್ತಾತ್ ಪುರುಷಃ ಪರಃ' ಅವ್ಯಕ್ತಕ್ಕಿಂತಲೂ ಪುರುಷನೇ ಶ್ರೇಷ್ಠನು ಎಂಬ ಶ್ರುತಿಯಲ್ಲಿರುವ ಅವ್ಯಕ್ತಶಬ್ದಕ್ಕೆ ಪರಮಾತ್ಮನಲ್ಲಿ ಸಮನ್ವಯವು ಸಾಧ್ಯವಿಲ್ಲ. ಒಂದುವೇಳೆ ಅವ್ಯಕ್ತವು ಪರಮಾತ್ಮನೇ ಆದಲ್ಲಿ ಅವ್ಯಕ್ತನಲ್ಲಿ ಪುರುಷನಿಗಿಂತಲೂ ನೀಚತ್ವವು ಬರಬೇಕಾದೀತು. ಪರಮಾತ್ಮನಿಗೆ ಅವರತ್ವವನ್ನು ಅಂಗೀಕಾರವನ್ನು ಮಾಡಿದರೆ ಪರಮಾತ್ಮನೇ ಸರ್ವೋತ್ತಮನೆಂದು ಹೇಳುವಂತಹ ಎಲ್ಲ ಶ್ರುತಿ-ಸ್ಮೃತಿಗಳ ವಿರೋಧವು ಪ್ರಾಪ್ತವಾಗುತ್ತದೆ. ಈ ಪೂರ್ವಪಕ್ಷಕ್ಕೆ ಆಧಾರವಾದ ಯುಕ್ತಿಯು, 'ಸರ್ವಮಾನೈರ್ವಿರೋಧಃ' (ಎಲ್ಲ ಪ್ರಮಾಣಗಳ ವಿರೋಧ) ಎಂದು ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿದೆ.

ಸಿದ್ಧಾಂತ - 'ಅವ್ಯಕ್ತಮಚಲಮ್' ಇತ್ಯಾದಿ ಶ್ರುತಿಗಳು ಹೇಳುವಂತೆ ಪರಮಾತ್ಮನೇ ಮುಖ್ಯವಾಗಿ ಅವ್ಯಕ್ತಶಬ್ದ ಪ್ರತಿಪಾದ್ಯನು. ಪ್ರಕೃತಿಯು ಪರಮಾತ್ಮನ ಶರೀರರೂಪದಂತೆ ಇರುವುದರಿಂದ ಅದಕ್ಕೂ ಅವ್ಯಕ್ತಶಬ್ದವಾಚ್ಯತ್ವವಿದೆ. ಹಾಗಾದರೆ ಪರಮಾತ್ಮನಿಗೆ ಅವರತ್ವವು ಬರುತ್ತದಲ್ಲವೇ? ಇಲ್ಲ. ಅವ್ಯಕ್ತಾದಿಗಳಲ್ಲಿರುವ ಅವರತ್ವಾದಿ ಧರ್ಮಗಳಿಗೆ ಪರಮಾತ್ಮನೇ ನಿಯಾಮಕನಾಗಿರುವುದರಿಂದ ಅವನು ಅವರಾದಿ ಶಬ್ದವಾಚ್ಯನಾದರೂ ವಾಸ್ತವಿಕವಾಗಿ ಅವರನಾಗುವುದಿಲ್ಲ. ರಾಜನು ಸ್ವತಃ ಯುದ್ಧವನ್ನು ಮಾಡದಿದ್ದರೂ ಅವನ ಸೈನಿಕರು ಯುದ್ಧವನ್ನು ಮಾಡಿ, ಜಯವನ್ನು ಗಳಿಸಿದಾಗ ಜಯವು ರಾಜನ ಅಧೀನವಾದ್ದರಿಂದ 'ರಾಜನು ಯುದ್ಧದಲ್ಲಿ ಜಯಿಸಿದನು' ಎಂಬ ಪ್ರಯೋಗವಿದೆ. ಅದರಂತೆ ಅವರತ್ವಾದಿಗಳು ಪರಮಾತ್ಮನ ಅಧೀನವಾಗಿರುವುದರಿಂದ ಅವನು 'ಅವರ' ಶಬ್ದವಾಚ್ಯನಾಗುತ್ತಾನೆ. ಆದರೆ ರಾಜನ ಸೈನಿಕರು ಸೋತಾಗ 'ರಾಜನು ಸೋತನು' ಎಂದು ಹೇಳಬಾರದು. ಹಾಗೆ ಹೇಳಿದರೆ ರಾಜನೇ ಸೋತನೆಂಬ ಸಂಶಯ ಬರುತ್ತದೆ. ಆದ್ದರಿಂದ ಹಾಗೆ ಪ್ರಯೋಗವಿಲ್ಲ. ಆದರೆ ಪರಮಾತ್ಮನಲ್ಲಿ ಯಾವುದೇ ದೋಷವಿಲ್ಲವೆಂದು 'ನಿರನಿಷ್ಟೋ ನಿರವದ್ಯಃ' ಮೊದಲಾದ ಶ್ರುತಿಗಳಿಂದ ನಿಶ್ಚಿತವಾಗಿದೆ. ಆದ್ದರಿಂದ ಪರಮಾತ್ಮನು ಅವರ ಎಂದು ಪ್ರಯೋಗಿಸಿದಾಗಲೂ ಯಾವುದೇ ಸಂಶಯಕ್ಕೆ ಅವಕಾಶವಿರುವುದಿಲ್ಲ. ಹಾಗಾಗಿ ಪರಮಾತ್ಮನು 'ಅವರ' ಶಬ್ದವಾಚ್ಯನಾಗಿದ್ದರೂ ವಾಸ್ತವಿಕವಾಗಿ ಅವನು ಅವರನಾಗಬೇಕಾಗಿಲ್ಲ. ಆದ್ದರಿಂದ ಪರಮಾತ್ಮನೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ. ಇಷ್ಟು ಸಿದ್ಧಾಂತ. ಈ ಸಿದ್ಧಾಂತಕ್ಕೆ ಸಾಧಕವಾದ ಯುಕ್ತಿಯು 'ದೋಷಾತ್ಯಸ್ಪೃಷ್ಟಿನಿಯಮಃ' (ಪರಮಾತ್ಮನಲ್ಲಿ ದೋಷಗಳ ಸ್ಪರ್ಶವಿಲ್ಲವೆಂಬ ನಿಯಮವು) ಎಂಬ ಶಬ್ದದಿಂದ ಹೇಳಲ್ಪಟ್ಟಿದೆ.

सिद्धान्तयुक्तिं सङ्गमयितुं तदुपयुक्तं तावदाह – **अवरत्वादिधर्मनियन्तृत्वमिति** ।। (तत्तादात्म्यमित्यत्र तच्छब्देनाऽवरादिवस्तुपरामर्शः ।) अवरत्वादीत्यतः पूर्वं परगतेति शेषः । अवरत्वादि अवरत्वादिशब्दप्रवृत्तिनिमित्तमित्यर्थः । हिशब्दः तस्य 'यदधीना गुणा यस्य तद्गुणी सोऽभिधीयते' इत्यादिप्रमाणप्रसिद्धिद्योतकः ।

ಸಿದ್ಧಾಂತ ಸಾಧಕವಾದ ಯುಕ್ತಿಯನ್ನು ಸಮನ್ವಯಗೊಳಿಸಲು ಉಪಯುಕ್ತವಾದ ಅಂಶವನ್ನು 'ಅವರತ್ವಾದಿಧರ್ಮನಿಯಂತೃತ್ವಮ್' ಎಂಬುದಾಗಿ ಹೇಳುತ್ತಿದ್ದಾರೆ. 'ಅವರತ್ವಾದಿ' ಎಂಬ ಪದಕ್ಕಿಂತ ಮೊದಲು 'ಪರಗತ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಅವರತ್ವಾದಿ' ಎಂದರೆ 'ಅವರತ್ವ' ಮೊದಲಾದ ಶಬ್ದಪ್ರವೃತ್ತಿನಿಮಿತ್ತಗಳು ಎಂದರ್ಥ. 'ಹಿ' ಎಂಬ ಶಬ್ದವು 'ಯದಧೀನಾ ಗುಣಾ ಯಸ್ಯ ತದ್ಗುಣೀ ಸೋಽಭಿಧೀಯತೇ' ಇವೇ ಮೊದಲಾದ ಪ್ರಮಾಣ ಪ್ರಸಿದ್ಧಿಯನ್ನು ದ್ಯೋತನ ಮಾಡುತ್ತಿದೆ.

नन्वस्त्वेवमवरादिशब्दप्रवृत्तिनिमित्तद्वैविध्यं, ततः किमित्यतो 'नेश्वरस्यावरत्वादि-धर्माऽधिकरणत्वेनावरादिशब्दवाच्यत्वम् । येन सर्वमानविरोधः स्यात् । किन्तु

परगतावरत्वादिधर्मनियन्तृत्वेनैव' इति विवक्षुरवरत्वादिधर्माधिकरणत्वेनावरादिशब्द-वाच्यत्वाभावे हेतुत्वेन सप्रमाणकं सिद्धान्तन्यायं विवृणोति – **निरनिष्ठ इति ।।**

'ಅವರ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತಗಳು ಎರಡು ಬಗೆಯಾಗಿವೆ ಎಂದು ಹೇಳಿದಿರಿ. ಆದರೂ ಕೂಡ ಈಶ್ವರನಲ್ಲಿ ಅವರಾದಿ ಶಬ್ದಗಳ ಪ್ರಯೋಗವು ಹೇಗೆ ಬರುತ್ತದೆ ? ಎಂದರೆ ಈಶ್ವರನು 'ಅವರತ್ವ' ಎಂಬ ಧರ್ಮಕ್ಕೆ ಅಧಿಕರಣನಾಗಿರುವ ಕಾರಣ 'ಅವರ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿರುವುದಲ್ಲ. ಹಾಗಾದಲ್ಲಿ ಸಕಲ ಪ್ರಮಾಣಗಳ ವಿರೋಧವು ಬರುತ್ತಿತ್ತು. ಹೊರತಾಗಿ, ಪ್ರಕೃತ್ಯಾದಿಗಳಲ್ಲಿರುವ ಅವರತ್ವಾದಿಧರ್ಮಗಳಿಗೆ ಈಶ್ವರನು ನಿಯಾಮಕನಾಗಿದ್ದಾನೆ. ಈ ಅಭಿಪ್ರಾಯದಿಂದ 'ಅವರತ್ವ' ಮೊದಲಾದ ಧರ್ಮಕ್ಕೆ ಅಧಿಕರಣನಾಗಿರುವ ಕಾರಣ, ಅವರಾದಿಶಬ್ದಗಳಿಂದ ವಾಚ್ಯನಲ್ಲ ಎಂಬ ವಿಷಯದಲ್ಲಿ ಪ್ರಮಾಣಪುರಸ್ಸರವಾಗಿ ಸಿದ್ಧಾಂತ ನ್ಯಾಯವನ್ನು ವಿವರಿಸುತ್ತಿದ್ದಾರೆ 'ನಿರನಿಷ್ಠಃ' ಇತ್ಯಾದಿಯಾಗಿ

ननु दोषात्यस्पृष्टिनियमस्य अवरादिशब्दवाच्यत्वाभावेनाप्युपपत्तेरवरत्वादि-नियन्तृत्वेन तच्छब्दवाच्यत्वापादकत्वं कथमित्यत उक्तम् – **नामानीति ।।**

'ದೋಷಾತ್ಯಸ್ಪೃಷ್ಟಿನಿಯಮಃ' ಎಂಬುದು ಸಿದ್ಧಾಂತ ಸಾಧಕವಾದ ಯುಕ್ತಿಯೆಂದು ಹೇಳಿದಿರಿ. ಈ ಯುಕ್ತಿಯು ಅವರಾದಿಶಬ್ದವಾಚ್ಯತ್ವವನ್ನು ಒಪ್ಪದಿದ್ದರೂ ಪರಮಾತ್ಮನಲ್ಲಿ ಯುಕ್ತವಾಗುತ್ತದೆ. ಆದ್ದರಿಂದ ಅವರತ್ವಾದಿಗಳಿಗೆ ನಿಯಾಮಕನಾದ್ದರಿಂದ ಅವರಾದಿಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂಬುದು ಅರ್ಥಾತ್ ಸಿದ್ಧವಾಗುತ್ತದೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ನಾಮಾನಿ ಸರ್ವಾಣಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ननु तथापि न परगतावरत्वादिनियन्तृत्वेनावरादिशब्दवाच्यत्वं विष्णोः । 'निरनिष्ठः' इत्यादि श्रुतेरर्थसङ्कोचेनावरत्वाद्यधिकरणत्वेनावरादिशब्दवाच्यत्वस्य वा 'नामानि सर्वाणि' इति श्रुतेरर्थसङ्कोचेनावरादिशब्दवाच्यत्वस्यैव वा सम्भवात् इत्यत आह – **श्रुतिद्वयस्येति ।।**

ಆದರೂ ಸಹ ಪ್ರಕೃತ್ಯಾದಿಗಳಲ್ಲಿರುವ ಅವರತ್ವಾದಿಗಳಿಗೆ ನಿಯಾಮಕನಾಗಿರುವ ಕಾರಣ ಪರಮಾತ್ಮನು ಅವರಾದಿಶಬ್ದಗಳಿಂದ ವಾಚ್ಯನಾಗುತ್ತಾನೆಂದು ಹೇಳುವುದು ಕೂಡುವುದಿಲ್ಲ. ಏಕೆಂದರೆ 'ನಿರನಿಷ್ಠಃ ನಿರವದ್ಯಃ' ಇತ್ಯಾದಿ ಶ್ರುತಿಗಳ ಅರ್ಥವನ್ನು ಸಂಕೋಚ ಮಾಡಿ ಅವರತ್ವಾದಿಗಳಿಗೆ ಅಧಿಕರಣನಾಗಿರುವುದರಿಂದ ಪರಮಾತ್ಮನು ಅವರಾದಿಶಬ್ದವಾಚ್ಯನಾಗಿದ್ದಾನೆಂದು ಹೇಳಬಹುದು. ಅಥವಾ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯಲ್ಲಿರುವ ಸರ್ವಪದಕ್ಕೆ ಸಂಕೋಚವನ್ನು ಮಾಡಿ ಅವರಾದಿಶಬ್ದಗಳಿಂದ ಪರಮಾತ್ಮನು ವಾಚ್ಯನಲ್ಲ ಎಂದೂ ಸಹ ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ಶ್ರುತಿದ್ವಯಸ್ಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ननु भवेदेतत्प्रधानादिगतशब्दप्रवृत्तिनिमित्तप्रेरकत्वेनेश्वरस्यावरादिशब्दवाच्यत्वं यद्यन्यगतप्रवृत्तिनिमित्तप्रेरकेऽसौ शब्दो वर्तत इति सिध्येत् । तदेव कुतः इत्यत आह – **मृत्युशब्दादिष्विति** ।।

ಪ್ರಕೃತ್ಯಾದಿಗಳಲ್ಲಿರುವ ಶಬ್ದ ಪ್ರವೃತ್ತಿನಿಮಿತ್ತಗಳಿಗೆ ಈಶ್ವರನು ಪ್ರೇರಕನಾದ್ದರಿಂದ, ಅವರಾದಿಶಬ್ದಗಳಿಂದ ವಾಚ್ಯನಾಗಿದ್ದಾನೆಂದು ಹೇಳಿದಿರಿ. ಇದು ಯಾವಾಗ ಸಮಂಜಸವಾಗುತ್ತಿತ್ತೆಂದರೆ ಬೇರೆಡೆ ಇರುವ ಪ್ರವೃತ್ತಿನಿಮಿತ್ತಗಳಿಗೆ ಈಶ್ವರನು ಪ್ರೇರಕನಾದ್ದರಿಂದ ಅವನಲ್ಲಿ ಆ ಶಬ್ದಗಳು ಸಮನ್ವಯಗೊಳ್ಳುತ್ತವೆಂಬುದು ಸಿದ್ಧವಾಗಿದ್ದರೆ. ಆದರೆ ಈ ವಿಷಯವು ಹೇಗೆ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ 'ಮೃತ್ಯುಶಬ್ದಾದಿಷು' ಎಂಬುದರಿಂದ ಉತ್ತರಿಸಿದ್ದಾರೆ.

अन्यगतमारकत्वादिनियामकत्वेन यमादिवाचकत्वस्येति शेषः । एवं तर्ह्यन्यगत प्रवृत्तिनिमित्तप्रेरके वृत्तिरमुख्या स्यादित्यतो वाऽऽह – **मृत्युशब्दादिष्विति** ।।

'ಮೃತ್ಯುಶಬ್ದಾದಿಷು' ಎಂಬಲ್ಲಿ 'ಅನ್ಯಗತಮಾರಕತ್ವಾದಿನಿಯಾಮಕತ್ವೇನ ಯಮಾದಿವಾಚಕತ್ವಸ್ಯ' ಎಂಬುದನ್ನು ಶೇಷಪೂರಣ ಮಾಡಿಕೊಳ್ಳಬೇಕು. ಬೇರೆಯವರಲ್ಲಿರುವ ಮಾರಕತ್ವಕ್ಕೆ ಯಮದೇವರು ನಿಯಾಮಕರಾಗಿರುವ ಕಾರಣ ಮೃತ್ಯುಶಬ್ದವು ಯಮನನ್ನೇ ಹೇಳುತ್ತದೆಂದಭಿಪ್ರಾಯ. ಹಾಗಾದರೆ ಬೇರೆಯವರಲ್ಲಿರುವ ಪ್ರವೃತ್ತಿನಿಮಿತ್ತಕ್ಕೆ ಈಶ್ವರನು ಪ್ರೇರಕನಾಗಿರುವ ಕಾರಣ ಈಶ್ವರನಲ್ಲಿ ಪ್ರಯೋಗವು ಅಮುಖ್ಯವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಮೃತ್ಯುಶಬ್ದಾದಿಷು' ಎಂಬುದರಿಂದ ಉತ್ತರಿಸಿದ್ದಾರೆ.

मृत्युशब्दस्य यमादिवाचकत्वस्य प्रसिद्धेः बहुलप्रयोगसिद्धत्वात् । बहुलप्रयोगसिद्धस्य च मुख्यत्वादित्यर्थः ।

'ಮೃತ್ಯುಶಬ್ದಸ್ಯ' ಎಂದರೆ 'ಯಮದೇವರನ್ನು ಪ್ರತಿಪಾದನೆ ಮಾಡುವ ಮೃತ್ಯುಶಬ್ದವು' ಎಂದರ್ಥ. ಮೃತ್ಯುಶಬ್ದದ ಪ್ರಯೋಗವು ಯಮದೇವರಲ್ಲಿ ಹೆಚ್ಚಾಗಿ ಕಾಣಿಸುತ್ತಿದೆ. ಎಲ್ಲಿ ಬಹಳವಾದ ಪ್ರಯೋಗವಿರುತ್ತದೋ, ಶಬ್ದವು ಆ ಅರ್ಥದಲ್ಲಿ ಮುಖ್ಯವೂ ಆಗಿರುತ್ತದೆ.

न केवलमुक्तन्यायेनावरादिशब्दवाच्यत्वं विष्णोः किन्तु 'स बद्धः स दुःखी स बद्धयति स दुःखयति' इत्यादिश्रुतिषु बद्धादिशब्दानां विष्णौ कर्तृव्युत्पत्तेः प्रसिद्धत्वाच्चेत्याह – **प्रसिद्धत्वादिति** ।।

ಹಿಂದೆ ಹೇಳಿದ ನ್ಯಾಯದಿಂದ ಅವರಾದಿಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆಂದಷ್ಟೇ ಅಲ್ಲ. 'ಸ ಬದ್ಧಃ', 'ಸ ದುಃಖೀ', 'ಸ ಬದ್ಧಯತಿ', 'ಸ ದುಃಖಯತಿ' ಇವೇ ಮೊದಲಾದ ಶ್ರುತಿಗಳಿಂದಲೂ

ಬದ್ಧಾದಿಶಬ್ದಗಳಿಗೆ ಕರ್ತೃವ್ಯುತ್ಪತ್ತಿಯನ್ನು ಮಾಡಿದಾಗ ವಿಷ್ಣುವಿನಲ್ಲೇ ಆ ಎಲ್ಲ ಶಬ್ದಗಳು ಪ್ರಸಿದ್ಧವಾಗುತ್ತವೆ. ಈ ವಿಷಯವನ್ನು 'ಪ್ರಸಿದ್ಧತ್ವಾತ್' ಎಂಬುದರಿಂದ ಹೇಳಿದ್ದಾರೆ.

स्मृतावपि विष्णौ कर्तृव्युत्पत्ति (अन्यगतप्रवृत्तिनिमित्तनियामकत्व)मपेक्ष्य शब्दप्रयोगोऽस्तीत्याह – **तमेवेति** ।।

ಸ್ಮೃತಿಯಲ್ಲಿಯೂ ಕೂಡ ಬೇರೆಯವರಲ್ಲಿರುವ ಪ್ರವೃತ್ತಿನಿಮಿತ್ತಗಳಿಗೆ ಪರಮಾತ್ಮನು ನಿಯಾಮಕನಾಗಿದ್ದಾನೆ ಎಂಬ ಅರ್ಥವನ್ನು ವಿವಕ್ಷಿಸಿ ಕರ್ತೃವ್ಯುತ್ಪತ್ತಿಯನ್ನು ಮಾಡಿದಾಗ 'ಬದ್ಧಃ' ಮೊದಲಾದ ಶಬ್ದಗಳು ಈಶ್ವರನಲ್ಲಿ ಯುಕ್ತವಾಗುತ್ತವೆ ಎಂಬುದನ್ನು 'ತಮೇವ' ಎಂಬುದರಿಂದ ತೋರಿಸುತ್ತಿದ್ದಾರೆ.

मृत्युं मारकम् । अमृतं मोचकम् । नन्वत्र मृत्युप्रमुखशब्दानामौपचारिकत्वं किं न स्यादित्यत आह – **उपचारेति** ।। तर्हि सिंहो देवदत्त इत्यत्रापि न स्यादित्यत आह – **प्रमाणाभावादिति** ।।

'ಮೃತ್ಯುಂ' ಎಂದರೆ ಸಂಹರಿಸುವವನು ಎಂದರ್ಥ. 'ಅಮೃತಂ' ಎಂದರೆ ಮೋಚಕನು ಎಂದರ್ಥ.

'ಮೃತ್ಯು' ಮೊದಲಾದ ಶಬ್ದಗಳು ಯಮದೇವರಲ್ಲಿ ಔಪಚಾರಿಕವಾಗಿವೆಯೆಂದು ಹೇಳಬಹುದಲ್ಲವೇ? ಈ ಪ್ರಶ್ನೆಗೆ 'ಉಪಚಾರಕಲ್ಪನಾಯಾಃ' ಎಂಬುದರಿಂದ ಉತ್ತರಿಸಿದ್ದಾರೆ. ಹಾಗಾದರೆ 'ಸಿಂಹೋ ದೇವದತ್ತಃ' ಎಂಬಲ್ಲಿಯೂ ಗೌಣಪ್ರಯೋಗವನ್ನು ಹೇಳುವುದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ಪ್ರಮಾಣಾಭಾವಾತ್' ಎಂಬುದರಿಂದ ಉತ್ತರಿಸಿದ್ದಾರೆ.

तत्र मुख्यार्थबाधानुसन्धानरूप प्रमाणसद्भावादौपचारिकत्वम् । अत्र तु तदभावान्नौपचारिकत्वमिति भावः ।

'ಸಿಂಹೋ ದೇವದತ್ತಃ' ಎಂಬಲ್ಲಿ 'ಮುಖ್ಯಾರ್ಥಬಾಧಾನುಸಂಧಾನ' ಎಂಬ ಪ್ರಮಾಣವಿರುವ ಕಾರಣ ಔಪಚಾರಿಕವೆನ್ನಬಹುದು. ಆದರೆ ಪ್ರಕೃತ ಮೃತ್ಯುಶಬ್ದದಲ್ಲಿ ಅಂತಹ ಮುಖ್ಯಾರ್ಥ ಬಾಧವಿಲ್ಲದ ಕಾರಣ ಔಪಚಾರಿಕವೆಂದು ಹೇಳಬಾರದು.

सिद्धान्तन्यायफलत्वात् पूर्वपक्षन्यायनिषेधस्य । इदानीं तन्निषेधपूर्वं पूर्वपक्षन्यायं विवृणोति – **नाव्यक्तादिशब्दानामिति** ।।

ಪೂರ್ವಪಕ್ಷನ್ಯಾಯದ ನಿಷೇಧವೇ ಸಿದ್ಧಾಂತನ್ಯಾಯದ ಫಲರೂಪವಾಗಿದೆ. ಆದ್ದರಿಂದ ಪ್ರಕೃತ ಪೂರ್ವಪಕ್ಷನ್ಯಾಯವನ್ನು ನಿಷೇಧ ಮಾಡುವ ಮೂಲಕ ವಿವರಿಸುತ್ತಿದ್ದಾರೆ 'ನಾವ್ಯಕ್ತಾದಿಶಬ್ದಾನಾಮ್' ಎಂಬುದರಿಂದ.

'अव्यक्तात् पुरुषः परः' इत्यादिवाक्यगताव्यक्तादिशब्दानां परमात्मवाचकत्वाङ्गीकारे पुरुषगतपरत्वावधित्वादिना अवरत्वादिप्राप्त्या 'न तत्समश्चाभ्यधिकश्च दृश्यते' इत्यादिसर्वमानविरोधो नेत्यर्थः ।

'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ವಾಕ್ಯದಲ್ಲಿರುವ ಅವ್ಯಕ್ತ ಮೊದಲಾದ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಒಪ್ಪಿದರೆ ಪುರುಷನಲ್ಲಿರುವ ಪರತ್ವಾವಧಿತ್ವದಿಂದ ಅವರತ್ವವು ಪ್ರಾಪ್ತವಾಗುತ್ತದೆ. ಆವಾಗ 'ನ ತತ್ ಸಮಶ್ಚಾಭ್ಯಧಿಕಶ್ಚ ದೃಶ್ಯತೇ' ಇವೇ ಮೊದಲಾದ ಸಕಲ ಪ್ರಮಾಣಗಳ ವಿರೋಧವೂ ಬರುತ್ತದೆ ಎಂಬ ಪೂರ್ವಪಕ್ಷದಲ್ಲಿ ಮಾಡಿದ ಆಕ್ಷೇಪವು ಸರಿಯಲ್ಲ.

तथा च विष्णोरव्यक्तादिशब्दवाच्यत्वेऽवरत्वादिप्राप्तौ सर्वमानविरोधात् । प्रधानाद्येवाव्यक्तादिशब्दवाच्यमिति पूर्वपक्षे दोषात्यस्पृष्टिनियमाद् विष्णोरव्यक्तादि-नियामकत्वेनाव्यक्तादिशब्दवाच्यत्वमिति सिद्धान्त इति भावः ।

ಆದ್ದರಿಂದ ವಿಷ್ಣುವು ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯನೆಂದು ಹೇಳಿದರೆ ಸಕಲ ಪ್ರಮಾಣಗಳ ವಿರೋಧವು ಬರುತ್ತದೆ. ಆದ್ದರಿಂದ ಪ್ರಧಾನಾದಿಗಳೇ ಅವ್ಯಕ್ತಾದಿಶಬ್ದಗಳಿಂದ ಪ್ರತಿಪಾದ್ಯವೆಂದು ಪೂರ್ವಪಕ್ಷ.

ದೋಷಾತ್ಯಸ್ಪೃಷ್ಟಿನಿಯಮವಿರುವ ಕಾರಣ ವಿಷ್ಣುವು ಅವ್ಯಕ್ತಾದಿ ನಿಯಾಮಕನಾದ್ದರಿಂದ ಅವ್ಯಕ್ತಾದಿ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಆದರೂ ಅವರತ್ವಾದಿ ದೋಷಗಳು ವಿಷ್ಣುವಿನಲ್ಲಿ ಬರುವುದಿಲ್ಲ ಎಂಬುದು ಸಿದ್ಧಾಂತ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಆನುಮಾನಿಕಾಧಿಕರಣವು ಮುಗಿಯಿತು. .

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## अथ प्रथमाध्यायस्य चतुर्थः पादः

### आनुमानिकाधिकरणम् (१।४।१)

**अव्यक्तः कर्मवाक्यैश्च वाच्यः एकः जनार्दनः**

'ಅವ್ಯಕ್ತ', 'ದುಃಖೀ', 'ಬದ್ಧಃ', 'ವಸಂತ', 'ಜ್ಯೋತಿಃ' ಇವೇ ಮೊದಲಾದ ದೇವತಾ ತಾರತಮ್ಯ, ಕರ್ಮ ಅವುಗಳ ಕ್ರಮ, ಕಾಲ ಇವುಗಳನ್ನೆಲ್ಲಾ ಪ್ರತಿಪಾದನೆ ಮಾಡುವಂತಹ ಶಬ್ದಗಳು ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕಗಳೇ ಆಗುತ್ತವೆ.

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

### आनुमानिकाधिकरणम् (१।४।१)

नन्वेवं त्रिपाद्या जन्मादिसूत्रोक्तसर्वकर्तृत्वतत्सङ्गतपूर्णानन्दत्वादिप्रतिपादक-वाक्यस्थकतिपयशब्दवाच्यत्वोक्त्या विष्णौ कतिपयगुणसिद्धावपि आद्यसूत्रस्थ-ब्रह्मपदोक्तानन्तगुणत्वासिद्धिरेव ।

ಅನುಮಾನಿಕಾಧಿಕರಣ (೧-೪-೧)

ನಾಲ್ಕನೆಯ ಪಾದದ ಅವತಾರಿಕೆಯನ್ನು ಹೀಗೆ ತಿಳಿಯಬೇಕು - ಹಿಂದಿನ ಮೂರು ಪಾದಗಳಲ್ಲಿ ಜನ್ಮಾದಿ ಸೂತ್ರದಲ್ಲಿ ಪ್ರತಿಪಾದನೆ ಮಾಡಿದ ಸರ್ವಕರ್ತೃತ್ವ ಮತ್ತು ಅದಕ್ಕೆ ಸಂಬಂಧಪಟ್ಟ ಪೂರ್ಣಾನಂದತ್ವ ಮೊದಲಾದ ಗುಣಗಳನ್ನು ಪ್ರತಿಪಾದನೆ ಮಾಡುವಂತಹ ವಾಕ್ಯಗಳಲ್ಲಿರುವ ಕೆಲವು ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಲಾಯಿತು. ಇದರಿಂದ ವಿಷ್ಣುವಿನಲ್ಲಿ ಕೆಲವು ಗುಣಗಳಷ್ಟೇ ಸಿದ್ಧವಾಗುತ್ತವೆ. ಹೊರತು ಪ್ರಥಮಸೂತ್ರದಲ್ಲಿ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಎಲ್ಲ ಗುಣಗಳಿಂದ ಪರಿಪೂರ್ಣತ್ವವು ವಿಷ್ಣುವಿನಲ್ಲಿ ಪ್ರತಿಪಾದನೆ ಮಾಡಿದಂತೆ ಆಗುವುದಿಲ್ಲ.

**देवतातारतम्यकर्मक्रमकालादिबोधकवाक्यस्थाशेषशब्दवाच्यत्वस्य अनुक्तया समन्वय-सूत्रप्रतिज्ञाताशेषशब्दसमन्वयस्य अप्रतिपादनादित्यतः प्रवृत्तः चतुर्थः पादः ।**

ದೇವತಾತಾರತಮ್ಯ ಕರ್ಮಗಳು, ಅವುಗಳ ಕ್ರಮ ಮತ್ತು ಕಾಲ ಇವುಗಳನ್ನೆಲ್ಲಾ ಪ್ರತಿಪಾದನೆ ಮಾಡುವಂತಹ ವಾಕ್ಯಗಳಲ್ಲಿ ಯಾವ ಯಾವ ಶಬ್ದಗಳಿವೆಯೋ, ಆ ಎಲ್ಲ ಶಬ್ದಗಳನ್ನು ಮಹಾವಿಷ್ಣುವಿನಲ್ಲಿ ಪ್ರತಿಪಾದನೆ ಮಾಡಿರುವುದಿಲ್ಲ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಸಕಲಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ ಎಂಬ ಪ್ರಸಿದ್ಧಿಯನ್ನು ಸಮರ್ಥನೆ ಮಾಡಿದಂತೆ ಆಗಲಿಲ್ಲ. ಆದ್ದರಿಂದ ಸಕಲ ಶಬ್ದಸಮನ್ವಯವು ಯಾವಾಗ ಮಹಾವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲವೋ, ಆವಾಗ ಸಕಲ ಗುಣಪರಿಪೂರ್ಣತ್ವವೂ ಕೂಡ ಸಿದ್ಧವಾಗುವುದಿಲ್ಲವಲ್ಲವೇ? ಈ ಆಕ್ಷೇಪಕ್ಕೆ ಉತ್ತರಿಸಲು ಈ ನಾಲ್ಕನೆಯ ಪಾದವು ಪ್ರಾರಂಭವಾಗುತ್ತಿದೆ.

**तदर्थं भाषते – अव्यक्त इति । 'इत्याद्यन्यत्र नियतैरपि मुख्यतयोदितः । शब्दैरतोऽनन्तगुणो योगवृत्तयः' इत्यन्तिमश्लोकोऽप्यत्राकृष्यते । एको जनार्दन इत्यनुषज्यते ।**

ಈ ನಾಲ್ಕನೆಯ ಪಾದದ ಸಾರವನ್ನೇ ಅಣುಭಾಷ್ಯದಲ್ಲಿ 'ಅವ್ಯಕ್ತಃ ಕರ್ಮವಾಕ್ಯೈಶ್ಚ' ಇತ್ಯಾದಿಯಾಗಿ ಹೇಳಿದ್ದಾರೆ. 'ಇತ್ಯಾದ್ಯನ್ಯತ್ರ ನಿಯತೈರಪಿ ಮುಖ್ಯತಯೋದಿತಃ ಶಬ್ದೈರಥೋಽನಂತಗುಣೋ ಯಚ್ಛಬ್ದಾಃ ಯೋಗವೃತ್ತಯಃ' ಎಂಬ ಅಂತಿಮ ಶ್ಲೋಕವನ್ನು ಇಲ್ಲಿಯೂ ಕೂಡ ಆಕರ್ಷಣೆ ಮಾಡಬೇಕು. 'ಏಕೋ ಜನಾರ್ದನಃ' ಎಂಬುದು ಇಲ್ಲಿಯೂ ಅನುಷಂಗವಾಗುತ್ತದೆ. 'ಅವ್ಯಕ್ತ', 'ದುಃಖೀ', 'ಬದ್ಧಃ', 'ಅವರಃ', 'ವಸಂತ', 'ಜ್ಯೋತಿ', 'ಆಕಾಶ' ಇವೇ ಮೊದಲಾದ ದೇವತಾತಾರತಮ್ಯ, ಕರ್ಮ, ಅವುಗಳ ಕ್ರಮ, ಕಾಲ, ಇವುಗಳನ್ನು ಪ್ರತಿಪಾದನೆ ಮಾಡುವಂತಹ ವಾಕ್ಯದಲ್ಲಿ ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಿಂದ ಜನಾರ್ದನನೇ ಪರಮಮುಖ್ಯವೃತ್ತಿಯಿಂದ ವಾಚ್ಯನಾಗಿದ್ದಾನೆ. ಹೀಗೆ ಸೂತ್ರಕಾರರು ಈ ನಾಲ್ಕನೆಯ ಪಾದದಲ್ಲಿ ಪ್ರತಿಪಾದನೆ ಮಾಡಿದ್ದಾರೆ. ಆದ್ದರಿಂದ ಅನಂತ ಶಬ್ದಗಳಿಂದ ಪ್ರತಿಪಾದ್ಯನಾದ ಕಾರಣ. ಅನಂತಗುಣಪರಿಪೂರ್ಣನೂ ಆಗಿರುತ್ತಾನೆ ಎಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

इत्यादीति भिन्नं पदम् । क्रियाविशेषणं वा । अविभक्तिकोऽयं निर्देशो वा । तृतीयार्थे प्रथमा वा ।

ಅಣುಭಾಷ್ಯದಲ್ಲಿ 'ಇತ್ಯಾದಿ' ಎಂಬುದು ಬೇರೆ ಪದವೆಂದು ತಿಳಿಯಬೇಕು. ಅಥವಾ 'ಉದಿತಃ' ಎಂಬ ಕ್ರಿಯೆಯಲ್ಲಿ ವಿಶೇಷಣವಾಗಿದೆ. ಅಥವಾ ತೃತೀಯಾ ವಿಭಕ್ತಿಯ ನಿರ್ದೇಶವನ್ನು ಮಾಡಿರುವುದಿಲ್ಲ. ಅಥವಾ ತೃತೀಯಾ ವಿಭಕ್ತ್ಯರ್ಥದಲ್ಲಿ ಪ್ರಥಮಾವಿಭಕ್ತಿಯೆಂದೂ ಕೂಡ ತಿಳಿಯಬಹುದು.

'इत्याद्यन्तर्याम्युच्यते' इत्यन्तर्यामिनयपूर्वपक्षभाष्यस्येत्यादिशब्दवत् । यथोक्तं तत्वप्रदिपे । 'इत्यादीति प्रथमा सप्तम्यर्थे । तृतीयार्थे वा । सप्तसु प्रथमेति सूत्रात् । क्रियाविशेषणं वा' इति ।

'ಇತ್ಯಾದ್ಯಂತರ್ಯಾಮ್ಯುಯುಚ್ಯತೇ' ಎಂಬಲ್ಲಿ ಯಾವರೀತಿಯಾಗಿ ಅಂತರ್ಯಾಮ್ಯಧಿಕರಣದ ಪೂರ್ವಪಕ್ಷ ಭಾಷ್ಯದಲ್ಲಿ 'ಇತ್ಯಾದಿ' ಎಂಬ ಪ್ರಯೋಗವು ಕಾಣಸುತ್ತಿದೆಯೋ, ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು. ಇದನ್ನೇ ತತ್ವಪ್ರದೀಪದಲ್ಲಿ 'ಇತ್ಯಾದೀತಿ ಪ್ರಥಮಾ ಸಪ್ತಮ್ಯರ್ಥೇ । ತೃತೀಯಾರ್ಥೇ ವಾ । ಸಪ್ತಸು ಪ್ರಥಮೇತಿ ಸೂತ್ರಾತ್ । ಕ್ರಿಯಾವಿಶೇಷಣಂ ವಾ' ಇತ್ಯಾದಿ ಎಂಬುದು ಪ್ರಥಮಾವಿಭಕ್ತಿಯೇ ಆಗಿದ್ದರೂ ಸಪ್ತಮ್ಯರ್ಥವನ್ನು ಹೇಳಬೇಕು. ಅಥವಾ ತೃತೀಯಾವಿಭಕ್ತ್ಯರ್ಥವನ್ನು ಹೇಳಬಹುದು. ಏಕೆಂದರೆ 'ಸಪ್ತಸು ಪ್ರಥಮಾ' ಎಂಬ ಸೂತ್ರವು ಎಲ್ಲಾ ವಿಭಕ್ತ್ಯರ್ಥದಲ್ಲಿಯೂ ಪ್ರಥಮಾವಿಭಕ್ತಿಯು ಬರುತ್ತಿದೆ ಎಂದು ನಿರ್ದೇಶಿಸುತ್ತಿವೆ. ಅಥವಾ 'ಉದಿತಃ' ಎಂಬ ಕ್ರಿಯೆಯಲ್ಲಿ ವಿಶೇಷಣವಾಗಿದೆಯೆಂದೂ ಕೂಡ ತಿಳಿಯಬಹುದು ಎಂದು.

तथा चायमर्थः । अव्यक्त इत्यादिभिः अव्यक्तदुःखिबद्धावरवसन्तज्योतिराकाशादिभिः देवतातारम्यकर्मक्रमादिबोधकवाक्यस्थैरित्यर्थः ।

ಆದ್ದರಿಂದ ಅಣುಭಾಷ್ಯದ ಶ್ಲೋಕಕ್ಕೆ ಹೀಗೆ ಅರ್ಥವನ್ನು ತಿಳಿಯಬೇಕು - 'ಅವ್ಯಕ್ತ', 'ದುಃಖೀ', 'ಬದ್ಧಃ', 'ಅವರಃ', 'ವಸಂತ', 'ಜ್ಯೋತಿಃ', 'ಆಕಾಶ' ಮೊದಲಾದ ಪದಗಳು ದೇವತಾ ತಾರತಮ್ಯ ಕರ್ಮ, ಕ್ರಮ ಮೊದಲಾದವುಗಳನ್ನು ಪ್ರತಿಪಾದನೆ ಮಾಡುತ್ತಿವೆ. ಇಂತಹ ಶಬ್ದಗಳೆಲ್ಲವೂ ಪರಮುಖ್ಯವೃತ್ತಿಯಿಂದ ಮಹಾವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ ಎಂದು.

अन्यत्र नियतैरपि नियमेनान्यत्र वर्तमानैरपि । अन्यत्रैव प्रसिद्धैरपीति यावत् । न केवलमन्यत्रोभयत्रप्रसिद्धैरित्यपेरर्थः ।

'ಅನ್ಯತ್ರ ನಿಯತೈರಪಿ' ಎಂದರೆ ನಿಯಮೇನ ಬೇರೆ ಪದಾರ್ಥಗಳಲ್ಲಿ ಪ್ರಸಿದ್ಧವಾಗಿದ್ದರೂ ಎಂದಭಿಪ್ರಾಯ. 'ಅಪಿ' ಶಬ್ದದಿಂದ ಕೇವಲ ಅನ್ಯತ್ರಪ್ರಸಿದ್ಧವಾದ ಅಥವಾ ಉಭತ್ರಪ್ರಸಿದ್ಧವಾದ

ಶಬ್ದಗಳಿಂದಷ್ಟೇ ಅಲ್ಲ ಎಂಬುದನ್ನು ಸಮುಚ್ಚಯ ಮಾಡಬೇಕು. 'ಅನ್ಯತ್ರೈವಪ್ರಸಿದ್ಧವಾದ ಶಬ್ದಗಳಿಂದಲೂ ಕೂಡ ಪರಮಮುಖ್ಯವೃತ್ತಿಯಿಂದ ಒಬ್ಬನೇ ಜನಾರ್ದನನು ಪ್ರತಿಪಾದ್ಯನಾಗಿರುತ್ತಾನೆ. ಹೀಗೆ ಸೂತ್ರಕಾರರು ಈ ಪಾದದಲ್ಲಿ ಪ್ರತಿಪಾದನೆ ಮಾಡಿದ್ದಾರೆ ಎಂದರ್ಥ.

**शब्दैर्मुख्यतया परममुख्यवृत्त्या एको जनार्दन उदितः । सूत्रकृता प्रतिपादितोऽस्मिन् पाद इत्यर्थः । अतोऽखिलशब्दवाच्यत्वात् अनन्तगुण इत्यर्थः । तावता कथमनन्तगुणतेत्यत उक्तम् – यच्छब्दा योगवृत्तय इति । यद्यस्मात् शब्दा हरौ यौगिका अत इत्यर्थः ।**

ಆದ್ದರಿಂದ ಶ್ರೀಹರಿಯು ಅನಂತಶಬ್ದಗಳಿಂದ ವಾಚ್ಯನಾದ ಕಾರಣ ಅನಂತಗುಣ ಪರಿಪೂರ್ಣನಾಗಿದ್ದಾನೆ. ಅನಂತಶಬ್ದಗಳಿಂದ ವಾಚ್ಯನಾದ ಮಾತ್ರಕ್ಕೆ ಅನಂತಗುಣ ಪರಿಪೂರ್ಣನು ಹೇಗೆ ಆಗುತ್ತಾನೆ ? ಎಂಬ ಪ್ರಶ್ನೆಗೆ 'ಯಚ್ಚಬ್ದಾ ಯೋಗವೃತ್ತಯಃ' ಎಂಬುದರಿಂದ ಉತ್ತರಿಸುತ್ತಾರೆ. ಯಾವ ಕಾರಣದಿಂದ ಶಬ್ದಗಳೆಲ್ಲವೂ ಶ್ರೀಹರಿಯಲ್ಲಿ ಯೌಗಿಕವಾಗಿವೆಯೋ, ಆದ್ದರಿಂದಲೇ ಅನಂತಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ ಎಂದಭಿಪ್ರಾಯ.

**नन्वेवं देवतातारतम्यकर्मक्रमाद्यलौकिकसर्वपदार्थपरिलोपः तेषां शब्दैकवेद्यत्वादित्योऽपि – मुख्यतया अन्यत्र नियतैरपीति ।**

ಎಲ್ಲಾ ಶಬ್ದಗಳು ಶ್ರೀಹರಿಯನ್ನೇ ಪ್ರತಿಪಾದನೆ ಮಾಡುವುದಾದರೆ ಲೋಕದಲ್ಲಿ ಪ್ರಸಿದ್ಧವಾದ ದೇವತಾ ತಾರತಮ್ಯ, ಕರ್ಮ, ಕ್ರಮ ಇವೇ ಮೊದಲಾದ ಸಕಲ ಲೌಕಿಕಪದಾರ್ಥಗಳ ಸಿದ್ಧಿಯೇ ಆಗದಿರಬೇಕಾದೀತಲ್ಲವೇ? ಏಕೆಂದರೆ ಎಲ್ಲಾ ಶಬ್ದಗಳು ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತಿರುವುದರಿಂದ ಈ ಪದಾರ್ಥಗಳನ್ನು ಪ್ರತಿಪಾದಿಸುವ ಶಬ್ದಗಳೇ ಇಲ್ಲವೆಂದಾಯಿತು. ಈ ಪ್ರಶ್ನೆಗೆ 'ಮುಖ್ಯತಯಾ ಅನ್ಯತ್ರ ನಿಯತೈಃ' ಎಂಬುದರಿಂದ ಉತ್ತರಿಸಿದ್ದಾರೆ.

**निगमनिघण्ट्वादिलोकप्रसिद्धयोगरूढिरूपमुख्यवृत्त्या अन्यवाचकैरपि शब्दैस्तदबाधेन महायोगविद्वद्रूढिरूपपरममुख्यवृत्त्या उदित इति ।**

ನಿಗಮ, ನಿಘಂಟು, ಲೋಕಪ್ರಸಿದ್ಧಿ, ಯೋಗ, ರೂಢಿ ಮೊದಲಾದ ಮುಖ್ಯವೃತ್ತಿಯಿಂದ ಶಬ್ದಗಳು ಕಾಲ, ಕ್ರಮ ಮೊದಲಾದ ಬೇರೆ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ಈ ಅರ್ಥಕ್ಕೆ ಬಾಧವಿಲ್ಲದಂತೆ ಮಹಾಯೋಗ ಹಾಗೂ ವಿದ್ವದ್ರೂಢಿಯೆಂಬ ಪರಮಮುಖ್ಯವೃತ್ತಿಯಿಂದ ವಿಷ್ಣುವು ಪ್ರತಿಪಾದ್ಯನಾಗಿದ್ದಾನೆಂದು ನಾವು ಸಮರ್ಥಿಸುತ್ತೇವೆ.

ननु समन्वयसूत्रोक्तं सर्वशब्दवाच्यत्वं विष्णोरयुक्तम् । काठके 'इन्द्रियेभ्यः' इत्यादिना 'महतः परमव्यक्तं' इत्यव्यक्तान्तदेवतातारतम्यमुक्त्वा 'अव्यक्तात् पुरुषः परः' इति पुरुषोत्कर्षावधित्वेन श्रुताव्यक्तशब्दस्य प्रसिद्धमहत्तत्वपरत्वपुरुषोत्कर्षावधित्वादिलिङ्गेन च प्रधानवाचित्वादित्यतः प्राप्तं – **आनुमानिकमपीत्यादि सूत्रनवकम्** । तदर्थः – **अव्यक्त इति** ।

ಸಮನ್ವಯಸೂತ್ರದಲ್ಲಿ ವಿಷ್ಣುವೇ ಸಕಲಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಪ್ರತಿಜ್ಞೆ ಮಾಡಲಾಯಿತು. ಇದು ಅಯುಕ್ತವಾಗಿದೆ. ಏಕೆಂದರೆ ಕಾಠಕೋಪನಿಷತ್ತಿನಲ್ಲಿ 'ಇಂದ್ರಿಯೇಭ್ಯಃ ಪರಾಹ್ಯರ್ಥಾಃ' ಎಂಬಲ್ಲಿಂದ ಪ್ರಾರಂಭಮಾಡಿ 'ಮಹತಃ ಪರಮವ್ಯಕ್ತಮ್' ಇತ್ಯಾದಿಯಾದ ಶ್ರುತಿಯಲ್ಲಿ ದೇವತಾ ತಾರತಮ್ಯವನ್ನು ಹೇಳಲಾಗಿದೆ. ಅನಂತರ 'ಅವ್ಯಕ್ತಾತ್‌ಪುರುಷಃ ಪರಃ' ಎಂಬುದಾಗಿ ಪುರುಷನೇ ಸರ್ವೋತ್ತಮತ್ವಕ್ಕೆ ಅವಧಿಯಾಗಿದ್ದಾನೆ ಎಂದು ಶ್ರುತಿಯು ಹೇಳಿದೆ. ಇಲ್ಲಿರುವ ಅವ್ಯಕ್ತಶಬ್ದವು ಮಹತ್ತತ್ವ, ಪರತ್ವ, ಪುರುಷೋತ್ಕರ್ಷಾವಧಿತ್ವ ಮೊದಲಾದ ಲಿಂಗಗಳ ಬಲದಿಂದ ಪ್ರಕೃತಿಯನ್ನೇ ಪ್ರತಿಪಾದನೆ ಮಾಡುತ್ತದೆಂದು ಪೂರ್ವಪಕ್ಷ. ಈ ಪೂರ್ವಪಕ್ಷದ ನಿರಾಕರಣೆಗಾಗಿ 'ಆನುಮಾನಿಕಮಪಿ' ಇವೇ ಮೊದಲಾದ ಒಂಭತ್ತು ಸೂತ್ರಗಳು ಹೊರಟಿವೆ. ಅಣುಭಾಷ್ಯದಲ್ಲಿ ಈ ಒಂಭತ್ತು ಸೂತ್ರಗಳ ಅಭಿಪ್ರಾಯವನ್ನು 'ಅವ್ಯಕ್ತಃ' ಎಂಬ ಒಂದು ಪದದಿಂದ ಸಂಗ್ರಹಿಸಿದ್ದಾರೆ.

'ಅವ್ಯಕ್ತ' ಎಂಬ ಶಬ್ದವು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆ ಹೊರತು, ಪ್ರಕೃತಿಯನ್ನಲ್ಲ ಎಂದಭಿಪ್ರಾಯ.

**एको जनार्दन इति, अन्यत्र नियतैरपि मुख्यतयोदितः शब्दैरिति च** अत्रोत्तरत्र चान्वेति । अव्यक्त इत्युपलक्षणम् । श्रीवाचितया प्राधान्यादस्योक्तिः । व्यक्तो न भवतीत्यव्यक्तः । 'अव्यक्तात्पुरुषः परः' इत्यादौ अव्यक्तजीवादिपदप्रवृत्तिनिमित्तयुक्तोऽव्यक्तप्राणधारकादिः मुख्यतया एको जनार्दनः ।

'ಏಕೋ ಜನಾರ್ದನಃ' ಎಂಬುದು ಮತ್ತು 'ಅನ್ಯತ್ರ ನಿಯತೈರಪಿ ಮುಖ್ಯತಯೋದಿತಃ ಶಬ್ದೈಃ' ಎಂಬುದೂ ಕೂಡ ಈ ಅವ್ಯಕ್ತ ಪದದ ಜೊತೆಗೆ ಅನ್ವಯವನ್ನು ಹೊಂದುತ್ತದೆ. ಅಣುಭಾಷ್ಯದಲ್ಲಿ 'ಅವ್ಯಕ್ತಃ' ಎಂದು ಹೇಳಿದ್ದು ಉಪಲಕ್ಷಣವಾಗಿದೆ. ಜೀವ, ಬದ್ಧ ಮೊದಲಾದ ಶಬ್ದಗಳ ಸಮನ್ವಯವನ್ನೂ ಕೂಡ ಈ ಅಧಿಕರಣದಲ್ಲಿ ವಿವಕ್ಷಿಸಬೇಕು. ಅವ್ಯಕ್ತಶಬ್ದವು ಲಕ್ಷ್ಮೀದೇವಿಗೆ ವಾಚಕವಾಗಿರುವುದರಿಂದ ಜೀವಬದ್ಧಾದಿ ಶಬ್ದಗಳಿಗಿಂತಲೂ ಮುಖ್ಯವಾಗಿದೆ. ಆದ್ದರಿಂದ ಇದನ್ನೇ ಉಲ್ಲೇಖಿಸಿ ಉಳಿದವುಗಳನ್ನು ಉಪಲಕ್ಷಣಯಾ

ಸ್ವೀಕರಿಸಿದ್ದಾರೆ. 'ವ್ಯಕ್ತೋ ನಭವತಿ ಇತಿ ಅವ್ಯಕ್ತಃ' ಎಂಬ ವ್ಯುತ್ಪತ್ತಿಯಿಂದ ಅತ್ಯಂತ ಸೂಕ್ಷ್ಮನಾಗಿರುವವನು ಎಂದರ್ಥ. 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ವಾಕ್ಯಗಳಲ್ಲಿ ಶ್ರುತವಾದ ಅವ್ಯಕ್ತ ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅತಿಸೂಕ್ಷ್ಮತ್ವವು ಶ್ರೀಹರಿಯಲ್ಲಿಯೇ ಇರುವುದರಿಂದ ಅವನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಅದರಂತೆ ಜೀವಪದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಾಣಧಾರಕತ್ವವೂ ಕೂಡ ಶ್ರೀಹರಿಯಲ್ಲಿಯೇ ಮುಖ್ಯವಾಗಿ ಇರುತ್ತದೆ. ಆದ್ದರಿಂದ ಜನಾರ್ದನನೊಬ್ಬನೇ ಈ ಎಲ್ಲ ಶಬ್ದಗಳಿಂದ ಪ್ರತಿಪಾದ್ಯನು ಹೊರತು, ಲಕ್ಷ್ಮೀದೇವಿ, ಜೀವ ಮೊದಲಾದವರಲ್ಲ.

**तथा च अवरत्वदुःखित्वादिलिङ्गवशादन्यत्र नियतैः अव्यक्तजीवबद्धादिशब्दैः मुख्यतया परममुख्यवृत्त्या एको जनार्दनः उदितः । नतु प्रधानादिः । अव्यक्तादि-शब्दप्रवृत्तिनिमित्तस्य विष्णौ सत्त्वे तच्छब्दैरुदितत्वस्य आवश्यकत्वादिति भावः ।**

ಹೀಗೆ 'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಶ್ರುತಿಗಳಲ್ಲಿ ಕೇಳಿಸುತ್ತಿರುವ ಅವ್ಯಕ್ತ, ಜೀವ ಮೊದಲಾದ ಪದಗಳೆಲ್ಲವೂ ಸೂಕ್ಷ್ಮತ್ವ, ಪ್ರಾಣಧಾರಕತ್ವ ಮೊದಲಾದ ಪ್ರವೃತ್ತಿನಿಮಿತ್ತಗಳ ಬಲದಿಂದ ಜನಾರ್ದನನ್ನೇ ಪ್ರತಿಪಾದನೆ ಮಾಡುತ್ತವೆ. ಮತ್ತು ಅವರತ್ವ, ದುಃಖಿತ್ವ ಮೊದಲಾದ ಲಿಂಗಗಳಿಂದ ಪ್ರಕೃತಿ, ಜೀವ ಮೊದಲಾದವುಗಳನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಆದರೆ ಪರಮಮುಖ್ಯವೃತ್ತಿಯಿಂದ ಜನಾರ್ದನನೊಬ್ಬನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತ್ಯಾದಿಗಳಲ್ಲ. ಅವ್ಯಕ್ತಾದಿಶಬ್ದಗಳ ಪ್ರವೃತ್ತಿ-ನಿಮಿತ್ತವು ವಿಷ್ಣುವಿನಲ್ಲಿ ಇರುವುದರಿಂದ ಈ ಎಲ್ಲ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನೆಂದು ಹೇಳಬೇಕು.

**अव्यक्तादिशब्दार्थाव्यक्तत्वादिकं कुतो जनार्दनस्येत्यतः – शब्दैरिति । 'यत्तत्सूक्ष्मं परमं वेदितव्यं' 'एषोऽणुरात्मा' 'स जीवनामा भगवान् प्राणधारणहेतुतः' इत्यादिशब्दैरित्यर्थः । सूक्ष्मस्यैवाव्यक्तत्वार्हत्वादिति भावः ।**

ಅವ್ಯಕ್ತ ಶಬ್ದದ ಪ್ರವೃತ್ತಿನಿಮಿತ್ತವಾದ ಅವ್ಯಕ್ತತ್ವವು ಜನಾರ್ದನನಲ್ಲಿ ಮಾತ್ರ ಇರುತ್ತದೆಂದು ಹೇಗೆ ಹೇಳುತ್ತೀರಿ ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದ ಉತ್ತರಿಸಿದ್ದಾರೆ. 'ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ' ಪರಮಾತ್ಮನು ಅತ್ಯಂತ ಸೂಕ್ಷ್ಮನಾಗಿದ್ದಾನೆಂದು ತಿಳಿದುಕೊಳ್ಳಬೇಕು. 'ಏಷೋ ಅಣುರಾತ್ಮಾ' ಇವನೇ ಅತ್ಯಂತ ಅಣುಸ್ವರೂಪನಾದವನು. 'ಸ ಜೀವನಾಮಾ ಭಗವಾನ್ ಪ್ರಾಣಧಾರಣಹೇತುತಃ' ಎಲ್ಲರ ಪ್ರಾಣವನ್ನು ಧಾರಣೆ ಮಾಡಿರುವುದರಿಂದ ಜೀವ ಎಂಬ ಶಬ್ದದಿಂದಲೂ ಪ್ರತಿಪಾದ್ಯನಾಗಿದ್ದಾನೆ. ಇವೇ ಮೊದಲಾದ ಶ್ರುತಿಗಳಿಂದ ಅವ್ಯಕ್ತತ್ವ ಪ್ರಾಣಧಾರಕತ್ವ ಮೊದಲಾದವುಗಳು ಪರಮಾತ್ಮನಲ್ಲಿ ಮಾತ್ರ ಮುಖ್ಯವಾಗಿರುತ್ತವೆಂದು ತಿಳಿಯಬೇಕು. ಆದ್ದರಿಂದ ಜನಾರ್ದನನೊಬ್ಬನೇ ಈ ಎಲ್ಲಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ.

ಪರಿಪೂರ್ಣಚಂದ್ರಿಕಾ

ननु प्रधानादौ रूढाव्यक्तादिशब्दैः योगमात्रेण कथं मुख्यतयोदित इत्यतोऽपि – शब्दैरिति । 'अव्यक्तमचलं शान्तम्' 'अव्यक्तोक्षर उच्यते', 'अनेन जीवेनात्मना', 'जीवो विनयिता साक्षी', 'नामानि सर्वाणि यमाविशन्ति', इत्यादि विष्णावव्यक्तादिपदप्रयोगबाहुल्यरूपरूढिप्रदर्शकैः श्रुतिस्मृतिरूपसर्वशब्दवाच्यत्व-बोधकशब्दैः, तथा 'तमेवैकं जानथ' इत्यादिभिः विष्णोरेव मोक्षार्थं ज्ञेयत्वबोधकशब्दैरित्यर्थः ।

ಪ್ರಕೃತ್ಯಾದಿಗಳಲ್ಲಿ ಅವ್ಯಕ್ತ ಶಬ್ದವು ರೂಢವಾಗಿದೆ. ಯೋಗವೃತ್ತಿಗಿಂತಲೂ ರೂಢಿಯೇ ಪ್ರಬಲವಾದ್ದರಿಂದ ವಿಷ್ಣುವಿನಲ್ಲಿ ಕೇವಲ ಯೋಗದಿಂದ ಮುಖ್ಯಾರ್ಥತ್ವವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಶಬ್ದೈಃ' ಎಂಬುದರಿಂದಲೇ ಉತ್ತರಿಸಿದ್ದಾರೆ. 'ಅವ್ಯಕ್ತಮಚಲಂ ಶಾಂತಮ್' ನಿರ್ವಿಕಾರನು, ಶಾಂತಸ್ವರೂಪನು ಆದ ವಿಷ್ಣುವೇ ಅವ್ಯಕ್ತಶಬ್ದದಿಂದ ಪ್ರತಿಪಾದ್ಯನು. 'ಅವ್ಯಕ್ತೋಽಕ್ಷರ ಉಚ್ಯತೇ' ಅಕ್ಷರಶಬ್ದ ವಾಚ್ಯನಾದವನು ಅವ್ಯಕ್ತನೆನಿಸಿದ್ದಾನೆ. 'ಅನೇನ ಜೀವೇನಾತ್ಮನಾ' ಮತ್ತು 'ಜೀವೋ ವಿನಯಿತಾ ಸಾಕ್ಷಿ' 'ನಾಮಾನಿ ಸರ್ವಾಣಿ ಯಮಾವಿಶಂತಿ' ಇವೇ ಮೊದಲಾದ ಶ್ರುತಿ-ಸ್ಮೃತಿಗಳಲ್ಲಿ ಅವ್ಯಕ್ತ, ಜೀವ, ಮೊದಲಾದವುಗಳು ವಿಷ್ಣುವಿನಲ್ಲಿ ರೂಢವಾಗಿರುವುದು ಕಂಡಿದೆ. ಅಂದರೆ ಪ್ರಯೋಗಬಾಹುಲ್ಯವು ಬೇರೆ ಪದಾರ್ಥಗಳಲ್ಲಷ್ಟೇ ಇರುವುದಲ್ಲ; ವಿಷ್ಣುವಿನಲ್ಲಿಯೂ ಕೂಡ ಇರುತ್ತದೆಂದು ತಿಳಿಯಬೇಕು. ಆದ್ದರಿಂದ ಅವ್ಯಕ್ತ ಮೊದಲಾದ ಶಬ್ದಗಳು ವಿದ್ವದ್ರೂಢಿಯಿಂದ ವಿಷ್ಣುವಾಚಕಗಳಾಗುತ್ತವೆ. ಮತ್ತು 'ತಮೇವೈಕಂ ಜಾನಥ' ಇವೇ ಮೊದಲಾದ ಶ್ರುತಿಗಳಿಂದ ಮೋಕ್ಷಕ್ಕೋಸ್ಕರ ತಿಳಿಯಲು ಯೋಗ್ಯನಾಗಿರುವವನು ವಿಷ್ಣುವೇ ಹೊರತು ಬೇರೆ ಪದಾರ್ಥಗಳಲ್ಲ ಎಂದು ಕಾಠಕೋಪನಿಷತ್ತು ಹೇಳುತ್ತಿದೆ. ಆದ್ದರಿಂದ ಅವ್ಯಕ್ತಾದಿ ಶಬ್ದಗಳು ಪರಮಾತ್ಮ-ವಾಚಕಗಳೆಂದು ಸಿದ್ಧವಾಗುತ್ತವೆ.

प्रधानादौ प्रसिद्धैरव्यक्तादिशब्दैः महच्छब्दचमसशब्दयोरन्यत्र प्रसिद्धयोरपि 'महान्तं विभुं' इत्यादौ विष्णुशिरसोर्मुख्यत्वात् हरौ मुख्यतयोदितत्वं युक्तमिति भावः ।

ಅವ್ಯಕ್ತ ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ಮಹಾವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಹೇಗೆಂದರೆ 'ಮಹತ್' ಎಂಬ ಶಬ್ದವು ಮಹತ್ತತ್ವದಲ್ಲಿ ಪ್ರಸಿದ್ಧವಾಗಿದ್ದರೂ 'ಮಹಾಂತಂ ವಿಭುಮಾತ್ಮಾನಾಂ' ಎಂಬ ಶ್ರುತಿಯಲ್ಲಿ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತದೆ. ಚಮಸ ಶಬ್ದವು ಯಜ್ಞಪಾತ್ರೆಯ ವಿಶೇಷದಲ್ಲಿ ಪ್ರಸಿದ್ಧವಾಗಿದ್ದರೂ ಶಿರಸ್ಸನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆ. ಅದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ಮಹಾವಿಷ್ಣುವನ್ನು ಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುತ್ತವೆ. ಈ ವಿಷಯವನ್ನೂ ಕೂಡ 'ಶಬ್ದೈಃ' ಎಂಬುದರಿಂದಲೇ ಸೂಚಿಸಿದ್ದಾರೆ.

## ಆನುಮಾನಿಕಾಧಿಕರಣ (೧-೪-೧)

**नन्वेवं 'अनाद्यनन्तं महतः परं ध्रुवं निचाय्य तं मृत्युमुखात् प्रमुच्यते' इति वाक्ये महत्परत्वलिङ्गेन प्रधानस्यापि मुक्त्यर्थं ज्ञेयत्वोक्तेः तस्यापि वैदिकाव्यक्तादिशब्दैः परममुख्ययोदितत्वं स्यादित्योऽपि – शब्दैरिति ।**

'ಅನಾದ್ಯಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ವಾಕ್ಯದಲ್ಲಿ 'ಮಹತ್‌ಪರತ್ವ' ಎಂಬ ಲಿಂಗವನ್ನು ಹೇಳಿರುವುದರಿಂದ ಪ್ರಕೃತಿಯೇ ಪ್ರತಿಪಾದ್ಯವೆಂದು ತಿಳಿಯುತ್ತಿದೆ. ಇಂತಹ ಪ್ರಕೃತಿಯ ಜ್ಞಾನದಿಂದಲೂ ಮೋಕ್ಷವಾಗುತ್ತದೆಂದು ಶ್ರುತಿ ಹೇಳುತ್ತಿರುವುದರಿಂದ ಅವ್ಯಕ್ತ ಮೊದಲಾದ ಶಬ್ದಗಳಿಂದ ಪ್ರಕೃತ್ಯಾದಿಗಳೂ ಕೂಡ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗುತ್ತವಲ್ಲವೇ? ಎಂಬ ಪ್ರಶ್ನೆಗೂ 'ಶಬ್ದೈಃ' ಎಂಬುದರಿಂದಲೂ ಉತ್ತರಿಸಿದ್ದಾರೆ.

**'महतो महीयान्', 'अनाद्यनन्तं महतः परं ध्रुवं' इति 'परो हि देवः पुरुहूतो महत्तमः' इत्यादि विष्णोरेव महत्परत्वबोधकशब्दैः, तथा 'तद्विष्णोः परमं पदं' इत्येतत्प्रकरणार्थोपासकस्य विष्णुपदप्राप्तिबोधकशब्देन पितृसौमनस्यस्वर्ग्याग्नि-परमात्मरूपत्रितयामात्रप्रश्नोत्तररूपशब्दैः तद्वाक्ये जनार्दनः प्रागुक्तनिरुक्त्या अनादिः संसारार्दनो भगवान् मुख्यतयोदितो न प्रधानमित्यर्थः ।**

'ಮಹತೋ ಮಹೀಯಾನ್' ಮಹತ್ತಿಗಿಂತಲೂ ಶ್ರೇಷ್ಠನಾಗಿದ್ದಾನೆ, 'ಅನಾದ್ಯಂತಂ ಮಹತಃ ಪರಂ ಧ್ರುವಂ' ಅನಾದಿಯೂ, ಅನಂತನೂ, ಮಹತ್ತತ್ತ್ವಗಿಂತಲೂ ಉತ್ತಮನೂ, ಶಾಶ್ವತನೂ ಆಗಿರುತ್ತಾನೆ. ಮತ್ತು 'ಪರೋ ಹಿ ದೇವಃ ಪುರುಹೂತೋ ಮಹತ್ತಮಃ' ಸರ್ವೋತ್ತಮನಾದ ಪುರುಹೂತನೇ ಅತ್ಯಂತ ಶ್ರೇಷ್ಠನಾಗಿದ್ದಾನೆ. ಇವೇ ಮೊದಲಾದ ಶ್ರುತಿಗಳೆಲ್ಲವೂ ವಿಷ್ಣುವಿನಲ್ಲಿಯೇ ಮಹತ್ ಪರತ್ವವನ್ನು ಹೇಳುತ್ತಿವೆ. ಮತ್ತು 'ತದ್ವಿಷ್ಣೋಃ ಪರಮಂ ಪದಂ' ಎಂಬ ಪ್ರಕರಣವು ವಿಷ್ಣುಪರವೆಂದು ಯಾರು ಉಪಾಸನೆ ಮಾಡುತ್ತಾರೋ, ಅವರಿಗೆ ವಿಷ್ಣುಪದವೇ ದೊರೆಯುತ್ತದೆಂದು ಹೇಳಲಾಗಿದೆ. ಮತ್ತು ನಚಿಕೇತನು ಯಮದೇವರ ಬಳಿ ಮೂರು ವರಗಳನ್ನು ಕೇಳುವಾಗ ನನ್ನ ವಿಷಯದಲ್ಲಿ ತಂದೆಯ ಮನಸ್ಸು ಶಾಂತವಾಗಬೇಕು. ಸ್ವರ್ಗ್ಯವಾದ ಅಗ್ನಿಯನ್ನು ತಿಳಿಸಬೇಕು. ಮತ್ತು ಪರಮಾತ್ಮನ ಸ್ವರೂಪವನ್ನು ತಿಳಿಸಬೇಕು ಎಂದು ಮೂರು ಬಗೆಯ ಪ್ರಶ್ನೆಗಳನ್ನು ಮಾಡಿರುತ್ತಾನೆ. ಅದಕ್ಕೆ ಅನುಗುಣವಾಗಿ ಯಮದೇವರು ಮೂರು ಉತ್ತರಗಳನ್ನು ನೀಡಿದ್ದಾರೆ. ಇಲ್ಲಿ ಪ್ರಕೃತಿಯ ಪ್ರಸಕ್ತಿಯೇ ಬರುವುದಿಲ್ಲ. ಅಂದರೆ ಪ್ರಕೃತಿಯ ಜ್ಞಾನದಿಂದ ಮೋಕ್ಷವಾಗುತ್ತದೆಂಬ ಮಾತು ಅಪ್ರಸ್ತುತವಾಗುತ್ತದೆ. ಆದ್ದರಿಂದ 'ನಿಚಾಯ್ಯ ತಂ ಮೃತ್ಯುಮುಖಾತ್-ಪ್ರಮುಚ್ಯತೇ' ಎಂಬ ಸೂತ್ರದಲ್ಲಿ ಇರುವ 'ಮಹತ್‌ಪರತ್ವ' ಎಂಬ ಲಿಂಗವು ಜನಾರ್ದನನಲ್ಲಿಯೇ ಮುಖ್ಯವಾಗಿ ಬರುತ್ತದೆ. ಅಂತಹ ಜನಾರ್ದನನ ಜ್ಞಾನದಿಂದಲೇ ಸಂಸಾರದಿಂದ ಮೋಚನೆಯಾಗುತ್ತದೆ ಎಂದು ತಿಳಿಯಬೇಕು.

**कथं तर्हि अवरत्वदुःखित्वाद्यर्थकपञ्चम्यादिशब्दोदितत्वोपपत्तिः सर्वेशे निर्दोषे हरावित्यतोऽपि – शब्दैरिति ।**

ಅವರತ್ವವನ್ನು ಹೇಳುವಂತಹ ಪಂಚಮೀ ವಿಭಕ್ತಿಯಿಂದ ದುಃಖಿತ್ವವನ್ನು ಹೇಳುವ 'ದುಃಖೀ' ಮೊದಲಾದ ಶಬ್ದಗಳಿಂದ ಪರಮಾತ್ಮನು ಹೇಗೆ ಪ್ರತಿಪಾದ್ಯನಾಗುತ್ತಾನೆ ? ಏಕೆಂದರೆ ಇವುಗಳ ಪ್ರವೃತ್ತಿನಿಮಿತ್ತವಾಗಿರುವ ಅವರತ್ವವಾಗಲೀ, ದುಃಖಿತ್ವವಾಗಲೀ, ಸರ್ವೇಶ್ವರನೂ, ನಿರ್ದುಷ್ಟನೂ ಆಗಿರುವಂತಹ ಪರಮಾತ್ಮನಲ್ಲಿ ಸರ್ವಥಾ ಬರುಷ್ಪುದಿಲ್ಲವಲ್ಲವೇ? ಈ ಪ್ರಶ್ನೆಗೂ ಕೂಡ 'ಶಬ್ದೈಃ' ಎಂಬುದರಿಂದಲೇ ಉತ್ತರಿಸಿದ್ದಾರೆ.

**'यदधीनो गुणो यस्य तद्गुणी सोऽभिधीयते ।**
**स बद्धः स दुःखी स बन्धयति स दुःखयति'**

**स्वातन्त्र्यादिना निमित्तेन तत्तच्छब्दवाच्यत्वबोधकैः शब्दैरित्यर्थः । विष्णाववरत्वाद्यभावेऽपि अन्यगतावरत्वादिकं प्रति स्वातन्त्र्या जयीति शब्देन राजेव पञ्चम्यादिशब्दैरुदित इति भावः ।।**

'ಯದಧೀನೋ ಗುಣೋ ಯಸ್ಯ ತದ್ಗುಣೀ ಸೋऽಭಿಧೀಯತೇ । ಸ ಬದ್ಧಃ ಸ ದುಃಖೀಃ ಸ ಬಂಧಯತಿ ಸ ದುಃಖಯತಿ' ಯಾವ ಗುಣವು ಯಾರ ಅಧೀನವಾಗಿದೆಯೋ, ಆ ವ್ಯಕ್ತಿಯು ಆ ಗುಣದಿಂದ ಪ್ರತಿಪಾದ್ಯನೆಂದು ಕರೆಸಿಕೊಳ್ಳುತ್ತಾನೆ. ಮತ್ತೊಬ್ಬರ ಬಂಧನಕ್ಕೆ ನಿಯಾಮಕನಾದ್ದರಿಂದ 'ಬದ್ಧ' ಎಂದು, ಮತ್ತೊಬ್ಬರ ದುಃಖಕ್ಕೆ ನಿಯಮಾಕನಾದ್ದರಿಂದ 'ದುಃಖೀ' ಎಂದು ಕರೆಸಿಕೊಳ್ಳುತ್ತಾನೆ.

ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ 'ಬದ್ಧಃ', 'ದುಃಖೀ' ಮೊದಲಾದ ಶಬ್ದಗಳಿಂದ ಶ್ರೀಹರಿಯು ಪ್ರತಿಪಾದ್ಯನಾಗುತ್ತಾನೆ. ವಿಷ್ಣುವಿನಲ್ಲಿ ಸ್ವತಃ ಅವರತ್ವಾದಿ ಪ್ರವೃತ್ತಿನಿಮಿತ್ತಗಳು ಇಲ್ಲದಿದ್ದರೂ ಬೇರೆಯಲ್ಲಿರುವ ಅವರತ್ವಾದಿಗಳನ್ನು ಕುರಿತು ವಿಷ್ಣು ಸ್ವತಂತ್ರನಾಗಿದ್ದಾನೆ. ಯಾವರೀತಿಯಾಗಿ ಭೃತ್ಯನು ಗೆದ್ದಾಗ ರಾಜನಲ್ಲಿ 'ಜಯೀ' ಎಂಬ ಶಬ್ದಪ್ರಯೋಗವು ಇರುತ್ತದೋ, ಅದರಂತೆ ಇವನಲ್ಲಿಯೂ ಪಂಚಮ್ಯಾದಿ ಶಬ್ದಗಳಿಂದ 'ದುಃಖೀ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯತ್ವವು ಬರುತ್ತದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ಆನುಮಾನಿಕಾಧಿಕರಣವು ಮುಗಿಯಿತು.

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## आनुमानिकाधिकरणम् (१।४।१)

अस्मिन् पादेऽन्यत्रैव प्रसिद्धद्विविधशब्दसमन्वय उच्यते ।

।। अनुमानिकमप्येकेषामिति चेन्न शरीररूपकविन्यस्तगृहीतेर्दर्शयति च ।।

।। १-४-१ ।।

ನಾಲ್ಕನೆಯ ಈ ಪಾದವು ಪ್ರಾರಂಭವಾಗುತ್ತಿದೆ. ಈ ಪಾದದಲ್ಲಿ ಅನ್ಯತ್ರೈವಪ್ರಸಿದ್ಧವಾದ 'ನಾಮಾತ್ಮಕಶಬ್ದ' ಹಾಗೂ 'ಲಿಂಗಾತ್ಮಕಶಬ್ದ' ಎಂಬ ಎರಡೂ ಬಗೆಯ ಶಬ್ದಗಳ ಸಮನ್ವಯವನ್ನು ಮಾಡುತ್ತಿದ್ದಾರೆ.

अत्रैश्वर्यविरोध्यवरत्वदुःखित्वाद्यर्थकशब्दाः समन्वीयन्ते । अत्राव्यक्तजीवबद्धादिशब्दो योग्यतयाऽन्वेति । अपिरेवार्थे । आनुमानिकमिति जीवादेरुपलक्षणम् । तत्त्वित्यस्ति ।

ಈ ಅಧಿಕರಣದಲ್ಲಿ ಭಗವಂತನಲ್ಲಿರುವ ಐಶ್ವರ್ಯಕ್ಕೆ ವಿರೋಧಿಯಾಗಿರುವ ಅವರತ್ವ, ದುಃಖಿತ್ವ ಮೊದಲಾದ ಅರ್ಥವುಳ್ಳಂತಹ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಅಂದರೆ 'ಅವ್ಯಕ್ತ', 'ಜೀವ', 'ಬದ್ಧ' ಮೊದಲಾದ ಶಬ್ದಗಳು ಸಮನ್ವಯ ಮಾಡಲು ಯೋಗ್ಯವಾದ್ದರಿಂದ ಸಮನ್ವಯ ಹೊಂದುತ್ತವೆ. ಸೂತ್ರದಲ್ಲಿರುವ 'ಅಪಿ' ಎಂಬ ಶಬ್ದವು ಅವಧಾರಣಾರ್ಥದಲ್ಲಿದೆ. 'ಆನುಮಾನಿಕಮ್' ಎಂದರೆ ಅನುಮಾನಸಿದ್ಧವಾದ ಪ್ರಕೃತಿ ಎಂದರ್ಥ. ಉಪಲಕ್ಷಣಯಾ ಜೀವಾದಿಗಳನ್ನು ವಿವಕ್ಷಿಸಬೇಕು. 'ತತ್ತು' ಎಂಬುದು ಅನುವೃತ್ತವಾಗಿದೆ.

"अव्यक्तात् पुरुषः परः" "जीवा एव तु दुःखिनः" इत्युक्ताव्यक्तादि-शब्दैरानुमानिकमप्यनुमानगम्यम्, शैषिकष्ठक्, प्रधानादिरेव केषाञ्चित् शाखासूच्यत इति चेन्न । अव्यक्तादि तत्तु परममुख्यवृत्त्या ब्रह्मैव । न प्रधानादि । कुतः ? दर्शयति श्रुतिः । चशब्देन स्मृतिः । "अव्यक्तमचलं शान्तम्" इति श्रुतिः । "अव्यक्तोऽक्षर उच्यते" इति स्मृतिश्च । तथा 'अनेन जीवेनात्मना" इति श्रुतिः । "जीवो विनयिता साक्षी" इति स्मृतिश्चाव्यक्तादि ब्रह्मेति यतो दर्शयति तस्मादित्यर्थः । विष्णोरेवाव्यक्तादिशब्दवाच्यत्वे कथमन्यत्र व्यवहार इत्यत उक्तम् । शरीरेति । शरीरस्य रूपमिव रूपं यस्य तच्छरीररूपं, कुत्सितं शरीररूपं शरीररूपकं प्रधानादि तत्र विन्यस्तस्य स्थितस्य विष्णोरव्यक्तादिपदेन गृहीतेरित्यर्थः। विन्यस्तेत्युक्त्या अव्यक्तादिशब्दवाच्यब्रह्मसमबन्धात् प्रधानादावव्यक्तादिशब्दव्यवहार इति दर्शितम् । वैपरीत्यं कि नेत्यतः शरीरेति । जीवशरीरं यथा तत्तन्त्रं तथा प्रधानाद्यपि ब्रह्मतन्त्रमिति । मुख्यशरीरं कुतो नेत्यतः केति । नहि कुत्सितं मुख्यशरीरं भवतीति भावः । स्थितेति वाच्ये विन्यस्तेत्युक्तिः प्रधानादि-विशिष्टस्यैवाव्यक्तादिपदेन गृहीतिर्न केवलस्येति वक्तुम् ।।

'ಅವ್ಯಕ್ತಾತ್ ಪುರುಷಃ ಪರಃ' ಎಂಬ ಶ್ರುತಿಯಲ್ಲಿ ಇರುವ ಅವ್ಯಕ್ತಶಬ್ದದಿಂದ 'ಜೀವಾ ಏವ ತು ದುಃಖಿನಃ' ಎಂಬ ಶ್ರುತಿಯಲ್ಲಿರುವ 'ಜೀವ' ಎಂಬ ಶಬ್ದದಿಂದ ಆನುಮಾನಿಕಮಪಿ = ಅನುಮಾನಸಿದ್ಧವಾದ ಪ್ರಕೃತಿ, ಜೀವರುಗಳೇ, ಏಕೇಷಾಂ = ಕೆಲವು ಶಾಖೆಗಳಲ್ಲಿ ಹೇಳಲ್ಪಟ್ಟಿದ್ದಾರೆ. ಇತಿ ಚೇನ್ನ = ಹೀಗೆ ಹೇಳುವುದು ತಪ್ಪು. ಅವ್ಯಕ್ತಾದಿಶಬ್ದಗಳಿಂದ ತತ್ತು = ಪರಮಮುಖ್ಯವೃತ್ತಿಯಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆ ಹೊರತು, ಪ್ರಕೃತ್ಯಾದಿಗಳಲ್ಲ. ಏಕೆಂದರೆ ದರ್ಶಯತಿ ಚ = ಶ್ರುತಿ ಹಾಗೂ ಸ್ಮೃತಿಗಳು ಈ ವಿಷಯದಲ್ಲಿ ಆಧಾರವಾಗಿವೆ. ಚ ಶಬ್ದದಿಂದ ಸ್ಮೃತಿಯನ್ನು ವಿವಕ್ಷಿಸಬೇಕು.. 'ಅವ್ಯಕ್ತಮಚಲಂ ಶಾಂತಮ್' ಎಂಬ ಶ್ರುತಿಯು 'ಅವ್ಯಕ್ತೋऽಕ್ಷರ ಉಚ್ಯತೇ' ಎಂಬ ಸ್ಮೃತಿಯು ಅವ್ಯಕ್ತಶಬ್ದವು ಬ್ರಹ್ಮನ ನಾಮವೆಂದು ಹೇಳುತ್ತಿವೆ. ಅದರಂತೆ 'ಅನೇನ ಜೀವೇನಾತ್ಮನಾ' ಎಂಬ ಶ್ರುತಿಯು, 'ಜೀವೋ ವಿನಯಿತಾ ಸಾಕ್ಷೀ' ಎಂಬ ಸ್ಮೃತಿಯು ಬ್ರಹ್ಮನನ್ನು ಜೀವನೆಂದು ಕರೆಯುತ್ತಿವೆ. ಆದ್ದರಿಂದ ಎಂದರ್ಥ. ವಿಷ್ಣುವೇ ಅವ್ಯಕ್ತಾದಿಶಬ್ದಗಳಿಂದ ವಾಚ್ಯನಾದರೆ ಬೇರೆ ಪದಾರ್ಥಗಳಲ್ಲಿ ಅವುಗಳ ವ್ಯವಹಾರ ಹೇಗೆ ? 'ಶರೀರರೂಪಕವಿನ್ಯಸ್ತಗೃಹಿತೇಃ' = ಬ್ರಹ್ಮಾಧೀನವಾದ್ದರಿಂದ ಅವನ ಶರೀರದಂತಿರುವ ಅವ್ಯಕ್ತಾದಿತತ್ವಗಳಲ್ಲಿರುವ ವಿಷ್ಣುವನ್ನೇ 'ಅವ್ಯಕ್ತ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನೆಂದು ವ್ಯವಹರಿಸಲಾಗುತ್ತದೆ. 'ವಿನ್ಯಸ್ತ' ಎಂಬ ಪದವನ್ನು ಪ್ರಯೋಗಿಸಿದ್ದರಿಂದ

ಅವ್ಯಕ್ತಶಬ್ದದಿಂದ ಪರಮಾತ್ಮನೇ ಮುಖ್ಯವಾಗಿ ವಾಚ್ಯನಾಗಿದ್ದಾನೆ ಅಂತಹ ಪರಮಾತ್ಮನ ಸಂಬಂಧವು ಈ ಪ್ರಕೃತ್ಯಾದಿಗಳಿಗಿರುವುದರಿಂದ ಪ್ರಕೃತ್ಯಾದಿಗಳಲ್ಲಿಯೂ ಶಬ್ದವ್ಯವಹಾರವಿದೆ. ಪ್ರಕೃತ್ಯಾದಿಗಳ ಸಂಬಂಧ ಪರಮಾತ್ಮನಿಗಿರುವುದರಿಂದ ಪರಮಾತ್ಮನು ಅವ್ಯಕ್ತಶಬ್ದದಿಂದ ವಾಚ್ಯನಾಗಿದ್ದಾನೆ ಎಂದೇಕೆ ಹೇಳಬಾರದು? ಎಂಬ ಪ್ರಶ್ನೆಗೂ ಶರೀರ' ಎಂಬುದರಿಂದಲೇ ಉತ್ತರಿಸಿದ್ದಾರೆ. ಯಾವರೀತಿಯಾಗಿ ಜೀವನ ಶರೀರವು, ಜೀವನ ಅಧೀನವಾಗಿರುವಾಗಿರುತ್ತದೋ, ಅದರಂತೆ ಪ್ರಕೃತ್ಯಾದಿಗಳೇ ಬ್ರಹ್ಮನ ಶರೀರವೆಂದೆನಿಸಿಕೊಂಡಿದ್ದರಿಂದ ಅವುಗಳು ಬ್ರಹ್ಮನ ಅಧೀನವಾಗಿವೆ. ಪ್ರಕೃತ್ಯಾದಿಗಳು ಬ್ರಹ್ಮನ ಮುಖ್ಯಶರೀರವೆಂದು ಏಕೆ ಪರಿಗಣಿಸಬಾರದು ? ಎಂಬ ಪ್ರಶ್ನೆಗೆ 'ಆನುಮಾನಿಕಮ್' ಎಂಬಲ್ಲಿ 'ಕ' ಪ್ರತ್ಯಯವನ್ನು ಪ್ರಯೋಗಿಸಿದ್ದಾರೆ. ನಿಂದಾರ್ಥದಲ್ಲಿ 'ಕ' ಪ್ರತ್ಯಯವಿದೆ. ನಮಗೆ ಪಾಂಚಭೌತಿಕಶರೀರವು ಹೇಗೆ ಸುಖ-ದುಃಖಗಳಿಗೆ ಕಾರಣವಾಗಿದೆಯೋ, ಅದರಂತೆ ಅವ್ಯಕ್ತಾದಿಗಳು ಪರಮಾತ್ಮನ ಶರೀರವಾಗಿರುವುದಲ್ಲ. ನಿಯಾಮಕನಾಗಿರುವುದರಿಂದಷ್ಟೇ ಅವು ಪರಮಾತ್ಮನ ಶರೀರ ಎಂದೆನಿಸಿಕೊಳ್ಳುತ್ತವೆ. ಕುತ್ಸಿತವಾದದ್ದು ಯಾವತ್ತೂ ಮುಖ್ಯಶರೀರವೆಂದೆನಿಸಿಕೊಳ್ಳುವುದಿಲ್ಲ. ಸೂತ್ರದಲ್ಲಿ 'ವಿನ್ಯಸ್ತ' ಎಂಬ ಪದದ ಬದಲು 'ಸ್ಥಿತ' ಎಂಬ ಪದವನ್ನು ಪ್ರಯೋಗಿಸಬಹುದು. ಆದರೆ ಪ್ರಧಾನಾದಿ ವಿಶಿಷ್ಟನಾದ ಬ್ರಹ್ಮನೇ ಅವ್ಯಕ್ತಪದದಿಂದ ಪ್ರತಿಪಾದ್ಯನಾಗಿದ್ದಾನೆ. ಕೇವಲ ಬ್ರಹ್ಮನು ಪ್ರತಿಪಾದ್ಯನಲ್ಲ ಎಂಬುದನ್ನು ತಿಳಿಸಲು 'ವಿನ್ಯಸ್ತ' ಎಂದು ಹೇಳಿದ್ದಾರೆ.

श्रौतस्मार्तप्रयोगेऽप्यव्यक्तादिशब्दस्य विष्णौ मुख्यत्वं कुत इत्यत आह -

**।। सूक्ष्मं तु तदर्हत्वात् ।। १-४-२ ।।**

तुरेव । सूक्ष्ममेव वस्त्वव्यक्तशब्दवाच्यमित्यर्थः । अव्यक्तत्वस्यैव तच्छब्द-निमित्तत्वात् कथमेतदित्यत उक्तम् तदर्हत्वात् । तदिति तन्त्रम् । तस्य सूक्ष्मस्य तस्य प्रकृताव्यक्तत्वस्यार्हत्वादित्यर्थः । सूक्ष्मस्यैवाव्यक्तशब्दप्रवृत्तिनिमित्ता-व्यक्तताईत्वात् तदव्यक्तशब्दवाच्यं ब्रह्मैव । ''यत्तत्सूक्ष्मं परमं वेदितव्यम्'' इत्यादेः सूक्ष्मतममित्यव्यक्तशब्दमुख्यार्थ इति भावः । जीवादिपदनिमित्तप्राणधारकत्वादेरुपल क्षणमेतत् ।

ಶ್ರೌತಪ್ರಯೋಗ ಹಾಗೂ ಸ್ಮಾರ್ತಪ್ರಯೋಗಗಳ ಆಧಾರದಿಂದಲೂ ಅವ್ಯಕ್ತ ಮೊದಲಾದ ಶಬ್ದಗಳು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ ಎಂದು ಸಮರ್ಥಿಸಿದಿರಿ. ಇದು ಹೇಗೆ ಸಿದ್ಧವಾಗುತ್ತದೆ ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ -

ಪರಿಪೂರ್ಣಚಂದ್ರಿಕಾ

'ಸೂಕ್ಷ್ಮಂ ತು ತದರ್ಹತ್ವಾತ್'

'ತು' ಶಬ್ದವು ಅವಧಾರಣಾರ್ಥದಲ್ಲಿದೆ. ಸೂಕ್ಷ್ಮವಾದ ವಸ್ತುವೇ 'ಅವ್ಯಕ್ತ' ಎಂಬ ಶಬ್ದದಿಂದ ಪ್ರತಿಪಾದ್ಯವಾಗುತ್ತದೆ ಎಂದರ್ಥ. ಅವ್ಯಕ್ತತ್ವವು ಅವ್ಯಕ್ತ ಶಬ್ದದ ಪ್ರವೃತ್ತಿನಿಮಿತ್ತವಾಗಿದೆಯೆಂದು ಹೇಗೆ ಸಮರ್ಥಿಸುತ್ತೀರಿ? ಎಂಬ ಪ್ರಶ್ನೆಗೆ 'ತದರ್ಹತ್ವಾತ್' ಎಂಬುದರಿಂದ ಉತ್ತರಿಸಿದ್ದಾರೆ. 'ತತ್' ಎಂಬುದನ್ನು ಎರಡು ಬಾರಿ ವಿವಕ್ಷಿಸಿಕೊಳ್ಳಬೇಕು. 'ತದರ್ಹತ್ವಾತ್', ತಸ್ಯ = ಸೂಕ್ಷ್ಮವಾದ ವಸ್ತುವಿಗೆ, ತಸ್ಯ = ಅವ್ಯಕ್ತತ್ವದ, ಅರ್ಹತ್ವಾತ್ = ಅರ್ಹತೆಯಿರುವುದರಿಂದ, ಸೂಕ್ಷ್ಮಂತು = ಸೂಕ್ಷ್ಮವಾದ ವಸ್ತುವೇ (ಪರಮಾತ್ಮನೇ) ಅವ್ಯಕ್ತಶಬ್ದದಿಂದ ಪ್ರತಿಪಾದ್ಯವಾಗುತ್ತದೆ ಎಂಬುದೇ ಸೂತ್ರದ ಅರ್ಥ.

ಸೂಕ್ಷ್ಮವಾದ ವಸ್ತುವೇ ಅವ್ಯಕ್ತತ್ವಕ್ಕೆ ಅರ್ಹವಾಗಿರುತ್ತದೆ. 'ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಮ್' ಇತ್ಯಾದಿ ಶ್ರುತಿಗಳಿಂದ ಸೂಕ್ಷ್ಮತಮವಾದದ್ದು ಅವ್ಯಕ್ತಶಬ್ದದ ಮುಖ್ಯಾರ್ಥವಾಗಿರುತ್ತದೆ ಎಂದು ಅಭಿಪ್ರಾಯ. ಜೀವ ಮೊದಲಾದ ಪದಗಳ ಪ್ರವೃತ್ತಿನಿಮಿತ್ತಗಳೆನಿಸಿದ ಪ್ರಾಣಧಾರಕತ್ವ ಮೊದಲಾದವುಗಳು ಪರಮಾತ್ಮನಲ್ಲಿಯೇ ಮುಖ್ಯವಾಗಿರುತ್ತವೆಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

ननु विष्णोरव्यक्तादिशब्दमुख्यार्थत्वेऽपीहपरत्वावधित्वार्थकपञ्चम्याक्षिप्तावरत्व-दुःखित्वादेरयोगेन पञ्चम्यादेः व्यर्थतापत्तेर्नाव्यक्तादिशब्वाच्यं ब्रह्मेत्यत आह -

**।। तदधीनत्वादर्थवत् ।। १-४-३ ।।**

'ಅವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕೋಪನಿಷತ್ತಿನ ವಾಕ್ಯದಲ್ಲಿರುವ ಅವ್ಯಕ್ತ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಬಹುದು. ಆದರೆ 'ಅವ್ಯಕ್ತಾತ್' ಎಂಬಲ್ಲಿರುವ ಪಂಚಮೀ ವಿಭಕ್ತಿಯು ಅವ್ಯಕ್ತವು ಪುರುಷನಿಗಿಂತ ಅವರ ಎಂದು ಸೂಚಿಸುತ್ತಿದೆ. ಬ್ರಹ್ಮನಿಗೆ ಅವರತ್ವವು ಸರ್ವಥಾ ಯುಕ್ತವಾಗುವುದಿಲ್ಲ. ಆದ್ದರಿಂದ ಪಂಚಮೀ ವಿಭಕ್ತಿ ಮೊದಲಾದವುಗಳು ಅರ್ಥರಹಿತವಾಗುತ್ತವೆ. ಅದಕ್ಕಾಗಿ ಅವ್ಯಕ್ತ ಶಬ್ದದಿಂದ ವಿಷ್ಣು ಪ್ರತಿಪಾದ್ಯನಾಗುವುದಿಲ್ಲ ಎಂದು ಹೇಳುವುದು ಉಚಿತವಲ್ಲವೇ? ಎಂಬ ಪ್ರಶ್ನೆಗೆ ಉತ್ತರ ನೀಡಲು ಮುಂದಿನ ಸೂತ್ರ ಹೊರಟಿದೆ -

'ತದಧೀನತ್ವಾದರ್ಥವತ್'

अवरत्वाक्षेपकावधित्वादिवाचिपञ्चम्यादिशब्दजातमित्यन्वेति । अर्थवत् परब्रह्मण्यर्थवत् न व्यर्थम् । कुतः ? तदधीनत्वात् । अवरत्वदुःखित्वादितन्निमित्त-धर्माणां तस्य विन्यस्तपदेन प्रकृतस्य ब्रह्मणोऽधीनत्वादित्यर्थः । ब्रह्मण्यवरत्वादेर-

भावेऽपि अन्यगतावरत्वादेः तदधीनत्वात्तत्र तद्वाचिशब्दो राज्ञि जयिशब्दवदस्तीति भावः ।

ಅವರತ್ವವನ್ನು ಆಕ್ಷೇಪ ಮಾಡುವ ಅವಧಿತ್ವಾದಿಗಳನ್ನು ತಿಳಿಸುವ ಪಂಚಮೀವಿಭಕ್ತಿ ಮೊದಲಾದ ಶಬ್ದಗಳ ಸಮೂಹ ಇತ್ಯಾದಿ.ಪದಗಳನ್ನು ಅನ್ವಯ ಮಾಡಿಕೊಳ್ಳಬೇಕು.

ಸೂತ್ರಾರ್ಥ ಹೀಗಿದೆ - ಅವರತ್ವ, ದುಃಖ ಮೊದಲಾದ ಧರ್ಮಗಳು 'ತದಧೀನತ್ವಾತ್' = ವಿಷ್ಣುವಿನ ಅಧೀನವಾದುದರಿಂದ, 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಅವಧಿ ಎಂಬರ್ಥವನ್ನು ತಿಳಿಸುವ ಪಂಚಮೀ ವಿಭಕ್ತಿ, 'ದುಃಖೀ' ಮೊದಲಾದ ಶಬ್ದಗಳೆಲ್ಲವೂ ಬ್ರಹ್ಮನಲ್ಲಿ, ಅರ್ಥವತ್ = ಸಾರ್ಥಕ ವ್ಯರ್ಥವಲ್ಲ.

ಬ್ರಹ್ಮನಲ್ಲಿ ದುಃಖಿತ್ವಾದಿಗಳು ಇಲ್ಲದಿದ್ದರೂ ಜೀವನಲ್ಲಿರುವ ದುಃಖವು ಬ್ರಹ್ಮನ ಅಧೀನವಾದ್ದರಿಂದ ಅವನನ್ನು 'ದುಃಖೀ' ಎನ್ನಬಹುದು. ಹಿಂದಿನ ಸೂತ್ರದಿಂದ 'ವಿನ್ಯಸ್ತ' ಎಂಬ ಪದದಿಂದ ಪ್ರಕೃತನಾಗುವ ಬ್ರಹ್ಮನಿಗೆ ಅಧೀನವಾಗಿರುವುದರಿಂದ ಎಂಬರ್ಥವನ್ನು ಇಲ್ಲಿ ವಿವಕ್ಷಿಸಬೇಕು. 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಪುರುಷನು ಅವ್ಯಕ್ತಕ್ಕಿಂತ ಉತ್ತಮ ಎಂದು ಹೇಳಿದಾಗ ಉತ್ತಮತ್ವಕ್ಕೆ ಅವ್ಯಕ್ತವು ಅವಧಿಯಾಗಿದೆ. ಇದರಿಂದ ಅದು ಉತ್ತಮವಲ್ಲ. ಪುರುಷನಿಗಿಂತ ಅವರವಾಗಿದೆ. ಅವ್ಯಕ್ತಶಬ್ದದಿಂದ ವಿಷ್ಣು ಪ್ರತಿಪಾದ್ಯನಾದರೆ ಅವನೂ ಕೂಡ ಅವರನಾಗಬೇಕಾದೀತು? ಈ ಪ್ರಶ್ನೆಗೆ ಅವರತ್ವವು ಅವನ ಅಧೀನವಾದ್ದರಿಂದ ಅವರತ್ವ ವಾಚಕವಾದ ಪಂಚಮೀ ವಿಭಕ್ತಿಯೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆಂಬ ಉತ್ತರವನ್ನು ತಿಳಿಯಬೇಕು. ಹೇಗೆಂದರೆ ಯುದ್ಧರಂಗದಲ್ಲಿ ಸೈನಿಕರು ಜಯವನ್ನು ಗಳಿಸಿದರೂ, ರಾಜನನ್ನು 'ಜಯೀ' ಎಂದು ವ್ಯವಹರಿಸುತ್ತಾರೆ. ಏಕೆಂದರೆ ಜಯವು ರಾಜನ ಅಧೀನವಾಗಿರುತ್ತದೆ. ಅದರಂತೆ ಅವರತ್ವ, ದುಃಖಿತ್ವಾದಿಗಳು ಜೀವನಲ್ಲೇ ಇದ್ದರೂ ಬ್ರಹ್ಮನ ಅಧೀನವಾದ್ದರಿಂದ ಬ್ರಹ್ಮನನ್ನು 'ಅವರ', 'ದುಃಖೀ' ಇತ್ಯಾದಿಯಾಗಿ ವ್ಯವಹರಿಸುವುದು ಸಮಂಜಸವಾಗಿದೆ.

इतश्च मुख्यतोऽव्यक्तादिशब्दवाच्यं ब्रह्मेत्याह -

**।। ज्ञेयत्वावचनाच्च ।। १-४-४ ।।**

अव्यक्तजीवादिशब्दमुख्यार्थो ब्रह्मैव । नानुमानिकादिः । ''तमेवैकं जानथ आत्मानम्'' इति ब्रह्मण एव मुमुक्षुज्ञेयत्वोक्त्यनुक्तिभ्यां मोक्षार्थवेदानां

**ब्रह्मपरत्वसिद्धौ प्रतिवाक्यं तत्परत्वस्य ''आदावन्ते च मध्ये च'' इत्यादिना सिद्धेः स्वतःप्राप्तमुख्यवृतत्तित्यागायोगात् अव्यक्तादिशब्दमुख्यार्थो ब्रह्मैवेति भावः ।**

ಮತ್ತೊಂದು ಕಾರಣದಿಂದಲೂ ಅವ್ಯಕ್ತ ಮೊದಲಾದ ಶಬ್ದಗಳಿಂದ ಬ್ರಹ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥನೆ ಮಾಡಲು ಮುಂದಿನ ಸೂತ್ರ ಹೊರಟಿದೆ -

'ಜ್ಞೇಯತ್ವಾವಚನಾಚ್ಚ'

ಸೂತ್ರಾರ್ಥ ಹೀಗಿದೆ - ಅವ್ಯಕ್ತಾದಿ ಶಬ್ದಗಳ ಮುಖ್ಯಾರ್ಥನು ಬ್ರಹ್ಮನೇ ಆಗಿದ್ದಾನೆ ಹೊರತು, ಪ್ರಕೃತ್ಯಾದಿಗಳಲ್ಲ. 'ತಮೇವೈಕಂ ಜಾನಥ ಆತ್ಮಾನಮ್' ಎಂಬುದಾಗಿ ಬ್ರಹ್ಮನೇ ಮುಮುಕ್ಷುಗಳಿಂದ ಜ್ಞೇಯನಾಗಿದ್ದಾನೆಂದು ಹೇಳಿ, ಉಳಿದ ತತ್ವಗಳಿಗೆ ಮುಮುಕ್ಷುಗಳಿಂದ ಜ್ಞೇಯತ್ವವನ್ನು ಹೇಳಿರುವುದಿಲ್ಲ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥನು ವಿಷ್ಣುವೇ ಆಗಿದ್ದಾನೆ ಪ್ರಧಾನಾದಿಗಳಲ್ಲ. ಮೋಕ್ಷಫಲವನ್ನು ಹೇಳುವ ವೇದಗಳಿಗೆ ಬ್ರಹ್ಮನಲ್ಲೇ ತಾತ್ಪರ್ಯವೆಂದು ಸಿದ್ಧವಾಗುತ್ತದೆ. ಆದ್ದರಿಂದಲೇ 'ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ' ಪ್ರತಿಯೊಂದು ವೇದವಾಕ್ಯದಿಂದಲೂ ಬ್ರಹ್ಮನೇ ಪ್ರತಿಪಾದ್ಯನೆಂದು ಸಿದ್ಧವಾಗುತ್ತದೆ. ಹೀಗೆ ಮುಖ್ಯವೃತ್ತಿಯು ಬ್ರಹ್ಮನಲ್ಲಿ ಸ್ವತಃ ಸಿದ್ಧವಾಗಿರುವಾಗ ಅದನ್ನು ಬಿಡಲು ಯಾವುದೇ ಕಾರಣವಿಲ್ಲ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥನು ಬ್ರಹ್ಮನೇ ಆಗಿದ್ದಾನೆಂದು ತಿಳಿಯಬೇಕು.

उक्तमाक्षिप्याह -

**।। वदतीति चेन्न प्राज्ञो हि ।। १-४-५ ।।**

ज्ञेयत्वावचनमन्यस्यापि सिद्धम् । यतो 'महतः' परं ध्रुवं निचाय्य तं मृत्यमुखात् प्रमुच्यते'' इति महत्परत्वलिङ्गेन प्रधानस्यापि मुमुक्षुज्ञेयत्वं वदति श्रुतिरिति चेन्न । प्राज्ञो हि । यस्मात् प्राज्ञो विष्णुरत्र उच्यत इत्यर्थः । सर्वतः परे महत्परत्वं युक्तमिति भावः ।।

ಹಿಂದಿನ ಸೂತ್ರದಲ್ಲಿ ಪರಮಾತ್ಮನಿಗಿಂತ ಭಿನ್ನವಾದುದೆಲ್ಲವೂ ಹೇಯವಾಗಿದೆ. ಆದ್ದರಿಂದ ಜ್ಞೇಯವಲ್ಲ ಎಂದು ಸಮರ್ಥಿಸಲಾಯಿತು. ಆದರೆ 'ಮಹತಃ ಪರಂ ಧ್ರುವಂ' ಎಂಬ ಶ್ರುತಿಯಲ್ಲಿ ಪ್ರಕೃತಿಯ ಜ್ಞಾನದಿಂದಲೂ ಮೋಕ್ಷವಾಗುತ್ತದೆಂದು ಹೇಳಿದೆಯಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ -

'ವದತೀತಿ ಚೇನ್ನ ಪ್ರಾಜ್ಞೋ ಹಿ'

ಪ್ರಕೃತಿಯ ಜ್ಞಾನವಿಲ್ಲದೇ ಮೋಕ್ಷವಾಗುವುದಿಲ್ಲ ಎಂಬ ಜ್ಞೇಯತ್ವಾವಚನವು ಪ್ರಕೃತಿಯಲ್ಲಿಯೂ ಕೂಡ ಸಿದ್ಧವಾಗಿದೆ. ಏಕೆಂದರೆ 'ವದತಿ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ ಪ್ರಮುಚ್ಯತೇ' ಎಂಬ ಶ್ರುತಿಯಲ್ಲಿ ಮಹತ್‌ಪರತ್ವಲಿಂಗವಿರುವುದರಿಂದ ಪ್ರಕೃತಿಯೇ ಪ್ರತಿಪಾದ್ಯವಾಗಿದೆ. ಇಂತಹ ಪ್ರಕೃತಿಯ ಜ್ಞಾನವನ್ನು ಮುಮುಕ್ಷು ಆದವನು ಪಡೆಯಬೇಕು ಎಂದು ಈ ಶ್ರುತಿಯು ಹೇಳುತ್ತಿದೆಯಲ್ಲವೇ? ಇತಿ ಚೇನ್ನ = ಇದು ಸರಿಯಲ್ಲ. ಏಕೆಂದರೆ ಅಲ್ಲಿಯೂ ಕೂಡ, ಪ್ರಾಜ್ಞೋ ಹಿ = ಪ್ರಾಜ್ಞ ಎನಿಸಿದ ವಿಷ್ಣುವೇ ಜ್ಞೇಯನೆಂದು ಪ್ರತಿಪಾದ್ಯನಾಗಿದ್ದಾನೆ. ಎಲ್ಲಾ ಪದಾರ್ಥಗಳಿಗಿಂತ ಶ್ರೇಷ್ಠವಾದ ವಿಷ್ಣುವಿನಲ್ಲಿ ಮಹತ್‌ಪರತ್ವವೂ ಕೂಡ ಯುಕ್ತವೇ ಆಗುತ್ತದೆ.

**विष्णुग्रहणे किं कारणमित्यत आह -**

**।। प्रकरणात् ।। १-४-६ ।।**

**''सोऽध्वनः पारमाप्नोति तद्विष्णोः परमं पदम्'' इति प्रकरणोक्तार्थोपासकस्य विष्णुपदप्राप्त्युक्त्या निर्णीतात् प्रकरणात् प्राज्ञस्तत्रोच्यत इत्यन्वयः ।।**

ವಿಷ್ಣುವೇ ಮಹತ್‌ಪರನಾಗಿದ್ದಾನೆ ಎಂದು ವಿವಕ್ಷಿಸಲು ಏನು ಕಾರಣ ? ಎಂಬ ಪ್ರಶ್ನೆಗೆ ಮುಂದಿನ ಸೂತ್ರ ಉತ್ತರಿಸುತ್ತಿದೆ -

'ಪ್ರಕರಣಾತ್'

'ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಮ್' ಎಂಬುದಾಗಿ ಯಾರು ಈ ಪ್ರಕರಣದ ಅರ್ಥವನ್ನು ಉಪಾಸನೆ ಮಾಡುತ್ತಾರೋ ಅವನಿಗೆ ವಿಷ್ಣುಪದವೇ ಪ್ರಾಪ್ತವಾಗುತ್ತದೆ ಎಂದು ಹೇಳಿರುವುದರಿಂದ ಇದು ವಿಷ್ಣುವಿನ ಪ್ರಕರಣವಾಗಿದೆ ಎಂದು ಸಿದ್ಧವಾಗುತ್ತದೆ. ಆದ್ದರಿಂದಲೂ ವಿಷ್ಣುವೇ 'ಮಹತ್‌ಪರ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ.

**इतश्च प्राज्ञ एव निचाय्यवाक्योक्त इत्याह -**

**।। त्रयाणामेव चैवमुपन्यासः प्रश्नश्च ।। १-४-७ ।।**

आद्यचशब्दो युक्तिसमुच्चये । न केवलं प्रकरणादिति । अन्त्यः प्रश्नोपन्यास-समुच्चये । प्राज्ञ इत्यस्ति । बुद्धिस्थत्वात् एतदुपनिषदीत्यन्वेति । एवं ''वीतमन्युस्त्वां ददृशिवान्मृत्युमुखात्प्रमुक्तम्'' इति,''स्वर्ग्यमग्निं नचिकेतः प्रजानन्'' इति,

''देवैरत्रापि विचिकित्सितं किल'' इत्येवं प्रकारेण त्रयाणां पितृसौमनस्य-स्वर्ग्याग्नि-ब्रह्मणामेवोपन्यासो यतोऽतश्च प्राज्ञ एव तत्र उच्यत इत्यर्थः ।

ಮತ್ತೊಂದು ಕಾರಣದಿಂದಲೂ 'ಪ್ರಾಜ್ಞ' ಎನಿಸಿದ ಪರಮಾತ್ಮನೇ ನಿಚಾಯ್ಯವಾಕ್ಯದಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲು ಮುಂದಿನ ಸೂತ್ರ ಹೊರಟಿದೆ -

'ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚ'

'ಚೈವಂ' ಎಂಬಲ್ಲಿರುವ 'ಚ' ಶಬ್ದವು ಯುಕ್ತಿಯನ್ನು ಸಮುಚ್ಚಯ ಮಾಡುತ್ತಿದೆ. ಕೇವಲ ಪ್ರಕರಣದಿಂದಷ್ಟೇ ವಿಷ್ಣುವಿನಲ್ಲಿ ಅವ್ಯಕ್ತಶಬ್ದ ಪ್ರತಿಪಾದ್ಯತ್ವವು ಸಿದ್ಧವಾಗುವುದಿಲ್ಲ. ಹೊರತಾಗಿ, ಪ್ರಶ್ನೆ ಹಾಗೂ ಉಪನ್ಯಾಸಗಳ ಬಲದಿಂದಲೂ ಸಿದ್ಧವಾಗುತ್ತದೆ. ಈ ಸೂತ್ರದಲ್ಲಿ 'ಪ್ರಾಜ್ಞಃ' ಎಂಬುದನ್ನು ವಿವಕ್ಷಿಸಬೇಕು. ಬುದ್ಧಿಸ್ಥವಾದ್ದರಿಂದ 'ಈ ಉಪನಿಷತ್ತಿನಲ್ಲಿ' ಎಂಬ ಪದವು ಅನ್ವಯವನ್ನು ಹೊಂದುತ್ತದೆ. 'ವೀತಮನ್ಯುಸ್ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಮ್' ಭೋಗವನ್ನು ತ್ಯಜಿಸಿದ ನಿನ್ನ ತಂದೆಯು ಮೃತ್ಯುಮುಖದಿಂದ ಬಿಡುಗಡೆ ಹೊಂದಿದ ನಿನ್ನನ್ನು ನೋಡಲಿ ಎಂಬ ವಾಕ್ಯದಲ್ಲಿ ಮೊದಲ ವರದ ಉಪನ್ಯಾಸ ಇದೆ. 'ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್' ಎಂಬ ಎರಡನೆಯ ವಾಕ್ಯದಲ್ಲಿ 'ಎಲೈ ನಚಿಕೇತನೇ ! ಸ್ವರ್ಗಸಾಧನನೂ, ಅಗ್ನಿನಾಮಕನೂ ಆದ ಶ್ರೀಹರಿಯನ್ನು ತಿಳಿದಿರುವ ನಾನು ಅವನ ಸ್ವರೂಪವನ್ನು ಹೇಳುತ್ತೇನೆ ತಿಳಿ ಎಂಬುದಾಗಿ ಎರಡನೆಯ ವರದ ಪ್ರಸ್ತಾಪವಿದೆ. 'ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ' ಎಂಬ ಮೂರನೆಯ ವಾಕ್ಯದಲ್ಲಿ ನೀನು ಕೇಳುತ್ತಿರುವ ಮೃತ ಜೀವರ ಮತ್ತು ಮುಕ್ತರಾದ ಜೀವರ ಪ್ರೇರಕರಾದ ಬ್ರಹ್ಮನ ಸ್ವರೂಪವಿಷಯದಲ್ಲಿ ದೇವತೆಗಳೂ ಕೂಡ ಹಿಂದೆ ಸಂಶಯವನ್ನು ಪಡೆದಿದ್ದರು ಎಂಬ ಮೂರನೆಯ ವಾಕ್ಯದ ಪ್ರಸ್ತಾಪವಿದೆ.

ಯಾವ ಕಾರಣದಿಂದ ಮೂರು ಬಗೆಯ ಪ್ರಶ್ನೆಗಳು ಪ್ರಸಕ್ತವಾಗಿವೆಯೋ, ಆ ಕಾರಣದಿಂದಲೇ ಇಲ್ಲಿ ಪ್ರಾಜ್ಞನು ಪ್ರತಿಪಾದ್ಯನಾಗಿದ್ದಾನೆ ಎಂದಭಿಪ್ರಾಯ.

त्रयाणामेवेति कुत इत्यत उक्तम् – प्रश्नश्चेति । ''सुमना यथा स्याद्वीतमन्युः'' इति, ''स त्वमग्निं स्वर्ग्यमध्येषि मृत्यो प्रब्रूहि तम्'' इति, ''येयं प्रेते विचिकित्सा मनुष्ये'' इति चैतत् त्रितयविषय एव प्रश्नश्च यतोऽत उपन्यासस्त्रितयविषय इत्यर्थः। आद्यश्चो हेतौ । अन्त्यः समुच्चय इत्येके । प्रश्नस्यादित्वेऽपि प्रतिवचनस्थनिचाय्य-वाक्यस्य प्रधानपरत्वशङ्कनात् तन्निरसितुमुपन्यासस्यादावुक्तिः । त्रयाणामेव चेत्येव-पूर्ताविवमित्युक्तिः त्रयमध्ये प्रधानस्य न निवेश इति दर्शयितुं प्रकारत्रयोक्त्यर्थो ।
उपन्यासस्योक्तत्रयविषयत्वसिद्ध्यै प्रश्नोक्तिः ।

ಆನುಮಾನಿಕಾಧಿಕರಣ (೧-೪-೧)

ಏವಂ = ಕಾಠಕದಲ್ಲಿ ಹೇಳಿರುವಂತೆ, ತ್ರಯಾಣಮೇವ = ತಂದೆಯ ಸೌಮನಸ್ಯ ಸ್ವರ್ಗ್ಯವಾದ ಅಗ್ನಿಯಲ್ಲಿರುವ ಪರಮಾತ್ಮ, ಮುಕ್ತನಿಯಾಮಕನಾದ ಬ್ರಹ್ಮ ಈ ಮೂರರ ಬಗ್ಗೆ ಮಾತ್ರ ಪ್ರಶ್ನಿಸಲಾಗಿದೆ. ಏಕೆಂದರೆ ಪ್ರಶ್ನಶ್ಚ = ಈ ಮೂರನ್ನೇ ಕೇಳಿರುವುದರಿಂದ, ಈ ಮೂರರ ಬಗ್ಗೆ ಮಾತ್ರ ನಿರೂಪಣೆಯಿದೆ ಎಂದು ಹೇಗೆ ಹೇಳುತ್ತೀರಿ ? ಎಂಬ ಆಶಂಕೆಗೆ ಉತ್ತರಿಸಲು 'ಪ್ರಶ್ನಶ್ಚ' ಎನ್ನಲಾಗಿದೆ. 'ಸುಮನಾ ಯಥಾ ಸ್ಯಾದ್ವೀತಮನ್ಯುಃ' ಎಂಬುದಾಗಿ 'ಸತ್ವಮಗ್ನಿಂ ಸ್ವರ್ಗ್ಯಮಧ್ಯೇಷಿ ಮೃತ್ಯೋ ಪ್ರಬ್ರೂಹಿ ತಮ್' ಎಂಬುದಾಗಿ, 'ಯೇ ಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ'ಎಂಬುದಾಗಿ ಮೂರರ ವಿಷಯದಲ್ಲೇ ಪ್ರಶ್ನೆಗಳು ಇರುವುದರಿಂದ ಉತ್ತರವೂ ಕೂಡ ಮೂರರ ಕುರಿತೇ ಇರಬೇಕು.

ಇಲ್ಲಿರುವ 'ಚ' ಶಬ್ದವು ಹೇತ್ವರ್ಥದಲ್ಲಿದೆ. ಕೊನೆಯ 'ಚ' ಶಬ್ದವು ಸಮುಚ್ಚಯವನ್ನು ಹೇಳುವುದಕ್ಕಾಗಿ ಇರುತ್ತದೆ.

ಉಪನಿಷತ್ತಿನಲ್ಲಿ ಪ್ರಶ್ನೆಯೇ ಮೊದಲಿದ್ದರೂ ಉತ್ತರದಲ್ಲಿರುವ 'ನಿಚಾಯ್ಯ' ವಾಕ್ಯವು ಪ್ರಕೃತಿ ಪರವಾಗಿದೆಯೆಂದು ಶಂಕಿಸಲಾಗಿದೆ. ಅದನ್ನು ನಿರಾಕರಣೆ ಮಾಡುವುದಕ್ಕಾಗಿ ಮೊದಲು ಉತ್ತರ ಎಂಬರ್ಥವನ್ನು ನೀಡುವ 'ಉಪನ್ಯಾಸ' ಪದವನ್ನು ಸೂತ್ರದಲ್ಲಿ ಉಲ್ಲೇಖಿಸಿದ್ದಾರೆ. 'ತ್ರಯಾಣಾಮೇವ ಚ' ಎಂದಷ್ಟೇ ಹೇಳಿದ್ದರೂ ಸಾಕಾಗುತ್ತಿತ್ತು. ಆದರೂ 'ಏವಂ' ಎಂದು ಹೇಳಿರುವುದರಿಂದ ಈ ಮೂರರ ಮಧ್ಯದಲ್ಲಿ ಪ್ರಧಾನವನ್ನು ಸೇರಿಸಿಕೊಳ್ಳಬಾರದು ಎಂಬ ಉದ್ದೇಶವಿದೆ. ಈ ಪ್ರಶ್ನೆಗಳ ಮೂರು ಪ್ರಕಾರಗಳನ್ನು ಮತ್ತು ಉಪನ್ಯಾಸವು ಪ್ರಶ್ನೆ ಮಾಡಿದ ಮೂರು ವಿಷಯಗಳನ್ನು ಕುರಿತೇ ಇರುತ್ತದೆ ಎಂದು ಹೇಳಲು ಪ್ರಶ್ನೆಗಳನ್ನು ಉಲ್ಲೇಖಿಸಲಾಗಿದೆ.

ननु प्रवृत्तिनिमित्तस्त्वेऽपि प्रयोगप्राचुर्याभावान्मुख्यतो नाव्यक्तादिशब्दं ब्रह्मेत्यत आह -

**।। महद्वच ।। १-४-८ ।।**

चशब्दादव्यक्तादिशब्दं ब्रह्मैवेति समुच्चीयते । महद्वत् महच्छब्द ब्रह्म यथा तथेत्यर्थः ।

ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತ ಅವ್ಯಕ್ತತ್ವ. ಇದು ಬ್ರಹ್ಮನಲ್ಲಿ ಇದೆ ಎಂದು ಸಾಧನೆ ಮಾಡಿದರೂ ಪ್ರಯೋಗಪ್ರಾಚುರ್ಯವು ಬ್ರಹ್ಮನಲ್ಲಿ ಇರುವುದಿಲ್ಲ. ಆದ್ದರಿಂದ ಅವ್ಯಕ್ತಶಬ್ದದಿಂದ ಬ್ರಹ್ಮನು ಮುಖ್ಯವಾಗಿ ಹೇಗೆ ಪ್ರತಿಪಾದ್ಯನಾಗುತ್ತಾನೆ? ಎಂಬ ಆಕ್ಷೇಪಕ್ಕೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ -

'ಮಹದ್ವಚ್ಚ'

ಸೂತ್ರದಲ್ಲಿರುವ 'ಚ' ಶಬ್ದದಿಂದ ಅವ್ಯಕ್ತಾದಿಶಬ್ದಗಳಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಸಮುಚ್ಚಯ ಮಾಡಬೇಕು.

ಸೂತ್ರಾರ್ಥ - ಮಹದ್ವಚ್ಚ = 'ಮಹಾಂತಂ ವಿಭುಮಾತ್ಮಾಮ್' ಎಂಬ ಉಪನಿಷತ್ತಿನಲ್ಲಿ ಬ್ರಹ್ಮನಲ್ಲಿ 'ಮಹತ್' ಶಬ್ದವು ಹೇಗೆ ಮುಖ್ಯವಾಗಿ ಇದೆಯೋ, ಅದರಂತೆ ಅವ್ಯಕ್ತಶಬ್ದವು ಮುಖ್ಯವಾಗಿ ಬ್ರಹ್ಮನಲ್ಲಿ ಸಮನ್ವಯಗೊಳ್ಳುತ್ತದೆ.

महच्छब्दो महत्तत्त्वे प्रयोगप्राचुर्यवत्त्वेन ब्रह्मणि तद्धीनोऽपि ''महान्तं विभुमात्मानम्'' इत्यादौ यथा महत्त्वरूपतत्प्रवृत्तिनिमित्तसत्त्वान्मुख्यः तथाऽव्यक्तादि-शब्दोऽन्यत्र प्रसिद्ध्या ब्रह्मणि तदभावेऽपि निमित्तातिशयान्मुख्य इति भावः ।

'ಮಹತ್' ಶಬ್ದದ ಪ್ರಯೋಗಪ್ರಾಚುರ್ಯವು ಮಹತ್ತತ್ವದಲ್ಲಿ ಇರುತ್ತದೆ ಹೊರತು, ಬ್ರಹ್ಮನಲ್ಲಿ ಇರುವುದಿಲ್ಲ. ಆದರೂ 'ಮಹತ್' ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಮಹತ್ವವು ಬ್ರಹ್ಮನಲ್ಲಿರುವುದರಿಂದ 'ಮಹಾಂತಂ ವಿಭುಮಾತ್ಮಾನಮ್' ಇತ್ಯಾದಿ ಶ್ರುತಿಗಳಲ್ಲಿ 'ಮಹತ್' ಶಬ್ದದಿಂದ ಬ್ರಹ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಅದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಪ್ರಕೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದ್ದರೂ ಬ್ರಹ್ಮನಲ್ಲಿ ಪ್ರಸಿದ್ಧವಾಗದೇ ಇದ್ದರೂ ಕೂಡ 'ಅವ್ಯಕ್ತತ್ವ' ಎಂಬ ಪ್ರವೃತ್ತಿನಿಮಿತ್ತವು ಹೆಚ್ಚಾಗಿ ಬ್ರಹ್ಮನಲ್ಲೇ ಇರುವುದರಿಂದ ಇವನೇ 'ಅವ್ಯಕ್ತ' ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

महच्छब्देऽपि विप्रतिपन्नं प्रति दृष्टान्तान्तरमाह -

**।। चमसवदविशेषात् ।। १-४-९ ।।**

अव्यक्तादि ब्रह्मैवेत्यस्ति । चमसशब्दो यज्ञपात्रे प्रसिद्धोऽपि यथा शिरसि मुख्यस्तथाऽव्यक्तादिरपि ब्रह्मैव तत्र मुख्य इत्यर्थः ।

'ಮಹತ್' ಶಬ್ದದ ಪ್ರಯೋಗಪ್ರಾಚುರ್ಯವು ಬ್ರಹ್ಮನಲ್ಲಿ ಇದೆಯೆಂಬ ವಿಷಯದಲ್ಲಿಯೂ ವಿಪ್ರತಿಪತ್ತಿಯಿದೆ ಎಂದು ಹೇಳುವ ವಾದಿಗೆ ಮತ್ತೊಂದು ದೃಷ್ಟಾಂತವನ್ನು ನೀಡುತ್ತಿದ್ದಾರೆ -

'ಚಮಸವದವಿಶೇಷಾತ್'

'ಅವ್ಯಕ್ತಾದಿ' 'ಬ್ರಹ್ಮೈವ' ಎಂಬೆರಡು ಪದಗಳನ್ನು ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕು. ಸೂತ್ರಾರ್ಥ - ಚಮಸವತ್ = ಚಮಸ ಶಬ್ದವು ಯಜ್ಞಪಾತ್ರೆಯೆಂಬರ್ಥದಲ್ಲಿ ಪ್ರಸಿದ್ಧವಾಗಿದೆ.

ಆದರೂ ಕೂಡ ನಮ್ಮ ಶಿರಸ್ಸಿನಲ್ಲಿ ಮುಖ್ಯವಾದ ಪ್ರಯೋಗ ಹೊಂದಿದೆ. ಅದರಂತೆ ಅವಿಶೇಷಾತ್ - ವೇದವಾಕ್ಯಗಳಲ್ಲಿ ವ್ಯತ್ಯಾಸವಿಲ್ಲದ ಕಾರಣ ಅವ್ಯಕ್ತಶಬ್ದವು ಜಡಪ್ರಕೃತಿಯಲ್ಲಿ ಪ್ರಸಿದ್ಧವಾಗಿದ್ದರೂ ಬ್ರಹ್ಮನಲ್ಲೇ ಮುಖ್ಯಪ್ರಯೋಗವನ್ನು ಕೂಡಿಸಬಹುದು ಎಂದು.

ननु ''इदं तच्छिर एष ह्यर्वाग्बिलश्चमस ऊर्ध्वबुध्न'' इत्यनुशासनसत्त्वात्तस्य तथात्वेऽप्यत्र कुत इत्यत उक्तम् – अविशेषात् । ''नामानि सर्वाणि'' इति श्रुतेः ''इदं तच्छिरः'' इति श्रुत्या अविशेषात् तत्साम्यात् । अस्या अप्यनुशासनरूपत्वादिति यावत् । समन्वयस्य गुणपूर्त्यर्थत्वेऽप्यत्र दोषवाचिनां तदुक्तिः ''प्राण ऋच इत्येव विद्यात्'' इत्यादौ सर्वशब्दवाच्यत्वस्यापि मुमुक्षुज्ञेयत्वोक्तेरिति बोध्यम् । स्पष्टमेतदग्रे कल्पनेत्यत्र ।। १ ।।

'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಅನುಶಾಸನವಿದೆ. ಆದ್ದರಿಂದ 'ಚಮಸ' ಶಬ್ದವು ಶಿರಸ್ಸನ್ನೇ ಮುಖ್ಯವಾಗಿ ಹೇಳಬಹುದು. ಆದರೆ ಪ್ರಕೃತಿ, ಅವ್ಯಕ್ತ ಮೊದಲಾದ ಶಬ್ದಗಳು ಮುಖ್ಯವಾಗಿ ಬ್ರಹ್ಮನನ್ನೇ ಹೇಳುತ್ತವೆಂಬುದರಲ್ಲಿ ಇದು ದೃಷ್ಟಾಂತವಾಗುವುದಿಲ್ಲವಲ್ಲವೇ? ಈ ಆಶಂಕೆಗೆ 'ಅವಿಶೇಷಾತ್' ಎಂಬುದರಿಂದ ಉತ್ತರಿಸಿದ್ದಾರೆ. 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಗೆ, 'ಇದಂ ತಚ್ಛಿರಃ' ಎಂಬ ಶ್ರುತಿಯಿಂದ 'ಅವಿಶೇಷಾತ್' ಸಾಮ್ಯವಿರುವ ಕಾರಣ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಅನುಶಾಸನ ರೂಪವಾದ್ದರಿಂದ ಅವ್ಯಕ್ತಾದಿಶಬ್ದಗಳು ಬೇರೆಡೆ ಪ್ರಸಿದ್ಧವಾಗಿದ್ದರೂ ಪರಮಾತ್ಮನಲ್ಲಿ ಮುಖ್ಯವಾಗಿ ಕೂಡಿಸಬೇಕು.

ದೋಷವಾಚಕ ಶಬ್ದಗಳ ಸಮನ್ವಯವು ಗುಣಪೂರ್ಣತ್ವದ ಸಾಧನೆಗೋಸ್ಕರವೇ ಹೊರಟಿರುತ್ತದೆ. ಆದ್ದರಿಂದ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿ ಶ್ರುತಿಗಳಲ್ಲಿ ಮುಮುಕ್ಷು ಆದವನು ಸರ್ವಶಬ್ದವಾಚ್ಯತ್ವವನ್ನು ತಿಳಿಯಬೇಕು ಎಂದು ಹೇಳಲಾಗಿದೆ. ಆದ್ದರಿಂದ ದೋಷವಾಚಕ ಶಬ್ದಗಳ ಸಮನ್ವಯವು ಈ ಪಾದದಲ್ಲಿ ಸಂಗತವೇ ಆಗಿದೆ. 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಾತ್' ಎಂಬ ಸೂತ್ರದಲ್ಲಿ ಈ ವಿಷಯವು ಮತ್ತಷ್ಟು ಸ್ಪಷ್ಟವಾಗುತ್ತದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಆನುಮಾನಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## आनुमानिकाधिकरणम् (१।४।१)

### अथ चतुर्थः पादः

एवं त्रिपाद्यां कारणत्वतत्सङ्गतानन्दमयत्वादिगुणान्तरबोधकवाक्यस्थ-शब्दसमन्वयेऽभिहिते अत्र ब्रह्मपदोक्तगुणपूर्तिसिद्धये अवसरप्राप्तानां अन्यत्रैव प्रसिद्धनामलिङ्गात्मकशब्दानां समन्वय उच्यते :

**।। आनुमानिकमप्येकेषामिति चेन्न शरीररूपकविन्यस्तगृहीतेर्दर्शयति च ।।**

**।। सूक्ष्मं तु तदर्हत्वात् ।।**

**।। तदधीनत्वादर्थवत् ।।**

**।। ज्ञेयत्वावचनाच्च ।।**

**।। वदतीति चेन्न प्राज्ञो हि ।।**

**।। प्रकरणात् ।।**

**।। त्रयाणामेव चैवमुपन्यासः प्रश्नश्च ।।**

**।। महद्वच्च ।।**

**।। चमसवदविशेषात् ।।**

ಹಿಂದಿನ ಮೂರು ಪಾದಗಳಲ್ಲಿ 'ಜಗತ್‌ಕಾರಣತ್ವ' ಎಂಬ ಧರ್ಮವನ್ನು ಮತ್ತು ಅದಕ್ಕೆ ಸಂಬಂಧಪಟ್ಟ 'ಆನಂದಮಯತ್ವ' ಮೊದಲಾದ ಬೇರೆ ಗುಣಗಳನ್ನು ಹೇಳುವಂತಹ ಎಲ್ಲಾ ಬಗೆಯ ವಾಕ್ಯಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಿದ್ದಾಯಿತು. ಈ ನಾಲ್ಕನೆಯ ಪಾದದಲ್ಲಿ ಪ್ರಥಮಸೂತ್ರದಲ್ಲಿ ಬ್ರಹ್ಮಪದದಿಂದ ಹೇಳಲ್ಪಟ್ಟ ಗುಣಪೂರ್ಣತ್ವದ ಸಿದ್ಧಿಗಾಗಿ ಅವಸರಪ್ರಾಪ್ತವಾದ

ಆದರೂ ಕೂಡ ನಮ್ಮ ಶಿರಸ್ಸಿನಲ್ಲಿ ಮುಖ್ಯವಾದ ಪ್ರಯೋಗ ಹೊಂದಿದೆ. ಅದರಂತೆ ಅವಿಶೇಷಾತ್ - ವೇದವಾಕ್ಯಗಳಲ್ಲಿ ವ್ಯತ್ಯಾಸವಿಲ್ಲದ ಕಾರಣ ಅವ್ಯಕ್ತಶಬ್ದವು ಜಡಪ್ರಕೃತಿಯಲ್ಲಿ ಪ್ರಸಿದ್ಧವಾಗಿದ್ದರೂ ಬ್ರಹ್ಮನಲ್ಲೇ ಮುಖ್ಯಪ್ರಯೋಗವನ್ನು ಕೂಡಿಸಬಹುದು ಎಂದು.

ननु ''इदं तच्छिर एष ह्यर्वाग्बिलश्चमस ऊर्ध्वबुध्न'' इत्यनुशासनसत्त्वात्तस्य तथात्वेऽप्यत्र कुत इत्यत उक्तम् – अविशेषात् । ''नामानि सर्वाणि'' इति श्रुतेः ''इदं तच्छिरः'' इति श्रुत्या अविशेषात् तत्साम्यात् । अस्या अप्यनुशासनरूपत्वादिति यावत् । समन्वयस्य गुणपूर्त्यर्थत्वेऽप्यत्र दोषवाचिनां तदुक्तिः ''प्राण ऋच इत्येव विद्यात्'' इत्यादौ सर्वशब्दवाच्यत्वस्यापि मुमुक्षुज्ञेयत्वोक्तेरिति बोध्यम् । स्पष्टमेतदग्रे कल्पनेत्यत्र ।। १ ।।

'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಅನುಶಾಸನವಿದೆ. ಆದ್ದರಿಂದ 'ಚಮಸ' ಶಬ್ದವು ಶಿರಸ್ಸನ್ನೇ ಮುಖ್ಯವಾಗಿ ಹೇಳಬಹುದು. ಆದರೆ ಪ್ರಕೃತಿ, ಅವ್ಯಕ್ತ ಮೊದಲಾದ ಶಬ್ದಗಳು ಮುಖ್ಯವಾಗಿ ಬ್ರಹ್ಮನನ್ನೇ ಹೇಳುತ್ತವೆಂಬುದರಲ್ಲಿ ಇದು ದೃಷ್ಟಾಂತವಾಗುವುದಿಲ್ಲವಲ್ಲವೇ? ಈ ಆಶಂಕೆಗೆ 'ಅವಿಶೇಷಾತ್' ಎಂಬುದರಿಂದ ಉತ್ತರಿಸಿದ್ದಾರೆ. 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಗೆ, 'ಇದಂ ತಚ್ಛಿರಃ' ಎಂಬ ಶ್ರುತಿಯಿಂದ 'ಅವಿಶೇಷಾತ್' ಸಾಮ್ಯವಿರುವ ಕಾರಣ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಅನುಶಾಸನ ರೂಪವಾದ್ದರಿಂದ ಅವ್ಯಕ್ತಾದಿಶಬ್ದಗಳು ಬೇರೆಡೆ ಪ್ರಸಿದ್ಧವಾಗಿದ್ದರೂ ಪರಮಾತ್ಮನಲ್ಲಿ ಮುಖ್ಯವಾಗಿ ಕೂಡಿಸಬೇಕು.

ದೋಷವಾಚಕ ಶಬ್ದಗಳ ಸಮನ್ವಯವು ಗುಣಪೂರ್ಣತ್ವದ ಸಾಧನೆಗೋಸ್ಕರವೇ ಹೊರಟಿರುತ್ತದೆ. ಆದ್ದರಿಂದ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿ ಶ್ರುತಿಗಳಲ್ಲಿ ಮುಮುಕ್ಷು ಆದವನು ಸರ್ವಶಬ್ದವಾಚ್ಯತ್ವವನ್ನು ತಿಳಿಯಬೇಕು ಎಂದು ಹೇಳಲಾಗಿದೆ. ಆದ್ದರಿಂದ ದೋಷವಾಚಕ ಶಬ್ದಗಳ ಸಮನ್ವಯವು ಈ ಪಾದದಲ್ಲಿ ಸಂಗತವೇ ಆಗಿದೆ. 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಾತ್' ಎಂಬ ಸೂತ್ರದಲ್ಲಿ ಈ ವಿಷಯವು ಮತ್ತಷ್ಟು ಸ್ಪಷ್ಟವಾಗುತ್ತದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಅನುಮಾನಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## आनुमानिकाधिकरणम् (१।४।१)

### अथ चतुर्थः पादः

एवं त्रिपाद्यां कारणत्वतत्सङ्गतानन्दमयत्वादिगुणान्तरबोधकवाक्यस्थ-शब्दसमन्वयेऽभिहिते अत्र ब्रह्मपदोक्तगुणपूर्तिसिद्धये अवसरप्राप्तानां अन्यत्रैव प्रसिद्धनामलिङ्गात्मकशब्दानां समन्वय उच्यते :

।। आनुमानिकमप्येकेषामिति चेन्न शरीररूपकविन्यस्तगृहीतेर्दर्शयति च ।।

।। सूक्ष्मं तु तदर्हत्वात् ।।

।। तदधीनत्वादर्थवत् ।।

।। ज्ञेयत्वावचनाच्च ।।

।। वदतीति चेन्न प्राज्ञो हि ।।

।। प्रकरणात् ।।

।। त्रयाणामेव चैवमुपन्यासः प्रश्नश्च ।।

।। महद्वच्च ।।

।। चमसवदविशेषात् ।।

ಹಿಂದಿನ ಮೂರು ಪಾದಗಳಲ್ಲಿ 'ಜಗತ್ಕಾರಣತ್ವ' ಎಂಬ ಧರ್ಮವನ್ನು ಮತ್ತು ಅದಕ್ಕೆ ಸಂಬಂಧಪಟ್ಟ 'ಆನಂದಮಯತ್ವ' ಮೊದಲಾದ ಬೇರೆ ಗುಣಗಳನ್ನು ಹೇಳುವಂತಹ ಎಲ್ಲಾ ಬಗೆಯ ವಾಕ್ಯಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಿದ್ದಾಯಿತು. ಈ ನಾಲ್ಕನೆಯ ಪಾದದಲ್ಲಿ ಪ್ರಥಮಸೂತ್ರದಲ್ಲಿ ಬ್ರಹ್ಮಪದದಿಂದ ಹೇಳಲ್ಪಟ್ಟ ಗುಣಪೂರ್ಣತ್ವದ ಸಿದ್ಧಿಗಾಗಿ ಅವಸರಪ್ರಾಪ್ತವಾದ

ಆದರೂ ಕೂಡ ನಮ್ಮ ಶಿರಸ್ಸಿನಲ್ಲಿ ಮುಖ್ಯವಾದ ಪ್ರಯೋಗ ಹೊಂದಿದೆ. ಅದರಂತೆ ಅವಿಶೇಷಾತ್ - ವೇದವಾಕ್ಯಗಳಲ್ಲಿ ವ್ಯತ್ಯಾಸವಿಲ್ಲದ ಕಾರಣ ಅವ್ಯಕ್ತಶಬ್ದವು ಜಡಪ್ರಕೃತಿಯಲ್ಲಿ ಪ್ರಸಿದ್ಧವಾಗಿದ್ದರೂ ಬ್ರಹ್ಮನಲ್ಲೇ ಮುಖ್ಯಪ್ರಯೋಗವನ್ನು ಕೂಡಿಸಬಹುದು ಎಂದು.

**ननु ''इदं तच्छिर एष ह्यर्वाग्बिलश्चमस ऊर्ध्वबुध्न'' इत्यनुशासनसत्त्वात्तस्य तथात्वेऽप्यत्र कुत इत्यत उक्तम् – अविशेषात् । ''नामानि सर्वाणि'' इति श्रुतेः ''इदं तच्छिरः'' इति श्रुत्या अविशेषात् तत्साम्यात् । अस्या अप्यनुशासनरूपत्वादिति यावत् । समन्वयस्य गुणपूर्त्यर्थत्वेऽप्यत्र दोषवाचिनां तदुक्तिः ''प्राण ऋच इत्येव विद्यात्'' इत्यादौ सर्वशब्दवाच्यत्वस्यापि मुमुक्षुज्ञेयत्वोक्तेरिति बोध्यम् । स्पष्टमेतदग्रे कल्पनेत्यत्र ।। १ ।।**

'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಎಂಬುದಾಗಿ ಬೃಹದಾರಣ್ಯಕೋಪನಿಷತ್ತಿನಲ್ಲಿ ಅನುಶಾಸನವಿದೆ. ಆದ್ದರಿಂದ 'ಚಮಸ' ಶಬ್ದವು ಶಿರಸ್ಸನ್ನೇ ಮುಖ್ಯವಾಗಿ ಹೇಳಬಹುದು. ಆದರೆ ಪ್ರಕೃತಿ, ಅವ್ಯಕ್ತ ಮೊದಲಾದ ಶಬ್ದಗಳು ಮುಖ್ಯವಾಗಿ ಬ್ರಹ್ಮನನ್ನೇ ಹೇಳುತ್ತವೆಂಬುದರಲ್ಲಿ ಇದು ದೃಷ್ಟಾಂತವಾಗುವುದಿಲ್ಲವಲ್ಲವೇ? ಈ ಆಶಂಕೆಗೆ 'ಅವಿಶೇಷಾತ್' ಎಂಬುದರಿಂದ ಉತ್ತರಿಸಿದ್ದಾರೆ. 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಗೆ, 'ಇದಂ ತಚ್ಛಿರಃ' ಎಂಬ ಶ್ರುತಿಯಿಂದ 'ಅವಿಶೇಷಾತ್' ಸಾಮ್ಯವಿರುವ ಕಾರಣ 'ನಾಮಾನಿ ಸರ್ವಾಣಿ' ಎಂಬ ಶ್ರುತಿಯು ಅನುಶಾಸನ ರೂಪವಾದ್ದರಿಂದ ಅವ್ಯಕ್ತಾದಿಶಬ್ದಗಳು ಬೇರೆಡೆ ಪ್ರಸಿದ್ಧವಾಗಿದ್ದರೂ ಪರಮಾತ್ಮನಲ್ಲಿ ಮುಖ್ಯವಾಗಿ ಕೂಡಿಸಬೇಕು.

ದೋಷವಾಚಕ ಶಬ್ದಗಳ ಸಮನ್ವಯವು ಗುಣಪೂರ್ಣತ್ವದ ಸಾಧನೆಗೋಸ್ಕರವೇ ಹೊರಟಿರುತ್ತದೆ. ಆದ್ದರಿಂದ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿ ಶ್ರುತಿಗಳಲ್ಲಿ ಮುಮುಕ್ಷು ಆದವನು ಸರ್ವಶಬ್ದವಾಚ್ಯತ್ವವನ್ನು ತಿಳಿಯಬೇಕು ಎಂದು ಹೇಳಲಾಗಿದೆ. ಆದ್ದರಿಂದ ದೋಷವಾಚಕ ಶಬ್ದಗಳ ಸಮನ್ವಯವು ಈ ಪಾದದಲ್ಲಿ ಸಂಗತವೇ ಆಗಿದೆ. 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಾತ್' ಎಂಬ ಸೂತ್ರದಲ್ಲಿ ಈ ವಿಷಯವು ಮತ್ತಷ್ಟು ಸ್ಪಷ್ಟವಾಗುತ್ತದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಆನುಮಾನಾಧಿಕರಣವು ಸಮಾಪ್ತವಾಯಿತು.

श्री राघवेन्द्रतीर्थविरचिता

# श्रीन्यायमुक्तावळिः

## आनुमानिकाधिकरणम् (१।४।१)

### अथ चतुर्थः पादः

एवं त्रिपाद्यां कारणत्वतत्सङ्गतानन्दमयत्वादिगुणान्तरबोधकवाक्यस्थ-शब्दसमन्वयेऽभिहिते अत्र ब्रह्मपदोक्तगुणपूर्तिसिद्धये अवसरप्राप्तानां अन्यत्रैव प्रसिद्धनामलिङ्गात्मकशब्दानां समन्वय उच्यते :

**।। आनुमानिकमप्येकेषामिति चेन्न शरीररूपकविन्यस्तगृहीतेर्दर्शयति च ।।**

**।। सूक्ष्मं तु तदर्हत्वात् ।।**

**।। तदधीनत्वादर्थवत् ।।**

**।। ज्ञेयत्वावचनाच्च ।।**

**।। वदतीति चेन्न प्राज्ञो हि ।।**

**।। प्रकरणात् ।।**

**।। त्रयाणामेव चैवमुपन्यासः प्रश्नश्च ।।**

**।। महद्वच्च ।।**

**।। चमसवदविशेषात् ।।**

ಹಿಂದಿನ ಮೂರು ಪಾದಗಳಲ್ಲಿ 'ಜಗತ್ಕಾರಣತ್ವ' ಎಂಬ ಧರ್ಮವನ್ನು ಮತ್ತು ಅದಕ್ಕೆ ಸಂಬಂಧಪಟ್ಟ 'ಆನಂದಮಯತ್ವ' ಮೊದಲಾದ ಬೇರೆ ಗುಣಗಳನ್ನು ಹೇಳುವಂತಹ ಎಲ್ಲಾ ಬಗೆಯ ವಾಕ್ಯಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಿದ್ದಾಯಿತು. ಈ ನಾಲ್ಕನೆಯ ಪಾದದಲ್ಲಿ ಪ್ರಥಮಸೂತ್ರದಲ್ಲಿ ಬ್ರಹ್ಮಪದದಿಂದ ಹೇಳಲ್ಪಟ್ಟ ಗುಣಪೂರ್ಣತ್ವದ ಸಿದ್ಧಿಗಾಗಿ ಅವಸರಪ್ರಾಪ್ತವಾದ

ಅನ್ಯತ್ರೈವ ಪ್ರಸಿದ್ಧವಾದ ನಾಮಾತ್ಮಕಶಬ್ದಗಳ ಸಮನ್ವಯವನ್ನು ಹಾಗೂ ಲಿಂಗಾತ್ಮಕಶಬ್ದಗಳ ಸಮನ್ವಯವನ್ನು ಮಹಾವಿಷ್ಣುನಲ್ಲಿ ಸಾಧಿಸಲಾಗಿದೆ.

**अत्र अव्यक्तादिपरावधित्वावरत्वादिवाचिशब्दवाच्यत्वे प्राक् हेतूकृतसर्वेश्वरत्वादि-विरोध इत्याशङ्कनात् पूर्वसङ्गतिः ध्येया ।**

ಈ ಅಧಿಕರಣದಲ್ಲಿ ಅವ್ಯಕ್ತಕ್ಕಿಂತಲೂ ಶ್ರೇಷ್ಠವಾದ ಪುರುಷನಿಗೆ ಅವಧಿಯಾದ ಯಾವ ಅವ್ಯಕ್ತವಿದೆಯೋ, ಅಂತಹ ಶಬ್ದದ ಸಮನ್ವಯವನ್ನು ಮತ್ತು ಅವರತ್ವವನ್ನು ತಿಳಿಸುವ ಪಂಚಮೀ ವಿಭಕ್ತಿಯ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲಾಗುತ್ತಿದೆ. ಯಾವಾಗ ಪರಾವಧಿತ್ವವನ್ನು ತಿಳಿಸುವ ಪಂಚಮೀವಿಭಕ್ತಿಯ ಸಮನ್ವಯವನ್ನು ಮಹಾವಿಷ್ಣುನಲ್ಲಿ ಮಾಡಲಾಗುತ್ತದೋ, ಆವಾಗ ಮಹಾವಿಷ್ಣುವಿನಲ್ಲಿ ಅವರತ್ವವು ಪ್ರಾಪ್ತವಾಗುತ್ತದೆ. ಆದರೆ ಹಿಂದಿನ ಬ್ರಾಹ್ಮಣಾಧಿಕರಣದಲ್ಲಿ ಸರ್ವೇಶ್ವರತ್ವ ಮೊದಲಾದ ಗುಣಗಳನ್ನು ಮಹಾವಿಷ್ಣುವಿನಲ್ಲಿ ಸಮರ್ಥಿಸಲಾಗಿದೆ. ಆದರಿಂದ ವಿರೋಧ ಬರುತ್ತದಲ್ಲವೇ? ಎಂಬ ಆಕ್ಷೇಪಕ್ಕೆ ಈ ಅಧಿಕರಣದಲ್ಲಿ ಉತ್ತರಿಸಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ತಿಳಿಯಬೇಕು.

**''महतः परमव्यक्तमव्यक्तात् पुरुषः परः'' (का.१-३-११) ''जीवा एव तु दुःखिनः'' ''योनिमन्ये प्रपद्यन्ते'' (का.२-२-७) ''कार्यकारणबद्धौ तौ'' (मां.२-११) इत्यादौ श्रुताव्यक्तदुःखिबद्धअवरादिशब्दमुख्यार्थः किं प्रकृतिजीवादिः उत ईशः ? इति सन्देहः ।।**

'ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ' ಎಂಬ ಕಾಠಕೋಪನಿಷತ್ತಿನಲ್ಲಿ ಯಾವ ಅವ್ಯಕ್ತ ಶಬ್ದವು ಶ್ರುತವಾಗಿದೆಯೋ, ಮತ್ತು 'ಅವ್ಯಕ್ತಾತ್' ಎಂಬಲ್ಲಿರುವ ಯಾವ ಪಂಚಮ್ಯಂತವಾದ ಶಬ್ದವು ಶ್ರುತವಾಗಿದೆಯೋ, ಇದು ಈ ಅಧಿಕರಣದ ವಿಷಯವಾಗಿದೆ. ಮತ್ತು 'ಜೀವಾ ಏವ ತು ದುಃಖಿನಃ' 'ಯೋನಿಮನ್ಯೇ ಪ್ರಪದ್ಯಂತೇ' ಇತ್ಯಾದಿಯಾದ ಕಾಠಕೋಪನಿಷತ್ತಿನ ವಾಕ್ಯಗಳಲ್ಲಿಯೇ ಶ್ರುತವಾದ 'ದುಃಖೀ', 'ಜೀವ' ಈ ಎಲ್ಲಾ ಶಬ್ದಗಳು ವಿಷಯವಾಗಿವೆ. 'ಕಾರ್ಯಕಾರಣಬದ್ಧೌತೌ' ಎಂಬ ಮಾಂಡೂಕೋಪನಿಷತ್ತಿನಲ್ಲಿರುವ 'ಬದ್ಧಃ' ಶಬ್ದವೂ ಕೂಡ ವಿಷಯವಾಗಿದೆ. ಈ ಎಲ್ಲ ಶ್ರುತಿಗಳಲ್ಲಿರುವ 'ಅವ್ಯಕ್ತ', 'ದುಃಖೀ', 'ಬದ್ಧಃ', ಅವರ ಮೊದಲಾದ ಶಬ್ದಗಳ ಮುಖ್ಯಾರ್ಥವು ಪ್ರಕೃತಿ ಹಾಗೂ ಜೀವಾದಿಗಳೋ, ಅಥವಾ ಪರಮಾತ್ಮನೋ ? ಎಂದು ಸಂದೇಹ.

**पूर्वपक्षस्तु ।। प्रकृत्यादिरेव अव्यक्तादिशब्दार्थः न ब्रह्म, अव्यक्तादिशब्दानां तत्रैव प्रसिद्धेः विष्णुवाचित्वे मानाभावात् । तेषां प्रधानाद्यवाचकत्वेऽपि तत्र व्यवहारे अविशेषेण सर्वशब्दानां सर्वत्र व्यवहारापातेन अव्यवस्थाप्रसङ्गाच्च । अव्यक्ते**

पञ्चम्युक्तेन परावधित्वेनाक्षिप्तावरत्वस्य जीवे ज्ञातदुःखित्वादेश्च ''न त्वत्समश्चाभ्यधिकश्च दृश्यते'' (भ.गी. ११-४३) ''निरनिष्टो निरवद्यः'' इत्यादिप्रमाणविरोधेन प्रगुक्त-सर्वाधिपतित्वादिविरोधेन च विष्णावयोगाच्च । ''महान्तं च समावृत्य प्रधानं समवस्थितं'' इत्यादेः प्रधानधर्मत्वेन निर्णीतमहत्परत्वलिङ्गस्य अव्यक्ते श्रवणाच्चेति।।

ಪೂರ್ವಪಕ್ಷ- ಅವ್ಯಕ್ತ ಮೊದಲಾದ ಶಬ್ದಗಳ ಪ್ರತಿಪಾದ್ಯವಾದ ಅರ್ಥ ಪ್ರಕೃತ್ಯಾದಿಗಳೇ ಹೊರತು ಬ್ರಹ್ಮನಲ್ಲ. ಲೋಕದಲ್ಲಿ ಅವ್ಯಕ್ತಾದಿ ಶಬ್ದಗಳನ್ನು ಪ್ರಕೃತ್ಯಾದಿಗಳಲ್ಲಿಯೇ ಪ್ರಯೋಗಿಸುತ್ತಾರೆ. ಇದರಂತೆ ವಿಷ್ಣುವಿನಲ್ಲಿ ಈ ಶಬ್ದಗಳ ಪ್ರಯೋಗವಿದೆ ಎನ್ನಲು ಯಾವುದೇ ಪ್ರಮಾಣವಿಲ್ಲ. ಒಂದು ವೇಳೆ ಅವ್ಯಕ್ತಾದಿ ಶಬ್ದಗಳು ವಿಷ್ಣುವಿನಲ್ಲೇ ವಾಚಕವಾಗಿವೆ. ಪ್ರಕೃತ್ಯಾದಿಗಳಲ್ಲಿ ವಾಚಕವಾಗಿಲ್ಲ. ಆದರೂ ಕೂಡ ಕೇವಲ ವ್ಯವಹಾರ ಮಾಡುತ್ತಾರೆಂದು ಹೇಳುವುದಾದರೆ ಯಾವುದೇ ವ್ಯತ್ಯಾಸವಿಲ್ಲದ ಕಾರಣ ಉಳಿದ ಶಬ್ದಗಳಲ್ಲಿಯೂ ಆಯಾ ಪದಾರ್ಥಗಳ ವಾಚಕತ್ವವಿಲ್ಲದಿದ್ದರೂ ವ್ಯವಹಾರವು ಬರಲಿ ಎಂಬ ಅತಿಪ್ರಸಂಗ ಬರುತ್ತದೆ. ಯಾವ ಶಬ್ದಗಳನ್ನು ಎಲ್ಲಿ ಬೇಕಾದರೂ ಪ್ರಯೋಗ ಮಾಡಬಹುದೆಂಬ ಅವ್ಯವಸ್ಥೆಯು ಉಂಟಾಗುತ್ತದೆ.

ಮತ್ತು 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಯಾವ ಪಂಚಮೀವಿಭಕ್ತಿಯು ಶ್ರುತವಾಗಿದೆಯೋ, ಈ ಪಂಚಮೀ ವಿಭಕ್ತಿಯು ಪರಾವಧಿತ್ವವನ್ನು ಹೇಳುತ್ತಿದೆ. ಇದರಿಂದ ಆಕ್ಷಿಪ್ತವಾದದ್ದು ಅವರತ್ವ. ಈ ಅವರತ್ವವು ವಿಷ್ಣುವಿನಲ್ಲಿ ಸರ್ವಥಾ ಬರುವುದಿಲ್ಲ. ಏಕೆಂದರೆ 'ನ ತ್ವತ್‌ಸಮಶ್ಚಾಭ್ಯಾಧಿಕಶ್ಚ ದೃಶ್ಯತೇ' ಎಂಬ ಶ್ರುತಿಯು ಪರಮಾತ್ಮನಿಗೆ ಸರಿಸಾಟಿಯಾದ ವ್ಯಕ್ತಿಯಾಗಲೀ, ಅವನಿಗಿಂತ ಉತ್ತಮನಾದ ಮತ್ತೊಬ್ಬ ವ್ಯಕ್ತಿಯಾಗಲೀ ಇರಲು ಸಾಧ್ಯವೇ ಇಲ್ಲ ಎಂದು ಸಮರ್ಥನೆ ಮಾಡುತ್ತಿದೆ. ಮತ್ತು 'ಜೀವಾ ಏವ ತು ದುಃಖಿನಃ' ಇತ್ಯಾದಿ ಶ್ರುತಿಗಳಲ್ಲಿರುವ ದುಃಖಿತ್ವಾದಿಗಳೂ ಕೂಡ ಈಶ್ವರನಲ್ಲಿ ಸರ್ವಥಾ ಬರುವುದಿಲ್ಲ. 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ಪ್ರಮಾಣಗಳು ಪರಮಾತ್ಮನನ್ನು ನಿರ್ದುಷ್ಟನೆಂದು ಸಮರ್ಥನೆ ಮಾಡುತ್ತಿವೆ. ಮತ್ತು ಹಿಂದಿನ ಅಧಿಕರಣದಲ್ಲಿ ಯಾವ 'ಸರ್ವಾಧಿಪತಿತ್ವ' ಎಂಬ ಧರ್ಮವನ್ನು ವಿಷ್ಣುವಿನಲ್ಲಿ ಸಮರ್ಥನೆ ಮಾಡಲಾಗಿದೆಯೋ, ಅದರ ವಿರೋಧವೂ ಕೂಡ ಪ್ರಾಪ್ತವಾಗುತ್ತದೆ. 'ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಂ' ಈ ಶ್ರುತಿಯಲ್ಲಿ ಪ್ರಕೃತಿಯ ಧರ್ಮವೆಂದು ನಿರ್ಣಯಿಸಲ್ಪಟ್ಟ ಯಾವ ಮಹತ್‌ಪರತ್ವಲಿಂಗವಿದೆಯೋ ಅದು ಅವ್ಯಕ್ತದಲ್ಲೇ ಶ್ರುತವಾಗಿದೆ. ಆದ್ದರಿಂದ 'ಅವ್ಯಕ್ತ', 'ದುಃಖೀ' ಮೊದಲಾದ ಶಬ್ದಗಳಿಂದ ಈಶ್ವರನು ಪ್ರತಿಪಾದ್ಯನಾಗಲಾರನೆಂದು ಪೂರ್ವಪಕ್ಷ.

सिद्धान्तस्तु ।। ''नामानि सर्वाणि यमाविशन्ति'' (भाल्लवेय श्रुतिः) इत्यादिश्रुत्या विष्णोः अव्यक्तादिसर्वशब्दवाच्यत्वात् ''अव्यक्तमचलं शान्तं'' (पिप्प.श्रु.) ''अनेन जीवेनात्मना'' (छांदोग्यः ६-११-१) इत्यादिश्रौतस्मार्त-प्रयोगात् ।

ಸಿದ್ಧಾಂತ ಹೀಗಿದೆ - 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಭಾಲ್ಲವೇಯ ಶ್ರುತಿಯಲ್ಲಿ ಎಲ್ಲಾ ಶಬ್ದಗಳೂ ಹರಿನಾಮಗಳೆಂದು ಹೇಳಲಾಗಿದೆ. ಆದ್ದರಿಂದ 'ಅವ್ಯಕ್ತ', ದುಃಖೀ' ಮೊದಲಾದ ಶಬ್ದಗಳೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. ಅಷ್ಟೇ ಅಲ್ಲದೇ 'ಅವ್ಯಕ್ತಮಚಲಂ ಶಾಂತಂ' ಎಂಬ ಶ್ರುತಿಯು ಶಾಂತಸ್ವರೂಪನೂ, ನಿರ್ವಿಕಾರನೂ ಆದ ವಿಷ್ಣುವನ್ನೇ 'ಅವ್ಯಕ್ತ' ಎನ್ನುತ್ತಿದೆ. 'ಅನೇನ ಜೀವೇನಾತ್ಮನಾ' ಎಂಬ ಛಾಂದೋಗ್ಯವು ವಿಷ್ಣುವನ್ನೇ ಜೀವ ಎನ್ನುತ್ತಿದೆ. ಹೀಗೆ ಶ್ರುತಿ-ಸ್ಮೃತಿಗಳ ಪ್ರಯೋಗಬಾಹುಲ್ಯವು ವಿಷ್ಣುವಿನಲ್ಲೇ ಇರುತ್ತದೆ.

सूक्ष्मत्वेनाव्यक्तत्वस्य प्राणधारकत्वादेश्च अव्यक्तादिपदप्रवृत्तिनिमित्तस्य ''यत्तत्सूक्ष्मं परमं वेदितव्यं'' (पिप्प.श्रु) इत्यादिना ईशे मुख्यत्वेन तेषां तत्र मुख्यत्वात् ।

ಅವಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅತಿಸೂಕ್ಷ್ಮತ್ವವು ಮಹಾವಿಷ್ಣುವಿನಲ್ಲೇ ಇರಲು ಅರ್ಹವಾಗಿದೆ. ಜೀವಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಾಣಧಾರಕತ್ವವೂ ಕೂಡ ವಿಷ್ಣುವಿನಲ್ಲೇ ಇರುತ್ತದೆ. ಆದ್ದರಿಂದ 'ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಈ ಎಲ್ಲಾ ಶಬ್ದಗಳ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ಮಹಾವಿಷ್ಣುವಿನಲ್ಲೇ ಬರುತ್ತದೆ.

महच्चमसशब्दयोः महत्तत्वयज्ञपात्रयोः प्रसिद्धत्वेऽपि ''महान्तं विभुमात्मानं'' (का.१-२-२२) ''इदं तच्छिरः एष ह्यर्वाग्बिलश्चमसः'' (बृ.४-२-३) इत्यादौ प्रवृत्तिनिमित्तमुख्यत्वादिना विष्णुशिरसोर्मुख्यत्वमिव अव्यक्तादिशब्दानां अन्यत्र प्रसिद्धत्वेऽपि ईशे मुख्यत्वेनोपपत्तेः ।

ವಾಸ್ತವಿಕವಾಗಿ ಅವ್ಯಕ್ತ, ಜೀವ ಮೊದಲಾದ ಶಬ್ದಗಳು ಬೇರೆಡೆ ಪ್ರಸಿದ್ಧವಾಗಿರಬಹುದು. ಆದರೂ ಕೂಡ ಈಶ್ವರನಲ್ಲಿ ಮುಖ್ಯವಾಗಿ ಇರಲು ಅರ್ಹವಾಗಿವೆ. ಹೇಗೆಂದರೆ 'ಮಹತ್' ಎಂಬ ಶಬ್ದವು ಮಹತ್ತತ್ವದಲ್ಲೇ ಪ್ರಸಿದ್ಧವಾಗಿದೆ. ಚಮಸ ಎಂಬ ಶಬ್ದವು ಯಜ್ಞಪಾತ್ರೆಯಲ್ಲಿಯೇ ಪ್ರಸಿದ್ಧವಾಗಿದೆ. ಆದರೂ 'ಮಹಾಂತಂ ವಿಭುಮಾತ್ಮಾನಾಂ' ಎಂಬ ಕಾಠಕೋಪನಿಷತ್ತು 'ಮಹತ್' ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ವಿಭುತ್ವವು ವಿಷ್ಣುವಿನಲ್ಲಿರುವುದರಿಂದ ಅವನನ್ನೇ 'ಮಹಾನ್' ಎಂದು ಕರೆದಿದೆ. 'ಇದಂ ತಚ್ಛಿರಃ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬ ಶ್ರುತಿಯು ಶಿರಸ್ಸನ್ನು 'ಚಮಸ' ಎಂದು ಕರೆದಿದೆ.

ಇದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಅನ್ಯತ್ರಪ್ರಸಿದ್ಧವಾಗಿದ್ದರೂ ಈಶ್ವರನಲ್ಲಿ ಮುಖ್ಯವಾಗಿ ಇರಬಹುದು.

तत्तच्छब्दवाच्येशसम्बन्धादन्यत्र तत्तच्छब्दे व्यवहारस्याङ्गीकारेण अव्यवस्थाऽनापत्तेः । ''तमेवैकं जानथ आत्मानं अन्या वाचो विमुञ्चथ'' इति (आथ. २-२-५) ईशस्यैव मुमुक्षुज्ञेयत्ववचनेन अन्यस्य तदवचनेन ईशज्ञान एव वेदस्य प्रवृत्तत्वात् अवरत्वदुःखादेः ईशेऽयोगेऽपि अन्यगतस्य ईशाधीनत्वेन स्वातन्त्र्येण निमित्तेन ईशे परावधित्ववाचिपञ्चम्यन्तपददुःख्यादिपदवाच्यत्वोपपत्तेः ।

ಪ್ರತಿಯೊಂದು ಶಬ್ದಗಳಿಂದ ಈಶ್ವರನೇ ಪ್ರತಿಪಾದ್ಯನಾದರೆ ಶಬ್ದವ್ಯವಹಾರದ ಅವ್ಯವಸ್ಥಾ ಬರುತ್ತದಲ್ಲವೇ? ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಎಲ್ಲಾ ಶಬ್ದಗಳಿಂದಲೂ ಈಶ್ವರನೇ ಪ್ರತಿಪಾದ್ಯನಾಗಿದ್ದಾನೆ. ಅವನ ಸಂಬಂಧದಿಂದ, ಆಯಾ ಶಬ್ದಗಳಿಗೆ ಬೇರೆ ಪದಾರ್ಥಗಳಲ್ಲಿ ವ್ಯವಹಾರವಿರುತ್ತದೆ ಎಂದು ನಾವು ಅಂಗೀಕರಿಸುತ್ತೇವೆ. ಆದ್ದರಿಂದ ಅವ್ಯವಸ್ಥೆಗೆ ಅವಕಾಶವಿಲ್ಲ.

'ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ' ಎಂಬ ಆಥರ್ವಣೋಪನಿಷತ್ತಿನಲ್ಲಿ ಮುಮುಕ್ಷು ಆದವನು ಈಶ್ವರನನ್ನೇ ಅವಶ್ಯವಾಗಿ ತಿಳಿಯಬೇಕು ಎಂದು ಹೇಳಲಾಗಿದೆ. ಹೊರತು, ಬೇರೆ ಪದಾರ್ಥವನ್ನು ತಿಳಿಯುವುದರಿಂದ ಮೋಕ್ಷವಾಗುತ್ತದೆಂದು ಹೇಳಿರುವುದಿಲ್ಲ. ಹಾಗಾಗಿ ಇಂತಹ ಈಶ್ವರನ ಜ್ಞಾನಕ್ಕೋಸ್ಕರವೇ ವೇದಗಳೆಲ್ಲವೂ ಹೊರಟಿರುತ್ತದೆ. ಅವರತ್ವ, ದುಃಖ ಮೊದಲಾದವು ಈಶ್ವರನಲ್ಲಿ ಇಲ್ಲದಿದ್ದರೂ ಬೇರೆಡೆ ಇರುವ ಅವರತ್ವ, ದುಃಖ ಮೊದಲಾದವುಗಳು ಈಶ್ವರನ ಅಧೀನವಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ಈಶ್ವರನಲ್ಲಿ ಸಮನ್ವಯವಾಗುತ್ತವೆ. ಅಂದರೆ ಪರಾವಧಿತ್ವವನ್ನು ಹೇಳುವ ಪಂಚಮ್ಯಂತ ಪದವಾಗಲೀ, 'ದುಃಖೀ' ಎಂಬ ಪದವಾಗಲೀ, ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತವೆ.

सर्वस्मात् परे महत्परत्वस्यापि सम्भवाच्च अव्यक्तादिशब्दमुख्यार्थो हरिरेवेति ।।

ಎಲ್ಲ ಪದಾರ್ಥಗಳಿಗಿಂತಲೂ ಉತ್ತಮನಾದ ಈಶ್ವರನು ಮಹತ್ತತ್ತ್ವಕ್ಕಿಂತಲೂ ಉತ್ತಮನೇ ಆಗಿರುತ್ತಾನೆ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥನು ಈಶ್ವರನೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

तदधीनत्वादिति सूत्राभिमतवर्णकन्तु शब्दप्रवृत्तिनिमित्तं च तद्वत्त्वमिव तत्प्रति स्वातन्त्र्यमपि शब्दप्रवृत्तौ हेतुरुत नेति संदेहे भृत्यगतबन्धादिकं प्रति सत्यपि स्वातन्त्र्ये राज्ञि बद्धादिशब्दाप्रयोगाच्चेति प्राप्ते भृत्यगतजयं प्रति स्वातन्त्र्येण राज्ञि जयशब्दप्रयोगात् बद्धादिपदाप्रयोगस्य च राज्ञो बन्धादियोग्यत्वेन अमङ्गलत्व-

सिद्धान्तस्तु ।। ''नामानि सर्वाणि यमाविशन्ति'' (भाल्लवेय श्रुतिः) इत्यादिश्रुत्या विष्णोः अव्यक्तादिसर्वशब्दवाच्यत्वात् ''अव्यक्तमचलं शान्तं'' (पिप्प.श्रु.) ''अनेन जीवेनात्मना'' (छांदोग्यः ६-११-१) इत्यादिश्रौतस्मार्तप्रयोगात् ।

ಸಿದ್ಧಾಂತ ಹೀಗಿದೆ - 'ನಾಮಾನಿ ಸರ್ವಾಣಿ ಯಮಾವಿಶಂತಿ' ಎಂಬ ಭಾಲ್ಲವೇಯ ಶ್ರುತಿಯಲ್ಲಿ ಎಲ್ಲಾ ಶಬ್ದಗಳೂ ಹರಿನಾಮಗಳೆಂದು ಹೇಳಲಾಗಿದೆ. ಆದ್ದರಿಂದ 'ಅವ್ಯಕ್ತ', ದುಃಖೀ' ಮೊದಲಾದ ಶಬ್ದಗಳೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. ಅಷ್ಟೇ ಅಲ್ಲದೇ 'ಅವ್ಯಕ್ತಮಚಲಂ ಶಾಂತಂ' ಎಂಬ ಶ್ರುತಿಯು ಶಾಂತಸ್ವರೂಪನೂ, ನಿರ್ವಿಕಾರನೂ ಆದ ವಿಷ್ಣುವನ್ನೇ 'ಅವ್ಯಕ್ತ' ಎನ್ನುತ್ತಿದೆ. 'ಅನೇನ ಜೀವೇನಾತ್ಮನಾ' ಎಂಬ ಛಾಂದೋಗ್ಯವು ವಿಷ್ಣುವನ್ನೇ ಜೀವ ಎನ್ನುತ್ತಿದೆ. ಹೀಗೆ ಶ್ರುತಿ-ಸ್ಮೃತಿಗಳ ಪ್ರಯೋಗಬಾಹುಲ್ಯವು ವಿಷ್ಣುವಿನಲ್ಲೇ ಇರುತ್ತದೆ.

सूक्ष्मत्वेनाव्यक्तत्वस्य प्राणधारकत्वादेश्च अव्यक्तादिपदप्रवृत्तिनिमित्तस्य ''यत्तत्सूक्ष्मं परमं वेदितव्यं'' (पिप्प.श्रु) इत्यादिना ईशे मुख्यत्वेन तेषां तत्र मुख्यत्वात् ।

ಅವಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಅತಿಸೂಕ್ಷ್ಮತ್ವವು ಮಹಾವಿಷ್ಣುವಿನಲ್ಲೇ ಇರಲು ಅರ್ಹವಾಗಿದೆ. ಜೀವಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಪ್ರಾಣಧಾರಕತ್ವವೂ ಕೂಡ ವಿಷ್ಣುವಿನಲ್ಲೇ ಇರುತ್ತದೆ. ಆದ್ದರಿಂದ 'ಯತ್ತತ್ ಸೂಕ್ಷ್ಮಂ ಪರಮಂ ವೇದಿತವ್ಯಂ' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಈ ಎಲ್ಲಾ ಶಬ್ದಗಳ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ಮಹಾವಿಷ್ಣುವಿನಲ್ಲೇ ಬರುತ್ತದೆ.

महच्चमसशब्दयोः महत्तत्वयज्ञपात्रयोः प्रसिद्धत्वेऽपि ''महान्तं विभुमात्मानं'' (का.१-२-२२) ''इदं तच्छिरः एष ह्यर्वाग्बिलश्चमसः'' (बृ.४-२-३) इत्यादौ प्रवृत्तिनिमित्तमुख्यत्वादिना विष्णुशिरसोर्मुख्यत्वमिव अव्यक्तादिशब्दानां अन्यत्र प्रसिद्धत्वेऽपि ईशे मुख्यत्वेनोपपत्तेः ।

ವಾಸ್ತವಿಕವಾಗಿ ಅವ್ಯಕ್ತ, ಜೀವ ಮೊದಲಾದ ಶಬ್ದಗಳು ಬೇರೆಡೆ ಪ್ರಸಿದ್ಧವಾಗಿರಬಹುದು. ಆದರೂ ಕೂಡ ಈಶ್ವರನಲ್ಲಿ ಮುಖ್ಯವಾಗಿ ಇರಲು ಅರ್ಹವಾಗಿವೆ. ಹೇಗೆಂದರೆ 'ಮಹತ್' ಎಂಬ ಶಬ್ದವು ಮಹತ್ತತ್ವದಲ್ಲೇ ಪ್ರಸಿದ್ಧವಾಗಿದೆ. ಚಮಸ ಎಂಬ ಶಬ್ದವು ಯಜ್ಞಪಾತ್ರೆಯಲ್ಲಿಯೇ ಪ್ರಸಿದ್ಧವಾಗಿದೆ. ಆದರೂ 'ಮಹಾಂತಂ ವಿಭುಮಾತ್ಮಾನಾಂ' ಎಂಬ ಕಾಠಕೋಪನಿಷತ್ತು 'ಮಹತ್' ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ವಿಭುತ್ವವು ವಿಷ್ಣುವಿನಲ್ಲಿರುವುದರಿಂದ ಅವನನ್ನೇ 'ಮಹಾನ್' ಎಂದು ಕರೆದಿದೆ. 'ಇದಂ ತಚ್ಛಿರಃ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬ ಶ್ರುತಿಯು ಶಿರಸ್ಸನ್ನು 'ಚಮಸ' ಎಂದು ಕರೆದಿದೆ.

ಇದರಂತೆ ಅವ್ಯಕ್ತ ಮೊದಲಾದ ಶಬ್ದಗಳು ಅನ್ಯತ್ರಪ್ರಸಿದ್ಧವಾಗಿದ್ದರೂ ಈಶ್ವರನಲ್ಲಿ ಮುಖ್ಯವಾಗಿ ಇರಬಹುದು.

तत्तच्छब्दवाच्येशसम्बन्धादन्यत्र तत्तच्छब्दे व्यवहारस्याङ्गीकारेण अव्यवस्थाऽनापत्तेः । ''तमेवैकं जानथ आत्मानं अन्या वाचो विमुञ्चथ'' इति (आथ. २-२-५) ईशस्यैव मुमुक्षुज्ञेयत्ववचनेन अन्यस्य तदवचनेन ईशज्ञान एव वेदस्य प्रवृत्तत्वात् अवरत्वदुःखादेः ईशेऽयोगेऽपि अन्यगतस्य ईशाधीनत्वेन स्वातन्त्र्येण निमित्तेन ईशे परावधित्ववाचिपञ्चम्यन्तपददुःख्यादिपदवाच्यत्वोपपत्तेः ।

ಪ್ರತಿಯೊಂದು ಶಬ್ದಗಳಿಂದ ಈಶ್ವರನೇ ಪ್ರತಿಪಾದ್ಯನಾದರೆ ಶಬ್ದವ್ಯವಹಾರದ ಅವ್ಯವಸ್ಥಾ ಬರುತ್ತದಲ್ಲವೇ? ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಎಲ್ಲಾ ಶಬ್ದಗಳಿಂದಲೂ ಈಶ್ವರನೇ ಪ್ರತಿಪಾದ್ಯನಾಗಿದ್ದಾನೆ. ಅವನ ಸಂಬಂಧದಿಂದ, ಆಯಾ ಶಬ್ದಗಳಿಗೆ ಬೇರೆ ಪದಾರ್ಥಗಳಲ್ಲಿ ವ್ಯವಹಾರವಿರುತ್ತದೆ ಎಂದು ನಾವು ಅಂಗೀಕರಿಸುತ್ತೇವೆ. ಆದ್ದರಿಂದ ಅವ್ಯವಸ್ಥೆಗೆ ಅವಕಾಶವಿಲ್ಲ.

'ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ' ಎಂಬ ಆಥರ್ವಣೋಪನಿಷತ್ತಿನಲ್ಲಿ ಮುಮುಕ್ಷು ಆದವನು ಈಶ್ವರನನ್ನೇ ಅವಶ್ಯವಾಗಿ ತಿಳಿಯಬೇಕು ಎಂದು ಹೇಳಲಾಗಿದೆ. ಹೊರತು, ಬೇರೆ ಪದಾರ್ಥವನ್ನು ತಿಳಿಯುವುದರಿಂದ ಮೋಕ್ಷವಾಗುತ್ತದೆಂದು ಹೇಳಿರುವುದಿಲ್ಲ. ಹಾಗಾಗಿ ಇಂತಹ ಈಶ್ವರನ ಜ್ಞಾನಕ್ಕೋಸ್ಕರವೇ ವೇದಗಳೆಲ್ಲವೂ ಹೊರಟಿರುತ್ತದೆ. ಅವರತ್ವ, ದುಃಖ ಮೊದಲಾದವು ಈಶ್ವರನಲ್ಲಿ ಇಲ್ಲದಿದ್ದರೂ ಬೇರೆಡೆ ಇರುವ ಅವರತ್ವ, ದುಃಖ ಮೊದಲಾದವುಗಳು ಈಶ್ವರನ ಅಧೀನವಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ಈಶ್ವರನಲ್ಲಿ ಸಮನ್ವಯವಾಗುತ್ತವೆ. ಅಂದರೆ ಪರಾವಧಿತ್ವವನ್ನು ಹೇಳುವ ಪಂಚಮ್ಯಂತ ಪದವಾಗಲೀ, 'ದುಃಖೀ' ಎಂಬ ಪದವಾಗಲೀ, ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ ಈಶ್ವರನನ್ನೇ ಪ್ರತಿಪಾದನೆ ಮಾಡುತ್ತವೆ.

सर्वस्मात् परे महत्परत्वस्यापि सम्भवाच्च अव्यक्तादिशब्दमुख्यार्थो हरिरेवेति ।।

.ಎಲ್ಲ ಪದಾರ್ಥಗಳಿಗಿಂತಲೂ ಉತ್ತಮನಾದ ಈಶ್ವರನು ಮಹತ್ತತ್ವಕ್ಕಿಂತಲೂ ಉತ್ತಮನೇ ಆಗಿರುತ್ತಾನೆ. ಆದ್ದರಿಂದ ಅವ್ಯಕ್ತಾದಿಶಬ್ದಗಳ ಮುಖ್ಯಾರ್ಥನು ಈಶ್ವರನೇ ಆಗಿದ್ದಾನೆಂದು ಸಿದ್ಧವಾಗುತ್ತದೆ.

तदधीनत्वादिति सूत्राभिमतवर्णकन्तु शब्दप्रवृत्तिनिमित्तं च तद्वत्त्वमिव तत्प्रति स्वातन्त्र्यमपि शब्दप्रवृत्तौ हेतुरुत नेति संदेहे भृत्यगतबन्धादिकं प्रति सत्यपि स्वातन्त्र्ये राज्ञि बद्धादिशब्दाप्रयोगाच्चेति प्राप्ते भृत्यगतजयं प्रति स्वातन्त्र्येण राज्ञि जयशब्दप्रयोगात् बद्धादिपदाप्रयोगस्य च राज्ञो बन्धादियोग्यत्वेन अमङ्गलत्व-

रूपान्यहेतुकत्वेन स्वातन्त्र्यस्य अहेतुत्वानापादकत्वात् भवति स्वातन्त्र्यमपि शब्दवृत्तौ हेतुरिति । एवञ्च त्रिपाद्यां अन्तर्यामिनयादौ सिद्धेन सर्वनियन्तृत्वरूप-स्वान्तन्त्र्यनिमित्तेन युक्ता हरौ बद्धादिशब्दवृत्तिरिति ।

'ತದಧೀನತ್ವಾತ್' ಎಂಬ ಸೂತ್ರದ ವ್ಯಾಖ್ಯಾನ ಹೀಗಿದೆ - ತದ್ಗತತ್ವವು ಹೇಗೆ ಶಬ್ದಗಳ ಪ್ರವೃತ್ತಿನಿಮಿತ್ತವಾಗಿರುತ್ತದೋ, ಅದರಂತೆ 'ತತ್‌ಪ್ರತಿ ಸ್ವಾತಂತ್ರ್ಯ' ಎಂಬುದೂ ಕೂಡ ಶಬ್ದದ ಪ್ರವೃತ್ತಿನಿಮಿತ್ತವಾಗಿರುತ್ತವೆ. ಈ 'ಸ್ವಾತಂತ್ರ್ಯ' ಎಂಬ ಪ್ರವೃತ್ತಿನಿಮಿತ್ತವನ್ನು ಶಬ್ದಗಳ ವ್ಯವಹಾರದಲ್ಲಿ ಕಾರಣವೆಂದು ಹೇಳಬೇಕೋ ? ಇಲ್ಲವೋ ? ಎಂಬುದು ಸಂದೇಹ. ಭೃತ್ಯನಲ್ಲಿರುವ ಬಂಧಾದಿಗಳನ್ನು ಕುರಿತು ರಾಜನಲ್ಲಿ ಸ್ವಾತಂತ್ರ್ಯವಿದ್ದರೂ, ಬದ್ಧಾದಿಶಬ್ದವನ್ನು ಪ್ರಯೋಗ ಮಾಡದ ಕಾರಣ, ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಬಾರದು ಎಂಬುದು ಪೂರ್ವಪಕ್ಷ. ಭೃತ್ಯನಲ್ಲಿರುವ ಜಯಕ್ಕೆ ರಾಜನು ಸ್ವತಂತ್ರನಾದ್ದರಿಂದ ರಾಜನಲ್ಲಿ 'ಜಯೀ' ಎಂಬ ಶಬ್ದ ಪ್ರಯೋಗವಿರುವುದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಬಹುದು. ಆದರೂ 'ಬದ್ಧಃ' ಎಂಬ ಶಬ್ದಪ್ರಯೋಗವು ರಾಜನಲ್ಲಿ ಬರುವುದಿಲ್ಲ. ಏಕೆಂದರೆ ಬಂಧನಯೋಗ್ಯತ್ವವು ರಾಜ್ಯನಲ್ಲಿರುವ ಕಾರಣ ಅದು ಅಮಂಗಲವಾಗಿದೆ. ಆದ್ದರಿಂದ ಅಮಂಗಲತ್ವ ಎಂಬ ಬೇರೆ ಹೇತು ಇರುವ ಕಾರಣ, ಸ್ವಾತಂತ್ರ್ಯವನ್ನು ಅಲ್ಲಿ ಹೇತುವೆಂದು ಹೇಳಬಾರದು. ಹಾಗಾಗಿ ವಿಷ್ಣುವಿನ ವಿಷಯದಲ್ಲಿ ಯಾವುದೇ ದೋಷಗಳ ಇರುವಿಕೆಯು ಅತ್ಯಂತ ಅಸಂಭಾವಿತವಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸಿ, ಎಲ್ಲಾ ಶಬ್ದಗಳ ಸಮನ್ವಯವನ್ನು ತಿಳಿಯಬಹುದು.

ಆದ್ದರಿಂದ ಅಂತರ್ಯಾಮ್ಯಧಿಕರಣದಲ್ಲಿ ಹೇಳಲ್ಪಟ್ಟ ಸರ್ವನಿಯಂತೃತ್ವ ಎಂಬ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ ಬದ್ಧಾದಿಶಬ್ದಗಳು ಶ್ರೀಹರಿಯಲ್ಲಿ ಸಮನ್ವಯಗೊಳ್ಳುತ್ತವೆ ಎಂದು ಸಿದ್ಧವಾಯಿತು.

तथा च स्मृतिः 'सर्वस्य तदधीनत्वात् तत्तच्छब्दाभिधेयता' इत्यादिरिति । फलं तु समन्वयसूत्रोक्तसर्वशब्दसमन्वयाक्षेपः तत्समाधिश्च ।। १ ।।

ಆದ್ದರಿಂದ 'ಸರ್ವಸ್ಯ ತದಧೀನತ್ವಾತ್ ತತ್ತಚ್ಛಬ್ದಾಭಿಧೇಯತಾ' ಎಂಬ ಸ್ಮೃತಿಪ್ರಮಾಣದಂತೆ ಎಲ್ಲವೂ ಭಗವದಧೀನವಾದ್ದರಿಂದ ಎಲ್ಲಾ ಶಬ್ದಗಳಿಂದಲೂ ಅವನು ಪ್ರತಿಪಾದ್ಯನಾಗುತ್ತಾನೆ ಎಂಬ ಸ್ಮೃತಿಯು ಈ ವಿಷಯದಲ್ಲಿ ಆಧಾರವಾಗಿದೆ.

ಸಮನ್ವಯ ಸೂತ್ರದಲ್ಲಿ ಹೇಳಲ್ಪಟ್ಟ ಸರ್ವಶಬ್ದಸಮನ್ವಯದ ಆಕ್ಷೇಪವು ಪೂರ್ವಪಕ್ಷದ ಫಲ. ಅದರ ಪರಿಹಾರವು ಸಿದ್ಧಾಂತದ ಫಲ.

ಇಲ್ಲಿಗೆ ನ್ಯಾಯಮುಕ್ತಾವಳಿಯಲ್ಲಿ ಆನುಮಾನಿಕಾಧಿಕರಣವು ಸಮಾಪ್ತವಾಯಿತು.

*****

# ಜ್ಯೋತಿರುಪಕ್ರಮಾಧಿಕರಣ

(೧-೪-೨)

---

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ತತ್ವಪ್ರಕಾಶಿಕಾ, ಭಾವದೀಪ
ಇವುಗಳ ಸರಳ ಕನ್ನಡ ಅನುವಾದ

---

॥ ಶ್ರೀಗುರುಭ್ಯೋ ನಮಃ ॥

# ಜ್ಯೋತಿರುಪಕ್ರಮಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ
ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ
ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

।। अथ ज्योतिरुपक्रमाधिकरणम् ।।

## ಕರ್ಮಪ್ರತಿಪಾದಕ ವಾಕ್ಯಗಳಿಂದ ಮಹಾವಿಷ್ಣುವೇ ಮುಖ್ಯಪ್ರತಿಪಾದ್ಯ

**सूत्रम् – ।। ज्योतिरुपक्रमात्तु तथा ह्यधीयत एके ।।१।।**

ಸೂತ್ರಾರ್ಥ - 'ಕರ್ಮಪರವಾದ ಜ್ಯೋತಿರಾದಿ ಶಬ್ದಗಳಿಂದ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆ ಹೊರತು, ಯಾಗಾದಿ ಕರ್ಮಗಳಲ್ಲ. ಏಕೆಂದರೆ ಚತುರ್ಮುಖ ಮೊದಲಾದವರ ಶರೀರವನ್ನು ಅಂತರ್ಯಾಮಿಯಾಗಿ ಪ್ರವೇಶ ಮಾಡಿದನು ಇತ್ಯಾದಿಯಾಗಿ ಋಷಿಪ್ರತಿಪಾದಕವಾದ ಕೆಲವು ಶಬ್ದಗಳನ್ನು ಸಮನ್ವಯ ಮಾಡಿ, 'ತಾ ವಾ ಏತಾಃ' ಎಂಬಲ್ಲಿ ಸಕಲ ವೈದಿಕಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ಕೆಲವು ಶಾಖೆಯವರು ಅಧ್ಯಯನ ಮಾಡುತ್ತಾರೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका** – तुशब्द एवार्थे । ज्योतिः 'ज्योतिषा यजेत' इत्यादिवाक्योक्त ज्योतिरादिशब्दवाच्यं ब्रह्मैव न ज्योतिष्टोमादि । कुतः? हि यस्मादेके शाखिनः।

**उपक्रमात् 'एष इमम्' इत्युपक्रम्य तथा सर्वशब्दाभिधेयत्वेन हरिमेव 'ता वा एताः' इत्यत्राधीयते पठन्ति तस्मादित्यर्थः ।।१।।**

ಅರ್ಥ -- ತು ಶಬ್ದವು ಏವಾರ್ಥದಲ್ಲಿದೆ. ಜ್ಯೋತಿಃ = 'ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯದಲ್ಲಿ ಹೇಳಲ್ಪಟ್ಟ ಜ್ಯೋತಿರಾದಿ ಶಬ್ದಗಳಿಂದ ಪ್ರತಿಪಾದ್ಯನಾದವನು ವಿಷ್ಣುವೇ ಆಗಿದ್ದಾನೆ ಹೊರತು, ಜ್ಯೋತಿಷ್ಟೋಮಾದಿ ಯಾಗಗಳಲ್ಲ. ಹಿ = ಯಾವ ಕಾರಣದಿಂದ, ಏಕೇ = ಕೆಲವು ಶಾಖೆಯವರು, ಉಪಕ್ರಮಾತ್ = ಏಷ ಇಮಂ ಎಂದು ಪ್ರಾರಂಭ ಮಾಡಿ, ತಥಾ = ಸರ್ವಶಬ್ದಾಭಿಧೇಯನನ್ನಾಗಿ ಶ್ರೀಹರಿಯನ್ನೇ, ತಾ ವಾ ಏತಾಃ = ಇತ್ಯಾದಿಯಾಗಿ, ಅಧೀಯತೇ = ಅಧ್ಯಯನ ಮಾಡುತ್ತಾರೆ.

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – 'वसन्ते वसन्ते ज्योतिषा यजेत' इत्यादि कर्माभिधायकस्य कर्मक्रमादिविरोधान्न युज्यत इति**

ಅನುವಾದ - 'ವಸಂತೇ ವಸಂತೇ ಜ್ಯೋತಿಷಾ ಯಜೇತ' 'ಪ್ರತಿಯೊಂದು ವಸಂತ ಋತುಗಳಲ್ಲಿ ಜ್ಯೋತಿಷ್ಟೋಮ ಯಾಗಗಳನ್ನು ಮಾಡಬೇಕು' ಇವೇ ಮೊದಲಾದ ವಾಕ್ಯಗಳು ಕರ್ಮವಿಧಾಯಕವಾಗಿವೆ. ಕರ್ಮ ತದಂಗವಾದ ಕಾಲ, ಕ್ರಮ, ಅಧಿಕಾರಿ, ಫಲ, ಋತ್ವಿಕ್, ವ್ಯತ್ಯಾಸ, ಪ್ರಾಯಶ್ಚಿತ್ತ ಇವೇ ಮೊದಲಾದವುಗಳನ್ನು ಹೇಳುವ ವಸಂತಾದಿ ಶಬ್ದರಾಶಿಗಳಿಗೆ ಒಂದು ವೇಳೆ ಭಗವತ್ಪರತ್ವವನ್ನು ಹೇಳಿದರೆ, ಕರ್ಮಕ್ರಮಾದಿಗಳೇ ಲೋಪವಾಗುವ ಪ್ರಸಂಗ ಬರುತ್ತದೆ. ಹಾಗಾಗಿ ಬ್ರಹ್ಮವಾಚಕತ್ವವನ್ನು ಸರ್ವಥಾ ಹೇಳಬಾರದು. ಇಷ್ಟು ಆಕ್ಷೇಪ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಕರ್ಮ ಮತ್ತು ತದಂಗಗಳಲ್ಲಷ್ಟೇ ಪ್ರಸಿದ್ಧವಾದ ಜ್ಯೋತಿಷ್ಟೋಮಾದಿ ಶಬ್ದಗಳಿಗೆ ಭಗವಂತನಲ್ಲಿ ಸಮನ್ವಯವನ್ನು ಪ್ರತಿಪಾದನೆ ಮಾಡುತ್ತಿದ್ದಾರೆ. ಶ್ರುತ್ಯಾದಿಸಂಗತಿ, ವಿಷಯಾದಿಗಳನ್ನೂ ಕೂಡ ಸೂಚನೆ ಮಾಡುತ್ತಿದ್ದಾರೆ.–

ವಸಂತೇ ವಸಂತೇ = ಪ್ರತಿಯೊಂದು ವಸಂತ ಋತುಗಳಲ್ಲಿ, ಜ್ಯೋತಿಷಾ = ಜ್ಯೋತಿಷ್ಟೋಮಾದಿ ಯಾಗಗಳಿಂದ, ಯಜೇತ = ಪೂಜಿಸಬೇಕು. ಇತ್ಯಾದಿ = ಇವೇ ಮೊದಲಾದ, ಕರ್ಮಾಭಿಧಾಯಕಸ್ಯ = ಕ್ರಿಯಾವಿಶೇಷವನ್ನು ಹೇಳುವ, ಕರ್ಮಕ್ರಿಯಾದಿ = ಕರ್ಮ, ತದಂಗವಾದ ಕಾಲ, ಕ್ರಮ, ಅಧಿಕಾರಿ, ಫಲ, ಋತ್ವಿಕ್ ಇವುಗಳ ವ್ಯತ್ಯಾಸ ಪ್ರಾಯಶ್ಚಿತ್ತ ಇವೇ ಮೊದಲಾದವುಗಳನ್ನು ಹೇಳುವ ವಸಂತಾದಿ ಶಬ್ದರಾಶಿಗಳಿಗೆ ಭಗವತ್ಪರತ್ವವನ್ನು

ಹೇಳಿದರೆ, ವಿರೋಧಾತ್ = ಕರ್ಮಕ್ರಮ ಕ್ರಮಾಭಾವ ಎಂಬ ವಿರೋಧ ಬರುವುದರಿಂದ, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಇತಿ = ಇಷ್ಟು ಆಕ್ಷೇಪ.

**आह –**

**।। ज्योतिरुपक्रमात्तु तथा ह्यधीयत एके ।।**

**ज्योतिरादिकर्मवाचकत्वेन प्रसिद्धाभिधेयोऽपि स एव । 'एष इमं लोकमभ्यार्चत्' इत्युपक्रम्य 'ता वा एताः सर्वा ऋचः सर्वे वेदास्सर्वे घोषाः एकैव व्याहृतिः प्राण एव प्राण ऋच इत्येव विद्यात्' इति (ऐ.आ.२-२-२) ह्यधीयत एके ।।१।।**

ಅನುವಾದ - ಮೇಲಿನ ಆಕ್ಷೇಪಕ್ಕೆ ಸೂತ್ರಕಾರರೇ ಉತ್ತರಿಸುತ್ತಿದ್ದಾರೆ. 'ಜ್ಯೋತಿ' ಮೊದಲಾದ ಶಬ್ದಗಳು, ಕರ್ಮವಾಚಕಗಳಾಗಿ ಪ್ರಸಿದ್ಧವಾಗಿದ್ದರೂ, ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಈ ವಿಷಯದಲ್ಲಿ ಪ್ರಮಾಣವೇನೆಂದರೆ ಐತರೇಯ ಶಾಖೆಯವರು ಸಕಲಶಬ್ದವಾಚ್ಯತ್ವವನ್ನು ತಿಳಿಯುತ್ತಾ, ಅಧ್ಯಯನ ಮಾಡುತ್ತಾರೆಂದು ಐತರೇಯ ಆರಣ್ಯಕದಲ್ಲಿ ಹೇಳಲ್ಪಟ್ಟಿದೆ. ಪರಮಾತ್ಮನು ಚತುರ್ಮುಖಾದಿಗಳ ಶರೀರವನ್ನು ಅಂತರ್ಯಾಮಿಯಾಗಿ ಪ್ರವೇಶ ಮಾಡಿದನು. ಹೀಗೆ ವಿಷ್ಣುವಾಚಕವಾದ ಕೆಲವು ಶಬ್ದಗಳನ್ನು ಸಮನ್ವಯ ಮಾಡುತ್ತಾ ಪ್ರಾರಂಭ ಮಾಡಿ, ಅನಂತರ 'ತಾ ವಾ ಏತಾಃ' ಇತ್ಯಾದಿಯಾಗಿ ಸಕಲ ವಿಧವಾದ ಶಬ್ದಗಳಿಂದ ವಿಷ್ಣುವನ್ನೇ ಪ್ರತಿಪಾದ್ಯನನ್ನಾಗಿ ತಿಳಿಯುತ್ತಾ ಐತರೇಯ ಶಾಖೆಯವರು ಅಧ್ಯಯನ ಮಾಡುತ್ತಾರೆ. ಪ್ರಸಿದ್ಧವಾದ ಎಲ್ಲಾ ಮಂತ್ರಗಳು ಸಕಲವೇದಗಳೂ, ಸಕಲ ಧ್ವನಿಗಳೂ ಒಂದೇ ವಿಧವಾದ ವ್ಯಾಹೃತಿಯು ಪ್ರಾಣ, ಇಂದ್ರ, ಅಗ್ನಿ ಮೊದಲಾದ ದೇವತೆಗಳ ಹೆಸರುಳ್ಳ ಮಂತ್ರಗಳು ನಾರಾಯಣನ ಬಗ್ಗೆಯೇ ಹೊರಟಿವೆ. ಹೀಗೆ ತಿಳಿಯಬೇಕು.

ಪ್ರತಿಪದಾರ್ಥ --ಸಿದ್ಧಾಂತ ಸ್ಥಾಪನೆಗಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಅತಃ ಆಹ = ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ - 'ಜ್ಯೋತಿರುಮಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ.

ಜ್ಯೋತಿರಾದಿ = ಜ್ಯೋತಿಷ್ಟೋಮಾದಿ, ಕರ್ಮವಾಚಕತ್ವೇನ = ಕಾಲ, ಕರ್ಮ, ದೇಶ, ಅಧಿಕಾರಿ, ಫಲ, ಕ್ರಮಾದಿ ವಾಚಕಗಳೆಂದು, ಪ್ರಸಿದ್ಧಾಭಿಧೇಯೋऽಪಿ = ಪ್ರಸಿದ್ಧವಾದ ವಚನವಿದ್ದರೂ, ಸ ಏವ = ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ, ಏಷ = ಈ ಪರಮಾತ್ಮನೇ, ಇಮಂ ಲೋಕಂ = ಬ್ರಹ್ಮಾಂಡವೆಂಬ ಲೋಕಾಧಾರಕವಾದ ಚತುರ್ಮುಖನನ್ನು, ಅಭ್ಯಾರ್ಚತ್ = ಪ್ರವೇಶಿಸಿದನು. ಹೀಗೆ ಐತರೇಯ ಶಾಖೆಯಲ್ಲಿ, ಉಪಕ್ರಮ್ಯ = ಪ್ರಾರಂಭಿಸಿ, ತಾ ವಾ ಏತಾಃ ಸರ್ವಾ ಋಚಃ = ಸಕಲವಿಧವಾದ ಋಜ್ ಮಂತ್ರಗಳು, ಸರ್ವೇ ವೇದಾಃ = ಸಮಸ್ತವೇದಗಳು, ಸರ್ವೇ ಘೋಷಾಃ = ಸಕಲ ಶಬ್ದಗಳೂ,

ಏಕೈವ ವ್ಯಾಹೃತಿಃ = ಒಂದೇ ವ್ಯಾಹೃತಿಯು, ಪ್ರಾಣ ಏವ = ಮಹಾವಿಷ್ಣುವಿನಲ್ಲಿಯೇ, ಪ್ರಾಣ ಋಚ = ಪ್ರಾಣನಾಮಕ ಋಜ್‌ಮಂತ್ರವು ಮಹಾವಿಷ್ಣುವಿನಲ್ಲಿ, ಇತ್ಯೇವ ವಿದ್ಯಾತ್ = ಹೀಗೆ ತಿಳಿಯಬೇಕು. ಓ = ಈ ರೀತಿಯಾಗಿಯೇ, ಏಕೇ = ಕೆಲವರು, ಅಧೀಯತೇ = ಹೇಳುತ್ತಾರೆ. ಆದ್ದರಿಂದ ಪರಮಾತ್ಮನಲ್ಲಿ ಶಕ್ತಿವೃತ್ತಿಯಿಲ್ಲವೆಂದು ತಿಳಿಯಬಾರದು. ಹೀಗೆ ಪರಬ್ರಹ್ಮನಲ್ಲಿ ವಿದ್ವದ್ರೂಢಿಸಹಿತವಾದ ಮಹಾಯೋಗ ಇರುವುದರಿಂದ ಹಿಂದಿನ ಯಾವ ದೋಷಗಳಿಗೂ ಅವಕಾಶವಿಲ್ಲ.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**अत्र कर्मक्रमादिलोपप्रसङ्गेन कर्मतदङ्गेष्वेव प्रसिद्धानां ज्योतिष्टोमादिसर्वशब्दानां भगवति समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयति – वसन्त इति ॥**

ಈ ಜ್ಯೋತಿರುಪಕ್ರಮಾಧಿಕರಣದಲ್ಲಿ ಕರ್ಮಪ್ರತಿಪಾದಕವಾದ ಅನೇಕ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲಾಗುತ್ತಿದೆ.

'ಜ್ಯೋತಿಷ್ಟೋಮ' ಮೊದಲಾದ ವೈದಿಕಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮ ಹಾಗೂ ಅವುಗಳ ಅಂಗಗಳಲ್ಲಿಯೇ ಪ್ರಸಿದ್ಧವಾಗಿವೆ. ಹೀಗೆ ಒಪ್ಪದಿದ್ದರೆ ಜ್ಯೋತಿಷ್ಟೋಮಾದಿ ಕರ್ಮ ಹಾಗೂ ಅವುಗಳ ಕ್ರಮ ಇವುಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೇ ಇಲ್ಲದಂತಾಗಿ ಕರ್ಮ, ಕ್ರಮಗಳ ಲೋಪವು ಆಗಬೇಕಾದೀತು. ಆದ್ದರಿಂದ ಕರ್ಮ ಹಾಗೂ ಕ್ರಮಗಳನ್ನೇ ಜ್ಯೋತಿಷ್ಟೋಮಾದಿ ಶಬ್ದಗಳು ಪ್ರತಿಪಾದನೆ ಮಾಡುತ್ತವೆ. ಇಂತಹ ಜ್ಯೋತಿಷ್ಟೋಮಾದಿ ಸಕಲಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಪ್ರತಿಪಾದನೆ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಪಾದಸಂಗತಿಗಳನ್ನು ತಿಳಿಯಬೇಕು. ಶ್ರುತಿಸಂಗತಿ, ಅಧಿಕರಣಸಂಗತಿ ವಿಷಯಾದಿಗಳನ್ನು ಭಾಷ್ಯಕಾರರು 'ವಸಂತೇ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – 'तत्तु समन्वयात्' इति सर्वशब्दानां परमात्मवाचकत्वमुक्तम्। सर्वमध्यपतिता ज्योतिरादिशब्दाः श्रुतिषु पठ्यन्ते । तेषां चान्यपरत्वे न विष्णोः सर्वशब्दवाच्यता सिध्येत्, इत्यवश्यं निर्णेयता ।**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ' ಎಂದು ಪ್ರತಿಜ್ಞೆ ಮಾಡಲಾಗಿದೆ. ಆ ಶಬ್ದಗಳ ಮಧ್ಯದಲ್ಲಿ 'ಜ್ಯೋತಿಃ' ಮೊದಲಾದ

ಹೇಳಿದರೆ, ವಿರೋಧಾತ್ = ಕರ್ಮಕ್ರಮ ಕ್ರಮಾಭಾವ ಎಂಬ ವಿರೋಧ ಬರುವುದರಿಂದ, ನ ಯುಜ್ಯತೇ = ಯುಕ್ತವಾಗುವುದಿಲ್ಲ. ಇತಿ = ಇಷ್ಟು ಆಕ್ಷೇಪ.

**आह –**

**।। ज्योतिरुपक्रमात्तु तथा ह्यधीयत एके ।।**

**ज्योतिरादिकर्मवाचकत्वेन प्रसिद्धाभिधेयोऽपि स एव । 'एष इमं लोकमभ्यार्चत्' इत्युपक्रम्य 'ता वा एताः सर्वा ऋचः सर्वे वेदास्सर्वे घोषाः एकैव व्याहृतिः प्राण एव प्राण ऋच इत्येव विद्यात्' इति (ऐ.आ.२-२-२) ह्यधीयत एके ।।१।।**

ಅನುವಾದ - ಮೇಲಿನ ಆಕ್ಷೇಪಕ್ಕೆ ಸೂತ್ರಕಾರರೇ ಉತ್ತರಿಸುತ್ತಿದ್ದಾರೆ. 'ಜ್ಯೋತಿ' ಮೊದಲಾದ ಶಬ್ದಗಳು, ಕರ್ಮವಾಚಕಗಳಾಗಿ ಪ್ರಸಿದ್ಧವಾಗಿದ್ದರೂ, ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. ಈ ವಿಷಯದಲ್ಲಿ ಪ್ರಮಾಣವೇನೆಂದರೆ ಐತರೇಯ ಶಾಖೆಯವರು ಸಕಲಶಬ್ದವಾಚ್ಯತ್ವವನ್ನು ತಿಳಿಯುತ್ತಾ, ಅಧ್ಯಯನ ಮಾಡುತ್ತಾರೆಂದು ಐತರೇಯ ಆರಣ್ಯಕದಲ್ಲಿ ಹೇಳಲ್ಪಟ್ಟಿದೆ. ಪರಮಾತ್ಮನು ಚತುರ್ಮುಖಾದಿಗಳ ಶರೀರವನ್ನು ಅಂತರ್ಯಾಮಿಯಾಗಿ ಪ್ರವೇಶ ಮಾಡಿದನು. ಹೀಗೆ ವಿಷ್ಣುವಾಚಕವಾದ ಕೆಲವು ಶಬ್ದಗಳನ್ನು ಸಮನ್ವಯ ಮಾಡುತ್ತಾ ಪ್ರಾರಂಭ ಮಾಡಿ, ಅನಂತರ 'ತಾ ವಾ ಏತಾಃ' ಇತ್ಯಾದಿಯಾಗಿ ಸಕಲ ವಿಧವಾದ ಶಬ್ದಗಳಿಂದ ವಿಷ್ಣುವನ್ನೇ ಪ್ರತಿಪಾದ್ಯನನ್ನಾಗಿ ತಿಳಿಯುತ್ತಾ ಐತರೇಯ ಶಾಖೆಯವರು ಅಧ್ಯಯನ ಮಾಡುತ್ತಾರೆ. ಪ್ರಸಿದ್ಧವಾದ ಎಲ್ಲಾ ಮಂತ್ರಗಳು ಸಕಲವೇದಗಳೂ, ಸಕಲ ಧ್ವನಿಗಳೂ ಒಂದೇ ವಿಧವಾದ ವ್ಯಾಹೃತಿಯು ಪ್ರಾಣ, ಇಂದ್ರ, ಅಗ್ನಿ ಮೊದಲಾದ ದೇವತೆಗಳ ಹೆಸರುಳ್ಳ ಮಂತ್ರಗಳು ನಾರಾಯಣನ ಬಗ್ಗೆಯೇ ಹೊರಟಿವೆ. ಹೀಗೆ ತಿಳಿಯಬೇಕು.

ಪ್ರತಿಪದಾರ್ಥ --ಸಿದ್ಧಾಂತ ಸ್ಥಾಪನೆಗಾಗಿ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಅತಃ ಆಹ = ಮೇಲಿನ ಆಕ್ಷೇಪಕ್ಕೆ ಸೂತ್ರಕಾರರು ಉತ್ತರಿಸುತ್ತಿದ್ದಾರೆ - 'ಜ್ಯೋತಿರುಮಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ.

ಜ್ಯೋತಿರಾದಿ = ಜ್ಯೋತಿಷ್ಟೋಮಾದಿ, ಕರ್ಮವಾಚಕತ್ವೇನ = ಕಾಲ, ಕರ್ಮ, ದೇಶ, ಅಧಿಕಾರಿ, ಫಲ, ಕ್ರಮಾದಿ ವಾಚಕಗಳೆಂದು, ಪ್ರಸಿದ್ಧಾಭಿಧೇಯೋಽಪಿ = ಪ್ರಸಿದ್ಧವಾದ ವಚನವಿದ್ದರೂ, ಸ ಏವ = ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಏಕೆಂದರೆ, ಏಷ = ಈ ಪರಮಾತ್ಮನೇ, ಇಮಂ ಲೋಕಂ = ಬ್ರಹ್ಮಾಂಡವೆಂಬ ಲೋಕಾಧಾರಕವಾದ ಚತುರ್ಮುಖನನ್ನು, ಅಭ್ಯಾರ್ಚತ್ = ಪ್ರವೇಶಿಸಿದನು. ಹೀಗೆ ಐತರೇಯ ಶಾಖೆಯಲ್ಲಿ, ಉಪಕ್ರಮ್ಯ = ಪ್ರಾರಂಭಿಸಿ, ತಾ ವಾ ಏತಾಃ ಸರ್ವಾ ಋಚಃ = ಸಕಲವಿಧವಾದ ಋಜ್ ಮಂತ್ರಗಳು, ಸರ್ವೇ ವೇದಾಃ = ಸಮಸ್ತವೇದಗಳು, ಸರ್ವೇ ಘೋಷಾಃ = ಸಕಲ ಶಬ್ದಗಳೂ,

ಏಕೈವ ವ್ಯಾಹೃತಿಃ = ಒಂದೇ ವ್ಯಾಹೃತಿಯು, ಪ್ರಾಣ ಏವ = ಮಹಾವಿಷ್ಣುವಿನಲ್ಲಿಯೇ, ಪ್ರಾಣ ಋಚ = ಪ್ರಾಣನಾಮಕ ಋಜ್‌ಮಂತ್ರವು ಮಹಾವಿಷ್ಣುವಿನಲ್ಲಿ, ಇತ್ಯೇವ ವಿದ್ಯಾತ್ = ಹೀಗೆ ತಿಳಿಯಬೇಕು. ಹಿ = ಈ ರೀತಿಯಾಗಿಯೇ, ಏಕೇ = ಕೆಲವರು, ಅಧೀಯತೇ = ಹೇಳುತ್ತಾರೆ. ಆದ್ದರಿಂದ ಪರಮಾತ್ಮನಲ್ಲಿ ಶಕ್ತಿವೃತ್ತಿಯಿಲ್ಲವೆಂದು ತಿಳಿಯಬಾರದು. ಹೀಗೆ ಪರಬ್ರಹ್ಮನಲ್ಲಿ ವಿದ್ವದ್ರೂಢಿಸಹಿತವಾದ ಮಹಾಯೋಗ ಇರುವುದರಿಂದ ಹಿಂದಿನ ಯಾವ ದೋಷಗಳಿಗೂ ಅವಕಾಶವಿಲ್ಲ.

## ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

# ತತ್ವಪ್ರಕಾಶಿಕಾ

**अत्र कर्मक्रमादिलोपप्रसङ्गेन कर्मतदङ्गेष्वेव प्रसिद्धानां ज्योतिष्टोमादिसर्वशब्दानां भगवति समन्वयप्रतिपादनादस्ति शास्त्रादिसङ्गतिः । श्रुत्यादिसङ्गतिं विषयादिकं च सूचयति – वसन्त इति ।।**

ಈ ಜ್ಯೋತಿರುಪಕ್ರಮಾಧಿಕರಣದಲ್ಲಿ ಕರ್ಮಪ್ರತಿಪಾದಕವಾದ ಅನೇಕ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲಾಗುತ್ತಿದೆ.

'ಜ್ಯೋತಿಷ್ಟೋಮ' ಮೊದಲಾದ ವೈದಿಕಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮ ಹಾಗೂ ಅವುಗಳ ಅಂಗಗಳಲ್ಲಿಯೇ ಪ್ರಸಿದ್ಧವಾಗಿವೆ. ಹೀಗೆ ಒಪ್ಪದಿದ್ದರೆ ಜ್ಯೋತಿಷ್ಟೋಮಾದಿ ಕರ್ಮ ಹಾಗೂ ಅವುಗಳ ಕ್ರಮ ಇವುಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೇ ಇಲ್ಲದಂತಾಗಿ ಕರ್ಮ, ಕ್ರಮಗಳ ಲೋಪವು ಆಗಬೇಕಾದೀತು. ಆದ್ದರಿಂದ ಕರ್ಮ ಹಾಗೂ ಕ್ರಮಗಳನ್ನೇ ಜ್ಯೋತಿಷ್ಟೋಮಾದಿ ಶಬ್ದಗಳು ಪ್ರತಿಪಾದನೆ ಮಾಡುತ್ತವೆ. ಇಂತಹ ಜ್ಯೋತಿಷ್ಟೋಮಾದಿ ಸಕಲಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಪ್ರತಿಪಾದನೆ ಮಾಡುತ್ತಿರುವುದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಪಾದಸಂಗತಿಗಳನ್ನು ತಿಳಿಯಬೇಕು. ಶ್ರುತಿಸಂಗತಿ, ಅಧಿಕರಣಸಂಗತಿ ವಿಷಯಾದಿಗಳನ್ನು ಭಾಷ್ಯಕಾರರು 'ವಸಂತೇ' ಇತ್ಯಾದಿಯಾಗಿ ಸೂಚನೆ ಮಾಡುತ್ತಿದ್ದಾರೆ.

**तत्वप्रकाशिका – 'तत्तु समन्वयात्' इति सर्वशब्दानां परमात्मवाचकत्वमुक्तम्। सर्वमध्यपतिता ज्योतिरादिशब्दाः श्रुतिषु पठ्यन्ते । तेषां चान्यपरत्वे न विष्णोः सर्वशब्दवाच्यता सिध्येत्, इत्यवश्यं निर्णेयता ।**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ 'ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ' ಎಂದು ಪ್ರತಿಜ್ಞೆ ಮಾಡಲಾಗಿದೆ. ಆ ಶಬ್ದಗಳ ಮಧ್ಯದಲ್ಲಿ 'ಜ್ಯೋತಿಃ' ಮೊದಲಾದ

ಕರ್ಮಪ್ರತಿಪಾದಕವಾದ ಶಬ್ದಗಳು ಶ್ರುತಿಯಲ್ಲಿ ಪಠಿತವಾಗಿವೆ. ಇಂತಹ 'ಜ್ಯೋತಿಃ' ಮೊದಲಾದ ಶಬ್ದಗಳು ವಿಷ್ಣುವನ್ನು ಬಿಟ್ಟು ಜ್ಯೋತಿಷ್ಟೋಮಾದಿ ಕರ್ಮಗಳನ್ನು ಪ್ರತಿಪಾದನೆ ಮಾಡುವುದಾದಲ್ಲಿ, ವಿಷ್ಣುವಿನಲ್ಲಿ ಸರ್ವಶಬ್ದವಾಚ್ಯತ್ವವು ಸಿದ್ಧವಾಗುವುದಿಲ್ಲ. ಇಂತಹ 'ಜ್ಯೋತಿಃ' ಮೊದಲಾದ ಶಬ್ದಗಳ ಸಮನ್ವಯವನ್ನು ಅವಶ್ಯವಾಗಿ ಮಾಡಲೇಬೇಕು.

**तत्वप्रकाशिका – तज्योतिरादिशब्दवाच्यं विषयः । किं विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देहबीजम् । तत्र ज्योतिरादिशब्दवाच्यो न विष्णुरिति पूर्वः पक्षः ।।**

'ಜ್ಯೋತಿಃ' ಮೊದಲಾದ ಶಬ್ದವಾಚ್ಯತ್ವವೇ ಈ ಅಧಿಕರಣದ ವಿಷಯವಾಗಿದೆ. ಈ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆಯೋ, ಅಥವಾ ಬೇರೆ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಯೋ ? ಎಂಬುದೇ ಸಂದೇಹ. ಸಮನ್ವಯ ಸೂತ್ರ ಹಾಗೂ ಅನ್ಯತ್ರೈವಪ್ರಸಿದ್ಧಿ ಇವೆರಡೂ ಸಂದೇಹಬೀಜಗಳು. 'ಜ್ಯೋತಿಃ' ಮೊದಲಾದ ಶಬ್ದಗಳಿಂದ ವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ ಎಂಬುದು ಪೂರ್ವಪಕ್ಷ.

**तत्वप्रकाशिका – तस्य ज्योतिष्टोमादिकर्म-तदङ्गाभिधायकत्वेन प्रसिद्धत्वात्। तत्प्रसिद्धिं चापहाय परमात्मवाचित्वाङ्गीकारे काल-कर्म-क्रमधिकारि-नियोज्य-यजमान- फलऋत्विगाद्यभिधायकाभावेन तदभावाख्यविरोधापातात् ।**

ಏಕೆಂದರೆ 'ಜ್ಯೋತಿಃ' ಮೊದಲಾದ ಶಬ್ದಗಳು 'ಜ್ಯೋತಿಷ್ಟೋಮ' ಮೊದಲಾದ ಕರ್ಮಗಳನ್ನು ಅವುಗಳ ಅಂಗಗಳನ್ನು ಪ್ರತಿಪಾದನೆ ಮಾಡುವುದರಲ್ಲಿಯೇ ಪ್ರಸಿದ್ಧವಾಗಿವೆ. ಇಂತಹ ಪ್ರಸಿದ್ಧಿಯನ್ನು ಬಿಟ್ಟು, ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು ಒಪ್ಪಿದರೆ ವಸಂತಾದಿಕಾಲ, ಯಜ್ಞಾದಿಕರ್ಮ, ಅವುಗಳ ಕ್ರಮ, ಅಧಿಕಾರಿ, ನಿಯೋಜ್ಯ, ಯಜಮಾನ, ಸ್ವರ್ಗಾದಿಫಲ, ಹೋತೃ, ಋತ್ವಿಕ್ ಇವೇ ಮೊದಲಾದ ಪದಾರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳೇ ಇಲ್ಲವೆಂದಾಗುವುದರಿಂದ ಈ ಎಲ್ಲಾ ಪದಾರ್ಥಗಳು ಅಸಿದ್ಧವಾಗುತ್ತವೆ. ಆದ್ದರಿಂದ ಪದಾರ್ಥಗಳ ಅಭಾವರೂಪವಾದ ವಿರೋಧವು ಬರುತ್ತದೆ.

**तत्वप्रकाशिका – नहि तत् प्रमाणान्तरेण सिध्यति । तथा च विहितानुष्ठानलोपप्रसङ्गः ।**

ಇಂತಹ ಪದಾರ್ಥಗಳು ವೇದದಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳನ್ನು ಬಿಟ್ಟು ಬೇರೆ ಪ್ರಮಾಣಗಳಿಂದ ಸರ್ವಥಾ ಸಿದ್ಧವಾಗುವುದಿಲ್ಲ. ಆದ್ದರಿಂದ ವಿಹಿತವಾದ ಕರ್ಮಾನುಷ್ಠಾನಗಳೆಲ್ಲವೂ ಸಿದ್ಧವಾಗದಿರಬೇಕಾದೀತು.

**तत्वप्रकाशिका – किञ्च ज्योतिरादिसर्वशब्दवाच्यत्वं परमात्मनो योगेनैव वाच्यम्, रूढेरभावात् । ततो गुणपूर्त्यसिद्धेश्च ।**

ಮತ್ತು 'ಜ್ಯೋತಿಃ' ಮೊದಲಾದ ಸಕಲವಿಧವಾದ ಶಬ್ದಗಳಿಂದ ಪರಮಾತ್ಮನು ಯೋಗವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದೇ ಹೇಳಬೇಕು. ಏಕೆಂದರೆ ಲೋಕರೂಢಿಯಂತೂ ಸರ್ವಥಾ ಪರಮಾತ್ಮನಲ್ಲಿ ಇರುವುದಿಲ್ಲ. ಹಾಗೇನಾದರೂ ರೂಢಿಯನ್ನು ಒಪ್ಪಿದರೆ ಆಯಾ ಶಬ್ದಗಳಿಂದ ಗುಣಗಳ ಸಮನ್ವಯವು ಸಿದ್ಧವಾಗದೆ ಗುಣಪೂರ್ಣತ್ವ ಎಂಬ ಧರ್ಮವು ಪರಮಾತ್ಮನಲ್ಲಿ ಸಿದ್ಧವಾಗದಿರಬೇಕಾದೀತು.

**तत्वप्रकाशिका – नच योगमात्रेण रूढार्थापहारो युज्यते । अभ्युपेत्यैव चेदमुदितम् । न योगोऽपि सम्भवति ।**

ಮತ್ತು ಪರಮಾತ್ಮನಲ್ಲಿ ಶಬ್ದಗಳ ಯೋಗವೃತ್ತಿಯಿದೆ ಎಂಬ ಮಾತ್ರದಿಂದ ಲೋಕಪ್ರಸಿದ್ಧವಾದ ರೂಢಾರ್ಥವನ್ನು ಬಿಡಲು ಸಾಧ್ಯವಿಲ್ಲ. ಏಕೆಂದರೆ ಯೋಗಕ್ಕಿಂತಲೂ ರೂಢಿಯೇ ಪ್ರಬಲವಾಗಿರುತ್ತದೆ. ಅಂಗೀಕಾರವಾದ ಮಾಡಿ ಹೀಗೆ ಹೇಳಿದ್ದು, ವಿಚಾರ ಮಾಡಿದರೆ ಯೋಗವೂ ಕೂಡ ಪರಮಾತ್ಮನಲ್ಲಿ ಕೂಡುವುದಿಲ್ಲ.

**तत्वप्रकाशिका – 'ज्योतिषां स्तोमः' इत्यादिरूपा हि ज्योतिष्टोमादिशब्दव्युत्पत्तिः। कथमसौ स्तोमादिशब्दानामन्यपरत्वानभ्युपगमे सम्भवेत् ? अन्यथा भगवन्नामावृत्तिमात्रत्वप्राप्तेः ।**

ಏಕೆಂದರೆ 'ಜ್ಯೋತಿಷಾಂ ಸ್ತೋಮಃ' ಎಂಬ ವ್ಯುತ್ಪತ್ತಿಯಿಂದ 'ಜ್ಯೋತಿಷ್ಟೋಮ' ಶಬ್ದವು ವ್ಯುತ್ಪನ್ನವಾಗಿದೆ. ಇಲ್ಲಿರುವ 'ಸ್ತೋಮ' ಶಬ್ದವು ಅನ್ಯಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಒಪ್ಪದಿದ್ದರೆ ಶಬ್ದದ ವ್ಯುತ್ಪತ್ತಿಯೇ ಅಸಾಧ್ಯವಾಗುತ್ತದೆ. ಇಲ್ಲದಿದ್ದರೆ 'ಜ್ಯೋತಿ' ಎಂಬ ಪದವು ಹೇಗೆ ವಿಷ್ಣುನಾಮವೋ, ಅದರಂತೆ 'ಸ್ತೋಮ' ಎಂಬ ಪದವೂ ಕೂಡ ವಿಷ್ಣುನಾಮ ಎಂದಾಗುತ್ತದೆ. ಹೇಳಿದ ಅರ್ಥವನ್ನೇ ಪುನಃ ಮುಂದಿನ ಪದವು ಹೇಳುವುದರಿಂದ ವ್ಯುತ್ಪತ್ತಿಯನ್ನು ಮಾಡಲು ಸಾಧ್ಯವಾಗುವುದಿಲ್ಲ.

**तत्वप्रकाशिका – स्तोमादिशब्दानामन्यपरत्वाभ्युपगमे किं ज्योतिष्टोमादि-शब्दैरेव विशेषतोऽपराद्धम् ।**

ಆದ್ದರಿಂದ 'ಸ್ತೋಮ' ಎಂಬ ಪದಕ್ಕೆ ಅನ್ಯಪರತ್ವವನ್ನು ಅವಶ್ಯವಾಗಿ ಒಪ್ಪಲೇ ಬೇಕು. ಹಾಗೇ ಒಪ್ಪಿದಾಗ 'ಜ್ಯೋತಿಷ್ಟೋಮ' ಎಂಬ ಶಬ್ದವೂ ಕೂಡ ಬೇರೆ ಅರ್ಥವನ್ನೇ ಪ್ರತಿಪಾದನೆ ಮಾಡುತ್ತದೆ. ಈ ಜ್ಯೋತಿಷ್ಟೋಮ ಪದವು ಯಾವ ಅಪರಾಧವನ್ನು ಮಾಡಿದೆ. ಸ್ತೋಮಪದವು ಅನ್ಯಪದಾರ್ಥ

ಪ್ರತಿಪಾದಕವಾದಾಗ 'ಜ್ಯೋತಿಷ್ಟೋಮ' ಎಂಬ ಶಬ್ದವೂ ಕೂಡ ಅನ್ಯಪದಾರ್ಥ ಪ್ರತಿಪಾದಕವೇ ಆಗಬೇಕು.

**तत्वप्रकाशिका – नच वाच्यं 'परमात्मसम्बन्धेनान्यत्रापि शब्दवृत्तिरभ्युपगता' इति । यथा सति लोके लक्षणेतरवृत्त्यभावप्रसङ्गात् ।**

ಸಕಲಶಬ್ದಗಳೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ. ಪರಮಾತ್ಮನ ಸಂಬಂಧದಿಂದ ಇತರ ಪದಾರ್ಥಗಳಲ್ಲಿಯೂ ಕೂಡ ಶಬ್ದಗಳು ಪ್ರವೃತ್ತವಾಗುತ್ತವೆ ಎಂದು ಹೇಳಬಾರದು. ಹಾಗಾದಲ್ಲಿ ಎಲ್ಲಾ ಪದಾರ್ಥಗಳನ್ನು ಶಬ್ದಗಳು ಲಕ್ಷಣಾವೃತ್ತಿಯಿಂದ ಪ್ರತಿಪಾದನೆ ಮಾಡುತ್ತಿವೆ ಎಂದು ಹೇಳಿದಂತಾಗುತ್ತದೆ. ಆವಾಗ ಲೋಕದಲ್ಲಿ ಲಕ್ಷಣಾವೃತ್ತಿಯನ್ನು ಬಿಟ್ಟು, ಬೇರೆ ಅಭಿಧಾವೃತ್ತಿಯೇ ಇಲ್ಲವೆಂದಾಗಬೇಕು.

**तत्वप्रकाशिका – अतो न ज्योतिरादिशब्दजातस्य परमात्मवाचित्वं युक्तम् इति न समन्वयसूत्रं युक्तमिति भावः ।**

ಆದ್ದರಿಂದ 'ಜ್ಯೋತಿಃ' ಮೊದಲಾದ ಶಬ್ದಗಳ ಸಮೂಹವು ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿವೆ ಎಂಬುದು ಸರ್ವಥಾ ಯುಕ್ತವಾಗುವುದಿಲ್ಲ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಸಕಲಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂಬ ಪ್ರತಿಜ್ಞೆಯೂ ಕೂಡ ಯುಕ್ತವಾಗುತ್ತದೆ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – सिद्धान्तयत् सूत्रमवतार्य व्याचष्टे – अत इति ॥ ज्योतिष्टोमादिकर्म-तदङ्गवाचकत्वेन प्रसिद्धज्योतिरादिशब्दाभिधेयो हरिरेव ।**

ಸಿದ್ಧಾಂತ ಸ್ಥಾಪಕವಾದ ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತಃ' ಇತ್ಯಾದಿಯಾಗಿ. ಜ್ಯೋತಿರಾದಿ ಶಬ್ದಗಳು 'ಜ್ಯೋತಿಷ್ಟೋಮ' ಮೊದಲಾದ ಕರ್ಮಗಳನ್ನು ಮತ್ತು ಅವುಗಳ ಅಂಗಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ಲೋಕಪ್ರಸಿದ್ಧವಾಗಿದೆ. ಆದರೆ ಈ ಜ್ಯೋತಿರಾದಿ ಶಬ್ದಗಳಿಂದೆಲ್ಲಾ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ.

**तत्वप्रकाशिका – यस्मादेके शाखिनः 'ता वा एताः' इति तथा = सर्वशब्दाभिधेयत्वेन हरिमेवाभिधीयते ।**

ಯಾವ ಕಾರಣದಿಂದ ಕೆಲವು ಐತರೇಯ ಶಾಖಿಗಳು 'ತಾ ವಾ ಏತಾಃ' ಎಂಬುದಾಗಿ ಸಕಲಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗಿದ್ದಾನೆಂದು ಅಧ್ಯಯನ ಮಾಡುತ್ತಿದ್ದಾರೋ, ಆ ಕಾರಣದಿಂದ ಸಕಲಶಬ್ದಗಳು ಭಗವದ್ವಾಚಕವೇ ಆಗುತ್ತವೆ.

**तत्वप्रकाशिका – नच शब्दानां भगवत्परत्वे वृत्त्यभावः । 'एष इमं लोकमभ्यार्चत्' इत्यादिना शतर्च्यादिशब्दानां परमात्मनि योगस्योक्तत्वात् ।**

ಭಗವಂತನು ಇಂತಹ ಕರ್ಮಪ್ರತಿಪಾದಕ ಶಬ್ದಗಳಿಂದ ವಾಚ್ಯನಾಗಿದ್ದಾನೆನ್ನಲು ಶಬ್ದವೃತ್ತಿಯೇ ಇಲ್ಲವೆಂದು ಆಕ್ಷೇಪ ಮಾಡಬಾರದು. ಏಕೆಂದರೆ 'ಏಷ ಇಮಂ ಲೋಕಮಭ್ಯಾರ್ಚತ್' ಇವೇ ಮೊದಲಾದ ಶ್ರುತಿಗಳಿಂದ 'ಶತರ್ಚಿ' ಮೊದಲಾದ ಶಬ್ದಗಳ ಯೋಗವೃತ್ತಿಯನ್ನು ಪರಮಾತ್ಮನಲ್ಲಿ ಶ್ರುತಿಯೇ ಹೇಳುತ್ತಿದೆ.

**तत्वप्रकाशिका – नच शब्दानामन्यत्र रूढत्वेन योगाङ्गीकारायोगः 'तस्माच्छतर्चिन इत्याचक्षत एतमेव सन्तम्' इति योगेन रूढेरपहारोक्तेः ।**

'ಜ್ಯೋತಿಃ' ಮೊದಲಾದ ಶಬ್ದಗಳು ಜ್ಯೋತಿಷ್ಟೋಮಾದಿ ಅನ್ಯಪದಾರ್ಥಗಳಲ್ಲಿ ಪ್ರಸಿದ್ಧ-ವಾಗಿರುವುದರಿಂದ ವಿಷ್ಣುವಿನಲ್ಲಿ ಯೋಗವೃತ್ತಿಯನ್ನು ಅಂಗೀಕರಿಸುವುದು ತಪ್ಪಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಮ್' ಎಂಬುದಾಗಿ ಪರಮಾತ್ಮನಲ್ಲಿ ಶಬ್ದಗಳ ಯೋಗವೃತ್ತಿಯನ್ನು ತೋರಿಸಿ, ಲೋಕರೂಢಿಯನ್ನು ನಿರಾಕರಿಸಲಾಗಿದೆ.

**तत्वप्रकाशिका – 'एतमेव परमात्मानं मुख्यतो यौगिकार्थं सन्तं शतर्च्यादिनामभिराचक्षते, नतु मुख्यतो रूढत्वेऽपि मुनीन्' इति प्रतीतेः ।**

ಇಂತಹ ಪರಮಾತ್ಮನನ್ನು 'ಶತರ್ಚಿ' ಮೊದಲಾದ ಶಬ್ದಗಳಿಂದ ಎಲ್ಲಾ ಜ್ಞಾನಿಜನರು ಮುಖ್ಯವಾಗಿ ಯೌಗಿಕಾರ್ಥದಿಂದ ತಿಳಿದಿದ್ದಾರೆ. ಆದ್ದರಿಂದಲೇ ಅವನನ್ನು 'ಶತರ್ಚಿ' ಎಂದು ಕರೆಯುತ್ತಾರೆ. ಲೋಕರೂಢಿಯಿಂದ 'ಶತರ್ಚಿ' ಮೊದಲಾದ ಶಬ್ದಗಳು ಋಷಿಯಲ್ಲಿ ಪ್ರಸಿದ್ಧವಾಗಿದ್ದರೂ, ಜ್ಞಾನಿಜನರು ಅಂತಹ ಶಬ್ದಗಳಿಂದ ಋಷಿಗಳನ್ನು ತಿಳಿಯುವುದೇ ಇಲ್ಲ. ಹೀಗೆ ಶ್ರುತಿಯಿಂದ ತಿಳಿಯುತ್ತಿದೆ.

**तत्वप्रकाशिका – यद्यपि पङ्कजादिशब्दे योगापहारित्वं रूढेर्दृश्यते तथाप्यत्र ''आचक्षते'' इति विद्वद्रूढिसहितत्वेनोक्तयोगस्य रूढ्यपहारित्वं युक्तमेव ॥**

ವಾಸ್ತವಿಕವಾಗಿ 'ಪಂಕಜ' ಮೊದಲಾದ ಶಬ್ದಗಳಲ್ಲಿ ರೂಢ್ಯರ್ಥವನ್ನೇ ಸ್ವೀಕರಿಸಿ ಯೋಗಾರ್ಥವನ್ನು ಬಿಡುವುದು ಕಂಡಿದೆ. ಆದರೂ ಕೂಡ ಪ್ರಕೃತ 'ಆಚಕ್ಷತೇ' ಎಂಬುದಾಗಿ ಶ್ರುತಿ ಹೇಳುತ್ತಿರುವುದರಿಂದ ಯೋಗವು ವಿದ್ವದ್ರೂಢಿಸಹಿತವಾಗಿದೆ ಎಂದು ತಿಳಿಯಬೇಕು. ಆದ್ದರಿಂದ ವಿದ್ವದ್ರೂಢಿಸಹಿತವಾದ ಈ ಯೋಗವು ಅಜ್ಞರೂಢಿಯನ್ನು ನಿರಾಕರಿಸುವುದು ಯುಕ್ತವೇ ಆಗಿದೆ.

**तत्वप्रकाशिका – अतो हरेः कर्माभिधायकशब्दवाच्यत्वाद्युक्तं समन्वयसूत्रमिति भावः ।**

ಆದ್ದರಿಂದ ಶ್ರೀಹರಿಯೇ ಕರ್ಮಪ್ರತಿಪಾದಕವಾದ ಸಕಲವಿಧಶಬ್ದಗಳಿಂದ ವಾಚ್ಯನಾಗಿದ್ದಾನೆ. ಆದ್ದರಿಂದ ಸಮನ್ವಯ ಸೂತ್ರದಲ್ಲಿ ಮಾಡಿದ ಪ್ರತಿಜ್ಞೆಯು ಅತ್ಯಂತ ಸಮಂಜಸವಾಗಿದೆ. ಇಷ್ಟು ಸಿದ್ಧಾಂತದ ಅಭಿಪ್ರಾಯ.

**तत्वप्रकाशिका – ज्योतिःशब्दस्याप्रथमपठितत्वेऽपि प्रधानकर्माभिधायकत्वात्तस्यैवान्योपलक्षकत्वसम्भवाच्च सङ्ग्रहः । तुशब्द एवार्थे ।**

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದಾಗಿ ಶ್ರುತಿಯಲ್ಲಿ ಮೊದಲು ವಸಂತ ಪದವು ಕೇಳಿಸುತ್ತಿದೆ. ಅನಂತರ 'ಜ್ಯೋತಿಃ' ಎಂಬ ಶಬ್ದವು ಕೇಳಿಸುತ್ತಿದೆ. ಅದಕ್ಕನುಗುಣವಾಗಿ ಸೂತ್ರಕಾರರು ವಸಂತಪದವನ್ನೇ ಮೊದಲು ತೆಗೆದುಕೊಳ್ಳಬೇಕಿತ್ತು. ಅದನ್ನು ಬಿಟ್ಟು ಅನಂತರ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವನ್ನು ತೆಗೆದುಕೊಳ್ಳಲು ಏನು ಕಾರಣ? ಎಂದರೆ 'ಜ್ಯೋತಿಃ' ಎಂಬ ಶಬ್ದವು ಪ್ರಧಾನವಾದ 'ಜ್ಯೋತಿಷ್ಟೋಮ' ಎಂಬ ಕರ್ಮವನ್ನು ಪ್ರತಿಪಾದನೆ ಮಾಡುತ್ತಿದೆ. 'ವಸಂತ' ಎಂಬ ಪದವು ಕೇವಲ ಕಾಲವನ್ನಷ್ಟೇ ಪ್ರತಿಪಾದನೆ ಮಾಡುತ್ತಿದೆ. ಮುಖ್ಯ ಹಾಗೂ ಅಮುಖ್ಯಗಳಲ್ಲಿ ಮುಖ್ಯವನ್ನೇ ಸ್ವೀಕರಿಸಬೇಕಾದ್ದರಿಂದ, 'ಜ್ಯೋತಿಃ' ಎಂಬ ಮುಖ್ಯವಾದ ಪದವನ್ನು ಉಲ್ಲೇಖಿಸಿ, ಅದರಿಂದ ಅಮುಖ್ಯವಾದವುಗಳನ್ನೆಲ್ಲಾ ಉಪಲಕ್ಷಣಯಾ ಸೂತ್ರಕಾರರು ವಿವಕ್ಷಿಸುತ್ತಾರೆ. ಸೂತ್ರದಲ್ಲಿರುವ 'ತು' ಎಂಬ ಶಬ್ದವು ಅವಧಾರಣಾರ್ಥದಲ್ಲಿದೆ.

**तत्वप्रकाशिका – 'यास्ता एताः सर्वा ऋचस्तासामेकमेव व्याहर्तव्यं, तच्च विष्णुरेव । किं च ये सर्वे वेदाः, तेषामपीश्वर एव प्रतिपाद्यः, किमृचाम् ! अपि च ये समुद्रादिघोषाः, तेषामपि, किमु वेदानां ! तत्र ऋचस्तु विशेषतः परमात्मप्रतिपादिका इति जानीयात् इत्यर्थः ।। १ ।।**

ವೇದದಲ್ಲಿ ಯಾವ ಯಾವ 'ಋಜ್'ಮಂತ್ರಗಳಿವೆಯೋ, ಅವೆಲ್ಲವೂ ಒಬ್ಬನೇ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿವೆಯೆಂದು ಹೇಳಬೇಕು. ಸಕಲ ವೇದಗಳಿಂದ ವಿಷ್ಣು ಪ್ರತಿಪಾದ್ಯನಾದ ಮೇಲೆ 'ಋಜ್' ಮಂತ್ರಗಳಿಂದಲೂ ಪ್ರತಿಪಾದ್ಯನಾಗಿದ್ದಾನೆಂದು ಪ್ರತ್ಯೇಕ ಹೇಳಬೇಕೇನು? ಮತ್ತು ಯಾವ ಸಮುದ್ರ ಮೊದಲಾದವುಗಳ ಧ್ವನಿಗಳಿವೆಯೋ, ಆ ಧ್ವನ್ಯಾತ್ಮಕವಾದ ಶಬ್ದಗಳೂ ಕೂಡ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತಿರುವಾಗ ವೇದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಪ್ರತ್ಯೇಕ ಹೇಳಬೇಕೇನು ? ಇಲ್ಲಿ ಸಕಲ ಶಬ್ದಗಳ ಮಧ್ಯದಲ್ಲಿ ಋಕ್‌ಗಳಿಂದ ಪರಮಾತ್ಮನು ವಿಶೇಷವಾಗಿ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕೆಂದರ್ಥ.

ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

# ಭಾವದೀಪ

एतदधिकरणोपाधिभूतशब्दानां भाष्योक्तबलवदुपपत्त्याऽन्यत्रैव प्रसिद्धत्वं वदन्नन्तर्भावसङ्गतिमाह – **अत्र कर्मक्रमादीति** ।।

ಜ್ಯೋತಿರುಪಕ್ರಮಾಧಿಕರಣವು ಪ್ರಾರಂಭವಾಗುತ್ತಿದೆ. "ಸರ್ವ" ಎಂಬುದು ಈ ಅಧಿಕರಣದ ಉಪಾಧಿ. ಈ ಉಪಾಧಿಕೋಟಿಯಲ್ಲಿ ಪ್ರವೇಶ ಹೊಂದುವ ಸಕಲಶಬ್ದಗಳನ್ನು ಇಲ್ಲಿ ಸಮನ್ವಯ ಮಾಡಲಾಗುತ್ತಿದೆ. ಇಂಥ ಶಬ್ದಗಳು ಭಾಷ್ಯದಲ್ಲಿ ಹೇಳಿದ ಬಲಿಷ್ಠವಾದ ಉಪಪತ್ತಿಗಳಿಂದ ಅನ್ಯತ್ರಪ್ರಸಿದ್ಧವಾಗಿದೆ. ಇಂಥ ಶಬ್ದಗಳನ್ನು ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಜ್ಯೋತಿರುಪಕ್ರಮಾಧಿಕರಣಕ್ಕೆ ಶಾಸ್ತ್ರಾಂತರ್ಭಾವ, ಅಧ್ಯಾಯಾಂತರ್ಭಾವ, ಪಾದಾಂತರ್ಭಾವ ಎಂಬ ಸಂಗತಿತ್ರಯಗಳು ಇರುತ್ತವೆಂಬುದನ್ನು 'ಅತ್ರ ಕರ್ಮಕ್ರಮಾದಿ' ಇತ್ಯಾದಿ ಟೀಕಾವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ.

**भावदीपः** – यद्यपि शरीररूपकविन्यस्तगृहीते रित्युक्तन्यायेन तच्छब्दवाच्येश्वर-सम्बन्धादन्यत्रापि शब्दवृत्तेरङ्गीकारेण न कर्मादिलोपप्रसङ्ग । अन्यथा पूर्वत्रापि तारतम्यलोपप्रसङ्गः स्यात् ।

ಪ್ರಶ್ನೆ - ಸಕಲಶಬ್ದಗಳು ಪರಮಾತ್ಮನನ್ನೆ ಪ್ರತಿಪಾದನೆ ಮಾಡುತ್ತವೆ ಆದರೂ ಸಹ ಅವನ ಸಂಬಂಧದಿಂದ ಬೇರೆ ಪದಾರ್ಥಗಳನ್ನು ಕೂಡ ಪ್ರತಿಪಾದನೆ ಮಾಡುತ್ತವೆ. ಹೀಗೆ 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಸೂತ್ರದಲ್ಲಿ ಲೌಕಿಕಪದಾರ್ಥಗಳಲ್ಲಿಯೂ ಶಬ್ದವೃತ್ತಿಯನ್ನು ಅಂಗೀಕರಿಸಲಾಗಿದೆ. ಆದ್ದರಿಂದಲೇ ಕರ್ಮಪ್ರತಿಪಾದ್ಯವಾದ ವಾಕ್ಯಗಳೇ ಇಲ್ಲವಾದ್ದರಿಂದ ಕರ್ಮಾನುಷ್ಠಾನಗಳ ಲೋಪವಾಗಲಿ ಎಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಹೀಗೆ ಒಪ್ಪದಿದ್ದರೆ ಹಿಂದೆ ಸಮರ್ಥಿಸಿದ ತಾರತಮ್ಯವೂ ಕೂಡ ಲೋಪವಾಗಬೇಕಾದೀತು. ಹೀಗಿರುವಾಗ ಈ ಅಧಿಕರಣ ಏಕೆ ಹೊರಡಬೇಕು?

**भावदीपः** – तथापीह पदवर्णस्वरादिरूपेणैव समन्वयस्याभिप्रेतत्वेन कर्मक्रमादिप्रतीतेरेवाभावात् । तच्छब्दावाच्येशसम्बन्धात् अन्यत्र वृत्तिश्चेत् गङ्गसम्बन्धात्तीरे गङ्गापदस्येव सर्वशब्दानां लोके लक्षणाप्रसङ्गेन प्राक्तनन्यायस्यैव अयोगेन इहाप्याक्षेप्यत्वादिति भावः ।।

ಉತ್ತರ - ಹೌದು, ಆದರೂ ಸಹ ಈ ಅಧಿಕರಣ ಸಾರ್ಥಕ. ಏಕೆಂದರೆ ಇಲ್ಲಿ ಪದ ಅಕ್ಷರ ಸ್ವರ ಇವೇ ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. ಆದ್ದರಿಂದ ಕರ್ಮಕ್ರಮಾದಿಗಳ ಪ್ರತೀತಿಯೇ ಬರುವುದಿಲ್ಲ. ಮತ್ತು ಪ್ರತಿಯೊಂದು ಶಬ್ದಗಳಿಂದ ಪ್ರತಿಪಾದ್ಯನಾದ ಪರಮಾತ್ಮನ ಸಂಪರ್ಕದಿಂದ ಶಬ್ದಗಳು

ಲೌಕಿಕ ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಿದರೆ ಸಕಲ ಶಬ್ದಗಳಿಗೆ ಲಕ್ಷಣಾವೃತ್ತಿಯನ್ನು ಒಪ್ಪಿದ ದೋಷ ಬರುತ್ತದೆ. ''ಗಂಗಾಯಾಂ ಘೋಷಃ'' ಎಂಬಲ್ಲಿ ಗಂಗಾಸಂಪರ್ಕ ಇರುವುದರಿಂದ ತೀರದಲ್ಲಿ 'ಗಂಗಾ' ಎಂಬ ಪದವನ್ನು ಪ್ರಯೋಗಿಸುವುದರಿಂದ ತೀರದಲ್ಲಿ ಗಂಗಾಪದಕ್ಕೆ ಲಕ್ಷಣಾವೃತ್ತಿ ಎಂದು ಎಲ್ಲರೂ ಒಪ್ಪಿದ್ದಾರೆ. ಅದರಂತೆ ಪರಮಾತ್ಮನ ಸಂಬಂಧವಿರುವುದರಿಂದ ಎಲ್ಲ ಪದಾರ್ಥಗಳನ್ನು ಸಕಲಶಬ್ದಗಳು ಪ್ರತಿಪಾದನೆ ಮಾಡುವುದಾದರೆ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದೆ. ಆದ್ದರಿಂದ 'ಶರೀರರೂಪಕ' ಇತ್ಯಾದಿ ಸೂತ್ರದಲ್ಲಿ ಹೇಳಿದ ನ್ಯಾಯವೇ ಅಯುಕ್ತವಾಗಿದೆ. ಹೀಗೆ ಅಭ್ಯಧಿಕಾಶಂಕೆಯು ಪ್ರಾಪ್ತವಾಗುವುದರಿಂದ ಅದರ ಪರಿಹಾರಕ್ಕಾಗಿ ಈ ಅಧಿಕರಣವು ಹೊರಡಲೇಬೇಕು.

**भावदीपः – सर्वशब्दानामिति ।। पूर्वनयेषु समन्वितानाम् अन्यत्रासमन्वितानां च वाक्यानां पदवर्णस्वरादिभेदेनेह समन्वीयमानत्वात्तद्रूपेणोदाहरणत्वमित्यर्थः ।**

ಟೀಕೆಯಲ್ಲಿ ಹೇಳಿದ 'ಸರ್ವಶಬ್ದಾನಾಂ' ಎಂಬ ಪದದ ಅಭಿಪ್ರಾಯ ಹೀಗಿದೆ - ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಅನೇಕ ಶಬ್ದಗಳನ್ನು ಸಮನ್ವಯ ಮಾಡಲಾಗಿದೆ. ಮತ್ತು ಸಮನ್ವಯ ಮಾಡದ ಇನ್ನೂ ಅನೇಕ ಶಬ್ದಗಳಿವೆ. ಈ ಎಲ್ಲಾ ಬಗೆಯ ಶಬ್ದಗಳಲ್ಲಿರುವ ಪದ, ವರ್ಣ, ಸ್ವರಗಳ ಸಮನ್ವಯಕ್ಕಾಗಿ ಈ ಅಧಿಕರಣ ಹೊರಟಿದೆ. ಈ ಕ್ರಮದಿಂದ ಸಕಲ ಶಬ್ದಗಳು ಈ ಅಧಿಕರಣದ ವಿಷಯವಾಗಿದೆ ಎಂದು ತಿಳಿಯಬೇಕು.

**भावदीपः – विरोधिसर्वबाहुल्येत्यनुभाष्ये सर्वेत्येतदधिकरणोपाधेरुक्तेरिति भावः ।**

''ವಿರೋಧಿಸರ್ವಬಾಹುಲ್ಯ'' ಎಂಬ ಅನುವ್ಯಾಖ್ಯಾನದಲ್ಲಿ 'ಸರ್ವ' ಎಂಬ ಪದದಿಂದ ಈ ಅಧಿಕರಣದ ಉಪಾಧಿಯನ್ನು ಹೇಳಿರುತ್ತಾರೆ. ಪದ, ವರ್ಣ, ಸ್ವರಾದಿಗಳ ಕ್ರಮದಿಂದ ಎಲ್ಲಾ ಬಗೆಯ ಶಬ್ದಗಳ ಸಮನ್ವಯವೇ ಈ ಅಧಿಕರಣದ ಉದ್ದೇಶವೆಂದು ಇದರ ಅರ್ಥ.

**भावदीपः – 'तत्तु समन्वयात्' इति सर्वशब्दानां परमेश्वरे समन्वय उक्त इति पूर्वनयस्थभाष्यवाक्यमिहापि योज्यमिति भावेन तदर्थं वदन् सङ्गतिसूचकत्वेन तावत् भाष्यं व्याचष्टे – तत्तु, इति।।**

''ತತ್ತು ಸಮನ್ವಯಾದಿತಿ ಸರ್ವಶಬ್ದಾನಾಂ ಪರಮೇಶ್ವರೇ ಸಮನ್ವಯ ಉಕ್ತಃ'' ''ತತ್ತುಸಮನ್ವಯಾತ್ ಎಂಬ ಸೂತ್ರದಲ್ಲಿ ಪರಮಾತ್ಮನಲ್ಲಿ ಸಕಲ ಶಬ್ದಗಳು ಸಮನ್ವಯವಾಗುತ್ತವೆಂದು ಹೇಳಲಾಯಿತು''. ಹೀಗೆ ಹಿಂದಿನ ಅಧಿಕರಣದ ಭಾಷ್ಯದಲ್ಲಿರುವ ವಾಕ್ಯವನ್ನು ಈ ಅಧಿಕರಣದಲ್ಲೂ ಕೂಡ ಯೋಜನೆ ಮಾಡಿಕೊಳ್ಳಬೇಕು. ಈ ಅಭಿಪ್ರಾಯದಿಂದ ಟೀಕೆಯಲ್ಲಿ ಭಾಷ್ಯದ ಮಾತನ್ನು ವ್ಯಾಖ್ಯಾನ ಮಾಡುತ್ತಾ ಸಂಗತಿಯನ್ನು ತೋರಿಸುವ ಮೂಲಕ 'ತತ್ತು' ಇತ್ಯಾದಿ ವಾಕ್ಯವು ಹೊರಟಿವೆ.

**भावदीपः** – वसन्त इत्यादिभाष्यभावमाह – **सर्वमध्येति** ।। कर्मक्रमादीत्यादि-वाक्यतात्पर्यमाह – **तेषां चान्यपरत्वे, इति** ।। वक्ष्यमाणदिशेति भावः ।। **तदिति** ।। निर्णेतव्यत्वेन प्राप्तेत्यर्थः ।

'ವಸಂತೇ' ಇತ್ಯಾದಿ ಭಾಷ್ಯದ ಅಭಿಪ್ರಾಯವನ್ನು ಟೀಕೆಯಲ್ಲಿ 'ಸರ್ವಮಧ್ಯ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ. 'ಕರ್ಮಕ್ರಮಾದಿ' ಇತ್ಯಾದಿ ಭಾಷ್ಯದ ಮಾತಿನ ತಾತ್ಪರ್ಯವನ್ನು 'ತೇಷಾಂ ಚ ಅನ್ಯಪರತ್ವೇ' ಇತ್ಯಾದಿ ಟೀಕಾವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ ಶಬ್ದಗಳು ಹೇಗೆ ಅನ್ಯಪರವಾಗುತ್ತವೆಂಬುದನ್ನು ಮುಂದೆ ಹೇಳುವ ಕ್ರಮದಲ್ಲಿ ತಿಳಿದುಕೊಳ್ಳಬೇಕು. 'ತತ್' ಎಂದರೆ 'ನಿರ್ಣೇತವ್ಯತ್ವೇನ' ಪ್ರಸಕ್ತವಾದ ಎಂದರ್ಥ.

**भावदीपः** – पूर्वपक्षादिपरत्वेनापि भाष्यं व्याकुर्वन् कर्माभिधायकस्य इत्येतल्लब्ध-हेतुमाह – **तस्य ज्योतिष्टोमादीति** ।।

ಸಂಗತಿಪ್ರದರ್ಶಕವಷ್ಟೇ ಅಲ್ಲದೆ ಪ್ರರ್ವಪಕ್ಷಪ್ರದರ್ಶಕವೂ ಆಗಿದೆ ಎಂಬ ದೃಷ್ಟಿಯಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಾ 'ಕರ್ಮಾಭಿಧಾಯಕಸ್ಯ' ಎಂಬುದರಿಂದ ತಿಳಿಯುವ ಹೇತುವನ್ನು 'ತಸ್ಯ ಜ್ಯೋತಿಷ್ಟೋಮಾದಿ' ಇತ್ಯಾದಿ ಟೀಕೆಯಿಂದ ತೋರಿಸಿದ್ದಾರೆ.

**भावदीपः** – प्रसिद्धाभिधेयोऽपीत्यग्रेतनभाष्यानुरोधात् प्रसिद्धत्वादित्युक्तम् । कर्मक्रमादिविरोधादित्येतद्वाक्यं व्यनक्ति – **तत्प्रसिद्धिमिति**।।

'ಪ್ರಸಿದ್ಧಾಭಿಧೇಯೋಽಪಿ' ಎಂಬ ಮುಂದಿನ ಭಾಷ್ಯವಾಕ್ಯಕ್ಕೆ ಅನುಸಾರಿಯಾಗಿ ಟೀಕೆಯಲ್ಲಿ 'ಪ್ರಸಿದ್ಧತ್ವಾತ್' ಎಂದು ಹೇಳಿದ್ದಾರೆ. 'ಕರ್ಮಕ್ರಮಾದಿವಿರೋಧಾತ್' ಎಂಬ ಭಾಷ್ಯದ ಮಾತನ್ನು 'ತತ್ ಪ್ರಸಿದ್ಧಿಮ್' ಎಂಬ ಟೀಕೆಯಿಂದ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – **अधिकारीति** ।। फलस्वामित्वावस्थायुक्तोऽधिकारी । विधिप्रेर्यत्वावस्थावान् नियोज्यः । कर्मकर्तृत्वावस्थायुक्तो यजमान इत्येकस्यैवावस्थाभेदात् भेदेन व्यपदेशः ।

ಟೀಕೆಯಲ್ಲಿ 'ಅಧಿಕಾರಿ', 'ನಿಯೋಜ್ಯ', 'ಯಜಮಾನ' ಎಂಬ ಮೂರು ಪದಗಳನ್ನು ಪ್ರಯೋಗಿಸಿದ್ದಾರೆ. ಮೂರು ಪದಗಳು ಒಬ್ಬನೇ ವ್ಯಕ್ತಿಯನ್ನು ಹೇಳಿದರೂ ಕೂಡ ಅವಸ್ಥಾಭೇದವನ್ನು ವಿವಕ್ಷಿಸುತ್ತಿದೆ. ಫಲಸ್ವಾಮಿಯಾದ ಅವಸ್ಥೆಯಲ್ಲಿ 'ಅಧಿಕಾರಿ' ಎನಿಸುತ್ತಾನೆ. ವಿಧಿವಾಕ್ಯದಿಂದ ಪ್ರೇರ್ಯನಾದಾಗ 'ನಿಯೋಜ್ಯ' ಎನಿಸುತ್ತಾನೆ. ಕರ್ಮಕರ್ತೃತ್ವವೆಂಬ ಅವಸ್ಥೆಯಿಂದ ಯುಕ್ತನಾದಾಗ 'ಯಜಮಾನ' ಎನಿಸುತ್ತಾನೆ. ಈ ಅರ್ಥವನ್ನು ತಿಳಿದಾಗ ಒಬ್ಬನನ್ನೇ ಮೂರು ಪದಗಳಿಂದ ಹೇಳಿದ್ದಾರೆಂಬ ಆಕ್ಷೇಪ ಬರುವುದಿಲ್ಲ.

**भावदीपः** – हरौ महायोगविद्वद्रूढिपरस्योपक्रमादिति सूत्रांशस्य व्यावर्त्यं भाष्यस्थप्रसिद्धपदसूचितमाह – **किं चेति** ।।

ಶ್ರೀಹರಿಯಲ್ಲಿ ಸಕಲಶಬ್ದಗಳು ಮಹಾಯೋಗವೃತ್ತಿಯಿಂದ ಹಾಗೂ ವಿದ್ವದ್‌ರೂಢಿಯಿಂದ ಸಮನ್ವಯಗೊಳ್ಳುತ್ತವೆಂಬುದನ್ನು ಸೂತ್ರದಲ್ಲಿರುವ 'ಉಪಕ್ರಮಾತ್' ಎಂಬ ಪದವು ಸಾಧಿಸುತ್ತವೆ. ಇದರಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಟೀಕೆಯಲ್ಲಿ 'ಕಿಂಚ' ಇತ್ಯಾದಿ ವಾಕ್ಯದಿಂದ ಪ್ರದರ್ಶಿಸುತ್ತಿದ್ದಾರೆ. ಈ ಪೂರ್ವಪಕ್ಷವು ಭಾಷ್ಯದಲ್ಲಿರುವ 'ಪ್ರಸಿದ್ಧ' ಎಂಬ ಪದದಿಂದ ಸೂಚಿತವಾಗಿದೆ.

**भावदीपः** – हरौ शब्दानां रूढ्यङ्गीकारे बाधकं चाह – **तत इति** ।। रूढित इत्यर्थः ।

ಶ್ರೀಹರಿಯಲ್ಲಿ ಶಬ್ದಗಳಿಗೆ ರೂಢಿಯನ್ನು ಅಂಗೀಕಾರ ಮಾಡಿದರೆ ಬರುವ ಬಾಧಕವನ್ನು ಟೀಕೆಯಲ್ಲಿ 'ತತೋ' ಎಂಬ ವಾಕ್ಯದಿಂದ ತೋರಿಸಿದ್ದಾರೆ. 'ತತಃ' ಎಂಬ ಪದಕ್ಕೆ ರೂಢಿಯನ್ನು ಒಪ್ಪುವುದರಿಂದ ಎಂದರ್ಥ.

**भावदीपः** – 'अतोऽनन्तगुणो विष्णुर्यच्छब्दा योगवृत्तयः' इति सङ्क्षेपभाष्योक्तदिशा समन्वीयमानशब्दानां हरौ यौगिकत्व एव जिज्ञासासूत्रस्थब्रह्म शब्दोक्तगुणपूर्णत्वसिद्धिरन्यथा तदसिद्धेरित्यर्थः ।

"ಅತೋಽನಂತಗುಣೋ ವಿಷ್ಣುರ್ಯಚ್ಛಬ್ದಾ ಯೋಗವೃತ್ತಯಃ" "ಯಾವ ಕಾರಣಗಳಿಂದ ಶಬ್ದಗಳು ವಿಷ್ಣುವಿನಲ್ಲಿ ಯೌಗಿಕವಾಗಿ ಸಮನ್ವಯಗೊಳ್ಳುತ್ತವೋ ಆ ಕಾರಣದಿಂದಲೇ ವಿಷ್ಣು ಸಕಲಗುಣಪರಿಪೂರ್ಣನಾಗಿದ್ದಾನೆಂದು ಸಿದ್ಧವಾಯಿತು" ಹೀಗೆ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ. ಈ ದೃಷ್ಟಿಯಿಂದ ಸಮನ್ವಯ ಮಾಡುವ ಸಕಲ ಶಬ್ದಗಳು ಶ್ರೀಹರಿಯಲ್ಲಿ ಯೌಗಿಕವಾದರೆ ಮಾತ್ರ ಜಿಜ್ಞಾಸಾಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಯೋಗವೃತ್ತಿಯನ್ನು ಒಪ್ಪದೆ ರೂಢಿಯನ್ನು ಒಪ್ಪಿದರೆ ಈ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಭಿಪ್ರಾಯವನ್ನು 'ತತೋ' ಇತ್ಯಾದಿ ಟೀಕಾವಾಕ್ಯದಿಂದ ತಿಳಿದುಕೊಳ್ಳಬೇಕು.

**भावदीपः** – कल्पनासूत्रव्यावर्त्यं व्युत्पत्तेरप्यशक्यता इत्यनुभाष्योक्तमाह – **न योगोऽपि सम्भवतीति** ।।

'ಕಲ್ಪನೋಪದೇಶ್ಚ' ಎಂಬ ಸೂತ್ರದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು 'ನ ಯೋಗೋಽಪಿ ಸಂಭವತಿ' ಎಂಬ ಟೀಕಾವಾಕ್ಯದಿಂದ ತೋರಿಸುತ್ತಿದ್ದಾರೆ. "ವ್ಯುತ್ಪತ್ತೇರಪ್ಯಶಕ್ಯತಾ" ಎಂಬ ಅನುವ್ಯಾಖ್ಯಾನದ ಮಾತಿಗೆ ಇದು ವ್ಯಾಖ್ಯಾನವಾಗಿದೆ.

**भावदीपः – ज्योतिषां स्तोम इत्यादिरूपा** हीति ।। सूत्रे ज्योतिः पदस्यैवोपात्तत्वेऽपि जातमोतं हरौ यस्माज्ज्योतिरित्यनुभाष्ये च ज्योतिः पदस्यैव व्युत्पत्त्युक्तावपीह ज्योतिष्टोमशब्दोऽप्युदाहरणम् ।

ಟೀಕೆಯಲ್ಲಿ 'ಜ್ಯೋತಿಷಾಂ ಸ್ತೋಮಃ' ಎಂದು ಉದಾಹರಿಸಬೇಕಿತ್ತು. ಆದರೆ 'ಜ್ಯೋತಿಃ' ಎಂಬ ಪದವನ್ನಷ್ಟೆ ಉದಾಹರಿಸಿದ್ದಾರೆ. 'ಜಾತಮೋತಂ ಹರೌ ಯಸ್ಮಾಜ್ಜ್ಯೋತಿಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ 'ಜ್ಯೋತಿಷ್ಟೋಮ' ಇಲ್ಲಿ ಉದಾಹರಿಸಬೇಕು.

**भावदीपः** – ज्योतिः शब्दो ज्योतिष्टोमवाचीति च दर्शयितुं ज्योतिष्टोमशब्दस्य व्युत्पत्तिप्रदर्शनमिति ध्येयम् ।। **नामावृत्तिमात्रत्वेति** ।। जगज्जनकत्वादिगुणपूर्ति-सिद्धिर्नस्यादिति मात्रशब्दार्थः ।

ಸೂತ್ರದಲ್ಲಿರುವ 'ಜ್ಯೋತಿಃ' ಎಂಬ ಪದವು 'ಜ್ಯೋತಿಷ್ಟೋಮ' ಎಂಬ ಕರ್ಮದ ವಾಚಕವಾಗಿದೆ. ಇದನ್ನು ತಿಳಿಸಲು ಟೀಕೆಯಲ್ಲಿ ಜ್ಯೋತಿಷ್ಟೋಮಪದದ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಇಲ್ಲದಿದ್ದರೆ 'ಜ್ಯೋತಿಃ' ಎಂಬ ಪದದ ನಿಷ್ಪತ್ತಿಯನ್ನಷ್ಟೇ ತೋರಿಸಿದ್ದರೆ ಸಾಕಾಗುತ್ತಿತ್ತು.

ಟೀಕೆಯಲ್ಲಿ 'ನಾಮಾವೃತ್ತಿಮಾತ್ರತ್ವಾತ್ ಪ್ರಾಪ್ತೇಃ' ಎಂದು ಹೇಳಿದ್ದಾರೆ. ಇಲ್ಲಿ ಮಾತ್ರ ಪದವನ್ನು ಪ್ರಯೋಗಿಸಿದ್ದರಿಂದ ಪರಮಾತ್ಮನಲ್ಲಿ ಜಗಜ್ಜನಕತ್ವಾದಿ ಗುಣಪೂರ್ಣತ್ವವು ಸಿದ್ಧವಾಗದಿರಬೇಕಾದೀತು ಎಂಬ ಬಾಧಕವನ್ನು ಸೂಚಿಸಿದಂತಾಯಿತು.

**भावदीपः** – शरीररूपकविन्यस्तगृहीतेरिति पूर्वोक्तेन परिहृतत्वमाशङ्क्य तदाक्षेपेणागतार्थत्वमाह – **नच वाच्यमिति** ।।

'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದ ಭಾಗದಿಂದ ಈ ಅಧಿಕರಣದ ಪೂರ್ವಪಕ್ಷವನ್ನು ಪರಿಹಾರ ಮಾಡಿದ್ದಾಗಿದೆ ಎಂದು ಆಶಂಕಿಸಿ ಆ ಸೂತ್ರದಲ್ಲಿ ಹೇಳಿದ ಸಿದ್ಧಾಂತದ ಮೇಲೆ ಬರುವ ಅಭ್ಯಧಿಕಾಶಂಕೆಯನ್ನು 'ನಚ ವಾಚ್ಯಮ್' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇದರಿಂದ ಪುನರುಕ್ತಿಯನ್ನು ಪರಿಹರಿಸಿದಂತಾಯಿತು.

**भावदीपः – अत इति** ।। कर्मक्रमादिविरोधाद्योगस्य च रूढितोऽपि दुर्बलत्वादीशे शब्दानां व्युत्पत्तेरशक्यत्वाच्चेत्यर्थः । न युज्यत इत्यस्य अर्थो न ज्योतिरादीति ।

'ಅತಃ' ಎಂಬ ಪದಕ್ಕೆ ಹೀಗರ್ಥ - ಕರ್ಮಕ್ರಮಾದಿ ವಿರೋಧ ಬರುವುದರಿಂದ ಯೋಗವು ರೂಢಿಗಿಂತಲೂ ದುರ್ಬಲವಾದ್ದರಿಂದ ಪರಮಾತ್ಮನಲ್ಲಿ ಶಬ್ದಗಳಿಗೆ ವ್ಯುತ್ಪತ್ತಿಯನ್ನು ಹೇಳಲು ಸಾಧ್ಯವಾಗದೆ

**भावदीपः** – हरौ महायोगविद्वद्रूढिपरस्योपक्रमादिति सूत्रांशस्य व्यावर्त्यं भाष्यस्थप्रसिद्धपदसूचितमाह – **किं चेति** ।।

ಶ್ರೀಹರಿಯಲ್ಲಿ ಸಕಲಶಬ್ದಗಳು ಮಹಾಯೋಗವೃತ್ತಿಯಿಂದ ಹಾಗೂ ವಿದ್ವದ್‌ರೂಢಿಯಿಂದ ಸಮನ್ವಯಗೊಳ್ಳುತ್ತವೆಂಬುದನ್ನು ಸೂತ್ರದಲ್ಲಿರುವ 'ಉಪಕ್ರಮಾತ್' ಎಂಬ ಪದವು ಸಾಧಿಸುತ್ತವೆ. ಇದರಿಂದ ವ್ಯಾವರ್ತ್ಯವಾದ ಪೂರ್ವಪಕ್ಷವನ್ನು ಟೀಕೆಯಲ್ಲಿ 'ಕಿಂಚ' ಇತ್ಯಾದಿ ವಾಕ್ಯದಿಂದ ಪ್ರದರ್ಶಿಸುತ್ತಿದ್ದಾರೆ. ಈ ಪೂರ್ವಪಕ್ಷವು ಭಾಷ್ಯದಲ್ಲಿರುವ 'ಪ್ರಸಿದ್ಧ' ಎಂಬ ಪದದಿಂದ ಸೂಚಿತವಾಗಿದೆ.

**भावदीपः** – हरौ शब्दानां रूढ्यङ्गीकारे बाधकं चाह – **तत इति** ।। रूढित इत्यर्थः ।

ಶ್ರೀಹರಿಯಲ್ಲಿ ಶಬ್ದಗಳಿಗೆ ರೂಢಿಯನ್ನು ಅಂಗೀಕಾರ ಮಾಡಿದರೆ ಬರುವ ಬಾಧಕವನ್ನು ಟೀಕೆಯಲ್ಲಿ 'ತತೋ' ಎಂಬ ವಾಕ್ಯದಿಂದ ತೋರಿಸಿದ್ದಾರೆ. 'ತತಃ' ಎಂಬ ಪದಕ್ಕೆ ರೂಢಿಯನ್ನು ಒಪ್ಪುವುದರಿಂದ ಎಂದರ್ಥ.

**भावदीपः** – 'अतोऽनन्तगुणो विष्णुर्यच्छब्दा योगवृत्तयः' इति सङ्क्षेपभाष्योक्तदिशा समन्वीयमानशब्दानां हरौ यौगिकत्व एव जिज्ञासासूत्रस्थब्रह्म शब्दोक्तगुणपूर्णत्वसिद्धिरन्यथा तदसिद्धेरित्यर्थः ।

"ಅತೋಽನಂತಗುಣೋ ವಿಷ್ಣುರ್ಯಚ್ಛಬ್ದಾ ಯೋಗವೃತ್ತಯಃ" "ಯಾವ ಕಾರಣಗಳಿಂದ ಶಬ್ದಗಳು ವಿಷ್ಣುವಿನಲ್ಲಿ ಯೌಗಿಕವಾಗಿ ಸಮನ್ವಯಗೊಳ್ಳುತ್ತವೋ ಆ ಕಾರಣದಿಂದಲೇ ವಿಷ್ಣು ಸಕಲಗುಣಪರಿಪೂರ್ಣನಾಗಿದ್ದಾನೆಂದು ಸಿದ್ಧವಾಯಿತು" ಹೀಗೆ ಅಣುಭಾಷ್ಯದಲ್ಲಿ ಶ್ರೀಮದಾಚಾರ್ಯರು ಹೇಳಿದ್ದಾರೆ. ಈ ದೃಷ್ಟಿಯಿಂದ ಸಮನ್ವಯ ಮಾಡುವ ಸಕಲ ಶಬ್ದಗಳು ಶ್ರೀಹರಿಯಲ್ಲಿ ಯೌಗಿಕವಾದರೆ ಮಾತ್ರ ಜಿಜ್ಞಾಸಾಸೂತ್ರದಲ್ಲಿರುವ ಬ್ರಹ್ಮಶಬ್ದದಿಂದ ಹೇಳಲ್ಪಟ್ಟ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಯೋಗವೃತ್ತಿಯನ್ನು ಒಪ್ಪದೆ ರೂಢಿಯನ್ನು ಒಪ್ಪಿದರೆ ಈ ಸಕಲಗುಣಪರಿಪೂರ್ಣತ್ವವು ಸಿದ್ಧವಾಗುವುದಿಲ್ಲ. ಇಷ್ಟು ಅಭಿಪ್ರಾಯವನ್ನು 'ತತೋ' ಇತ್ಯಾದಿ ಟೀಕಾವಾಕ್ಯದಿಂದ ತಿಳಿದುಕೊಳ್ಳಬೇಕು.

**भावदीपः** – कल्पनासूत्रव्यावर्त्यं व्युत्पत्तेरप्यशक्यता इत्यनुभाष्योक्तमाह – **न योगोऽपि सम्भवतीति** ।।

'ಕಲ್ಪನೋಪದೇಶ್ಚ' ಎಂಬ ಸೂತ್ರದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು 'ನ ಯೋಗೋಽಪಿ ಸಂಭವತಿ' ಎಂಬ ಟೀಕಾವಾಕ್ಯದಿಂದ ತೋರಿಸುತ್ತಿದ್ದಾರೆ. "ವ್ಯುತ್ಪತ್ತೇರಪ್ಯಶಕ್ಯತಾ" ಎಂಬ ಅನುವ್ಯಾಖ್ಯಾನದ ಮಾತಿಗೆ ಇದು ವ್ಯಾಖ್ಯಾನವಾಗಿದೆ.

**भावदीपः – ज्योतिषां स्तोम इत्यादिरूपा** हीति ।। **सूत्रे ज्योतिः** पदस्यैवोपात्तत्वेऽपि जातमोतं हरौ यस्माज्ज्योतिरित्यनुभाष्ये च ज्योतिः **पदस्यैव** व्युत्पत्त्युक्तावपीह ज्योतिष्टोमशब्दोऽप्युदाहरणम् ।

ಟೀಕೆಯಲ್ಲಿ 'ಜ್ಯೋತಿಷಾಂ ಸ್ತೋಮಃ' ಎಂದು ಉದಾಹರಿಸಬೇಕಿತ್ತು. ಆದರೆ 'ಜ್ಯೋತಿಃ' ಎಂಬ ಪದವನ್ನಷ್ಟೆ ಉದಾಹರಿಸಿದ್ದಾರೆ. 'ಜಾತಮೋತಂ ಹರೌ ಯಸ್ಮಾಜ್ಜ್ಯೋತಿಃ' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದ 'ಜ್ಯೋತಿಷ್ಟೋಮ' ಇಲ್ಲಿ ಉದಾಹರಿಸಬೇಕು.

**भावदीपः –** ज्योतिः शब्दो ज्योतिष्टोमवाचीति च दर्शयितुं ज्योतिष्टोमशब्दस्य व्युत्पत्तिप्रदर्शनमिति ध्येयम् ।। **नामावृत्तिमात्रत्वेति** ।। जगज्जनकत्वादिगुणपूर्ति-सिद्धिर्नस्यादिति मात्रशब्दार्थः ।

ಸೂತ್ರದಲ್ಲಿರುವ 'ಜ್ಯೋತಿಃ' ಎಂಬ ಪದವು 'ಜ್ಯೋತಿಷ್ಟೋಮ' ಎಂಬ ಕರ್ಮದ ವಾಚಕವಾಗಿದೆ. ಇದನ್ನು ತಿಳಿಸಲು ಟೀಕೆಯಲ್ಲಿ ಜ್ಯೋತಿಷ್ಟೋಮಪದದ ವ್ಯುತ್ಪತ್ತಿಯನ್ನು ತೋರಿಸಿದ್ದಾರೆ. ಇಲ್ಲದಿದ್ದರೆ 'ಜ್ಯೋತಿಃ' ಎಂಬ ಪದದ ನಿಷ್ಪತ್ತಿಯನ್ನಷ್ಟೇ ತೋರಿಸಿದ್ದರೆ ಸಾಕಾಗುತ್ತಿತ್ತು.

ಟೀಕೆಯಲ್ಲಿ 'ನಾಮಾವೃತ್ತಿಮಾತ್ರತ್ವಾತ್ ಪ್ರಾಪ್ತೇಃ' ಎಂದು ಹೇಳಿದ್ದಾರೆ. ಇಲ್ಲಿ ಮಾತ್ರ ಪದವನ್ನು ಪ್ರಯೋಗಿಸಿದ್ದರಿಂದ ಪರಮಾತ್ಮನಲ್ಲಿ ಜಗಜ್ಜನಕತ್ವಾದಿ ಗುಣಪೂರ್ಣತ್ವವು ಸಿದ್ಧವಾಗದಿರಬೇಕಾದೀತು ಎಂಬ ಬಾಧಕವನ್ನು ಸೂಚಿಸಿದಂತಾಯಿತು.

**भावदीपः –** शरीररूपकविन्यस्तगृहीतेरिति पूर्वोक्तेन परिहृतत्वमाशङ्क्य तदाक्षेपेणागतार्थत्वमाह – **नच वाच्यमिति** ।।

'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದ ಭಾಗದಿಂದ ಈ ಅಧಿಕರಣದ ಪೂರ್ವಪಕ್ಷವನ್ನು ಪರಿಹಾರ ಮಾಡಿದ್ದಾಗಿದೆ ಎಂದು ಆಶಂಕಿಸಿ ಆ ಸೂತ್ರದಲ್ಲಿ ಹೇಳಿದ ಸಿದ್ಧಾಂತದ ಮೇಲೆ ಬರುವ ಅಭ್ಯಧಿಕಾಶಂಕೆಯನ್ನು 'ನಚ ವಾಚ್ಯಮ್' ಇತ್ಯಾದಿ ಟೀಕಾವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. ಇದರಿಂದ ಪುನರುಕ್ತಿಯನ್ನು ಪರಿಹರಿಸಿದಂತಾಯಿತು.

**भावदीपः – अत इति** ।। कर्मक्रमादिविरोधाद्योगस्य च रूढितोऽपि दुर्बलत्वादीशे शब्दानां व्युत्पत्तेरशक्यत्वाच्चेत्यर्थः । न युज्यत इत्यस्य अर्थो न **ज्योतिरादीति** ।

'ಅತಃ' ಎಂಬ ಪದಕ್ಕೆ ಹೀಗರ್ಥ - ಕರ್ಮಕ್ರಮಾದಿ ವಿರೋಧ ಬರುವುದರಿಂದ ಯೋಗವು ರೂಢಿಗಿಂತಲೂ ದುರ್ಬಲವಾದ್ದರಿಂದ ಪರಮಾತ್ಮನಲ್ಲಿ ಶಬ್ದಗಳಿಗೆ ವ್ಯುತ್ಪತ್ತಿಯನ್ನು ಹೇಳಲು ಸಾಧ್ಯವಾಗದೆ

ಇರುವುದರಿಂದಲೂ ಎಂದು ನಾಲ್ಕು ಅರ್ಥಗಳನ್ನು ತಿಳಿಯಬೇಕು. 'ನ ಯುಜ್ಯತೇ' ಎಂಬ ಭಾಷ್ಯದ ಮಾತಿಗೆ ಟೀಕೆಯಲ್ಲಿ 'ನ ಜ್ಯೋತಿರಾದಿ' ಎಂಬುದರಿಂದ ಅರ್ಥವನ್ನು ಹೇಳಿದ್ದಾರೆ.

**भावदीपः** – पूर्वपक्षफलमाह – **न समन्वयेति** ।। ज्योतिरादीति भाष्यमाकाङ्क्षितपूर्त्या व्याचष्टे – **ज्योतिष्टोमेति** ।। 'तत्तु' इत्यनुवृत्तस्य स एवेति भाष्यम् । तस्यार्थो **हरिरेवेति** ।

ಈ ಅಧಿಕರಣದ ಪೂರ್ವಪಕ್ಷಫಲವನ್ನು 'ನ ಸಮನ್ವಯ ಸೂತ್ರಮ್' ಎಂಬುದರಿಂದ ತೋರಿಸಿದ್ದಾರೆ. 'ಜ್ಯೋತಿರಾದಿ' ಎಂಬ ಭಾಷ್ಯದ ಮಾತನ್ನು ನೋಡಿದಾಗ ಹುಟ್ಟುವ ಆಕಾಂಕ್ಷೆಯನ್ನು ಪೂರ್ಣಮಾಡುವ ಪದಗಳನ್ನು ವಿವಕ್ಷಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಜ್ಯೋತಿಷ್ಟೋಮ' ಇತ್ಯಾದಿಯಾಗಿ. 'ತತ್ತು ಸಮನ್ವಯಾತ್' ಇತ್ಯಾದಿ ವಾಕ್ಯಗಳನ್ನು ಅನುವೃತ್ತಿ ಮಾಡಿಕೊಂಡಾಗ ಯಾವ ಅರ್ಥವು ಬರುತ್ತದೊ ಅದನ್ನು 'ಸ ಏವ' ಇತ್ಯಾದಿ ಭಾಷ್ಯವಾಕ್ಯದಿಂದ ಹೇಳಿದ್ದಾರೆ. ಇದನ್ನು ಟೀಕೆಯಲ್ಲಿ 'ಹರಿರೇವ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಾ ಸ್ಪಷ್ಟಪಡಿಸಿದ್ದಾರೆ.

**भावदीपः** – कुत इत्यतो हिशब्दो हेत्वर्थ इत्युपेत्य 'ता वा एताः' इत्यंशं व्याचष्टे – **यस्मादिति** ।।

'ಜ್ಯೋತಿರಾದಿ' ಶಬ್ದಗಳಿಂದ ಪರಮಾತ್ಮನೆ ಏಕೆ ಮುಖ್ಯವಾಗಿ ಪ್ರತಿಪಾದ್ಯನಾಗಬೇಕು ? ಎಂಬ ಪ್ರಶ್ನೆಗೆ 'ಹಿ' ಶಬ್ದವು ಹೇತ್ವರ್ಥದಲ್ಲಿದೆಯೆಂದು ಅಂಗೀಕಾರ ಮಾಡಿ ಭಾಷ್ಯದ 'ತಾವಾ ಏತಾಃ' ಇತ್ಯಾದಿ ಮಾತಿಗೆ 'ಯಸ್ಮಾತ್' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – इतीत्यनन्तरं सौत्रतथाशब्दमध्याहृत्य तस्यार्थमाह – **सर्वशब्दाभिधेयत्वेनेति** ।।

ಭಾಷ್ಯದಲ್ಲಿರುವ 'ಇತಿ' ಎಂಬ ಪದದ ಅನಂತರ ಸೂತ್ರದಲ್ಲಿರುವ 'ತಥಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಅದರಿಂದ ತಿಳಿಯುವ ಅರ್ಥವನ್ನು ಟೀಕೆಯಲ್ಲಿ 'ಸರ್ವಶಬ್ದಾಭಿಧೇಯತ್ವೇನ' ಎಂಬುದರಿಂದ ಹೇಳಿದ್ದಾರೆ.

**भावदीपः** – इङध्ययन इत्यस्य कर्तरि बहुवचनान्तं रूपम् । अतो हरिमित्युक्तम्। तेन सूत्रे तत्त्वित्यत्राप्यन्वेतीति सूचितम् ।

'ಅಧೀಯತೇ' ಎಂಬುದು 'ಇಙಧ್ಯಯನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಲಟ್‌ಲಕಾರದ ಬಹುವಚನ ಪ್ರಯೋಗ. (ಅಧೀತೇ, ಅಧೀಯಾತೇ, ಅಧೀಯತೇ) ಆತ್ಮನೇಪದಿಯಲ್ಲಿ ಕರ್ತರ್ಥದಲ್ಲಿರುವುದರಿಂದ 'ಹರಿಂ' ಎಂಬುದಾಗಿ ದ್ವಿತೀಯಾವಿಭಕ್ತಿಯನ್ನು ಹೇಳಿದ್ದು ಸಾಧುವಾಗಿದೆ.

ಅಧೀಯತೇ ಎಂಬುದು ಕರ್ಮಣಿ ಪ್ರಯೋಗವೆಂದು ಆಪಾತತಃ ತೋರುವುದರಿಂದ 'ಹರಿಃ' ಎಂದು ಹೇಳಬೇಕಿತ್ತಲ್ಲವೆ? ಎಂಬ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಆದ್ದರಿಂದಲೇ 'ತತ್ತು' ಎಂಬುದು ಇಲ್ಲಿಯೂ ಅನುವೃತ್ತವಾಗುತ್ತದೆ.

**भावदीपः – उपक्रमादिति सूत्रांशस्य 'एष इमम्' इत्यादिभाष्यं तदवतार्य व्याचष्टे – न चेति ।।**

'ಉಪಕ್ರಮಾತ್' ಎಂಬ ಸೂತ್ರದ ಭಾಗಕ್ಕೆ ಭಾಷ್ಯದಲ್ಲಿ 'ಏಷ ಇಮಮ್' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ. ಭಾಷ್ಯಕ್ಕೆ ಅವತಾರಿಕೆ ನೀಡಿ 'ನ ಚ' ಇತ್ಯಾದಿ ಟೀಕೆಯಿಂದ ಭಾಷ್ಯವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ.

**भावदीपः – एष प्राणशब्देन प्रकृतपरमात्मा । इमं लोकं ब्रह्मादिदेहमभ्यार्चत् प्राविशदिति व्याख्यातेयं श्रुतिः पादान्त्यप्राणनये । प्रागुक्तशङ्कामनूद्य निराह – नच शब्दानामन्यत्रेति ।।**

'ಏಷಃ' ಎಂಬ ಪದಕ್ಕೆ ಪ್ರಾಣಶಬ್ದದಿಂದ ಪ್ರಕೃತನಾದ ಪರಮಾತ್ಮನು ಎಂದರ್ಥ. 'ಇಮಮ್ ಲೋಕಮ್' ಎಂದರೆ ಬ್ರಹ್ಮಾದಿಗಳ ದೇಹವನ್ನು ಎಂದರ್ಥ. 'ಅಭ್ಯಾರ್ಚತ್' ಎಂಬ ಪದಕ್ಕೆ ಪ್ರವೇಶ ಮಾಡಿದನು ಎಂದರ್ಥ. ಹೀಗೆ ಈ ಶ್ರುತಿಯನ್ನು ಅಂತಿಮಪ್ರಾಣಾಧಿಕರಣದಲ್ಲಿ ವ್ಯಾಖ್ಯಾನಿಸಲಾಗಿದೆ. ಹಿಂದೆ ಮಾಡಿದ ಆಶಂಕೆಯನ್ನು ಅನುವಾದ ಮಾಡಿ ನಿರಾಕರಣೆ ಮಾಡುತ್ತಿದ್ದಾರೆ. 'ನ ಚ ಶಬ್ದಾನಾಮ್' ಇತ್ಯಾದಿಯಾಗಿ.

**भावदीपः – तस्मादिति** ।। तं देहं यस्माच्छतं वर्षाण्यभ्यार्चत् तस्मादित्यर्थः ।। **योगापहारित्वमिति** ।। अन्यथा पङ्कजपदात् भेदकादिप्रतीतिप्रसङ्ग इति भावः ।। **आचक्षत इति** ।। प्रयोगबाहुल्यस्य रूढित्वादिति भावः ।

ಟೀಕೆಯಲ್ಲಿ ಉದಾಹರಿಸಿದ ಶ್ರುತಿಯಲ್ಲಿರುವ 'ತಸ್ಮಾದ್' ಎಂಬುದರ ಅರ್ಥ ಹೀಗಿದೆ - ಯಾವ ಕಾರಣದಿಂದ ದೇಹವನ್ನು ನೂರು ವರ್ಷಗಳ ಕಾಲ ಪ್ರವೇಶಿಸಿದ್ದನೋ ಆ ಕಾರಣದಿಂದ ಎಂದು. 'ಯೋಗಾಪಹಾರಿತ್ವಮ್' ಎಂಬ ಟೀಕೆಯಲ್ಲಿ ಹೇಳಿದ್ದಾರೆ. 'ಪಂಕಜ' ಮೊದಲಾದ ಶಬ್ದಗಳಿಗೆ ರೂಢ್ಯರ್ಥವನ್ನು ಸ್ವೀಕರಿಸಿ ಯೋಗಾರ್ಥವನ್ನು ಬಿಡುವುದು ಕಂಡಿದೆ. ಒಂದುವೇಳೆ ಯೋಗಾರ್ಥವನ್ನೇ ಸ್ವೀಕರಿಸುವುದಾದರೆ ಪಂಕಜಪದದಿಂದ ಕಪ್ಪೆ ಮೊದಲಾದ ಅರ್ಥಗಳ ಪ್ರತೀತಿ ಬರದೇ ಇರಬೇಕಾದೀತು, ಎಂಬುದು ಇದರ ಅಭಿಪ್ರಾಯ 'ಆಚಕ್ಷತೇ' ಎಂಬ ಪದದಿಂದ ಪ್ರಯೋಗಬಾಹುಲ್ಯವೇ ರೂಢಿಯಾದ್ದರಿಂದ ಶ್ರುತಿಯಲ್ಲಿ 'ಆಚಕ್ಷತೇ' ಎಂಬ ಪದದಿಂದ ಯೋಗವು ವಿದ್ವದ್ರೂಢಿಸಹಿತವಾಗಿದೆ ಎಂಬ ಅಭಿಪ್ರಾಯವನ್ನು ತಿಳಿಯಬೇಕು.

ಜ್ಯೋತಿರುಪಕ್ರಮಾಧಿಕರಣ (೧-೪-೨)

**भावदीपः** – यद्यपि श्रौतस्य स्मार्तस्य वा केवलयोगस्यैव अङ्गरूढितः प्राबल्यमस्त्येव । अन्यथा श्रुत्यादौ योगोक्तेर्वैयर्थ्यापत्तेः उपपादितमेतन्निपुणतरं चन्द्रिकायां कम्पनादित्यत्र ॥

ಪ್ರಶ್ನೆ:- ಶ್ರುತಿ ಅಥವಾ ಸ್ಮೃತಿಯಲ್ಲಿರುವ ಪದಗಳು ಕೇವಲ ಯೋಗಾರ್ಥವಾಗಿದ್ದರೂ ಸಾಕು. ಅಜ್ಞರೂಢಿಗಿಂತಲೂ ಪ್ರಬಲವಾಗಿರುತ್ತವೆ. ಇಲ್ಲದಿದ್ದರೆ ಶ್ರುತ್ಯಾದಿಗಳಲ್ಲಿ ಯೋಗವನ್ನು ಹೇಳಿದ್ದೇ ವ್ಯರ್ಥವಾಗುತ್ತದೆ. ಇದನ್ನು 'ಕಂಪನಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ತಾತ್ಪರ್ಯ ಚಂದ್ರಿಕೆಯಲ್ಲಿ ಅತ್ಯಂತ ಸ್ಪಷ್ಟವಾಗಿ ಪ್ರತಿಪಾದನೆ ಮಾಡಿದ್ದಾರೆ. ಆದ್ದರಿಂದ ವಿದ್ವದ್‌ರೂಢಿಯನ್ನೇಕೆ ಇಲ್ಲಿ ಸಮರ್ಥಿಸಬೇಕು?

**भावदीपः** – तथाप्यभ्युपेत्यवादेन श्रौतयोगस्याङ्गरूढ्यपहारकत्वेऽपि विद्वद्रूढिसाहित्यमुक्तमिति ध्येयम् ॥

ಉತ್ತರ - ಹೌದು ಅಂಗೀಕಾರವಾದಮಾಡಿ ಇಲ್ಲಿ ವಿದ್ವದ್‌ರೂಢಿಯನ್ನು ಹೇಳಿದ್ದಾರೆ. ಶ್ರುತಿಸಿದ್ಧವಾದ ಯೋಗವು ಅಜ್ಞರೂಢಿಗಿಂತ ಪ್ರಬಲವಾಗಿದ್ದರೂ ವಿದ್ವದ್‌ರೂಢಿಯಿಂದ ಸಹಿತವಾಗಿದೆ ಎಂದು ಹೇಳಿದ್ದಾರೆ.

**भावदीपः** – अत इति ॥ महायोगविद्वद्रूढिभ्यां सर्वशब्दवाच्यत्वस्य श्रौतत्वादित्यर्थः ।

'ಅತಃ' ಎಂಬ ಪದಕ್ಕೆ ಮಹಾಯೋಗ ಹಾಗೂ ವಿದ್ವದ್‌ರೂಢಿಗಳಿಂದ ಪರಮಾತ್ಮನು ಕರ್ಮಾದಿಪ್ರತಿಪಾದಕ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಹೀಗೆ ಸಕಲಶಬ್ದವಾಚ್ಯತ್ವವು ಶ್ರುತಿಯಿಂದಲೇ ಸಿದ್ಧವಾಗಿರುವುದರಿಂದ ಎಂದರ್ಥ.

**भावदीपः** – वसन्ते वसन्ते ज्योतिषा यजेतेति श्रुतौ वसन्तपदस्यैवादौ श्रुतत्वेन सूत्रे वसन्त उपक्रमादिति वक्तव्ये कुतो ज्योतिषा उक्तिरित्यत आह – ज्योतिः शब्दस्येति तु शब्द इति ॥ सौत्र इत्यर्थः । पञ्चमी ल्यब्लोपे उपक्रम्येत्यर्थो दर्शितः ।

"ವಸಂತೇ ವಸಂತೇ ಜ್ಯೋತಿಷಾ ಯಜೇತ" ಎಂಬ ಶ್ರುತಿಯಲ್ಲಿ 'ವಸಂತ' ಪದವೇ ಮೊದಲು ಶ್ರುತವಾಗಿದೆ. ಅದಕ್ಕೆ ಅನುಗುಣವಾಗಿ ಸೂತ್ರದಲ್ಲಿ 'ವಸಂತ ಉಪಕ್ರಮಾತ್' ಎಂದೇ ಹೇಳಬೇಕಿತ್ತು. ಹೀಗೆ ಹೇಳದೆ 'ಜ್ಯೋತಿರುಪಕ್ರಮಾತ್' ಎಂದೇಕೆ ಹೇಳಿದರು ? ಎಂಬ ಪ್ರಶ್ನೆಗೆ 'ಜ್ಯೋತಿಃ ಶಬ್ದಸ್ಯೇತಿ ತು ಶಬ್ದಃ' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ ಇಲ್ಲಿ 'ಸೌತ್ರೇ' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು.

ಸೂತ್ರದಲ್ಲಿರುವ ಪಂಚಮೀ ವಿಭಕ್ತಿಯು ಲ್ಯಬ್‌ಲೋಪನಿಮಿತ್ತಕವಾಗಿದೆ. ಆದ್ದರಿಂದ 'ಉಪಕ್ರಮ್ಯ' ಎಂಬ ಅರ್ಥವನ್ನು ಹೇಳಿದಂತಾಗುತ್ತದೆ.

**भावदीपः** – न केवलमृष्यादीनां नाम भगवतः सर्वे वेदा अपि तस्यैव नाम किमु च वेदाः समुद्रघोषवृक्षपतनभेरीताडनादिसर्वघोषा अपि तस्यैव नामानि यथायोग्यं योजनीयानि इत्यैतरेयभाष्यदिशा श्रुत्यर्थमाह – **यास्ता इति** ।।

"ನ ಕೇವಲಮೃಷ್ಯಾದೀನಾಂ ನಾಮ ಭಗವತಃ ಸರ್ವೇ ವೇದಾ ಅಪಿ ತಸ್ಯೈವ ನಾಮ ಕಿಮು ಚ ವೇದಾಃ ಸಮುದ್ರಘೋಷವೃಕ್ಷಪತನಭೇರೀತಾಡನಾದಿಸರ್ವಘೋಷಾ ಅಪಿ ತಸ್ಯೈವ ನಾಮಾನಿ ಯಥಾಯೋಗ್ಯಂ ಯೋಜನೀಯಾನಿ" "ಕೇವಲ ಋಷಿವಾಚಕ ಪದಗಳಷ್ಟೇ ಭಗವಂತನ ಹೆಸರುಗಳಲ್ಲ. ವೇದದಲ್ಲಿರುವ ಸಕಲ ಶಬ್ದಗಳು ಕೂಡ ಭಗವಂತನ ಹೇಸರೆ ಆಗಿವೆ. ಹೀಗಿರುವಾಗ ಸಮುದ್ರದ ಶಬ್ದ, ಮರಬೀಳುವ ಶಬ್ದ, ನಗಾರಿಯ ಶಬ್ದ, ಮೊದಲಾದ ಧ್ವನ್ಯಾತ್ಮಕಶಬ್ದಗಳು ಭಗವಂತನ ನಾಮಗಳಾಗಿವೆ. ಅವನ ಆಯಾ ಗುಣಗಳಿಗೆ ಅನುಸಾರಿಯಾಗಿ ಆಯಾ ಧ್ವನಿಗಳನ್ನು ಅರ್ಥೈಸಬೇಕು" ಎಂಬುದರಲ್ಲಿ ಸಂದೇಹವೇ ಇಲ್ಲ. ಹೀಗೆ ಐತರೇಯ ಭಾಷ್ಯದಲ್ಲಿ ಹೇಳಿದ್ದಾರೆ. ಅದಕ್ಕೆ ಅನುಗುಣವಾಗಿ ಶ್ರುತಿಯು ಅರ್ಥವನ್ನು ಟೀಕೆಯಲ್ಲಿ 'ಯಾಸ್ತಾಃ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

**भावदीपः** – व्याहर्तव्यं तच्च विष्णुरेवेति ।। यद्यप्यैतरेयभाष्ये एकमेव व्याहरणं एकमेव नाम निर्दोषगुणपूर्तिवाचित्वादेकप्रकारता । प्राणे नारायण एव नारायणविषय एव व्यवहार इति प्राणपदं सप्तम्यन्तं कृत्वा योजितम् ।

"ವ್ಯಾಹರ್ತವ್ಯಂ ತಚ್ಚ ವಿಷ್ಣುರೇವೇತಿ" ಎಂಬುದಾಗಿ ಟೀಕೆಯಲ್ಲಿ ಪ್ರಥಮಾಂತವಾಗಿ ವ್ಯಾಖ್ಯಾನ ಮಾಡಿದ್ದಾರೆ. ಆದರೆ ಐತರೇಯ ಭಾಷ್ಯದಲ್ಲಿ "ಏಕಮೇವ ವ್ಯಾಹರಣಂ ಏಕಮೇವ ನಾಮ ನಿರ್ದೋಷ-ಗುಣಪೂರ್ತಿವಾಚಿತ್ವಾದೇಕಪ್ರಕಾರತಾ । ಪ್ರಾಣೇ ನಾರಾಯಣ ಏವ ನಾರಾಯಣವಿಷಯ ಏವ ವ್ಯಾವಹಾರ" ಐತರೇಯಭಾಷ್ಯದಲ್ಲಿ ಹೀಗೆ ವ್ಯಾಖ್ಯಾನ ಮಾಡಿದ್ದಾರೆ - "ಏಕೈವವ್ಯಾಹೃತಿಃ" ಎಂದರೆ ಒಂದೇ ವ್ಯವಹಾರ ಒಂದೇ ರೀತಿಯ ಹೆಸರು. ಈ ಎಲ್ಲಾ ಶಬ್ದಗಳು ಭಗವಂತನ ನಿರ್ದೋಷಗುಣಪೂರ್ಣತ್ವವನ್ನೇ ಹೇಳುತ್ತವೆ. ಆದ್ದರಿಂದ ಒಂದೇ ರೀತಿಯಾಗಿವೆ. 'ಪ್ರಾಣ ಏವ' ಎಂದರೆ ಪ್ರಾಣನೆನಿಸಿದ ನಾರಾಯಣನ ವಿಷಯದಲ್ಲಿಯೇ ವ್ಯವಹಾರ ಹೊಂದಿವೆ. ('ವ್ಯವಹಾರ' ಶಬ್ದಕ್ಕೆ 'ಹೆಸರು' ಎಂದರ್ಥ). ಹೀಗೆ ಪ್ರಾಣಶಬ್ದವನ್ನು ಸಪ್ತಮ್ಯಂತವಾಗಿ ವಿವಕ್ಷಿಸಿ ಯೋಜನೆ ಮಾಡಿದ್ದಾರೆ. ಆದರೆ ಟೀಕೆಯಲ್ಲಿ ಪ್ರಥಮಾಂತವಾಗಿ ಏಕೆ ವ್ಯಾಖ್ಯಾನ ಮಾಡಿದರು ?

**भावदीपः** – तथापि प्रथमान्तमुपेत्य व्याख्यानान्तरमेतदित्यदोषः ।

ಉತ್ತರ - ಹೌದು; ಆದರೂ ಇದು ಮತ್ತೊಂದು ವ್ಯಾಖ್ಯಾನವೆಂದು ತಿಳಿಯಬೇಕು.

ಜ್ಯೋತಿರುಪಕ್ರಮಾಧಿಕರಣ (೧-೪-೨)

**भावदीपः** – ऋचस्तु विशेषत इन्द्रादिनामवतो विष्णोर्गुणानल्पज्ञानामपि प्रकाशयन्तीति प्राणे नारायण एवेति विद्यादिति तद्भाष्यदिशैवार्थमाह – **तत्रर्चस्त्विति** ।।१।।

"ಋಚಸ್ತು ವಿಶೇಷತ ಇಂದ್ರಾದಿನಾಮವತೋ ವಿಷ್ಣೋರ್ಗುಣಾನಲ್ಪಜ್ಞಾನಾಮಪಿ ಪ್ರಕಾಶ್ಯಂತೀತಿ ಪ್ರಾಣೇ ನಾರಾಯಣ ಏವೇತಿ ವಿದ್ಯಾದಿತಿ" "ಪ್ರಾಣ ಋಚ ಇತ್ಯೇವ ವಿದ್ಯಾತ್" ಎಂದರೆ ಋಕ್‌ಗಳು ವಿಶೇಷವಾಗಿ ಇಂದ್ರಾದಿ ನಾಮಗಳಿಂದ ಪ್ರತಿಪಾದ್ಯನಾದ ವಿಷ್ಣುವಿನ ಗುಣಗಳನ್ನು ಅಲ್ಪಜ್ಞರಿಗೂ ಕೂಡ ತಿಳಿಸಿಕೊಡುತ್ತವೆ. ಆದ್ದರಿಂದ ವಿಶೇಷವಾಗಿ ಪ್ರಾಣಪರವಾಗಿವೆ. ನಾರಾಯಣ ಪರವಾಗಿವೆ ಎಂದು ಇದರ ಅರ್ಥ. ಹೀಗೆ ಐತರೇಯ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಅದಕ್ಕೆ ಅನುಗುಣವಾಗಿಯೇ ಟೀಕೆಯಲ್ಲಿ ತತ್ರ ಋಚಸ್ತು ಇತ್ಯಾದಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

## ಬ್ರಹ್ಮಮೀಮಾಂಸಾಶಾಸ್ತ್ರ

### ಪರಮಾತ್ಮ ಪ್ರತಿಪಾದ್ಯನಾದರೂ ಲೌಕಿಕಕರ್ಮಗಳಿಗೆ ಚ್ಯುತಿ ಇಲ್ಲ

**सूत्रम् – ।। कल्पनोपदेशाच्च मध्वादिवदविरोधः ।। २ ।।**

ಸೂತ್ರಾರ್ಥ - ಮಧುವಿದ್ಯೆಯಲ್ಲಿ 'ಮಧು'ಶಬ್ದವನ್ನು ಹೇಗೆ ಆದಿತ್ಯನಲ್ಲಿ ಪ್ರಯೋಗಿಸಿದ್ದಾರೋ, ಅದರಂತೆ ಸಕಲ ಶಬ್ದಗಳ ಅರ್ಥವನ್ನು ಪರಮಾತ್ಮನಲ್ಲಿ ತೋರಿಸಿ, ಆಯಾ ಶಬ್ದ ಪ್ರತಿಪಾದ್ಯತ್ವವನ್ನು ಐತರೇಯೋಪನಿಷತ್ತಿನಲ್ಲಿ ತೋರಿಸಲಾಗಿದೆ. ಆದ್ದರಿಂದ ಜ್ಯೋತಿಷ್ಟೋಮಾದಿ ಕರ್ಮಗಳು ಸಿದ್ಧವಾಗುವುದಿಲ್ಲ ಎಂಬ ವಿರೋಧಕ್ಕೆ ಅವಕಾಶವಿಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು ॥

## ಸೂತ್ರದೀಪಿಕಾ

**सूत्रदीपिका** – 'च एवार्थे । समुच्चये वा । तथा च **मध्वादिवत्** यथा मधुविद्यादिगतमध्वादिशब्दानां विष्णुवाचित्वेऽप्य**विरोधः** न लौकिकक्षौद्रादि-वाचकशब्दाभावेन तदभावाख्यविरोधः । तथा परमात्मनः सर्वशब्दवाच्यत्वेऽ-

भ्युपगतेऽपि न कर्माद्यभावविरोधः । कुतः ? शब्दानामन्यत्र योगरूढिवृत्ती अभ्युपगम्यैवेश्वरे महायोगवृत्त्यङ्गीकारादित्यध्याहारः । तदपि कुतः? **कल्पनोपदेशात्** 'प्राण ऋचः' इति सर्वशब्दवाच्यत्वस्य विष्णोः कल्पनाशब्दितोपासनार्थमुक्तत्वात् । तस्य च सर्वशब्दार्थमुख्यगुणवत्त्वरूप-महायोगवृत्तिं विनाऽयोगादित्यर्थः ॥२॥

ಅರ್ಥ -- ಚ ಶಬ್ದವು ಏವಾರ್ಥದಲ್ಲಿದೆ. ಅಥವಾ ಸಮುಚ್ಚಯಾರ್ಥದಲ್ಲೂ ಇದೆ. ಆದ್ದರಿಂದ 'ಮಧ್ವಾದಿವತ್' = ಯಾವ ರೀತಿಯಾಗಿ ಮಧುವಿದ್ಯೆಯಲ್ಲಿರುವ 'ಮಧು' ಮೊದಲಾದ ಶಬ್ದಗಳು ವಿಷ್ಣುವಾಚಿಯಾಗಿದ್ದರೂ, ಅವಿರೋಧಃ = ಲೋಕಸಿದ್ಧವಾದ ಜೇನಿನಲ್ಲಿ ಶಬ್ದವಿಲ್ಲವೆಂಬ ವಿರೋಧಕ್ಕೆ ಅವಕಾಶವಿಲ್ಲವೋ, ತಥಾ = ಅದೇ ರೀತಿಯಾಗಿ, ಪರಮಾತ್ಮನು ಸರ್ವಶಬ್ದವಾಚ್ಯನೆಂದು ಅಂಗೀಕಾರ ಮಾಡಿದರೂ, ಜ್ಯೋತಿಷ್ಟೋಮಾದಿ ಕರ್ಮಗಳೇ ಇಲ್ಲದಾಗಬೇಕಾದೀತು ಎಂಬ ವಿರೋಧಕ್ಕೂ ಅವಕಾಶವಿಲ್ಲ. ಏಕೆಂದರೆ ಶಬ್ದಗಳು ಬೇರೆಡೆ ಯೋಗರೂಢಿವೃತ್ತಿಯಿಂದ ಪ್ರಸಿದ್ಧವಾಗಿದ್ದರೂ ಈಶ್ವರನಲ್ಲಿ ಮಹಾಯೋಗವೃತ್ತಿಯಿಂದ ಇರುತ್ತದೆಂದು ಅಂಗೀಕರಿಸಿದ್ದರಿಂದ ವಿರೋಧವಿಲ್ಲ. ಇದನ್ನು ಹೇಗೆ ಹೇಳುತ್ತೀರಿ ಎಂದರೆ, ಕಲ್ಪನೋಪದೇಶಾತ್ = 'ಪ್ರಾಣಋಚಃ' ಎಂಬಲ್ಲಿ ವಿಷ್ಣುವೇ ಸರ್ವಶಬ್ದವಾಚ್ಯನಾಗಿದ್ದಾನೆಂದು ವಿಷ್ಣುವಿನಲ್ಲಿ ತೋರಿಸಿ, ಉಪದೇಶಾತ್ = ಸರ್ವಶಬ್ದವಾಚ್ಯತ್ವವನ್ನು 'ತಾ ವಾ ಏತಾಃ' ಎಂಬುದಾಗಿ ಉಪದೇಶ ಮಾಡಿರುವುದರಿಂದ, ಇಂತಹ ಉಪದೇಶವಾದರೂ ಮುಖ್ಯಗುಣವತ್ತ್ವವೆಂಬ ಮಹಾಯೋಗವೃತ್ತಿಯನ್ನು ಒಪ್ಪದೇ ಕೂಡುವುದಿಲ್ಲ.

॥ ಸೂತ್ರದೀಪಿಕೆಯಲ್ಲಿ ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् – मधुविद्यादिवत् सर्वशब्दार्थत्वेन परस्य कल्पनोपदेशाच्च न कर्मक्रमादिविरोधः ॥२॥**

**॥ इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये ज्योतिरुपक्रमाधिकरणम् ॥ २ ॥**

ಅನುವಾದ - 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿ ಮಧುವಿದ್ಯೆಯಲ್ಲಿ 'ಮಧು' ಶಬ್ದವನ್ನು ಸೂರ್ಯಾಂತರ್ಗತನಾದ ವಿಷ್ಣುವಿನಲ್ಲಿ ಪ್ರಯೋಗಿಸಲಾಗಿದೆ. ಆದರೂ

ಕೂಡ ಲೋಕಸಿದ್ಧವಾದ ಜೇನು ಎಂಬರ್ಥವನ್ನೇನು ಬಿಟ್ಟಿಲ್ಲ. ಅದರಂತೆ ಪರಮಾತ್ಮನಲ್ಲಿ ಕರ್ಮಾದಿವಾಚಕ ಸಕಲಶಬ್ದಗಳನ್ನು ಸಮನ್ವಯ ಮಾಡಬಹುದು. ಆದರೂ ಕೂಡ ಆಯಾ ಲೌಕಿಕಕರ್ಮಗಳನ್ನು ಕರ್ಮವಾಚಕ ಶಬ್ದಗಳು ಹೇಳುತ್ತವೆ. ಹೀಗೆ ಐತರೇಯ ಶಾಖೆಯಲ್ಲಿ ನಿರ್ಣಯಿಸಲಾಗಿದೆ. ಆದ್ದರಿಂದ ಕರ್ಮಾದಿಗಳೇ ಲೋಪವಾಗಲಿ ಎಂಬ ವಿರೋಧಕ್ಕೆ ಅವಕಾಶವಿಲ್ಲ.

ಪ್ರತಿಪದಾರ್ಥ -- ಜ್ಯೋತಿರಾದಿ ಶಬ್ದವಾಚ್ಯತ್ವವು ಪರಮಾತ್ಮನಲ್ಲಿ ಹೇಗೆ ಬರುತ್ತದೆ? ಹಾಗಾದಲ್ಲಿ ಕರ್ಮಕ್ರಮಾದಿಗಳ ವಿರೋಧ ಬರುತ್ತದಲ್ಲವೇ? ಜ್ಯೋತಿಷ್ಟೋಮಾದಿ ಶಬ್ದಗಳಿಗೆ ಅನ್ಯಪರತ್ವವನ್ನು ಒಪ್ಪದಿದ್ದರೆ ಪರಮಾತ್ಮನಲ್ಲಿ ಆಯಾ ಶಬ್ದಗಳಿಗೆ ವ್ಯುತ್ಪತ್ತಿಯೇ ಕೂಡದಿರಬೇಕಾದೀತು. ಈ ಆಶಂಕೆಯನ್ನು ಪರಿಹರಿಸುತ್ತಾ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ಮಧುವಿದ್ಯಾದಿವತ್ = ಮಧುವಿದ್ಯೆಯಲ್ಲಿ ಮಧುಶಬ್ದವನ್ನು ಸೂರ್ಯಾಂಗತನಾದ ವಿಷ್ಣುವಿನಲ್ಲಿ ಪ್ರಯೋಗಿಸಿದಂತೆ, ಸರ್ವಶಬ್ದಾರ್ಥತ್ವೇನ = ಸಮಸ್ತ ಶಬ್ದಗಳ ಅರ್ಥವನ್ನು ತೋರಿಸಿ, ಆಯಾ ಶಬ್ದವಾಚ್ಯತ್ವವನ್ನು, ಪರಸ್ಯ = ಪರಮಾತ್ಮನಲ್ಲಿ, ಕಲ್ಪನೋಪದೇಶಾಚ್ಚ = ನಿರ್ಧಾರ ಮಾಡಿರುವುದರಿಂದ, ನ ಕರ್ಮಕ್ರಮಾದಿ ವಿರೋಧಃ = ಕರ್ಮಾದಿಗಳೇ ಲೋಪವಾಗಲಿ ಎಂಬ ವಿರೋಧಕ್ಕೆ ಅವಕಾಶವಿಲ್ಲ.

ಇಲ್ಲಿಗೆ ಜ್ಯೋತಿರುಪಕ್ರಮಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

## ತತ್ವಪ್ರಕಾಶಿಕಾ

**ननु कथं ज्योतिरादिशब्दवाच्यत्वं परमात्मनः सम्भवति ? कर्मक्रमादिविरोधात्, व्युत्पत्त्यसम्भवाच, इत्याशङ्कामपनुदत् सूत्रमुपन्यस्य व्याचष्टे – कल्पनेति ।।**

ಪ್ರಶ್ನೆ - ವೇದದಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳಿಂದ ಪರಮಾತ್ಮನೊಬ್ಬನೇ ಪ್ರತಿಪಾದ್ಯನಾಗಲು ಹೇಗೆ ಸಾಧ್ಯ ? ಹಾಗೇನಾದರೂ ಸಕಲವಿಧ ಶಬ್ದಗಳಿಂದ ಪರಮಾತ್ಮನು ಮಾತ್ರ ಪ್ರತಿಪಾದ್ಯನಾಗಿದ್ದಾನೆಂದು ಹೇಳುವುದಾದರೆ ಜ್ಯೋತಿಷ್ಟೋಮಾದಿ ಕರ್ಮಗಳು ಅವುಗಳ ಕ್ರಮಗಳು, ಬೇರೆ ಯಾವುದೇ ಶಬ್ದಗಳಿಂದ ಪ್ರತಿಪಾದ್ಯವಾಗದ ಕಾರಣ ಅವುಗಳಿಗೆ ಲೋಪ ಬರಬೇಕಾದೀತು. ಮತ್ತು ಆಯಾ ಶಬ್ದಗಳ ವ್ಯುತ್ಪತ್ತಿಯನ್ನೂ ಕೂಡ ಪರಮಾತ್ಮನಲ್ಲಿ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಹಿಂದಿನ ಮುಂದಿನ ಪದಗಳೆಲ್ಲವೂ ವಿಷ್ಣು ಎಂಬ ಒಂದೇ ಅರ್ಥವನ್ನು ಹೇಳುವುದಾದರೆ ವ್ಯುತ್ಪತ್ತಿ ಹೇಗೆ ಕೂಡುತ್ತದೆ?

ಉತ್ತರ - ಈ ಆಶಂಕೆಗೆ ಉತ್ತರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಲ್ಪನಾ' ಇತ್ಯಾದಿಯಾಗಿ.

**तत्वप्रकाशिका – सर्वशब्दानां परमात्मवाचित्वेऽपि न कर्मक्रमादिविरोधः, व्युत्पत्त्ययोगो वा ।**

ಎಲ್ಲಾ ವಿಧವಾದ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆಂದು ಒಪ್ಪಿದರೂ ಕೂಡ ಜ್ಯೋತಿಷ್ಟೋಮಾದಿ ಕರ್ಮಗಳ ಹಾಗೂ ಅವುಗಳ ಕ್ರಮಗಳ ವಿರೋಧವೂ ಬರಬೇಕಾದೀತು ಎಂಬ ವಿರೋಧವು ಬರುವುದಿಲ್ಲ. ಮತ್ತು ಶಬ್ದಗಳ ವ್ಯುತ್ಪತ್ತಿಯೂ ಕೂಡ ಅಸಂಭಾವಿತವಾಗುತ್ತದೆಂಬ ಆಕ್ಷೇಪಕ್ಕೂ ಅವಕಾಶವಿಲ್ಲ.

**तत्वप्रकाशिका – यथा खलु मधुविद्यायाम् 'असौ वा आदित्यो देवमधु' इत्यादिना मध्वादिपदार्थतया परमात्मोपासनोपदेशेऽपि, न लौकिकमध्वादि-वाचकाभावेन तदभावविरोधः ।**

ಯಾವರೀತಿಯಾಗಿ ಮಧುವಿದ್ಯೆಯಲ್ಲಿ 'ಅಸೌ ವಾ ಆದಿತ್ಯೋ ದೇವಮಧು' ಇತ್ಯಾದಿಯಾಗಿ ಆದಿತ್ಯನಲ್ಲಿರುವ ಪರಮಾತ್ಮನು ಮಧುವಾಗಿದ್ದಾನೆ. ಎಲ್ಲಾ ದೇವತೆಗಳಿಗೆ ಆಶ್ರಯನಾಗಿದ್ದಾನೆ ಮತ್ತು ಸುಖಪೂರ್ಣನಾಗಿದ್ದಾನೆಂಬುದಾಗಿ 'ಮಧು' ಮೊದಲಾದ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆಂಬ ಉಪಾಸನೆಯನ್ನು ಶ್ರುತಿಯು ಉಪದೇಶಿಸುತ್ತಿದೆ. ಆದರೂ ಕೂಡ ಲೌಕಿಕವಾದ ಮಧುವನ್ನು ಕೂಡ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಲೌಕಿಕವಾದ 'ಮಧು' ಎಂಬ ಪದಾರ್ಥವು ಅಸಿದ್ಧವಾಗುತ್ತದೆಂಬ ವಿರೋಧ ಬರುವುದಿಲ್ಲ.

**तत्वप्रकाशिका – अन्यत्ररूढिमनिवार्यैव महायोगवृत्त्या मध्वादि-शब्दानामीश्वरादौ वृत्त्यभ्युपगमात् ।**

ಏಕೆಂದರೆ ಬೇರೆ ಪದಾರ್ಥಗಳಲ್ಲಿ ರೂಢಿಯನ್ನು ಅಂಗೀಕರಿಸಿಯೇ ಮಹಾಯೋಗವೃತ್ತಿಯಿಂದ ಮಧು ಮೊದಲಾದ ಶಬ್ದಗಳನ್ನು ಈಶ್ವರನಲ್ಲಿ ಮುಖ್ಯವೃತ್ತಿಯಿಂದ ನಾವು ಸಮನ್ವಯ ಮಾಡುತ್ತಿದ್ದೇವೆ.

**तत्वप्रकाशिका – एवं सर्वशब्दवाच्यत्वे परमात्मनोऽभ्युपगतेऽपि न कर्मादिविरोधः । ज्योतिरादिशब्दानामन्यत्ररूढिः, योगः, योगरूढिः, रूढोपचारः, रूढलक्षणा, उपचारः, लक्षणा इति वृत्तीरभ्युपेत्य महायोगवृत्त्येश्वरवाचित्वा-भ्युपगमात् ।**

ಇದರಂತೆ ಪರಮಾತ್ಮನು ಸಕಲವಿಧವಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ಅಂಗೀಕರಿಸಿದರೂ ಕೂಡ ಯಾವುದೇ ಕರ್ಮ, ಕ್ರಮಾದಿಗಳ ವಿರೋಧವು ಬರುವುದಿಲ್ಲ. ಏಕೆಂದರೆ 'ಜ್ಯೋತಿ' ಮೊದಲಾದ ಶಬ್ದಗಳಿಗೆ ಯುಗಾದಿ ಪದಾರ್ಥಗಳಲ್ಲಿ ರೂಢಿ, ಯೋಗ, ಯೋಗರೂಢಿ, ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ. ಇಷ್ಟು ವೃತ್ತಿಗಳಲ್ಲಿ ಯಾವುದೇ ಒಂದು ವೃತ್ತಿಯಿಂದಲೂ ಪ್ರತಿಪಾದನೆ ಮಾಡಬಹುದು. ಆದರೆ ಮಹಾಯೋಗವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದು ನಮ್ಮ ಸಿದ್ಧಾಂತ.

**तत्वप्रकाशिका – सर्वशब्दवाच्यत्वमीश्वरस्य चोपासनार्थमेव ह्युपदिश्यते 'प्राण ऋच इत्येव विद्यात्' इत्यादेः ॥**

ಸಕಲವಿಧವಾದ ಶಬ್ದಗಳು ಈಶ್ವರನನ್ನು ಉಪಾಸನೆಗೋಸ್ಕರ ಪ್ರತಿಪಾದನೆ ಮಾಡುತ್ತಿದೆ ಎಂಬುದಾಗಿ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ಉಪದೇಶವಾಕ್ಯವಿದೆ.

**तत्वप्रकाशिका – उपासना च महायोगवृत्त्या सर्वशब्दार्थगुणवत्त्वेनैव, नतु सङ्केतमात्रेण, इति भावः ।**

ಈ ಉಪಾಸನೆಯಾದರೂ ಕೂಡ ಮಹಾಯೋಗವೃತ್ತಿಯಿಂದ ಸಕಲಶಬ್ದಗಳ ಅಭಿಧಾವೃತ್ತಿಯನ್ನು ತಿಳಿಯಬೇಕು. ಆವಾಗ ಆಯಾ ಶಬ್ದಗಳಿಂದ ತಿಳಿಯುವಂತಹ ಗುಣಗಳು ಪರಮಾತ್ಮನಲ್ಲಿ ನಿರವಧಿಕವಾಗಿ ಸಿದ್ಧವಾಗುತ್ತವೆ ಹೊರತು, ಲೋಕದಲ್ಲಿ ಚೈತ್ರಮೈತ್ರಾದಿ ಶಬ್ದಗಳಂತೆ ಕೇವಲ ಸಂಕೇತದಿಂದ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲ.

**तत्वप्रकाशिका – 'च' शब्द एवार्थः । 'विरोधश्च न' इति वा ।**

ಸೂತ್ರದಲ್ಲಿರುವ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಅಥವಾ ವಿರೋಧವೂ ಕೂಡ ಇರುವುದಿಲ್ಲ ಎಂಬುದಾಗಿ ಸಮುಚ್ಚಯಾರ್ಥದಲ್ಲಿಯೂ ಇರುತ್ತದೆ.

**तत्वप्रकाशिका – प्रयोगमात्रबाहुल्यं रूढिः । यथा घटादिशब्दानां कुम्भादौ ।**

ಒಟ್ಟು ಏಳು ಬಗೆಯ ವೃತ್ತಿಗಳಿವೆ. ಅವುಗಳ ಲಕ್ಷಣ ಹಾಗೂ ಉದಾಹರಣೆಗಳನ್ನು ಹೀಗೆ ತಿಳಿಯಬೇಕು - ಯಾವ ಅರ್ಥದಲ್ಲಿ ಬಹಳವಾದ ಪ್ರಯೋಗವಷ್ಟೇ ಇರುತ್ತದೋ, ಅದು 'ರೂಢಿ' ಎನಿಸಿಕೊಳ್ಳುತ್ತದೆ. ಉದಾಹರಣೆ - 'ಮಡಿಕೆ' ಮೊದಲಾದವುಗಳಲ್ಲಿ 'ಘಟ' ಮೊದಲಾದ ಶಬ್ದಗಳನ್ನು ಪ್ರಯೋಗಿಸುತ್ತಾರೆ. 'ಮಡಿಕೆ' ಎಂಬರ್ಥದಲ್ಲಿ ಘಟಶಬ್ದಕ್ಕೆ ಕೇವಲ ರೂಢಿಯಿರುತ್ತದೆ.

**तत्वप्रकाशिका – प्रवृत्तिनिमित्तमात्रमपेक्ष्य वृत्तिर्योगः । यथा धूमध्वजादिशब्दानामग्न्यादौ । (यथा पङ्कजादिशब्दनां भेकादौ) प्रवृत्तिनिमित्तं प्रयोगबाहुल्यं च योगरूढिः ।**

ಪ್ರವೃತ್ತಿನಿಮಿತ್ತವನ್ನು ಮಾತ್ರ ಅಪೇಕ್ಷಿಸಿ, ಶಬ್ದವೃತ್ತಿಯಿದ್ದರೆ 'ಯೋಗ' ಎನ್ನುತ್ತಾರೆ. ಉದಾಹರಣೆ - 'ಧೂಮಧ್ವಜ' ಎಂಬ ಶಬ್ದವು ಅಗ್ನಿಯಲ್ಲಿ ಪ್ರವೃತ್ತಿನಿಮಿತ್ತ ಹಾಗೂ ಪ್ರಯೋಗಬಾಹುಲ್ಯ ಎರಡನ್ನೂ ಹೊಂದಿ ಪ್ರಸಿದ್ಧವಾಗಿವೆ.

**तत्वप्रकाशिका – यथा पङ्कजादिशब्दानां पद्मादौ ।**

ಮತ್ತು 'ಪಂಕಜ' ಶಬ್ದಕ್ಕೆ ಕಮಲದಲ್ಲಿ ರೂಢಿಯೇ ಇರುತ್ತದೆ. 'ಪಂಕಜನಿಕರ್ತೃತ್ವ' ಎಂಬ ಅರ್ಥದ ವಿವಕ್ಷೆಯಿಂದ ಯೋಗವೂ ಕೂಡ ಇರುತ್ತದೆ. ಇಂತಹ ಶಬ್ದಗಳೂ ಯೋಗರೂಢಿ-ಯೆನಿಸಿಕೊಳ್ಳುತ್ತದೆ.

**तत्वप्रकाशिका – मुख्यार्थस्य शब्दप्रवृत्तिनिमित्तातिरिक्तगुणयोगेन वृत्तिरुपचारः । तत्र च प्रयोगबाहुल्यं रूढोपचारः । यथा लिखितसिंहादौ सिंहादिशब्दानाम् ।**

ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಮುಖ್ಯಾರ್ಥವನ್ನು ಬಿಟ್ಟು, ಬೇರೆ ಗುಣಗಳನ್ನು ಶ್ರುತಿಯು ಪ್ರತಿಪಾದನೆ ಮಾಡಿದರೆ ಅದನ್ನು ಉಪಚಾರ ಎನ್ನುತ್ತಾರೆ. ಈ ಉಪಚಾರವೂ ಕೂಡ ಎರಡುವಿಧ-ರೂಢೋಪಚಾರ, ರೂಢಲಕ್ಷಣ ಎಂದು. ಪ್ರಯೋಗಬಾಹುಲ್ಯವಿದ್ದರೆ ಅದನ್ನು ರೂಢೋಪಚಾರ ಎನ್ನಬೇಕು. ಉದಾಹರಣೆ - ಚಿತ್ರದಲ್ಲಿ ಬರೆದಿರುವ ಸಿಂಹವನ್ನು ನೋಡಿ, 'ಸಿಂಹಃ' ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ. ಸಿಂಹಶಬ್ದದ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸದೇ ಎಲ್ಲರೂ ವ್ಯವಹರಿಸುವುದರಿಂದ ಇದನ್ನು ರೂಢೋಪಚಾರ ಎನ್ನಬೇಕು.

**तत्वप्रकाशिका – वाच्यार्थानुपपत्त्या योग्येऽवाच्ये वृत्तिर्लक्षणा । तत्र च प्रयोगबाहुल्ये रूढलक्षणा । यथा ग्रामो गच्छतीत्यत्र ग्रामसम्बन्धिपुरुषे(षु) ग्रामशब्दस्य ।**

ವಾಚ್ಯಾರ್ಥವು ಅನುಪಪನ್ನವಾದಾಗ ಯೋಗ್ಯವಾದ ವಾಚ್ಯವಲ್ಲದ ಅರ್ಥದಲ್ಲಿ ವೃತ್ತಿಯಿದ್ದರೆ ಅದನ್ನು ಲಕ್ಷಣಾವೃತ್ತಿಯೆನ್ನುತ್ತಾರೆ. ಅಲ್ಲಿ ಪ್ರಯೋಗಬಾಹುಲ್ಯವಿದ್ದರೆ 'ರೂಢಿಲಕ್ಷಣಾ' ಎನ್ನುತ್ತಾರೆ. ಉದಾಹರಣೆ - 'ಗ್ರಾಮೋ ಗಚ್ಛತಿ' 'ಗ್ರಾಮವು ಹೋಗುತ್ತಿದೆ' ಎಂಬಲ್ಲಿ ಗಮನವೆಂಬ ಕ್ರಿಯೆಯು ಗ್ರಾಮದಲ್ಲಿ ಅನುಪಪನ್ನವಾದ್ದರಿಂದ ಗ್ರಾಮಶಬ್ದಕ್ಕೆ 'ಗ್ರಾಮಕ್ಕೆ ಸಂಬಂಧಪಟ್ಟ ಜನರು' ಎಂಬರ್ಥವನ್ನು ಮಾಡಬೇಕು. ಹೀಗೆ ಬಹುಜನರ ಪ್ರಯೋಗವಿರುವುದರಿಂದ ಇದನ್ನು ರೂಢಲಕ್ಷಣಾ ಎನ್ನುತ್ತಾರೆ.

**तत्वप्रकाशिका – उपचारमात्रं यथा पैङ्गल्यादियुते माणावकेऽग्निशब्दस्य । लक्षणामात्रं यथा नदीशब्दस्य तीरे ।**

ಇದರಂತೆ ಪರಮಾತ್ಮನು ಸಕಲವಿಧವಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂದು ಅಂಗೀಕರಿಸಿದರೂ ಕೂಡ ಯಾವುದೇ ಕರ್ಮ, ಕ್ರಮಾದಿಗಳ ವಿರೋಧವು ಬರುವುದಿಲ್ಲ. ಏಕೆಂದರೆ 'ಜ್ಯೋತಿ' ಮೊದಲಾದ ಶಬ್ದಗಳಿಗೆ ಯುಗಾದಿ ಪದಾರ್ಥಗಳಲ್ಲಿ ರೂಢಿ, ಯೋಗ, ಯೋಗರೂಢಿ, ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ. ಇಷ್ಟು ವೃತ್ತಿಗಳಲ್ಲಿ ಯಾವುದೇ ಒಂದು ವೃತ್ತಿಯಿಂದಲೂ ಪ್ರತಿಪಾದನೆ ಮಾಡಬಹುದು. ಆದರೆ ಮಹಾಯೋಗವೃತ್ತಿಯಿಂದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದು ನಮ್ಮ ಸಿದ್ಧಾಂತ.

**तत्वप्रकाशिका – सर्वशब्दवाच्यत्वमीश्वरस्य चोपासनार्थमेव ह्युपदिश्यते 'प्राण ऋच इत्येव विद्यात्' इत्यादेः ।।**

ಸಕಲವಿಧವಾದ ಶಬ್ದಗಳು ಈಶ್ವರನನ್ನು ಉಪಾಸನೆಗೋಸ್ಕರ ಪ್ರತಿಪಾದನೆ ಮಾಡುತ್ತಿದೆ ಎಂಬುದಾಗಿ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ಉಪದೇಶವಾಕ್ಯವಿದೆ.

**तत्वप्रकाशिका – उपासना च महायोगवृत्त्या सर्वशब्दार्थगुणवत्त्वेनैव, नतु सङ्केतमात्रेण, इति भावः ।**

ಈ ಉಪಾಸನೆಯಾದರೂ ಕೂಡ ಮಹಾಯೋಗವೃತ್ತಿಯಿಂದ ಸಕಲಶಬ್ದಗಳ ಅಭಿಧಾವೃತ್ತಿಯನ್ನು ತಿಳಿಯಬೇಕು. ಆವಾಗ ಆಯಾ ಶಬ್ದಗಳಿಂದ ತಿಳಿಯುವಂತಹ ಗುಣಗಳು ಪರಮಾತ್ಮನಲ್ಲಿ ನಿರವಧಿಕವಾಗಿ ಸಿದ್ಧವಾಗುತ್ತವೆ ಹೊರತು, ಲೋಕದಲ್ಲಿ ಚೈತ್ರಮೈತ್ರಾದಿ ಶಬ್ದಗಳಂತೆ ಕೇವಲ ಸಂಕೇತದಿಂದ ಪರಮಾತ್ಮನು ಪ್ರತಿಪಾದ್ಯನಾಗುವುದಿಲ್ಲ.

**तत्वप्रकाशिका – 'च' शब्द एवार्थः । 'विरोधश्च न' इति वा ।**

ಸೂತ್ರದಲ್ಲಿರುವ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಅಥವಾ ವಿರೋಧವೂ ಕೂಡ ಇರುವುದಿಲ್ಲ ಎಂಬುದಾಗಿ ಸಮುಚ್ಚಯಾರ್ಥದಲ್ಲಿಯೂ ಇರುತ್ತದೆ.

**तत्वप्रकाशिका – प्रयोगमात्रबाहुल्यं रूढिः । यथा घटादिशब्दानां कुम्भादौ ।**

ಒಟ್ಟು ಏಳು ಬಗೆಯ ವೃತ್ತಿಗಳಿವೆ. ಅವುಗಳ ಲಕ್ಷಣ ಹಾಗೂ ಉದಾಹರಣೆಗಳನ್ನು ಹೀಗೆ ತಿಳಿಯಬೇಕು - ಯಾವ ಅರ್ಥದಲ್ಲಿ ಬಹಳವಾದ ಪ್ರಯೋಗವಷ್ಟೇ ಇರುತ್ತದೋ, ಅದು 'ರೂಢಿ' ಎನಿಸಿಕೊಳ್ಳುತ್ತದೆ. ಉದಾಹರಣೆ - 'ಮಡಿಕೆ' ಮೊದಲಾದವುಗಳಲ್ಲಿ 'ಘಟ' ಮೊದಲಾದ ಶಬ್ದಗಳನ್ನು ಪ್ರಯೋಗಿಸುತ್ತಾರೆ. 'ಮಡಿಕೆ' ಎಂಬರ್ಥದಲ್ಲಿ ಘಟಶಬ್ದಕ್ಕೆ ಕೇವಲ ರೂಢಿಯಿರುತ್ತದೆ.

**तत्वप्रकाशिका – प्रवृत्तिनिमित्तमात्रमपेक्ष्य वृत्तिर्योगः । यथा धूमध्वजादिशब्दानामग्न्यादौ । (यथा पङ्कजादिशब्दनां भेकादौ) प्रवृत्तिनिमित्तं प्रयोगबाहुल्यं च योगरूढिः ।**

ಪ್ರವೃತ್ತಿನಿಮಿತ್ತವನ್ನು ಮಾತ್ರ ಅಪೇಕ್ಷಿಸಿ, ಶಬ್ದವೃತ್ತಿಯಿದ್ದರೆ 'ಯೋಗ' ಎನ್ನುತ್ತಾರೆ. ಉದಾಹರಣೆ - 'ಧೂಮಧ್ವಜ' ಎಂಬ ಶಬ್ದವು ಅಗ್ನಿಯಲ್ಲಿ ಪ್ರವೃತ್ತಿನಿಮಿತ್ತ ಹಾಗೂ ಪ್ರಯೋಗಬಾಹುಲ್ಯ ಎರಡನ್ನೂ ಹೊಂದಿ ಪ್ರಸಿದ್ಧವಾಗಿವೆ.

**तत्वप्रकाशिका – यथा पङ्कजादिशब्दानां पद्मादौ ।**

ಮತ್ತು 'ಪಂಕಜ' ಶಬ್ದಕ್ಕೆ ಕಮಲದಲ್ಲಿ ರೂಢಿಯೇ ಇರುತ್ತದೆ. 'ಪಂಕಜನಿಕರ್ತೃತ್ವ' ಎಂಬ ಅರ್ಥದ ವಿವಕ್ಷೆಯಿಂದ ಯೋಗವೂ ಕೂಡ ಇರುತ್ತದೆ. ಇಂತಹ ಶಬ್ದಗಳೂ ಯೋಗರೂಢಿ-ಯೆನಿಸಿಕೊಳ್ಳುತ್ತದೆ.

**तत्वप्रकाशिका – मुख्यार्थस्य शब्दप्रवृत्तिनिमित्तातिरिक्तगुणयोगेन वृत्तिरुपचारः । तत्र च प्रयोगबाहुल्यं रूढोपचारः । यथा लिखितसिंहादौ सिंहादिशब्दानाम् ।**

ಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಮುಖ್ಯಾರ್ಥವನ್ನು ಬಿಟ್ಟು, ಬೇರೆ ಗುಣಗಳನ್ನು ಶ್ರುತಿಯು ಪ್ರತಿಪಾದನೆ ಮಾಡಿದರೆ ಅದನ್ನು ಉಪಚಾರ ಎನ್ನುತ್ತಾರೆ. ಈ ಉಪಚಾರವೂ ಕೂಡ ಎರಡುವಿಧ-ರೂಢೋಪಚಾರ, ರೂಢಲಕ್ಷಣ ಎಂದು. ಪ್ರಯೋಗಬಾಹುಲ್ಯವಿದ್ದರೆ ಅದನ್ನು ರೂಢೋಪಚಾರ ಎನ್ನಬೇಕು. ಉದಾಹರಣೆ - ಚಿತ್ರದಲ್ಲಿ ಬರೆದಿರುವ ಸಿಂಹವನ್ನು ನೋಡಿ, 'ಸಿಂಹಃ' ಎಂಬ ಶಬ್ದವನ್ನು ಪ್ರಯೋಗಿಸುತ್ತಾರೆ. ಸಿಂಹಶಬ್ದದ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸದೇ ಎಲ್ಲರೂ ವ್ಯವಹರಿಸುವುದರಿಂದ ಇದನ್ನು ರೂಢೋಪಚಾರ ಎನ್ನಬೇಕು.

**तत्वप्रकाशिका – वाच्यार्थानुपपत्त्या योग्येऽवाच्ये वृत्तिर्लक्षणा । तत्र च प्रयोगबाहुल्ये रूढलक्षणा । यथा ग्रामो गच्छतीत्यत्र ग्रामसम्बन्धिपुरुषे(षु) ग्रामशब्दस्य ।**

ವಾಚ್ಯಾರ್ಥವು ಅನುಪಪನ್ನವಾದಾಗ ಯೋಗ್ಯವಾದ ವಾಚ್ಯವಲ್ಲದ ಅರ್ಥದಲ್ಲಿ ವೃತ್ತಿಯಿದ್ದರೆ ಅದನ್ನು ಲಕ್ಷಣಾವೃತ್ತಿಯೆನ್ನುತ್ತಾರೆ. ಅಲ್ಲಿ ಪ್ರಯೋಗಬಾಹುಲ್ಯವಿದ್ದರೆ 'ರೂಢಿಲಕ್ಷಣಾ' ಎನ್ನುತ್ತಾರೆ. ಉದಾಹರಣೆ - 'ಗ್ರಾಮೋ ಗಚ್ಛತಿ' 'ಗ್ರಾಮವು ಹೋಗುತ್ತಿದೆ' ಎಂಬಲ್ಲಿ ಗಮನವೆಂಬ ಕ್ರಿಯೆಯು ಗ್ರಾಮದಲ್ಲಿ ಅನುಪಪನ್ನವಾದ್ದರಿಂದ ಗ್ರಾಮಶಬ್ದಕ್ಕೆ 'ಗ್ರಾಮಕ್ಕೆ ಸಂಬಂಧಪಟ್ಟ ಜನರು' ಎಂಬರ್ಥವನ್ನು ಮಾಡಬೇಕು. ಹೀಗೆ ಬಹುಜನರ ಪ್ರಯೋಗವಿರುವುದರಿಂದ ಇದನ್ನು ರೂಢಲಕ್ಷಣಾ ಎನ್ನುತ್ತಾರೆ.

**तत्वप्रकाशिका – उपचारमात्रं यथा पैङ्गल्यादियुते माणावकेऽग्निशब्दस्य । लक्षणामात्रं यथा नदीशब्दस्य तीरे ।**

ಹಳದಿಬಣ್ಣದ ಬಟ್ಟೆಯುಟ್ಟಿರುವ ಮಾಣವಕನಲ್ಲಿ 'ಅಗ್ನಿರ್ಮಾಣವಕಃ' ಎಂಬ ಶಬ್ದವನ್ನು ಪ್ರಯೋಗಿಸಲಾಗುತ್ತದೆ. ಇದನ್ನು ಉಪಚಾರ ವೃತ್ತಿಯೆಂದಿದ್ದಾರೆ. ಕೇವಲ ಲಕ್ಷಣಾವೃತ್ತಿಗೆ ಉದಾಹರಣೆ- 'ಗಂಗಾಯಾಂ ಘೋಷಃ' ಎಂಬುದು. ಗಂಗಾ ಶಬ್ದವು ಪ್ರವಾಹವನ್ನು ಹೇಳದೇ ತೀರವನ್ನು ಹೇಳುತ್ತಿವುದರಿಂದ ತೀರದಲ್ಲಿ ಲಕ್ಷಣಾವೃತ್ತಿಯನ್ನು ಹೇಳಬೇಕಾಗುತ್ತದೆ.

**ತತ್ವಪ್ರಕಾಶಿಕಾ – एताः वृत्तयो लोके । हरौ तु महायोगो महारुढियोगश्च । तत्र तदितरत्र प्रसिद्धशब्दानां महायोगः । निरतिशयप्रवृत्तिनिमित्तसद्भावात् ।**

ಹೀಗೆ ಲೌಕಿಕ ವ್ಯವಹಾರದಲ್ಲಿ ಏಳು ಬಗೆಯ ವಸ್ತುಗಳಿರುತ್ತವೆ. ಪರಮಾತ್ಮನಲ್ಲಾದರೂ ಮಹಾಯೋಗ, ಮಹಾರೂಢಿಯೋಗ ಎಂಬ ಎರಡೇ ಪ್ರಕಾರದ ಶಬ್ದಗಳಿರುತ್ತವೆ. ಇವುಗಳಲ್ಲಿ ಬೇರೆಡೆ ಪ್ರಸಿದ್ಧವಾದ ಇಂದ್ರಾದಿ ಶಬ್ದಗಳನ್ನು ಪರಮಾತ್ಮನಲ್ಲಿ ಮಹಾಯೋಗವೃತ್ತಿಯಿಂದ ತಿಳಿಯಬೇಕು. ಏಕೆಂದರೆ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವಾದ ಗುಣವು ನಿರತಿಶಯವಾಗಿ ಪರಮಾತ್ಮನಲ್ಲೇ ಇರುತ್ತದೆ.

**ತತ್ವಪ್ರಕಾಶಿಕಾ – तदेकनिष्ठानां महारूढियोगः । नारायणादिशब्दानां तत्र बहुप्रयोगयुक्तत्वान्निरतिशयप्रवृत्तिनिमित्तसद्भावाच्च ।**

ಮತ್ತು ಯಾವ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೋ ಅಂತಹ ಶಬ್ದಗಳು ಅವನಲ್ಲಿ ಮಹಾರೂಢಯೋಗದಿಂದ ಇರುತ್ತವೆಂದು ತಿಳಿಯಬೇಕು. ಉದಾಹರಣೆ - ನಾರಾಯಣ ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಹೆಚ್ಚಾಗಿ ಪ್ರವೃತ್ತವಾಗಿವೆ. ಅವುಗಳ ಪ್ರವೃತ್ತಿನಿಮಿತ್ತವೂ ಕೂಡ ಪರಮಾತ್ಮನಲ್ಲಿ ನಿರತಿಶಯವಾಗಿ ಇರುತ್ತವೆ.

**ತತ್ವಪ್ರಕಾಶಿಕಾ – स्तम्भादिशब्दानां हरौ विद्वद्रूढिसद्भावेऽपि, सार्वजनीनताऽभावेनाऽमहत्त्वात् भेदः । अतः कर्मतदङ्गवाजिशब्दवाच्यो हरिरिति सिद्धम् ।। २ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**
**ज्योतिरुपक्रमाधिकरणम् ।।**

'ಸ್ತಂಭ' ಮೊದಲಾದ ಶಬ್ದಗಳಿಗೆ ಶ್ರೀಹರಿಯಲ್ಲಿ ವಿದ್ವದ್ರೂಢಿ ಇದ್ದರೂ ಕೂಡ ಎಲ್ಲಾ ಬಗೆಯ ಜನರು ಪರಮಾತ್ಮನಲ್ಲಿ ಅದನ್ನು ವ್ಯವಹರಿಸುವುದಿಲ್ಲ. ಮಹಾರೂಢಿ ಎಂಬುದನ್ನು ಅಲ್ಲಿ ಪ್ರತ್ಯೇಕವಾಗಿ ಅಂಗೀಕರಿಸಿಲ್ಲ. ಆದ್ದರಿಂದ ಕರ್ಮ ಹಾಗೂ ತದಂಗಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳಿಗೆಲ್ಲಾ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗುತ್ತಾನೆಂಬ ವಿಷಯವು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ಜ್ಯೋತಿರುಪಕ್ರಮಾಧಿಕರಣವು ಮುಗಿಯಿತು.

ಪರಿಪೂರ್ಣಚಂದ್ರಿಕಾ

## ಭಾವದೀಪ

**मध्वित्यादिभाष्यमाकाङ्क्षाक्रमेण व्याचष्टे – सर्वशब्दानामिति ।।**

'ಮಧುವಿದ್ಯಾದಿ' ಇತ್ಯಾದಿ ಭಾಷ್ಯವನ್ನು ಆಕಾಂಕ್ಷಾಕ್ರಮದಿಂದ ವ್ಯಾಖ್ಯಾನ ಮಾಡಲು ಟೀಕೆಯಲ್ಲಿ 'ಸರ್ವಶಬ್ದಾನಾಮ್' ಇತ್ಯಾದಿ ವಾಕ್ಯಗಳು ಹೊರಟಿವೆ.

**भावदीपः – न कर्मक्रमादिविरोध इति भाष्यं व्युत्पत्तेरप्यशक्यतेत्यनुभाष्योक्तस्य उपलक्षणमिति भावः ।।**

'ನ ಕರ್ಮಕ್ರಮಾದಿವಿರೋಧಃ' ಎಂಬ ಭಾಷ್ಯವಾಕ್ಯವು ಮತ್ತು 'ವ್ಯುತ್ಪತ್ತೇರಪ್ಯಶಕ್ಯತಾ' ಎಂಬ ಅನುವ್ಯಾಖ್ಯಾನದ ವಾಕ್ಯವು ಉಪಲಕ್ಷಣವಾಗಿದೆ ಎಂದು ತಿಳಿಯಬೇಕು. ಇದನ್ನು ಟೀಕೆಯಲ್ಲಿ 'ಸರ್ವಶಬ್ದಾನಾಮ್' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸಿದ್ದಾರೆ.

**भावदीपः – यथेति ।। छन्दोग्ये तृतीयाध्यायोक्तमधुविद्यायामित्यर्थः । कल्पनोपदेशादित्यत्र कल्पनं लोकतः क्लृप्तं तत्तद्वाचित्वमनिवार्यैव लोकात् क्लृप्तमहायोगवृत्तेः कल्पनाया व्युत्पादनेन ।**

'ಯಥಾ ಖಲು' ಇತ್ಯಾದಿಯಾಗಿ ಟೀಕೆಯಲ್ಲಿ ಉದಾಹರಿಸಿದ ವಾಕ್ಯವು ಛಾಂದೋಗ್ಯದ ತೃತೀಯಾಧ್ಯಾಯದಲ್ಲಿರುವ ಮಧುವಿದ್ಯೆಯಲ್ಲಿ ಪ್ರಸಕ್ತವಾಗಿದೆ ಎಂದು ತಿಳಿಯಬೇಕು. 'ಕಲ್ಪನೋಪದೇಶಾತ್' ಎಂಬ ಸೂತ್ರದಲ್ಲಿ ಎರಡು ಅರ್ಥವನ್ನು ತಿಳಿಯಬೇಕು. ಕಲ್ಪನಂ = ಲೋಕ ವ್ಯವಹಾರದಲ್ಲಿರುವ ಶಬ್ದಗಳಿಗೆ ಆಯಾ ಪದಾರ್ಥವಾಚಕತ್ವವನ್ನು ಬಿಡದೆ ಮಹಾಯೋಗವೃತ್ತಿಯನ್ನು, 'ಕಲ್ಪನಾಯಾಃ' = ಮಹಾವಿಷ್ಣುವಿನಲ್ಲಿ ವ್ಯುತ್ಪತ್ತಿಯಿಂದ, 'ಉಪದೇಶಾತ್' = ಅಂಗೀಕರಿಸಿರುವುದರಿಂದ ಲೋಕಸಿದ್ಧವಾದ ವೃತ್ತಿಯನ್ನು ಬಿಡದೆ ಕಲ್ಪನಯಾ = ಮಾಹಾವಿಷ್ಣುವಿನಲ್ಲಿ ಪರಮುಖ್ಯಯಿಂದ ವೃತ್ತಿಯನ್ನು ಸ್ವೀಕರಿಸಿದ್ದರಿಂದ, ಉಪದೇಶಾತ್ = ಸರ್ವಶಬ್ದವಾಚ್ಯನೆಂದು 'ತಾವಾ ಏತಾ.....' ಇತ್ಯಾದಿ ಮಂತ್ರಗಳಿಂದ ಉಪದೇಶ ಮಾಡಿರುವುದರಿಂದ, ಕಲ್ಪನಾಯಾಃ = 'ಸರ್ವಶಬ್ದವಾಚ್ಯ' ಎಂಬ ಉಪಾಸನೆಯನ್ನು 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿಯಾಗಿ ಉಪದೇಶಾತ್ = ಉಪದೇಶ ಮಾಡಿದ್ದರಿಂದ ಅವಿರೋಧಃ = ಯಾಗಾದಿ ಕರ್ಮಗಳು ಇಲ್ಲದ ಪರಿಸ್ಥಿತಿ ಬರುವುದಿಲ್ಲ. ಮಧ್ವಾದಿತವ್ = ಮಧುಶಬ್ದದ ಪ್ರಯೋಗದಂತೆ. ಹೀಗೆ ಎರಡು ಅರ್ಥವನ್ನು ಸೂತ್ರದಲ್ಲಿ ವಿವಕ್ಷಿಸಿ ಹೇತು ಅಂಶವನ್ನು ದೃಷ್ಟಾಂತದಲ್ಲಿ ಸಮನ್ವಯ ಮಾಡುತ್ತಿದ್ದಾರೆ. 'ಅನ್ಯತ್ರ' ಇತ್ಯಾದಿಯಾಗಿ.

**भावदीपः – उपदेशादिति अर्थद्वयमुपेत्य हेत्वंशं दृष्टान्तेऽपि योजयति – अन्यत्रेति ।। उक्तहेतुं परामृश्य दार्ष्टान्तिकं योजयति – एवमिति ।।**

ಹಿಂದೆ ಹೇಳಿದ ಹೇತುವನ್ನು ಪರಾಮರ್ಷೆ ಮಾಡಿ ದಾರ್ಷ್ಟಾಂತಿಕದಲ್ಲಿ ಸಮನ್ವಯಮಾಡಲು 'ಏವಂ' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः** – कथमित्याकाङ्क्षायां रूढी, रूढियोगो, महायोगो, महारूढियोगो रूढोपचारो रूढलक्षणा उपचारो लक्षणा इति शब्दवृत्तिभेदात् रूढिपूर्वकत्वेन महायोगवृत्या परमेश्वरेऽखिलशब्दव्युत्पत्त्युपपत्तेरिति न्यायविवरणोक्तमुपलक्षणं मत्वा लोकविषयं वृत्तिसप्तकं दर्शयन्नेव तद्विवृण्वान एवमित्युक्तं व्यनक्ति – **ज्योतिरादीति** ।।

ದಾರ್ಷ್ಟಾಂತಿಕನಾದ ಪರಮಾತ್ಮನಲ್ಲಿ ಸಕಲಶಬ್ದವಾಚತ್ವವನ್ನು ಹೇಗೆ ತಿಳಿಯಬೇಕು ಎಂಬ ಆಕಾಂಕ್ಷೆಗೆ ಹೀಗೆ ಉತ್ತರವನ್ನು ತಿಳಿಯಬೇಕು. ೧ ರೂಢಿ, ೨. ರೂಢಿಯೋಗ, ೩. ಮಹಾಯೋಗ, ೪. ಮಹಾರೂಢಿಯೋಗ, ೫. ರೂಢೋಪಚಾರ, ೬. ರೂಢಲಕ್ಷಣ, ೭. ಉಪಚಾರ, ೮. ಲಕ್ಷಣಾ ಹೀಗೆ ಎಂಟು ಬಗೆಯ ಶಬ್ದವೃತ್ತಿಗಳು ಪ್ರಸಿದ್ಧವಾಗಿವೆ. ಇವುಗಳಲ್ಲಿ ರೂಢಿಯಿಂದ ಸಹಿತವಾದ ಮಹಾಯೋಗ ವೃತ್ತಿಯಿಂದ ಪರಮಾತ್ಮನು ಮಾತ್ರ ಸಕಲಶಬ್ದಪ್ರತಿಪಾದ್ಯನಾಗುತ್ತಾನೆ. ಹೀಗೆ ನ್ಯಾಯವಿವರಣದ ಮಾತನ್ನು ಉಪಲಕ್ಷಣವನ್ನಾಗಿ ತಿಳಿದು ಲೋಕವಿಷಯದಲ್ಲಿರುವ ಏಳು ಬಗೆಯ ವೃತ್ತಿಗಳನ್ನು ತೋರಿಸುತ್ತಾ ಅದನ್ನು ವಿವರಿಸಲು 'ಏವಂ' ಎಂಬ ವಾಕ್ಯದಿಂದ ಹೇಳಿದ್ದನ್ನೇ 'ಜ್ಯೋತಿರಾದಿ' ಎಂಬ ಮುಂದಿನ ವಾಕ್ಯದಿಂದ ವಿವರಿಸುತ್ತಿದ್ದಾರೆ.

**भावदीपः** – **महायोगेति** ।। प्रवृत्तिनिमित्ताधिक्यादिति भावः । भाष्ये 'प्राण ऋच इत्येव विद्यात्' इति वाक्यशेषोक्त्यनुरोधेन कल्पनोपदेशादित्यस्य सर्वशब्दवाच्यत्वेन कल्पनाया उपदेशादित्यर्थान्तरं चाह – **सर्वशब्दवाच्यत्वमिति** ।।

'ಮಹಾಯೋಗವೃತ್ಯಾ' ಎಂಬುದಾಗಿ ಟೀಕೆಯಲ್ಲಿ ಪರಮಾತ್ಮನನ್ನೇ ಮಹಾಯೋಗವೃತ್ತಿಯಿಂದ ಶಬ್ದಗಳು ಪ್ರತಿಪಾದನೆ ಮಾಡುತ್ತವೆ ಎಂದು ಹೇಳಿದ್ದಾರೆ. ಏಕೆಂದರೆ ಪರಮಾತ್ಮನಲ್ಲಿ ಪ್ರವೃತ್ತಿನಿಮಿತ್ತವು ಅಧಿಕವಾಗಿವೆ.

ಭಾಷ್ಯದಲ್ಲಿ 'ಪ್ರಾಣ ಋಚ ಇತ್ಯೇವ ವಿದ್ಯಾತ್' ಎಂಬ ವಾಕ್ಯಶೇಷವನ್ನು ಉಲ್ಲೇಖಿಸಿದ್ದಕ್ಕೆ ಅನುಸಾರಿಯಾಗಿ 'ಕಲ್ಪನೋಪದೇಶಾತ್' ಎಂಬ ಸೂತ್ರಕ್ಕೆ 'ಕಲ್ಪನಾಯಾ ಉಪದೇಶಾತ್' ಎಂಬ ಅರ್ಥಾಂತರವನ್ನು ವಿವಕ್ಷಿಸಿ 'ಸರ್ವಶಬ್ದವಾಚ್ಯತ್ವಮ್' ಎಂಬ ಮುಂದಿನ ಟೀಕಾವಾಕ್ಯವು ಹೊರಟಿದೆ.

**भावदीपः** – वाच्यत्वं चेति चान्वयः ।। **चशब्द इति** ।। लोकसिद्धवृत्तीरनिवार्यैवेति सर्वशब्दार्थगुणत्वेनैवेति वाऽध्याहृतेनान्वय इति भावः ।।

ಮುಂದಿರುವ 'ಚ' ಶಬ್ದವನ್ನು 'ವಾಚ್ಯತ್ವ' ಎಂಬಲ್ಲಿ ಅನ್ವಯ ಮಾಡಬೇಕು.

ಸೂತ್ರದಲ್ಲಿರುವ 'ಚ' ಶಬ್ದವು ಅವಧಾರಣಾರ್ಥದಲ್ಲಿದೆ ಎಂದು ಟೀಕೆಯಲ್ಲಿ 'ಚ ಶಬ್ದಃ' ಎಂಬ ವಾಕ್ಯದಿಂದ ಹೇಳಿದ್ದಾರೆ. "ಲೋಕಸಿದ್ಧಿವೃತ್ತೀಃ ಅನಿರ್ವಾರ್ಯೈವ" ಅಥವಾ "ಸರ್ವಶಬ್ದಾರ್ಥ-ಗುಣತ್ವೇನೈವ" ಎಂಬುದಾಗಿ ಅಧ್ಯಾಹೃತವಾದ ಪದದ ಜೊತೆಗೆ ಏವಾರ್ಥದಲ್ಲಿರುವ 'ಚ' ಶಬ್ದಾರ್ಥಕ್ಕೆ ಅನ್ವಯವನ್ನು ತಿಳಿಯಬೇಕು.

**भावदीपः – विरोधश्चेति ।।** न केवलं तथा ह्यधीयत इत्युक्तसाधकमस्तीति समुच्चयार्थ इत्यर्थः ।

ಟೀಕೆಯಲ್ಲಿ 'ವಿರೋಧಶ್ಚ ನೇತಿ ವಾ' ಎಂಬುದಾಗಿ ವಿರೋಧವೂ ಕೂಡ ಇರುವುದಿಲ್ಲವೆಂಬ ಸಮುಚ್ಚಯಾರ್ಥದಲ್ಲಿ 'ಚ' ಶಬ್ದವು ಇರುತ್ತದೆಂದು ವ್ಯಾಖ್ಯಾನ ಮಾಡಿದ್ದಾರೆ. ಯಾವುದನ್ನು ಸಮುಚ್ಚಯ ಮಾಡಬೇಕೆಂದರೆ 'ನ ಕೇವಲಂ ತಥಾ ಹ್ಯಧೀಯತ ಇತ್ಯುಕ್ತಸಾಧಕಮಸ್ತೀತಿ" 'ಹಿಂದೆ ಹೇಳಿದ 'ತಥಾಹ್ಯಧೀಯತೇ' ಎಂಬ ಸಾಧನವಷ್ಟೇ ಇರುವುದಲ್ಲ' ಎಂಬುದನ್ನು ಸಮುಚ್ಚಯ ಮಾಡಬೇಕು.

**भावदीपः –** न्यायविवरणोक्तं वृत्त्यष्टकं योगवृत्तेरुपलक्षणमिति भावेन लक्षणोदाहरणाभ्यां वृत्तिनवकं व्यनक्ति – **प्रयोगमात्रेति ।।**

ನ್ಯಾವಿವರಣದಲ್ಲಿ ಉಲ್ಲೇಖಿಸಿದ ಎಂಟು ಬಗೆಯ ವೃತ್ತಿಗಳು ಯೋಗವೃತ್ತಿಗೆ ಉಪಲಕ್ಷಣವಾಗಿದೆ ಎಂಬ ಅಭಿಪ್ರಾಯದಿಂದ ಅದರ ಲಕ್ಷಣವನ್ನು ಮತ್ತು ಉದಾರಣೆಯನ್ನು ಹೇಳುವ ಮೂಲಕ ಒಂಬತ್ತು ಬಗೆಯ ವೃತ್ತಿಯನ್ನು 'ಪ್ರಯೋಗಮಾತ್ರ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

**भावदीपः –** 'प्रयोगमात्रबाहुल्यं रूढिरित्यभिधीयते' इत्याद्यनुभाष्योक्तेरिति भावः ।

"ಪ್ರಯೋಗಮಾತ್ರಬಾಹುಲ್ಯಂ ರೂಢಿರಿತ್ಯಭಿಧಿಯತೇ" ಬಹಳವಾದ ಪ್ರಯೋಗವಿದ್ದರೆ ಅದನ್ನು 'ರೂಢಿ' ಎನ್ನುತ್ತಾರೆ ಎಂಬ ಅನುವ್ಯಾಖ್ಯಾನ ಮಾತಿನಂತೆ ಪ್ರಯೋಗಮಾತ್ರಬಾಹುಲ್ಯವೇ ರೂಢಿಶಬ್ದದ ಲಕ್ಷಣವೆಂದು ತಿಳಿಯಬೇಕು.

**भावदीपः –** मात्रेति अवयवार्थसादृश्यादिसापेक्षताव्युदासः । व्यक्तमेतत्सर्वं तर्कताण्डवे द्वितीयपरिच्छेदे ।। **मुख्यार्थस्येति ।।** गुणयोगेनेत्यन्वयः ।।

ಮಾತ್ರಪದದಿಂದ ಅವಯವಾರ್ಥಸಾದೃಶ್ಯ ಮೊದಲಾದವುಗಳನ್ನು ನಿರಾಕರಿಸಿದ್ದಾರೆ. ತರ್ಕತಾಂಡವದ ದ್ವಿತೀಯ ಪರಿಚ್ಛೇದದಲ್ಲಿ ಈ ವಿಷಯ ಹೆಚ್ಚು ಸ್ಪಷ್ಟವಾಗುತ್ತದೆ. 'ಮುಖ್ಯಾರ್ಥಸ್ಯ' ಎಂಬುದಕ್ಕೆ 'ಗುಣಯೋಗೇನ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು.

ಜ್ಯೋತಿರುಪಕ್ರಮಾಧಿಕರಣ (೧-೪-೨)

**भावदीपः – तदितरत्रेति ।।** स्तम्भेन्द्रादिशब्दानामित्यर्थः । महारूढिस्तु हरौ न सम्भवति 'विद्वद्रूढिर्वैदिका स्यात् सा योगादेव लभ्यते' इत्यनुभाष्ये ब्रह्मणि योगं विना विद्वद्रूढेरभावोक्तेरिति भावः ।

'ತದಿತರತ್ರ' ಎಂಬ ಪದಕ್ಕೆ ಸ್ತಂಭ, ಇಂದ್ರ ಮೊದಲಾದ ಶಬ್ದಗಳಲ್ಲಿ ಎಂದರ್ಥ. ಮಹಾರೂಢಿಯು ಶ್ರೀಹರಿಯಲ್ಲಿ ಯುಕ್ತವಾಗುವುದಿಲ್ಲ. ಏಕೆಂದರೆ "ವಿದ್ವದ್ರೂಢಿರ್ವೈದಿಕಾ ಸ್ಯಾತ್ ಸಾ ಯೋಗಾದೇವ ಲಭ್ಯತೇ' ವಿದ್ವದ್‌ರೂಢಿಯು ವೈದಿಕವಾದ್ದರಿಂದ ಅದು ಯೋಗದಿಂದಲೇ ಲಭ್ಯವಾಗುತ್ತದೆ. ಹೀಗೆ ಅನುವ್ಯಾಖ್ಯಾನದಲ್ಲಿ ಯೋಗವನ್ನು ಒಪ್ಪದೆ ವಿದ್ವದ್‌ರೂಢಿಯನ್ನು ಶ್ರೀಹರಿಯಲ್ಲಿ ಹೇಳಲು ಸಾಧ್ಯವಿಲ್ಲವೆಂದು ಹೇಳಿದ್ದಾರೆ.

**भावदीपः –** हरावुक्तवृत्तिद्वयस्य साङ्कर्यमाशङ्क्य भेदमाह – **स्तम्भादीति ।।** तद्भेदः महारूढियोगाद्भेदः महायोग इत्यर्थः ।। **अत इति ।।** साधकभावात् बाधकाभावाच्चेत्यर्थः ।।२।।

।। इति श्रीराघवेन्द्रयतिकृते भावदीपे ज्योतिरुपक्रमाधिकरणम् ।।

ಶ್ರೀಹರಿಯಲ್ಲಿ ಎರಡು ಬಗೆಯ ವೃತ್ತಿಗಳನ್ನು ಒಪ್ಪಿದರೆ ಸಾಂಕರ್ಯದೋಷ ಬರುತ್ತದಲ್ಲವೆ?

ಶ್ರೀಹರಿಯಲ್ಲಿ ಮಹಾಯೋಗ ಹಾಗೂ ಮಹಾರೂಢಿಯೋಗ ಈ ಎರಡು ವೃತ್ತಿಗಳನ್ನು ಒಪ್ಪಿದರೆ ಸಾಂಕರ್ಯದೋಷ ಬರುತ್ತದಲ್ಲವೆ? ಎಂದು ಆಶಂಕಿಸಿ ಉತ್ತರಿಸಲು 'ಸ್ತಂಭಾದಿ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ. 'ತದ್‌ಭೇದಃ' ಎಂಬ ಪದಕ್ಕೆ ಮಹಾರೂಡಿಯೋಗಕ್ಕಿಂತಲೂ ಮಹಾಯೋಗವು ಇಲ್ಲದಿರುವುದರಿಂದ ಎಂದರ್ಥ.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಜ್ಯೋತಿರುಪಕ್ರಮಾಧಿಕರಣವು ಮುಗಿಯಿತು.

ಜ್ಯೋತಿರುಪಕ್ರಮಾಧಿಕರಣ
(೧-೪-೨)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ ज्योतिरुपक्रमाधिकरणम्

### ಅಧಿಕರಣದ ಉದ್ದೇಶ ಮತ್ತು ಸಂಶಯಪರಂಪರೆ

**'ज्योतिरुपक्रमात्तु तथा ह्यधीयते एके' पूर्वत्र सिद्धरूपदेवतातत्क्रम- वाचिनाम् इन्द्रियेभ्यः इत्यादीनां समन्वय उक्तः ।**

ಅನುವಾದ - 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬ ಸೂತ್ರದಿಂದ ಜ್ಯೋತಿರುಪಕ್ರಮಾಧಿಕರಣವು ಪ್ರಾರಂಭವಾಗುತ್ತಿದೆ.

ಹಿಂದಿನ ಅಧಿಕರಣದಲ್ಲಿ ಸಿದ್ಧಸ್ವರೂಪರಾದ ದೇವತೆಗಳು ಹಾಗೂ ಅವರಲ್ಲಿರುವ ತಾರತಮ್ಯವನ್ನು ಹೇಳುವ 'ಇಂದ್ರಿಯೇಭ್ಯಃ' ಮೊದಲಾದ ಶ್ರುತಿಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಿದ್ದಾಯಿತು.

**अत्र तु साध्यरूपकर्मतत्क्रमवाचिनां स उच्यत इति वा पूर्वत्रावरादिशब्द- निमित्तानां ब्रह्मण्यसत्त्वेपि तदधीनत्वात् तत्र ते मुख्या इत्युक्तम् ।**

ಪ್ರಕೃತ ಈ ಅಧಿಕರಣದಲ್ಲಿ ಸಾಧ್ಯಸ್ವರೂಪವಾದ ಯಜ್ಞಾದಿಕರ್ಮಗಳು ಹಾಗೂ ಅವುಗಳಲ್ಲಿರುವ ಕ್ರಮವನ್ನು ಹೇಳುವ ಶಬ್ದಗಳ ಸಮನ್ವಯವನ್ನು ಮಾಡಲಾಗುತ್ತಿದೆ. ಆದ್ದರಿಂದ ಅವಸರಸಂಗತಿಯು ಇರುತ್ತದೆಂದು ತಿಳಿಯಬೇಕು. ಅಥವಾ ಹಿಂದಿನ ಅಧಿಕರಣದಲ್ಲಿ 'ದುಃಖೀ' ಬದ್ಧಃ' 'ಅವರ' ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ದುಃಖಿತ್ವ, ಬದ್ಧತ್ವ, ಅವರತ್ವ ಮೊದಲಾದವುಗಳು ಬ್ರಹ್ಮನಲ್ಲಿ ಸರ್ವಥಾ ಬರುವುದಿಲ್ಲ. ಆದರೂ ಸಹ ಅವುಗಳಿಗೆ ಬ್ರಹ್ಮನು ಸ್ವತಂತ್ರನಾದ್ದರಿಂದ

ತದಧೀನತ್ವವೆಂಬ ಪ್ರವೃತ್ತಿನಿಮಿತ್ತದಿಂದ ಬ್ರಹ್ಮನಲ್ಲಿ ಈ ಎಲ್ಲಾ ಶಬ್ದಗಳು ಮುಖ್ಯವಾಗಿರುತ್ತವೆಂದು ಸಮನ್ವಯ ಮಾಡಲಾಯಿತು.

**अत्र तु योगवृत्त्या निमित्तमपि ब्रह्मण्यस्तीत्युच्यत इति वाऽवान्तरसङ्गतिः । अत्र ज्योतिरादिशब्दानां ब्रह्मणि समन्वयो न युक्त उत युक्तः? इति चिन्ता ।**

ಈ ಅಧಿಕರಣದಲ್ಲಿ ಯೋಗವೃತ್ತಿಯಿಂದ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತಗಳೂ ಕೂಡ ಬ್ರಹ್ಮನಲ್ಲಿ ಬರುತ್ತವೆಂದು ಸಮರ್ಥಿಸಲಾಗುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಅವಾಂತರ ಸಂಗತಿಯಿರುತ್ತದೆಂದು ತಿಳಿಯಬೇಕು.

ಈ ಅಧಿಕರಣದ ಸಂಶಯಕೋಟಿಗಳು ಹೀಗಿವೆ - 'ಜ್ಯೋತಿಃ' ಮೊದಲಾದ ಶಬ್ದಗಳ ಸಮನ್ವಯವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವೋ ? ಅಥವಾ ಯುಕ್ತವಾಗುತ್ತದೋ? ಎಂಬುದು ಪ್ರಧಾನ ಸಂಶಯ.

**तदर्थं सर्वशब्दानां योगः किं ब्रह्मणि न युक्त उत युक्तः? इति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಸಕಲಶಬ್ದಗಳ ಯೋಗವು ಬ್ರಹ್ಮನಲ್ಲಿ ಯುಕ್ತವಾಗುವುದಿಲ್ಲವೋ? ಅಥವಾ ಯುಕ್ತವಾಗುತ್ತದೋ? ಎಂಬ ಸಂಶಯವು ಪರಿಹಾರವಾಗಬೇಕು.

**तदर्थमवयवानां ब्रह्मणि यौगिकत्वे समुदायस्य ब्रह्मपरता न युक्तोत युक्तेति ।**

ಹಿಂದಿನ ಸಂಶಯದ ಪರಿಹಾರಕ್ಕಾಗಿ ಜ್ಯೋತಿ ಮೊದಲಾದ ಅವಯವಗಳು ಬ್ರಹ್ಮನಲ್ಲಿ ಯೌಗಿಕವಾಗಿ ಇರುವುದಾದರೆ ಜ್ಯೋತಿಷ್ಟೋಮ ಮೊದಲಾದ ಸಮುದಾಯಗಳು ಬ್ರಹ್ಮಪರ ಎಂದು ಹೇಳುವುದು ಯುಕ್ತವಾಗುವುದಿಲ್ಲವೋ? ಅಥವಾ ಯುಕ್ತವಾಗುತ್ತದೋ? ಎಂಬುದು ಅಂತಿಮವಾದ ಸಂಶಯ.

## ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः –**

**ज्योतिरुपक्रमात्तु तथा ह्यधीयते एके ।।** अत्र विषयोपाधिः प्रागेवोक्तः । ''तत्तु समन्वयादिति सर्वशब्दानां परमात्मवाचकत्वमुक्तम्'' इति टीकायाः फलपरत्वात् पूर्वानन्तर्ये हेतुमाह – **पूर्वत्रेति ।।**

**ವಿವರಣೆ** - 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ ಜ್ಯೋತಿರುಪಕ್ರಮಾಧಿಕರಣವು ಪ್ರಾರಂಭವಾಗುತ್ತಿದೆ. ಮೊದಲು ಈ ಸಂಗತಿಯನ್ನು ನಿರೂಪಣೆ ಮಾಡುತ್ತಿದ್ದಾರೆ. ಈ ಅಧಿಕರಣದಲ್ಲಿ 'ಸರ್ವ' ಎಂಬುದು ವಿಷಯೋಪಾಧಿಯಾಗಿದೆಯೆಂಬುದನ್ನು ಈ ಹಿಂದೆಯೇ ಹೇಳಿದ್ದಾಗಿದೆ. ಟೀಕೆಯಲ್ಲಿ 'ತತ್ತು ಸಮನ್ವಯಾದಿತಿ ಸರ್ವಶಬ್ದಾನಾಂ ಪರಮಾತ್ಮವಾಚಕತ್ವಮುಕ್ತಮ್' ಎಂಬುದಾಗಿ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಹೇಳಲಾಗಿದೆ. ಆದರೆ ಎಲ್ಲಾ ಶಬ್ದಗಳ ಸಮನ್ವಯವನ್ನು ಹೇಳುವುದು ಸಾಧ್ಯವಿಲ್ಲ ಎಂಬುದು ಪೂರ್ವಪಕ್ಷದ ಫಲವಾಗಿದೆ. ಅದರ ಸಮಾಧಾನವೇ ಸಿದ್ಧಾಂತದ ಫಲವಾಗಿದೆಯೆಂದು ಹೇಳಿದ್ದಾರೆ. ಪ್ರಕೃತ ಹಿಂದಿನ ಅಧಿಕರಣದ ಆನಂತರ್ಯವು ಈ ಅಧಿಕರಣಕ್ಕೆ ಇರಲು ಕಾರಣವೇನೆಂಬುದನ್ನು 'ಪೂರ್ವತ್ರ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः – इन्द्रियादीनामभिमानिदेवतापरत्वादिति भावः ।**

'ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ' ಎಂಬಲ್ಲಿರುವ ಇಂದ್ರಿಯಾದಿ ಶಬ್ದಗಳು ತದಭಿಮಾನಿದೇವತಾಪರವಾಗಿವೆಯೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದಾಯಿತು ಎಂದು ಇದರ ಅಭಿಪ್ರಾಯ.

**प्रकाशः – यद्यपि पूर्वत्राव्यक्तशब्द एव सूत्रादौ समन्वित इति भाति तथापि परमैश्वर्यविरोधित्वरूपविषयतावच्छेदकाक्रान्तत्वादुत्तमताबोधकप्रमाणविरुद्धत्वादिरूप पूर्वपक्षयुक्तेस्तदधीनत्वादिसिद्धान्तयुक्तेश्च साम्यात् सूत्रादौ च आनुमानिकशब्दस्योपलक्षणार्थत्वादिन्द्रियादेरादित्वेप्यव्यक्तशब्दोदाहरणत्वस्य निचाय्यवाक्ये ब्रह्मपरत्वान्यथानुपपत्तिसूक्ष्मत्वादिविशेषयुक्त्युपेतत्वेनानन्दमयशब्दस्येव युक्तत्वादिति भावेनेन्द्रियेभ्य इत्यादीनामित्युक्तम् ॥**

ಪ್ರಶ್ನೆ - ಗ್ರಂಥದಲ್ಲಿ 'ಇಂದ್ರಿಯೇಭ್ಯಃ ಇತ್ಯಾದೀನಾಮ್ ಸಮನ್ವಯ ಉಕ್ತಃ' ಎಂಬುದಾಗಿ ಹಿಂದಿನ ಅಧಿಕರಣದಲ್ಲಿ ಶ್ರುತಿಯಲ್ಲಿರುವ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳ ಸಮನ್ವಯವನ್ನು ಮಾಡಿದ್ದಾಯಿತೆಂದು ಹೇಳಿದ್ದಾರೆ. ಆದರೆ ಹಿಂದಿನ ಅಧಿಕರಣದಲ್ಲಿ ಅವ್ಯಕ್ತಶಬ್ದದ ಸಮನ್ವಯವನ್ನಷ್ಟೇ ಸೂತ್ರ, ಭಾಷ್ಯ ಮೊದಲಾದವುಗಳಲ್ಲಿ ಮಾಡಿದ್ದು ಕಾಣಿಸುತ್ತಿದೆ. ಹೀಗಿರುವಾಗ ಗ್ರಂಥಕಾರರು ಅವ್ಯಕ್ತಶಬ್ದದ ಬಗ್ಗೆ ಹೇಳದೇ 'ಇಂದ್ರಿಯೇಭ್ಯಃ' ಇತ್ಯಾದಿ ಪದಸಮನ್ವಯವಾಯಿತೆಂದು ಹೇಳಿದ್ದು ಹೇಗೆ ಸರಿ?

ಉತ್ತರ - ಹಿಂದಿನ ಅಧಿಕರಣದಲ್ಲಿ ಅವ್ಯಕ್ತಶಬ್ದದ ಸಮನ್ವಯವು ಹೇಗೆ ಆಗಿದೆಯೋ, ಅದರಂತೆ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳ ಸಮನ್ವಯವೂ ಕೂಡ ಆಗಿರುತ್ತವೆ. ಏಕೆಂದರೆ 'ಇಂದ್ರಿಯೇಭ್ಯಃ' ಎಂಬಲ್ಲಿರುವ ಪಂಚಮೀವಿಭಕ್ತಿಯಿಂದಲೂ ಅವರತ್ವವು ತಿಳಿಯುತ್ತದೆ. ಇಂತಹ ಅವರತ್ವವು ಪರಮೈಶ್ವರ್ಯಕ್ಕೆ ವಿರೋಧಿಯಾಗಿದೆ. ಹಾಗಾಗಿ ಪರಮೈಶ್ವರ್ಯವಿರೋಧಿತ್ವರೂಪವಾದ ವಿಷಯತಾವಚ್ಛೇದಕದಲ್ಲಿ 'ಇಂದ್ರಿಯೇಭ್ಯಃ' ಎಂಬ ಪದವು ಆಕ್ರಾಂತವಾಯಿತು. ಮತ್ತು 'ಉತ್ತಮತಾಬೋಧಕಪ್ರಮಾಣವಿರೋಧಿತ್ವ' ಎಂಬ ಪೂರ್ವಪಕ್ಷಯುಕ್ತಿ ಹಾಗೂ 'ತದಧೀನತ್ವ' ಎಂಬ ಸಿದ್ಧಾಂತ ಯುಕ್ತಿಯು ಅವ್ಯಕ್ತಶಬ್ದದಲ್ಲಿ ಹೇಗೆ

ಇರುತ್ತದೋ, ಅದರಂತೆ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳಲ್ಲಿಯೂ ಕೂಡ ಇರುತ್ತದೆ. ಹಾಗಾದರೆ ಸೂತ್ರದಲ್ಲಿ ಆನುಮಾನಿಕಶಬ್ದವನ್ನೇಕೆ ಹೇಳಿದರು. ಆನುಮಾನಿಕಶಬ್ದದಿಂದ ಇಂದ್ರಿಯಾದಿಶಬ್ದಗಳನ್ನು ಉಪಲಕ್ಷಣಯಾ ಸ್ವೀಕರಿಸುವುದಕ್ಕಿಂತ 'ಪ್ರಥಮಪರಿತ್ಯಾಗೇ ಕಾರಣಾಭಾವಾತ್' ಇಂದ್ರಿಯಶಬ್ದವನ್ನೇ ಸೂತ್ರದಲ್ಲಿ ಸ್ವೀಕರಿಸಬಹುದಿತ್ತಲ್ಲವೇ? ಪ್ರಥಮ ಪ್ರಾಪ್ತವಾದದ್ದನ್ನು ಕಂಠತಃ ಹೇಳಿ, ಉಳಿದವುಗಳನ್ನು ಉಪಲಕ್ಷಣಯಾ ಹೇಳುವುದು ನ್ಯಾಯಪ್ರಾಪ್ತ. ಆದರೂ ಅವ್ಯಕ್ತಶಬ್ದವನ್ನೇ ಸೂತ್ರದಲ್ಲಿ ಕಂಠತಃ ಹೇಳಲು ಕಾರಣವಿದೆ. ನಿಚಾಯ್ಯವಾಕ್ಯದಲ್ಲಿ 'ಮಹತಃ ಪರಮ್' ಎಂಬಲ್ಲಿರುವ ಮಹತ್‌ಶಬ್ದದಿಂದ ಪ್ರಕೃತಿಯನ್ನು ಬಿಟ್ಟು ಪರಮಾತ್ಮನನ್ನು ತೆಗೆದುಕೊಳ್ಳುತ್ತೇವೆ. ಇಂತಹ ಮಹತ್‌ಪರತ್ವವು ಪರಮಾತ್ಮನಲ್ಲೇ ಇರುತ್ತದೆ. ಮತ್ತು ಅವ್ಯಕ್ತಶಬ್ದದ ಪ್ರವೃತ್ತಿನಿಮಿತ್ತವೆನಿಸಿದ ಸೂಕ್ಷ್ಮತಮತ್ವವೂ ಕೂಡ ಪರಮಾತ್ಮನಲ್ಲೇ ಇರುತ್ತದೆ. ಯಾವರೀತಿಯಾಗಿ ಆನಂದಮಯಾಧಿಕರಣದಲ್ಲಿ ಅನ್ನಮಯಶಬ್ದವು ಪ್ರಥಮಪ್ರಾಪ್ತವಾಗಿದ್ದರೂ ಕೊನೆಯಲ್ಲಿರುವ ಆನಂದಮಯಶಬ್ದವನ್ನೇ ಸೂತ್ರಕಾರರು ಸ್ವೀಕರಿಸಿದ್ದಾರೋ, (ಬ್ರಹ್ಮಶಬ್ದ ಇವುಗಳೆಲ್ಲವೂ ಆನಂದಮಯನ ಜೊತೆಗೆ ಪಠಿತವಾದ್ದರಿಂದ ಜಿಜ್ಞಾಸಾಧಿಕರಣವನ್ನು ಆಕ್ಷೇಪ ಮಾಡಲು ಸುಲಭವಾಗುತ್ತದೆ. ಆದ್ದರಿಂದ ಪ್ರಥಮಪ್ರಾಪ್ತವಾದ ಅನ್ನಮಯಶಬ್ದವನ್ನು ಬಿಟ್ಟು, ಕೊನೆಯಲ್ಲಿರುವ ಆನಂದಮಯಶಬ್ದವನ್ನೇ ಕಂಠತಃ ಹೇಳಿ, ಉಳಿದವುಗಳನ್ನು ಉಪಲಕ್ಷಣಯಾ ಸ್ವೀಕರಿಸಿದ್ದಾರೆ.) ಅದರಂತೆ ಪ್ರಕೃತದಲ್ಲಿಯೂ ಅವ್ಯಕ್ತಶಬ್ದದ ಜೊತೆಗೆ ಬ್ರಹ್ಮನ ಲಿಂಗಗಳೆಲ್ಲವೂ ಶ್ರುತವಾದ್ದರಿಂದ ಸ್ವತಃ ಪ್ರಾಪ್ತವಾದ 'ಇಂದ್ರಿಯೇಭ್ಯಃ' ಎಂಬ ಪದವನ್ನು ಬಿಟ್ಟು, ಅನಂತರವಿರುವ ಅವ್ಯಕ್ತಶಬ್ದವನ್ನೇ ಕಂಠತಃ ಹೇಳಿರುತ್ತಾರೆ. ಉಳಿದವುಗಳನ್ನು ಉಪಲಕ್ಷಣಯಾ ಸ್ವೀಕರಿಸಬೇಕು. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಕೇವಲ ಅವ್ಯಕ್ತಶಬ್ದದ ಸಮನ್ವಯವಷ್ಟೇ ಉದ್ದಿಷ್ಟವಲ್ಲ. 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳ ಸಮನ್ವಯಗಳೂ ಕೂಡ ಉದ್ದಿಷ್ಟವಾಗಿರುತ್ತವೆ.

**प्रकाशः – साध्येति ।।** सिद्धवाचिचिन्तानन्तरं तत्साध्यवाचिचिन्ता बुद्धिस्था। द्रव्यदेवतासाध्यत् यागादिकर्मणामिति भावः ।

ಹಿಂದಿನ ಅಧಿಕರಣದಲ್ಲಿ ಸಿದ್ಧರೂಪವಾದ ದೇವತಾವಾಚಕವಾದ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳ ಸಮನ್ವಯವನ್ನು ಮಾಡಿದ್ದಾಯಿತು. ಈಗ ಯಾಗಾದಿಕರ್ಮಪರವಾದ ಶಬ್ದಗಳ ಸಮನ್ವಯಗಳನ್ನು ಮಾಡುತ್ತಿದ್ದಾರೆ. ಏಕೆಂದರೆ ಯಾಗಾದಿಕರ್ಮಗಳೆಲ್ಲವೂ ದ್ರವ್ಯ ಹಾಗೂ ದೇವತೆಗಳಿಂದ ಸಾಧ್ಯವಾಗಿರುವ ಕಾರಣ, ಸಿದ್ಧವಾಚಕಶಬ್ದಗಳ ಸಮನ್ವಯದ ಅನಂತರವೇ, ಸಾಧ್ಯವಾಚಕಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆಂದು ಅಭಿಪ್ರಾಯ.

**प्रकाशः –** तेषामपीह पदवर्णादिरूपेणोदाहरणत्वेऽपि पूर्वत्र परापरभावमुपेत्य वाक्यरूपत्वाहानेन समन्वितत्वमुपादायैवमुक्तम् ।।

'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಶ್ರುತಿಗಳೂ ಕೂಡ ಪದ, ವರ್ಣ, ಸ್ವರಾದಿ ರೂಪದಿಂದ ಈ ಅಧಿಕರಣದಲ್ಲಿಯೂ ಕೂಡ ವಿಷಯವಾಗುತ್ತಿರುವಾಗ ಹಿಂದಿನ ಅಧಿಕರಣದಲ್ಲಿ ಸಮನ್ವಯ ಮಾಡಿದ್ದಾಯಿತೆಂದು ಹೇಗೆ ಹೇಳಿದ್ದೀರಿ ? ಎಂದು ಪ್ರಶ್ನಿಸಬಹುದು. ಆದರೆ ಹಿಂದಿನ ಅಧಿಕರಣದಲ್ಲಿ

'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿಗಳನ್ನು ವಾಕ್ಯರೂಪವೆಂದು ತಿಳಿದು ಸಮನ್ವಯ ಮಾಡಲಾಯಿತು. ಈ ಅಧಿಕರಣದಲ್ಲಿ ಪದ, ವರ್ಣಾದಿ ರೂಪದಿಂದ ಸಮನ್ವಯ ಮಾಡುತ್ತಿದ್ದಾರೆ. ಅವ್ಯಕ್ತವು ಪರವಾಗಿದೆ, ಮಹದಾದಿಗಳು ಅಪರವಾಗಿವೆ ಇತ್ಯಾದಿ ವಿಷಯಗಳು ವಾಕ್ಯಸಮನ್ವಯದಿಂದಷ್ಟೇ ತಿಳಿಯುತ್ತದೆ. ಪ್ರಕೃತ ಒಂದೊಂದೇ ಪದಗಳ ಸಮನ್ವಯವು ಈ ಅಧಿಕರಣದಲ್ಲಿ ಮಾಡಿದಾಗ ಅಂತಹ ಪರಾಪರಭಾವವು ತಿಳಿಯುವುದಿಲ್ಲ.

**प्रकाशः – तत्क्रमवाचिनामिति ।। पञ्चमीपरादिशब्दानामित्यर्थः ।। निमित्तमपीति ।। तथाचैकरूपविचारस्य जिज्ञासितत्वादवसरसङ्गतिरिति वा सोपानारोहणक्रमरूपा वा सङ्गतिरित्यर्थः ।**

ಗ್ರಂಥದಲ್ಲಿ 'ತತ್ಕ್ರಮವಾಚಿನಾಮ್' ಎಂದು ಹೇಳಿರುತ್ತಾರೆ. ಸಿದ್ಧರೂಪವಾದ ದೇವತೆಗಳನ್ನು ಹೇಳುವ ಶಬ್ದಗಳನ್ನು ಅವರಲ್ಲಿರುವ ಪರಾಪರಭಾವವೆಂಬ ಕ್ರಮವನ್ನು ತಿಳಿಸುವ ಪಂಚಮೀ ಮೊದಲಾದ ವಿಭಕ್ತಿಗಳ ಸಮನ್ವಯವನ್ನು ಹಿಂದೆ ಮಾಡಲಾಯಿತು ಎಂದರ್ಥ. 'ನಿಮಿತ್ತಮಪಿ' ಎಂಬುದರ ಅಭಿಪ್ರಾಯ ಹೀಗಿದೆ - ಹಿಂದಿನ ಅಧಿಕರಣದಲ್ಲಿ 'ಸ್ವಾತಂತ್ರ್ಯ' ಎಂಬ ಒಂದೇ ಪ್ರವೃತ್ತಿನಿಮಿತ್ತದಿಂದ 'ಅವರ', 'ದುಃಖೀ', 'ಬದ್ಧಃ' ಇತ್ಯಾದಿ ಶಬ್ದಗಳ ಸಮನ್ವಯವನ್ನು ಮಾಡಲಾಯಿತು. ಆದರೆ ಈ ಅಧಿಕರಣದಲ್ಲಿ ಶಬ್ದಕ್ಕೆ ಯಾವುದೇ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿದರೂ ಅಂತಹ ಪ್ರವೃತ್ತಿನಿಮಿತ್ತಗಳು ಪರಮಾತ್ಮನ ಅಧೀನವಾಗಿರುವುದರಿಂದ ಎಲ್ಲಾ ಬಗೆಯ ಶಬ್ದಗಳನ್ನೂ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದ ಸೋಪಾನಾರೋಹಣಕ್ರಮದಿಂದ ಮೊದಲು ಏಕರೂಪವಿಚಾರವನ್ನು ಮುಗಿಸಿ, ಅನಂತರ ಅವಸರಪ್ರಾಪ್ತವಾದ ದ್ವಿರೂಪವಿಚಾರವನ್ನು ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಅವಸರಸಂಗತಿ ಇರುತ್ತದೆ. ಅಥವಾ ಸೋಪಾನಾರೋಹಣ-ಕ್ರಮರೂಪವಾದ ಸಂಗತಿಯನ್ನೂ ಕೂಡ ಇಲ್ಲಿ ತಿಳಿಯಬಹುದು.

**प्रकाशः** –"तज्ज्योतिरादिशब्दवाच्यं विषयः" इत्यादिविषयसंशयटीकां व्यनक्ति – **अत्रेति** ।। "वसन्ते वसन्ते ज्योतिषा" इत्यादिकर्मकाण्डादिस्थज्योतिरादि-शब्दानामित्यर्थः ।

'ತಜ್ಜ್ಯೋತಿರಾದಿಶಬ್ದವಾಚ್ಯಂ ವಿಷಯಃ' ಇತ್ಯಾದಿಯಾದ ವಿಷಯ ಹಾಗೂ ಸಂಶಯಗಳನ್ನು ನಿರೂಪಣೆ ಮಾಡುವ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ವಾಕ್ಯದಿಂದ. 'ಅತ್ರ' ಎಂದರೆ 'ವಸಂತೇ ವಸಂತೇ ಜ್ಯೋತಿಷಾ' ಇತ್ಯಾದಿಯಾಗಿ ಕರ್ಮಕಾಂಡದಲ್ಲಿರುವ 'ಜ್ಯೋತಿರಾದಿ' ಶಬ್ದಗಳು ಈ ಅಧಿಕರಣದ ವಿಷಯವಾಗಿವೆಯೆಂದರ್ಥ.

**प्रकाशः** – अत्र वसन्तादीति वक्तव्ये ज्योतिरादीत्युक्तिस्सूत्रानुसारात् । तत्र तु गतिर्वक्ष्यते ।

ಗ್ರಂಥದಲ್ಲಿ 'ವಸಂತಾದಿ' ಎಂದು ಹೇಳಬಹುದಿತ್ತಲ್ಲವೇ? 'ಜ್ಯೋತಿರಾದಿ' ಎಂದು ಏಕೆ ಹೇಳಿದರು? ಎಂದರೆ ಸೂತ್ರದಲ್ಲಿ 'ಜ್ಯೋತಿರಾದಿ' ಶಬ್ದಗಳನ್ನು ವಿವಕ್ಷಿಸಿದ್ದರಿಂದ ಅದಕ್ಕನುಗುಣವಾಗಿ ಗ್ರಂಥಕಾರರೂ ಕೂಡ 'ಜ್ಯೋತಿರಾದಿ' ಎಂದೇ ಹೇಳಿರುತ್ತಾರೆ. ಸೂತ್ರಕಾರರೇಕೆ 'ಜ್ಯೋತಿರಾದಿ' ಶಬ್ದವನ್ನು ಪ್ರಯೋಗಿಸಿದ್ದಾರೆ? ಎಂಬ ಪ್ರಶ್ನೆಗೆ ನಾವು ಮುಂದೆ ಉತ್ತರಿಸುತ್ತೇವೆ.

**प्रकाशः** – युक्ताचैवमेवोक्तिः । नहि वसन्तादिवाक्यमेवात्र विषयः । किन्तु ब्राह्मणोपनिषन्मन्त्ररूपसकलवेदराशिगतसर्वशब्दानामेवात्र चिन्त्यत्वात् तत्र कर्मवाचितया प्राधान्यात् प्रबलबाधकोपेततयाऽशक्यब्रह्मपरत्वाच्चस्यान्योपलक्षणत्वाज्ज्योतिष एवादितो ग्रहणम् । समन्वयः शक्तितात्पर्यावधारणम् ।

ಮತ್ತು ಜ್ಯೋತಿಶಬ್ದವನ್ನೇ ಮುಖ್ಯವಾಗಿಟ್ಟುಕೊಂಡು ಸಮನ್ವಯ ಮಾಡುವುದು ಸೂಕ್ತ. ಏಕೆಂದರೆ ಈ ಅಧಿಕರಣದಲ್ಲಿ ವಸಂತಾದಿ ವಾಕ್ಯಗಳಷ್ಟೇ ವಿಷಯವಲ್ಲ. ಬ್ರಾಹ್ಮಣ, ಉಪನಿಷತ್ತು ಮಂತ್ರರೂಪವಾದ ವೇದರಾಶಿಯಲ್ಲಿರುವ ಸಕಲಶಬ್ದಗಳ ಸಮನ್ವಯವೂ ಕೂಡ ಇಲ್ಲಿ ವಿಷಯವಾಗಿದೆ. ಆದರೆ ಈ ಎಲ್ಲಾ ವೇದರಾಶಿಯಲ್ಲಿ ಕರ್ಮವಾಚಕವಾದ ಶ್ರುತಿಗಳು ಪ್ರಧಾನವಾದ್ದರಿಂದ ಇವುಗಳು ಶ್ರೀಹರಿಯನ್ನು ಪ್ರತಿಪಾದನೆ ಮಾಡುವುದಿಲ್ಲ ಎಂಬ ಪ್ರಬಲವಾದ ಆಕ್ಷೇಪವಿದೆ. ಆದ್ದರಿಂದ ಅದನ್ನೇ ಮೊದಲು ಕಂಠತಃ ಸಮನ್ವಯ ಮಾಡಿ, ಉಳಿದವುಗಳನ್ನು ಉಪಲಕ್ಷಣಯಾ ಸಮನ್ವಯ ಮಾಡುತ್ತಿದ್ದಾರೆ. ಆದ್ದರಿಂದ 'ಜ್ಯೋತಿಷಃ' ಎಂದು ಪ್ರಾರಂಭದಲ್ಲಿ ಹೇಳಿದ್ದು ಸೂಕ್ತವಾಗಿದೆ.

**प्रकाशः** – कल्पनेति सूत्रोपयुक्तपूर्वोत्तरकोटिचिन्ताद्वयमाह – **तदर्थमिति** ।। उपक्रमात्त्वित्यंशसूचितो योगोऽवयवार्थानुगम इत्यर्थः ।

'ಕಲ್ಪನೋಪದೇಶಾಚ್ಚ' ಇತ್ಯಾದಿ ಸೂತ್ರಕ್ಕೆ ಉಪಯುಕ್ತವಾದ ಪೂರ್ವಪಕ್ಷ ಹಾಗೂ ಸಿದ್ಧಾಂತಕೋಟಿಗಳ ಸಂಶಯದ್ವಯವನ್ನು 'ತದರ್ಥಮ್' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. ಬ್ರಹ್ಮನಲ್ಲಿ ಶಬ್ದಗಳು ಯೌಗಿಕವಾಗಿ ಯುಕ್ತವಾಗುತ್ತವೋ ಇಲ್ಲವೋ? ಎಂಬುದಾಗಿ, 'ಉಪಕ್ರಮಾತ್ತು' ಎಂಬ ಸೂತ್ರದ ಅಂಶದಿಂದ ಸೂಚಿತವಾದದ್ದು, ಯೌಗಿಕವಾದ ಅವಯವಾರ್ಥದ ಅನುಗಮ ಆಗುತ್ತದೋ, ಇಲ್ಲವೋ ಎಂಬುದು.

**प्रकाशः** – अत्र लक्षणया सर्वशब्दानां समन्वयस्य निरस्तत्वेऽपि योगरूढिसाधारण्येन मुख्यवृत्तिर्युक्ता न वेत्येव चिन्तनीयम् । ब्रह्मणि योगायोगेपि रूढ्या समन्वयोपपत्तेः, नतु विशिष्य योग इति ।

ಪ್ರಶ್ನೆ - ಲಕ್ಷಣಾವೃತ್ತಿಯಿಂದ ಸಕಲಶಬ್ದಗಳು ಬ್ರಹ್ಮನಲ್ಲೇ ಸಮನ್ವಯವಾಗುತ್ತವೆಂಬ ಅದ್ವೈತವಾದವನ್ನು ಈಗಾಗಲೇ ನಿರಾಕರಿಸಿದ್ದಾಗಿದೆ. ಹೀಗಿರುವಾಗ ಗ್ರಂಥಕಾರರು ಯೋಗ ಹಾಗೂ ರೂಢಿಗಳಲ್ಲಿ ಸಾಧಾರಣವಾದ ಮುಖ್ಯವೃತ್ತಿಯನ್ನಷ್ಟೇ ವಿವಕ್ಷಿಸಿ ಇಂತಹ ಮುಖ್ಯವೃತ್ತಿಯು ಬ್ರಹ್ಮನಲ್ಲಿ ಯುಕ್ತವಾಗುತ್ತದೋ, ಇಲ್ಲವೋ?

ಎಂದಷ್ಟೇ ಸಂಶಯವನ್ನು ತೋರಿಸಿದ್ದರೆ ಸಾಕಾಗುತ್ತಿತ್ತು. ಏಕೆಂದರೆ ಬ್ರಹ್ಮನಲ್ಲಿ ಯೋಗವು ಯುಕ್ತವಾಗದಿದ್ದರೂ ರೂಢಿಯಿಂದ ಸಮನ್ವಯವನ್ನು ಹೇಳಬಹುದು. ಹೀಗಿರುವಾಗ ಪ್ರತ್ಯೇಕವಾಗಿ ಸರ್ವಶಬ್ದಗಳ ಯೋಗವು ಬ್ರಹ್ಮನಲ್ಲಿ ಯುಕ್ತವಾಗುತ್ತದೋ, ಇಲ್ಲವೋ? ಎಂಬ ಸಂಶಯವನ್ನು ಏಕೆ ತೋರಿಸಿದರು ?

**प्रकाशः** – तथापि ब्रह्मण्यज्ञरूढेरभावात् गुणपूर्त्यसिद्ध्या रूढ्या समन्वयस्य सिद्धान्त्यनभिमतत्वाच्च, विद्वद्रूढेश्च ''सा योगादेव लभ्यते'' इत्युक्त्या योगमूलत्वाच्च ''उपक्रमात्तु'' इत्यभिमतयोग एव चिन्तितः ।

ಉತ್ತರ - ಬ್ರಹ್ಮನಲ್ಲಿ ಅಜ್ಞರೂಢಿಯಂತೂ ಸರ್ವಥಾ ಇರುವುದಿಲ್ಲ. ಇಂತಹ ಅಜ್ಞರೂಢಿಯಿಂದ ಗುಣಪೂರ್ಣತ್ವವೆಂಬ ನಮ್ಮ ಉದ್ದೇಶವು ಸಿದ್ಧಿಸುವುದೂ ಇಲ್ಲ. ಮತ್ತು ರೂಢಿಯಿಂದ ಶಬ್ದಗಳ ಸಮನ್ವಯವು ಸಿದ್ಧಾಂತಿಗಳಾದ ನಮಗೆ ಅಭಿಮತವೂ ಆಗಿಲ್ಲ. ಹಾಗಾಗಿ ವಿದ್ವದ್ರೂಢಿಯಿಂದಷ್ಟೇ ಸಮನ್ವಯವನ್ನು ತಿಳಿಯಬೇಕು. ಆ ವಿದ್ವದ್ರೂಢಿಯಾದರೂ ಕೂಡ 'ಸಾ ಯೋಗಾದೇವ ಲಭ್ಯತೇ' ಎಂಬ ಮಾತಿನಂತೆ ಯೋಗವಿಲ್ಲದೇ ಯುಕ್ತವಾಗುವುದಿಲ್ಲ. ಆದ್ದರಿಂದ 'ಉಪಕ್ರಮಾತ್ತು' ಎಂಬ ಸೂತ್ರಾಂಶದಿಂದ ಅಭಿಮತವಾದ ಯೋಗವನ್ನೇ ಗ್ರಂಥಕಾರರು ಸಂಶಯಕೋಟಿಯಲ್ಲಿ ಸೇರಿಸಿದ್ದಾರೆ.

**प्रकाशः** – समुदायस्य यौगिकपदसमुदायस्य, ज्योतिष्टोमादिपदस्येत्यर्थः ।

'ಸಮುದಾಯಸ್ಯ' ಎಂದರೆ 'ಜ್ಯೋತಿಷ್ಟೋಮಾದಿ ಯೌಗಿಕಪದದ ಸಮುದಾಯ' ಎಂದರ್ಥ. ಯಾವಾಗ 'ಜ್ಯೋತಿ' ಹಾಗೂ 'ಷ್ಟೋಮ' ಪದಗಳು ವಿಷ್ಣುಪರವಾಗುತ್ತವೋ, ಆವಾಗ 'ಜ್ಯೋತಿಷ್ಟೋಮ' ಎಂಬ ಸಂಪೂರ್ಣಪದವು ವಿಷ್ಣುಪರವಾಗುವುದಿಲ್ಲ ಎಂದಭಿಪ್ರಾಯ.

**प्रकाशः** – यदि न युक्ता तदाऽवयवानां ज्योतिरादिशब्दानां यौगिकत्वायोगेन न सर्वसमन्वयो युक्तः ।

ಪೂರ್ವಪಕ್ಷದ ಫಲಫಲಿಭಾವ ಹೀಗಿದೆ - 'ಜ್ಯೋತಿಷ್ಟೋಮ' ಇತ್ಯಾದಿ ಪದಗಳಲ್ಲಿ ಜ್ಯೋತಿ ಮೊದಲಾದ ಅವಯವಗಳಿಗೆ ಭಗವತ್‌ಪರತ್ವವನ್ನು ಹೇಳಿದರೆ ಸಮಸ್ತ ಪದಕ್ಕೆ ಬ್ರಹ್ಮಪರತ್ವವನ್ನು ಹೇಳಿದಂತಾಗುವುದಿಲ್ಲ. ಒಂದುವೇಳೆ ಸಮುದಾಯಕ್ಕೆ ಬ್ರಹ್ಮಪರತ್ವವನ್ನು ಹೇಳಿದರೆ ಅವಯವಗಳಿಗೆ ಬ್ರಹ್ಮಪರತ್ವವನ್ನು ಹೇಳಿದಂತಾಗುವುದಿಲ್ಲ. ಆವಾಗ ಸರ್ವಶಬ್ದಗಳಿಗೆ ಬ್ರಹ್ಮನಲ್ಲಿ ಯೋಗವಿದೆಯೆಂಬ ಸಿದ್ಧಾಂತಕ್ಕೆ ಹಾನಿ ಬರುತ್ತದೆ. ಆದ್ದರಿಂದ ಜ್ಯೋತಿರಾದಿ ಶಬ್ದಗಳಿಂದ ಸರ್ವಸಮನ್ವಯವನ್ನು ಮಾಡಲು ಸಾಧ್ಯವಾಗುವುದಿಲ್ಲ.

**प्रकाशः** – यदितु युक्ता तदाऽवयवानां यौगिकत्वसम्भवेन तन्मूलविद्वद्रूढेरपि सम्भवेन प्रबलमहायोगेनैवाज्ञरूढिबाधायुक्तोज्योतिरादिसर्वशब्दसमन्वय इति स्पष्टः फलफलिभावो वक्ष्यमाणपूर्वोत्तरपक्षयोरिति भावः ।

ಪರಿಪೂರ್ಣಚಂದ್ರಿಕಾ

ಸಿದ್ಧಾಂತದ ಫಲಫಲಿಭಾವ ಹೀಗಿದೆ - ಒಂದುವೇಳೆ ಯೌಗಿಕಶಬ್ದವೆನಿಸಿದ ಜ್ಯೋತಿಷ್ಟೋಮಾದಿ ಪದಗಳ ಅವಯವವು ಬ್ರಹ್ಮನಲ್ಲಿ ಸಮನ್ವಯವನ್ನು ಹೊಂದಿದರೂ ಸಮುದಾಯವು ಬ್ರಹ್ಮನಲ್ಲಿ ಸಮನ್ವಯ ಹೊಂದಲು ಯಾವ ತೊಂದರೆಯೂ ಇಲ್ಲ. ಹೀಗೆ ಅವಯವಗಳಿಗೂ ಹಾಗೂ ಸಮುದಾಯಕ್ಕೂ ಯೌಗಿಕತ್ವವು ಯುಕ್ತವಾಗುವುದರಿಂದ ತನ್ಮೂಲಕವಾದ ವಿದ್ವದ್ರೂಢಿಯು ಭಗವಂತನಲ್ಲಿ ಹೇಳಿದಂತಾಗುತ್ತದೆ. ಹೀಗೆ ಪ್ರಬಲವಾದ ಮಹಾಯೋಗದಿಂದಲೇ ಅಜ್ಞರೂಢಿಯನ್ನು ಬಾಧಿಸಿ ಜ್ಯೋತಿರಾದಿ ಸಕಲಶಬ್ದಗಳ ಸಮನ್ವಯವನ್ನು ಭಗವಂತನಲ್ಲಿ ಮಾಡಬಹುದು. ಹೀಗೆ ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳ ಫಲಫಲಿಭಾವವು ಸ್ಪಷ್ಟವಾಗಿರುತ್ತದೆ.

**ಪ್ರಕಾಶಃ** – यद्यप्यवयवार्थानुगमरूपयोगायोगेऽपि तदधीनत्वहेतुना शब्दवृत्तावपि समन्वयो युक्तः ।

ಪ್ರಶ್ನೆ - ಹೀಗೆ ಅವಯವಾರ್ಥದ ಅನುಗಮವೆಂಬ ಯೋಗಾರ್ಥವನ್ನು ಒಪ್ಪುವ ಅವಶ್ಯಕತೆಯಿಲ್ಲ. ಏಕೆಂದರೆ ವಸಂತಕಾಲವಾಗಲೀ, ಜ್ಯೋತಿಷ್ಟೋಮಾದಿ ಯಾಗಗಳಾಗಲೀ, ಎಲ್ಲವೂ ಭಗವಂತನ ಅಧೀನವಾಗಿರುವುದರಿಂದ 'ತದಧೀನತ್ವವೆಂಬ ಪ್ರವೃತ್ತಿನಿಮಿತ್ತದಿಂದಲೇ ಸಕಲಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡಲು ಬರುತ್ತದೆ. ಹೀಗಿರುವಾಗ ಪ್ರತ್ಯೇಕವಾಗಿ ಅವಯವಗಳ ಶಕ್ತಿಯನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಅವಶ್ಯಕತೆ ಏನಿದೆ ?

**ಪ್ರಕಾಶಃ** – तथापि वक्ष्यमाणदिशा स्वातन्त्र्यमात्रस्य सिद्धान्त्यनभिमतत्वात् तदंशस्य सिद्धत्वेनाचिन्तनीयत्वाद्योग एवोपात्तः ।

ಉತ್ತರ - ಆದರೂ ಸಹ ಮುಂದೆ ಹೇಳುವಂತೆ ಕೇವಲ ಸ್ವಾತಂತ್ರ್ಯವೆಂಬ ಒಂದೇ ಗುಣದ ಸಾಧನೆಯು ಸಿದ್ಧಾಂತಿಗೆ ಅಭಿಮತವಲ್ಲ. ಹೊರತಾಗಿ ಇನ್ನೂ ಅನೇಕ ಗುಣಗಳು ಭಗವಂತನಲ್ಲಿ ಸಿದ್ಧವಾಗಬೇಕಾಗಿದೆ. ಆದ್ದರಿಂದ ಸ್ವಾತಂತ್ರ್ಯವೆಂಬ ಗುಣವು ಈಗಾಗಲೇ ಹಿಂದಿನ ಅಧಿಕರಣದಿಂದ ಶ್ರೀಹರಿಯಲ್ಲಿ ಸಿದ್ಧವಾದ್ದರಿಂದ ಅದರ ಬಗ್ಗೆ ಪುನಃ ಚಿಂತನೆ ಮಾಡುವ ಅವಶ್ಯಕತೆಯಿರುವುದಿಲ್ಲ. ಆದ್ದರಿಂದ ಪ್ರಕೃತ ಈ ಅಧಿಕರಣದಲ್ಲಿ ಪ್ರತ್ಯೇಕವಾದ ಅವಯವಗಳೂ ಕೂಡ ವಿಷ್ಣುಪರವಾಗಿವೆಯೆಂದು ಸಮನ್ವಯವನ್ನು ಮಾಡಲು ಹೊರಟಿದ್ದಾರೆ. ಇದರಿಂದ ಸ್ವಾತಂತ್ರ್ಯ ಎಂಬ ಗುಣವಷ್ಟೇ ಸಿದ್ಧವಾಗದೇ, ಇನ್ನೂ ಅನೇಕ ಗುಣಗಳು ಸಿದ್ಧವಾಗುತ್ತವೆ.




ಈ ಅಧಿಕರಣದಲ್ಲಿ ವರ್ಣ, ಪದ ಮೊದಲಾದ ಸಕಲವಿಧವಾದ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡಲು ಹೊರಟಿದ್ದಾರೆ. 'ತಾವ ಏತಾಃ ಸರ್ವಾ ಋಚಃ ಸರ್ವೇ ವೇದಾಃ, ಸರ್ವೇ ಘೋಷಾಃ' ಎಂಬುದಾಗಿ ಐದನೆಯ ಆರಣ್ಯಕವು ಭಗವಂತನನ್ನು ಸಕಲ ಶಬ್ದಪ್ರತಿಪಾದ್ಯನೆಂದು ಅವಶ್ಯವಾಗಿ ಮುಮುಕ್ಷುಗಳು ತಿಳಿಯಬೇಕೆಂದು ಘೋಷಣೆ ಮಾಡಿದೆ. ಆದ್ದರಿಂದ ಪ್ರತಿಯೊಂದು ವರ್ಣಗಳ, ಪ್ರತಿಯೊಂದು ಪದಗಳ ಸಮನ್ವಯವು ಅತ್ಯಂತ ಅನಿವಾರ್ಯ.

ಜ್ಯೋತಿರುಪಕ್ರಮಾಧಿಕರಣ (1-4-2)

ಹಿಂದಿನ ಅಧಿಕರಣದಲ್ಲಿ ದೇವತಾ ವಾಚಕವಾದ ಪದಗಳ ಸಮನ್ವಯವನ್ನು ಹಾಗೂ 'ಇಂದ್ರಿಯೇಭ್ಯಃ' ಇತ್ಯಾದಿ ಪದಗಳಲ್ಲಿರುವ ಪಂಚಮ್ಯಾದಿ ವಿಭಕ್ತಿಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಮಾಡಲಾಯಿತು. ಪ್ರಕೃತ ಈ ಅಧಿಕರಣದಲ್ಲಿ ಕರ್ಮವನ್ನು ಪ್ರತಿಪಾದನೆ ಮಾಡಲು ಹೊರಟಿರುವ ಕರ್ಮಕಾಂಡವೆನಿಸಿದ ಯಜುರ್ವೇದದ ಮಂತ್ರಗಳನ್ನೆಲ್ಲಾ ಸಮನ್ವಯ ಮಾಡಲಾಗಿದೆ. ಮತ್ತು ಪಂಚಮ್ಯಾದಿ ವಿಭಕ್ತಿಗಳ ಸಮನ್ವಯವನ್ನೂ ಕೂಡ ಮಾಡಲಾಗಿದೆ. ಅಷ್ಟೇ ಅಲ್ಲದೇ ಆಯಾ ಕರ್ಮವಾಚಕವಾದ ಜ್ಯೋತಿಷ್ಟೋಮಾದಿ ಸಮುದಾಯರೂಪವಾದ ಪದಗಳ ಅವಯವವೆನಿಸಿದ 'ಜ್ಯೋತಿಃ' 'ಸ್ತೋಮ' ಮೊದಲಾದ ಪದಗಳ ಸಮನ್ವಯವನ್ನೂ ಕೂಡ ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. ಸಿದ್ಧಸ್ವರೂಪವಾದ ದೇವತಾವಾಚಕ ಪದಗಳ ಸಮನ್ವಯದ ಅನಂತರ ಸಾಧ್ಯಸ್ವರೂಪವಾದ ಕರ್ಮದ ಸಮನ್ವಯವು ಅತ್ಯಂತ ಪ್ರಸ್ತುತವಾಗುತ್ತದೆ. ಹಿಂದಿನ ಅಧಿಕರಣದಲ್ಲಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದ 'ದುಃಖೀ', 'ಬದ್ಧಃ', 'ಅವರಃ' ಮೊದಲಾದ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯವನ್ನು ಮಾಡಿದ್ದಾಯಿತು. ಇದರಿಂದ ಪರಮಾತ್ಮನಲ್ಲಿ ಸ್ವಾತಂತ್ರ್ಯವೆಂಬ ಗುಣವಷ್ಟೇ ಸಿದ್ಧವಾಗುತ್ತದೆ. ಆದರೆ ಈ ಅಧಿಕರಣದಲ್ಲಿ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸದೇ ಪ್ರತ್ಯೇಕವಾಗಿ ಒಂದೊಂದು ಪದಗಳ ಪ್ರವೃತ್ತಿನಿಮಿತ್ತವೂ ಕೂಡ ಪರಮಾತ್ಮನಲ್ಲೇ ಬರುತ್ತಿದೆಯೆಂದು ಹೇಳುತ್ತಿರುವುದರಿಂದ ಅನೇಕ ಪದಗಳ ಸಮನ್ವಯವೂ ಸಿದ್ಧವಾಗುತ್ತದೆ.

'ಜ್ಯೋತಿಷ್ಟೋಮ' ಪದದಲ್ಲಿರುವ 'ಜ್ಯೋತಿಃ' 'ಸ್ತೋಮ' ಮೊದಲಾದ ಅವಯವಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಾದರೆ 'ಜ್ಯೋತಿಷ್ಟೋಮ' ಎಂಬ ಸಮುದಾಯವು ವಿಷ್ಣುವಿನಲ್ಲಿ ಸಿದ್ಧವಾಗುವುದಿಲ್ಲ. ಒಂದು ವೇಳೆ 'ಜ್ಯೋತಿಷ್ಟೋಮ' ಎಂಬ ಸಮಗ್ರ ಪದವನ್ನು ಸಮನ್ವಯ ಮಾಡುವುದಾದರೆ ಅದರ ಅವಯವಗಳು ವಿಷ್ಣುವನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಹೀಗೆ ಸರ್ವಸಮನ್ವಯವು ಅಸಾಧ್ಯವಾಗುತ್ತದೆಂಬುದು ಪೂರ್ವಪಕ್ಷಿಗಳ ಅಭಿಪ್ರಾಯ.

'ಜ್ಯೋತಿಃ' 'ಸ್ತೋಮ' ಮೊದಲಾದ ಅವಯವಗಳು ವಿಷ್ಣುವನ್ನು ಪ್ರತಿಪಾದನೆ ಮಾಡಿದಂತೆ 'ಜ್ಯೋತಿಷ್ಟೋಮ' ಮೊದಲಾದ ಸಮುದಾಯಗಳೂ ಕೂಡ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. ಈ ಎಲ್ಲಾ ಪದಗಳ ಪ್ರವೃತ್ತಿನಿಮಿತ್ತಗಳೂ ಭಿನ್ನ-ಭಿನ್ನವೇ ಆಗಿವೆ. ಈ ವಿಷಯದಲ್ಲಿ ವಿದ್ವದ್ರೂಢಿಯು ಪ್ರಮಾಣವಾಗಿರುವುದರಿಂದ ಪ್ರಬಲವಾದ ಮಹಾಯೋಗವೇ ಅಜ್ಞರೂಢಿಯನ್ನು ಬಾಧಿಸುತ್ತದೆ. ಹಾಗಾಗಿ 'ಜ್ಯೋತಿರಾದಿ' ಸಕಲ ಶಬ್ದಗಳ ಸಮನ್ವಯವು ಮಹಾವಿಷ್ಣುವಿನಲ್ಲಿ ಸರ್ವಥಾ ಸಿದ್ಧವಾಗುತ್ತದೆಂಬುದು ಸಿದ್ಧಾಂತಿಗಳ ಅಭಿಪ್ರಾಯ.

/////////////////////////////////////////////

ಪರಿಪೂರ್ಣಚಂದ್ರಿಕಾ

## ಸರ್ವಶಬ್ದಸಮನ್ವಯವು ಸಾಧ್ಯವಿಲ್ಲವೆಂದು ಪೂರ್ವಪಕ್ಷ

### तात्पर्यचन्द्रिका

**पूर्वपक्षस्तु – 'सर्वगुणपूर्तये सर्वशब्दानां ब्रह्मणि समन्वयः' इति यदुक्तं समन्वयसूत्रे, तन्न ।**

ಅನುವಾದ - ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - 'ಬ್ರಹ್ಮನು ಸಕಲಗುಣ ಪರಿಪೂರ್ಣನಾಗಿದ್ದಾನೆ ಎಂಬ ಪ್ರಮೇಯದ ಸಿದ್ಧಿಗೋಸ್ಕರ ಸಕಲಶಬ್ದಗಳ ಸಮನ್ವಯವು ಅತ್ಯಂತ ಅನಿವಾರ್ಯ'. ಹೀಗೆ ಸಮನ್ವಯಾಧಿಕರಣದಲ್ಲಿ ಸಾಧಿಸಿದಿರಿ. ಇದು ಸರಿಯಲ್ಲ.

**''वसन्ते वसन्ते ज्योतिषा यजेत'' इति वाक्यस्थानां ज्योतिरादिशब्दानां ज्योतिष्टोमादिकर्मस्वेव प्रसिद्धेः ।**

ಏಕೆಂದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಕರ್ಮಪರವಾದ ವಾಕ್ಯಗಳಲ್ಲಿರುವ 'ಜ್ಯೋತಿ' ಮೊದಲಾದ ಶಬ್ದಗಳೆಲ್ಲವೂ ಜ್ಯೋತಿಷ್ಟೋಮ ಮೊದಲಾದ ಕರ್ಮಗಳನ್ನೇ ಪ್ರತಿಪಾದನೆ ಮಾಡುತ್ತಿವೆ. ಹೊರತು, ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿಲ್ಲ.

**प्रसिद्धित्यागेन ब्रह्मपरत्वे चान्यस्य कर्म-तदङ्ग-तत्क्रम-देश-काल-अधिकार्यादि-प्रापकस्याभावेन नियतकर्मानुष्ठानं न सिध्येत् ।**

ಒಂದು ವೇಳೆ 'ಜ್ಯೋತಿ' ಮೊದಲಾದ ಶಬ್ದಗಳು ಪ್ರಸಿದ್ಧವಾದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಪ್ರತಿಪಾದನೆ ಮಾಡದೇ ಬ್ರಹ್ಮನನ್ನೇ ಪ್ರತಿಪಾದನೆ ಮಾಡುವುದಾದಲ್ಲಿ ಕರ್ಮ, ಕರ್ಮಗಳ ಅಂಗ, ಕರ್ಮಗಳಲ್ಲಿ ತಿಳಿಯಬೇಕಾದ ಕ್ರಮಗಳು. ಉಚಿತವಾದ ದೇಶ, ಉಚಿತವಾದ ಕಾಲ, ಯೋಗ್ಯವಾದ ಅಧಿಕಾರಿ ಇವುಗಳನ್ನೆಲ್ಲಾ ತಿಳಿಸುವಂತಹ ಬೇರೆ ಯಾವುದೇ ವಾಕ್ಯಗಳು ಇಲ್ಲದಂತಾಗುತ್ತವೆ. ಆವಾಗ ನಿಯತವಾದ ಕರ್ಮಾನುಷ್ಠಾನವೇ ಸಿದ್ಧವಾಗದಿರುವ ಪರಿಸ್ಥಿತಿ ಬರುತ್ತದೆ.

**नच ''शरीररूपकविन्यस्तगृहीतेः'' इति न्यायेनाव्यक्तादिशब्दानां ब्रह्मसम्बन्धात् प्रधानादाविव ज्योतिरादिशब्दानामपि कर्मादौ वृत्तेः कर्मसिद्धिः इति वाच्यम् ।**

ಪ್ರಶ್ನೆ - ಈಗಾಗಲೇ ಹಿಂದಿನ ಅಧಿಕರಣದ 'ಶರೀರರೂಪಕವಿನ್ಯಸ್ತಗೃಹೀತೇಃ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಯಾವರೀತಿಯಾಗಿ ಅವ್ಯಕ್ತಾದಿ ಶಬ್ದಗಳು ಬ್ರಹ್ಮನ ಸಂಬಂಧದಿಂದ ಪ್ರಕೃತ್ಯಾದಿಗಳನ್ನು ಪ್ರತಿಪಾದನೆ ಮಾಡಿವೆಯೋ, ಅದರಂತೆ ಜ್ಯೋತಿರಾದಿ ಶಬ್ದಗಳೂ ಸಹ ಬ್ರಹ್ಮನ ಸಂಬಂಧದಿಂದ ಕರ್ಮಗಳನ್ನು ಪ್ರತಿಪಾದನೆ ಮಾಡುತ್ತವೆಂದು ತಿಳಿದು ನಿಯತವಾದ ಕರ್ಮಾನುಷ್ಠಾನವು ಏಕೆ ಸಿದ್ಧವಾಗಬಾರದು?

**एवं हि, ब्रह्मणोऽन्यत्र शब्दानां लक्षणैव स्यात् । तच्चानिष्टम् ।**

ಸಮಾಧಾನ - ಇದು ಸರಿಯಲ್ಲ. ಹಾಗಾದರೆ ಶಬ್ದಗಳೆಲ್ಲವೂ ಬ್ರಹ್ಮನನ್ನು ಬಿಟ್ಟು ಇತರ ಪದಾರ್ಥಗಳಲ್ಲಿ ಲಕ್ಷಣಾವೃತ್ತಿಯಿಂದ ಇರುತ್ತವೆಂದೇ ಒಪ್ಪಬೇಕಾಗುತ್ತದೆ. ಆದರೆ ಇದು ಸಿದ್ಧಾಂತಿಗಳಿಗೆ ಇಷ್ಟವಾದ ವಿಚಾರವಲ್ಲ.

**नापि तदधीनत्वन्यायेन ब्रह्मणि वृत्तिः । सर्वशब्दसमन्वयेऽपि सर्वनियन्तृत्वादन्यस्य गुणस्यासिद्धेः ।**

ಇನ್ನು ತದಧೀನತ್ವನ್ಯಾಯದಿಂದ ಈ ಎಲ್ಲ ಶಬ್ದಗಳೂ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳುವುದೂ ಕೂಡ ಸರಿಯಲ್ಲ. ಏಕೆಂದರೆ ತದಧೀನತ್ವನಾಯದಿಂದ ಸಕಲಶಬ್ದಗಳ ಸಮನ್ವಯವನ್ನು ಮಾಡುವುದರಿಂದ ಪರಮಾತ್ಮನಲ್ಲಿ 'ಸರ್ವನಿಯಂತೃತ್ವ' ಎಂಬ ಒಂದೇ ಗುಣವು ಸಿದ್ಧವಾಗುತ್ತದೆ ಹೊರತು, ಇತರ ಯಾವುದೇ ಗುಣಗಳು ಸಿದ್ಧವಾಗುವುದಿಲ್ಲ. ಬೇರೆ ಬೇರೆ ಗುಣಗಳು ಸಿದ್ಧವಾಗಬೇಕೆಂದರೆ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವನ್ನು ಭಗವಂತನಲ್ಲಿ ಸಮನ್ವಯ ಮಾಡಲೇಬೇಕು.

**विध्यादीनां नियन्ताऽयं पूज्यः प्राप्यश्च तद्वताम् ।**
**इत्यादिश्रुतिरूपेण विध्यादिश्रुतयोऽपि च ।**
**हरिं वदन्ति सर्वेषां तन्नामत्वादथापि वा ॥**

ಜ್ಯೋತಿಷ್ಟೋಮಾದಿ ವಿಧಿಗಳಿಗೆ ಶ್ರೀಹರಿಯು ನಿಯಂತೃ ಆಗಿದ್ದಾನೆ. ಮತ್ತು ಪೂಜ್ಯನೂ, ಕರ್ಮಗಳಿಂದ ಪ್ರಾಪ್ಯನೂ ಆಗಿರುತ್ತಾನೆ. ಇಂತಹ ವಿಧಿಯನ್ನು ಪ್ರತಿಪಾದನೆ ಮಾಡುವ ಶ್ರುತಿಗಳೆಲ್ಲವೂ ಶ್ರೀಹರಿಯಲ್ಲಿಯೇ ತಾತ್ಪರ್ಯವುಳ್ಳವುಗಳಾಗಿವೆ. ಅಥವಾ ಶ್ರುತಿಯಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ಹೆಸರೇ ಆಗಿವೆ.

**इत्यादिस्मृत्यनुसारेण सिद्धान्तिना तदधीनत्वे सत्येवेह योगस्यैव व्युत्पादयितव्यत्वाच्च ।**

ಮೇಲೆ ಉಲ್ಲೇಖಿಸಿದ ಶ್ರುತಿಪ್ರಮಾಣದಂತೆ ತದಧೀನತ್ವವೆಂಬ ಪ್ರವೃತ್ತಿನಿಮಿತ್ತಯಿರುವಾಗಲೇ, ಆಯಾ ಶಬ್ದಗಳ ಯೋಗವನ್ನೂ ಕೂಡ ಶ್ರೀಹರಿಯಲ್ಲಿ ಉಪಪಾದನೆ ಮಾಡಲೇಬೇಕು. ಕೇವಲ ತದಧೀನತ್ವ- ನ್ಯಾಯದಿಂದ ಸಮನ್ವಯ ಮಾಡಿದರೆ ಸಾಲದು.

**नापि ''जातमोतं हरौ यस्माज्ज्योति षः प्राणरूपतः'' इत्यनुव्याख्यानोक्तरीत्या योगवृत्त्या ब्रह्मणि पदसमन्वयः । कर्मणि रूढेर्बलवत्त्वात् ।**

'ಜಾತಮೋತಂ ಹರೌ ಯಸ್ಮಾಜ್ಜ್ಯೋತಿಃ ಷಃ ಪ್ರಾಣರೂಪತಃ' ಎಂಬ ಅನುವ್ಯಾಖ್ಯಾನದ ಮಾತಿನಂತೆ ಯೋಗವೃತ್ತಿಯಿಂದ ಬ್ರಹ್ಮನಲ್ಲಿ ಜ್ಯೋತಿರಾದಿಶಬ್ದಗಳ ಸಮನ್ವಯವನ್ನು ಮಾಡುವುದೂ ಕೂಡ ಸರಿಯಲ್ಲ. ಏಕೆಂದರೆ ಜ್ಯೋತಿಷ್ಟೋಮಾದಿ ಕರ್ಮಗಳಲ್ಲಿ ಜ್ಯೋತಿರಾದಿಶಬ್ದಗಳ ರೂಢಿಯಿದೆ. ಶ್ರೀಹರಿಯಲ್ಲಿ ಮಾಡುತ್ತಿರುವ ಯೋಗಕ್ಕಿಂತಲೂ ಕರ್ಮಾದಿಗಳಲ್ಲಿರುವ ರೂಢಿಯೇ ಪ್ರಬಲವಾಗಿರುತ್ತದೆ.

**किञ्च ज्योतिरित्यादिशब्दावयवानां 'जि' 'ओतिः' इत्यादीनामपि ब्रह्मपरत्वे समुदायस्य ब्रह्मणि वृत्तिर्न स्यात्; नहि पङ्कः पङ्कजशब्दार्थः ।**

ಮತ್ತು 'ಜ್ಯೋತಿಃ' ಎಂಬ ಶಬ್ದದಲ್ಲಿ 'ಜಿ' ಮತ್ತು ಓತಿಃ' ಎಂಬೆರೆಡು ಅವಯವಗಳಿವೆ. ಈ ಎರಡು ಅವಯವಗಳು ಬ್ರಹ್ಮಪರವಾದರೆ, 'ಜ್ಯೋತಿಃ' ಎಂಬ ಸಮುದಾಯವು ಬ್ರಹ್ಮನಲ್ಲಿ ಶಕ್ತವಾಗಲು ಸಾಧ್ಯವಿಲ್ಲ. ಯಾವುದು ಅವಯವಾರ್ಥವೋ, ಅದು ಸಮುದಾಯದ ಅರ್ಥವಾಗುವುದಿಲ್ಲವೆಂಬುದು ಲೋಕಸಿದ್ಧ ನಿಯಮ. 'ಪಂಕಜ' ಎಂಬ ಶಬ್ದದ ಅರ್ಥವೆನಿಸಿದ ಕಮಲವು ಪಂಕಜಶಬ್ದದ ಅವಯವವಾದ 'ಪಂಕ' ಎಂಬ ಪದದ ಅರ್ಥವಾಗಲು ಸಾಧ್ಯವಿಲ್ಲವಷ್ಟೇ.

**जगज्जनकत्वादिगुणश्च न सिध्येत् । अवयवसमुदाययोर्द्वयोरपि भगवन्नाममात्रत्वात्, अवयवानामन्यत्र प्रसिद्धत्वेनाब्रह्मपरत्वेतु सर्वसमन्वयासिद्धिः ।**

ಹೀಗೆ ಅವಯವ ಹಾಗೂ ಸಮುದಾಯಗಳೆರಡೂ ಬ್ರಹ್ಮಪರವಾದಲ್ಲಿ ಜಗಜ್ಜನಕತ್ವಾದಿಗುಣಗಳೂ ಕೂಡ ಸಿದ್ಧವಾಗದಿರಬೇಕಾದೀತು. ಏಕೆಂದರೆ ಅವಯವ ಹಾಗೂ ಸಮುದಾಯಗಳೆರಡೂ ಪರಮಾತ್ಮನ ಹೆಸರೇ ಆಗಿರುವುದರಿಂದ ಸಮಸ್ತಜಗತ್ತಿಗೆ ಕಾರಣನೆಂದು ಸಮರ್ಥಿಸಲು ಹೇಗೆ ಸಾಧ್ಯವಾಗುತ್ತದೆ? ಒಂದುವೇಳೆ ಅವಯವಗಳು ಅನ್ಯತ್ರಪ್ರಸಿದ್ಧವೆಂದು ಒಪ್ಪಿ ಬ್ರಹ್ಮಪರವಾಗದಿದ್ದರೆ, ನಿಮ್ಮ ಉದ್ದೇಶವಾಗಿರುವ ಸರ್ವಶಬ್ದ ಸಮನ್ವಯವು ಸಿದ್ಧವಾಗುವುದಿಲ್ಲ.

**समुदायस्यापि तत एवाब्रह्मपरत्वापातश्च । अमुख्यवृत्त्याऽन्यपरतेति तु निरस्तम् । तदुक्तमनुव्याख्याने – ''व्युत्पत्तेरप्यशक्यता'' इति ।।**

ಮತ್ತು ಯಾವಕಾರಣದಿಂದ ಅವಯವವು ಬ್ರಹ್ಮಪರವಾಗುವುದಿಲ್ಲವೋ, ಅದೇ ಕಾರಣದಿಂದಲೇ ಸಮುದಾಯವೂ ಕೂಡ ಬ್ರಹ್ಮಪರವಾಗುವುದಿಲ್ಲವೆಂದು ಆಕ್ಷೇಪ ಮಾಡುತ್ತೇವೆ. ಅಮುಖ್ಯವೃತ್ತಿಯಿಂದ ಅನ್ಯಪರವಾಗುತ್ತವೆಂಬುದನ್ನು ಈಗಾಗಲೇ ನಿರಾಕರಿಸಿದ್ದಾಗಿದೆ. ಇದನ್ನೇ 'ವ್ಯುತ್ಪತ್ತೇರಪ್ಯಶಕ್ಯತಾ' ಎಂಬ ಮಾತಿನಿಂದ ಸಂಗ್ರಹಿಸಿದ್ದಾರೆ.

**प्रकाशः –**

ननु कर्मकाण्डगतज्योतिरादिशब्दासमन्वयेऽपि प्रागुक्ते विरोधाभावात् व्यर्थेयं चिन्तेत्यतः, टीकोक्तं प्रयोजनं स्फोरयन् पूर्वपक्षटीकां व्यनक्ति – **सर्वगुणेति** ।।

ವಿವರಣೆ - ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - ಕರ್ಮಕಾಂಡದಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುವ ಅವಶ್ಯಕತೆಯಿರುವುದಿಲ್ಲ. ಇಂತಹ ಶಬ್ದಗಳನ್ನು ಸಮನ್ವಯ ಮಾಡದಿದ್ದರೂ ಕೂಡ 'ಅಥಾತೋ ಬ್ರಹ್ಮಜಿಜ್ಞಾಸಾ' ಇತ್ಯಾದಿ ಸೂತ್ರದಲ್ಲಿ ಹೇಳಿದ ಪ್ರಮೇಯಕ್ಕೆ ಯಾವುದೇ ವಿರೋಧವು ಬರುವುದಿಲ್ಲ. ಆದ್ದರಿಂದ ಕರ್ಮಪರವಾದ ವಾಕ್ಯಗಳ ಸಮನ್ವಯವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಟೀಕೆಯಲ್ಲಿ ಹೇಳಿದ ಪ್ರಯೋಜನವನ್ನೇ ಸ್ಪಷ್ಟಪಡಿಸುತ್ತಾ ಪೂರ್ವಪಕ್ಷಟೀಕೆಯನ್ನು ವ್ಯಾಖ್ಯಾನ ಮಾಡಲು ಪ್ರಾರಂಭಿಸುತ್ತಿದ್ದಾರೆ 'ಸರ್ವಗುಣ' ಇತ್ಯಾದಿ ವಾಕ್ಯದಿಂದ.

**प्रकाशः** – उपलक्षणमेतत् – 'मुक्तिहेतुसर्वशब्दवाच्यत्वज्ञप्तये च' इत्यपि ध्येयम् ।

'ಸರ್ವಗುಣಪೂರ್ತಯೇ' ಎಂದು ಗ್ರಂಥದಲ್ಲಿ ಹೇಳಿದ್ದು ಉಪಲಕ್ಷಣವಾಗಿದೆ. ಸಕಲಶಬ್ದಗಳ ಸಮನ್ವಯವನ್ನು ಸರ್ವಗುಣಪರಿಪೂರ್ಣತ್ವಕ್ಕೋಸ್ಕರ ಮಾಡಲಾಗುತ್ತಿದೆ, ಅಷ್ಟೇ ಅಲ್ಲದೇ ಮೋಕ್ಷಕ್ಕೆ ಕಾರಣವಾದ ಸರ್ವಶಬ್ದವಾಚ್ಯತ್ವದ ಜ್ಞಾನಕ್ಕೋಸ್ಕರವೂ ಕೂಡ ಮಾಡಲಾಗುತ್ತಿದೆಯೆಂದು ತಿಳಿಯಬೇಕು.

**प्रकाशः** – किं रूढ्या ज्योतिरादिसर्वशब्दसमन्वयोऽभिमतोऽथवा योगेन ? नाद्यः । असिद्धेरिति भावेनाह – **वसन्त इति** ।।

ಸರ್ವಶಬ್ದಸಮನ್ವಯವೆಂಬುದರ ಅಭಿಪ್ರಾಯವೇನು? 'ಜ್ಯೋತಿಃ' ಮೊದಲಾದ ಸಕಲಶಬ್ದಗಳ ಸಮನ್ವಯವನ್ನು ರೂಢಿಯಿಂದ ಮಾಡಬೇಕೆಂದೋ? ಅಥವಾ ಯೋಗವೃತ್ತಿಯಿಂದ ಮಾಡಬೇಕೆಂದೋ? ಪ್ರಥಮಪಕ್ಷವು ಅಸಿದ್ಧವೆಂಬ ಅಭಿಪ್ರಾಯದಿಂದ 'ವಸಂತೇ' ಇತ್ಯಾದಿ ವಾಕ್ಯಗಳು ಹೊರಟಿವೆ. ಜ್ಯೋತಿರಾದಿ ಶಬ್ದಗಳು ರೂಢಿಯಿಂದ ಕರ್ಮಾದಿಗಳಲ್ಲೇ ಪ್ರಸಿದ್ಧವಾಗಿವೆ ಹೊರತು, ಶ್ರೀಹರಿಯಲ್ಲಿ ಅಲ್ಲ.

**प्रकाशः** – ''तत्प्रसिद्धिं चापहाय'' इति टीकां विवृण्वन् बाधकं चाह – **प्रसिद्धीति** ।।

'ತತ್ಪ್ರಸಿದ್ಧಿಂ ಚಾಪಹಾಯ' ಎಂಬ ಟೀಕೆಯನ್ನು ವಿವರಿಸುವವರಾಗಿ ಸಕಲಶಬ್ದಗಳು ವಿಷ್ಣುಪರವಾದರೆ ಬರುವ ಬಾಧಕವನ್ನು 'ಪ್ರಸಿದ್ಧಿ' ಇತ್ಯಾದಿ ವಾಕ್ಯದಿಂದ ನಿರೂಪಣೆ ಮಾಡುತ್ತಿದ್ದಾರೆ.

**प्रकाशः** – कर्म ज्योतिष्टोमादि । अङ्गानि = प्रयाजादयः । ''अध्वर्युर्गृहपतिं दीक्षयित्वा ब्रह्माणं दीक्षयति'' इति क्रमः । ''समे दर्शपूर्णमासाभ्यां यजेत'' इति देशः । ''पौर्णमास्यां पौर्णमास्या यजेत'' इत्यादिर्वसन्तादिश्च कालः । अधिकारी स्वर्गकामादिः ।

'ಕರ್ಮ' ಎಂದರೆ ಜ್ಯೋತಿಷ್ಟೋಮಾದಿ ಯಾಗಗಳು ಎಂದರ್ಥ. 'ಅಂಗ' ಎಂದರೆ ಪ್ರಯಾಜಾದಿ ಅಂಗಯಾಗಗಳು ಎಂದು ಅರ್ಥ. 'ಕ್ರಮ' ಎಂದರೆ 'ಅಧ್ವರ್ಯುರ್ಗೃಹಪತಿಂ ದೀಕ್ಷಯಿತ್ವಾ ಬ್ರಹ್ಮಾಣಂ ದೀಕ್ಷಯತಿ' ಎಂಬಲ್ಲಿ ಅಧ್ವರ್ಯು ಆದವನು ಮೊದಲು ಯಜಮಾನನಿಗೆ ದೀಕ್ಷೆಯನ್ನು ನೀಡಿ, ಅನಂತರ ಬ್ರಹ್ಮನಿಗೆ ದೀಕ್ಷೆಯನ್ನು ನೀಡಬೇಕು. ಇತ್ಯಾದಿಯಾಗಿ ಹೇಳಲ್ಪಟ್ಟದ್ದು 'ಕ್ರಮ' ಎನಿಸುತ್ತದೆ. 'ಸಮೇ ದರ್ಶಪೂರ್ಣಮಾಸಾಭ್ಯಾಂ ಯಜೇತ' ಎಂಬಲ್ಲಿ ಸಮತಟ್ಟಾದ ಪ್ರದೇಶದಲ್ಲಿ ದರ್ಶಪೂರ್ಣಮಾಸಾದಿ ಯಾಗಗಳನ್ನು ಮಾಡಬೇಕೆಂದು ಹೇಳಿರುವುದು ದೇಶಶ್ರುತಿಯೆನಿಸುತ್ತದೆ. 'ಪೌರ್ಣಮಾಸ್ಯಾಂ ಪೌರ್ಣಮಾಸ್ಯಾ ಯಜೇತ' ಇತ್ಯಾದಿಯಾಗಿ ಹುಣ್ಣಿಮೆ, ವಸಂತಋತು ಮೊದಲಾದ ಕಾಲವನ್ನು ಹೇಳಿರುವ ಶ್ರುತಿಗಳು ಕಾಲಶ್ರುತಿಯೆನಿಸುತ್ತದೆ. ಸ್ವರ್ಗವನ್ನು ಅಪೇಕ್ಷಿಸುವವನೇ ಅಧಿಕಾರಿಯಾಗಿರುತ್ತಾನೆ.

**प्रकाशः** – एतेन टीकायामवस्थाविशेषमाश्रित्य ''अधिकारि-नियोज्य-यजमान'' इति भेदेनोक्तावपि पदत्रयेणाप्यधिकार्येव प्राप्त इति सूचितम् । तथाचाक्षरार्थोक्तिप्रस्तावे विवरिष्यत इति । आदिपदेन टीकोक्तफलर्त्विगादि-परिग्रहः ।

ಹೀಗೆ ಹೇಳಿದ್ದರಿಂದ ಟೀಕೆಯಲ್ಲಿ ಕೇವಲ ಅಧಿಕಾರಿಯನ್ನಷ್ಟೇ ಹೇಳದೇ ನಿಯೋಜ್ಯ ಯಜಮಾನ ಇವರನ್ನೆಲ್ಲಾ ಹೇಳಿದ್ದಾರೆ. ಆದರೆ ಗ್ರಂಥಕಾರರು ಅಧಿಕಾರಿಯನ್ನಷ್ಟೇ ಏಕೆ ವಿವಕ್ಷಿಸಿದರು? ಎಂಬ ಪ್ರಶ್ನೆಗೂ ಉತ್ತರಿಸಿದಂತಾಯಿತು. ಒಬ್ಬನೇ ಅಧಿಕಾರಿಯು ಅವಸ್ಥಾವಿಶೇಷದಿಂದ ನಿಯೋಜ್ಯನೂ ಯಜಮಾನನೂ ಆಗುತ್ತಾನೆ. ಆದ್ದರಿಂದ ಪ್ರತ್ಯೇಕವಾಗಿ ಹೇಳಿದ್ದರೂ ಕೂಡ ಮೂರು ಪದಗಳಿಂದಲೂ ಅಧಿಕಾರಿಯೇ ಪ್ರಾಪ್ತನೆಂದು ತಿಳಿಸಲು ಪ್ರಕೃತ ಗ್ರಂಥಕಾರರು ಅಧಿಕಾರಿಯನ್ನಷ್ಟೇ ವಿವಕ್ಷಿಸಿದ್ದಾರೆ. ಇಲ್ಲಿರುವ ಅಧಿಕಾರಿ, ನಿಯೋಜ್ಯ ಇತ್ಯಾದಿ ಪದಗಳ ಅರ್ಥವನ್ನು ಟೀಕೆಯ ಅಕ್ಷರಾರ್ಥವನ್ನು ನಿರೂಪಣೆ ಮಾಡುವ ಸಂದರ್ಭದಲ್ಲಿ ವಿವರಿಸುತ್ತೇವೆ. ಗ್ರಂಥದಲ್ಲಿ 'ಅಧಿಕಾರಿಯಾದಿಪ್ರಾಪಕಸ್ಯ' ಎಂಬುದಾಗಿ ಆದಿಪದವನ್ನು ಹೇಳಿದ್ದಾರೆ. ಇದರಿಂದ ಟೀಕೆಯಲ್ಲಿ ಹೇಳಲ್ಪಟ್ಟ ಫಲ, ಋತ್ವಿಕ್ ಮೊದಲಾದವುಗಳನ್ನು ಸ್ವೀಕರಿಸಬೇಕು.

**प्रकाशः** – ''नच वाच्यं परमात्मसम्बन्धेनान्यत्रापि शब्दवृत्तिरभ्युपगतेति । तथासति लोके लक्षणेतरवृत्त्यभावप्रसङ्गात्'' इत्यग्रेतनटीकावाक्यं व्यवहितमपि श्लिष्टत्वादत्रैव व्यनक्ति – **नचेति** ।।

'ನಚ ವಾಚ್ಯಂ ಪರಮಾತ್ಮಸಂಬಂಧೇನಾನ್ಯತ್ರಾಪಿ ಶಬ್ದವೃತ್ತಿರಭ್ಯುಪಗತೇತಿ । ತಥಾಸತಿ ಲೋಕೇ ಲಕ್ಷಣೇತರವೃತ್ತ್ಯಭಾವಪ್ರಸಂಗಾತ್'' ಪರಮಾತ್ಮ ಸಂಬಂಧದಿಂದ ಕರ್ಮಾದಿಗಳಲ್ಲಿಯೂ ಜ್ಯೋತಿರಾದಿಶಬ್ದಗಳ ಶಕ್ತಿವೃತ್ತಿಯನ್ನು ಅಂಗೀಕರಿಸಬೇಕು. ಆವಾಗ ಲೋಕದಲ್ಲಿ ಲಕ್ಷಣಾಬಿಟ್ಟು ಬೇರೆ ವೃತ್ತಿಯಿಲ್ಲದಂತಾಗುತ್ತದೆ ಇತ್ಯಾದಿಯಾದ ಟೀಕಾವಾಕ್ಯವು ವ್ಯವಹಿತವಾಗಿದೆ. ಆದರೂ ಸಹ ಪ್ರಕೃತ ಸಂಗತವಾಗುತ್ತಿರುವುದರಿಂದ ಗ್ರಂಥಕಾರರು ಅದನ್ನು ಇಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – **लक्षणैवेति** ।। अन्यत्र रूढ्यपरित्यागेन भगवति शब्दानां वृत्तिरित्यस्यात्रैव सेत्स्यमानत्वेनेतः पूर्वं काप्यसिद्धेरिति भावः ।। **अनिष्टमिति** ।। अभिधानव्याकरणादिसर्वलोकसिद्धरूढेरपह्नवायोगादिति भावः ।

ಬೇರೆಡೆ ಶಬ್ದಗಳಿಗೆ ರೂಢಿಯನ್ನು ಪರಿತ್ಯಾಗ ಮಾಡದೇ ಭಗವಂತನಲ್ಲಿ ಶಬ್ದಗಳ ವೃತ್ತಿಯನ್ನು ಈ ಅಧಿಕರಣದಲ್ಲಿ ಮಾತ್ರ ಸಾಧಿಸಲಾಗುತ್ತಿದೆ. ಇದಕ್ಕಿಂತ ಮೊದಲು ಈ ವಿಷಯವನ್ನು ಸಮರ್ಥಿಸಿಲ್ಲ ಎಂದು ತಿಳಿಯಬೇಕು. 'ಅನಿಷ್ಟಮ್' ಎಂದರೆ ಸಕಲಶಬ್ದಗಳಿಗೆ ಶ್ರೀಹರಿಯಲ್ಲಿಯೇ ಶಕ್ತಿವೃತ್ತಿಯನ್ನು ಒಪ್ಪಿದರೆ ಅಭಿಧಾನ, ವ್ಯಾಕರಣ ಮೊದಲಾದವುಗಳಿಂದ ಸರ್ವಲೋಕಸಿದ್ಧವಾದ ರೂಢಿಯೇ ನಾಶವಾಗುವ ಸ್ಥಿತಿ ಬರುತ್ತದೆಂದಭಿಪ್ರಾಯ.

**प्रकाशः** – टीकोपलक्षणमिति भावेन प्रकारान्तरेण हरौ शब्दवृत्तिमाशङ्क्य निराह – **नापीति** ।। सर्वगुणसिद्ध्यर्थत्वात्समन्वयस्येति भावः ।।

ಪರಮಾತ್ಮನ ಸಂಬಂಧದಿಂದ ಉಳಿದ ಪದಾರ್ಥಗಳೂ ಸಹ ಆಯಾ ಶಬ್ದಗಳಿಂದ ಪ್ರತಿಪಾದ್ಯವಾಗಬಹುದಲ್ಲವೇ? ಎಂದು ಟೀಕೆಯಲ್ಲಿ ಹೇಳಿದ್ದಾರೆ. ಇದನ್ನು ಉಪಲಕ್ಷಣವೆಂದು ತಿಳಿದು ಮತ್ತೊಂದು ಪ್ರಕಾರದಿಂದ ಶ್ರೀಹರಿಯಲ್ಲಿ ಶಬ್ದವೃತ್ತಿಯನ್ನು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ನಾಪಿ' ಇತ್ಯಾದಿ ಗ್ರಂಥದಿಂದ. ತದಧೀನತ್ವನ್ಯಾಯದಿಂದ ಆ ಶಬ್ದಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಬಹುದಲ್ಲವೇ? ಎಂದಭಿಪ್ರಾಯ. ಸರ್ವಗುಣಪರಿಪೂರ್ಣತ್ವಕ್ಕಾಗಿ ಸಮನ್ವಯ ಮಾಡಲಾಗುತ್ತಿದೆ. ಇದು ಸಿದ್ಧವಾಗಬೇಕೆಂದರೆ ಆಯಾ ಪದಗಳಲ್ಲಿರುವ ಪ್ರವೃತ್ತಿನಿಮಿತ್ತವನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಲೇಬೇಕು.

**प्रकाशः** – **स्मृतीति** ।। श्रुतिगीतातात्पर्योक्तस्मृतौ ''तन्नामत्वादथापि वा'' इत्यनेन योगस्योक्तत्वादिति भावः । ''किञ्च ज्योतिरादि'' इत्यादिटीकां विवृणोति।। **नापीति** ।।

ಪರಿಪೂರ್ಣಚಂದ್ರಿಕಾ

'ಸ್ಮೃತಿ' ಎಂದರೆ ದಶಮಸ್ಕಂಧದ ಶ್ರುತಿಗೀತೆಯ ಭಾಗವತ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ಈ ಸ್ಮೃತಿಯನ್ನು ಉಲ್ಲೇಖ ಮಾಡಿದ್ದಾರೆಂದು ತಿಳಿಯಬೇಕು. ಈ ಸ್ಮೃತಿಯಲ್ಲಿ 'ತನ್ನಾಮತ್ವಾದಥಾಪಿ ವಾ' ಎಂಬ ಮಾತಿನಿಂದ ಪರಮಾತ್ಮನಲ್ಲಿ ಸಕಲಶಬ್ದಗಳಿಗೆ ಯೋಗಾರ್ಥವನ್ನು ಹೇಳಲಾಗಿದೆ. 'ಕಿಂಚ ಜ್ಯೋತಿರಾದಿ' ಇತ್ಯಾದಿ ಟೀಕೆಯನ್ನು ವಿವರಿಸುತ್ತಿದ್ದಾರೆ 'ನಾಪಿ' ಇತ್ಯಾದಿ ಗ್ರಂಥದಿಂದ.

**प्रकाशः** – एतेन ''अथवा योगेन'' इति द्वितीयपक्षोपि निरस्तो ध्येयः । ''अभ्युपेत्यचेदमुदितम्'' इति टीकां व्यनक्ति – **किञ्चेति** ।।

ಎಲ್ಲಾ ಶಬ್ದಗಳು ಭಗವತ್ಪರವಾದರೆ ಕರ್ಮಾದಿಗಳೇ ವಿಲೋಪವಾಗುವ ಪ್ರಸಂಗ ಬರುತ್ತದೆಂದು ಹೇಳಿದ್ದರಿಂದ 'ಅಥವಾ ಯೋಗೇನ' ಎಂಬ ಎರಡನೆಯ ಪಕ್ಷವನ್ನು ನಿರಾಕರಣೆ ಮಾಡಿದಂತಾಯಿತು. 'ಅಭ್ಯುಪೇತ್ಯಚೇದಮುದಿತಮ್' ಎಂಬ ಟೀಕೆಯನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – किमवयवानामपि ब्रह्मपरत्वमुपेत्य तत्समुदायस्य ब्रह्मणि योग उच्यतेऽथानुपेत्येति हृदि विकल्प्य क्रमेण निराह – **जीति** ।।

'ಜ್ಯೋತಿಷ್ಟೋಮ' ಪದದಲ್ಲಿರುವ 'ಜ್ಯೋತಿಃ' 'ಸ್ತೋಮ' ಮೊದಲಾದ ಅವಯವಗಳೆಲ್ಲವೂ ಭಗವತ್ಪರವಾಗಿವೆಯೆಂದು ಅಂಗೀಕರಿಸಿ, 'ಜ್ಯೋತಿಷ್ಟೋಮ' ಎಂಬ ಸಮುದಾಯವೂ ಕೂಡ ಭಗವತ್ಪರವಾಗಿದೆ ಎಂಬುದಾಗಿ ಯೋಗವನ್ನು ಹೇಳುತ್ತೀರೋ? ಅಥವಾ ಅವಯವಗಳಿಗೆ ಬ್ರಹ್ಮಪರತ್ವವನ್ನು ಒಪ್ಪದೇ 'ಜ್ಯೋತಿಷ್ಟೋಮ' ಎಂಬ ಪದವು ಬ್ರಹ್ಮಪರವಾಗಿದೆಯೆಂದು ಹೇಳುತ್ತೀರೋ? ಹೀಗೆ ಎರಡು ವಿಕಲ್ಪಗಳನ್ನು ಮಾಡಿ, ಎರಡನ್ನೂ ಕ್ರಮವಾಗಿ ನಿರಾಕರಿಸುತ್ತಿದ್ದಾರೆ 'ಜ ಓತಿಃ' ಇತ್ಯಾದಿಯಾಗಿ.

**प्रकाशः** – टीकायां ज्योतिष्टोमशब्दस्य समुदायत्वमुपेत्य स्तोमज्योति – शब्दयोरवयवत्वव्युत्पादनस्याभिप्रायमग्रे विवरिष्याम इति भावेनानुभाष्योक्तं ज्योतिश्शब्दस्य समुदायत्वमुपेत्य जीत्यादीनामवयवत्वमुक्तमिति ध्येयम् ।

ಟೀಕೆಯಲ್ಲಿ ಜ್ಯೋತಿಷ್ಟೋಮ ಶಬ್ದವನ್ನು ಸಮುದಾಯವೆಂದು ಅಂಗೀಕರಿಸಿ ಸ್ತೋಮ ಹಾಗೂ ಜ್ಯೋತಿಷ್ ಶಬ್ದಗಳಿಗೆ ಅವಯವತ್ವದ ವ್ಯುತ್ಪಾದನೆಯನ್ನು ಏಕೆ ಮಾಡಿದ್ದಾರೆಂಬುದರ ಬಗ್ಗೆ ಮುಂದೆ ನಾವೇ ವಿವರಿಸುತ್ತೇವೆ. ಈ ಅಭಿಪ್ರಾಯದಿಂದ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ 'ಜ್ಯೋತಿಷ್' ಶಬ್ದಕ್ಕೆ ಸಮುದಾಯತ್ವವನ್ನು ಒಪ್ಪಿ 'ಜಾತಂ ಓತಮ್' ಇತ್ಯಾದಿಯಾಗಿ ಅವಯವತ್ವವನ್ನು ಹೇಳಿರುತ್ತಾರೆಂದು ತಿಳಿಯಬೇಕು. ಅನುವ್ಯಾಖ್ಯಾನದಲ್ಲಿ 'ಜ್ಯೋತಿಃ' ಎಂಬ ಪದಸಮನ್ವಯವನ್ನೇ ಮಾಡಿದ್ದಾರೆ. ಆದರೆ ಟೀಕೆಯಲ್ಲಿ ಜ್ಯೋತಿಷ್ಟೋಮಪದವನ್ನು ಸಮನ್ವಯ ಮಾಡಿದ್ದಾರೆಂಬ ವ್ಯತ್ಯಾಸವಿದೆ.

**प्रकाशः – तत एव = अन्यत्रप्रसिद्धत्वादेव ।। अमुख्यवृत्त्येति ।।** 'भगवत्सम्बन्धादन्यत्रवृत्तिः' इत्येतदित्यर्थः । ''न योगोऽपि सम्भवति'' इत्यादिटीकाया मूलमाह – **तदुक्तमिति।।**

'ತತ ಏವ' ಎಂದರೆ ಅವಯವಗಳು ಅನ್ಯತ್ರಪ್ರಸಿದ್ಧವಾಗಿರುವುದರಿಂದಲೇ ಎಂದರ್ಥ. 'ಅಮುಖ್ಯವೃತ್ತ್ಯಾ' ಎಂದರೆ ಭಗವತ್‌ಸಂಬಂಧದಿಂದ ಬೇರೆ ಪದಾರ್ಥಗಳಲ್ಲಿ ಇರುತ್ತವೆಂದರ್ಥ. 'ನ ಯೋಗೋಽಪಿ ಸಂಭವತಿ' ಇತ್ಯಾದಿ ಟೀಕೆಗೆ ಮೂಲವನ್ನು 'ತದುಕ್ತಮ್' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – ज्योतिरुपक्रमात्तु तथा ह्यधीयत एके ।। तच्चानिष्टमिति ।।** सिद्धान्तिन इति शेषः । तत एव अन्यत्रप्रसिद्धत्वादेवेत्यर्थः । निरस्तं अन्यत्र लक्षणापत्त्या निरस्तमित्यर्थः ।




ಸಕಲಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ತಿಳಿದರೆ ಮಾತ್ರ, ಸಕಲಗುಣಪರಿಪೂರ್ಣತ್ವವು ಸಿದ್ಧವಾಗುತ್ತದೆ. ಹಾಗಾಗಿ ಪ್ರಥಮಾಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯವನ್ನು ಮಾಡಲಾಗುತ್ತಿದೆಯೆಂದು ಸಮನ್ವಯಾಧಿಕರಣದಲ್ಲಿ ಪ್ರತಿಜ್ಞೆ ಮಾಡಲಾಯಿತು. ಇದು ಸಾಧ್ಯವಿಲ್ಲ. ಏಕೆಂದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮಗಳಲ್ಲೇ ಪ್ರಸಿದ್ಧವಾಗಿವೆ. ಎಲ್ಲವೂ ಹರಿನಾಮಗಳೇ ಆದರೆ ಸ್ವರ್ಗವನ್ನು ಬಯಸುವವನು ವಸಂತಕಾಲದಲ್ಲಿ ಜ್ಯೋತಿಷ್ಟೋಮಯಾಗವನ್ನು ಮಾಡಬೇಕು ಎಂಬ ಅರಿವು ಹೇಗೆ ತಾನೇ ಮೂಡುತ್ತದೆ. ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಿ, ಆಯಾ ಶಬ್ದಗಳು ಕರ್ಮಪ್ರತಿಪಾದಕವಾಗಲಿ ಎಂಬ ಸಮಾಧಾನವನ್ನೇನೋ ಹೇಳಬಹುದು. ಇದರಿಂದ ಸ್ವಾತಂತ್ರ್ಯವೆಂಬ ಒಂದೇ ಗುಣವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ ಹೊರತು, ವಿಭಿನ್ನವಾದ ಶಬ್ದಗಳ ಸಮನ್ವಯದಿಂದ ಆಯಾ ಪ್ರವೃತ್ತಿನಿಮಿತ್ತಗಳು ಹೇಳುವ ವಿಭಿನ್ನವಾದ ಗುಣಗಳು ಬ್ರಹ್ಮನಲ್ಲಿ ಸಿದ್ಧವಾಗುವುದೇ ಇಲ್ಲ. ಆದ್ದರಿಂದ ಯಾವುದೇ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಬೇಕಾದರೆ, ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಪೇಕ್ಷಿಸುವಂತೆ ಆಯಾ ಪ್ರವೃತ್ತಿನಿಮಿತ್ತಗಳನ್ನೂ ಕೂಡ ಬ್ರಹ್ಮನಲ್ಲಿ ಸಮನ್ವಯ ಮಾಡಲೇಬೇಕು. ಆವಾಗ ಮಾತ್ರ ಅನೇಕ ಗುಣಗಳನ್ನು ಸಾಧಿಸಿದಂತಾಗುತ್ತದೆ. ಹಾಗೇನಾದರೂ ಪ್ರತಿಯೊಂದು ಪದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಮಾಡಲು ಹೊರಟರೆ, ಎಲ್ಲವೂ ಹರಿನಾಮವಾಗುತ್ತದೆ. ಆದ್ದರಿಂದ ವೇದದಲ್ಲಿರುವ ಕರ್ಮಕಾಂಡವು ವ್ಯರ್ಥವಾಗಿ ಕರ್ಮಾನುಷ್ಠಾನವೇ ಲೋಪವಾಗುವ ಪ್ರಸಂಗ ಬರುತ್ತದೆ.

ಪರಿಪೂರ್ಣಚಂದ್ರಿಕಾ

ಮತ್ತು 'ಜ್ಯೋತಿಷ್ಟೋಮೇನ' ಎಂಬಲ್ಲಿರುವ 'ಜ್ಯೋತಿ', 'ಸ್ತೋಮ' ಎಂಬ ಅವಯವಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುವುದಾದರೆ, 'ಜ್ಯೋತಿಷ್ಟೋಮ' ಎಂಬ ಸಮುದಾಯವು ಬ್ರಹ್ಮನನ್ನು ಪ್ರತಿಪಾದನೆ ಮಾಡಲು ಸಾಧ್ಯವಾಗುವುದಿಲ್ಲ. ಅದರಂತೆ 'ಜ್ಯೋತಿ' ಎಂಬ ಪದದಲ್ಲಿರುವ 'ಜಿ' ಮತ್ತು 'ಓತಿಃ' ಎಂಬೆರಡು ಅವಯವಗಳು ಬ್ರಹ್ಮನ ಹೆಸರುಗಳಾದರೆ, 'ಜ್ಯೋತಿ' ಎಂಬ ಪದವು ಬ್ರಹ್ಮನ ಹೆಸರಾಗಲು ಸಾಧ್ಯವಿಲ್ಲ. ಏಕೆಂದರೆ ಯಾವ ಅರ್ಥವು ಯಾವ ಸಮುದಾಯದಿಂದ ಪ್ರತಿಪಾದ್ಯವಾಗುತ್ತದೋ, ಅದೇ ಅರ್ಥವು ಅದರ ಅವಯವದಿಂದ ಪ್ರತಿಪಾದ್ಯವಾಗುವುದಿಲ್ಲವೆಂಬುದು ಲೋಕಸಿದ್ಧವಾದ ನಿಯಮ. 'ಪಂಕಜ' ಎಂಬ ಶಬ್ದದಿಂದ ಕಮಲವು ಪ್ರತಿಪಾದ್ಯವಾಗುತ್ತದೆ. ಆದರೆ 'ಪಂಕಜ' ಶಬ್ದದ ಅವಯವವಾದ 'ಪಂಕ' ಮತ್ತು 'ಜ' ಎಂಬ ಶಬ್ದದಿಂದ ಕಮಲವು ಪ್ರತಿಪಾದ್ಯವಾಗುವುದಿಲ್ಲ. ಆದ್ದರಿಂದ ಸರ್ವಶಬ್ದಸಮನ್ವಯವನ್ನು ಮಾಡುವುದು ಸುಲಭದ ಮಾತಲ್ಲ.





## ಸರ್ವಶಬ್ದಗಳಿಂದ ಪರಮಾತ್ಮನೇ ಮುಖ್ಯಪ್ರತಿಪಾದ್ಯನು

### तात्पर्यचन्द्रिका

**सिद्धान्तस्तु ।। ज्योतिरादिशब्दमुख्यार्थो ब्रह्मैव ।**

ಅನುವಾದ - ಅಧಿಕರಣದ ಸಿದ್ಧಾಂತ ಹೀಗಿದೆ - 'ಜ್ಯೋತಿಃ' ಮೊದಲಾದ ಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಈ ವಿಷಯದಲ್ಲಿ ಅನೇಕ ಶ್ರುತಿ-ಸ್ಮೃತಿಗಳೇ ಆಧಾರವಾಗಿವೆ.

**"तं यच्छतं वर्षाण्यभ्यार्चत् तस्माच्छतर्चिनस्तस्माच्छतर्चिन इत्याचक्षते एतमेव सन्तं स इदं सर्वं मध्यतो दधे यदिदं किञ्च तस्मान्मध्यमास्तस्मान्मध्यमा इत्याचक्षते एतमेव सन्तम्" इत्यादिना "तावा एताः सर्वा ऋचः सर्वे वेदाः सर्वे घोषा एकैव व्याहृतिः प्राण एव प्राण ऋच इत्येव विद्यात्" इत्यन्तेन शतर्चिनः शनर्चिन इत्याद्यभ्याससहितेन वाक्येन ब्रह्मणः सर्वशब्दमुख्यार्थत्वोक्तेः ।**

'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಂ ಸ ಇದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ ತಸ್ಮಾನ್ಮಧ್ಯಮಾಸ್ತಸ್ಮಾನ್ಮಧ್ಯಮಾ ಇತ್ಯಾಚಕ್ಷತೇ ಏತಮೇವ ಸಂತಮ್'

'ಪರಮಾತ್ಮನು ನೂರು ವರ್ಷಗಳ ಕಾಲ ಬ್ರಹ್ಮಾದಿಜೀವರ ಶರೀರವನ್ನು ಪ್ರವೇಶ ಮಾಡಿದನು. ಆದ್ದರಿಂದ ಅವನ ಬಹುರೂಪಗಳು ಶತರ್ಚಿಗಳೆನಿಸಿದವು. ರೂಢಿಯಿಂದ ಶತರ್ಚಿನಾಮಕವಾದ ಭಗವದ್ ರೂಪಗಳನ್ನೇ ಜ್ಞಾನಿಗಳು ಯೋಗದಿಂದಲೂ ಮುಖ್ಯವಾಗಿ ಶತರ್ಚಿಗಳೆಂದು ಕರೆಯುತ್ತಾರೆ.

ಪರಮಾತ್ಮನು ಎಲ್ಲವನ್ನೂ ಮಧ್ಯದಲ್ಲಿ ಧಾರಣೆ ಮಾಡಿದ್ದರಿಂದ ಅವನ ರೂಪಗಳು ಮಧ್ಯಮಾ ಎನಿಸಿವೆ. ಆದ್ದರಿಂದ ರೂಢಿಯಿಂದ ಮಧ್ಯಮಾನಾಮಕವಾದ ಭಗವದ್‌ರೂಪಗಳನ್ನೇ ಜ್ಞಾನಿಗಳು ಯೋಗದಿಂದಲೂ ಮುಖ್ಯವಾಗಿ ಮಧ್ಯಮಾ ಎಂದೇ ಕರೆಯುತ್ತಾರೆ.

ಹೀಗೆ ಪ್ರಾರಂಭವಾದ ಶ್ರುತಿಯು 'ತಾವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್' ಸಕಲ ವೇದಗಳು ಸಕಲ ಋಜ್‌ಮಂತ್ರಗಳು, ಸಕಲ ಶಬ್ದಗಳು ವ್ಯಾಹೃತಿಯೂ ಪ್ರಾಣನಾಮಕನಾದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ತಿಳಿಯಬೇಕು' ಎಂಬುದಾಗಿ ಕೊನೆಗೊಳ್ಳುತ್ತದೆ. 'ಶತರ್ಚಿನಃ' ಎಂಬ ಪದದ ಅಭ್ಯಾಸವಿರುವುದರಿಂದ ಅಭ್ಯಾಸವೆಂಬ ತಾತ್ಪರ್ಯನಿರ್ಣಾಯಕವಾದ ಲಿಂಗದ ಜೊತೆಗೆ ವಾಕ್ಯವೆಂಬ ಪ್ರಮಾಣವೂ ಬ್ರಹ್ಮನೇ ಸಕಲಶಬ್ದಗಳಿಂದ ಮುಖ್ಯಪ್ರತಿಪಾದಕನಾಗಿದ್ದಾನೆಂದು ಸಮರ್ಥಿಸುತ್ತಿದೆ.

**अवस्वराति गर्गरो गोधा परि सनिष्वणत् ।**
**पिङ्गा परि चनिष्कददिन्द्राय ब्रह्मोद्यतम् ॥**

**इति श्रुतौ गर्गरगोधादिशब्दानामपि परमेश्वरवाचितामुक्त्वा ब्रह्मशब्दार्थस्य वेदस्य विशिष्य तद्वाचितोक्तेश्च ।**

ಅವಸ್ವರಾತಿ ಗರ್ಗರೋ ಗೋಧಾ ಪರಿ ಸನಿಷ್ವಣತ್ ।
ಪಿಂಗಾ ಪರಿ ಚನಿಷ್ಕದದಿಂದ್ರಾಯ ಬ್ರಹ್ಮೋದ್ಯತಮ್ ॥

ಹಲ್ಲಿಗಳು ಸಣ್ಣದಾಗಿ ಧ್ವನಿ ಮಾಡುತ್ತವೆ. ಈ ಧ್ವನಿ ಇಂದ್ರನಾಮಕನಾದ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತಿದೆ. ಹಲ್ಲಿ ಲೊಚಗುಟ್ಟುತ್ತದೆ. ಇದೂ ಸಹ ಪರಮಾತ್ಮನ ನಾಮವೇ ಆಗಿದೆ. ಚಕೋರಿಪಕ್ಷಿಯು ಮಾಡುವ ಧ್ವನಿಯೂ ಕೂಡ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತದೆ. ಧ್ವನ್ಯಾತ್ಮಕವಾದ ಇಂತಹ ಶಬ್ದಗಳಿಂದ ವರ್ಣವು ಅಭಿವ್ಯಕ್ತವಾಗಿ ಅಂತಹ ವರ್ಣಗಳಿಂದ ವಿಷ್ಣು ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು. ಈ ಎಲ್ಲಾ ಧ್ವನಿಗಳಿಗೂ ಪರಮಾತ್ಮನಲ್ಲಿಯೇ ತಾತ್ಪರ್ಯವಿರುತ್ತದೆ. ಶ್ರುತಿಯಲ್ಲಿ 'ಇಂದ್ರಾಯ' ಇಂದ್ರನಿಗೋಸ್ಕರ ಎಲ್ಲ ಧ್ವನಿಗಳಿವೆಯೆಂದು ಹೇಳಲಾಗಿದೆ. ಆದರೆ ಇಂದ್ರಶಬ್ದವು ವಿಷ್ಣುವನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತದೆಂದು ಅಂತರ್ಯಾಮ್ಯಧಿಕರಣದಲ್ಲಿ ಹೇಳಿದಂತೆ ತಿಳಿಯಬೇಕು.

ಹೀಗೆ 'ಅವಸ್ವರಾತಿ' ಎಂಬ ಶ್ರುತಿಯಲ್ಲಿ ಎಲ್ಲ ಧ್ವನಿಗಳೂ ಪರಮಾತ್ಮನನ್ನೇ ಪ್ರತಿಪಾದನೆ ಮಾಡುತ್ತವೆಂದು ಹೇಳಿ ವೇದದಿಂದ ಮುಖ್ಯವಾಗಿ ಪ್ರತಿಪಾದ್ಯನೆಂದು ವಿಶೇಷವಾಗಿ ಹೇಳಲಾಗಿದೆ.

**प्रकाशः –**

अत्र कर्मानुष्ठानविरोधं व्युत्पत्त्यशक्यत्वं चाग्रे ''न चैवम्'' इत्यादिना ग्रन्थेन परिजिहीर्षुस्सौत्रप्रतिज्ञाहेतूक्तिपरभाष्यटीकां ''ज्योतिष्टोमादि'' इत्यादिकां ''इति भावः'' इत्यन्तां विवृण्वन्नाद्यसूत्रार्थं निष्कृष्याह – **ज्योतिरादीति** ।।

ವಿವರಣೆ - ಸಿದ್ಧಾಂತವು ಪ್ರಾರಂಭವಾಗುತ್ತಿದೆ. ಹಿಂದೆ ಪೂರ್ವಪಕ್ಷ ಮಾಡುವಾಗ ಸಕಲಶಬ್ದಗಳೂ ಭಗವತ್ಪರವಾದರೆ ಕರ್ಮ, ಕರ್ಮಾನುಷ್ಠಾನ, ಕರ್ಮಗಳ ಕ್ರಮ ಇವುಗಳನ್ನೆಲ್ಲಾ ಪ್ರತಿಪಾದನೆ ಮಾಡುವ ಬೇರೆ ಶಬ್ದಗಳೇ ಇಲ್ಲವೆಂದಂತಾಯಿತು. ಆವಾಗ ಕರ್ಮಾನುಷ್ಠಾನವೇ ಲೋಪವಾಗಬೇಕಾದೀತು ಎಂಬ ವಿರೋಧವನ್ನು ಹೇಳಲಾಯಿತು. ಮತ್ತು ಎಲ್ಲಾ ಶಬ್ದಗಳ ಅವಯವವೂ ಕೂಡ ಭಗವತ್ಪರವಾದರೆ, ವ್ಯುತ್ಪತ್ತಿಯನ್ನು ಮಾಡಲು ಸಾಧ್ಯವೇ ಆಗುವುದಿಲ್ಲ ಎಂಬೆರಡು ಪ್ರಧಾನದೋಷಗಳನ್ನು ಹೇಳಲಾಯಿತು. ಈ ಎರಡು ದೋಷಗಳನ್ನು ಮುಂದೆ 'ನ ಚೈವಮ್' ಇತ್ಯಾದಿ ಗ್ರಂಥದಿಂದ ಪರಿಹರಿಸಲಾಗುತ್ತದೆ. ಪ್ರಕೃತ ಸೂತ್ರದಲ್ಲಿರುವ 'ಜ್ಯೋತಿಃ ತತ್ತು' ಎಂಬ ಪ್ರತಿಜ್ಞೆಯ ಹಾಗೂ 'ಉಪಕ್ರಮಾತ್ತು ತಥಾ ಹ್ಯದೀಯತೇ' ಎಂಬ ಹೇತುವಿನ ವ್ಯಾಖ್ಯಾನರೂಪವಾದ ಇತ್ಯಾದಿ ಭಾಷ್ಯದ ಟೀಕೆಯಲ್ಲಿ 'ಜ್ಯೋತಿಷ್ಟೋಮಾದಿ' ಎಂಬಲ್ಲಿಂದ ಪ್ರಾರಂಭಿಸಿ, 'ಇತಿ ಭಾವಃ' ಎಂಬಲ್ಲಿಯ ತನಕ ಇರುವ ವಾಕ್ಯಗಳನ್ನು ವ್ಯಾಖ್ಯಾನ ಮಾಡಲು ಹೊರಟಿದ್ದಾರೆ. ಮತ್ತು ಮೊದಲನೆಯ ಸೂತ್ರಾರ್ಥವನ್ನು ಸ್ಪಷ್ಟಪಡಿಸುತ್ತಿದ್ದಾರೆ 'ಜ್ಯೋತಿರಾದಿ' ಇತ್ಯಾದಿ ಗ್ರಂಥದಿಂದ.

**प्रकाशः –** सूत्रे ज्योतिश्शब्द उपलक्षणमिति भावः । इमं लोकमभ्यार्चदिति प्रकृतं लोकशब्दितं तं देहं शतं वर्षाणि अत्यन्तसंयोगे द्वितीया । अभ्यार्चत् प्राणः प्रकृतः । एतमेव प्राणमेव सन्तं प्रवृत्तिनिमित्तवत्तया विद्यमानमित्यादिना इत्यन्तेन वाक्येनेत्यन्वयः । 'तावा एताः' इति श्रुत्यर्थष्टीकायां व्यक्तः ।

ಸೂತ್ರದಲ್ಲಿ 'ಜ್ಯೋತಿಃ' ಎಂಬ ಶಬ್ದವನ್ನು ಉಪಲಕ್ಷಣಯಾ ವಿವಕ್ಷಿಸಬೇಕು. 'ತಂ ಯಚ್ಛತಮ್' ಇತ್ಯಾದಿ ಶ್ರುತಿಯ ಅಭಿಪ್ರಾಯ ಹೀಗಿದೆ - 'ಇಮಂ ಲೋಕಮಭ್ಯಾರ್ಚತ್' ಎಂಬಲ್ಲಿ ಪ್ರಕೃತವಾದ ಲೋಕಶಬ್ದವು ದೇಹವನ್ನು ಹೇಳುತ್ತದೆ. ಆ ದೇಹವನ್ನೇ ಇಲ್ಲಿ 'ತಂ' ಎಂಬ ಶಬ್ದದಿಂದ ಪರಾಮರ್ಶಿಸಲಾಗಿದೆ. ಆದ್ದರಿಂದ ಪ್ರಸಿದ್ಧವಾದ ಯಾವ ಈ ಮನುಷ್ಯದೇಹವನ್ನು 'ಪ್ರಾಣಃ' ಪ್ರಾಣಶಬ್ದ ಪ್ರತಿಪಾದ್ಯನಾದ ಪರಮಾತ್ಮನು 'ಯತ್' ಯಾವ ಕಾರಣದಿಂದ 'ಶತಂ ವರ್ಷಾಣಿ ಅಭ್ಯಾರ್ಚತ್' ನೂರು ವರ್ಷಗಳ ಕಾಲ ಹೊಂದಿರುತ್ತಾನೋ, ಆದ್ದರಿಂದ ಅಂತಹ ಪರಮಾತ್ಮನನ್ನು 'ಶತರ್ಚ' ಎಂದು ಜ್ಞಾನಿಗಳು ಕರೆಯುತ್ತಾರೆ. ಶ್ರುತಿಯಲ್ಲಿ 'ಶತೇಷು ವರ್ಷೇಷು' ಎನ್ನಬೇಕಿತ್ತು. 'ಶತಂ ವರ್ಷಾಣಿ' ಎಂಬುದಾಗಿ ದ್ವಿತೀಯಾ ವಿಭಕ್ತಿಯನ್ನೇಕೆ ಪ್ರಯೋಗಿಸಲಾಗಿದೆ? ಎಂದರೆ 'ಕಾಲದ್ವಯೋಃ ಅತ್ಯಂತ ಸಂಯೋಗೇ ದ್ವಿತೀಯಾ' ಎಂಬ ಸೂತ್ರವು ಹೇಳುವಂತೆ ನೂರುವರ್ಷದ ಕಾಲದಲ್ಲಿ ಒಂದು ಕ್ಷಣವೂ ಕೂಡ ಬಿಡದೆ ಈ ದೇಹದಲ್ಲಿ ವಾಸ ಮಾಡಿರುತ್ತಾನೆ ಎಂಬುದನ್ನು ತಿಳಿಸಲು

ದ್ವಿತೀಯಾವಿಭಕ್ತಿಯನ್ನು ಪ್ರಯೋಗಿಸಲಾಗಿದೆ. ಪ್ರಾಣನು ಪ್ರವೃತ್ತಿನಿಮಿತ್ತವುಳ್ಳವನಾದ್ದರಿಂದ ಶತರ್ಚಿಯೆಂದು ಕರೆಸಿಕೊಳ್ಳುತ್ತಾನೆ.

(ನ್ಯಾಯಸುಧೆಯ ಪ್ರಕೃತ್ಯಧಿಕರಣದಲ್ಲಿ ಶ್ರುತಿಯನ್ನು ಹೀಗೆ ವ್ಯಾಖ್ಯಾನ ಮಾಡಿರುತ್ತಾರೆ - 'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಂ ಸ ಇದಂ ಸರ್ವಂ ಮಧ್ಯತೋ ದಧೇ ಯದಿದಂ ಕಿಂಚ ತಸ್ಮಾನ್ಮಧ್ಯಮಾಸ್ತಸ್ಮಾನ್ಮಧ್ಯಮಾ ಇತ್ಯಾಚಕ್ಷತೇ ಏತಮೇವ ಸಂತಮ್' 'ಪರಮಾತ್ಮನು ನೂರುವರ್ಷಗಳ ಕಾಲ ಬ್ರಹ್ಮಾದಿಜೀವರ ಶರೀರವನ್ನು ಪ್ರವೇಶಿಸುತ್ತಾನೆ. ಆದ್ದರಿಂದ ಅವರ ಅನೇಕ ರೂಪಗಳು 'ಶತರ್ಚಿ' ಎಂದು ಕರೆಸಿಕೊಳ್ಳುತ್ತವೆ. ಶತರ್ಚಿ' ಎಂಬ ಶಬ್ದದಿಂದ ರೂಢಿಯಿಂದ ಪ್ರತಿಪಾದ್ಯವಾದ ರೂಪವನ್ನೇ ಜ್ಞಾನಿಗಳು ಪುನಃ ಯೋಗದಿಂದಲೂ ಮುಖ್ಯವಾಗಿ ಶತರ್ಚಿಯೆಂದು ಕರೆಯುತ್ತಾರೆ. ಪರಮಾತ್ಮನು ಎಲ್ಲವನ್ನೂ ಮಧ್ಯದಲ್ಲಿ ಧಾರಣೆ ಮಾಡಿದ್ದಾನಾದ್ದರಿಂದ ಅವನ ರೂಪಗಳು ಮಧ್ಯಮಾ ಎನಿಸುತ್ತವೆ. ರೂಢಿಯಿಂದ 'ಮಧ್ಯಮಾ' ಎಂಬ ಹೆಸರಿನಿಂದ ಪ್ರತಿಪಾದ್ಯವಾದ ಅವನ ರೂಪಗಳೇ ಯೊಗದಿಂದ ಮುಖ್ಯವಾಗಿ ಮಧ್ಯಮಾ ಎನಿಸಿಕೊಳ್ಳುತ್ತವೆ'.

ಇವೇ ಮೊದಲಾದ ಶ್ರುತಿಗಳು 'ಶತರ್ಚಿ' ಶಬ್ದದಿಂದ ಉಪಲಕ್ಷಣಯಾ ಸಕಲಶಬ್ದಗಳು ಪರಮಾತ್ಮನಲ್ಲಿ ಯೋಗದಿಂದ ಸಮನ್ವಯಗೊಳ್ಳುತ್ತವೆಂದು, ವಿದ್ವದ್ರೂಢಿಯಿರುತ್ತವೆಂದು ತೋರಿಸುತ್ತಿವೆ. ಏಕೆಂದರೆ ಅನೇಕ ಬಾರಿ ಯೋಗರೂಢಿಗಳನ್ನು ಶ್ರುತಿಯು ತೋರಿಸುತ್ತಿರುವುದರಿಂದ ಪ್ರಾಸಂಗಿಕವಾಗಿ ಹೇಳುತ್ತಿಲ್ಲ. ತಾತ್ಪರ್ಯಪೂರ್ವಕವಾಗಿ ಹೇಳುತ್ತಿದೆಯೆಂದು ತಿಳಿಯುತ್ತಿದೆ. ಮತ್ತು ಲೌಕಿಕರೂಢಿಗಿಂತಲೂ ಯೋಗವು ಪ್ರಬಲವೆಂದೂ ಶ್ರುತಿ ತಿಳಿಸುತ್ತಿದೆ. ಏಕೆಂದರೆ ರೂಢ್ಯರ್ಥನಾದ ಪರಮಾತ್ಮನೇ ಮುಖ್ಯವಾಗಿ ಯೋಗದಿಂದಲೂ ವಾಚ್ಯನಾಗಿದ್ದಾನೆ. 'ಆಚಕ್ಷತೇ' ಎಂದು ಹೇಳಿದ್ದರಿಂದ ಶ್ರೀಹರಿಯೇ ಈ ಪದಗಳಿಂದ ಮುಖ್ಯವಾಗಿ ಪ್ರತಿಪಾದ್ಯನೆಂದು ಸ್ಪಷ್ಟವಾಗುತ್ತದೆ. ಅವಧಾರಣದಿಂದ ಬೇರೆಯವರು ವಾಚ್ಯರಲ್ಲವೆಂದು ಹೇಳಿದಂತಾಗುತ್ತದೆ. ಆದರೆ ಸರ್ವಥಾ ವಾಚ್ಯರಲ್ಲವೆಂದರ್ಥವಲ್ಲ. ಹಾಗೇ ಹೇಳಿದರೆ ಲೌಕಿಕವ್ಯವಹಾರ ವಿರೋಧ ಬರುತ್ತದೆ. ಆದ್ದರಿಂದ ಪರಮಾತ್ಮನು ಹೇಗೆ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೋ, ಅದರಂತೆ ಉಳಿದ ಪದಾರ್ಥಗಳು ಪ್ರತಿಪಾದ್ಯವಲ್ಲ ಎಂದಷ್ಟೇ ಅಭಿಪ್ರಾಯ. ಆದ್ದರಿಂದ ಜ್ಞಾನಿಗಳು ವಿದ್ವದ್ರೂಢಿಯುಕ್ತವಾದ ಯೋಗವನ್ನು ಲೌಕಿಕರೂಢಿಗಿಂತ ಪ್ರಬಲವೆಂದು ತಿಳಿಯುತ್ತಾರಾದ್ದರಿಂದ ಪರಮಾತ್ಮನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ.)

**प्रकाशः** – अस्मिन् वाक्ये वृत्त्यन्तरेणापि सर्वशब्दप्रतिपाद्यत्वमिति शङ्कापनुत्तये योगरूढिप्रदर्शनाय ''तम्'' इत्यादिपूर्ववाक्यमुक्त्वा ''इत्यादिना'' इत्युक्तम् । प्राणो विष्णुरेवेत्यग्रे व्यक्तम् । मुख्यार्थत्वे कर्मनिर्णयोक्तश्रुत्यन्तरमाह – **अवस्वरातीति** ।।

'ತಾವಾ ಏತಾಃ' ಎಂಬ ಶ್ರುತಿಯನ್ನಷ್ಟೇ ಗ್ರಂಥದಲ್ಲಿ ಉಲ್ಲೇಖ ಮಾಡಿದ್ದರೆ ಸಾಕಾಗುತ್ತಿತ್ತು. ಇದರ ಹಿಂದಿನ 'ತಂ ಯಚ್ಛತಮ್' ಇತ್ಯಾದಿ ವಾಕ್ಯವನ್ನು ಉಲ್ಲೇಖ ಮಾಡುವ ಆವಶ್ಯಕತೆ ಏನಿತ್ತು?

ಪರಿಪೂರ್ಣಚಂದ್ರಿಕಾ

ಹೀಗೆ ಪ್ರಶ್ನಿಸಬಾರದು. ಕೇವಲ 'ತಾವಾ ಏತಾಃ' ಎಂಬ ಶ್ರುತಿಯನ್ನಷ್ಟೇ ಉಲ್ಲೇಖಿಸಿದ್ದಲ್ಲಿ ಬೇರೆ ವೃತ್ತಿಯಿಂದಲೂ ಕೂಡ ಪರಮಾತ್ಮನು ಸರ್ವಶಬ್ದವಾಚ್ಯನಾಗಿದ್ದಾನೆಂಬ ಭ್ರಾಂತಿ ಬರುತ್ತಿತ್ತು. ಅದರ ಪರಿಹಾರಕ್ಕಾಗಿ ಯೋಗ ಹಾಗೂ ರೂಢಿಗಳು ಪರಮಾತ್ಮನಲ್ಲೇ ಇರುತ್ತವೆಂದು ತಿಳಿಸುವ ಉದ್ದೇಶದಿಂದ 'ತಂ ಯಚ್ಛತಮ್' ಇತ್ಯಾದಿ ಹಿಂದಿನ ವಾಕ್ಯವನ್ನು ಉಲ್ಲೇಖಿಸಿ 'ಇತ್ಯಾದಿನಾ' ಎಂದು ಹೇಳಿರುತ್ತಾರೆ. ಈ ಶ್ರುತಿಯಲ್ಲಿರುವ ಪ್ರಾಣಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂಬ ವಿಷಯವು ಮುಂದೆ ಸ್ಪಷ್ಟವಾಗುತ್ತದೆ. ಪ್ರತಿಯೊಂದು ಶ್ರುತಿಗಳು ಪರಮಾತ್ಮನಲ್ಲೇ ಮುಖ್ಯವಾಗಿವೆ ಎಂಬ ವಿಷಯದಲ್ಲಿ ಕರ್ಮನಿರ್ಣಯದಲ್ಲಿ ಹೇಳಲ್ಪಟ್ಟ ಶ್ರುತಿಯು ಆಧಾರವಾಗಿದೆಯೆಂದು 'ಲವಸ್ವರಾತಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**ಪ್ರಕಾಶಃ** – गर्गरः = पादभूषणम् । अवस्वरति नीचै रौतीति यत्तदिन्द्राय । गोधा = पल्ली । परिसनिष्वणत् अतिशयेन स्वनतीति यत्तदपीन्द्राय । 'ष्वण शब्दे' इति धातोः । पिङ्गा चकोरी च । परिचनिष्कदत् ध्वनतीति यत्तदपीन्द्राय । गर्गरादिसर्वस्वनोऽपि नादशब्दितवर्णाभिव्यक्तिद्वारा विष्णुविषयक इत्युक्त्वा ''उद्यतम्'' इति विशिष्य सतात्पर्यं तद्वाचितोक्तेरिति भावः । इन्द्रश्च विष्णुर्मुख्यत इत्यन्तर्नये निर्णीतमिति भावः ।

'ಗರ್ಗರಃ' ಎಂದರೆ ಕಾಲ್ಗೆಜ್ಜೆ ಎಂದರ್ಥ. ಕಾಲ್ಗೆಜ್ಜೆಯು ಕಡಿಮೆ ಸ್ವರದಲ್ಲಿ ಶಬ್ದ ಮಾಡುವುದೂ ಕೂಡ ಪರಮಾತ್ಮನಿಗೋಸ್ಕರ.

'ಗೋಧಾ' ಎಂದರೆ ಹಲ್ಲಿ ಎಂದರ್ಥ. ಇದು ಅತಿಶಯವಾಗಿ ಶಬ್ದ ಮಾಡುತ್ತದೆ. ಇದೂ ಸಹ ಪರಮಾತ್ಮನಿಗಾಗಿ 'ಪರಿ ಸನಿಷ್ವಣತ್' ಎಂದರೆ ಅತಿಶಯವಾಗಿ ಶಬ್ದ ಮಾಡುತ್ತದೆ ಎಂದರ್ಥ. ಏಕೆಂದರೆ 'ಷ್ವಣ ಶಬ್ದೇ' ಎಂಬ ಧಾತುವಿನಿಂದ ಇದು ನಿಷ್ಪನ್ನವಾಗಿದೆ.

'ಪಿಂಗಾ' ಎಂದರೆ ಚಕೋರಿ ಪಕ್ಷಿಯೆಂದರ್ಥ. ಇದರ ಧ್ವನಿಯೂ ಕೂಡ ಪರಮಾತ್ಮನಿಗೋಸ್ಕರ ಎಂದು ತಿಳಿಯಬೇಕು.

ಕಾಲ್ಗೆಜ್ಜೆ ಮೊದಲಾದವುಗಳ ಎಲ್ಲಾ ವಿಧವಾದ ಧ್ವನಿಗಳೂ ನಾದಶಬ್ದಪ್ರತಿಪಾದ್ಯವಾದ ವರ್ಣಗಳಿಂದ ಅಭಿವ್ಯಕ್ತವಾಗಿ ವಿಷ್ಣುವಿಷಯಕವೇ ಆಗಿರುತ್ತವೆ ಎಂದು ಹೇಳಿ 'ಉದ್ಯತಮ್' ಎಂಬುದಾಗಿ ಎಲ್ಲಾ ಶ್ರುತಿಗಳಿಗೂ ವಿಷ್ಣುವಿನಲ್ಲೇ ತಾತ್ಪರ್ಯವೆಂದು ತಿಳಿಯುತ್ತದೆ. ಈ ಶ್ರುತಿಯಲ್ಲಿ ಇಂದ್ರನೇ ಮುಖ್ಯಪ್ರತಿಪಾದ್ಯನೆಂದು ಹೇಳಲಾಗಿದೆ. ಆದರೆ ಇಂದ್ರ ಶಬ್ದವು ವಿಷ್ಣುವಿನಲ್ಲೇ ಮುಖ್ಯಾರ್ಥವುಳ್ಳದ್ದಾಗಿದೆಯೆಂದು ಅಂತರ್ಯಾಮ್ಯಧಿಕರಣದಲ್ಲಿ ನಿರ್ಣಯಿಸಿದ್ದೇವೆ.

ಇಲ್ಲಿ ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಧ್ವನ್ಯಾತ್ಮಕಶಬ್ದಗಳಿಂದ ವರ್ಣ ಅಭಿವ್ಯಕ್ತವಾಗುತ್ತದೆ. ಅಂತಹ ವರ್ಣದಿಂದ ವಿಷ್ಣು ಪ್ರತಿಪಾದ್ಯನಾಗುತ್ತಾನೆ. ಈ ನಾದ ಎಂಬ ವರ್ಣಕ್ಕೆ ಪರಮಾತ್ಮನಲ್ಲಿ ಶಕ್ತಿಯಿದೆ. ಆದರೆ 'ತತ್ರಮಿತಿಶೇಷತ್ವಂ' ಎಂಬಂತಹ ತಾತ್ಪರ್ಯವಿದೆ ಹೊರತು, 'ತತ್ರಮತಿ ಇಚ್ಛಯಾ ಉಚ್ಚರಿತತ್ವ' ಎಂಬಂತಹ

ತಾತ್ಪರ್ಯವು ಇರುವುದಿಲ್ಲ. ಹಲ್ಲಿ, ಗೆಜ್ಜೆ ಮೊದಲಾದವುಗಳು ಶಬ್ದ ಮಾಡುತ್ತಿವೆ ಹೊರತು ಭಗವಂತನನ್ನೇ ಈ ಶಬ್ದವು ಪ್ರತಿಪಾದನೆ ಮಾಡುತ್ತಿದೆಯೆಂಬ ಅಭಿಪ್ರಾಯದಿಂದ ಶಬ್ದ ಮಾಡುತ್ತಿಲ್ಲ. ಇಂತಹ ತಾತ್ಪರ್ಯವನ್ನು ಕೇವಲ ಚೇತನರು ಪ್ರಯೋಗಿಸುವ ಶಬ್ದದಲ್ಲಷ್ಟೇ ಹೇಳಬಹುದು. ಧ್ವನ್ಯಾತ್ಮಕ ಶಬ್ದಗಳಲ್ಲಿ ಹೇಳಲು ಸಾಧ್ಯವಿಲ್ಲ. ಆದ್ದರಿಂದ ತಾತ್ಪರ್ಯರೂಪವಾದ ಶಕ್ತಿಯನ್ನು ಇಲ್ಲಿ ವಿವಕ್ಷಿಸಬಾರದು. ಕೇವಲ ತತ್ಪ್ರಮಿತಿಸಾಧನತ್ವರೂಪವಾದ ಶಕ್ತಿಯನ್ನಷ್ಟೇ ವಿವಕ್ಷಿಸಬೇಕು. ಆದ್ದರಿಂದ ಇಚ್ಛಾಘಟಿತವಾದ ತಾತ್ಪರ್ಯವೇ ಬೇರೆ, ಇಚ್ಛೆಯಿಂದ ಘಟಿತವಾಗದ ತಾತ್ಪರ್ಯವೇ ಬೇರೆ. ಇಚ್ಛೆಯಿಂದ ಅಘಟಿತವಾದ ತಾತ್ಪರ್ಯವು ಚೇತನನ ಶಬ್ದಪ್ರಯೋಗವಲ್ಲದ ಶಬ್ದಗಳಲ್ಲಿರುತ್ತದೆ. ಹಾಗಾಗಿ ವೇದದಲ್ಲಿಯೂ ಕೂಡ 'ತತ್ ಪ್ರಮಿತಿಸಾಧನತ್ವರೂಪವಾದ ತಾತ್ಪರ್ಯವನ್ನೇ ವಿವಕ್ಷಿಸಬೇಕು. ಏಕೆಂದರೆ ವೇದವು ಅಪೌರುಷೇಯವಾದ್ದರಿಂದ ಅಲ್ಲಿ ಪುರುಷನ ಇಚ್ಛೆಗೆ ಅವಕಾಶವಿರುವುದಿಲ್ಲ. ಅಥವಾ ವೇದದ ವಿಷಯದಲ್ಲಿ ಪುರುಷನ ಇಚ್ಛೆಗೂ ಅವಕಾಶವಿರುತ್ತದೆಂದು ತಿಳಿಯಬಹುದು. ವೇದದ್ರಷ್ಟಾರರಾದ ಋಷಿಗಳ ಅಭಿಪ್ರಾಯಕ್ಕೆ ಅವಕಾಶ-ವಿರುತ್ತದೆಂದು ನಾವು ಒಪ್ಪಿದ್ದೇವೆ. ಆದ್ದರಿಂದ ಇಚ್ಛಾಘಟಿತವಾದ ತಾತ್ಪರ್ಯವನ್ನು ವೇದದಲ್ಲಿ ಹೇಳಬಹುದು. ಆದರೆ ಧ್ವನ್ಯಾತ್ಮಕಶಬ್ದಗಳಲ್ಲಿ ಹೇಳಲು ಸಾಧ್ಯವಾಗುವುದಿಲ್ಲ.

**प्रकाशः –**

पादभूषाच धिकारं तत्कृतं स्वरितो वदेत् ।
अद्भुतत्वं हरेर्वक्ति पिङ्गा कण्ठगशब्दवत् ।।
तामेवाद्भुततां वक्ति गृहगोधा परापि च ।

ಕಾಲ್ಗೆಜ್ಜೆಯು ಪರಮಾತ್ಮನ ಎದುರು ಎಲ್ಲಾ ವಸ್ತುಗಳಿಗೂ ಧಿಕ್ಕಾರ ಹೇಳುತ್ತದೆ. ಚಕೋರ ಪಕ್ಷಿಯು ಪರಮಾತ್ಮನನ್ನು ಅದ್ಭುತ ಎಂದು ಹೇಳುತ್ತದೆ. ಅದೇ ಅದ್ಭುತತ್ವವನ್ನು ಹಲ್ಲಿಯೂ ಕೂಡ ಹೇಳುತ್ತಿದೆ.

**प्रकाशः –**

इति कर्मनिर्णयोक्तस्मृत्यैतन्मन्त्रार्थो बोध्यः ।

ಕರ್ಮನಿರ್ಣಯದಲ್ಲಿ ಉದಾಹರಿಸಿದ ಸ್ಮೃತಿಯಿಂದ 'ಅವಸ್ವರಾತಿ' ಎಂಬ ಶ್ರುತ್ಯರ್ಥವನ್ನು ತಿಳಿಯಬೇಕು.




ಜಗತ್ತಿನಲ್ಲಿ ಶ್ರುತವಾದ ಸರ್ವಶಬ್ದಗಳಿಂದ ಪರಮಾತ್ಮನೇ ಮುಖ್ಯವಾಗಿ ಪ್ರತಿಪಾದ್ಯನಾಗಿದ್ದಾನೆ. ಇದನ್ನು 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬ ಸೂತ್ರವು ಪ್ರತಿಪಾದನೆ ಮಾಡುತ್ತಿದೆ. ಐತರೇಯೋಪನಿಷತ್ತಿನಲ್ಲಿ ಪರಮಾತ್ಮನು ಬ್ರಹ್ಮಾದಿಜೀವರ ಶರೀರದಲ್ಲಿ ಪ್ರವೇಶ ಮಾಡಿದ್ದಾನೆಂದು ಪ್ರಾರಂಭ ಮಾಡಿ, ಸಕಲ ಋಜ್ ಮಂತ್ರಗಳೂ, ಸಕಲ ವೇದಗಳೂ, ಧ್ವನಿಗಳೆಲ್ಲವೂ ಪರಮಾತ್ಮನ ನಾಮಗಳೆಂದು ಮುಕ್ತಾಯ

ಮಾಡಲಾಗಿದೆ. ಆದ್ದರಿಂದ ಸೂತ್ರದಲ್ಲಿ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವು ಉಪಲಕ್ಷಣವೆಂದು ತಿಳಿಯಬೇಕು. ಅಂದರೆ 'ಜ್ಯೋತಿಃ' ಶಬ್ದದ ಸಮನ್ವಯವಷ್ಟೇ ವಿವಕ್ಷಿತವಲ್ಲ. ಹಾಗಾಗಿದ್ದಲ್ಲಿ ಸರ್ವಶಬ್ದಸಮನ್ವಯದ ಉಪಪಾದನೆಗಾಗಿ 'ಉಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದಾಗಿ ಉಪನಿಷತ್ತನ್ನು ಉಲ್ಲೇಖಿಸುವ ಅವಶ್ಯಕತೆ ಇರುತ್ತಿರಲಿಲ್ಲ. ಹೀಗೆ ಸರ್ವಶಬ್ದಸಮನ್ವಯಕ್ಕೆ ಉಪಯುಕ್ತವಾದ ಪ್ರಮಾಣವನ್ನು ಹೇಳಿದ್ದರಿಂದ ಸೂತ್ರದಲ್ಲಿ ಶ್ರುತವಾದ 'ಜ್ಯೋತಿಃ' ಎಂಬ ಶಬ್ದವು ಉಪಲಕ್ಷಣವೆಂದು ತಿಳಿಯಬೇಕು. ಅಂದರೆ ಸಕಲಶಬ್ದಗಳೂ ಕೂಡ ಪರಮಾತ್ಮನನ್ನೇ ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ಈ ವಿಷಯದಲ್ಲಿ ಐತರೇಯೋಪನಿಷತ್ತೇ ಆಧಾರವಾದ ಪ್ರಮಾಣ. ಮತ್ತು

ಅವಸ್ವರತಿ ಗರ್ಗರೋ ಗೋಧಾ ಪರಿ ಸನಿಷ್ವಣತ್ ।
ಪಿಂಗಾ ಪರಿ ಚನಿಷ್ಕದದಿಂದ್ರಾಯ ಬ್ರಹ್ಮೋದ್ಯತಮ್ ॥

ಎಂಬ ಶ್ರುತಿಯೂ ಸಹ ಸಕಲವಿಧವಾದ ಧ್ವನಿಗಳಿಂದ ಪರಮಾತ್ಮನು ಪ್ರತಿಪಾದ್ಯನೆಂದು ಹೇಳಿ, ವಿಶೇಷವಾಗಿ ವೇದಪ್ರತಿಪಾದ್ಯತ್ವವನ್ನು ಸಮರ್ಥನೆ ಮಾಡುತ್ತಿದೆ. ಆದ್ದರಿಂದಲೂ ಪರಮಾತ್ಮನೇ ಸರ್ವಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನು.



• • • • •

## ವೈದಿಕ ಸರ್ವಶಬ್ದಗಳ ಯೌಗಿಕಾರ್ಥ ಶ್ರೀಹರಿ ಮಾತ್ರ

## तात्पर्यचन्द्रिका

**"णकारो बलं षकारः प्राण आत्मा" इति विष्णुशब्दान्तर्गतणकारषकारयोरर्थमुक्त्वा "स यो हैतौ णकारषकारावनुसंहितमृचो वेद" इति श्रुतौ णकारषकारार्थः सर्वत्र पूर्वोत्तरवर्णसंहितार्थ इत्युक्तत्वाच्च ।**

ಅನುವಾದ - ಸಮಗ್ರ ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಈ ವಿಷಯದಲ್ಲಿ ಮತ್ತೊಂದು ಶ್ರುತಿ ಹೀಗಿದೆ - 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ' 'ಣಕಾರವು ಬಲ, ಷಕಾರವು ಶಾರೀರ ಕ್ರಿಯೆ ಮತ್ತು ವ್ಯಾಪ್ತಿ' ಎಂಬುದಾಗಿ ವಿಷ್ಣು ಎಂಬ ಹೆಸರಿನಲ್ಲಿ ಇರುವಂತಹ 'ಣಕಾರ' ಹಾಗೂ 'ಷಕಾರ'ಗಳು ವಿಷ್ಣುವಿನ ಬಲ ಹಾಗೂ ಶಾರೀರಕ್ರಿಯೆಗಳನ್ನು ಪ್ರತಿಪಾದನೆ ಮಾಡುತ್ತಿವೆ. ಹೀಗೆ ಹೇಳಿದ ಮೇಲೆ ಮುಂದಿನ ವಾಕ್ಯವು 'ಸ ಯೋ ಹೇತೌ ಣಕಾರಷಕಾರಾವನುಸಂಹಿಮೃಚೋ ವೇದ' 'ಎಲ್ಲೆಡೆ ಇದೇ ರೀತಿಯಲ್ಲಿ ಪೂರ್ವೋತ್ತರ ವರ್ಣಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಯಾರು ತಿಳಿಯುತ್ತಾನೋ', ಇತ್ಯಾದಿಯಾಗಿ ಹೇಳಲಾಗಿದೆ. 'ಣಕಾರ', 'ಷಕಾರ' ಮತ್ತು ಇವುಗಳ ಸಂಧಿಯಿಂದ ಪ್ರತಿಪಾದ್ಯವಾದ ಅರ್ಥವೇ ಎಲ್ಲಾ ಋಜ್ ಮಂತ್ರಗಳಲ್ಲಿ ಪೂರ್ವೋತ್ತರವರ್ಣಗಳ ಸಂಹಿತೆಯಿಂದಲೂ ಪ್ರತಿಪಾದ್ಯವಾಗಿದೆ. 'ವಿಷ್ಣುನಾಮಕ್ಕೆ ಸಮಾನಾರ್ಥಕಗಳಾಗಿವೆ' ಎಂಬ ಜ್ಞಾನಪೂರ್ವಕವಾಗಿ ಎಲ್ಲ ಸಂಹಿತೆಗಳ ಅಧ್ಯಯನವನ್ನು ಮಾಡಬೇಕೆಂದು ಹೇಳುತ್ತಿದೆ. ಆದ್ದರಿಂದಲೂ ಪರಮಾತ್ಮನೇ ಸಕಲವೇದಪ್ರತಿಪಾದ್ಯನು.

**''अः इति ब्रह्म'' इति ब्रह्मवाचितयोक्तेनाकारेण सह सर्वशब्दानां समानार्थत्वस्य ''अकारो वै सर्वा वाक्'' इति श्रुत्युक्तेश्च ।**

'ಅಃ ಇತಿ ಬ್ರಹ್ಮ' 'ಅ ಎಂಬ ಅಕ್ಷರವು ಬ್ರಹ್ಮನ ಹೆಸರು' ಎಂಬ ಶ್ರುತಿಯಲ್ಲಿ 'ಅ'ಕಾರವು ಪರಮಾತ್ಮನ ಹೆಸರೆಂದು ಹೇಳಲಾಗಿದೆ. 'ಅಕಾರೋ ವೈ ಸರ್ವಾ ವಾಕ್' ಎಂಬ ಮತ್ತೊಂದು ಶ್ರುತಿಯಲ್ಲಿ 'ಅ'ಕಾರವು ಎಲ್ಲಾ ಶಬ್ದಗಳ ವ್ಯಾಖ್ಯಾನ ರೂಪವೆಂದು ಹೇಳಲಾಗಿದೆ. ವ್ಯಾಖ್ಯಾನ ಹಾಗೂ ವಾಖ್ಯೇಯಗಳಿಗೆ ಬೇರೆ ಬೇರೆ ಅರ್ಥವನ್ನು ಹೇಳುವುದು ಯುಕ್ತವಲ್ಲ. ಆದ್ದರಿಂದ ಎರಡು ಶ್ರುತಿವಾಕ್ಯಗಳನ್ನು ವಿಚಾರ ಮಾಡಿದಾಗ ಪರಮಾತ್ಮನೇ ಸರ್ವಶಬ್ದವಾಚ್ಯನೆಂದು ಸ್ಪಷ್ಟವಾಗುತ್ತದೆ.

**''सृजतो हि श्रुतयोऽनुवर्तन्ते नैवासृजतः किं वा विदधते किं वा निषेधन्ति स्तुतिमात्रा एव ते स्युः'' इति श्रुतौ विध्यादिभागस्यापि भगवत्स्तुतित्वोक्तेश्च ।**

'ಸೃಜತೋ ಹಿ ಶ್ರುತಯೋಽನುವರ್ತಂತೇ ನೈವಾಸೃಜತಃ ಕಿಂ ವಾ ವಿದಧತೇ ಕಿಂ ವಾ ನಿಷೇಧಂತಿ ಸ್ತುತಿಮಾತ್ರಾ ಏವ ತೇ ಸ್ಯುಃ' ಎಂಬ ಶ್ರುತಿಯಲ್ಲಿ ಕರ್ಮಪರವಾದ ವೇದಗಳೂ ಕೂಡ ಭಗವಂತನ ಸ್ತೋತ್ರರೂಪವಾಗಿವೆಯೆಂದು ಹೇಳಲಾಗಿದೆ.

**''यद्वै किं चैतदध्यगीष्टा नामैवैतन्नाम वा ऋग्वेदो यजुर्वेदः सामवेद आथर्वणश्चतुर्थः'' इत्यादौ ''नामैवैतत्'' इत्यन्ते छान्दोग्ये ''यद्वाच ओमिति यच्च नेति यच्चास्याः क्रूरं यदुचोल्बणिष्णु तद्वियूय कवयोऽन्वविन्दन्नामायन्न समतृप्यञ्छ्रुतेधि'' इत्यैतरेये च सर्व वैदिक शब्दानां भगवन्नामत्वोक्तेश्च**

'ಯದ್ವೈ ಕಿಂ ಚೈತದಧ್ಯಗೀಷ್ಟಾ ನಾಮೈವೈತನ್ನಾಮ ವಾ ಋಗ್ವೇದೋ ಯಜುರ್ವೇದಃ ಸಾಮವೇದ ಆಥರ್ವಣಶ್ಚತುರ್ಥಃ' ಋಗ್ವೇದ, ಯಜುರ್ವೇದ, ಸಾಮವೇದ ನಾಲ್ಕನೆಯ ಅಥರ್ವಣವೇದ ಎಲ್ಲವೂ ಕೂಡ ಪರಮಾತ್ಮನ ನಾಮಸ್ವರೂಪವೇ ಆಗಿವೆ ಎಂಬಲ್ಲಿ 'ನಾಮೈವೈತತ್' ಎಂಬುದಾಗಿ ಛಾಂದೋಗ್ಯದ ಸಪ್ತಮಾಧ್ಯಾಯದ ಕೊನೆಯಲ್ಲಿ ಅವಧಾರಣಪುರಸ್ಸರವಾಗಿ ಎಲ್ಲಾ ಶಬ್ದಗಳೂ ಹರಿನಾಮಗಳೆಂದೇ ಹೇಳಲಾಗಿದೆ.

ಐತರೇಯೋಪನಿಷತ್ತಿನಲ್ಲಿಯೂ ಮತ್ತೊಂದು ಶ್ರುತಿ ಹೀಗಿದೆ -'ಯದ್ವಾಚ ಓಮಿತಿ ಯಚ್ಚ ನೇತಿ ಯಚ್ಚಾಸ್ಯಾಃ ಕ್ರೂರಂ ಯದುಚೋಲ್ಬಣಿಷ್ಣು ತದ್ವಿಯೂಯ ಕವಯೋಽನ್ವವಿಂದನ್ನಾಮಾಯನ್ನ ಸಮತೃಪ್ಯಂಛ್ರುತೇಧಿ'' 'ಅಂಗೀಕಾರವಾಚಕ ಶಬ್ದ, ನಿಷೇಧವಾಚಕ ಶಬ್ದ, ಅರ್ಥದಲ್ಲಿ ಕ್ರೂರವಾದ ಶಬ್ದ, ಕೇಳಲು ಕಠಿಣವಾದ ಶಬ್ದ, ಮಿತ-ಅಮಿತ ಮೊದಲಾದ ಶಬ್ದಗಳು ಇವೆಲ್ಲವನ್ನೂ ವಿಚಾರ ಮಾಡಿ, ವಿವೇಕಿಗಳು ಜ್ಞಾನವನ್ನು ಸಂಪಾದನೆ ಮಾಡಿದರು. ಜ್ಞಾನದ ಪರಿಪಕ್ವಾವಸ್ಥೆಯನ್ನು ಹೊಂದಿದಾಗ ಮುಕ್ತರಾದರು, ಕೃತಕೃತ್ಯರಾದರು' ಎಂಬುದಾಗಿ ಶ್ರುತಿಯಲ್ಲಿ ಅಂಗೀಕಾರವಾಚಕ,

ನಿಷೇಧಾರ್ಥಕ, ಕಠಿಣಾರ್ಥಕ, ಕರ್ಣಕಠೋರವಾದ ಶಬ್ದಗಳೆಲ್ಲವನ್ನೂ ವಿವೇಕಿಗಳು ವಿಚಾರಿಸಿ, ನಾಮಗಳ ಪ್ರವೃತ್ತಿನಿಮಿತ್ತಗಳನ್ನು ತಿಳಿದರು. ಆ ಜ್ಞಾನವು ಪರಿಪಕ್ವವಾದಾಗ ಮುಕ್ತರಾಗಿ ಕೃತಕೃತ್ಯರಾದರು ಎಂಬುದಾಗಿ ನಾಮಮಾತ್ರ ಜ್ಞಾನಿಗಳು ಕೃತಕೃತ್ಯರಾಗುವುದನ್ನು ಹೇಳಲಾಗಿದೆ. ಮತ್ತೊಂದು ಶ್ರುತಿಯಲ್ಲಿ ಪರಮಾತ್ಮನನ್ನು ತಿಳಿದವನೇ ಮುಕ್ತನಾಗುತ್ತಾನೆಂದು ಹೇಳಲಾಗಿದೆ. ಇವೆರಡು ವಾಕ್ಯಗಳು ಉಪಪನ್ನವಾಗಬೇಕಾದರೆ ವೈದಿಕಶಬ್ದಗಳೆಲ್ಲವೂ ಪರಮಾತ್ಮವಾಚಕಗಳೆಂದು ಅವಶ್ಯವಾಗಿ ತಿಳಿಯಬೇಕೆಂದು ನಿರ್ಣಯವಾಗುತ್ತದೆ. ಇದನ್ನು 'ನಾಮವಿತ್ ಕೃತಕೃತ್ಯತಾ' ಎಂಬುದರಿಂದ ತೋರಿಸಿದ್ದಾರೆ.

**''कश्छन्दसां योगमावेद धीर'' इति श्रुतौ ''इत्यस्या हृदयं साक्षान्नान्यो मद्वेद कश्चन'' इति स्मृतौ च वैदिकयौगिकार्थस्य दुर्ज्ञानत्वोक्तेश्च ।**

'ಕಶ್ಛಂದಸಾಂ ಯೋಗಮಾವೇದ ಧೀರ' 'ಯಾರು ತಾನೇ ವೇದಾರ್ಥವನ್ನು ತಿಳಿಯಲು ಸಮರ್ಥರು' ಎಂಬ ಶ್ರುತಿಯಲ್ಲಿ 'ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ' 'ಎಲ್ಲಾ ಶ್ರುತಿಗಳ ತಾತ್ಪರ್ಯ ನಾನೇ ಆಗಿದ್ದೇನೆಂದು ತಿಳಿಯಬೇಕು. ನನ್ನನ್ನು ಬಿಟ್ಟು ಮತ್ತೊಬ್ಬನನ್ನು ಶ್ರುತಿಯ ತಾತ್ಪರ್ಯನೆಂದು ತಿಳಿಯಬಾರದು' ಹೀಗೆ ಶ್ರೀಕೃಷ್ಣನೇ ಹೇಳಿಕೊಂಡ ಭಾಗವತ ಸ್ಮೃತಿಯಲ್ಲಿಯೂ ವೇದದಲ್ಲಿರುವ ಸಕಲಪದಗಳ ಯೋಗಾರ್ಥವನ್ನು ತಿಳಿಯುವುದು ಬಹಳ ಕಷ್ಟವೆಂದು ಹೇಳಲಾಗಿದೆ.

**प्रकाशः –**

विष्णुनामार्थरूपत्वं संहितादेरथाब्रवीत् ।
णकारं च षकारं च बलचेष्टात्मकं वदन् ।
तज्ज्ञानपूर्वकत्वेन संहिताध्ययनं तथा ।
उपसर्गत्वतो वेस्तु ताच्छील्यार्थादुनस्तथा ।
णकारश्च षकारश्च नामरूपतया स्मृतौ ॥

ವಿವರಣೆ - ವಿಷ್ಣು ಎಂಬ ಹೆಸರಿನ ಅರ್ಥವನ್ನೇ ಎಲ್ಲ ಸಂಧಿಗಳು, ಹಿಂದಿನ-ಮುಂದಿನ ವರ್ಣಗಳು ಪ್ರತಿಪಾದನೆ ಮಾಡುತ್ತಿವೆಯೆಂದು ವೇದವು ಹೇಳುತ್ತಿದೆ. ಣಕಾರವನ್ನು, ಷಕಾರವನ್ನು ಬಲಚೇಷ್ಟಾರೂಪವೆಂದು ಹೇಳಿ ಹಾಗೆಯೇ ಅಂತಹ ವಿಷ್ಣುವನ್ನು ತಿಳಿದೇ ಸಂಹಿತಾಧ್ಯಯನವನ್ನು ಮಾಡಬೇಕೆಂದು ಶ್ರುತಿಯು ಹೇಳಿದೆ.

'ವಿ' ಎಂಬುದು ಉಪಸರ್ಗವಾಗಿದೆ 'ಉನ್' ಎಂಬುದು ಶೀಲಾರ್ಥದಲ್ಲಿರುವ ಪ್ರತ್ಯಯವಾಗಿದೆ. ಆದ್ದರಿಂದ ಇವೆರಡೂ ಅಪ್ರಧಾನ. ಣಕಾರ ಹಾಗೂ ಷಕಾರಗಳೇ ಮುಖ್ಯವಾಗಿ ವಿಷ್ಣುವಿನ ಹೆಸರೆಂದು ಶ್ರುತಿಯ ಅಭಿಪ್ರಾಯ.

**प्रकाशः** – इत्यनुव्याख्यानं हृदि कृत्वा विष्णोस्सर्वशब्दमुख्यार्थत्वे हेत्वन्तरमाह – **णकार इति** ।। णकारषकारौ विष्णोर्बलचेष्टाप्रतिपादकावित्यर्थः ।।

ಈ ಅನುವ್ಯಾಖ್ಯಾನವನ್ನು ಮನಸ್ಸಿನಲ್ಲಿಟ್ಟುಕೊಂಡು ವಿಷ್ಣುವೇ ಸಕಲಶಬ್ದಗಳಿಂದ ಮುಖ್ಯಾರ್ಥನಾಗಿದ್ದಾನೆಂಬ ವಿಷಯದಲ್ಲಿ ಮತ್ತೊಂದು ಹೇತುವನ್ನು 'ಣಕಾರಃ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಣಕಾರ ಹಾಗೂ ಷಕಾರಗಳು ವಿಷ್ಣುವಿನ ಬಲ ಹಾಗೂ ಚೇಷ್ಟಗಳನ್ನು ಪ್ರತಿಪಾದನೆ ಮಾಡುತ್ತಿವೆ ಎಂದರ್ಥ.

**प्रकाशः** – **विष्णुशब्देति** ।। वीत्यस्योपसर्गत्वेनोत्तरपदार्थविशेषकत्वादुन् प्रत्ययस्य ताच्छील्यार्थत्वादुपसर्जनत्वं मन्वानस्य वेदस्य णकारषकारौ द्वावेव नामस्वरूपतयाऽभिमताविति भावः ।

'ವಿ' ಎಂಬುದು ಉಪಸರ್ಗವಾದ್ದರಿಂದ ಉತ್ತರಪದಾರ್ಥದಲ್ಲಿ ವಿಶೇಷಣವಾಗಿದೆ. ಉನ್ ಪ್ರತ್ಯಯವು ಶೀಲಾರ್ಥದಲ್ಲಿರುವುದರಿಂದ ಅದೂ ಸಹ ಉಪಸರ್ಜನವಾಗಿದೆ. ಆದ್ದರಿಂದ ಹೀಗೆ ತಿಳಿದ ವೇದಕ್ಕೆ ಣಕಾರ ಹಾಗೂ ಷಕಾರಗಳೆರಡೇ ವಿಷ್ಣುವಿನ ನಾಮಸ್ವರೂಪವಾಗಿವೆಯೆಂಬ ಅಭಿಪ್ರಾಯವಿದೆ.

**प्रकाशः** – ऋचोऽनुसंहितं ऋचां सर्वसंहितासु । णकारषकारौ यो वेद णकारषकारतत्संहिताभिः प्रतिपाद्यो योऽर्थस्तमेव सर्वत्र पूर्वोत्तरवर्णतत्संहिताभिः प्रतिपाद्यतया यो वेदेत्यर्थः ।

'ಋಚೋऽನುಸಂಹಿತಂ' ಎಂದರೆ ಋಗ್ವೇದದ ಎಲ್ಲಾ ಸಂಹಿತೆಗಳಲ್ಲಿ ಎಂದರ್ಥ. ಅಂದರೆ 'ಣಕಾರಷಕಾರೌ ಯೋ ವೇದಃ' ಎಂದರೆ 'ಣಕಾರ' ಹಾಗೂ 'ಷಕಾರ' ಇವುಗಳ ಸಂಹಿತೆಯಿಂದ ಪ್ರತಿಪಾದ್ಯವಾದ ಯಾವ ಅರ್ಥವಿದೆಯೋ, ಅದೇ ಹಿಂದಿನ, ಮುಂದಿನ ವರ್ಣಗಳಿಂದ ಮತ್ತು ವರ್ಣಗಳ ಸಂಹಿತಾದಿಂದ ಪ್ರತಿಪಾದ್ಯವಾಗಿದೆ ಎಂದು ತಿಳಿಯಬೇಕು. ಅಂತಹ ವಸ್ತು ಪರಮಾತ್ಮನೇ ಆಗಿರುತ್ತಾನೆ.

**प्रकाशः** – णकारषकारार्थ इत्युपलक्षणम् । तत्संहितार्थ इत्यपि ध्येयम् । एतेन फलोक्तेर्भावेन तत्र तात्पर्यमपि सूचितम् ।

ಣಕಾರ, ಷಕಾರಗಳ ಅರ್ಥವೆಂದು ಹೇಳಿದ್ದು ಕೇವಲ ಉಪಲಕ್ಷಣವಾಗಿದೆ. ಇವುಗಳ ಸಂಹಿತಾರ್ಥವನ್ನೂ ಕೂಡ ವಿವಕ್ಷಿಸಬೇಕು. ಹೀಗೆ ಹೇಳಿದ್ದರಿಂದ ಫಲವನ್ನು ಹೇಳಿದ್ದಕ್ಕೆ ತಾತ್ಪರ್ಯವನ್ನು ಸೂಚನೆ ಮಾಡುವುದೇ ಪ್ರಯೋಜನವೆಂದು ತಿಳಿಸಿದಂತಾಯಿತು.

**प्रकाशः** –

अ इति ब्रह्म कथितं तत् व्याख्यानात्मता तथा ।
शब्दानामपि सर्वेषां नामवित् कृतकृत्यता ।।

ಪರಿಪೂರ್ಣಚಂದ್ರಿಕಾ

ಅ ಇತಿ ಬ್ರಹ್ಮ ಕಥಿತಂ ತದ್ವ್ಯಾಖ್ಯಾನಾತ್ಮತಾ ತಥಾ ।
ಶಬ್ದಾನಾಮಪಿ ಸರ್ವೇಷಾಂ ನಾಮವಿತ್ ಕೃತಕೃತ್ಯತಾ ॥

ಶ್ರುತಿಯು 'ಅ' ಎಂಬ ಅಕ್ಷರದಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ಹೇಳುತ್ತಿದೆ. ಮತ್ತೊಂದು ಶ್ರುತಿಯು ಸಕಲವೇದಗಳು ಅಕಾರದ ವ್ಯಾಖ್ಯಾನವೆಂದು ಹೇಳುತ್ತಿದೆ. ಇವೆರಡು ಶ್ರುತಿಗಳಿಂದ ಗಮನಿಸಿದಾಗ, ಸಕಲವೇದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತಿವೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಯಾರು ಸಕಲಶಬ್ದಗಳಿಂದ ಬ್ರಹ್ಮನೇ ಪ್ರತಿಪಾದ್ಯನೆಂದು ತಿಳಿಯುತ್ತಾರೋ, ಅವರೇ ಕೃತಕೃತ್ಯರು.

**प्रकाशः – इत्यनुव्याख्यानं हृदि कृत्वा वाक्यान्तरेण विष्णोस्सर्वशब्दवाच्यतामाह – अःइतीति ।।**

ಮೇಲಿನ ಅನುವ್ಯಾಖ್ಯಾನ ಶ್ಲೋಕವನ್ನು ಮನಸ್ಸಿನಲ್ಲಿಟ್ಟುಕೊಂಡು ಮತ್ತೊಂದು ವಾಕ್ಯದಿಂದ ವಿಷ್ಣುವೇ ಸರ್ವಶಬ್ದವಾಚ್ಯನೆಂದು ಪ್ರತಿಪಾದನೆ ಮಾಡುತ್ತಿದ್ದಾರೆ 'ಅಃ ಇತಿ' ಎಂಬ ವಾಕ್ಯದಿಂದ.

**प्रकाशः – ब्रह्मवाचितयेति ।। अभेदार्थत्वेत्वितिकरणवैयर्थ्यमिति भावः ।।**

'ಅಃ ಇತಿ ಬ್ರಹ್ಮ' ಎಂಬ ಶ್ರುತಿಗೆ ಕೆಲವರು ಅಕಾರನೇ ಬ್ರಹ್ಮನೆಂದು ವ್ಯಾಖ್ಯಾನ ಮಾಡುತ್ತಾರೆ. ಹಾಗೆ ಅಭೇದ ಹೇಳಿದಲ್ಲಿ 'ಇತಿ' ಶಬ್ದವು ವ್ಯರ್ಥವಾಗುತ್ತದೆ. 'ಅಃ ಇತಿ ಬ್ರಹ್ಮ'ಎಂಬಲ್ಲಿ 'ಇತಿ' ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಅಕಾರವೇ ಬ್ರಹ್ಮನಲ್ಲ. ಅಕಾರದಿಂದ ಬ್ರಹ್ಮನು ಪ್ರತಿಪಾದ್ಯನೆಂದು ಸ್ಪಷ್ಟವಾಗುತ್ತದೆ.

**प्रकाशः – समानार्थत्वस्येति ।। साक्षादैक्यस्य प्रत्यक्षादिविरुद्धत्वेन लक्षणाश्रयणस्यावश्यकत्वादिति भावः ।**

'ಅಕಾರೋ ವೈ ಸರ್ವಾ ವಾಕ್' ಎಂಬ ಶ್ರುತಿಯಲ್ಲಿ ಸಕಲ ವಾಕ್ಯಗಳು ಅಕಾರವೆಂದು ಹೇಳಲಾಗಿದೆ. ಒಂದೇ 'ಅ' ಎಂಬ ಅಕ್ಷರವು ಸಕಲ ವಾಕ್ಯಗಳಾಗುವುದು ಪ್ರತ್ಯಕ್ಷ ವಿರುದ್ಧ. ಆದ್ದರಿಂದ 'ಸರ್ವಾ ವಾಕ್' ಎಂಬ ಪದಕ್ಕೆ ಎಲ್ಲಾ ವಾಕ್ಯಗಳು ಅಕಾರದ ವ್ಯಾಖ್ಯಾನವೆಂದು ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು.

**प्रकाशः – ननु सिद्धार्थकस्य ब्रह्मार्थकत्वेऽपि न क्रियार्थस्येत्यत आह – सृजते इति ।।**

'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇವೇ ಮೊದಲಾದ ಸಿದ್ಧಾರ್ಥಬೋಧಕವಾದ ಶ್ರುತಿಗಳು ಬ್ರಹ್ಮಪರವಾಗಲಿ, ಆದರೆ 'ಜ್ಯೋತಿಷ್ಟೋಮೇನ ಯಜೇತ' ಇವೇ ಮೊದಲಾದ ಕರ್ಮವಾಚಕವಾದ ಶ್ರುತಿಗಳು ಬ್ರಹ್ಮಪರವೆಂದು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಸೃಜತೇ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः – श्रुतिगीतातात्पर्योक्तशाण्डिल्यश्रुतौ स्तुतित्वोक्तेरित्यर्थः ।** ''**नामवित् कृतकृत्यता**'' **इत्यत्र नामपदेन तुल्यन्यायतया सूचितश्रुत्या तदुपात्तश्रुत्या चैतमर्थं साधयति – यद्वा इति ।।**

ಶ್ರುತಿಗೀತಾತಾತ್ಪರ್ಯದಲ್ಲಿ ಹೇಳಲ್ಪಟ್ಟ ಶಾಂಡಿಲ್ಯಶ್ರುತಿಯಲ್ಲಿ ಕರ್ಮಪರವಾದ ವಾಕ್ಯಗಳೂ ಕೂಡ ಭಗವಂತನ ಸ್ತುತಿಪರವೆಂದು ಸಮರ್ಥಿಸಲಾಗಿದೆ. ಆದ್ದರಿಂದ ಕರ್ಮವಾಚಕವಾದ 'ಜ್ಯೋತಿಷ್ಟೋಮೇನ ಯಜೇತ' ಇತ್ಯಾದಿ ಶ್ರುತಿಗಳೂ ಕೂಡ ಹರಿಪರವಾಗುತ್ತವೆ.

'ನಾಮವಿತ್ ಕೃತಕೃತ್ಯತಾ' ಎಂಬ ಅನುವ್ಯಾಖ್ಯಾನದ ಮಾತಿನಲ್ಲಿ 'ನಾಮ' ಎಂಬ ಪದದಿಂದ ತುಲ್ಯನ್ಯಾಯದಿಂದ ಸೂಚಿತವಾದ ಎರಡು ಶ್ರುತಿಗಳನ್ನು ವಿವಕ್ಷಿಸಬೇಕು. 'ನಾಮವೈತತ್' ಎಂಬ ಛಾಂದೋಗ್ಯಶ್ರುತಿಯನ್ನು ಮತ್ತು 'ನಾಮಾಯತ್ತಾ ಸಮತೃಪ್ಯನ್ ಶೃತೇಧಿ' ಎಂಬ ಐತರೇಯಶ್ರುತಿಯನ್ನೂ ಕೂಡ ವಿವಕ್ಷಿಸಬೇಕು. ಈ ಎರಡು ಶ್ರುತಿಗಳಲ್ಲಿ ಸಕಲಶಬ್ದಗಳು ಭಗವಂತನ ನಾಮಸ್ವರೂಪವಾಗಿವೆ ಎಂದು 'ಯದ್ವಾ' ಎಂಬ ವಾಕ್ಯದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः – नारदं प्रति सनत्कुमारवचनं छान्दोग्ये सप्तमेऽध्याये ।।**

'ನಾಮ್ನೈವೇತತ್' ಎಂಬ ಛಾಂದೋಗ್ಯದಲ್ಲಿರುವ ಶ್ರುತಿಯು ನಾರದಮಹರ್ಷಿಗಳನ್ನು ಸನತ್ಕುಮಾರರು ಹೇಳುವಂತಹ ಉಪದೇಶವಾಗಿದೆ. ಇದು ಸಪ್ತಮಾಧ್ಯಾಯದಲ್ಲಿ ಬರುತ್ತದೆ.

**प्रकाशः – यदिति ।।** वाचः वाक्समूहस्य मध्ये । यदोमिति पदं अङ्गीकारवाचीति यावत् । यच्चनेति पदं प्रतिषेधार्थम् । यच्चास्या वाचोमध्ये क्रूरं अर्थतःकठिनम् । यदुचोल्बणिष्णु शब्दतः कठिनम् ।

ಶ್ರುತಿಯಲ್ಲಿರುವ ಕೆಲವು ಕಠಿಣ ಪದಗಳ ಅರ್ಥ ಹೀಗಿದೆ - 'ವಾಚಃ' = ಅನೇಕ ವಾಕ್ಯಸಮೂಹಗಳ ಮಧ್ಯದಲ್ಲಿ, ಓಂ = ಅಂಗೀಕಾರವಾಚಕವಾದ ಪದ, ನ = ಪ್ರತಿಷೇಧಾರ್ಥಕವಾದ ಪದಗಳು, ಯಚ್ಚಅಸ್ಯಾಃ ಕ್ರೂರಂ = ಅನೇಕ ಮಾತುಗಳ ಮಧ್ಯದಲ್ಲಿ ಅರ್ಥತಃ ಕಠಿಣವಾದ ಪದಗಳು. ಯದುಚೋಲ್ಬಣಿಷ್ಣು = ಶಬ್ದತಃ ಕಠಿಣವಾದ ಪದಗಳು.

**प्रकाशः –** उपलक्षणमेतत् । यावत् वैदिकं पदजातं तत्सर्वम् । वियूय विचार्य । कवयः ज्ञानिनः । नामायत्तानि नामप्रकाश्यतया नामाधीनानि तत्तच्छब्द-प्रवृत्तिनिमित्तानि । अन्वविन्दन् विदितवन्तः । तस्मिन् वेदने शृते परिपक्वे सत्यनन्तरं समतृप्यन् कृतकृत्या मुक्ता अभूवन्नित्यर्थः ।

ಉಪಲಕ್ಷಣಯಾ ವೇದದಲ್ಲಿರುವ ಎಲ್ಲ ಪದಸಮೂಹಗಳನ್ನು ವಿವಕ್ಷಿಸಬೇಕು. ವಿಯೂಯ = ವಿಚಾರಮಾಡಿ, ಕವಯಃ = ಜ್ಞಾನಿಗಳು, ನಾಮಾಯತ್ತಾನಿ = ನಾಮಪ್ರಕಾಶ್ಯತಯಾ ನಾಮಾಧೀನವಾದ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತಗಳನ್ನು, ಅನ್ವವಿಂದನ್ = ತಿಳಿದವರಾಗಿ. ಹೀಗೆ ಎಲ್ಲಾ ಬಗೆಯ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿ ಪರಿಪಕ್ವಾವಸ್ಥೆಯನ್ನು ತಲುಪಿ, ಜ್ಞಾನಿಗಳೆಲ್ಲರೂ ಮುಕ್ತರಾಗುತ್ತಾರೆ. ಇಷ್ಟು ಐತರೇಯಶ್ರುತಿಯ ಅರ್ಥ.

**प्रकाशः –** अस्त्वेवं सर्ववैदिकशब्दानां भगवन्नामत्वम् । तद्योगेनेति कुतः । वृत्त्यन्तरेणाप्युपपत्तेरित्यतो वा श्रुत्यादौ योगार्थस्य दुर्ज्ञानत्वोक्त्यन्यथानुपपत्त्या च हरेः सर्वशब्दमुख्यार्थत्वं वाक्यसमन्वयपक्षे तदयोगादिति भावेन वा –

'ಕಶ್ಛಂದಸಾಂ' ಎಂಬ ಶ್ರುತಿಗೆ ಎರಡು ಬಗೆಯಲ್ಲಿ ಅವತಾರಿಕೆಯನ್ನು ತಿಳಿಯಬೇಕು -

೧. ವೇದದಲ್ಲಿರುವ ಸಕಲಶಬ್ದಗಳು ಭಗವಂತನ ನಾಮರೂಪವೇ ಆಗಲಿ. ಅಂದಮಾತ್ರಕ್ಕೆ ಯೋಗದಿಂದಲೇ ಭಗವಂತನನ್ನು ಪ್ರತಿಪಾದಿಸುತ್ತವೆಂದು ಹೇಗೆ ನಿರ್ಣಯವಾಗುತ್ತದೆ? ಬೇರೆ ವೃತ್ತಿಯಿಂದಲೂ ಕೂಡ ಭಗವಂತನ ನಾಮಸ್ವರೂಪಗಳಾಗಬಹುದಲ್ಲವೇ? ಈ ಪ್ರಶ್ನೆಗೆ 'ಕಶ್ಛಂದಸಾಂ' ಎಂಬ ಶ್ರುತಿಯು ಉತ್ತರಿಸುತ್ತಿದೆ. ಅಂದರೆ ಸಕಲ ಶ್ರುತಿಗಳಲ್ಲಿರುವ ಶಬ್ದಗಳನ್ನು ಜ್ಞಾನಿಗಳು ಯೋಗವೃತ್ತಿಯಿಂದಲೇ ಭಗವಂತನ ನಾಮಗಳೆಂದು ತಿಳಿಯುತ್ತಾರೆಂದಭಿಪ್ರಾಯ.

೨. ಕೇವಲ ವಾಕ್ಯಗಳ ಸಮನ್ವಯವಷ್ಟೇ ವೇದಗಳ ಅಭಿಪ್ರಾಯವಾಗಿದ್ದಲ್ಲಿ 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಶ್ರುತಿಯಲ್ಲಿ ಯೋಗಾರ್ಥವನ್ನು ತಿಳಿಯುವುದು ಬಹಳ ಕಷ್ಟವೆಂದು ಏಕೆ ಹೇಳಬೇಕಿತ್ತು? ಏಕೆಂದರೆ ವಾಕ್ಯದ ಸಮನ್ವಯವನ್ನು ತಿಳಿಯುವುದು ಕಷ್ಟವಲ್ಲ, ಸುಲಭವಾದದ್ದು. ಯಾವಕಾರಣದಿಂದ 'ಕಶ್ಛಂದಸಾಂ' ಎಂಬ ಶ್ರುತಿಯಲ್ಲಿ ಯೋಗಾರ್ಥವನ್ನು ತಿಳಿಯುವುದು ಕಷ್ಟವೆಂದು ಹೇಳಲಾಗಿದೆಯೋ, ಆ ಕಾರಣದಿಂದಲೇ ಪದಸಮನ್ವಯವು ಶ್ರೀಹರಿಯಲ್ಲಿ ಸಿದ್ಧವಾಗುತ್ತದೆ. ಹೀಗೆ ಯೋಗಾರ್ಥಕ್ಕೆ ದುರ್ಜ್ಞಾನತ್ವೋಕ್ತ್ಯನ್ಯಥಾನುಪಪತ್ತಿಯಿಂದ ಸಕಲ ಶಬ್ದಗಳ ಮುಖ್ಯಾರ್ಥನು ಪರಮಾತ್ಮನೇ ಆಗಿದ್ದಾನೆಂದು ನಿರ್ಣಯವಾಗುತ್ತದೆ. ವಾಕ್ಯಸಮನ್ವಯಪಕ್ಷದಲ್ಲಿ ಇದು ಕೂಡುವುದಿಲ್ಲ. ಈ ಪ್ರಶ್ನೆಗೂ 'ಕಶ್ಛಂದಸಾಂ' ಎಂಬ ಶ್ರುತಿಯೇ ಉತ್ತರಿಸುತ್ತಿದೆ.

**प्रकाशः –**

कश्छन्दसां योगमिति श्रुतेर्योगार्थतत्ववित् ।
ब्रह्मैको नैव चान्योऽस्ति क इत्यस्योभयार्थतः ।।

इत्यनुभाष्यसुधोक्ततात्पर्यादपि तात्पर्यान्तरमुपेत्याह – **कश्छन्दसामिति** ।। को धीरः छन्दसां योगं ब्रह्मणि योगवृत्तिं आवेद । नकोऽपीत्यर्थः ।

ಕಶ್ಛಂದಸಾಂ ಯೋಗಮಿತಿ ಶ್ರುತೇರ್ಯೋಗಾರ್ಥತತ್ತ್ವವಿತ್ ।
ಬ್ರಹ್ಮೈಕೋ ನೈವ ಚಾನ್ಯೋಽಸ್ತಿ ಕ ಇತ್ಯಸ್ಯೋಭಯಾರ್ಥತಃ ॥

ಕಶ್ಛಂದಸಾಂ ಯೋಗಮಾವೇದ ಧೀರ ? ಯಾರು ತಾನೇ ವೇದಗಳ ಯೋಗಾರ್ಥವನ್ನು ತಿಳಿಯಲು ಸಮರ್ಥರು? ಎಂಬ ಪ್ರಶ್ನೆಗೆ 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಅದೇ ಶ್ರುತಿಯೇ ಉತ್ತರಿಸುತ್ತಿದೆ. ಬ್ರಹ್ಮದೇವರೊಬ್ಬರೇ ವೇದದಲ್ಲಿರುವ ಎಲ್ಲ ಪದಗಳ ಯೋಗಾರ್ಥವನ್ನು ತಿಳಿಯಲು ಸಮರ್ಥರಾಗಿದ್ದಾರೆ ಎಂದು. ಏಕೆಂದರೆ 'ಕಃ' ಎಂಬ ಶಬ್ದವು 'ಕಿಂ' ಶಬ್ದದ ಪ್ರಥಮಾವಿಭಕ್ತಿಯಾದಲ್ಲಿ ಪ್ರಶ್ನಾರ್ಥಕವಾಗುತ್ತದೆ. ಅದೇ 'ಕಃ' ಎಂಬ ಶಬ್ದವು 'ಕಃ ಪ್ರಜಾಪತಿಃ ಎಂಬ ಕೋಶದಂತೆ ಬ್ರಹ್ಮದೇವರನ್ನೂ ಕೂಡ ಪ್ರತಿಪಾದನೆ ಮಾಡುತ್ತದೆ. (ಅಕಾರಾಂತ 'ಪುಲ್ಲಿಂಗಃ ಕ ಶಬ್ದಃ') ಹೀಗೆ ಶ್ರುತಿಯಲ್ಲಿರುವ 'ಕಃ' ಎಂಬ ಶಬ್ದಕ್ಕೆ ಎರಡರ್ಥವಿರುವುದರಿಂದ ತಾನೇ ಪ್ರಶ್ನಿಸಿಕೊಂಡು, ತಾನೇ ಉತ್ತರಿಸುತ್ತಿದೆ.

ಹೀಗೆ ಅಣುಭಾಷ್ಯ ಹಾಗೂ ನ್ಯಾಯಸುಧೆಯಲ್ಲಿ ಶ್ರುತಿಯನ್ನು ವ್ಯಾಖ್ಯಾನ ಮಾಡಿದ್ದಾರೆ. ಇದಕ್ಕಿಂತ ವಿಭಿನ್ನವಾದ ಮತ್ತೊಂದು ತಾತ್ಪರ್ಯವನ್ನು ಶ್ರುತಿಗೆ ಗ್ರಂಥಕಾರರು 'ಕಶ್ಛಂದಸಾಂ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. ಯಾವ ಧೀರನು ವೇದಗಳ ಯೋಗವೃತ್ತಿಯನ್ನು ಬ್ರಹ್ಮನಲ್ಲಿ ತಿಳಿಯಲು ಸಮರ್ಥನಾಗುತ್ತಾನೆ? ಯಾರೂ ಸಹ ಸಮರ್ಥರಲ್ಲ ಎಂದು ಇದರರ್ಥ.

**प्रकाशः –**

मां विधत्तेऽभिधत्ते मां विकल्पोऽपोह्य इत्यहम् ।
इत्यस्या हृदयं साक्षान्नान्यो मद्वेद कश्चन ॥

इत्येकादशस्कन्धस्मृतिः समन्वयसूत्रटीकायां व्याख्याता ।

ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪೋಽಪೋಹ್ಯ ಇತ್ಯಹಮ್ ।
ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ ॥

ಭಾಗವತ ಏಕಾದಶಸ್ಕಂಧದ ಈ ಸ್ಮೃತಿಯನ್ನು ಸಮನ್ವಯಸೂತ್ರದ ವ್ಯಾಖ್ಯಾನ ಸಂದರ್ಭದಲ್ಲಿ ಟೀಕಾರಾಯರು ವ್ಯಾಖ್ಯಾನ ಮಾಡಿದ್ದಾರೆ.

**प्रकाशः –** कर्मविधात्री श्रुतिर्मां प्रत्येव तद्विधत्ते । इन्द्राद्यभिधात्री च मामभिधत्ते। ''चत्वारि वाक्'' इति श्रुत्याऽहं विविधरूपत्वेन कल्प्यः । ''न सुरां पिबेत्'' इत्यादिश्रुत्या अहमेवाप्रियादपोह्यः । एवं भूताया अस्याश्श्रुतेरित्यभिप्रायमहमेव वेद न मत्तोऽन्य इति । श्रुतौ छन्दःपदस्य कर्मकाण्डान्यत्वसङ्कोचशङ्काव्यावृत्तये स्मृत्युक्तिः ॥

'ಮಾಂ ವಿಧತ್ತೇ' ಇತ್ಯಾದಿ ಭಾಗವತಸ್ಮೃತಿಯ ಅರ್ಥ ಹೀಗಿದೆ - ಕರ್ಮವಿಧಾಯಕವಾದ ಶ್ರುತಿಗಳೆಲ್ಲವೂ ನನ್ನನ್ನು ಕುರಿತೇ ಯಜ್ಞ-ಯಾಗಾದಿಗಳನ್ನು ವಿಧಾನ ಮಾಡುತ್ತಿವೆ. ಇಂದ್ರ ಮೊದಲಾದ ದೇವತೆಗಳನ್ನು ಪ್ರತಿಪಾದನೆ ಮಾಡುವ ಶ್ರುತಿಗಳೆಲ್ಲವೂ ನನ್ನನ್ನೇ ಪ್ರತಿಪಾದನೆ ಮಾಡಲು ಹೊರಟಿವೆ. 'ಚತ್ವಾರಿ ವಾಕ್' ಇವೇ ಮೊದಲಾದ ಶ್ರುತಿಗಳಿಂದ ನಾನೇ ಅನೇಕ ರೂಪಗಳಿಂದ ವರ್ಣಿತನಾಗಿದ್ದೇನೆ. 'ನ ಸುರಾಂ ಪಿಬೇತ್' ಇವೇ ಮೊದಲಾದ ನಿಷೇಧವಾಚಕ ಶ್ರುತಿಗಳೆಲ್ಲವೂ ನನಗೆ ಅಪ್ರಿಯವಾದ ಕಾರಣದಿಂದಲೇ ಸುರಾಪಾನಾದಿಗಳ ಪರಿತ್ಯಾಗವನ್ನು ವಿಧಾನ ಮಾಡುತ್ತಿವೆ. ಹೀಗೆ ಎಲ್ಲ ಬಗೆಯ ಶ್ರುತಿಗಳ ಮುಖ್ಯತಾತ್ಪರ್ಯ ನಾನೇ ಆಗಿದ್ದೇನೆಂದು ತಿಳಿಯಬೇಕು. ನನ್ನನ್ನು ಬಿಟ್ಟು ಮತ್ತೊಬ್ಬನು ಸಕಲವೇದಪ್ರತಿಪಾದ್ಯನಾಗಲು ಸಾಧ್ಯವಿಲ್ಲ.

'ಕಶ್ಛಂದಸಾಂ' ಎಂಬ ಶ್ರುತಿಯಲ್ಲಿ 'ಛಂದಸಾಂ' ಎಂಬ ಛಂದೋವಾಚಕಪದವಿದೆ. ಇದಕ್ಕೆ ಕರ್ಮಕಾಂಡವನ್ನು ಬಿಟ್ಟು ಉಳಿದ ಛಂದೋಭಾಗವನ್ನಷ್ಟೇ ವಿವಕ್ಷಿಸಬೇಕೆಂದು ಅರ್ಥಸಂಕೋಚ ಮಾಡಬೇಕೆಂದು ಶಂಕಿಸಬಹುದು. ಈ ಶಂಕೆಯ ಪರಿಹಾರಕ್ಕಾಗಿ ಭಾಗವತದ ಈ ವಾಕ್ಯವನ್ನು ಉದಾಹರಿಸಲಾಗಿದೆ. ಈ ವಾಕ್ಯದಲ್ಲಿ ಎಲ್ಲ ಬಗೆಯ ಶ್ರುತಿಗಳನ್ನು ಪ್ರತ್ಯೇಕವಾಗಿ ಉಲ್ಲೇಖ ಮಾಡಿ, ಆ ಎಲ್ಲ ಶ್ರುತಿಗಳಿಂದಲೂ ನಾನು ಪ್ರತಿಪಾದ್ಯನೆಂದು ಶ್ರೀಕೃಷ್ಣಪರಮಾತ್ಮನೇ ಹೇಳಿರುವ ಕಾರಣ 'ಕಶ್ಛಂದಸಾಂ' ಎಂಬ ಶ್ರುತಿಯಲ್ಲಿರುವ 'ಛಂದಸಾಂ' ಎಂಬ ಪದಕ್ಕೆ ಅರ್ಥಸಂಕೋಚ ಮಾಡಲು ಬರುವುದಿಲ್ಲ.

**प्रकाशः – यौगिकार्थस्येति ।। स्मृतौ योगशब्दाभावेऽपि सर्वाभिधेयत्वस्य रूढ्याऽयोगेन योगवृत्त्यैव वाच्यत्वात् तल्लाभ इति भावः ।**

ಭಾಗವತದ ಈ ಸ್ಮೃತಿಯ ಮಾತಿನಲ್ಲಿ ಎಲ್ಲ ವೇದಗಳಿಂದ ತಾನೇ ಪ್ರತಿಪಾದ್ಯನೆಂದು ಶ್ರೀಕೃಷ್ಣನು ಹೇಳಿದ್ದಾನೆ. ಯೋಗವೃತ್ತಿಯಿಂದಲೇ ಪ್ರತಿಪಾದ್ಯನೆಂದೇನೂ ಹೇಳಿಲ್ಲವಲ್ಲ ? ಎಂದು ಶಂಕಿಸಬಾರದು. ಏಕೆಂದರೆ ಸಕಲಶಬ್ದಗಳಿಂದ ಅಭಿಧೇಯನಾಗಿದ್ದೇನೆಂದು ಹೇಳಿದಾಗ, ಅಭಿಧೇಯತ್ವವು ಕೇವಲ ರೂಢಿಯಿಂದ ಉಪಪನ್ನವಾಗುವುದಿಲ್ಲ. ಯೋಗವೃತ್ತಿಯಿಂದಲೇ ಉಪಪನ್ನವಾಗುತ್ತದೆ. ಹೀಗೆ ಈ ಸ್ಮೃತಿಯಿಂದ ಯೋಗವೃತ್ತಿಯಿಂದಲೇ ಸಕಲಶಬ್ದಪ್ರತಿಪಾದ್ಯನೆಂಬುದು ನಿರ್ಣಯವಾಗುತ್ತದೆ.




ವೇದದಲ್ಲಿರುವ ಎಲ್ಲ ಸಂಧಿಗಳೂ ಪೂರ್ವೋತ್ತರವರ್ಣಗಳೂ ವಿಷ್ಣುವೆಂಬ ನಾಮದ ಅರ್ಥವೇ ಆಗಿವೆ. ಆದ್ದರಿಂದ ಎಲ್ಲವೂ ಪರಮಾತ್ಮ ಪ್ರತಿಪಾದಕವೆಂದು ತಿಳಿಯಬೇಕು. ಎಲ್ಲ ವರ್ಣಗಳೂ, ಎಲ್ಲ ಸಂಧಿಗಳೂ ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆ. 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ' ಎಂಬ ಶ್ರುತಿಯು ವಿಷ್ಣುನಾಮಾರ್ಥವೆಂದು ತಿಳಿದೇ ವೇದಾಧ್ಯಯನದಲ್ಲಿ ತೊಡಗಬೇಕೆಂದು ಎಚ್ಚರಿಸುತ್ತಿದೆ.

'ಣ'ಕಾರ, 'ಷ'ಕಾರಗಳ ಅರ್ಥವನ್ನು ಸಕಲವರ್ಣಗಳು ಹೇಳಿದ ಮಾತ್ರದಿಂದ ವಿಷ್ಣುನಾಮಾರ್ಥವನ್ನು ಹೇಳಿದಂತೆ ಹೇಗಾಗುತ್ತದೆ ? ಎಂದು ಶಂಕಿಸಬಾರದು. 'ಣ'ಕಾರ ಹಾಗೂ 'ಷ'ಕಾರ ಎಂಬೆರಡು ಅಕ್ಷರಗಳೇ ವಿಷ್ಣುನಾಮದಲ್ಲಿ

ಮುಖ್ಯವಾಗಿವೆ. 'ವಿ' ಎಂಬುವುದು ಉಪಸರ್ಗವಾಗಿದೆ. 'ಉನ್' ಎಂಬುದೂ ಕೂಡ ಶೀಲಾರ್ಥಕವಾದ ಪ್ರತ್ಯಯವಾಗಿದೆ. ಇವೆರಡೂ ಅಪ್ರಧಾನವಾದ್ದರಿಂದ ಮುಖ್ಯವಾಗಿ ಣಕಾರ, ಷಕಾರಗಳೇ ವಿಷ್ಣುನಾಮವೆಂದು ಶ್ರುತಿಯ ಅಭಿಪ್ರಾಯವಾಗಿದೆ. ಆದ್ದರಿಂದ ಸ್ವರ, ವರ್ಣ, ಪದ ರೂಪದಿಂದಲೂ ವೇದಕ್ಕೆ ಪರಮಾತ್ಮನಲ್ಲೇ ಸಮನ್ವಯವಿದೆ ಎಂದು ಹೇಳುವುದರಿಂದ ವಾಕ್ಯದ ಸಮನ್ವಯೂ ಕೂಡ ಇದೆಯೆಂಬುದು ಅರ್ಥಾತ್ ಸಿದ್ಧವಾಗುತ್ತದೆ.

ಇದರಂತೆ 'ಅಃ ಇತಿ ಬ್ರಹ್ಮ' ಅ ಎಂಬ ಅಕ್ಷರವು ಪರಮಾತ್ಮನ ನಾಮ ಎಂಬ ಮತ್ತೊಂದು ಶ್ರುತಿಯಲ್ಲಿ ಅಕಾರವು ಪರಮಾತ್ಮನ ನಾಮಸ್ವರೂಪವೆಂದು ಹೇಳಲಾಗಿದೆ. 'ಅಕಾರೋ ವೈ ಸರ್ವಾವಾಕ್' ಎಂಬ ಮತ್ತೊಂದು ಶ್ರುತಿಯಲ್ಲಿ ಅಕಾರವು ಸಕಲಶಬ್ದಗಳ ಸ್ವರೂಪವಾಗಿದೆಯೆಂದು ಹೇಳಲಾಗಿದೆ. ಅಕಾರವು ಸರ್ವಶಬ್ದಗಳ ಸ್ವರೂಪವಾಗುವುದು ಪ್ರತ್ಯಕ್ಷವಾದ್ದರಿಂದ, ಎಲ್ಲಾ ಶಬ್ದಗಳೂ ಅಕಾರಕ್ಕೆ ವ್ಯಾಖ್ಯಾನಗಳಾಗಿವೆ ಎಂದು ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕು. ಆವಾಗ ವ್ಯಾಖ್ಯೇಯವಾದ ಅಕಾರವು ಯಾರನ್ನು ಪ್ರತಿಪಾದನೆ ಮಾಡುತ್ತದೋ, ವ್ಯಾಖ್ಯಾನರೂಪವಾದ ಸಕಲಶಬ್ದಗಳೂ ಕೂಡ ಅವನನ್ನೇ ಪ್ರತಿಪಾದನೆ ಮಾಡಬೇಕು. ಇದರಿಂದ ಸರ್ವಶಬ್ದಗಳ ಮುಖ್ಯತಾತ್ಪರ್ಯ ಪರಮಾತ್ಮನೆಂದು ನಿರ್ಣಯವಾಗುತ್ತದೆ.

ಐತರೇಯೋಪನಿಷತ್ತಿನಲ್ಲಿ 'ಯದ್ವಾಚ ಓಮಿತಿ ಯಚ್ಚ ನೇತಿ ಯಚ್ಚಾಸ್ಯಾಃ' ಇತ್ಯಾದಿಯಾಗಿ ಅಂಗೀಕಾರವಾಚಕವಾದ, ನಿಷೇಧಾರ್ಥಕವಾದ, ಕಠಿಣಾರ್ಥಕವಾದ ಎಲ್ಲಾ ವಿಧ ಶಬ್ದಗಳ ಪ್ರವೃತ್ತಿನಿಮಿತ್ತಗಳನ್ನು ತಿಳಿದರೂ ಆ ಜ್ಞಾನವು ಪರಿಪಕ್ವವಾದಾಗ ಮುಕ್ತರಾಗಿ ಕೃತಕೃತ್ಯರಾದರು ಎಂದು ಹೇಳಲಾಗಿದೆ. ಆದರೆ 'ತಮೇವಂ ವಿದ್ವಾನ್' ಎಂಬ ಮತ್ತೊಂದು ಶ್ರುತಿಯಲ್ಲಿ ಪರಮಾತ್ಮನನ್ನು ತಿಳಿದವನೇ ಮುಕ್ತನಾಗುತ್ತಾನೆಂದು ಹೇಳಲಾಗಿದೆ. ಈ ಎರಡೂ ವಾಕ್ಯಗಳು ಉಪಪನ್ನವಾಗಬೇಕಾದರೆ ವೈದಿಕಶಬ್ದಗಳೆಲ್ಲವೂ ಪರಮಾತ್ಮ ವಾಚಕಗಳೇ ಆಗಬೇಕು. ಹೀಗೆ ಈ ಶ್ರುತಿಯಿಂದಲೂ ಸಕಲಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನೆಂದು ನಿರ್ಣಯವಾಗುತ್ತದೆ.

ಮತ್ತು 'ಕಶ್ಛಂದಸಾಂ ಯೋಗಮಾವೇದ ಧೀರ' ಯಾರು ತಾನೇ ವೇದದ ಯೋಗಾರ್ಥವನ್ನು ತಿಳಿಯಲು ಸಮರ್ಥನು ಎಂದು ಶ್ರುತಿಯು ಆಕ್ಷೇಪ ಮಾಡಿದೆ. ಅನಂತರ ಪ್ರಜಾಪತಿಯೇ ಎಲ್ಲಾ ವೈದಿಕಶಬ್ದಗಳ ಯೋಗಾರ್ಥವನ್ನು ತಿಳಿಯಲು ಸಮರ್ಥನಾಗಿದ್ದಾನೆಂದು 'ಕಶ್ಛಂದಸಾಂ' ಎಂಬ ಶ್ರುತಿಯು ಉತ್ತರಿಸುತ್ತಿದೆ. 'ಪ್ರಜಾಪತಿರ್ವೈ ಕಃ' ಎಂಬ ಶ್ರುತಿಯು ಹೇಳುವಂತೆ ಪ್ರಜಾಪತಿಯು 'ಕಃ' ಎನಿಸಿದ್ದಾನೆ. ಆಕ್ಷೇಪಾರ್ಥದಲ್ಲಿಯೂ 'ಕಃ' ಎಂಬ ಶಬ್ದವನ್ನು ಪ್ರಯೋಗ ಮಾಡಬಹುದು. ಪ್ರಜಾಪತಿಯೆಂಬರ್ಥದಲ್ಲಿಯೂ 'ಕಃ' ಎಂಬರ್ಥವನ್ನು ಪ್ರಯೋಗ ಮಾಡಬಹುದು. ಶ್ರುತಿಯು ಎರಡು ಅರ್ಥಗಳನ್ನು ವಿವಕ್ಷಿಸುತ್ತಿದೆ. ಚತುರ್ಮುಖ ಎಂಬರ್ಥವನ್ನು ಇಟ್ಟುಕೊಂಡಾಗ, ಚತುರ್ಮುಖನಿಗೆ ಯೋಗಾರ್ಥಜ್ಞಾನ ಸಾಮರ್ಥ್ಯವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಪದಸಮನ್ವಯಕ್ಕೆ ಯಾರೂ ಅರ್ಹರಲ್ಲ ಎಂದು ಹೇಳಲಾಗದು. 'ಕಃ' ಎಂಬುದಕ್ಕೆ ಆಕ್ಷೇಪಾರ್ಥವನ್ನಿಟ್ಟುಕೊಂಡಾಗ ಬೇರೆಯವರಿಗೆ ಅರ್ಹತೆಯಿಲ್ಲ ಎಂದಷ್ಟೇ ಶ್ರುತಿಯ ಅಭಿಪ್ರಾಯ. ಆದ್ದರಿಂದ ಯೌಗಿಕವಾದ ಪದಸಮನ್ವಯವು ಕಠಿಣವೆಂದು ಹೇಳಿದ್ದರಿಂದ ಚತುರ್ಮುಖಾದಿಗಳು ಅರ್ಹರಾಗಿದ್ದಾರೆಂದು ತಿಳಿಯುತ್ತದೆ. ಕೃಷ್ಣ ಪರಮಾತ್ಮನೂ ಕೂಡ ಭಾಗವತದಲ್ಲಿ 'ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನ' ಎಂಬುದಾಗಿ ಸಕಲ ವೈದಿಕಶಬ್ದಗಳ ತಾತ್ಪರ್ಯನು ತಾನೇ ಆಗಿದ್ದೇನೆಂದು ಹೇಳಿಕೊಂಡಿದ್ದಾನೆ. ಈ ಎಲ್ಲಾ ಪ್ರಮಾಣಗಳ ಆಧಾರದಿಂದ ವೇದದಲ್ಲಿರುವ ಪ್ರತಿಯೊಂದು ಸ್ವರಗಳು, ವರ್ಣಗಳು, ಪದಗಳು, ವಾಕ್ಯಗಳು ಶ್ರೀಹರಿಯಲ್ಲಿಯೇ ಸಮನ್ವಯಗೊಳ್ಳುತ್ತವೆಂದು ನಿರ್ಣಯವಾಗುತ್ತವೆ.

////////////////////////////////////////

ಪರಿಪೂರ್ಣಚಂದ್ರಿಕಾ

## ಪ್ರತಿಯೊಂದು ಪದಗಳ ಸಮನ್ವಯ

### तात्पर्यचन्द्रिका

**तत्रापि यौगिको मुख्यस्सर्वत्रास्ति स वैदिके ।**
**अनवस्थानिवृत्यर्थं यौगिके रूढिकल्पना ।।**
**तत्रापि परमो मुख्यो वाच्यो शेषरवैर्हरिः ।**
**तत्तन्मुख्याविरोधेन तदन्यार्थस्य सङ्ग्रहः।। इत्यादिस्मृतेश्च ।**

ಅನುವಾದ -

ತತ್ರಾಪಿ ಯೌಗಿಕೋ ಮುಖ್ಯಃ ಸರ್ವತ್ರಾಸ್ತಿ ಸ ವೈದಿಕೇ ।
ಅನವಸ್ಥಾನಿವೃತ್ಯರ್ಥಂ ಯೌಗಿಕೇ ರೂಢಿಕಲ್ಪನಾ ॥

ರೂಢಿ ಹಾಗೂ ಯೋಗಗಳ ನಡುವೆ ಯೌಗಿಕವಾದ ಅರ್ಥವೇ ಮುಖ್ಯವಾಗಿರುತ್ತದೆ. ವೇದದಲ್ಲಿರುವ ಸಕಲಶಬ್ದಗಳು ರೂಢ್ಯರ್ಥವನ್ನು ಹಾಗೂ ಯೋಗಾರ್ಥವನ್ನು ಹೇಳಿದರೂ ಯೋಗಾರ್ಥವನ್ನೇ ಮುಖ್ಯವಾಗಿ ಸ್ವೀಕರಿಸಬೇಕು. ಅನವಸ್ಥಾದೋಷ ಪರಿಹಾರಕ್ಕಾಗಿ ಮಾತ್ರ ಯೌಗಿಕವಾದ ಶಬ್ದಗಳಲ್ಲಿ ರೂಢಿಗಳನ್ನು ಕಲ್ಪಿಸಲಾಗಿರುತ್ತದೆ.

ತತ್ರಾಪಿ ಪರಮೋ ಮುಖ್ಯೋ ವಾಚ್ಯೋ ಶೇಷರವೈರ್ಹರಿಃ ।
ತತ್ತನ್ಮುಖ್ಯಾವಿರೋಧೇನ ತದನ್ಯಾರ್ಥಸ್ಯ ಸಂಗ್ರಹಃ ॥

ಯೌಗಿಕಾರ್ಥದಲ್ಲಿಯೂ ಕೂಡ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಉಳಿದೆಲ್ಲಾ ಪದಾರ್ಥಗಳು ಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗುತ್ತವೆ. ಇವೇ ಮೊದಲಾದ ಸ್ಮೃತಿಗಳಿಂದ ಪರಮಾತ್ಮನೊಬ್ಬನೇ ಪರಮಮುಖ್ಯವೃತ್ತಿಯಿಂದ ಸಕಲವೇದಪ್ರತಿಪಾದ್ಯನೆಂದು ತಿಳಿಯಬೇಕು.

**नच ''तं यच्छतम्'' इत्यादिवाक्यस्यापि ब्रह्मणि पदसमन्वयाम्नानेन सर्वशब्दवाच्यत्वसिद्धिरिति शङ्क्यम् ।**

ವೇದದಲ್ಲಿರುವ ಎಲ್ಲಾ ಪದಗಳೂ ಭಗವಂತನ ನಾಮಸ್ವರೂಪವಾದಲ್ಲಿ 'ತಂ ಯಚ್ಛತಮ್' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳೂ ಕೂಡ ಬ್ರಹ್ಮನ ನಾಮಸ್ವರೂಪವೇ ಆಗುತ್ತವೆಂದು ಹೇಳಿದಂತಾಯಿತು. ಆದ್ದರಿಂದ 'ತಂ' 'ಯತ್' 'ಶತಮ್' ಇವೆಲ್ಲವೂ ಭಗವಂತನ ಹೆಸರೇ

ಆಗಿರುವಾಗ ಈ ಶ್ರುತಿಯು ಸರ್ವಶಬ್ದವಾಚ್ಯತ್ವವನ್ನು ಪರಮಾತ್ಮನಲ್ಲಿ ಪ್ರತಿಪಾದನೆ ಮಾಡುತ್ತಿದೆ ಎಂದು ಸಾಧಿಸಲು ಸಾಧ್ಯವಿಲ್ಲ. ಆದ್ದರಿಂದ ಸರ್ವಶಬ್ದವಾಚ್ಯತ್ವವಿಷಯದಲ್ಲಿ ಈ ಶ್ರುತಿಯು ಹೇಗೆ ಪ್ರಮಾಣವಾಗುತ್ತದೆ ಹೀಗೆ ಆಶಂಕಿಸಬಾರದು.

**अस्य लोकप्रसिद्धपदार्थसंसर्गाबोधकत्वे तद्बोधाधीनस्य पदसमन्वयस्यैवासिद्धिः। बोधकत्वे तु पदसमन्वयो न स्वोपजीव्यं ब्रह्मणः सर्वशब्दवाच्यत्वरूपसंसर्गं बाधते।**

'ತಂ' 'ಯತ್' 'ಶತಮ್' ಇವೇ ಮೊದಲಾದ ಪದಗಳು ಲೋಕಪ್ರಸಿದ್ಧವಾದ ಪದಾರ್ಥದ ಸಂಸರ್ಗವನ್ನು ಬೋಧಿಸುತ್ತವೋ ಇಲ್ಲವೋ? ಬೋಧಿಸುವುದಿಲ್ಲವೆಂದು ಹೇಳಿದರೆ ಪದಸಮನ್ವಯವನ್ನೂ ಕೂಡ ಪರಮಾತ್ಮನಲ್ಲಿ ಮಾಡಲು ಸಾಧ್ಯವಾಗುವುದಿಲ್ಲ. ಪರಮಾತ್ಮನಲ್ಲಿ ಪದಸಮನ್ವಯ ಮಾಡಲು ಈ ಶ್ರುತಿಯು ಪ್ರಮಾಣವಾಗಿದೆ. ಇಂತಹ ಶ್ರುತಿಯು ಲೋಕಪ್ರಸಿದ್ಧವಾದ ಪದಾರ್ಥಸಂಸರ್ಗವನ್ನು ಬೋಧನೆ ಮಾಡದಿದ್ದಲ್ಲಿ ಎಲ್ಲಾ ಪದಗಳಿಗೂ ಪರಮಾತ್ಮನಲ್ಲೇ ಸಮನ್ವಯ ಮಾಡಬೇಕು ಎಂಬ ವಿಷಯವೂ ಕೂಡ ಸಿದ್ಧವಾಗುವುದಿಲ್ಲ. ಒಂದು ವೇಳೆ ಲೋಕಪ್ರಸಿದ್ಧವಾದ ಪದಾರ್ಥಸಂಸರ್ಗವನ್ನು ಬೋಧನೆ ಮಾಡುತ್ತದೆಂದು ಹೇಳುವುದಾದರೆ ಪರಮಾತ್ಮನಲ್ಲಿ ಪದಸಮನ್ವಯ ಮಾಡಲು ಈ ಶ್ರುತಿಯೇ ಪ್ರಮಾಣವಾಗುತ್ತದೆ. ಆವಾಗ ಪದಸಮನ್ವಯಕ್ಕೆ ಈ ವಾಕ್ಯರೂಪತೆಯು ಉಪಜೀವ್ಯವಾಗುತ್ತದೆ. ಉಪಜೀವ್ಯವನ್ನು ಪದಸಮನ್ವಯವು ಬಾಧಿಸಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನ ಸರ್ವಶಬ್ದವಾಚ್ಯತ್ವರೂಪವಾದ ಸಂಸರ್ಗವನ್ನು ಪದಸಮನ್ವಯವು ಬಾಧಿಸುವುದಿಲ್ಲ.

**''स्वाध्यायोऽध्येतव्यः'' इति वाक्यवच्चास्य विनियोक्तृत्वविनियोज्यत्वे न विरुद्धे ।**

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯವು ಸಮಗ್ರಶಾಖೆಯನ್ನು ಅಧ್ಯಯನವನ್ನು ಮಾಡಬೇಕೆಂದು ವಿಧಾನ ಮಾಡುತ್ತದೆ. ಮತ್ತು ತನ್ನ ಅಧ್ಯಯನವನ್ನು ಮಾಡಬೇಕೆಂದು ತಾನೇ ಹೇಳಿಕೊಳ್ಳುತ್ತಿದೆ. ಅದರಂತೆ 'ತಂ ಯಚ್ಛತಮ್' ಎಂಬ ವಾಕ್ಯವು ವೇದದಲ್ಲಿರುವ ಎಲ್ಲಾ ಪದಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಬೇಕೆಂದು ಹೇಳುತ್ತಿದೆ. ತನ್ನಲ್ಲಿರುವ ಪದಗಳ ಸಮನ್ವಯವನ್ನೂ ಕೂಡ ಮಾಡಬೇಕೆಂದು ಹೇಳುತ್ತಿದೆ. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬಂತೆ ಇದೂ ಕೂಡ ವಿನಿಯೋಗಕ್ಕೆ ಕರ್ತೃವೂ ಆಗುತ್ತದೆ. ವಿಷಯವೂ ಆಗುತ್ತದೆ. ಇದರಲ್ಲಿ ಯಾವ ವಿರೋಧವೂ ಇರುವುದಿಲ್ಲ.

**प्रकाशः –**

**ननु रूढार्थस्यैव लोके मुख्यत्वव्यपदेशात् कथं यौगिकस्य मुख्यत्वम् । येन सर्वशब्दमुख्यार्थो ब्रह्मैवेति प्रतिज्ञा युक्ता स्यादित्यतो वा पूर्वपक्षोक्तदिशा न सर्वशब्दयौगिकत्वं युक्तमित्यतो वा सर्ववैदिकशब्दयौगिकत्वं कुत? इत्यतो वाऽऽह – तत्रापीति ॥**

ವಿವರಣೆ - ಇಲ್ಲಿಯತನಕ ಸಕಲ ವೈದಿಕಶಬ್ದಗಳು ಪರಮಾತ್ಮನಲ್ಲಿ ಯೋಗವೃತ್ತಿಯಿಂದ ಸಮನ್ವಯಗೊಳ್ಳುತ್ತವೆಂದು ಸಮರ್ಥಿಸಲಾಯಿತು. ಆದರೆ ಲೋಕಪ್ರಸಿದ್ಧಿಯಿರುವಂತೆ ಯೋಗಕ್ಕಿಂತಲೂ ರೂಢಾರ್ಥವೇ ಪ್ರಬಲವಾಗಿರುತ್ತದೆ. ಯಾವ ಅರ್ಥವು ರೂಢಿವೃತ್ತಿಯಿಂದ ಪ್ರತಿಪಾದ್ಯವೋ, ಅದೇ ಮುಖ್ಯವೆಂದು ಲೋಕದಲ್ಲಿ ಎಲ್ಲರೂ ಸಹ ಪರಿಗಣಿಸುತ್ತಾರೆ. ಹೀಗಿರುವಾಗ ಪ್ರಕೃತ ಪರಮಾತ್ಮನು ಯೌಗಿಕನಾದ್ದರಿಂದ ಮುಖ್ಯಾರ್ಥನಾಗಿದ್ದಾನೆಂದು ಹೇಗೆ ಹೇಳುತ್ತಿದ್ದೀರಿ? ಒಂದುವೇಳೆ ಯೌಗಿಕಾರ್ಥವು ಮುಖ್ಯವಾಗಿದ್ದಲ್ಲಿ ಸಕಲಶಬ್ದಗಳಿಂದ ಪರಮಾತ್ಮನೇ ಮುಖ್ಯಪ್ರತಿಪಾದ್ಯನೆಂಬ ಪ್ರತಿಜ್ಞೆಯು ಯುಕ್ತವಾಗುತ್ತಿತ್ತಲ್ಲವೇ? ಈ ಪ್ರಶ್ನೆಗೆ 'ತತ್ರಾಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಅಥವಾ ಪೂರ್ವಪಕ್ಷದಲ್ಲಿ ಹೇಳಿದಂತೆ ಸಕಲಶಬ್ದಗಳಿಗೆ ಯೋಗಾರ್ಥವನ್ನು ಹೇಳಲು ಸಾಧ್ಯವೇ ಇಲ್ಲ. ಯೋಗಾರ್ಥವನ್ನು ಮಾಡುವಾಗ ಅದರ ಅವಯವ ಶಬ್ದಗಳಿಗೆ ರೂಢ್ಯರ್ಥವನ್ನು ಸ್ವೀಕರಿಸಲೇ-ಬೇಕಾಗುತ್ತದಲ್ಲವೆ? ಈ ಪ್ರಶ್ನೆಗೂ 'ತತ್ರಾಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

ಅಥವಾ ವೇದದಲ್ಲಿರುವ ಸಕಲಶಬ್ದಗಳಿಗೆ ಯೌಗಿಕಾರ್ಥವನ್ನು ಯಾವ ಕಾರಣಕ್ಕಾಗಿ ಆಶ್ರಯಿಸಬೇಕು? ಎಂಬ ಪ್ರಶ್ನೆಗೂ ಕೂಡ 'ತತ್ರಾಪಿ' ಎಂಬ ವಾಕ್ಯವೇ ಉತ್ತರಿಸುತ್ತಿದೆ.

(ಹೀಗೆ 'ತತ್ರಾಪಿ' ಎಂಬ ವಾಕ್ಯಕ್ಕೆ ಮೂರುಬಗೆಯಲ್ಲಿ ಅವತಾರಿಕೆಯನ್ನು ತಿಳಿಯಬೇಕು.)

**प्रकाशः – ''रूढियोगौ विना कश्चिन्नैवार्थो वेदगो भवेत् । तत्रापि'' इति कर्मनिर्णयोक्तब्रह्मतर्कस्मृतेरर्थष्टीकायामुक्तः । तत्रापि रूढियोगयोर्मध्येऽपि । स योगस्सर्वत्र वैदिके रूढेऽर्थेस्ति ।**

''ರೂಢಿಯೋಗೌ ವಿನಾ ಕಶ್ಚಿನ್ನೈವಾರ್ಥೋ ವೇದಗೋ ಭವೇತ್ । ತತ್ರಾಪಿ' ಎಂಬ ಕರ್ಮನಿರ್ಣಯದಲ್ಲಿ ಬ್ರಹ್ಮತರ್ಕದ ಸ್ಮೃತಿಯನ್ನು ಉಲ್ಲೇಖ ಮಾಡಿದ್ದಾರೆ. ಇದರ ಅರ್ಥವನ್ನು ಟೀಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಅಂದರೆ ವೇದದಲ್ಲಿ ಯಾವುದೇ ಶಬ್ದಗಳನ್ನು ತೆಗೆದುಕೊಂಡರೂ ರೂಢಿ ಹಾಗೂ ಯೋಗ ಎರಡು ವೃತ್ತಿಯಿಂದಲೂ ಶಬ್ದಗಳು ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ. ರೂಢಿಯನ್ನು ಬಿಟ್ಟು, ಯೋಗವಾಗಲೀ, ಯೋಗವನ್ನು ಬಿಟ್ಟು ರೂಢಿಯಲ್ಲಿ ವೇದದಲ್ಲಿ ಇರುವುದಿಲ್ಲ ಎಂದು ಇದರ ತಾತ್ಪರ್ಯ.

'ತತ್ರಾಪಿ' ಎಂಬ ಪದಕ್ಕೆ ರೂಢಿ ಹಾಗೂ ಯೋಗಾರ್ಥಗಳ ಮಧ್ಯದಲ್ಲಿ ಎಂದರ್ಥ. ಇಂತಹ ಯೋಗವು ವೇದದ ಸಕಲ ರೂಢಾರ್ಥಗಳಲ್ಲಿಯೂ ಇರುತ್ತದೆ.

**प्रकाशः** – न चानवस्थापत्त्या योगानुपपत्तिः । अवान्तरपदानां योगस्तदवान्तरपदानामपि योग इत्यनवस्थानिरासायावयवानां रूढिमुपेत्य योगोक्तेरिति ।

ವೇದದಲ್ಲಿರುವ ಸಕಲಶಬ್ದಗಳಿಗೆ ಯೋಗಾರ್ಥವನ್ನೇ ಸ್ವೀಕರಿಸುವುದಾದರೆ ಅನವಸ್ಥಾದೋಷ ಬರುತ್ತದಲ್ಲವೇ? ಏಕೆಂದರೆ ಯಾವ ಪದಕ್ಕೆ ಯೋಗಾರ್ಥವನ್ನು ಹೇಳುತ್ತೀರೋ ಅದರ ಅವಯವಕ್ಕೂ ಕೂಡ ಯೋಗಾರ್ಥವನ್ನೇ ಹೇಳಬೇಕು. ಪುನಃ ಅದರ ಅವಯವಕ್ಕೂ ಯೋಗಾರ್ಥವನ್ನೇ ಹೇಳಬೇಕು. ಹೀಗೆ ಅನವಸ್ಥಾ ಬರುವ ಕಾರಣ ಕೆಲವು ಪದಗಳಿಗೆ ರೂಢಾರ್ಥವನ್ನು ಹೇಳುವುದು ಅನಿವಾರ್ಯವಲ್ಲವೇ? ಎಂದು ಪ್ರಶ್ನಿಸಬಾರದು. ಅವಾಂತರಪದಗಳಿಗೆ ಯೋಗಾರ್ಥವನ್ನು ಅಂಗೀಕಾರ ಮಾಡಿದರೂ ಅದರ ಅವಯವಗಳಿಗೆ ರೂಢ್ಯರ್ಥವನ್ನು ನಾವು ಸ್ವೀಕರಿಸುವ ಕಾರಣ ಅನವಸ್ಥಾದೋಷವು ಬರುವುದಿಲ್ಲ.

**प्रकाशः** – एवं तर्हि कर्मादिपरिलोपस्स्यादित्यतो वा अन्यस्यापि मुख्यार्थत्वे ब्रह्मैव मुख्यार्थ इत्यनुपपत्तिः । शब्दानामक्षादिशब्दवन्नानार्थत्वापत्तिश्चेत्यतो वा कर्मनिर्णयोक्तस्मृत्यन्तरमाह – **तत्रापीति** ।।

ಹೀಗೆ ಸಕಲಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾದಲ್ಲಿ, ಕರ್ಮಾದಿಗಳನ್ನು ವಿಧಾನ ಮಾಡುವ ವಾಕ್ಯವೇ ಇಲ್ಲದಂತಾಗಿ ಕರ್ಮಾದಿಗಳ ಲೋಪಪ್ರಸಂಗ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ತತ್ರಾಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಅಥವಾ ಬೇರೆ ಪದಾರ್ಥಗಳೂ ಕೂಡ ಮುಖ್ಯಾರ್ಥವಾಗಿರುವಾಗ, ಬ್ರಹ್ಮನೊಬ್ಬನೇ ಮುಖ್ಯಾರ್ಥನೆಂದು ಹೇಳುವುದು ಅನುಪಪನ್ನವಾಗುತ್ತದೆ. ವೈದಿಕಶಬ್ದಗಳು ಅಕ್ಷಾದಿಶಬ್ದಗಳಂತೆ ನಾನಾರ್ಥಕಗಳಾಗುವ ಪ್ರಸಂಗ ಬರುತ್ತದಲ್ಲವೇ? ಎಂಬ ಪ್ರಶ್ನೆಗೂ 'ತತ್ರಾಪಿ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಇದು ಕರ್ಮನಿರ್ಣಯದಲ್ಲಿ ಉದಾಹರಿಸಿದ ಮತ್ತೊಂದು ಸ್ಮೃತಿ.

**प्रकाशः** – "मुख्यार्थानां च सर्वेषां तारतम्यं तु विद्यते । तत्रापि परमो मुख्यः" इत्यादि । तदन्यार्थस्य कर्मदेवतादिरूपस्येत्यर्थः । एतेन "कल्पन" इति सूत्रभावोऽपि स्मृत्यैव विवृतः ।

'ಮುಖ್ಯಾರ್ಥಾನಾಂ ಚ ಸರ್ವೇಷಾಂ ತಾರತಮ್ಯಂ ತು ವಿದ್ಯತೇ । ತತ್ರಾಪಿ ಪರಮೋ ಮುಖ್ಯಃ' ಮುಖ್ಯಾರ್ಥಗಳಲ್ಲಿಯೂ ತಾರತಮ್ಯವಿದೆ. ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದವನು ಪರಮಾತ್ಮನಾದ್ದರಿಂದ ನಾನಾರ್ಥತ್ವದೋಷವು ಬರುವುದಿಲ್ಲ ಎಂದಭಿಪ್ರಾಯ. 'ತದನ್ಯಾರ್ಥಸ್ಯ' ಎಂದರೆ ಕರ್ಮ ಹಾಗೂ ದೇವತೆಗಳೆಂಬ ಅರ್ಥಕ್ಕೆ ಎಂದರ್ಥ.

ಪರಿಪೂರ್ಣಚಂದ್ರಿಕಾ

**प्रकाशः** – श्रुतावनुपपत्तिमाशङ्क्याह – नचेति ।।

ಹೀಗೆ ಹೇಳಿದ್ದರಿಂದ 'ಕಲ್ಪನೋಪದೇಶಾತ್' ಎಂಬ ಸೂತ್ರದ ಅಭಿಪ್ರಾಯವನ್ನು ಸ್ಮೃತಿಯಿಂದಲೇ ವಿವರಿಸಿದಂತಾಯಿತು. ಶ್ರುತಿಯಲ್ಲಿರುವ ಅನುಪಪತ್ತಿಯನ್ನು ಆಶಂಕಿಸುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ. ಪದಸಮನ್ವಯ ಮಾಡುವ ಸಂದರ್ಭದಲ್ಲಿ ವಾಕ್ಯರೂಪವಾಗಿರುವುದಿಲ್ಲವಾದ್ದರಿಂದ ಪದದ ಅರ್ಥವನ್ನೇ ವಾಕ್ಯಾರ್ಥವೆಂದು ಪರಿಗಣಿಸಬಾರದು.

**प्रकाशः** – पदसमन्वयदशायां वाक्यत्वाभावेन वाक्यार्थाभावादिति भावः ।। **बोधकत्व इति** ।। तादृशसंसर्गस्येत्यन्वयः ।

ಪದಸಮನ್ವಯವನ್ನು ಮಾಡುವ ಸಂದರ್ಭದಲ್ಲಿ 'ತಂ ಯಚ್ಛತಮ್' ಎಂಬುದು ವಾಕ್ಯರೂಪವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಪದಸಮನ್ವಯವೇ ಇದರ ಉದ್ದೇಶವಾದಲ್ಲಿ 'ತಂ ಯಚ್ಛತಮ್' ಎಂಬ ಶ್ರುತಿಯೂ ಕೂಡ ವಾಕ್ಯರೂಪವಾಗಲು ಸಾಧ್ಯವಿಲ್ಲ. 'ಪದಸಮನ್ವಯವನ್ನು ತಿಳಿಯಬೇಕು' ಎಂಬ ವಾಕ್ಯಾರ್ಥವು ಸಿದ್ಧವಾಗುವುದಿಲ್ಲವೆಂದು ತಿಳಿಯಬೇಕು. 'ಬೋಧಕತ್ವೇ' ಎಂಬುದಕ್ಕೆ 'ತಾದೃಶಸಂಸರ್ಗಸ್ಯ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು.

**प्रकाशः** – ''सन्निपातलक्षणो विधिरनिमित्तं तद्विघातस्य'' इति न्यायादिति भावः । **संसर्गं** वाक्यार्थरूपम् ।

'ಸನ್ನಿಪಾತಲಕ್ಷಣೋ ವಿಧಿರನಿಮಿತ್ತಂ ತದ್ವಿಘಾತಸ್ಯ' ಎಂಬುದು ವ್ಯಾಕರಣದ ಪರಿಭಾಷೆಯಾಗಿದೆ. ಯಾವುದೊಂದರ ಪ್ರಾಪ್ತಿಯನ್ನೇ ನಿಮಿತ್ತವನ್ನಾಗಿ ಇಟ್ಟುಕೊಂಡು ಯಾವುದನ್ನು ವಿಧಿಸಲಾಗಿದೆಯೋ, ಅಂತಹ ವಿಧಿಯು ಅದರ ವಿಘಾತಕ್ಕೆ ನಿಮಿತ್ತವಾಗುವುದಿಲ್ಲ ಎಂದು ಇದರ ಅಭಿಪ್ರಾಯ. ಈ ಪರಿಭಾಷೆಯಲ್ಲಿ 'ಯತ್' ಹಾಗೂ 'ತತ್' ಎಂಬ ಶಬ್ದಗಳನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಯ ವಿಧಿಃ ಯತ್ ಸನ್ನಿಪಾತಲಕ್ಷಣಕಃ ತದ್ವಿಘಾತಸ್ಯ ನಿಮಿತ್ತಮ್ ನ ಭವತಿ' ಎಂದು ಹೇಳಿದಂತಾಗುತ್ತದೆ. ಪ್ರಕೃತ ಪದಸಮನ್ವಯವು ಸಿದ್ಧವಾಗುತ್ತಿರುವುದೇ ವಾಕ್ಯರೂಪತೆಯಿಂದ, ಅಂತಹ ವಾಕ್ಯರೂಪತ್ವಕ್ಕೆ ಈ ಪದಸಮನ್ವಯವು ವಿಘಾತಕವಾಗುವುದಿಲ್ಲವೆಂದು ತಿಳಿಯಬೇಕು. 'ಸಂಸರ್ಗಂ' ಎಂದರೆ ವಾಕ್ಯಾರ್ಥ-ರೂಪವಾದದ್ದು ಎಂದರ್ಥ.

**प्रकाशः** – नन्वेतद्वाक्यगतपदानां स्थलान्तरेऽपि तत्र तत्र श्रवणात् तत्रत्यानामेव वर्णपदादिरूपेण ब्रह्मणि समन्वये तत्तन्नामनिमित्तगुणलाभसम्भवादत्रत्यानां तथासमन्वयो विफल एव । अस्य वाक्यविधयैव ब्रह्मणि सर्वशब्दपरत्वरूपार्थपरत्वे काप्यनुपपत्तिर्नास्ति । येनैवं समाधानमनुसर्तव्यमिति चेत्

ಆಶಂಕೆ - 'ತಂ ಯಚ್ಛತಮ್' ಎಂಬುದರಿಂದ ವಾಕ್ಯಸಮನ್ವಯವನ್ನು ಮಾತ್ರ ವಿವಕ್ಷಿಸೋಣ. ಪದಸಮನ್ವಯವನ್ನು ವಿವಕ್ಷಿಸುವ ಅವಶ್ಯಕತೆಯಿರುವುದಿಲ್ಲ. ಏಕೆಂದರೆ ಈ ವಾಕ್ಯದಲ್ಲಿರುವ ಎಲ್ಲ ಪದಗಳು ವೇದದಲ್ಲಿ ಬೇರೆ ಬೇರೆ ಕಡೆ ಬಂದೇ ಇರುತ್ತವೆ. ಅಲ್ಲಿರುವ ಪದಗಳ ಸಮನ್ವಯದಿಂದಲೇ ಆಯಾ ಪದಗಳ ಪ್ರವೃತ್ತಿನಿಮಿತ್ತವೆಂಬ ಗುಣಗಳು ಬ್ರಹ್ಮನಲ್ಲಿ ಸಮನ್ವಯಗೊಳ್ಳುತ್ತವೆ. ಹೀಗಿರುವಾಗ ಪ್ರಕೃತ 'ತಂ ಯಚ್ಛತಮ್' ಎಂಬ ಶ್ರುತಿಯಲ್ಲಿರುವ ಪದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಏಕೆ ತಿಳಿಯಬೇಕು? ಕೇವಲ ವಾಕ್ಯರೂಪವಾಗಿಯೇ ಇದರ ಸಮನ್ವಯವನ್ನು ಬ್ರಹ್ಮನಲ್ಲಿ ತಿಳಿದರೆ ಸಾಕಾಗುತ್ತದಲ್ಲವೇ? ಹೀಗೆ ಹೇಳಿದಾಗ 'ತಂ ಯಚ್ಛತಮ್' ಎಂಬ ವಾಕ್ಯವು ವಾಕ್ಯರೂಪವಾಗಿ ಎಲ್ಲ ಪದಗಳ ಸಮನ್ವಯವನ್ನು ಬ್ರಹ್ಮನಲ್ಲಿ ವಿಧಿಸುತ್ತದೆ. ಆವಾಗ ಬೇರೆ ಕಡೆಯಿರುವ ಪದಗಳ ಸಮನ್ವಯದಿಂದಲೇ ಈ ವಾಕ್ಯದಲ್ಲಿಯೂ ಗರ್ಭಿತವಾದ ಪದಗಳ ಸಮನ್ವಯವನ್ನು ಹೇಳಿದಂತಾಗುತ್ತದೆ. ಆವಾಗ ಯಾವುದೇ ಅನುಪಪತ್ತಿಗೂ ಕೂಡ ಅವಕಾಶವಿಲ್ಲವಲ್ಲವೇ?

**प्रकाशः** – समाहितमेतत् प्रागेव सर्ववेदगतशब्दवाच्यत्वस्यापि मुमुक्षुणा ज्ञेयत्वादिति ।

ಪರಿಹಾರ - ಈ ಆಶಂಕೆಯನ್ನು ಈಗಾಗಲೇ ಪರಿಹರಿಸಿದ್ದಾಗಿದೆ. ಭಗವಂತನು ಸರ್ವಶಬ್ದವಾಚ್ಯನೆಂದು ಮುಮುಕ್ಷುವಾದವನು ಅವಶ್ಯವಾಗಿ ತಿಳಿಯಬೇಕು. ಸರ್ವಶಬ್ದವಾಚ್ಯತ್ವವನ್ನು ತಿಳಿಯಬೇಕಾದರೆ ಒಂದು ಶಬ್ದದ ಪ್ರವೃತ್ತಿನಿಮಿತ್ತವನ್ನು ಒಮ್ಮೆ ತಿಳಿದರೆ ಸಾಲದು. ವೇದದಲ್ಲಿ ಆ ಒಂದು ಶಬ್ದವು ಎಲ್ಲೆಲ್ಲಿ ಬಂದಿರುತ್ತದೋ, ಆ ಎಲ್ಲಾ ಪದಗಳ ಪ್ರವೃತ್ತಿನಿಮಿತ್ತವನ್ನು ಪ್ರತ್ಯೇಕ-ಪ್ರತ್ಯೇಕವಾಗಿಯೇ ಭಗವಂತನಲ್ಲಿ ತಿಳಿಯಬೇಕಾಗುತ್ತದೆ. ಇಲ್ಲದಿದ್ದರೆ ಸರ್ವಶಬ್ದವಾಚ್ಯತ್ವವನ್ನು ಸರ್ವಥಾ ತಿಳಿದಂತಾಗುವುದಿಲ್ಲ. ಆದ್ದರಿಂದ 'ತಂ ಯಚ್ಛತಮ್' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳ ಸಮನ್ವಯವನ್ನೂ ಕೂಡ ಅವಶ್ಯವಾಗಿ ತಿಳಿಯಲೇ ಬೇಕು.

**प्रकाशः** – एतेन वर्णानां पञ्चाशत्त्वात् तत्रकचन गतानां तेषां समन्वयेनाप्युपपत्तेर्न सर्ववेदानां स कार्य इति प्रत्युक्तम् ।

ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವನ್ನು ಪರಿಹರಿಸಿದಂತಾಯಿತು. ವಾಕ್ಯಗಳು ಅನಂತವಾಗಿದ್ದರೂ ಕೂಡ ವರ್ಣಗಳು ಮಾತ್ರ ಕೇವಲ ಐವತ್ತು. ಈ ಐವತ್ತು ವರ್ಣಗಳ ಸಮನ್ವಯವನ್ನು ಒಮ್ಮೆ ಪರಮಾತ್ಮನಲ್ಲಿ ತಿಳಿದರೆ ಸಾಕು. ಅದೇ ವರ್ಣಗಳೇ ವೇದದಲ್ಲಿ ಅನೇಕ ಬಾರಿ ಶ್ರುತವಾಗುತ್ತವೆ. ಆಯಾ ವರ್ಣಗಳ ಸಮನ್ವಯವನ್ನೇಕೆ ಪರಮಾತ್ಮನಲ್ಲಿ ತಿಳಿಯಬೇಕು ? ಎಂಬ ಆಕ್ಷೇಪಕ್ಕೆ ಈಗ ಅವಕಾಶವಿಲ್ಲ. ಏಕೆಂದರೆ ವೇದದಲ್ಲಿ ಎಷ್ಟು ಬಾರಿ ಆ ವರ್ಣಗಳು ಕೇಳಿಸುತ್ತವೋ, ಆ ಎಲ್ಲಾ ವರ್ಣಗಳನ್ನು ಪ್ರತ್ಯೇಕವಾಗಿ ಸಮನ್ವಯ ಮಾಡಬೇಕು.

**प्रकाशः** – अन्यथा ''वेदाक्षराणि यावन्ति पठितानि द्विजातिभिः'' इत्यादौ तदुक्तिर्न स्यात् ।

ಹೀಗೊಪ್ಪದಿದ್ದರೆ 'ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ತಾವಂತಿ ಹರಿನಾಮಾನಿ' ಎಂಬಲ್ಲಿ ಎಷ್ಟು ವೇದಾಕ್ಷರಗಳಿವೆಯೋ, ಅವೆಲ್ಲವನ್ನೂ ಹರಿನಾಮವೆಂದು ತಿಳಿಯಬೇಕೆಂದು ಏಕೆ ಹೇಳಬೇಕಿತ್ತು. ಕೇವಲ ಐವತ್ತೊಂದು ವರ್ಣಗಳಿಂದ ಪರಮಾತ್ಮನು ತಿಳಿದರೆ ಸಾಕು ಎಂದಷ್ಟೇ ಹೇಳಬಹುದಿತ್ತಲ್ಲವೇ? ಹೀಗೆ ಹೇಳಿದ್ದರಿಂದ ವೇದದಲ್ಲಿರುವ ಪ್ರತಿಯೊಂದು ವಾಕ್ಯಗಳನ್ನೂ, ಪ್ರತಿಯೊಂದು ಪದಗಳನ್ನೂ, ಪ್ರತಿಯೊಂದು ವರ್ಣಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಪರಮಾತ್ಮನಲ್ಲಿ ಸಮನ್ವಯವನ್ನು ತಿಳಿಯಲೇ ಬೇಕು.

**प्रकाशः** – नन्विदं वाक्यं सर्ववाक्यगतानामपि पदानां ब्रह्मणि वृत्तिं ब्रुवत् स्वगतानामपि वक्तिचेत् तस्ववृत्तिविरोध इत्यत आह – **स्वाध्याय इति** ।।

'ತಂ ಯಚ್ಛತಮ್' ಎಂಬ ವಾಕ್ಯವು ಸಕಲಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ತಿಳಿಯಬೇಕೆಂದು ವಿಧಾನ ಮಾಡುವ ಮೂಲಕ ತನ್ನಲ್ಲಿರುವ ಪದಗಳ ಸಮನ್ವಯವನ್ನೂ ಕೂಡ ತಿಳಿಯಬೇಕೆಂದು ವಿಧಾನ ಮಾಡುತ್ತಿದೆಯೆಂದು ಹೇಳಿದಿರಿ. ಆವಾಗ ಆತ್ಮಾಶ್ರಯದೋಷವು ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ಸ್ವಾಧ್ಯಾಯ' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ.

**प्रकाशः** – यथा ''स्वाध्यायोऽध्येतव्यः'' इति वाक्यं सर्वस्वाध्यायमध्ययनद्वारा र्थज्ञाने विनियुञ्जानं स्वात्मानं च विनियुङ्क्ते । अन्यस्याभावात् । भावे वाऽनवस्थाद्यापत्तेः । तद्वदिदमपि । विरोधस्त्वप्रमितस्थले वा इतरसाहित्यरहितस्वा त्मवृत्तिस्थले वेति भावः ।

ಯಾವರೀತಿಯಾಗಿ 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯದಲ್ಲಿ ಸ್ವಶಾಖಾಧ್ಯಯನವನ್ನು ಅರ್ಥಜ್ಞಾನದ ತನಕ ಮಾಡಬೇಕೆಂದು ವಿಧಿಸಿದೆ. ಸ್ವಶಾಖಾಧ್ಯಯನವನ್ನು ವಿಧಾನ ಮಾಡುವ ಈ ವಾಕ್ಯವು ತನ್ನ ಅಧ್ಯಯನವನ್ನೂ ಕೂಡ ಅರ್ಥಜ್ಞಾನಪರ್ಯಂತರವಾಗಿ ಮಾಡಬೇಕೆಂದು ವಿಧಾನ ಮಾಡುತ್ತಿದೆ. ಏಕೆಂದರೆ ಈ ವಾಕ್ಯವು ಬಿಟ್ಟರೆ, ಬೇರೆ ಯಾವ ವಾಕ್ಯವೂ ಕೂಡ ತನ್ನನ್ನು ಅಧ್ಯಯನ ಮಾಡಬೇಕೆಂದು ಹೇಳುತ್ತಿಲ್ಲ. ಒಂದುವೇಳೆ ಈ ವಾಕ್ಯದ ಅಧ್ಯಯನಕ್ಕಾಗಿ ಮತ್ತೊಂದು ವಾಕ್ಯವಿದೆಯೆಂದು ಕಲ್ಪನೆ ಮಾಡಿದರೆ ಅನವಸ್ಥಾದೋಷವು ಬರುತ್ತದೆ. ಆದ್ದರಿಂದ ಪ್ರಾಮಾಣಿಕವಾದ ಸ್ಥಳದಲ್ಲಿ ಆತ್ಮಾಶ್ರಯಾದಿ ದೋಷಗಳಿಗೆ ಅವಕಾಶವಿಲ್ಲ. ಅದರಂತೆ ಪ್ರಕೃತ 'ತಂ ಯಚ್ಛತಮ್' ಎಂಬ ವಾಕ್ಯವು ಎಲ್ಲಾ ಶ್ರುತಿ-ವಾಕ್ಯಗಳ ಪದಸಮನ್ವಯವನ್ನು ಹೇಳುವ ಮೂಲಕ ತನ್ನ ವಾಕ್ಯದಲ್ಲಿರುವ ಪದಸಮನ್ವಯವನ್ನೂ ಕೂಡ ವಿಧಾನ ಮಾಡುತ್ತಿದೆ. ಈಗ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಆತ್ಮಾಶ್ರಯಾದಿಗಳು ಪ್ರವೃತ್ತಿಗೆ ಪ್ರತಿಬಂಧಕವಾಗುತ್ತದಲ್ಲವೇ? ಎಂದು ಶಂಕಿಸಬಾರದು. ಅಪ್ರಮಿತವಾದ ಸ್ಥಳದಲ್ಲಷ್ಟೇ ಇಂತಹ ಪ್ರವೃತ್ತಿಪ್ರತಿಬಂಧಕವಾದ ಆತ್ಮಾಶ್ರಯಾದಿಗಳನ್ನು ದೋಷವೆಂದು ಪರಿಗಣಿಸಬೇಕು. ಪ್ರಮಿತವಾದ ಸ್ಥಳದಲ್ಲಿ ಆತ್ಮಾಶ್ರಯ, ಅನ್ಯೋನ್ಯಾಶ್ರಯ ಮೊದಲಾದ ದೋಷಗಳಿಗೆ ಅವಕಾಶವಿರುವುದಿಲ್ಲ.




ತತ್ರಾಪಿ ಯೌಗಿಕೋ ಮುಖ್ಯಃ ಸರ್ವತ್ರಾಸ್ತಿ ಸ ವೈದಿಕೇ ।
ಅನವಸ್ಥಾನಿವೃತ್ತ್ಯರ್ಥಂ ಯೌಗಿಕೇ ರೂಢಿಕಲ್ಪನಾ ॥

ರೂಢಿ ಹಾಗೂ ಯೋಗಗಳ ನಡುವೆ ಯೌಗಿಕವಾದ ಅರ್ಥವೇ ಮುಖ್ಯವಾಗಿರುತ್ತದೆ. ವೇದದಲ್ಲಿರುವ ಸಕಲಶಬ್ದಗಳು ರೂಢ್ಯರ್ಥವನ್ನು ಹಾಗೂ ಯೋಗಾರ್ಥವನ್ನು ಹೇಳಿದರೂ ಯೋಗಾರ್ಥವೇ ಮುಖ್ಯ. ಅನವಸ್ಥಾದೋಷ ಪರಿಹಾರಕ್ಕಾಗಿ ಮಾತ್ರ ಯೌಗಿಕವಾದ ಶಬ್ದಗಳಲ್ಲಿ ರೂಢಿಗಳನ್ನು ಕಲ್ಪಿಸಲಾಗಿರುತ್ತದೆ.

ತತ್ರಾಪಿ ಪರಮೋ ಮುಖ್ಯೋ ವಾಚ್ಯೋ ಶೇಷರವೈರ್ಹರಿಃ ।
ತತ್ತನ್ಮುಖ್ಯಾವಿರೋಧೇನ ತದನ್ಯಾರ್ಥಸ್ಯ ಸಂಗ್ರಹಃ ॥

ಯೌಗಿಕಾರ್ಥದಲ್ಲಿಯೂ ಕೂಡ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಉಳಿದೆಲ್ಲಾ ಪದಾರ್ಥಗಳು ಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗುತ್ತವೆ.

ಇವೇಮೊದಲಾದಸ್ಮೃತಿಗಳಿಂದಪರಮಾತ್ಮನೊಬ್ಬನೇಪರಮಮುಖ್ಯವೃತ್ತಿಯಿಂದಸಕಲವೇದಪ್ರತಿಪಾದ್ಯನೆಂದು ತಿಳಿಯಬೇಕು.

ಹೀಗೆ ಭಗವಂತನಲ್ಲಿ ವೇದಗಳ ಅನೇಕರೀತಿಯ ಸಮನ್ವಯಗಳನ್ನು ತಿಳಿಯಬೇಕು. ವೇದದಲ್ಲಿರುವ ಪ್ರತಿಯೊಂದು ಪದಗಳು ಧರ್ಮ, ದೇವತೆ, ಯಜ್ಞ ಮತ್ತು ಅವುಗಳಿಗೆ ಸಂಬಂಧಪಟ್ಟ ವಸ್ತುಗಳನ್ನು ಅಮುಖ್ಯವಾಗಿ ತಿಳಿಸುವುದರ ಜೊತೆಗೆ ಭಗವಂತನನ್ನು ಮುಖ್ಯವಾಗಿ ತಿಳಿಸುತ್ತವೆ. ಪ್ರತಿಯೊಂದು ಪದಗಳು ಅಕ್ಷರಗಳು ಭಗವಂತನನ್ನೇ ಬೋಧಿಸುತ್ತವೆ. ಇಂಥ ಸಮನ್ವಯವನ್ನು ಬ್ರಹ್ಮದೇವರು ಮಾತ್ರ ತಿಳಿಯಬಲ್ಲರು. ಇದಕ್ಕೆ ಪದಸಮನ್ವಯವೆಂದು ಹೆಸರು.

ಮತ್ತೊಂದು ವಾಕ್ಯಸಮನ್ವಯ. ವಾಕ್ಯದಲ್ಲಿರುವ ಇಂದ್ರ, ಅಗ್ನಿ, ವರುಣ ಮುಂತಾದ ಒಂದೊಂದು ಪದಗಳು ಭಗವಂತನನ್ನು ತಿಳಿಸಿದಾಗ ಮಾತ್ರ ಇಡೀ ವಾಕ್ಯವು ಭಗವಂತನ ಗುಣವರ್ಣನೆಯಲ್ಲಿ ಪರ್ಯವಸಾನವಾಗುತ್ತದೆ. ಇದನ್ನು ವಾಕ್ಯಸಮನ್ವಯವೆಂದು ಹೇಳುತ್ತಾರೆ.

ವಾಕ್ಯಸಮನ್ವಯದ ಮತ್ತೊಂದು ಕ್ರಮ ಹೀಗಿದೆ - ಯಜ್ಞ ಮುಂತಾದ ಅನೇಕ ಕರ್ಮಗಳ ಅನುಷ್ಠಾನ ಪ್ರಕಾರವನ್ನು ವಾಕ್ಯಗಳು ತಿಳಿಸುತ್ತವೆ ಮತ್ತು ದೇವತೆಗಳನ್ನೂ ಕೂಡ ಸಮಗ್ರವಾಗಿ ತಿಳಿಸುತ್ತವೆ. ಆದರೆ ವಾಕ್ಯಗಳ ಮುಖ್ಯತಾತ್ಪರ್ಯ ಸ್ವರ್ಗವಾಗಲೀ, ದೇವತೆಗಳಾಗಲೀ ಆಗಿರುವುದಿಲ್ಲ. ಹೊರತಾಗಿ ಇಂತಹ ಸತ್ಕರ್ಮಗಳ ಅನುಷ್ಠಾನದಿಂದ ಅಂತಃಕರಣದ ನೈರ್ಮಲ್ಯವನ್ನು ಪಡೆದು ಅದರ ಜೊತೆಗೆ ಈ ಕರ್ಮಗಳು ಕೇವಲ ಅಲ್ಪವಾದ ಸಾಂಸಾರಿಕ ಫಲವನ್ನಷ್ಟೇ ನೀಡುತ್ತವೆಂದು ತಿಳಿದು ಶುದ್ಧವಾದ ಅಂತಃಕರಣದಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ನಮ್ಮನ್ನು ಪ್ರಚೋದಿಸುವುದೇ ಕರ್ಮಕಾಂಡದ ಉದ್ದೇಶವಾಗಿರುತ್ತದೆ. ಹೀಗೆ ಭಗವಂತನ ಉದ್ದೇಶವಾಗಿಯೇ ಎಲ್ಲಾ ವಾಕ್ಯಗಳು ಪರ್ಯವಾಸನಗೊಳ್ಳುತ್ತವೆ. ಇದು ವಾಕ್ಯಸಮನ್ವಯದ ಮತ್ತೊಂದು ಪ್ರಕಾರ.

ಇನ್ನೂ ಹೆಚ್ಚೆಂದರೆ ವೇದದಲ್ಲಿರುವ ಶಬ್ದಗಳಷ್ಟೇ ಅಲ್ಲದೇ ನಮ್ಮ ವ್ಯವಹಾರದಲ್ಲಿರುವ ಸಕಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ. ಅಷ್ಟೇ ಅಲ್ಲದೇ ಹಕ್ಕಿಗಳ ಕಲರವ, ಸಮುದ್ರದ ಘೋಷ, ಮಗುವಿನ ಗೆಜ್ಜೆಯ ನಿನಾದ, ಹಲ್ಲಿಯ ಲೊಚಗುಟ್ಟುವಿಕೆ ಇವೆಲ್ಲಾ ಧ್ವನಿಗಳು ಪರಮಾತ್ಮನ ಗುಣಗಾನಗಳೆಂದು ಜ್ಞಾನಿಗಳು ತಿಳಿಯುತ್ತಾರೆ. ಅತ್ಯಂತ ಕಠಿಣವಾದ ಪದಸಮನ್ವಯದ ವಿಷಯದಲ್ಲಿ 'ತಂ ಯಚ್ಛತಮ್' ಎಂಬ ವಾಕ್ಯವು ಪ್ರಮಾಣವಾಗಿದೆ. ಎಲ್ಲಾ ಪದಗಳೂ ಬ್ರಹ್ಮನ ಹೆಸರೇ ಆದಲ್ಲಿ ಸರ್ವಶಬ್ದವಾಚ್ಯತ್ವವನ್ನು ಈ ವಾಕ್ಯಕ್ಕೂ ಕೂಡ ವಿಧಾನ ಮಾಡಲು ಬರುವುದಿಲ್ಲ. ಏಕೆಂದರೆ ಈ 'ತಂ ಯಚ್ಛತಮ್' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳೂ ಪರಮಾತ್ಮನ ಹೆಸರೇ ಆದಲ್ಲಿ ಎಲ್ಲಾ ಪದಗಳಿಂದಲೂ ವಾಚ್ಯನೆಂಬ ತಾತ್ಪರ್ಯವನ್ನು ಹೇಗೆ ಹೊಂದುತ್ತದೆ ? ಈ ಗೊಂದಲವು ಸಹಜವಾಗಿ ಬರುತ್ತದೆ. ಆದರೆ ಲೋಕಪ್ರಸಿದ್ಧವಾದ ಪದಾರ್ಥಸಂಸರ್ಗಬೋಧಕವಾದ ಪದಸಮನ್ವಯವು ತನಗೆ ಉಪಜೀವ್ಯವಾದ ವಾಕ್ಯಸಮನ್ವಯವನ್ನು ವಿರೋಧಿಸಲು ಸಾಧ್ಯವಿಲ್ಲ. ಆದ್ದರಿಂದ ಪದಸಮನ್ವಯದ ಜೊತೆಗೆ ವಾಕ್ಯಸಮನ್ವಯವನ್ನೂ ಕೂಡ ಇದರಿಂದ ತಿಳಿಯಬೇಕು.

• • • • •

## ಶಬ್ದಗಳು ಪರಮಾತ್ಮನಲ್ಲೇ ಸಮನ್ವಯವಾಗುತ್ತವೆ; ಆದರೂ ಲೋಕವ್ಯವಹಾರಕ್ಕೆ ತೊಂದರೆಯಿಲ್ಲ

### तात्पर्यचन्द्रिका

**अत्र च श्रुतो 'एतं' इत्यनेन ''प्राणस्तथा'' इत्यत्र ब्रह्मत्वेन निर्णीतं ''प्राणो ह्येषा य एष तपति'' इति पूर्ववाक्यस्थं प्राणं परामृश्यावयवार्थोक्त्या योगः, 'आचक्षते' इत्यनेन रूढिश्चोक्ता ।**

ಅನುವಾದ - 'ತಂ ಯಚ್ಛತಮ್' ಎಂಬ ಶ್ರುತಿಯಲ್ಲಿ 'ಏತಂ' ಎಂಬ ಏತತ್ ಶಬ್ದದಿಂದ ಹಿಂದೆ ಪ್ರಸಕ್ತವಾದ ಪ್ರಾಣನನ್ನು ಪರಾಮರ್ಶ ಮಾಡಲಾಗಿದೆ. ಪ್ರಾಣನೆಂದರೆ 'ಪ್ರಾಣಸ್ತಥಾನುಗಮಾತ್' ಎಂಬ ಅಧಿಕರಣದಲ್ಲಿ ಸಮರ್ಥನೆ ಮಾಡಿದಂತೆ ಪ್ರಾಣಶಬ್ದವಾಚ್ಯನಾದ ಪರಮಾತ್ಮನೇ ವಿವಕ್ಷಿತನಾಗಿರುತ್ತಾನೆ. ಅಂತಹ ಪ್ರಾಣನಾಮಕನಾದ ಪರಮಾತ್ಮನು 'ಪ್ರಾಣೋ ಹ್ಯೇಷಾ ಯ ಏಷ ತಪತಿ' ಎಂಬ ಪೂರ್ವವಾಕ್ಯದಲ್ಲಿ ಪ್ರತಿಪಾದ್ಯನಾಗಿದ್ದಾನೆ. ಅವನನ್ನೇ ಇಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶ ಮಾಡಿ ಅವಯವಾರ್ಥದಿಂದ ಯೋಗವನ್ನು 'ಆಚಕ್ಷತೇ' ಎಂಬ ಪದದಿಂದ ರೂಢಿಯನ್ನು ಶ್ರುತಿ ಹೇಳುತ್ತಿದೆ.

**अवधारणेन च लौकिकरूढिप्राबल्यप्रसक्तमन्येषां मुख्यार्थत्वं निरस्तम् ।**

'ಏತಮೇವ' 'ಪರಮಾತ್ಮನನ್ನೇ' ಎಂದು ಅವಧಾರಣಪುರಸ್ಸರವಾಗಿ ಹೇಳುತ್ತಿರುವುದರಿಂದ ಲೌಕಿಕವಾದ ಪದಾರ್ಥಗಳು ಮುಖ್ಯವಾಗಿ ಪ್ರತಿಪಾದ್ಯವಾಗುವುದಿಲ್ಲ ಎಂದು ಹೇಳಿದಂತಾಗುತ್ತದೆ.




ತತ್ರಾಪಿ ಯೌಗಿಕೋ ಮುಖ್ಯಃ ಸರ್ವತ್ರಾಸ್ತಿ ಸ ವೈದಿಕೇ ।
ಅನವಸ್ಥಾನಿವೃತ್ತ್ಯರ್ಥಂ ಯೌಗಿಕೇ ರೂಢಿಕಲ್ಪನಾ ॥

ರೂಢಿ ಹಾಗೂ ಯೋಗಗಳ ನಡುವೆ ಯೌಗಿಕವಾದ ಅರ್ಥವೇ ಮುಖ್ಯವಾಗಿರುತ್ತದೆ. ವೇದದಲ್ಲಿರುವ ಸಕಲಶಬ್ದಗಳು ರೂಢ್ಯರ್ಥವನ್ನು ಹಾಗೂ ಯೋಗಾರ್ಥವನ್ನು ಹೇಳಿದರೂ ಯೋಗಾರ್ಥವೇ ಮುಖ್ಯ. ಅನವಸ್ಥಾದೋಷ ಪರಿಹಾರಕ್ಕಾಗಿ ಮಾತ್ರ ಯೌಗಿಕವಾದ ಶಬ್ದಗಳಲ್ಲಿ ರೂಢಿಗಳನ್ನು ಕಲ್ಪಿಸಲಾಗಿರುತ್ತದೆ.

ತತ್ರಾಪಿ ಪರಮೋ ಮುಖ್ಯೋ ವಾಚ್ಯೋ ಶೇಷರವೈರ್ಹರಿಃ ।
ತತ್ತನ್ಮುಖ್ಯಾವಿರೋಧೇನ ತದನ್ಯಾರ್ಥಸ್ಯ ಸಂಗ್ರಹಃ ॥

ಯೌಗಿಕಾರ್ಥದಲ್ಲಿಯೂ ಕೂಡ ಪರಮಮುಖ್ಯವೃತ್ತಿಯಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಉಳಿದೆಲ್ಲಾ ಪದಾರ್ಥಗಳು ಮುಖ್ಯವೃತ್ತಿಯಿಂದ ಪ್ರತಿಪಾದ್ಯವಾಗುತ್ತವೆ.

ಇವೇಮೊದಲಾದಸ್ಮೃತಿಗಳಿಂದಪರಮಾತ್ಮನೊಬ್ಬನೇಪರಮಮುಖ್ಯವೃತ್ತಿಯಿಂದಸಕಲವೇದಪ್ರತಿಪಾದ್ಯನೆಂದು ತಿಳಿಯಬೇಕು.

ಹೀಗೆ ಭಗವಂತನಲ್ಲಿ ವೇದಗಳ ಅನೇಕರೀತಿಯ ಸಮನ್ವಯಗಳನ್ನು ತಿಳಿಯಬೇಕು. ವೇದದಲ್ಲಿರುವ ಪ್ರತಿಯೊಂದು ಪದಗಳು ಧರ್ಮ, ದೇವತೆ, ಯಜ್ಞ ಮತ್ತು ಅವುಗಳಿಗೆ ಸಂಬಂಧಪಟ್ಟ ವಸ್ತುಗಳನ್ನು ಅಮುಖ್ಯವಾಗಿ ತಿಳಿಸುವುದರ ಜೊತೆಗೆ ಭಗವಂತನನ್ನು ಮುಖ್ಯವಾಗಿ ತಿಳಿಸುತ್ತವೆ. ಪ್ರತಿಯೊಂದು ಪದಗಳು ಅಕ್ಷರಗಳು ಭಗವಂತನನ್ನೇ ಬೋಧಿಸುತ್ತವೆ. ಇಂಥ ಸಮನ್ವಯವನ್ನು ಬ್ರಹ್ಮದೇವರು ಮಾತ್ರ ತಿಳಿಯಬಲ್ಲರು. ಇದಕ್ಕೆ ಪದಸಮನ್ವಯವೆಂದು ಹೆಸರು.

ಮತ್ತೊಂದು ವಾಕ್ಯಸಮನ್ವಯ. ವಾಕ್ಯದಲ್ಲಿರುವ ಇಂದ್ರ, ಅಗ್ನಿ, ವರುಣ ಮುಂತಾದ ಒಂದೊಂದು ಪದಗಳು ಭಗವಂತನನ್ನು ತಿಳಿಸಿದಾಗ ಮಾತ್ರ ಇಡೀ ವಾಕ್ಯವು ಭಗವಂತನ ಗುಣವರ್ಣನೆಯಲ್ಲಿ ಪರ್ಯವಸಾನವಾಗುತ್ತದೆ. ಇದನ್ನು ವಾಕ್ಯಸಮನ್ವಯವೆಂದು ಹೇಳುತ್ತಾರೆ.

ವಾಕ್ಯಸಮನ್ವಯದ ಮತ್ತೊಂದು ಕ್ರಮ ಹೀಗಿದೆ - ಯಜ್ಞ ಮುಂತಾದ ಅನೇಕ ಕರ್ಮಗಳ ಅನುಷ್ಠಾನ ಪ್ರಕಾರವನ್ನು ವಾಕ್ಯಗಳು ತಿಳಿಸುತ್ತವೆ ಮತ್ತು ದೇವತೆಗಳನ್ನೂ ಕೂಡ ಸಮಗ್ರವಾಗಿ ತಿಳಿಸುತ್ತವೆ. ಆದರೆ ವಾಕ್ಯಗಳ ಮುಖ್ಯತಾತ್ಪರ್ಯ ಸ್ವರ್ಗವಾಗಲೀ, ದೇವತೆಗಳಾಗಲೀ ಆಗಿರುವುದಿಲ್ಲ. ಹೊರತಾಗಿ ಇಂತಹ ಸತ್ಕರ್ಮಗಳ ಅನುಷ್ಠಾನದಿಂದ ಅಂತಃಕರಣದ ನೈರ್ಮಲ್ಯವನ್ನು ಪಡೆದು ಅದರ ಜೊತೆಗೆ ಈ ಕರ್ಮಗಳು ಕೇವಲ ಅಲ್ಪವಾದ ಸಾಂಸಾರಿಕ ಫಲವನ್ನಷ್ಟೇ ನೀಡುತ್ತವೆಂದು ತಿಳಿದು ಶುದ್ಧವಾದ ಅಂತಃಕರಣದಿಂದ ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ನಮ್ಮನ್ನು ಪ್ರಚೋದಿಸುವುದೇ ಕರ್ಮಕಾಂಡದ ಉದ್ದೇಶವಾಗಿರುತ್ತದೆ. ಹೀಗೆ ಭಗವಂತನ ಉದ್ದೇಶವಾಗಿಯೇ ಎಲ್ಲಾ ವಾಕ್ಯಗಳು ಪರ್ಯವಾಸನಗೊಳ್ಳುತ್ತವೆ. ಇದು ವಾಕ್ಯಸಮನ್ವಯದ ಮತ್ತೊಂದು ಪ್ರಕಾರ.

ಇನ್ನೂ ಹೆಚ್ಚೆಂದರೆ ವೇದದಲ್ಲಿರುವ ಶಬ್ದಗಳಷ್ಟೇ ಅಲ್ಲದೇ ನಮ್ಮ ವ್ಯವಹಾರದಲ್ಲಿರುವ ಸಕಲ ಶಬ್ದಗಳೂ ಭಗವಂತನನ್ನೇ ಪ್ರತಿಪಾದಿಸುತ್ತವೆ. ಅಷ್ಟೇ ಅಲ್ಲದೇ ಹಕ್ಕಿಗಳ ಕಲರವ, ಸಮುದ್ರದ ಘೋಷ, ಮಗುವಿನ ಗೆಜ್ಜೆಯ ನಿನಾದ, ಹಲ್ಲಿಯ ಲೊಚಗುಟ್ಟುವಿಕೆ ಇವೆಲ್ಲಾ ಧ್ವನಿಗಳು ಪರಮಾತ್ಮನ ಗುಣಗಾನಗಳೆಂದು ಜ್ಞಾನಿಗಳು ತಿಳಿಯುತ್ತಾರೆ. ಅತ್ಯಂತ ಕಠಿಣವಾದ ಪದಸಮನ್ವಯದ ವಿಷಯದಲ್ಲಿ 'ತಂ ಯಚ್ಛತಮ್' ಎಂಬ ವಾಕ್ಯವು ಪ್ರಮಾಣವಾಗಿದೆ. ಎಲ್ಲಾ ಪದಗಳೂ ಬ್ರಹ್ಮನ ಹೆಸರೇ ಆದಲ್ಲಿ ಸರ್ವಶಬ್ದವಾಚ್ಯತ್ವವನ್ನು ಈ ವಾಕ್ಯಕ್ಕೂ ಕೂಡ ವಿಧಾನ ಮಾಡಲು ಬರುವುದಿಲ್ಲ. ಏಕೆಂದರೆ ಈ 'ತಂ ಯಚ್ಛತಮ್' ಎಂಬ ವಾಕ್ಯದಲ್ಲಿರುವ ಪ್ರತಿಯೊಂದು ಪದಗಳೂ ಪರಮಾತ್ಮನ ಹೆಸರೇ ಆದಲ್ಲಿ ಎಲ್ಲಾ ಪದಗಳಿಂದಲೂ ವಾಚ್ಯನೆಂಬ ತಾತ್ಪರ್ಯವನ್ನು ಹೇಗೆ ಹೊಂದುತ್ತದೆ ? ಈ ಗೊಂದಲವು ಸಹಜವಾಗಿ ಬರುತ್ತದೆ. ಆದರೆ ಲೋಕಪ್ರಸಿದ್ಧವಾದ ಪದಾರ್ಥಸಂಸರ್ಗಬೋಧಕವಾದ ಪದಸಮನ್ವಯವು ತನಗೆ ಉಪಜೀವ್ಯವಾದ ವಾಕ್ಯಸಮನ್ವಯವನ್ನು ವಿರೋಧಿಸಲು ಸಾಧ್ಯವಿಲ್ಲ. ಆದ್ದರಿಂದ ಪದಸಮನ್ವಯದ ಜೊತೆಗೆ ವಾಕ್ಯಸಮನ್ವಯವನ್ನೂ ಕೂಡ ಇದರಿಂದ ತಿಳಿಯಬೇಕು.

////////////////////////////////////////////////////////////

• • • • •

## ಶಬ್ದಗಳು ಪರಮಾತ್ಮನಲ್ಲೇ ಸಮನ್ವಯವಾಗುತ್ತವೆ; ಆದರೂ ಲೋಕವ್ಯವಹಾರಕ್ಕೆ ತೊಂದರೆಯಿಲ್ಲ

### तात्पर्यचन्द्रिका

**अत्र च श्रुतो 'एतं' इत्यनेन ''प्राणस्तथा'' इत्यत्र ब्रह्मत्वेन निर्णीतं ''प्राणो ह्येषा य एष तपति'' इति पूर्ववाक्यस्थं प्राणं परामृश्यावयवार्थोक्त्या योगः, 'आचक्षते' इत्यनेन रूढिश्चोक्ता ।**

ಅನುವಾದ - 'ತಂ ಯಚ್ಛತಮ್' ಎಂಬ ಶ್ರುತಿಯಲ್ಲಿ 'ಏತಂ' ಎಂಬ ಏತತ್ ಶಬ್ದದಿಂದ ಹಿಂದೆ ಪ್ರಸಕ್ತವಾದ ಪ್ರಾಣನನ್ನು ಪರಾಮರ್ಶ ಮಾಡಲಾಗಿದೆ. ಪ್ರಾಣನೆಂದರೆ 'ಪ್ರಾಣಸ್ತಥಾನುಗಮಾತ್' ಎಂಬ ಅಧಿಕರಣದಲ್ಲಿ ಸಮರ್ಥನೆ ಮಾಡಿದಂತೆ ಪ್ರಾಣಶಬ್ದವಾಚ್ಯನಾದ ಪರಮಾತ್ಮನೇ ವಿವಕ್ಷಿತನಾಗಿರುತ್ತಾನೆ. ಅಂತಹ ಪ್ರಾಣನಾಮಕನಾದ ಪರಮಾತ್ಮನು 'ಪ್ರಾಣೋ ಹ್ಯೇಷಾ ಯ ಏಷ ತಪತಿ' ಎಂಬ ಪೂರ್ವವಾಕ್ಯದಲ್ಲಿ ಪ್ರತಿಪಾದ್ಯನಾಗಿದ್ದಾನೆ. ಅವನನ್ನೇ ಇಲ್ಲಿರುವ 'ಏತತ್' ಶಬ್ದದಿಂದ ಪರಾಮರ್ಶ ಮಾಡಿ ಅವಯವಾರ್ಥದಿಂದ ಯೋಗವನ್ನು 'ಆಚಕ್ಷತೇ' ಎಂಬ ಪದದಿಂದ ರೂಢಿಯನ್ನು ಶ್ರುತಿ ಹೇಳುತ್ತಿದೆ.

**अवधारणेन च लौकिकरूढिप्राबल्यप्रसक्तमन्येषां मुख्यार्थत्वं निरस्तम् ।**

'ಏತಮೇವ' 'ಪರಮಾತ್ಮನನ್ನೇ' ಎಂದು ಅವಧಾರಣಪುರಸ್ಸರವಾಗಿ ಹೇಳುತ್ತಿರುವುದರಿಂದ ಲೌಕಿಕವಾದ ಪದಾರ್ಥಗಳು ಮುಖ್ಯವಾಗಿ ಪ್ರತಿಪಾದ್ಯವಾಗುವುದಿಲ್ಲ ಎಂದು ಹೇಳಿದಂತಾಗುತ್ತದೆ.

ಅಂದರೆ ಲೌಕಿಕವಾದ ರೂಢಿಯೇ ಪ್ರಬಲವಾದ್ದರಿಂದ ಪರಮಾತ್ಮನನ್ನು ಬಿಟ್ಟು ಇತರ ಪದಾರ್ಥಗಳೇ ಮುಖ್ಯಾರ್ಥವಾಗಬೇಕಲ್ಲವೇ? ಎಂಬ ಆಶಂಕೆಯನ್ನು ನಿರಾಕರಿಸಿದಂತಾಗುತ್ತದೆ.

**तदुक्तमनुव्याख्याने ''आचक्षते इति ह्यत्र सन्तमित्यवधारणात् । योगस्य रूढेः प्राबल्यं विद्वद्रूढिं च तत्रगाम् । बहुशो दर्शयत्यञ्जस्तात्पर्यात् सनिरुक्तिकम्'' इति ।**

ಇದನ್ನೇ ಅನುವ್ಯಾಖ್ಯಾನದಲ್ಲಿ -

ಆಚಕ್ಷತೇ ಇತಿ ಹ್ಯತ್ರ ಸಂತಮಿತ್ಯವಧಾರಣಾತ್ ।
ಯೋಗಸ್ಯ ರೂಢೇಃ ಪ್ರಾಬಲ್ಯಂ ವಿದ್ವದ್ರೂಢಿಂ ಚ ತತ್ರಗಾಮ್ ।
ಬಹುಶೋ ದರ್ಶಯತ್ಯಂಜಸ್ತಾತ್ಪರ್ಯಾತ್ಸನಿರುಕ್ತಿಕಮ್'

'ಆಚಕ್ಷತೇ' 'ಹೆಸರಿನಿಂದ ಕರೆಯುತ್ತಾರೆ' ಎಂದು ಹೇಳಿದ್ದರಿಂದ ಮತ್ತು 'ಏತಮೇವ ತಥಾ ಸಂತಮ್' ಎಂಬುದಾಗಿ ಅವಧಾರಣಪುರಸ್ಸರವಾಗಿ ಪರಮಾತ್ಮನನ್ನು ಹೇಳುತ್ತಿರುವುದರಿಂದ ಲೌಕಿಕ ರೂಢಿಗಿಂತಲೂ ವಿದ್ವದ್ರೂಢಿಯು ಪರಮಾತ್ಮನ ವಿಷಯದಲ್ಲಿ ಪ್ರಬಲವಾಗಿದೆಯೆಂದು ಶ್ರುತಿ ಹೇಳಿದಂತಾಗುತ್ತದೆ. ಇಂತಹ ವಿದ್ವದ್ರೂಢಿಯು ಯೋಗಸಹಿತವಾಗಿರುವುದರಿಂದ ಲೌಕಿಕರೂಢಿ-ಗಿಂತಲೂ ಪ್ರಬಲವಾಗಿದೆ. ಯೋಗಸಹಿತವಾದ ತಾತ್ಪರ್ಯದಿಂದ ಅನೇಕ ಬಾರಿ ಪರಮಾತ್ಮನನ್ನು ಶ್ರುತಿ ಹೇಳುತ್ತಿರುವುದರಿಂದ ಪರಮಾತ್ಮವಿಷಯಕವಾದ ರೂಢಿಯೂ ಕೂಡ ಪ್ರಬಲವಾಗಿದೆಯೆಂದು ಹೇಳಿದಂತಾಗುತ್ತದೆ.

**न चैवं कर्मानुष्ठानस्य व्युत्पत्तेर्वाऽनुपपत्तिः । यतः –**

**उपजीव्यं प्रसिद्धार्थं शतमित्यादिका श्रुतिः ।**
**न शक्ता बाधितुं तस्मात् युक्ते व्युत्पत्तिकर्मणी ।।**

ಎಲ್ಲಾ ಶಬ್ದಗಳಿಂದಲೂ ಪರಮಾತ್ಮನೇ ಪ್ರತಿಪಾದ್ಯನಾದರೆ ಕರ್ಮಾನುಷ್ಠಾನವೇ ಲೋಪವಾಗುವ ಪ್ರಸಂಗ ಬರುತ್ತದಲ್ಲವೇ? ಮತ್ತು ಶಬ್ದಗಳಿಗೆ ವ್ಯುತ್ಪತ್ತಿಯನ್ನು ಸಮರ್ಥಿಸುವುದೂ ಕೂಡ ಕಷ್ಟವಾಗುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ

ಉಪಜೀವ್ಯಂ ಪ್ರಸಿದ್ಧಾರ್ಥಂ ಶತಮಿತ್ಯಾದಿಕಾ ಶ್ರುತಿಃ ।
ನ ಶಕ್ತಾ ಬಾಧಿತುಂ ತಸ್ಮಾತ್ ಯುಕ್ತೇ ವ್ಯುತ್ಪತ್ತಿಕರ್ಮಣೀ ॥

'ತಂ ಯಚ್ಛತಂ' ಇತ್ಯಾದಿ ಶ್ರುತಿಯು ಉಪಜೀವಿಯಾದ ಲೋಕಪ್ರಸಿದ್ಧಾರ್ಥವನ್ನು ಬಾಧಿಸಲು ಸಮರ್ಥವಾಗುವುದಿಲ್ಲ. ಆದ್ದರಿಂದ ವ್ಯುತ್ಪತ್ತಿಲೋಪದ ಪ್ರಸಂಗವಾಗಲೀ, ಕರ್ಮಲೋಪದ ಪ್ರಸಂಗವಾಗಲೀ, ಸರ್ವಥಾ ಇರುವುದಿಲ್ಲ.

ಪರಿಪೂರ್ಣಚಂದ್ರಿಕಾ

**नहि ज्योतिरादिशब्दानां तदवयवानां च प्रसिद्धोऽर्थो विनैव बाधकं त्यक्तुं युक्तः ।**

'ಜ್ಯೋತಿಃ' ಮೊದಲಾದ ಶಬ್ದಗಳು ಮತ್ತು ಆ ಶಬ್ದಗಳ 'ಜೀ' 'ಓತಿ' ಮೊದಲಾದ ಅವಯವಗಳು ಯಾವ ಪ್ರಸಿದ್ಧವಾದ ಅರ್ಥವನ್ನು ಹೇಳುತ್ತವೋ, ಅಂತಹ ಪ್ರಸಿದ್ಧಾರ್ಥವನ್ನು ಬಾಧಕವಿಲ್ಲದೇ ಬಿಡಲಾಗದು.

**नच ''तं यच्छतं वर्षाणि'' इत्यादिश्रुतिरेव बाधिका । अनया ब्रह्मणि शतर्च्यादिशब्दव्युत्पादनाय तदवयवानां लोकप्रसिद्धार्थमुपजीवन्त्या न्यायसाम्या-ज्ज्योतिरादिशब्देष्वपि तस्याभ्यनुज्ञातत्वात् ।**

'ತಂ ಯಚ್ಛತಂ ವರ್ಷಾಣಿ' ಎಂಬ ಶ್ರುತಿಯೇ ಲೋಕಪ್ರಸಿದ್ಧಾರ್ಥವನ್ನು ಬಿಡಲು ಬಾಧಕ-ವಾಗಿದೆಯೆಂದು ಶಂಕಿಸಬಾರದು. ಏಕೆಂದರೆ ಬ್ರಹ್ಮನಲ್ಲಿ 'ಶತರ್ಚಿ' ಮೊದಲಾದ ಶಬ್ದಗಳನ್ನು ವ್ಯುತ್ಪಾದನೆ ಮಾಡುವುದಕ್ಕಾಗಿ ಈ ಶಬ್ದಗಳ ಅವಯವಗಳಿಗೆ ಲೋಕಪ್ರಸಿದ್ಧಾರ್ಥವನ್ನೇ ಈ ಶ್ರುತಿಯು ಆಶ್ರಯಿಸಿದೆ. ಆದ್ದರಿಂದ ಈ ಶ್ರುತಿಯು ಪರಮಾತ್ಮಪರವಾಗಬೇಕಾದರೆ ಲೋಕಪ್ರಸಿದ್ಧಾರ್ಥವು ಉಪಜೀವ್ಯವಾಗಿದೆ. ಇದೇ ನ್ಯಾಯದಂತೆ ಜ್ಯೋತಿರಾದಿಶಬ್ದಗಳಲ್ಲಿಯೂ ಲೋಪ್ರಸಿದ್ಧವಾದ ಅರ್ಥವೇ ಉಪಜೀವ್ಯವಾಗಿದೆಯೆಂದು ತಿಳಿಯಬೇಕು. ಉಪಜೀವ್ಯವಾದ ಅರ್ಥವನ್ನು ಕಾರಣವಿಲ್ಲದೇ ಬಾಧಿಸುವುದು ತಪ್ಪಾಗುತ್ತದೆ.

**एवं च यथा 'डु पचष् पाके' 'डु कृञ् करणे' इत्यादौ पाकादिशब्दानां पच्यादिधातुजत्वेऽपि तेषां लोकप्रसिद्धार्थमादाय धातूनामर्थनिरूपणम् । अन्यथा ह्यन्योन्याश्रयः स्यात् ।**

ಉದಾಹರಣೆ - ವ್ಯಾಕರಣ ಶಾಸ್ತ್ರದಲ್ಲಿ 'ಪಚ್' ಧಾತುವಿಗೆ 'ಡು ಪಚಷ್ ಪಾಕೇ' ಎಂಬುದಾಗಿ 'ಪಾಕ' ಎಂಬರ್ಥವನ್ನು ಹೇಳಲಾಗುತ್ತದೆ. 'ಪಚ್' ಧಾತುವಿನ ಅರ್ಥವನ್ನು ತಿಳಿಯಲು 'ಪಾಕ' ಎಂಬ ಪದವನ್ನು ಪ್ರಯೋಗಿಸುವುದು ತಪ್ಪಲ್ಲವೇ? ಏಕೆಂದರೆ ಪಾಕ ಮೊದಲಾದ ಶಬ್ದಗಳೂ ಕೂಡ ಪಚ ಧಾತುವಿನಿಂದ ಜನ್ಯವೇ ಆಗಿದೆ. ಆದ್ದರಿಂದ 'ಪಚ್' ಧಾತ್ವರ್ಥವನ್ನು ತಿಳಿದರೆ ಪಾಕವನ್ನು ತಿಳಿದಂತಾಗುತ್ತದೆ. ಪಾಕವನ್ನು ತಿಳಿದರೆ ಮಾತ್ರ 'ಪಚ್' ಧಾತ್ವರ್ಥ ತಿಳಿದಂತಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುತ್ತದಲ್ಲವೇ? ಇದರಂತೆ 'ಡು ಕೃಞ್ ಕರಣೇ' ಎಂಬುದಾಗಿ 'ಕೃಞ್' ಧಾತುವಿಗೆ 'ಕರಣ' ಎಂಬರ್ಥವನ್ನು ಹೇಳುತ್ತಾರೆ. ಈ ಕರಣ ಎಂಬ ಧಾತ್ವರ್ಥವೂ ಕೂಡ ಕೃಜ್ ಧಾತುವಿನಿಂದಲೇ ನಿಷ್ಪನ್ನವಾಗಿದೆ. ಇಲ್ಲಿಯೂ ಕೂಡ ಅನ್ಯೋನ್ಯಾಶ್ರಯದೋಷವು ಬರುತ್ತದಲ್ಲವೇ?

ಈ ಆಶಂಕೆಗಳಿಗೆ ವ್ಯಾಕರಣಶಾಸ್ತ್ರದಲ್ಲಿ ಹೀಗೆ ಉತ್ತರಿಸಿದ್ದಾರೆ - 'ಡು ಪಚಷ್ ಪಾಕೇ' 'ಡು ಕೃಞ್ ಕರಣೇ' ಇತ್ಯಾದಿ ಸ್ಥಳದಲ್ಲಿ 'ಪಾಕ' ಮತ್ತು 'ಕರಣ' ಎಂಬ ಪದಗಳಿಗೆ ಲೋಕಪ್ರಸಿದ್ಧವಾದ ಅರ್ಥವನ್ನಷ್ಟೇ ವಿವಕ್ಷಿಸಿ, 'ಪಚ್' ಮತ್ತು 'ಕೃಞ್' ಧಾತುವಿನ ಅರ್ಥವನ್ನು ತಿಳಿಯಬೇಕು. 'ಪಾಕ' ಎಂಬ ಪದವಾಗಲೀ, 'ಕರಣ' ಎಂಬ ಪದವಾಗಲೀ ಧಾತುವಿನಿಂದ ನಿಷ್ಪನ್ನವಾಗಿದೆಯೆಂಬುದನ್ನು ವಿವಕ್ಷಿಸದೇ ಕೇವಲ ಲೋಕಪ್ರಸಿದ್ಧವಾದ ಪಾಕ ಮತ್ತು ಕರಣಗಳನ್ನಷ್ಟೇ ಹೇಳುತ್ತಿದೆಯೆಂದು ವಿವಕ್ಷಿಸಬೇಕು. ಆವಾಗ ಅನ್ಯೋನ್ಯಾಶ್ರಯದೋಷಕ್ಕೆ ಅವಕಾಶವಿರುವುದಿಲ್ಲ.

**तथेहाप्यवयवानां विष्णुपरत्वेऽपि लोकप्रसिद्धार्थमादाय व्युत्पादनम् । एवमवयवव्युत्पादनं तदवयवानां लोकप्रसिद्धार्थमादायेति द्रष्टव्यम् ।**

ವ್ಯಾಕರಣದ ಈ ದೃಷ್ಟಾಂತದಂತೆ ಪ್ರಕೃತದಲ್ಲಿಯೂ 'ಶತರ್ಚಿ' ಮೊದಲಾದ ಶಬ್ದಗಳು ವಿಷ್ಣುಪರವಾದರೂ ಅದರ ಅವಯವಗಳು ಲೋಕಪ್ರಸಿದ್ಧಾರ್ಥವನ್ನೇ ಪ್ರತಿಪಾದನೆ ಮಾಡುತ್ತವೆ. ಅಂತಹ ಲೋಕಪ್ರಸಿದ್ಧಾರ್ಥವನ್ನು ವಿವಕ್ಷಿಸಿಯೇ ಶಬ್ದಗಳ ವ್ಯುತ್ಪತ್ತಿಯನ್ನು ಪರಮಾತ್ಮನಲ್ಲಿ ತಿಳಿಯಬೇಕು. ಅದರಂತೆ 'ಶತ' ಎಂಬ ಪದದ ಸಮನ್ವಯವನ್ನು ಪರಮಾತ್ಮನಲ್ಲಿ ತಿಳಿಯಬೇಕಾದರೆ ಆ ಪದದ ಅವಯವಕ್ಕೆ ಲೋಕಪ್ರಸಿದ್ಧಾರ್ಥವನ್ನು ವಿವಕ್ಷಿಸಿ ಸಮನ್ವಯವನ್ನು ತಿಳಿಯಬೇಕು. ಹೀಗೆ ವಾಕ್ಯದ ಅಥವಾ ಪದದ ಸಮನ್ವಯವನ್ನು ಮಾಡಿದಾಗ ಅದರ ಅವಯವವು ಲೋಕಪ್ರಸಿದ್ಧಾರ್ಥವನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಸಕಲಶಬ್ದಗಳ ಸಮನ್ವಯವನ್ನು ತಿಳಿಯಬೇಕು.

**नचैवं लोके लक्षणैव स्यादिति शङ्क्यम् । अभिधानव्याकरणादिभिः प्रमितस्य लोके मुख्यत्वस्य विनैव बाधकं त्यागायोगात् ।**

ಲೌಕಿಕಾರ್ಥದಲ್ಲಿ ಶಬ್ದಗಳಿಗೆ ಮುಖ್ಯಾರ್ಥವನ್ನೇಕೆ ಒಪ್ಪಬೇಕು. ಲಕ್ಷಣಾವೃತ್ತಿಯಿಂದಲೇ ಲೌಕಿಕಾರ್ಥವನ್ನು ಶಬ್ದಗಳು ಪ್ರತಿಪಾದನೆ ಮಾಡಬಹುದಲ್ಲವೇ? ಎಂದು ಆಶಂಕಿಸಬಾರದು. ಕೋಶ, ವ್ಯಾಕರಣ ಮೊದಲಾದವುಗಳಿಂದ ಲೌಕಿಕಾರ್ಥದಲ್ಲಿಯೂ ಶಬ್ದಗಳಿಗೆ ಮುಖ್ಯಾರ್ಥವಿರುವುದು ಪ್ರಮಾಣಸಿದ್ಧವಾಗಿದೆ. ಬಾಧಕವಿಲ್ಲದೇ ಮುಖ್ಯಾರ್ಥವನ್ನು ಬಿಡುವುದು ಸಮಂಜಸವಾಗುವುದಿಲ್ಲ.

**न चैतमेवेत्यवधारणं बाधकम् । तस्य प्रमितमुख्यत्वाबाधेनैव ब्रह्मण्येव परममुख्यत्वमन्यत्र नेत्येवंपरत्वात् ।**

'ಏತಮೇವ' ಎಂಬಲ್ಲಿರುವ ಅವಧಾರಣವೇ ಲೌಕಿಕಾರ್ಥದಲ್ಲಿ ಮುಖ್ಯತ್ವವಿದೆಯೆನ್ನಲು ಬಾಧಕವಾಗಿದೆಯೆಂದು ಶಂಕಿಸಬಾರದು. ಈ ಅವಧಾರಣವು ಪ್ರಮಾಣಸಿದ್ಧವಾದ ಮುಖ್ಯಾರ್ಥವನ್ನು ಬಾಧಿಸದೆಯೇ ಬ್ರಹ್ಮನಲ್ಲಿ ಪರಮಮುಖ್ಯತ್ವವಿರುತ್ತದೆ ಬೇರೆಡೆಯಿರುವುದಿಲ್ಲ ಎಂಬುದರಲ್ಲೇ

ತಾತ್ಪರ್ಯವನ್ನು ಹೊಂದಿದೆ. ಯಾವುದೇ ಶಬ್ದಗಳಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದವನು ಪರಮಾತ್ಮನೊಬ್ಬನೇ ಹೊರತು, ಬೇರೆ ಪದಾರ್ಥಗಳಲ್ಲ ಎಂಬುದನ್ನಷ್ಟೇ ಏವಕಾರವು ಹೇಳುತ್ತಿದೆ ಎಂದಭಿಪ್ರಾಯ.

**ब्रह्मणि परममुख्यत्वं च प्रवृत्तिनिमित्तस्य निरवधिकत्वानन्याधीनत्वाभ्यां युक्तम् । युक्तं च मुख्यवृत्तावेव योगरूढ्योरिव तारतम्यम् ।**

ಸಕಲ ಶಬ್ದಗಳೂ ಬ್ರಹ್ಮನಲ್ಲಿ ಪರಮಮುಖ್ಯವೃತ್ತಿಯಿಂದ ಇರುತ್ತವೆಂದರೆ ಆಯಾ ಶಬ್ದಗಳ ಪ್ರವೃತ್ತಿನಿಮಿತ್ತಗಳು ನಿರವಧಿಕವಾಗಿರುತ್ತವೆ ಮತ್ತು ಸ್ವತಂತ್ರವಾಗಿರುತ್ತವೆ ಎಂದು ತಿಳಿಯಬೇಕು. ಇಂತಹ ನಿರವಧಿಕತ್ವವಾಗಲೀ, ಸ್ವಾತಂತ್ರ್ಯವಾಗಲೀ ಬೇರೆ ಪದಾರ್ಥಗಳಲ್ಲಿ ಸರ್ವಥಾ ಯುಕ್ತವಾಗುವುದಿಲ್ಲ. ಮುಖ್ಯವೃತ್ತಿಗಿಂತಲೂ ಕೂಡ ಪರಮಮುಖ್ಯವೃತ್ತಿಯು ಶ್ರೇಷ್ಠವಾಗಿದೆಯೆಂಬ ತಾರತಮ್ಯ ತಪ್ಪಲ್ಲ. ಏಕೆಂದರೆ ಯೋಗಕ್ಕಿಂತಲೂ ರೂಢಿಯು ಪ್ರಬಲ, ರೂಢಿಗಿಂತಲೂ ಯೋಗವು ಪ್ರಬಲವೆಂಬ ತಾರತಮ್ಯವನ್ನು ಮುಖ್ಯವೃತ್ತಿಯಲ್ಲೇ ಹೇಗೆ ಹೇಳುತ್ತೇವೋ, ಅದರಂತೆ ಮುಖ್ಯವೃತ್ತಿಗಿಂತಲೂ ಪರಮಮುಖ್ಯವೃತ್ತಿಯೂ ಕೂಡ ಶ್ರೇಷ್ಠವೆಂದು ಹೇಳುವ ತಾರತಮ್ಯ ತಪ್ಪಾಗುವುದಿಲ್ಲ.

**प्रकाशः –**

**ननु विष्णौ योगात् कर्मणि रूढेर्बलवत्त्वाद्यौगिकस्य हरेः कथं मुख्यार्थत्वमिति चोद्यं सूत्रोपात्तश्रुतेरभिप्रायव्यक्तीकारेण परिहरति – अत्र चेति ।।**

ವಿವರಣೆ - ಎಲ್ಲಾ ಶಬ್ದಗಳಿಗೂ ವಿಷ್ಣುವಿನಲ್ಲಿ ಯೋಗವೃತ್ತಿಯನ್ನು ಹೇಳುತ್ತಿದ್ದೀರಿ. ಆದರೆ ಯೋಗಕ್ಕಿಂತಲೂ ರೂಢಿಯು ಪ್ರಬಲವಾದ್ದರಿಂದ ಕರ್ಮ ಎಂಬರ್ಥದಲ್ಲಿ ಶಬ್ದಗಳು ಬಲಿಷ್ಠವಾಗುತ್ತವೆ. ಹೀಗಿರುವಾಗ ಶ್ರೀಹರಿಯಲ್ಲಿ ಯೌಗಿಕವಾದ ಶಬ್ದಗಳಿಗೆ ಮುಖ್ಯಾರ್ಥತ್ವವನ್ನು ಸಮರ್ಥಿಸುವುದು ಹೇಗೆ ಯುಕ್ತವಾಗುತ್ತದೆ ? ಎಂಬ ಆಶಂಕೆಗೆ ಸೂತ್ರದಲ್ಲಿ ಉದಾಹರಿಸಿದ ಶ್ರುತಿಯ ಅಭಿಪ್ರಾಯವನ್ನು ಸ್ಪಷ್ಟಪಡಿಸುತ್ತಾ ಉತ್ತರಿಸುತ್ತಿದ್ದಾರೆ 'ಅತ್ರ ಚ' ಇತ್ಯಾದಿ ಗ್ರಂಥದಿಂದ.

**प्रकाशः – एतेन ''नच शब्दानामन्यत्र रूढत्वेन योगाङ्गीकारायोगः'' इत्यादिटीका विवृता ।।**

ಹೀಗೆ ಹೇಳಿದ್ದರಿಂದ 'ನಚ ಶಬ್ದಾನಾಮನ್ಯತ್ರ ರೂಢತ್ವೇನ ಯೋಗಾಂಗೀಕಾರಾಯೋಗಃ' 'ಶಬ್ದಗಳು ಅನ್ಯತ್ರರೂಢವಾದ್ದರಿಂದ ವಿಷ್ಣುವಿನಲ್ಲಿ ಯೌಗಿಕಾರ್ಥವನ್ನು ಹೇಳುವುದು ತಪ್ಪಾಗುತ್ತದೆ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನ ಮಾಡಿದಂತಾಯಿತು.

**प्रकाशः – रूढिरिति ।। ''प्रयोगमात्रबाहुल्यं रूढिरित्यभिधीयते'' इत्यनुव्याख्यानोक्तेरिति भावः । अवधारणेन एतमेवेत्येवकारेण ।।**

'ಪ್ರಯೋಗಮಾತ್ರಬಾಹುಲ್ಯಂ ರೂಢಿರಿತ್ಯಭಿಧೀಯತೇ' ಎಂಬ ಅನುವ್ಯಾಖ್ಯಾನದಲ್ಲಿ ಪ್ರಯೋಗಮಾತ್ರ ಬಾಹುಲ್ಯವನ್ನೇ ರೂಢಿಯೆಂದು ಹೇಳಿದ್ದಾರೆ. ಆದ್ದರಿಂದ 'ಆಚಕ್ಷತೇ' ಎಂಬ ಪದದಿಂದ ಶ್ರುತಿಯು ವಿಷ್ಣುವಿನಲ್ಲಿ ಶತರ್ಚ್ಯಾದಿಶಬ್ದಗಳಿಗೆ ರೂಢಿಯನ್ನು ಹೇಳುತ್ತಿದೆ. 'ಅವಧಾರಣೇನ' ಎಂದರೆ 'ಏತಮೇವ' ಎಂಬಲ್ಲಿರುವ ಏವಕಾರದಿಂದ ಎಂದರ್ಥ.

**प्रकाशः – मुख्यार्थत्वमिति ।। सर्वथा तत्तच्छब्दार्थत्वनिषेधस्य वक्ष्यमाणदिशाऽयोगादिति भावः ।**

'ಮುಖ್ಯಾರ್ಥತ್ವಮ್' ಎಂಬುದರ ಅಭಿಪ್ರಾಯ ಹೀಗಿದೆ - ಶಬ್ದಗಳು, ಲೌಕಿಕ ಪದಾರ್ಥಗಳ ಪ್ರತಿಪಾದನೆಯನ್ನೇ ಮಾಡುವುದಿಲ್ಲವೆಂದು ಅಭಿಪ್ರಾಯವಲ್ಲ. ಏಕೆಂದರೆ ಲೌಕಿಕಪದಾರ್ಥಗಳೂ ಕೂಡ ಆಯಾ ಶಬ್ದಗಳಿಂದ ಪ್ರತಿಪಾದ್ಯವಾಗಿವೆಂಬುದು ಅಭಿಧಾನಾದಿಗಳಿಂದ ಸಿದ್ಧವಾಗಿದೆ. ಆದ್ದರಿಂದ ಪರಮಾತ್ಮನು ಎಷ್ಟು ಮುಖ್ಯವಾಗಿ ಪ್ರತಿಪಾದ್ಯನೋ, ಅಷ್ಟು ಮುಖ್ಯವಾಗಿ ಉಳಿದ ಪದಾರ್ಥಗಳು ಪ್ರತಿಪಾದ್ಯಗಳಲ್ಲ ಎಂದು ತಿಳಿಯಬೇಕು.

**प्रकाशः – टीकोक्तेर्मूलमाह – तदुक्तमिति ।। ''एतमेव तथा सन्तं शतर्चीत्यादिनामभिः।'' 'आचक्षते' इति पूर्वशेषः ।।**

ಇದುವರೆಗೂ ಟೀಕೆಯಲ್ಲಿ ಹೇಳಿದ ಅಭಿಪ್ರಾಯವೆಲ್ಲವನ್ನು ಮೂಲಾರೂಢ ಮಾಡುತ್ತಿದ್ದಾರೆ 'ತದುಕ್ತಮ್' ಎಂಬುದರಿಂದ. 'ಏತಮೇವ ತಥಾ ಸಂತಂ ಶತರ್ಚೀತ್ಯಾದಿನಾಮಭಿಃ' ಎಂಬ ಅನುವ್ಯಾಖ್ಯಾನದ ಹಿಂದಿನ ಮಾತನ್ನು ಶೇಷಪೂರಣ ಮಾಡಿಕೊಳ್ಳಬೇಕು. 'ಆಚಕ್ಷತೇ' ಎಂಬುದಕ್ಕೆ ಹಿಂದಿನ ವಾಕ್ಯದಲ್ಲಿಯೂ ಕೂಡ ಅನ್ವಯ ತಿಳಿಯಬೇಕು. ಅಂದರೆ ಶ್ರುತಿಯು 'ಏತಮೇವ ತಥಾ ಸಂತಮ್' ಇತ್ಯಾದಿಯಾಗಿ ಪರಮಾತ್ಮನೊಬ್ಬನನ್ನೇ ಶತರ್ಚಿಯೆಂದು ಪ್ರತಿಪಾದನೆ ಮಾಡುತ್ತಿದೆ.

**प्रकाशः – आचक्षत इति ।। 'आचक्षते' इत्यादिका श्रुतिस्सनिरुक्तिकं योगवृत्तिसाहित्येन । तत्रगां परमेश्वरविषयाम् । शतर्च्यादिशब्दोपलक्षितसर्वशब्दानां विद्वद्रूढिं दर्शयति ।**

'ಆಚಕ್ಷತೇ' ಎಂಬ ಪದದಿಂದ 'ಆಚಕ್ಷತೇ' ಇತ್ಯಾದಿ ಶ್ರುತಿಯನ್ನು ವಿವಕ್ಷಿಸಿದ್ದಾರೆ. 'ಸನಿರುಕ್ತಿಕಂ' ಎಂದರೆ ಯೋಗವೃತ್ತಿ ಸಹಿತವಾಗಿ ಎಂದರ್ಥ. 'ತತ್ರಗಾಂ' ಎಂದರೆ ಪರಮೇಶ್ವರ ವಿಷಯಕವಾಗಿ ಎಂದರ್ಥ. 'ಶತರ್ಚಿ' ಎಂಬ ಶಬ್ದದಿಂದ ಉಪಲಕ್ಷಣಯಾ ಸಕಲಶಬ್ದಗಳ ವಿದ್ವದ್ರೂಢಿಯನ್ನು ಈ ಶ್ರುತಿಯು ಪ್ರತಿಪಾದನೆ ಮಾಡುತ್ತದೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – ''यच्चात्र बहुशः बहुवारं दर्शयति तेन ज्ञायते अञ्जः तात्पर्यादेव । नतु प्रासङ्गिकत्वेनेति । किं चात्र सन्तमिति वचनादेतमेवेत्यवधारणाच्च लौकिकरूढितो भगवद्विषयस्य योगस्य प्राबल्यं च दर्शयति'' इत्यर्थः सुधोक्तः ।

''ಯಚ್ಚಾತ್ರ ಬಹುಶಃ ಬಹುವಾರಂ ದರ್ಶಯತಿ ತೇನ ಜ್ಞಾಯತೇ ಅಂಜಃ ತಾತ್ಪರ್ಯಾದೇವ । ನತು ಪ್ರಾಸಂಗೀಕತ್ವೇನೇತಿ । ಕಿಂ ಚಾತ್ರ ಸಂತಮಿತಿ ವಚನಾದೇತಮೇವೇತ್ಯವಧಾರಣಾಚ್ಚ ಲೌಕಿಕರೂಢಿತೋ ಭಗವದ್ವಿಷಯಸ್ಯ ಯೋಗಸ್ಯ ಪ್ರಾಬಲ್ಯಂ ಚ ದರ್ಶಯತಿ' ಈ ಶ್ರುತಿಯಲ್ಲಿ ಅನೇಕ ಬಾರಿ ಯೋಗ ಹಾಗೂ ರೂಢಿಗಳನ್ನು ತೋರಿಸಲಾಗಿದೆ. ಇದರಿಂದ ಪರಮಾತ್ಮನಲ್ಲಿ 'ಶತರ್ಚ' ಮೊದಲಾದ ಶಬ್ದಗಳಿಗೆ ಮುಖ್ಯವಾದ ತಾತ್ಪರ್ಯವಿದೆಯೆಂದು ಹೇಳಿದಂತಾಗುತ್ತದೆ ಹೊರತು, ಪ್ರಾಸಂಗಿಕವಾದ ತಾತ್ಪರ್ಯವಿದೆಯೆಂದು ಹೇಳಿದಂತಾಗುವುದಿಲ್ಲ. ಮತ್ತು 'ಸಂತಂ' 'ಇರುವವನು' ಎಂದು ಹೇಳಿದ್ದರಿಂದ ಹಾಗೂ 'ಏತಮೇವ' 'ಪರಮಾತ್ಮನನ್ನೇ' ಎಂದು ಅವಧಾರಣಪುರಸ್ಸರವಾಗಿ ಹೇಳುತ್ತಿರುವುದರಿಂದಲೂ ಲೌಕಿಕರೂಢಿಗಿಂತಲೂ ಈ ಯೋಗವು ಪ್ರಬಲವೆಂದು ಹೇಳಿದಂತಾಗುತ್ತದೆ. ಏಕೆಂದರೆ ರೂಢ್ಯರ್ಥನಾಗಿರುವ ಪರಮಾತ್ಮನೇ ಯೋಗಾರ್ಥನೂ ಆಗಿದ್ದಾನೆ. ಯೋಗ ಹಾಗೂ ರೂಢಿಗಳೆರಡೂ ಪರಮಾತ್ಮನಲ್ಲಿರುವುದರಿಂದ ಪರಮಾತ್ಮನೊಬ್ಬನೇ ಮುಖ್ಯತಾತ್ಪರ್ಯನೆಂದು ಸ್ಪಷ್ಟವಾಗುತ್ತದೆ. ಹೀಗೆ ಸುಧೆಯಲ್ಲಿ ಹೇಳಿದ್ದಾರೆ. ಅದರ ಅರ್ಥವನ್ನೇ ಪ್ರಕೃತ ಗ್ರಂಥಕಾರರು ಹೇಳಿದ್ದಾರೆಂದು ತಿಳಿಯಬೇಕು.

**प्रकाशः** – एवं स्वपक्षसाधकाद्यसूत्रभाष्यटीकातात्पर्यं विवृत्येदानीं ''कल्पनोपदेशाच्च मध्वादिवदविरोधः'' इति सूत्रभाष्यटीकातात्पर्यं –

तेषु तेषु पदार्थेषु रूढिरङ्गीकृता यतः ।
प्रयोजनबहुत्वेन तस्य तस्याविरोधतः ।
उपदेशादिसामर्थ्यात् विष्णौ शक्तिश्च गृह्यते ।।

इत्यनुव्याख्यानसुधयोरुक्तरीत्या विवृण्वन् पूर्ववाद्युक्तं बाधकं निराह – न चैवमिति ।।

ಇಲ್ಲಿಯ ತನಕ ಸ್ವಪಕ್ಷಸಾಧಕವಾದ ಪ್ರಥಮಸೂತ್ರದ ಭಾಷ್ಯ, ಟೀಕೆ ಇವುಗಳ ತಾತ್ಪರ್ಯವನ್ನು ವಿವರಿಸಿದ್ದಾಯಿತು. ಪ್ರಕೃತ 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಸೂತ್ರಭಾಷ್ಯದ ಟೀಕಾ ತಾತ್ಪರ್ಯವನ್ನು ವಿವರಿಸಲು ಹೊರಟಿದ್ದಾರೆ. 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಸೂತ್ರದ ಅನುವ್ಯಾಖ್ಯಾನ ಶ್ಲೋಕ ಹೀಗಿದೆ -

ತೇಷು ತೇಷು ಪದಾರ್ಥೇಷು ರೂಢಿರಂಗೀಕೃತಾ ಯತಃ।
ಪ್ರಯೋಜನಬಹುತ್ವೇನ ತಸ್ಯ ತಸ್ಯಾವಿರೋಧತಃ।
ಉಪದೇಶಾದಿಸಾಮರ್ಥ್ಯಾದ್ವಿಷ್ಣೌ ಶಕ್ತಿಶ್ಚ ಗೃಹ್ಯತೇ ॥
ಜ್ಯೋತಿರುಪಕ್ರಮಾಧಿಕರಣ (1-4-2)

ಅನೇಕ ಪ್ರಯೋಜನಗಳಿರುವುದರಿಂದ ಆಯಾ ಪದಾರ್ಥಗಳಲ್ಲಿ ಶಬ್ದಗಳಿಗೆ ರೂಢಿಯನ್ನು ಅಂಗೀಕರಿಸಿದ್ದೇವೆ. ಆ ಲೌಕಿಕಾರ್ಥಗಳನ್ನು ಬಿಡದೇ ಉಪದೇಶಾದಿಗಳ ಬಲದಿಂದ, ಸರ್ವಶಬ್ದಗಳಿಗೆ ಪರಮಾತ್ಮನಲ್ಲಿ ಶಕ್ತಿಯನ್ನೂ ಕೂಡ ಅಂಗೀಕರಿಸಿದ್ದೇವೆ.

ಈ ಅನುವ್ಯಾಖ್ಯಾನದಲ್ಲಿ ಹೇಳಿದ ವಿಚಾರವನ್ನು ಮತ್ತು ಇದರ ವ್ಯಾಖ್ಯಾನ ಸುಧೆಯಲ್ಲಿ ಹೇಳಿದ ವಿಚಾರವನ್ನು ಪ್ರಕೃತ ಗ್ರಂಥಕಾರರು ವಿವರಿಸುತ್ತಾ ಪೂರ್ವಪಕ್ಷಿ ಹೇಳಿದ ಬಾಧಕವನ್ನು ನಿರಾಕರಿಸುತ್ತಿದ್ದಾರೆ 'ನ ಚೈವಮ್' ಇತ್ಯಾದಿ ಗ್ರಂಥದಿಂದ.

**प्रकाशः** – यत इत्यस्य यतो बाधितुं न शक्ता तस्मादिति श्लोकेनान्वयः । ननु प्रसिद्धार्थसत्त्वे तस्योपजीव्यत्वादिचिन्ता; तदेव कुतो ब्रह्मपक्ष इत्यतस्तत्सत्त्व-समर्थनपूर्वकं श्लोके त्रिपादीं विवृणोति – **न हीति** ।।

'ಯತಃ' ಎಂಬುದಕ್ಕೆ 'ಯತೋ ಬಾಧಿತುಂ ನ ಶಕ್ತಾ ತಸ್ಮಾತ್' ಎಂಬುದಾಗಿ ಶ್ಲೋಕದಲ್ಲಿ ಅನ್ವಯವನ್ನು ತಿಳಿಯಬೇಕು.

ಒಂದುವೇಳೆ ಪ್ರಸಿದ್ಧವಾದ ಅರ್ಥವಿದ್ದಲ್ಲಿ, ಅಂತಹ ಲೋಕಪ್ರಸಿದ್ಧಾರ್ಥವನ್ನು ಉಪಜೀವಿಸಿಕೊಂಡು ಶಬ್ದಗಳ ಅರ್ಥವನ್ನು ವಿವೇಚನೆ ಮಾಡಬಹುದಿತ್ತು. ಆದರೆ ಪ್ರಸಿದ್ಧಾರ್ಥವಿರಲು ಏನು ಆಧಾರ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಹಾಗೂ ಶ್ಲೋಕದ ಮೂರು ಪಾದಗಳಿಗೆ ತಾವೇ ವ್ಯಾಖ್ಯಾನ ಮಾಡುತ್ತಿದ್ದಾರೆ 'ನಹಿ' ಇತ್ಯಾದಿ ಗ್ರಂಥದಿಂದ.

**प्रकाशः** – बाधकं च तमिति वचनमेव स्यात्, नान्यत्, अनुपलम्भात् । तच्चोपजीवकतया दुर्बलं न बाधकमित्याह – **नचेति** ।।

ಬಾಧಕ ಹೇಳುವುದಿದ್ದರೆ 'ತಂ ಯಚ್ಛ್ರುತಂ' ಎಂಬ ಶ್ರುತಿಯನ್ನೇ ಹೇಳಬೇಕು. ಬೇರೆ ಪ್ರಮಾಣವಿರುವುದಿಲ್ಲ. ಅಂತಹ ಪ್ರಮಾಣಗಳು ಪ್ರತ್ಯಕ್ಷದಿಂದ ಸಿದ್ಧವಾಗಿಲ್ಲ. ಆದರೆ ಅಂತಹ 'ತಂ ಯಚ್ಛ್ರುತಂ' ಎಂಬ ಪ್ರಮಾಣವು ಉಪಜೀವಕವಾದ್ದರಿಂದ ದುರ್ಬಲವಾಗಿದೆ. ಆದ್ದರಿಂದ ಇದು ಬಾಧಕವಾಗುವುದಿಲ್ಲವೆಂದು 'ನಚ' ಎಂಬ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः** – नन्वस्तु शतर्च्यादिशब्दे । ज्योतिरादिशब्दे तु कथमित्यत आह – **न्यायेति** ।। 'जि' 'ओति' इत्याद्यवयवानां प्रसिद्धार्थमुपजीव्यैव ज्योतिः शब्दव्युत्पादनस्यानुमतत्वान्नोपजीव्यार्थबाध इत्यर्थः ।

'ಶತರ್ಚಿ' ಮೊದಲಾದ ಶಬ್ದಗಳ ಅವಯವಗಳಿಗೆ ಲೋಕಪ್ರಸಿದ್ಧಾರ್ಥವನ್ನು ಆಶ್ರಯಿಸಬೇಕು. ಆದರೆ ಜ್ಯೋತಿರಾದಿ ಶಬ್ದಗಳಲ್ಲಿ ಹೇಗೆ ? ಎಂಬ ಪ್ರಶ್ನೆಗೆ 'ನ್ಯಾಯಸಾಮ್ಯಾತ್' ಎಂದು ಉತ್ತರಿಸಿದ್ದಾರೆ. ಅಲ್ಲಿಯೂ ಕೂಡ 'ಜ್ಯೋತಿಃ' ಎಂಬ ಶಬ್ದವನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಬೇಕಾದರೆ 'ಜಿ' 'ಓತಿ' ಮೊದಲಾದ ಅವಯವಗಳಿಗೂ ಲೋಕಪ್ರಸಿದ್ಧಾರ್ಥವನ್ನೇ ಆಶ್ರಯಿಸಬೇಕು. ಆದ್ದರಿಂದ ಇಲ್ಲಿಯೂ ಕೂಡ

ಅವಯವಾರ್ಥವು ಉಪಜೀವ್ಯವೇ ಆಗುತ್ತದೆ. ಹೀಗೆ 'ಜ್ಯೋತಿ' ಶಬ್ದದ ವ್ಯುತ್ಪತ್ತಿಯಲ್ಲಿಯೂ ಅಭಿಪ್ರಾಯವಿರುವುದರಿಂದ ಉಪಜೀವ್ಯವಾದ ಅರ್ಥವನ್ನು ಬಾಧಿಸಬಾರದು ಎಂಬ ನ್ಯಾಯವು ಸಮಾನವಾಗಿದೆ.

**प्रकाशः** – **एतमेवार्थं दृष्टान्तेन व्यनक्ति** – **एवं चेति** ।। **प्रसिद्धार्थाबाधे सतीत्यर्थः** ।।

ಪ್ರಸಿದ್ಧಾರ್ಥವನ್ನು ಬಾಧಿಸಿ ವ್ಯಾಖ್ಯಾನ ಮಾಡಬಾರದೆನ್ನಲು ದೃಷ್ಟಾಂತವನ್ನು ನೀಡುತ್ತಿದ್ದಾರೆ 'ಏವಂಚ' ಎಂಬ ಗ್ರಂಥದಿಂದ. 'ಏವಂಚ' ಎಂದರೆ ಪ್ರಸಿದ್ಧಾರ್ಥವನ್ನು ಬಾಧಿಸದಿರಲು ಎಂದರ್ಥ.

**प्रकाशः** – **पच्यादीति** ।। पचि धातोर्भावे घञ्प्रत्यये ''अत उपधायाः'' इति वृद्धौ ''चजोः कुघिण्यतोः'' इति कुत्वे पाक इति रूपम् ।

'ಪಚ್' ಧಾತುವಿನಿಂದ 'ಪಾಕ' ಎಂಬ ಶಬ್ದವು ನಿಷ್ಪನ್ನವಾಗಿದೆ. ಭಾವಾರ್ಥದಲ್ಲಿ 'ಪಚ್' ಧಾತುವಿಗೆ 'ಘಞ್'ಪ್ರತ್ಯಯವು ಬಂದು, 'ಘಞ್' ಪ್ರತ್ಯಯದಲ್ಲಿ ಅಕಾರಮಾತ್ರವು ಉಳಿಯುತ್ತದೆ. ಆವಾಗ 'ಅತ ಉಪಧಾಯಾಃ' ಎಂಬ ಸೂತ್ರದಿಂದ ಆದಿವೃದ್ಧಿಯು ಪ್ರಾಪ್ತವಾದರೆ 'ಪಾಚ' ಎಂದಾಗುತ್ತದೆ. ಅನಂತರ 'ಚಜೋಃ ಕುಘಿಣ್ಯತೋಃ' ಎಂಬ ಸೂತ್ರದಿಂದ ಚಕಾರಕ್ಕೆ ಕಕಾರವು ಪ್ರಾಪ್ತವಾದರೆ 'ಪಾಕ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಹೀಗೆ ಯಾವ ಶಬ್ದವು ಧಾತ್ವರ್ಥವನ್ನು ಹೇಳುತ್ತಿದೆಯೋ, ಅದೇ 'ಪಚ್' ಧಾತುವಿನಿಂದ ನಿಷ್ಪನ್ನವಾಗಿದೆ.

**प्रकाशः** – तथा ''ल्युट् च'' इति सूत्रेण कृञो भावे ल्युटि कृते ''युवोरनाकौ'' इत्यनादेशे ''सार्वधातुकार्धधातुकयोः'' इति गुणे रपरत्वे च करणमिति रूपम् । गम्लृ गतावित्यादिरादिपदार्थः ।।

ಇದರಂತೆ 'ಕರಣ' ಎಂಬುದೂ ಕೂಡ 'ಕೃಞ್' ಧಾತುವಿನಿಂದಲೇ ನಿಷ್ಪನ್ನವಾಗಿದೆ. 'ಲ್ಯುಟ್ ಚ' ಎಂಬ ಸೂತ್ರದಿಂದ 'ಕೃಞ್'ಧಾತುವಿಗೆ ಭಾವಾರ್ಥದಲ್ಲಿ 'ಲ್ಯುಟ್' ಪ್ರತ್ಯಯವು ಪ್ರಾಪ್ತವಾದರೆ 'ಯು' ಎಂದಷ್ಟೇ ಉಳಿಯುತ್ತದೆ. ಅನಂತರ 'ಯುವೋರನಾಕೌ' ಎಂಬ ಸೂತ್ರದಿಂದ 'ಅನ' ಎಂಬ ಆದೇಶವು ಬಂದರೆ, 'ಕೃಞ್ ಅನ' ಎಂದಾಗುತ್ತದೆ. ಅನಂತರ 'ಸಾರ್ವಧಾತುಕಾರ್ಧಧಾತುಕಯೋಃ' ಎಂಬ ಸೂತ್ರದಿಂದ ರಪರವಾಗಿ ಗುಣವು ಪ್ರಾಪ್ತವಾದರೆ 'ಕರಣ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಆದಿಪದಿಂದ 'ಗಮ್ಲೃ ಗತೌ' ಇವೇ ಮೊದಲಾದ ಧಾತುಗಳನ್ನು ವಿವಕ್ಷಿಸಬೇಕು.

**प्रकाशः** – **लोकेति** ।। अवयवविकृत्त्यादिरूपार्थमादायेत्यर्थः ।। **अन्यथेति** ।। यौगिकार्थग्रहणे तज्ज्ञानानन्तरं पचि धातोस्तदर्थकत्वज्ञानं तज्ज्ञाने च तज्जन्यपाक-शब्दार्थज्ञानमित्यन्योन्याश्रय इत्यर्थः ।।

ಲೋಕಪ್ರಸಿದ್ಧಾರ್ಥವೆಂದರೆ ಪಾಕಶಬ್ದಕ್ಕೆ ಅವಯವವಿಕ್ಲೃತ್ತಿ ಎಂಬ ಪ್ರಸಿದ್ಧಾರ್ಥವನ್ನು ಸ್ವೀಕರಿಸಿ ಎಂದರ್ಥ.

'ಅನ್ಯಥಾ' ಎಂದರೆ ಪಾಕ ಎಂಬುದು ಯಾವ ಧಾತುವಿನಿಂದ ನಿಷ್ಪನ್ನವಾಗಿದೆಯೋ, ಅದೂ ಕೂಡ ಯೌಗಿಕವೇ ಆಗಿದೆ. ಆದ್ದರಿಂದ ಮೊದಲು ಪಾಕಶಬ್ದಾರ್ಥವನ್ನು ತಿಳಿದರಷ್ಟೇ 'ಪಚ್' ಧಾತುವಿನ ಅರ್ಥವು ತಿಳಿಯುತ್ತದೆ. 'ಪಚ್' ಧಾತುವಿನ ಅರ್ಥ ತಿಳಿದರೆ ಮಾತ್ರ 'ಪಚ್' ಧಾತುವಿನಿಂದ ಜನ್ಯವಾದ 'ಪಾಕ' ಶಬ್ದದ ಅರ್ಥವು ತಿಳಿಯುತ್ತದೆ. ಹೀಗೆ ಅನ್ಯೋನ್ಯಾಶ್ರಯವು ಬರುತ್ತದೆಂದು ತಿಳಿಯಬೇಕು.

**प्रकाशः – व्युत्पादनमिति ।। तत्प्रकारश्च ''जातमोतं हरौ यस्मात्'' इत्याद्यनुव्याख्यानसुधयोर्ध्येय इति भावः ।**

'ವ್ಯುತ್ಪಾದನಮ್' ಎಂದರೆ ಅನುವ್ಯಾಖ್ಯಾನದಲ್ಲಿ 'ಜಾತಮೋತಮ್ ಹರೌ ಯಸ್ಮಾತ್' ಇತ್ಯಾದಿಯಾಗಿ 'ಜ್ಯೋತಿ' ಮೊದಲಾದ ಶಬ್ದಗಳ ವ್ಯುತ್ಪತ್ತಿಯನ್ನು ಮಾಡಿರುತ್ತಾರೆ. ಅನುವ್ಯಾಖ್ಯಾನ ಹಾಗೂ ಸುಧೆಯಲ್ಲಿ ಹೇಳಿದಂತೆ ಜ್ಯೋತಿರಾದಿಶಬ್ದಗಳ ವ್ಯುತ್ಪತ್ತಿಯನ್ನು ತಿಳಿಯಬೇಕೆಂದು ಅಭಿಪ್ರಾಯ.

**प्रकाशः – प्रागुक्तलक्षणाप्रसङ्गं निराह – न चैवमिति ।। भगवत एव सर्वशब्दमुख्यार्थत्वे । शरीररूपकेत्युक्तन्यायेन तत्तच्छब्दमुख्यार्थेश्वरसम्बन्धेनैवान्यत्र शब्दवृत्तेर्वाच्यत्वादिति भावः ।**

ಹಿಂದೆ ಪೂರ್ವಪಕ್ಷ ಮಾಡುವಾಗ ಪರಮಾತ್ಮನಲ್ಲಿಯೇ ಎಲ್ಲಾ ಶಬ್ದಗಳ ಶಕ್ತಿವೃತ್ತಿಯಿರುತ್ತದೆ. ಉಳಿದ ಪದಾರ್ಥಗಳಲ್ಲಿ ಲಕ್ಷಣಾವೃತ್ತಿಯನ್ನು ಒಪ್ಪಿದಂತಾಗುತ್ತದಲ್ಲವೇ? ಎಂದು ಆಕ್ಷೇಪಿಸಲಾಗಿತ್ತು ಅದನ್ನು 'ನ ಚೈವಮ್' ಇತ್ಯಾದಿ ಗ್ರಂಥದಿಂದ ನಿರಾಕರಿಸುತ್ತಿದ್ದಾರೆ. ಒಂದು ವೇಳೆ ಭಗವಂತನೇ ಸಕಲ ಶಬ್ದಗಳ ಮುಖ್ಯಾರ್ಥನಾದಲ್ಲಿ ಎಂಬುದು 'ನ ಚೈವಮ್' ಎಂಬುದರ ಅರ್ಥ. 'ಶರೀರರೂಪಕವಿನ್ಯಸ್ತಗೃಹಿತೇಃ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ, ಆಯಾ ಶಬ್ದಗಳ ಮುಖ್ಯಾರ್ಥ ಪರಮಾತ್ಮನೇ ಆಗಿರುತ್ತಾನೆ. ಅವನ ಸಂಬಂಧದಿಂದ ಬೇರೆ ಪದಾರ್ಥಗಳನ್ನು ಶಬ್ದಗಳು ಪ್ರತಿಪಾದನೆ ಮಾಡುತ್ತವೆಂದು ತಿಳಿಯಬೇಕು.

**प्रकाशः – अभिधानं निघण्टुः ।। अन्यत्र नेति ।। पारम्यस्यैव निषेधो नतु मुख्यत्वस्येत्यर्थः ।**

'ಅಭಿಧಾನಂ' ಎಂದರೆ ಕೋಶ ಎಂದರ್ಥ. 'ಅನ್ಯತ್ರ ನ' ಎಂದರೆ ಪರಮಾತ್ಮನಲ್ಲಿರುವ ಪರಮಮುಖ್ಯತ್ವವು. ಬೇರೆ ಕಡೆ ಇರುವುದಿಲ್ಲ ಎಂದರ್ಥ, ಹೊರತು ಮುಖ್ಯತ್ವ ಇರುವುದಿಲ್ಲ ಎಂದಲ್ಲ.

**प्रकाशः – एतेन ''तत्रापि परमो मुख्यः'' इति स्मृत्युक्तेरुपयोगो दर्शितः ।। युक्तं चेति ।। व्युत्पादयिष्यते चैतत् समाकर्षादित्यत्र ।**

ಪರಿಪೂರ್ಣಚಂದ್ರಿಕಾ

ಇದರಿಂದ 'ತತ್ರಾಪಿ ಪರಮೋ ಮುಖ್ಯಃ' ಎಂಬ ಹಿಂದೆ ಉದಾಹರಿಸಿದ ಸ್ಮೃತಿಯ ಉಪಯೋಗವನ್ನು ತೋರಿಸಿದಂತಾಯಿತು. ಮುಖ್ಯವೃತ್ತಿಯಲ್ಲಿಯೂ ತಾರತಮ್ಯವಿದೆಯೆಂಬ ವಿಚಾರವು ಮುಂದೆ ಸಮಾಕರ್ಷಾಧಿಕರಣದಲ್ಲಿ ವಿವರಿಸುತ್ತೇವೆ.

**गुरुराजीयम्** – एतमेव तथा सन्तं शतर्चीत्यादिनामभिः । आचक्षत इत्याद्यनुव्याख्यानं मनसि निधायाऽह – **तं यच्छतमित्यादिना** ।। ननूभयत्रापि मुख्यत्वे कथं तत्र ब्रह्मणि परममुख्यत्वमन्यत्र नेति तारतम्यम् । वृत्तौ तारतम्यादर्शनादित्यत आह – **युक्तं चेति** ।।




ವೇದಗಳಲ್ಲಿ ಎಲ್ಲಾ ಶಬ್ದಗಳು ಪರಮಾತ್ಮನನ್ನೇ ಪ್ರತಿಪಾದನೆ ಮಾಡುವುದಾದರೆ, ಎಲ್ಲವೂ ಭಗವಂತನ ನಾಮಗಳೇ ಆಗುತ್ತವೆ. ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೇ ವಿಷಯವನ್ನು ಅವು ಹೇಳಲಾರವು. ಆವಾಗ ವೇದದಿಂದ ಯಾವ ಕರ್ಮಾನುಷ್ಠಾನಗಳನ್ನು ಯಾವುದೇ ಶಬ್ದಗಳ ವ್ಯುತ್ಪತ್ತಿಯನ್ನೂ ಕೂಡ ತಿಳಿಯಲು ಸಾಧ್ಯವಿಲ್ಲದಂತಾಗುತ್ತದೆ. ನಮ್ಮ ಎಲ್ಲಾ ಕರ್ಮಾನುಷ್ಠಾನಗಳು ಲೋಪವಾಗುವುದಲ್ಲದೇ, ಸಕಲ ವ್ಯವಹಾರಗಳೂ ಲೋಪವಾಗುತ್ತವೆ. ಆದ್ದರಿಂದ ಸರ್ವಶಬ್ದ ಸಮನ್ವಯವನ್ನು ತಿಳಿಯುವುದು ಬಹಳ ಕಷ್ಟವಲ್ಲವೇ?

ಸಮನ್ವಯದ ಕ್ರಮಗಳನ್ನು ಸರಿಯಾಗಿ ತಿಳಿದಾಗ ಈ ಆಕ್ಷೇಪಕ್ಕೆ ಅವಕಾಶವಿಲ್ಲ. ಯಾವುದೇ ಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡುವಾಗ ಆ ಶಬ್ದಗಳ ಅವಯವಗಳು ಲೌಕಿಕವಾದ ಅರ್ಥವನ್ನೇ ಪ್ರತಿಪಾದನೆ ಮಾಡುತ್ತವೆ. 'ಜ್ಯೋತಿ' ಎಂಬ ಶಬ್ದವು ಪರಮಾತ್ಮನನ್ನು ಪ್ರತಿಪಾದನೆ ಮಾಡುವಾಗ, 'ಜೀ' 'ಓತಿ' ಎಂಬ ಅವಯವಗಳು ಲೌಕಿಕವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆ. 'ಓತಿ' 'ಜೀ' ಎಂಬುದು ಪರಮಾತ್ಮನನ್ನು ಪ್ರತಿಪಾದನೆ ಮಾಡುವುದಾದರೆ ಅದರ ಅವಯವಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವ್ಯುತ್ಪತ್ತಿಯ ತಿಳುವಳಿಕೆಯು ಕಷ್ಟವಾಗುವುದಿಲ್ಲ. ಇದರಂತೆ ಕರ್ಮವಿಲೋಪ ಪ್ರಸಂಗಕ್ಕೂ ಅವಕಾಶವಿಲ್ಲ. ಏಕೆಂದರೆ ಎಲ್ಲಾ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಿದರೂ, ಪರಮಮುಖ್ಯವೃತ್ತಿಯಿಂದ ಪರಮಾತ್ಮನನ್ನು ಮಾತ್ರ ಪ್ರತಿಪಾದನೆ ಮಾಡುತ್ತವೆ. ಮುಖ್ಯವೃತ್ತಿಯಿಂದ ಯಜ್ಞಯಾಗಾದಿಕರ್ಮಗಳನ್ನೂ ಕೂಡ ಪ್ರತಿಪಾದಿಸುತ್ತವೆ. 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯವು ವಸಂತಮಾಸದಲ್ಲಿ ಜ್ಯೋತಿಷ್ಟೋಮಯಾಗವನ್ನು ಮಾಡಬೇಕೆಂದು ತಿಳಿಸುತ್ತದೆ. ಅದರ ಜೊತೆಗೆ ಪರಮಮುಖ್ಯವೃತ್ತಿಯಿಂದ ಪ್ರತಿಯೊಂದು ಪದಗಳೂ ಭಗವಂತನ ವಿಭಿನ್ನವಾದ ಗುಣಗಳನ್ನು ವರ್ಣಿಸುತ್ತವೆಂದು ಹೇಳುತ್ತವೆ. ಶಬ್ದಗಳಲ್ಲಿ ಮುಖ್ಯವೃತ್ತಿ, ಪರಮಮುಖ್ಯವೃತ್ತಿಯೆಂಬ ವೈವಿಧ್ಯವಿದೆ. ಶಬ್ದಗಳು ಪರಮಾತ್ಮನ ಗುಣಧರ್ಮಗಳನ್ನು ಹೇಳುವುದಷ್ಟೇ ಅಲ್ಲದೇ, ಜ್ಞಾನಿಗಳ ರೂಢಿಯು ಇದ್ದಲ್ಲಿ ಪರಮಮುಖ್ಯವೃತ್ತಿಯೆಂದು ಕರೆಸಿಕೊಳ್ಳುತ್ತದೆ. ಒಂದು ವೇಳೆ ಲೌಕಿಕವಾಗಿ ಯೋಗರೂಢಿಗಳಿದ್ದಲ್ಲಿ ಮುಖ್ಯವೃತ್ತಿಯೆನಿಸಿಕೊಳ್ಳುತ್ತದೆ. ಹೀಗೆ ವೈವಿಧ್ಯವನ್ನು ತಿಳಿದಾಗ ಯಾವುದೇ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ. ಮತ್ತು ಲೌಕಿಕಪದಾರ್ಥಗಳೆಲ್ಲವನ್ನೂ ಶಬ್ದಗಳು ಲಕ್ಷಣಾವೃತ್ತಿಯಿಂದಲೇ ಪ್ರತಿಪಾದನೆ ಮಾಡಿದಂತಾಗುತ್ತದೆಂಬ

ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಕೋಶ, ವ್ಯಾಕರಣ ಮೊದಲಾದವುಗಳಿಂದ ಲೌಕಿಕಾರ್ಥಗಳಲ್ಲಿ ಶಬ್ದಗಳು ಪ್ರಮಾಣಸಿದ್ಧವಾಗಿವೆ. ಬಾಧಕವಿಲ್ಲದೇ ಇಂತಹ ಪ್ರಮಾಣಸಿದ್ಧವಾದ ಅರ್ಥವನ್ನು ಬಿಡುವುದು ಯುಕ್ತವಾಗುವುದಿಲ್ಲ. ಆದ್ದರಿಂದ ಲೋಕದಲ್ಲಿ ಮುಖ್ಯವೃತ್ತಿಯನ್ನು ಒಪ್ಪಿಯೇ ಪರಮಾತ್ಮನಲ್ಲಿ ಶಬ್ದಗಳ ಸಮನ್ವಯವನ್ನು ಮಾಡಬೇಕೆಂಬುದು ಗಮನಿಸಬೇಕಾದ ಸೂಕ್ಷ್ಮವಿಚಾರ.

• • • • •

## ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದಕ್ಕೆ ಅನೇಕಾರ್ಥತ್ವವು ಯುಕ್ತವೆನ್ನಲು ವ್ಯಾಕರಣದ ದೃಷ್ಟಾಂತ

### तात्पर्यचन्द्रिका

**नच सकृत्प्रयुक्तस्यानेकार्थत्वमन्याय्यम् । ''राजा कुवलयोल्लासकारि''-इत्यादिश्लिष्टशब्देषु चन्द्रभूपाद्यनेकार्थत्वदर्शनात् ।**

ಅನುವಾದ - 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿ ಒಮ್ಮೆ ಮಾತ್ರ ಶ್ರುತವಾದ ಜ್ಯೋತಿರಾದಿಶಬ್ದಗಳಿಗೆ ಪರಮಾತ್ಮ ಪರವಾಗಿ, ಕರ್ಮಪರವಾಗಿ ಅನೇಕ ಅರ್ಥಗಳನ್ನು ಹೇಳುತ್ತಿದ್ದೀರಿ. ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದವು ಒಂದು ಅರ್ಥವನ್ನಷ್ಟೇ ಹೇಳುತ್ತದೆ ಹೊರತು, ಅನೇಕ ಅರ್ಥವನ್ನು ಹೇಳುವುದು ಅನ್ಯಾಯವಲ್ಲವೇ?

ಹೀಗೆ ಆಕ್ಷೇಪ ಮಾಡುವುದು ಸರಿಯಲ್ಲ. ಏಕೆಂದರೆ ಲೌಕಿಕದೃಷ್ಟಾಂತ, ಶಾಸ್ತ್ರೀಯದೃಷ್ಟಾಂತ, ವೈದಿಕದೃಷ್ಟಾಂತಗಳಿಂದ ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದಗಳಿಗೆ ಅನೇಕಾರ್ಥವಿರುವುದು ಕಂಡಿದೆ. ಲೌಕಿಕ ದೃಷ್ಟಾಂತ ಹೀಗಿದೆ - 'ರಾಜಾ ಕುವಲಯೋಲ್ಲಾಸಕಾರಿ' ಎಂಬ ಪ್ರಯೋಗದಲ್ಲಿ ಚಂದ್ರನು ನೈದಿಲೆ ಹೂವುಗಳಿಗೆ ಸಂತೋಷವನ್ನು ನೀಡುತ್ತಾನೆ ಎಂಬರ್ಥವು ತೋರುವಂತೆ, ರಾಜನಾದ ಭೂಪತಿಯು ಸಮಗ್ರ ಭೂಮಂಡಲಕ್ಕೆ ಸಂತೋಷವನ್ನು ನೀಡುತ್ತಾನೆ ಎಂಬರ್ಥವೂ ಕೂಡ ತೋರುತ್ತದೆ. ಒಮ್ಮೆ ಪ್ರಯೋಗಿಸಲ್ಪಟ್ಟ ರಾಜ ಎಂಬ ಪದವೇ ಚಂದ್ರ ಹಾಗೂ ಭೂಪತಿ ಎಂಬೆರಡರ್ಥವನ್ನು ಹೇಳುತ್ತಿದೆ.

**नानार्थविवक्षयाप्यक्षमानयेति प्रयोगाच्च ।**

ನಾನಾರ್ಥಕವಾದ ಅಕ್ಷ ಮೊದಲಾದ ಶಬ್ದಗಳನ್ನು ಒಮ್ಮೆ ಪ್ರಯೋಗಿಸಿದಾಗ ಪಗಡೆಯಾಟ, ಕಣ್ಣು, ರಥಚಕ್ರ ಮೊದಲಾದ ಅನೇಕಾರ್ಥವು ಸ್ಫುರಣವಾಗುವುದು ಕಂಡಿದೆ.

**''बहुगणवतुडति संख्या'' इत्यत्र संज्ञार्थस्यापि संख्याशब्दस्य ''ष्णान्ताष्षट्'' इत्यत्र षट्संज्ञार्थत्वदर्शनाच्च ।**

ವ್ಯಾಕರಣಶಾಸ್ತ್ರದಲ್ಲಿಯೂ ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದಕ್ಕೆ ಅನೇಕಾರ್ಥತ್ವವನ್ನು ಅಂಗೀಕರಿಸಿರುವುದು ಕಂಡಿದೆ. ಉದಾಹರಣೆ - 'ಬಹುಗಣವತುಡತಿ ಸಂಖ್ಯಾ' ಈ ಸೂತ್ರದಲ್ಲಿರುವ

ಸಂಖ್ಯಾ ಎಂಬ ಪದವು ಸಂಜ್ಞಾ ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಇದೇ ಸಂಖ್ಯಾ ಎಂಬ ಶಬ್ದವು 'ಷ್ಣಾಂತಾಃಷಟ್' ಎಂಬ ಸೂತ್ರದಲ್ಲಿ ಅನುವೃತ್ತವಾದಾಗ 'ಷಟ್ ಸಂಜ್ಞೆ' ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಹೀಗೆ ಸಂಖ್ಯಾ ಎಂಬ ಶಬ್ದಕ್ಕೆ ಅನೇಕಾರ್ಥವಿರುವುದು ಕಂಡಿದೆ.

## ''षष्ठी शेषे'' इत्यत्र शेषशब्दे कर्मादिव्यतिरिक्तार्थत्वोपसर्जनार्थत्वयोः,

'ಸಂಖ್ಯಾ' ಎಂಬ ಶಬ್ದವು ಒಮ್ಮೆ ಸೂತ್ರದಲ್ಲಿ ಹೇಳಿದೆ. ಮತ್ತೊಮ್ಮೆ ಅನುವೃತ್ತವಾಗಿದೆ. ಆದ್ದರಿಂದ ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದಕ್ಕೆ ಅನೇಕಾರ್ಥತ್ವವಿದೆಯೆನ್ನಲು ವ್ಯಾಕರಣಶಾಸ್ತ್ರದಲ್ಲಿ ಮತ್ತೊಂದು ದೃಷ್ಟಾಂತ ಹೀಗಿದೆ - 'ಷಷ್ಠೀ ಶೇಷೇ' ಎಂಬ ಸೂತ್ರದಲ್ಲಿ 'ಶೇಷೇ' ಶಬ್ದಕ್ಕೆ ಕರ್ಮ ಮೊದಲಾದ ಕಾರಕವಿಭಕ್ತ್ಯರ್ಥಗಳಿಗಿಂತ ಅತಿರಿಕ್ತವಾದ ಸ್ವಸ್ವಾಮ್ಯಭಾವಸಂಬಂಧ ಎಂಬರ್ಥವನ್ನು ಹೇಳಲಾಗಿದೆ. ಪುನಃ ಅದೇ 'ಶೇಷೇ' ಎಂಬ ಪದಕ್ಕೆ ಅಪ್ರಧಾನ ಎಂಬರ್ಥವನ್ನೂ ಕೂಡ ಪ್ರಕ್ರಿಯಾಕೌಮುದಿಯಲ್ಲಿ ಹೇಳಲಾಗಿದೆ. ಸ್ವಸ್ವಾಮ್ಯಭಾವಸಂಬಂಧವನ್ನಷ್ಟೇ ವಿವಕ್ಷಿಸಿದರೆ 'ರಾಜಪುರುಷಃ ಆಗತಃ' ಎಂಬಲ್ಲಿ ರಾಜಶಬ್ದಕ್ಕೆ ಷಷ್ಠೀ ವಿಭಕ್ತಿಯನ್ನು ಹೇಳಬೇಕೋ, ಪುರುಷಶಬ್ದಕ್ಕೆ ಷಷ್ಠೀ ವಿಭಕ್ತಿಯನ್ನು ಹೇಳಬೇಕೋ? ಎಂಬ ಸಂಶಯ ಬರುತ್ತದೆ. ಅದರ ಪರಿಹಾರಕ್ಕಾಗಿ ಶೇಷಶಬ್ದಕ್ಕೆ ಅಪ್ರಧಾನ ಎಂಬರ್ಥವನ್ನು ವಿವಕ್ಷಿಸಿ, ರಾಜಶಬ್ದಕ್ಕೆ ಮಾತ್ರ ಷಷ್ಠೀ ವಿಭಕ್ತಿ ಬರುತ್ತದೆಂದು ಉತ್ತರಿಸಲಾಗಿದೆ.

## ''हलन्त्यम्'' इत्यत्र हल् शब्दे हकारात् परलकारार्थत्वव्यञ्जनार्थयोर्दर्शनाच्च ।

ವ್ಯಾಕರಣಶಾಸ್ತ್ರದಲ್ಲಿಯೇ ಮತ್ತೊಂದು ದೃಷ್ಟಾಂತ ಹೀಗಿದೆ - 'ಹಲಂತ್ಯಮ್' ಎಂಬ ಸೂತ್ರದಲ್ಲಿ ಶ್ರುತವಾದ 'ಹಲ್' ಎಂಬ ಪದವು ಪ್ರತ್ಯಾಹಾರ ಎಂದು ವಿವಕ್ಷಿಸಿದರೆ ಅನ್ಯೋನ್ಯಾಶ್ರಯದೋಷವು ಬರುತ್ತದೆ. 'ಹಲ್' ಎಂಬುದು ಪ್ರತ್ಯಾಹಾರವೆಂದು ಸಿದ್ಧವಾದರೆ ಮಾತ್ರ ಚತುರ್ದಶಸೂತ್ರದಲ್ಲಿರುವ ಕೊನೆಯ 'ಹಲ್' ಎಂಬ ಸೂತ್ರದ ಲಕಾರಕ್ಕೆ ಇತ್ ಸಂಜ್ಞೆಯು ಪ್ರಾಪ್ತವಾಗುತ್ತದೆ. ಆ ಲಕಾರಕ್ಕೆ ಇತ್ ಸಂಜ್ಞೆಯು ಪ್ರಾಪ್ತವಾದರೆ ಮಾತ್ರ ಹಲ್ ಎಂಬುದು ಪ್ರತ್ಯಾಹಾರವೆಂದು ಸಿದ್ಧವಾಗುತ್ತದೆ. ಈ ಅನ್ಯೋನ್ಯಾಶ್ರಯ ಪರಿಹಾರಕ್ಕಾಗಿ ಭಾಷ್ಯ, ಕೈಯಟ ಮೊದಲಾದವುಗಳಲ್ಲಿ ಒಂದೇ 'ಹಲ್' ಶಬ್ದಕ್ಕೆ ಎರಡರ್ಥವನ್ನು ಅಂಗೀಕರಿಸಿದ್ದಾರೆ. ಹಕಾರದ ಪರದಲ್ಲಿರುವ ಲಕಾರಕ್ಕೆ ಇತ್ ಸಂಜ್ಞೆಯನ್ನು ವಿವಕ್ಷಿಸಬೇಕೆಂದು ಒಂದರ್ಥವನ್ನು ಹೇಳಿ, 'ಹಲ್' ಎಂಬುದು ಪ್ರತ್ಯಾಹಾರ ರೂಪವಾಗಿದೆಯೆಂಬುದಾಗಿ ಮತ್ತೊಂದು ಅರ್ಥವನ್ನೂ ಕೂಡ ಅಂಗೀಕರಿಸಿದ್ದಾರೆ. ಆವಾಗ ಅನ್ಯೋನ್ಯಾಶ್ರಯ ದೋಷಕ್ಕೆ ಅವಕಾಶವಿಲ್ಲ. ಹೀಗೆ ವ್ಯಾಕರಣಶಾಸ್ತ್ರದಲ್ಲಿ ಅನೇಕ ಸಂದರ್ಭಗಳಲ್ಲಿ ಒಮ್ಮೆ ಉಚ್ಚರಿಸಿದ ಶಬ್ದಕ್ಕೆ ಅನೇಕಾರ್ಥವನ್ನು ಒಪ್ಪಿರುವುದು ಕಂಡಿದೆ. ಅದರಂತೆ ಪ್ರಕೃತ ಜ್ಯೋತಿರಾದಿ ಶಬ್ದಗಳಿಗೂ ಅನೇಕಾರ್ಥವನ್ನು ಹೇಳುವುದು ತಪ್ಪಾಗುವುದಿಲ್ಲ.

**प्रकाशः –**

**कुवलयेति कुमुदं भूवलयं च गृह्यते ।। नानार्थेति ।। विदेवनाक्षविभीतकाक्षरथ-चक्राक्षाद्यभिप्रायेणेत्यर्थः ।**

ವಿವರಣೆ - ಒಂದೇ ಬಾರಿ ಉಚ್ಚರಿಸಲ್ಪಟ್ಟ ಶಬ್ದವು ಅನೇಕ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತದೆಂಬುದು ಅನ್ಯಾಯವೆಂದು ಪೂರ್ವಪಕ್ಷಕಾರರು ಹೇಳುತ್ತಾರೆ. ಅಂತಹ ಪೂರ್ವಪಕ್ಷಗಳಿಗೆ ನಾವು ಪ್ರಶ್ನಿಸುತ್ತೇವೆ. ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದವು ಏಕೆ ಅನೇಕಾರ್ಥವನ್ನು ಹೇಳಬಾರದು? ಲೋಕದಲ್ಲಿ ಕಂಡಿಲ್ಲವೆಂದೋ, ಅಥವಾ ಬೇರೆ ಶಾಸ್ತ್ರಗಳಲ್ಲಿ ಕಂಡಿಲ್ಲವೆಂದೋ, ಅಥವಾ ವೇದದಲ್ಲಿ ಕಂಡಿಲ್ಲವೆಂದೋ? ಲೋಕದಲ್ಲಿ ಕಂಡಿಲ್ಲವೆಂಬ ಮೊದಲನೆಯ ಪಕ್ಷವು ಅಸಾಧುವಾಗಿದೆ. ಏಕೆಂದರೆ 'ರಾಜಾ ಕುವಲಯೋಲ್ಲಾಸಕಾರಿ' ಎಂಬುದಾಗಿ ಲೌಕಿಕ ಪ್ರಯೋಗವಿದೆ. ಇಲ್ಲಿರುವ 'ರಾಜಾ' ಎಂಬ ಶಬ್ದಕ್ಕೆ ಚಂದ್ರ ಎಂಬರ್ಥವನ್ನು ವಿವಕ್ಷಿಸಿದರೆ, ಕುವಲಯ ಶಬ್ದದಿಂದ ನೈದಿಲೆಪುಷ್ಪವನ್ನು ವಿವಕ್ಷಿಸಬೇಕು. ರಾಜನಾದ ಚಂದ್ರನು ನೈದಿಲೆ ಹೂವುಗಳಿಗೆ ಸಂತೋಷವನ್ನು ನೀಡುತ್ತಾನೆ ಎಂದು ಇದರರ್ಥವಾಗುತ್ತದೆ. ಈ ವಾಕ್ಯವು ಶ್ಲೇಷಾಲಂಕಾರದಲ್ಲಿರುವ ಕಾರಣ ರಾಜಾ ಶಬ್ದಕ್ಕೆ ಭೂಪತಿ ಎಂಬರ್ಥವನ್ನು ವಿವಕ್ಷಿಸಿದರೆ, ಕುವಲಯ ಶಬ್ದದಿಂದ ಭೂಮಂಡಲವೆಂಬರ್ಥವನ್ನು ವಿವಕ್ಷಿಸಬೇಕು. 'ಕು' ಶಬ್ದಕ್ಕೆ 'ಭೂಮಿ' ಎಂಬ ಅರ್ಥವಿದೆ. 'ವಲಯ' ಶಬ್ದಕ್ಕೆ 'ಮಂಡಲ' ಎಂದರ್ಥ. ಆದ್ದರಿಂದ 'ಭೂಪತಿಯು ಭೂಮಂಡಲಕ್ಕೆ ಸಂತೋಷದಾಯಕನಾಗಿದ್ದಾನೆ' ಎಂಬರ್ಥವನ್ನು ಹೇಳಿದಂತಾಗುತ್ತದೆ. ಹೀಗೆ ರಾಜಾ ಎಂಬ ಒಂದೇ ಶಬ್ದವು ಚಂದ್ರ, ಭೂಪತಿ ಎಂಬೆರಡರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಅದರಂತೆ ಕುವಲಯ ಶಬ್ದವೂ ಕೂಡ 'ನೈದಿಲೆ' 'ಕುಸುಮ' ಹಾಗೂ 'ಭೂಮಂಡಲ' ಎಂಬೆರಡರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಆದ್ದರಿಂದ ಲೌಕಿಕದೃಷ್ಟಾಂತದಿಂದ ಒಮ್ಮೆ ಉಚ್ಚರಿಸಲ್ಪಟ್ಟ ಪದವು ಅನೇಕಾರ್ಥವನ್ನು ಹೇಳಬಹುದೆಂದು ಸಿದ್ಧವಾಗುತ್ತದೆ.

ಶ್ಲೇಷಾಲಂಕಾರವಿರುವೆಡೆ ಮಾತ್ರ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಹೇಳಬಹುದು. ಶ್ಲೇಷಾಲಂಕಾರವೇ ಅನೇಕಾರ್ಥವನ್ನು ಹೇಳಲು ಕಾರಣವಾಗಿದೆ. ಆದರೆ 'ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿ ಅಂತಹ ಶ್ಲೇಷಾಲಂಕಾರವೇನೂ ಇರುವುದಿಲ್ಲ. ಆದ್ದರಿಂದ 'ರಾಜಾ ಕುವಲಯೋಲ್ಲಾಸಕಾರಿ' ಎಂಬ ದೃಷ್ಟಾಂತದಿಂದ ಜ್ಯೋತಿರಾದಿ ಶಬ್ದಗಳಿಗೆ ಅನೇಕಾರ್ಥವನ್ನು ಹೇಳುವುದು ತಪ್ಪಲ್ಲವೇ ? ಎಂಬ ಆಶಂಕೆಗೆ ಮತ್ತೊಂದು ದೃಷ್ಟಾಂತವನ್ನು ನೀಡುತ್ತಿದ್ದಾರೆ 'ನಾನಾರ್ಥ' ಇತ್ಯಾದಿ ವಾಕ್ಯದಿಂದ. ಒಮ್ಮೆ ಉಚ್ಚರಿಸಲ್ಪಟ್ಟ ಅಕ್ಷ ಶಬ್ದವೇ ಪಗಡೆ ಆಟ, ತಾರೆಗಿಡ, ರಥಚಕ್ರ ಎಂಬುದಾಗಿ ಅನೇಕ ಅರ್ಥಗಳನ್ನು ನೀಡುತ್ತದೆ.

**प्रकाशः – लौकिकोदाहरणमुक्त्वा शास्त्रीयोदाहरणमाह – बहुगणेति ।। आद्याध्यायस्याद्यपादे ।**

ಲೌಕಿಕದೃಷ್ಟಾಂತದಲ್ಲಿ ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದವು ಅನೇಕಾರ್ಥವನ್ನು ನೀಡಬಹುದು, ಆದರೆ ಶಾಸ್ತ್ರೀಯ ಪ್ರಯೋಗಗಳಲ್ಲಿ ಇಂತಹ ದೃಷ್ಟಾಂತವು ಇರುವುದಿಲ್ಲವೆಂಬ ಶಂಕೆಗೆ 'ಬಹುಗಣ' ಇತ್ಯಾದಿಯಾಗಿ

ಉತ್ತರಿಸುತ್ತಿದ್ದಾರೆ. ವ್ಯಾಕರಣಶಾಸ್ತ್ರದಲ್ಲಿ ಬರುವ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿ 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿರುವ ಸಂಖ್ಯಾ ಶಬ್ದವು ಅನೇಕಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

**प्रकाशः** – बहुशब्दो गणशब्दो वतुप्रत्ययान्तो डति प्रत्ययान्तश्चेत्येते संख्यासंज्ञा भवन्ति । बहुकृत्वः गणकृत्वः तावत्कृत्वः कतिकृत्वः इत्यादौ ''संख्यायाः क्रियाभ्यावृत्तिगणने कृत्वसुच्'' इत्युक्तकृत्वसुजर्थम् ।

'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿ ಬಹುಶಬ್ದ, ಗಣಶಬ್ದ, 'ವತು' ಪ್ರತ್ಯಯಾಂತ ಶಬ್ದ, 'ಡತಿ' ಪ್ರತ್ಯಯಾಂತ ಶಬ್ದ ಇವೆಲ್ಲವೂ ಸಂಖ್ಯಾ ಎಂಬ ಸಂಜ್ಞೆಯನ್ನು ಹೊಂದುತ್ತವೆಂದು ಹೇಳಲಾಗಿದೆ. ಆದ್ದರಿಂದಲೇ ಮುಂದೆ 'ಸಂಖ್ಯಾಯಾಃ ಕ್ರಿಯಾಭ್ಯಾವೃತ್ತಿಗಣನೇ 'ಕೃತ್ವಸುಚ್' ಎಂಬ ಸೂತ್ರದಿಂದ ಸಂಖ್ಯಾ ಸಂಜ್ಞೆಯನ್ನು ಹೊಂದಿರುವ ಈ ನಾಲ್ಕು ಬಗೆಯ ಶಬ್ದಗಳಿಗೆ 'ಕೃತ್ವಸುಚ್' ಪ್ರತ್ಯಯವನ್ನು ವಿಧಿಸಲಾಗಿದೆ. ಬಹುಶಬ್ದದ ಮೇಲೆ 'ಕೃತ್ವಸುಚ್' ಪ್ರತ್ಯಯವು ಪ್ರಾಪ್ತವಾದರೆ 'ಬಹುಕೃತ್ವಃ' ಎಂಬ ಪ್ರಯೋಗವು ಸಿದ್ಧವಾಗುತ್ತದೆ. ಇದರಂತೆ 'ಗಣಕೃತ್ವಃ' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. 'ವತು' ಪ್ರತ್ಯಯಾಂತದ ಶಬ್ದದ ಮೇಲೆ 'ಕೃತ್ವಸುಚ್' ಪ್ರತ್ಯಯವು ಪ್ರಾಪ್ತವಾದರೆ 'ತಾವತ್ಕೃತ್ವಃ' ಎಂದಾಗುತ್ತದೆ. 'ಡತಿ' ಪ್ರತ್ಯಯಾಂತವಾದ ಶಬ್ದದ ಮೇಲೆ 'ಕೃತ್ವಸುಚ್' ಪ್ರತ್ಯಯವು ಪ್ರಾಪ್ತವಾದರೆ 'ಕತಿಕೃತ್ವಃ' ಎಂದಾಗುತ್ತದೆ. ಹೀಗೆ 'ಸಂಖ್ಯಾ' ಎಂಬ ಪದವು ಸಂಜ್ಞಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

**प्रकाशः** – तथा च तत्र संज्ञार्थत्वे सिद्धे ''ष्णान्ताः षट्'' इत्यत्र ष्णान्तेति स्त्रीलिङ्गनिर्देशेन प्राक्तनं संख्यापदमनुवृत्य षकारान्ता नकारान्ता च या संख्या सा षट् संज्ञा भवति । षट्पञ्चेत्यादौ ''षड्भ्यो लुक्'' इति विहितप्रत्ययलुक्सिद्ध्यर्थम्। तथा च तत्र षट्पञ्चादिसंज्ञिपरत्वमुक्तम् ।

ಹೀಗೆ ಸಂಜ್ಞಾರ್ಥದಲ್ಲಿ ಸಿದ್ಧವಾದ 'ಸಂಖ್ಯಾ' ಎಂಬ ಶಬ್ದವು 'ಷ್ಣಾಂತಾಃ ಷಟ್' ಎಂಬ ಸೂತ್ರದಲ್ಲಿ 'ಸಂಜ್ಞಾ' ಪರವಾಗಿದೆ. ಏಕೆಂದರೆ 'ಷ್ಣಾಂತಾ' ಎಂಬ ಪ್ರಯೋಗವು ಸ್ತ್ರೀಲಿಂಗದಲ್ಲಿ ಇರುವುದರಿಂದ ಹಿಂದೆ ಪ್ರಸಕ್ತವಾದ ಸಂಖ್ಯಾ ಪದವನ್ನೇ ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ಷಕಾರಾಂತವಾದ ಮತ್ತು ಣಕಾರಾಂತವಾದ ಯಾವ ಸಂಖ್ಯಾವಾಚಕವಾದ ಪದವಿದೆಯೋ, ಅದಕ್ಕೆ ಷಟ್ ಎಂಬ ಸಂಜ್ಞೆಯು ಬರುತ್ತದೆಂದು ಸೂತ್ರದ ಅರ್ಥವಾಗುತ್ತದೆ. ಆದ್ದರಿಂದಲೇ 'ಷಟ್‌ಪಂಚ' ಇತ್ಯಾದಿ ಸ್ಥಳದಲ್ಲಿ 'ಷಡ್‌ಭ್ಯೋ ಲುಕ್' ಎಂಬ ಸೂತ್ರದಿಂದ ವಿಹಿತವಾದ ಲುಕ್ ಸಂಜ್ಞೆಯು ಸಿದ್ಧವಾಗುತ್ತದೆ. ಆದ್ದರಿಂದ ಯಾವ ಸಂಖ್ಯಾ ಎಂಬ ಪದವು 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿ 'ಸಂಜ್ಞಾ' ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆಯೋ, ಅದೇ 'ಸಂಖ್ಯಾ' ಎಂಬ ಪದವು 'ಷ್ಣಾಂತಾಃಷಟ್' ಎಂಬ ಸೂತ್ರದಲ್ಲಿ ಅನುವೃತ್ತವಾದಾಗ, ಸಂಜ್ಞಿ ಆದ ಷಟ್ ಪಂಚ ಮೊದಲಾದ ಸಂಖ್ಯೆಗಳನ್ನು ಹೇಳುವಂತಹ ಶಬ್ದಗಳಲ್ಲಿಯೇ ಪ್ರಯೋಗಿಸಲ್ಪಟ್ಟಿದೆ. ಹೀಗೆ ಒಂದೇ ಪದವು ಸಂಜ್ಞಾ ಹಾಗೂ ಸಂಜ್ಞಿಪರವಾಗಿರುವುದು ಕಂಡಿದೆ.

ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः –**

कुवलयेति कुमुदं भूवलयं च गृह्यते ।। नानार्थेति ।। विदेवनाक्षविभीतकाक्षरथचक्राक्षाद्यभिप्रायेणेत्यर्थः ।

ವಿವರಣೆ - ಒಂದೇ ಬಾರಿ ಉಚ್ಚರಿಸಲ್ಪಟ್ಟ ಶಬ್ದವು ಅನೇಕ ಅರ್ಥಗಳನ್ನು ಪ್ರತಿಪಾದನೆ ಮಾಡುತ್ತದೆಂಬುದು ಅನ್ಯಾಯವೆಂದು ಪೂರ್ವಪಕ್ಷಕಾರರು ಹೇಳುತ್ತಾರೆ. ಅಂತಹ ಪೂರ್ವಪಕ್ಷಗಳಿಗೆ ನಾವು ಪ್ರಶ್ನಿಸುತ್ತೆವೆ. ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದವು ಏಕೆ ಅನೇಕಾರ್ಥವನ್ನು ಹೇಳಬಾರದು? ಲೋಕದಲ್ಲಿ ಕಂಡಿಲ್ಲವೆಂದೋ, ಅಥವಾ ಬೇರೆ ಶಾಸ್ತ್ರಗಳಲ್ಲಿ ಕಂಡಿಲ್ಲವೆಂದೋ, ಅಥವಾ ವೇದದಲ್ಲಿ ಕಂಡಿಲ್ಲವೆಂದೋ? ಲೋಕದಲ್ಲಿ ಕಂಡಿಲ್ಲವೆಂಬ ಮೊದಲನೆಯ ಪಕ್ಷವು ಅಸಾಧುವಾಗಿದೆ. ಏಕೆಂದರೆ 'ರಾಜಾ ಕುವಲಯೋಲ್ಲಾಸಕಾರಿ' ಎಂಬುದಾಗಿ ಲೌಕಿಕ ಪ್ರಯೋಗವಿದೆ. ಇಲ್ಲಿರುವ 'ರಾಜಾ' ಎಂಬ ಶಬ್ದಕ್ಕೆ ಚಂದ್ರ ಎಂಬರ್ಥವನ್ನು ವಿವಕ್ಷಿಸಿದರೆ, ಕುವಲಯ ಶಬ್ದದಿಂದ ನೈದಿಲೆಪುಷ್ಪವನ್ನು ವಿವಕ್ಷಿಸಬೇಕು. ರಾಜನಾದ ಚಂದ್ರನು ನೈದಿಲೆ ಹೂವುಗಳಿಗೆ ಸಂತೋಷವನ್ನು ನೀಡುತ್ತಾನೆ ಎಂದು ಇದರರ್ಥವಾಗುತ್ತದೆ. ಈ ವಾಕ್ಯವು ಶ್ಲೇಷಾಲಂಕಾರದಲ್ಲಿರುವ ಕಾರಣ ರಾಜಾ ಶಬ್ದಕ್ಕೆ ಭೂಪತಿ ಎಂಬರ್ಥವನ್ನು ವಿವಕ್ಷಿಸಿದರೆ, ಕುವಲಯ ಶಬ್ದದಿಂದ ಭೂಮಂಡಲವೆಂಬರ್ಥವನ್ನು ವಿವಕ್ಷಿಸಬೇಕು. 'ಕು' ಶಬ್ದಕ್ಕೆ 'ಭೂಮಿ' ಎಂಬ ಅರ್ಥವಿದೆ. 'ವಲಯ' ಶಬ್ದಕ್ಕೆ 'ಮಂಡಲ' ಎಂದರ್ಥ. ಆದ್ದರಿಂದ 'ಭೂಪತಿಯು ಭೂಮಂಡಲಕ್ಕೆ ಸಂತೋಷದಾಯಕನಾಗಿದ್ದಾನೆ' ಎಂಬರ್ಥವನ್ನು ಹೇಳಿದಂತಾಗುತ್ತದೆ. ಹೀಗೆ ರಾಜಾ ಎಂಬ ಒಂದೇ ಶಬ್ದವು ಚಂದ್ರ, ಭೂಪತಿ ಎಂಬೆರಡರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಅದರಂತೆ ಕುವಲಯ ಶಬ್ದವೂ ಕೂಡ 'ನೈದಿಲೆ' 'ಕುಸುಮ' ಹಾಗೂ 'ಭೂಮಂಡಲ' ಎಂಬೆರಡರ್ಥದಲ್ಲಿ ಪ್ರಯೋಗಿಸಲ್ಪಡುತ್ತದೆ. ಆದ್ದರಿಂದ ಲೌಕಿಕದೃಷ್ಟಾಂತದಿಂದ ಒಮ್ಮೆ ಉಚ್ಚರಿಸಲ್ಪಟ್ಟ ಪದವು ಅನೇಕಾರ್ಥವನ್ನು ಹೇಳಬಹುದೆಂದು ಸಿದ್ಧವಾಗುತ್ತದೆ.

ಶ್ಲೇಷಾಲಂಕಾರವಿರುವೆಡೆ ಮಾತ್ರ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಹೇಳಬಹುದು. ಶ್ಲೇಷಾಲಂಕಾರವೇ ಅನೇಕಾರ್ಥವನ್ನು ಹೇಳಲು ಕಾರಣವಾಗಿದೆ. ಆದರೆ 'ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿ ಅಂತಹ ಶ್ಲೇಷಾಲಂಕಾರವೇನೂ ಇರುವುದಿಲ್ಲ. ಆದ್ದರಿಂದ 'ರಾಜಾ ಕುವಲಯೋಲ್ಲಾಸಕಾರಿ' ಎಂಬ ದೃಷ್ಟಾಂತದಿಂದ ಜ್ಯೋತಿರಾದಿ ಶಬ್ದಗಳಿಗೆ ಅನೇಕಾರ್ಥವನ್ನು ಹೇಳುವುದು ತಪ್ಪಲ್ಲವೇ ? ಎಂಬ ಆಶಂಕೆಗೆ ಮತ್ತೊಂದು ದೃಷ್ಟಾಂತವನ್ನು ನೀಡುತ್ತಿದ್ದಾರೆ 'ನಾನಾರ್ಥ' ಇತ್ಯಾದಿ ವಾಕ್ಯದಿಂದ. ಒಮ್ಮೆ ಉಚ್ಚರಿಸಲ್ಪಟ್ಟ ಅಕ್ಷ ಶಬ್ದವೇ ಪಗಡೆ ಆಟ, ತಾರೆಗಿಡ, ರಥಚಕ್ರ ಎಂಬುದಾಗಿ ಅನೇಕ ಅರ್ಥಗಳನ್ನು ನೀಡುತ್ತದೆ.

**प्रकाशः –** लौकिकोदाहरणमुक्त्वा शास्त्रीयोदाहरणमाह – बहुगणेति ।। आद्याध्यायस्याद्यपादे ।

ಲೌಕಿಕದೃಷ್ಟಾಂತದಲ್ಲಿ ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದವು ಅನೇಕಾರ್ಥವನ್ನು ನೀಡಬಹುದು, ಆದರೆ ಶಾಸ್ತ್ರೀಯ ಪ್ರಯೋಗಗಳಲ್ಲಿ ಇಂತಹ ದೃಷ್ಟಾಂತವು ಇರುವುದಿಲ್ಲವೆಂಬ ಶಂಕೆಗೆ 'ಬಹುಗಣ' ಇತ್ಯಾದಿಯಾಗಿ

ಉತ್ತರಿಸುತ್ತಿದ್ದಾರೆ. ವ್ಯಾಕರಣಶಾಸ್ತ್ರದಲ್ಲಿ ಬರುವ ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿ 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿರುವ ಸಂಖ್ಯಾ ಶಬ್ದವು ಅನೇಕಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

**प्रकाशः** – बहुशब्दो गणशब्दो वतुप्रत्ययान्तो डति प्रत्ययान्तश्चेत्येते संख्यासंज्ञा भवन्ति । बहुकृत्वः गणकृत्वः तावत्कृत्वः कतिकृत्वः इत्यादौ ''संख्यायाः क्रियाभ्यावृत्तिगणने कृत्वसुच्'' इत्युक्तकृत्वसुजर्थम् ।

'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿ ಬಹುಶಬ್ದ, ಗಣಶಬ್ದ, 'ವತು' ಪ್ರತ್ಯಯಾಂತ ಶಬ್ದ, 'ಡತಿ' ಪ್ರತ್ಯಯಾಂತ ಶಬ್ದ ಇವೆಲ್ಲವೂ ಸಂಖ್ಯಾ ಎಂಬ ಸಂಜ್ಞೆಯನ್ನು ಹೊಂದುತ್ತವೆಂದು ಹೇಳಲಾಗಿದೆ. ಆದ್ದರಿಂದಲೇ ಮುಂದೆ 'ಸಂಖ್ಯಾಯಾಃ ಕ್ರಿಯಾಭ್ಯಾವೃತ್ತಿಗಣನೇ 'ಕೃತ್ವಸುಚ್' ಎಂಬ ಸೂತ್ರದಿಂದ ಸಂಖ್ಯಾ ಸಂಜ್ಞೆಯನ್ನು ಹೊಂದಿರುವ ಈ ನಾಲ್ಕು ಬಗೆಯ ಶಬ್ದಗಳಿಗೆ 'ಕೃತ್ವಸುಚ್' ಪ್ರತ್ಯಯವನ್ನು ವಿಧಿಸಲಾಗಿದೆ. ಬಹುಶಬ್ದದ ಮೇಲೆ 'ಕೃತ್ವಸುಚ್' ಪ್ರತ್ಯಯವು ಪ್ರಾಪ್ತವಾದರೆ 'ಬಹುಕೃತ್ವಃ' ಎಂಬ ಪ್ರಯೋಗವು ಸಿದ್ಧವಾಗುತ್ತದೆ. ಇದರಂತೆ 'ಗಣಕೃತ್ವಃ' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. 'ವತು' ಪ್ರತ್ಯಯಾಂತದ ಶಬ್ದದ ಮೇಲೆ 'ಕೃತ್ವಸುಚ್' ಪ್ರತ್ಯಯವು ಪ್ರಾಪ್ತವಾದರೆ 'ತಾವತ್‌ಕೃತ್ವಃ' ಎಂದಾಗುತ್ತದೆ. 'ಡತಿ' ಪ್ರತ್ಯಯಾಂತವಾದ ಶಬ್ದದ ಮೇಲೆ 'ಕೃತ್ವಸುಚ್' ಪ್ರತ್ಯಯವು ಪ್ರಾಪ್ತವಾದರೆ 'ಕತಿಕೃತ್ವಃ' ಎಂದಾಗುತ್ತದೆ. ಹೀಗೆ 'ಸಂಖ್ಯಾ' ಎಂಬ ಪದವು ಸಂಜ್ಞಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

**प्रकाशः** – तथा च तत्र संज्ञार्थत्वे सिद्धे ''ष्णान्ताः षट्'' इत्यत्र ष्णान्तेति स्त्रीलिङ्गनिर्देशेन प्राक्तनं संख्यापदमनुवृत्य षकारान्ता नकारान्ता च या संख्या सा षट् संज्ञा भवति । षट्पञ्चेत्यादौ ''षड्भ्यो लुक्'' इति विहितप्रत्ययलुक्सिद्ध्यर्थम्। तथा च तत्र षट्पञ्चादिसंज्ञिपरत्वमुक्तम् ।

ಹೀಗೆ ಸಂಜ್ಞಾರ್ಥದಲ್ಲಿ ಸಿದ್ಧವಾದ 'ಸಂಖ್ಯಾ' ಎಂಬ ಶಬ್ದವು 'ಷ್ಣಾಂತಾಃ ಷಟ್' ಎಂಬ ಸೂತ್ರದಲ್ಲಿ 'ಸಂಜ್ಞಾ' ಪರವಾಗಿದೆ. ಏಕೆಂದರೆ 'ಷ್ಣಾಂತಾ' ಎಂಬ ಪ್ರಯೋಗವು ಸ್ತ್ರೀಲಿಂಗದಲ್ಲಿ ಇರುವುದರಿಂದ ಹಿಂದೆ ಪ್ರಸಕ್ತವಾದ ಸಂಖ್ಯಾ ಪದವನ್ನೇ ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ಷಕಾರಾಂತವಾದ ಮತ್ತು ಣಕಾರಾಂತವಾದ ಯಾವ ಸಂಖ್ಯಾವಾಚಕವಾದ ಪದವಿದೆಯೋ, ಅದಕ್ಕೆ ಷಟ್ ಎಂಬ ಸಂಜ್ಞೆಯು ಬರುತ್ತದೆಂದು ಸೂತ್ರದ ಅರ್ಥವಾಗುತ್ತದೆ. ಆದ್ದರಿಂದಲೇ 'ಷಟ್‌ಪಂಚ' ಇತ್ಯಾದಿ ಸ್ಥಳದಲ್ಲಿ 'ಷಡ್‌ಭ್ಯೋ ಲುಕ್' ಎಂಬ ಸೂತ್ರದಿಂದ ವಿಹಿತವಾದ ಲುಕ್ ಸಂಜ್ಞೆಯು ಸಿದ್ಧವಾಗುತ್ತದೆ. ಆದ್ದರಿಂದ ಯಾವ ಸಂಖ್ಯಾ ಎಂಬ ಪದವು 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿ 'ಸಂಜ್ಞಾ' ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆಯೋ, ಅದೇ 'ಸಂಖ್ಯಾ' ಎಂಬ ಪದವು 'ಷ್ಣಾಂತಾಃಷಟ್' ಎಂಬ ಸೂತ್ರದಲ್ಲಿ ಅನುವೃತ್ತವಾದಾಗ, ಸಂಜ್ಞಿ ಆದ ಷಟ್ ಪಂಚ ಮೊದಲಾದ ಸಂಖ್ಯೆಗಳನ್ನು ಹೇಳುವಂತಹ ಶಬ್ದಗಳಲ್ಲಿಯೇ ಪ್ರಯೋಗಿಸಲ್ಪಟ್ಟಿದೆ. ಹೀಗೆ ಒಂದೇ ಪದವು ಸಂಜ್ಞಾ ಹಾಗೂ ಸಂಜ್ಞಿ ಪರವಾಗಿರುವುದು ಕಂಡಿದೆ.

## ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः** – उक्तं च महाभाष्ये ''इदं प्रकृतमुत्तरत्रानुवर्तिष्यते । इदं वै संज्ञार्थम् । उत्तरत्र संज्ञिविशेषणेनार्थः'' इत्यादि ।

ಇದನ್ನೇ ಮಹಾಭಾಷ್ಯದಲ್ಲಿ ''ಇದಂ ಪ್ರಕೃತಮುತ್ತರಾತ್ರಾನುವರ್ತಿಷ್ಯತೇ । ಇದಂ ವೈ ಸಂಜ್ಞಾರ್ಥಮ್ । ಉತ್ತರತ್ರ ಸಂಜ್ಞಿವಿಶೇಷಣೇನಾರ್ಥಃ' 'ಪ್ರಕೃತವಾದ ಸಂಖ್ಯಾ ಎಂಬುದೇ 'ಷ್ಣಾಂತಾಃ ಷಟ್' ಎಂಬ ಸೂತ್ರದಲ್ಲಿ ಅನುವೃತ್ತವಾಗುತ್ತದೆ. 'ಬಹುಗಣವತುಡತಿ ಸಂಖ್ಯಾ' ಎಂಬಲ್ಲಿ ಸಂಜ್ಞಾರ್ಥಕವಾಗಿದೆ. ಮುಂದೆ 'ಷ್ಣಾಂತಾಃ ಷಟ್' ಎಂಬಲ್ಲಿ ಸಂಜ್ಞಿಯಾದ ಸಂಖ್ಯಾವಾಚಕವಾದ ಶಬ್ದಗಳಲ್ಲಿ ವಿಶೇಷಣವಾಗಿದೆ'' ಎಂದು ಹೇಳಿದ್ದಾರೆ.

**प्रकाशः** – ननु नेदं सकृत् प्रत्युक्तम् । किं त्वनुवृत्तमिति चेत्तर्हि वैदिकशब्दोऽपि पुनरनुसंहितोऽर्थान्तरपरोऽस्तु । अविगीतमन्यं दृष्टान्तमाह – **षष्ठीति** ।।

ಈ ದೃಷ್ಟಾಂತವೇ ಸರಿಯಿಲ್ಲ. ಏಕೆಂದರೆ ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದವು ಅನೇಕಾರ್ಥವನ್ನು ನೀಡುತ್ತದೆನ್ನಲು ವ್ಯಾಕರಣದ ಈ ದೃಷ್ಟಾಂತವನ್ನು ನೀಡಿದ್ದೀರಿ. ಆದರೆ ಸಂಖ್ಯಾ ಶಬ್ದವು ಒಮ್ಮೆ ಪ್ರಯುಕ್ತವೇ ಆಗಿಲ್ಲ. 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿ ಪ್ರಯುಕ್ತವಾದ ಶಬ್ದವು 'ಷ್ಣಾಂತಾಃ ಷಟ್' ಎಂಬ ಸೂತ್ರದಲ್ಲಿ ಪುನಃ ಅನುವೃತ್ತವಾಗಿದೆ. ಆದ್ದರಿಂದ ಇದು ವಿಷಮದೃಷ್ಟಾಂತವಲ್ಲವೇ?

ಹೀಗೆ ಪ್ರಶ್ನಿಸಿದರೆ ವೈದಿಕಶಬ್ದಗಳಲ್ಲಿಯೂ ಪುನಃ ಅನುಸಂಹಿತವಾದ ಶಬ್ದಗಳು ಅರ್ಥಾಂತರಪರವಾಗಲಿ ಎಂದು ಉತ್ತರಿಸುತ್ತೇವೆ. ಅಥವಾ ಯಾವುದೇ ವಿವಾದವಿಲ್ಲದ ಮತ್ತೊಂದು ವ್ಯಾಕರಣದ ದೃಷ್ಟಾಂತವನ್ನೇ 'ಷಷ್ಠೀ ಶೇಷೇ' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

**प्रकाशः** – द्वितीयाध्यायतृतीयपादे ''षष्ठी शेषे'' इति सूत्रम् । ''कारकप्रातिपदिकार्थव्यतिरिक्तस्वस्वामिभावसम्बन्धादिश्शेषः । तस्मिन् शेषे षष्ठी स्यात् । यद्वाऽप्रधानं शेषः । तेन द्वयोः पर्यायेण वा न स्यात् । राज्ञःपुरुष'' इति प्रक्रियाकौमुद्यां तस्य व्याख्यातत्वादिति भावः ।

ಎರಡನೆಯ ಅಧ್ಯಾಯದ ಮೂರನೆಯ ಪಾದದಲ್ಲಿ 'ಷಷ್ಠೀ ಶೇಷೇ' ಎಂಬ ಸೂತ್ರವು ಪ್ರಸಕ್ತವಾಗಿದೆ. ಇಲ್ಲಿರುವ 'ಶೇಷೇ' ಎಂಬ ಪದವು ಕಾರಕಪ್ರಾತಿಪದಿಕಾರ್ಥಕ್ಕಿಂತ ವ್ಯತಿರಿಕ್ತವಾದ ಸ್ವಸ್ವಾಮಿಭಾವಸಂಬಂಧ ಮೊದಲಾದ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸ್ವಸ್ವಾಮಿಭಾವಸಂಬಂಧಾದಿಗಳು ವಿವಕ್ಷಿತವಾದಾಗ ಷಷ್ಠೀ ವಿಭಕ್ತಿ ಬರುತ್ತದೆಂದು ಇದರ ಅಭಿಪ್ರಾಯ. ಅಥವಾ 'ಶೇಷೇ' ಎಂಬ ಪದಕ್ಕೆ ಅಪ್ರಧಾನ ಎಂದರ್ಥ. 'ಶೇಷೇ' ಎಂಬ ಒಂದೇ ಪದಕ್ಕೆ ಸ್ವಸ್ವಾಮಿಭಾವಸಂಬಂಧ ಎಂಬರ್ಥವನ್ನು ಅಪ್ರಧಾನ ಎಂಬರ್ಥವನ್ನೂ ಹೇಳಿದರೆ ಯಾವ ಸಂದರ್ಭದಲ್ಲಿ ಯಾವುದನ್ನು ವಿವಕ್ಷಿಸಬೇಕೆಂದು ತಿಳಿಯುವುದಿಲ್ಲ. ಪರ್ಯಾಯವ್ಯವಸ್ಥೆಯಿಂದ ತಿಳಿಯುವುದು ತಪ್ಪಾಗುತ್ತದೆ. ಈ ಸಂದರ್ಭದಲ್ಲಿ ಪ್ರಕ್ರಿಯಾಕೌಮುದಿಯಲ್ಲಿ ಇದಕ್ಕೆ ಉತ್ತಮವಾದ ಸಮಾಧಾನವನ್ನು ನೀಡಿದ್ದಾರೆ. 'ರಾಜ್ಞಃ ಪುರುಷಃ' ಎಂಬಲ್ಲಿ ಸ್ವಸ್ವಾಮಿಭಾವಸಂಬಂಧವನ್ನು ವಿವಕ್ಷಿಸಿ ಷಷ್ಠೀವಿಭಕ್ತಿಯನ್ನು

ಹೇಳುವುದಾದರೆ ರಾಜನಿರೂಪಿತವಾದ ಸಂಬಂಧವು ಪುರುಷನಲ್ಲಿ, ಪುರುಷನಿರೂಪಿತವಾದ ಸಂಬಂಧವು ರಾಜನಲ್ಲಿ ಪರಸ್ಪರವಾಗಿರುವುದರಿಂದ 'ರಾಜ್ಞಃ ಪುರುಷಃ' ಎಂದು ಹೇಳಬೇಕೋ? ಅಥವಾ 'ಪುರುಷಃ ರಾಜಾ' ಎಂದು ಹೇಳಬೇಕೋ? ಎಂಬ ಗೊಂದಲವು ಪ್ರಾಪ್ತವಾಗುತ್ತದೆ. ಆ ಸಂದರ್ಭದಲ್ಲಿ 'ಶೇಷೇ' ಎಂಬ ಪದಕ್ಕೆ ಅಪ್ರಧಾನ ಎಂಬರ್ಥವನ್ನು ವಿವಕ್ಷಿಸಿ ಅಪ್ರಧಾನವಾದದ್ದಕ್ಕೆ ಷಷ್ಠೀವಿಭಕ್ತಿಯು ಬರುತ್ತದೆಂದು ವಿಧಾನ ಮಾಡಿದ್ದಾರೆ. 'ರಾಜಪುರುಷಃ ಆಗತಃ' ಎಂದು ಹೇಳಿದಾಗ ಪುರುಷನೇ ಪ್ರಧಾನವಾಗಿದ್ದಾನೆ. ಪುರುಷನಲ್ಲಿ ವಿಶೇಷಣನಾದ ರಾಜ ಅಪ್ರಧಾನ. ಹೀಗೆ ಅಪ್ರಧಾನವಾದ ರಾಜಶಬ್ದದ ಮೇಲೆಯೇ ಷಷ್ಠೀವಿಭಕ್ತಿಯು ಬರುತ್ತದೆ ಹೊರತು, ಪ್ರಧಾನವಾದ ಪುರುಷಶಬ್ದದ ಮೇಲೆ ಷಷ್ಠೀವಿಭಕ್ತಿಯು ಬರುವುದಿಲ್ಲ. ಆದ್ದರಿಂದ 'ಶೇಷೇ' ಎಂಬ ಪದಕ್ಕೆ ಸ್ವಸ್ವಾಮ್ಯಭಾವಸಂಬಂಧವನ್ನು ವಿವಕ್ಷಿಸಿ ಅದರ ಮೇಲೆ ಬರುವಂತಹ ಆಶಂಕೆಗೆ ಪುನಃ ಅದೇ 'ಶೇಷೇ' ಎಂಬ ಪದವು ಉತ್ತರವನ್ನು ನೀಡಿದೆ. ಒಮ್ಮೆ ಪ್ರಯುಕ್ತವಾದ 'ಶೇಷೇ' ಎಂಬ ಪದವೇ ಎರಡು ಅರ್ಥವನ್ನು ನೀಡುತ್ತಿರುವುದು 'ಷಷ್ಠೀ ಶೇಷೇ' ಎಂಬ ಸೂತ್ರದಲ್ಲಿ ಕಾಣಸುತ್ತಿದೆ. ಅದರಂತೆ 'ಜ್ಯೋತಿರಾದಿ' ಶಬ್ದಗಳೂ ಕೂಡ ಒಮ್ಮೆ ಪ್ರಯೋಗಿಸಲ್ಪಟ್ಟರೂ ಅನೇಕಾರ್ಥವನ್ನು ನೀಡಬಹುದು.

**प्रकाशः** – भाष्यादौ द्व्यर्थत्वस्यास्फुटत्वादाह – **हलन्त्यमित्यत्रेति** ।। प्रथमस्य तृतीयपादे ''हलन्त्यम्'' इति सूत्रम् ।

ಪ್ರಕ್ರಿಯಾಕೌಮುದಿಯಲ್ಲಿ 'ಷಷ್ಠೀ ಶೇಷೇ' ಎಂಬ ಸೂತ್ರದಲ್ಲಿರುವ 'ಶೇಷೇ' ಎಂಬ ಪದಕ್ಕೆ ಸ್ವಸ್ವಾಮ್ಯಭಾವಸಂಬಂಧ ಹಾಗೂ ಅಪ್ರಧಾನ ಎಂಬೆರಡರ್ಥವನ್ನು ವಿವಕ್ಷಿಸಿರಬಹುದು. ಆದರೆ ಮಹಾಭಾಷ್ಯದಲ್ಲಿ ಹೀಗೆ ಎರಡರ್ಥಗಳನ್ನು ಹೇಳಿರುವುದು ಸ್ಪಷ್ಟವಾಗಿ ಕಾಣಸುತ್ತಿಲ್ಲವಲ್ಲ ? ಎಂಬ ಆಶಂಕೆಗೆ ಮತ್ತೊಂದು ಉದಾಹರಣೆಯನ್ನು ನೀಡುತ್ತಿದ್ದಾರೆ 'ಹಲಂತ್ಯಮ್' ಇತ್ಯಾದಿಯಾಗಿ. ಪ್ರಥಮಾಧ್ಯಾಯದ ಮೂರನೆಯ ಪಾದದಲ್ಲಿ 'ಹಲಂತ್ಯಮ್' ಎಂಬ ಸೂತ್ರವು ಪ್ರಸಕ್ತವಾಗಿದೆ.

**प्रकाशः** – तस्यार्थः । धातुप्रभृतेर्वर्णसमुदायस्य यदन्त्यं हल् तदित्संज्ञकं भवतीति । 'हृञ् हरणे' इत्यादावनुबन्धलोपस्तस्य प्रयोजनम् ।

'ಹಲಂತ್ಯಮ್' ಎಂಬ ಸೂತ್ರದ ಅರ್ಥ ಹೀಗಿದೆ - ಧಾತು, ಸೂತ್ರ ಮೊದಲಾದ ವರ್ಣಸಮುದಾಯಗಳಲ್ಲಿ ಯಾವ ಕೊನೆಯ ಹಲಕ್ಷರ ಇರುತ್ತದೋ, ಅದಕ್ಕೆ ಇತ್ ಸಂಜ್ಞೆ ಬರುತ್ತದೆ. ಉದಾಹರಣೆ - 'ಹೃಞ್ ಹರಣೇ' ಎಂಬಲ್ಲಿ ಞ್‌ಕಾರವು ಧಾತುವಿನ ಕೊನೆಯ ಹಲಕ್ಷರ ಆಗಿದೆ. ಅದಕ್ಕೆ ಈ ಸೂತ್ರವು 'ಇತ್' ಸಂಜ್ಞೆಯನ್ನು ಹೇಳಿದಾಗ ಮುಂದೆ 'ತಸ್ಯಲೋಪಃ' ಎಂಬ ಸೂತ್ರದಿಂದ ಅದಕ್ಕೆ ಲೋಪವು ಪ್ರಾಪ್ತವಾಗುತ್ತದೆ. ಇದು ಸೂತ್ರದ ಪ್ರಯೋಜನ.

**प्रकाशः** – तत्र ''शषसर्, हल्'' इत्यत्र यो लकारस्तस्येत्संज्ञायां सत्यां ''आदिरन्त्येन सहेता'' इत्यनेन ''हयवरट्'' इत्यत्रस्थाद्यहकारस्य हलिति लकारेण हलिति प्रत्याहार उपपद्यते । सति च प्रत्याहारे ''लण्'' इत्यत्र लकारस्य

**हल्त्वात्तस्यैव ''शषसर्, हल्'' इत्यत्रान्ते निर्दिष्टत्वादित्संज्ञा तदाश्रयश्च प्रत्याहार इतीतरेतराश्रयत्वाद् हलिति प्रत्याहारानुपपत्तिमाशङ्क्य**

'ಹಲಂತ್ಯಮ್' ಎಂಬ ಸೂತ್ರಕ್ಕೆ ಮೇಲೆ ಹೇಳಿದ ಅರ್ಥವನ್ನು ವಿವಕ್ಷಿಸಿದರೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಅದು ಹೀಗೆ - 'ಶಷಸರ್' 'ಹಲ್' ಎಂಬ ಹದಿನಾಲ್ಕು ಸೂತ್ರಗಳ ಕೊನೆಯಲ್ಲಿ 'ಹಲ್' ಎಂಬ ಸೂತ್ರವು ಕೇಳಿಸುತ್ತಿದೆ. ಈ ಸೂತ್ರದಲ್ಲಿರುವ ಲಕಾರಕ್ಕೆ 'ಇತ್' ಸಂಜ್ಞೆಯು ಪ್ರಾಪ್ತವಾದರೆ 'ಇತ್' ಸಂಜ್ಞೆಯನ್ನು ಹೊಂದಿರುವ ಲಕಾರದಿಂದ ಕೂಡಿರುವಂತಹ 'ಹಯವರಟ್' ಎಂಬ ಸೂತ್ರದ ಪ್ರಥಮಾಕ್ಷರವಾದ ಹಕಾರವು ಪ್ರತ್ಯಾಹಾರ ಹೊಂದುತ್ತದೆ. 'ಆದಿರಂತ್ಯೇನ ಸಹೇತ' ಎಂಬ ಸೂತ್ರವು, 'ಹಲ್' ಎಂಬ ಸೂತ್ರದಲ್ಲಿರುವ ಲಕಾರದ ಜೊತೆಗೆ ಕೂಡಿರುವ 'ಹಯವರಟ್' ಎಂಬಲ್ಲಿರುವ ಹಕಾರಕ್ಕೆ ಪ್ರತ್ಯಾಹಾರವನ್ನು ಸಂಪಾದನೆ ಮಾಡುತ್ತದೆ. ಈ ಪ್ರತ್ಯಾಹಾರವು ಸಿದ್ಧವಾಗಬೇಕಾದರೆ ಮೊದಲು 'ಹಲ್' ಎಂಬ ಸೂತ್ರದಲ್ಲಿರುವ ಲಕಾರಕ್ಕೆ 'ಇತ್' ಸಂಜ್ಞೆಯು ಬರಬೇಕು. ಆದರೆ ಪ್ರತ್ಯಾಹಾರ ಸಿದ್ಧವಾದರೆ ಮಾತ್ರ 'ಲಣ್' ಎಂಬ ಸೂತ್ರದಲ್ಲಿರುವ ಲಕಾರವು 'ಹಲ್' ಪ್ರತ್ಯಾಹಾರದಲ್ಲಿ ಸೇರುವ ಕಾರಣ ಅಂತಹ ಲಕಾರವೇ 'ಹಲ್' ಎಂಬ ಹದಿನಾಲ್ಕು ಸೂತ್ರದ ಕೊನೆಯಲ್ಲಿರುವ ಲಕಾರವಾಗಿದೆ. ಆದ್ದರಿಂದ 'ಹಲಂತ್ಯಮ್' ಎಂಬ ಸೂತ್ರದಿಂದ 'ಇತ್' ಸಂಜ್ಞೆಯು ಸಿದ್ಧವಾಗುತ್ತದೆ. ಹಾಗಾಗಿ 'ಆದಿರಂತ್ಯೇನ ಸಹೇತ' ಎಂಬ ಸೂತ್ರದಿಂದ 'ಹಲ್' ಎಂಬುದು ಪ್ರತ್ಯಾಹಾರವೆಂದು ಸಿದ್ಧವಾದರೆ, ಹದಿನಾಲ್ಕು ಸೂತ್ರದ ಕೊನೆಯ ಲಕಾರಕ್ಕೆ 'ಇತ್' ಸಂಜ್ಞೆಯು ಸಿದ್ಧವಾಗುತ್ತದೆ. ಹದಿನಾಲ್ಕು ಸೂತ್ರದ ಕೊನೆಯ ಲಕಾರಕ್ಕೆ 'ಇತ್' ಸಂಜ್ಞೆಯು ಸಿದ್ಧವಾದರೆ ಮಾತ್ರ 'ಆದಿರಂತ್ಯೇನ ಸಹೇತ' ಎಂಬ ಸೂತ್ರದಿಂದ ಪ್ರತ್ಯಾಹಾರವು ಸಿದ್ಧವಾಗುತ್ತದೆ. ಹೀಗೆ ಅನ್ಯೋನ್ಯಾಶ್ರಯದೋಷವು ಬರುವುದರಿಂದ 'ಹಲಂತ್ಯಮ್' ಎಂಬ ಸೂತ್ರದ ಅರ್ಥವನ್ನು ತಿಳಿಯುವುದೇ ಕಠಿಣವಾಗುತ್ತದೆ.

**प्रकाशः – समाहितं भाष्ये ''एकशेषनिर्देशोऽयम् । हल् च हल् च हल् । हलन्त्यमित्संज्ञं भवति'' इति कैयटे च ''हस्य ल् इत्येकस्तत्पुरुषः । द्वितीयः प्रत्याहारः'' इत्युक्तम् । वृत्तौ च ''हस्य ल् हलिति । द्वितीयं हल्ग्रहणं तन्त्रेणोपात्तं द्रष्टव्यम्'' इत्यादि ।**

ಈ ಮೇಲಿನ ಅನ್ಯೋನ್ಯಾಶ್ರಯದೋಷಕ್ಕೆ ಮಹಾಭಾಷ್ಯದಲ್ಲಿ ಹೇಳಲ್ಪಟ್ಟ ಸಮಾಧಾನ ಹೀಗಿದೆ - 'ಏಕಶೇಷನಿರ್ದೇಶೋಽಯಮ್ । ಹಲ್ ಚ ಹಲ್ ಚ ಹಲ್ । ಹಲಂತ್ಯಮಿತ್ ಸಂಜ್ಞಂ ಭವತಿ' ಹಲಂತ್ಯಮ್ ಎಂಬ ಸೂತ್ರದಲ್ಲಿ ಶ್ರುತವಾದ 'ಹಲ್' ಎಂಬ ಪದವು ಏಕಶೇಷನಿರ್ದಿಷ್ಟವಾಗಿದೆ. 'ಹಲ್ ಚ ಹಲ್ ಚ ಹಲ್' ಎಂದು ಏಕಶೇಷಸಮಾಸವನ್ನು ಮಾಡಬೇಕು. ಕೈಯಟದಲ್ಲಿಯೂ ಕೂಡ 'ಹಸ್ಯ ಲ್ ಇತ್ಯೇಕಃ ತತ್ಪುರುಷಃ । ದ್ವಿತೀಯಃ ಪ್ರತ್ಯಾಹಾರಃ' ಎಂದು ಈ ಏಕಶೇಷಕ್ಕೆ ವ್ಯಾಖ್ಯಾನವನ್ನು ಮಾಡಲಾಗಿದೆ. ಮೊದಲಿನ 'ಹಲ್' ಎಂಬ ಪದವು ಹದಿನಾಲ್ಕು ಸೂತ್ರದ ಕೊನೆಯಲ್ಲಿರುವ ಹಕಾರದ ಪದದಲ್ಲಿರುವ ಲಕಾರ ಎಂಬರ್ಥವನ್ನು

ನೀಡುತ್ತದೆ. ತತ್ಪುರುಷಸಮಾಸವನ್ನು ಆಶ್ರಯಿಸಿ 'ಹಸ್ಯ ಲ್ ಹಲ್' ಎಂದರ್ಥವನ್ನು ಹೇಳಬೇಕು. ಎರಡನೆಯ 'ಹಲ್' ಎಂಬ ಪದವು ಪ್ರತ್ಯಾಹಾರ ರೂಪವಾಗಿದೆ. ಆವಾಗ 'ಹಲಂತ್ಯಮ್' ಎಂಬ ಸೂತ್ರದ ಅರ್ಥವನ್ನು ಹೀಗೆ ಹೇಳಿದಂತಾಗುತ್ತದೆ. ಹದಿನಾಲ್ಕು ಸೂತ್ರದ ಕೊನೆಯಲ್ಲಿರುವ 'ಹಲ್' ಎಂಬ ಪದದಲ್ಲಿರುವ ಲಕಾರಕ್ಕೆ 'ಇತ್' ಸಂಜ್ಞೆಯೂ ಬರುತ್ತದೆ. ಈ ಅರ್ಥದಲ್ಲಿ 'ಹಲ್' ಎಂಬುದು ಪ್ರತ್ಯಾಹಾರರೂಪವಾಗುವುದಿಲ್ಲ. ಇಂತಹ 'ಇತ್' ಸಂಜ್ಞೆಯನ್ನು ಹೊಂದಿರುವ ಲಕಾರದ ಜೊತೆಗೆ ಕೂಡಿರುವ ಹಕಾರವು ಪ್ರತ್ಯಾಹಾರರೂಪವಾಗಿದೆಯೆಂದು ಎರಡನೆಯ 'ಹಲ್' ಎಂಬ ಪದವು ಹೇಳುತ್ತಿದೆ. ಆವಾಗ ಉಪದೇಶದ ಕೊನೆಯಲ್ಲಿರುವ ಎಲ್ಲಾ ಹಲಕ್ಷರಗಳಿಗೂ 'ಇತ್' ಸಂಜ್ಞೆಯು ಈ ಸೂತ್ರದಿಂದ ಸಿದ್ಧವಾಗುತ್ತದೆ.

**प्रकाशः** – तथा च हल्शब्दस्य सकृत्प्रयुक्तस्य ''शषसर्, हल्'' इत्यत्र हकार-समीपस्थतत्परलकारार्थत्वं अज्व्यतिरिक्तहल्प्रत्याहारपतितहकारादिसर्वव्यञ्जनार्थत्वं च दृष्टमिति प्रकृतेऽपि तथेत्यर्थः ।

ಹೀಗೆ 'ಹಲಂತ್ಯಮ್' ಎಂಬ ಸೂತ್ರದಲ್ಲಿ ಒಮ್ಮೆ ಮಾತ್ರ ಪ್ರಯೋಗಿಸಲ್ಪಟ್ಟ 'ಹಲ್' ಶಬ್ದವು ಎರಡರ್ಥವನ್ನು ನೀಡುತ್ತಿದೆ. 'ಶಷಸರ್, ಹಲ್' ಎಂಬ ಹಕಾರದ ಪರದಲ್ಲಿ ಉಚ್ಚರಿಸಲ್ಪಟ್ಟ ಲಕಾರ ಎಂಬರ್ಥವನ್ನು ಒಮ್ಮೆ ಹೇಳಿ, ಮತ್ತೊಮ್ಮೆ ಅಂತ್ಯಾಕ್ಷರಗಳಿಗಿಂತ ವ್ಯತಿರಿಕ್ತವಾದ ಹಲ್ ಪ್ರತ್ಯಾಹಾರದಲ್ಲಿ ಸೇರಿರುವ ಹಕಾರವೇ ಮೊದಲಾದ ಎಲ್ಲಾ ವ್ಯಂಜನಾಕ್ಷರಗಳನ್ನು ಹೇಳುತ್ತಿದೆ. ಇದರಂತೆ ಪ್ರಕೃತದಲ್ಲಿಯೂ ಒಮ್ಮೆ ಪ್ರಯೋಗಿಸಲ್ಪಟ್ಟ ಜ್ಯೋತಿ ಮೊದಲಾದ ಶಬ್ದಗಳು ಅನೇಕಾರ್ಥಗಳನ್ನು ಪ್ರತಿಪಾದನೆ ಮಾಡಬಹುದು.

**गुरुराजीयम्** – अनेकार्थत्वस्यान्याय्यत्वं वदन् प्रष्टव्यः । किं लोकेऽदर्शनाद्वैकस्यानेकार्थत्वमन्याय्यं शास्त्रान्तरेऽदर्शनाद्वा वेदेऽदर्शनाद्वा । नाद्य इत्याह – **राजेति** ।। अत्र राजशब्देन चन्द्रविवक्षायां कुवलयशब्देनोत्पलं विवक्षितम्। भूपतिविवक्षायां कुशब्देन पृथिवी, तस्याः वलयं मण्डलं कुवलयपदेन विवक्षितमिति बोध्यम् । ननु च तत्र श्लिष्टशब्दत्वमेवानेकार्थत्वे प्रयोजकम् । तथा च न तद्दृष्टान्तेन ज्योतिरादिशब्दानामनेकार्थत्वसिद्धिरित्यतो दृष्टान्तान्तरमाह – **नानार्थेति** ।। नापि सकृत्प्रयुक्तस्यानेकार्थत्वं शास्त्रान्तरेऽदृष्टमिति द्वितीय इत्याह – **बहुगणेति** ।। ननु च तत्र यथाश्रुतस्य संख्याशब्दस्य संज्ञार्थत्वं अनुवृत्तस्यैव संख्यार्थत्वं न त्वेकस्यैव शब्दस्यानेकार्थत्व एतद्दृष्टान्तीकरणमित्यत आह – **षष्ठी शेष इत्यत्रेति** ।। नन्वत्रापि शेषशब्दे यदा कर्मादि व्यतिरिक्तार्थत्वं न तदोपसर्जनार्थत्वम् । यदा चोपसर्जनार्थत्वं न तदा कर्मादिव्यतिरिक्तार्थत्वम् । तत्र विकल्पाभ्युपगमादुभयार्थता सम्भवति । न चात्र विकल्पाभ्युपगमः सिद्धान्तिन इष्ट

इत्यत आह – **हलन्त्यमिति** ।। हलन्त्यमित्यनेनेत्संज्ञायामादिरन्त्येन सहेतेत्यनेन प्रत्याहारत्वसिद्धिः। तेन च प्रत्याहारत्वे सिद्धे हलन्त्यमितीत्संज्ञासिद्धिरित्यन्योन्याश्रयभयादाह – **हल्शब्द इति** ।।



'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿರುವ ಜ್ಯೋತಿರಾದಿಶಬ್ದಗಳಿಗೆ ಪರಮಮುಖ್ಯವೃತ್ತಿಯಿಂದ ಪರಮಾತ್ಮಪರವಾಗಿ ಅರ್ಥೈಸಬೇಕು. ಮುಖ್ಯವೃತ್ತಿಯಿಂದ ಯಜ್ಞಾದಿಕರ್ಮ ಪರವಾಗಿ ಅರ್ಥೈಸಬೇಕೆಂದು ಸಮರ್ಥಿಸಲಾಯಿತು. ಒಮ್ಮೆ ಪ್ರಯೋಗಿಸಲ್ಪಟ್ಟ ಜ್ಯೋತಿರಾದಿಶಬ್ದಗಳು ಹೀಗೆ ಅನೇಕಾರ್ಥವನ್ನು ನೀಡುತ್ತವೆ. ಇದು ನ್ಯಾಯವಿರುದ್ಧವಲ್ಲ. ಏಕೆಂದರೆ 'ರಾಜ ಕುವಲಯೋಲ್ಲಾಸಕಾರಿ' ಇತ್ಯಾದಿ ಲೌಕಿಕ ದೃಷ್ಟಾಂತಗಳಲ್ಲಿ ಶ್ಲೇಷಾಲಂಕಾರವನ್ನು ವಿವಕ್ಷಿಸಿ, 'ರಾಜ' ಎಂಬ ಒಂದೇ ಪದಕ್ಕೆ ಚಂದ್ರ ಹಾಗೂ ಭೂಪತಿ ಎಂಬರೆಡರ್ಥವನ್ನು ಎಲ್ಲರೂ ವಿವಕ್ಷಿಸುತ್ತಾರೆ. ಅದರಂತೆ ವ್ಯಾಕರಣಶಾಸ್ತ್ರದಲ್ಲಿಯೂ 'ಬಹುಗಣವತುಡತಿ ಸಂಖ್ಯಾ' ಎಂಬ ಸೂತ್ರದಲ್ಲಿರುವ ಸಂಖ್ಯಾ ಎಂಬ ಪದಕ್ಕೆ ಸಂಜ್ಞಾ ಹಾಗೂ ಸಂಜ್ಞಿ ಎಂಬೆರಡರ್ಥವನ್ನು ವಿವಕ್ಷಿಸಿದ್ದಾರೆ. 'ಷಷ್ಠೀ ಶೇಷೇ' ಎಂಬ ಸೂತ್ರದಲ್ಲಿರುವ 'ಶೇಷೇ' ಎಂಬ ಪದಕ್ಕೆ ಕರ್ಮ ಕಾರಕ ಮೊದಲಾದ ವಿಭಕ್ತ್ಯರ್ಥಕ್ಕಿಂತ ಅತಿರಿಕ್ತವಾದ ಸ್ವಸ್ವಾಮ್ಯಭಾವಸಂಬಂಧ ಎಂಬರ್ಥದ ಜೊತೆಗೆ ಅಪ್ರಧಾನ ಎಂಬರ್ಥವನ್ನೂ ಕೂಡ ವಿವಕ್ಷಿಸಿದ್ದಾರೆ. 'ಹಲಂತ್ಯಮ್' ಎಂಬ ಸೂತ್ರದಲ್ಲಿ 'ಹಲ್' ಎಂಬ ಶಬ್ದಕ್ಕೆ ಹಕಾರದ ಪರದಲ್ಲಿರುವ ಲಕಾರ ಎಂಬರ್ಥವನ್ನು ವಿವಕ್ಷಿಸುವುದರ ಜೊತೆಗೆ ಅಧ್ಯಾಹಾರ ಎಂಬರ್ಥವನ್ನೂ ಕೂಡ ವಿವಕ್ಷಿಸಿದ್ದಾರೆ. ಆದ್ದರಿಂದ ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದಗಳಿಗೆ ಅನೇಕಾರ್ಥತ್ವವನ್ನು ಒಪ್ಪುವುದು ವ್ಯಾಕರಣಶಾಸ್ತ್ರಕ್ಕೆ ಸಮ್ಮತವಾಗಿದೆ.





## ಅಪೌರುಷೇಯವಾದ ವೇದದಲ್ಲಿ ಅನೇಕಾರ್ಥತ್ವವಿರುವುದು ಕಂಡಿದೆ

### तात्पर्यचन्द्रिका

**''अग्निर्मूर्धा'' इति मन्त्रस्य श्रौत आग्नेययागे स्मार्तेऽगारकजपहोमादौ च,**

ಅನುವಾದ - 'ಅಗ್ನಿರ್ಮೂರ್ಧಾ' ಎಂಬ ಮಂತ್ರವನ್ನು ದರ್ಶಪೂರ್ಣಮಾಸ ಯಾಗದ ಆಗ್ನೇಯಯಾಗದಲ್ಲಿ ಮೊದಲು ಉಚ್ಚಾರ ಮಾಡಬೇಕೆಂದು ಬ್ರಾಹ್ಮಣವಾಕ್ಯವು ವಿಧಿಸುತ್ತಿದೆ. ಆದರೆ ಇದೇ ಮಂತ್ರವನ್ನು ಅಂಗಾರಕನನ್ನು ಕುರಿತು ಮಾಡುವ ಜಪ, ಹೋಮಾದಿಗಳಲ್ಲಿ ವಿನಿಯೋಗಿಸಬೇಕೆಂದು ಶ್ರುತಿಯು ಹೇಳುತ್ತಿದೆ. ಆದ್ದರಿಂದ 'ಅಗ್ನಿರ್ಮೂರ್ಧಾ' ಎಂಬ ಒಂದೇ ಮಂತ್ರಕ್ಕೆ ಅಗ್ನಿ ಪರವಾಗಿ ಮತ್ತು ಅಂಗಾರಕ ಪರವಾಗಿ ಅರ್ಥವನ್ನು ಹೇಳಬೇಕು.

ಪರಿಪೂರ್ಣಚಂದ್ರಿಕಾ

**''पवित्रं ते'' इति मन्त्रस्येति पवित्रेष्टौ दशापवित्रादौ च,**

ಧಾರಣೆ ಮಾಡಿದ ಪವಿತ್ರವು ನಾಶವಾದಾಗ ಪ್ರಾಯಶ್ಚಿತ್ತ ಯಾಗದಲ್ಲಿ 'ಪವಿತ್ರಂ ತೇ' ಎಂಬ ಮಂತ್ರವನ್ನು ವಿನಿಯೋಗ ಮಾಡಬೇಕೆಂದು ಬ್ರಾಹ್ಮಣವಾಕ್ಯವು ವಿಧಿಸುತ್ತಿದೆ. ಸೋಮರಸವನ್ನು ಸೋಸುವುದಕ್ಕಾಗಿ ದ್ರೋಣಕಲಶದ ಮೇಲೆ ಹಾಕಲ್ಪಟ್ಟ ದಶಾಪವಿತ್ರ ಎಂಬ ಬಟ್ಟೆಯ ವಿನಿಯೋಗದಲ್ಲಿಯೂ ಇದೇ ಮಂತ್ರವನ್ನು ಪಠಿಸಬೇಕೆಂದು ಆಶ್ವಲಾಯನ ಸೂತ್ರವು ಹೇಳುತ್ತಿದೆ. ಆದ್ದರಿಂದ 'ಪವಿತ್ರಂ ತೇ' ಎಂಬ ಒಂದೇ ಮಂತ್ರವು ಪವಿತ್ರೇಷ್ಟಿಯಲ್ಲಿ ಹಾಗೂ ದಶಾಪವಿತ್ರದಲ್ಲಿ ಸಮನ್ವಯಗೊಳ್ಳುತ್ತದೆ.

**''आप्यायस्व'' इति मन्त्रस्य सौम्ये पत्नीसंयाजे सोमरसस्याप्यायने च विनियोगेन तत्तत्प्रकाशनायानेकार्थत्वस्य स्वीकार्यत्वाच्च ।**

'ಆಪ್ಯಾಯಸ್ವ' ಎಂಬ ಮಂತ್ರವನ್ನು ಸೋಮದೇವತಾಕವಾದ ಪತ್ನೀಸಂಯಾಜದಲ್ಲಿ ವಿನಿಯೋಗ ಮಾಡಬೇಕೆಂದು ಶ್ರುತಿಯು ಹೇಳುತ್ತಿದೆ. ಸೋಮರಸ ಆಪ್ಯಾಯನದಲ್ಲಿ ವಿನಿಯೋಗ ಮಾಡಬೇಕೆಂದು ಸೂತ್ರವು ಹೇಳುತ್ತಿದೆ. ಆದ್ದರಿಂದ ಒಂದೇ ಮಂತ್ರಕ್ಕೆ ಪತ್ನೀಸಂಯಾಜ ಪರವಾಗಿ ಸೋಮರಸ ಆಪ್ಯಾಯನ ಪರವಾಗಿ ವ್ಯಾಖ್ಯಾನ ಮಾಡಬೇಕೆಂದು ಹೇಳಿದಂತಾಗುತ್ತದೆ.

**''आयङ्गौः'' इति मन्त्रस्य ''आत्मदैवतं सौर्यं च'' इत्यनुक्रमणिकायां ''दिव्यं सुपर्णम्'' इति मन्त्रस्य ''अन्त्यासरस्वते सूर्याय'' इत्यनुक्रमणिकायां ''त्रयःकेशिन'' इति मन्त्रस्य ''त्रयःकेशिन इत्यग्निः सूर्यो वायुश्च'' इत्यनुक्रमणिकायामनेकार्थत्वोक्तेश्च ।**

ಋಗ್ವೇದದ ಅನುಕ್ರಮಣಿಕಾದಲ್ಲಿ 'ಆಯಂ ಗೌಃ' ಎಂಬ ಮಂತ್ರವನ್ನು 'ಆತ್ಮದೈವತಂ ಸೌರ್ಯಂ ಚ' ಎಂಬುದಾಗಿ ಪರಮಾತ್ಮಪರತ್ವವನ್ನು ಮತ್ತು ಸೂರ್ಯದೇವತಾಪರತ್ವವನ್ನು ಸಮರ್ಥಿಸಲಾಗಿದೆ. 'ದಿವ್ಯಂ ಸುಪರ್ಣಮ್' ಎಂಬ ಮಂತ್ರವನ್ನು 'ಅಂತ್ಯಾಸರಸ್ವತೇ ಸೂರ್ಯಾಯ' ಎಂಬುದಾಗಿ ಸರಸ್ವತೀದೇವತಾಕವಾದ ಯಾಗಪರತ್ವವನ್ನು ಸೂರ್ಯದೇವತಾಕ ಯಾಗಪರತ್ವವನ್ನು ಅನುಕ್ರಮಣಿಕಾದಲ್ಲಿ ಹೇಳಲಾಗಿದೆ. 'ದಿವ್ಯಂ ಸುಪರ್ಣಮ್' ಎಂಬ ಮಂತ್ರವನ್ನು 'ತ್ರಯಃಕೇಶಿನ' ಎಂಬ ಮಂತ್ರವನ್ನು, 'ತ್ರಯಃಕೇಶಿನ ಇತ್ಯಗ್ನಿಃ ಸೂರ್ಯೌ ವಾಯುಶ್ಚ' ಎಂಬ ಅನುಕ್ರಮಣಿಕಾದಲ್ಲಿ ಅಗ್ನಿ ಪರವಾಗಿ, ಸೂರ್ಯ ಪರವಾಗಿ, ವಾಯು ಪರವಾಗಿ ಹೇಳಲಾಗಿದೆ. ಹೀಗೆ ಒಂದೊಂದೇ ಮಂತ್ರಗಳಿಗೆ ಅನೇಕಾರ್ಥತ್ವವನ್ನು ಅನುಕ್ರಮಣಿಕಾದಲ್ಲಿ ಹೇಳಲಾಗಿದೆ.

**प्रकाशः –**

ननु भवतु पौरुषेये वक्तृविवक्षयाऽनेकार्थत्वं न त्वपौरुषेय इत्यत आह – अग्निरिति ॥

ವಿವರಣೆ - ಲೌಕಿಕದೃಷ್ಟಾಂತದಿಂದ ಹಾಗೂ ವ್ಯಾಕರಣಶಾಸ್ತ್ರದ ದೃಷ್ಟಾಂತದಿಂದ ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದವು ಅನೇಕಾರ್ಥವನ್ನು ನೀಡುತ್ತದೆಂದು ಈ ಹಿಂದೆ ಸಮರ್ಥಿಸಲಾಯಿತು. ಪೌರುಷೇಯ ಗ್ರಂಥಗಳಲ್ಲಿ ವಕ್ತೃವಿನ ವಿವಕ್ಷೆಯು ಅನೇಕಾರ್ಥಗಳಲ್ಲಿರುವುದರಿಂದ ಯುಕ್ತವಾಗಬಹುದು. ಆದರೆ ವಕ್ತೃವಿವಕ್ಷೆಯ ಅವಕಾಶವಿಲ್ಲದ ಅಪೌರುಷೇಯವಾದ ಶ್ರುತಿಗಳಲ್ಲಿ ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದಕ್ಕೆ ಅನೇಕಾರ್ಥವನ್ನು ಹೇಳುವುದು ನ್ಯಾಯಸಮ್ಮತವಾಗುವುದಿಲ್ಲವಲ್ಲವೇ? ಎಂಬ ಆಶಂಕೆಗೆ ಪ್ರಕೃತ 'ಅಗ್ನಿರ್ಮೂರ್ಧಾ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः –** ''मूर्धन्वती पुरोऽनुवाक्या भवति'' इति ब्राह्मणेनाग्नेये विनियोगः । ''अग्निर्मूर्धादिव इति मन्त्रं भौमाय कीर्तयेत् । उद् बुध्यस्वाग्न इति मन्त्रं सोमस्य सुताय वा'' इति स्मृत्या अङ्गारकजपादौ विनियोग इति ''अग्निर्मूर्धादिवः ककुत्पतिः पृथिव्या अयम् । अपां रेतांसि जिन्वति'' इति मन्त्रस्याग्न्यर्थत्वमङ्गारकार्थत्वं च यथा तथेत्यर्थः ।

'ಅಗ್ನಿರ್ಮೂರ್ಧಾ ದಿವಃ ಕಕುತ್ಪತಿಃ ಪೃಥಿವ್ಯಾ ಅಯಮ್ । ಅಪಾಂ ರೇತಾಂಸಿ ಜಿನ್ವತಿ' ಎಂಬ ಈ ಮಂತ್ರವು ವೇದದಲ್ಲಿ ಒಮ್ಮೆ ಮಾತ್ರ ಶ್ರುತವಾಗಿದೆ. ಆದರೆ ಅಗ್ನಿ ಹಾಗೂ ಅಂಗಾರಕ ಇಬ್ಬರ ಪರವಾಗಿಯೂ ಇದಕ್ಕೆ ಅರ್ಥೈಸಬೇಕು. ಏಕೆಂದರೆ 'ಮೂರ್ಧನ್ವತೀ ಪುರೋಽನುವಾಕ್ಯಾ ಭವತಿ' ಎಂಬುದಾಗಿ ಬ್ರಾಹ್ಮಣ ವಾಕ್ಯದಲ್ಲಿ ದರ್ಶಪೂರ್ಣಮಾಸಯಾಗದಲ್ಲಿ ಪ್ರಕೃತವಾಗುವ ಆಗ್ನೇಯ ಯಾಗದಲ್ಲಿ ಈ ಮಂತ್ರವನ್ನು ವಿಧಿಸಲಾಗಿದೆ. 'ಅಗ್ನಿರ್ಮೂರ್ಧಾ ದಿವಃ' ಇತ್ಯಾದಿ ಶ್ರುತಿಯಲ್ಲಿ ಮೂರ್ಧಾಶಬ್ದವು ಕೇಳಿಸುತ್ತಿರುವುದರಿಂದ ಇದನ್ನೇ ಬ್ರಾಹ್ಮಣವಾಕ್ಯವು 'ಮೂರ್ಧನ್ವತೀ' ಎಂದು ಕರೆಯುತ್ತಿದೆ. ಇಂತಹ ಮಂತ್ರವು 'ಪುರೋಽನುವಾಕ್ಯಾಯ ಭವತಿ' ಎಂದರೆ ಮೊಟ್ಟಮೊದಲು ಉಚ್ಚರಿಸಬೇಕು ಎಂದರ್ಥ. ಆಗ್ನೇಯಯಾಗದಲ್ಲಿ 'ಅಗ್ನಿರ್ಮೂರ್ಧಾ' ಎಂಬ ಮಂತ್ರವನ್ನು ಮೊದಲು ಉಚ್ಚರಿಸಬೇಕು ಎಂದು ಬ್ರಾಹ್ಮಣವಾಕ್ಯವು ವಿಧಿಸುತ್ತಿದೆ. ಆದರೆ

'ಅಗ್ನಿರ್ಮೂರ್ಧಾದಿವ ಇತಿ ಮಂತ್ರಂ ಭೌಮಾಯ ಕೀರ್ತಯೇತ್ ।
ಉದ್‌ಬುಧ್ಯಸ್ವಾಗ್ನ ಇತಿ ಮಂತ್ರ ಸೋಮಸ್ಯ ಸುತಾಯ ವಾ ॥''

'ಅಗ್ನಿರ್ಮೂರ್ಧಾದಿವ' ಎಂಬ ಮಂತ್ರವನ್ನು ಅಂಗಾರಕನನ್ನು ಕುರಿತು ಮಾಡುವ ಜಪದಲ್ಲಿ ಹೇಳಬೇಕು. 'ಉದ್‌ಬುಧ್ಯಸ್ವಾಗ್ನೇ' ಎಂಬ ಮಂತ್ರವನ್ನು ಚಂದ್ರನ ಮಗನಾದ ಬುಧನ ಜಪದ ಸಂದರ್ಭದಲ್ಲಿ ಹೇಳಬೇಕು

ಎಂಬ ಸ್ಮೃತಿ ಪ್ರಮಾಣವಿದೆ. ಆದ್ದರಿಂದ 'ಅಗ್ನಿರ್ಮೂರ್ಧಾ' ಎಂಬ ಮಂತ್ರವು ಅಂಗಾರಕ ಜಪದಲ್ಲಿ ವಿನಿಯೋಗ ಮಾಡಬೇಕೆಂಬುದು ಶ್ರುತಿಯ ಅಭಿಪ್ರಾಯವಾಗಿದೆ. ಆಗ್ನೇಯಯಾಗದಲ್ಲಿ ಇದನ್ನು ವಿನಿಯೋಗ ಮಾಡಿದಾಗ, ಅಗ್ನಿಯನ್ನೇ ಪ್ರತಿಪಾದನೆ ಮಾಡಬೇಕು. ಅಂಗಾರಕ ಜಪದಲ್ಲಿ ವಿನಿಯೋಗ ಮಾಡಿದಾಗ, ಅಂಗಾರಕನನ್ನೇ ಪ್ರತಿಪಾದನೆ ಮಾಡಬೇಕು. ಆದ್ದರಿಂದ ಒಮ್ಮೆ ಉಚ್ಚರಿಸಲ್ಪಟ್ಟ ಮಂತ್ರಕ್ಕೆ ಎರಡು ಅರ್ಥಗಳನ್ನು ವಿವಕ್ಷಿಸಬೇಕೆಂದು ಬ್ರಾಹ್ಮಣವಾಕ್ಯದಿಂದ ಹಾಗೂ ಸ್ಮೃತಿವಾಕ್ಯದಿಂದ ಸ್ಪಷ್ಟವಾಗಿ ತಿಳಿಯುತ್ತಿದೆ. ಅದರಂತೆ ಜ್ಯೋತಿರಾದಿ ಶಬ್ದಗಳಲ್ಲಿಯೂ ತಿಳಿಯಬೇಕು.

**प्रकाशः** – श्रौतार्थद्वयपरत्वे दृष्टान्तमाह – **पवित्रेष्टाविति** ।। ''यदि पवित्रं नश्येत् का तत्र प्रायश्चित्तिरिति सोऽग्नये पवित्रवतेऽष्टाकपालं पुरोडाशं निर्वपेत् । तस्य याज्यानुवाक्ये पवित्रं ते विततं ब्रह्मणस्पते तपोष्पवित्रं विततं दिवस्पत इति'' इति पवित्रनाशनिमित्तकेष्टौ ब्राह्मणेन विनियोगः । तथा ''तस्मिन्नुदीचीनदिशं पवित्रं वितन्वन्ति । पवित्रं ते विततं ब्रह्मणस्पत इति वितत्यमानमभिमन्त्रयते यजमान'' इत्यापस्तम्बसूत्रेणोद्गातृभिर्द्रोणकलशोपरि वितत्यमानपवित्रानुमन्त्रणे विनियोग इति ''पवित्रं ते विततं ब्रह्मणस्पते प्रभुर्गात्राणि पर्येषि विश्वतः'' इत्यादिमन्त्रस्य यथा पवित्रवदग्निदेवतार्थत्वं दशापवित्रार्थत्वं च तथेत्यर्थः ।

'ಅಗ್ನಿರ್ಮೂರ್ಧಾ' ಎಂಬ ಶ್ರುತಿಗೆ ಅಗ್ನಿಪರವಾದ ಅರ್ಥವನ್ನು ಬ್ರಾಹ್ಮಣವಾಕ್ಯವು ಹೇಳಿದರೆ ಅಂಗಾರಕ ಎಂಬ ಅರ್ಥಪರತ್ವವನ್ನು ಸ್ಮೃತಿಯು ಹೇಳುತ್ತಿದೆ. ಎರಡು ಅರ್ಥವನ್ನು ಶ್ರುತಿ ಹೇಳಿಲ್ಲವಲ್ಲ? ಎಂಬ ಪ್ರಶ್ನೆಗೆ ಶ್ರುತಿಯೇ ಒಂದು ಶಬ್ದಕ್ಕೆ ಎರಡರ್ಥವನ್ನು ಹೇಳುವ ದೃಷ್ಟಾಂತವೂ ಕೂಡ ಕಂಡಿದೆಯೆಂದು 'ಪವಿತ್ರೇಷ್ಟೌ' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ. 'ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ' ಎಂಬ ಮಂತ್ರವನ್ನು ಯಾವಾಗ ಎಲ್ಲಿ ವಿನಿಯೋಗಿಸಬೇಕು ಎಂಬ ಪ್ರಶ್ನೆಯು ಬಂದರೆ ಎರಡು ಸಂದರ್ಭದಲ್ಲಿ ವಿನಿಯೋಗಿಸಬೇಕೆಂದು ಶ್ರುತಿಯು ಉತ್ತರಿಸುತ್ತಿದೆ.

'ಯದಿ ಪವಿತ್ರಂ ನಶ್ಯೇತ್ ಕಾ ತತ್ರ ಪ್ರಾಯಶ್ಚಿತ್ತಿರಿತಿ ಸೋಽಗ್ನಯೇ ಪವಿತ್ರವತೇಽಷ್ಟಾಕಪಾಲಂ ಪುರೋಡಾಶಂ ನಿರ್ವಪೇತ್ । ತಸ್ಯ ಯಾಜ್ಯಾನುವಾಕ್ಯೇ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ತಪೋಷ್ಪವಿತ್ರಂ ವಿತತಂ ದಿವಸ್ಪತ ಇತಿ' ಯಜ್ಞ-ಯಾಗಾದಿ ಸಂದರ್ಭದಲ್ಲಿ ಒಂದು ವೇಳೆ ಧಾರಣೆ ಮಾಡಿದ ಪವಿತ್ರವು ನಾಶವಾದರೆ, 'ಪವಿತ್ರಂ ತೇ ವಿತತಂ' ಎಂಬ ಶ್ರುತಿಯನ್ನು ಹೇಳಿ ಪುರೋಡಾಶವನ್ನು ಅಗ್ನಿಗೆ ನೀಡಬೇಕೆಂದು ಬ್ರಾಹ್ಮಣವಾಕ್ಯವು ವಿಧಾನ ಮಾಡುತ್ತಿದೆ. ಅದರಂತೆ 'ತಸ್ಮಿನ್ನುದೀಚೀನದಿಶಂ ಪವಿತ್ರಂ ವಿತನ್ವಂತಿ । ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತ ಇತಿ ವಿತತ್ಯಮಾನಮಭಿಮಂತ್ರಯತೇ ಯಜಮಾನ' ಎಂಬ ಆಪಸ್ತಂಬ ಸೂತ್ರದಲ್ಲಿ ಸೋಮರಸಕ್ಕೆ ಆಧಾರವಾದ ದ್ರೋಣಕಲಶದ ಮೇಲೆ ದಶಾಪವಿತ್ರವನ್ನು ಹಾಕುವಾಗ 'ಪವಿತ್ರಂ ತೇ' ಎಂಬ ಮಂತ್ರವನ್ನು ಹೇಳಬೇಕೆಂದು ವಿಧಿಸಲಾಗಿದೆ. ದ್ರೋಣಕಲಶದ ಮೇಲೆ 'ದಶಾಪವಿತ್ರ' ಎಂಬ ವಸ್ತುವನ್ನು

ಹಾಕಿ ಸೋಸುವಂತೆ ಸೋಮರಸವನ್ನು ಹಾಕಬೇಕು. ಆ ಸಂದರ್ಭದಲ್ಲಿ 'ಪವಿತ್ರಂ ತೇ' ಎಂಬ ಮಂತ್ರವನ್ನು ಪಠಿಸಬೇಕೆಂದು ಆಪಸ್ತಂಬಸೂತ್ರವು ವಿಧಾನ ಮಾಡುತ್ತಿದೆ. ಹೀಗೆ ಒಂದೇ 'ಪವಿತ್ರಂ ತೇ' ಎಂಬ ಮಂತ್ರವು ಅಗ್ನಿಗೆ ಆಹುತಿ ನೀಡುವಾಗ ಅಗ್ನಿದೇವತಾ ಪರವಾಗುತ್ತದೆ. ದಶಾಪವಿತ್ರವನ್ನು ಅನುಮಂತ್ರಣೆ ಮಾಡುವಾಗ 'ದಶಾಪವಿತ್ರ' ಎಂಬರ್ಥವನ್ನು ಹೇಳುತ್ತದೆ. ಅದರಂತೆ ಪ್ರಕೃತ ಜ್ಯೋತಿರಾದಿ ಶಬ್ದಗಳಲ್ಲಿ ತಿಳಿಯಬೇಕು.

**प्रकाशः** – आप्यायस्व शन्ते इह त्वष्टारमग्रियं इत्यादिमन्त्राणां मन्त्रकाण्डे पत्नीसंयाजे क्रमेणाम्नानादाद्ये सौम्यपत्नीसंयाज आद्यस्य ''आप्यायस्व समे तु ते विश्वतस्सोमवृष्णियम्'' इति मन्त्रस्य क्रमरूपप्रमाणेन विनियोगः ''आप्यायस्वेति सोममाप्यायति'' इति सूत्रेण सोमरसाप्यायने च विनियोग इति सोमरसाप्यायनाद्यर्थत्वं तथेत्यर्थः ।

'ಆಪ್ಯಾಯಸ್ವ ಸಮೇ ತು ತೇ ವಿಶ್ವತಃ ಸೋಮವೃಷ್ಣಿಯಮ್' ಎಂಬ ಈ ಮಂತ್ರವನ್ನು ಕ್ರಮರೂಪ ಪ್ರಮಾಣದಿಂದ ಸೌಮ್ಯಪತ್ನೀಸಂಯಾಜದಲ್ಲಿ ವಿನಿಯೋಗಿಸಲಾಗುತ್ತದೆ. 'ಆಪ್ಯಾಯಸ್ವ ಶಂತೇ ಇಹ ತ್ವಷ್ಟಾರಮಗ್ರಿಯಂ' ಇತ್ಯಾದಿ ಮಂತ್ರಗಳಿಗೆ ಮಂತ್ರಕಾಂಡದಲ್ಲಿ ಪತ್ನೀಸಂಯಾಜದಲ್ಲಿ ಕ್ರಮವಾಗಿ ವಿನಿಯೋಗವನ್ನು ಹೇಳಲಾಗಿದೆ. ಮೊದಲನೆ ಯಾಗಕ್ಕೆ ಮೊದಲನೆ ಮಂತ್ರವನ್ನು, ಎರಡನೆಯ ಯಾಗಕ್ಕೆ ಎರಡನೆಯ ಮಂತ್ರವನ್ನು ವಿನಿಯೋಗಿಸಬೇಕೆಂದು ಕ್ರಮವನ್ನು ಹೇಳಲಾಗಿದೆ. ಪ್ರಥಮಪ್ರಾಪ್ತವಾದದ್ದು, ಸೋಮದೇವತೆಗೆ ಸಂಬಂಧಪಟ್ಟಿರುವುದು 'ಪತ್ನೀಸಂಯಾಜಯಾಗ'. ಆದ್ದರಿಂದ ಮೊದಲಿರುವ 'ಆಪ್ಯಾಯಸ್ವ ಸಮೇ ತು ತೇ ವಿಶ್ವತಃ ಸೋಮವೃಷ್ಣಿಯಮ್' ಎಂಬ ಮಂತ್ರವನ್ನು ಸೋಮಪತ್ನೀಸಂಯಾಜದಲ್ಲಿಯೇ ವಿನಿಯೋಗ ಮಾಡಬೇಕೆಂದು ಇದರಿಂದ ತಿಳಿಯುತ್ತದೆ. ಮತ್ತೊಂದು ಕಡೆ 'ಆಪ್ಯಾಯಸ್ವೇತಿ ಸೋಮಮಾಪ್ಯಾಯತಿ' ಎಂಬ ಸೂತ್ರದಿಂದ ಸೋಮರಸವನ್ನು ಆಪ್ಯಾಯನ ಮಾಡುವಾಗ 'ಆಪ್ಯಾಯಸ್ವ ಸಮೇ ತು ತೇ' ಎಂಬ ಮಂತ್ರವನ್ನು ವಿನಿಯೋಗ ಮಾಡಬೇಕೆಂದು ಹೇಳಲಾಗಿದೆ. ಆದ್ದರಿಂದ ಒಂದೇ 'ಆಪ್ಯಾಯಸ್ವ ಸಮೇ ತು ತೇ' ಎಂಬ ಮಂತ್ರಕ್ಕೆ ಸೋಮಪತ್ನೀ ಪರವಾಗಿ ಮತ್ತು ಸೋಮರಸ ಆಪ್ಯಾಯನ ಪರವಾಗಿ ಎರಡರ್ಥವನ್ನು ಹೇಳಬೇಕು. ಅದರಂತೆ ಪ್ರಕೃತದಲ್ಲಿಯೂ ತಿಳಿಯಬೇಕು.

**प्रकाशः** – नन्वर्थान्तरस्य वचनवृत्त्याऽप्रतीतेरदृष्टार्थत्वेनापि विनियोग-सम्भवान्नानेकार्थत्वमित्यत उक्तं **तत्तत्प्रकाशनायेति** ।।

ಮೇಲೆ ಹೇಳಿದ ಅನೇಕ ದೃಷ್ಟಾಂತಗಳಿಂದ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಒಪ್ಪಬೇಕೆಂದು ಸಾಧಿಸಿದಿರಿ. ಆದರೆ ವಚನವೃತ್ತಿಯಿಂದಲೇ ಅನೇಕಾರ್ಥವನ್ನು ಒಪ್ಪಬೇಕೆಂದು ಪ್ರತೀತವಾಗುತ್ತಿಲ್ಲ. ಆದ್ದರಿಂದ ಆಯಾ ಮಂತ್ರಗಳನ್ನು ಅನೇಕ ಕಡೆ ಕೇವಲ ಅದೃಷ್ಟಪ್ರಯೋಜನಕ್ಕೋಸ್ಕರ ವಿನಿಯೋಗ ಮಾಡಬೇಕೆಂದು ಶ್ರುತಿಯು ವಿಧಿಸುತ್ತಿದೆಯೆಂದು ಹೇಳಬಹುದು. ಅದೃಷ್ಟಪ್ರಯೋಜನಕ್ಕೋಸ್ಕರ ವಿನಿಯೋಗ ಮಾಡಿದಾಗ ತತ್ಪರತ್ವವನ್ನು ಮಂತ್ರಗಳಿಗೆ ಒಪ್ಪಬೇಕಾಗಿಲ್ಲ. ಅನೇಕಾರ್ಥತ್ವದ ಕಲ್ಪನೆಯನ್ನೂ ಕೂಡ ಮಾಡಬೇಕಾಗಿಲ್ಲವಲ್ಲವೇ? ಈ ಪ್ರಶ್ನೆಗೆ 'ತತ್ತತ್ ಪ್ರಕಾಶನಾಯ' ಎಂಬುದರಿಂದ ಉತ್ತರಿಸಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – मुख्यवृत्त्यसम्भवेऽपि गौणलक्षणादिनाऽर्थान्तरस्य कल्पनीयत्वात् । दृष्टे सम्भवत्यदृष्टकल्पनाया अन्याय्यत्वात् ।

ಆಯಾ ಮಂತ್ರಗಳನ್ನು ಬೇರೆ ಬೇರೆ ಸಂದರ್ಭದಲ್ಲಿ ವಿನಿಯೋಗ ಮಾಡುವಾಗ ತತ್ತತ್ಪರತ್ವವನ್ನು ಒಪ್ಪಲೇಬೇಕು. ಮುಖ್ಯವೃತ್ತಿಯಿಂದ ತತ್ತತ್ಪರತ್ವವನ್ನು ಹೇಳಲು ಸಾಧ್ಯವಾಗದಿದ್ದರೂ ಗೌಣವೃತ್ತಿಯಿಂದ, ಲಕ್ಷಣಾವೃತ್ತಿಯಿಂದ ಮಂತ್ರಗಳಿಗೆ ವಿನಿಯೋಜ್ಯಮಾನ ಪದಾರ್ಥಗಳಲ್ಲಿ ಸಮನ್ವಯನ್ನು ಮಾಡಲೇಬೇಕಾಗುತ್ತದೆ. ಏಕೆಂದರೆ ದೃಷ್ಟವಾದ ಫಲವನ್ನೇ ಹೇಳಲು ಬರುವಾಗ ಅದೃಷ್ಟಫಲವನ್ನು ಕಲ್ಪನೆ ಮಾಡುವುದು ತಪ್ಪು. ಆದ್ದರಿಂದ ಕೇವಲ ಅಭೀಷ್ಟಪ್ರಯೋಜನಕ್ಕೋಸ್ಕರ ಮಂತ್ರಗಳ ವಿನಿಯೋಗವೆಂದು ಹೇಳಬಾರದು.

**प्रकाशः** – अत एव तृतीयस्य द्वितीयपादे ''वचनात्त्वयथार्थमैन्द्री स्यात्'' इति द्वितीयाधिकरणे ''ऐन्द्र्या गार्हपत्यमुपतिष्ठते'' इति विनियोगबलाद्गौणवृत्त्या गार्हपत्याऽग्निप्रकाशनायेन्द्रशब्दस्याग्न्यर्थत्वमुक्तम् । उक्तं च ''स्यादग्नेर्गौणमिन्द्रत्वम्'' इत्यादि ।

ಆದ್ದರಿಂದಲೇ ಪೂರ್ವಮೀಮಾಂಸೆಯ ಮೂರನೆಯ ಅಧ್ಯಾಯದ ಎರಡನೆಯ ಪಾದದ 'ವಚನಾತ್ತ್ವಯಥಾರ್ಥಮೈಂದ್ರೀ ಸ್ಯಾತ್' ಎಂಬ ಎರಡನೆಯ ಅಧಿಕರಣದಲ್ಲಿ ಹೀಗೆ ನಿರ್ಣಯಿಸುತ್ತಾರೆ. 'ಐಂದ್ರ್ಯಾ ಗಾರ್ಹಪತ್ಯಮುಪತಿಷ್ಠತೇ' ಎಂಬ ಮಂತ್ರವು ಐಂದ್ರೀಮಂತ್ರದಿಂದ ಗಾರ್ಹಪತ್ಯಾಗ್ನಿಯನ್ನು ಉಪಸ್ಥಾನ ಮಾಡಬೇಕೆಂದು ಹೇಳುತ್ತಿದೆ. ಆದರೆ 'ನೇಂದ್ರ ಸಶ್ಚಸಿ ದಾಶುಷೇ' ಎಂಬ ಇಂದ್ರಪರವಾದ ಅಗ್ನಿಯನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಆದ್ದರಿಂದ 'ಐಂದ್ರ್ಯಾ' ಎಂಬಲ್ಲಿರುವ ಇಂದ್ರಶಬ್ದಕ್ಕೆ ಗೌಣೀವೃತ್ತಿಯಿಂದ ಅಗ್ನಿಪರತ್ವವನ್ನು ಹೇಳಬೇಕು. ಇದನ್ನೇ 'ಸ್ಯಾದಗ್ನೇರ್ಗೌಣಮಿಂದ್ರತ್ವಮ್' ಇತ್ಯಾದಿಯಾಗಿ ಹೇಳಿದ್ದಾರೆ.

**प्रकाशः** – ''अर्थाभिधानसंयोगात् मन्त्रेषु शेषभावस्स्यात्'' इत्यधिकरणे मुख्यवृत्त्यैव मन्त्राणामर्थाभिधानमिति वर्णनं त्वसति प्रमाणान्तरे ।

'ಅರ್ಥಾಭಿಧಾನಸಂಯೋಗಾತ್ ಮಂತ್ರೇಷು ಶೇಷಭಾವಃ ಸ್ಯಾತ್' ಎಂಬ ಅಧಿಕರಣದಲ್ಲಿ ಮುಖ್ಯವೃತ್ತಿಯಿಂದಲೇ ಮಂತ್ರಗಳಿಗೆ ಆಯಾ ಅರ್ಥಪರತ್ವವನ್ನು ಹೇಳಬೇಕು ಎಂದು ಹೇಳಿದ್ದು ಬೇರೆ ಪ್ರಮಾಣಗಳು ಇಲ್ಲದಿದ್ದಾಗ ಮಾತ್ರ. ಆದ್ದರಿಂದ 'ಐಂದ್ರ್ಯಾ ಗಾರ್ಹಪತ್ಯಮ್' ಎಂಬಲ್ಲಿರುವ ಇಂದ್ರಪದಕ್ಕೆ ಗೌಣವಾದ ಅರ್ಥವನ್ನು ಹೇಳಬಹುದು.

**प्रकाशः** – उक्तं च ''गौणे सदपि सामर्थ्यं न प्रमाणान्तरं विना । आविर्भवति'' इत्यादि ।

## ಜ್ಯೋತಿರುಪಕ್ರಮಾಧಿಕರಣ (1-4-2)

'ಗೌಣೇ ಸದಪಿ ಸಾಮರ್ಥ್ಯಂ ನ ಪ್ರಮಾಣಾಂತರಂ ವಿನಾ । ಆವಿರ್ಭವತಿ' ಬೇರೆ ಪ್ರಮಾಣವಿಲ್ಲದಿದ್ದಾಗ ಗೌಣವಾದ ಅರ್ಥವನ್ನು ಹೇಳಬಹುದೆಂದು ಉಲ್ಲೇಖಿಸಲಾಗಿದೆ.

**प्रकाशः –** नन्वेवं तत्रेव प्रकृतेऽपि मुख्यामुख्यवृत्त्यैवानेकार्थत्वं स्यान्न तु मुख्यवृत्त्यैवेति चेत्सत्यम् । परममुख्यमुख्यवृत्तिभ्यामेव भगवत्तदन्यरूपार्थद्वय-स्वीकारेण न्यूनाधिकवृत्त्याऽर्थद्वयस्य प्रकृतेऽप्यविरोधात् ।

ಹಾಗಾದರೆ ಈ ಶ್ರುತಿವಾಕ್ಯಗಳ ಉದಾಹರಣೆಯಲ್ಲಿ ಒಂದು ಕಡೆ ಮುಖ್ಯಾರ್ಥವನ್ನು, ಮತ್ತೊಂದು ಕಡೆ ಅಮುಖ್ಯಾರ್ಥವನ್ನು ಒಪ್ಪಬೇಕೆಂದು ಹೇಳಿದಂತಾಯಿತು. ಅದರಂತೆ ಪ್ರಕೃತ ಜ್ಯೋತಿರಾದಿ ಶಬ್ದಗಳಲ್ಲಿಯೂ ಒಂದು ಅರ್ಥದಲ್ಲಿ ಮುಖ್ಯವೃತ್ತಿಯನ್ನು ಮತ್ತೊಂದು ಅರ್ಥದಲ್ಲಿ ಅಮುಖ್ಯವೃತ್ತಿಯನ್ನು ಹೇಳಿದಂತಾಗುತ್ತದೆ. ಹೊರತು ಮುಖ್ಯವೃತ್ತಿಯಿಂದಲೇ ಎರಡು ಅರ್ಥವನ್ನು ಪ್ರತಿಪಾದನೆ ಮಾಡುತ್ತದೆಂದು ಹೇಳಿದಂತಾಗುವುದಿಲ್ಲವಲ್ಲವೇ? ಎಂದು ಆಶಂಕಿಸಬಾರದು. ಏಕೆಂದರೆ ಪರಮಮುಖ್ಯವೃತ್ತಿಯಿಂದ ಜ್ಯೋತಿರಾದಿ ಶಬ್ದಗಳು ಪರಮಾತ್ಮನನ್ನು ಪ್ರತಿಪಾದನೆ ಮಾಡಿದರೆ ಮುಖ್ಯವೃತ್ತಿಯಿಂದ ಯಜ್ಞ-ಯಾಗಾದಿ ಕರ್ಮಗಳನ್ನು ಪ್ರತಿಪಾದನೆ ಮಾಡುತ್ತಿವೆಯೆಂದು ನಾವು ಹೇಳುತ್ತಿದ್ದೇವೆ. ಆದ್ದರಿಂದ ಎರಡು ಅರ್ಥಗಳಲ್ಲಿ ಸಮನ್ವಯ ಮಾಡುವ ವೃತ್ತಿಗಳೆರಡರಲ್ಲಿ ನ್ಯೂನಾಧಿಕ್ಯಭಾವವಿರುವುದರಿಂದ ವಿರೋಧವಿರುವುದಿಲ್ಲ.

**प्रकाशः –** न्यूनवृत्तेश्च गौणादित्वमेवेति तु निर्मूलम् । अत एवोक्तं प्राक् ''युक्तं च मुख्यवृत्तावेव योगरूढ्योरिव तारतम्यम्'' इति ।

ನ್ಯೂನವಾದ ಮುಖ್ಯವೃತ್ತಿಯು ಗೌಣವೃತ್ತಿಯಲ್ಲಿ ಅಂತರ್ಭಾವ ಹೊಂದುತ್ತದೆನ್ನಲು ಯಾವುದೇ ಆಧಾರವಿಲ್ಲ. ಆದ್ದರಿಂದ ಕರ್ಮಪರವಾದ ವೃತ್ತಿಯೂ ಮುಖ್ಯವೃತ್ತಿಯೇ ಆಗುತ್ತದೆ. ಹರಿಪರವಾದ ವೃತ್ತಿಯೂ ಕೂಡ ಮುಖ್ಯವೃತ್ತಿಯೇ ಆಗುತ್ತದೆ. ಆದರೆ ಶ್ರೀಹರಿಯಲ್ಲಿರುವ ವೃತ್ತಿಯಲ್ಲಿ ಪಾರಮ್ಯವಿದೆಯೆಂದಷ್ಟೇ ತಿಳಿಯಬೇಕು. ಆದ್ದರಿಂದ ಹಿಂದೆ - 'ಯುಕ್ತಂ ಚ ಮುಖ್ಯವೃತ್ತಾವೇವ ಯೋಗರೂಢ್ಯೋರಿವ ತಾರತಮ್ಯಮ್' ಯೋಗ ಹಾಗೂ ರೂಢಿಗಳಲ್ಲಿ ತಾರತಮ್ಯವಿದ್ದಂತೆ ಮುಖ್ಯವೃತ್ತಿಯಲ್ಲಿಯೂ ಕೂಡ ತಾರತಮ್ಯವಿದೆಯೆಂದು ಹೇಳಲಾಯಿತು.

**प्रकाशः –** न केवलं विनियोगबलेनार्थान्तरत्वं कल्प्यमिति कण्ठत उक्तं चेत्याह – आयं गौरिति ।।

ಕೇವಲ ವಿನಿಯೋಗಬಲದಿಂದಷ್ಟೇ ಅರ್ಥಾಂತರವನ್ನು ಕಲ್ಪನೆ ಮಾಡುವುದಲ್ಲ. ವೇದದಲ್ಲಿ ಕಂಠತಃ ಅರ್ಥಾಂತರತ್ವವನ್ನು ಹೇಳಲಾಗಿದೆಯೆಂದು 'ಆಯಂ ಗೌಃ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

**प्रकाशः –** अष्टमाष्टकस्याष्टमेऽध्याये ''अयं गौस्सार्पराज्ञ्यात्मदैवतं सौर्यं च'' इत्युक्तम् । तथा द्वितीयाष्टकस्य द्वितीयेऽध्याये ''अस्य द्विपञ्चाशत्'' इत्युपक्रम्य

''उक्षाणं पृश्निमिति सोमस्त्रयः केशन इत्यग्निस्सूर्यो वायुश्च'' इत्युक्त्वा ''अन्त्या सरस्वते सूर्याय वा'' इत्युक्तमनुक्रमणिकायाम् । तत्रान्त्या केत्याकाङ्क्षायां ''दिव्यं सुपर्णमिति मन्त्रस्य'' इति स्वयं प्रदर्शितम् ।

ಋಗ್ವೇದದ ಎಂಟನೆಯ ಅಷ್ಟಕದ ಎಂಟನೆ ಅಧ್ಯಾಯದಲ್ಲಿ 'ಆಯಂ ಗೌಃ ಸಾರ್ಪರಾಜ್ಞ್ಯಾತ್ಮದ್ವೈವತಂ ಸೌರ್ಯಂ ಚ' ಎಂಬ ಮಂತ್ರವು ಶ್ರುತವಾಗಿದೆ. ಈ ಮಂತ್ರವು ವಿಷ್ಣು ಹಾಗೂ ಸೂರ್ಯ ಇಬ್ಬರನ್ನೂ ಕೂಡ ಪ್ರತಿಪಾದನೆ ಮಾಡುತ್ತಿದೆ. ಅದರಂತೆ ಎರಡನೆಯ ಅಷ್ಟಕದ ಎರಡನೆಯ ಅಧ್ಯಾಯದಲ್ಲಿ 'ಅಸ್ಯ ದ್ವಿಪಂಚಾಶತ್' ಎಂದು ಪ್ರಾರಂಭವಾಗಿ 'ಉಕ್ಷಾಣಾಂ ಪೃಶ್ನಿಮಿತಿ ಸೋಮಸ್ತ್ರಯಃ ಕೇಶನ ಇತ್ಯಗ್ನಿಃ ಸೂರ್ಯೋ ವಾಯುಶ್ಚ' ಎಂದು ಹೇಳಿ 'ಅಂತ್ಯಾ ಸರಸ್ವತೇ ಸೂರ್ಯಾಯ ವಾ' ಎಂದು ಹೇಳಲಾಗಿದೆ. ಇಲ್ಲಿಯೂ ಕೂಡ 'ದಿವ್ಯಂ ಸುಪರ್ಣಮ್' ಎಂಬ ಒಂದೇ ಮಂತ್ರವು 'ಅಂತ್ಯಾ ಸರಸ್ವತೇ' ಸರಸ್ವತಿ ಹಾಗೂ ಸೂರ್ಯ ಇಬ್ಬರನ್ನೂ ಕೂಡ ಪ್ರತಿಪಾದನೆ ಮಾಡುತ್ತಿದೆಯೆಂದು ಅನುಕ್ರಮಣಿಕೆಯಲ್ಲಿ ಹೇಳಿದ್ದಾರೆ.[೧] 'ಅಂತ್ಯಾ ಸರಸ್ವತೇ' ಎಂಬಲ್ಲಿ ಅಂತ್ಯವೆಂದರೆ ಯಾವುದು ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ ಗ್ರಂಥಕಾರರು 'ದಿವ್ಯಂ ಸುಪರ್ಣಮಿತಿ ಮಂತ್ರಸ್ಯ' ಎಂದು ಸ್ವತಃ ತೋರಿಸಿದ್ದಾರೆ.

गुरुराजीयम् –

नापि वेदेऽदर्शनादिति तृतीय इत्याह – **अग्निर्मूर्धेति मन्त्रस्येति** ।। ननु च तत्र श्रौते स्मार्ते वैकस्य विनियोगेऽपि प्रकृते श्रौत एवोभयत्रैकस्य विनियोगः कथमित्यरुच्याऽऽह – **पवित्रं त इति मन्त्रस्येति** ।। ननु चात्रोभयोः श्रौतत्वेऽपि भिन्नकर्मत्वेन तत्रैकस्य प्रकृत एकस्मिन्नेवैकस्यैवोभयत्र विनियोगः कथमित्यत आह – **आप्यायस्वेति मन्त्रस्येति** ।।

---

(೧) ಅನುಕ್ರಮಣಿಕಾ ಎಂಬುದು ಋಷಿಗಳು ಬರೆದಿರುವ ವೇದದ ವ್ಯಾಖ್ಯಾನ. ಯಾವುದೇ ವೇದವನ್ನು ಪಠನ ಮಾಡಬೇಕಾದರೆ ಋಷಿ, ಛಂದಸ್ಸು, ದೇವತೆ ಮೊದಲಾದವುಗಳನ್ನು ಹೇಳಿ, ಆಯಾ ಮಂತ್ರಗಳ ಅರ್ಥವನ್ನು ಅವಶ್ಯವಾಗಿ ತಿಳಿದು ಪಠನ ಮಾಡಬೇಕು. ಇಲ್ಲದಿದ್ದರೆ ನರಕಾದ್ಯನರ್ಥಗಳನ್ನು ಹೊಂದುತ್ತಾನೆ. ಇತ್ಯಾದಿಯಾದ ವಿಚಾರಗಳನ್ನೆಲ್ಲಾ ಅನುಕ್ರಮಣಿಕಾದಲ್ಲಿ ಹೇಳಿರುತ್ತಾರೆ. ಈ ಅನುಕ್ರಮಣಿಕೆಯನ್ನು ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ಕೆಲವೆಡೆ ಸಮ್ಮತಿಸುತ್ತಾರೆ. ಆದರೆ ಇನ್ನು ಕೆಲವೆಡೆ ಖಂಡನೆಯನ್ನೂ ಕೂಡ ಮಾಡುತ್ತಾರೆ. ಉದಾಹರಣೆ ಬಳಿತ್ಥಾ ಸೂಕ್ತವು ತ್ರೇಧಾಗ್ನಿಪರ ಎಂಬುದಾಗಿ ಅನುಕ್ರಮಣಿಕಾದಲ್ಲಿ ವ್ಯಾಖ್ಯಾನ ಮಾಡಲಾಗಿದೆ. ಅದನ್ನು ಶ್ರೀಮದಾಚಾರ್ಯರು ಖಂಡನೆ ಮಾಡಿ, ಅನೇಕ ಶ್ರುತಿ-ಸ್ಮೃತಿ ಪುರಾಣಗಳ ಆಧಾರದಿಂದ ಬಳಿತ್ಥಾ ಸೂಕ್ತವು ವಾಯುದೇವತೆಯನ್ನೇ ಪ್ರತಿಪಾದನೆ ಮಾಡುತ್ತಿದೆಯೆಂದು ಸಮರ್ಥಿಸಿದ್ದಾರೆ.

ಜ್ಯೋತಿರುಪಕ್ರಮಾಧಿಕರಣ (1-4-2)



ಒಂದೇ ಶಬ್ದವು ಅನೇಕಾರ್ಥಪರವಾಗುತ್ತದೆಂಬುದು ಪೌರುಷೇಯವಾದ ವ್ಯಾಕರಣಶಾಸ್ತ್ರದಲ್ಲಷ್ಟೇ ಕಂಡಿರುವುದಲ್ಲ. ಅಪೌರುಷೇಯವಾದ ವೇದದಲ್ಲಿಯೂ ಕೂಡ ಕಂಡಿದೆ. 'ಅಗ್ನಿರ್ಮೂರ್ಧಾ' ಎಂಬ ಮಂತ್ರವು ಅಗ್ನಿಪರವಾಗುತ್ತದೆ. ಮತ್ತು ಅಂಗಾರಕ ಪರವಾಗುತ್ತದೆಂದು ಶ್ರುತಿ ಹಾಗೂ ಸ್ಮೃತಿಗಳಿಂದ ಸಿದ್ಧವಾಗಿದೆ. 'ಪವಿತ್ರಂ ತೇ' ಎಂಬ ಮಂತ್ರವು ಪವಿತ್ರೇಷ್ಟಿ ಪರವಾಗುತ್ತದೆ ದಶಾಪವಿತ್ರ ಪರವಾಗುತ್ತದೆಂಬುದು ಶ್ರುತಿ ಹಾಗೂ ಆಶ್ವಲಾಯನ ಸೂತ್ರಗಳಿಂದ ಸಿದ್ಧವಾಗಿದೆ. 'ಅಪ್ಯಾಯಸ್ವ' ಎಂಬ ಮಂತ್ರವೂ ಕೂಡ ಸೋಮದೇವತಾಕವಾದ ಪತ್ನೀಸಂಯಾಜಯಾಗ ಪರವಾಗಿ, ಸೋಮರಸ ಆಪ್ಯಾಯನ ಪರವಾಗಿ ವಿನಿಯೋಗಿಸಲ್ಪಡುತ್ತದೆಂದು ಶ್ರುತಿಯಿಂದಲೇ ಸಿದ್ಧವಾಗಿದೆ. ಮತ್ತು 'ಆತ್ಮದೈವತಂ ಸೌರ್ಯಂ ಚ' ಇತ್ಯಾದಿ ಅನುಕ್ರಮಣಿಕಾದಲ್ಲಿ 'ಅಯಂಗೌಃ' ಎಂಬ ಮಂತ್ರಕ್ಕೆ ವಿಷ್ಣುಪರತ್ವವನ್ನು ಸೂರ್ಯದೇವತಾಪರತ್ವವನ್ನು ಸಮರ್ಥಿಸಲಾಗಿದೆ. 'ಅಂತ್ಯಾ ಸರಸ್ವತೇ ಸೂರ್ಯಾಯ' ಎಂಬ ಅನುಕ್ರಮಣಿಕೆಯು, 'ದಿವ್ಯಂ ಸುಪರ್ಣಂ' ಎಂಬ ಮಂತ್ರವು ಸರಸ್ವತೀ ದೇವತಾಪರವಾಗಿದೆ, ಹಾಗೂ ಸೂರ್ಯದೇವತಾಪರವಾಗಿದೆ ಎಂದು ಸಮರ್ಥಿಸುತ್ತಿದೆ. ಅಷ್ಟೇ ಅಲ್ಲದೇ 'ತ್ರಯಃ ಕೇಶಿನ' ಎಂಬ ಮಂತ್ರವು ಅಗ್ನಿ, ಸೂರ್ಯ, ವಾಯು ಮೂರು ದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆಂದು ಸಮರ್ಥಿಸುತ್ತಿದೆ. ಹೀಗೆ ಅಪೌರುಷೇಯವಾದ ವೇದವೂ ಕೂಡ ಒಂದೇ ಶಬ್ದಕ್ಕೆ ಅನೇಕಾರ್ಥತ್ವವನ್ನು ಅಂಗೀಕರಿಸಿದೆ.



## ನಿರುಕ್ತ, ಶ್ರುತಿ, ಸ್ಮೃತಿ, ಸೂತ್ರಗಳಿಂದ ವೇದಕ್ಕೆ ಅನೇಕಾರ್ಥತ್ವಸಮರ್ಥನೆ

### तात्पर्यचन्द्रिका

**निरुक्ते ''आनो भरप्रमगंदस्य'' इत्यादौ प्रमगन्दादिशब्दानां व्यक्तिविशेषे रूढेः, प्रभूतं धनं मामागमिष्यतीति यो ददाति स प्रमगन्द इति योगस्य चोक्तत्वाच ।**

ಅನುವಾದ - ವೇದಾಂಗವಾದ ನಿರುಕ್ತದಲ್ಲಿ 'ಆನೋ ಭರಪ್ರಮಗಂದಸ್ಯ' ಎಂಬ ಒಂದೇ ಶ್ರುತಿಗೆ ಅನೇಕಾರ್ಥ ಹೇಳಿರುವುದು ಕಂಡಿದೆ. 'ಪ್ರಮಗಂದ' ಎಂಬ ರಾಜನನ್ನು ರೂಢಿಯಿಂದ ಶಬ್ದವು ಪ್ರತಿಪಾದನೆ ಮಾಡುತ್ತದೆ. ಅನಿತ್ಯನಾದ ರಾಜನನ್ನು ನಿತ್ಯವಾದ ಶ್ರುತಿ ಪ್ರತಿಪಾದನೆ ಮಾಡಿದರೆ ಅಪ್ರಾಮಾಣ್ಯ ದೋಷ ಬರುತ್ತದಲ್ಲವೇ? ಎಂಬ ಆಶಂಕೆಯು ಪ್ರಾಪ್ತವಾದರೆ ಅದೇ ಪ್ರಮಗಂದ ಎಂಬ ಪದಕ್ಕೆ ಯೌಗಿಕಾರ್ಥವನ್ನು ಹೇಳುವ ಮೂಲಕ, ನಿರುಕ್ತವು ಅಪ್ರಾಮಾಣ್ಯಶಂಕೆಯನ್ನು ಪರಿಹರಿಸಿದೆ. 'ಪ್ರಭೂತಂ ಧನಂ ಮಾಮ್ ಆಗಮಿಷ್ಯತಿ ಇತಿ ಯೋ ದದಾತಿ ಸ ಪ್ರಮಗಂದಃ' ಬಹಳವಾದ ಹಣವು ನನಗೆ ದೊರೆಯುತ್ತದೆಂಬ ದೃಷ್ಟಿಯಿಂದ ಯಾರು ಮತ್ತೊಬ್ಬನಿಗೆ ಹಣವನ್ನು

ನೀಡುತ್ತಾನೋ, ಅಂತಹ ಕುಟಿಲವೃತ್ತಿಯವನು 'ಪ್ರಮಗಂದ' ಎನಿಸಿಕೊಳುತ್ತಾನೆ. ಹೀಗೆ ಯಾವ ಪದಕ್ಕೆ ರೂಢ್ಯರ್ಥವನ್ನು ಹೇಳಲಾಗಿದೆಯೋ, ಅದೇ ಪದಕ್ಕೆ ಯೋಗಾರ್ಥವನ್ನೂ ಕೂಡ ಹೇಳಲಾಗಿದೆ.

**वानात्सूतेर्देवनाद्वासुदेवो वासाद्द्युतेश्छादनात्क्रीडया च ।**
**बलादसुत्वाद्दातृतो वर्तनाच्च तं वासुदेवं प्रवदन्ति वेदाः ।।**

ವಾಸುದೇವ ಎಂಬ ಭಗವಂತನ ಒಂದೇ ನಾಮಕ್ಕೆ ಅನೇಕಾರ್ಥವನ್ನು ಶ್ರುತಿಯು ಹೇಳುತ್ತಿದೆ.

೧. ವಾನಾತ್ ಸೂತೇರ್ದೇವನಾತ್ ವಾಸುದೇವಃ = ಜ್ಞಾನಸ್ವರೂಪನಾದ್ದರಿಂದ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನಾದ್ದರಿಂದ ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೨. ವಾಸಾದ್ದ್ಯುತೇಃ = ಎಲ್ಲೆಡೆ ವಾಸ ಮಾಡುತ್ತಾನಾದ್ದರಿಂದ ಎಲ್ಲರ ವಾಸಿಸುವಿಕೆಗೆ ಆಶ್ರಯನಾದ್ದರಿಂದ, ಕಾಂತಿಸ್ವರೂಪನಾದ್ದರಿಂದ ವಾಸುದೇವನೆನಿಸುತ್ತಾನೆ.

೩. ಛಾದನಾತ್ ಕ್ರೀಡಯಾ ಚ = ಎಲ್ಲೆಡೆ ವ್ಯಾಪ್ತನಾದ್ದರಿಂದ ಅವಿದ್ಯೆ ಮೊದಲಾದ ಆವರಣಗಳನ್ನು ಪರಿಹರಿಸುತ್ತಾನಾದ್ದರಿಂದ, ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೪. ಬಲಾದಸುತ್ವಾದ್ದಾತೃತಃ ವರ್ತನಾಚ್ಚ = ಬಲಸ್ವರೂಪನಾದ್ದರಿಂದ, ಪ್ರಾಣಸ್ವರೂಪನಾದ್ದರಿಂದ ಎಲ್ಲವನ್ನೂ ಕೊಡುತ್ತಾನಾದ್ದರಿಂದ ಎಲ್ಲೆಡೆ ನೆಲೆಸಿದ್ದಾನಾದ್ದರಿಂದ ವಾಸುದೇವನೆನಿಸುತ್ತಾನೆ.

ಹೀಗೆ ವಾಸುದೇವನನ್ನು ವೇದಗಳು ಕೊಂಡಾಡುತ್ತವೆ.

**अद्यतेऽत्ति च भूतानि । तस्मादन्नं तदुच्यते'' इत्यादिश्रुतौ ।।**

'ಅದ್ಯತೇ ಇತಿ ಅನ್ನಂ', 'ಅತ್ತೀತಿ ಅನ್ನಂ' ಎಂಬುದಾಗಿ ಅನ್ನಶಬ್ದಕ್ಕೆ ಎರಡು ಅರ್ಥಗಳನ್ನು ಶ್ರುತಿಯೇ ಹೇಳಿದೆ. ಕರ್ಮಾರ್ಥದಲ್ಲಿ ಹಾಗೂ ಕರ್ತರ್ಥದಲ್ಲಿ 'ಕ್ತ' ಪ್ರತ್ಯಯವನ್ನು ಹೇಳಿ, ಪರಮಾತ್ಮನು ಎಲ್ಲರಿಗೂ ಉಪಜೀವ್ಯನಾಗಿದ್ದಾನೆ. ಹಾಗೂ ಎಲ್ಲರನ್ನೂ ಸಂಹಾರ ಮಾಡುತ್ತಾನೆ. ಆದ್ದರಿಂದ ಅನ್ನವೆನಿಸುತ್ತಾನೆ ಎಂಬುದಾಗಿ ಶ್ರುತಿಯು ವ್ಯಾಖ್ಯಾನ ಮಾಡಿದೆ.

**गतिश्च सर्वभूतानां प्रजानां चापि भारत ।**
**व्याप्ते मे रोदसी पार्थ कान्तिश्चाभ्यधिका मम ।**
**अधिभूतनिविष्टश्च तदिच्छुश्चास्मि भारत ।**
**क्रमणाच्चाप्यहं पार्थ विष्णुरित्यभिसंज्ञिता**

**इत्यादिस्मृतौ च वैदिकवासुदेवादिशब्दानामनेकार्थत्वोक्तेश्च ।**

'ವಿಷ್ಣು' ಎಂಬ ಶಬ್ದಕ್ಕೆ ಸ್ಮೃತಿಯು ಅನೇಕಾರ್ಥವನ್ನು ಹೇಳಿದೆ.

ಜ್ಯೋತಿರುಪಕ್ರಮಾಧಿಕರಣ (1-4-2)

೧. ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ = ಸಕಲ ಭೂತಪದಾರ್ಥಗಳಿಗೆ ಬ್ರಹ್ಮಾದಿ ದೇವತೆಗಳಿಗೆ ಪ್ರೇರಕನಾದ್ದರಿಂದ ವಿಷ್ಣು ಎನಿಸಿದ್ದಾನೆ.

೨. ವ್ಯಾಪ್ತೇ ಮೇ ರೋದಸಿ ಪಾರ್ಥ = ದ್ಯಾವಾಪೃಥಿವ್ಯಾದಿಗಳನ್ನು ವ್ಯಾಪಿಸಿದ್ದಾನಾದ್ದರಿಂದ ವಿಷ್ಣು ಎನಿಸಿದ್ದಾನೆ.

೩. ಕಾಂತಿಶ್ಚಾಭ್ಯಧಿಕಾ ಮಮ = ರಮಣೀಯವಾದ ಕಾಂತಿಯುಳ್ಳವನಾದ್ದರಿಂದ ವಿಷ್ಣು ಎನಿಸಿದ್ದಾನೆ.

೪. ಅಧಿಭೂತನಿವಿಷ್ಟಶ್ಚ = ಎಲ್ಲಾ ಭೌತಿಕ ಪದಾರ್ಥಗಳನ್ನೂ ಪ್ರವೇಶಿಸಿದ್ದಾನಾದ್ದರಿಂದ ವಿಷ್ಣು ಎನಿಸಿದ್ದಾನೆ.

೫. ತದಿಚ್ಛುಶ್ಚಾಸ್ಮಿ ಭಾರತ = ಅಧಿಭೂತಗಳ ಸೃಷ್ಟ್ಯಾದಿ ವಿಷಯದಲ್ಲಿ ಇಚ್ಛಿಸುತ್ತಾನಾದ್ದರಿಂದ, ವಿಷ್ಣು ಎನಿಸಿದ್ದಾನೆ.

೬. ಕ್ರಮಣಾಚ್ಚಾಪ್ಯಹಂ ಪಾರ್ಥ = ತ್ರಿವಿಕ್ರಮ ರೂಪದಿಂದ ತನ್ನ ಪಾದದ ಮೂಲಕ ಎಲ್ಲವನ್ನೂ ಆಕ್ರಮಣ ಮಾಡಿದ್ದಾನಾದ್ದರಿಂದ ವಿಷ್ಣು ಎನಿಸಿದ್ದಾನೆ. ಹೀಗೆ ಸ್ಮೃತಿಯಲ್ಲಿ ವಿಷ್ಣು ಎಂಬ ಶಬ್ದಕ್ಕೆ ಅನೇಕಾರ್ಥಗಳನ್ನು ಸಮರ್ಥಿಸಲಾಗಿದೆ.

**''स्वाप्ययसम्पत्त्योरन्यतरापेक्षमाविष्कृतं हि'' इत्यत्र सुषुप्तिवाक्यस्य व्यर्थतायाः सूत्रकारेणैव वक्ष्यमाणत्वाच्च ।**

'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂಬ ಸೂತ್ರದಲ್ಲಿ ಸುಷುಪ್ತಿ ವಾಕ್ಯಕ್ಕೆ ಸುಪ್ತರಾದ ಜೀವರು ಹಾಗೂ ಮುಕ್ತರಾದ ಜೀವರು ಎಂಬ ಎರಡರ್ಥವನ್ನು ಸೂತ್ರಕಾರರೇ ಹೇಳಿರುತ್ತಾರೆ.

**''त्रयोऽर्थाः सर्ववेदेषु दशार्थाः सर्वभारते'' इत्यादिस्मृतेश्च ।**

'ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ' ಸಕಲ ವೇದಗಳಲ್ಲಿ ಮೂರು ಅರ್ಥಗಳನ್ನು, ಮಹಾಭಾರತದಲ್ಲಿ ಹತ್ತು ಅರ್ಥಗಳನ್ನು, ವಿಷ್ಣುಸಹಸ್ರನಾಮಗಳಲ್ಲಿ ನೂರು ಅರ್ಥಗಳನ್ನು ನಿರಂತರವಾಗಿ ತಿಳಿಯಬೇಕು ಎಂಬ ಸ್ಮೃತಿಯೂ ಕೂಡ ಸಮಗ್ರ ವೇದದ ಎಲ್ಲಾ ವಾಕ್ಯಗಳಿಗೂ ಅನೇಕಾರ್ಥಗಳನ್ನು ತಿಳಿಯಬೇಕೆನ್ನಲು ಆಧಾರವಾಗಿದೆ.

**तदुक्तं कर्मनिर्णये भगवत्पादैः ''नच बह्वर्थेषु तात्पर्यकल्पने कल्पनागौरवम् । वचनेनैव प्रतीयमानत्वात् । अर्थस्य कल्पनाभावात्'' इति ।**

ಇದನ್ನೇ ಕರ್ಮನಿರ್ಣಯದಲ್ಲಿ ಶ್ರೀಮದಾಚಾರ್ಯರು 'ನಚ ಬಹ್ವರ್ಥೇಷು ತಾತ್ಪರ್ಯಕಲ್ಪನೇ ಕಲ್ಪನಾಗೌರವಮ್ । ವಚನೇನೈವ ಪ್ರತೀಯಮಾನತ್ವಾತ್ । ಅರ್ಥಸ್ಯ ಕಲ್ಪನಾಭಾವಾತ್'

ಅನೇಕಾರ್ಥಗಳಲ್ಲಿ ವೇದಕ್ಕೆ ತಾತ್ಪರ್ಯ ಕಲ್ಪನೆ ಮಾಡಿದರೆ ಕಲ್ಪನಾಗೌರವ ದೋಷವು ಬರುವುದಿಲ್ಲ. ಏಕೆಂದರೆ ವಚನವೃತ್ತಿಯಿಂದಲೇ ಅನೇಕಾರ್ಥಗಳು ಪ್ರತೀತವಾಗುತ್ತವೆ. ಅನೇಕಾರ್ಥಗಳ ಕಲ್ಪನೆ ಮಾಡದೇ ಇರುವಾಗ ಕಲ್ಪನಾಗೌರವವು ಹೇಗೆ ಬರುತ್ತದೆ ? ಎಂದು ಅನೇಕಾರ್ಥತ್ವವನ್ನು ಸಮರ್ಥಿಸಿದ್ದಾರೆ.

**अन्यत्र च –**

**इति बुद्धौ समारोहादुभयोर्योगरूढयोः ।**
**त्यागे च कारणाभावादुभयार्थत्वमिष्यते ।। इति ।**

ಇತಿ ಬುದ್ಧೌ ಸಮಾರೋಹಾದುಭಯೋರ್ಯೋಗರೂಢಯೋಃ ।
ತ್ಯಾಗೇ ಚ ಕಾರಣಾಭಾವಾತ್ ಉಭಯಾರ್ಥತ್ವಮಿಷ್ಯತೇ ।।

ಹೀಗೆ ಜ್ಞಾನಿಗಳ ಮನಸ್ಸಿನಲ್ಲಿ ಯೋಗದ ಪ್ರತಿಯೊಂದು ಶಬ್ದಗಳಿಗೂ ಅನೇಕಾರ್ಥವು ಸ್ಫುರಣವಾಗುತ್ತಿದೆ. ಆದ್ದರಿಂದ ಪ್ರತಿಯೊಂದು ವಾಕ್ಯಗಳಿಗೂ ಯೋಗಾರ್ಥವನ್ನು ಹಾಗೂ ರೂಢ್ಯರ್ಥವನ್ನು ತಿಳಿಯಬೇಕು. ಪ್ರತೀತವಾದ ಈ ಅನೇಕಾರ್ಥಗಳನ್ನು ಬಿಡಲು ಯಾವುದೇ ಕಾರಣವಿಲ್ಲ. ಆದ್ದರಿಂದ ಉಭಯಾರ್ಥತ್ವವನ್ನು ನಾವು ಅಂಗೀಕರಿಸುತ್ತೇವೆಂಬುದಾಗಿ ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಹೇಳಿರುತ್ತಾರೆ.

**प्रकाशः –**

**योगरूढिभ्यामनेकार्थत्वमित्यत्रैव सम्मतं दृष्टान्तमाह – निरुक्त इति ।।**

ವಿವರಣೆ - ಒಮ್ಮೆ ಉಚ್ಚರಿಸಲ್ಪಟ್ಟ ಶಬ್ದವು ಯೋಗ ಹಾಗೂ ರೂಢಿಗಳಿಂದ ಅನೇಕಾರ್ಥವನ್ನು ಹೇಳುತ್ತದೆಂಬ ವಿಷಯದಲ್ಲೇ ಸಮ್ಮತವಾದ ದೃಷ್ಟಾಂತವನ್ನು 'ನಿರುಕ್ತೇ' ಎಂಬುದರಿಂದ ಹೇಳುತ್ತಿದ್ದಾರೆ[1].

(೧) ವೇದವ್ಯಾಸದೇವರಿಂದ ರಚಿತವಾದ ನಿರುಕ್ತವೇ ಬೇರೆ, ಯಾಸ್ಕರಿಂದ ರಚಿತವಾದ ನಿರುಕ್ತವೇ ಬೇರೆ. ವೇದವ್ಯಾಸರಿಂದ ರಚಿತವಾದ ನಿರುಕ್ತವನ್ನು ಋಗ್ವೇದಭಾಷ್ಯದಲ್ಲಿ ಶ್ರೀಮದಾಚಾರ್ಯರು ಉಲ್ಲೇಖಿಸಿದ್ದಾರೆ. ಆದರೆ ಅದು ಲೋಕದಲ್ಲಿ ಪ್ರಸಿದ್ಧವಾಗಿಲ್ಲ. ಆದರೆ ಯಾಸ್ಕಪ್ರಣೀತವಾದ ನಿರುಕ್ತವು ಪ್ರಸಿದ್ಧವಾಗಿದೆ. ಪ್ರಕೃತ ಇಲ್ಲಿ ಯಾಸ್ಕಪ್ರಣೀತವಾದ ನಿರುಕ್ತವನ್ನು ಮಂತ್ರಾಲಯ ಪ್ರಭುಗಳು ವಿವರಿಸುತ್ತಿದ್ದಾರೆ. ನಿರುಕ್ತದಲ್ಲಿಯೂ ಕೂಡ ಸೂತ್ರ, ಅಧಿಕರಣ ಮೊದಲಾದವುಗಳು ಇರುತ್ತವೆ. ತಾತ್ಪರ್ಯಚಂದ್ರಿಕೆಯಲ್ಲಿ ಇದೇ ಮೊದಲು ನಿರುಕ್ತದ ಅಧಿಕರಣವನ್ನು ರಾಯರು ತುಂಬ ಸ್ವರಸವಾಗಿ ನಿರೂಪಣೆ ಮಾಡುತ್ತಿದ್ದಾರೆ.

**प्रकाशः** – मन्त्राधिकरणे ''अनित्यसंयोगान्मन्त्राऽनर्थक्यम्'' इति गुणसूत्रे ''किं ते कृण्वन्ति कीकटेषु गावो नाशिरं दुह्रे न तपन्ति धर्मम् । आनो भर प्रमगन्दस्य वेदो नैचाशाखं मघवन्नंधयान'' इत्युदाहृत्य

ನಿರುಕ್ತದಲ್ಲಿ ಮಂತ್ರಾಧಿಕರಣವಿದೆ. ಅದರಲ್ಲಿ 'ಅನಿತ್ಯಸಂಯೋಗಾನ್ ಮಂತ್ರಾನರ್ಥಕ್ಯಮ್' ಎಂಬ ಗುಣಸೂತ್ರದಲ್ಲಿ ಹೀಗೆ ವಿಚಾರ ಮಾಡಿದ್ದಾರೆ. ವಿಷಯವಾಕ್ಯ ಹೀಗಿದೆ - 'ಕಿಂ ತೇ ಕೃಣ್ವಂತಿ ಕೀಕಟೇಷು ಗಾವೋ ನಾಶಿರಂ ದುಹ್ನೇ ನ ತಪಂತಿ ಧರ್ಮಮ್ । ಆನೋ ಭರ ಪ್ರಮಗಂದಸ್ಯ ವೇದೋ ನೈಚಾಶಾಖಂ ಮಘವನ್ನಂಧಯಾನ' ಎಂದು.

**प्रकाशः** – हे मघवन्! कीकटेषु वर्तमाना गावः तव किं करिष्यन्ति । यतः आशिरं सोमसंस्कारार्थद्रव्यं विलोलितं दधि एता न दुह्रे न च धर्मं प्रवर्ग्यं प्रति क्षीरादिदानेन न तपन्ति न साधनीभवन्ति ।

ಮಂತ್ರದ ಅರ್ಥ ಹೀಗಿದೆ - ಹೇ ಮಘವನ್ = ಎಲೈ ದೇವೇಂದ್ರನೇ, ಕೀಕಟೇಷು = ಮ್ಲೇಂಛರು ವಾಸಮಾಡುವ ಕೀಕಟ ಎಂಬ ದೇಶ ವಿಶೇಷದಲ್ಲಿ ಇರುವ, ಗಾವಃ = ಹಸುಗಳು, ತೇ = ನಿನಗಾಗಿ, ಕಿಂ = ಏನನ್ನು, ಕೃಣ್ವಂತಿ = ತ್ಯಾಗ ಮಾಡುತ್ತವೆ. ಏಕೆಂದರೆ ಆಶಿರಂ = ಸೋಮರಸದ ಸಂಸ್ಕಾರಕ್ಕೋಸ್ಕರ ಕಡೆಯಲ್ಪಟ್ಟ ಮೊಸರು ಎಂಬ ದ್ರವ್ಯವಿಶೇಷವನ್ನು ಈ ಹಸುಗಳು, ನ = ನೀಡಲಾರವು. ದುಹ್ನೇ = ಹಾಲನ್ನೂ ಕೂಡ ಧರ್ಮಂ = ಪ್ರವರ್ಗ್ಯವನ್ನು ಕುರಿತು, ನ ತಪಂತಿ = ನೀಡಿ ಸಾಧನೆಯನ್ನು ಮಾಡಿಕೊಳ್ಳಲಾರವು.

**प्रकाशः** – अतः प्रमगन्दस्य कीकटदेशाधिपते राज्ञः वेदः धनं नः अस्मान् प्रत्याहर। नः अस्माकं नैचाशाखं नामनगरं रंधय साधयेति

ಅತಃ = ಆದ್ದರಿಂದ, ಪ್ರಮಗಂದಸ್ಯ = ಕೀಕಟದೇಶಾಧಿಪತಿಯಾದ ರಾಜನ, ವೇದಃ = ಹಣವನ್ನು, ನಃ = ನನಗಾಗಿ, ಪ್ರತ್ಯಾಹರ = ಅಪಹರಿಸಿ ನೀಡು. ನಃ = ನನಗೆ, ನೈಚಾಶಾಖಂ = ನೈಚಾಶಾಖೆಯೆಂಬ ನಗರವನ್ನು, ರಂಧಯ = ಕೊಡಿಸು.

**प्रकाशः** – राजविशेषानित्यार्थकत्वेनाप्रामाण्यमाशङ्क्य ''उक्तश्चानित्यसंयोगे'' इति सूत्रे प्रकृष्टं मे गतकालीनं धनमधमर्णो दास्यतीति बुद्ध्या धनप्रयोक्तेति योगेन प्रमगन्दः कुसीदवृत्तिस्सदाऽस्ति देश इत्यनित्यसंयोगः परिहृत इति योगरूढिभ्यामर्थद्वयं निरुक्तरूपवेदाङ्गग्रन्थसिद्धमिति ज्ञायते । अन्यथा तन्न स्यादिति भावः ।

'ಪ್ರಮಗಂದ' ಎಂಬ ರಾಜನು ಮೂರು ಕಾಲದಲ್ಲಿಯೂ ಇರಲಾರನು. ಆದರೆ ನಿತ್ಯವಾದ ಶ್ರುತಿಯು ಅಂತಹ ರಾಜನನ್ನು ಪ್ರತಿಪಾದನೆ ಮಾಡುತ್ತಿದೆ. ಅನಿತ್ಯನಾದ ರಾಜನನ್ನು ಪ್ರತಿಪಾದನೆ ಮಾಡುವ ಶ್ರುತಿಗೆ

ಅಪ್ರಾಮಾಣ್ಯ ಬರುತ್ತದಲ್ಲವೇ? ಎಂದು ಆಶಂಕಿಸಿ 'ಉಕ್ತಶ್ಚಾನಿತ್ಯಸಂಯೋಗೇ' ಎಂಬ ಮತ್ತೊಂದು ಸೂತ್ರದಲ್ಲಿ ಇದಕ್ಕೆ ಉತ್ತರಿಸಲಾಗಿದೆ. ಅಂದರೆ 'ಪ್ರಮಗಂದ' ಎಂಬ ಪದಕ್ಕೆ ರೂಢ್ಯರ್ಥವನ್ನು ಸ್ವೀಕರಿಸಿದರೆ ಅಪ್ರಾಮಾಣ್ಯವು ಪ್ರಾಪ್ತವಾಗಬಹುದು. ಆದರೆ ಯೋಗಾರ್ಥವನ್ನು ಸ್ವೀಕರಿಸಬೇಕು. 'ಪ್ರಮಗಂದ' ಎಂಬ ಪದಕ್ಕೆ ಯೋಗಾರ್ಥವನ್ನು ಹೇಳಬೇಕು. 'ಬಹಳವಾದ ಹಣವನ್ನು ಅಧಮರ್ಣನಾದ ವ್ಯಕ್ತಿಯು ನನಗೆ ಕೊಡುತ್ತಾನೆಂಬ ಉದ್ದೇಶದಿಂದ ಯಾವಾತನು ಹಣವನ್ನು ಕೊಡುತ್ತಾನೋ, ಅಂತಹ ಕುಸೀದವೃತ್ತಿಯಲ್ಲಿರುವ ಅನ್ಯಾಯದಿಂದ ಧನಸಂಪಾದಿಸುವವನು 'ಪ್ರಮಗಂದ' ಎನಿಸಿಕೊಳ್ಳುತ್ತಾನೆ. ಇಂತಹ ಅನ್ಯಾಯ ಮಾರ್ಗದಲ್ಲಿ (ಬಡ್ಡಿ ಹಣ) ಹಣ ಸಂಪಾದನೆ ಮಾಡುವ ವ್ಯಕ್ತಿಗಳು ಎಲ್ಲಾ ಕಾಲದಲ್ಲಿಯೂ ಕೂಡ ಇರುತ್ತಾರೆ. ಅಂತಹ ವ್ಯಕ್ತಿಯ ಬಳಿಯ ಇರುವ ಹಣವನ್ನು ನನಗೆ ಕೊಡಿಸು ಎಂಬುದಾಗಿ ಶ್ರುತಿಯಲ್ಲಿ ಪ್ರಾರ್ಥಿಸಲಾಗಿದೆ. ಹೀಗೆ 'ಪ್ರಮಗಂದ' ಎಂಬ ಪದಕ್ಕೆ ಮೊದಲು ರಾಜವಿಶೇಷನಲ್ಲಿ ಯೋಗಾರ್ಥವನ್ನು ಒಪ್ಪಿ, ಅನಂತರ ಕುಸೀದವೃತ್ತಿವ್ಯಕ್ತಿಯಲ್ಲಿ ರೂಢ್ಯರ್ಥವನ್ನು ನಿರುಕ್ತದಲ್ಲಿ ಸಮರ್ಥಿಸಲಾಗಿದೆ.

'ಕಿಂತೇ ಕೃಣ್ವಂತಿ' ಎಂಬ ಮಂತ್ರದ ತಾತ್ಪರ್ಯ ಹೀಗಿದೆ - ಕೀಕಟ ದೇಶದಲ್ಲಿ ಇರುವ ರಾಜ ಅಥವಾ ಪ್ರಜೆಗಳು ಯಜ್ಞ-ಯಾಗಾದಿಗಳನ್ನು ಮಾಡದಿದ್ದರೆ ನಾಸ್ತಿಕರೆನಿಸುತ್ತಾರೆ. ಅಂತಹ ದೇಶದಲ್ಲಿ ಸಂಪತ್ತಿದ್ದರೆ ಅದರಿಂದ ಯಾವುದೇ ವಿಧವಾದ ಸದ್ವಿನಿಯೋಗಗಳು ನಡೆಯುವುದಿಲ್ಲ. ಆ ದೇಶದಲ್ಲಿರುವ ಹಸುಗಳು ಹಾಲನ್ನು ನೀಡಿದರೆ ಯಜ್ಞಕ್ಕೆ ಅದು ವಿನಿಯೋಗವಾಗುವುದಿಲ್ಲ. ಹಸುಗಳು ನೀಡುವ ಮೊಸರನ್ನು ಕಡೆದು ಮಜ್ಜಿಗೆ ಮಾಡಿ ಸೋಮರಸಕ್ಕೆ ಮಿಶ್ರಣ ಮಾಡುವ ಆಶಿರ ಎಂಬ ಯಜ್ಞದ್ರವ್ಯವೂ ಕೂಡ ಅದರಿಂದ ಸಂಪಾದಿತವಾಗುವುದಿಲ್ಲ. ತುಪ್ಪವೂ ಕೂಡ ನಿತ್ಯದಲ್ಲಿ ವಿನಿಯೋಗವಾಗುವುದಿಲ್ಲ. ಆದ್ದರಿಂದ ಎಲೈ ದೇವೇಂದ್ರನೇ ! ಅಂತಹ ನೀಚಜನರ ಪ್ರದೇಶದಲ್ಲಿ ಏನೇನು ಸಂಪತ್ತುಗಳಿವೆಯೋ, ಆ ಎಲ್ಲಾ ಸಂಪತ್ತನ್ನು ನನಗಾಗಿ ನೀಡು. ಆ ರಾಜನ ಅಧೀನದಲ್ಲಿರುವ ಎಲ್ಲಾ ಹಸುಗಳನ್ನು ನನಗೆ ದಯಪಾಲಿಸು. ಮತ್ತು ಸಮಸ್ತ ಆ ರಾಜ್ಯವನ್ನೇ ನನಗೆ ನೀಡು. ನಾನು ಭಕ್ತಿಶ್ರದ್ಧೆಗಳಿಂದ ಯಜ್ಞ-ಯಾಗಾದಿಗಳನ್ನು ಮಾಡಿ, ನಿನಗೋಸ್ಕರ ವಿನಿಯೋಗ ಮಾಡುತ್ತೇನೆ ಎಂಬುದು ಈ ಮಂತ್ರದ ಅಭಿಪ್ರಾಯ.

ಈ ಮಂತ್ರದಲ್ಲಿ 'ಪ್ರಮಗಂದ' ಎಂಬ ರಾಜನ ಬಗ್ಗೆ ಉಲ್ಲೇಖವಿದೆ. ಆದರೆ ಆ ರಾಜ ಯಾವುದೋ ಒಂದು ಕಾಲದಲ್ಲಷ್ಟೇ ಇರುತ್ತಾನೆ. ಆದರೆ ಶ್ರುತಿ ಮಾತ್ರ ನಿತ್ಯವಾಗಿದೆ. ನಿತ್ಯವಾದ ಶ್ರುತಿಯು ಯಾವುದೋ ಒಂದು ಕಾಲದಲ್ಲಷ್ಟೇ ಇರುವ ರಾಜನನ್ನು ಪ್ರತಿಪಾದನೆ ಮಾಡಿದರೆ ಅಪ್ರಮಾಣ್ಯದೋಷ ಬರುತ್ತದಲ್ಲವೇ? ಅದಕ್ಕಾಗಿ ನಿರುಕ್ತವು 'ಪ್ರಮಗಂದ' ಎಂಬ ಪದಕ್ಕೆ ಮೊದಲು ರೂಢ್ಯರ್ಥದಿಂದ ರಾಜನೆಂಬರ್ಥವನ್ನು ಹೇಳಿ, ಅನಂತರ ಯೌಗಿಕಾರ್ಥವನ್ನು ಹೇಳುವ ಮೂಲಕ ಅಪ್ರಾಮಾಣ್ಯದೋಷವನ್ನು ಪರಿಹರಿಸಿದೆ. ಯಾವ ವ್ಯಕ್ತಿಯು ಅನ್ಯಾಯ ಮಾರ್ಗದಿಂದ ಹಣ ಸಂಪಾದನೆಯನ್ನು ಮಾಡುತ್ತಾ ಅಧಿಕವಾದ ಬಡ್ಡಿ ಮೊದಲಾದವುಗಳನ್ನು ಸ್ವೀಕರಿಸಿ ಅನ್ಯಾಯ ಮಾಡುವ ವೃತ್ತಿಯನ್ನು ಹೊಂದಿರುವವನನ್ನು, 'ಕುಸೀದವೃತ್ತಿ' ಎಂದು ಕರೆಯಲಾಗುತ್ತದೆ. ಅಂತಹ ಕುಸೀದವೃತ್ತಿಯನ್ನು ಹೊಂದಿರುವ ವ್ಯಕ್ತಿಯನ್ನು 'ಪ್ರಮಗಂದ' ಎಂಬ ಪದವು ಪ್ರತಿಪಾದನೆ ಮಾಡುತ್ತಿದೆ. ಇಂತಹ ವ್ಯಕ್ತಿಗಳು ಎಲ್ಲಾ ಕಾಲದಲ್ಲಿಯೂ ಕೂಡ ಇದ್ದೇ ಇರುತ್ತಾರೆ. ಆದ್ದರಿಂದ ಅಂತಹ ಕುಸೀದವೃತ್ತಿಯನ್ನು ಮಾಡುತ್ತಿರುವ ವ್ಯಕ್ತಿಯ ಬಳಿ ಯಾವ ಸಂಪತ್ತಿದೆಯೋ, ಅಂತಹ

ಸಂಪತ್ತನ್ನು ನನಗೆ ದಯಪಾಲಿಸು ಎಂಬುದಾಗಿ ಯೋಗಾರ್ಥವನ್ನು ಸ್ವೀಕರಿಸಿದಾಗ ಮಂತ್ರಕ್ಕೆ ಅರ್ಥವನ್ನು ಹೇಳಿದಂತಾಗುತ್ತದೆ. ಹೀಗೆ 'ಪ್ರಮಗಂದ' ಎಂಬ ಒಂದೇ ಪದಕ್ಕೆ ರೂಢ್ಯರ್ಥ ಹಾಗೂ ಯೋಗಾರ್ಥಗಳನ್ನು ನಿರುಕ್ತದಲ್ಲಿ ಸಮರ್ಥಿಸಲಾಗಿದೆ.

ಈ ನಿರುಕ್ತವು ವೇದದ ಷಡಂಗಗಳಲ್ಲಿ ಒಂದಾಗಿದೆ. ಆದ್ದರಿಂದ ಪರಮ ಪ್ರಮಾಣವಾದ ಈ ನಿರುಕ್ತದಿಂದ ಸಕೃತ್ಪ್ರಯುಕ್ತವಾದ ಪದಕ್ಕೆ ಅನೇಕಾರ್ಥತ್ವವನ್ನು ಸಮರ್ಥಿಸಲಾಗಿದೆ.

**प्रकाशः – आदिपदेन नैचाशाखपदं ग्राह्यम् । तत्रापि रूढ्या नगररूपार्थस्य नीचाश्शाखाः षण्डाः । तदीयं धनं नैचाशाखमिति योगस्य चोक्तेः ।**

ಗ್ರಂಥದಲ್ಲಿರುವ ಆದಿಪದದಿಂದ ನೈಚಾಶಾಖಪದವನ್ನೂ ಕೂಡ ತೆಗೆದುಕೊಳ್ಳಬೇಕು. ಯಾವರೀತಿಯಾಗಿ ಪ್ರಮಗಂದ ಎಂಬ ಪದಕ್ಕೆ ಯೋಗಾರ್ಥ ಹಾಗೂ ರೂಢ್ಯರ್ಥಗಳನ್ನು ಹೇಳಲಾಗಿದೆಯೋ, ಅದರಂತೆ 'ನೈಚಾಶಾಖಾಃ' ಪದಕ್ಕೂ ಕೂಡ ಯೋಗಾರ್ಥ ಹಾಗೂ ರೂಢ್ಯರ್ಥಗಳನ್ನು ನಿರುಕ್ತವು ಸಮರ್ಥನೆ ಮಾಡಿದೆ. ಏಕೆಂದರೆ 'ನೈಚಾಶಾಖಾ' ಎಂಬ ಪ್ರದೇಶವಿಶೇಷವು ಮೂರು ಕಾಲದಲ್ಲಿಯೂ ಕೀಕಟದೇಶದಲ್ಲಿ ಇರುವುದಿಲ್ಲ. ಆದರೆ ಶ್ರುತಿಯು ನಿತ್ಯವಾಗಿರುವುದರಿಂದ ಪುನಃ ಅಪ್ರಾಮಾಣ್ಯಶಂಕೆಯು ಪ್ರಾಪ್ತವಾಗುತ್ತದೆ. ಅದಕ್ಕೋಸ್ಕರ ರೂಢ್ಯರ್ಥವನ್ನು ಬಿಟ್ಟು, ನೈಚಾಶಾಖಪದಕ್ಕೆ ಯೋಗಾರ್ಥವನ್ನು ಸ್ವೀಕರಿಸಲಾಗಿದೆ. ಅಂದರೆ 'ನೀಚಾಃ ಶಾಖಾಃ' = ಷಂಡರು = ನಪುಂಸಕರು; ಅವರ ಧನವನ್ನು 'ನೈಚಾಶಾಖ' ಎನ್ನುತ್ತಾರೆ. ನಪುಂಸಕರ ಧನವನ್ನು ನನಗೆ ನೀಡು ಎಂದರ್ಥ.

**प्रकाशः – योगेनैवानेकार्थत्वे स्थलान्तरमाह – वानात् सूतेरिति ।। यद्वा अनेकार्थत्वं श्रुत्यैवोक्तमित्याह – वानादिति ।।**

ಮೇಲಿನ ದೃಷ್ಟಾಂತದಲ್ಲಿ ಯೋಗ ಹಾಗೂ ರೂಢಿಗಳಿಂದ ಅನೇಕಾರ್ಥತ್ವವನ್ನು ಹೇಳಲಾಯಿತು. ಪ್ರಕೃತ ಯೋಗದಿಂದಲೇ ಅನೇಕಾರ್ಥತ್ವವಿದೆಯೆನ್ನಲು ಮತ್ತೊಂದು ದೃಷ್ಟಾಂತವನ್ನು ನೀಡುತ್ತಿದ್ದಾರೆ 'ವಾನಾತ್ ಸೂತೇಃ' ಇತ್ಯಾದಿಯಾಗಿ. ಅಥವಾ ನಿರುಕ್ತದಿಂದ ಅನೇಕಾರ್ಥತ್ವವು ಸಿದ್ಧವಾಯಿತು. ಆದರೆ ಶ್ರುತಿಯಿಂದಲೇ ಅನೇಕಾರ್ಥತ್ವವಿರುವುದು ಕಂಡಿದೆಯೆಂದು ಮತ್ತೊಂದು ದೃಷ್ಟಾಂತವನ್ನು ನೀಡುತ್ತಿದ್ದಾರೆ 'ವಾನಾತ್ ಸೂತೇಃ' ಇತ್ಯಾದಿಯಾಗಿ.

**प्रकाशः – यद्वा अलौकिके हरावेकैकवैदिकशब्दस्यानेकार्थत्वं श्रुत्यादिसिद्धमिति श्रुतिस्मृती आह – वानात् ज्ञानात् ।**

ಅಥವಾ ಅಲೌಕಿಕವಾದ ಹರಿಯಲ್ಲಿ ವಾಸುದೇವ ಮೊದಲಾದ ಒಂದೊಂದೇ ಶಬ್ದಗಳಿಗೆ ಅನೇಕಾರ್ಥತ್ವವಿರುವುದು ಶ್ರುತ್ಯಾದಿಗಳಿಂದಲೇ ಸಿದ್ಧವಾಗಿದೆಯೆನ್ನಲು ಶ್ರುತಿ-ಸ್ಮೃತಿಗಳನ್ನು ಹೇಳುತ್ತಿದ್ದಾರೆ

'ವಾನಾತ್' ಇತ್ಯಾದಿಯಾಗಿ. ಹೀಗೆ 'ವಾನಾತ್' ಇತ್ಯಾದಿ ವಾಕ್ಯಕ್ಕೆ ಮೂರು ಬಗೆಯ ಅವತಾರಿಕೆಗಳನ್ನು ತಿಳಿಯಬೇಕು.

**प्रकाशः** – वा गतिगन्धनयोरित्यतो विच् प्रत्ययः । सूतेः उत्पादनात् । 'षूञ् प्राणिगर्भविमोचने' इति धातोर्डुप्रत्ययः ।

'ವಾಸುದೇವ' ಎಂಬ ಪದದ ಅರ್ಥ ಹೀಗಿದೆ - 'ವಾ' ಎಂದರೆ ಜ್ಞಾನ ಎಂದರ್ಥ. ಏಕೆಂದರೆ 'ವಾ ಗತಿಗಂಧನಯೋಃ' ಎಂಬ ಧಾತುವಿನ ಮೇಲೆ 'ವಿಚ್' ಪ್ರತ್ಯಯವು ಬಂದು 'ವಾ' ಎಂದಾಗಿದೆ. 'ವಿಚ್' ಪ್ರತ್ಯಯದಲ್ಲಿ ವಕಾರ, ಇಕಾರ, ಚಕಾರ ಎಲ್ಲವೂ ಲೋಪವನ್ನು ಹೊಂದಿ 'ವಾ' ಎಂದಷ್ಟೇ ಉಳಿಯುತ್ತದೆ. 'ವಾಸುದೇವ' ಎಂಬಲ್ಲಿರುವ 'ಸು' ಎಂಬ ಪದಕ್ಕೆ ಉತ್ಪತ್ತಿ ಮಾಡುವವನು ಎಂದರ್ಥ. ಏಕೆಂದರೆ 'ಷೂಞ್' 'ಪ್ರಾಣಿಗರ್ಭವಿಮೋಚನೇ' ಎಂಬ ಧಾತುವಿನ ಮೇಲೆ 'ಡು' ಎಂಬ ಪ್ರತ್ಯಯವು ಬಂದು 'ಸು' ಎಂದಾಗಿದೆ. 'ಷೂಞ್' ಎಂಬ ಧಾತುವಿಗೆ ಡಕಾರಇತ್ತಾದ 'ಡು' ಪ್ರತ್ಯಯವು ಬಂದರೆ 'ಷು' ಎಂದಾಗುತ್ತದೆ. ಅನಂತರ ಧಾತ್ವಾದೇಃಷಃಸಃ ಎಂಬ ಸೂತ್ರದಿಂದ ಷಕಾರಕ್ಕೆ ಸಕಾರವು ಪ್ರಾಪ್ತವಾದರೆ 'ಸು' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಆದ್ದರಿಂದ 'ಸು' ಎಂಬುದಕ್ಕೆ ಉತ್ಪತ್ತಿ ಮಾಡುವವನು ಎಂಬರ್ಥವು ದೊರೆಯುತ್ತದೆ.

**प्रकाशः** – देवनात् क्रीडादेः । दीव्यतेरच् । वाश्चासौ सुश्चासौ देवश्चेति विग्रहः।

'ದಿವು' ಧಾತುವಿಗೆ 'ನಂದಿಗ್ರಹಿಪಚಾದಿಭ್ಯೋ ಲ್ಯುಣಿನ್ಯಚಃ' ಎಂಬ ಸೂತ್ರದಿಂದ ಪಚಾದಿಗಣದಲ್ಲಿ ಪಠಿತವಾದ ಕಾರಣ ಅಚ್ ಪ್ರತ್ಯಯವು ಬರುತ್ತದೆ. ಅನಂತರ 'ಸಾರ್ವಧಾತುಕಾರ್ಧಧಾತುಕಯೋಃ' ಎಂಬ ಸೂತ್ರದಿಂದ ಗುಣ ಬಂದರೆ 'ದೇವ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಕ್ರೀಡಿಸುವವನು ಎಂದು ಇದರರ್ಥ. ಆದ್ದರಿಂದ 'ವಾಶ್ಚಾಸೌ ಸುಶ್ಚಾಸೌ ದೇವಶ್ಚ ವಾಸುದೇವಃ' ಎಂದು ವಿಗ್ರಹ ಮಾಡಬೇಕು. ಜ್ಞಾನಿಯಾದ ಸೃಷ್ಟಿಕರ್ತೃವಾದ ಕ್ರೀಡಾದಿಗುಣಗಳುಳ್ಳವನು ಎಂಬರ್ಥವನ್ನು ವಾಸುದೇವ ಪದಕ್ಕೆ ಹೇಳಿದಂತಾಗುತ್ತದೆ.

**प्रकाशः** – वासात् सर्वत्र वासकर्तृत्वात् सर्ववासाधिकरणत्वाद्वा वस निवास इत्यस्मादुण् प्रत्ययः । द्युतेर्देवः । वासुश्चासौ देवश्चेति द्वितीयोऽर्थः ।

ಅಥವಾ ವಾಸಾತ್ = ಎಲ್ಲೆಡೆ ವಾಸ ಮಾಡುತ್ತಾನಾದ್ದರಿಂದ ಅಥವಾ ಎಲ್ಲರ ವಾಸಕ್ಕೆ ಅಧಿಕರಣನಾದ್ದರಿಂದ 'ವಾಸು' ಎನಿಸಿಕೊಳ್ಳುತ್ತಾನೆ. 'ವಸ ನಿವಾಸೇ' ಎಂಬ ಧಾತುವಿನ ಮೇಲೆ 'ಉಣ್' ಪ್ರತ್ಯಯವು ಬಂದು ವಾಸು ಎಂಬ ರೂಪವು ನಿಷ್ಪನ್ನವಾಗಿದೆ. ಕಾಂತಿಸ್ವರೂಪನಾದ್ದರಿಂದ ದೇವ ಎನಿಸಿದ್ದಾನೆ. ಆದ್ದರಿಂದ 'ವಾಸುಶ್ಚಾಸೌ ದೇವಶ್ಚ' ಎಂಬುದಾಗಿ ವಿಗ್ರಹವನ್ನು ಮಾಡಬೇಕು.

**प्रकाशः** – छादनात् सर्वत्र व्यापनात् । अविद्यादिनावरणाद्वा । वस आच्छादन इत्यस्मादुण् । क्रीडया देवः । पूर्ववद्विग्रहः । इति तृतीयः ।

ಅಥವಾ 'ವಸ ಆಚ್ಛಾದನೇ' ಎಂಬ ಧಾತುವಿನ ಮೇಲೆ 'ಉಣ್' ಪ್ರತ್ಯಯವು ಬಂದು 'ವಾಸು' ಎಂದಾಗಿದೆ. ಎಲ್ಲವನ್ನೂ ವ್ಯಾಪಿಸಿದ್ದಾನಾದ್ದರಿಂದ 'ವಾಸು' ಎನಿಸಿಕೊಳ್ಳುತ್ತಾನೆ. ಅಥವಾ ಅವಿದ್ಯೆ ಮೊದಲಾದವುಗಳ ಆವರಣಕ್ಕೆ ನಾಯಕನಾಗಿದ್ದರಿಂದಲೂ 'ವಾಸು' ಎನಿಸಿಕೊಳ್ಳುತ್ತಾನೆ. ಕ್ರೀಡಿಸುತ್ತಾನಾದ್ದರಿಂದ 'ದೇವ' ಎನಿಸಿದ್ದಾನೆ. ಇಲ್ಲಿಯೂ ಕೂಡ 'ವಾಸಶ್ಚಾಸೌ ದೇವಶ್ಚ' ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು.

**प्रकाशः** – बलात् वाः असुत्वात् प्राणरूपत्वादसुः । दातृतः सर्वदातृत्वात् । ददातेरेकारः । ''कृन्मेजन्त'' इत्यव्ययम् । वर्तमानत्वास्सर्वत्र वः । वृतु वर्तने । ततो डः । वाश्चासावसुश्चासौ दे चासौ वश्चेति विग्रहः । इति चतुर्थोऽर्थः ।

ಬಲಸ್ವರೂಪನಾದ್ದರಿಂದ 'ವಾ' ಎನಿಸಿದ್ದಾನೆ. ಪ್ರಾಣರೂಪನಾದ್ದರಿಂದ 'ಅಸು' ಎನಿಸಿದ್ದಾನೆ. ಎಲ್ಲವನ್ನು ಕೊಡುವವನಾದ್ದರಿಂದ 'ದೇ' ಎನಿಸಿದ್ದಾನೆ. 'ದಾ' ಎಂಬ ಶಬ್ದದ ಮೇಲೆ ಏಕಾರವು ಬಂದರೆ 'ಕೃನ್ಮೇಜಂತಃ' ಎಂಬ ಸೂತ್ರದಂತೆ ಅವ್ಯಯಸ್ವರೂಪವಾಗುತ್ತದೆ. ಎಲ್ಲೆಡೆ ಇರುವವನಾದ್ದರಿಂದ 'ವಾ' ಎನಿಸಿದ್ದಾನೆ. 'ವೃತು ವರ್ತನೇ' ಎಂಬ ಧಾತುವಿನ ಮೇಲೆ 'ಡ' ಪ್ರತ್ಯಯವು ಬಂದು 'ವಾಃ' ಎಂಬ ರೂಪವು ನಿಷ್ಪನ್ನವಾಗಿದೆ. ಆದ್ದರಿಂಧ 'ವಾಶ್ಚಾಸೌ ಅಸುಶ್ಚಾಸೌ ದೇ ಚಾಸೌ ವಶ್ಚ' ಎಂದು ವಿಗ್ರಹ ಮಾಡಬೇಕು. ಬಲಸ್ವರೂಪನಾದ, ಪ್ರಾಣರೂಪನಾದ, ಎಲ್ಲವನ್ನೂ ಕೊಡುವವನಾದ ಎಲ್ಲೆಡೆ ವಾಸಿಸುವವನೇ ವಾಸುದೇವನಾಗಿದ್ದಾನೆ. ಇದು ನಾಲ್ಕನೆಯ ವಾಖ್ಯಾನ

**प्रकाशः** – इयं च सौकरायणश्रुतिः कर्मनिर्णयटीकायां व्याख्याता ।

ಗ್ರಂಥದಲ್ಲಿ ಉಲ್ಲೇಖ ಮಾಡಲ್ಪಟ್ಟ 'ವಾನಾತ್ ಸೂತೇರ್ದೇವನಾತ್ ವಾಸುದೇವೋ' ಎಂಬುದು ಸೌಕರಾಯಣ ಶ್ರುತಿಯಾಗಿದೆ. ಇದನ್ನು ಕರ್ಮನಿರ್ಣಯಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – लोकेऽन्यत्र निरूढनाम्नस्तथात्वे श्रुतिमाह – अद्यत इति ॥ तैत्तिरीयश्रुतौ सर्वभूतैरद्यत्वादुपजीव्यत्वात्सर्वभूतसंहर्तृत्वाच्चान्नमुच्यते ।

ಲೋಕದಲ್ಲಿ ಅನ್ಯತ್ರರೂಢವಾದ ಶಬ್ದವು ಅನೇಕಾರ್ಥವನ್ನು ಹೊಂದಿದೆಯೆಂಬ ವಿಷಯದಲ್ಲಿ ಮತ್ತೊಂದು ಶ್ರುತಿಯನ್ನು ಉದಾಹರಿಸುತ್ತಿದ್ದಾರೆ 'ಅದ್ಯತೇ ಅತ್ತಿ ಚ' ಎಂಬುದಾಗಿ. ತೈತ್ತಿರೀಯಶ್ರುತಿಯಲ್ಲಿ ಎಲ್ಲ ಭೂತಗಳಿಂದ ಅದ್ಯವಾಗಿದೆ ಅಂದರೆ ಉಪಜೀವ್ಯವಾಗಿದೆ. ಮತ್ತು ಪ್ರಾಣಿವರ್ಗಕ್ಕೆ ಸಂಹಾರಕವಾಗಿದೆ. ಆದ್ದರಿಂದ 'ಅನ್ನ' ಎಂದು ಕರೆಯಲ್ಪಡುತ್ತದೆ. ಇಂತಹ ವಸ್ತು ಪರಮಾತ್ಮನೆಂದು ಶ್ರುತಿಯೇ ವ್ಯಾಖ್ಯಾನಿಸಿದೆ.

**प्रकाशः** – 'अद भक्षणे' इत्यतः कर्मणि कर्तरि च निष्ठाप्रत्यये ''रदाभ्यां निष्ठातो नः पूर्वस्य च दः'' इति नत्वेऽन्नमिति रूपमित्यन्नशब्दस्य कर्मत्वकर्तृत्व-रूपानेकार्थत्वमुच्यते ।

'ಅದ ಭಕ್ಷಣೇ' ಎಂಬ ಧಾತುವಿನ ಮೇಲೆ ಕರ್ಮಾರ್ಥದಲ್ಲಿ ಹಾಗೂ ಕರ್ತರ್ಥದಲ್ಲಿ ನಿಷ್ಠಾಪ್ರತ್ಯಯವು ಬರುತ್ತದೆ. ನಿಷ್ಠಾಪ್ರತ್ಯಯವೆಂದರೆ 'ಕ್ತ' ಪ್ರತ್ಯಯವೆಂದರ್ಥ. ಅನಂತರ 'ರದಾಭ್ಯಾಂ ನಿಷ್ಠಾತೋ ನಃ ಪೂರ್ವಸ್ಯ ಚ ದಃ' ಎಂಬ ಸೂತ್ರದಿಂದ 'ಅದ್' ಎಂಬಲ್ಲಿರುವ ದಕಾರಕ್ಕೆ ನಕಾರವು ಬಂದರೆ 'ಅನ್' ಎಂದಾಗುತ್ತದೆ. ಅನಂತರ 'ಕ್ತ' ಪ್ರತ್ಯಯದಲ್ಲಿ ಕಕಾರವು ಲೋಪವಾಗಿ ತಕಾರ ಮಾತ್ರ ಉಳಿದಿರುತ್ತದೆ. ಆ ತಕಾರಕ್ಕೂ ಕೂಡ ನಕಾರವು ಇದೇ ಸೂತ್ರದಿಂದ ಪ್ರಾಪ್ತವಾದರೆ 'ಅನ್ನ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಒಂದೇ ಈ ಅನ್ನ ಶಬ್ದಕ್ಕೆ ಅದನಕ್ಕೆ ಕರ್ಮವೆಂದು ಮತ್ತು ಕರ್ತೃವೆಂದು ಅನೇಕಾರ್ಥವನ್ನು ಹೇಳಲಾಗಿದೆ. ಅದನಕರ್ಮತ್ವವೆಂದರೆ ಎಲ್ಲ ಪ್ರಾಣಿಗಳನ್ನು ಸಂಹಾರ ಮಾಡುತ್ತಾನೆಂದರ್ಥ. ಹೀಗೆ ಒಂದು ಅನ್ನ ಶಬ್ದವು ಎರಡರ್ಥವನ್ನು ಹೇಳುತ್ತಿದೆ.

**प्रकाशः –** आदिपदेन ''अथ कस्मादुच्यते ब्रह्मेति बृहति बृंहयति च'' इति श्रुतिर्गृह्यते ।

ಗ್ರಂಥದಲ್ಲಿ 'ಇತ್ಯಾದಿ ಶ್ರುತೌ' ಎಂದು ಹೇಳಿದ್ದಾರೆ. ಆದಿಪದದಿಂದ 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹತಿ ಬೃಂಹಯತಿ ಚ' ಎಂಬ ಶ್ರುತಿಯನ್ನು ವಿವಕ್ಷಿಸಬೇಕು. ಒಂದೇ ಬ್ರಹ್ಮಶಬ್ದಕ್ಕೆ 'ಬೃಹತಿ' ಎಂಬ 'ಬೃಂಹಯತಿ' ಎಂಬೆರಡರ್ಥವನ್ನು ಶ್ರುತಿಯು ಹೇಳುತ್ತಿದೆ.

**प्रकाशः –** स्मृतिसम्मतं चानेकार्थत्वमित्याह – **गतिश्चेति** ।। गच्छन्त्यनेनेति गतिः । भूतानां पृथिव्यादीनाम् । प्रजानां ब्रह्मादीनाम् । वि गतिव्याप्ति-प्रजनकान्त्यसनखादनेष्वित्यतो गत्यर्थात् क्स्नुप्रत्ययो धातोर्ह्रस्वश्चेत्याद्योऽर्थः ।

ಅನೇಕಾರ್ಥವಿಷಯದಲ್ಲಿ ಸ್ಮೃತಿಸಮ್ಮತಿಯನ್ನೂ ಕೂಡ ಹೇಳುತ್ತಿದ್ದಾರೆ 'ಗತಿಶ್ಚ' ಇತ್ಯಾದಿ ವಾಕ್ಯದಿಂದ. ವಿಷ್ಣು ಎಂಬ ಶಬ್ದಕ್ಕೆ ಅನೇಕಾರ್ಥವನ್ನು ಈ ಸ್ಮೃತಿವಾಕ್ಯವು ಸಮರ್ಥಿಸುತ್ತಿದೆ. 'ವಿ' ಎಂಬ ಉಪಸರ್ಗಕ್ಕೆ ಗತಿಯೆಂದರ್ಥ. 'ಗಚ್ಛಂತ್ಯನೇನ ಇತಿ ಗತಿಃ' ಯಾವ ಪೃಥಿವ್ಯಾದಿಗಳು, ಮತ್ತು ಬ್ರಹ್ಮದೇವರೇ ಮೊದಲಾದವರು ಯಾರಿಂದ ಕ್ರಿಯಾಶೀಲರಾಗಿದ್ದಾರೋ, ಅಂತಹವನೇ 'ವಿ' ಎನಿಸಿಕೊಳ್ಳುತ್ತಾನೆ. 'ವಿ ಗತಿವ್ಯಾಪ್ತಿಪ್ರಜನಕಾನಂತ್ಯಸನಖಾದನೇಷು' ಎಂಬ ಸೂತ್ರದಿಂದ ಗತ್ಯರ್ಥಕವಾದ ವಿ' ಶಬ್ದದ ಮೇಲೆ 'ಕ್ಸ್ನು' ಪ್ರತ್ಯಯವು ಬರುತ್ತದೆ. ಅನಂತರ 'ಹ್ರಸ್ವಶ್ಚ' ಎಂಬ ಸೂತ್ರದಿಂದ 'ವಿ' ಎಂಬ ಧಾತುವಿನ ದೀರ್ಘಕ್ಕೆ ಹ್ರಸ್ವವು ಬಂದರೆ ವಿಷ್ಣು ಎಂದಾಗುತ್ತದೆ. ಅನಂತರ ಸಕಾರಕ್ಕೆ ಷಕಾರವು ನಕಾರಕ್ಕೆ ಷ್ಟುತ್ವವು ಬಂದರೆ ವಿಷ್ಣು ಎಂಬ ರೂಪವು ನಿಷ್ಪನ್ನವಾಗುತ್ತದೆ. ಇದು ವಿಷ್ಣುಶಬ್ದದ ಮೊದಲನೆಯ ಅರ್ಥ.

**प्रकाशः –** मे मया । रोदसी द्यावापृथिव्यौ व्याप्ते । विष्लृ व्याप्तावित्यतः कुप्रत्यय इति द्वितीयः ।

'ವಿಷ್ಲೃ ವ್ಯಾಪ್ತೌ' ಎಂಬ ಧಾತುವಿನ ಮೇಲೆ 'ಕು' ಪ್ರತ್ಯಯವು ಬಂದು ವಿಷ್ಣು ಎಂಬ ರೂಪವು ನಿಷ್ಪನ್ನವಾಗಿದೆ. ನನ್ನಿಂದ ದ್ಯಾವಾಪೃಥಿವಿಗಳೆಲ್ಲವೂ ವ್ಯಾಪ್ತವಾಗಿದೆ ಎಂಬುದು ಎರಡನೆಯ ಅರ್ಥ.

**प्रकाशः –** कान्तिः कमनीयता । 'वश कान्तौ' इत्यतो नुप्रत्ययो धातोरकारस्येकारः शकारस्य षकारः । वी गतीत्यतो वा कान्तिकर्मणि क्स्नुरिति तृतीयः ॥

'ವಶ ಕಾಂತೌ' ಎಂಬ ಧಾತುವಿನ ಮೇಲೆ 'ನು' ಪ್ರತ್ಯಯವು ಬಂದು 'ವಶ್' ಎಂಬಲ್ಲಿರುವ ವಕಾರದ ಅಕಾರಕ್ಕೆ ಇಕಾರವು ಬರುತ್ತದೆ. ಅನಂತರ ಶಕಾರಕ್ಕೆ ಮೂರ್ಧನ್ಯಾದೇಶವು ಬಂದು 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗಿದೆ. ಅಥವಾ 'ವಿಗತಿ' ಎಂಬ ಧಾತುವಿನ ಮೇಲೆ 'ಕ್ಸ್ನು' ಪ್ರತ್ಯಯ ಬಂದಾಗ 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗಿದೆ. ಈ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ಅತ್ಯಂತ ಸುಂದರವಾದ ಕಾಂತಿಯುಳ್ಳವನು ಎಂಬರ್ಥವನ್ನು ಹೇಳಿದಂತಾಗುತ್ತದೆ. ಇದು ಮೂರನೆಯ ಅರ್ಥ.

**प्रकाशः – अधिभूतेति ॥** 'विश प्रवेशने' इत्यतः क्नुःषत्वं चेति चतुर्थः ।

'ವಿಶ ಪ್ರವೇಶನೇ' ಎಂಬ ಧಾತುವಿನ ಮೇಲೆ 'ಕ್ನುಃ' ಪ್ರತ್ಯಯ ಹಾಗೂ 'ಷತ್ವ'ಗಳು ಬಂದರೆ ವಿಷ್ಣು ಎಂಬ ರೂಪವು ನಿಷ್ಪನ್ನವಾಗುತ್ತದೆ. ಎಲ್ಲಾ ಭೂತಪದಾರ್ಥಗಳಲ್ಲಿ ಪ್ರವೇಶಿಸಿದ್ದಾನೆ ಎಂಬರ್ಥವು ದೊರೆಯುತ್ತದೆ. ಇದು ನಾಲ್ಕನೆಯ ಅರ್ಥ.

**प्रकाशः –** तदिच्छुः अधिभूतस्य जन्मादीच्छुः । कान्तिरिच्छा । वयतेर्वष्टेश्च पूर्ववद्रूपमिति पञ्चमः ।

'ವಶ ಕಾಂತೌ' ಎಂಬ ಧಾತುವಿನ ಮೇಲೆ 'ನು' ಪ್ರತ್ಯಯವನ್ನೇ ಮಾಡಿದಾಗ 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗುತ್ತದೆಂದು ಹಿಂದೆ ಹೇಳಲಾಯಿತು. ಆ ನಿಷ್ಪತ್ತಿಯಂತೆ ಅಧಿಭೂತಗಳ ಸೃಷ್ಟ್ಯಾದಿಗಳನ್ನು ಮಾಡಲು ಇಚ್ಛಿಸುವವನು ಎಂಬರ್ಥವನ್ನೂ ಕೂಡ ಹೇಳಬಹುದು. ಇದು ಐದನೆಯ ಅರ್ಥ.

**प्रकाशः –** क्रमणात् त्रिविक्रमरूपेण पादविक्षेपात् । पूर्ववद्वयतेर्गत्यर्थात्पूर्ववत् कर्तरि प्रत्यय इति षष्ठः ॥

ಮೊದಲನೆಯ ವ್ಯುತ್ಪತ್ತಿಯನ್ನು ತೋರಿಸುವಾಗ 'ವಿ'ಧಾತುವಿಗೆ ಗತಿ ಎಂಬರ್ಥವನ್ನು ವಿವಕ್ಷಿಸಿ ಕರ್ತರ್ಥದಲ್ಲಿ 'ಷ್ಣು' ಪ್ರತ್ಯಯವನ್ನು ಹೇಳಲಾಗಿತ್ತು. ಆ ನಿಷ್ಪತ್ತಿಯಂತೆ ತ್ರಿವಿಕ್ರಮರೂಪದಿಂದ ಎಲ್ಲೆಡೆ ಆಕ್ರಮಣ ಮಾಡಿದ್ದಾನಾದ್ದರಿಂದಲೂ 'ವಿಷ್ಣು' ಎನಿಸುತ್ತಾನೆ. ಇದು ಆರನೆಯ ಅರ್ಥ.

**प्रकाशः – स्मृताविति ॥** दशमगीताभाष्योक्तमोक्षधर्मस्मृतावित्यर्थः । एवमेव तत्र टीकायां व्याख्याता । आदिपदेन "यच्चाप्नोति यदादत्ते" इत्यादिका स्मृतिर्गृह्यते ।

ಪರಿಪೂರ್ಣಚಂದ್ರಿಕಾ

'ಸ್ಮೃತೌ' ಎಂದರೆ ಹತ್ತನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಉದಾಹರಿಸಿದ ಮೋಕ್ಷಧರ್ಮಸ್ಮೃತಿಯಲ್ಲಿ ಈ ವಿಷ್ಣುಶಬ್ದದ ನಿಷ್ಪತ್ತಿ ಮಾಡುವ ವಾಕ್ಯವಿದೆಯೆಂದರ್ಥ. ಪ್ರಮೇಯದೀಪಿಕಾದಲ್ಲಿ ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ. ಸ್ಪಷ್ಟತೆಗಾಗಿ ಅದನ್ನು ಓದಬೇಕು. ಆದಿಪದದಿಂದ 'ಯಚ್ಚಾಪ್ನೋತಿ ಯದಾದತ್ತೇ' ಇತ್ಯಾದಿ ಸ್ಮೃತಿಗಳನ್ನು ಸ್ವೀಕರಿಸಬೇಕು.

**प्रकाशः** – सकलशाखानिर्णायकेन सूत्रकृतैव श्रुतेरनेकार्थत्वमुक्तमित्याह – **स्वाप्ययेति** ।। एवकारेण तदुक्तावविगानमाह – चतुर्थस्य चतुर्थपादे ''तीर्णो हि तदा सर्वान् शोकान् हृदयस्य भवति'' इति वाक्यस्य स्वर्गस्थपरत्वमाशङ्क्य सुप्तिमुक्तयुभयापेक्षमिदं वाक्यम् । अपितृत्वादिपुण्यपापाद्यसङ्गत्वादिलिङ्गश्रवणादिति वक्ष्यमाणत्वादित्यर्थः ।

ಅನೇಕಾರ್ಥತ್ವವು ಅನ್ಯಾಯವಲ್ಲ ಎಂಬುದನ್ನು ಸೂತ್ರಕಾರರೂ ಕೂಡ ಸಮರ್ಥನೆ ಮಾಡಿದ್ದಾರೆ. ಎಲ್ಲ ಶಾಖೆಗಳ ನಿರ್ಣಯಕ್ಕೋಸ್ಕರವೇ ಬ್ರಹ್ಮಸೂತ್ರವನ್ನು ರಚನೆ ಮಾಡಿದ್ದಾರೆ. 'ಸ್ವಾಪ್ಯಯಸಂಪತ್ತ್ಯೋರನ್ಯತ-ರಾಪೇಕ್ಷಮಾವಿಷ್ಕೃತಂ ಹಿ' ಎಂಬುದಾಗಿ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದದ ಸೂತ್ರದಲ್ಲಿ ಒಂದೇ ಶ್ರುತಿಗೆ ಅನೇಕಾರ್ಥವನ್ನು ಸಮರ್ಥನೆ ಮಾಡಿದ್ದಾರೆ. ಈ ಸೂತ್ರಾರ್ಥದಲ್ಲಿ ಯಾವುದೇ ವಿಪ್ರತಿಪತ್ತಿ ಇರುವುದಿಲ್ಲ ಎಂದು ತಿಳಿಸಲು ಗ್ರಂಥದಲ್ಲಿ 'ಸೂತ್ರಕಾರೇಣೈವ' ಎಂಬುದಾಗಿ ಏವಕಾರವನ್ನು ನಿರ್ದೇಶಿಸಿದ್ದಾರೆ. 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' ಎಂಬ ವಾಕ್ಯವು ಸ್ವರ್ಗದಲ್ಲಿರುವವರನ್ನು ಪ್ರತಿಪಾದನೆ ಮಾಡುತ್ತದೆಂದು ಆಶಂಕಿಸಿ ಸುಷುಪ್ತಿಯನ್ನು ಹಾಗೂ ಮುಕ್ತರನ್ನು ಸಮರ್ಥನೆ ಮಾಡುತ್ತಿದೆ ಹೊರತು, ಸ್ವರ್ಗದಲ್ಲಿರುವವರನ್ನು ಪ್ರತಿಪಾದನೆ ಮಾಡುತ್ತಿಲ್ಲವೆಂದು ಸಿದ್ಧಾಂತ ಮಾಡಿದ್ದಾರೆ. ಏಕೆಂದರೆ 'ಅಪಿತೃತ್ವ' (ತಂದೆಯಿಲ್ಲದಿರುವಿಕೆ) 'ಪುಣ್ಯಪಾಪಾದ್ಯಸಂಗತ್ವ' (ಪುಣಪಾಪಗಳ ಸಂಪರ್ಕವಿಲ್ಲದಿರುವಿಕೆ) ಇವೇ ಮೊದಲಾದ ಲಿಂಗಗಳು ಆ ವಾಕ್ಯದಲ್ಲಿ ಕೇಳಿಸುತ್ತಿರುವುದರಿಂದ ಸುಪ್ತಿ ಹಾಗೂ ಮುಕ್ತರನ್ನು ಮಾತ್ರ ಪ್ರತಿಪಾದನೆ ಮಾಡುತ್ತಿದೆಯೆಂದು ನಿರ್ಣಯಿಸಿದ್ದಾರೆ. ಹೀಗೆ ಒಂದೇ ವಾಕ್ಯಕ್ಕೆ ಅನೇಕಾರ್ಥವನ್ನು ಹೇಳುವುದು ಸೂತ್ರಕಾರರಿಗೂ ಸಮ್ಮತವಾಗಿದೆ.

**प्रकाशः** – ननु तत्सूत्रं न प्रकृतानुगुणम् । अन्यतरशब्देनैकार्थत्वस्यैव प्रतीतेः । अन्यथा स्वाप्ययसम्पत्त्यपेक्षमित्येतावतैव पूर्तेरन्यतरापेक्षमिति व्यर्थमिति चेन्न ।

स्वाप्ययसम्पत्त्यपेक्षमित्युक्तौ स्वाप्यये मोक्षे या सम्पत्तिस्सुप्तिः तदपेक्षं तद्विषयमिति बुद्धिस्स्यात् । तन्निवृत्त्यर्थं स्वाप्ययसम्पत्त्योर्मध्येऽन्यतरापेक्षमि-त्युक्तत्वात् । अन्यथैकार्थत्वे वस्तुनि विकल्पायोगेन स्वाप्ययापेक्षमिति वा संपत्त्यपेक्षमिति वा ब्रूयात् । ननु सम्बन्धे षष्ठीमङ्गीकृत्य स्वाप्ययसम्पत्त्योरित्येव

**प्रकाशः** – कान्तिः कमनीयता । 'वश कान्तौ' इत्यतो नुप्रत्ययो धातोरकारस्येकारः शकारस्य षकारः । वी गतीत्यतो वा कान्तिकर्मणि क्स्नुरिति तृतीयः ।।

'ವಶ ಕಾಂತೌ' ಎಂಬ ಧಾತುವಿನ ಮೇಲೆ 'ನು' ಪ್ರತ್ಯಯವು ಬಂದು 'ವಶ್' ಎಂಬಲ್ಲಿರುವ ವಕಾರದ ಅಕಾರಕ್ಕೆ ಇಕಾರವು ಬರುತ್ತದೆ. ಅನಂತರ ಶಕಾರಕ್ಕೆ ಮೂರ್ಧನ್ಯಾದೇಶವು ಬಂದು 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗಿದೆ. ಅಥವಾ 'ವಿಗತಿ' ಎಂಬ ಧಾತುವಿನ ಮೇಲೆ 'ಕ್ಸ್ನು' ಪ್ರತ್ಯಯ ಬಂದಾಗ 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗಿದೆ. ಈ ವ್ಯುತ್ಪತ್ತಿಯನ್ನು ಆಶ್ರಯಿಸಿದಾಗ ಅತ್ಯಂತ ಸುಂದರವಾದ ಕಾಂತಿಯುಳ್ಳವನು ಎಂಬರ್ಥವನ್ನು ಹೇಳಿದಂತಾಗುತ್ತದೆ. ಇದು ಮೂರನೆಯ ಅರ್ಥ.

**प्रकाशः** – **अधिभूतेति** ।। 'विश प्रवेशने' इत्यतः क्नुःषत्वं चेति चतुर्थः ।

'ವಿಶ ಪ್ರವೇಶನೇ' ಎಂಬ ಧಾತುವಿನ ಮೇಲೆ 'ಕ್ನುಃ' ಪ್ರತ್ಯಯ ಹಾಗೂ 'ಷತ್ವ'ಗಳು ಬಂದರೆ ವಿಷ್ಣು ಎಂಬ ರೂಪವು ನಿಷ್ಪನ್ನವಾಗುತ್ತದೆ. ಎಲ್ಲಾ ಭೂತಪದಾರ್ಥಗಳಲ್ಲಿ ಪ್ರವೇಶಿಸಿದ್ದಾನೆ ಎಂಬರ್ಥವು ದೊರೆಯುತ್ತದೆ. ಇದು ನಾಲ್ಕನೆಯ ಅರ್ಥ.

**प्रकाशः** – तदिच्छुः अधिभूतस्य जन्मादीच्छुः । कान्तिरिच्छा । वयतेर्वष्टेश्च पूर्ववद्रूपमिति पञ्चमः ।

'ವಶ ಕಾಂತೌ' ಎಂಬ ಧಾತುವಿನ ಮೇಲೆ 'ನು' ಪ್ರತ್ಯಯವನ್ನೇ ಮಾಡಿದಾಗ 'ವಿಷ್ಣು' ಎಂಬ ರೂಪವು ನಿಷ್ಪನ್ನವಾಗುತ್ತದೆಂದು ಹಿಂದೆ ಹೇಳಲಾಯಿತು. ಆ ನಿಷ್ಪತ್ತಿಯಂತೆ ಅಧಿಭೂತಗಳ ಸೃಷ್ಟ್ಯಾದಿಗಳನ್ನು ಮಾಡಲು ಇಚ್ಛಿಸುವವನು ಎಂಬರ್ಥವನ್ನೂ ಕೂಡ ಹೇಳಬಹುದು. ಇದು ಐದನೆಯ ಅರ್ಥ.

**प्रकाशः** – क्रमणात् त्रिविक्रमरूपेण पादविक्षेपात् । पूर्ववद्वयतेर्गत्यर्थात्पूर्ववत् कर्तरि प्रत्यय इति षष्ठः ।।

ಮೊದಲನೆಯ ವ್ಯುತ್ಪತ್ತಿಯನ್ನು ತೋರಿಸುವಾಗ 'ವಿ'ಧಾತುವಿಗೆ ಗತಿ ಎಂಬರ್ಥವನ್ನು ವಿವಕ್ಷಿಸಿ ಕರ್ತರ್ಥದಲ್ಲಿ 'ಷ್ಣು' ಪ್ರತ್ಯಯವನ್ನು ಹೇಳಲಾಗಿತ್ತು. ಆ ನಿಷ್ಪತ್ತಿಯಂತೆ ತ್ರಿವಿಕ್ರಮರೂಪದಿಂದ ಎಲ್ಲೆಡೆ ಆಕ್ರಮಣ ಮಾಡಿದ್ದಾನಾದ್ದರಿಂದಲೂ 'ವಿಷ್ಣು' ಎನಿಸುತ್ತಾನೆ. ಇದು ಆರನೆಯ ಅರ್ಥ.

**प्रकाशः** – **स्मृताविति** ।। दशमगीताभाष्योक्तमोक्षधर्मस्मृतावित्यर्थः । एवमेव तत्र टीकायां व्याख्याता । आदिपदेन ''यच्चाप्नोति यदादत्ते'' इत्यादिका स्मृतिर्गृह्यते ।

'ಸ್ಮೃತೌ' ಎಂದರೆ ಹತ್ತನೆಯ ಅಧ್ಯಾಯದ ಗೀತಾಭಾಷ್ಯದಲ್ಲಿ ಉದಾಹರಿಸಿದ ಮೋಕ್ಷಧರ್ಮಸ್ಮೃತಿಯಲ್ಲಿ ಈ ವಿಷ್ಣುಶಬ್ದದ ನಿಷ್ಪತ್ತಿ ಮಾಡುವ ವಾಕ್ಯವಿದೆಯೆಂದರ್ಥ. ಪ್ರಮೇಯದೀಪಿಕಾದಲ್ಲಿ ಹೀಗೆಯೇ ವ್ಯಾಖ್ಯಾನ ಮಾಡಿದ್ದಾರೆ. ಸ್ಪಷ್ಟತೆಗಾಗಿ ಅದನ್ನು ಓದಬೇಕು. ಆದಿಪದದಿಂದ 'ಯಚ್ಚಾಪ್ನೋತಿ ಯದಾದತ್ತೇ' ಇತ್ಯಾದಿ ಸ್ಮೃತಿಗಳನ್ನು ಸ್ವೀಕರಿಸಬೇಕು.

**प्रकाशः** – सकलशाखानिर्णायकेन सूत्रकृतैव श्रुतेरनेकार्थत्वमुक्तमित्याह – **स्वाप्ययेति** ।। एवकारेण तदुक्तावविगानमाह – चतुर्थस्य चतुर्थपादे ''तीर्णो हि तदा सर्वान् शोकान् हृदयस्य भवति'' इति वाक्यस्य स्वर्गस्थपरत्वमाशङ्क्य सुप्तिमुक्तयुभयापेक्षमिदं वाक्यम् । अपितृत्वादिपुण्यपापाद्यसङ्गत्वादिलिङ्गश्रवणादिति वक्ष्यमाणत्वादित्यर्थः ।

ಅನೇಕಾರ್ಥತ್ವವು ಅನ್ಯಾಯವಲ್ಲ ಎಂಬುದನ್ನು ಸೂತ್ರಕಾರರೂ ಕೂಡ ಸಮರ್ಥನೆ ಮಾಡಿದ್ದಾರೆ. ಎಲ್ಲ ಶಾಖೆಗಳ ನಿರ್ಣಯಕ್ಕೋಸ್ಕರವೇ ಬ್ರಹ್ಮಸೂತ್ರವನ್ನು ರಚನೆ ಮಾಡಿದ್ದಾರೆ. 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂಬುದಾಗಿ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದದ ಸೂತ್ರದಲ್ಲಿ ಒಂದೇ ಶ್ರುತಿಗೆ ಅನೇಕಾರ್ಥವನ್ನು ಸಮರ್ಥನೆ ಮಾಡಿದ್ದಾರೆ. ಈ ಸೂತ್ರಾರ್ಥದಲ್ಲಿ ಯಾವುದೇ ವಿಪ್ರತಿಪತ್ತಿ ಇರುವುದಿಲ್ಲ ಎಂದು ತಿಳಿಸಲು ಗ್ರಂಥದಲ್ಲಿ 'ಸೂತ್ರಕಾರೇಣೈವ' ಎಂಬುದಾಗಿ ಏವಕಾರವನ್ನು ನಿರ್ದೇಶಿಸಿದ್ದಾರೆ. 'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ' ಎಂಬ ವಾಕ್ಯವು ಸ್ವರ್ಗದಲ್ಲಿರುವವರನ್ನು ಪ್ರತಿಪಾದನೆ ಮಾಡುತ್ತದೆಂದು ಆಶಂಕಿಸಿ ಸುಷುಪ್ತಿಯನ್ನು ಹಾಗೂ ಮುಕ್ತರನ್ನು ಸಮರ್ಥನೆ ಮಾಡುತ್ತಿದೆ ಹೊರತು, ಸ್ವರ್ಗದಲ್ಲಿರುವವರನ್ನು ಪ್ರತಿಪಾದನೆ ಮಾಡುತ್ತಿಲ್ಲವೆಂದು ಸಿದ್ಧಾಂತ ಮಾಡಿದ್ದಾರೆ. ಏಕೆಂದರೆ 'ಅಪಿತೃತ್ವ' (ತಂದೆಯಿಲ್ಲದಿರುವಿಕೆ) 'ಪುಣ್ಯಪಾಪಾದ್ಯಸಂಗತ್ವ' (ಪುಣಪಾಪಗಳ ಸಂಪರ್ಕವಿಲ್ಲದಿರುವಿಕೆ) ಇವೇ ಮೊದಲಾದ ಲಿಂಗಗಳು ಆ ವಾಕ್ಯದಲ್ಲಿ ಕೇಳಿಸುತ್ತಿರುವುದರಿಂದ ಸುಪ್ತಿ ಹಾಗೂ ಮುಕ್ತರನ್ನು ಮಾತ್ರ ಪ್ರತಿಪಾದನೆ ಮಾಡುತ್ತಿದೆಯೆಂದು ನಿರ್ಣಯಿಸಿದ್ದಾರೆ. ಹೀಗೆ ಒಂದೇ ವಾಕ್ಯಕ್ಕೆ ಅನೇಕಾರ್ಥವನ್ನು ಹೇಳುವುದು ಸೂತ್ರಕಾರರಿಗೂ ಸಮ್ಮತವಾಗಿದೆ.

**प्रकाशः** – ननु तत्सूत्रं न प्रकृतानुगुणम् । अन्यतरशब्देनैकार्थत्वस्यैव प्रतीतेः । अन्यथा स्वाप्ययसम्पत्त्यपेक्षमित्येतावतैव पूर्तेरन्यतरापेक्षमिति व्यर्थमिति चेन्न ।

स्वाप्ययसम्पत्त्यपेक्षमित्युक्तौ स्वाप्यये मोक्षे या सम्पत्तिस्सुप्तिः तदपेक्षं तद्विषयमिति बुद्धिस्स्यात् । तन्निवृत्त्यर्थं स्वाप्ययसम्पत्त्योर्मध्येऽन्यतरापेक्षमित्युक्तत्वात् । अन्यथैकार्थत्वे वस्तुनि विकल्पायोगेन स्वाप्ययापेक्षमिति वा संपत्त्यपेक्षमिति वा ब्रूयात् । ननु सम्बन्धे षष्ठीमङ्गीकृत्य स्वाप्ययसम्पत्त्योरित्येव

**कुतो न कृतम् । उच्यते । ''अनेकार्थस्यास्यैकार्थव्याख्याने रुचिरेव व्याख्यातुः प्रमाणं न मुख्यामुख्यताविशेषोऽस्तीति सूचयितुमन्यतरापेक्षमित्युक्तम्'' इति कर्मनिर्णयटीकायामेवोक्तेरिति भावः ।**

'ಸ್ವಾಪ್ಯಯಸಂಪತ್ತಿ' ಇತ್ಯಾದಿ ಸೂತ್ರವು ಪ್ರಕೃತಕ್ಕೆ ಅನುಗುಣವಾಗಿಲ್ಲ. ಅನ್ಯತರ ಶಬ್ದದಿಂದ ಏಕಾರ್ಥದ ಪ್ರತೀತಿಯೇ ಬರುತ್ತಿದೆ. ಇಲ್ಲದಿದ್ದಲ್ಲಿ 'ಸ್ವಾಪ್ಯಯಸಂಪತ್ತ್ಯಪೇಕ್ಷಂ' ಎಂಬುದರಿಂದಲೇ ಸೂತ್ರದ ಅಭಿಪ್ರಾಯವು ಪೂರ್ಣವಾಗುತ್ತಿರಲು 'ಅನ್ಯತರಾಪೇಕ್ಷಂ' ಎಂಬುದು ವ್ಯರ್ಥವಾಗುತ್ತಿತ್ತು. ಹೀಗೆ ಪ್ರಶ್ನಿಸಬಾರದು. ಏಕೆಂದರೆ 'ಸ್ವಾಪ್ಯಯಸಂಪತ್ತ್ಯಪೇಕ್ಷ್ಯಮ್' ಎಂದಷ್ಟೇ ಹೇಳಿದರೆ ಸ್ವಾಪ್ಯಯೇ = ಮೋಕ್ಷದಲ್ಲಿ, ಸಂಪತ್ತಿಃ = ಸುಷುಪ್ತಿಯು, ತದಪೇಕ್ಷಮ್ = ತದ್ವಿಷಯಕವಾದದ್ದು. ಹೀಗೆ ಅರ್ಥವಾಗುತ್ತಿತ್ತು. ಅದರ ನಿವಾರಣೆಗಾಗಿ ಸ್ವಾಪ್ಯಯ ಹಾಗೂ ಸಂಪತ್ತಿ ಈ ಎರಡು ಪದಗಳ ಮಧ್ಯದಲ್ಲಿ 'ಅನ್ಯತರಾಪೇಕ್ಷಂ' ಎಂಬುದಾಗಿ ಹೇಳಿರುತ್ತಾರೆ. ಇಲ್ಲದಿದ್ದರೆ ಒಂದೇ ಅರ್ಥವನ್ನು ಹೇಳಿದಂತಾಗುತ್ತಿತ್ತು. ಆವಾಗ ವಸ್ತುವಿನಲ್ಲಿ ವಿಕಲ್ಪವು ಬಾಧಿತವಾದ್ದರಿಂದ 'ಸ್ವಾಪ್ಯಯಾಪೇಕ್ಷಮ್' ಎಂಬುದಾಗಿ 'ಸಂಪತ್ತ್ಯಪೇಕ್ಷಮ್' ಎಂಬುದಾಗಿ ಹೇಳುತ್ತಿದ್ದರು.

ಸಂಬಂಧಾರ್ಥದಲ್ಲಿ ಷಷ್ಠೀವಿಭಕ್ತಿಯನ್ನು ಅಂಗೀಕರಿಸಿ, 'ಸ್ವಾಪ್ಯಯಸಂಪತ್ತ್ಯೋಃ' ಎಂದೇಕೆ ಹೇಳಿರುವುದಿಲ್ಲ ? ಎಂದು ಪ್ರಶ್ನಿಸಬಾರದು. ಈ ಪ್ರಶ್ನೆಗೆ ಕರ್ಮನಿರ್ಣಯದಲ್ಲಿ 'ಅನೇಕಾರ್ಥಸ್ಯಾಸ್ಯೈಕಾರ್ಥ-ವ್ಯಾಖ್ಯಾನೇ ರುಚಿರೇವ ವ್ಯಾಖ್ಯಾತುಃ ಪ್ರಮಾಣಂ ನ ಮುಖ್ಯಾಮುಖ್ಯತಾವಿಶೇಷೋಽಸ್ತೀತಿ ಸೂಚಯಿತು-ಮನ್ಯತರಾಪೇಕ್ಷಮಿತ್ಯುಕ್ತಮ್' ಎಂಬುದಾಗಿ ಉತ್ತರಿಸಿದ್ದಾರೆ.

**प्रकाशः – ननु क्वचिन्मानान्तरेणानेकार्थत्वेपि न सर्वत्र वेद इत्यत ऋग्भाष्योक्तस्कान्दस्मृतिमाह – त्रयोर्था इति ।।**

ವೇದದಲ್ಲಿ ಕೆಲವು ವಾಕ್ಯಗಳಿಗೆ ಮಾತ್ರ ಅನೇಕಾರ್ಥತ್ವವನ್ನು ಹೇಳಲು ಪ್ರಮಾಣವಿದೆ. ಆದರೆ ವೇದದ ಎಲ್ಲಾ ವಾಕ್ಯಗಳಿಗೂ ಅನೇಕಾರ್ಥವನ್ನು ಹೇಳುವುದಕ್ಕೆ ಯಾವುದೇ ಪ್ರಮಾಣವಿಲ್ಲ ಎಂಬ ಆಕ್ಷೇಪಕ್ಕೆ ಋಗ್ಭಾಷ್ಯದಲ್ಲಿ ಉದಾಹರಿಸಿದ ಸ್ಕಾಂದ ಸ್ಮೃತಿಯನ್ನು ಪ್ರಮಾಣವನ್ನಾಗಿ ನೀಡುತ್ತಿದ್ದಾರೆ 'ತ್ರಯೋರ್ಥಾಃ' ಇತ್ಯಾದಿಯಾಗಿ.

**प्रकाशः – ''विष्णोस्सहस्रनामापि निरन्तरशतार्थकम्'' इति स्मृतिशेषः ।**

'ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ ವಿಷ್ಣೋಃ ಸಹಸ್ರನಾಮಾಪಿ ನಿರಂತರಶತಾರ್ಥಕಮ್' ವೇದದಲ್ಲಿರುವ ಎಲ್ಲಾ ಶಬ್ದಗಳಿಗೂ ಮೂರು ಅರ್ಥವಿದೆ. ಮಹಾಭಾರತಕ್ಕೆ ಹತ್ತು ಅರ್ಥವಿದೆ. ವಿಷ್ಣುಸಹಸ್ರನಾಮಕ್ಕೆ ನೂರು ಅರ್ಥಗಳು ಎಲ್ಲಾ ಕಾಲದಲ್ಲಿ ಇರುತ್ತವೆ.

ಈ ಸ್ಮೃತಿಯಿಂದ ವೇದದ ಪ್ರತಿಯೊಂದು ವಾಕ್ಯಗಳಿಗೂ ಅನೇಕಾರ್ಥವು ಇದ್ದೇ ಇರುತ್ತದೆಂದು ಸ್ಪಷ್ಟವಾಗುತ್ತದೆ.

**प्रकाशः** – ''एकस्तावत्प्रसिद्धेन्द्राग्न्यादिरूपः । अपरस्तु तदन्तर्गतेश्वरलक्षणः । अन्योऽध्यात्मरूपः'' इति ऋग्भाष्यव्याख्यानोक्तिः ।

ವೇದದ ಯಾವುದೇ ವಾಕ್ಯಗಳನ್ನು ತೆಗೆದುಕೊಂಡರೂ ಪ್ರಸಿದ್ಧವಾದ ಇಂದ್ರ, ಅಗ್ನಿ ಮೊದಲಾದ ದೇವತೆಗಳನ್ನು ಪ್ರತಿಪಾದನೆ ಮಾಡುವುದು ಮೊದಲನೆಯ ಅರ್ಥ. ಆಯಾ ಇಂದ್ರಾದಿ ದೇವತೆಗಳಲ್ಲಿ ಅಂತರ್ಗತನಾದ ಈಶ್ವರನನ್ನು ಪ್ರತಿಪಾದನೆ ಮಾಡುವುದು ಎರಡನೆಯ ಅರ್ಥ. ಅಧ್ಯಾತ್ಮವನ್ನು ಪ್ರತಿಪಾದನೆ ಮಾಡುವುದು ಮೂರನೆಯ ಅರ್ಥ. ಹೀಗೆ ಋಗ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ಪ್ರತಿಯೊಂದು ವಾಕ್ಯಗಳಿಗೂ ಮೂರು ಬಗೆಯ ಅರ್ಥಗಳಿಂದ ವೇದವ್ಯಾಖ್ಯಾನ ಮಾಡಿದ್ದಾರೆ.

**प्रकाशः** – नन्वनेकार्थतायां कथं न कल्पनागौरवमित्यत आह – **तदुक्तमिति**।। **बह्वर्थेष्वित्य**नेकार्थकत्वोपलक्षणम् । **अन्यत्रचेति** ।। अत्रैवानुव्याख्यान इत्यर्थः ।

ಅನೇಕಾರ್ಥತ್ವವನ್ನು ಹೇಳಿದರೆ ಕಲ್ಪನಾಗೌರವದೋಷ ಬರುತ್ತದಲ್ಲವೇ ? ಎಂಬ ಆಶಂಕೆಗೆ 'ತದುಕ್ತಮ್' ಎಂಬುದರಿಂದ ಉತ್ತರಿಸಿದ್ದಾರೆ. ಅನೇಕಾರ್ಥವನ್ನು ಹೇಳಿದರೆ ಕಲ್ಪನಾಗೌರವ ದೋಷ ಬರುವುದಿಲ್ಲ ಎಂದು ಕರ್ಮನಿರ್ಣಯದಲ್ಲಿ ಶ್ರೀಮದಾಚಾರ್ಯರೇ ಹೇಳಿದ್ದಾರೆ. 'ಬಹ್ವರ್ಥೇಷು' ಎಂಬುದು ಅನೇಕಾರ್ಥತ್ವಕ್ಕೆ ಉಪಲಕ್ಷಣವಾಗಿದೆ. 'ಅನ್ಯತ್ರ ಚ' ಎಂದರೆ ಇದೇ ಅಧಿಕರಣದಲ್ಲಿ ಈ ವಿಷಯವು ಸ್ಪಷ್ಟವಾಗಿದೆ ಎಂದರ್ಥ.

**प्रकाशः** – इतिशब्दस्य ''योगानां परमां सिद्धिं परमं ते पदं विदुः'' इतीति पूर्वेणान्वयः ।। **योगेति** ।। योगवृत्तिविषयः परमेश्वरः । **रूढः** प्रसिद्धः प्रकृत्यादिः ।

'ಇತಿ' ಶಬ್ದಕ್ಕೆ 'ಯೋಗಾನಾಂ ಪರಮಾಂ ಸಿದ್ಧಿಂ ಪರಮಂ ತೇ ಪದಂ ವಿದುಃ' ಎಂಬ ಹಿಂದಿನ ವಾಕ್ಯದ ಜೊತೆಗೆ ಅನ್ವಯವನ್ನು ತಿಳಿಯಬೇಕು. 'ಯೋಗ' ಎಂಬ ಪದಕ್ಕೆ ಯೋಗವೃತ್ತಿಗೆ ವಿಷಯನಾದ ಪರಮೇಶ್ವರನೆಂದರ್ಥ. 'ರೂಢಃ' ಎಂದರೆ ಪ್ರಸಿದ್ಧವಾದ ಪ್ರಕೃತ್ಯಾದಿಗಳು ಎಂದರ್ಥ.

**गुरुराजीयम्** – यो ददाति स प्रमगन्द इति योगस्येति ।। प्रमगन्दःकुसीदः वृद्ध्युपजीवी प्र प्रभूतं धनं म मां गं गमिष्यति आगमिष्यति द ददातीति । तदपत्यं प्रमगन्दोऽत्यन्तकुसीदकुलीनः । तद्धितार्थः प्रशब्देन द्योत्यते । प्रस्कण्व इति यथेत्यर्थः। श्रुतिस्मृत्युक्तत्वाच्चैकस्यानेकार्थताऽभ्युपेयेत्याह । वानादित्यादिना ।

अन्यत्रेति ।। अनुव्याख्यान इत्यर्थः ।




ವೇದಕ್ಕೆ ಅನೇಕಾರ್ಥವನ್ನು ಯಾಸ್ಕರ ನಿರುಕ್ತದಲ್ಲಿ ಕಾಣಬಹುದು. 'ಆನೋ ಭರಪ್ರಮಗಂದಸ್ಯ' ಎಂಬ ಶ್ರುತಿಗೆ 'ಪ್ರಮಗಂದ' ಎಂಬ ಪದಕ್ಕೆ ರಾಜಪರವಾಗಿ ಅರ್ಥೈಸಿ ಪುನಃ ಕುಸೀದ ವೃತ್ತಿ ಮಾಡುವ ಪುರುಷ ಪರವಾಗಿಯೂ ವ್ಯಾಖ್ಯಾನ ಮಾಡಲಾಗಿದೆ. ಮತ್ತು ಭಗವಂತನ 'ವಾಸುದೇವ' ಎಂಬ ಹೆಸರಿಗೆ ಶ್ರುತಿಯೇ ಅನೇಕಾರ್ಥವನ್ನು ಸಮರ್ಥಿಸುತ್ತಿದೆ.

೧. ವಾನಾತ್ ಸೂತೇರ್ದೇವನಾತ್ ವಾಸುದೇವಃ = ಜ್ಞಾನಸ್ವರೂಪನಾದ್ದರಿಂದ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವವನಾದ್ದರಿಂದ ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೨. ವಾಸಾದ್ದ್ಯುತೇಃ = ಎಲ್ಲೆಡೆ ವಾಸಮಾಡುತ್ತಾನಾದ್ದರಿಂದ ಎಲ್ಲರ ವಾಸಿಸುವಿಕೆಗೆ ಆಶ್ರಯನಾದ್ದರಿಂದ, ಕಾಂತಿಸ್ವರೂಪನಾದ್ದರಿಂದ ವಾಸುದೇವನೆನಿಸುತ್ತಾನೆ.

೩. ಛಾದನಾತ್ ಕ್ರೀಡಯಾ ಚ = ಎಲ್ಲೆಡೆ ವ್ಯಾಪ್ತನಾದ್ದರಿಂದ ಅವಿದ್ಯೆ ಮೊದಲಾದ ಆವರಣಗಳನ್ನು ಪರಿಹರಿಸುತ್ತಾನಾದ್ದರಿಂದ, ಕ್ರೀಡಾದಿಗುಣವಿಶಿಷ್ಟನಾದ್ದರಿಂದ ವಾಸುದೇವನೆನಿಸುತ್ತಾನೆ.

೪. ಬಲಾದಸುತ್ವಾದ್ದಾತೃತಃ ವರ್ತನಾಚ್ಚ = ಬಲಸ್ವರೂಪನಾದ್ದರಿಂದ, ಪ್ರಾಣಸ್ವರೂಪನಾದ್ದರಿಂದ ಎಲ್ಲವನ್ನೂ ಕೊಡುತ್ತಾನಾದ್ದರಿಂದ ಎಲ್ಲೆಡೆ ನೆಲೆಸಿದ್ದಾನಾದ್ದರಿಂದ ವಾಸುದೇವನೆನಿಸುತ್ತಾನೆ.

ಹೀಗೆ ವಾಸುದೇವನನ್ನು ವೇದಗಳು ಕೊಂಡಾಡುತ್ತವೆ.

'ಅದ್ಯತೇ ಇತಿ ಅನ್ನಂ', 'ಅತ್ತೀತಿ ಅನ್ನಂ' ಎಂಬುದಾಗಿ ಅನ್ನಶಬ್ದಕ್ಕೆ ಎರಡು ಅರ್ಥಗಳನ್ನು ಶ್ರುತಿಯೇ ಹೇಳಿದೆ. ಕರ್ಮಾರ್ಥದಲ್ಲಿ ಹಾಗೂ ಕರ್ತರ್ಥದಲ್ಲಿ 'ಕ್ತ' ಪ್ರತ್ಯಯವನ್ನು ಹೇಳಿ, ಪರಮಾತ್ಮನು ಎಲ್ಲರಿಗೂ ಉಪಜೀವ್ಯನಾಗಿದ್ದಾನೆ. ಹಾಗೂ ಎಲ್ಲರನ್ನೂ ಸಂಹಾರ ಮಾಡುತ್ತಾನೆ. ಆದ್ದರಿಂದ ಅನ್ನವೆನಿಸುತ್ತಾನೆ ಎಂಬುದಾಗಿ ಶ್ರುತಿಯು ವ್ಯಾಖ್ಯಾನ ಮಾಡಿದೆ.

'ವಿಷ್ಣು' ಎಂಬ ಶಬ್ದಕ್ಕೆ ಸ್ಮೃತಿಯು ಅನೇಕಾರ್ಥವನ್ನು ಹೇಳಿದೆ.

೧. ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ = ಸಕಲ ಭೂತಪದಾರ್ಥಗಳಿಗೆ ಬ್ರಹ್ಮಾದಿ ದೇವತೆಗಳಿಗೆ ಪ್ರೇರಕನಾದ್ದರಿಂದ ವಿಷ್ಣು ಎನಿಸಿದ್ದಾನೆ.

೨. ವ್ಯಾಪ್ತೇ ಮೇ ರೋದಸಿ ಪಾರ್ಥ = ದ್ಯಾವಾಪೃಥಿವ್ಯಾದಿಗಳನ್ನು ವ್ಯಾಪಿಸಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೩. ಕಾಂತಿಶ್ಚಾಭ್ಯಧಿಕಾ ಮಮ = ರಮಣೀಯವಾದ ಕಾಂತಿಯುಳ್ಳವನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೪. ಅಧಿಭೂತನಿವಿಷ್ಟಶ್ಚ = ಎಲ್ಲಾ ಭೌತಿಕ ಪದಾರ್ಥಗಳನ್ನೂ ಪ್ರವೇಶಿಸಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ.

೫. ತದಿಚ್ಛುಶ್ಚಾಸ್ಮಿ ಭಾರತ = ಅಧಿಭೂತಗಳ ಸೃಷ್ಟ್ಯಾದಿ ವಿಷಯದಲ್ಲಿ ಇಚ್ಛಿಸುತ್ತಾನಾದ್ದರಿಂದ, 'ವಿಷ್ಣು' ಎನಿಸಿದ್ದಾನೆ.

ಪರಿಪೂರ್ಣಚಂದ್ರಿಕಾ

೬. ಕ್ರಮೇಣಾಽಪ್ಯಹಂ ಪಾರ್ಥ = ತ್ರಿವಿಕ್ರಮ ರೂಪದಿಂದ ತನ್ನ ಪಾದದ ಮೂಲಕ ಎಲ್ಲವನ್ನೂ ಆಕ್ರಮಣ ಮಾಡಿದ್ದಾನಾದ್ದರಿಂದ 'ವಿಷ್ಣು' ಎನಿಸಿದ್ದಾನೆ. ಹೀಗೆ ಸ್ಮೃತಿಯಲ್ಲಿ 'ವಿಷ್ಣು' ಎಂಬ ಶಬ್ದಕ್ಕೆ ಅನೇಕಾರ್ಥಗಳನ್ನು ಸಮರ್ಥಿಸಲಾಗಿದೆ.

ಸೂತ್ರಕಾರರೂ ಕೂಡ 'ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ' ಎಂಬ ಸೂತ್ರದಲ್ಲಿ ಸುಷುಪ್ತಿ ವಾಕ್ಯಕ್ಕೆ ಅನೇಕಾರ್ಥವನ್ನು ಸಮರ್ಥಿಸಿದ್ದಾರೆ. 'ತ್ರಯೋಽರ್ಥಾಃ ಸರ್ವವೇದೇಷು ದಶಾರ್ಥಾಃ ಸರ್ವಭಾರತೇ' ಎಂಬ ಸ್ಮೃತಿಯಿಂದಲೂ ವೇದಕ್ಕೆ ಮೂರು ಅರ್ಥಗಳು ನಿರಂತರವಾಗಿರುತ್ತವೆಂದು ಸಿದ್ಧವಾಗಿದೆ. ಆದ್ದರಿಂದ ಪ್ರತಿಯೊಂದು ವೇದವಾಕ್ಯಗಳಿಗೆ ಯೋಗಾರ್ಥ ಹಾಗೂ ರೂಢ್ಯರ್ಥಗಳನ್ನು ತಿಳಿಯಲೇಬೇಕು. ಪ್ರತೀತವಾಗುವ ಈ ಎರಡು ಅರ್ಥಗಳನ್ನು ಬಿಡಲು ಯಾವುದೇ ಕಾರಣವಿರುವುದಿಲ್ಲ.

• • • • •

## ಜ್ಯೋತಿರಾದಿಶಬ್ದಗಳು 'ಯಜ್'ಧಾತುವಿನ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದ್ದರೂ ಹರಿ ಪರವಾಗಬಹುದು

### तात्पर्यचन्द्रिका

**किञ्च चक्षुषा घटद्वयस्येव युगपदेकेन शक्यार्थद्वयबोधने न बाधकम् ।**

ಅನುವಾದ - ಚಕ್ಷುರಿಂದ್ರಿಯದಿಂದ (ಪ್ರತ್ಯಕ್ಷಪ್ರಮಾಣದಿಂದ) ಒಟ್ಟಿಗೆ ಎರಡು ಘಟಗಳ ಜ್ಞಾನವು ಬರುತ್ತದೆ. ಅದರಂತೆ ಒಂದೇ ಶಬ್ದದಿಂದ ಎರಡು ಶಕ್ಯಾರ್ಥಗಳ ಜ್ಞಾನವು ಬರಬಹುದು. ಇದರಲ್ಲಿ ಯಾವುದೇ ಬಾಧಕವಿಲ್ಲ.

**नच सकृत्प्रयुक्तस्य वृत्तिद्वयं नेति नियमः । 'गङ्गायां मत्स्यो घोषश्च' इत्यादौ तद्दर्शनात् ।**

ಪ್ರಶ್ನೆ - ಒಮ್ಮೆ ಪ್ರಯೋಗಿಸಿದ ಶಬ್ದಕ್ಕೆ ಎರಡು ವೃತ್ತಿಗಳನ್ನು ಹೇಳಬಾರದೆಂಬ ನಿಯಮವಿದೆಯಲ್ಲವೇ?

ಉತ್ತರ - ಹಾಗೇನು ನಿಯಮವಿಲ್ಲ. 'ಗಂಗಾಯಾಂ ಮತ್ಸ್ಯೋ ಘೋಷಶ್ಚ' 'ಗಂಗೆಯಲ್ಲಿ ಮತ್ಸ್ಯವಿದೆ, ಹಳ್ಳಿಯಿದೆ' ಎಂಬ ವಾಕ್ಯವನ್ನು ಪ್ರಯೋಗಿಸಿದಾಗ 'ಗಂಗಾ' ಶಬ್ದಕ್ಕೆ ಮತ್ಸ್ಯಶಬ್ದದ ಜೊತೆಗೆ ಅನ್ವಯ ಮಾಡಿದಾಗ ಶಕ್ತಿವೃತ್ತಿಯನ್ನು, 'ಘೋಷ' ಶಬ್ದದ ಜೊತೆಗೆ ಅನ್ವಯ ಮಾಡಿದಾಗ, ಲಕ್ಷಣಾವೃತ್ತಿಯನ್ನು ಮಾಡುವುದು ಕಂಡಿದೆ.

**पङ्कजशब्देन रूढ्या पद्मत्वजातेर्योगेन पङ्कजननस्य च प्रतीतिदर्शनाच्च ।**

ಒಂದೇ ಪಂಕಜ ಶಬ್ದದಲ್ಲಿ ರೂಢಿವೃತ್ತಿಯನ್ನು ಆಶ್ರಯಿಸಿದಾಗ ಪದ್ಮತ್ವಜಾತಿವಿಶಿಷ್ಟವಾದ ಪದ್ಮದ ಬೋಧವು ಬರುತ್ತದೆ. ಯೋಗವೃತ್ತಿಯನ್ನು ಆಶ್ರಯಿಸಿದಾಗ ಕೆಸರಿನಲ್ಲಿ ಹುಟ್ಟಿದೆಯೆಂಬ ಜ್ಞಾನವು ಬರುತ್ತದೆ.

**नच कर्मविधानाय यजेतेत्यनेनैकवाक्यतामापन्नस्य ज्योतिरादिशब्दस्य ततो व्याघुट्य ब्रह्मज्ञानार्थत्वायोगः ।**

ಪ್ರಶ್ನೆ - ಕರ್ಮದ ವಿಧಾನಕ್ಕಾಗಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳು ಹೊರಟಿವೆ. ಇದರಲ್ಲಿರುವ ಜ್ಯೋತಿರಾದಿ ಶಬ್ದಗಳು 'ಯಜೇತ' ಇತ್ಯಾದಿ ಪದಗಳ ಜೊತೆಗೆ ಏಕವಾಕ್ಯತ್ವವನ್ನು ಹೊಂದಿವೆ. ಇಂತಹ ಏಕವಾಕ್ಯತ್ವವನ್ನು ಹೊಂದಿರುವ ಜ್ಯೋತಿರಾದಿ ಶಬ್ದಗಳನ್ನು 'ಯಜೇತ' ಇತ್ಯಾದಿ ಪದಗಳ ಜೊತೆಗೆ ಅನ್ವಯವನ್ನು ಮಾಡದೇ ಬೇರ್ಪಡಿಸಿ ಬ್ರಹ್ಮಜ್ಞಾನಕ್ಕೋಸ್ಕರ ಪ್ರತ್ಯೇಕವಾಗಿ ಅರ್ಥೈಸುವುದು ತಪ್ಪಾಗುತ್ತದಲ್ಲವೇ?

**"सुबामन्त्रिते सह सुपः" इत्यादौ सुबित्यादेःसुपेत्यादिनैक-वाक्यतामापन्नस्यापि ततो व्याघुट्य् अनुव्यचलदित्यादौ तिङन्तेन सह समास-विधायकत्वदर्शनात् ।**

ಉತ್ತರ - ಒಂದು ಪದಕ್ಕೆ ಮತ್ತೊಂದರ ಜೊತೆಗೆ ಅನ್ವಯವನ್ನು ಹೇಳುವ ಮೂಲಕ ಏಕವಾಕ್ಯತ್ವವಿದ್ದರೂ ಪ್ರತ್ಯೇಕವಾಗಿ ಅರ್ಥವನ್ನು ಹೇಳುವುದು ತಪ್ಪಲ್ಲ. ಈ ವಿಷಯದಲ್ಲಿ ವ್ಯಾಕರಣದ ದೃಷ್ಟಾಂತ ಹೀಗಿದೆ - 'ಸುಬಾಮಂತ್ರಿತೇ ಸಹ ಸುಪಃ' ಎಂಬಲ್ಲಿ 'ಸುಪ್' ಎಂಬುದಕ್ಕೆ 'ಸುಪಾ' ಎಂಬ ತೃತೀಯಾಂತವಾದ ಪದದ ಜೊತೆಗೆ ಏಕವಾಕ್ಯತ್ವವಿದೆ. ಆದರೂ ಕೂಡ 'ಅನುವ್ಯಚಲತ್' ಇತ್ಯಾದಿ ಸ್ಥಳಗಳಲ್ಲಿ ಸಮಾಸವನ್ನು ಉಪಪಾದನೆ ಮಾಡಲು 'ಸಹ' ಎಂಬುದನ್ನು ಯೋಗವಿಭಾಗ ಮಾಡಿ, 'ಸುಪ್' ಎಂಬುದು ಸಮರ್ಥವಾದ ತಿಙಂತದ ಜೊತೆಗೂ ಸಮಾಸ ಹೊಂದುತ್ತದೆಂದು ವ್ಯಾಖ್ಯಾನಿಸಲಾಗಿದೆ. ಅಂದರೆ ಹಿಂದಿನ ಸೂತ್ರದಿಂದ ಅನುವೃತ್ತವಾದ 'ಸುಪ್' ಎಂಬುದಕ್ಕೆ 'ಸುಪಾ' ಎಂಬಲ್ಲಿ ಅನ್ವಯವೂ ಹೊಂದಿರುವುದರಿಂದ ಏಕವಾಕ್ಯತ್ವವಿದೆ. ಆದರೂ ಕೂಡ 'ಅನುವ್ಯಚಲತ್' ಎಂಬಲ್ಲಿ ಸಮಾಸದ ಸಿದ್ಧಿಗಾಗಿ 'ಸುಪಾ' ಎಂಬುದರ ಜೊತೆಗೆ ಅನ್ವಯವನ್ನು ಮಾಡದೇ, ಸಮರ್ಥವಾದ ತಿಙಂತದ ಜೊತೆಗೆ ಸುಬಂತವು ಸಮಾಸವಾಗುತ್ತದೆಂದು ತಿಳಿಸಲು 'ಸಹ' ಎಂಬುದನ್ನು ಪ್ರತ್ಯೇಕ ಸೂತ್ರವೆಂದು ವ್ಯಾಕರಣದಲ್ಲಿ ಪರಿಗಣಿಸಲಾಗಿದೆ.

**इष्टसिध्यर्थं बहुस्थलेषु योगविभागस्वीकाराच्च ।**

ಈ ಸೂತ್ರದಲ್ಲಷ್ಟೇ ಅಲ್ಲದೇ ವ್ಯಾಕರಣ ಶಾಸ್ತ್ರದಲ್ಲಿ ಅಭಿಯುಕ್ತರ ಪ್ರಯೋಗಗಳ ಸಾಧುತ್ವ ಸಿದ್ಧಿಯೆಂಬ ಇಷ್ಟಸಿದ್ಧಿಗೋಸ್ಕರ ಅನೇಕ ಸೂತ್ರಗಳಲ್ಲಿ ಯೋಗವಿಭಾಗವನ್ನು ಮಾಡಿರುತ್ತಾರೆ.

ಯೋಗವಿಭಾಗ ಮಾಡಿದ ಸೂತ್ರಗಳಲ್ಲೆಲ್ಲಾ ಏಕವಾಕ್ಯತ್ವದ ಜೊತೆಗೂ ಅನ್ವಯವಿರುತ್ತದೆ. ಪ್ರತ್ಯೇಕವಾದ ಅರ್ಥವನ್ನೂ ಕೂಡ ಹೇಳುತ್ತಿರುತ್ತವೆಂದು ತಿಳಿಯಬೇಕು.

**''भूवादयः'' इत्यादौ वकारस्यैकवाक्यतात्यागेन मङ्गलार्थत्वदर्शनाच्च ।**

'ಭೂವಾದಯೋ ಧಾತವಃ' ಎಂಬ ಸೂತ್ರದಲ್ಲಿ 'ಭೂ' ಮೊದಲಾದವುಗಳಿಗೆ ಧಾತುಸಂಜ್ಞೆಯನ್ನು ವಿಧಿಸಲಾಗಿದೆ. ಸೂತ್ರದಲ್ಲಿರುವ ವಕಾರವು ಏಕವಾಕ್ಯತ್ವವನ್ನು ಹೊಂದುವ ಮೂಲಕ ಈ ಅರ್ಥವನ್ನು ತಿಳಿಸುತ್ತದೆ. ಆದರೆ ಮಹಾಭಾಷ್ಯದಲ್ಲಿ 'ಭ್ವಾದಯಃ' ಎಂದೇ ಹೇಳಬೇಕಿತ್ತು, 'ವ'ಕಾರವನ್ನು ಹೇಳಿದ್ದು ವ್ಯರ್ಥವೆಂದು ಆಶಂಕಿಸಿ, ಮಂಗಳ ಪ್ರಯೋಜನಕ್ಕಾಗಿ 'ವ'ಕಾರವನ್ನು ನಿರ್ದೇಶಿಸಲಾಗಿದೆ. ಅಥವಾ 'ವ'ಕಾರವು ಮುಂದಿರುವುದರಿಂದ ಹಿಂದಿರುವ 'ಭೂ' ಎಂಬ ಪದವನ್ನು ಕೇಳಿದಾಗ ವ್ಯಾಹೃತಿಯ ಸ್ಮರಣೆ ಬರುತ್ತದೆ. ಆದ್ದರಿಂದ ಇದು ಪರಮಮಂಗಳವೆಂದು ವಾಖ್ಯಾನಿಸಲಾಗಿದೆ. 'ವ'ಕಾರವು ಏಕವಾಕ್ಯತ್ವವನ್ನು ಹೊಂದಿ, 'ಭೂ' ಮೊದಲಾದವುಗಳಿಗೆ ಧಾತುಸಂಜ್ಞೆಯನ್ನು ಹೇಳಿದರೂ ಪುನಃ ಏಕವಾಕ್ಯತ್ವವನ್ನು ಬಿಟ್ಟು, ಪ್ರತ್ಯೇಕವಾಗಿ ಮಂಗಳಪ್ರಯೋಜನವನ್ನೂ ಕೂಡ ತಿಳಿಸುವುದು ಕಂಡಿದೆ.

**''कम्बलवन्तं न बाधते शीतम्'' इत्यादावेकस्मिन्नेव वाक्ये प्रश्नोत्तररूपत्वदर्शनाच्च ।**

'ಕಂ ಬಲವಂತಂ ನ ಬಾಧತೇ ಶೀತಮ್' ಯಾವ ಬಲಿಷ್ಠ ವ್ಯಕ್ತಿಯನ್ನು ಶೀತವು ಬಾಧಿಸುವುದಿಲ್ಲ? ಎಂಬ ಪ್ರಶ್ನೆಗೆ, 'ಕಂಬಲವಂತಂ ನ ಬಾಧತೇ ಶೀತಮ್' ಕಂಬಳಿಯನ್ನು ಹೊದ್ದುಕೊಂಡಿರುವವನನ್ನು ಶೀತವು ಬಾಧಿಸುವುದಿಲ್ಲ ಎಂಬ ಅದೇ ವಾಕ್ಯ ಉತ್ತರಿಸಿದೆ. ಹೀಗೆ ಒಂದೇ ವಾಕ್ಯದಲ್ಲಿ ಪ್ರಶ್ನೆ ಹಾಗೂ ಉತ್ತರಗಳನ್ನು ತಿಳಿಯಬಹುದು. ಆದ್ದರಿಂದ ಏಕವಾಕ್ಯತ್ವವನ್ನು ಹೊಂದಿದ್ದರೂ ಪ್ರತ್ಯೇಕವಾಗಿ ವಿಭಾಗ ಮಾಡಿದಾಗ ಅರ್ಥಾಂತರವಿರುವುದು ಈ ದೃಷ್ಟಾಂತಗಳಲ್ಲಿ ಕಂಡಿದೆ.

**प्रकाशः –**

एवं नानेकार्थत्वमन्याय्यम् । प्रमाणैरेवानेकार्थत्वस्य दर्शितत्वादित्युक्तम् । इदानीं युक्तं चानेकार्थत्वं प्रमाणान्तरस्येवशब्दस्येत्याह – **किञ्चेति** ।।

ವಿವರಣೆ - ಇಲ್ಲಿಯ ತನಕ ಒಂದೇ ಶಬ್ದಕ್ಕೆ ಅನೇಕಾರ್ಥವನ್ನು ಹೇಳುವುದು ಅನ್ಯಾಯವಲ್ಲ. ಅನೇಕ ಪ್ರಮಾಣಗಳಿಂದ ಅನೇಕಾರ್ಥತ್ವವಿರುವುದು ಕಂಡಿದೆಯೆಂದು ಸಮರ್ಥಿಸಲಾಯಿತು. ಪ್ರಕೃತ ಪ್ರತ್ಯಕ್ಷಾದಿ ಪ್ರಮಾಣಗಳಂತೆ ಶಬ್ದರೂಪಪ್ರಮಾಣದಲ್ಲಿಯೂ ಅನೇಕಾರ್ಥತ್ವವಿರುವುದು ಯುಕ್ತವೇ ಆಗಿದೆಯೆಂದು ಸಮರ್ಥಿಸುತ್ತಿದ್ದಾರೆ 'ಕಿಂಚ' ಇತ್ಯಾದಿ ಗ್ರಂಥದಿಂದ.

**प्रकाशः – यद्वा शब्दस्यानेकार्थत्वं प्रमाणैस्समर्थ्य बाधकाभावेनापि समर्थयते – किञ्चेति ।।**

'ಕಿಂಚ' ಇತ್ಯಾದಿ ಗ್ರಂಥಕ್ಕೆ ಮತ್ತೊಂದು ಬಗೆಯ ಅವತಾರಿಕೆಯನ್ನು ಹೀಗೆ ತಿಳಿಯಬೇಕು - ಒಂದೇ ಶಬ್ದಕ್ಕೆ ಅನೇಕಾರ್ಥವಿರುತ್ತವೆಂಬುದನ್ನು ಪ್ರಮಾಣಗಳಿಂದ ಸಮರ್ಥಿಸಿದ್ದಾಯಿತು. ಪ್ರಕೃತ ಅನೇಕಾರ್ಥವನ್ನು ಒಪ್ಪಿದರೆ ಯಾವುದೇ ಬಾಧಕವಿಲ್ಲವೆಂದು ಸಮರ್ಥಿಸಲು 'ಕಿಂಚ' ಇತ್ಯಾದಿ ಗ್ರಂಥವು ಹೊರಟಿದೆ.

**प्रकाशः – तत्र बाधकमाशङ्कते – न चेति ।।** किं मुख्यामुख्यवृत्तिद्वयं नेति किं वा मुख्यवृत्तिद्वयं नेति । आद्य आह – **गङ्गायामिति ।।** द्वितीय आह – **पङ्कजेति ।।**

ಅನೇಕಾರ್ಥವನ್ನು ಹೇಳಿದರೆ ಬಾಧಕವನ್ನು 'ನಚ' ಇತ್ಯಾದಿ ಗ್ರಂಥದಿಂದ ಆಶಂಕಿಸಿದ್ದಾರೆ. ಒಮ್ಮೆ ಪ್ರಯೋಗಿಸಲ್ಪಟ್ಟ ಶಬ್ದಕ್ಕೆ ಎರಡು ವೃತ್ತಿಯನ್ನು ಅಂಗೀಕಾರ ಮಾಡಬಾರದೆಂಬ ನಿಯಮಕ್ಕೆ ಕಾರಣವೇನು? ಮುಖ್ಯವೃತ್ತಿ ಹಾಗೂ ಅಮುಖ್ಯವೃತ್ತಿದ್ವಯವನ್ನು ಒಂದೇ ಶಬ್ದಕ್ಕೆ ಹೇಳಬಾರದೆಂದೋ, ಅಥವಾ ಮುಖ್ಯವೃತ್ತಿದ್ವಯವನ್ನು ಒಂದೇ ಶಬ್ದಕ್ಕೆ ಹೇಳಬಾರದೆಂದೋ ? ಮುಖ್ಯವೃತ್ತಿ ಹಾಗೂ ಅಮುಖ್ಯ-ವೃತ್ತಿಗಳೆರಡನ್ನೂ ಒಂದೇ ಶಬ್ದಕ್ಕೆ ಹೇಳಬಾರದೆಂಬ ಪ್ರಥಮಪಕ್ಷವನ್ನು 'ಗಂಗಾಯಾಮ್' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ. ಎರಡನೆಯ ಪಕ್ಷವನ್ನು 'ಪಂಕಜ' ಇತ್ಯಾದಿ ವಾಕ್ಯದಿಂದ ನಿರಾಕರಣೆ ಮಾಡಿದ್ದಾರೆ.

**प्रकाशः – बाधकान्तरमाशङ्कते – न चेति ।। एकवाक्यतामिति ।।** ज्योतिश्शब्दस्य नामतया यजिधात्वर्थावच्छेदकत्वेन ज्योतिषा यागेन समीहितं कुर्यादिति वा ज्योतिर्नामको यागस्समीहितसाधनमिति वा एकवाक्यतामापन्नस्येत्यर्थः।।

'ನಚ' ಇತ್ಯಾದಿ ಗ್ರಂಥದಿಂದ ಮತ್ತೊಂದು ಬಾಧಕವನ್ನು ಆಶಂಕಿಸಿದ್ದಾರೆ. ಕರ್ಮವಿಧಾನಕ್ಕೋಸ್ಕರ ಹೊರಟಿರುವ 'ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯವು ಏಕವಾಕ್ಯತ್ವವನ್ನು ಜ್ಯೋತಿರಾದಿ ಶಬ್ದಗಳ ಜೊತೆಗೆ ಹೊಂದಿರುತ್ತದೆ. ಏಕೆಂದರೆ 'ಜ್ಯೋತಿಃ' ಶಬ್ದವು ಯಜ್ಞದ ನಾಮಸ್ವರೂಪವಾದ್ದರಿಂದ, 'ಯಜೇತ' ಎಂಬಲ್ಲಿರುವ 'ಯಜ್' ಧಾತುವಿನ ಜೊತೆಗೆ ಅನ್ವಯವನ್ನು ಹೊಂದಿ ಜ್ಯೋತಿಷ್ಟೋಮಯಾಗದಿಂದ ಇಷ್ಟವಾದದ್ದನ್ನು ಪಡೆಯಬೇಕು ಎಂಬ ಅರ್ಥವನ್ನು ನೀಡುತ್ತದೆ. ಅಥವಾ 'ಜ್ಯೋತಿಷ್ಟೋಮ' ಎಂಬ ಯಾಗವು ಇಷ್ಟಸಾಧನವಾಗಿದೆ. ಹೀಗೂ ಕೂಡ ಏಕವಾಕ್ಯತ್ವವನ್ನು ಹೊಂದುತ್ತದೆ. ಇದನ್ನು ಬಿಟ್ಟು ಬ್ರಹ್ಮನ ಪರವಾಗಿ ಈ ವಾಕ್ಯಕ್ಕೆ ಅರ್ಥೈಸಿದರೆ ಏಕವಾಕ್ಯತ್ವವು ನಾಶವಾಗಬೇಕಾದೀತು ಎಂಬುದು ಆಶಂಕೆಯ ಅಭಿಪ್ರಾಯ.

**प्रकाशः – सुबामन्त्रित** इति ।। अयमर्थः – ''सह सुपा'' इति सूत्रे ''सुबामन्त्रिते पराङ्गवत्स्वरे'' इत्यतस्सुबित्यनुवर्तते । सुबन्तं सुबन्तेन समस्यते ।

ಒಮ್ಮೆ ಏಕವಾಕ್ಯತ್ವವನ್ನು ಹೊಂದಿದ್ದರೂ ಮತ್ತೊಂದು ಅರ್ಥದಲ್ಲಿ ಅದೇ ಶಬ್ದಗಳನ್ನು ಪ್ರಯೋಗಿಸಬಹುದೆನ್ನಲು ವ್ಯಾಕರಣದ ದೃಷ್ಟಾಂತವು ಕಂಡಿದೆ. 'ಸಹ ಸುಪಾ' ಎಂಬ ಸೂತ್ರದಲ್ಲಿ 'ಸುಬಾಮಂತ್ರಿತೇ ಪರಾಂಗವತ್ ಸ್ವರೇ' ಎಂಬ ಸೂತ್ರದಲ್ಲಿರುವ 'ಸುಪ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ ಸುಬಂತವಾದ ಶಬ್ದವು, ಸುಬಂತವಾದ ಶಬ್ದದ ಜೊತೆಗೆ ಸಮಾಸವನ್ನು ಹೊಂದುತ್ತದೆಂದು ತಿಳಿಯುತ್ತದೆ.

**प्रकाशः** – अधिकारसूत्रमिदम्, लक्षणसूत्रं च । यस्य लक्षणं नास्ति तस्य समासविधायकमिति ।

'ಸಹ ಸುಪಾ' ಎಂಬುದು ಅಧಿಕಾರಸೂತ್ರವಾಗಿದೆ. ಲಕ್ಷಣಸೂತ್ರವೂ ಕೂಡ ಆಗಿದೆ. ಯಾವ ಎರಡು ಪದಗಳಿಗೆ ಸಮಾಸವನ್ನು ವಿಧಾನ ಮಾಡಲು ಬೇರೆ ಸೂತ್ರವಿರುವುದಿಲ್ಲವೋ, ಅಂತಹ ಸ್ಥಳದಲ್ಲಿ ಈ ಸೂತ್ರವು ಸಮಾಸವನ್ನು ವಿಧಾನ ಮಾಡಲು ಹೊರಟಿದೆ. ಬಹುವ್ರೀಹಿ ಮೊದಲಾದ ಕಡೆ ಸುಬಂತದ ಜೊತೆಗೆ ಸಮಾಸವಾಗಿರುವುದು ಕಂಡಿದೆ. ಆದರೆ ಸುಬಂತವು ತಿಙಂತದ ಜೊತೆಗೂ ಸಮಾಸವಾಗುತ್ತದೆಂದು ಬೇರೆ ಯಾವುದೇ ಸೂತ್ರದಲ್ಲಿಯೂ ಹೇಳಿರುವುದಿಲ್ಲ. ಅಂತಹ ಸ್ಥಳದಲ್ಲಿ ಸಮಾಸವಿಧಾನ ಮಾಡಲು ಈ ಸೂತ್ರ ಹೊರಟಿದೆಯೆಂದು ತಿಳಿಯಬೇಕು.

**प्रकाशः** – तत्र सहेति योगविभागोऽङ्गीकृतस्तिङन्तेन समाससिद्ध्यर्थम् । तथाच सुबित्यस्य सुपेति तृतीयान्तेनान्वितस्यापि सुप् सह समस्यते समर्थेन तिङन्तेनेत्यप्यर्थदर्शनादिति ।

ಈ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ 'ಸಹ' ಎಂಬುದನ್ನು ಯೋಗವಿಭಾಗ ಮಾಡಲಾಗಿದೆ. 'ಸಹ' ಎಂಬುದೇ ಬೇರೆ ಸೂತ್ರ. 'ಸುಪಾ' ಎಂಬುದೇ ಬೇರೆ ಸೂತ್ರವೆಂದು ಪರಿಗಣಿಸಲಾಗಿದೆ. ಏಕೆಂದರೆ ಸುಬಂತವಾದ ಶಬ್ದಗಳಿಗೆ ತಿಙಂತದ ಜೊತೆಗೆ ಸಮಾಸವಾಗುತ್ತದೆಂದು ತಿಳಿಸಲು 'ಸಹ' ಎಂಬ ಸೂತ್ರದಲ್ಲಿ 'ಸುಪ್' ಎಂಬುದನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಆವಾಗ 'ಸುಪ್' ಎಂಬುದು 'ಸಹ ಸಮಸ್ಯತೇ' ಜೊತೆಗೆ ಸಮಾಸ ಹೊಂದುತ್ತದೆ ಎಂದು ಹೇಳಿದಂತಾಗುತ್ತದೆ. ಯಾವುದರ ಜೊತೆಗೆ ? ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ 'ಸುಪಾ' ಎಂಬುದು ಬೇರೆ ಸೂತ್ರವಾದ್ದರಿಂದ ಸುಬಂತದ ಜೊತೆಗೆ ಎಂಬರ್ಥವು ದೊರೆಯುವುದಿಲ್ಲ. ಆವಾಗ ತಿಙಂತದ ಜೊತೆಗೆ 'ಸುಪ್' ಎಂಬುದು ಸಮಾಸ ಹೊಂದುತ್ತದೆಂದು ತಿಳಿಯಬೇಕು. ಸುಬಂತವಾದ ಶಬ್ದವು ಸಮರ್ಥವಾದ ಯಾವುದೇ ಪದದ ಜೊತೆಗೆ ಸಮಾಸವನ್ನು ಹೊಂದುತ್ತದೆ. ಸಮರ್ಥವಾದದ್ದು ತಿಙಂತವಾದರೂ ಪರವಾಗಿಲ್ಲ ಎಂಬರ್ಥವು ದೊರೆಯುತ್ತದೆ. ಈ ಅರ್ಥದ ಸಿದ್ಧಿಗೋಸ್ಕರ 'ಸಹ' ಎಂಬುದನ್ನು ಪ್ರತ್ಯೇಕ ಸೂತ್ರವನ್ನಾಗಿ ಪರಿಗಣಿಸಲಾಗಿದೆ.

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳಲ್ಲಿ ಜ್ಯೋತಿರಾದಿ ಶಬ್ದಗಳು 'ಯಜೇತ' ಇತ್ಯಾದಿ ಪದಗಳ ಜೊತೆಗೆ ಕರ್ಮಜ್ಞಾನವನ್ನು ಸಂಪಾದನೆ ಮಾಡುವ ಸಂದರ್ಭದಲ್ಲಿ ಅನ್ವಯವನ್ನು

ಹೊಂದಿದೆ. ಅದೇ ವಾಕ್ಯಕ್ಕೆ ಬ್ರಹ್ಮಪರತ್ವವನ್ನು ಹೇಳುವಾಗ, ಅನ್ವಿತವಾದ 'ಯಜೇತ' ಎಂಬ ಪದವನ್ನು ಬಿಡಿಸಿ, ಪ್ರತ್ಯೇಕವಾಗಿ ಅರ್ಥವನ್ನು ಹೇಳುವುದು ಎಲ್ಲಿಯೂ ಕಂಡಿಲ್ಲವಲ್ಲ? ಎಂಬ ಪ್ರಶ್ನೆಗೆ ಈಗ ಉತ್ತರಿಸಿದಂತಾಯಿತು. ಏಕೆಂದರೆ 'ಸಹ ಸುಪಾ' ಎಂಬ ಸೂತ್ರದಲ್ಲಿ 'ಸಹ' ಎಂಬ ಪದಕ್ಕೆ 'ಸುಪಾ' ಎಂಬುದರ ಜೊತೆಗೆ ಅನ್ವಯವನ್ನು ಮಾಡಿ, ಪುನಃ 'ಸಹ' ಎಂಬುದನ್ನು ಬೇರ್ಪಡಿಸಿ 'ಸುಪ್' ಎಂಬುದು ಸಮರ್ಥವಾದ ತಿಙಂತದ ಜೊತೆಗೆ ಅನ್ವಯವನ್ನು ಹೊಂದುತ್ತದೆಂದು ವ್ಯಾಖ್ಯಾನ ಮಾಡಲಾಗಿದೆ.

**प्रकाशः** – उक्तं च महाभाष्ये द्वितीयाध्यायाद्यपादे सहसुपा इत्यत्र सहग्रहणं प्रत्याख्यायानन्तरं ''एवं सिद्धे यत्सहग्रहणं करोति तस्यैतत्प्रयोजनम् – योगाङ्गं यथा विज्ञायेत, सति च योगाङ्गे योगविभागः करिष्यते सह सुप् सह समस्यते । येनकेन समर्थेन । 'अनुव्यचलत्' 'अनुप्राविशत्'; ततः सुपा-सुपाच, सुप् सहसमस्यते । अधिकारश्चैव लक्षणं च'' इत्यादि ।।

ಇದನ್ನೇ ಪತಂಜಲಿಯು ಮಹಾಭಾಷ್ಯದ ಎರಡನೆಯ ಅಧ್ಯಾಯದ ಪ್ರಥಮಪಾದದಲ್ಲಿ 'ಸಹ ಸುಪಾ' ಎಂಬಲ್ಲಿರುವ 'ಸಹ' ಎಂಬ ಪದವು ವ್ಯರ್ಥವೆಂದು ಆಶಂಕಿಸಿ, 'ಏವಂ ಸಿದ್ಧೇ ಯತ್ ಸಹಗ್ರಹಣಂ ಕರೋತಿ ತಸ್ಯೈತತ್ ಪ್ರಯೋಜನಮ್ । ಯೋಗಾಂಗಂ ಯಥಾ ವಿಜ್ಞಾಯೇತ । ಸತಿ ಚ ಯೋಗಾಂಗೇ ಯೋಗವಿಭಾಗಃ ಕರಿಷ್ಯತೇ । ಸಹ ಸುಪ್ ಸಹ ಸಮಸ್ಯತೇ । ಯೇನ ಕೇನ ಸಮರ್ಥೇನ ಅನುವ್ಯಚಲತ್ ಅನುಪ್ರಾವಿಶತ್; ತತಃ ಸುಪಾ - ಸುಪಾಚ, ಸುಪ್ ಸಹಸಮಸ್ಯತೇ । ಅಧಿಕಾರಶ್ಚೈವ ಲಕ್ಷಣಂ ಚ' ಎಂದು ಹೇಳಲಾಗಿದೆ.

ಇದರ ಅಭಿಪ್ರಾಯ ಹೀಗಿದೆ - 'ಸಹ ಸುಪಾ' ಎಂಬ ಸೂತ್ರದಲ್ಲಿ 'ಸುಪಾ' ಎಂದಷ್ಟೇ ಹೇಳಿದರೆ ಸಾಕು, 'ಸಹ' ಎಂಬ ಪದವನ್ನು ಪ್ರಯೋಗಿಸಿದ್ದೇ ವ್ಯರ್ಥ. ಏಕೆಂದರೆ ತೃತೀಯಾವಿಭಕ್ತಿಯಿಂದಲೇ 'ಸಹ' ಎಂಬ ಪದದ ಅರ್ಥವು ತಿಳಿಯುತ್ತಿರುವಾಗ ಪುನಃ 'ಸಹ' ಎಂಬ ಪದಕ್ಕೆ ಕೃತ್ಯವಿರುವುದಿಲ್ಲ. ಆದರೂ ಪಾಣಿನಿಯು 'ಸಹ' ಎಂಬ ಪದವನ್ನು ಪ್ರಯೋಗಿಸಿದ್ದರಿಂದ ಪ್ರಯೋಜನವೊಂದನ್ನು ತಿಳಿಸಿದ್ದಾನೆ. 'ಸಹ' ಎಂಬುದು ಸೂತ್ರದ ಅಂಗವಾಗಿದೆ ಎಂಬುದೇ ಇದರ ಪ್ರಯೋಜನ. 'ಸಹ' ಎಂಬುದು ಸೂತ್ರಕ್ಕೆ ಅಂಗವಾಗುವುದರಿಂದ ಏನು ಪ್ರಯೋಜನ? ಎಂದರೆ 'ಸಹ' ಎಂಬ ಪದವು ಸೂತ್ರದ ಅಂಗವಾದರೆ ಮಾತ್ರ ಯೋಗವಿಭಾಗ ಮಾಡಲು ಸಾಧ್ಯ. ಯೋಗವಿಭಾಗ ಮಾಡಿದಾಗ 'ಸಹ' ಎಂಬುದೇ ಬೇರೆ ಸೂತ್ರ. 'ಸುಪಾ' ಎಂಬುದೇ ಬೇರೆ ಸೂತ್ರವಾಗುತ್ತದೆ. 'ಸಹ' ಎಂಬ ಸೂತ್ರದಲ್ಲಿ 'ಸುಪ್' ಎಂಬುದನ್ನು ಅನುವೃತ್ತಿ ಮಾಡಿಕೊಂಡಾಗ ಸುಬಂತವಾದ ಶಬ್ದವು 'ಸಹ ಸಮಸ್ಯತೇ' = ಜೊತೆಗೆ ಸಮಾಸವನ್ನು ಹೊಂದುತ್ತದೆ ಎಂಬರ್ಥವನ್ನು ಹೇಳಿದಂತಾಗುತ್ತದೆ. ಜೊತೆಗೆ ಎಂದರೆ ಯಾವುದಾದರೂ ಸಮರ್ಥವಾದ ಪದದ ಜೊತೆಗೆ ಅನ್ವಯವನ್ನು ಹೊಂದುತ್ತದೆ. ಇದಕ್ಕೆ 'ಅನುವ್ಯಚಲತ್', 'ಅನುಪ್ರಾವಿಶತ್' ಪದಗಳೇ ದೃಷ್ಟಾಂತವಾಗಿವೆ. ಆದ್ದರಿಂದ 'ಸಹ' ಎಂಬ ಸೂತ್ರಕ್ಕೆ ತಿಙಂತದ ಜೊತೆಗೆ ಅನ್ವಯವನ್ನು ಹೊಂದುತ್ತದೆ ಎಂದರ್ಥ. 'ಸುಪಾ' ಎಂಬ ಸೂತ್ರಕ್ಕೆ ಸುಬಂತವಾದ ಶಬ್ದವೂ ಕೂಡ ಸುಬಂತ ಪದದ ಜೊತೆಗೆ ಅನ್ವಯವನ್ನು ಹೊಂದುತ್ತದೆ ಎಂದರ್ಥ. ಹೀಗೆ 'ಸಹ ಸುಪಾ' ಎಂಬ ಸೂತ್ರವು ಅಧಿಕಾರಸೂತ್ರವೂ ಆಗಿದೆ, ಲಕ್ಷಣಾಸೂತ್ರವೂ ಆಗಿದೆಯೆಂದು ತಿಳಿಯಬೇಕು.

'ಸಹ ಸುಪಾ' ಎಂಬುದನ್ನು ಒಂದೇ ಸೂತ್ರವೆಂದು ಪರಿಗಣಿಸಿದಾಗ, 'ವಿಶೇಷಣಂ ವಿಶೇಷ್ಯೇಣ ಬಹುಲಂ' ಇವೇ ಮೊದಲಾದ ಮುಂದಿನ ಎಲ್ಲಾ ಸೂತ್ರಗಳಲ್ಲಿಯೂ ಇದು ಅನ್ವಯವನ್ನು ಹೊಂದುತ್ತದೆಂದು ಅರ್ಥ. ಆದ್ದರಿಂದ ಅಧಿಕಾರ ಸೂತ್ರವಾಗುತ್ತದೆ. ಯೋಗವಿಭಾಗ ಮಾಡಿದಾಗ ಸುಬಂತಕ್ಕೂ, ತಿಙಂತಕ್ಕೂ ಸಮಾಸವನ್ನು ವಿಧಾನ ಮಾಡುತ್ತಿರುವ ಕಾರಣ, ಇದು ಲಕ್ಷಣಾಸೂತ್ರವೂ ಆಗುತ್ತದೆ.

**प्रकाशः – अनुव्यचलदिति ।।** सुप् सह समस्यते समर्थेनेति योगे सुबित्येकवचनस्य विवक्षितत्वाद्वीत्यस्याचलदिति तिङन्तेन पूर्वं समासस्ततोऽन्वित्यस्येति ध्येयम् ।।

'ಸಹ ಸುಪಾ' ಎಂಬ ಸೂತ್ರದಲ್ಲಿ 'ಸಹ' ಎಂಬುದನ್ನು ಯೋಗವಿಭಾಗ ಮಾಡಿದಾಗ 'ಅನುವ್ಯಚಲತ್' ಇತ್ಯಾದಿ ಶಬ್ದಗಳಲ್ಲಿ ಸಮಾಸವಾಗುತ್ತದೆಂದು ಸಮರ್ಥಿಸಲಾಯಿತು. 'ಸುಪ್ ಯೇನ ಕೇನ ಸಹ ಸಮರ್ಥೇನ ಸಮಸ್ಯತೇ' ಎಂದು ಸೂತ್ರಾರ್ಥವನ್ನು ವಿವಕ್ಷಿಸಲಾಗಿದೆ. ಇಲ್ಲಿ 'ಸುಪ್' ಎಂಬುದು ಏಕವಚನದಲ್ಲಿದೆ. ಆದ್ದರಿಂದ 'ವಿ' ಎಂಬ ಸುಬಂತವಾದ ಉಪಸರ್ಗವು 'ಅಚಲತ್' ಎಂಬ ಸಮರ್ಥವಾದ ತಿಙಂತದ ಜೊತೆಗೆ ಸಮಾಸವನ್ನು ಹೊಂದಿ 'ವ್ಯಚಲತ್' ಎಂದಾಗುತ್ತದೆ. ಅನಂತರ 'ವ್ಯಚಲತ್' ಎಂಬ ತಿಙಂತದ ಜೊತೆಗೆ 'ಅನು' ಎಂಬ ಸುಬಂತವೇ ಆದ ಉಪಸರ್ಗವು ಸಮಾಸವನ್ನು ಹೊಂದಿ, 'ಅನುವ್ಯಚಲತ್' ಎಂದಾಗುತ್ತದೆ. ಕಾರಣವೇನೆಂದರೆ ಸೂತ್ರದಲ್ಲಿ 'ಸುಪ್' ಎಂಬುದು ಏಕವಚನದಲ್ಲಿದೆ. ಆದ್ದರಿಂದ ಒಂದು ಸುಬಂತವಾದ ಶಬ್ದವು ಮಾತ್ರ ಸಮರ್ಥವಾದ ಮತ್ತೊಂದು ಪದದ ಜೊತೆಗೆ ಸಮಾಸವನ್ನು ಹೊಂದಬೇಕೇ ಹೊರತು, ಎರಡು ಸುಬಂತಗಳು ಸಮಾಸವನ್ನು ಹೊಂದಲಾರವು. 'ಅನುವ್ಯಚಲತ್' ಎಂಬಲ್ಲಿ 'ಅನು' ಮತ್ತು 'ವಿ' ಎಂಬ ಎರಡು ಸುಬಂತಗಳಿರುವುದರಿಂದ ಹೇಗೆ ಸಮಾಸ ಮಾಡುತ್ತೀರಿ? ಎಂಬ ಆಕ್ಷೇಪವು ಬರುತ್ತಿತ್ತು. ಇದರ ಪರಿಹಾರಕ್ಕಾಗಿ ಮೊದಲು 'ವಿ' ಎಂಬ ಸುಬಂತಕ್ಕೆ ಸಮಾಸ ಮಾಡಿ, ಅನಂತರ 'ಅನು' ಎಂಬ ಸುಬಂತಕ್ಕೆ 'ವ್ಯಚಲತ್' ಎಂಬ ಸುಬಂತದ ಜೊತೆಗೆ ಸಮಾಸ ಮಾಡಬೇಕು.

**प्रकाशः – इष्टसिद्ध्यर्थमिति ।।** ''समासेऽनञ्पूर्वे क्त्वो ल्यप् । हलः श्नश्शानज्झौ' इत्यादौ 'क्त्वः' 'श्नः' इत्यादिनिर्देशसिद्ध्यर्थं ''आतो धातोः'' इत्यत्र 'आतः' इत्यस्य धातोरित्यनेनान्वितस्यापि ततो विभागेनाधातुनाप्यन्वयस्वीकारात् एवं ''णेरध्ययनेवृत्तम्'' इत्यादावपि ध्येयम् । इष्टसिद्ध्यर्थमित्युक्त्या नातिप्रसङ्ग इति सूचयति । तदुक्तं कैयटे – ''इष्टसिद्ध्यर्थत्वात् उद्योगविभागस्य नातिप्रसङ्गः'' इति ।।

'ಸಹ ಸುಪಾ' ಎಂಬ ಸೂತ್ರದಲ್ಲಿ ಮಾತ್ರ ಯೋಗವಿಭಾಗ ಮಾಡಿಕೊಂಡು ಎರಡು ಅರ್ಥಗಳನ್ನು ವಿವಕ್ಷಿಸಿರುವುದಲ್ಲ. ಇಷ್ಟವಾದ ರೂಪಗಳ ಸಿದ್ಧಿಗೋಸ್ಕರ ಇನ್ನೂ ಅನೇಕ ಸೂತ್ರಗಳಲ್ಲಿ ಇಂತಹ ಯೋಗವಿಭಾಗಗಳನ್ನು ಆಶ್ರಯಿಸಿ ಅನೇಕಾರ್ಥವನ್ನು ಹೇಳಬಹುದು.

## ಜ್ಯೋತಿರುಪಕ್ರಮಾಧಿಕರಣ (1-4-2)

ಉದಾಹರಣೆ - ಒಬ್ಬನೇ ಕರ್ತೃವಿನಲ್ಲಿ ಎರಡು ಕ್ರಿಯೆಗಳು ವಿವಕ್ಷಿತವಾದಾಗ ಪೂರ್ವಕ್ರಿಯಾವಾಚಿಯಾದ ಶಬ್ದದ ಮುಂದೆ 'ಕ್ತ್ವ'ಪ್ರತ್ಯಯವನ್ನು ವಿಧಿಸಲಾಗಿದೆ. ಒಂದು ವೇಳೆ ಪೂರ್ವಕ್ರಿಯಾವಾಚಿಯಾದ ಶಬ್ದವು ನಞ್‌ಪೂರ್ವಕವಾಗದೇ ಸಮಾಸವನ್ನು ಹೊಂದುವುದಾದಲ್ಲಿ, ಕ್ತ್ವಪ್ರತ್ಯಯದ ಮೇಲೆ 'ಲ್ಯಪ್' ಪ್ರತ್ಯಯವು ಬರುತ್ತದೆಂದು 'ಸಮಾಸೇಽನಞ್‌ಪೂರ್ವೇ ಕ್ತ್ವೋ ಲ್ಯಪ್' ಎಂಬ ಸೂತ್ರವು ವಿಧಾನ ಮಾಡುತ್ತಿದೆ. ಉದಾಹರಣೆ - 'ದೇವದತ್ತಃ ಗತ್ವಾ ಪಚತಿ' ಎಂದು ಪ್ರಯೋಗಿಸಿದಾಗ ಒಬ್ಬನೇ ದೇವದತ್ತನಲ್ಲಿ ಗಮನ ಹಾಗೂ ಪಚನ ಎಂಬೆರಡು ಕ್ರಿಯೆಗಳು ವಿವಕ್ಷಿತವಾಗಿವೆ. ಪೂರ್ವಕ್ರಿಯಾವಾಚಿಯಾದ 'ಗಮ್' ಎಂಬ ಧಾತುವಿನ ಮೇಲೆ 'ಕ್ತ್ವಾ' ಪ್ರತ್ಯಯವು ಬಂದರೆ 'ಗತ್ವಾ' ಎಂದಾಗುತ್ತದೆ. ಒಂದು ವೇಳೆ 'ಗಮ್'ಧಾತುವಿಗೆ 'ಅನು' ಎಂಬ ಉಪಸರ್ಗ ಸೇರಿ ಸಮಾಸವಾದಾಗ, ಕ್ತ್ವಾಪ್ರತ್ಯಯದ ಮೇಲೆ ಲ್ಯಪ್ ಪ್ರತ್ಯಯವು ಬರುತ್ತದೆ. ಆವಾಗ 'ಅನುಗಮ್ಯ ಪಚತಿ' ಎಂದೇ ಹೇಳಬೇಕು. ಒಂದುವೇಳೆ 'ಗತ್ವಾ' ಎಂಬುದು ನಞ್‌ಘಟಿತವಾಗಿದ್ದರೆ ಕ್ತ್ವ ಪ್ರತ್ಯಯವು ಹಾಗೆಯೇ ಉಳಿದು ಅಗತ್ವಾ ಎಂದಾಗುತ್ತದೆ. ಅದಕ್ಕೋಸ್ಕರ 'ಅನಞ್‌ಪೂರ್ವೇ' ಎಂದು ಸೂತ್ರದಲ್ಲಿ ಹೇಳಲಾಗಿದೆ. ಇಷ್ಟು 'ಸಮಾಸೇಽನಞ್‌ಪೂರ್ವೇ ಕ್ತ್ವೋ ಲ್ಯಪ್' ಎಂಬ ಸೂತ್ರದ ಅಭಿಪ್ರಾಯ.

ಈ ಸೂತ್ರದಲ್ಲಿ 'ಕ್ತ್ವಃ' ಎಂಬ ಪದದಿಂದ ಕ್ತ್ವಪ್ರತ್ಯಯಕ್ಕೆ ಎಂಬರ್ಥವನ್ನು ವಿವಕ್ಷಿಸಲಾಗಿದೆ. ಆದರೆ ಕ್ತ್ವಾ ಎಂಬ ಶಬ್ದದ ಷಷ್ಠೀವಿಭಕ್ತಿಯಲ್ಲಿ 'ಕ್ತ್ವಾಯಾ' ಎಂದಾಗುವುದರಿಂದ ಸೂತ್ರದಲ್ಲಿಯೂ 'ಕ್ತ್ವಾಯಾಃ ಲ್ಯಪ್' ಎಂದೇ ಹೇಳಬೇಕಿತ್ತು. ಆದರೆ 'ಕ್ತ್ವ' ಎಂಬಲ್ಲಿರುವ ಆಕಾರಕ್ಕೆ ಲೋಪವನ್ನು ಮಾಡಿ 'ಕ್ತ್ವ' ಎಂದಾಗುತ್ತದೆ. ಮರುತ್ ಶಬ್ದಗಳಂತೆ ಕ್ತ್ವ, ಕ್ತ್ವೌ, ಕ್ತ್ವಃ ಎಂಬ ರೂಪಗಳು ಸಿದ್ಧವಾಗಿ ಷಷ್ಠೀವಿಭಕ್ತಿಯಲ್ಲಿ 'ಕ್ತ್ವಃ' ಎಂಬ ರೂಪವು ಸಿದ್ಧವಾಗುತ್ತವೆ. ಹೀಗೆ ಆಕಾರಕ್ಕೆ ಲೋಪವನ್ನು ಮಾಡಿ 'ಕ್ತ್ವಃ' ಎಂಬ ಪ್ರಯೋಗವನ್ನು ಸೂತ್ರದಲ್ಲಿ ಮಾಡಲಾಗಿದೆ. 'ಕ್ತ್ವಾ' ಎಂಬುದರ ಆಕಾರಕ್ಕೆ ಯಾವ ಸೂತ್ರವೂ ಕೂಡ ಲೋಪವನ್ನು ಹೇಳುತ್ತಿಲ್ಲ. 'ಆತೋ ಧಾತೋಃ' ಎಂಬ ಸೂತ್ರವು, ಪಾರಕ್ಷಣೇ ಪಾಪಾನೇ ಮೊದಲಾದ ಧಾತುವಿನ ಮುಂದಿರುವ ಆಕಾರಕ್ಕೆ ಲೋಪವನ್ನು ಹೇಳುತ್ತಿದೆ. 'ಕ್ತ್ವ' ಎಂಬುದು ಧಾತುವಲ್ಲದ ಕಾರಣ 'ಆತೋ ಧಾತೋ' ಎಂಬ ಸೂತ್ರದಿಂದಲೂ ಲೋಪವು ಬರಲು ಪ್ರಸಕ್ತಿಯಿಲ್ಲ. ಆದರೂ ಕೂಡ ಪಾಣಿನಿಯು 'ಕ್ತ್ವಃ' ಎಂಬುದಾಗಿ ಆಕಾರ ಲೋಪವನ್ನು ಮಾಡಿದ್ದಾನೆ. ಇದರಿಂದ ಏನು ತಿಳಿಯಬೇಕೆಂದರೆ 'ಆತೋ ಧಾತೋಃ' ಎಂಬ ಸೂತ್ರದಲ್ಲಿ 'ಆತೋ' ಎಂಬುದನ್ನು ಯೋಗವಿಭಾಗ ಮಾಡಬೇಕು. ಆವಾಗ 'ಆತೋ' ಎಂಬುದೇ ಬೇರೆ ಸೂತ್ರ, 'ಧಾತೋಃ' ಎಂಬುದೇ ಬೇರೆ ಸೂತ್ರವಾಗುತ್ತದೆ. 'ಆತೋ' ಎಂಬ ಸೂತ್ರಕ್ಕೆ ಧಾತುವಲ್ಲದಿದ್ದರೂ ಉಳಿದ ಶಿಷ್ಟರ ಪ್ರಯೋಗಗಳಲ್ಲಿರುವ ಆಕಾರಕ್ಕೆ ಲೋಪವನ್ನು ಮಾಡಬಹುದೆಂದು ತಿಳಿಯುತ್ತದೆ. ಆದ್ದರಿಂದ 'ಕ್ತ್ವಾ' ಎಂಬುದು ಧಾತುವಾಗದಿದ್ದರೂ 'ಆತೋ' ಎಂಬ ಸೂತ್ರದಿಂದ ಆಕಾರವು ಲೋಪವನ್ನು ಹೊಂದಿ, 'ಕ್ತ್ವ' ಎಂದಾಗಿದೆ. ಷಷ್ಠೀವಿಭಕ್ತಿಯಲ್ಲಿ 'ಕ್ತ್ವಃ' ಎಂಬ ನಿರ್ದೇಶವು ಸಮಂಜಸವೇ ಆಗಿದೆಯೆಂದು ತಿಳಿಯುತ್ತದೆ. ಇದರಂತೆ 'ಹಲಃ ಶ್ನಃಶಾನಜ್ಝೌ' ಎಂಬ ಸೂತ್ರದಲ್ಲಿ 'ಶ್ನಾಯಃ' ಎಂದು ಪಾಣಿನಿಯು ನಿರ್ದೇಶ ಮಾಡಬೇಕಿತ್ತು. ಆದರೆ 'ಶ್ನಃ' ಎಂದು ನಿರ್ದೇಶಿಸಿದ್ದರಿಂದ 'ಆತೋ' ಎಂಬುದನ್ನು ಯೋಗವಿಭಾಗ ಮಾಡಿಕೊಳ್ಳಬೇಕೆಂದು ತಿಳಿಯುತ್ತದೆ. ಇದರಿಂದಲೇ 'ಶ್ನಾ' ಎಂಬಲ್ಲಿರುವ ಆಕಾರಕ್ಕೂ ಲೋಪವು ಬಂದು, 'ಶ್ನಃ' ಎಂಬ ಪ್ರಯೋಗವು ಸಾಧುವಾಗುತ್ತದೆ. ಹೀಗೆ 'ಆತೋ' ಎಂಬುದು 'ಆತೋ ಧಾತೋಃ' ಎಂಬ

ಸೂತ್ರದಲ್ಲಿರುವ ಧಾತೋಃ ಎಂಬುದರ ಜೊತೆಗೆ ಅನ್ವಯವನ್ನು ಹೊಂದಿದ್ದರೂ ಕೂಡ ಯೋಗವಿಭಾಗ ಮಾಡಿದಾಗ ಅದೇ 'ಆತೋ' ಎಂಬ ಪದವು ಧಾತುವಲ್ಲದ ಶಬ್ದಸ್ವರೂಪದ ಜೊತೆಗೂ ಅನ್ವಯವನ್ನು ಹೊಂದುತ್ತದೆಂದು ವ್ಯಾಕರಣದಲ್ಲಿ ಒಪ್ಪಿದ್ದಾರೆ.

ಇದರಂತೆ 'ಣೇರಧ್ಯಯನೇ ವೃತ್ತಮ್' ಇತ್ಯಾದಿ ಸ್ಥಳದಲ್ಲಿಯೂ ಯೋಗವಿಭಾಗ ಮಾಡಿ, ಎರಡು ಅರ್ಥಗಳನ್ನು ಒಪ್ಪಿರುವುದನ್ನು ತಿಳಿದುಕೊಳ್ಳಬೇಕು.

ಹಾಗಾದರೆ ಎಲ್ಲಾ ಸೂತ್ರಗಳಲ್ಲಿಯೂ ಹೀಗೆ ಯೋಗವಿಭಾಗಗಳನ್ನು ಮಾಡಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಎಲ್ಲಿ ಇಷ್ಟವಾದ ರೂಪಗಳು ಸಿದ್ಧವಾಗಬೇಕೋ, ಅಂತಹ ಸ್ಥಳದಲ್ಲಿ ಮಾತ್ರ ಯೋಗವಿಭಾಗವನ್ನು ಮಾಡಿಕೊಳ್ಳಬೇಕಾದ್ದರಿಂದ ಅತಿಪ್ರಸಂಗಕ್ಕೆ ಅವಕಾಶವಿಲ್ಲ. ಇದನ್ನೇ ಕೈಯಟದಲ್ಲಿ 'ಇಷ್ಟಸಿದ್ಧ್ಯರ್ಥತ್ವಾದ್ಯೋಗವಿಭಾಗಸ್ಯ ನಾತಿಪ್ರಸಂಗಃ' ಯೋಗವಿಭಾಗವು ಇಷ್ಟಸಿದ್ಧಿಗೋಸ್ಕರವಿರುವುದರಿಂದ ಅತಿಪ್ರಸಂಗವಿಲ್ಲವೆಂದು ಹೇಳಲಾಗಿದೆ. ಇಷ್ಟಸಿದ್ಧಿಗೋಸ್ಕರ ಯೋಗವಿಭಾಗ ಮಾಡಬಹುದಾದರೆ ಅನಿಷ್ಟರೂಪ ಸಿದ್ಧಿಯು ಇಷ್ಟವಾಗುವುದರಿಂದ ಅತಿಪ್ರಸಂಗವು ಬಂದೇ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಲೋಕೋತ್ತರ ಪ್ರಯೋಗದ ಸಮರ್ಥನೆಯಷ್ಟೇ ಇಷ್ಟವೆಂದು ತಿಳಿಯಬೇಕು.

**प्रकाशः – भूवादय इति ।।** आद्याध्यायतृतीयपादे ''भूवादयो धातवः'' इति सूत्रम् । तस्यार्थो भूप्रभृतयो धातुसंज्ञा भवन्तीति ।

'ಭೂವಾದಯೋ ಧಾತವಃ' ಎಂಬ ಮತ್ತೊಂದು ಸೂತ್ರದಲ್ಲಿ ವಕಾರಕ್ಕೆ ಏಕವಾಕ್ಯತ್ವವನ್ನು ಬಿಟ್ಟು ಮಂಗಳಾರ್ಥತ್ವವನ್ನು ಕೂಡ ಹೇಳಲಾಗಿದೆ. ಮೊದಲನೆಯ ಅಧ್ಯಾಯದ ಮೂರನೆಯ ಪಾದದಲ್ಲಿ ಈ ಸೂತ್ರವು ಇರುತ್ತವೆ. 'ಭೂ' ಮೊದಲಾದವುಗಳಿಗೆ ಧಾತುಸಂಜ್ಞೆಯು ಬರುತ್ತದೆಂದು ಈ ಸೂತ್ರದ ಅರ್ಥ.

**प्रकाशः –** तत्र महाभाष्ये यणादेशे 'भ्वादयः' इति स्यादिति 'भूवादयः' इति निर्देशानुपपत्तिमाशंक्य

ಆಶಂಕೆ - ಮಹಾಭಾಷ್ಯದಲ್ಲಿ ಹೀಗೆ ಆಶಂಕಿಸಲಾಗಿದೆ. 'ಭೂ ಆದಯಃ' ಎಂದಿರಬೇಕಾದರೆ 'ಇಕೋ ಯಣಚಿ' ಎಂಬ ಸೂತ್ರದಂತೆ ಯಣಾದೇಶವು ಪ್ರಾಪ್ತವಾದರೆ ಉಕಾರಕ್ಕೆ ವಕಾರವು ಬಂದು 'ಭ್ವಾದಯಃ' ಎಂದಾಗಬೇಕು. ಆದರೆ ಸೂತ್ರದಲ್ಲಿ ಪಾಣಿನಿಯು 'ಭೂವಾದಯಃ' ಎಂದು ನಿರ್ದೇಶಿಸಿದ್ದಾನೆ. ಇದು ಅನುಪಪನ್ನವಲ್ಲವೇ?

**प्रकाशः –** ''भूवादीनां वकारोऽयं मङ्गलार्थः प्रयुज्यते'' इति वार्तिकेन मङ्गलार्थत्वमुक्तम् ।

ಸಮಾಧಾನ - ಮೇಲಿನ ಆಶಂಕೆಗೆ ಮಹಾಭಾಷ್ಯದಲ್ಲಿ ಹೀಗೆ ಉತ್ತರಿಸಲಾಗಿದೆ - 'ಭೂವಾದೀನಾಂ ವಕಾರೋಽಯಂ ಮಂಗಲಾರ್ಥಃ ಪ್ರಯುಜ್ಯತೇ' 'ಭೂವಾದಯಃ' ಎಂಬಲ್ಲಿರುವ ವಕಾರವು

ಮಂಗಲಕ್ಕೋಸ್ಕರ ಪ್ರಯೋಗಿಸಲ್ಪಟ್ಟಿದೆ ಎಂಬ ವಾರ್ತಿಕದ ಆಧಾರದಿಂದ ವಕಾರಕ್ಕೆ ಮಂಗಲಾರ್ಥತ್ವವನ್ನು ಹೇಳಲಾಗಿದೆ.

**प्रकाशः –** कैयटे च ''अपूर्वस्य लाभो दध्यादेर्लोके मङ्गलं सूचयति; तथेहाप्यागमवकारो मङ्गलार्थस्सम्पद्यते । अथवा सति वकारेऽविकृतभूशब्द उच्चार्यमाणो महाव्याहृतिस्मरणान्मङ्गलं भवतीति पारम्पर्येण वकारो मङ्गलार्थस्सम्पद्यते'' इत्युक्तम् ।

ಕೈಯಟ ವ್ಯಾಖ್ಯಾನದಲ್ಲಿಯೂ 'ಅಪೂರ್ವಸ್ಯ ಲಾಭೋ ದಧ್ಯಾದೇರ್ಲೋಕೇ ಮಂಗಲಂ ಸೂಚಯತಿ । ತಥೇಹಾಪ್ಯಾಗಮವಕಾರೋ ಮಂಗಲಾರ್ಥಃ ಸಂಪದ್ಯತೇ । ಅಥವಾ ಸತಿ ವಕಾರೇऽವಿಕೃತಭೂಶಬ್ದ ಉಚ್ಚಾರ್ಯಮಾಣೋ ಮಹಾವ್ಯಾಹೃತಿಸ್ಮರಣಾನ್ಮಂಗಲಂ ಭವತೀತಿ ಪಾರಂಪರ್ಯೇಣ ವಕಾರೋ ಮಂಗಲಾರ್ಥಃ ಸಂಪದ್ಯತೇ ।' ಲೋಕದಲ್ಲಿ ಯಾವುದಾದರೂ ಕಾರ್ಯಕ್ಕೆ ಹೊರಟಿರುವಾಗ ಹಾಲು, ಮೊಸರು ಮೊದಲಾದವುಗಳ ದರ್ಶನವಾದರೆ ಮಂಗಳವಾಗುತ್ತದೆ. ಅದರಂತೆ ಇಲ್ಲಿಯೂ ಕೂಡ 'ಭೂ ಆದಯಃ' ಎಂದಷ್ಟೇ ಹೇಳಿದರೂ ಸೂತ್ರಾರ್ಥವು ಪೂರ್ಣವಾಗುವಾಗ ವಕಾರದ ಆಗಮನವನ್ನು ಪ್ರತ್ಯೇಕವಾಗಿ ಪಾಣಿನಿಯು ನಿರ್ದೇಶಿಸಿರುತ್ತಾನೆ. ಆಗಮವಾಗಿ ವಕಾರವು ಮಂಗಲಾರ್ಥವನ್ನೇ ಸೂಚನೆ ಮಾಡುತ್ತದೆ.

ಅಥವಾ ವಕಾರವು ಮುಂದಿರುವುದರಿಂದ ಹಿಂದಿನ ಭೂಶಬ್ದವು ಯಾವುದೇ ವಿಕಾರವನ್ನು ಪಡೆದಿಲ್ಲ. ಆವಾಗ ಭೂಶಬ್ದವನ್ನು ಉಚ್ಚರಿಸುವುದರಿಂದ ಮಹಾವ್ಯಾಹೃತಿಯೆನಿಸಿದ 'ಭೂಃ, ಭುವಃ, ಸ್ವಃ' ಈ ಮೂರರಲ್ಲಿರುವ 'ಭೂಃ' ಎಂಬುದರ ಸ್ಮರಣೆಯು ಬರುತ್ತದೆ. ಮಹಾವ್ಯಾಹೃತಿಯ ಸ್ಮರಣೆ ಬರುವುದು ಪರಮಮಂಗಲವನ್ನೇ ಉಂಟುಮಾಡುತ್ತದೆ. ಹೀಗೆ ವಕಾರವು ಮಂಗಲಾರ್ಥಕವಾಗದಿದ್ದರೂ ತಾನು ಮುಂದಿರುವುದರಿಂದ ಹಿಂದಿನ 'ಭೂಃ' ಎಂಬ ಅಕ್ಷರದಿಂದ ಮಂಗಳವನ್ನು ತಂದುಕೊಡುತ್ತದೆ. ಹೀಗೆ ಕೈಯಟದಲ್ಲಿ ಎರಡು ಸಮಾಧಾನಗಳನ್ನು ಹೇಳಲಾಗಿದೆ.

ಧಾತುಪ್ರಕರಣವು ಪ್ರಾರಂಭವಾಗುವ ಮೊದಲು ಈ ಸೂತ್ರವಿರುವುದರಿಂದ ವಕಾರವು ಮಂಗಳವನ್ನು ಸೂಚನೆ ಮಾಡುತ್ತಿದೆಯೆಂಬುದು ಪಾಣಿನಿಯ ಅಭಿಪ್ರಾಯ. ಮಂಗಲಾಚರಣೆಯನ್ನು ಗ್ರಂಥದ ಪ್ರಾರಂಭದಲ್ಲಿ, ಮಧ್ಯದಲ್ಲಿ ಹಾಗೂ ಕೊನೆಯಲ್ಲಿ ಮಾಡಬೇಕೆಂಬುದು ಸಂಪ್ರದಾಯವಾದ್ದರಿಂದ ಗ್ರಂಥದ ಮಧ್ಯದ ಮಂಗಳವೆಂದು ಇದನ್ನು ತಿಳಿಯಬೇಕು.

**प्रकाशः –** तथा च तत्र यथा 'भुवं वदन्तीति भूवादयः' इति 'भुवो वादयो भूवादयः' इति वा सम्भवत्यन्वये तत्त्यागेन मङ्गलार्थत्वमुक्तम् । अन्यथा ''भुवो वार्थं वदन्तीति भ्वार्था वा वादयस्स्मृताः'' इति वृत्तिकाराद्युक्तप्रकारद्वयमेव ब्रूयात्, नतु मङ्गलार्थत्वमिति भावः ।।

ಪರಿಪೂರ್ಣಚಂದ್ರಿಕಾ

ವಾಸ್ತವಿಕವಾಗಿ ವೃತ್ತಿಕಾರನು ಆದಿಶಬ್ದವಿದೆಯೆಂದು ಇಲ್ಲಿ ಪರಿಗಣಿಸಿಯೇ ಇಲ್ಲ. ಹೊರತಾಗಿ 'ಭುವಂ ವದಂತೀತಿ ಭೂವಾದಯಃ' ಎಂಬ ಸಮಾಸದಿಂದ 'ಭೂವಾದಯಃ' ಎಂಬ ರೂಪವನ್ನು ನಿಷ್ಪತ್ತಿ ಮಾಡಿದ್ದಾನೆ. ಭೂಧಾತುವಿನ ಅರ್ಥವನ್ನು ಹೇಳುವಂತಹ ಧಾತುಗಳಿಗೆ ಧಾತುಸಂಜ್ಞೆಯನ್ನು ಈ ಸೂತ್ರದಲ್ಲಿ ವಿಧಿಸಲಾಗಿದೆ. 'ಭೂಧಾತು' ಎಂಬುದು ಉಪಲಕ್ಷಣವಾದ್ದರಿಂದ ಇನ್ನೂ ಅನೇಕ ಧಾತುಗಳಿಗೂ ಧಾತುಸಂಜ್ಞೆಯನ್ನು ಹೇಳಬೇಕು. ಆದ್ದರಿಂದ 'ಭುವಂ ವದಂತೀತಿ ಭೂವಾದಯಃ' ಎಂದಾಗಲೀ, 'ಭುವೋ ವಾದಯೋ ಭೂವಾದಯಃ' ಎಂದಾಗಲೀ ಅನ್ವಯವನ್ನು ಹೇಳಬಹುದು. ಆದರೂ ಈ ಪ್ರಕಾರವನ್ನು ಬಿಟ್ಟು ಭಾಷ್ಯಕಾರರು ವಕಾರಕ್ಕೆ ಮಂಗಲಪ್ರಯೋಜನವನ್ನು ಸಮರ್ಥಿಸಿದ್ದಾರೆ. ಇಲ್ಲವಾದರೆ 'ಭುವೋ ವಾರ್ಥಂ ವದಂತೀತಿ ಭ್ವಾರ್ಥಾ ವಾ ವಾದಯಃ ಸ್ಮೃತಾಃ' ಎಂಬ ವೃತ್ತಿಕಾರರು ಹೇಳಿದ ಎರಡು ಪ್ರಕಾರಗಳನ್ನೇ ವಿವಕ್ಷಿಸಬಹುದಿತ್ತು ಹೊರತು, ಮಂಗಲಪ್ರಯೋಜನವನ್ನು ಹೇಳಬಾರದಿತ್ತು.

ಹೀಗೆ ವಕಾರವು ಒಂದು ಕಡೆ ಅನ್ವಯವನ್ನು ಹೊಂದಿದ್ದರೂ ಅದನ್ನು ಬಿಡಿಸಿ, ಪ್ರತ್ಯೇಕವಾಗಿ ಮಂಗಲಪ್ರಯೋಜನವನ್ನು ಹೇಳಲಾಗಿದೆ. ಅದರಂತೆ 'ಜ್ಯೋತಿಷಾ ಯಜೇತ' ಇತ್ಯಾದಿ ಸ್ಥಳದಲ್ಲಿ ಜ್ಯೋತಿರಾದಿ ಪದಗಳು 'ಯಜೇತ' ಎಂಬುದರ ಜೊತೆಗೆ ಅನ್ವಯವನ್ನು ಹೊಂದಿದ್ದರೂ ಪ್ರತ್ಯೇಕವಾಗಿ ಪರಮಾತ್ಮಪರವಾಗಿ ಅರ್ಥೈಸುವುದು ತಪ್ಪಾಗುವುದಿಲ್ಲ.

**प्रकाशः – कंबलवन्तमिति ।।** ''काशीतलवाहिनी गङ्गा केदारपोषणरताः कं सञ्जघान भगवान् कंबलवन्तं न बाधते शीतम्'' इत्यत्र शीतलवाहिनी गङ्गा का? इति प्रश्नस्य 'काशीतलवाहिनी गङ्गा' इत्युत्तरं, दारपोषणे रताः के? इति प्रश्नस्य 'केदारपोषणरताः' इत्युत्तरं कृषीवला इत्यर्थः । भगवान् कं पुरुषं सञ्जघान? इति प्रश्नस्य कंसं जघानेत्युत्तरं 'बलवन्तं कं न बाधते शीतम्' ? इति प्रश्नस्य 'कंबलवन्तं कंबलयुक्तं न बाधते शीतम्' इत्युत्तरं इति प्रश्नोत्तररूपत्वदर्शनादित्यर्थः।

ಯಾವ ವಾಕ್ಯದಲ್ಲಿ ಪ್ರಶ್ನಿಸಲಾಗಿದೆಯೋ, ಅದೇ ವಾಕ್ಯದಲ್ಲಿ ಉತ್ತರವನ್ನೂ ಕೂಡ ಹೇಳಲಾಗಿದೆ. ಉದಾಹರಣೆ -

> ಕಾಶೀತಲವಾಹಿನೀ ಗಂಗಾ ಕೇದಾರಪೋಷಣರತಾಃ।
> ಕಂ ಸಂಜಘಾನ ಭಗವಾನ್ ಕಂ ಬಲವಂತಂ ನ ಬಾಧತೇ ಶೀತಮ್ ॥

ಶೀತಲವಾಹಿನಿ ಗಂಗಾ ಕಾ? ಶೀತಲವಾಹಿನಿಯಾದ ಗಂಗೆ ಯಾವುದು? ಎಂಬ ಪ್ರಶ್ನೆಗೆ 'ಕಾಶೀತಲವಾಹಿನೀ ಗಂಗಾ' ಎಂಬ ವಾಕ್ಯವೇ ಉತ್ತರಿಸಿದೆ. ಅಂದರೆ 'ಕಾಶಿಯಲ್ಲಿ ಹರಿಯುವ ಗಂಗೆಯು ಶೀತಲವಾಹಿನಿಯಾಗಿದೆ' ಎಂದು.

ದಾರಪೋಷಣರತಾಃ ಕೇ? ಹೆಂಡತಿ, ಮಕ್ಕಳು ಮೊದಲಾದವರ ಪೋಷಣೆಯಲ್ಲಿ ರತರಾದವರು ಯಾರು ? ಎಂಬ ಪ್ರಶ್ನೆಗೆ 'ಕೇದಾರಪೋಷಣರತಾಃ' ಎಂಬ ಅದೇ ವಾಕ್ಯವೇ ಉತ್ತರಿಸಿದೆ. ಕೃಷಿಯನ್ನು ಮಾಡುವವರೇ ಹೆಂಡತಿ, ಮಕ್ಕಳ ಪೋಷಣೆಯಲ್ಲಿ ಆಸಕ್ತರಾಗಿರುತ್ತಾರೆ ಎಂದು.

ಕಂ ಸಂಜಘಾನ ಭಗವಾನ್ ? ಕೃಷ್ಣನು ಯಾರನ್ನು ಸಂಹಾರ ಮಾಡಿದನು ಎಂಬ ಪ್ರಶ್ನೆಗೆ 'ಕಂಸಂ ಜಘಾನ ಭಗವಾನ್' ಎಂಬ ವಾಕ್ಯವೇ ಉತ್ತರಿಸಿದೆ. ಶ್ರೀಕೃಷ್ಣನು ಕಂಸನನ್ನು ಸಂಹರಿಸಿದನು.

ಬಲವಂತಮ್ ಕಂ ನ ಬಾಧತೇ ಶೀತಮ್? ಬಲಿಷ್ಠನಾದ ಯಾರನ್ನು ಶೀತವು ಬಾಧಿಸುವುದಿಲ್ಲ ? ಎಂಬ ಪ್ರಶ್ನೆಗೆ 'ಕಂಬಲವಂತಮ್ ನ ಬಾಧತೇ ಶೀತಮ್' 'ಕಂಬಳಿಯನ್ನು ಹೊದ್ದುಕೊಂಡಿರುವವನನ್ನು ಶೀತವು ಬಾಧಿಸುವುದಿಲ್ಲ' ಎಂಬ ಅದೇ ವಾಕ್ಯವೇ ಉತ್ತರಿಸಿದೆ.

**प्रकाशः** – एकदेशस्यान्यान्वितस्यापि विभागेनार्थान्तरपरत्वे तु 'भूवादयः' इत्याद्युदाहरणद्वयम् । तत्राद्यं स्मार्तम् । द्वितीयं लौकिकम् ।

ವಾಕ್ಯದ ಏಕದೇಶವು ಬೇರೆಡೆ ಅನ್ವಯವನ್ನು ಹೊಂದಿದ್ದರೂ ವಿಭಾಗ ಮಾಡಿದಾಗ ಅರ್ಥಾಂತರ ಪರವಾಗುತ್ತದೆಂಬ ವಿಷಯದಲ್ಲಿ 'ಭೂವಾದಯಃ'' ಮೊದಲಾದ ಈ ಎರಡು ಉದಾಹರಣೆಗಳನ್ನು ನೀಡಲಾಗಿದೆ. 'ಭೂವಾದಯೋ ಧಾತವಃ' ಎಂಬುದು ಸ್ಮಾರ್ತ ಉದಾಹರಣೆ. 'ಕಂಬಲವಂತಂ' ಎಂಬುದು ಲೌಕಿಕ ಉದಾಹರಣೆ ಎಂಬುದಾಗಿ ತಿಳಿಯಬೇಕು.

**गुरुराजीयम्** – अत्र पदसमन्वयपक्षे यजेतेत्यस्यापि ब्रह्मपरत्वेन कर्माविधायकत्वमेव परिहारो वक्तुं शक्यते । तथाप्यभ्युपेत्यवादेनाह – **सुबामन्त्रित इति** ।।




ಚಕ್ಷುರಿಂದ್ರಿಯದಿಂದ ಒಂದೇ ಕ್ಷಣದಲ್ಲಿ ಎರಡು ಘಟಗಳನ್ನು ನೋಡುತ್ತೇವೆ. ಅದರಂತೆ ಒಂದೇ ಶಬ್ದದಿಂದ ಎರಡು ಅರ್ಥಗಳ ಬೋಧವು ಏಕೆ ಬರಬಾರದು? ಗಂಗೆಯಲ್ಲಿ ಮೀನಿದೆ ಮತ್ತು ಹಳ್ಳಿಯಿದೆ ಎಂದು ಹೇಳಿದಾಗ ಒಂದೇ ಗಂಗಾ ಶಬ್ದಕ್ಕೆ ಪ್ರವಾಹ ಎಂಬರ್ಥವೂ, ತೀರ ಎಂಬರ್ಥವೂ ಒಟ್ಟಿಗೆ ಬರುವುದು ಕಂಡಿದೆಯಲ್ಲವೇ? ಪಂಕಜ ಶಬ್ದವನ್ನು ಕೇಳಿದಾಗ, ರೂಢಿಯಿಂದ ಪದ್ಮತ್ವಜಾತಿಯ ಸ್ಮರಣೆ ಬರುವುದೂ ಕಂಡಿದೆ. ಯೋಗದಿಂದ ಪಂಕಜನನಕರ್ತೃತ್ವದ ಸ್ಮರಣೆ ಬರುವುದೂ ಕೂಡ ಕಂಡಿದೆ.

ವ್ಯಾಕರಣ ಶಾಸ್ತ್ರದಲ್ಲಿ 'ಸಹ ಸುಪಾ' ಎಂಬ ಸೂತ್ರವಿದೆ. ಹಿಂದಿನ ಸೂತ್ರದಿಂದ 'ಸುಪ್' ಎಂಬುದನ್ನು ಅನುವೃತ್ತಿ ಮಾಡಿಕೊಂಡಾಗ, ಸುಬಂತವಾದ ಪದವು, ಸುಬಂತವಾದ ಮತ್ತೊಂದು ಪದದ ಜೊತೆಗೆ ಸಮಾಸವಾಗುತ್ತದೆಂದು ಇದಕ್ಕೆ ಅರ್ಥ. ತಿಙಂತವಾದ ಶಬ್ದದ ಜೊತೆಗೂ ಕೂಡ ಸಮಾಸ ಮಾಡಬೇಕೆಂಬ ಪ್ರಸಕ್ತಿ ಬಂದಾಗ ಸಹ ಎಂಬುದನ್ನು

ಪ್ರತ್ಯೇಕಸೂತ್ರವೆಂದೇ ಪರಿಗಣಿಸುತ್ತಾರೆ. ಆವಾಗ ಹಿಂದಿನ ಸೂತ್ರದಿಂದ ಅನುವೃತ್ತವಾದ, 'ಸುಪ್' ಎಂಬುದು 'ಸಹ ಸುಪಾ' ಎಂಬ ಸೂತ್ರದಲ್ಲಿ 'ಸುಪಾ' ಎಂಬುದರ ಜೊತೆಗೆ ಏಕವಾಕ್ಯತ್ವವನ್ನು ಹೊಂದಿದ್ದರೂ 'ಸಹ' ಎಂಬ ಸೂತ್ರವನ್ನು ಪ್ರತ್ಯೇಕವಾಗಿ ಪರಿಗಣಿಸಿದಾಗ, 'ಸುಪಾ' ಎಂಬುದರ ಜೊತೆಗೆ ಅನ್ವಯವನ್ನು ಹೊಂದದೇ ಸಮರ್ಥವಾದ 'ತಿಙಂತ'ದ ಜೊತೆಗೆ ಅನ್ವಯವನ್ನು ಹೊಂದಿ ಸಮಾಸವನ್ನು ವಿಧಿಸುತ್ತದೆ. ಆದ್ದರಿಂದ ಒಮ್ಮೆ ಏಕವಾಕ್ಯತ್ವವನ್ನು ಹೊಂದಿದ್ದರೂ ಪ್ರತ್ಯೇಕವಾಗಿ ಬೇರೆ ಅರ್ಥವನ್ನೂ ಕೂಡ ಶಬ್ದಗಳು ನೀಡಬಹುದು. ಇದರಂತೆ ಲೌಕಿಕ ಉದಾಹರಣೆಯೂ ಕೂಡ ಪ್ರಸಿದ್ಧವಾಗಿದೆ. ಯಾವ ವಾಕ್ಯದಲ್ಲಿ ಪ್ರಶ್ನಿಸಲಾಗಿದೆಯೋ, ಅದೇ ವಾಕ್ಯದಲ್ಲಿ ಉತ್ತರವನ್ನೂ ಕೂಡ ಹೇಳಲಾಗಿದೆ. ಉದಾಹರಣೆ -

ಕಾಶೀತಲವಾಹಿನೀ ಗಂಗಾ ಕೇದಾರಪೋಷಣರತಾಃ ।
ಕಂಸಂಜಘಾನ ಭಗವಾನ್ ಕಂಬಲತವಂತಂ ನ ಬಾಧತೇಶೀತಮ್ ॥

ಶೀತಲವಾಹನಿ ಗಂಗಾ ಕಾ? ಶೀತಲವಾಹಿನಿಯಾದ ಗಂಗೆ ಯಾರು? ಎಂಬ ಪ್ರಶ್ನೆಗೆ ಕಾಶೀತಲವಾಹಿನೀ ಗಂಗಾ ಎಂಬ ವಾಕ್ಯವೇ ಉತ್ತರಿಸಿದೆ. ಅಂದರೆ ಕಾಶಿಯಲ್ಲಿ ಹರಿಯುವ ಗಂಗೆಯು ಶೀತಲವಾಹಿನಿಯಾಗಿದೆ ಎಂದು.

ದಾರ ಪೋಷಣ ರತಾಃ ಕೇ? ಹೆಂಡತಿ, ಮಕ್ಕಳು ಮೊದಲಾದವರ ಪೋಷಣೆಯಲ್ಲಿ ರತರಾದವರು ಯಾರು ? ಎಂಬ ಪ್ರಶ್ನೆಗೆ 'ಕೇದಾರಪೋಷಣರತಾಃ' ಎಂಬ ಅದೇ ವಾಕ್ಯವೇ ಉತ್ತರಿಸಿದೆ. ಕೃಷಿಯನ್ನು ಮಾಡುವವರೇ ಹೆಂಡತಿ, ಮಕ್ಕಳ ಪೋಷಣೆಯಲ್ಲಿ ಆಸಕ್ತರಾಗಿರುತ್ತಾರೆ ಎಂದು.

ಕಂ ಸಂಜಘಾನ ಭಗವಾನ್ ? ಕೃಷ್ಣನು ಯಾರನ್ನು ಸಂಹಾರ ಮಾಡಿದನು ಎಂಬ ಪ್ರಶ್ನೆಗೆ 'ಕಂಸಂ ಜಘಾನ ಭಗವಾನ್' ಎಂಬ ವಾಕ್ಯವೇ ಉತ್ತರಿಸಿದೆ. ಶ್ರೀಕೃಷ್ಣನು ಕಂಸನನ್ನು ಸಂಹರಿಸಿದನು.

ಬಲವಂತಮ್ ಕಂ ನ ಬಾಧತೇ ಶೀತಮ್? ಬಲಿಷ್ಠನಾದ ಯಾರನ್ನೂ ಶೀತವು ಬಾಧಿಸುವುದಿಲ್ಲ ? ಎಂಬ ಪ್ರಶ್ನೆಗೆ 'ಕಂಬಲವಂತಮ್ ನಾ ಬಾಧತೇ ಶೀತಮ್' 'ಕಂಬಳಿಯನ್ನು ಹೊದ್ದುಕೊಂಡಿರುವವನನ್ನು ಶೀತವು ಬಾಧಿಸುವುದಿಲ್ಲ' ಎಂಬ ಅದೇ ವಾಕ್ಯವೇ ಉತ್ತರಿಸಿದೆ.



## ಅಪೌರುಷೇಯವಾಕ್ಯಕ್ಕೆ ಅನೇಕಾರ್ಥವಿದೆಯೆನ್ನಲು ಪೂರ್ವಮೀಮಾಂಸೆಯ ದೃಷ್ಟಾಂತ

### तात्पर्यचन्द्रिका

**नच पुंवाक्यस्याभिप्रायपरतन्त्रत्वात्तदनुरोधादनेकार्थता । न त्वपुंवाक्यस्येति शंक्यम् ।**

ಅನುವಾದ - ಒಂದೇ ವಾಕ್ಯಕ್ಕೆ ಅನೇಕಾರ್ಥವನ್ನು ಹೇಳಬಹುದೆಂದು ಸಮರ್ಥನೆ ಮಾಡುತ್ತಿದ್ದೀರಿ. ಇದನ್ನು ಪೌರುಷೇಯವಾದ ವಾಕ್ಯಗಳಲ್ಲಿ ಹೇಳಬಹುದೇ ಹೊರತು, ಅಪೌರುಷೇಯವಾದ ವೇದದಲ್ಲಿ ಕಲ್ಪನೆ ಮಾಡಲು ಸಾಧ್ಯವೇ ಇಲ್ಲ. ಏಕೆಂದರೆ ಪೌರುಷೇಯವಾಕ್ಯವು ಆಯಾ ಪುರುಷರ ಅಭಿಪ್ರಾಯಕ್ಕೆ

ಅನುಗುಣವಾಗಿರುವುದರಿಂದ ಅದನ್ನು ಅನುಸರಿಸಿ ವಾಕ್ಯಕ್ಕೂ ಕೂಡ ಅನೇಕಾರ್ಥವನ್ನು ಹೇಳಬಹುದು. ಅಂದರೆ ಯಾವ ಪುರುಷನು ಅನೇಕಾರ್ಥದಲ್ಲಿ ವಾಕ್ಯವನ್ನು ಪ್ರಯೋಗಿಸುತ್ತಾನೋ, ಅದರ ಪ್ರಕಾರ ಅನೇಕಾರ್ಥವನ್ನು ಆ ವಾಕ್ಯಕ್ಕೆ ತಿಳಿಯಬಹುದು. ಆದರೆ ಅಪೌರುಷೇಯವಾದ ವಾಕ್ಯದಲ್ಲಿ ವಕ್ತೃವಿನ ವಿವಕ್ಷೆಗೆ ಅವಕಾಶವೇ ಇಲ್ಲದ ಕಾರಣ ಅನೇಕಾರ್ಥವನ್ನು ಕಲ್ಪನೆ ಮಾಡುವುದು ತಪ್ಪಲ್ಲವೇ? ಹೀಗೆ ಆಶಂಕಿಸಬಾರದು.

**पुंवाक्येऽप्यनेकार्थाभिप्रायलिङ्गाभावे तदयोगात् । अपुंवाक्येऽप्यनेकार्थतात्पर्यज्ञापकस्य सत्त्वे तस्यानिवार्यत्वात् ।**

ಇದು ಸರಿಯಲ್ಲ. ಪೌರುಷೇಯವಾಕ್ಯದಲ್ಲಿಯೂ ಕೂಡ ಅನೇಕಾರ್ಥವನ್ನು ಕಲ್ಪನೆ ಮಾಡಲು ಕೇವಲ ಪುರುಷರ ಅಭಿಪ್ರಾಯವು ಕಾರಣವಲ್ಲ. ಹೊರತಾಗಿ ವಕ್ತೃವಿಗೆ ಅನೇಕಾರ್ಥದ ವಿವಕ್ಷೆಯಿದೆ ಎನ್ನಲು ಲಿಂಗಗಳು ವಾಕ್ಯದಲ್ಲಿರಬೇಕು. ಒಂದುವೇಳೆ ವಾಕ್ಯಗಳಲ್ಲಿ ಅನೇಕಾರ್ಥಕ್ಕೆ ಕಲ್ಪಕವಾದ ಲಿಂಗಗಳಿಲ್ಲದಿದ್ದರೆ ಪೌರುಷೇಯವಾಕ್ಯದಲ್ಲಿಯೂ ಕೂಡ ಅನೇಕಾರ್ಥವನ್ನು ಕಲ್ಪಿಸಬಾರದು. ಒಂದು ವೇಳೆ ಅಪೌರುಷೇಯವಾದ ವಾಕ್ಯವಾಗಿದ್ದರೂ ಅನೇಕಾರ್ಥಕ್ಕೆ ಕಲ್ಪಕವಾದ ಲಿಂಗಗಳಿದ್ದಲ್ಲಿ ಅನಿವಾರ್ಯವಾಗಿ ಅನೇಕಾರ್ಥ ಕಲ್ಪಿಸಲೇಬೇಕು.

**पुंवाक्येऽभिप्रायेण शक्तिसङ्कोचादेकार्थता । वेदे तु तदभावात् बाधकाभावे यावत् वाक्यार्थतेत्येव न्याय्यत्वाच्च ।**

ವಿಚಾರ ಮಾಡಿದರೆ ಪೌರುಷೇಯ ವಾಕ್ಯದಲ್ಲಿ ಪುರುಷರ ಅಭಿಪ್ರಾಯಕ್ಕೆ ಅನುಗುಣವಾಗಿ, ಶಕ್ತಿಯನ್ನು ಸಂಕೋಚ ಮಾಡಬಹುದಾದ್ದರಿಂದ ಒಂದೇ ಅರ್ಥವಿರುತ್ತದೆ. ಆದರೆ ವೇದದಲ್ಲಿ ಅಭಿಪ್ರಾಯಕ್ಕೆ ಅವಕಾಶವಿಲ್ಲದ ಕಾರಣ, ಬಾಧಕವಿಲ್ಲದಿದ್ದಲ್ಲಿ ಎಷ್ಟು ಅರ್ಥವನ್ನು ಆ ವಾಕ್ಯಕ್ಕೆ ಹೇಳಬಹುದೋ, ಅಷ್ಟು ಅರ್ಥವನ್ನೂ ಕೂಡ ಕಲ್ಪಿಸುವುದು ನ್ಯಾಯಬದ್ಧವಾಗುತ್ತದೆ.

**तदुक्तं शाबरभाष्ये –"परार्थो हि वेदो यथाऽनेन कर्तुं शक्यं तस्मा एष समाम्नायः" इति ।**

ಇದನ್ನೇ ಪೂರ್ವಮೀಮಾಂಸಾಸೂತ್ರದ 'ಅರ್ಥಕೃತೇ ವಾನಮಾನಂ ಸ್ಯಾತ್' ಎಂಬ ಪೂರ್ವಮೀಮಾಂಸಾ ಸೂತ್ರಕ್ಕೆ ವ್ಯಾಖ್ಯಾನ ಮಾಡುವ ಶಾಬರಭಾಷ್ಯದಲ್ಲಿ ಹೀಗೆ ಹೇಳಲಾಗಿದೆ - 'ಪರಾರ್ಥೋ ಹಿ ವೇದೋ ಯಥಾಽನೇನ ಕರ್ತುಂ ಶಕ್ಯಂ ತಸ್ಮಾ ಏಷ ಸಮಾಮ್ನಾಯಃ' ವೇದವು ಹೊರಟಿರುವುದೇ ಪರಾರ್ಥಕ್ಕಾಗಿ. ಆದ್ದರಿಂದ ಸ್ವರ್ಗಾದಿ ಪ್ರಯೋಜನವನ್ನು 'ಸ್ವಾಧ್ಯಾಯೋಽಧ್ಯೇತವ್ಯಃ' ಇತ್ಯಾದಿ ವಾಕ್ಯಗಳಿಗೆ ಹೇಳಬೇಕೆಂದರೆ ಎಷ್ಟು ಅರ್ಥವನ್ನು ಕಲ್ಪನೆ ಮಾಡಬೇಕೋ, ಅಷ್ಟು ಅರ್ಥವೂ ಕೂಡ ಆ ವಾಕ್ಯದ ಅಭಿಪ್ರಾಯವೇ ಆಗಿರುತ್ತದೆ ಎಂದು.

ಪರಿಪೂರ್ಣಚಂದ್ರಿಕಾ

''तेजो वै घृतं' 'प्रतितिष्ठन्ति ह वा एता रात्रीरुपयन्ति'' इत्यादौ प्राशस्त्यपरार्थवादपदान्तरैःसह प्राशस्त्यलक्षकाणामपि घृतादिशब्दानां स्वार्थभूत-घृतादिपरत्वस्यापि दर्शनाच्च ।

ಮತ್ತು ಪೂರ್ವಮೀಮಾಂಸೆಯ ಅಕ್ಷರಾಧಿಕರಣದಲ್ಲಿ 'ತೇಜೋ ವೈ ಘೃತಂ' ಎಂಬ ಮುಂದಿನ ಅರ್ಥವಾದ ವಾಕ್ಯವನ್ನು ನೋಡಿ, ಹಿಂದೆ ಪ್ರಸಕ್ತವಾಗಿರುವ ಸಕ್ಕರೆಗೆ ತುಪ್ಪವನ್ನೇ ಮಿಶ್ರಣ ಮಾಡಬೇಕು. ಉಳಿದ ದ್ರವದ್ರವ್ಯಗಳನ್ನು ಮಿಶ್ರಣ ಮಾಡಬಾರದೆಂದು ಸಿದ್ಧಾಂತ ಮಾಡಲಾಗಿದೆ. ಅದರಂತೆ 'ಪ್ರತಿತಿಷ್ಠಂತಿ ಹ ವಾ ಏತಾ ರಾತ್ರಿರುಪಯಂತಿ' ಎಂಬಲ್ಲಿಯೂ 'ಪ್ರತಿತಿಷ್ಠಂತಿ' ಇತ್ಯಾದಿ ವಾಕ್ಯಗಳೂ ಅರ್ಥವಾದಪರವಾಗಿವೆಯೆಂದು ಪೂರ್ವಪಕ್ಷ ಮಾಡಲಾಗಿದೆ. 'ತೇಜೋ ವೈ ಘೃತಂ' ಎಂಬ ವಾಕ್ಯವಾಗಲೀ, 'ಪ್ರತಿತಿಷ್ಠಂತಿ ಹ ವಾ' ಎಂಬ ವಾಕ್ಯವಾಗಲೀ ಅರ್ಥವಾದ ಪರವಾದ್ದರಿಂದ ಪ್ರಾಶಸ್ತ್ಯದಲ್ಲಿ ಲಕ್ಷಣಾವೃತ್ತಿಯನ್ನು ಹೊಂದಿದ್ದರೂ ಕೂಡ ಘೃತ, ಪ್ರತಿಷ್ಠೆ ಮೊದಲಾದ ಸ್ವಾರ್ಥದಲ್ಲಿ ತಾತ್ಪರ್ಯವನ್ನೂ ಕೂಡ ಹೊಂದಿರುತ್ತವೆ. ಆದ್ದರಿಂದ ಒಂದೇ ವಾಕ್ಯಕ್ಕೆ ಅನೇಕಾರ್ಥಗಳನ್ನು ಹೇಳುವುದು ಪೂರ್ವಮೀಮಾಂಸೆಯ ದೃಷ್ಟಾಂತದಿಂದಲೂ ಕೂಡ ಸಾಧುವೇ ಆಗುತ್ತದೆ.

**प्रकाशः –**

ननु पौरुषेयवाक्ये पुरुषाभिप्रायानुसारेण नानार्थकल्पनेऽपि वेदवाक्ये वक्तुरभावेन नानार्थत्वकल्पकवक्तृतात्पर्याभावान्न नानार्थत्वं युक्तमित्यत आह – पुंवाक्य इति ।।

ವಿವರಣೆ - ಪೌರುಷೇಯವಾದ ವಾಕ್ಯಗಳಲ್ಲಿ ಪುರುಷರ ಅಭಿಪ್ರಾಯಕ್ಕೆ ಅನುಸಾರಿಯಾಗಿ ಅನೇಕಾರ್ಥವನ್ನು ಕಲ್ಪನೆ ಮಾಡುವುದು ತಪ್ಪಾಗುವುದಿಲ್ಲ. ಆದರೆ ಅಪೌರುಷೇಯವಾದ ವೇದವಾಕ್ಯದಲ್ಲಿ ವಕ್ತೃವೇ ಇಲ್ಲದ ಕಾರಣ ಅನೇಕಾರ್ಥತ್ವವನ್ನು ಕಲ್ಪನೆ ಮಾಡಲು ಹೇಗೆ ಸಾಧ್ಯ ? ಅನೇಕಾರ್ಥವನ್ನು ಕಲ್ಪನೆ ಮಾಡಲು ಕಾರಣವಾಗಿರುವ ವಕ್ತೃತಾತ್ಪರ್ಯವನ್ನೇ ವೇದದಲ್ಲಿ ಹೇಳಲು ಸಾಧ್ಯವಿಲ್ಲ. ಹಾಗಾಗಿ ಅನೇಕಾರ್ಥತ್ವವು ಅಪೌರುಷೇಯವಾದ ವೇದಕ್ಕೆ ಸರ್ವಥಾ ಯುಕ್ತವಾಗುವುದಿಲ್ಲವಲ್ಲವೇ? ಈ ಆಕ್ಷೇಪಕ್ಕೆ 'ಪುಂವಾಕ್ಯೇ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः –** वक्तुरभावोऽनेकार्थत्वे गुण एव । नतु दोषायेति भावः ।

ವಕ್ತೃವಿನ ಇಲ್ಲದಿರುವಿಕೆಯು ಅನೇಕಾರ್ಥವನ್ನು ಕಲ್ಪನೆ ಮಾಡಲು ಗುಣವೇ ಆಗುತ್ತದೆ ಹೊರತು, ದೋಷವಾಗುವುದಿಲ್ಲ. ಕೇವಲ ಅನೇಕಾರ್ಥವನ್ನು ಕಲ್ಪನೆ ಮಾಡಲು ಲಿಂಗಗಳಿದ್ದರೆ ಸಾಕು. ಅಂತಹ ಲಿಂಗಗಳು ವೇದದಲ್ಲಿ ಇರುವಾಗ ಅನೇಕಾರ್ಥವನ್ನು ಕಲ್ಪನೆ ಮಾಡಲೇಬೇಕಾಗುತ್ತದೆ.

**प्रकाशः – अस्मिन्नेवार्थे मीमांसकसम्मतिमाह – तदुक्तमिति ।। पञ्चमस्याद्यपादे पञ्चमेधिकरणे ''अर्थकृते वानुमानं स्यात्'' इति सूत्रभाष्ये – 'अध्ययनविधिवशात् पुरुषार्थपर्यवसानादेव सामर्थ्यानुसारेण सर्वत्र विनियोक्तव्यः' इत्यर्थः ।।**

ಇದೇ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತವನ್ನು 'ತದುಕ್ತಮ್' ಇತ್ಯಾದಿ ಗ್ರಂಥದಿಂದ ತೋರಿಸಿದ್ದಾರೆ. ಪೂರ್ವಮೀಮಾಂಸೆಯ ಐದನೆಯ ಅಧ್ಯಾಯದ ಪ್ರಥಮಪಾದದ ಐದನೆಯ ಅಧಿಕರಣದಲ್ಲಿ 'ಅರ್ಥಕೃತೇ ವಾನುಮಾನಂ ಸ್ಯಾತ್' ಎಂಬ ಸೂತ್ರವಿದೆ. ಇದರ ಭಾಷ್ಯದಲ್ಲಿ ಹೇಳಿದ್ದನ್ನು ಗ್ರಂಥಕಾರರು 'ತದುಕ್ತಮ್' ಇತ್ಯಾದಿ ವಾಕ್ಯದಿಂದ ಹೇಳಿರುತ್ತಾರೆ. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಿಧಿಯು ಸ್ವರ್ಗಕ್ಕಾಗಿ ಅಧ್ಯಯನವನ್ನು ಮಾಡಬೇಕೆಂದು ವಿಧಾನ ಮಾಡುತ್ತಿಲ್ಲ. ಅರ್ಥಜ್ಞಾನಕ್ಕೋಸ್ಕರ ಅಧ್ಯಯನ ಮಾಡಬೇಕೆಂದೇ ಹೇಳುತ್ತಿದೆ. ಆದರೂ ಸಹ ಪುರುಷಾರ್ಥದಲ್ಲೇ ಅದು ಪರ್ಯವಸಾನವಾಗುತ್ತದೆ. ಮೀಮಾಂಸಕರ ಮತದಲ್ಲಿ ವೇದಾರ್ಥಜ್ಞಾನವೆಂದರೆ ಕರ್ಮಗಳ ಜ್ಞಾನ ಎಂದರ್ಥ. ಜ್ಯೋತಿಷ್ಟೋಮಾದಿ ಕರ್ಮಗಳ ಜ್ಞಾನವನ್ನು ಪಡೆಯುವುದು ಜ್ಯೋತಿಷ್ಟೋಮಾದಿ ಯಾಗಗಳ ಅನುಷ್ಠಾನಕ್ಕಾಗಿ ಅಂತಹ ಯಾಗಗಳ ಅನುಷ್ಠಾನದಿಂದ ಸ್ವರ್ಗವು ದೊರೆಯುತ್ತದೆ. ಹೀಗೆ ಸ್ವರ್ಗವೆಂಬ ಫಲಕ್ಕಾಗಿ ಸ್ವಾಧ್ಯಾಯವನ್ನು ಮಾಡಬೇಕೆಂದು 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ವಾಕ್ಯವು ಬೋಧಿಸುತ್ತಿದೆ. ಆದ್ದರಿಂದ ಎಷ್ಟು ಅರ್ಥಗಳನ್ನು ವಿನಿಯೋಗ ಮಾಡಿದರೆ ಪುರುಷಾರ್ಥವು ದೊರೆಯುತ್ತದೋ ಸಾಮರ್ಥ್ಯಕ್ಕೆ ಅನುಸಾರಿಯಾಗಿ ಅಷ್ಟು ಅರ್ಥಗಳನ್ನು ಅಧ್ಯಯನ ವಿಧಿಯಲ್ಲಿ ವಿನಿಯೋಗ ಮಾಡಬೇಕು. ಗ್ರಂಥದಲ್ಲಿ ಉಲ್ಲೇಖಿಸಿದ ಶಾಬರಭಾಷ್ಯದ ಮಾತಿಗೆ ಹೀಗರ್ಥ - ವೇದವು ಪುರುಷಾರ್ಥಕ್ಕೋಸ್ಕರ ಹೊರಟಿರುವುದರಿಂದ ಎಷ್ಟು ಅರ್ಥವನ್ನು ವಿನಿಯೋಗ ಮಾಡುವುದರಿಂದ ಸ್ವರ್ಗಾದಿಪ್ರಯೋಜನ ಪರವಾಗುತ್ತದೋ, ಅಷ್ಟು ಅರ್ಥಗಳನ್ನು 'ಸ್ವಾಧ್ಯಾಯೋಽಧ್ಯೇತವ್ಯಃ' ಇತ್ಯಾದಿ ವಾಕ್ಯಗಳಿಗೆ ವಿನಿಯೋಗ ಮಾಡಬೇಕು ಎಂದು.

**प्रकाशः – तेजो वै घृतमिति ।। अक्ताधिकरणं प्राक् विवृतं समन्वयाधिकरणे ।**

ಗ್ರಂಥದಲ್ಲಿ ಉಲ್ಲೇಖಿಸಿದ 'ತೇಜೋ ವೈ ಘೃತಮ್' ಎಂಬ ವಾಕ್ಯವು ಪೂರ್ವಮೀಮಾಂಸೆಯ ಅಕ್ತಾಧಿಕರಣದಲ್ಲಿ ಬರುತ್ತದೆ. ಸಕ್ಕರೆಯನ್ನು ನೆನೆಸಬೇಕು ಎಂದು ಹೇಳಿದಾಗ, ತುಪ್ಪದಿಂದಲೋ, ಹಾಲಿನಿಂದಲೋ ಅಥವಾ ಇತರ ದ್ರವಪದಾರ್ಥಗಳಿಂದಲೋ ? ಎಂಬ ಸಂಶಯವು ಪ್ರಾಪ್ತವಾದರೆ, 'ತೇಜೋ ವೈ ಘೃತಮ್' ಎಂಬುದಾಗಿ ಮುಂದೆ ಘೃತವನ್ನು ಪ್ರಶಂಸೆ ಮಾಡಲಾಗಿದೆ. ತುಪ್ಪದಿಂದಲೇ ಸಕ್ಕರೆಯನ್ನು ನೆನೆಸಬೇಕು ಎಂಬರ್ಥವು ದೊರೆಯುತ್ತದೆ. ಈ ಅಧಿಕರಣವನ್ನು ಸಮನ್ವಯಾಧಿಕರಣದಲ್ಲಿ ವಿವರಿಸಿದ್ದಾಗಿದೆ.

**प्रकाशः – चतुर्थस्य तृतीयपादे ''क्रतौ फलार्थवादमङ्गवत् कार्ष्णाजिनिः'' इत्यष्टमेऽधिकरणे ''प्रतितिष्ठन्ति हवा य एता रात्रीरुपयन्ति'' इति वाक्यमुदाहृत्य**

चिन्तितम् । तत्र रात्रिशब्देन ''ज्योतिर्गौरायुः'' इति वाक्योक्तसौत्यानि कर्माण्युच्यन्ते । तत्र ''प्रतितिष्ठन्ति'' इति किमयं फलविधिरुतार्थवादः? इति संशये

'ಕ್ರತೌ ಫಲಾರ್ಥವಾದಮಂಗವತ್ಕಾರ್ಷ್ಣಾಜಿನಿಃ' (೪-೩-೮)

'ಪ್ರತಿಷ್ಠಂತಿ ಹವಾ ಯ ಏತಾ ರಾತ್ರೀರುಪಯಂತಿ' ಯಾವ ಅಧಿಕಾರಿಯು ರಾತ್ರಿ ಎಂಬ ಕರ್ಮವನ್ನು ಆಚರಿಸುತ್ತಾನೋ ಎಂಬ ವಾಕ್ಯವೇ ಈ ಅಧಿಕರಣದ ವಿಷಯವಾಗಿದೆ.

ಈ ವಿಷಯವಾಕ್ಯದಲ್ಲಿ ರಾತ್ರಿಶಬ್ದದಿಂದ 'ಜ್ಯೋತಿರ್ಗೌರಾಯುಃ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಸೌತ್ಯಕರ್ಮಗಳು ಪ್ರತಿಪಾದ್ಯವಾಗಿವೆ. ಯಾರು ಈ ಸೌತ್ಯಕರ್ಮವೆನಿಸಿದ ಜ್ಯೋತಿ ಮೊದಲಾದ ಕರ್ಮಗಳನ್ನು ಅನುಷ್ಠಾನ ಮಾಡುತ್ತಾರೋ, ಅಂತಹವರನ್ನು ಕುರಿತು ಶ್ರುತಿಯು ಪ್ರತಿಷ್ಠಂತಿ ಎಂದು ಹೇಳಿದೆ. ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಒಳ್ಳೆಯ ಸ್ಥಾನಮಾನವನ್ನು ಪಡೆಯುತ್ತಾರೆ ಎಂದು. ಇಲ್ಲಿರುವ ಪ್ರತಿಷ್ಠಂತಿ ಎಂಬುದು ಫಲವಿಧಯೋ, ಅಥವಾ ಅರ್ಥವಾದವೋ ? ಎಂದು ಸಂಶಯ.

**प्रकाशः** – अपापश्लोकश्रवणवत् वर्तमानापदेशेन फलविध्यसामर्थ्यादर्थवाद इति प्राप्ते

ಅರ್ಥವಾದವೆಂದು ಪೂರ್ವಪಕ್ಷ - ಯಾವರೀತಿಯಾಗಿ 'ನಸ ಪಾಪಂ ಶ್ಲೋಕಂ ಶೃಣೋತಿ' ಯಾವಾತನು ಕರ್ಮಾಚರಣೆಯನ್ನು ಮಾಡುತ್ತಾನೋ ಅವನು ಪಾಪದ ವಾರ್ತೆಯನ್ನೇ ಕೇಳುವುದಿಲ್ಲ. ಒಳ್ಳೆಯ ಕೀರ್ತಿವಂತನಾಗುತ್ತಾನೆ ಎಂದು ಈ ವಾಕ್ಯ ಹೇಳುತ್ತಿದೆ. ಈ ವಾಕ್ಯದಲ್ಲಿ 'ಶೃಣೋತಿ' ಎಂಬುದಾಗಿ ಲಟ್‌ಲಕಾರವನ್ನು ಪ್ರಯೋಗಿಸಿದ್ದರಿಂದ ವಿಧಿವಾಕ್ಯವಲ್ಲ, ಅರ್ಥವಾದವೆಂದು ನೀವೇ ಹೇಳಿದಂತೆ ಪ್ರಕೃತದಲ್ಲಿಯೂ 'ಪ್ರತಿಷ್ಠಂತಿ' ಎಂಬುದಾಗಿ ವರ್ತಮಾನವಾಚಿಯಾದ ಲಟ್‌ಲಕಾರವು ಕೇಳಿಸುತ್ತಿದೆ. ಆದ್ದರಿಂದ ಇದನ್ನು ಅರ್ಥವಾದವೆಂದೇ ಹೇಳಬೇಕು ಹೊರತು, ಫಲವಿಧಿಯಲ್ಲಿ ಸಾಮರ್ಥ್ಯವನ್ನು ಹೊಂದಿಲ್ಲ.

**प्रकाशः** – रात्रिनामककर्मणां फलापेक्षाणां फलान्तरकल्पनापेक्षया क्लृप्तप्रतिष्ठास्वरूपस्यैव फलत्वकल्पनस्य लघुत्वात् ये प्रतितिष्ठासन्ति त एता रात्रीरुपेयुरिति विपरिणामेन फलविधिरिति सिद्धान्त इति ।

ಸಿದ್ಧಾಂತ - ಫಲವಿಧಿಯೆಂದೇ ಹೇಳಬೇಕು. ಹೊರತು, ಅರ್ಥವಾದವೆನ್ನಬಾರದು. ಏಕೆಂದರೆ ರಾತ್ರಿಯೆಂಬ ಹೆಸರುಳ್ಳ ಕರ್ಮಗಳಿಗೆ ಫಲವನ್ನು ಹೇಳಲೇಬೇಕು. ಬೇರೆ ಫಲಗಳನ್ನು ಕಲ್ಪನೆ ಮಾಡುವುದಕ್ಕಿಂತ ಈ ವಾಕ್ಯದಲ್ಲೇ ಶ್ರುತವಾದ ಕ್ಲೃಪ್ತವಾದ ಪ್ರತಿಷ್ಠಾಸ್ವರೂಪವಾದ ಫಲವನ್ನು ಕಲ್ಪನೆ ಮಾಡುವುದು ಲಘುವಾಗಿದೆ. ವರ್ತಮಾನದ ವ್ಯಪದೇಶದ ವಿರೋಧವು ಬರುವುದಿಲ್ಲ. 'ಯೇ ಪ್ರತಿತಿಷ್ಠಾಸಂತಿ ತೇ ಏತಾ

ರಾತ್ರೀರುಪೇಯುಃ' ಎಂಬುದಾಗಿ ವಿಪರಿಣಾಮವನ್ನು ಮಾಡಬೇಕು. ಯಾವಾತನು ಇಹಪರಲೋಕಗಳಲ್ಲಿ ಸುಖವಾಗಿರಬೇಕೆಂಬ ಅಪೇಕ್ಷೆಯನ್ನು ಹೊಂದಿರುತ್ತಾರೋ, ಅವನು ಈ ರಾತ್ರೀನಾಮಕವಾದ ಕರ್ಮಗಳನ್ನು ಆಚರಣೆ ಮಾಡಬೇಕು. ಹೀಗೆ ವಿಪರಿಣಾಮ ಮಾಡಿಕೊಂಡಾಗ ವಾಕ್ಯವು ಫಲವಿಧಿಯೆಂದೇ ಸಿದ್ಧವಾಗುತ್ತದೆ.

**प्रकाशः** – तेजश्शब्दस्य प्राशस्त्यपरत्वेपि घृतशब्दस्य तदाश्रयपरतया न तत्परत्वमित्यतः प्राशस्त्यपरार्थवादपदान्तरैस्सहेत्युक्तम् । घृतादीत्यादिपदेन प्रतिष्ठादिपरत्वस्येति गृह्यते ।

'ತೇಜೋ ವೈ ಘೃತಂ' ಎಂಬ ವಾಕ್ಯದಲ್ಲಿ 'ತೇಜಃ' ಶಬ್ದವು ಪ್ರಾಶಸ್ತ್ಯಪರವಾಗಿದ್ದರೂ, ಘೃತಪದವು ಪ್ರಾಶಸ್ತ್ಯಪರವಾಗಿಲ್ಲ. ಕೇವಲ ಪ್ರಾಶಸ್ತ್ಯಕ್ಕೆ ಆಶ್ರಯವಾದ ಘೃತಪರವೇ ಆಗಿರುತ್ತದೆ. ಹೀಗಿರುವಾಗ ಘೃತಪದವು ಪ್ರಾಶಸ್ತ್ಯಪರವೆಂದು ಹೇಳುವುದು ಹೇಗೆ ಸಮಂಜಸವಾಗುತ್ತದೆ? ಎಂದು ಪ್ರಶ್ನಿಸಬಾರದು. ಆದಕ್ಕಾಗಿಯೇ ಗ್ರಂಥಕಾರರು 'ಪ್ರಾಶಸ್ತ್ಯಪರಾರ್ಥವಾದಪದಾಂತರೈಃ ಸಹ' ಎಂದು ಹೇಳಿದ್ದಾರೆ. ಪ್ರಾಶಸ್ತ್ಯಪರವಾದ 'ತೇಜಃ' ಎಂಬ ಅರ್ಥವಾದಪದದ ಜೊತೆಗೆ ಸೇರಿಕೊಂಡು ಘೃತಪದವು ಅರ್ಥವಾದಪರವಾಗಿದೆಯೆಂದು ವಿವಕ್ಷಿಸಬೇಕು. ಘೃತಪದವು ಕೇವಲ ಪ್ರಾಶಸ್ತ್ಯಲಕ್ಷಕವೆಂದು ಅಭಿಪ್ರಾಯವಿರುವುದಿಲ್ಲ. ಅದೇ ರೀತಿಯಾಗಿ ಪ್ರತಿತಿಷ್ಠಂತಿ ಎಂಬ ವಾಕ್ಯವೂ ಕೂಡ ಅರ್ಥವಾದರೂಪವಾಗಿದೆ. ಫಲವನ್ನು ವಿಧಾನ ಮಾಡುತ್ತಿರುವುದರಿಂದ ಪ್ರತಿಷ್ಠಾ ಎಂಬ ಸ್ವಾರ್ಥಪರತ್ವವು ಈ ಪದಕ್ಕಿದೆ. ಅದೇ ಕಾಲದಲ್ಲಿಯೇ ಅರ್ಥವಾದ ಪರವಾಗಿ ಪ್ರಾಶಸ್ತ್ಯವನ್ನು ಲಕ್ಷಣಾವೃತ್ತಿಯಿಂದಲೂ ಕೂಡ ಹೇಳುತ್ತದೆ.

'ಕ್ರತೌ ಫಲಾರ್ಥವಾದಮಂಗವತ್' ಎಂಬ ಅಧಿಕರಣದಲ್ಲಿ 'ಪ್ರತಿತಿಷ್ಠಂತಿ' ಎಂಬ ವಾಕ್ಯಕ್ಕೆ ಅರ್ಥವಾದಪರತ್ವವನ್ನು ಹೇಳುವುದರ ಜೊತೆಗೆ ಪ್ರತಿಷ್ಠಾಕಾಮನೆಯನ್ನೂ ಕೂಡ ಫಲವನ್ನಾಗಿ ಹೇಳಲಾಗಿದೆ. ಅರ್ಥವಾದ ಎಂದು ಹೇಳಿದ್ದರಿಂದ ಪ್ರಾಶಸ್ತ್ಯದಲ್ಲಿ ಲಕ್ಷಣಾವನ್ನು ಒಪ್ಪಲೇಬೇಕು. ಫಲವಿದೆಯೆಂದು ಒಪ್ಪಿದ್ದರಿಂದ 'ಪ್ರತಿತಿಷ್ಠಂತಿ' ಎಂಬ ಪದಕ್ಕೆ 'ಪ್ರತಿಷ್ಠಾ' ಎಂಬ ಸ್ವಾರ್ಥದಲ್ಲಿ ತಾತ್ಪರ್ಯವನ್ನೂ ಕೂಡ ಹೇಳಬೇಕು.




ಪುರುಷರು ವಾಕ್ಯವನ್ನು ಪ್ರಯೋಗ ಮಾಡುವಾಗ ಅನೇಕಾರ್ಥಗಳನ್ನು ವಿವಕ್ಷಿಸಿದಲ್ಲಿ, ಅನೇಕಾರ್ಥವನ್ನು ಕಲ್ಪನೆ ಮಾಡುವುದು ತಪ್ಪಾಗುವುದಿಲ್ಲ. ಆದರೆ ವೇದವು ಅಪೌರುಷೇಯವಾದ್ದರಿಂದ ಅನೇಕಾರ್ಥದ ವಿವಕ್ಷೆ ವೇದಕ್ಕೆ ಇದೆಯೆಂದು ನಿರ್ಣಯಿಸುವುದು ಹೇಗೆ? ಎಂಬ ಪ್ರಶ್ನೆಯು ಎದುರಾಗುತ್ತದೆ. ಇದನ್ನು ಸರಿಯಾಗಿ ವಿಮರ್ಶೆ ಮಾಡಬೇಕು. ಅನೇಕಾರ್ಥವನ್ನು ಕಲ್ಪನೆ ಮಾಡಲು ವಕ್ತೃವಿನ ವಿವಕ್ಷೆಯೇ ಕಾರಣವಾಗಿದ್ದಲ್ಲಿ ಅಪೌರುಷೇಯವಾದ ವಾಕ್ಯಕ್ಕೆ ಅನೇಕಾರ್ಥವನ್ನು ಹೇಳುವುದು ತಪ್ಪಾಗುತ್ತಿತ್ತು. ಆದರೆ ವಕ್ತೃವಿನ ವಿವಕ್ಷೆಯು ಅನೇಕಾರ್ಥಕ್ಕೆ ಕಾರಣವಲ್ಲ. ಹೊರತಾಗಿ ಅನೇಕಾರ್ಥವನ್ನು ಕಲ್ಪನೆ ಮಾಡಲು ಸಾಧಕವಾದ ಲಿಂಗಗಳು ವಾಕ್ಯದಲ್ಲಿ ಕಾಣಿಸುತ್ತಿರಬೇಕು.

ಅಂತಹ ಲಿಂಗಗಳು ಪೌರುಷೇಯ ವಾಕ್ಯದಲ್ಲೇ ಇರಲಿ, ಅಪೌರುಷೇಯ ವಾಕ್ಯದಲ್ಲೇ ಇರಲಿ ಅನೇಕಾರ್ಥವನ್ನು ಖಂಡಿತವಾಗಿಯೂ ಹೇಳಬಹುದು.

ಮತ್ತು ಪೂರ್ವಮೀಮಾಂಸೆಯ ಅಕ್ತಾಧಿಕರಣದಲ್ಲಿ 'ತೇಜೋ ವೈ ಘೃತಂ' ಎಂಬ ವಾಕ್ಯವನ್ನು ಅರ್ಥವಾದ ಪರವೆಂದು ಒಪ್ಪಿದ್ದರೂ ಸ್ವಾರ್ಥದಲ್ಲಿಯೂ ಶಕ್ತಿಯನ್ನು ಒಪ್ಪಿರುತ್ತಾರೆ. ಆದ್ದರಿಂದ ಪ್ರಾಶಸ್ತ್ಯದಲ್ಲಿ ಲಕ್ಷಣಾವೃತ್ತಿಯನ್ನು ಸ್ವಾರ್ಥದಲ್ಲಿ ಶಕ್ತಿವೃತ್ತಿಯನ್ನು ಮೀಮಾಂಸಕರೂ ಕೂಡ ಅಂಗೀಕರಿಸಿದ್ದಾರೆ. ಇದರಂತೆ 'ಪ್ರತಿತಿಷ್ಠಂತಿ ಹವಾ ಏತಾ' ಎಂಬ ವಾಕ್ಯಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿಯೂ 'ಪ್ರತಿತಿಷ್ಠಂತಿ' ಎಂಬ ಪದಕ್ಕೆ ಪ್ರಾಶಸ್ತ್ಯದಲ್ಲಿ ಲಕ್ಷಣಾವನ್ನು ಸ್ವಾರ್ಥದಲ್ಲಿ ಶಕ್ತಿಯನ್ನು ಪೂರ್ವಮೀಮಾಂಸಕರು ಒಪ್ಪಿರುತ್ತಾರೆ. ಅದರಂತೆ ನಾವೂ ಕೂಡ ವೇದದಲ್ಲಿರುವ ವಾಕ್ಯಗಳಿಗೆ ಅನೇಕಾರ್ಥಗಳನ್ನು ಕಲ್ಪಿಸುತ್ತೇವೆ.



## ಕಲ್ಪಸೂತ್ರ, ಆಶ್ವಲಾಯನಸೂತ್ರ ಮೊದಲಾದವುಗಳ ಆಧಾರದಿಂದಲೂ ಅನೇಕಾರ್ಥತ್ವವು ಸಿದ್ಧವಾಗುತ್ತದೆ

### तात्पर्यचन्द्रिका

**''अभित्वाशूरनोनुमो नत्वावाँ अन्य'' इति व्यृचे आद्या बृहती उत्तरा पङ्क्तिरिति स्थिते ''पूर्वा बृहती ककुभावुत्तरे'' इति श्रुतिबलात् बृहत्या आद्याया ऋचश्चतुर्थपादं पङ्क्तेरुत्तरस्या ऋचः पूर्वार्धेन प्रग्रथ्यैकां ककुभं संपाद्य तस्यां ककुभि चरमं पादं पङ्क्तेरुत्तरार्धेन प्रग्रथ्य ककुभन्तरं सम्पाद्यमिति नवमे उक्तत्वेनाद्यऋगादिस्थपादस्य द्वितीयऋगादावन्वयदर्शनाच्च ।**

ಅನುವಾದ - ಒಂದೇ ಮಂತ್ರವು ಬೇರೆ ಬೇರೆ ಕಡೆ ಅನ್ವಯವನ್ನು ಹೊಂದಿ ಅನೇಕಾರ್ಥಗಳನ್ನು ನೀಡುತ್ತವೆಂಬ ವಿಷಯದಲ್ಲಿ ಪೂರ್ವಮೀಮಾಂಸೆಯ ಒಂಭತ್ತನೆಯ ಅಧ್ಯಾಯದಲ್ಲಿ ಮತ್ತೊಂದು ಉದಾಹರಣೆಯನ್ನು ಹೀಗೆ ನೀಡಲಾಗಿದೆ -

'ಅಭಿತ್ವಾಶೂರನೋನುಮೋ ನತ್ವಾವಾಂ ಅನ್ಯೋ' ಎಂಬುದು ಎರಡು ಋಕ್ಕುಗಳುಳ್ಳ ಮಂತ್ರವಾಗಿದೆ. 'ಅಭಿತ್ವಾಶೂರನೋನುಮೋ' ಎಂಬ ಮೊದಲನೆಯ ಮಂತ್ರವು ಬೃಹತೀಛಂದಸ್ಸಿನಲ್ಲಿ ಇರುತ್ತದೆ. 'ನತ್ವಾವಾಂ ಅನ್ಯೋ' ಎಂಬುದು ಪಂಕ್ತಿ ಛಂದಸ್ಸಿನಲ್ಲಿ ಇರುತ್ತದೆ. 'ಪೂರ್ವಾ ಬೃಹತೀ ಕಕುಭಾವುತ್ತರೇ' ಎಂಬ ಬ್ರಾಹ್ಮಣ ವಾಕ್ಯದ ಬಲದಿಂದ ಬೃಹತೀ ಛಂದಸ್ಸಿನಲ್ಲಿರುವ ಕೊನೆಯ ಪಾದವನ್ನು ಪಂಕ್ತಿ ಛಂದಸ್ಸಿನ ಪೂರ್ವಾರ್ಧದ ಜೊತೆಗೆ ಸೇರಿಸಿದಾಗ 'ಕಕುಭ್' ಛಂದಸ್ಸಾಗಿ ಪರಿಣಾಮವಾಗುತ್ತದೆ. ಅದರಂತೆ ಕಕುಭ್‌ಛಂದಸ್ಸಿನ ಕೊನೆಯ ಪಾದವನ್ನು ತೆಗೆದು, ಪಂಕ್ತಿಛಂದಸ್ಸಿನ ಉತ್ತರಾರ್ಧ ಜೊತೆಗೆ ಸೇರಿಸಿದರೆ ಇನ್ನೊಂದು ಕಕುಭ್‌ಛಂದಸ್ಸಿನ ಮಂತ್ರವು ಸಿದ್ಧವಾಗುತ್ತದೆ. ಈ

ದೃಷ್ಟಿಯಿಂದ 'ಪೂರ್ವಾ ಬೃಹತೀ ಕಕುಭಾವುತ್ತರೇ' ಎಂಬ ಬ್ರಾಹ್ಮಣವಾಕ್ಯವು ಬೃಹತ್‌ಸಾಮವನ್ನು ಮೊದಲು ಬೃಹತೀ ಛಂದಸ್ಸಿನಲ್ಲಿ, ಅನಂತರ ಎರಡು ಕಕುಭ್‌ಛಂದಸ್ಸಿನಲ್ಲಿ ಪಠಿಸಬೇಕೆಂದು ಹೇಳಿದೆ. ಇದರಂತೆ ರಥಂತರಸಾಮವನ್ನೂ ಕೂಡ ಮೊದಲು ಬೃಹತೀ ಛಂದಸ್ಸಿನಲ್ಲಿ, ಅನಂತರ ಎರಡು ಕಕುಭ್‌ಛಂದಸ್ಸಿನಲ್ಲಿ ಪಠಿಸಬೇಕೆಂದು ವಿಧಾನ ಮಾಡಿದೆ. ಹೀಗೆ ಬೃಹತೀ ಛಂದಸ್ಸಿನ ಮೂವತ್ತಾರು ಅಕ್ಷರವುಳ್ಳ ಮಂತ್ರದಲ್ಲಿ ಕೊನೆಯ ಪಾದವು ಏಕವಾಕ್ಯತ್ವವನ್ನು ಹೊಂದಿ, ಮೊದಲು ಒಂದರ್ಥವನ್ನು ಹೇಳಿದ್ದರೂ ಪುನಃ ಕಕುಭ್‌ಚ್ಛಂದಸ್ಸಾಗಿ ವಿಪರಿಣಾಮ ಮಾಡಿಕೊಳ್ಳಲು ಕೊನೆಯ ಪಾದವು ಮುಂದಿನ ಪಂಕ್ತಿಛಂದಸ್ಸಿನ ಮಂತ್ರದ ಜೊತೆಗೆ ಅನ್ವಯವನ್ನು ಹೊಂದಿ, ಬೇರೆ ಅರ್ಥವನ್ನೇ ನೀಡುತ್ತಿದೆ. ಆದ್ದರಿಂದ ಒಮ್ಮೆ ಅನ್ವಿತವಾದ ವಾಕ್ಯವು, ಇನ್ನೊಮ್ಮೆ ಅನ್ವಯವನ್ನು ಹೊಂದಿ, ಬೇರೆ ಅರ್ಥವನ್ನು ನೀಡುತ್ತದೆಂದು ಈ ದೃಷ್ಟಾಂತದಿಂದ ಸ್ಪಷ್ಟವಾಗುತ್ತದೆ.

**''अपाःपूर्वेषां हरिवः सुतानामथो इदं सवनं केवलं ते ममद्धिसोमं मधुमन्तमिन्द्रसत्रावृषं जठर आवृषस्व'' इतिसंहितास्थाया याज्याया ''एवाह्येवैव आपाः पूर्वेषां हरिवः सुतानामेवैवाहीन्द्रमथो इदं सवनं केवलं ते एवाहि शक्रो ममद्धिसोमं मधुमन्तमिन्द्रवशी हि शक्रः सत्रावृषं जठर आवृषस्व'' इत्यारण्यकस्थेन ''एवाह्येवैव'' इत्यादिनाऽन्वयदर्शनाच्च ।**

'ಅಪಾಃ ಪೂರ್ವೇಷಾಂ ಹರಿವಃ ಸುತಾನಾಮ್ ಅಥೋ ಇದಂ ಸವನಂ ಕೇವಲಂ ತೇ । ಮಮದ್ಧಿಸೋಮಂ ಮಧುಮಂತಮಿಂದ್ರಸತ್ರಾವೃಷಂ ಜಠರ ಆವೃಷಸ್ವ' ಎಂಬುದಾಗಿ ಋಗ್ವೇದ ಸಂಹಿತೆಯಲ್ಲಿ ಯಾಜ್ಯಾ ಮಂತ್ರವಿದೆ. ಈ ಮಂತ್ರದಲ್ಲಿ ಒಟ್ಟು ನಾಲ್ಕು ಪಾದಗಳಿವೆ. ಒಂದೊಂದು ಪಾದದಲ್ಲಿಯೂ ಹನ್ನೊಂದು ಅಕ್ಷರಗಳಿವೆ. ಆದರೆ ಮಹಾನಾಮ್ನಿ ಮಂತ್ರದ ಐದು ಅಕ್ಷರಗಳನ್ನು ಸೇರಿಸಿ ಹದಿನಾರು ಅಕ್ಷರಗಳನ್ನಾಗಿ ಪಠಿಸಬೇಕೆಂದು ಬ್ರಾಹ್ಮಣವಾಕ್ಯವು ವಿಧಾನ ಮಾಡುತ್ತಿದೆ. ಇದನ್ನೇ ಆರಣ್ಯಕದಲ್ಲಿ 'ಏವಾಹ್ಯೇವೈವ ಅಪಾಃ ಪೂರ್ವೇಷಾಂ ಹರಿವಃ ಸುತಾನಾಮೇವೈವಾಹೀಂದ್ರಮಥೋ ಇದಂ ಸವನಂ ಕೇವಲಂ ತೇ । ಏವಾಹಿ ಶಕ್ರೋ ಮಮದ್ಧಿಸೋಮಂ ಮಧುಮಂತಮಿಂದ್ರವಶೀ ಹಿ ಶಕ್ರಃ ಸತ್ರಾವೃಷಂ ಜಠರ ಆವೃಷಸ್ವ' ಎಂಬುದಾಗಿ ಪಠಿಸಲಾಗಿದೆ. ಯಾಜ್ಯಾವಾಕ್ಯದಲ್ಲಿ 'ಅಪಾಃ ಪೂರ್ವೇಷಾಂ' ಎಂಬುದರ ಜೊತೆಗೆ 'ಏವಾಹ್ಯೇವೈವ' ಎಂಬುದನ್ನು ಅನ್ವಯ ಮಾಡಲಾಗಿದೆ. ಅದರಂತೆ 'ಹರಿವಃ ಸುತಾನಾಂ' ಎಂಬುದರ ಜೊತೆಗೆ 'ಏವೈವಾಹೀಂದ್ರಂ' ಎಂಬುದನ್ನು ಅನ್ವಯ ಮಾಡಲಾಗಿದೆ. ಹೀಗೆ ಪ್ರತಿಯೊಂದು ಪಾದಗಳಲ್ಲಿಯೂ ಐದು ಅಕ್ಷರಗಳನ್ನು ಸೇರಿಸಿ ಅನ್ವಯ ಮಾಡಿದ್ದು ಕಾಣಿಸುತ್ತಿದೆ.

**''आदित्तेहर्यताहरीव वक्षतुः'' इत्यस्य ''जुषाण इन्द्रहरिभिर्न आगहि'' इत्यादेश्च ''आदित्तेह जुषाण इन्द्रहरिभिर्न आगहि'' इतिव्यतिषङ्गदर्शनाच्च ।**

ಇದರಂತೆ 'ಆದಿತ್ತ್ೇಹರ್ಯತಾಹರೀವ ವಕ್ಷತುಃ' ಎಂಬ ಮಂತ್ರದಲ್ಲಿ 'ಜುಷಾಣ ಇಂದ್ರಹರಿಭಿರ್ನ ಆಗಹಿ' ಎಂಬಲ್ಲಿರುವ ಪದಗಳನ್ನು ಅನ್ವಯ ಮಾಡಿ ಪಠಿಸಲಾಗುತ್ತದೆ. 'ಆದಿತ್ತ್ೇಹ' ಎಂಬುದರ ಜೊತೆಗೆ 'ಜುಷಾಣ ಇಂದ್ರಹರಿಭಿರ್ನ ಆಗಹಿ' ಎಂಬುದನ್ನು ಅನ್ವಯ ಮಾಡಿ ಪಠಿಸಲಾಗುತ್ತದೆ. ಹೀಗೆ ಒಮ್ಮೆ ಏಕವಾಕ್ಯತ್ವವನ್ನು ಹೊಂದಿ, ಮಂತ್ರ ಒಂದು ಅರ್ಥವನ್ನು ನೀಡುತ್ತಿದ್ದರೂ ಮತ್ತೊಂದು ಕಡೆ ಅದನ್ನು ಬೇರ್ಪಡಿಸಿ ಅನ್ವಯ ಮಾಡಿದಾಗ ಬೇರೆ ಅರ್ಥವನ್ನೇ ನೀಡುತ್ತದೆಂಬುದು ಈ ಎಲ್ಲಾ ದೃಷ್ಟಾಂತಗಳಿಂದ ಮನದಟ್ಟಾಗುತ್ತದೆ.

**प्रकाशः –**

अन्यान्वितस्य वाक्यस्यान्यान्वय उदाहरणान्तरमाह – **अभित्वेति** ।।

ವಿವರಣೆ - ವಾಕ್ಯವು ಒಂದುಕಡೆ ಅನ್ವಯವನ್ನು ಹೊಂದಿದ್ದರೂ ಮತ್ತೊಂದು ಕಡೆಯೂ ಅನ್ವಿತವಾಗುತ್ತದೆಂಬ ವಿಷಯದಲ್ಲಿ ಪೂರ್ವಮೀಮಾಂಸೆಯ ಮತ್ತೊಂದು ದೃಷ್ಟಾಂತವನ್ನು 'ಅಭಿತ್ವಾ' ಇತ್ಯಾದಿಯಾಗಿ ನೀಡುತ್ತಿದ್ದಾರೆ.

**प्रकाशः** – नवमस्य द्वितीयपादे ''प्रागाथिकन्तु'' इति षष्ठेऽधिकरणे चिन्तितम् । बृहद्रथन्तरसामनी ''अभित्वाशूरनोनुमः'' ''त्वामिद्धि हवामहे'' इति बृहत्योरुत्पन्ने । तयोः पङ्क्ती उत्तरे ''नत्वावामन्यः'' इति ''त्वं नश्चित्र'' इति ।

ಪ್ರಾಗಾಥಿನಕಂತು (೯-೨-೬)[1]

(१) **भाट्टसङ्ग्रहः –**

**अथ षष्ठं बृहतीपंक्त्योरेव प्रग्रथनेन रथन्तरस्य गानाधिकरणम् (सूत्राणि २५-२८)**

**प्रागाथिनकन्तु ।।२५।।**

**(स्वे च ।।२६।। प्रगाथे च ।।२७।। लिङ्गदर्शनाव्यतिरेकाच ।।२८।।)**

पूर्ववैषम्येणात्र शङ्कनात्सङ्गतिः । ज्योतिष्टोमे रथन्तराख्यं साम ''अभि त्वा शूर'' इति बृहत्यामुत्पन्नम् । तस्याश्चोत्तरा ''न त्वा वाम्'' इति पङ्क्तिरेवैक पठिता । तथा बृहदाख्यं साम ''त्वामिद्धि हवामहे'' इति बृहत्यामुत्पन्नम् । तस्याश्चोत्तरा ''स त्वं नश्चित्र वज्रहस्त'' इति पङ्क्तिरेकैव पठिता । तत्रैवं श्रूयते ''न वै बृहद्रथन्तरमेकछन्दो, यत्तयोः पूर्वा बृहती । ककुभावुत्तरे'' इति । **अस्यार्थः**, द्वन्द्वैकवद्भावः । बृहद्रथन्तराख्यं सामद्वयं एकछन्दस्कं एकछन्दस्कऋगाधारकं न भवति । यस्मात्तयोः साम्नोराश्रयभूतास्वृक्षु पूर्वा बृहतीछन्दस्का । उत्तरे तु द्वे ऋचौ ककुप्छन्दस्काविति । तत्र किं पङ्क्तिद्वयं परित्यज्य द्वे द्वे ककुभावानेतव्ये, किं वा योनिभूतां बृहतीमुत्तरां पङ्क्तिश्च प्रग्रथ्य ककुभावुत्तरे ऋचावत्रैव

ಜ್ಯೋತಿರುಪಕ್ರಮಾಧಿಕರಣ (1-4-2)

ಈ ಅಧಿಕರಣದಲ್ಲಿ ಬೃಹತ್‌ಸಾಮ ಹಾಗೂ ರಥಾಂತರಸಾಮವನ್ನು ಯಾವ ಋಕ್ಕಿನಲ್ಲಿ ಹಾಡಬೇಕೆಂಬ ವಿಚಾರ ಮಾಡಲಾಗಿದೆ. ರಥಂತರಸಾಮವನ್ನು 'ಅಭಿ ತ್ವಾ ಶೂರನೋ ನುಮಃ' ಬೃಹತೀಛಂದಸ್ಸಿನ ಋಕ್ಕಿನಲ್ಲಿ ಮಾಡಬೇಕು. ಬೃಹತೀಛಂದಸ್ಸಿನ ಋಜ್‌ಮಂತ್ರದ ಅನಂತರದಲ್ಲಿರುವ 'ನತ್ವಾವಾಮನ್ಯಃ' ಎಂಬ ಋಜ್‌ಮಂತ್ರವಿದೆ. ಇದನ್ನು ರಥಂತರ ಸಾಮದಲ್ಲಿಯೇ ಪಠನ ಮಾಡಬೇಕು. ಅದರಂತೆ ಬೃಹತೀ ಎಂಬ ಮತ್ತೊಂದು ಸಾಮವನ್ನು 'ತ್ವಾಮಿದ್ಧಿ ಹವಾಮಹೇ' ಎಂಬ ಬೃಹತೀಛಂದಸ್ಸಿನ ಮಂತ್ರದಲ್ಲಿ ಪಠಿಸಬೇಕು. ಇದರ ಅನಂತರದಲ್ಲಿ ಪ್ರಸಕ್ತವಾದ 'ತ್ವಂ ನಶ್ಚಿತ್ರ' ಎಂಬ ಪಂಕ್ತಿಛಂದಸ್ಸಿನ ಮಂತ್ರದಲ್ಲಿ ಪಠನ ಮಾಡಬೇಕು. ಹೀಗೇ ರಥಂತರಸಾಮವನ್ನು ಮೊದಲು ಬೃಹತೀಛಂದಸ್ಸಿನಲ್ಲಿ ಹೇಳಿ, ಅನಂತರ ಪಂಕ್ತಿಛಂದಸ್ಸಿನಲ್ಲಿ ಹೇಳಬೇಕು. ಅದರಂತೆ ಬೃಹತ್‌ಸಾಮವನ್ನೂ ಕೂಡ ಮೊದಲು ಬೃಹತೀಛಂದಸ್ಸಿನಲ್ಲಿರುವ ಮಂತ್ರದಲ್ಲಿ ಪಠಿಸಿ, ಅನಂತರ ಪಂಕ್ತಿಛಂದಸ್ಸಿನಲ್ಲಿರುವ ಮಂತ್ರದಲ್ಲಿ ಪಠಿಸಬೇಕೆಂದು ಹೇಳಲಾಗಿದೆ.

**प्रकाशः** – तत्र श्रूयते ''न वै बृहद्रथन्तरमेकच्छन्दः । यत्तयोः पूर्वा बृहतीककुभावुत्तरे'' इति । तस्यार्थः बृहद्रथन्तरमित्येतत्सामद्वयमितरसामवदेकच्छन्दस्कं न भवति । यस्मात्तयोर्बृहद्रथन्तरसाम्नोराश्रयभूता ऋक् पूर्वा बृहतीछन्दस्का । उत्तरे द्वे ककुप्छन्दस्के इति ।

---

सम्पाद्ये इति सन्देहे, ककुप्छब्दस्य स्वभावसिद्धककुप्छन्दस्कायामेव मुख्यत्वात्प्रग्रथनसम्पादितककुभोऽमुख्यत्वात् ''उत्तरे ककुभौ'' इति मुख्यार्थवचनबलात्स्वतः सिद्धककुभावानीय त्यृचे गातव्यं रथन्तरादिसामेति, पूर्वत्रोत्तराग्रन्थपठितऋक्परिग्रहेऽपि नात्र तत्परिग्रह इति प्राप्ते सिद्धान्तः, ककुभन्तरानयने तूत्तरत्र पङ्क्तिपाठस्यानर्थक्यापत्तेः, ''काकुभः प्रगाथः'' इति कल्पसूत्रकारैः प्रगाथसञ्ज्ञाकरणात्, तस्याश्च ''सोस्यादिरिति छन्दसि प्रगाथेषु'' इति सूत्रे ''प्रग्रथ्यत इति प्रगाथः'' इति मञ्जर्यामुक्त्या प्रग्रथननिमित्तत्वात्, ''पदात्पदं पुनरारभते'' इति वाक्ये ''पदं चतुर्थं पादमुद्गाता ऋगान्तरसम्पादनाय पुनरारभते आदत्ते'' इति लिङ्गदर्शनाच्च, प्रग्रथनेनात्रैव ककुभौ सम्पाद्ये इति । तदाह सूत्रे, **प्रागाथिकं** प्रग्रथनप्राप्तककुप्सुगानं कार्यमिति ।

**प्रग्रथनप्रकारश्च** ''अभि त्वा शूर नोनुमो दुग्धा इव धेनवः । ईशानमस्य जगतः स्वर्दृशमीशानमिन्द्र तस्थुषः'' इति प्रथमायां बृहत्यामविकृतोयामेव गानं कृत्वा, तस्या ऋचश्चतुर्थं ''ईशानमिन्द्र तस्थुषः'' इति पादमुपादाय ''न त्वा वां अन्यो दिव्यो न पार्थिवो न जातो न जनिष्यते । अश्वा यन्तो मघवन्निन्द्र वाजिनो गव्यन्तस्त्वा हवामहे'' इत्युत्तरस्याः पङ्क्तेः पूर्वार्धेन प्रग्रथनीयम् । सेयमष्टाविंशत्यक्षरा त्रिपदा द्वितीया स्तोत्रीयैक। ककुप् । पुनस्तस्यां ककुभि ''न जातो न जनिष्यते'' इति चरमं पादमादाय पूर्वस्याः पङ्क्तेरुत्तरार्धेन ''अश्वा यन्तः'' इत्यनेन सह प्रग्रथनीयम् । सेयमष्टाविंशत्यक्षरा तृतीया स्तोत्रीया द्वितीया ककुप्भवतीत्येवंरूपेण ध्येयमिति ।

**।। इति षष्ठं बृहतीपंक्त्योरेव प्रग्रथनेन रथन्तरस्य गानाधिकरणम् (सूत्राणि २५-२८) ।।**

ಪರಿಪೂರ್ಣಚಂದ್ರಿಕಾ

ಈ ಸಂದರ್ಭದಲ್ಲಿ ಬ್ರಾಹ್ಮಣವಾಕ್ಯದಲ್ಲಿ ಹೀಗೆ ಹೇಳಿದ್ದಾರೆ - 'ನ ವೈ ಬೃಹದ್ರಂಥರಮೇಕಚ್ಛಂದಃ । ಯತ್ತಯೋಃ ಪೂರ್ವಾ ಬೃಹತೀಕಕುಭಾವುತ್ತರೇ' 'ಬೃಹದ್ರಥಂತರಮ್' ಎಂಬುದು ದ್ವಂದ್ವೈಕದ್ಭಾವವನ್ನು ಹೊಂದಿದೆ. 'ಬೃಹತ್' ಎಂಬ ಸಾಮವಾಗಲೀ, 'ರಥಂತರ' ಎಂಬ ಸಾಮವಾಗಲೀ ಪ್ರತ್ಯೇಕವಾಗಿ ಒಂದೇ ಛಂದಸ್ಸಿನಲ್ಲಿರುವ ಋಜ್ ಮಂತ್ರವನ್ನು ಆಧಾರವಾಗಿ ಉಳ್ಳದ್ದಲ್ಲ. ಹೊರತಾಗಿ ಮೊದಲಿನ ಋಜ್ ಮಂತ್ರವು ಬೃಹತೀ ಛಂದಸ್ಸಿನಲ್ಲಿರಬೇಕು. ಮುಂದಿನ ಎರಡು ಋಜ್ ಮಂತ್ರಗಳು 'ಕಕುಪ್' ಛಂದಸ್ಸಿನಲ್ಲಿರಬೇಕು ಎಂದು ಹೇಳಲಾಗಿದೆ. ಈ ಪಕ್ಷದಲ್ಲಿ ಒಂದೊಂದು ಸಾಮವನ್ನೂ ಕೂಡ ಮೂರು ಮೂರು ಛಂದಸ್ಸಿನಲ್ಲಿ ಪಠಿಸಬೇಕು ಎಂದು ಹೇಳಿದಂತಾಯಿತು. ಬೃಹತ್ ಸಾಮವನ್ನು ಬೃಹತೀ ಛಂದಸ್ಸಿನಲ್ಲಿ ಹಾಗೂ ಎರಡನ್ನು 'ಕಕುಪ್' ಛಂದಸ್ಸಿನಲ್ಲಿ ಪಠಿಸಬೇಕು. ಇದರಂತೆ ರಥಂತರಸಾಮವನ್ನೂ ಕೂಡ ಒಂದು ಬೃಹತ್‌ಛಂದಸ್ಸಿನಲ್ಲಿ ಮತ್ತೆರಡು 'ಕಕುಪ್' ಛಂದಸ್ಸಿನಲ್ಲಿ ಪಠಿಸಬೇಕು ಎಂದು ಹೇಳಿದಂತಾಯಿತು. ಬ್ರಾಹ್ಮಣವಾಕ್ಯದಲ್ಲಿ 'ನ ಚವೈಬೃಹದ್ರಂಥರಮೇಕಚ್ಛಂದಃ । ಯತ್ತಯೋಃ ಪೂರ್ವಾ ಬೃಹತೀಕಕುಭಾವುತ್ತರೇ' ಎಂಬ ವಾಕ್ಯವಿದೆ. ಇದರ ಅರ್ಥ ಹೀಗಿದೆ - ಬೃಹತ್‌ಸಾಮವನ್ನು ಹಾಗೂ ರಥಂತರಸಾಮವನ್ನು ಒಂದೇ ಛಂದಸ್ಸಿನಲ್ಲಿರುವ ಋಜ್ ಮಂತ್ರದಲ್ಲಿ ಪಠಿಸಬಾರದು. ಆದ್ದರಿಂದ ಬೃಹತ್‌ಸಾಮವನ್ನಾಗಲೀ, ರಥಂತರಸಾಮವನ್ನಾಗಲೀ ಮೊದಲು ಬೃಹತೀಛಂದಸ್ಸಿನಲ್ಲಿರುವ ಮಂತ್ರದಲ್ಲಿ ಪಠಿಸಬೇಕು. ಅನಂತರ ಮುಂದಿನ ಎರಡು ಮಂತ್ರಗಳು ಕಕುಪ್ ಛಂದಸ್ಸಿನಲ್ಲಿರಬೇಕು. ಅಂತಹ ಕಕುಪ್ ಛಂದಸ್ಸಿನಲ್ಲಿರುವ ಎರಡು ಮಂತ್ರಗಳಲ್ಲಿ ಬೃಹತ್‌ಸಾಮವನ್ನು ಹಾಗೂ ರಥಂತರಸಾಮವನ್ನು ಪಠಿಸಬೇಕು ಎಂದು.

**प्रकाशः** – तत्र संशयः ''अभित्वाशूरनोनुमोऽदुग्धा इव धेनवः । ईशानमस्य जगतस्सुवर्दृशमीशानमिन्द्रतस्थुषः'' इति बृहत्या उत्तरत्र पठितां ''नत्वावां अन्यो दिव्यो न पार्थिवो न जातो न जनिष्यते । अश्वायन्तो मघवन्निन्द्रवाजिनो गव्यन्तस्त्वा हवामहे'' इति पङ्क्तिछन्दस्कामृचमपनीय तस्याः स्थाने द्वे ककुभावानेतव्ये ? उत बृहतीं पङ्क्तिं च प्रग्रथ्य ककुभावुत्तरे अत्रैव सम्पाद्ये ? इति ।

ಸಂಶಯ ಹೀಗಿದೆ - 'ಅಭಿತ್ವಾಶೂರನೋನುಮೋಽದುಗ್ಧಾ ಇವ ಧೇನವಃ । ಈಶಾನಮಸ್ಯ ಜಗತಃ ಸವದುರ್ಲಶಮೀಶಾನಮಿಂದ್ರತಸ್ಥುಷಃ' ಎಂಬ ಮಂತ್ರವು ಬೃಹತೀಛಂದಸ್ಸಿನಲ್ಲಿದೆ. ಈಮಂತ್ರದ ಮುಂದೆ 'ನತ್ವಾವಾಂ ಅನ್ಯೋ ದಿವ್ಯೋ ನ ಪಾರ್ಥಿವೋ ನ ಜಾತೋ ನ ಜನಿಷ್ಯತೇ । ಅಶ್ವಾಯಂತೋ ಮಘವನ್ನಿಂದ್ರವಾಜಿನೋ ಗವಯಂತಸ್ತ್ವಾ ಹವಾಮಹೇ' ಎಂಬ ಪಂಕ್ತಿಛಂದಸ್ಸಿನಲ್ಲಿರುವ ಮಂತ್ರದಲ್ಲಿದೆ. ಆದರೆ ಬ್ರಾಹ್ಮಣವಾಕ್ಯವು ಮೊದಲು ಬೃಹತೀ ಛಂದಸ್ಸಿನಲ್ಲಿರುವ ಮಂತ್ರದಲ್ಲಿ ಪಠಿಸಬೇಕೆಂದು ಹೇಳಿದೆ. ಮುಂದಿನ ಎರಡು ಬೃಹತ್‌ಸಾಮವನ್ನು 'ಕಕುಪ್' ಛಂದಸ್ಸಿನಲ್ಲಿರುವ ಮಂತ್ರದಲ್ಲಿ ಪಠಿಸಬೇಕೆಂದು ಹೇಳಿದೆ. ಆದರೆ ಮುಂದೆ ಪಂಕ್ತಿಛಂದಸ್ಸಿನ ಮಂತ್ರವಿದೆ ಹೊರತು, 'ಕಕುಪ್' ಛಂದಸ್ಸಿನ ಮಂತ್ರವಿಲ್ಲ. ಆದ್ದರಿಂದ ಪಂಕ್ತಿಛಂದಸ್ಸಿನ 'ನತ್ವಾವಾಮ್' ಎಂಬ ಮಂತ್ರವನ್ನು ತೆಗೆದು ಅದರ ಸ್ಥಾನದಲ್ಲಿ ಎರಡು ಬೇರೆ 'ಕಕುಪ್'

ಛಂದಸ್ಸುಳ್ಳ ಮಂತ್ರಗಳನ್ನು ಸೇರಿಸಬೇಕು. ಆವಾಗ ಬೃಹತ್‌ಸಾಮವನ್ನು 'ಅಭಿತ್ವಾಶೂರನೋನುಮಃ' ಎಂಬ ಬೃಹತೀಛಂದಸ್ಸಿನಲ್ಲಿ ಹಾಗೂ ಮುಂದಿನ ಎರಡು 'ಕಕುಪ್' ಛಂದಸ್ಸಿನಲ್ಲಿ ಪಠಿಸಬಹುದು. ಅದರಂತೆ ರಥಂತರಸಾಮವನ್ನು 'ತ್ವಾಮಿದ್ಧಿ ಹವಾಮಹೇ' ಎಂಬ ಬೃಹತ್‌ಛಂದಸ್ಸಿನಲ್ಲಿ ಮುಂದಿನ ಎರಡನ್ನು 'ಕಕುಪ್' ಛಂದಸ್ಸಿನಲ್ಲಿ ಪಠಿಸಬಹುದು. ಹೀಗೆ ಹೇಳಬೇಕೋ, ಅಥವಾ ಬೃಹತೀಛಂದಸ್ಸಿನ ಹಾಗೂ ಪಂಕ್ತಿಛಂದಸ್ಸಿನ ಎರಡು ಮಂತ್ರಗಳನ್ನು ಜೋಡಿಸಿ, 'ಕಕುಪ್' ಛಂದಸ್ಸಿನ ಮಂತ್ರವನ್ನಾಗಿ ಮಾಡಿಕೊಂಡು ಅಂತಹ ಮೂರು ಮಂತ್ರಗಳಲ್ಲಿ ಬೃಹತ್‌ಸಾಮವನ್ನು ಹಾಗೂ ರಥಂತರಸಾಮವನ್ನು ಪಠಿಸಬೇಕೆಂದು ಹೇಳಬೇಕೋ? ಎಂಬುದು ಸಂಶಯ.

**प्रकाशः –** पूर्वपक्षस्तु प्रग्रथनेन मुख्यककुप्त्वसम्पत्त्यभावादक्षरसामान्यमात्रेण गौणत्वापत्तेस्तृचगानस्य त्रयमन्तरेणासामंजस्यादन्ययोः ककुभोरानयनमिति ।

ಪೂರ್ವಪಕ್ಷ ಹೀಗಿದೆ - ಪಂಕ್ತಿಛಂದಸ್ಸಿನ 'ನತ್ವಾವಾಂ ಅನ್ಯೋ' ಎಂಬ ಮಂತ್ರವನ್ನು ತೆಗೆದುಹಾಕಿ 'ಕಕುಪ್' ಛಂದಸ್ಸಿನ ಎರಡು ಮಂತ್ರವನ್ನು ತಂದು ಸೇರಿಸಬೇಕು. ಏಕೆಂದರೆ ಬೃಹತೀಛಂದಸ್ಸನ್ನು ಹಾಗೂ ಪಂಕ್ತಿಛಂದಸ್ಸನ್ನು ಸೇರಿಸುವುದರಿಂದ ಮುಖ್ಯವಾದ 'ಕಕುಪ್' ಛಂದಸ್ಸನ್ನು ಸಂಪಾದನೆ ಮಾಡಿದಂತೆ ಆಗುವುದಿಲ್ಲ. ಕೇವಲ ಅಕ್ಷರಗಳ ಜೋಡಣೆಯು ಗೌಣವಾದ ಪಕ್ಷ. ಬ್ರಾಹ್ಮಣವಾಕ್ಯದಲ್ಲಿ ಸ್ಪಷ್ಟವಾಗಿ ಮೂರು ಮಂತ್ರಗಳಲ್ಲಿ ಬೃಹತ್‌ಸಾಮವನ್ನು ರಥಂತರಸಾಮವನ್ನು ಪಠಿಸಬೇಕೆಂದು ಹೇಳಲಾಗಿದೆ. ಇದು ಉಪಪನ್ನವಾಗಬೇಕೆಂದರೆ ಸ್ಪಷ್ಟವಾದ ಒಂದು ಬೃಹತೀಛಂದಸ್ಸಿನ ಮಂತ್ರ, ಎರಡು 'ಕಕುಪ್' ಛಂದಸ್ಸಿನ ಮಂತ್ರವೇ ಇರಬೇಕು. ಹಾಗಾಗಿ ಎರಡು 'ಕಕುಪ್' ಛಂದಸ್ಸಿನ ಮಂತ್ರಗಳನ್ನು ತಂದು ಜೋಡಿಸುವುದೇ ಸಮಂಜಸವಾಗಿದೆ.

**प्रकाशः –** सिद्धान्तस्तु प्रगाथस्मरणात्प्रगाथसमाख्यानात् पङ्क्तेरुत्तरत्र पाठस्यात्यन्तानर्थक्यात् ''पदात् पदं पुनरारभते'' इति लिङ्गदर्शनाच्च प्रग्रथनमेवेति।

तथाचायमर्थः । अभित्वाशूरेत्येषा बृहती प्रथमा स्तोत्रीया । तस्यामविकृतमेव रथन्तरं गातव्यम् । तस्यामृचि चतुर्थपादं पुनरुपादायेतरस्याः पङ्क्तेः पूर्वार्धेन सह ग्रथनीयम् । सेयमष्टाविंशत्यक्षरा त्रिपदा द्वितीया स्तोत्रीया । साचैका ककुप्सम्पद्यते । तस्यां च ककुभि चरमं पादं पङ्क्तेरुत्तरार्धेन सह प्रग्रथ्य तृतीया स्तोत्रीया कार्या । साद्वितीया ककुप्सम्पद्यत इति । ''छन्दोगाहि काकुभः प्रगाथा इति स्मरन्ति । प्रकर्षेण गानं यत्र स प्रगाथः । प्रकर्षो नामाम्नातादृक्पाठादाधिक्यम् । तच्चोक्तरीत्या पादाभ्यासपुरस्सरमृगन्तरसम्पादनेनोपजायत'' इति प्रगाथस्मरणं तत्र प्रमाणमुक्तम् । ''सोऽस्यादिरिति प्रगाथेषु'' इति सूत्रे ''प्रग्रथ्यत इति प्रगाथः'' इति मञ्जर्यादावुक्तेश्च । ''एषा वै प्रतिष्ठिता बृहती । या पुनः पदात्

पदं पुनरारभते । तस्माद्वत्सो मातरमभिहिंकरोति'' इति लिङ्गदर्शनं च प्रमाणमुक्तम् । पदं चतुर्थपादमुद्गाता पुनरारभत इत्यर्थः । 'त्र्यृचे' इति सप्तमी । 'स्थिते' आम्नाते सतीत्यर्थः ॥

ಸಿದ್ಧಾಂತ ಹೀಗಿದೆ - ಇರುವಂತಹ ಬೃಹತೀಛಂದಸ್ಸು ಹಾಗೂ ಪಂಕ್ತಿಛಂದಸ್ಸುಗಳನ್ನು ಜೋಡಿಸಿ, ಎರಡು 'ಕಕುಪ್' ಛಂದಸ್ಸಿನ ಮಂತ್ರಗಳನ್ನು ಮಾಡುವುದೇ ಸೂಕ್ತವಾಗಿದೆ. ಒಂದು ವೇಳೆ ಪೂರ್ವಪಕ್ಷಿಗಳು ಹೇಳುವಂತೆ ಎರಡು 'ಕಕುಪ್' ಛಂದಸ್ಸಿನ ಮಂತ್ರಗಳನ್ನು ತಂದು ಜೋಡಿಸುವುದಾದರೆ ಮುಂದೆ ಪಂಕ್ತಿಛಂದಸ್ಸಿನಲ್ಲಿ ಗಾನ ಮಾಡುವುದೇ ವ್ಯರ್ಥವಾಗುತ್ತದೆ. ಪಂಕ್ತಿಛಂದಸ್ಸಿನ ಎರಡು ಮಂತ್ರಗಳನ್ನು ಇಲ್ಲಿ ಉಲ್ಲೇಖಿಸಿದ್ದೇ ವ್ಯರ್ಥವಾಗುತ್ತದೆ. ಮತ್ತು ಕಲ್ಪಸೂತ್ರದಲ್ಲಿ 'ಛಂದೋಗಾಹಿ ಕಾಕುಭಃ ಪ್ರಗಾಥಃ' ಎಂದು ಕರೆದಿದ್ದಾರೆ.' 'ಕಕುಪ್' ಛಂದಸ್ಸಿನಲ್ಲಿರುವ ಇದನ್ನು ಪ್ರಗಾಥ ಎಂದು ಕರೆಯಬೇಕು. ಪ್ರಗಾಥ ಎಂಬ ಸಂಜ್ಞೆಯು ಯೌಗಿಕವಾಗಿದೆ. 'ಸೋಽಸ್ಯಾದಿರಿತಿ ಪ್ರಗಾಥೇಷು' ಎಂಬ ವ್ಯಾಕರಣಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಪ್ರಗ್ರಥ್ಯತೇ ಇತಿ ಪ್ರಗಾಥಃ' ಎಂದು ನಿರ್ವಚನ ಮಾಡಲಾಗಿದೆ. ಯಾವುದನ್ನು ಚೆನ್ನಾಗಿ ಗ್ರಥನ ಮಾಡಿದ್ದಾರೋ, ಅದನ್ನು ಪ್ರಗಾಥ ಎಂದು ಕರೆಯುತ್ತಾರೆ ಎಂದು ಇದರ ಅರ್ಥ. ಲೌಕಿಕವಾದ ವಸ್ತುಗಳನ್ನು ಜೋಡಿಸಿದಾಗ ಇಂತಹ ಪ್ರಗಾಥ ಶಬ್ದವನ್ನು ಪ್ರಯೋಗಿಸಬಾರದು. ಹೊರತಾಗಿ ವೇದಮಂತ್ರಗಳನ್ನು ಜೋಡಿಸುವ ಸಂದರ್ಭದಲ್ಲಿ ಮಾತ್ರ ಈ ಶಬ್ದವನ್ನು ಪ್ರಯೋಗಿಸಬೇಕೆಂದು ನಿಪಾತ ಮಾಡಲಾಗಿದೆ. ವ್ಯಾಕರಣದಲ್ಲಿ ನಿಪಾತ ಮಾಡಲ್ಪಟ್ಟ ಈ ಪ್ರಗಾಥ ಎಂಬ ಶಬ್ದವನ್ನೇ ಕಲ್ಪಸೂತ್ರದಲ್ಲಿ ಕೂಡ 'ಕಾಕುಭಃ ಪ್ರಗಾಥಾ' ಎಂದು ಪ್ರಯೋಗಿಸಲಾಗಿದೆ. ಕಲ್ಪಸೂತ್ರದ ಈ ಪ್ರಗಾಥ ಎಂಬ ಸಂಜ್ಞೆಯನ್ನು ಮಾಡಿದ್ದರಿಂದಲೇ ಪ್ರಕೃತ ಎರಡು ಛಂದಸ್ಸಿನ ಮಂತ್ರಗಳನ್ನು ಜೋಡಿಸಿ 'ಕಕುಪ್' ಛಂದಸ್ಸನ್ನು ಮಾಡಬೇಕೇ ಹೊರತು, ಎಲ್ಲಿಂದಲೋ ಮಂತ್ರಗಳನ್ನು ತಂದು ಜೋಡಿಸಬಾರದು.

ಬ್ರಾಹ್ಮಣವಾಕ್ಯದಲ್ಲಿಯೂ 'ಪದಾದ್ಯತ್ತದಂ ಪುನರಾರಭತೇ' ಎಂಬ ಲಿಂಗವಾಕ್ಯದ ದರ್ಶನವೂ ಕೂಡ ಸಿದ್ಧಾಂತಕ್ಕೆ ಆಧಾರವಾಗಿದೆ. ಬೃಹತೀಛಂದಸ್ಸಿನಲ್ಲಿ ಒಂದು ಸಾಮಮಂತ್ರವನ್ನು ಗಾನಮಾಡಿ ಮುಗಿಸಿದ ಅನಂತರ ಪುನಃ ಅದೇ ಬೃಹತೀಛಂದಸ್ಸಿನ ಮಂತ್ರದ ಕೊನೆಯ ಪಾದವನ್ನು ತೆಗೆದುಕೊಂಡು ಮತ್ತೊಂದು ಛಂದಸ್ಸನ್ನು ಸಂಪಾದನೆ ಮಾಡಬೇಕು ಎಂಬುದು 'ಪದಾದ್ಯತ್ತದಂ ಪುನರಾರಭತೇ' ಎಂಬ ಬ್ರಾಹ್ಮಣವಾಕ್ಯದ ಅಭಿಪ್ರಾಯವಾಗಿದೆ. ಆದ್ದರಿಂದ ಪ್ರದೇಶಾಂತರದಿಂದ ಆನಯನವು ಅಸಾಧುವಾಗುತ್ತದೆ.

ಒಟ್ಟು ಅಭಿಪ್ರಾಯ ಹೀಗಿದೆ - 'ಅಭಿತ್ವಾಶೂರ' ಎಂಬ ಬೃಹತೀಛಂದಸ್ಸಿನ ಮಂತ್ರವು ಬೃಹತ್‌ಸಾಮವನ್ನು ಪಠಿಸಲು ಮೊದಲಿನ ಆಧಾರವಾಗಿದೆ. ಅದೇ ಅಭಿತ್ವಾಶೂರ ಎಂಬ ಮಂತ್ರದಲ್ಲಿಯೇ ಏನೂ ವ್ಯತ್ಯಾಸ ಮಾಡದೇ ರಥಂತರ ಸಾಮವನ್ನೂ ಕೂಡ ಪಠಿಸಬೇಕು. ಅನಂತರ ಅಭಿತ್ವಾಶೂರ ಎಂಬ ಬೃಹತೀಛಂದಸ್ಸಿನ ಮಂತ್ರದ ನಾಲ್ಕನೆಯ ಪಾದವನ್ನು ಪುನಃ ತೆಗೆದುಕೊಂಡು ಪಂಕ್ತಿಛಂದಸ್ಸಿನ ಪೂರ್ವಾರ್ಧವನ್ನು ಸೇರಿಸಬೇಕು. ಪಂಕ್ತಿಛಂದಸ್ಸಿನ ಪೂರ್ವಾರ್ಧವು ಇಪ್ಪತ್ತು ಅಕ್ಷರಗಳಿಂದ ಕೂಡಿರುತ್ತದೆ. ಬೃಹತೀಛಂದಸ್ಸಿನ ಕೊನೆಯ ಪಾದವು ಎಂಟು ಅಕ್ಷರಗಳಿಂದ ಕೂಡಿರುತ್ತದೆ. ಒಟ್ಟು ಇಪ್ಪತ್ತೆಂಟು ಅಕ್ಷರದ ಮೂರುಪಾದವುಳ್ಳ ಎರಡನೆಯ

ರಾಣಕ ವ್ಯಾಖ್ಯಾನದಲ್ಲಿಯೂ ಕೂಡ ಹೀಗೆ ಹೇಳಲಾಗಿದೆ -

ಸಿದ್ಧತ್ವದ್ಯೋತನಾತ್ ವಕ್ತ್ರಭಿಮುಖಾಸಂಭವಾದ್ವಿಧೌ।
ಆತ್ಮನಿ ಪ್ರೇರಣಾಯೋಗಾನ್ನಿಮಿತ್ತತ್ವಾಭಿಧಾನತಃ॥

ವಿಧಿಶಕ್ತಿವಿಹಂತೃ ಸ್ಯಾದ್ಯಚ್ಛಬ್ದಾದಿಚತುಷ್ಟಯಮ್।
ಪ್ರಾಪ್ತ್ಯಯೋಗೇ ತು ತದ್ಭಾವಾತ್ಕ್ವಚಿತ್ಸ್ಯಾದವಿಹಂತೃತಾ॥

ಯತ್ತಚ್ಛಬ್ದಗಳು ಪ್ರಸಿದ್ಧದ್ಯೋತಕಗಳಾಗಿರುವುದರಿಂದ ವಿಧಿಶಕ್ತಿಗೆ ಪ್ರತಿಬಂಧಕವಾಗಿವೆ. ಉತ್ತಮಪುರುಷ ಪ್ರಯೋಗ ಮಾಡಬೇಕಾದರೆ, ವಕ್ತೃವಿಗೆ ಅಭಿಮುಖವಾದ ಶ್ರೋತೃವನ್ನು ಆಮಂತ್ರಣವು ವಿಷಯೀಕರಿಸುವುದರಿಂದ ವೇದದಲ್ಲಿ ವಕ್ತೃವೇ ಇಲ್ಲದ ಕಾರಣ, ಆಮಂತ್ರಣವೂ ಕೂಡ ವಿಧಿಶಕ್ತಿಗೆ ಪ್ರತಿಬಂಧಕವಾಗಿದೆ. ತನಗೆ ತಾನೇ ಪ್ರೇರಣೆ ಮಾಡಿಕೊಳ್ಳಲು ಸಾಧ್ಯವಿಲ್ಲವಾದ್ದರಿಂದ ಉತ್ತಮಪುರುಷ ಪ್ರಯೋಗವೂ ಕೂಡ ವಿಧಿಶಕ್ತಿಪ್ರತಿಬಂಧಕವಾಗಿದೆ. ಯದಿ ಮೊದಲಾದ ಶಬ್ದಗಳು ನಿಮಿತ್ತತ್ವವನ್ನು ಹೇಳುವ ಕಾರಣ ವಿಧಿಶಕ್ತಿಗೆ ಪ್ರತಿಬಂಧಕವಾಗಿವೆ. ಆದ್ದರಿಂದ ಈ ನಾಲ್ಕುಬಗೆಯ ಶಬ್ದಗಳು ಮಾತ್ರ ವಿಧಿಶಕ್ತಿಗೆ ಪ್ರತಿಬಂಧಕವೆಂದು ತಿಳಿಯಬೇಕು. ಕೆಲವೊಮ್ಮೆ ಇಂತಹ ಯಚ್ಛಬ್ದಾದಿಗಳು ಇದ್ದರೂ ಕೂಡ ಬೇರೆ ಪ್ರಮಾಣದಿಂದ ಆ ವಿಷಯವು ಪ್ರಾಪ್ತವಾಗದಿದ್ದರೆ ವಿಧಿಶಕ್ತಿಗೆ ಪ್ರತಿಬಂಧಕವಾಗುವುದಿಲ್ಲ. ಅಂತಹ ಸಂದರ್ಭಗಳಲ್ಲಿ ವಿಧಾಯಕವಾಗುತ್ತದೆಂದೇ ತಿಳಿಯಬೇಕು ಎಂದು.

**प्रकाशः – याज्यात्वेनेति ।।** ''न ता नशन्ति नदभाति तस्करो नैना अमित्रो व्याधिरादधर्षति । देवांश्च याभिर्यजते ददाति च ज्योगित्ताभिस्सचते गोपतिस्सह'' इत्यत्र याभिर्यजते याश्च ददाति ताश्चगावो ननश्यन्ति न तस्करो हरति नचामित्रकृतो व्याधिरुपद्रवः पीडयति गोस्वामीच ताभिस्सह ज्योक् चिरकालं संसक्तो भवतीति गोस्तुत्यर्थताप्रतीत्यालिङ्गेन तत्र विनियुक्तस्येत्यर्थः ।

'ಯಾಜ್ಯಾತ್ವೇನ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ''ನ ತಾ ನಶಂತಿ ನದಭಾತಿ ತಸ್ಕರೋ ನೈನಾ ಅಮಿತ್ರೋ ವ್ಯಾಧಿರಾದಧರ್ಷತಿ । ದೇವಾಂಶ್ಚ ಯಾಭಿರ್ಯಜತೇ ದದಾತಿ ಚ ಜ್ಯೋಗಿತ್ತಾಭಿಸ್ಸಚತೇ ಗೋಪತಿಸ್ಸಹ'' ''ಯಾವಾತನು ದೇವತೆಗಳನ್ನು ಉದ್ದೇಶಿಸಿ ಯಾವ ಗೋವುಗಳಿಂದ ಯಾಗವನ್ನು ಮಾಡುತ್ತಾನೋ, ಮತ್ತು ದೇವತೆಗಳನ್ನು ಉದ್ದೇಶಿಸಿ ಗೋದಾನವನ್ನು ಮಾಡುತ್ತಾನೋ, ಅಂತಹ ಗೋವುಗಳು ಎಂದೂ ಕೂಡ ನಾಶವಾಗುವುದಿಲ್ಲ. ಮತ್ತು ಯಾವ ಕಳ್ಳರೂ ಕೂಡ ಅಪಹಾರ ಮಾಡುವುದಿಲ್ಲ. ಶತ್ರುಗಳಿಂದ ಮಾಡಲ್ಪಟ್ಟ ವ್ಯಾಧಿಯು ಪೀಡಿಸುವುದಿಲ್ಲ. ಅಂತಹ ಗೋವುಗಳ ಜೊತೆಗೆ ಯಜಮಾನನು ಚಿರಕಾಲದ ತನಕ ಸುಖವಾಗಿ ಇರುತ್ತಾನೆ''. ಈ ವಾಕ್ಯದಲ್ಲಿ ಗೋಸ್ತೋತ್ರವನ್ನು ಮಾಡುವಿಕೆಯೆಂಬ ಅರ್ಥಪ್ರಕಾಶನಲಿಂಗದಿಂದಲೇ ಗೋದೇವತೆಯಾಗಗಳಲ್ಲಿ ಈ ಮಂತ್ರಗಳನ್ನು ವಿನಿಯೋಗ ಮಾಡಬೇಕೆಂದು ತಿಳಿಯುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः** – ननु कर्मानुवादेन तत्स्मारकतया मन्त्रस्य वचनेन विनियोगात्कर्म-विधायकत्वानुपपत्तिरित्यत उक्तं – **यस्मिन्निति** ।। तथात्वे ह्येकस्य विधेयत्वमनुवाद्यत्वं च विरुद्धमित्यर्थः ।

ಈ ವಾಕ್ಯವು ಕರ್ಮವನ್ನು ಅನುವಾದ ಮಾಡಿ ಅದಕ್ಕೆ ಸ್ಮಾರಕವಾಗಿ ವಿನಿಯುಕ್ತವಾಗುತ್ತಿದೆ. ಏಕೆಂದರೆ ಯಾಭಿಃ ಎಂಬುದಾಗಿ ಯಚ್ಛಬ್ದವಿರುವುದರಿಂದ ಅನುವಾದಕವೆಂದು ತಿಳಿಯುತ್ತದೆ. ಹೀಗಿರುವಾಗ ಹೇಗೆ ವಿಧಾಯಕವಾಗುತ್ತದೆ? ಅನುವಾದಕತ್ವವಿದ್ದಲ್ಲಿ ವಿಧಾಯಕತ್ವವು ಬರಲು ಸಾಧ್ಯವಿಲ್ಲವಲ್ಲವೇ? ಎಂಬ ಪ್ರಶ್ನೆಗೆ 'ಯಸ್ಮಿನ್' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಯಾವ ಕರ್ಮದಲ್ಲಿ ಯಾವುದು ವಿನಿಯುಕ್ತವಾಗಿದೆಯೋ, ಅದು ವಿಧಾಯಕವಲ್ಲ. ಕೇವಲ ದಾನಕ್ಕೆ ವಿಧಾಯಕವಾಗಿದೆ ಎಂದು ತಿಳಿಯಬೇಕು. ಒಂದುವೇಳೆ ಅದೇ ಕರ್ಮದಲ್ಲಿ ವಿಧಾಯಕವೆಂದು ಹೇಳಿದ್ದರೆ ಒಂದಕ್ಕೇ ವಿಧೇಯತ್ವ ಹಾಗೂ ಅನುವಾದ್ಯತ್ವಗಳು ವಿರುದ್ಧವಾಗುತ್ತಿದ್ದವು.

**प्रकाशः** – यच्छब्देन विधिशक्तिलोपस्तु ब्राह्मणविषय इत्याह – **यच्छब्देनेति**।।

ಈಗಾಗಲೇ ಹೇಳಿದಂತೆ ಯಚ್ಛಬ್ದವಿದ್ದರೆ ವಿಧಿಶಕ್ತಿಯು ಕುಂಠಿತವಾಗುತ್ತದೆ. ಹೀಗಿರುವಾಗ 'ಯಾಭಿರ್ಯಜತೇ ದದಾತಿ' ಎಂಬಲ್ಲಿಯೂ ಯಚ್ಛಬ್ದವಿರುವಾಗ ದಾನಕ್ಕೆ ವಿಧಾಯಕವಾಗುವುದು ಕೂಡ ಹೇಗೆ? ಎಂದು ಪ್ರಶ್ನಿಸಬಾರದು. ಯಚ್ಛಬ್ದವಿದ್ದಲ್ಲಿ ವಿಧಿಶಕ್ತಿಯು ಲೋಪವಾಗುತ್ತದೆಂಬುದು ಕೇವಲ ಬ್ರಾಹ್ಮಣವಾಕ್ಯದಲ್ಲಿ ಮಾತ್ರ. ಮಂತ್ರವಾಕ್ಯಗಳಲ್ಲಿ ಯಚ್ಛಬ್ದವಿದ್ದರೂ ವಿಧಿಶಕ್ತಿಯು ಲೋಪವಾಗುವುದಿಲ್ಲ ಎಂದು 'ಯಚ್ಛಬ್ದೇನ' ಇತ್ಯಾದಿ ಗ್ರಂಥದಿಂದ ಸಮರ್ಥಿಸುತ್ತಿದ್ದಾರೆ.

**प्रकाशः** – एतच्च ''तत्र तु एतावान्मन्त्रब्राह्मणयोर्विशेषो दृश्यते'' इत्यादिवार्तिकादवसेयम् ।

ಇದನ್ನು ಸ್ಪಷ್ಟವಾಗಿ ಇಲ್ಲಿ ತಿಳಿಯಬೇಕು - ವಿಧಿಶಕ್ತಿಗೆ ಪ್ರತಿಬಂಧಕವಾದ ಶಬ್ದಗಳು ಬ್ರಾಹ್ಮಣವಾಕ್ಯದಲ್ಲಿಯೂ ಇರುತ್ತವೆ. ಮಂತ್ರವಾಕ್ಯದಲ್ಲಿಯೂ ಕೂಡ ಇರುತ್ತವೆ. ಬ್ರಾಹ್ಮಣವಾಕ್ಯದಲ್ಲಿ ಯಚ್ಛಬ್ದ, ಯದಿಶಬ್ದ ಇವುಗಳಿಂದ ವಿಧಿಶಕ್ತಿಯು ಕುಂಠಿತವಾಗುತ್ತದೆ. ಆದರೆ ಮಂತ್ರದಲ್ಲಿ ಉತ್ತಮಪುರುಷಪ್ರಯೋಗ, ಆಮಂತ್ರಣ ಇವುಗಳಿಂದ ವಿಧಿಶಕ್ತಿಯು ಕುಂಠಿತವಾಗುತ್ತದೆ. 'ತತ್ರ ತು ಏತಾವಾನ್ಮಂತ್ರಬ್ರಾಹ್ಮಣಯೋರ್ವಿಶೇಷೋ ದೃಶ್ಯತೇ' ಎಂಬ ವಾರ್ತಿಕದ ಮಾತಿನಿಂದ ಈ ವಿಷಯವು ಸ್ಪಷ್ಟವಾಗುತ್ತದೆ.




ಶ್ರುತಿಗಳು ವಿಷ್ಣುಪರವಾದಾಗ ಕರ್ಮಪ್ರತಿಪಾದಕಗಳಾಗುವುದಿಲ್ಲವೆಂಬ ವಿಷಯದಲ್ಲಿ ಪೂರ್ವಮೀಮಾಂಸೆಯ ಎರಡನೇ ಅಧ್ಯಾಯದ ಉದಾಹರಣೆಯನ್ನು ನೀಡಿದ್ದಾರೆ. ಆದರೆ ಶಾಬರ ಭಾಷ್ಯದಲ್ಲಿ ಬ್ರಾಹ್ಮಣವಾಕ್ಯವು ಕರ್ಮವಿಧಾಯಕವಾದರೂ, ಮತ್ತೊಂದು ಅರ್ಥದಲ್ಲಿ ವಿನಿಯುಕ್ತವಾಗಲು ಯಾವುದೇ ಬಾಧಕವಿಲ್ಲವೆಂದು ಸಮರ್ಥಿಸಿದ್ದಾರೆ. ವಿಧಿಶಕ್ತಿಗೆ ಪ್ರತಿಬಂಧಕವಾದ ಯಚ್ಛಬ್ದ ಹಾಗೂ ಯದಿ ಶಬ್ದಗಳು ಬ್ರಾಹ್ಮಣವಾಕ್ಯದಲ್ಲಿವೆ. ಉತ್ತಮಪುರುಷ ಪ್ರಯೋಗ, ಆಮಂತ್ರಣ ಈ ಬಾಧಕಗಳು ಮಂತ್ರವಾಕ್ಯದಲ್ಲಿದೆ. ಈ ಕಾರಣದಿಂದ ವಿಧಾಯಕಗಳಾಗುವುದಿಲ್ಲ ಎಂಬುದಾಗಿ ಶಾಬರ ಭಾಷ್ಯದಲ್ಲಿ ಸಮರ್ಥಿಸಿದ್ದಾರೆ.



## ವೇದದಲ್ಲಿರುವ ಪ್ರತಿಯೊಂದು ಪದಗಳು ಹರಿನಾಮಗಳೆಂದು ನಿರ್ಣಯವಾಯಿತು

### तात्पर्यचन्द्रिका

**एवं च प्रकृतेऽपि तत्र तत्र विनियुक्तानां सर्वमन्त्राणां वाचस्तोमे विनियोगवत् ''यद्वैकिंचैतदध्यगीष्टा नामैवैतत्'' इति कृत्स्नवेदस्य ब्रह्मणि विनियोगेन ब्रह्मपरत्वं स्वतः कर्मादिरूपार्थन्तरपरत्वं चास्तु ।**

ಅನುವಾದ - ಹಿಂದಿನ ಪೂರ್ವಮೀಮಾಂಸಾ ದೃಷ್ಟಾಂತಗಳಿಂದ ಪ್ರಕೃತದಲ್ಲಿ ಹೀಗೆ ಹೇಳಿದಂತಾಯಿತು. ಪೂರ್ವಮೀಮಾಂಸೆಯಲ್ಲಿ ಅಲ್ಲಲ್ಲಿ ಪ್ರಯೋಗ ಮಾಡಲ್ಪಟ್ಟ ಎಲ್ಲಾ ಮಂತ್ರಗಳನ್ನು 'ವಾಚಸ್ತೋಮ' ಎಂಬ ಯಾಗವಿಶೇಷದಲ್ಲಿ ವಿನಿಯೋಗಮಾಡಬೇಕೆಂಬ ನಿಯಮವಿದೆ. ಅದರಂತೆ ಅಲ್ಲಲ್ಲಿ ಪ್ರಯೋಗಮಾಡಲ್ಪಟ್ಟ ಎಲ್ಲ ವೇದವಾಕ್ಯಗಳನ್ನು 'ಯದ್ವೈಕಿಂಚೈತದಧ್ಯಗೀಷ್ಟಾ ನಾಮೈವೈತತ್' ಎಂಬ ವಚನದಂತೆ ಬ್ರಹ್ಮನಲ್ಲಿ ವಿನಿಯೋಗ ಮಾಡಬೇಕು. ಆದ್ದರಿಂದ ಸಮಗ್ರವೇದಕ್ಕೆ ಬ್ರಹ್ಮಪರತ್ವವು ಸ್ವಾಭಾವಿಕವಾಗಿರುತ್ತದೆ. ಅಂತಹ ವೇದದಲ್ಲಿರುವ ವಾಕ್ಯಗಳನ್ನೇ ಕರ್ಮಾದಿಪರವಾಗಿಯೂ ಅರ್ಥೈಸಬೇಕು.

**अस्तिच प्रकृतेऽर्थान्तरेऽपि विनियोगः ''अवान्तरं तत्परत्वम्'' इत्यादि-श्रुतेः । अत एव वर्णस्वरादिसमन्वयादेव वर्णक्रमस्वराद्यध्ययनम् ।**

ಬ್ರಹ್ಮನನ್ನು ಪ್ರತಿಪಾದನೆ ಮಾಡುವ ಮಂತ್ರಗಳಿಗೆ ಅರ್ಥಾಂತರದಲ್ಲಿಯೂ ವಿನಿಯೋಗವಿರುತ್ತದೆ. ಏಕೆಂದರೆ 'ಅವಾಂತರಂ ತತ್ಪರತ್ವಮ್' ಎಂಬ ಶ್ರುತಿಯು ಪ್ರಮಾಣವಾಗಿರುವುದರಿಂದ. ಆದ್ದರಿಂದಲೇ ವೇದವನ್ನು ಅಧ್ಯಯನ ಮಾಡುವಾಗ ವರ್ಣಗಳ ಅಧ್ಯಯನ, ಕ್ರಮಗಳ ಅಧ್ಯಯನ, ಸ್ವರಗಳ

ಅಧ್ಯಯನವು ವಿಹಿತವಾಗಿರುತ್ತದೆ. ಅಂದರೆ ಸಂಹಿತಾಧ್ಯಯನವನ್ನು ಮಾಡುವಾಗ ವರ್ಣ, ಕ್ರಮ, ಈ ಬಗೆಯಲ್ಲಿ ಎಲ್ಲರೂ ಅಧ್ಯಯನವನ್ನು ಮಾಡುತ್ತಾರೆ. ಸಮಗ್ರವಾಕ್ಯಕ್ಕೆ ಕರ್ಮಾದಿಪರತ್ವವನ್ನು ಹೇಳಬಹುದು. ಆದರೆ ಒಂದೊಂದೇ ವರ್ಣಗಳಿಗಾಗಲೀ, ಸ್ವರಗಳಿಗಾಗಲೀ ಲೌಕಿಕಾರ್ಥವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಇವುಗಳಿಗೆಲ್ಲಾ ಭಗವತ್ಪರವಾಗಿಯೇ ವ್ಯಾಖ್ಯಾನವನ್ನು ಮಾಡಬೇಕು.

**अन्यथा तदंशेऽध्ययनविधेरदृष्टार्थत्वं स्यात् ।**

ವರ್ಣಕ್ರಮಾದಿಗಳಿಗೆ ಭಗವತ್ಪರತ್ವವನ್ನು ಒಪ್ಪದಿದ್ದರೆ ಸಂಹಿತಾಧ್ಯಯನದ ವರ್ಣಕ್ರಮಾದಿಗಳ ಭಾಗದಲ್ಲಿ ಅಧ್ಯಯನವಿಧಿಗೆ ಅದೃಷ್ಟತ್ವವನ್ನು ಹೇಳಿದಂತಾಗುತ್ತದೆ. 'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನವಿಧಿಯು ದೃಷ್ಟವಾದ ಅರ್ಥಜ್ಞಾನಪರ್ಯವಸಾಯಿ ಆಗಿದೆ ಎಂಬುದಾಗಿ 'ಅಥಾತೋ ಧರ್ಮಜಿಜ್ಞಾಸಾ' ಎಂಬ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಸಮಗ್ರ ವಾಕ್ಯರೂಪವಾದ ವೇದಕ್ಕೆ ಅರ್ಥಜ್ಞಾನವೆಂಬ ದೃಷ್ಟಫಲವನ್ನು ಒಪ್ಪಿ, ವರ್ಣ, ಕ್ರಮ, ಸ್ವರ ಮೊದಲಾದ ಅಂಶಗಳಿಗೆ ಅದೃಷ್ಟಾರ್ಥತ್ವವನ್ನು ಹೇಳಿದರೆ ಅಧ್ಯಯನವಿಧಿಗೆ ಒಂದಂಶದಲ್ಲಿ ದೃಷ್ಟಫಲವನ್ನು ಮತ್ತೊಂದು ಅಂಶದಲ್ಲಿ ಅದೃಷ್ಟಫಲವನ್ನು ಕಲ್ಪನೆ ಮಾಡಿದಂತಾಗುತ್ತದೆ. ಆದಕ್ಕಾಗಿ ಎಲ್ಲ ವರ್ಣ, ಕ್ರಮ ಮೊದಲಾದವುಗಳಿಗೂ ಭಗವತ್ಪರತ್ವವನ್ನು ಹೇಳಬೇಕು. ಆವಾಗ ಸಮಗ್ರವೇದದ ಅಧ್ಯಯನಕ್ಕೆ ದೃಷ್ಟಫಲ ಪ್ರಯೋಜನವನ್ನು ಹೇಳಿದಂತಾಗುತ್ತದೆ.

**अत एव च –**

**वेदाक्षराणि यावन्ति पठितानि द्विजातिभिः ।**
**तावन्ति हरिनामानि कीर्तितानि न संशयः ।।**

**इत्यध्यापकप्रसिद्धिः ।**

ಆದ್ದರಿಂದಲೇ -

ವೇದಾಕ್ಷರಾನಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥

ವೇದದಲ್ಲಿ ಎಷ್ಟು ಅಕ್ಷರಗಳಿವೆಯೋ, ಅವೆಲ್ಲವನ್ನು ದ್ವಿಜರು ಅಧ್ಯಯನ ಮಾಡಬೇಕು. ಆ ಎಲ್ಲಾ ಅಕ್ಷರಗಳೂ ಕೂಡ ಶ್ರೀಹರಿಯ ನಾಮಸ್ವರೂಪವಾಗಿವೆ ಯಾವುದೇ ಸಂಶಯವಿಲ್ಲ ಎಂಬುದಾಗಿ ಅಧ್ಯಾಪಕಪ್ರಸಿದ್ಧಿಯಿರುತ್ತದೆ.

**यदिचोक्तप्रमाणप्रसिद्धोऽपि वाक्यान्तरेष्वदृष्टत्वाद्वेदे पदादिसमन्वयो नस्यात् तर्हि वाक्यान्तरेष्वदृष्टत्वात्पदक्रमाद्यध्ययनमपि वेदे न स्यात् ।**

ಪರಮಾತ್ಮನಲ್ಲಿ ಪದ, ಕ್ರಮ ಮೊದಲಾದವುಗಳ ಸಮನ್ವಯವನ್ನು ಮಾಡಬೇಕೆನ್ನಲು ಅನೇಕ ಪ್ರಮಾಣಗಳ ಪ್ರಸಿದ್ಧಿಯಿದೆ. ಆದರೂ ಸಹ ಬೇರೆ ಪೌರುಷೇಯಗ್ರಂಥಗಳಲ್ಲಿ ಪದ, ಕ್ರಮ, ಸ್ವರ, ಅಕ್ಷರ ಮೊದಲಾದವುಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತಿರುವುದು ಕಾಣಿಸುತ್ತಿಲ್ಲ-ವಾದ್ದರಿಂದ, ವೇದದಲ್ಲಿಯೂ ಕೂಡ ಪದಾದಿಗಳ ಸಮನ್ವಯವನ್ನು ಮಾಡಬಾರದು ಎಂದು ಹೇಳುವುದಾದರೆ ಅದೇ ಲೌಕಿಕವಾದ ಗ್ರಂಥಗಳಲ್ಲಿ ಪದಕ್ರಮಾದಿಗಳ ಅಧ್ಯಯನವೂ ಕೂಡ ಇರುವುದಿಲ್ಲ. ಆದ್ದರಿಂದ ವೇದದಲ್ಲಿಯೂ ಕೂಡ ಅಂತಹ ಪದ, ಕ್ರಮ, ಜಟ ಮೊದಲಾದವುಗಳ ಅಧ್ಯಯನವನ್ನು ನೀವು ಅಲ್ಲಗಳೆಯಬೇಕಾದೀತು.

**नच ज्योतिष आयजेत इति पदच्छेदे ज्योतिषा यजेत इत्यादिपदाध्ययन-विरोधः ।**

ವೇದದಲ್ಲಿರುವ ಪ್ರತಿಯೊಂದು ಪದಗಳನ್ನು ನೀವು ಸಮನ್ವಯ ಮಾಡುವಾಗ ವಿಚಿತ್ರವಾಗಿ ಪದಚ್ಛೇದಗಳನ್ನು ಮಾಡುತ್ತೀರಿ. 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಲ್ಲಿರುವ ಪದಗಳನ್ನು ಸಮನ್ವಯ ಮಾಡುವಾಗ 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿ ಪದಚ್ಛೇದವನ್ನು ಮಾಡಿ ಜ್ಯೋತಿರಾದಿಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುತ್ತೀರಿ. ಆವಾಗ 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿಯೇ ಪದಪಾಠವಿರುತ್ತದೆ. ಅದರ ವಿರೋಧ ನಿಮಗೆ ಬರುತ್ತದಲ್ಲವೇ?

**''कश्छन्दसां योगमावेद'' इतिश्रुत्या योगवृत्त्या पदसमन्वयस्या-सर्वाधिकारित्वोक्तेः प्रायेण सर्वेषां वाक्यसमन्वय एवाधिकारेण तदुपयुक्तपदानामेवा-ध्ययनात् ।**

ಹೀಗೆ ಪ್ರಶ್ನಿಸಬಾರದು. 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಶ್ರುತಿ ಹೇಳುವಂತೆ ಯೋಗವೃತ್ತಿಯನ್ನು ಆಶ್ರಯಿಸಿ, ಪದಸಮನ್ವಯವನ್ನು ಶ್ರೀಹರಿಯಲ್ಲಿ ತಿಳಿಯಲು ಎಲ್ಲರಿಗೂ ಅಧಿಕಾರವಿರುವುದಿಲ್ಲ. ಕೇವಲ ಬ್ರಹ್ಮದೇವರಿಗಷ್ಟೇ ಅಧಿಕಾರವಿರುತ್ತದೆ. ಆದರೆ ವಾಕ್ಯಸಮನ್ವಯದಲ್ಲಿ ಪ್ರಾಯಶಃ ಎಲ್ಲರಿಗೂ ಅಧಿಕಾರವಿರುತ್ತದೆ. ವಾಕ್ಯಸಮನ್ವಯಕ್ಕೆ ಉಪಯುಕ್ತವಾದ ಪದಪಾಠವನ್ನಷ್ಟೇ ಸಂಪ್ರದಾಯದಲ್ಲಿ 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿ ತೋರಿಸಿರುತ್ತಾರೆ. ಆದರೆ ಪ್ರತಿಯೊಂದು ಪದಗಳ ಸಮನ್ವಯವನ್ನು ತಿಳಿಯುವಾಗ, ವಾಕ್ಯಸಮನ್ವಯಕ್ಕೆ ಅನುಕೂಲವಾದ ದೃಷ್ಟಿಯಲ್ಲಿ ಪದಚ್ಛೇದ ಮಾಡಬೇಕಾಗಿಲ್ಲ. ಅಂತಹ ಸ್ಥಳದಲ್ಲಿ 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿಯೂ ಪದಚ್ಛೇದವನ್ನು ಮಾಡಬಹುದು.

**''जातमोतम्'' इत्यनुव्याख्यानोक्तं निर्वचनञ्च गुणप्रकाशकत्वात् गुणज्ञापने**

**प्रवृत्तया "तं यच्छतम्" इत्यादिश्रुत्योपलक्षणपरया विवक्षितमिति न दोषप्रकाशक-निर्वचनान्तरोत्प्रेक्षा युक्ता ।**

ಅನುವ್ಯಾಖ್ಯಾನದಲ್ಲಿ 'ಜಾತಮೋತಮ್ ಹರೌ ಯಸ್ಮಾತ್ ಜ್ಯೋತಿಷಃ ಪ್ರಾಣರೂಪತಃ' ಎಂಬುದಾಗಿ 'ಜ್ಯೋತಿ' ಎಂಬ ಶಬ್ದದ ಸಮನ್ವಯವನ್ನು ಪರಮಾತ್ಮನಲ್ಲಿ ನಿರ್ವಚನ ಮಾಡಿದ್ದಾರೆ. ಇದರಿಂದ ಸಮಸ್ತ ಜಗತ್ತಿಗೆ ಶ್ರೀಹರಿಯೇ ಆಧಾರನಾಗಿದ್ದಾನೆಂಬ ಗುಣವನ್ನು ತಿಳಿಸಿದಂತಾಗುತ್ತದೆ. ಹೀಗೆ ಪದಗಳ ಸಮನ್ವಯದಿಂದ ಪರಮಾತ್ಮನಲ್ಲಿ ಗುಣಗಳನ್ನೇ ತಿಳಿಯಬೇಕೆನ್ನಲು 'ತಂ ಯಚ್ಛತಮ್' ಇತ್ಯಾದಿ ಶ್ರುತಿಗಳೇ ಆಧಾರವಾಗಿವೆ. ಆದ್ದರಿಂದ ನಿರ್ವಚನದಿಂದ ದೋಷಗಳನ್ನು ಪರಮಾತ್ಮನಲ್ಲಿ ಉತ್ಪ್ರೇಕ್ಷಿಸಬಾರದು. ಪದಗಳನ್ನು ವಿಭಾಗ ಮಾಡಿ ಸಮನ್ವಯ ಮಾಡುವಾಗ ಗುಣಗಳನ್ನು ತಿಳಿದಂತೆ ದೋಷವನ್ನೂ ಕೂಡ ತಿಳಿಯಬಹುದಲ್ಲವೇ? ಎಂದು ಪ್ರಶ್ನಿಸಬಾರದು.

**तस्मात् –**

**आम्नायस्य प्रमाणस्य प्रमेयस्येश्वरस्य च ।**
**अलौकिकत्वादुचितः सम्बन्धोऽलौकिकस्तयोः ॥ १ ॥**

ಆದ್ದರಿಂದ,

ಆಮ್ನಾಯಸ್ಯ ಪ್ರಮಾಣಸ್ಯ ಪ್ರಮೇಯಸ್ಯೇಶ್ವರಸ್ಯ ಚ ।
ಅಲೌಕಿಕತ್ವಾದುಚಿತಃ ಸಂಬಂಧೋऽಲೌಕಿಕಸ್ತಯೋಃ ॥೧॥

ಪ್ರಮಾಣರೂಪವಾದ ವೇದವು ಅಲೌಕಿಕವಾಗಿದೆ. ಪ್ರಮೇಯನಾದ ಈಶ್ವರನೂ ಕೂಡ ಅಲೌಕಿಕನೇ ಆಗಿದ್ದಾನೆ. ಅಲೌಕಿಕವಾದ ಇವೆರಡರ ಸಂಬಂಧವೂ ಕೂಡ ಅಲೌಕಿಕವೇ ಆಗಬೇಕು. ಆದ್ದರಿಂದ ಲೌಕಿಕವಾದ ಪದಚ್ಛೇದಗಳನ್ನು ಆಕ್ಷೇಪ ಮಾಡಬಾರದು.

**अत्र न्यायविवरणे शब्दानां ब्रह्मणि महायोगो महारूढियोगश्चेति वृत्तिद्वयम् ।**

ಈ ಸಂದರ್ಭದ ನ್ಯಾಯವಿವರಣದಲ್ಲಿ ಬ್ರಹ್ಮನಲ್ಲಿ ಶಬ್ದಗಳು ಮಹಾಯೋಗ ಹಾಗೂ ಮಹಾರೂಢಿಯೋಗ ಎಂಬೆರಡು ವೃತ್ತಿಗಳಿಂದ ಇರುತ್ತವೆಂದು ಸಮರ್ಥಿಸಲಾಗಿದೆ.

**लोकेतु रूढिः, योगः, योगरूढी, रूढोपचारो, रूढलक्षणा, उपचारो, लक्षणेति वृत्तिसप्तकमित्युक्तं ।**

ಆದರೆ ಲೋಕದಲ್ಲಿ ೧. ರೂಢಿ, ೨. ಯೋಗ, ೩. ಯೋಗರೂಢಿ, ೪. ರೂಢೋಪಚಾರ, ೫. ರೂಢಲಕ್ಷಣಾ, ೬. ಉಪಚಾರ, ೭. ಲಕ್ಷಣ ಎಂಬುದಾಗಿ ಏಳುಬಗೆಯ ವೃತ್ತಿಗಳಿರುತ್ತವೆ.

**तत्र चान्यत्रप्रसिद्धानामिन्द्रादिशब्दानां ब्रह्मणि महायोगः । प्रवृत्तिनिमित्ताधिक्यात् ।**

ಈ ಏಳು ಬಗೆಯ ವೃತ್ತಿಗಳಲ್ಲಿ ಅನ್ಯತ್ರಪ್ರಸಿದ್ಧವಾದ ಇಂದ್ರಾದಿಶಬ್ದಗಳು ಬ್ರಹ್ಮನಲ್ಲಿ ಮಹಾಯೋಗವೃತ್ತಿಯಿಂದ ಇರುತ್ತವೆ. ಏಕೆಂದರೆ ಇಂದ್ರಾದಿಶಬ್ದಗಳ ಪ್ರವೃತ್ತಿನಿಮಿತ್ತವು ಸ್ವತಂತ್ರವಾಗಿ ಮತ್ತು ನಿರವಧಿಕವಾಗಿ ಪರಮಾತ್ಮನಲ್ಲಷ್ಟೇ ಇರುತ್ತವೆ.

**तदेकनिष्ठानां नारायणादिशब्दानां तु महारूढियोगः । प्रयोगबाहुल्यान्निमित्ताधिक्याच्च ।**

ಇನ್ನು ಪರಮಾತ್ಮನಲ್ಲಷ್ಟೇ ಪ್ರಸಿದ್ಧವಾದ ನಾರಾಯಣಾದಿಶಬ್ದಗಳಿಗೆ ಮಹಾರೂಢಿಯೋಗವನ್ನು ತಿಳಿಯಬೇಕು. ಏಕೆಂದರೆ ಅವಿದ್ವದ್ರೂಢಿ, ವಿದ್ವದ್ರೂಢಿ ಹಾಗೂ ಪ್ರವೃತ್ತಿನಿಮಿತ್ತದ ಆಧಿಕ್ಯ ಎಲ್ಲವೂ ಪರಮಾತ್ಮನಲ್ಲೇ ಇರುವುದರಿಂದ.

**महारूढिस्तु न सम्भवति । "सा योगादेव लभ्यते" इत्यनुव्याख्याने ब्रह्मणि विद्वद्रूढेर्योगं विनाऽभावोक्तेः ।**

ಮಹಾರೂಢಿ ಎಂಬುದಾಗಿ ಪ್ರತ್ಯೇಕ ವೃತ್ತಿಯಿರುವುದಿಲ್ಲ. ಏಕೆಂದರೆ 'ಸಾ ಯೋಗಾದೇವ ಲಭ್ಯತೇ' ಯೋಗದಿಂದಲೇ ಅದು ಕೂಡುತ್ತದೆ ಎಂಬ ಅನುವ್ಯಾಖ್ಯಾನದಿಂದ ಬ್ರಹ್ಮನಲ್ಲಿ ಯೋಗವನ್ನು ಬಿಟ್ಟು ವಿದ್ವದ್ರೂಢಿಯು ಪ್ರತ್ಯೇಕವಾಗಿ ಇರುವುದಿಲ್ಲವೆಂದು ಹೇಳಿದ್ದಾರೆ.

**इन्द्रादिशब्दानामपि ब्रह्मणि विद्वद्रूढेः सत्त्वेऽपि नारायणादिशब्दानामिवाविद्वद्रूढेरसत्त्वात्ततो भेदः । इतरवृत्तिसप्तकस्वरूपं तु टीकाकारैरेवात्र सुधायाञ्च व्युत्पादितम् ।**

ಇಂದ್ರಾದಿಶಬ್ದಗಳಿಗೂ ಪರಮಾತ್ಮನಲ್ಲಿ ವಿದ್ವದ್ರೂಢಿಯಿರುತ್ತದೆ. ಹೀಗಿರುವಾಗ ಮಹಾರೂಢಿಯನ್ನು ಪ್ರತ್ಯೇಕವಾಗಿ ಒಪ್ಪಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಯಾವರೀತಿಯಾಗಿ ನಾರಾಯಣಾದಿಶಬ್ದಗಳಿಗೆ ಪರಮಾತ್ಮನಲ್ಲಿ ಅವಿದ್ವದ್ರೂಢಿ ಇರುತ್ತದೋ, ಅದರಂತೆ ಇಂದ್ರಾದಿಶಬ್ದಗಳಿಗೆ ಅವಿದ್ವದ್ರೂಢಿಯಿರುವುದಿಲ್ಲ. ಆದ್ದರಿಂದ ಇಂದ್ರಾದಿಶಬ್ದಗಳಿಗಿಂತ ನಾರಾಯಣಾದಿಶಬ್ದಗಳಲ್ಲಿ ವೈಲಕ್ಷಣ್ಯವಿದೆಯೆಂದು ತಿಳಿಯಬೇಕು. ಉಳಿದ ವೃತ್ತಿಗಳ ಬಗ್ಗೆ ಟೀಕಾಕೃತ್ಪಾದರು ನ್ಯಾಯಸುಧಾದಲ್ಲಿ ಅತ್ಯಂತ ಸ್ಪಷ್ಟವಾಗಿ ನಿರೂಪಣೆ ಮಾಡಿದ್ದಾರೆ.

**प्रकाशः –**

अस्त्वेवं प्रकृते किमित्यत आह – **एवञ्चेति** ।। विनियुक्तस्यापि विधायकत्वे सतीत्यर्थः ।।

ವಿವರಣೆ - ಇಲ್ಲಿಯ ತನಕ ಪೂರ್ವಮೀಮಾಂಸೆಯ ಅನೇಕ ದೃಷ್ಟಾಂತಗಳಿಂದ ಒಂದೇ ಮಂತ್ರಕ್ಕೆ ಅನೇಕ ಪ್ರಯೋಜನಗಳಿರುವುದು ಕಂಡಿದೆ. ಎಂದು ಸಮರ್ಥಿಸಲಾಯಿತು. ಇದರಿಂದ ಪ್ರಕೃತದಲ್ಲಿ ಏನು ಸಿದ್ಧವಾಯಿತು? ಎಂಬ ಪ್ರಶ್ನೆಗೆ 'ಏವಂಚ' ಇತ್ಯಾದಿ ಗ್ರಂಥವು ಹೊರಟಿದೆ. 'ಏವಂಚ' ಎಂದರೆ ಮಂತ್ರವು ವಿನಿಯುಕ್ತವಾಗಿದ್ದರೂ ವಿಧಾಯಕವೂ ಆಗುವುದರಿಂದ ಎಂದರ್ಥ.

**प्रकाशः – विनियोगवदिति** ।। ''पारिप्लवं शंसति'' इति परिप्लवशब्दितानां सर्वमन्त्राणां वचनेन विनियोगो यथा तथेत्यर्थः । उक्तं च राणके ''वाचस्तोमादौ सर्वमन्त्राणां वचनेन विनियोगोऽपि स्वार्थविधायित्वाविरोधात्'' इति ।

'ಪಾರಿಪ್ಲವಂ ಶಂಸತಿ' ಎಂಬುದಾಗಿ ಪಾರಿಪ್ಲವಶಬ್ದಪ್ರತಿಪಾದ್ಯವಾದ ಸಕಲಮಂತ್ರಗಳನ್ನು ವಾಚಸ್ತೋಮಯಾಗದಲ್ಲಿ ವಿನಿಯೋಗ ಮಾಡಬೇಕೆಂದು ಹೇಳಲಾಗಿದೆ. ಇದನ್ನೇ ರಾಣಕದಲ್ಲಿ 'ವಾಚಸ್ತೋಮಾದೌ ಸರ್ವಮಂತ್ರಾಣಾಂ ವಚನೇನ ವಿನಿಯೋಗೋऽಪಿ ಸ್ವಾರ್ಥವಿಧಾಯಿತ್ವಾವಿರೋಧಾತ್' ವೇದದಲ್ಲಿರುವ ಎಲ್ಲಾ ಮಂತ್ರಗಳನ್ನು ವಾಚಸ್ತೋಮದಲ್ಲಿ ವಿನಿಯೋಗ ಮಾಡಬೇಕು. ಆದರೂ ಕೂಡ ಬೇರೆ ಕರ್ಮಗಳಲ್ಲಿಯೂ ಆ ಮಂತ್ರಗಳು ವಿನಿಯುಕ್ತವಾಗುತ್ತವೆ ಎಂಬುದಾಗಿ ಹೇಳಲಾಗಿದೆ. ಅದರಂತೆ ಎಲ್ಲಾ ಮಂತ್ರಗಳೂ ಕೂಡ ಪರಮಾತ್ಮನ ನಾಮಸ್ವರೂಪವಾಗಿದ್ದರೂ ಬೇರೆ ಪದಾರ್ಥಗಳಲ್ಲಿಯೂ ಅವಾಂತರತಾತ್ಪರ್ಯವನ್ನು ಹೊಂದಿರುತ್ತವೆ. ನಾರದರು ಸನತ್ಕುಮಾರರ ಬಳಿ ವೇದ, ಪುರಾಣ ಮೊದಲಾದ ಸಮಗ್ರ ವಾಙ್ಮಯ ಪ್ರಪಂಚದ ಅಧ್ಯಯನವನ್ನು ನಾನು ಮಾಡಿದ್ದೇನೆ ಎಂದು ಹೇಳುತ್ತಾರೆ. ಆವಾಗ ಸನತ್ಕುಮಾರರು 'ಯದ್ವೈಕಿಂಚೈತದಧ್ಯಗೀಷ್ಠಾ ನಾಮೈವೈತತ್' ಎಂಬುದಾಗಿ ನೀವು ಏನೇನು ಅಧ್ಯಯನ ಮಾಡಿದ್ದೀರೋ ಅವೆಲ್ಲವೂ ಕೂಡ ಭಗವಂತನ ನಾಮಸ್ವರೂಪವಾಗಿವೆಯೆಂದು ಹೇಳಿದ್ದಾರೆ. ಆದ್ದರಿಂದ ಸಮಗ್ರವೇದವು ಬ್ರಹ್ಮನ ನಾಮಸ್ವರೂಪವಾಗಿವೆ. ಅದನ್ನೇ ಬೇರೆ ಪದಾರ್ಥಗಳಲ್ಲಿ ಅವಾಂತರತಾತ್ಪರ್ಯದಿಂದ ಪ್ರಯೋಗಿಸಬೇಕೆಂದು ತಿಳಿಯಬೇಕು.

**प्रकाशः** – ननु मन्त्राणामुभयत्र विनियोगबलादस्त्वेवमित्यत आह – **अस्तिचेति** ।। **अवान्तरमिति** ।। विष्णोरन्यत्रेत्यन्वयः ।

ಮಂತ್ರಗಳಿಗೆ ಎರಡು ಕಡೆ ವಿನಿಯೋಗ ಮಾಡಬೇಕೆಂಬ ಪ್ರಮಾಣವಿರುವುದರಿಂದ ಅದನ್ನು ಒಪ್ಪುವುದು ಅನಿವಾರ್ಯ. ಆದರೆ ಪ್ರಕೃತ ಎಲ್ಲಾ ಮಂತ್ರಗಳನ್ನು ಶ್ರೀಹರಿಯಲ್ಲಿ ಹಾಗೂ ಲೌಕಿಕಾರ್ಥಗಳಲ್ಲಿಯೂ ಪ್ರಯೋಗಿಸಬೇಕೆನ್ನಲು ಏನು ಆಧಾರವಿದೆ? ಎಂಬ ಪ್ರಶ್ನೆಗೆ 'ಅಸ್ತಿಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

ಅರ್ಥಾಂತರದಲ್ಲಿಯೂ ವೇದವಾಕ್ಯಗಳನ್ನು ಪ್ರಯೋಗಿಸಬೇಕೆನ್ನಲು 'ಅವಾಂತರಂ ತತ್ಪರಮ್' ಇತ್ಯಾದಿ ಶ್ರುತಿಯೇ ಆಧಾರವಾಗಿದೆ. 'ಅವಾಂತರಂ' ಎಂದರೆ ವಿಷ್ಣುವನ್ನು ಬಿಟ್ಟು ಬೇರೆ ಲೌಕಿಕ ಪದಾರ್ಥಗಳಲ್ಲಿ ಎಂದರ್ಥ.

**प्रकाशः – अस्त्वेवं पदानां भगवन्नामत्वं वर्णादेः कुत इत्यतो युक्त्यन्तरं चाह – अत एवेति ।।**

ವೇದದಲ್ಲಿರುವ ಎಲ್ಲಾ ಪದಗಳು ಭಗವಂತನ ನಾಮಸ್ವರೂಪವೇ ಆಗಲಿ. ಆದರೆ ವರ್ಣ, ಸ್ವರ ಇವುಗಳಿಗೆಲ್ಲಾ ಭಗವನ್ನಾಮತ್ವವನ್ನು ಏಕೆ ಹೇಳಬೇಕು? ಎಂಬ ಪ್ರಶ್ನೆಗೆ ಮತ್ತೊಂದು ಯುಕ್ತಿಯನ್ನು 'ಅತ ಏವ' ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ.

**प्रकाशः – अध्ययनविधेः "स्वाध्यायोऽध्येतव्यः इत्यादेः । अर्थज्ञानफलकत्वस्य "धर्मजिज्ञासा" इत्यत्रैवोक्तेरिति भावः ।**

'ಸ್ವಾಧ್ಯಾಯೋಽಧ್ಯೇತವ್ಯಃ' ಎಂಬ ಅಧ್ಯಯನ ವಿಧಿಯು ಅರ್ಥಜ್ಞಾನಫಲಕವೆಂದು ಧರ್ಮಜಿಜ್ಞಾಸಾಧಿಕರಣದಲ್ಲಿ ಸಮರ್ಥಿಸಲಾಗಿದೆ. ವರ್ಣಾದಿಗಳಿಗೂ ಅರ್ಥಜ್ಞಾನವನ್ನು ಹೇಳಬೇಕೆಂದರೆ ಭಗವತ್ಪರತ್ವವನ್ನು ಒಪ್ಪಲೇ ಬೇಕು.

**प्रकाशः – "जातमोतं हरौ यस्माज्ज्योतिषः प्राणरूपतः" इत्याद्यनुव्याख्यानोक्तयोगे बाधकमाशङ्कते – नचेति ।।**

'ಜಾತಮೋತಂ ಹರೌ ಯಸ್ಮಾತ್ ಜ್ಯೋತಿಷಃ ಪ್ರಾಣರೂಪತಃ' ಎಂಬ ಅನುವ್ಯಾಖ್ಯಾನದಲ್ಲಿ ಸಮಗ್ರ ಜಗತ್ತಿಗೆ ಶ್ರೀಹರಿಯೇ ಆಧಾರನಾಗಿದ್ದಾನೆಂದು ಜ್ಯೋತಿರಾದಿಶಬ್ದಗಳ ನಿರ್ವಚನವನ್ನು ತೋರಿಸಿದ್ದಾರೆ. ಇದರ ಮೇಲೆ ಬರುವ ಬಾಧಕವನ್ನು 'ನಚ' ಇತ್ಯಾದಿ ಗ್ರಂಥದಿಂದ ಆಶಂಕಿಸಿದ್ದಾರೆ.

**प्रकाशः – आचार्योक्तपदविभागस्यापि प्रामाणिकत्वेनेदानीमनुपयोगेनाशक्यत्वेन चानध्ययनेप्यधिकारिणामध्ययनमस्त्येवेति भावेन परिहरति – कश्छन्दसामिति ।।**

ಶ್ರೀಮದಾಚಾರ್ಯರಿಂದ ಮಾಡಲ್ಪಟ್ಟ 'ಜ್ಯೋತಿಷಾ ಯಜೇತ' ಎಂಬ ಪದವಿಭಾಗವು ಪ್ರಾಮಾಣಿಕವೇ ಆಗಿದೆ. ಆದರೆ ಈಗ ಅಂತಹ ಪದಚ್ಛೇದವನ್ನು ಮಾಡಿಕೊಂಡು ಸಮಗ್ರ ವೇದವನ್ನು ಅಧ್ಯಯನ ಮಾಡಲು ಯಾರಿಗೂ ಸಾಮರ್ಥ್ಯವಿಲ್ಲ. ಆದರೆ ಅದಕ್ಕೆ ಅಧಿಕಾರಿಗಳಾಗಿರುವವರು ಬ್ರಹ್ಮದೇವರು ಮಾತ್ರ. ಪ್ರಕೃತ ವಾಕ್ಯಸಮನ್ವಯಕ್ಕೆ ಯಾವ ಬಗೆಯಲ್ಲಿ ಪದಚ್ಛೇದ ಮಾಡಬೇಕೋ ಆ ಕ್ರಮದ ಪದಪಾಠವಷ್ಟೇ ಲೋಕದಲ್ಲಿ ಪ್ರಸಿದ್ಧವಾಗಿದೆ ಎಂಬುದಾಗಿ 'ಕಶ್ಛಂದಸಾಮ್' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – कः नकोपि ।।** कः ब्रह्मैवेत्यर्थादिति भावः । अन्यथापि निर्वक्तुं शक्यत्वादित्थमेवेति कुत इत्यत आह – **जातमिति ।।**

'ಕಶ್ಛಂದಸಾಮ್' ಎಂಬಲ್ಲಿರುವ 'ಕಃ' ಎಂಬ ಪದಕ್ಕೆ ಬ್ರಹ್ಮದೇವರೊಬ್ಬರೇ ಎಂದರ್ಥ. ಪದಚ್ಛೇದವನ್ನು ಹೇಗೂ ಮಾಡಬಹುದಾದ್ದರಿಂದ ನೀವು ಹೇಳುವಂತೆಯೇ ಏಕೆ ವಿವಕ್ಷಿಸಬೇಕು ? ಎಂಬ ಪ್ರಶ್ನೆಗೆ 'ಜಾತಮ್' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**प्रकाशः –** प्रमाणैरुपपादितमप्यधिकरणप्रमेयमसम्भावनां परिहरन्नुपसंहरति – **तस्मादिति ।।** श्लोकेनान्वयः ।

ಅನೇಕ ಪ್ರಮಾಣಗಳಿಂದ ಶ್ರೀಮದಾಚಾರ್ಯರು ಮಾಡಿರುವ ಪದವಿಭಾಗವೇ ಸಾಧುವಾಗಿದೆಯೆಂದು ಅನುವ್ಯಾಖ್ಯಾನದಲ್ಲಿ ಸಮರ್ಥಿಸಲಾಗಿದೆ. ಅನೇಕ ಪ್ರಮಾಣಗಳಿಂದ ಹೀಗೆ ಉಪಪಾದನೆ ಮಾಡಿ ಅಧಿಕರಣ ಪ್ರಮೇಯದ ಮೇಲೆ ಬರುವ ಅಸಂಭಾವನಾಶಂಕೆಯನ್ನು ಪರಿಹರಿಸಿ ಉಪಸಂಹಾರ ಮಾಡುತ್ತಿದ್ದಾರೆ. 'ತಸ್ಮಾತ್' ಇತ್ಯಾದಿಯಾಗಿ. 'ತಸ್ಮಾತ್' ಎಂಬುದಕ್ಕೆ ಶ್ಲೋಕದ ಜೊತೆಗೆ ಅನ್ವಯವನ್ನು ತಿಳಿಯಬೇಕು.

**प्रकाशः –** अत्र टीकायां "ज्योतिरादिशब्दानामन्यत्र रूढिर्योगो योगरूढिः" इत्यादिना वृत्तिसप्तकमुपेत्य तल्लक्षणोदाहरणाभ्यां प्रपञ्च्य "एताः वृत्तयो लोके हरौ तु महायोगो महारूढियोगश्च" इत्यादिना हरावुदाहरणहेतूक्तिभ्यां वृत्तिद्वयमुपपादितम्। तन्मूलोक्तिपूर्वकं हरौ वृत्तिद्वयोक्तिपरटीकां व्यनक्ति – **अत्रेति ।।**

ಈ ಅಧಿಕರಣದ ಟೀಕೆಯಲ್ಲಿ 'ಜ್ಯೋತಿರಾದಿಶಬ್ದಾನಾಮ್ ಅನ್ಯತ್ರ ರೂಢಿರ್ಯೋಗೋ ಯೋಗರೂಢಿಃ' ಇತ್ಯಾದಿಯಾಗಿ ಏಳು ಬಗೆಯ ವೃತ್ತಿಗಳನ್ನು ಅಂಗೀಕರಿಸಿ ಅವುಗಳ ಲಕ್ಷಣವನ್ನು ಹೇಳಿ ಪ್ರತಿಯೊಂದಕ್ಕೂ ಉದಾಹರಣೆಗಳನ್ನು ನೀಡಲಾಗಿದೆ. 'ಏತಾಃ ವೃತ್ತಯೋ ಲೋಕೇ ಹರೌ ತು ಮಹಾಯೋಗೋ ಮಹಾರೂಢಿಯೋಗಶ್ಚ' ಇತ್ಯಾದಿಯಾಗಿ ಶ್ರೀಹರಿಯಲ್ಲಿ ಮಹಾಯೋಗ ಹಾಗೂ ಮಹಾರೂಢಿಯೋಗ ಎಂಬೆರಡು ಶಬ್ದವೃತ್ತಿಗಳನ್ನು ಉಪಪಾದನೆ ಮಾಡಿದ್ದಾರೆ. ಆ ಟೀಕಾಮಾತಿಗೆ ನ್ಯಾಯವಿವರಣವೇ ಮೂಲವಾಗಿದೆಯೆಂದು ಹೇಳುತ್ತಾ ಶ್ರೀಹರಿಯಲ್ಲಿ ಎರಡು ಬಗೆಯ ವೃತ್ತಿಗಳಿವೆ ಎಂದು ಸಮರ್ಥಿಸುವ ಟೀಕೆಯನ್ನು 'ಅತ್ರ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**गुरुराजीयम् –** अभ्युपेत्याह – **अन्यत्रादृष्टत्वेपीति ।।** ननु श्रुत्याद्युक्तमप्युभयार्थत्वं कथमङ्गीकार्यम् । विरुद्धत्वादित्यत आह – **स्विष्टकृदादीनामिति ।। उत्तमामन्त्रणादिभिरिति।।** दामि निर्वपामि इत्यत्रोत्तमपुरुषेण विधिशक्तिप्रतिबन्धः । अग्नीदित्यत्रामन्त्रणेन सम्बोधनेन विधिशक्तिप्रतिबन्ध इत्यर्थः । भाष्यस्यापातप्रतीतार्थत्वे कस्तदर्थ इत्यत आह – **यच्छब्देनेति ।।** वाचस्तोमो यागविशेषः । ननु दृष्टान्तदार्ष्टान्तिकयोर्वैषम्यम् । दृष्टान्त

उभयत्र विनियोगवद्दार्ष्टान्तिके तदभावादित्यत आह – **अस्तिचेति** ।। अत एवेत्यस्य विवरणं स्वरवर्णादिसमन्वयादिति ।। **अत एवेति** ।। स्वरवर्णादीनां सर्वेषां भगवति समन्वयादेवेत्यर्थः । ज्योतिरादिशब्दानां प्रकारान्तरेणापि निर्वचनसम्भवात्कथं गुणलाभ इत्यत आह – **जातमोतमित्यादिना** । टीकायां न्यायविवरणानुसारेण ब्रह्मणि महायोगो महारूढियोगश्चोक्तौ । तत्र महारूढियोगोक्तावपि महायोगस्य पृथगुक्तिवन्महारूढिरपि पृथग्वक्तव्यैव । अन्यथा महायोगोपि पृथङ्नवक्तव्यस्स्यादित्यनुपपत्तिरिव प्रतीयते । तां परिहर्तुं टीकामनुवदति ।। **अत्र न्यायविवरण इति** ।।

## ಸಾರ

ವೇದದಲ್ಲಿ ಯಾವುದೇ ಪದಗಳು ವಾಕ್ಯದಲ್ಲಿ ಅನ್ವಯವನ್ನು ಹೊಂದುವ ಮೂಲಕ ಏಕವಾಕ್ಯತ್ವವನ್ನು ಪಡೆಯುತ್ತವೆ. ಆವಾಗ ಲೌಕಿಕವಾದ ಕರ್ಮಾದಿಗಳನ್ನೋ, ಅಥವಾ ದೇವತೆಗಳನ್ನೋ ಪ್ರತಿಪಾದನೆ ಮಾಡುತ್ತವೆ. ಆದರೆ ವಾಕ್ಯದಲ್ಲಿ ಅನ್ವಯವನ್ನು ಹೊಂದದೇ ಪ್ರತ್ಯೇಕವಾಗಿದ್ದಾಗ ಎಲ್ಲವೂ, ಎಲ್ಲಾ ಪದಗಳೂ ಶ್ರೀಹರಿಯ ನಾಮಗಳೇ ಆಗಿರುತ್ತವೆ.

ಒಮ್ಮೆ ನಾರದಮಹರ್ಷಿಗಳು ಸನತ್ಕುಮಾರರ ಬಳಿ ನಾನು ಚತುರ್ವೇದಗಳನ್ನು, ಇತಿಹಾಸ-ಪುರಾಣಗಳನ್ನು, ಪಂಚರಾತ್ರ ರಾಮಾಯಣ ಮೊದಲಾದವುಗಳನ್ನು, ಅಷ್ಟೇ ಅಲ್ಲದೇ ದೇವಲೋಕದಲ್ಲಿರುವ ಅನಂತವಾದ ಶಾಸ್ತ್ರಗ್ರಂಥಗಳನ್ನು, ವೇದೋಪನಿಷತ್ತುಗಳನ್ನೆಲ್ಲಾ ಅಧ್ಯಯನ ಮಾಡಿದ್ದೇನೆಂದು ಹೇಳುತ್ತಾರೆ. ಆವಾಗ ಸನತ್ಕುಮಾರರು ನಾರದಮಹರ್ಷಿಗಳಿಗೆ "ಯದ್ವೈಕಿಂಚೈತದಧ್ಯಗೀಷ್ಠಾ ನಾಮ್ನೈವೈತತ್" ನೀವು ಏನೇನು ಗ್ರಂಥಗಳನ್ನು ಓದಿದ್ದೀರೋ ಆ ಎಲ್ಲಾ ಗ್ರಂಥಗಳಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳು ಎಂಬುದಾಗಿ ಹೇಳಿರುತ್ತಾರೆ. ಆದ್ದರಿಂದ ವಾಙ್ಮಯ ಪ್ರಪಂಚದ ಶಬ್ದಗಳೆಲ್ಲವೂ ಶ್ರೀಹರಿಯ ನಾಮಗಳೇ ಆಗಿವೆ. ಇಂತಹ ಶ್ರೀಹರಿಯ ಹೆಸರುಗಳಾದ ಶಬ್ದಗಳನ್ನೇ ಜೋಡಿಸಿಕೊಂಡು ವಾಕ್ಯವನ್ನಾಗಿ ಮಾಡಿಕೊಂಡು ಕರ್ಮಾದಿಗಳನ್ನು, ದೇವತೆಗಳನ್ನು ವೇದವು ಪ್ರತಿಪಾದನೆ ಮಾಡುತ್ತದೆ. ಹಾಗೂ ಇತಿಹಾಸ-ಪುರಾಣಾದಿಗಳೂ ಕೂಡ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವೇದದ ಮುಖ್ಯತಾತ್ಪರ್ಯ ಶ್ರೀಹರಿಯೇ ಆಗಿರುತ್ತಾನೆ. ಅವಾಂತರತಾತ್ಪರ್ಯ ಕರ್ಮ, ದೇವತೆ ಮೊದಲಾದವುಗಳು.

ಪೂರ್ವಮೀಮಾಂಸೆಯಲ್ಲಿ 'ವಾಚಸ್ತೋಮ' ಎಂಬ ಯಾಗದ ಪ್ರಕ್ರಿಯೆಯೂ ಇದೆ. ಇದರಲ್ಲಿ ಬೇರೆ ಕರ್ಮಗಳಲ್ಲಿ ವಿನಿಯೋಗ ಮಾಡುವಂತಹ ಎಲ್ಲಾ ಮಂತ್ರಗಳನ್ನು ಪಠಿಸಬೇಕೆಂಬ ವಿಧಿಯಿದೆ. ಆ ವಾಚಸ್ತೋಮಯಾಗದಲ್ಲಿ ಪಠಿಸುವ ಎಲ್ಲ ಮಂತ್ರಗಳನ್ನೇ ಬೇರೆ ಬೇರೆ ಕರ್ಮಗಳಲ್ಲಿಯೂ ಕೂಡ ಪ್ರತ್ಯೇಕವಾಗಿ ಪಠಿಸಲಾಗುತ್ತದೆ. ಅದರಂತೆ ಎಲ್ಲಾ ಶಬ್ದಗಳೂ ಕೂಡ ಶ್ರೀಹರಿಯ ನಾಮಗಳೇ ಆಗಿವೆ. ಅವುಗಳನ್ನೇ ತೆಗೆದುಕೊಂಡು ಲೌಕಿಕವಾದ ಅರ್ಥಗಳಲ್ಲಿ ನಾವು ಪ್ರಯೋಗಿಸುತ್ತೇವೆ. ಮತ್ತೊಂದು ಗಮನಿಸಬೇಕಾದ ಬಹಳ ದೊಡ್ಡ ವಿಚಾರವೆಂದರೆ ವೇದಾಧ್ಯಯನವನ್ನು ಮಾಡುವವರು ವರ್ಣ, ಸ್ವರ, ಪದ, ಕ್ರಮ, ಜಟಾ, ವಾಕ್ಯ ಈ ಕ್ರಮಗಳಲ್ಲಿ ಸಂಹಿತಾಧ್ಯಯನವನ್ನು ಮಾಡುತ್ತಾರೆ. ಇದರ

ಉದ್ದೇಶ ಹೀಗಿದೆ - ಪೂರ್ವಮೀಮಾಂಸೆಯ ಮೊದಲನೆಯ ಧರ್ಮಜಿಜ್ಞಾಸಾಧಿಕರಣದಲ್ಲಿ ಸ್ವಶಾಖಾಧ್ಯಯನವು ಅರ್ಥಜ್ಞಾನಪರ್ಯವಸಾಯಿ ಆಗಿದೆಯೆಂದು ನಿರ್ಣಯಿಸಲಾಗಿದೆ. ವೇದವನ್ನು ಅರ್ಥಜ್ಞಾನವಿಲ್ಲದೇ ಅಧ್ಯಯನ ಮಾಡಬಾರದು. ಅರ್ಥವನ್ನು ತಿಳಿದೇ ಅಧ್ಯಯನ ಮಾಡಬೇಕೆಂದು ವಿಧಿಸಲಾಗಿದೆ. ವೇದಾಧ್ಯಯನದಲ್ಲೇ ವರ್ಣ, ಸ್ವರ, ಪದ ಮೊದಲಾದವುಗಳ ಅಧ್ಯಯನವೂ ಕೂಡ ಸಾಂಪ್ರದಾಯಿಕವಾಗಿ ವಿಧಿಸಿದ್ಧವಾಗಿದೆ. ವರ್ಣ, ಸ್ವರ ಮೊದಲಾದವುಗಳ ಅರ್ಥವನ್ನೂ ಕೂಡ ಅವಶ್ಯವಾಗಿ ತಿಳಿಯಲೇ ಬೇಕು. ಇಲ್ಲದಿದ್ದರೆ ಪೂರ್ವಮೀಮಾಂಸೆಯ ಧರ್ಮಜಿಜ್ಞಾಸಾಧಿಕರಣವು ಕೇವಲ ವೇದದ ಒಂದು ಅಂಶವನ್ನು ಮಾತ್ರ ಅರ್ಥಜ್ಞಾನಪುರಸ್ಸರವಾಗಿ ಅಧ್ಯಯನ ಮಾಡಬೇಕೆಂದು ಹೇಳುತ್ತಿದೆ ಎಂದಾದೀತು. ಇದು ಸರ್ವಥಾ ಯುಕ್ತವಾಗುವುದಿಲ್ಲ.

ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥

ವೇದದಲ್ಲಿ ಎಷ್ಟು ಅಕ್ಷರಗಳಿವೆಯೋ, ಅವೆಲ್ಲವನ್ನು ದ್ವಿಜರು ಅಧ್ಯಯನ ಮಾಡಬೇಕು. ಆ ಎಲ್ಲಾ ಅಕ್ಷರಗಳೂ ಕೂಡ ಶ್ರೀಹರಿಯ ನಾಮಸ್ವರೂಪವಾಗಿವೆ ಇದರಲ್ಲಿ ಯಾವುದೇ ಸಂಶಯವಿಲ್ಲ ಎಂಬುದಾಗಿ ಅಧ್ಯಾಪಕಪ್ರಸಿದ್ಧಿಯಿರುತ್ತದೆ. ಪ್ರತಿಯೊಂದು ವೇದವಾಕ್ಯಗಳಲ್ಲಿರುವ ಪದಪಾಠವನ್ನು ಅಧ್ಯಯನ ಮಾಡಬೇಕೆಂದರೆ ಆ ಪದಗಳೆಲ್ಲವೂ ಹರಿನಾಮಗಳೆಂದು ಹೇಳಿದಿರಿ. ಹಾಗಾದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಲ್ಲಿ ಶ್ರೀಮದಾಚಾರ್ಯರು 'ಜ್ಯೋತಿಷಾ ಯಜೇತ' ಎಂಬುದಾಗಿ ಪದಚ್ಛೇದ ಮಾಡಿದ್ದಾರೆ. ಆದರೆ ಪದಪಾಠದಲ್ಲಿ ಇಂತಹ ಪದಚ್ಛೇದವು ಸರ್ವಥಾ ಇರುವುದಿಲ್ಲ. ಆದ್ದರಿಂದ ಶ್ರೀಮದಾಚಾರ್ಯರು ಹೀಗೆ ಪದಚ್ಛೇದ ಮಾಡುವುದು ಹೇಗೆ ಸರಿ? ಎಂಬುದು ಇಲ್ಲಿ ಬರುವ ಗೊಂದಲ. ಆದರೆ 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಶ್ರುತಿಯೇ ಹೇಳುವಂತೆ ವೇದದಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳೆಂದು ತಿಳಿಯಲು ನಾವು ಯಾರೂ ಸಹ ಅಧಿಕಾರಿಗಳಲ್ಲ. ಕೇವಲ ಚತುರ್ಮುಖಬ್ರಹ್ಮದೇವರೊಬ್ಬರೇ ಅಧಿಕಾರಿಗಳು. ಉಳಿದೆಲ್ಲಾ ಅಧಿಕಾರಿವರ್ಗದವರು ವಾಕ್ಯಸಮನ್ವಯವನ್ನಷ್ಟೇ ತಿಳಿಯಬೇಕು. ಆ ವಾಕ್ಯಸಮನ್ವಯಕ್ಕೆ ಉಪಯುಕ್ತವಾದ ಪದವಿಭಾಗಗಳನ್ನಷ್ಟೇ ಪದಪಾಠದಲ್ಲಿ ತೋರಿಸಲಾಗಿದೆ. ಶ್ರೀಮದಾಚಾರ್ಯರು 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿ ಪದವಿಭಾಗವನ್ನು ಮಾಡಿರುವುದು ವಾಕ್ಯಸಮನ್ವಯಕ್ಕೆ ಉಪಯುಕ್ತವಾದ ಪದವಿಭಾಗಗಳಾಗಿರುವುದಿಲ್ಲ. ಕೇವಲ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳಾಗಿರುತ್ತವೆನ್ನಲು ಮಾತ್ರ ಅದು ದೃಷ್ಟಾಂತವಾಗಿರುತ್ತದೆ.

ಪ್ರತಿಯೊಂದು ಪದಗಳನ್ನು ಯೋಗವಿಭಾಗ ಮಾಡಿ ಪ್ರತಿಪಾದ್ಯವಾದ ಗುಣಸಮನ್ವಯವನ್ನು ಶ್ರೀಹರಿಯಲ್ಲಿ ಮಾಡುವಂತೆ ಮತ್ತೊಂದು ಬಗೆಯಲ್ಲಿ ಯೋಗವಿಭಾಗ ಮಾಡಿದಾಗ, ಅದೇ ಪದವು ದೋಷವನ್ನೂ ಕೂಡ ಹೇಳುತ್ತದೆ. ಅಂತಹ ದೋಷಗಳನ್ನೂ ಕೂಡ ಶ್ರೀಹರಿಯಲ್ಲಿ ಏಕೆ ತಿಳಿಯಬಾರದು? ಎಂಬ ಪ್ರಶ್ನೆ ಎದುರಾಗುತ್ತದೆ. ಆದರೆ ಈಗಾಗಲೇ ಹೇಳಿದಂತೆ 'ತಂ ಯಚ್ಛತಮ್' ಇತ್ಯಾದಿ ಶ್ರುತಿಗಳು ಜ್ಞಾನಿಜನರಾದ ಮುಮುಕ್ಷುಗಳು ಎಲ್ಲಾ ಪದಗಳನ್ನು ಯೋಗವೃತ್ತಿಯಿಂದ ಶ್ರೀಹರಿಯಲ್ಲಿ ಸಮನ್ವಯ ಮಾಡಿ ಅವುಗಳಿಂದ ಪ್ರತಿಪಾದ್ಯವಾದ ಗುಣಗಳನ್ನಷ್ಟೇ ಅನುಸಂಧಾನ ಮಾಡುತ್ತಾರೆಂದು ಸಮರ್ಥಿಸಲಾಗಿದೆ. ಆದ್ದರಿಂದ ದೋಷಪ್ರಕಾಶಕವಾದ ನಿರ್ವಚನದ ಉತ್ಪ್ರೇಕ್ಷೆಯನ್ನು ಸರ್ವಥಾ ಮಾಡಬಾರದು. ಹಾಗೇನಾದರೂ ಮಾಡಿದರೆ ಅದೇ ಗತಿ ಅವನಿಗೆ ಆಗುತ್ತದೆ. ಆದ್ದರಿಂದ ಅಲೌಕಿಕವಾದ ವೇದದಿಂದ ಅಲೌಕಿಕನಾದ ಈಶ್ವರನಲ್ಲಿ, ಅಲೌಕಿಕವಾದ ವಾಕ್ಯವಾಚಕಭಾವಸಂಬಂಧವನ್ನೇ ತಿಳಿಯಬೇಕು. ನಮ್ಮಂತಹ ಅಲ್ಪಮತಿಗಳಿಗೆ ಆ ಅಲೌಕಿಕ ಸಂಬಂಧಗಳು ತಿಳಿಯಲು ಸಾಧ್ಯವಾಗುವುದಿಲ್ಲ.

ಜ್ಯೋತಿರುಪಕ್ರಮಾಧಿಕರಣ (1-4-2)

उभयत्र विनियोगवद्दार्ष्टान्तिके तदभावादित्यत आह – **अस्तिचेति** ।। अत एवेत्यस्य विवरणं स्वरवर्णादिसमन्वयादिति ।। **अत एवेति** ।। स्वरवर्णादीनां सर्वेषां भगवति समन्वयादेवेत्यर्थः । ज्योतिरादिशब्दानां प्रकारान्तरेणापि निर्वचनसम्भवात्कथं गुणलाभ इत्यत आह – **जातमोतमित्यादिना** । टीकायां न्यायविवरणानुसारेण ब्रह्मणि महायोगो महारूढियोगश्चोक्तौ । तत्र महारूढियोगोक्तावपि महायोगस्य पृथगुक्तिवन्महारूढिरपि पृथग्वक्तव्यैव । अन्यथा महायोगोपि पृथङ्नवक्तव्यस्स्यादित्यनुपपत्तिरिव प्रतीयते । तां परिहर्तुं टीकामनुवदति ।। **अत्र न्यायविवरण इति** ।।




ವೇದದಲ್ಲಿ ಯಾವುದೇ ಪದಗಳು ವಾಕ್ಯದಲ್ಲಿ ಅನ್ವಯವನ್ನು ಹೊಂದುವ ಮೂಲಕ ಏಕವಾಕ್ಯತ್ವವನ್ನು ಪಡೆಯುತ್ತವೆ. ಆವಾಗ ಲೌಕಿಕವಾದ ಕರ್ಮಾದಿಗಳನ್ನೋ, ಅಥವಾ ದೇವತೆಗಳನ್ನೋ ಪ್ರತಿಪಾದನೆ ಮಾಡುತ್ತವೆ. ಆದರೆ ವಾಕ್ಯದಲ್ಲಿ ಅನ್ವಯವನ್ನು ಹೊಂದದೇ ಪ್ರತ್ಯೇಕವಾಗಿದ್ದಾಗ ಎಲ್ಲವೂ, ಎಲ್ಲಾ ಪದಗಳೂ ಶ್ರೀಹರಿಯ ನಾಮಗಳೇ ಆಗಿರುತ್ತವೆ.

ಒಮ್ಮೆ ನಾರದಮಹರ್ಷಿಗಳು ಸನತ್ಕುಮಾರರ ಬಳಿ ನಾನು ಚತುರ್ವೇದಗಳನ್ನು, ಇತಿಹಾಸ-ಪುರಾಣಗಳನ್ನು, ಪಂಚರಾತ್ರ ರಾಮಾಯಣ ಮೊದಲಾದವುಗಳನ್ನು, ಅಷ್ಟೇ ಅಲ್ಲದೇ ದೇವಲೋಕದಲ್ಲಿರುವ ಅನಂತವಾದ ಶಾಸ್ತ್ರಗ್ರಂಥಗಳನ್ನು, ವೇದೋಪನಿಷತ್ತುಗಳನ್ನೆಲ್ಲಾ ಅಧ್ಯಯನ ಮಾಡಿದ್ದೇನೆಂದು ಹೇಳುತ್ತಾರೆ. ಆವಾಗ ಸನತ್ಕುಮಾರರು ನಾರದಮಹರ್ಷಿಗಳಿಗೆ "ಯದ್ವೈಕಿಂಚೈತದಧ್ಯಗೀಷ್ಠಾ ನಾಮೈವೈತತ್" ನೀವು ಏನೇನು ಗ್ರಂಥಗಳನ್ನು ಓದಿದ್ದೀರೋ ಆ ಎಲ್ಲಾ ಗ್ರಂಥಗಳಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳು ಎಂಬುದಾಗಿ ಹೇಳಿರುತ್ತಾರೆ. ಆದ್ದರಿಂದ ವಾಙ್ಮಯ ಪ್ರಪಂಚದ ಶಬ್ದಗಳೆಲ್ಲವೂ ಶ್ರೀಹರಿಯ ನಾಮಗಳೇ ಆಗಿವೆ. ಇಂತಹ ಶ್ರೀಹರಿಯ ಹೆಸರುಗಳಾದ ಶಬ್ದಗಳನ್ನೇ ಜೋಡಿಸಿಕೊಂಡು ವಾಕ್ಯವನ್ನಾಗಿ ಮಾಡಿಕೊಂಡು ಕರ್ಮಾದಿಗಳನ್ನು, ದೇವತೆಗಳನ್ನು ವೇದವು ಪ್ರತಿಪಾದನೆ ಮಾಡುತ್ತದೆ. ಹಾಗೂ ಇತಿಹಾಸ-ಪುರಾಣಾದಿಗಳೂ ಕೂಡ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವೇದದ ಮುಖ್ಯತಾತ್ಪರ್ಯ ಶ್ರೀಹರಿಯೇ ಆಗಿರುತ್ತಾನೆ. ಅವಾಂತರತಾತ್ಪರ್ಯ ಕರ್ಮ, ದೇವತೆ ಮೊದಲಾದವುಗಳು.

ಪೂರ್ವಮೀಮಾಂಸೆಯಲ್ಲಿ 'ವಾಚಸ್ತೋಮ' ಎಂಬ ಯಾಗದ ಪ್ರಕ್ರಿಯೆಯೂ ಇದೆ. ಇದರಲ್ಲಿ ಬೇರೆ ಕರ್ಮಗಳಲ್ಲಿ ವಿನಿಯೋಗ ಮಾಡುವಂತಹ ಎಲ್ಲಾ ಮಂತ್ರಗಳನ್ನು ಪಠಿಸಬೇಕೆಂಬ ವಿಧಿಯಿದೆ. ಆ ವಾಚಸ್ತೋಮಯಾಗದಲ್ಲಿ ಪಠಿಸುವ ಎಲ್ಲ ಮಂತ್ರಗಳನ್ನೇ ಬೇರೆ ಬೇರೆ ಕರ್ಮಗಳಲ್ಲಿಯೂ ಕೂಡ ಪ್ರತ್ಯೇಕವಾಗಿ ಪಠಿಸಲಾಗುತ್ತದೆ. ಅದರಂತೆ ಎಲ್ಲಾ ಶಬ್ದಗಳೂ ಕೂಡ ಶ್ರೀಹರಿಯ ನಾಮಗಳೇ ಆಗಿವೆ. ಅವುಗಳನ್ನೇ ತೆಗೆದುಕೊಂಡು ಲೌಕಿಕವಾದ ಅರ್ಥಗಳಲ್ಲಿ ನಾವು ಪ್ರಯೋಗಿಸುತ್ತೇವೆ. ಮತ್ತೊಂದು ಗಮನಿಸಬೇಕಾದ ಬಹಳ ದೊಡ್ಡ ವಿಚಾರವೆಂದರೆ ವೇದಾಧ್ಯಯನವನ್ನು ಮಾಡುವವರು ವರ್ಣ, ಸ್ವರ, ಪದ, ಕ್ರಮ, ಜಟಾ, ವಾಕ್ಯ ಈ ಕ್ರಮಗಳಲ್ಲಿ ಸಂಹಿತಾಧ್ಯಯನವನ್ನು ಮಾಡುತ್ತಾರೆ. ಇದರ

ಉದ್ದೇಶ ಹೀಗಿದೆ - ಪೂರ್ವಮೀಮಾಂಸೆಯ ಮೊದಲನೆಯ ಧರ್ಮಜಿಜ್ಞಾಸಾಧಿಕರಣದಲ್ಲಿ ಸ್ವಶಾಖಾಧ್ಯಯನವು ಅರ್ಥಜ್ಞಾನಪರ್ಯವಸಾಯಿ ಆಗಿದೆಯೆಂದು ನಿರ್ಣಯಿಸಲಾಗಿದೆ. ವೇದವನ್ನು ಅರ್ಥಜ್ಞಾನವಿಲ್ಲದೇ ಅಧ್ಯಯನ ಮಾಡಬಾರದು. ಅರ್ಥವನ್ನು ತಿಳಿದೇ ಅಧ್ಯಯನ ಮಾಡಬೇಕೆಂದು ವಿಧಿಸಲಾಗಿದೆ. ವೇದಾಧ್ಯಯನದಲ್ಲೇ ವರ್ಣ, ಸ್ವರ, ಪದ ಮೊದಲಾದವುಗಳ ಅಧ್ಯಯನವೂ ಕೂಡ ಸಾಂಪ್ರದಾಯಿಕವಾಗಿ ವಿಧಿಸಿದ್ಧವಾಗಿದೆ. ವರ್ಣ, ಸ್ವರ ಮೊದಲಾದವುಗಳ ಅರ್ಥವನ್ನೂ ಕೂಡ ಅವಶ್ಯವಾಗಿ ತಿಳಿಯಲೇ ಬೇಕು. ಇಲ್ಲದಿದ್ದರೆ ಪೂರ್ವಮೀಮಾಂಸೆಯ ಧರ್ಮಜಿಜ್ಞಾಸಾಧಿಕರಣವು ಕೇವಲ ವೇದದ ಒಂದು ಅಂಶವನ್ನು ಮಾತ್ರ ಅರ್ಥಜ್ಞಾನಪುರಸ್ಸರವಾಗಿ ಅಧ್ಯಯನ ಮಾಡಬೇಕೆಂದು ಹೇಳುತ್ತಿದೆ ಎಂದಾದೀತು. ಇದು ಸರ್ವಥಾ ಯುಕ್ತವಾಗುವುದಿಲ್ಲ.

ವೇದಾಕ್ಷರಾಣಿ ಯಾವಂತಿ ಪಠಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥

ವೇದದಲ್ಲಿ ಎಷ್ಟು ಅಕ್ಷರಗಳಿವೆಯೋ, ಅವೆಲ್ಲವನ್ನು ದ್ವಿಜರು ಅಧ್ಯಯನ ಮಾಡಬೇಕು. ಆ ಎಲ್ಲಾ ಅಕ್ಷರಗಳೂ ಕೂಡ ಶ್ರೀಹರಿಯ ನಾಮಸ್ವರೂಪವಾಗಿವೆ ಇದರಲ್ಲಿ ಯಾವುದೇ ಸಂಶಯವಿಲ್ಲ ಎಂಬುದಾಗಿ ಅಧ್ಯಾಪಕಪ್ರಸಿದ್ಧಿಯಿರುತ್ತದೆ. ಪ್ರತಿಯೊಂದು ವೇದವಾಕ್ಯಗಳಲ್ಲಿರುವ ಪದಪಾಠವನ್ನು ಅಧ್ಯಯನ ಮಾಡಬೇಕೆಂದರೆ ಆ ಪದಗಳೆಲ್ಲವೂ ಹರಿನಾಮಗಳೆಂದು ಹೇಳಿದಿರಿ. ಹಾಗಾದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಲ್ಲಿ ಶ್ರೀಮದಾಚಾರ್ಯರು 'ಜ್ಯೋತಿಷಾ ಯಜೇತ' ಎಂಬುದಾಗಿ ಪದಚ್ಛೇದ ಮಾಡಿದ್ದಾರೆ. ಆದರೆ ಪದಪಾಠದಲ್ಲಿ ಇಂತಹ ಪದಚ್ಛೇದವು ಸರ್ವಥಾ ಇರುವುದಿಲ್ಲ. ಆದ್ದರಿಂದ ಶ್ರೀಮದಾಚಾರ್ಯರು ಹೀಗೆ ಪದಚ್ಛೇದ ಮಾಡುವುದು ಹೇಗೆ ಸರಿ? ಎಂಬುದು ಇಲ್ಲಿ ಬರುವ ಗೊಂದಲ. ಆದರೆ 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಶ್ರುತಿಯೇ ಹೇಳುವಂತೆ ವೇದದಲ್ಲಿರುವ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳೆಂದು ತಿಳಿಯಲು ನಾವು ಯಾರೂ ಸಹ ಅಧಿಕಾರಿಗಳಲ್ಲ. ಕೇವಲ ಚತುರ್ಮುಖಬ್ರಹ್ಮದೇವರೊಬ್ಬರೇ ಅಧಿಕಾರಿಗಳು. ಉಳಿದೆಲ್ಲಾ ಅಧಿಕಾರಿವರ್ಗದವರು ವಾಕ್ಯಸಮನ್ವಯವನ್ನಷ್ಟೇ ತಿಳಿಯಬೇಕು. ಆ ವಾಕ್ಯಸಮನ್ವಯಕ್ಕೆ ಉಪಯುಕ್ತವಾದ ಪದವಿಭಾಗಗಳನ್ನಷ್ಟೇ ಪದಪಾಠದಲ್ಲಿ ತೋರಿಸಲಾಗಿದೆ. ಶ್ರೀಮದಾಚಾರ್ಯರು 'ಜ್ಯೋತಿಷಾ ಯಜೇತ' ಇತ್ಯಾದಿಯಾಗಿ ಪದವಿಭಾಗವನ್ನು ಮಾಡಿರುವುದು ವಾಕ್ಯಸಮನ್ವಯಕ್ಕೆ ಉಪಯುಕ್ತವಾದ ಪದವಿಭಾಗಗಳಾಗಿರುವುದಿಲ್ಲ. ಕೇವಲ ಪ್ರತಿಯೊಂದು ಪದಗಳು ಶ್ರೀಹರಿಯ ನಾಮಗಳಾಗಿರುತ್ತವೆನ್ನಲು ಮಾತ್ರ ಅದು ದೃಷ್ಟಾಂತವಾಗಿರುತ್ತದೆ.

ಪ್ರತಿಯೊಂದು ಪದಗಳನ್ನು ಯೋಗವಿಭಾಗ ಮಾಡಿ ಪ್ರತಿಪಾದ್ಯವಾದ ಗುಣಸಮನ್ವಯವನ್ನು ಶ್ರೀಹರಿಯಲ್ಲಿ ಮಾಡುವಂತೆ ಮತ್ತೊಂದು ಬಗೆಯಲ್ಲಿ ಯೋಗವಿಭಾಗ ಮಾಡಿದಾಗ, ಅದೇ ಪದವು ದೋಷವನ್ನೂ ಕೂಡ ಹೇಳುತ್ತದೆ. ಅಂತಹ ದೋಷಗಳನ್ನೂ ಕೂಡ ಶ್ರೀಹರಿಯಲ್ಲಿ ಏಕೆ ತಿಳಿಯಬಾರದು? ಎಂಬ ಪ್ರಶ್ನೆ ಎದುರಾಗುತ್ತದೆ. ಆದರೆ ಈಗಾಗಲೇ ಹೇಳಿದಂತೆ 'ತಂ ಯಚ್ಛತಮ್' ಇತ್ಯಾದಿ ಶ್ರುತಿಗಳು ಜ್ಞಾನಿಜನರಾದ ಮುಮುಕ್ಷುಗಳು ಎಲ್ಲಾ ಪದಗಳನ್ನು ಯೋಗವೃತ್ತಿಯಿಂದ ಶ್ರೀಹರಿಯಲ್ಲಿ ಸಮನ್ವಯ ಮಾಡಿ ಅವುಗಳಿಂದ ಪ್ರತಿಪಾದ್ಯವಾದ ಗುಣಗಳನ್ನಷ್ಟೇ ಅನುಸಂಧಾನ ಮಾಡುತ್ತಾರೆಂದು ಸಮರ್ಥಿಸಲಾಗಿದೆ. ಆದ್ದರಿಂದ ದೋಷಪ್ರಕಾಶಕವಾದ ನಿರ್ವಚನದ ಉತ್ಪ್ರೇಕ್ಷೆಯನ್ನು ಸರ್ವಥಾ ಮಾಡಬಾರದು. ಹಾಗೇನಾದರೂ ಮಾಡಿದರೆ ಅದೇ ಗತಿ ಅವನಿಗೆ ಆಗುತ್ತದೆ. ಆದ್ದರಿಂದ ಅಲೌಕಿಕವಾದ ವೇದದಿಂದ ಅಲೌಕಿಕನಾದ ಈಶ್ವರನಲ್ಲಿ, ಅಲೌಕಿಕವಾದ ವಾಕ್ಯವಾಚಕಭಾವಸಂಬಂಧವನ್ನೇ ತಿಳಿಯಬೇಕು. ನಮ್ಮಂತಹ ಅಲ್ಪಮತಿಗಳಿಗೆ ಆ ಅಲೌಕಿಕ ಸಂಬಂಧಗಳು ತಿಳಿಯಲು ಸಾಧ್ಯವಾಗುವುದಿಲ್ಲ.

ಜ್ಯೋತಿರುಪಕ್ರಮಾಧಿಕರಣ (1-4-2)

ಶಬ್ದದಲ್ಲಿ ಅನೇಕವಿಧವಾದ ವೃತ್ತಿಗಳಿವೆ. ಅವುಗಳಲ್ಲಿ ಮಹಾಯೋಗ ಮತ್ತು ಮಹಾಯೋಗರೂಢಿ ಎಂಬುದು ಮುಖ್ಯವಾದ ಶಬ್ದವೃತ್ತಿಗಳು. ಆ ಶಬ್ದಗಳು ಹೇಳುವ ಗುಣಧರ್ಮಗಳು ಶ್ರೀಹರಿಯಲ್ಲಿ ನಿರತಿಶಯವಾಗಿ ಅಥವಾ ಸ್ವತಂತ್ರವಾಗಿ ಇರುವುದರಿಂದ ಜ್ಞಾನಿಜನರು ಅದನ್ನು ಶ್ರೀಹರಿಯಲ್ಲಿ ಬಹಳವಾಗಿ ಪ್ರಯೋಗಿಸುತ್ತಾರೆ. ಆದ್ದರಿಂದ ಶಬ್ದಗಳು ಪರಮಾತ್ಮನನ್ನು ಮಹಾಯೋಗವೃತ್ತಿಯಿಂದ ಕರೆಯುತ್ತವೆ. ಇಂದ್ರ, ಪ್ರಾಣ ಮೊದಲಾದ ಶಬ್ದಗಳೇ ಇದಕ್ಕೆ ಉದಾಹರಣೆಗಳು. ಇನ್ನು ಇಂದ್ರಶಬ್ದದ ಪ್ರವೃತ್ತಿನಿಮಿತ್ತವಾಗಿರುವ ಐಶ್ವರ್ಯ, ಅಗ್ನಿ, ಪ್ರಾಣ ಮೊದಲಾದ ಶಬ್ದಗಳ ಪ್ರವೃತ್ತಿನಿಮಿತ್ತವಾಗಿರುವ ಜಗತ್‌ಪ್ರವರ್ತಕತ್ವ ಇವುಗಳೆಲ್ಲವೂ ಶ್ರೀಹರಿಯಲ್ಲಿ ನಿರತಿಶಯವಾಗಿ ಇರುತ್ತವೆ. ಆದ್ದರಿಂದ ಈ ಶಬ್ದಗಳು ಭಗವಂತನಲ್ಲಿ ಮಹಾಯೋಗವೃತ್ತಿಯಿಂದ ಇರುತ್ತವೆ.

ಆಯಾ ಶಬ್ದಗಳ ಗುಣಧರ್ಮಗಳು ಪರಮಾತ್ಮನಲ್ಲಿ ನಿರತಿಶಯವಾಗಿ ಇರುವುದರ ಜೊತೆಗೆ ಲೋಕದಲ್ಲಿ ಹಾಗೂ ವೇದದಲ್ಲಿ ಪ್ರಸಿದ್ಧಿಯಿದ್ದರೆ ಆ ಶಬ್ದಗಳು ಮಹಾಯೋಗರೂಢಿಯೆಂಬ ಶಬ್ದಶಕ್ತಿಯಿಂದ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆ. ವಿಷ್ಣು, ನಾರಾಯಣ, ಹರಿ ಮೊದಲಾದ ಶಬ್ದಗಳು ಇದಕ್ಕೆ ಉದಾಹರಣೆ. ಈ ಮಹಾಯೋಗ ಮತ್ತು ಮಹಾಯೋಗ ರೂಢಿಗಳನ್ನು ಪರಮಮುಖ್ಯವೃತ್ತಿಯೆಂದು ಕರೆಯುತ್ತಾರೆ. ಇದರಂತೆ ಯೋಗ, ರೂಢಿ, ಯೋಗರೂಢಿಯೆಂಬ ಮೂರು ಮುಖ್ಯವೃತ್ತಿಗಳಿವೆ. ಇವುಗಳು ಲೌಕಿಕವಾದ ಪದಾರ್ಥಗಳನ್ನು ಮುಖ್ಯವಾಗಿ ಪ್ರತಿಪಾದನೆ ಮಾಡುತ್ತವೆ. ರೂಢೋಪಚಾರ, ರೂಢಲಕ್ಷಣಾ, ಉಪಚಾರ, ಲಕ್ಷಣಾ ಎಂಬ ನಾಲ್ಕುಬಗೆಯ ವೃತ್ತಿಗಳು ಗೌಣವಾದ ವೃತ್ತಿಗಳೆಂದು ಕರೆಸಿಕೊಳ್ಳುತ್ತಾ ಲೌಕಿಕವಾದ ಪದಾರ್ಥಗಳನ್ನು ಗೌಣವಾಗಿಯೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಪರಮಾತ್ಮನಲ್ಲಿ ಮಾತ್ರ ಇರುವ ಎರಡು ವೃತ್ತಿಗಳನ್ನು ಬಿಟ್ಟರೆ ಲೋಕದಲ್ಲಿ ಏಳುಬಗೆಯ ವೃತ್ತಿಗಳು ಪದಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ೧. ರೂಢಿ, ೨. ಯೋಗ, ೩. ಯೋಗರೂಢಿ, ೪. ರೂಢೋಪಚಾರ, ೫. ರೂಢಲಕ್ಷಣ, ೬. ಉಪಚಾರ, ೭. ಲಕ್ಷಣಾ ಎಂಬುದಾಗಿ.





## ಸೂತ್ರಗಳ ಪಾಠಕ್ರಮ

## तात्पर्यचन्द्रिका

**अत्र चाद्ये सूत्रे स्वपक्षसाधकोक्तिः ।**

ಅನುವಾದ - 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದು ಮೊದಲನೆಯ ಸೂತ್ರ. ಈ ಸೂತ್ರದಲ್ಲಿ ಸ್ವಪಕ್ಷಸಾಧಕ ಪ್ರಮಾಣವನ್ನು ಹೇಳಲಾಗಿದೆ. ಆದ್ದರಿಂದ ಇದಕ್ಕೆ ಪ್ರಥಮಸ್ಥಾನವು ಯುಕ್ತವಾಗಿದೆ.

**तत्र यद्यपि विषयवाक्ये वसन्तादिशब्दः प्रथमस्तथापि कर्मान्तरप्रकृतित्व फलकारणत्वादिना प्रधानभूतज्योतिष्टोमवाचित्वत् सूत्रे ज्योतिशब्दः प्रयुक्तः ।**

ಪರಿಪೂರ್ಣಚಂದ್ರಿಕಾ

ಪ್ರಶ್ನೆ - 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದೇ ಈ ಅಧಿಕರಣದ ವಿಷಯವಾಕ್ಯ. ಈ ವಾಕ್ಯದಲ್ಲಿ ವಸಂತಶಬ್ದವು ಮೊದಲಿರುವುದರಿಂದ ಸೂತ್ರದಲ್ಲಿಯೂ ಅದರ ಉಲ್ಲೇಖವನ್ನೇ ಮಾಡಬೇಕಿತ್ತು. ವಸಂತ ಶಬ್ದವನ್ನು ಬಿಟ್ಟು 'ಜ್ಯೋತಿಃ' ಶಬ್ದವನ್ನು ಏಕೆ ಉಲ್ಲೇಖ ಮಾಡಿದ್ದಾರೆ?

ಉತ್ತರ - ಜ್ಯೋತಿಷ್ಟೋಮಯಾಗವು ವಿಶ್ವಜ್ಯೋತಿ, ಸರ್ವಜ್ಯೋತಿ ಮೊದಲಾದವುಗಳಿಗೆ ಪ್ರಕೃತಿಯಾಗವಾಗಿದೆ. ಮತ್ತು ಪ್ರಧಾನವಾದ ಜ್ಯೋತಿಷ್ಟೋಮಯಾಗದಲ್ಲಿ ಹವಿಸ್ಸನ್ನು ಹಾಕುವುದರಿಂದ ಮಹಾಫಲವು ದೊರೆಯುತ್ತದೆ. ದ್ರವ್ಯ, ದೇವತೆ ಮೊದಲಾದವುಗಳಿಗೆ ಮಹಾಫಲವಿರುವುದಿಲ್ಲ. ಹೀಗೆ ಜ್ಯೋತಿಷ್ಟೋಮ ಯಾಗವನ್ನು ಪ್ರತಿಪಾದನೆ ಮಾಡುವ 'ಜ್ಯೋತಿಃ' ಶಬ್ದವು ಅತ್ಯಂತ ಪ್ರಧಾನವಾದ್ದರಿಂದ ಪ್ರಧಾನವಾದದ್ದನ್ನು ಹೇಳಿ, ಅಪ್ರಧಾನವಾದದ್ದನ್ನು ಉಪಲಕ್ಷಣಯಾ ಸ್ವೀಕರಿಸಬೇಕೆಂಬ ದೃಷ್ಟಿಯಿಂದ ಸೂತ್ರಕಾರರು, ಪ್ರಥಮಪ್ರಾಪ್ತವಾದ ವಸಂತಶಬ್ದವನ್ನು ಬಿಟ್ಟು, ಅನಂತರ ಪ್ರಾಪ್ತವಾದ ಜ್ಯೋತಿಶಬ್ದವನ್ನೇ ಉಲ್ಲೇಖಿಸಿದ್ದಾರೆ.

**उपक्रमादिति पञ्चमी ल्यब्लोपनिमित्ता । अत एव सुधायां ''उपक्रमं विधाय'' इत्युक्तम् ।**

ಸೂತ್ರದಲ್ಲಿರುವ 'ಉಪಕ್ರಮಾತ್' ಎಂಬುದು ಲ್ಯಬ್ಲೋಪನಿಮಿತ್ತಿಕವಾದ ಪಂಚಮೀ ವಿಭಕ್ತಿಯಾಗಿದೆ. ಆದ್ದರಿಂದ 'ಉಪಕ್ರಮಂ ವಿಧಾಯ' ಎಂಬರ್ಥವನ್ನು ನ್ಯಾಯಸುಧೆಯಲ್ಲಿ ಹೇಳಿರುತ್ತಾರೆ. ಅಂದರೆ ಉಪಕ್ರಮವನ್ನು ಮಾಡಿದ ಕೂಡಲೇ ಎಂದರ್ಥ.

**द्वितीये बाधकोद्धारः । अत्र च ''कल्पनोपदेशात्'' इत्यस्य लोकतः क्लृप्ततत्तद्वाचित्वमबाधित्वैव लोकाक्लृप्तयोगवृत्तेः कल्पनया व्युत्पादनेन ब्रह्मणः सर्वशब्दवाच्यत्वेनोपदेशादिति वा ब्रह्मणः सर्वशब्दवाच्यत्वेन कल्पनाया = उपासनाया, उपदेशादिति वार्थः ।।**

'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬುದು ಎರಡನೆಯ ಸೂತ್ರ. ಈ ಸೂತ್ರದಲ್ಲಿ ಸ್ವಪಕ್ಷಸಾಧಕಪ್ರಮಾಣಗಳ ಮೇಲೆ ಬರುವ ಬಾಧಕಗಳನ್ನು ಪರಿಹರಿಸಲಾಗಿದೆ. ಆದ್ದರಿಂದ ಎರಡನೆಯ ಸ್ಥಾನವು ಇದಕ್ಕೆ ಯುಕ್ತವಾಗಿದೆ. ಈ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬುದರಿಂದ ಲೋಕತಃ ಪ್ರಸಿದ್ಧವಾದ ಅರ್ಥಗಳನ್ನೇ ಆಯಾ ಶಬ್ದಗಳು ಪ್ರತಿಪಾದನೆ ಮಾಡುತ್ತವೆಂದು ಒಪ್ಪಿ, ಲೋಕದಲ್ಲಿ ಪ್ರಸಿದ್ಧವಾಗದ ಯೋಗವೃತ್ತಿಯನ್ನು ಕಲ್ಪನೆ ಮಾಡುವ ಮೂಲಕ ಎಲ್ಲಾ ಶಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಸಮರ್ಥಿಸಲಾಗಿದೆ. ಹೀಗೆ ಸರ್ವಶಬ್ದವಾಚ್ಯತ್ವವನ್ನು ಬ್ರಹ್ಮನಲ್ಲಿ ಉಪಾಸನೆ ಮಾಡಬೇಕೆಂದು ಹೇಳಲಾಗಿದೆ. ಆದ್ದರಿಂದ ಕರ್ಮಕ್ರಮಾದಿಗಳ ವಿರೋಧವಾಗಲೀ, ಶಬ್ದವ್ಯುತ್ಪತ್ತಿಯ ವಿರೋಧವಾಗಲೀ ಬರುವುದಿಲ್ಲ.

## ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः –**

**आद्य इति ।।** ''ज्योतिरुपक्रमात्तु तथा ह्यधीयत एके'' इत्यत्र । ''ज्योतिष्टोमादि कर्मतदङ्गवाचकत्वेन प्रसिद्धज्योतिरादिशब्दाभिधेयो हरिरेव । यस्मादेके शाखिनस्तावा एता इति तथा सर्वशब्दाभिधेयत्वेन हरिमेवाधीयते'' इति टीकोक्तेः सर्वशब्दाभिधेयत्वेन 'अधीयमानत्वात्' इति साधकोक्तिपरत्वादाद्यत्वमित्यर्थः ।

ವಿವರಣೆ - ಜ್ಯೋತಿರುಪಕ್ರಮಾಧಿಕರಣದಲ್ಲಿ ಎರಡು ಸೂತ್ರಗಳಿವೆ. ಮೊದಲನೆಯದ್ದು 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬುದು. ಈ ಸೂತ್ರದಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಶ್ರುತಿಗಳಲ್ಲಿರುವ ಜ್ಯೋತಿರಾದಿಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಏಕೆಂದರೆ 'ತಂ ಯಚ್ಛತಮ್ ವರ್ಷಾರ್ಣ್ಯಭ್ಯಾರ್ಚತ್' ಇತ್ಯಾದಿ ಶ್ರುತಿಯಲ್ಲಿ ಜ್ಞಾನಿಜನರು ಎಲ್ಲ ಪದಗಳಿಂದ ವಿಷ್ಣುವನ್ನೇ ಪ್ರತಿಪಾದ್ಯನೆಂದು ತಿಳಿಯುತ್ತಾರೆಂದು ಸಾಧಕಪ್ರಮಾಣವನ್ನು ಹೇಳುತ್ತಾ ಸಮರ್ಥಿಸಲಾಗಿದೆ. ಈ ಅಧಿಕರಣದ ಟೀಕೆ ಹೀಗಿದೆ - 'ಜ್ಯೋತಿಷ್ಟೋಮಾದಿಕರ್ಮತದಂಗವಾಚಕತ್ವೇನ ಪ್ರಸಿದ್ಧಜ್ಯೋತಿರಾದಿ-ಶಬ್ದಾಭಿಧೇಯೋ ಹರಿರೇವ । ಯಸ್ಮಾದೇಕೇ ಶಾಖಿನಸ್ತಾವಾ ಏತಾ ಇತಿ ತಥಾ ಸರ್ವಶಬ್ದಾಭಿಧೇಯತ್ವೇನ ಹರಿಮೇವಾಧೀಯತೇ' ಜ್ಯೋತಿಷ್ಟೋಮಾದಿ ಕರ್ಮಗಳನ್ನು ಪ್ರತಿಪಾದನೆ ಮಾಡುವ ಮತ್ತು ಅವುಗಳ ಅಂಗಗಳನ್ನು ಪ್ರತಿಪಾದನೆ ಮಾಡುವ ಜ್ಯೋತಿರಾದಿ ಶಬ್ದಗಳಿಂದ ವಾಚ್ಯನಾದವನು ಶ್ರೀಹರಿಯೇ ಆಗಿದ್ದಾನೆ. ಏಕೆಂದರೆ ಆಯಾ ಶಾಖೆಯನ್ನು ಅಧ್ಯಯನ ಮಾಡುವ ಜ್ಞಾನಿಜನರು 'ತಾವಾ ಏತಾಃ' ಇತ್ಯಾದಿಯಾಗಿ ಶ್ರೀಹರಿಯನ್ನೇ ಸರ್ವಶಬ್ದಾಭಿಧೇಯನೆಂದು ಅಧ್ಯಯನ ಮಾಡುತ್ತಾರೆ. ಹೀಗೆ ಟೀಕೆಯಲ್ಲಿ ಸರ್ವಶಬ್ದಾಭಿಧೇಯನೆಂದು ಅಧ್ಯಯನ ಮಾಡುವುದರಿಂದ 'ಸರ್ವಶಬ್ದಾಭಿಧೇಯತ್ವೇನ ಅಧೀಯಮಾನತ್ವಾತ್' ಎಂಬ ಸಾಧಕಪ್ರಮಾಣವನ್ನು ಹೇಳಿರುತ್ತಾರೆ. ಮೊದಲು ಸಾಧಕಪ್ರಮಾಣವನ್ನು ಹೇಳುವುದು ಸಮಂಜಸವಾದ್ದರಿಂದ ಈ ಸೂತ್ರವನ್ನು ಮೊದಲು ನಿರ್ದೇಶಿಸಿದ್ದು ಅತ್ಯಂತ ಸಾಧುವಾಗಿದೆ.

**प्रकाशः –** ''ज्योतिश्शब्दस्याप्रथमपठितत्वेपि प्रधानकर्माभिधायकत्वात्तस्यैवा-न्योपलक्षकत्वसम्भवाच्च सङ्ग्रहः'' इति टीकावाक्यं व्यनक्ति – **तत्र यद्यपीति ।।**

ಶ್ರುತಿಯಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂದು ಕೇಳಿಸುತ್ತಿದೆ. ವಸಂತ ಶಬ್ದವೇ ಮೊದಲು ಶ್ರುತವಾಗಿದೆ ಹೊರತು, ಜ್ಯೋತಿಃ ಶಬ್ದವಲ್ಲ. ಆದ್ದರಿಂದ ಸೂತ್ರದಲ್ಲಿ ವಸಂತ ಶಬ್ದವನ್ನು ಬಿಟ್ಟು 'ಜ್ಯೋತಿಃ' ಶಬ್ದವನ್ನೇಕೆ ಉಲ್ಲೇಖಿಸಿದ್ದಾರೆ ಎಂದರೆ ಜ್ಯೋತಿಷ್ಟೋಮಯಾಗವು ಪ್ರಧಾನಕರ್ಮವಾಗಿದೆ. ಪ್ರಧಾನವಾದದ್ದನ್ನು ಹೇಳಿ, ಅಪ್ರಧಾನವಾದದ್ದನ್ನು ಉಪಲಕ್ಷಣಯಾ ಸ್ವೀಕರಿಸಬೇಕಾದ್ದರಿಂದ 'ಜ್ಯೋತಿಃ' ಶಬ್ದವನ್ನೇ ಉಲ್ಲೇಖಿಸಿದ್ದು ಸಾಧುವಾಗಿದೆ. ಇದನ್ನು 'ಜ್ಯೋತಿಃ ಶಬ್ದಸ್ಯಾಪ್ರಥಮಪಠಿತತ್ವೇಪಿ ಪ್ರಧಾನ-ಕರ್ಮಾಭಿಧಾಯಕತ್ವಾತ್ ತಸ್ಯೈವಾನ್ಯೋಪಲಕ್ಷಕತ್ವಸಂಭವಾಚ್ಚ ಸಂಗ್ರಹಃ' ಎಂಬ ಟೀಕೆಯಲ್ಲಿ ಹೇಳಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು 'ತತ್ರ ಯದ್ಯಪಿ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಾ ಇದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः** – टीकायामस्फुटत्वादाह – **उपक्रमादितीति** ।। ल्यब्लोपनिमित्ता पञ्चमी वाच्येति वार्तिकोक्तेरिति भावः ।

'ಜ್ಯೋತಿರುಪಕ್ರಮಾತ್' ಎಂಬುದಕ್ಕೆ ಟೀಕೆಯಲ್ಲಿ ಸ್ಪಷ್ಟವಾಗಿ ಅರ್ಥವು ತಿಳಿಯದ ಕಾರಣ. ಗ್ರಂಥಕಾರರು 'ಉಪಕ್ರಮಾದಿತಿ ಪಂಚಮೀ ಲ್ಯಬ್ಲೋಪನಿಮಿತ್ತ' ಎಂದು ಹೇಳಿದ್ದಾರೆ. ಉದಾಹರಣೆ 'ಪ್ರಾಸಾದಮಧಿರುಹ್ಯ ಪ್ರೇಕ್ಷ್ಯತೇ' ಎಂಬಲ್ಲಿ 'ಅಧಿರುಹ್ಯ' ಎಂಬ ಶಬ್ದವು ಲ್ಯಬಂತವಾಗಿದೆ. ಈ ಲ್ಯಬಂತವಾದ ಶಬ್ದದಿಂದ ವಾಚ್ಯವಾದ 'ಅಧಿರೋಹಣ' ಎಂಬ ಕ್ರಿಯೆಯಲ್ಲಿ ಪ್ರಾಸಾದವು ಕರ್ಮವಾಗಿದೆ. ಅಂತಹ ಪ್ರಾಸಾದಕ್ಕೆ ವಾಚಕವಾದ ಪ್ರಾಸಾದಶಬ್ದದ ಮೇಲೆ ಪಂಚಮೀವಿಭಕ್ತಿಯು ಬಂದು 'ಪ್ರಾಸಾದಾತ್ ಪ್ರೇಕ್ಷ್ಯತೇ' ಎಂದು ಪ್ರಯೋಗಿಸುವುದು ಲೋಕದಲ್ಲಿ ಕಂಡಿದೆ. ಇದನ್ನು ಲ್ಯಬ್ಲೋಪನಿಮಿತ್ತ ಪಂಚಮೀ ಎನ್ನುತ್ತಾರೆ. ಆದರಂತೆ ಸೂತ್ರದಲ್ಲಿಯೂ ಕೂಡ 'ಉಪಕ್ರಮಂ ವಿಧಾಯ ಅಧೀಯತೇ' ಎಂದು ಹೇಳಬೇಕಿತ್ತು. ಇಲ್ಲಿಯೂ ಕೂಡ ಲ್ಯಬಂತವಾದ ವಿಧಾಯ ಎಂಬ ಶಬ್ದವು ಲೋಪವಾಗಿ, ತತ್ಪ್ರತಿಪಾದ್ಯವಾದ ಕ್ರಿಯೆಯಲ್ಲಿ ಕರ್ಮವಾಗಿರುವ ಉಪಕ್ರಮಕ್ಕೆ ವಾಚಕವಾದ ಶಬ್ದದ ಮೇಲೆ ಪಂಚಮೀವಿಭಕ್ತಿಯು ಬಂದು 'ಉಪಕ್ರಮಾತ್' ಎಂದು ನಿಷ್ಪನ್ನವಾಗಿದೆ. ಆದ್ದರಿಂದ ಸೂತ್ರದಲ್ಲಿರುವ 'ಉಪಕ್ರಮಾತ್' ಎಂಬ ಪದಕ್ಕೆ 'ಉಪಕ್ರಮಂ ವಿಧಾಯ' ಎಂದರ್ಥ.

**प्रकाशः** – द्वितीये 'कल्पनोपदेशाच्च मध्वादिवदविरोधः' इत्यत्र कर्मक्रमादिविरोधाद् व्युत्पत्त्यसम्भवाच्च न ज्योतिरादिशब्दार्थत्वं विष्णोरिति शङ्कानिवर्तकतया टीकायामवतारितत्वादिति भावः । टीकोक्तमर्थद्वयं कल्पनाशब्दारूढतया दर्शयति – **तत्र चेति** ।।

'ದ್ವಿತೀಯೇ' ಎಂದರೆ 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಎರಡನೆಯ ಸೂತ್ರದಲ್ಲಿ ಬಾಧಕವನ್ನು ಪರಿಹರಿಸಿದ್ದಾರೆ ಎಂದರ್ಥ. ಒಂದುವೇಳೆ ಎಲ್ಲಾ ಶಬ್ದಗಳಿಂದಲೂ ಶ್ರೀಹರಿಯೇ ಪ್ರತಿಪಾದ್ಯನಾದರೆ ಕರ್ಮಗಳ ಕ್ರಮವೂ ಅನುಪಪನ್ನವಾಗುತ್ತವೆ. ಮತ್ತು ಯಾವುದೇ ಶಬ್ದಗಳ ವ್ಯುತ್ಪತ್ತಿಯೂ ಕೂಡ ಉಪಪನ್ನವಾಗುವುದಿಲ್ಲ. ಆದ್ದರಿಂದ 'ಜ್ಯೋತಿಃ' ಮೊದಲಾದ ಎಲ್ಲಾ ಶಬ್ದಗಳಿಂದ ವಿಷ್ಣು ಪ್ರತಿಪಾದ್ಯನಾಗಲಾರನು ಎಂಬ ಬಾಧಕವು ಪ್ರಾಪ್ತವಾದರೆ ಅದಕ್ಕೆ ಪರಿಹಾರಕವಾಗಿ ಎರಡನೆಯ ಸೂತ್ರವು ಹೊರಟಿರುತ್ತದೆಂದು ಟೀಕೆಯಲ್ಲಿ ಅವತಾರಿಕೆಯನ್ನು ನೀಡಿದ್ದಾರೆ. ಟೀಕೆಯಲ್ಲಿ ಹೇಳಿದ ಎರಡು ಅರ್ಥಗಳು ಸೂತ್ರದಲ್ಲಿರುವ ಕಲ್ಪನಾಶಬ್ದದಿಂದಲೇ ತಿಳಿಯುತ್ತಿದೆಯೆಂದು ಪ್ರಕೃತ ಗ್ರಂಥಕಾರರು 'ತತ್ರ ಚ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ.

**प्रकाशः** – नन्वस्य सूत्रस्य कथमत्र निवेशः? ज्योतिरादिशब्दानां भगवद्वाचित्वे कर्मक्रमादिविरोध इव पूर्वत्र देवतातारतम्यस्यासिद्धिः उत्तरत्र च

**देहतदन्तर्गतप्राणादेः, भूतोत्पत्तेः प्रकृत्यादेरसिद्धिरिति बाधकस्य चानेनैव परिहार्यत्वेन सर्वशेषतयैतत्पादस्यादावन्ते वा निवेशस्योचितत्वात् ।**

ಪ್ರಶ್ನೆ - 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಎರಡನೆಯ ಸೂತ್ರವನ್ನು ಇಲ್ಲಿಯೇ ಏಕೆ ನಿವೇಶ ಮಾಡಿದ್ದಾರೆ? ಏಕೆಂದರೆ ಜ್ಯೋತಿರಾದಿಶಬ್ದಗಳೆಲ್ಲವೂ ಭಗವಂತನನ್ನೇ ಪ್ರತಿಪಾದನೆ ಮಾಡುವುದಾದರೆ 'ಕರ್ಮಕ್ರಮದ ವಿರೋಧ', 'ವ್ಯುತ್ಪತ್ತಿವಿರೋಧ' ಮೊದಲಾದ ದೋಷಗಳು ಬರುತ್ತವೆ. ಅದನ್ನು ಪರಿಹರಿಸಲು ಈ ಎರಡನೆಯ ಸೂತ್ರವು ಹೊರಟಿದೆಯೆಂದು ಉತ್ತರಿಸಬೇಕು. ಆದರೆ ಇಂತಹ ಆಕ್ಷೇಪಗಳು ಹಿಂದಿನ-ಮುಂದಿನ ಅಧಿಕರಣಗಳಲ್ಲಿಯೂ ಕೂಡ ಪ್ರಸಕ್ತವಾಗಿವೆ. ಏಕೆಂದರೆ ಸಕಲಶಬ್ದಗಳು ಶ್ರೀಹರಿಯ ನಾಮಗಳೇ ಆದಲ್ಲಿ ಹಿಂದಿನ ಅಧಿಕರಣದಲ್ಲಿ ದೇವತಾತಾರತಮ್ಯವನ್ನು ಸಮರ್ಥಿಸಲಾಗಿದೆ. ಮುಂದೆಯೂ ಕೂಡ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಮತ್ತು 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರದಲ್ಲಿ ದೇಹ ತದಂಗರ್ಗತವಾದ ಪ್ರಾಣಾದಿಗಳ ಬಗ್ಗೆ, ಭೂತೋತ್ಪತ್ತಿಯ ಬಗ್ಗೆ, ಪ್ರಕೃತ್ಯಾದಿಗಳ ಬಗ್ಗೆ ಹೇಳಿದ್ದೂ ಕೂಡ ತಪ್ಪಾಗಬೇಕಾದೀತು. ಏಕೆಂದರೆ ಎಲ್ಲವೂ ಕೂಡ ಶ್ರೀಹರಿಯ ನಾಮಗಳೇ ಆದಲ್ಲಿ ದೇಹಾದಿಗಳ ಪ್ರತಿಪಾದನೆಯೇ ಇಲ್ಲವೆಂದಾಗುತ್ತದಲ್ಲವೇ? ಎಂಬ ಬಾಧಕಕ್ಕೂ ಕೂಡ ಈ ಎರಡನೆಯ ಸೂತ್ರವೇ ಉತ್ತರವನ್ನು ನೀಡುತ್ತದೆ. ಬೇರೆ ಪದಾರ್ಥಗಳಲ್ಲಿ ಕೇವಲ ಅವಾಂತರತಾತ್ಪರ್ಯವಿರುತ್ತದೆ. ಶ್ರೀಹರಿಯಲ್ಲಿ ಮುಖ್ಯತಾತ್ಪರ್ಯವಿರುತ್ತದೆ ಎಂದು ಹೇಳಿದಾಗ, ಹಿಂದಿನ-ಮುಂದಿನ ಅಧಿಕರಣದ ಮೇಲೆ ಬರುವ ಎಲ್ಲಾ ಸಮಸ್ಯೆಗಳಿಗೂ ಉತ್ತರ ನೀಡಿದಂತಾಗುತ್ತದೆ. ಆದ್ದರಿಂದ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರವು ಪ್ರಥಮಸೂತ್ರದ ಮೇಲೆ ಬರುವ ಬಾಧಕಕ್ಕೆ ಮಾತ್ರ ಪರಿಹಾರಕವಲ್ಲ. ಇನ್ನೂ ಅನೇಕ ಸೂತ್ರಗಳ ಮೇಲೆ ಬರುವ ಬಾಧಕಗಳಿಗೂ ಪರಿಹಾರಕವಾಗಿದೆ. ಆದ್ದರಿಂದ ಈ ಸೂತ್ರವನ್ನು ನಾಲ್ಕನೆಯ ಪಾದದ ಆದಿಯಲ್ಲೋ, ಅಥವಾ ಕೊನೆಯಲ್ಲೋ ನಿವೇಶ ಮಾಡಬೇಕಲ್ಲವೇ?

**प्रकाशः – सत्यम् । अत्र कल्पनेतिसूत्राभावेऽन्यत्र रूढेरसिद्ध्या ज्योतिरादिशब्दानामवयवरूढेरभावेन व्युत्पत्त्यनुपपत्त्या विवक्षितसर्वसमन्वयोऽत्र न सिद्ध्येदिति सिद्धान्तानुत्थितिरेव स्यात् ।**

ಉತ್ತರ - ಹೌದು. ಆದರೆ ಇಲ್ಲಿ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರವನ್ನು ಹೇಳದಿದ್ದರೆ ಬೇರೆ ಪದಾರ್ಥಗಳಲ್ಲಿ ಶಬ್ದಗಳಿಗೆ ರೂಢಿಯಿದೆ ಎಂಬುದೇ ಸಿದ್ಧವಾಗುತ್ತಿರಲಿಲ್ಲ. ಆವಾಗ ಜ್ಯೋತಿರಾದಿಶಬ್ದಗಳ ಅವಯವಗಳಿಗೆ ರೂಢಿಯೇ ಇಲ್ಲದ ಕಾರಣ ವ್ಯುತ್ಪತ್ತಿಯನ್ನು ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಿವಕ್ಷಿತವಾದ ಸಕಲಪದಗಳ ಸಮನ್ವಯವು ಈ ಅಧಿಕರಣದಿಂದ ಸಿದ್ಧವೇ ಆಗುತ್ತಿರಲಿಲ್ಲ. ಆದ್ದರಿಂದಲೇ ಸಿದ್ಧಾಂತವೂ ಕೂಡ ಉತ್ಥಾನವಾಗುತ್ತಿರಲಿಲ್ಲ. ಅದಕ್ಕೋಸ್ಕರ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರವನ್ನು ಈ ಅಧಿಕರಣದಲ್ಲೇ ನಿವೇಶ ಮಾಡಲಾಗಿದೆ. ಈ ಸೂತ್ರವು ಬೇರೆ ಪದಾರ್ಥಗಳಲ್ಲಿ ಶಬ್ದಗಳಿಗೆ ಅವಾಂತರತಾತ್ಪರ್ಯವಿದೆ ಎಂದು ಸಮರ್ಥನೆ ಮಾಡುತ್ತಿರುವುದರಿಂದ ಜ್ಯೋತಿರಾದಿಶಬ್ದಗಳ ಅವಯವವು ಅನ್ಯತ್ರರೂಢವಾಗುತ್ತವೆ. ಆವಾಗ ವ್ಯುತ್ಪತ್ತಿಬಲದಿಂದ ಜ್ಯೋತಿರಾದಿಶಬ್ದಗಳ ಸಮನ್ವಯವನ್ನು ಶ್ರೀಹರಿಯಲ್ಲಿ

ಮಾಡುವುದು ಸಮಂಜಸವಾಗುತ್ತದೆ. ಅದಕ್ಕೋಸ್ಕರ ಬೇರೆ ಕಡೆ ಸೂತ್ರವನ್ನು ಉಲ್ಲೇಖ ಮಾಡದೇ ಇಲ್ಲಿಯೇ ಉಲ್ಲೇಖಿಸಿದ್ದಾರೆ.

**प्रकाशः** – अत एवोक्तं टीकायां ''व्युत्पत्त्यसम्भवाच्च'' इत्येतदवतारिकायाम् । तथा चैतस्य सर्वसाधारण्येऽप्युक्तरीत्या तच्छेषत्वेन निवेशो युक्त इति भावः ।

ಆದ್ದರಿಂದಲೇ ಟೀಕೆಯಲ್ಲಿ 'ವ್ಯುತ್ಪತ್ತ್ಯಸಂಭವಾಚ್ಚ' ಎಂಬ ಶ್ರೀಮದಾಚಾರ್ಯರ ಮಾತಿಗೆ ಅವತಾರಿಕೆ ನೀಡುವಾಗ 'ತಥಾ ಚೈತಸ್ಯ ಸರ್ವಸಾಧಾರಣ್ಯೇऽಪ್ಯುಕ್ತರೀತ್ಯಾ ತಚ್ಛೇಷತ್ವೇನ ನಿವೇಶೋ ಯುಕ್ತಃ' ಎಂದು ಹೇಳಿರುತ್ತಾರೆ. ಸೂತ್ರವು ಸರ್ವಸಾಧಾರಣವಾಗಿದ್ದರೂ ವ್ಯುತ್ಪತ್ತಿಯು ಯುಕ್ತವಾಗದ ಕಾರಣ ಪ್ರಥಮಸೂತ್ರದ ಶೇಷವನ್ನಾಗಿಯೇ ಇಲ್ಲಿ ನಿವೇಶ ಮಾಡಿದ್ದಾರೆ ಎಂದು ಇದರ ಅಭಿಪ್ರಾಯ.

**प्रकाशः** – यदत्र केनचित् रामानुजमतानुवर्तिनोक्तं 'उपक्रमात्' इत्यपपाठः । 'ब्रह्मोपक्रम्य, अधीयते' इति ब्रह्मपदाध्याहारश्चाद्यसूत्रे दोषः ।

ಈ ಅಧಿಕರಣದ ಎರಡು ಸೂತ್ರಗಳ ವಿಷಯದಲ್ಲಿ ಪರವಾದಿಗಳು ಬೇರೆ ಅಭಿಪ್ರಾಯವನ್ನೇ ಹೊಂದಿದ್ದಾರೆ. ರಾಮಾನುಜಮತದ ಅನುಸಾರಿಗಳಾದ ಕೆಲವರು 'ಉಪಕ್ರಮಾತ್' ಎಂಬುದು ಅಪಪಾಠವಾಗಿದೆ. 'ಉಪಕ್ರಮಂ' ಎಂಬುದು ಮತ್ತು 'ಬ್ರಹ್ಮ ಉಪಕ್ರಮ್ಯ ಅಧೀಯತೇ' ಎಂಬುದಾಗಿ ತತ್ವವಾದಿಗಳು ಬ್ರಹ್ಮಪದದ ಅಧ್ಯಾಹಾರವನ್ನೂ ಕೂಡ ಪ್ರಥಮಸೂತ್ರದಲ್ಲಿ ಮಾಡಿಕೊಳ್ಳಬೇಕು. ಹೀಗೆ ಎರಡು ದೋಷವಿದೆ ಎಂದು ಹೇಳುತ್ತಾರೆ.

**प्रकाशः** – द्वितीये ''कल्पनोपदेशात्'' इति व्यर्थम् । लोकक्लृप्तार्थान्तरवाचित्व-विरोधस्य हेतुत्वेन पूर्वसूत्रसिद्धार्थानुवदरूपस्यास्याविरोधहेत्वर्थानुपस्थापकत्वात्।

ಎರಡನೆಯ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬ ಪದವೇ ವ್ಯರ್ಥ. ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಸಿದ್ಧವಾದ ಯಾವ ಗುಣಗಳಿವೆಯೋ, ಅಂತಹ ಗುಣಗಳಿಂದ ಶ್ರೀಹರಿಯ ಉಪಾಸನೆಯನ್ನು ವಿಧಿಸುತ್ತದೆ. ಆದರೆ ಪದಗಳಿಗೆ ಲೋಕದಲ್ಲಿ ಕ್ಲೃಪ್ತವಾದ ಅರ್ಥಾಂತರವಾಚಿತ್ವವೂ ಕೂಡ ಇರುವುದರಿಂದ ವಿರೋಧವಿಲ್ಲ ಎನ್ನಲು ಇದು ಕಾರಣವಾಗುವುದಿಲ್ಲ. ಮತ್ತು ಹಿಂದಿನ ಸೂತ್ರದಿಂದ ಸಿದ್ಧವಾದ ಅರ್ಥವನ್ನೇ ಅನುವಾದ ಮಾಡುತ್ತಿದೆ. ಹೀಗಿರುವಾಗ ಈ ಪದಕ್ಕೆ ಕೃತ್ಯವೇ ಇರುವುದಿಲ್ಲ.

**प्रकाशः** – दृष्टान्तश्चायुक्तः । मधुशब्दस्य मधुसदृशपरतया मधुपरत्वाभावादिति

ಎರಡನೆಯ ಸೂತ್ರದಲ್ಲಿ ಹೇಳಿದ ದೃಷ್ಟಾಂತವೂ ಅಯುಕ್ತ. 'ಮಧ್ವಾದಿವತ್' ಎಂಬುದಕ್ಕೆ 'ಮಧುವಿದ್ಯಾದಿಗಳಲ್ಲಿರುವ ಮಧು, ರಶ್ಮಿ ಮೊದಲಾದ ಶಬ್ದಗಳು ಯಾವರೀತಿಯಾಗಿ ಎರಡು ಅರ್ಥಗಳನ್ನು ನೀಡುತ್ತವೆಯೋ' ಎಂಬರ್ಥವನ್ನು ಹೇಳುತ್ತೀರಿ. ಇದೂ ಸಹ ತಪ್ಪು. ಏಕೆಂದರೆ ಮಧುಶಬ್ದವು ಮಧುಸದೃಶವಾದದ್ದನ್ನೇ ಹೇಳುತ್ತದೆ ಹೊರತು, ಮಧು ಎಂಬರ್ಥವನ್ನು ಹೇಳುವುದಿಲ್ಲ.

ಜ್ಯೋತಿರುಪಕ್ರಮಾಧಿಕರಣ (1-4-2)

**देहतदन्तर्गतप्राणादेः, भूतोत्पत्तेः प्रकृत्यादेरसिद्धिरिति बाधकस्य चानेनैव परिहार्यत्वेन सर्वशेषतयैतत्पादस्यादावन्ते वा निवेशस्योचितत्वात् ।**

ಪ್ರಶ್ನೆ - 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬ ಎರಡನೆಯ ಸೂತ್ರವನ್ನು ಇಲ್ಲಿಯೇ ಏಕೆ ನಿವೇಶ ಮಾಡಿದ್ದಾರೆ? ಏಕೆಂದರೆ ಜ್ಯೋತಿರಾದಿಶಬ್ದಗಳೆಲ್ಲವೂ ಭಗವಂತನನ್ನೇ ಪ್ರತಿಪಾದನೆ ಮಾಡುವುದಾದರೆ 'ಕರ್ಮಕ್ರಮದ ವಿರೋಧ', 'ವ್ಯುತ್ಪತ್ತಿವಿರೋಧ' ಮೊದಲಾದ ದೋಷಗಳು ಬರುತ್ತವೆ. ಅದನ್ನು ಪರಿಹರಿಸಲು ಈ ಎರಡನೆಯ ಸೂತ್ರವು ಹೊರಟಿದೆಯೆಂದು ಉತ್ತರಿಸಬೇಕು. ಆದರೆ ಇಂತಹ ಆಕ್ಷೇಪಗಳು ಹಿಂದಿನ-ಮುಂದಿನ ಅಧಿಕರಣಗಳಲ್ಲಿಯೂ ಕೂಡ ಪ್ರಸಕ್ತವಾಗಿವೆ. ಏಕೆಂದರೆ ಸಕಲಶಬ್ದಗಳು ಶ್ರೀಹರಿಯ ನಾಮಗಳೇ ಆದಲ್ಲಿ ಹಿಂದಿನ ಅಧಿಕರಣದಲ್ಲಿ ದೇವತಾತಾರತಮ್ಯವನ್ನು ಸಮರ್ಥಿಸಲಾಗಿದೆ. ಮುಂದೆಯೂ ಕೂಡ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಮತ್ತು 'ಕಾರಣತ್ವೇನ ಚ ಆಕಾಶಾದಿಷು' ಎಂಬ ಸೂತ್ರದಲ್ಲಿ ದೇಹ ತದಂಗರ್ತವಾದ ಪ್ರಾಣಾದಿಗಳ ಬಗ್ಗೆ, ಭೂತೋತ್ಪತ್ತಿಯ ಬಗ್ಗೆ, ಪ್ರಕೃತ್ಯಾದಿಗಳ ಬಗ್ಗೆ ಹೇಳಿದ್ದೂ ಕೂಡ ತಪ್ಪಾಗಬೇಕಾದೀತು. ಏಕೆಂದರೆ ಎಲ್ಲವೂ ಕೂಡ ಶ್ರೀಹರಿಯ ನಾಮಗಳೇ ಆದಲ್ಲಿ ದೇಹಾದಿಗಳ ಪ್ರತಿಪಾದನೆಯೇ ಇಲ್ಲವೆಂದಾಗುತ್ತದಲ್ಲವೇ? ಎಂಬ ಬಾಧಕಕ್ಕೂ ಕೂಡ ಈ ಎರಡನೆಯ ಸೂತ್ರವೇ ಉತ್ತರವನ್ನು ನೀಡುತ್ತದೆ. ಬೇರೆ ಪದಾರ್ಥಗಳಲ್ಲಿ ಕೇವಲ ಅವಾಂತರತಾತ್ಪರ್ಯವಿರುತ್ತದೆ. ಶ್ರೀಹರಿಯಲ್ಲಿ ಮುಖ್ಯತಾತ್ಪರ್ಯವಿರುತ್ತದೆ ಎಂದು ಹೇಳಿದಾಗ, ಹಿಂದಿನ-ಮುಂದಿನ ಅಧಿಕರಣದ ಮೇಲೆ ಬರುವ ಎಲ್ಲಾ ಸಮಸ್ಯೆಗಳಿಗೂ ಉತ್ತರ ನೀಡಿದಂತಾಗುತ್ತದೆ. ಆದ್ದರಿಂದ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರವು ಪ್ರಥಮಸೂತ್ರದ ಮೇಲೆ ಬರುವ ಬಾಧಕಕ್ಕೆ ಮಾತ್ರ ಪರಿಹಾರಕವಲ್ಲ. ಇನ್ನೂ ಅನೇಕ ಸೂತ್ರಗಳ ಮೇಲೆ ಬರುವ ಬಾಧಕಗಳಿಗೂ ಪರಿಹಾರಕವಾಗಿದೆ. ಆದ್ದರಿಂದ ಈ ಸೂತ್ರವನ್ನು ನಾಲ್ಕನೆಯ ಪಾದದ ಆದಿಯಲ್ಲೋ, ಅಥವಾ ಕೊನೆಯಲ್ಲೋ ನಿವೇಶ ಮಾಡಬೇಕಲ್ಲವೇ?

**प्रकाशः – सत्यम् । अत्र कल्पनेतिसूत्राभावेऽन्यत्र रूढेरसिद्ध्या ज्योतिरादिशब्दानामवयवरूढेरभावेन व्युत्पत्त्यनुपपत्त्या विवक्षितसर्वसमन्वयोऽत्र न सिद्ध्येदिति सिद्धान्तानुत्थितिरेव स्यात् ।**

ಉತ್ತರ - ಹೌದು. ಆದರೆ ಇಲ್ಲಿ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರವನ್ನು ಹೇಳದಿದ್ದರೆ ಬೇರೆ ಪದಾರ್ಥಗಳಲ್ಲಿ ಶಬ್ದಗಳಿಗೆ ರೂಢಿಯಿದೆ ಎಂಬುದೇ ಸಿದ್ಧವಾಗುತ್ತಿರಲಿಲ್ಲ. ಆವಾಗ ಜ್ಯೋತಿರಾದಿಶಬ್ದಗಳ ಅವಯವಗಳಿಗೆ ರೂಢಿಯೇ ಇಲ್ಲದ ಕಾರಣ ವ್ಯುತ್ಪತ್ತಿಯನ್ನು ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಿವಕ್ಷಿತವಾದ ಸಕಲಪದಗಳ ಸಮನ್ವಯವು ಈ ಅಧಿಕರಣದಿಂದ ಸಿದ್ಧವೇ ಆಗುತ್ತಿರಲಿಲ್ಲ. ಆದ್ದರಿಂದಲೇ ಸಿದ್ಧಾಂತವೂ ಕೂಡ ಉತ್ಥಾನವಾಗುತ್ತಿರಲಿಲ್ಲ. ಅದಕ್ಕೋಸ್ಕರ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರವನ್ನು ಈ ಅಧಿಕರಣದಲ್ಲೇ ನಿವೇಶ ಮಾಡಲಾಗಿದೆ. ಈ ಸೂತ್ರವು ಬೇರೆ ಪದಾರ್ಥಗಳಲ್ಲಿ ಶಬ್ದಗಳಿಗೆ ಅವಾಂತರತಾತ್ಪರ್ಯವಿದೆ ಎಂದು ಸಮರ್ಥನೆ ಮಾಡುತ್ತಿರುವುದರಿಂದ ಜ್ಯೋತಿರಾದಿಶಬ್ದಗಳ ಅವಯವವು ಅನ್ಯತ್ರರೂಢವಾಗುತ್ತವೆ. ಆವಾಗ ವ್ಯುತ್ಪತ್ತಿಬಲದಿಂದ ಜ್ಯೋತಿರಾದಿಶಬ್ದಗಳ ಸಮನ್ವಯವನ್ನು ಶ್ರೀಹರಿಯಲ್ಲಿ

ಮಾಡುವುದು ಸಮಂಜಸವಾಗುತ್ತದೆ. ಅದಕ್ಕೋಸ್ಕರ ಬೇರೆ ಕಡೆ ಸೂತ್ರವನ್ನು ಉಲ್ಲೇಖ ಮಾಡದೇ ಇಲ್ಲಿಯೇ ಉಲ್ಲೇಖಿಸಿದ್ದಾರೆ.

**प्रकाशः** – अत एवोक्तं टीकायां ''व्युत्पत्त्यसम्भवाच्च'' इत्येतदवतारिकायाम् । तथा चैतस्य सर्वसाधारण्येऽप्युक्तरीत्या तच्छेषत्वेन निवेशो युक्त इति भावः ।

ಆದ್ದರಿಂದಲೇ ಟೀಕೆಯಲ್ಲಿ 'ವ್ಯುತ್ಪತ್ತ್ಯಸಂಭವಾಚ್ಚ' ಎಂಬ ಶ್ರೀಮದಾಚಾರ್ಯರ ಮಾತಿಗೆ ಅವತಾರಿಕೆ ನೀಡುವಾಗ 'ತಥಾ ಚೈತಸ್ಯ ಸರ್ವಸಾಧಾರಣ್ಯೇಽಪ್ಯುಕ್ತರೀತ್ಯಾ ತಚ್ಛೇಷತ್ವೇನ ನಿವೇಶೋ ಯುಕ್ತಃ' ಎಂದು ಹೇಳಿರುತ್ತಾರೆ. ಸೂತ್ರವು ಸರ್ವಸಾಧಾರಣವಾಗಿದ್ದರೂ ವ್ಯುತ್ಪತ್ತಿಯು ಯುಕ್ತವಾಗದ ಕಾರಣ ಪ್ರಥಮಸೂತ್ರದ ಶೇಷವನ್ನಾಗಿಯೇ ಇಲ್ಲಿ ನಿವೇಶ ಮಾಡಿದ್ದಾರೆ ಎಂದು ಇದರ ಅಭಿಪ್ರಾಯ.

**प्रकाशः** – यदत्र केनचित् रामानुजमतानुवर्तिनोक्तं 'उपक्रमात्' इत्यपपाठः । 'ब्रह्मोपक्रम्य, अधीयते' इति ब्रह्मपदाध्याहारश्चाद्यसूत्रे दोषः ।

ಈ ಅಧಿಕರಣದ ಎರಡು ಸೂತ್ರಗಳ ವಿಷಯದಲ್ಲಿ ಪರವಾದಿಗಳು ಬೇರೆ ಅಭಿಪ್ರಾಯವನ್ನೇ ಹೊಂದಿದ್ದಾರೆ. ರಾಮಾನುಜಮತದ ಅನುಸಾರಿಗಳಾದ ಕೆಲವರು 'ಉಪಕ್ರಮಾತ್' ಎಂಬುದು ಅಪಪಾಠವಾಗಿದೆ. 'ಉಪಕ್ರಮಂ' ಎಂಬುದು ಮತ್ತು 'ಬ್ರಹ್ಮ ಉಪಕ್ರಮ್ಯ ಅಧೀಯತೇ' ಎಂಬುದಾಗಿ ತತ್ವವಾದಿಗಳು ಬ್ರಹ್ಮಪದದ ಅಧ್ಯಾಹಾರವನ್ನೂ ಕೂಡ ಪ್ರಥಮಸೂತ್ರದಲ್ಲಿ ಮಾಡಿಕೊಳ್ಳಬೇಕು. ಹೀಗೆ ಎರಡು ದೋಷವಿದೆ ಎಂದು ಹೇಳುತ್ತಾರೆ.

**प्रकाशः** – द्वितीये ''कल्पनोपदेशात्'' इति व्यर्थम् । लोकक्लृप्तार्थान्तरवाचित्व-विरोधस्य हेतुत्वेन पूर्वसूत्रसिद्धार्थानुवदरूपस्यास्याविरोधहेत्वर्थानुपस्थापकत्वात्।

ಎರಡನೆಯ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬ ಪದವೇ ವ್ಯರ್ಥ. ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಸಿದ್ಧವಾದ ಯಾವ ಗುಣಗಳಿವೆಯೋ, ಅಂತಹ ಗುಣಗಳಿಂದ ಶ್ರೀಹರಿಯ ಉಪಾಸನೆಯನ್ನು ವಿಧಿಸುತ್ತದೆ. ಆದರೆ ಪದಗಳಿಗೆ ಲೋಕದಲ್ಲಿ ಕ್ಲೃಪ್ತವಾದ ಅರ್ಥಾಂತರವಾಚಿತ್ವವೂ ಕೂಡ ಇರುವುದರಿಂದ ವಿರೋಧವಿಲ್ಲ ಎನ್ನಲು ಇದು ಕಾರಣವಾಗುವುದಿಲ್ಲ. ಮತ್ತು ಹಿಂದಿನ ಸೂತ್ರದಿಂದ ಸಿದ್ಧವಾದ ಅರ್ಥವನ್ನೇ ಅನುವಾದ ಮಾಡುತ್ತಿದೆ. ಹೀಗಿರುವಾಗ ಈ ಪದಕ್ಕೆ ಕೃತ್ಯವೇ ಇರುವುದಿಲ್ಲ.

**प्रकाशः** – दृष्टान्तश्चायुक्तः । मधुशब्दस्य मधुसदृशपरतया मधुपरत्वाभावादिति

ಎರಡನೆಯ ಸೂತ್ರದಲ್ಲಿ ಹೇಳಿದ ದೃಷ್ಟಾಂತವೂ ಅಯುಕ್ತ. 'ಮಧ್ವಾದಿವತ್' ಎಂಬುದಕ್ಕೆ 'ಮಧುವಿದ್ಯಾದಿಗಳಲ್ಲಿರುವ ಮಧು, ರಶ್ಮಿ ಮೊದಲಾದ ಶಬ್ದಗಳು ಯಾವರೀತಿಯಾಗಿ ಎರಡು ಅರ್ಥಗಳನ್ನು ನೀಡುತ್ತವೆಯೋ' ಎಂಬರ್ಥವನ್ನು ಹೇಳುತ್ತೀರಿ. ಇದೂ ಸಹ ತಪ್ಪು. ಏಕೆಂದರೆ ಮಧುಶಬ್ದವು ಮಧುಸದೃಶವಾದದ್ದನ್ನೇ ಹೇಳುತ್ತದೆ ಹೊರತು, ಮಧು ಎಂಬರ್ಥವನ್ನು ಹೇಳುವುದಿಲ್ಲ.

ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः** – तन्न । 'ज्योतिरुपक्रम्' इत्येव सुपाठः 'उपक्रमादित्यपपाठः' इत्यस्यार्वाचीनेन त्वया निर्णेतुमशक्यत्वात् । प्रत्युत ''दशप्रमतिम्'' इत्यादि-श्रुत्यादिना सर्वज्ञत्वेन प्रमितास्मदाचार्योक्तपाठस्यैव सुपाठत्वेनानीदृशत्वद्भाष्य-कारोक्तपाठस्यैवापपाठत्वात् । त्वद्भाष्यकारस्य स्खलितवाक्त्वस्य प्रतिसूत्रं ग्रन्थकृता प्रदर्शितत्वात् । त्वदुक्तास्मदाचार्योक्तिस्खालित्यस्यासम्बद्धतायाः प्रदर्शितत्वात् ।

ಈ ವಿಚಾರವು ಅತ್ಯಂತ ಅಸಾಧುವಾಗಿದೆ. ಏಕೆಂದರೆ 'ಜ್ಯೋತಿರುಪಕ್ರಮಂ' ಎಂಬುದೇ ಸರಿಯಾದ ಪಾಠ. 'ಉಪಕ್ರಮಾತ್' ಎಂಬುದು ಅಪಪಾಠವೆಂದು ಹೇಗೆ ನಿರ್ಣಯಿಸುತ್ತಿ? ಧೃತರಾಷ್ಟ್ರ ಹುಟ್ಟುವುದಕ್ಕಿಂತ ಆರುನೂರು ವರ್ಷಗಳ ಮೊದಲೇ ವೇದವ್ಯಾಸದೇವರು ವೇದವನ್ನು ವಿಭಾಗ ಮಾಡಿ, ಮಹಾಭಾರತ, ಪುರಾಣ, ಭಾಗವತ ಮೊದಲಾದ ಗ್ರಂಥಗಳನ್ನು ನಿರ್ಮಾಣ ಮಾಡಿ, ಬ್ರಹ್ಮಸೂತ್ರಗಳನ್ನೂ ಕೂಡ ರಚನೆ ಮಾಡಿದ್ದರು. ಕಲಿಯುಗದಲ್ಲಿ ಈಗ ಹುಟ್ಟಿದ ನೀನು ಸೂತ್ರಕಾರರ ಅಭಿಪ್ರಾಯವನ್ನು ಹೇಗೆ ನಿರ್ಣಯಿಸುತ್ತಿ? ವೇದವ್ಯಾಸದೇವರು 'ಉಪಕ್ರಮಂ' ಎಂದೇ ಬರೆದಿದ್ದಾರೆಂದು ಆಗ್ರಹಿಸಲು ನಿನಗೆ ಅಧಿಕಾರವಿಲ್ಲ. ಹೊರತಾಗಿ 'ದಶಪ್ರಮತಿಮ್ ಜನಯಂತ ಯೋಷಣಃ' ಇತ್ಯಾದಿ ಶ್ರುತಿ ಸಾರುವಂತೆ ಸರ್ವಜ್ಞರೆಂದು ಪ್ರಮಾಣಸಿದ್ಧರಾದ ಶ್ರೀಮದಾಚಾರ್ಯರು ಹೇಳಿರುವ 'ಉಪಕ್ರಮಾತ್' ಎಂಬ ಪಾಠವೇ ಸರಿಯಾದ ಪಾಠವಾಗಿದೆ. ನಿಮ್ಮ ಭಾಷ್ಯಕಾರರು ಹೇಳಿರುವ ಪಾಠವು ವಿಚಾರ ಮಾಡದೇ ನಿರ್ಣೀತವಾದ್ದರಿಂದ ಅಪಪಾಠವಾಗಿದೆ. ಅಷ್ಟೇ ಅಲ್ಲದೇ ನಿನ್ನ ಭಾಷ್ಯಕಾರನು ಪ್ರತಿಯೊಂದು ಮಾತುಗಳಲ್ಲಿಯೂ ತಪ್ಪುತ್ತಿದ್ದಾನೆ. ಪ್ರತಿಯೊಂದು ಸೂತ್ರಗಳಲ್ಲಿಯೂ ಸ್ವಕಪೋಲಕಲ್ಪಿತವಾದ ಅರ್ಥಗಳನ್ನು ಹೇರುತ್ತಿದ್ದಾನೆ ಎಂಬುದನ್ನು ಗ್ರಂಥಕಾರರು ಪ್ರತಿಯೊಂದು ಹಂತದಲ್ಲಿಯೂ ಕೂಡ ತೋರಿಸುತ್ತಲೇ ಬರುತ್ತಿದ್ದಾರೆ.

**प्रकाशः** – प्रतिनयं ब्रह्मार्पकस्य तत्त्विति पदस्याऽध्यायसमास्यनुवृत्त्याऽ-ध्याहाराभावात् ।

ಬ್ರಹ್ಮಪದವನ್ನು ಈ ಸೂತ್ರದಲ್ಲಿ ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ದೋಷವನ್ನು ಹೇಳಿದಿ. ಆದರೆ ಈಗಾಗಲೇ ನಾವು ಹತ್ತಾರು ಬಾರಿ ಹೇಳಿರುವಂತೆ ಪ್ರತಿಯೊಂದು ಅಧಿಕರಣದಲ್ಲಿಯೂ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿರುವ 'ತತ್' ಎಂಬ ಪದವು ಅಧ್ಯಾಹಾರವಾಗುತ್ತಿದೆ. ಇದು ಅಧ್ಯಾಯ ಸಮಾಪ್ತಿಯಾಗುವ ತನಕ ಪ್ರತಿಯೊಂದು ಅಧಿಕರಣಗಳಲ್ಲಿಯೂ ಅನ್ವಯ ಹೊಂದುವುದರಿಂದ ಅಧ್ಯಾಹಾರ ಮಾಡಿಕೊಳ್ಳಬೇಕಾಗಿಲ್ಲ.

**प्रकाशः** – द्वितीये लोकसिद्धार्थाविरोधहेतुभूतार्थान्तरस्य कल्पनापदेनोप-स्थित्याऽनुपस्थापकत्वादिति त्वदुक्तहेत्वसिद्धेः । अत एवोक्तं ''लोकतः कॢप्ततत्तद्वा-चित्वमबाधित्वैव'' इत्यादि ।

ಎರಡನೆಯ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬ ಪದಕ್ಕೆ ವೈಯರ್ಥ್ಯವನ್ನು ಹೇಳಿದ್ದಿ. ಇದೂ ಸಹ ಸರಿಯಲ್ಲ. ಲೋಕಸಿದ್ಧವಾದ ಅರ್ಥಕ್ಕೆ ಅವಿರೋಧಿಯಾದ ಹೇತುವನ್ನು ಈ 'ಕಲ್ಪನೋಪದೇಶಾತ್' ಎಂಬ ಪದವು ಹೇಳುತ್ತಿದೆ. ಆದ್ದರಿಂದ ಲೋಕಸಿದ್ಧಾರ್ಥವಿರೋಧಹೇತುಭೂತವಾದ ಅರ್ಥಾಂತರದ ಉಪಸ್ಥಿತಿಯು ಬರುತ್ತಿರುವಾಗ ಅನುಪಸ್ಥಿತವಾಗುತ್ತಿದೆಯೆಂಬ ನಿನ್ನ ಆಕ್ಷೇಪವೂ ಅಸಾಧುವಾಗಿದೆ. ಆದ್ದರಿಂದಲೇ 'ಲೋಕತಃ ಕ್ಲೃಪ್ತತತ್ತದ್ವಾಚಿತ್ವಮಬಾಧಿತ್ವೈವ' 'ಲೋಕಸಿದ್ಧವಾದ ಕಲ್ಪನೆಯನ್ನು ಬಾಧಿಸದೇ' ಇತ್ಯಾದಿಯಾಗಿ ಟೀಕೆಯಲ್ಲಿ ಹೇಳಿರುತ್ತಾರೆ.

**ಪ್ರಕಾಶಃ** – मध्वादीत्यस्य मध्वादिशब्दवदित्यर्थपरत्वेन मधुसदृशपरत्वाभावात् ।

'ಮಧ್ವಾದಿವತ್' ಎಂಬ ದೃಷ್ಟಾಂತವೂ ಕೂಡ ಯುಕ್ತವೇ ಆಗಿದೆ. 'ಮಧ್ವಾದಿವತ್' ಎಂಬುದಕ್ಕೆ 'ಮಧ್ವಾದಿಶಬ್ದವತ್' ಎಂದರ್ಥ. 'ಸ್ವಂ ರೂಪಂ ಶಬ್ದಸ್ಯಾಶಬ್ದಸಂಜ್ಞಾ' ಎಂಬ ವ್ಯಾಕರಣ ಸೂತ್ರವು ಹೇಳುವಂತೆ 'ಮಧ್ವಾದಿವತ್' ಎಂಬುದಕ್ಕೆ ಮಧ್ವಾದಿಶಬ್ದದಂತೆ ಎಂಬರ್ಥವು ದೊರೆಯುತ್ತದೆ. ಮಧು ಮೊದಲಾದ ಶಬ್ದಗಳು ಜೇನನ್ನು ಪ್ರತಿಪಾದನೆ ಮಾಡುತ್ತವೆ. ಆದಿತ್ಯಾದಿಗಳನ್ನೂ ಕೂಡ ಪ್ರತಿಪಾದನೆ ಮಾಡುತ್ತವೆ. ಅದರಂತೆ ಜ್ಯೋತಿರಾದಿಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ, ಮತ್ತು ಜ್ಯೋತಿಷ್ಟೋಮಾದಿ ಕರ್ಮಗಳನ್ನೂ ಕೂಡ ಪ್ರತಿಪಾದನೆ ಮಾಡುತ್ತವೆ. ಹೀಗೆ ದೃಷ್ಟಾಂತದಾರ್ಷ್ಟಾಂತಿಕಭಾವವು ಅತ್ಯಂತ ಸಮಂಜಸವಾಗುವಾಗ ದೃಷ್ಟಾಂತವೇ ತಪ್ಪು ಎಂಬ ನಿನ್ನ ಆಕ್ಷೇಪ ಸರಿಯಲ್ಲ.

**ಪ್ರಕಾಶಃ** – एतेन समन्वयसूत्रे सर्वपदानां वा सर्ववाक्यानां वा समन्वय इत्यादिविकल्पेन दोषोत्कीर्तनमप्यसम्बद्धं बोध्यम् ।

ಹೀಗೆ ಹೇಳಿದ್ದರಿಂದ ಅವನ ಮತ್ತೊಂದು ಆಕ್ಷೇಪವನ್ನು ನಿರಾಕರಿಸಿದಂತಾಯಿತು.

ಆಕ್ಷೇಪ - ಸಮನ್ವಯಸೂತ್ರದಲ್ಲಿ ಎಲ್ಲಾ ಪದಗಳ ಸಮನ್ವಯದ ಪ್ರತಿಜ್ಞೆ ಮಾಡಿದ್ದೀರೋ, ಅಥವಾ ಎಲ್ಲಾ ವಾಕ್ಯಗಳ ಸಮನ್ವಯದ ಪ್ರತಿಜ್ಞೆ ಮಾಡಿದ್ದೀರೋ? ಎಲ್ಲಾ ಪದಗಳ ಸಮನ್ವಯವನ್ನು ಪ್ರತಿಜ್ಞೆ ಮಾಡಿದಲ್ಲಿ ಆನಂದಮಾಯಾಧಿಕರಣದಿಂದ ಆರಂಭಿಸಿ, ಎಲ್ಲಾ ಅಧಿಕರಣಗಳಲ್ಲಿ ಮಾಡಲ್ಪಟ್ಟ ವಾಕ್ಯಸಮನ್ವಯವು ತಪ್ಪಾಗುತ್ತದೆ. ಒಂದು ವೇಳೆ ವಾಕ್ಯಗಳ ಸಮನ್ವಯದ ಪ್ರತಿಜ್ಞೆ ಮಾಡಿದಲ್ಲಿ ಈ ಅಧಿಕರಣದಲ್ಲಿ ಸಮರ್ಥಿಸಲ್ಪಟ್ಟ ಸಕಲಪದಗಳ ಸಮನ್ವಯವು ಅಸಂಬದ್ಧವಾಗುತ್ತದಲ್ಲವೇ?

**ಪ್ರಕಾಶಃ** – अनन्तवेदराशेः पदादिविधया वाक्यविधया च हरौ समन्वय-प्रतिज्ञानेनानन्दमयनयादौ वाक्यसमन्वयाशयेन अत्र तु पदसमन्वयाभिप्रायेण विचारप्रवृत्तेरभिमतत्वात् । पूर्वत्राव्यक्तनये वाक्यमर्यादया सत एव तस्य वाक्यस्य ब्रह्मणि समन्वयोपगमात् ।

ಸಮಾಧಾನ - ಈ ಆಕ್ಷೇಪವು ಸರಿಯಲ್ಲ. ಏಕೆಂದರೆ ಸಮನ್ವಯಾಧಿಕರಣದಲ್ಲಿ ಕೇವಲ ಪದಸಮನ್ವಯದ ಪ್ರತಿಜ್ಞೆಯನ್ನಾಗಲೀ, ಅಥವಾ ಕೇವಲ ವಾಕ್ಯಸಮನ್ವಯದ ಪ್ರತಿಜ್ಞೆಯನ್ನಾಗಲೀ ಮಾಡಿರುವುದಿಲ್ಲ. ಹೊರತಾಗಿ, ಅನಂತವಾದ ವೇದರಾಶಿಯಲ್ಲಿರುವ ಪ್ರತಿಯೊಂದು ಪದಗಳ ಸಮನ್ವಯವನ್ನು, ಪ್ರತಿಯೊಂದು ವಾಕ್ಯಗಳ ಸಮನ್ವಯವನ್ನು ಪ್ರತಿಜ್ಞೆ ಮಾಡಲಾಗಿದೆ. ಆನಂದಮಯಾಧಿಕರಣದಿಂದ ಪ್ರಾರಂಭಿಸಿ, ಎಲ್ಲಾ ಅಧಿಕರಣಗಳಲ್ಲಿಯೂ ವಾಕ್ಯಸಮನ್ವಯ ಮಾಡಿದ್ದಾಯಿತು. ಈ ಅಧಿಕರಣದಲ್ಲಿ ಪದಸಮನ್ವಯವನ್ನು ಮಾಡಲಾಗಿದೆ. ಹಿಂದಿನ ಅವ್ಯಕ್ತಾಧಿಕರಣದಲ್ಲಿ ವಾಕ್ಯದ ಸಮನ್ವಯದ ಮೂಲಕವೇ ಬ್ರಹ್ಮನಲ್ಲಿ ಸಕಲವೇದರಾಶಿಗಳ ಸಮನ್ವಯವನ್ನು ಸಮರ್ಥಿಸಲಾಗಿದೆ. ಆದ್ದರಿಂದ ಅನಂತವೇದರಾಶಿಗಳ ಪ್ರತಿಯೊಂದು ವಾಕ್ಯಗಳು, ಪದಗಳು, ಅಕ್ಷರಗಳು, ಸ್ವರಗಳು ಎಲ್ಲವೂ ಕೂಡ ಶ್ರೀಹರಿಯಲ್ಲಿಯೇ ಸಮನ್ವಯಗೊಳ್ಳುತ್ತವೆಂಬ ನಮ್ಮ ಇಷ್ಟಾರ್ಥವು ಸಿದ್ಧವಾಗುತ್ತದೆ.




ಈ ಅಧಿಕರಣದಲ್ಲಿ 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧಿಯತೇ ಏಕೇ', 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬೆರಡು ಸೂತ್ರಗಳಿವೆ. ಪ್ರಥಮಸೂತ್ರದಲ್ಲಿ ಪ್ರತಿಯೊಂದು ಪದಗಳಿಂದ ಶ್ರೀಹರಿಯೇ ಪ್ರತಿಪಾದ್ಯನೆನ್ನಲು ಸ್ವಪಕ್ಷಸಾಧಕಪ್ರಮಾಣವನ್ನು ಹೇಳಿದ್ದಾರೆ. ಎರಡನೆಯ ಸೂತ್ರದಲ್ಲಿ ಸಕಲಪದಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಿದರೆ ಬರುವಂತಹ ಬಾಧಕವನ್ನು ಪರಿಹರಿಸಿದ್ದಾರೆ.

ಪ್ರಥಮಸೂತ್ರದಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬುದು ವಿಷಯವಾಕ್ಯವಾಗಿದೆ. ವಿಷಯವಾಕ್ಯದಲ್ಲಿ ಮೊದಲು ಶ್ರುತವಾದ ವಸಂತ ಶಬ್ದವನ್ನೇ ಸೂತ್ರದಲ್ಲಿ ಉಲ್ಲೇಖಿಸಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರಬಹುದು. ಆದರೆ ಜ್ಯೋತಿಷ್ಟೋಮಯಾಗವು ಅತ್ಯಂತ ಪ್ರಧಾನವಾದ್ದರಿಂದ ತತ್‌ಪ್ರತಿಪಾದಕವಾದ 'ಜ್ಯೋತಿಃ' ಶಬ್ದದಿಂದ ಉಳಿದ ಅಮುಖ್ಯವಾದ ಅರ್ಥಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳನ್ನು ಉಪಲಕ್ಷಣಯಾ ವಿವಕ್ಷಿಸುವುದು ಸೂಕ್ತವೆಂಬ ದೃಷ್ಟಿಯಿಂದ 'ಜ್ಯೋತಿಃ' ಶಬ್ದವನ್ನೇ ಸೂತ್ರಕಾರರು ಉಲ್ಲೇಖಿಸಿದ್ದಾರೆ. ಎರಡನೆಯ ಸೂತ್ರದಲ್ಲಿ 'ಕಲ್ಪನೋಪದೇಶಾತ್' ಎಂಬ ಹೇತುವಿನಿಂದ ಕರ್ಮಕ್ರಮಗಳ ವಿರೋಧವನ್ನು ಎಲ್ಲಾ ಶಬ್ದಗಳು ಶ್ರೀಹರಿಯಲ್ಲಿ ಸಮನ್ವಯವಾದರೆ ಶಬ್ದಗಳ ವ್ಯುತ್ಪತ್ತಿಯೇ ಅಶಕ್ಯವಾಗುತ್ತದೆಂಬ ವಿರೋಧವನ್ನು ಪರಿಹರಿಸಿದ್ದಾರೆ. ಪ್ರತಿಯೊಂದು ಪದಗಳೂ ಅವಾಂತರತಾತ್ಪರ್ಯದಿಂದ ಮುಖ್ಯವೃತ್ತಿಯನ್ನೇ ಹೊಂದಿ, ಲೌಕಿಕಾರ್ಥಗಳನ್ನು ಪ್ರತಿಪಾದನೆ ಮಾಡುತ್ತವೆ. ಮುಖ್ಯತಾತ್ಪರ್ಯವನ್ನು ಹೊಂದಿ, ಅಲೌಕಿಕನಾದ ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ 'ಜ್ಯೋತಿಃ' ಎಂಬ ಶಬ್ದವನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡುವಾಗ 'ಜೀ' ಮತ್ತು 'ಓತಿ' ಎಂಬ ಎರಡು ಅವಯವಗಳು ಲೌಕಿಕಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. 'ಜ್ಯೋತಿಃ' ಎಂಬ ಸಮಸ್ತಪದವು ಶ್ರೀಹರಿಯನ್ನು ಪ್ರತಿಪಾದನೆ ಮಾಡುತ್ತದೆ. ಹೀಗೆ ಪ್ರತಿಯೊಂದು ಪದಗಳ ಯೋಗಾರ್ಥವನ್ನು ಶ್ರೀಹರಿಯಲ್ಲಿ ತಿಳಿಯಬೇಕೆಂಬುದು ಇದರ ಅಭಿಪ್ರಾಯ.

ಗಮನಿಸಬೇಕಾದ ಮುಖ್ಯವಿಚಾರ - ಈ ಅಧಿಕರಣದಲ್ಲಿ ವೇದದಲ್ಲಿರುವ ಎಲ್ಲಾ ಪದಗಳ ಸಮನ್ವಯವನ್ನು ಮಾಡಿದ್ದಾರೆ. ಉಳಿದ ಅಧಿಕರಣಗಳಲ್ಲಿ ಒಂದೊಂದು ವಾಕ್ಯಗಳ ಸಮನ್ವಯವನ್ನು

ಮಾಡಿದ್ದಾರೆ. ಹೊರತು, ಸಮಸ್ತ ವೇದಸಮನ್ವಯವನ್ನು ಎಲ್ಲಿಯೂ ಮಾಡಿಲ್ಲ. ಈ ಅಧಿಕರಣದ ವಿಶೇಷವೆಂದರೆ ಬೇರೆ ಅಧಿಕರಣಗಳಲ್ಲಿ ಪ್ರಸಕ್ತವಾದ ಎಲ್ಲಾ ವಾಕ್ಯಗಳಲ್ಲಿರುವ ಪದಗಳ ಸಮನ್ವಯ. ಆದ್ದರಿಂದಲೇ ಶ್ರೀಮದಾಚಾರ್ಯರು ಅಧಿಕರಣನ್ಯಾಯಗಳನ್ನು ಸಂಗ್ರಹಿಸುವಾಗ 'ಸರ್ವ' ಎಂಬುದನ್ನು ಈ ಅಧಿಕರಣದ ನ್ಯಾಯಗಳೆಂದು ಹೇಳಿರುತ್ತಾರೆ.



● ● ● ● ●

## ಅದ್ವೈತಿಗಳ ಅಧಿಕರಣಶರೀರ

### तात्पर्यचन्द्रिका

**अन्येतु ।। "अजामेकां लोहितशुक्लकृष्णां बह्वीः प्रजाः सृजमानां सरूपा" इति श्वेताश्वतरवाक्यस्था प्रजास्रष्टृत्वेनोक्ताऽजा सांख्याभिमता त्रिगुणा प्रकृतिरिति प्राप्ते**

ಅನುವಾದ - ಅದ್ವೈತಿಗಳು 'ಚಮಸವತ್' ಇತ್ಯಾದಿ ಮೂರು ಸೂತ್ರಗಳನ್ನು ಸೇರಿ ಒಂದೇ ಅಧಿಕರಣವೆಂದು ಹೇಳುತ್ತಾರೆ. ಪೂರ್ವಪಕ್ಷ ಹೀಗಿದೆ - 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾ' ಎಂಬ ಶ್ವೇತಾಶ್ವತರೋಪನಿಷತ್ತಿನಲ್ಲಿ ಎಲ್ಲ ಪ್ರಜೆಗಳಿಗೆ ಜನಕವಾದ 'ಅಜ' ಎಂದರೆ ಸಾಂಖ್ಯರಿಗೆ ಅಭಿಮತವಾದ ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃತಿಯೇ ಆಗಿದೆಯೆಂದು ಪೂರ್ವಪಕ್ಷ.

**इयमजा सांख्याभिमतेति न निश्चेतुं शक्यम् । अजात्वादेः सर्वत्रापि कथञ्चित्सुसम्पादत्वात् । विशेषहेतोश्चाभावात् ।**

ಶ್ರುತಿಯಲ್ಲಿರುವ 'ಅಜಾ' ಎಂದರೆ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯಾಗಿದೆಯೆಂದು ನಿಶ್ಚಯಿಸಲು ಸಾಧ್ಯವಿಲ್ಲ. ಯಾವಕಾರಣದಿಂದ ಪ್ರಕೃತಿಯೆಂದು ನಿಶ್ಚಯಿಸುತ್ತೀರಿ? ಪ್ರಜೆಗಳನ್ನು ಸೃಷ್ಟಿ ಮಾಡುತ್ತದೆಂಬ ಕಾರಣದಿಂದಲೋ, ಅಥವಾ ಲೋಹಿತಶುಕ್ಲಕೃಷ್ಣಾದಿ ವರ್ಣಗಳನ್ನು ಹೊಂದಿದೆಯೆಂಬ ಕಾರಣದಿಂದಲೋ? ಈ ಯಾವುದೇ ಕಾರಣದಿಂದಲೂ ಅಜಾ ಶಬ್ದದಿಂದ ಪ್ರಕೃತಿಯನ್ನೇ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಲಾಗದು. ಏಕೆಂದರೆ ಉಳಿದ ಕಡೆಯೂ ಕೂಡ ಗೌಣವಾಗಿ ಇಂತಹ ಲೋಹಿತಶುಕ್ಲಕೃಷ್ಣವರ್ಣಾದಿಗಳನ್ನು ಹೇಳಬಹುದು. ಪ್ರಕೃತಿಯನ್ನೇ ತೆಗೆದುಕೊಳ್ಳಬೇಕೆನ್ನಲು ಯಾವುದೇ ಅಸಾಧಾರಣ ಧರ್ಮಗಳು ಕೇಳಿಸುತ್ತಿಲ್ಲ.

**यथा "एष ह्यर्वाग्बिलश्चमसः" इत्यत्रायं नामासौ चमस इति निश्चेतुमशक्यम्। अर्वाग्बिलत्वादेः सर्वत्रापि कथञ्चित् सुसम्पादत्वात् । विशेषहेतोश्चाभावादिति**

**चमससूत्रेणोक्त्वा ज्योतिःसूत्रेण प्रत्युतेयमजा ज्योतिरुपक्रमैव तेजआदिरूपैव । नतु सांख्याभिमता ।**

ಯಾವ ರೀತಿಯಾಗಿ 'ಏಷಹ್ಯರ್ವಾಗ್ಬಿಲಶ್ಚಮಸಃ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಚಮಸದ ಆಕಾರವಿಶೇಷವನ್ನು ನಿಶ್ಚಯಿಸಲು ಸಾಧ್ಯವಿಲ್ಲ. ಏಕೆಂದರೆ ಅರ್ವಾಗ್ಬಿಲತ್ವವೆಂಬುದು ಬೇರೆ ಕಡೆಯೂ ಕೂಡ ಗೌಣವಾಗಿ ಬರುತ್ತದೆ. ಇದೇ ಚಮಸವೆಂದು ನಿರ್ಣಯಿಸಲು ಶ್ರುತಿಯಲ್ಲಿ ಯಾವುದೇ ವಿಶೇಷಕಾರಣವನ್ನು ಹೇಳಿರುವುದಿಲ್ಲ. ಆದ್ದರಿಂದ ಚಮಸವೆಂದು ಹೇಗೆ ನಿರ್ಣಯಿಸಲು ಸಾಧ್ಯವಿಲ್ಲವೋ, ಅದರಂತೆ ಅಜಾ ಶಬ್ದಪ್ರತಿಪಾದ್ಯವಾದದ್ದನ್ನೂ ಕೂಡ ನಿರ್ಣಯಿಸಲು ಸಾಧ್ಯವಿಲ್ಲ ಎಂಬುದಾಗಿ 'ಚಮಸವದವಿಶೇಷಾತ್' ಎಂಬ ಸೂತ್ರದಿಂದ ಹೇಳಿ, ಮುಂದೆ 'ಜ್ಯೋತಿಃ' ಸೂತ್ರದಿಂದ ಅಜಾಶಬ್ದದಿಂದ ಸಾಂಖ್ಯರ ತ್ರಿಗುಣಾತ್ಮಕವಾದ ಪ್ರಕೃತಿ ಪ್ರತಿಪಾದ್ಯವಲ್ಲ. ಹೊರತು, 'ಜ್ಯೋತಿರುಪಕ್ರಮ್ಯೆವ' ತೇಜಸ್ಸು ಮೊದಲಾದ ಸ್ವರೂಪವನ್ನು ಹೊಂದಿರುವ ತೇಜೋಬನ್ನವೇ ಪ್ರತಿಪಾದ್ಯವಾಗಿದೆ.

**''यदग्नेरोहितं रूपं तेजसस्तद्रूपं यच्छुक्लं तदपां यत्कृष्णं तदन्नस्य'' इति श्रुत्यन्तरे तेजोबन्नानामेव लोहितशुक्लकृष्णरूपवत्त्वेनाधीतत्वात् ।**

ಏಕೆಂದರೆ 'ಯದಗ್ನೇರೋಹಿತಂ ರೂಪಂ ತೇಜಸಸ್ತದ್ರೂಪಂ ಯಚ್ಛುಕ್ಲಂ ತದಪಾಂ ಯತ್ ಕೃಷ್ಣಂ ತದನ್ನಸ್ಯ' ಎಂಬ ಮತ್ತೊಂದು ಶ್ರುತಿಯಲ್ಲಿ ತೇಜೋಬನ್ನಗಳೇ ಲೋಹಿತಶುಕ್ಲಕೃಷ್ಣರೂಪವುಳ್ಳವು-ಗಳಾಗಿವೆ ಎಂದು ಹೇಳಲಾಗಿದೆ.

**प्रकृतिपक्षे लोहितादिशब्दानां रजआदौ गौणत्वापत्तेश्चेति समाहितम् । चमससूत्रं च ज्योतिरधिकरणशेष इत्याहुः ।।**

ಒಂದುವೇಳೆ ಸಾಂಖ್ಯರ ಪ್ರಕೃತಿಯನ್ನೇ ಅಜಾಶಬ್ದದಿಂದ ಸ್ವೀಕರಿಸುವುದಾದರೆ, ಶ್ರುತಿಯಲ್ಲಿರುವ ಲೋಹಿತಾದಿ ಶಬ್ದಗಳಿಗೆ ರಜೋಗುಣ, ತಮೋಗುಣ ಮೊದಲಾದವುಗಳಲ್ಲಿ ಗೌಣಾರ್ಥವನ್ನು ಮಾಡಬೇಕಾಗುತ್ತದೆ. 'ಚಮಸವದವಿಶೇಷಾತ್' ಎಂಬ ಸೂತ್ರವು ಹೀಗೆ ಜ್ಯೋತಿರಧಿಕರಣಕ್ಕೆ ಗುಣಸೂತ್ರವಾಗಿದೆಯೆಂದು ವ್ಯಾಖ್ಯಾನ ಮಾಡುತ್ತಾರೆ.

**प्रकाशः –**

मतद्वयेपि ''चमसवत्'' इत्यादित्रिसूत्र्येकमधिकरणम् । तत्राद्वैतिमतमनुवदति।। अन्यत्त्विति ।।

ವಿವರಣೆ - ಅದ್ವೈತಮತ ಹಾಗೂ ರಾಮಾನುಜ ಮತದಲ್ಲಿ 'ಚಮಸವತ್' ಮೊದಲಾದ ಮೂರು ಸೂತ್ರಗಳನ್ನು ಒಂದೇ ಅಧಿಕರಣವೆಂದು ಅಂಗೀಕರಿಸಲಾಗಿದೆ. ಮೊದಲು ಅದ್ವೈತಮತವನ್ನು 'ಅನ್ಯೇತು' ಇತ್ಯಾದಿಯಾಗಿ ಅನುವಾದ ಮಾಡುತ್ತಿದ್ದಾರೆ.

**प्रकाशः – श्वेताश्वतरेति ।।** अजाशब्दस्य छाग्यां रूढत्वात्कः प्रधानादि-चिन्ताप्रसङ्ग इत्यतोऽध्यात्मविद्याप्रकरणस्थत्वान्न रूढेरत्र ग्रहणमिति सूचयितुमेतत्। तदुक्तं भाष्ये ''विद्याप्रकरणात्'' इति ।

'ಶ್ವೇತಾಶ್ವತರೋಪನಿಷತ್ತುನ್ನು ಏಕೆ ಉಲ್ಲೇಖಿಸಿದ್ದಾರೆ ಎಂದರೆ 'ಅಜಾ' ಶಬ್ದವು ಹೆಣ್ಣು ಮೇಕೆಯಲ್ಲಿ ರೂಢವಾಗಿರುವಾಗ ಪ್ರಧಾನವು 'ಅಜಾ' ಶಬ್ದದಿಂದ ಪ್ರತಿಪಾದ್ಯವೋ, ಅಥವಾ ತೇಜೋಬನ್ನವು ಪ್ರತಿಪಾದ್ಯವೋ ಎಂಬ ಚಿಂತೆಯು ಕೂಡುವುದಿಲ್ಲವಲ್ಲವೆ? ಎಂಬ ಶಂಕೆಯು ಪ್ರಾಪ್ತವಾದರೆ, ಈ ಅಜಾಶಬ್ದವು ಅಧ್ಯಾತ್ಮವಿದ್ಯಾಪ್ರಕರಣದಲ್ಲಿ ಪ್ರಸಕ್ತವಾಗಿರುವುದರಿಂದ ಲೋಕದಲ್ಲಿ ರೂಢವಾದ ಹೆಣ್ಣುಮೇಕೆ ಎಂಬರ್ಥವನ್ನು ಸ್ವೀಕರಿಸಲು ಸಾಧ್ಯವಿಲ್ಲ. ಇದನ್ನು ಸೂಚಿಸಲು ಶ್ವೇತಾಶ್ವೇತರ ಎಂದು ಹೇಳಿರುತ್ತಾರೆ. ಇದನ್ನೇ ಶಾಂಕರಭಾಷ್ಯದಲ್ಲಿ 'ವಿದ್ಯಾಪ್ರಕರಣಾತ್' ಎಂದು ಹೇಳಿರುತ್ತಾರೆ.

**प्रकाशः** – भामत्यां च ''आत्मविद्याधिकारान्न च तत्र वर्तितुमर्हति'' इति । रूढित्यागे हेत्वन्तरम् ।। **प्रजेति ।।**

ಭಾಮತಿಯಲ್ಲೂ ಕೂಡ 'ಆತ್ಮವಿದ್ಯಾಧಿಕಾರಾನ್ನ ಚ ತತ್ರ ವರ್ತಿತುಮರ್ಹತಿ' ಆತ್ಮವಿದ್ಯಾಧಿಕಾರದಲ್ಲಿ ಅಜಾಶಬ್ದವು ಪ್ರಸಕ್ತವಾಗಿರುವುದರಿಂದ 'ಛಾಗೀ' ಎಂಬ ಪಶುವನ್ನು ವಿವಕ್ಷಿಸಲಾಗದು ಎಂದು ಹೇಳಿದ್ದಾರೆ. ಇವೆರಡನ್ನು ಸೂಚಿಸಲು ಪ್ರಕೃತ ಗ್ರಂಥಕಾರರು ಶ್ವೇತಾಶ್ವತರೋಪನಿಷತ್ತು ಎಂದು ಹೇಳಿರುತ್ತಾರೆ. ರೂಢವಾದ ಛಾಗೀ ಪಶುವನ್ನು ಬಿಡಲು ಮತ್ತೊಂದು ಕಾರಣವನ್ನು 'ಪ್ರಜಾ' ಇತ್ಯಾದಿಯಾಗಿ ಗ್ರಂಥದಲ್ಲಿ ಹೇಳಿದ್ದಾರೆ.

**प्रकाशः** – छाग्यां प्रजासृष्टेरयोगात् । अविशेषादिति सूत्रखण्डार्थमाह – **इयमिति ।।** चमसवदित्यंशस्यार्थमाह – **यथेति ।।**

ಹೆಣ್ಣುಮೇಕೆಯಲ್ಲಿ ಸಮಸ್ತ ಪ್ರಜೆಗಳನ್ನು ಸೃಷ್ಟಿ ಮಾಡುವಿಕೆಯು ಸರ್ವಥಾ ಕೂಡುವುದಿಲ್ಲವಷ್ಟೇ? 'ಚಮಸವದವಿಶೇಷಾತ್' ಎಂಬಲ್ಲಿರುವ 'ಅವಿಶೇಷಾತ್' ಎಂಬ ಸೂತ್ರದ ಅಂಶವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಇಯಂ' ಇತ್ಯಾದಿಯಾಗಿ. 'ಚಮಸವತ್' ಎಂಬ ಸೂತ್ರದ ಭಾಗವನ್ನು 'ಯಥಾ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – अर्वाग्बिल इत्येतन्नामकैवंरूपं चमसस्य यथा निर्णेतुमशक्यं तथेत्यर्थः ।

ಜ್ಯೋತಿರುಪಕ್ರಮಾಧಿಕರಣ (1-4-2)

ಚಮಸಪಾತ್ರೆಯು ಕೆಳಗಡೆ ಬಿಲವಿದ್ದು ಮೇಲಗಡೆ ವಿಶಾಲವಾದ ಉದರವನ್ನು ಹೊಂದಿರುತ್ತದೆ. ಇಂತಹ ಆಕಾರವಿಶೇಷವನ್ನು ಹೊಂದಿರುವ ಚಮಸವನ್ನು ಹೇಗೆ ನಿರ್ಣಯಿಸಲು ಸಾಧ್ಯವಿಲ್ಲವೋ, ಅದರಂತೆ ಅಜಾಶಬ್ದಿತವಾದದ್ದನ್ನು ನಿರ್ಣಯಿಸಲಾಗದು ಎಂದು ತಿಳಿಯಬೇಕು.

**प्रकाशः** – "ननु तत्र तु इदं तच्छिर एष ह्यर्वाग्बिलश्चमस ऊर्ध्वबुध्नः" इति वाक्यशेषाच्चमसविशेषप्रतीतिर्भविष्यति । इह पुनः केयमजेत्यतो ब्रूमः" इत्यवतार्य भाष्येऽभिहितं ज्योतिस्सूत्रार्थमनुवदति – **प्रत्युतेति** ॥

ಚಮಸವನ್ನು ನಿರ್ಣಯಿಸಬಹುದು. ಏಕೆಂದರೆ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಯಾವುದಕ್ಕೆ ಶಿರಸ್ಸು ಕೆಳಮುಖವಾಗಿದ್ದು ಹೊಟ್ಟೆಯು ಮೇಲ್ಮುಖವಾಗಿರುತ್ತದೋ ಅದೇ ಚಮಸ ಎನಿಸುತ್ತದೆ ಎಂಬ ಶ್ರುತಿಯ ವಾಕ್ಯಶೇಷದಿಂದಲೇ ಚಮಸಪಾತ್ರದ ಆಕಾರವಿಶೇಷದ ಪ್ರತೀತಿಯು ಬರುತ್ತದಲ್ಲವೇ? ಹೀಗಿರುವಾಗ ಚಮಸದ ನಿರ್ಣಯವು ಹೇಗೆ ಅಸಾಧ್ಯವೋ, ಅದರಂತೆ ಅಜಾಶಬ್ದಿತವಾದದ್ದನ್ನು ನಿರ್ಣಯಿಸಲಾಗದೆಂದು ಹೇಗೆ ಹೇಳುತ್ತೀರಿ? ಅಜಾಶಬ್ದಿತವಾದದ್ದರ ನಿರ್ಣಯವಷ್ಟೇ ಇಲ್ಲಿ ಅಸಾಧ್ಯವಾಗಿದೆಯಲ್ಲವೇ? "ನನು ತತ್ರ ತು ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ' ಇತಿ ವಾಕ್ಯಶೇಷಾಚ್ಚಮಸವಿಶೇಷಪ್ರತೀತಿರ್ಭವಿಷ್ಯತಿ । ಇಹ ಪುನಃ ಕೇಯಮಜೇತ್ಯತೋ ಬ್ರೂಮಃ' ಎಂಬುದಾಗಿ ಅವತಾರಿಕೆ ನೀಡಿ ಭಾಷ್ಯದಲ್ಲಿ 'ಜ್ಯೋತಿರುಪಕ್ರಮಾತ್' ಎಂಬ ಸೂತ್ರವನ್ನು ಹೇಳಲಾಗಿದೆ. ಅದನ್ನೇ ಪ್ರಕೃತ ಗ್ರಂಥಕಾರರು 'ಪ್ರತ್ಯುತ' ಎಂಬುದಾಗಿ ಅನುವಾದ ಮಾಡುತ್ತಿದ್ದಾರೆ.

**प्रकाशः** – प्रधानभिन्नैवाजा निर्णेतुं शक्यत इत्यर्थः । उपक्रमशब्दः प्रभृतिवाचीति मत्वाह – **तेजआदिरूपैवेति** ॥ तेजोबन्नलक्षणभूतत्रयरूपैवेयमजा न गुणत्रयलक्षणेत्यर्थः ।

ಪ್ರಧಾನಭಿನ್ನವಾದದ್ದೇ ಅಜಾಶಬ್ದವಾಚ್ಯವಾಗಿದೆಯೆಂದು ನಿರ್ಣಯಿಸಲು ಬರುತ್ತದೆ ಎಂದರ್ಥ. ಉಪಕ್ರಮ ಶಬ್ದಕ್ಕೆ ಮೊದಲಾದದ್ದು ಎಂದರ್ಥ. ಆದ್ದರಿಂದ 'ತೇಜ ಆದಿರೂಪೈವ' ಎಂದು ವ್ಯಾಖ್ಯಾನ ಮಾಡಿದ್ದಾರೆ. ತೇಜೋಬನ್ನಲಕ್ಷಣಸ್ವರೂಪವಾದ ಭೂತತ್ರಯರೂಪವೇ ಈ ಅಜಾಶಬ್ದದಿಂದ ಪ್ರತಿಪಾದ್ಯವಾಗಿದೆ ಹೊರತು, ಗುಣತ್ರಯರೂಪವಾದದ್ದು ಅಜಾಶಬ್ದದಿಂದ ಪ್ರತಿಪಾದ್ಯವಲ್ಲ.

**प्रकाशः** – तथाहीत्यादिसूत्रांशार्थमाह – **यदिति** ॥ श्रुत्यन्तरे छान्दोग्ये । प्रकृतिपक्षे सांख्याभिमतप्रधानपक्षे ।

'ತಥಾಹಿ' ಇತ್ಯಾದಿ ಸೂತ್ರಭಾಗದ ಅರ್ಥವನ್ನು 'ಯತ್' ಇತ್ಯಾದಿಯಾಗಿ ಹೇಳುತ್ತಿದ್ದಾರೆ 'ಶ್ರುತ್ಯಂತರೇ' ಎಂದರೆ ಛಾಂದೋಗ್ಯೋಪನಿಷತ್ತಿನಲ್ಲಿ ಎಂದರ್ಥ. 'ಪ್ರಕೃತಿಪಕ್ಷೇ' ಎಂದರೆ ಸಾಂಖ್ಯಾಭಿಮತವಾದ ಪ್ರಧಾನಪಕ್ಷದಲ್ಲಿ ಎಂದರ್ಥ.

**प्रकाशः** – रजःप्रभृतिषु लौहित्यादिवर्णानामभावेन ''लोहितं कुसुम्भादि रञ्जयति रजोपि रञ्जयतीति लोहितम् । प्रसन्नं पाथः शुक्लम् । आवरकं मेघादि कृष्णं तमोप्यावरकम्'' इति भामत्युक्तरीत्या गौणत्वापत्तेरित्यर्थः ।

ರಜೋಗುಣಾದಿಗಳಲ್ಲಿ ಅದ್ವೈತಸಿದ್ಧಾಂತದ ಪ್ರಕಾರ ಲೌಹಿತ್ಯಾದಿವರ್ಣಗಳು ಇರುವುದಿಲ್ಲ. 'ಲೋಹಿತಂ ಕುಸುಂಭಾದಿ ರಂಜಯತಿ ರಜೋಪಿ ರಂಜಯತೀತಿ ಲೋಹಿತಮ್ । ಪ್ರಸನ್ನಂ ಪಾಥಃ ಶುಕ್ಲಮ್ । ಆವರಕಂ ಮೇಘಾದಿಕೃಷ್ಣಂ ತಮೋಪ್ಯಾವರಕಮ್' ಕೆಂಪುಬಣ್ಣದಲ್ಲಿರುವ ಕುಸುಂಭಾದಿಗಳು ಯಾವರೀತಿಯಾಗಿ ರಾಗೋತ್ಪಾದನೆಯನ್ನು ಮಾಡುತ್ತದೋ, ಅದರಂತೆ ರಜೋಗುಣವೂ ಕೂಡ ರಾಗೋತ್ಪಾದನೆಯನ್ನು ಮಾಡುತ್ತದೆ. ಪ್ರಸನ್ನವಾದ ನೀರು ಬಿಳಿಯಾಗಿರುತ್ತದೆ. ಅದರಂತೆ ಸತ್ವಗುಣವೂ ಕೂಡ ಪ್ರಸನ್ನ-ವಾಗಿರುವುದರಿಂದ 'ಶುಕ್ಲ' ಎಂದು ಕರೆಸಿಕೊಳ್ಳುತ್ತದೆ. ಆವರಕವಾದ ಮೇಘಾದಿಗಳು ಕಪ್ಪುಬಣ್ಣದಲ್ಲಿರುತ್ತದೆ. ತಮೋಗುಣವೂ ಕೂಡ ಅದರಂತೆ ಆವರಕವಾಗಿರುವುದರಿಂದ ಕೃಷ್ಣವರ್ಣದ್ದೆಂದು ಶ್ರುತಿಯು ಕರೆಯುತ್ತಿದೆ. ಹೀಗೆ ಭಾಮತಿಯಲ್ಲಿ ಹೇಳಿದಂತೆ ಲೋಹಿತಾದಿ ಶಬ್ದಗಳಿಗೆ ಗೌಣವೃತ್ತಿಯನ್ನು ಆಶ್ರಯಿಸಬೇಕು.

**प्रकाशः** – तृतीयसूत्रार्थं स्वयमेवाग्रे वक्ष्यति ।

ಮೂರನೆಯ ಸೂತ್ರಾರ್ಥವನ್ನು ಸ್ವತಃ ಮುಂದೆ ವ್ಯಾಖ್ಯಾನ ಮಾಡುತ್ತಾರೆ.




ಅದ್ವೈತಿಗಳು ಚಮಸದವವಿಶೇಷಾತ್' ಇತ್ಯಾದಿ ಮೂರುಸೂತ್ರಗಳನ್ನು ಒಂದು ಅಧಿಕರಣವೆಂದು ಹೇಳುತ್ತಾರೆ. 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ ಬಹ್ವೀಃ ಪ್ರಜಾಃ ಸೃಜಮಾನಾಃ ಸರೂಪಾ' ಎಂಬುದು ಈ ಅಧಿಕರಣದ ವಿಷಯವಾಕ್ಯ. ಇಲ್ಲಿರುವ ಅಜಾಶಬ್ದದಿಂದ ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯೇ ಪ್ರತಿಪಾದ್ಯವಾಗಿದೆಯೆಂದು ಪೂರ್ವಪಕ್ಷ.

ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯು ಅಜಾಶಬ್ದ ಪ್ರತಿಪಾದ್ಯವಾಗಿದೆಯೆನ್ನಲು ಯಾವುದೇ ನಿಶ್ಚಾಯಕ ಪ್ರಮಾಣಗಳಿರುವುದಿಲ್ಲ. ಪ್ರಕೃತಿಯಲ್ಲಿ ಮಾತ್ರ ಬರುವಂತಹ ಯಾವುದೇ ಅಸಾಧಾರಣ ಧರ್ಮಗಳನ್ನೂ ಶ್ರುತಿಯಲ್ಲಿ ಕೂಡ ಹೇಳಿಲ್ಲ. ಯಾವರೀತಿಯಾಗಿ ಚಮಸದ ಬಗ್ಗೆ 'ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬ ವಾಕ್ಯಶೇಷವು ಸಂಪೂರ್ಣವಾದ ನಿರ್ಣಯವನ್ನು ನೀಡಲು ಸಾಧ್ಯವಿಲ್ಲವೋ, ಅದರಂತೆ 'ಅಜಾಮೇಕಾಂ' ಎಂಬ ಶ್ರುತಿವಾಕ್ಯವೂ ಕೂಡ ಅಜಾಶಬ್ದದಿಂದ ಪ್ರಕೃತಿಯನ್ನೇ ಸ್ವೀಕರಿಸಬೇಕೆನ್ನಲು ವಿಶೇಷವಾದ ಕಾರಣವನ್ನು ನೀಡಿರುವುದಿಲ್ಲ. ಆದ್ದರಿಂದ ತೇಜೋಬನ್ನವೇ ಈ ಅಜಾಶಬ್ದದಿಂದ ಪ್ರತಿಪಾದ್ಯವಾಗಿದೆ. ಇಂತಹ ತೇಜೋಬನ್ನದಲ್ಲಿ 'ಯದಗ್ನೇ ಲೋಹಿತಂ ರೂಪಂ' ಇತ್ಯಾದಿ ಶ್ರುತಿಯಿಂದ ಹೇಳಲ್ಪಟ್ಟ ಲೋಹಿತಾದಿ ಶಬ್ದಪ್ರತಿಪಾದ್ಯತ್ವವು ಸಮಂಜಸವಾಗುತ್ತದೆ. ಹೀಗೆ ಚಮಸ ಸೂತ್ರವನ್ನು ಜ್ಯೋತಿರಧಿಕರಣದ ಅಂಗವೆಂದು ಅದ್ವೈತಿಗಳು ಹೇಳುತ್ತಾರೆ.

## ಜ್ಯೋತಿರುಪಕ್ರಮಾಧಿಕರಣ (1-4-2)

## ಅದ್ವೈತಿಗಳ ಅಧಿಕರಣ ವಿಮರ್ಶೆ

**तात्पर्यचन्द्रिका**

**तन्न ।। ''इदं तच्छिर एष ह्यर्वाग्बिलश्चमसः'' इत्यत्र शिरोरूपविशेषपरत्वस्य स्फुटत्वेनाविशेषे दृष्टान्तत्वायोगात् ।**

ಅನುವಾದ - ಅದ್ವೈತಿಗಳ ಈ ಅಧಿಕರಣಶರೀರ ಸರಿಯಿಲ್ಲ. ಏಕೆಂದರೆ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಎಂಬ ವಾಕ್ಯಶೇಷದಲ್ಲಿ ಸ್ಪಷ್ಟವಾಗಿ ಇದು ಚಮಸದ ಶಿರಸ್ಸಾಗಿದೆ ಎಂಬುದಾಗಿ ಅಸಾಧಾರಣ ಲಕ್ಷಣವನ್ನೇ ಹೇಳುತ್ತಿರುವಾಗ ಶ್ರುತಿಯು ಚಮಸದ ಬಗ್ಗೆ ಹೇಳಿದರೂ ಆಕಾರವಿಶೇಷದ ಜ್ಞಾನವು ಬರುವುದಿಲ್ಲವೆಂದು ಹೇಳಿದ್ದು ತಪ್ಪು. ಯಾವರೀತಿಯಾಗಿ ಚಮಸವು ಇದೇ ಆಗಿದೆಯೆಂದು ನಿಶ್ಚಯಿಸಲು ಸಾಧ್ಯವಾಗುವುದಿಲ್ಲವೋ, ಅದರಂತೆ ಅಜಾಶಬ್ದಿತವಾದದ್ದನ್ನು ನಿಶ್ಚಯಿಸಲು ಸಾಧ್ಯವಾಗುವುದಿಲ್ಲ ಎಂಬುದಾಗಿ ದೃಷ್ಟಾಂತವನ್ನು ನೀಡಿದ್ದು ತಪ್ಪಾಗುತ್ತದೆ.

**ब्रह्मलक्षणस्य कारणत्वस्य प्रधाने नातिव्याप्तिः किन्तु तेजोबन्नेष्विति समर्थनस्य निष्फलत्वाच्च ।**

ಮತ್ತು ಅದ್ವೈತಿಗಳು 'ಅಜಾಮೇಕಾಮ್' ಎಂಬ ಶ್ರುತಿಯಿಂದ ಪ್ರಕೃತಿಯು ಪ್ರತಿಪಾದ್ಯವಲ್ಲ. ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳುತ್ತಿದ್ದಾರೆ. ಇದು ಹೇಗಾಯಿತೆಂದರೆ ಜಗತ್ಕಾರಣತ್ವವೆಂಬ ಬ್ರಹ್ಮನ ಲಕ್ಷಣಕ್ಕೆ ಪ್ರಕೃತಿಯಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ತೇಜೋಬನ್ನಗಳಲ್ಲಿ ಅತಿವ್ಯಾಪ್ತಿ ಬರುತ್ತದೆ ಎಂದು ಸಮರ್ಥಿಸಿದಂತಾಯಿತು. ತೇಜೋಬನ್ನಗಳು ಜಗತ್ತಿಗೆ ಕಾರಣವೆಂದು ಸಮರ್ಥನೆ ಮಾಡುವುದರಿಂದ ಏನೂ ಪ್ರಯೋಜನವಿರುವುದಿಲ್ಲ.

**किञ्च –**

**अजा चेज्ज्योतिरादिः स्यादजैकत्वाद्यसम्भवः ।**
**अविद्येति तु पक्षे स्याल्लोहितत्वाद्यसम्भवः ।। १ ।।**

ಮತ್ತು

ಅಜಾ ಚೇತ್ ಜ್ಯೋತಿರಾದಿಃ ಸ್ಯಾದಜೈಕತ್ವಾದ್ಯಸಂಭವಃ ।
ಅವಿದ್ಯೇತಿ ತು ಪಕ್ಷೇ ಸ್ಯಾತ್ ಲೋಹಿತತ್ವಾದ್ಯಸಂಭವಃ ॥೧॥

ಪರಿಪೂರ್ಣಚಂದ್ರಿಕಾ

ಅಜಾಶಬ್ದದಿಂದ ತೇಜೋಬನ್ನಾದಿಗಳು ಪ್ರತಿಪಾದ್ಯವೆಂದು ಹೇಳಿದರೆ, ಶ್ರುತಿಯಲ್ಲಿರುವ ಏಕತ್ವ ಮೊದಲಾದವು ಅಸಂಭಾವಿತವಾಗುತ್ತವೆ. ಅವಿದ್ಯೆಯು ಪ್ರತಿಪಾದ್ಯವೆಂದರೆ ಶ್ರುತಿಯಲ್ಲೇ ಹೇಳಿರುವ ಲೋಹಿತತ್ವಾದಿಗಳು ಅಸಂಭಾವಿತವಾಗುತ್ತವೆ.

**इयमजा सिद्धान्ते किं तेजोबन्नरूपा किं वाऽविद्यारूपा ।**

'ಅಜಾಮೇಕಾಮ್' ಎಂಬ ಶ್ರುತಿಯಿಂದ ತೇಜೋಬನ್ನಗಳು ಪ್ರತಿಪಾದ್ಯವಾಗಿವೆ ಎಂದು ಹೇಳುತ್ತೀರೋ? ಅಥವಾ ಅವಿದ್ಯೆಯು ಪ್ರತಿಪಾದ್ಯವೆಂದು ಹೇಳುತ್ತೀರೋ? (ಶಾಂಕರಭಾಷ್ಯದ ವ್ಯಾಖ್ಯಾನಗಳಲ್ಲಿ ಕೆಲವೊಂದೆಡೆ ಅವಿದ್ಯೆಯನ್ನು ಶ್ರುತಿಪ್ರತಿಪಾದ್ಯವೆಂದು ಹೇಳಲಾಗಿದೆ. ಆದ್ದರಿಂದ ಪ್ರಕೃತ ಗ್ರಂಥಕಾರರು ಅವಿದ್ಯಾಪಕ್ಷವನ್ನೂ ಕೂಡ ವಿಕಲ್ಪಮಾಡಿ ಖಂಡನೆ ಮಾಡುತ್ತಿದ್ದಾರೆ.)

**नाद्यः । तेषां जनिमत्वादनेकत्वाच्च ''अजामेकाम्'' इत्याद्ययोगात् ।**

ತೇಜೋಬನ್ನಗಳೇ ಪ್ರತಿಪಾದ್ಯವೆಂಬ ಪ್ರಥಮಪಕ್ಷವು ಅಯುಕ್ತ. ಏಕೆಂದರೆ ತೇಜೋಬನ್ನಗಳಿಗೆ ಜನಿಮತ್ವವು ಇರುವುದರಿಂದ ಶ್ರುತಿಯಲ್ಲಿ ಹೇಳಿರುವ ಜನನರಾಹಿತ್ಯವೆಂಬ ಅಜಾತ್ವವು ಕೂಡುವುದಿಲ್ಲ. ಮತ್ತು ಅನೇಕವಾಗಿರುವುದರಿಂದ ಏಕತ್ವವೂ ಕೂಡ ಕೂಡುವುದಿಲ್ಲ. ಆದ್ದರಿಂದ 'ಅಜಾಮೇಕಾಮ್' ಎಂಬ ಪದಗಳಿಂದ ಪ್ರತಿಪಾದ್ಯವಾಗಲು ಸಾಧ್ಯವಿಲ್ಲ.

**नच त्रिवृत्करणादेकत्वम् ।**

ತೇಜಸ್ಸು, ನೀರು, ಅನ್ನ ಇವು ಮೂರು ಪ್ರತ್ಯೇಕವಾಗಿ ಬೇರೆ ಬೇರೆಯಾಗಿದ್ದರೂ ಮೂರು ಕೂಡ ಒಟ್ಟಿಗೆ ಸೇರಿ ತ್ರಿವೃತ್ಕರಣವನ್ನು ಹೊಂದುತ್ತವೆ. ಸಮುದಾಯ ವಿವಕ್ಷೆಯಿಂದ ಶ್ರುತಿಯಲ್ಲಿ ಏಕತ್ವವನ್ನು ಹೇಳಿದ್ದು ಕೂಡಬಹುದೆಂಬ ಸಮರ್ಥನೆಯೂ ಕೂಡ ಸಾಧುವಲ್ಲ.

**''तासां त्रिवृतं त्रिवृतमेकैकां करवाणि'' इति प्रत्येकं त्रिवृत्करणश्रवणेन त्रिवृत्कृतसमुदायानामपि त्रित्वात् ।**

ಏಕೆಂದರೆ ತೇಜಸ್, ಅಪ್, ಅನ್ನ, ಮೂರು ಸೇರಿ ಒಂದೇ ಆಗಿದೆಯೆಂದು ಶ್ರುತಿಯು ಹೇಳಿದ್ದರೆ ಸಮುದಾಯವಿವಕ್ಷೆಯಿಂದ ಏಕವಚನವನ್ನು ಪ್ರಯೋಗಿಸಬಹುದಿತ್ತು. ಆದರೆ ಪ್ರತಿಯೊಂದೂ ಕೂಡ ತ್ರಿವೃತ್ಕರಣವನ್ನು ಹೊಂದಿವೆಯೆಂದು ಶ್ರುತಿ ಹೇಳುತ್ತಿದೆ. 'ತಾಸಾಂ ತ್ರಿವೃತಂ ತ್ರಿವೃತಮ್ಯೈಕೈಕಾಂ ಕರವಾಣಿ' ಎಂಬ ವಾಕ್ಯವನ್ನು ನೋಡಿದಾಗ ತೇಜಸ್ಸು, ತ್ರಿವೃತ್ಕರಣವನ್ನು ಹೊಂದಿದೆ. ನೀರೂ ಕೂಡ ತ್ರಿವೃತ್ಕರಣವನ್ನು ಹೊಂದಿದೆ. ಪೃಥಿವಿಯೂ ಕೂಡ ತ್ರಿವೃತ್ಕರಣವನ್ನು ಹೊಂದಿದೆ. ಹೀಗೆ ಪ್ರತ್ಯೇಕವಾಗಿ ಒಂದೊಂದೂ ಕೂಡ ತ್ರಿವೃತ್ಕರಣವಾಗಿದೆ ಎಂದು ಶ್ರುತವಾಗಿರುವುದರಿಂದ, ತ್ರಿವೃತ್ಕೃತವಾದ ಮೂರು ಸಮುದಾಯಗಳಿವೆ ಎಂದು ಹೇಳಿದಂತಾಯಿತು. ಆದ್ದರಿಂದ ಏಕವಚನವನ್ನು ಸಮರ್ಥಿಸಲು ಸಾಧ್ಯವಾಗುವುದಿಲ್ಲ.

ಜ್ಯೋತಿರುಪಕ್ರಮಾಧಿಕರಣ (1-4-2)

**नन्वेतत् ''कल्पन'' इति सूत्रेणैव परिहृतम् । यथा ''आदित्योवा देवतामध्व'' इत्यादावादित्ये मधुत्वं कल्प्यते तथा तेजोबन्नेष्वजात्वं छागीत्वं कल्प्यत इत्यस्यार्थ इति चेत्**

ಪ್ರಶ್ನೆ - ಈ ಆಶಂಕೆಯನ್ನು 'ಕಲ್ಪನೋಪದೇಶಾಚ್ಚ' ಎಂಬ ಸೂತ್ರದಿಂದಲೇ ಪರಿಹರಿಸಿದ್ದಾಗಿದೆ. ಯಾವರೀತಿಯಾಗಿ 'ಆದಿತ್ಯೋವಾ ದೇವತಾಮಧ್ವ' ಇತ್ಯಾದಿ ಶ್ರುತಿಯಲ್ಲಿ ಆದಿತ್ಯನನ್ನೇ 'ಮಧು' ಎಂದು ಕರೆಯಲಾಗಿದೆ. ಇದರ ಅಭಿಪ್ರಾಯವೇನೆಂದರೆ ಆದಿತ್ಯನಲ್ಲಿ ಮಧುತ್ವವು ಸರ್ವಥಾ ಇರುವುದಿಲ್ಲ. ಆದರೂ ಕೂಡ ಆರೋಪಿತವಾಗಿ ಮಧುತ್ವವನ್ನು ಕಲ್ಪನೆ ಮಾಡಿ, ಉಪಾಸನೆ ಮಾಡಬೇಕೆಂದು ಶ್ರುತಿ ಹೇಳುತ್ತಿದೆ. ಅದರಂತೆ ತೇಜೋಬನ್ನಗಳಲ್ಲಿ ಅಜಾತ್ವವಾಗಲೀ, ಏಕತ್ವವಾಗಲೀ, ಛಾಗೀತ್ವವಾಗಲೀ ಇರುವುದಿಲ್ಲ. ಆದರೂ ಕಲ್ಪನೆ ಮಾಡಬೇಕು.

**कल्पनाऽऽरोपो वा गौणीवृत्तिर्वा ? नाद्यः । पामरमनोरञ्जनार्थं काव्यादाविव श्रुतिषु कल्पनोपदेशो फलाभावात् ।**

ಉತ್ತರ - ಕಲ್ಪನಾ ಎಂದರೆ ಆರೋಪ ಎಂದರ್ಥವೋ, ಅಥವಾ ಗೌಣೀವೃತ್ತಿಯಿಂದ ಹಾಗೆ ವ್ಯಾಖ್ಯಾನ ಮಾಡಬೇಕೆಂದರ್ಥವೋ? ಆರೋಪವೆಂದು ಹೇಳಲಾಗದು. ಏಕೆಂದರೆ ಕಾವ್ಯಾದಿಗಳಲ್ಲಿ ಪಾಮರಜನರ ಮನೋರಂಜನೆಗೋಸ್ಕರ ಮುಖವನ್ನೇ ಚಂದ್ರ ಎಂದು ಕಲ್ಪನೆ ಮಾಡಿ ವರ್ಣಿಸಲಾಗುತ್ತದೆ. ಅದರಂತೆ ಶ್ರುತಿಯು ಪಾಮರಜನರ ಮನೋರಂಜನಕ್ಕಾಗಿ ಹೊರಟಿರುವುದಲ್ಲ. ಆದ್ದರಿಂದ ಶ್ರುತಿಯ ಯಾವುದೇ ವಾಕ್ಯದಲ್ಲಿಯೂ ಇಂತಹ ಕಲ್ಪನೆಗಳಿರುತ್ತವೆಂದು ಊಹಿಸಬಾರದು.

**अन्यथा सांख्याभिमतप्रकृतावेव लोहितत्वाद्यारोप इति स्यात् ।**

ಹಾಗೇನಾದರೂ ಶ್ರುತಿಯು ಕಲ್ಪಿತವಾದುದ್ದನ್ನು ಹೇಳುತ್ತಿದೆ ಎನ್ನುವುದಾದಲ್ಲಿ, ಸಾಂಖ್ಯರಿಗೆ ಅಭಿಮತವಾದ ಪ್ರಕೃತಿಯಲ್ಲಿಯೇ ಲೋಹಿತತ್ವಾದಿಗಳನ್ನೇ ಆರೋಪ ಮಾಡಬಹುದು.

**'देवमधु' इत्यादिकं तु मधुशब्दवाच्यत्वपरमित्युक्तम् ।**

ಪ್ರಶ್ನೆ - ಶ್ರುತಿಯಲ್ಲಿ 'ಆದಿತ್ಯೋವಾ ದೇವತಾಮಧು' ಎಂಬುದಾಗಿ ಆದಿತ್ಯನಲ್ಲಿ ಮಧುತ್ವದ ಕಲ್ಪನೆ ಇದೆಯಲ್ಲವೆ ?

ಉತ್ತರ - ಆದಿತ್ಯನು ಸುಖಕರನಾದ್ದರಿಂದ ಶ್ರುತಿಯು ಮಧು ಎಂದು ಆದಿತ್ಯನನ್ನು ಕರೆದಿದೆ. ಆದ್ದರಿಂದ ಆದಿತ್ಯನಲ್ಲಿ ಮಧುತ್ವವು ಕಲ್ಪಿತವಾಗಿಲ್ಲ. ಹೊರತಾಗಿ, ಮಧುಶಬ್ದ ವಾಚ್ಯತ್ವವೇ ಇರುತ್ತದೆಂದು ತಿಳಿಯಬೇಕು.

**न चाजाशब्दोऽनन्यगतिकः योगस्य सम्भवात् ।**

ಪ್ರಶ್ನೆ - ಅಜಾಶಬ್ದಕ್ಕೆ ಬೇರೆ ಗತಿಯಿಲ್ಲದ ಕಾರಣ ಹೀಗೆ ವ್ಯಾಖ್ಯಾನ ಮಾಡುವುದು ಅನಿವಾರ್ಯವಲ್ಲವೇ?

ಉತ್ತರ - ಹಾಗೇನಿಲ್ಲ. ಪ್ರಕೃತಿಯಲ್ಲಿ ಜನನರಾಹಿತ್ಯವೆಂಬ ಯೋಗಾರ್ಥವನ್ನೇ ಹೇಳಲು ಸಾಧ್ಯವಿದೆ.

**''शरीरं रथमेव च गौरनाद्यन्तवति'' इत्यादौ तु शरीरप्रकृत्यादौ रथगवादिशब्दा गौणाः । नत्वारोपनिमित्तकाः ।**

ಪ್ರಶ್ನೆ - 'ಶರೀರಂ ರಥಮೇವ ಚ' ಎಂಬ ಶ್ರುತಿಯಲ್ಲಿ ಶರೀರವನ್ನೇ ರಥವೆಂದು ಶ್ರುತಿಯು ಆರೋಪ ಮಾಡುತ್ತಿದೆ. 'ಗೌರನಾದ್ಯಂತವತಿ' ಎಂಬ ಶ್ರುತಿಯು ಪ್ರಕೃತಿಯಲ್ಲಿ ಗೋತ್ವವನ್ನು ಆರೋಪ ಮಾಡುತ್ತಿದೆಯಲ್ಲವೇ?

ಉತ್ತರ - ಶ್ರುತಿಗೆ ಹಾಗರ್ಥವಲ್ಲ. ಶರೀರವನ್ನು ರಥವೆಂದು ಹೇಳಿದ್ದು. ಅಥವಾ ಪ್ರಕೃತಿಯನ್ನು 'ಗೋ' ಎಂದು ಹೇಳಿದ್ದು ಗೌಣಪ್ರಯೋಗ ಹೊರತು, ಆರೋಪನಿಮಿತ್ತಕವಲ್ಲ.

**न द्वितीयः । योगेन मुख्यत्वसम्भवे गौणत्वायोगात् । लोहितादिविशेषण शब्दानामेव प्रकृतौ गौणत्वस्यन्याय्यत्वेन विशेष्यतया प्रधानभूताजाशब्दे तस्यान्याय्यत्वाच्च ।**

ಕಲ್ಪನಾಶಬ್ದಕ್ಕೆ ಗೌಣವಾಗಿ ವ್ಯಾಖ್ಯಾನ ಮಾಡಬೇಕೆಂಬ ಎರಡನೆಯ ಪಕ್ಷವೂ ಕೂಡ ಸರಿಯಲ್ಲ. ಏಕೆಂದರೆ ಅಜಾ ಮೊದಲಾದ ಶಬ್ದಗಳಿಗೆ ಮುಖ್ಯಾರ್ಥವನ್ನೇ ಹೇಳಲು ಬರುವಾಗ ಗೌಣಾರ್ಥವನ್ನು ಸ್ವೀಕರಿಸಬಾರದು. ಶ್ರುತಿಯಲ್ಲಿ ಅಜಾಶಬ್ದವು ವಿಶೇಷ್ಯವಾಗಿದೆ. ಲೋಹಿತಾದಿಶಬ್ದಗಳು ವಿಶೇಷಣ-ವಾಗಿದೆ. ಪ್ರಧಾನವಾದ ವಿಶೇಷ್ಯವಾಚಕವಾದ ಅಜಾಶಬ್ದಕ್ಕೆ ಪ್ರಕೃತಿಯೆಂಬ ಮುಖ್ಯಾರ್ಥವನ್ನೇ ವಿವಕ್ಷಿಸಿ, ವಿಶೇಷಣವಾದ್ದರಿಂದ ಅಪ್ರಧಾನವಾದ ಲೋಹಿತಾದಿಶಬ್ದಗಳಿಗೆ ಪ್ರಕೃತಿಯಲ್ಲಿ ಗೌಣಾರ್ಥವನ್ನು ಮಾಡುವುದೇ ನ್ಯಾಯವಾದದ್ದು. ಇದಕ್ಕೆ ವಿರುದ್ಧವಾಗಿ ಅಪ್ರಧಾನವಾದ ಲೋಹಿತಾದಿಶಬ್ದಗಳಿಗೆ ಮುಖ್ಯಾರ್ಥವನ್ನು ಮಾಡಿ ಪ್ರಧಾನವಾದ ಅಜಾಶಬ್ದಕ್ಕೆ ಗೌಣಾರ್ಥ ಮಾಡುವುದು ಅನ್ಯಾಯವಾಗಿದೆ.

**किञ्च ''गौरनाद्यन्तवती भूतभाविनी सिताऽसिताच रक्ताच'' इति श्रुत्यन्तरोक्तैवेह प्रत्यभिज्ञायते ।**

ಮತ್ತು 'ಗೌರನಾದ್ಯಂತವತೀ ಭೂತಭಾವಿನೀ ಸಿತಾಽಸಿತಾಚ ರಕ್ತಾಚ' ಎಂಬ ಮತ್ತೊಂದು ಶ್ರುತಿಯಲ್ಲಿ ಇದೇ ರೀತಿಯ ಪದಗಳಿಂದ ಪ್ರಕೃತಿಯನ್ನು ವರ್ಣಿಸಲಾಗಿದೆ. ಅಥರ್ವಣೋಪನಿಷತ್ತಿನಲ್ಲಿ ಹೇಳಿದ್ದೇ ಈ ಶ್ರುತಿಯಲ್ಲಿ ಪ್ರತ್ಯಭಿಜ್ಞಾನವಾಗುತ್ತಿದೆ.

ಜ್ಯೋತಿರುಪಕ್ರಮಾಧಿಕರಣ (1-4-2)

**साचानाद्यन्तवतीत्वान्न तेजोबन्नरूपा । लोहितादिशब्दानां रूपपरत्वं चायुक्तम् ।**

ಪ್ರಶ್ನೆ - ಆಥರ್ವಣೋಪನಿಷತ್ತಿನಲ್ಲಿರುವ ಗೌರನಾದ್ಯವಂತವತೀ ಎಂಬ ಶ್ರುತಿಯೂ ಕೂಡ ತೇಜೋಬನ್ನವಿಷಯಕ ಆಗಿದೆಯಲ್ಲವೇ?

ಉತ್ತರ - ಹಾಗೇ ಹೇಳಲಾಗದು. ತೇಜೋಬನ್ನಗಳು ಅನಾದ್ಯಂತಗಳಲ್ಲ. ಮತ್ತು 'ಸಿತಾऽಸಿತಾಚ ರಕ್ತಾಚ' ಎಂಬುದಾಗಿ ಲೋಹಿತಾದಿ ಶಬ್ದಗಳಿಗೆ ಕೆಂಪು, ಬಿಳಿ ಮೊದಲಾದ ಅರ್ಥವನ್ನೂ ಕೂಡ ನೀವು ಹೇಳುತ್ತಿಲ್ಲ. ಆದರೆ ಲೋಹಿತಾದಿ ಶಬ್ದಗಳಿಗೆ ಬಣ್ಣ ಎಂಬರ್ಥವನ್ನೂ ಕೂಡ ಹೇಳುವುದು ಅಯುಕ್ತವಾಗಿದೆ.

**''देवात्मशक्तिं स्वगुणैर्निगूढाम्'' इति वाक्यशेषे सत्त्वादिषु प्रसिद्धगुणशब्द-श्रवणात् । स्वीकृताच त्वयापि शक्तिवाक्यस्याविद्यापरता ।**

ಇದೇ ಶ್ರುತಿಯ ವಾಕ್ಯಶೇಷದಲ್ಲಿ 'ದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್' ಎಂಬುದಾಗಿ ಸತ್ವರಜಸ್ತಮೋಗುಣಗಳಲ್ಲಿ ಪ್ರಸಿದ್ಧವಾದ ಗುಣಶಬ್ದವು ಶ್ರುತವಾಗಿದೆ. ಆದ್ದರಿಂದ ಲೋಹಿತಾದಿಶಬ್ದಗಳಿಗೆ ಬಣ್ಣ ಎಂಬರ್ಥವನ್ನು ಹೇಳದೇ ಸತ್ವಾದಿಗುಣಗಳು ಎಂಬರ್ಥವನ್ನೇ ಹೇಳಬೇಕು. ಮತ್ತು ನೀನೂ ಸಹ ಈ ಶಕ್ತಿವಾಕ್ಯಕ್ಕೆ ಅವಿದ್ಯಾಪರತ್ವವನ್ನು ಅಂಗೀಕರಿಸಿರುವಿ.

**प्रकाशः –**

आद्यसूत्रार्थोऽयुक्त इत्याह – **इदमिति** ।। ज्योतिस्सूत्रार्थमपि निराह – **ब्रह्मेति**।।

ವಿವರಣೆ - ಅದ್ವೈತಿಗಳ ಅಧಿಕರಣಶರೀರವನ್ನು ಇಲ್ಲಿಯ ತನಕ ಅನುವಾದ ಮಾಡಿದ್ದಾಯಿತು. ಪ್ರಕೃತ 'ಚಮಸವದವಿಶೇಷಾತ್' ಎಂಬ ಪ್ರಥಮಸೂತ್ರಕ್ಕೆ ಅವರು ಮಾಡುವ ವ್ಯಾಖ್ಯಾನವನ್ನು 'ಇದಮ್' ಇತ್ಯಾದಿ ವಾಕ್ಯದಿಂದ ನಿರಾಕರಿಸಲು ಹೊರಟಿದ್ದಾರೆ. 'ಜ್ಯೋತಿಃ' ಎಂಬ ಸೂತ್ರಾರ್ಥವನ್ನು 'ಬ್ರಹ್ಮ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಿದ್ದಾರೆ.

**प्रकाशः** – चिन्ताया अतिव्याप्तिनिरासः फलम् । यथोक्तं ''त्रिपाद्यामसम्भवनिरासः। चतुर्थेऽतिव्याप्तिनिरासः'' इति ।

ಈ ಪಾದದಲ್ಲಿ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ನಿರಾಸ ಮಾಡುವುದೇ ಫಲವಾಗಿದೆ. ಇದನ್ನೇ 'ತ್ರಿಪಾದ್ಯಾಮಸಂಭವನಿರಾಸಃ ಚತುರ್ಥೇऽತಿವ್ಯಾಪ್ತಿನಿರಾಸಃ' ಎಂದು ಹೇಳಲಾಗಿದೆ.

ಪರಿಪೂರ್ಣಚಂದ್ರಿಕಾ

**प्रकाशः** – प्रधाननिरासेपि तेजोबन्नानीत्युक्त्याऽतिव्याप्तिसमर्थनमेव फलितम् । तच्च व्यर्थमित्यर्थः । अतो ब्रह्मपरमित्येव वाच्यमन्यद्वोदाहार्यमिति भावः ।

ಆದರೆ 'ಅಜಾಮೇಕಾಮ್' ಇತ್ಯಾದಿ ಶ್ರುತಿಯಿಂದ ಪ್ರಧಾನವು ಪ್ರತಿಪಾದ್ಯವಲ್ಲದ ಕಾರಣ ಜಗತ್ಕಾರಣತ್ವಲಕ್ಷಣಕ್ಕೆ ಅತಿವ್ಯಾಪ್ತಿ ಬರುವುದಿಲ್ಲವೆಂದು ನೀವು ಸಮರ್ಥನೆ ಮಾಡಿದರೂ, ತೇಜೋಬನ್ನಗಳನ್ನು ಪ್ರತಿಪಾದ್ಯವೆಂದು ಒಪ್ಪುವುದರಿಂದ ಬ್ರಹ್ಮನ ಲಕ್ಷಣಕ್ಕೆ ತೇಜೋಬನ್ನಾದಿಗಳಲ್ಲಿ ಅತಿವ್ಯಾಪ್ತಿಯು ಬಂದೇ ಬರುತ್ತದೆ. ಇದು ವ್ಯರ್ಥವಾದದ್ದು. ಆದ್ದರಿಂದ ಶ್ರುತಿಯು ಬ್ರಹ್ಮಪರವಾಗಿದೆಯೆಂದೇ ಹೇಳಬೇಕು. ಇಲ್ಲದಿದ್ದರೆ 'ಅಜಾಮೇಕಾಮ್' ಎಂಬುದನ್ನು ವಿಷಯವಾಕ್ಯವೇ ಅಲ್ಲವೆಂದು ಹೇಳಿ, ಬೇರೆ ವಾಕ್ಯವನ್ನು ಈ ಅಧಿಕರಣದ ವಿಷಯವೆಂದು ಪರಿಗಣಿಸಬೇಕು.

**प्रकाशः** – तदुक्तमनुव्याख्याने –

अजामेकामिति प्राह श्रुतिरेतां यदा तदा ।
को दोषस्सर्वथैवास्ति परिणामि जडं यदि ।। इति ।

ಇದನ್ನೇ ಅನುವ್ಯಾಖ್ಯಾನದಲ್ಲಿ -

ಅಜಾಮೇಕಾಮಿತಿ ಪ್ರಾಹ ಶ್ರುತಿರೇತಾಂ ಯದಾ ತದಾ।
ಕೋ ದೋಷಃ ಸರ್ವಥೈವಾಸ್ತಿ ಪರಿಣಾಮಿ ಜಡಂ ಯದಿ॥

'ಅಜಾಮೇಕಾಮ್' ಎಂಬ ಶ್ರುತಿಯು ಜಡವಾದ ತೇಜೋಬನ್ನಗಳನ್ನು ಪ್ರತಿಪಾದನೆ ಮಾಡುತ್ತಿದೆಯೆನ್ನುವುದಾದರೆ ಪ್ರಕೃತಿಯನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಏಕೆ ಹೇಳಬಾರದು? ಎಂದು ಹೇಳಿರುತ್ತಾರೆ.

**प्रकाशः** – अतिव्याप्तिनिरासस्योभयत्राप्यभावादिति भावः । न केवलं निष्फलम् । अयुक्तं च तेजोबन्नपरत्वसमर्थनमिति भावेन ''किञ्च तेजोबन्नेषु न तावदजाशब्दो रूढः'' इत्यादिसुधावाक्यं विवृण्वन् दोषान्तरमाह – **किञ्चेति** ।।

ಬ್ರಹ್ಮನ ಜಗತ್ಕಾರಣತ್ವಲಕ್ಷಣಕ್ಕೆ ಅತಿವ್ಯಾಪ್ತಿಯ ಪರಿಹಾರವನ್ನು ಎರಡು ಪಕ್ಷದಲ್ಲಿಯೂ ಕೂಡ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಪ್ರಕೃತಿ ಈ ಶ್ರುತಿಯಿಂದ ಪ್ರತಿಪಾದ್ಯವಾಗಬಹುದಲ್ಲವೇ? ಅದನ್ನು ಬಿಟ್ಟು ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳುವುದು ನಿಷ್ಫಲವಾಗಿದೆ. ಅಷ್ಟೇ ಅಲ್ಲದೆ ತೇಜೋಬನ್ನಪರತ್ವದ ಸಮರ್ಥನೆಯು ಅಯುಕ್ತ ಆಗಿದೆ. ಈ ಅಭಿಪ್ರಾಯದಿಂದ 'ಕಿಂಚ ತೇಜೋಬನ್ನೇಷು ನ ತಾವದಜಾಶಬ್ದೋ ರೂಢಃ' ತೇಜೋಬನ್ನಗಳಲ್ಲಿ ಶ್ರುತಿಯಲ್ಲಿರುವ ಅಜಾಶಬ್ದವು ರೂಢವಾಗಿರುವುದಿಲ್ಲ. ಇತ್ಯಾದಿಯಾಗಿ

ಸುಧಾವಾಕ್ಯವನ್ನು ವಿವರಿಸುವವರಾಗಿ ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः – श्लोकं व्याचष्टे – इयमिति ।। किन्तेज इति ।। मायाऽविद्याशब्दित-परमप्रकृतिजन्यावान्तरप्रकृतिरूपेत्यर्थः ।। अविद्येति ।। तत्कारणपरमप्रकृति-रूपेत्यर्थः ।।**

ಗ್ರಂಥದಲ್ಲಿ ತೇಜೋಬನ್ನರೂಪವಾದದ್ದು ಅಜಾಶಬ್ದ ಪ್ರತಿಪಾದ್ಯವೋ, ಅಥವಾ ಅವಿದ್ಯೆಯು ಅಜಾಶಬ್ದ ಪ್ರತಿಪಾದ್ಯವೋ ? ಎಂದು ಪ್ರಶ್ನಿಸಿದ್ದಾರೆ. ಇದರ ಅಭಿಪ್ರಾಯವೇನೆಂದರೆ ಅವಿದ್ಯಾಶಬ್ದದಿಂದ ಪ್ರತಿಪಾದ್ಯವಾದ ಪರಮಪ್ರಕೃತಿಯಿಂದ ಜನ್ಯವಾದ ಅವಾಂತರಪ್ರಕೃತಿಯನ್ನು ತೇಜೋಬನ್ನವೆಂದು ವಿವಕ್ಷಿಸಿ ಮುಖ್ಯಕಾರಣವಾದ ಪರಮಪ್ರಕೃತಿಯನ್ನು ಅವಿದ್ಯಾಶಬ್ದದಿಂದ ವಿವಕ್ಷಿಸಬೇಕು.

**प्रकाशः – जनिमत्त्वादिति ।। एतेनाजैकत्वेत्यत्राजात्वैकत्वेति व्याख्यातम् ।। छागीत्वमिति ।। अजाशब्दस्य छाग्यां रूढत्वेन तदाकारस्य तेजोबन्नेष्वभावादिति भावः ।**

ಶ್ರುತಿಯಲ್ಲಿರುವ 'ಅಜಾ' ಮತ್ತು 'ಏಕಾ' ಎಂಬ ಶಬ್ದಗಳಿಂದ ಅಜಾತ್ವ ಮತ್ತು ಏಕತ್ವಗಳನ್ನು ವಿವಕ್ಷಿಸಬೇಕೆಂದು 'ಜನಿಮತ್ವಾತ್' 'ಅನೇಕತ್ವಾತ್' ಎಂದು ಹೇಳಿರುತ್ತಾರೆ. 'ಛಾಗೀತ್ವಮ್ ಕಲ್ಪ್ಯತೇ' ಎಂದು ಗ್ರಂಥದಲ್ಲಿದೆ. ಅಜಾಶಬ್ದಕ್ಕೆ ಹೆಣ್ಣುಮೇಕೆಯಲ್ಲಿ ರೂಢಾರ್ಥವಿದೆ. ಅಂತಹ ಛಾಗೀಪಶುವಿನ ಆಕಾರವು ತೇಜೋಬನ್ನಗಳಲ್ಲಿ ಇಲ್ಲದ ಕಾರಣ ಕಲ್ಪನೆ ಮಾಡಬೇಕೆಂದು ಇದರ ಅಭಿಪ್ರಾಯ.

**प्रकाशः –** छागीति ''जातेरस्त्रीविषयादयोपधात्'' इतीकारान्तं साधु । आहचामरोपि ''अजा छागी शुभच्छागबस्तच्छगलका अजा'' इति । सुधायां च ''अजाशब्देन रूढत्वाच्छागी स्वीकर्तुमुचितः'' इति प्रयुक्तम् । एवं च परभाष्ये भामत्यां च ''छागायां रूढः'' इति ''छागातोऽपकृष्टस्य'' इति कल्पतरौ चाकारान्तप्रयोगोऽपभ्रंश इति सूचितम् ।

'ಛಾಗೀತ್ವಮ್ ಕಲ್ಪ್ಯತೇ' ಎಂದು ಗ್ರಂಥಕಾರರ ವಾಕ್ಯಪ್ರಯೋಗದಿಂದ ಅದ್ವೈತಿಗಳ ಮತ್ತೊಂದು ವಿಚಾರವೂ ಕೂಡ ನಿರಸ್ತವಾಯಿತು. 'ಜಾತೇರಸ್ತ್ರೀವಿಷಯಾದಯೋಪಧಾತ್' ಎಂಬ ವ್ಯಾಕರಣಸೂತ್ರದಲ್ಲಿ 'ಯಕಾರವು ಉಪಧಾದಲ್ಲಿ ಇಲ್ಲದಿದ್ದಾಗ ಜಾತಿಯು ವಿವಕ್ಷಿತವಾದಾಗ, ಈಕಾರಾಂತ ಶಬ್ದವು ಸಾಧುವಾಗುತ್ತದೆ ಎಂದು ಹೇಳುತ್ತಿದೆ. 'ಛಾಗೀ' ಎಂಬ ಶಬ್ದವು ಅಯೋಪಧವಾಗಿದೆ ಮತ್ತು ಜಾತಿವಾಚಕವಾಗಿದೆ. ಆದ್ದರಿಂದ ಈಕಾರ ಬಂದು 'ಛಾಗೀ' ಎಂಬ ರೂಪವು ನಿಷ್ಪನ್ನವಾಗುತ್ತದೆ. ಅಮರಕೋಶದಲ್ಲಿಯೂ ಕೂಡ 'ಅಜಾ

ಭಾಗೀ ಶುಭಾಚ್ಛಾಗಬಸ್ತಚ್ಛಗಲಕಾ ಅಜಾ' ಎಂಬುದಾಗಿ 'ಭಾಗೀ' ಎಂಬ ಪ್ರಯೋಗವನ್ನೇ ನೋಡಬಹುದು. ನ್ಯಾಯಸುಧೆಯಲ್ಲಿಯೂ ಕೂಡ, 'ಅಜಾಶಬ್ದೇನ ರೂಢತ್ವಾಚ್ಛಾಗೀ ಸ್ವೀಕರ್ತುಮುಚಿತಾ' ಎಂದು ಭಾಗೀ ಎಂಬ ಪ್ರಯೋಗವನ್ನೇ ಮಾಡಿರುತ್ತಾರೆ. ಆದರೆ ಶಾಂಕರಭಾಷ್ಯದಲ್ಲಿ ಮತ್ತು ಭಾಮತಿಯಲ್ಲಿ 'ಛಾಗಾಯಾಂ ರೂಢಃ' ಎಂದು 'ಛಾಗಾತೋಽಪಕೃಷ್ಟಸ್ಯ' ಎಂಬುದಾಗಿ ಕಲ್ಪತರುವಿನಲ್ಲಿಯೂ ಆಕಾರಂತವಾದ 'ಛಾಗಾ' ಎಂಬ ಪ್ರಯೋಗವನ್ನು ಮಾಡಿದ್ದಾರೆ. ಇದು ಅಪಭ್ರಂಶವಾದ ಶಬ್ದ. 'ಛಾಗೀ' ಎಂಬುದೇ ಸಾಧುವಾದ ಶಬ್ದವೆಂದು ಗ್ರಂಥಕಾರರು ಸೂಚಿಸಿದ್ದಾರೆ.

**प्रकाशः** – कल्पनेत्यनुवादः। आरोपो गौणीवृत्तिर्वेति तस्य व्याख्यानविकल्पः। सुधोक्तदोषमाह – **पामरेति** ।। कथं तर्हि सौत्रदृष्टान्त इत्यत आह – **देवेति** ।।

'ಕಲ್ಪನೋಪದೇಶಾತ್' ಎಂಬಲ್ಲಿ ಕಲ್ಪನಾಶಬ್ದವನ್ನು ಅನುವಾದ ಮಾಡಿ 'ಆರೋಪೋ ಗೌಣೀವೃತ್ತಿರ್ವಾ' ಎಂದು ಅದರ ವ್ಯಾಖ್ಯಾನವನ್ನು ವಿಕಲ್ಪ ಮಾಡಿದ್ದಾರೆಂದು ತಿಳಿಯಬೇಕು. ಸುಧೆಯಲ್ಲಿ ಹೇಳಿದ ದೋಷವನ್ನೇ 'ಪಾಮರಜನಮನೋರಂಜನಾರ್ಥಮ್' ಎಂಬುದರಿಂದ ತೋರಿಸುತ್ತಿದ್ದಾರೆ. ಹಾಗಾದರೆ ಸೂತ್ರದಲ್ಲಿರುವ ದೃಷ್ಟಾಂತಕ್ಕೆ ಏನರ್ಥ? ಎಂಬ ಪ್ರಶ್ನೆಗೆ 'ದೇವಮಧು' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः** – **इत्युक्तमिति** ।। ''उपजीव्यं प्रसिद्धार्थम्'' इत्यादिना पूर्वत्रैवोक्तमित्यर्थः । अन्यथा ''पामरजनमनोरञ्जन'' इत्यादिनोक्तदोषस्याप्यत्रा-पातादिति भावः ।

'ಉಪಜೀವ್ಯಂ ಪ್ರಸಿದ್ಧಾರ್ಥಮ್' ಇತ್ಯಾದಿ ವಾಕ್ಯದಿಂದ ಈ ಹಿಂದೆಯೇ 'ಮಧ್ವಾದಿವತ್' ಎಂಬುದರ ಅರ್ಥವನ್ನು ಸ್ಪಷ್ಟಪಡಿಸಿದ್ದಾಗಿದೆ. ಹೀಗೆ ಸೂತ್ರಕ್ಕೆ ವ್ಯಾಖ್ಯಾನ ಮಾಡದಿದ್ದರೆ ಪಾಮರಜನಮನೋರಂಜನೆ-ಗೋಸ್ಕರ ಹೊರಡುವ ಕಾವ್ಯಶಾಸ್ತ್ರದಂತೆ ಸೂತ್ರವನ್ನೂ ಕೂಡ ಹೇಳಬೇಕಾದೀತು.

**प्रकाशः** – अनन्यगत्यैवमाश्रीयत इत्यत आह – **नचेति** ।। **योगस्येति** ।। तत्सम्भवश्च वक्ष्यत इति भावः । श्रुतिषु कथमेवं कल्पनेत्यत आह – **शरीरमिति** ।।

ಬೇರೆ ಗತಿಯಿಲ್ಲದ ಕಾರಣ ಅಜಾಶಬ್ದಕ್ಕೆ ಹೀಗೆ ಕಲ್ಪಿತಾರ್ಥವನ್ನು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಅಜಾಶಬ್ದಕ್ಕೆ ಯೋಗಾರ್ಥವನ್ನೇ ವಿವಕ್ಷಿಸಬಹುದೆಂದು ಮುಂದೆ ಸಮರ್ಥಿಸುತ್ತೇವೆ. ಶ್ರುತಿಯಲ್ಲಿ ಇದನ್ನು ಹೇಗೆ ಕಲ್ಪನೆ ಮಾಡುತ್ತೀರಿ ? ಎಂಬ ಪ್ರಶ್ನೆಗೆ 'ಶರೀರಮ್' ಇತ್ಯಾದಿಯಾಗಿ ಉತ್ತರಿಸಿದ್ದಾರೆ.

**प्रकाशः** – ननु प्रधानपक्षे लोहितादिशब्दानां गौणत्वं दोष इत्यत आह – **लोहितेति** ।। अजैकत्वादीत्यादिपदार्थं विवृण्वन् समाख्यानासम्भवं चाह – **किञ्चेति**।।

ಪ್ರಕೃತಿಯೇ ಶ್ರುತಿಯಿಂದ ಪ್ರತಿಪಾದ್ಯವೆಂಬ ಪಕ್ಷದಲ್ಲಿ ಲೋಹಿತಾದಿಶಬ್ದಗಳಿಗೆ ಗೌಣಾರ್ಥವನ್ನು ಮಾಡಿದಂತಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಲೋಹಿತ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. 'ಅಜೈಕತ್ವಾದಿ' ಎಂಬಲ್ಲಿರುವ ಆದಿಪದದ ಅರ್ಥವನ್ನು ವಿವರಿಸುತ್ತಾ ಸಮಾಖ್ಯಾಶ್ರುತಿಯೂ ಕೂಡ ಅಸಂಭಾವಿತವಾಗುತ್ತದೆಂಬ ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ.

**प्रकाशः – श्रुत्यन्तरेति ।।** आथर्वणोपनिषद्गतश्रुत्यन्तरेत्यर्थः । अत एवोक्तं सुधायां ''गौरनाद्यन्तवती सा जनित्री भूतभाविनी । सितासिताच रक्ता च सर्वकामदुघा विभोरित्यादिश्रुतिसमाख्यया निर्णयोपपत्तेरिति'' इति भावः । गौरपि तेजोबन्नरूपैवास्त्वित्यत आह – **साचेति ।।**

'ಶ್ರುತ್ಯಂತರೇ' ಎಂದರೆ ಆಥರ್ವಣೋಪನಿಷತ್ತಿನಲ್ಲಿರುವ ಮತ್ತೊಂದು ಶ್ರುತಿಯಿಂದ ಎಂದರ್ಥ. ಆದ್ದರಿಂದಲೇ ನ್ಯಾಯಸುಧೆಯಲ್ಲಿ

'ಗೌರನಾದ್ಯಂತವತೀ ಸಾ ಜನಿತ್ರೀ ಭೂತಭಾವಿನೀ ।
ಸಿತಾಸಿತಾಚ ರಕ್ತಾ ಚ ಸರ್ವಕಾಮದುಘಾ ವಿಭೋಃ ॥ '

'ಇತ್ಯಾದಿ ಶ್ರುತಿಸಮಾಖ್ಯಯಾ ನಿರ್ಣಯೋಪಪತ್ತೇರಿತಿ' ಇತ್ಯಾದಿ ಶ್ರುತಿಸಮಾಖ್ಯೆಯಿಂದ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಂ' ಎಂಬ ಶ್ರುತ್ಯರ್ಥವನ್ನು ನಿರ್ಣಯ ಮಾಡಬಹುದು ಎಂದು ಹೇಳಿರುತ್ತಾರೆ. ಗೋಶಬ್ದವಾಚ್ಯವಾದದ್ದೂ ಕೂಡ ತೇಜೋಬನ್ನಗಳೇ ಆಗಿವೆ ಎಂಬ ಪ್ರಶ್ನೆಗೆ 'ಸಾಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – अनाद्यन्तवतीत्वादिति ।।** तेजोबन्नस्य जनिमत्त्वेनातथात्वादिति भावः । नन्वनाद्यन्तवत्त्वादिति भवितव्यम् । कथमनाद्यन्तवतीत्वादिति । ''त्वतलोर्गुणवचनस्य'' इति पुंवद्भावोक्तेरिति चेत्

'ಅನಾದ್ಯಂತವತೀತ್ವಾತ್' ಎಂಬುದಕ್ಕೆ ತೇಜೋಬನ್ನಗಳಿಗೆ ಹುಟ್ಟು ಮೊದಲಾದವು ಇರುವುದರಿಂದ ಅನಾದ್ಯಂತವತ್ವವನ್ನು ಹೇಳಲು ಸಾಧ್ಯವಿಲ್ಲ ಎಂದರ್ಥ.

ಪ್ರಶ್ನೆ - ವ್ಯಾಕರಣದ ಪ್ರಕಾರ 'ಅನಾದ್ಯಂತವತ್ವಾತ್' ಎಂದೇ ಗ್ರಂಥಕಾರರು ಪ್ರಯೋಗಿಸಬೇಕಿತ್ತು. ಅದನ್ನು ಬಿಟ್ಟು 'ಅನಾದ್ಯಂತವತೀತ್ವಾತ್' ಎಂದು ಪ್ರಯೋಗಿಸಿದ್ದು ಸರಿಯಲ್ಲ. 'ಆದಿಶ್ಚ ಅಂತ್ಯಶ್ಚ ಆದ್ಯಂತೌ, ಆದ್ಯಂತೌ ಅಸ್ಯಾಃ ಅಸ್ತೀತಿ ಆದ್ಯಂತವತೀ, ನ ಆದ್ಯಂತವತೀ ಅನಾದ್ಯಂತವತೀ, ಅನಾದ್ಯವತ್ಯಾಃ ಭಾವಃ ಅನಾದ್ಯಂತವತ್ವಮ್' ಎಂಬುದಾಗಿ ಸಮಾಸವಾಗುತ್ತದೆ. ಏಕೆಂದರೆ 'ತ್ವತಲೋರ್ಗುಣವಚನಸ್ಯ' ಎಂಬ ಪಾಣಿನಿಸೂತ್ರವು 'ತ್ವ' ಪ್ರತ್ಯಯ ಅಥವಾ 'ತಲ್' ಪ್ರತ್ಯಯ ಇವುಗಳು ಮುಂದಿದ್ದರೆ ಪುಂವದ್ಭಾವವು

ಬರುತ್ತದೆಂದು ಹೇಳುತ್ತಿರುವುದರಿಂದ 'ಙೀಪ್' ಪ್ರತ್ಯಯಗಳು, 'ಕ್ತ್ವಾ' ಪ್ರತ್ಯಯವಾಗಲೀ ಲೋಪವನ್ನು ಹೊಂದುತ್ತವೆ. ಆದ್ದರಿಂದ 'ಅನಾದ್ಯಂತವತ್ವಾತ್' ಎಂದೇ ಆಗುತ್ತದಲ್ಲವೇ?

**प्रकाशः** – उच्यते । अनुक्रियमाणरूपविनाशप्रसङ्गात् ''खलर्थतृनाम्'' इतिवदेवमुक्तम् ।

ಸಮಾಧಾನ - ವ್ಯಾಕರಣದ ಪ್ರಕಾರ 'ಅನಾದ್ಯಂತವತ್ವಾತ್' ಎಂದೇ ಹೇಳಬೇಕು. ಆದರೆ ವ್ಯಾಕರಣಕ್ಕೂ ಮೀರಿ ಕೆಲವೊಮ್ಮೆ ಇಂತಹ ಪ್ರಯೋಗಗಳನ್ನು ಮಾಡಲಾಗುತ್ತದೆ. ಉದಾಹರಣೆ - ವ್ಯಾಕರಣಶಾಸ್ತ್ರದಲ್ಲಿಯೇ 'ನ ಲೋಕಾವ್ಯಯನಿಷ್ಠಾ ಖಲರ್ಥತೃನಾಮ್' ಎಂಬ ಸೂತ್ರದಲ್ಲಿ 'ತೃನಾಮ್' ಎಂದೇ ಪ್ರಯೋಗಿಸಲಾಗಿದೆ. ವಾಸ್ತವಿಕವಾಗಿ 'ರಷಾಭ್ಯಾಂ ನೋಣಃ ಸಮಾನಪದೇ' ಎಂಬ ಸೂತ್ರದಂತೆ ಣಕಾರವನ್ನು ವಿವಕ್ಷಿಸಿ 'ತೃಣಾಮ್' ಎಂದೇ ಪ್ರಯೋಗಿಸಬೇಕಿತ್ತು. ಆದರೆ ಅದನ್ನು ಮೀರಿ 'ತೃನಾಮ್' ಎಂದೇ ಪಾಣಿನಿಯು ಪ್ರಯೋಗಿಸಿದ್ದಾನೆ. ಕಾರಣವೇನೆಂದರೆ ಇಲ್ಲಿ 'ತೃನ್' ಪ್ರತ್ಯಯವೇ ವಿವಕ್ಷಿತ ಹೊರತು, ಮತ್ತೊಂದು ಪ್ರತ್ಯಯವಲ್ಲ ಎಂದು ಅನುಕರಣೆ ಮಾಡುವುದಕ್ಕಾಗಿ. 'ತೃನಾಮ್' ಎಂಬುದು ಅನುಕರಣಶಬ್ದ. 'ತೃನ್' ಪ್ರತ್ಯಯವು ಅನುಕ್ರಿಯಮಾನವಾದ ಶಬ್ದ. ತೃನ್ ಪ್ರತ್ಯಯವು ವಿನಾಶವಾಗಬಾರದು ಎಂಬ ಉದ್ದೇಶದಿಂದ 'ಖಲರ್ಥತೃನಾಮ್' ಎಂದೇ ಪಾಣಿನಿಯು ಪ್ರಯೋಗಿಸಿದ್ದಾನೆ. ಅದರಂತೆ ಪ್ರಕೃತದಲ್ಲಿಯೂ ಶ್ರುತಿಯಲ್ಲಿರುವ 'ಅನಾದ್ಯಂತವತೀ' ಎಂಬುದು ಅನುಕ್ರಿಯಮಾಣವಾದ ಶಬ್ದ. ಆದರ ಅನುಕರಣವನ್ನು ಗ್ರಂಥಕಾರರು 'ಅನಾದ್ಯಂತವತೀತ್ವಾತ್' ಎಂದು ಹೇಳಿದ್ದಾರೆ. ಒಂದುವೇಳೆ ಅನುಕರಣವನ್ನು 'ಅನಾದ್ಯಂತವತ್ವಾತ್' ಎಂದು ಮಾಡಿದ್ದರೆ ಅನುಕ್ರಿಯಮಾಣವಾದ ಶಬ್ದದಲ್ಲಿ ರೂಪವನ್ನು ವ್ಯತ್ಯಾಸ ಮಾಡಿದಂತಾಗುತ್ತಿತ್ತು. ಶ್ರುತಿ ಹೇಗಿದೆಯೋ, ಹಾಗೆಯೇ ಹೇಳಬೇಕೆಂಬ ದೃಷ್ಟಿಯಿಂದ 'ಅನಾದ್ಯಂತವತೀತ್ವಾತ್' ಎಂದು ಪ್ರಯೋಗಿಸಿದ್ದಾರೆ.

**प्रकाशः** – यद्वा गुणवचनग्रहस्य जातिव्यावृत्तिपरत्वेनाभियुक्तैर्व्याख्यानादनुकरण-शब्दस्यचानुक्रियमाणशब्दगतजातिनिमित्तकत्वादेवागुणशब्दत्वेनापुंवद्भावादनाद्यन्तव-तीत्वादिति साधु ।

ಅಥವಾ ಪಾಣಿನಿಯ ಸೂತ್ರದಲ್ಲಿ 'ತ್ವತುಲೋರ್ಗುಣವಚನಸ್ಯ' ಎಂಬುದಾಗಿ ಗುಣವಚನ ಶಬ್ದದಲ್ಲಿ ಪುಂವದ್ಭಾವವನ್ನು ಹೇಳಲಾಗಿದೆ. ಆದರೆ 'ಅನಾದ್ಯಂತವತೀತ್ವಾತ್' ಎಂಬುದು ಗುಣವಚನ ಶಬ್ದವೇ ಅಲ್ಲ. ಏಕೆಂದರೆ ಗುಣವಚನಶಬ್ದಕ್ಕೆ ಜಾತಿವಾಚಕವಾಗಿರಬಾರದು ಎಂದರ್ಥ. ಉದಾಹರಣೆ - 'ಬ್ರಾಹ್ಮಣೀತ್ವಾತ್' ಎಂಬುದಾಗಿ ಕರೆಯುತ್ತೇವೆ. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವಳು 'ಬ್ರಾಹ್ಮಣೀ' ಎನಿಸಿಕೊಳ್ಳುತ್ತಾಳೆ. 'ಬ್ರಾಹ್ಮಣ್ಯಾಃ ಭಾವಃ ಬ್ರಾಹ್ಮಣೀತ್ವಮ್' ಎಂದೇ ಹೇಳಬೇಕು. ಏಕೆಂದರೆ 'ಬ್ರಾಹ್ಮಣಿ' ಎಂಬ ಶಬ್ದವು ಗುಣವಚನವಲ್ಲ ಹೊರತು ಜಾತಿವಾಚಕವಾಗಿದೆ. ಇಂತಹ ಜಾತಿವಾಚಕವಾದ 'ಬ್ರಾಹ್ಮಣಿ' ಮೊದಲಾದ ಶಬ್ದಗಳನ್ನು ವ್ಯಾವೃತ್ತಿ ಮಾಡಲು ಸೂತ್ರದಲ್ಲಿ ಗುಣವಚನಗ್ರಹಣವನ್ನು ಮಾಡಲಾಗಿದೆ. ಪ್ರಕೃತ 'ಅನಾದ್ಯಂತವತೀ' ಎಂಬ ಶಬ್ದವು ಗುಣವಚನವಲ್ಲ. ಹೀಗೆ ಶಬ್ದಗತವಾದ ಜಾತಿವಿಶೇಷವನ್ನು ವಿವಕ್ಷಿಸಬೇಕಾದ್ದರಿಂದ ಗುಣವಚನವಾಗುವುದಿಲ್ಲ. ಆದ್ದರಿಂದಲೇ ಪುಂವದ್ಭಾವವು ಬರುವುದಿಲ್ಲ.

ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः –** उक्तं च कैयटे ''ऋलृक्'' इति सूत्रे ''अनुक्रियमाणशब्दे या जातिस्समवेता तत्सम्बद्धमनुकार्यमनुकरणं प्रत्याययति'' इति ।

ಇದನ್ನೇ ಕೈಯಟದಲ್ಲಿ ಮಹೇಶ್ವರಸೂತ್ರಗಳ ಮಧ್ಯದಲ್ಲಿರುವ 'ಋಲೃಕ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಅನುಕ್ರಿಯಮಾಣಶಬ್ದೇ ಯಾ ಜಾತಿಃ ಸಮವೇತಾ ತತ್‌ಸಂಬದ್ಧಮನುಕಾರ್ಯಮನುಕರಣಂ ಪ್ರತ್ಯಾಯಯತಿ' ಅನುಕ್ರಿಯಮಾಣಶಬ್ದದಲ್ಲಿ ಯಾವಜಾತಿಯು ಇರುತ್ತದೋ ಆವಾಗ ಅನುಕರಣಶಬ್ದದಲ್ಲಿ ಪುಂವದ್ಭಾವವು ಬರುವುದಿಲ್ಲವೆಂದು ಹೇಳಲಾಗಿದೆ.

**प्रकाशः** यद्यपि गौणत्वापत्तिरिति तदपि नेत्याह – **लोहितेति** ।। ''ते ध्यानयोगानुगता अपश्यन्देवात्मशक्तिं स्वगुणैर्निगूढाम्'' इति श्वेताश्वतर एव पूर्वं श्रवणादिति भावः ।

ಪ್ರಕೃತಿಯನ್ನು ವಿವಕ್ಷಿಸಿದರೆ ಲೋಹಿತ ಮೊದಲಾದ ಶಬ್ದಗಳಿಗೆ ಗೌಣಾರ್ಥವನ್ನು ಮಾಡಬೇಕಾಗುತ್ತದಲ್ಲವೇ? ಎಂದು ಆಕ್ಷೇಪಿಸಲಾಗಿತ್ತು. ಅದನ್ನೂ ಕೂಡ ಈಗ ನಿರಾಕರಣೆ ಮಾಡುತ್ತಿದ್ದಾರೆ 'ಲೋಹಿತ' ಇತ್ಯಾದಿ ವಾಕ್ಯದಿಂದ. ಲೋಹಿತಾದಿಶಬ್ದಗಳಿಗೆ ಬಣ್ಣ ಎಂಬರ್ಥವೇ ಅಲ್ಲ, ಸತ್ವಾದಿಗುಣಗಳು ಎಂದರ್ಥ. ಏಕೆಂದರೆ 'ತೇ ಧ್ಯಾನಯೋಗಾನುಗತಾ ಅಪಶ್ಯಂದೇವಾತ್ಮಶಕ್ತಿಂ ಸ್ವಗುಣೈರ್ನಿಗೂಢಾಮ್' ಎಂಬ ಶ್ವೇತಾಶ್ವತರೋಪನಿಷತ್ತಿನ ಪೂರ್ವವಾಕ್ಯದಲ್ಲಿ ಸ್ವಗುಣಗಳು ಎಂದರೆ ಸತ್ವಾದಿಗುಣಗಳೇ ವಿವಕ್ಷಿತವಾಗಿವೆ. ಅದನ್ನೇ ಇಲ್ಲಿಯೂ ಕೂಡ ಇಟ್ಟುಕೊಳ್ಳಬೇಕಾದ್ದರಿಂದ ಬಣ್ಣ ಎಂಬರ್ಥವನ್ನು ಸರ್ವಥಾ ವಿವಕ್ಷಿಸಲಾಗದು.




ಅದ್ವೈತಿಗಳು ಹೇಳಿದ 'ಚಮಸವದವಿಶೇಷಾತ್' ಎಂಬ ಮೊದಲನೆಯ ಸೂತ್ರಾರ್ಥವೇ ಅಸಾಧುವಾಗಿದೆ. ಏಕೆಂದರೆ 'ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸಃ' ಯಾವುದಕ್ಕೆ ಶಿರಸ್ಸು ಕೆಳಭಾಗದಲ್ಲಿದ್ದು ಉದರವು ಮೇಲ್ಭಾಗದಲ್ಲಿರುತ್ತದೋ, ಅದೇ 'ಚಮಸ' ಎನಿಸುತ್ತದೆ ಎಂದು ನಿಖರವಾಗಿ ಚಮಸವನ್ನು ಪರಿಚಯಿಸಿರುವಾಗ ಚಮಸದ ಬಗ್ಗೆ ಶ್ರುತಿಯು ಸ್ಪಷ್ಟವಾಗಿ ಹೇಳಿಯೇ ಇಲ್ಲ ಎಂಬ ಧೋರಣೆ ಸರಿಯಿಲ್ಲ. ಮತ್ತು 'ಅಜಾಮೇಕಾಮ್' ಎಂಬ ಶ್ರುತಿಯಿಂದ ಪ್ರಕೃತಿಯು ಪ್ರತಿಪಾದ್ಯವಲ್ಲ. ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳುತ್ತಿದ್ದಾರೆ. ಇದು ಹೇಗಾಯಿತೆಂದರೆ ಚೇಳಿಗೆ ಹೆದರಿ ಹಾವಿನ ಮುಖದಲ್ಲಿ ಬಿದ್ದಂತಾಯಿತು. ಪ್ರಧಾನವು ಶ್ರುತಿಪ್ರತಿಪಾದ್ಯವಲ್ಲ. ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳಿದರೆ ಬ್ರಹ್ಮನ ಜಗತ್ಕಾರಣತ್ವಲಕ್ಷಣಕ್ಕೆ ಪ್ರಧಾನದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ. ತೇಜೋಬನ್ನಗಳಲ್ಲಿ ಬರುತ್ತದೆಂದು ಒಪ್ಪಿದಂತಾಯಿತು. ಮತ್ತು

ಅಜಾ ಚೇತ್ ಜ್ಯೋತಿರಾದಿಃ ಸ್ಯಾದಜೈಕತ್ವಾದ್ಯಸಂಭವಃ ।
ಅವಿದ್ಯೇತಿ ತು ಪಕ್ಷೇ ಸ್ಯಾತ್ ಲೋಹಿತತ್ವಾದ್ಯಸಂಭವಃ ॥೧॥

ಅಜಾಶಬ್ದದಿಂದ ತೇಜೋಬನ್ನಾದಿಗಳು ಪ್ರತಿಪಾದ್ಯವೆಂದು ಹೇಳಿದರೆ, ಶ್ರುತಿಯಲ್ಲಿರುವ ಏಕತ್ವ ಮೊದಲಾದವು ಅಸಂಭಾವಿತವಾಗುತ್ತವೆ. ಅವಿದ್ಯೆಯು ಪ್ರತಿಪಾದ್ಯವೆಂದರೆ ಶ್ರುತಿಯಲ್ಲೇ ಹೇಳಿರುವ ಲೋಹಿತತ್ವಾದಿಗಳು ಅಸಂಭಾವಿತವಾಗುತ್ತವೆ.

ತೇಜೋಬನ್ನಗಳಲ್ಲಿ ಅಜಾತ್ವ, ಏಕತ್ವ ಮೊದಲಾದವುಗಳನ್ನು ಆರೋಪಿತವಾಗಿ ಹೇಳಬಹುದಲ್ಲವೇ? ಎಂದು ಅದ್ವೈತಿಗಳು ವಾದಿಸುತ್ತಾರೆ. ಆದರೆ ಶ್ರುತಿಯಲ್ಲಿ ಇಂತಹ ಆರೋಪಿತವಾದ ಅರ್ಥಗಳನ್ನು ಹೇಳುವುದು ಸರ್ವಥಾ ಉಪಯುಕ್ತವಲ್ಲ. ಪಾಮರಜನರ ಮನೋರಂಜನೆಗಾಗಿ ಕಾವ್ಯಗಳಲ್ಲಿ ಇಂತಹ ಉತ್ಪ್ರೇಕ್ಷೆಗಳಿರುತ್ತವೆ. ಆದರೆ ಅಪೌರುಷೇಯವಾದ ವೇದದಲ್ಲಿ ತತ್ವವಿಚಾರವನ್ನು ಬಿಟ್ಟು ಇಂತಹ ಉತ್ಪ್ರೇಕ್ಷೆವಿಚಾರಗಳು ಇರುವುದರಿಂದ ಯಾವ ಫಲವೂ ಇರುವುದಿಲ್ಲ. ಮತ್ತು 'ಅಜಾಮೇಕಾಮ್' ಎಂಬ ಶ್ರುತಿಯಿಂದ ತೇಜೋಬನ್ನಗಳು ಪ್ರತಿಪಾದ್ಯವೆಂದು ಹೇಳುವುದಕ್ಕಿಂತಲೂ ಪ್ರಕೃತಿಯೇ ಪ್ರತಿಪಾದ್ಯವೆಂದು ಹೇಳುವುದು ಹೆಚ್ಚು ಸ್ವರಸ. ಕಾರಣವೇನೆಂದರೆ ಈ ಶ್ರುತಿಯಲ್ಲಿ 'ಅಜಾ' ಎಂಬ ಪದವು ವಿಶೇಷ್ಯವಾಚಕವಾದ ಶಬ್ದವಾಗಿದೆ. ಲೋಹಿತಾದಿ ಶಬ್ದಗಳು ವಿಶೇಷಣವಾಚಕಗಳಾಗಿವೆ. ವಿಶೇಷ್ಯವಾಚಕಶಬ್ದವು ಎಲ್ಲೆಡೆಯೂ ಮುಖ್ಯವಾಗಿರುವುದರಿಂದ ಅದಕ್ಕೆ ಗೌಣಾರ್ಥವನ್ನು ಮಾಡಬಾರದು. ಆದ್ದರಿಂದ ಅಜಾಶಬ್ದವು ಹೇಳುತ್ತಿರುವ ಪ್ರಕೃತಿಯನ್ನೇ ಮುಖ್ಯವಾಗಿ ಇಟ್ಟುಕೊಂಡು ಲೋಹಿತಾದಿಶಬ್ದಗಳಿಗೆ ಗೌಣಾರ್ಥವನ್ನು ಮಾಡಬೇಕು. ಆದರೆ ಅದ್ವೈತಿಗಳು ಶ್ರುತಿಯಲ್ಲಿರುವ ಲೋಹಿತಾದಿಶಬ್ದಗಳಿಗೆ ಕೆಂಪುಬಣ್ಣ ಮೊದಲಾದ ಅರ್ಥಗಳಲ್ಲಿ ಮುಖ್ಯಾರ್ಥವನ್ನು ವಿವಕ್ಷಿಸಿ ಅಜಾಶಬ್ದಕ್ಕೆ ಗೌಣಾರ್ಥವನ್ನು ಮಾಡುತ್ತಾರೆ. ವಿಚಾರ ಮಾಡಿದರೆ ಲೋಹಿತಾದಿ ಶಬ್ದಗಳು ಸತ್ವರಜಸ್ತಮೋಗುಣಗಳನ್ನೇ ಹೇಳುತ್ತಿವೆ ಹೊರತು, ಬಣ್ಣ ಎಂಬರ್ಥವನ್ನು ಹೇಳುತ್ತಿಲ್ಲ. ಈ ವಿಷಯದಲ್ಲಿ ಶ್ವೇತಾಶ್ವತರೋಪನಿಷತ್ತಿನಲ್ಲಿರುವ 'ಸ್ವಗುಣೈರ್ನಿಗೂಢಾಮ್' ಎಂಬ ವಾಕ್ಯವು ಆಧಾರವಾಗಿದೆ.



## ತೇಜೋಬನ್ನಗಳು ಮತ್ತು ಅವಿದ್ಯೆ 'ಅಜಾಮೇಕಾಮ್' ಇತ್ಯಾದಿ ಶ್ರುತಿಪ್ರತಿಪಾದ್ಯವಲ್ಲ

## तात्पर्यचन्द्रिका

**नाप्यविद्येति द्वितीयः । तत्र लोहितादिरूपाभावात् ।**

ಅನುವಾದ - 'ಅಜಾಮೇಕಾಮ್ ಲೋಹಿತಶುಕ್ಲಕೃಷ್ಣಾಮ್' ಎಂಬ ಶ್ರುತಿಯು ತೇಜೋಬನ್ನಗಳನ್ನು ಪ್ರತಿಪಾದನೆ ಮಾಡುತ್ತದೆಂಬ ಪಕ್ಷವನ್ನು ಇಲ್ಲಿಯ ತನಕ ನಿರಾಕರಿಸಿದ್ದಾಯಿತು. ಅವಿದ್ಯೆಯನ್ನು ಪ್ರತಿಪಾದನೆ ಮಾಡುತ್ತದೆಂಬ ಪಕ್ಷವೂ ಕೂಡ ಸರಿಯಲ್ಲ. ಏಕೆಂದರೆ ಶ್ರುತಿಯಲ್ಲಿ ಹೇಳಿರುವ ಲೋಹಿತಾದಿರೂಪಗಳು ಅವಿದ್ಯೆಯಲ್ಲಿ ಸರ್ವಥಾ ಇರುವುದಿಲ್ಲ.

**कार्यावस्थायां रूपाश्रयत्वं तु प्रकृतावपि युक्तम् ।**

ಅವಿದ್ಯೆಯು ಜಗತ್ತಾಗಿ ಪರಿಣಾಮವನ್ನು ಹೊಂದಿದಾಗ ಲೋಹಿತಾದಿರೂಪಗಳಿಗೆ ಆಶ್ರಯವಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಕೃತಿಯಲ್ಲಿಯೂ ಕೂಡ ಇಂತಹ ಲೋಹಿತಾದಿರೂಪಗಳನ್ನು ಹೇಳಬಹುದು. ಆವಾಗ ಸಾಂಖ್ಯರನ್ನು ನಿಮಗೆ ನಿರಾಕರಿಸಲು ಸಾಧ್ಯವಿಲ್ಲ.

**ज्योतिरित्यादिसूत्रद्वयविरोधश्च । तस्य अजा तेजोबन्नरूपेत्येवंपरत्वेन त्वया व्याख्यातत्वात् ।**

ಮತ್ತು 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರದ್ವಯಗಳ ವಿರೋಧವು ನಿಮಗೆ ಬರುತ್ತದೆ. ಏಕೆಂದರೆ 'ಜ್ಯೋತಿರುಪಕ್ರಮಾತ್' ಎಂಬ ಸೂತ್ರಕ್ಕೆ ಅದ್ವೈತಿಗಳಾದ ನೀವು ತೇಜೋಬನ್ನರೂಪ ಎಂಬುದಾಗಿ ವ್ಯಾಖ್ಯಾನ ಮಾಡಿದ್ದೀರಿ. ಈಗ ಅವಿದ್ಯೆಯನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತದೆ ಎಂದು ಹೇಳಿದರೆ ವಿರೋಧವು ತಪ್ಪಿದ್ದಲ್ಲ.

**किञ्च त्रिगुणमनादिभावरूपं प्रकृत्यादिसंज्ञं जगदुपादानं त्वयाऽपि स्वीकृतम् ।**

ಮತ್ತು ಪ್ರಧಾನಸ್ವರೂಪವನ್ನೇ ನಿರಾಕರಿಸಲು ನಿಮಗೆ ಸಾಧ್ಯವಿಲ್ಲ. ಏಕೆಂದರೆ ತ್ರಿಗುಣವಾದ ಅನಾದಿಭಾವರೂಪವಾದ ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾದ ಜಗತ್ತಿಗೆ ಉಪಾದಾನವಾದದ್ದು ಅವಿದ್ಯೆಯೆಂದು ನೀವೂ ಕೂಡ ಅಂಗೀಕಾರ ಮಾಡಿದ್ದೀರಿ. ಇದನ್ನೇ ಸಾಂಖ್ಯರು ಪ್ರಕೃತಿಯೆಂದು ಕರೆಯುತ್ತಾರೆ. ಆದ್ದರಿಂದ ಪ್ರಕೃತಿಯನ್ನು ಅಲ್ಲಗಳೆಯಲು ನಿಮಗೆ ಸಾಧ್ಯವಿಲ್ಲ. ಇದು ಕೇವಲ ನಾಮಮಾತ್ರದಲ್ಲಷ್ಟೇ ವಿವಾದ ಹೊರತು, ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ.

**सांख्याभिमतं तु स्वातन्त्र्यं द्वितीये सांख्यप्रक्रियायां निरसिष्यते । निराकृतं च ''तदधीनत्वात्'' इत्यत्रेति व्यर्थमिदमधिकरणम् ।**

ಇನ್ನು ಸಾಂಖ್ಯರಿಗೆ ಅಭಿಮತವಾದ ಸ್ವತಂತ್ರವಾದ ಪ್ರಕೃತಿಯನ್ನು ನಿರಾಕರಿಸುತ್ತಿದ್ದೇವೆ ಎಂದು ಉತ್ತರಿಸಬೇಕು. ಆದರೆ ಪ್ರಕೃತಿಗೆ ಸ್ವಾತಂತ್ರ್ಯವಿಲ್ಲ ಎಂಬುದನ್ನು ಎರಡನೆಯ ಅಧ್ಯಾಯದ ಸಮಯಪಾದದಲ್ಲಿ ಸೂತ್ರಕಾರರೇ ನಿರಾಕರಿಸುವವರಿದ್ದಾರೆ. ಮತ್ತು 'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರದಲ್ಲಿ ಈಗಾಗಲೇ ನಿರಾಕರಿಸಿದ್ದಾಗಿದೆ. ಹೀಗಿರುವಾಗ ಈ ಅಧಿಕರಣವು ಅದ್ವೈತಮತದಲ್ಲಿ ವ್ಯರ್ಥವೇ ಆಗುತ್ತದೆ.

**तदुक्तमनुव्याख्याने –**

**तेजोऽबन्नात्मकं वापि यद्युपादानमिष्यते ।**
**अनाद्येवापराधः कः प्रधानमिति चोदिते ।। इति ।**

ಪರಿಪೂರ್ಣಚಂದ್ರಿಕಾ

ಈ ದೋಷವನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ -

ತೇಜೋಬನ್ನಾತ್ಮಕಂ ವಾಪಿ ಯದ್ಯುಪಾದಾನಮಿಷ್ಯತೇ ।
ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ ॥

ತೇಜೋಬನ್ನರೂಪವಾದ ಅನಾದಿಯಾದ ಭೂತಸೂಕ್ಷ್ಮವನ್ನೇ ಉಪಾದಾನಕಾರಣವೆಂದು ಹೇಳುವುದಾದರೆ, ಸಾಂಖ್ಯರು ಹೇಳುವಂತೆ ಪ್ರಧಾನವನ್ನೇ ಕಾರಣವೆಂದು ಒಪ್ಪಿದರೆ ಏನು ದೋಷ ಬರುತ್ತದೆ?

**ज्योतिःसूत्रे उपक्रमेत्यपपाठाश्रयणे ह्यजापदमध्याहार्यम् । तेजसस्तद्रूपमिति श्रुत्यनुगमाय च लाघवाय च तेजआदिरिति च सूत्र्येत । कल्पनेति सूत्रेऽनुपपत्तिस्तूक्तेति ॥**

ಅದ್ವೈತಿಗಳ ಪ್ರಕಾರ 'ಜ್ಯೋತಿಃ' ಸೂತ್ರದಲ್ಲಿ ಉಪಕ್ರಮಾ ಎಂಬುದು ಅಪಪಾಠವಾಗಿದೆ. ಹಾಗೂ 'ಅಜಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ ತೇಜೋಬನ್ನಾದಿಗಳೇ ಅಜಾ ಶಬ್ದವಾಚ್ಯವಾಗಿದೆಯೆಂದು ಹೇಳುವುದಕ್ಕಾಗಿ. ಮತ್ತು ಸೂತ್ರದಲ್ಲಿ ಶ್ರುತಿಯ ಅನುಗಮಕ್ಕೋಸ್ಕರ 'ತೇಜಆದಿಃ' ಎಂದೇ ಹೇಳಬೇಕಿತ್ತು. ಇದರಿಂದ ಸೂತ್ರವು ಲಘುಭೂತವೂ ಆಗುತ್ತದೆ. 'ಕಲ್ಪನೋಪದೇಶಾಚ್ಚ' ಎಂಬ ಮುಂದಿನ ಸೂತ್ರದಲ್ಲಿ ಅನುಪಪತ್ತಿಯನ್ನು ಈಗಾಗಲೇ ಹೇಳಿದ್ದಾಗಿದೆ. ಆರೋಪಿತವಾದದ್ದನ್ನು ಶ್ರುತಿಯು ಸಮರ್ಥನೆ ಮಾಡುವುದಿಲ್ಲ ಇತ್ಯಾದಿಯಾಗಿ.

**प्रकाशः –**

अविद्येत्याद्युत्तरार्धं व्यनक्ति – **नापीति** ॥ द्वितीयपक्षे दोषान्तरमाह – **ज्योतिरिति** ॥ तस्य सूत्रद्वयस्य । किं सिद्धान्ते प्रधानस्वरूपस्यैव निरास उत स्वातन्त्र्यस्येति विकल्प्य क्रमेण निराह – **किञ्चेति** ॥

ವಿವರಣೆ - 'ಅವಿದ್ಯೇತಿ ತು ಪಕ್ಷೇ ಸ್ಯಾತ್ ಲೋಹಿತತ್ವಾದ್ಯಸಂಭವಃ' ಎಂಬ ಶ್ಲೋಕದ ಉತ್ತರಾರ್ಧವನ್ನು ವ್ಯಾಖ್ಯಾನ ಮಾಡಲು 'ನಾಪಿ' ಇತ್ಯಾದಿ ಗ್ರಂಥವು ಹೊರಟಿದೆ. ಅವಿದ್ಯೆಯೇ ಜಗತ್ಕಾರಣವಾಗಿದೆ ಎಂಬ ಪಕ್ಷದಲ್ಲಿ ಮತ್ತೊಂದು ದೋಷವನ್ನು 'ಜ್ಯೋತಿ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ತಸ್ಯ' ಎಂಬ ಪದಕ್ಕೆ ಎರಡು ಸೂತ್ರಗಳಿಗೆ ಎಂದರ್ಥ. ಅದ್ವೈತಸಿದ್ಧಾಂತದಲ್ಲಿ ಪ್ರಧಾನಸ್ವರೂಪವನ್ನೇ ನಿರಾಕರಿಸಲಾಗುತ್ತದೋ, ಅಥವಾ ಪ್ರಧಾನಕ್ಕೆ ಸ್ವಾತಂತ್ರ್ಯವನ್ನಷ್ಟೇ ನಿರಾಕರಿಸಲಾಗುತ್ತದೋ? ಎಂದು ವಿಕಲ್ಪಮಾಡಿ, ಪ್ರಥಮಪಕ್ಷಕ್ಕೆ 'ಕಿಂಚ' ಇತ್ಯಾದಿ ಗ್ರಂಥದಿಂದ ದ್ವಿತೀಯಪಕ್ಷಕ್ಕೆ 'ಸಾಂಖ್ಯ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**कार्यावस्थायां रूपाश्रयत्वं तु प्रकृतावपि युक्तम् ।**

ಅವಿದ್ಯೆಯು ಜಗತ್ತಾಗಿ ಪರಿಣಾಮವನ್ನು ಹೊಂದಿದಾಗ ಲೋಹಿತಾದಿರೂಪಗಳಿಗೆ ಆಶ್ರಯವಾಗಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಪ್ರಕೃತಿಯಲ್ಲಿಯೂ ಕೂಡ ಇಂತಹ ಲೋಹಿತಾದಿರೂಪಗಳನ್ನು ಹೇಳಬಹುದು. ಆವಾಗ ಸಾಂಖ್ಯರನ್ನು ನಿಮಗೆ ನಿರಾಕರಿಸಲು ಸಾಧ್ಯವಿಲ್ಲ.

**ज्योतिरित्यादिसूत्रद्वयविरोधश्च । तस्य अजा तेजोबन्नरूपेत्येवंपरत्वेन त्वया व्याख्यातत्वात् ।**

ಮತ್ತು 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರದ್ವಯಗಳ ವಿರೋಧವು ನಿಮಗೆ ಬರುತ್ತದೆ. ಏಕೆಂದರೆ 'ಜ್ಯೋತಿರುಪಕ್ರಮಾತ್' ಎಂಬ ಸೂತ್ರಕ್ಕೆ ಅದ್ವೈತಿಗಳಾದ ನೀವು ತೇಜೋಬನ್ನರೂಪ ಎಂಬುದಾಗಿ ವ್ಯಾಖ್ಯಾನ ಮಾಡಿದ್ದೀರಿ. ಈಗ ಅವಿದ್ಯೆಯನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತದೆ ಎಂದು ಹೇಳಿದರೆ ವಿರೋಧವು ತಪ್ಪಿದ್ದಲ್ಲ.

**किञ्च त्रिगुणमनादिभावरूपं प्रकृत्यादिसंज्ञं जगदुपादानं त्वयाऽपि स्वीकृतम् ।**

ಮತ್ತು ಪ್ರಧಾನಸ್ವರೂಪವನ್ನೇ ನಿರಾಕರಿಸಲು ನಿಮಗೆ ಸಾಧ್ಯವಿಲ್ಲ. ಏಕೆಂದರೆ ತ್ರಿಗುಣವಾದ ಅನಾದಿಭಾವರೂಪವಾದ ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವಾದ ಜಗತ್ತಿಗೆ ಉಪಾದಾನವಾದದ್ದು ಅವಿದ್ಯೆಯೆಂದು ನೀವೂ ಕೂಡ ಅಂಗೀಕಾರ ಮಾಡಿದ್ದೀರಿ. ಇದನ್ನೇ ಸಾಂಖ್ಯರು ಪ್ರಕೃತಿಯೆಂದು ಕರೆಯುತ್ತಾರೆ. ಆದ್ದರಿಂದ ಪ್ರಕೃತಿಯನ್ನು ಅಲ್ಲಗಳೆಯಲು ನಿಮಗೆ ಸಾಧ್ಯವಿಲ್ಲ. ಇದು ಕೇವಲ ನಾಮಮಾತ್ರದಲ್ಲಷ್ಟೇ ವಿವಾದ ಹೊರತು, ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ.

**सांख्याभिमतं तु स्वातन्त्र्यं द्वितीये सांख्यप्रक्रियायां निरसिष्यते । निराकृतं च ''तदधीनत्वात्'' इत्यत्रेति व्यर्थमिदमधिकरणम् ।**

ಇನ್ನು ಸಾಂಖ್ಯರಿಗೆ ಅಭಿಮತವಾದ ಸ್ವತಂತ್ರವಾದ ಪ್ರಕೃತಿಯನ್ನು ನಿರಾಕರಿಸುತ್ತಿದ್ದೇವೆ ಎಂದು ಉತ್ತರಿಸಬೇಕು. ಆದರೆ ಪ್ರಕೃತಿಗೆ ಸ್ವಾತಂತ್ರ್ಯವಿಲ್ಲ ಎಂಬುದನ್ನು ಎರಡನೆಯ ಅಧ್ಯಾಯದ ಸಮಯಪಾದದಲ್ಲಿ ಸೂತ್ರಕಾರರೇ ನಿರಾಕರಿಸುವವರಿದ್ದಾರೆ. ಮತ್ತು 'ತದಧೀನತ್ವಾತ್ ಅರ್ಥವತ್' ಎಂಬ ಸೂತ್ರದಲ್ಲಿ ಈಗಾಗಲೇ ನಿರಾಕರಿಸಿದ್ದಾಗಿದೆ. ಹೀಗಿರುವಾಗ ಈ ಅಧಿಕರಣವು ಅದ್ವೈತಮತದಲ್ಲಿ ವ್ಯರ್ಥವೇ ಆಗುತ್ತದೆ.

**तदुक्तमनुव्याख्याने –**

**तेजोऽबन्नात्मकं वापि यद्युपादानमिष्यते ।**
**अनाद्येवापराधः कः प्रधानमिति चोदिते ।। इति ।**

ಪರಿಪೂರ್ಣಚಂದ್ರಿಕಾ

ಈ ದೋಷವನ್ನು ಅನುವ್ಯಾಖ್ಯಾನದಲ್ಲಿ ಹೇಳಿದ್ದಾರೆ -

ತೇಜೋಬನ್ನಾತ್ಮಕಂ ವಾಪಿ ಯದ್ಯುಪಾದಾನಮಿಷ್ಯತೇ ।
ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ ॥

ತೇಜೋಬನ್ನರೂಪವಾದ ಅನಾದಿಯಾದ ಭೂತಸೂಕ್ಷ್ಮವನ್ನೇ ಉಪಾದಾನಕಾರಣವೆಂದು ಹೇಳುವುದಾದರೆ, ಸಾಂಖ್ಯರು ಹೇಳುವಂತೆ ಪ್ರಧಾನವನ್ನೇ ಕಾರಣವೆಂದು ಒಪ್ಪಿದರೆ ಏನು ದೋಷ ಬರುತ್ತದೆ?

**ज्योतिःसूत्रे उपक्रमेत्यपपाठाश्रयणे ह्यजापदमध्याहार्यम् । तेजसस्तद्रूपमिति श्रुत्यनुगमाय च लाघवाय च तेजआदिरिति च सूत्र्येत । कल्पनेति सूत्रेऽनुपपत्तिस्तूक्तेति ॥**

ಅದ್ವೈತಿಗಳ ಪ್ರಕಾರ 'ಜ್ಯೋತಿಃ' ಸೂತ್ರದಲ್ಲಿ ಉಪಕ್ರಮಾ ಎಂಬುದು ಅಪಪಾಠವಾಗಿದೆ. ಹಾಗೂ 'ಅಜಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. ಏಕೆಂದರೆ ತೇಜೋಬನ್ನಾದಿಗಳೇ ಅಜಾ ಶಬ್ದವಾಚ್ಯವಾಗಿದೆಯೆಂದು ಹೇಳುವುದಕ್ಕಾಗಿ. ಮತ್ತು ಸೂತ್ರದಲ್ಲಿ ಶ್ರುತಿಯ ಅನುಗಮಕ್ಕೋಸ್ಕರ 'ತೇಜಆದಿಃ' ಎಂದೇ ಹೇಳಬೇಕಿತ್ತು. ಇದರಿಂದ ಸೂತ್ರವು ಲಘುಭೂತವೂ ಆಗುತ್ತದೆ. 'ಕಲ್ಪನೋಪದೇಶಾಚ್ಚ' ಎಂಬ ಮುಂದಿನ ಸೂತ್ರದಲ್ಲಿ ಅನುಪಪತ್ತಿಯನ್ನು ಈಗಾಗಲೇ ಹೇಳಿದ್ದಾಗಿದೆ. ಆರೋಪಿತವಾದದ್ದನ್ನು ಶ್ರುತಿಯು ಸಮರ್ಥನೆ ಮಾಡುವುದಿಲ್ಲ ಇತ್ಯಾದಿಯಾಗಿ.

**प्रकाशः –**

अविद्येत्याद्युत्तरार्धं व्यनक्ति – नापीति ॥ द्वितीयपक्षे दोषान्तरमाह – ज्योतिरिति ॥ तस्य सूत्रद्वयस्य । किं सिद्धान्ते प्रधानस्वरूपस्यैव निरास उत स्वातन्त्र्यस्येति विकल्प्य क्रमेण निराह – किञ्चेति ॥

ವಿವರಣೆ - 'ಅವಿದ್ಯೇತಿ ತು ಪಕ್ಷೇ ಸ್ಯಾತ್ ಲೋಹಿತತ್ವಾದ್ಯಸಂಭವಃ' ಎಂಬ ಶ್ಲೋಕದ ಉತ್ತರಾರ್ಧವನ್ನು ವ್ಯಾಖ್ಯಾನ ಮಾಡಲು 'ನಾಪಿ' ಇತ್ಯಾದಿ ಗ್ರಂಥವು ಹೊರಟಿದೆ. ಅವಿದ್ಯೆಯೇ ಜಗತ್ಕಾರಣವಾಗಿದೆ ಎಂಬ ಪಕ್ಷದಲ್ಲಿ ಮತ್ತೊಂದು ದೋಷವನ್ನು 'ಜ್ಯೋತಿ' ಇತ್ಯಾದಿ ವಾಕ್ಯದಿಂದ ತೋರಿಸುತ್ತಿದ್ದಾರೆ. 'ತಸ್ಯ' ಎಂಬ ಪದಕ್ಕೆ ಎರಡು ಸೂತ್ರಗಳಿಗೆ ಎಂದರ್ಥ. ಅದ್ವೈತಸಿದ್ಧಾಂತದಲ್ಲಿ ಪ್ರಧಾನಸ್ವರೂಪವನ್ನೇ ನಿರಾಕರಿಸಲಾಗುತ್ತದೋ, ಅಥವಾ ಪ್ರಧಾನಕ್ಕೆ ಸ್ವಾತಂತ್ರ್ಯವನ್ನಷ್ಟೇ ನಿರಾಕರಿಸಲಾಗುತ್ತದೋ? ಎಂದು ವಿಕಲ್ಪಮಾಡಿ, ಪ್ರಥಮಪಕ್ಷಕ್ಕೆ 'ಕಿಂಚ' ಇತ್ಯಾದಿ ಗ್ರಂಥದಿಂದ ದ್ವಿತೀಯಪಕ್ಷಕ್ಕೆ 'ಸಾಂಖ್ಯ' ಇತ್ಯಾದಿ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः – सांख्येति ।।** समयचरण इत्यर्थः । एतेन ''किञ्च'' इत्यादिना ''तेजोबन्नानि परमेश्वराधीनानि । अतो नातिव्याप्तिरिति चेत्'' इति सुधावाक्यं विवृतं भवतीति ध्येयम् ।।

ಸಾಂಖ್ಯಮತ ನಿರಾಕರಣೆಯನ್ನು ಸಮಯಪಾದದಲ್ಲಿ ಮಾಡಬೇಕು. ಇಲ್ಲಿ ಅಸಂಗತವಾಗುತ್ತದೆ. 'ಕಿಂಚ' ಇತ್ಯಾದಿ ಗ್ರಂಥದಿಂದ 'ತೇಜೋಬನ್ನಾನಿ ಪರಮೇಶ್ವರಾಧೀನಾನಿ । ಅತೋ ನಾತಿವ್ಯಾಪ್ತಿರಿತಿ ಚೇತ್' 'ತೇಜೋಬನ್ನಗಳು ಪರಮೇಶ್ವರನ ಅಧೀನವಾದ್ದರಿಂದ ಅತಿವ್ಯಾಪ್ತಿದೋಷ ಬರುವುದಿಲ್ಲ ಎಂದು ಉತ್ತರಿಸಿದರೆ' ಎಂಬ ಸುಧಾವಾಕ್ಯವನ್ನು ವಿವರಿಸಿದಂತಾಯಿತು.

**प्रकाशः – तदुक्तमिति ।।** एतेनोक्तं सुधावाक्यं तन्मूलमिति सूचितम् ।

चमससूत्रार्थः प्रागेव निरस्त इति ज्योतिस्सूत्रार्थानुपपत्तिमाह – **ज्योतिरिति।। उक्तेति ।।** कल्पनाऽऽरोप इत्यादिग्रन्थ इत्यर्थः ।।

'ತೇಜೋಬನ್ನಾನಿ' ಇತ್ಯಾದಿ ಸುಧಾವಾಕ್ಯಕ್ಕೆ ಅನುವ್ಯಾಖ್ಯಾನವೇ ಮೂಲವೆಂದು 'ತದುಕ್ತಮ್' ಎಂಬುದರಿಂದ ಗ್ರಂಥಕಾರರು ಸೂಚನೆ ಮಾಡಿದ್ದಾರೆ. ಚಮಸಸೂತ್ರದ ಅರ್ಥವನ್ನು ಈ ಹಿಂದೆಯೇ ನಿರಾಕರಿಸಿದ್ದಾಗಿದೆ. ದೃಷ್ಟಾಂತವಾಗಲೀ, ದಾರ್ಷ್ಟಾಂತಿಕವಾಗಲೀ ಅಸಾಧುವಾದ್ದರಿಂದ ಅದ್ವೈತಿಗಳ 'ಚಮಸವದವಿಶೇಷಾತ್' ಎಂಬ ಸೂತ್ರವ್ಯಾಖ್ಯಾನವು ಅತ್ಯಂತ ಅಯುಕ್ತವಾಗಿದೆಯೆಂದು ತೋರಿಸಿದ್ದಾಗಿದೆ. ಆದ್ದರಿಂದ ಜ್ಯೋತಿಃ ಸೂತ್ರದ ಅರ್ಥದಲ್ಲಿ 'ಜ್ಯೋತಿರಿತಿ' ಇತ್ಯಾದಿ ವಾಕ್ಯದಿಂದ ದೋಷವನ್ನು ಪ್ರಕೃತ ಹೇಳುತ್ತಿದ್ದಾರೆ. 'ಉಕ್ತ' ಎಂದರೆ ಕಲ್ಪನಾಶಬ್ದಕ್ಕೆ ಆರೋಪವೆಂದರ್ಥವೋ, ಗೌಣವೆಂದರ್ಥವೋ ಇತ್ಯಾದಿ ಗ್ರಂಥದಿಂದ 'ಕಲ್ಪನೋಪದೇಶಾಚ್ಚ' ಎಂಬ ಸೂತ್ರಾರ್ಥವನ್ನೂ ಕೂಡ ನಿರಾಕರಿಸಿದ್ದಾಗಿದೆ ಎಂದು ತಿಳಿಯಬೇಕು.




ತೇಜೋಬನ್ನಗಳು 'ಅಜಾಮೇಕಾಮ್' ಇತ್ಯಾದಿ ಶ್ರುತಿಗಳಿಂದ ಪ್ರತಿಪಾದ್ಯವಾಗುವುದಿಲ್ಲ. ಅದರಂತೆ ಅವಿದ್ಯೆಯೂ ಕೂಡ ಪ್ರತಿಪಾದ್ಯವಾಗುವುದಿಲ್ಲ. ಲೋಹಿತಾದಿ ಶಬ್ದಗಳು ಬಣ್ಣವನ್ನು ಹೇಳುತ್ತದೆಂದು ಅದ್ವೈತಿಗಳ ವ್ಯಾಖ್ಯಾನ. ಅಂತಹ ಲೋಹಿತಾದಿ ಬಣ್ಣಗಳನ್ನು ಅವಿದ್ಯೆಯಲ್ಲಿ ಹೇಳಲು ಹೇಗೆ ಸಾಧ್ಯ ? ಇನ್ನು ಅವಿದ್ಯೆಯು ಜಗತ್ತಾಗಿ ಪರಿಣಾಮವಾದ ಮೇಲೆ ಜಗತ್ತಿನಲ್ಲಿರುವ ಲೋಹಿತಾದಿ ಬಣ್ಣಗಳನ್ನು ವಿವಕ್ಷಿಸಿ, ಅವಿದ್ಯೆಯನ್ನು ಶ್ರುತಿ ಹೇಳುತ್ತಿದೆಯೆಂದು ಉತ್ತರಿಸಬೇಕು. ಹೀಗೆ ಹೇಳುವುದಾದರೆ ಸಾಂಖ್ಯರ ಪ್ರಕೃತಿಯನ್ನೇ ಶ್ರುತಿಪ್ರತಿಪಾದ್ಯವೆಂದು ಹೇಳುವುದು ಬಹಳ ಸುಲಭ. ಸಾಂಖ್ಯರ ಪ್ರಕೃತಿಯನ್ನು ನಿರಾಕರಿಸಲು ಅದ್ವೈತಿಗಳಿಗೆ ಸಾಧ್ಯವಿಲ್ಲ. ಏಕೆಂದರೆ ಸಾಂಖ್ಯರು ಪ್ರಕೃತಿಯನ್ನು ತ್ರಿಗುಣವೆಂದು ಅನಾದಿಯಾದ ಭಾವರೂಪವೆಂದು, ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವೆಂದು, ಜಗತ್ತಿಗೆ ಉಪಾದಾನವೆಂದು ಹೇಳುತ್ತಾರೆ. ಅದ್ವೈತಿಗಳಾದರೂ ಜಗತ್ತಿಗೆ ಕಾರಣವಾದ ಅವಿದ್ಯೆಯನ್ನು ತ್ರಿಗುಣವೆಂದು,

ಅನಾದಿಯಾದ ಭಾವಸ್ವರೂಪವೆಂದು, ಪ್ರಕೃತಿ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯವೆಂದು ಜಗತ್ತಿಗೆ ಉಪಾದಾನವೆಂದು ಹೇಳುತ್ತಾರೆ. ಸಾಂಖ್ಯರ ಪ್ರಕೃತಿಯ ಲಕ್ಷಣವನ್ನೇ ಅವಿದ್ಯೆಯಲ್ಲಿ ಹೇಳಿದಾಗ ಇದು ಕೇವಲ ಹೆಸರಿನಲ್ಲಷ್ಟೇ ಜಗಳ ಹೊರತು ಪ್ರಮೇಯದಲ್ಲಿ ಯಾವುದೇ ವ್ಯತ್ಯಾಸವಿರುವುದಿಲ್ಲ. ಸಾಂಖ್ಯರು ಪ್ರಕೃತಿಯಲ್ಲಿ ಸ್ವಾತಂತ್ರ್ಯವನ್ನು ಹೇಳುತ್ತಾರೆ. ನಾವು ಅದನ್ನು ನಿರಾಕರಿಸುತ್ತೇವೆಂದು ಅದ್ವೈತಿಗಳು ಉತ್ತರಿಸಬೇಕು. ಆದರೆ ಸಾಂಖ್ಯರ ಪ್ರಕೃತಿಗೆ ಸ್ವಾತಂತ್ರ್ಯವನ್ನು ನಿರಾಕರಿಸಲು ಸಮಯಪಾದದಲ್ಲಿ ರಚನಾನುಪಪತ್ತ್ಯಧಿಕರಣವು ಮೀಸಲಾಗಿದೆ. ಇಲ್ಲಿ ಅದರ ನಿರಾಕರಣೆಯು ಅಪ್ರಸ್ತುತ. ಈ ಹಿಂದೆ 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಪ್ರಕೃತಿಗೆ ಸ್ವಾತಂತ್ರ್ಯವನ್ನು ನಿರಾಕರಿಸಿದ್ದಾಗಿದೆ. ಆದ್ದರಿಂದ

ತೇಜೋಽಬನ್ನಾತ್ಮಕಂ ವಾಪಿ ಯದ್ಯುಪಾದಾನಮಿಷ್ಯತೇ ।
ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ ॥

ತೇಜೋಬನ್ನರೂಪವಾದ ಅನಾದಿಯಾದ ಭೂತಸೂಕ್ಷ್ಮವನ್ನೇ ಉಪಾದಾನಕಾರಣವೆಂದು ಹೇಳುವುದಾದರೆ, ಸಾಂಖ್ಯರು ಹೇಳುವಂತೆ ಪ್ರಧಾನವನ್ನೇ ಕಾರಣವೆಂದು ಒಪ್ಪಿದರೆ ಏನು ದೋಷ ಬರುತ್ತದೆ?

'ಜ್ಯೋತಿರುಪಾಕ್ರಮಂ' ಎಂಬುದು ಅದ್ವೈತಿಗಳು ಸ್ವೀಕರಿಸಿದ ಅಪಪಾಠ. ಅಜಪದವನ್ನು ಅಧ್ಯಾಹಾರ ಮಾಡಿಕೊಳ್ಳುವುದು ವ್ಯರ್ಥ. ಅದ್ವೈತಿಗಳ ಪ್ರಕಾರ 'ತೇಜ ಆದಿಃ' ಎಂದೇ ಸೂತ್ರವಿರಬೇಕು. ಇತ್ಯಾದಿ ಹಲವು ದೋಷಗಳು ಅದ್ವೈತಿಗಳನ್ನು ಬಾಧಿಸುತ್ತವೆ.



● ● ● ● ●

## ರಾಮನುಜರ ಅಧಿಕರಣ ವಿಮರ್ಶೆ

### तात्पर्यचन्द्रिका

**केचित्तु ।। चमससूत्रस्य परोक्त एवार्थः । ज्योतिस्सूत्रस्य ज्योतिर्ब्रह्म । इयमजा ज्योतिरुपक्रमा ब्रह्मकारणिका ।**

ಅನುವಾದ - ಚಮಸಸೂತ್ರಕ್ಕೆ ರಾಮಾನುಜರು ಅದ್ವೈತಿಗಳಂತೆ ವ್ಯಾಖ್ಯಾನ ಮಾಡುತ್ತಾರೆ. ಆದರೆ ಜ್ಯೋತಿಸೂತ್ರಕ್ಕೆ ಬೇರೆ ಅರ್ಥವನ್ನು ಹೇಳಿದ್ದಾರೆ. ಅದು ಹೀಗೆ - 'ಜ್ಯೋತಿಃ' = ಬ್ರಹ್ಮನು, ಉಪಕ್ರಮಾ = ಕಾರಣವಾಗಿವುಳ್ಳವನು. ಅಂದರೆ ಪ್ರಕೃತ್ಯಾದಿಗಳು ಬ್ರಹ್ಮನಿಂದ ಸೃಜ್ಯವಾಗಿವೆ. ಬ್ರಹ್ಮನು ಅವುಗಳಿಗೆಲ್ಲಾ ಕಾರಣನಾಗಿದ್ದಾನೆಂದು ಸೂತ್ರವು ಪ್ರತಿಪಾದನೆ ಮಾಡುತ್ತಿದೆ.

**तैत्तिरीयशाखायां ''अणोरणीयान्'' इत्यादिना ब्रह्मोक्त्वा ''सप्तप्राणाः प्रभवन्ति तस्मात्'' इत्यादिना ततः सृष्टिं चोक्त्वा ''अजामेकाम्'' इति मन्त्रे ब्रह्मकार्या ह्यजाऽधीयत इत्यर्थ इत्याहुः ।**

'ತಥಾಹ್ಯಧೀಯತೇ' = ತೈತ್ತಿರೀಯಶಾಖಾದಲ್ಲಿ 'ಅಣೋರಣೀಯಾನ್' ಇತ್ಯಾದಿಯಾಗಿ ಬ್ರಹ್ಮನನ್ನು ಪ್ರಸ್ತಾಪ ಮಾಡಿ 'ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್' ಇತ್ಯಾದಿ ವಾಕ್ಯದಿಂದ ಬ್ರಹ್ಮನಿಂದ ಎಲ್ಲವೂ ಕೂಡ ಸೃಷ್ಟಿಯನ್ನು ಹೊಂದುತ್ತವೆಂದು ಹೇಳಿ, ಅನಂತರ 'ಅಜಾಮೇಕಾಮ್' ಎಂಬ ಮಂತ್ರವು ಪ್ರಸಕ್ತವಾಗಿದೆ. ಈ ಶ್ರುತಿಯಲ್ಲಿರುವ ಅಜಾಶಬ್ದದಿಂದ ಪ್ರತಿಪಾದ್ಯವಾದ ಪ್ರಕೃತಿಯೂ ಕೂಡ ಬ್ರಹ್ಮನ ಕಾರ್ಯವೇ ಆಗಿದೆಯೆಂದು ಅಧ್ಯಯನ ಮಾಡುತ್ತಾರೆ. ಇಷ್ಟು ರಾಮಾನುಜರ ಸೂತ್ರಾರ್ಥ.

**तन्न । अजामिति मन्त्रेऽजाया ब्रह्मकार्यत्वाप्रतीतेः ।**

ರಾಮಾನುಜರ ಈ ಸೂತ್ರವ್ಯಾಖ್ಯಾನವು ಅಸಾಧುವಾಗಿದೆ. ಏಕೆಂದರೆ 'ಅಜಾಮೇಕಾಮ್' ಎಂಬ ಮಂತ್ರದಲ್ಲಿ ಪ್ರಕೃತಿಯು ಬ್ರಹ್ಮನ ಕಾರ್ಯವಾಗಿವೆಯೆಂದು ತಿಳಿಯುತ್ತಿಲ್ಲ.

**ननु यथा ''समिधो यजति'' इत्यादावङ्गत्वाश्रयणेपि दर्शपूर्णमासप्रकरणात्तदङ्गता तथाऽत्रापि सृष्टिप्रकरणात् अजायाः सृज्यत्वमिति चेन्न सृष्टिप्रकरणेपि तदाकाङ्क्षि-तोपादानत्वेनाप्यजाया उक्तिसम्भवेन सृज्यत्वासिद्धेः । समिदादिस्त्वङ्गत्वेनैव दर्शाद्याकाङ्क्षित इति वैषम्यम् ।**

ಆಕ್ಷೇಪ - 'ಸಮಿಧೋ ಯಜತಿ, 'ಇಢೋ ಯಜತಿ' ಇತ್ಯಾದಿ ವಾಕ್ಯಗಳನ್ನು ನೋಡಿದಾಗಲೂ ದರ್ಶಪೂರ್ಣಮಾಸದ ಅಂಗಯಾಗಗಳೆಂದು ಕಾಣಿಸುತ್ತಿಲ್ಲ. ಆದರೂ ಕೂಡ ದರ್ಶಪೂರ್ಣಮಾಸ ಪ್ರಕರಣದಲ್ಲಿ ಈ ವಾಕ್ಯಗಳು ಪ್ರಸಕ್ತವಾಗಿವೆ ಎಂಬ ದೃಷ್ಟಿಯಿಂದ ಹೇಗೆ ಅಂಗಯಾಗಗಳಾಗುತ್ತವೋ, ಅದರಂತೆ ಇಲ್ಲಿಯೂ ಕೂಡ ಬ್ರಹ್ಮನ ಸೃಷ್ಟಿ ಬಗ್ಗೆ ಹೇಳುವ ಪ್ರಕರಣದಲ್ಲಿ 'ಅಜಾಮೇಕಾಮ್' ಎಂಬ ಶ್ರುತಿಯು ಪ್ರಸಕ್ತವಾಗಿರುವುದರಿಂದ ಪ್ರಕೃತಿಗೂ ಕೂಡ ಸೃಜ್ಯತ್ವವು ಸಿದ್ಧವಾಗುತ್ತದಲ್ಲವೇ?

ಸಮಾಧಾನ - ಇದು ತಪ್ಪು. ದರ್ಶಪೂರ್ಣಮಾಸಪ್ರಕರಣದಲ್ಲಿ ಕಥಂಭಾವಾಕಾಂಕ್ಷೆಯು ಪ್ರಾಪ್ತವಾದರೆ ಅದಕ್ಕೆ ಸಮಾಧಾನ ನೀಡಲು ಪಂಚಪ್ರಯಾಜಯಾಗಗಳು ಪ್ರಸಕ್ತವಾಗುತ್ತವೆ. ಆದರೆ ಪ್ರಕೃತದಲ್ಲಿ ಅಂತಹ ಆಕಾಂಕ್ಷೆಯಿರುವುದಿಲ್ಲ. ಆದರೆ ಸೃಷ್ಟಿಪ್ರಕರಣದಲ್ಲಿ ಸೃಜ್ಯತ್ವದ ಆಕಾಂಕ್ಷೆಯೇ ಇರುತ್ತದೆಂಬ ನಿಯಮವಿಲ್ಲ. ಉಪಾದಾನತ್ವದ ಆಕಾಂಕ್ಷೆಯೂ ಕೂಡ ಬಂದಿರಬಹುದು. ಅದಕ್ಕೆ ಸಮಾಧಾನ ನೀಡಲು 'ಅಜಾಮೇಕಾಮ್' ಎಂಬ ಶ್ರುತಿಯು ಹೊರಟಿರಬಹುದು. ಹೀಗಿರುವಾಗ ಬ್ರಹ್ಮಕಾರ್ಯತ್ವವನ್ನು ಪ್ರಕೃತಿಯಲ್ಲಿ ಹೇಗೆ ಸಾಧಿಸುತ್ತೀರಿ?

**किञ्च प्रकृतेः कार्यत्वे ''गौरनाद्यन्तवती'' ''प्रकृतिं पुरुषं चैव विद्ध्यनादी उभावपि'' इत्यादिश्रुतिस्मृतिविरोधः । अजात्वविरोधश्च ।**

ಮತ್ತು ಪ್ರಕೃತಿಯು ಬ್ರಹ್ಮಕಾರ್ಯವೆಂದು ಹೇಳಿದರೆ ಶ್ರುತಿ-ಸ್ಮೃತಿಗಳ ವಿರೋಧ ಬರುತ್ತದೆ. ಏಕೆಂದರೆ 'ಗೌರನಾದ್ಯಂತವತೀ' ಎಂಬ ಶ್ರುತಿಯು ಪ್ರಕೃತಿಗೆ ಅನಾದಿತನಿತ್ಯತ್ವವನ್ನು ಸಮರ್ಥಿಸುತ್ತಿದೆ.

ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ' ಎಂಬ ಸ್ಮೃತಿಯೂ ಕೂಡ ಪ್ರಕೃತಿಗೆ ಅನಾದಿತ್ವವನ್ನು ಸಮರ್ಥಿಸುತ್ತಿದೆ. 'ಅಜಾಮೇಕಾಮ್' ಎಂಬ ಶ್ರುತಿಯಲ್ಲಿಯೂ ಕೂಡ ಪ್ರಕೃತಿಗೆ ಜನನವು ಇರುವುದಿಲ್ಲವೆಂದು ಅಜಾಶಬ್ದವೇ ತಿಳಿಸುತ್ತಿದೆ. ಆದ್ದರಿಂದ ಅಜಾಶಬ್ದದ ವಿರೋಧವೂ ಕೂಡ ಬರುತ್ತದೆ. ಆದ್ದರಿಂದ ಪ್ರಕೃತಿಯು ಬ್ರಹ್ಮನಿಂದ ಸೃಜ್ಯವಾಗಿದೆಯೆಂದು ಹೇಳಲು ಸಾಧ್ಯವಿಲ್ಲ.

**ननु प्रकृतेः कारणात्मनाऽजात्वम् स्वकार्यभूततेजोबन्नात्मना कार्यत्वलोहितत्वादि । अत एव न श्रुत्यादिविरोधोऽपि इति कल्पनेति सूत्रे एव उक्तम् । तत्र कल्पनाशब्दस्य ''यथा पूर्वमकल्पयत्'' इत्यादाविव सृष्टिपरत्वादिति चेत्**

ಆಕ್ಷೇಪ - ಪ್ರಕೃತಿಯು ಕಾರಣಸ್ವರೂಪದಿಂದ 'ಅಜಾ' ಎನಿಸುತ್ತದೆ. ಆದರೆ ತನ್ನ ಕಾರ್ಯವಾದ ತೇಜೋಬನ್ನಾತ್ಮಕವಾಗಿ ಕಾರ್ಯರೂಪವು ಆಗುತ್ತದೆ. ಲೋಹಿತತ್ವಾದಿಗಳಿಗೂ ಆಶ್ರಯವಾಗುತ್ತದೆ. ಆದ್ದರಿಂದ ಶ್ರುತಿ-ಸ್ಮೃತಿಗಳ ವಿರೋಧಕ್ಕೆ ಅವಕಾಶವಿಲ್ಲ. ಇದನ್ನು ಕಲ್ಪನಾಸೂತ್ರದಲ್ಲಿಯೇ ಹೇಳಲಾಗಿದೆ. ಏಕೆಂದರೆ ಕಲ್ಪನಾಶಬ್ದವು 'ಯಥಾ ಪೂರ್ವಮಕಲ್ಪಯತ್' ಎಂಬ ಶ್ರುತಿಯಂತೆ ಸೃಷ್ಟಿಪರವಾಗುತ್ತದೆ.

**न अजात्वलोहितात्वयोः स्वतःप्राप्तैकविषयत्वत्यागेनावस्थाभेदेन विभिन्नविषयत्वायोगात् । अजां सृजमानामिति कारणावस्थायामेव लोहितत्वादिप्रतीतेश्च ।**

ಸಮಾಧಾನ - ಈ ಆಕ್ಷೇಪವು ತಪ್ಪು. ಏಕೆಂದರೆ ಅಜಾತ್ವ ಹಾಗೂ ಲೋಹಿತತ್ವಾದಿಗಳು ಏಕವಿಷಯಕವಾಗಿ ಸ್ವತಃ ಪ್ರಾಪ್ತವಾಗುತ್ತಿವೆ. ಇದನ್ನು ಬಿಟ್ಟು ಅವಸ್ಥಾಭೇದದಿಂದ ಭಿನ್ನವಿಷಯಕವಾಗಿ ಒಪ್ಪುವುದು ಅಯುಕ್ತವಾಗುತ್ತದೆ. ಮತ್ತು 'ಅಜಾಂ ಸೃಜಮಾನಾಮ್' ಎಂಬುದಾಗಿ ಕಾರಣಾವಸ್ಥೆಯನ್ನು ಹೇಳುವಾಗಲೇ, ಲೋಹಿತತ್ವಾದಿಗಳು ಪ್ರತೀತವಾಗುತ್ತಿವೆ. ಹೀಗಿರುವಾಗ ಕಾರ್ಯಾವಸ್ಥೆಯಲ್ಲಿ ಲೋಹಿತತ್ವಾದಿಗಳನ್ನು ಹೇಳುವುದು ಸರ್ವಥಾ ಕೂಡುವುದಿಲ್ಲ.

**किञ्च प्रकृतिस्वरूपं त्वयापि स्वीकृतम् । सांख्याभिमतं तु स्वातन्त्र्यं ''तदधीनत्वात्'' इत्यत्र निरस्तम् ।**

ಮತ್ತು ಪ್ರಕೃತಿ ಸ್ವರೂಪವನ್ನು ಸಾಂಖ್ಯರಂತೆ ನೀನೂ ಕೂಡ ಅಂಗೀಕರಿಸಿರುವಿ. ಹೀಗಿರುವಾಗ ಸಾಂಖ್ಯರ ಪ್ರಕೃತಿಯನ್ನು ನಿರಾಕರಿಸಲು ನಿನಗೂ ಕೂಡ ಅರ್ಹತೆಯಿರುವುದಿಲ್ಲ. ಇನ್ನು ಸಾಂಖ್ಯರಿಗೆ ಅಭಿಮತವಾದ ಸ್ವಾತಂತ್ರ್ಯವನ್ನು ನಿರಾಕರಿಸುತ್ತೇನೆಂದು ಉತ್ತರಿಸಬೇಕು. ಆದರೆ 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಈಗಾಗಲೇ ಅದನ್ನು ನಿರಾಕರಿಸಿದ್ದಾಗಿದೆ.

### ಜ್ಯೋತಿರುಪಕ್ರಮಾಧಿಕರಣ (1-4-2)

**एवं चाजायाः प्रकृते ''ज्योतिः'' इतिसूत्रे ब्रह्मकार्यत्वमनुपयुक्तमेवोक्त्वा तन्निर्वाहाय ''कल्पन'' इति सूत्रेऽजात्वकार्यत्वयोराकारभेदेनाविरोधसमर्थनं व्यर्थमेवेति ॥**

ಆದ್ದರಿಂದ 'ಜ್ಯೋತಿಃ' ಎಂಬ ಸೂತ್ರದಲ್ಲಿ ಪ್ರಕೃತಿಯು 'ಅಜಾ' ಶಬ್ದ ಪ್ರತಿಪಾದ್ಯವಾದ ಪ್ರಕೃತಿಯು ಬ್ರಹ್ಮನ ಕಾರ್ಯವಾಗಿದೆಯೆಂಬುದನ್ನು ಅನುಪಯುಕ್ತವಾಗಿ ಹೇಳಿ, ಅದರ ನಿರ್ವಹಣೆಗೋಸ್ಕರ 'ಕಲ್ಪನಾ' ಎಂಬ ಸೂತ್ರದಲ್ಲಿ ಅಜಾತ್ವ ಹಾಗೂ ಕಾರ್ಯತ್ವಗಳಿಗೆ ಆಕಾರಭೇದದಿಂದ ಅವಿರೋಧವನ್ನು ಸಮರ್ಥಿಸಿದ್ದು ಅತ್ಯಂತ ವ್ಯರ್ಥವಾಗಿದೆ. (ಹೆಚ್ಚಾಗಿ ಉಪ್ಪನ್ನು ತಿಂದು ನೀರು ಕುಡಿಯುವುದು ಹೇಗೆ ವ್ಯರ್ಥವೋ ಅದರಂತೆ)

**प्रकाशः –**

**केचित्त्विति** ॥ अजामेकामित्यादिमन्त्रोक्ताऽजा किं स्वतन्त्रप्रकृतिरुत ब्रह्माधीनप्रकृतिरिति संशये अजेत्यकार्यत्वश्रवणात्सृजमानामिति स्वतन्त्राख्य-कर्तृशानचाऽपरतन्त्रसृष्टिप्रतीतेश्च केवलप्रकृतिरिति प्राप्ते तन्निरासकतया चमससूत्रार्थः परीत्यैवोक्त इत्यर्थः ।

ವಿವರಣೆ - ರಾಮಾನುಜರ ಅಧಿಕರಣಶರೀರ ಹೀಗಿದೆ - 'ಅಜಾಮೇಕಾಮ್' ಇತ್ಯಾದಿ ಮಂತ್ರದಲ್ಲಿ ಹೇಳಲ್ಪಟ್ಟ 'ಅಜಾ' ಶಬ್ದವು ಸ್ವತಂತ್ರವಾದ ಪ್ರಕೃತಿಯನ್ನು ಹೇಳುತ್ತಿದೆಯೋ, ಅಥವಾ ಬ್ರಹ್ಮಾಧೀನವಾದ ಪ್ರಕೃತಿಯನ್ನು ಹೇಳುತ್ತಿದೆಯೋ ? ಎಂದು ಸಂದೇಹ. 'ಅಜಾ' ಎಂಬುದಾಗಿ ಅಕಾರ್ಯತ್ವವು ಶ್ರುತವಾದ್ದರಿಂದ 'ಸೃಜಮಾನಾಮ್' ಎಂಬುದಾಗಿ 'ಶಾನಚ್' ಪ್ರತ್ಯಯವು ಕರ್ತೃತ್ವವನ್ನು ಹೇಳುತ್ತಿದೆ. ಸ್ವತಂತ್ರವಾದದ್ದೇ ಕರ್ತೃವಾಗುವುದರಿಂದ ಸ್ವತಂತ್ರವಾದ ಪ್ರಕೃತಿಯೇ ಅಜಾಶಬ್ದ ಪ್ರತಿಪಾದ್ಯವಾಗಿದೆ. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಿಸಲು 'ಚಮಸವದವಿಶೇಷಾತ್' ಎಂಬ ಸೂತ್ರವು ಹೊರಟಿದೆ. ಇದಕ್ಕೆ ರಾಮಾನುಜರು ಅದ್ವೈತಿಗಳು ಹೇಳುವಂತೆ ಚಮಸದ ದೃಷ್ಟಾಂತದಿಂದ ವ್ಯಾಖ್ಯಾನ ಮಾಡುತ್ತಾರೆ.

**प्रकाशः** – एतेन सुधायां ''कश्चिज्ज्योतिरुपक्रमेत्येतदन्यथा व्याचष्टे'' इत्यादिना रामानुजमते ज्योतिस्सूत्रार्थमात्रानुवाददूषणयोरुक्तिश्चमससूत्रार्थस्य प्रागुक्ताद्वैतिमत-दोषेण दुष्टत्वाशयेति सूचितम् ।

ಹೀಗೆ ಹೇಳಿದ್ದರಿಂದ ಸುಧೆಯ ಅಭಿಪ್ರಾಯವನ್ನು ಸ್ಪಷ್ಟಪಡಿಸಿದಂತಾಯಿತು - 'ಕಶ್ಚಿಜ್ಜ್ಯೋತಿರುಪ-ಕ್ರಮೇತ್ಯೇತದನ್ಯಥಾ ವ್ಯಾಚಷ್ಟೇ' ಇತ್ಯಾದಿ ವಾಕ್ಯದಿಂದ ರಾಮಾನುಜಮತದಲ್ಲಿ 'ಜ್ಯೋತಿಃ' ಸೂತ್ರಾರ್ಥವನ್ನು

ಮಾತ್ರ ಅನುವಾದ ಮಾಡಿ ದೋಷವನ್ನು ಹೇಳಿದ್ದಾರೆ. ಆದರೆ ಚಮಸ ಸೂತ್ರದ ಅರ್ಥವನ್ನು ಅನುವಾದಮಾಡಿ ದೋಷವನ್ನು ಹೇಳಿರುವುದಿಲ್ಲ. ಕಾರಣವೇನೆಂದರೆ, ಅದ್ವೈತಮತದಲ್ಲಿರುವ ದೋಷದಿಂದಲೇ ಇವರ ಈ ಸೂತ್ರವ್ಯಾಖ್ಯಾನವೂ ಕೂಡ ನಿರಾಕೃತವಾಗುತ್ತದೆಂದು ಅಭಿಪ್ರಾಯ.

**प्रकाशः** – तदधीनग्रहणे को हेतुरित्यतो द्वितीयसूत्रार्थमन्वाह – **ज्योतिरिति**।। इति मन्त्रे तैत्तिरीयगते । श्रुतप्रकाशोक्तमाशङ्कते – **नन्विति** ।।

ಪ್ರಕೃತಿಯು ಬ್ರಹ್ಮಾಧೀನವಾಗಿದೆಯೆಂದು ಹೇಳಲು ಏನು ಕಾರಣ? ಎಂಬ ಪ್ರಶ್ನೆಗೆ ಎರಡನೆಯ ಸೂತ್ರಾರ್ಥವನ್ನು ಅನುವಾದ ಮಾಡಿ ಹೇಳುತ್ತಿದ್ದಾರೆ 'ಜ್ಯೋತಿಃ' ಇತ್ಯಾದಿಯಾಗಿ. 'ಇತಿ ಮಂತ್ರೇ' ಎಂದರೆ ತೈತ್ತಿರೀಯೋಪನಿಷತ್ತಿನಲ್ಲಿರುವ ಮಂತ್ರದಲ್ಲಿ ಎಂದರ್ಥ. ಶ್ರುತಪ್ರಕಾಶದಲ್ಲಿ ಹೇಳಿದ್ದನ್ನು ಆಶಂಕಿಸುತ್ತಿದ್ದಾರೆ 'ನನು' ಇತ್ಯಾದಿಯಾಗಿ.

**प्रकाशः** – **प्रकरणादिति** ।। इतिकर्तव्यताकाङ्क्षारूपप्रकरणादित्यर्थः ।। **सृष्टिप्रकरणादिति** ।। ''बह्वीः प्रजा जनयन्तीम्' इत्युत्तरत्र सृष्टिश्रवणात्सर्वं सृष्टिप्रकरणमेवेति ज्ञायत इत्यर्थः ।।

'ಪ್ರಕರಣಾತ್' ಎಂದರೆ ಇತಿಕರ್ತವ್ಯತಾಕಾಂಕ್ಷಾರೂಪವಾದ ಪ್ರಕರಣದಿಂದ ಎಂದರ್ಥ. 'ಸೃಷ್ಟಿಪ್ರಕರಣಾತ್' ಎಂದರೆ 'ಬಹ್ವೀಃ ಪ್ರಜಾ ಜನಯಂತೀಂ' ಎಂಬ ಮುಂದಿನ ವಾಕ್ಯದಲ್ಲಿಯೂ ಸೃಷ್ಟಿಯೇ ಕೇಳಿಸುತ್ತಿರುವುದರಿಂದ ಇದೆಲ್ಲವೂ ಸೃಷ್ಟಿಪ್ರಕರಣವೇ ಆಗುತ್ತಿದೆಯೆಂದು ತಿಳಿಯುತ್ತಿದೆ. ಆದ್ದರಿಂದ ಪ್ರಕೃತಿಗೆ ಬ್ರಹ್ಮನಿಂದ ಸೃಜ್ಯತ್ವವನ್ನೇ ಹೇಳಬೇಕೆಂಬುದು ರಾಮಾನುಜರ ಅಭಿಪ್ರಾಯ.

**प्रकाशः** – **अङ्गत्वेनैवेति** ।। तृतीयाध्यायस्य तृतीयपादे ''असंयुक्तं प्रकरणात्' इतिकर्तव्यतार्थित्वात्'' इति चतुर्थाधिकरणसूत्रोक्तेतिकर्तव्यतापदप्रयोगात् भाष्ये च ''यदितिकर्तव्यताकाङ्क्षिणस्सन्निधौ परिपूरणसमर्थमुपनिपतति वचनं तत्तेन प्रकृतेन सहैकवाक्यतां याति'' इत्युक्तेरङ्गत्वेनैव समिदादीनामाकाङ्क्षितत्वादिह तूपादान-त्वेनैवाकाङ्क्षितत्वमिति भावः ।

ಆಕಾಂಕ್ಷಾವು ಅಂಗತ್ವೇನೈವ ಬರುತ್ತದೆ. ಪೂರ್ವಮೀಮಾಂಸೆಯಲ್ಲಿ ಈ ವಿಷಯವು ನಿರ್ಧಾರವಾಗಿದೆ.

'ಅಸಂಯುಕ್ತಂ ಪ್ರಕರಣಾದಿತಿಕರ್ತವ್ಯಯತಾರ್ಥಿತ್ವಾತ್' (೩-೩-೪)

ಈ ಅಧಿಕರಣದಲ್ಲಿ ಜೈಮಿನ್ಯಾಚಾರ್ಯರು 'ಇತಿಕರ್ತವ್ಯತಾ' ಎಂಬ ಪದವನ್ನೇ ಪ್ರಯೋಗ ಮಾಡಿದ್ದಾರೆ. ಶಾಬರ ಭಾಷ್ಯದಲ್ಲಿಯೂ ಕೂಡ 'ಯದಿತಿಕರ್ತವ್ಯತಾಕಾಂಕ್ಷಿಣಃ ಸನ್ನಿಧೌ ಪರಿಪೂರಣಸಮರ್ಥಮುಪನಿಪತತಿ

ವಚನಂ ತತ್ತೇನ ಪ್ರಕೃತೇನ ಸಹೈಕವಾಕ್ಯತಾಂ ಯಾತಿ' 'ಇತಿಕರ್ತವ್ಯತಾವನ್ನು ಆಕಾಂಕ್ಷೆ ಮಾಡುವ ಯಾವ ಪ್ರಧಾನವಾದ ಕರ್ಮವಿರುತ್ತದೋ ಅದರ ಸನ್ನಿಧಾನದಲ್ಲಿ ಆಕಾಂಕ್ಷೆಯನ್ನು ಪರಿಪೂರಣೆ ಮಾಡಲು ಸಮರ್ಥವಾದ ಯಾವ ವಾಕ್ಯವಿರುತ್ತದೋ ಅದೆಲ್ಲವೂ ಪ್ರಕೃತವಾದ ಪ್ರಧಾನಕರ್ಮದ ಜೊತೆಗೆ ಅಂಗತ್ವವನ್ನು ಹೊಂದಿ ಪ್ರಧಾನವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದುತ್ತವೆ' ಎಂದು ಹೇಳಿರುತ್ತಾರೆ. ಮೀಮಾಂಸಕರಲ್ಲಿ ಪದೈಕವಾಕ್ಯತಾ ವಾಕ್ಯೈಕವಾಕ್ಯತಾ ಇತ್ಯಾದಿಯಾಗಿ ಒಪ್ಪಿರುತ್ತಾರೆ. ಇದನ್ನು ವಾಕ್ಯೈಕವಾಕ್ಯತಾ ಹೇಳುತ್ತಾರೆ. 'ದರ್ಶಪೂರ್ಣಮಾಸಾಭ್ಯಾಂ ಸ್ವರ್ಗಕಾಮೋ ಯಜೇತ' ಎಂಬುದು ಪ್ರಧಾನಕರ್ಮವನ್ನು ಹೇಳುತ್ತಿದೆ. ಇದು ಇತಿಕರ್ತವ್ಯತಾವನ್ನು ಆಕಾಂಕ್ಷಿಸುತ್ತಿದೆ. ಈ ಆಕಾಂಕ್ಷೆಯನ್ನು ಪರಿಪೂರಣ ಮಾಡಲು ಸಮರ್ಥವಾದದ್ದು 'ಸಮಿಧೋ ಯಜತಿ', 'ಇಡೋ ಯಜತಿ' ಇತ್ಯಾದಿ ವಾಕ್ಯಗಳು. ಇವೆಲ್ಲವೂ ಕೂಡ ಅಂಗತ್ವವನ್ನು ತಿಳಿಸುವ ಮೂಲಕ ಪ್ರಧಾನವಾಕ್ಯದ ಜೊತೆಗೆ ಏಕವಾಕ್ಯತ್ವವನ್ನು ಹೊಂದುತ್ತವೆ. ಇದನ್ನೇ 'ವಾಕ್ಯೈಕವಾಕ್ಯತಾ' ಎಂದು ಕರೆಯಬೇಕು. ಹೀಗೆ ಪೂರ್ವಮೀಮಾಂಸೆಯಲ್ಲಿ ನಿರ್ಧರಿಸಿದ್ದಾರೆ. ಆದರೆ ಪ್ರಕೃತ ಪ್ರಧಾನದಲ್ಲಿ ಸೃಜ್ಯತ್ವದ ಆಕಾಂಕ್ಷೆಯು ಪ್ರಾಪ್ತವೇ ಆಗುವುದಿಲ್ಲ. ಹೊರತಾಗಿ 'ಸೃಜಮಾನಾಃ ಸರೂಪಾ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಉಪಾದಾನತ್ವದ ಆಕಾಂಕ್ಷೆಯೇ ಕಾಣಿಸುತ್ತಿದೆ. ಆದ್ದರಿಂದ ರಾಮಾನುಜರು ನೀಡಿದ ಪೂರ್ವಮೀಮಾಂಸೆಯ ದೃಷ್ಟಾಂತವು ವಿಷಮವಾಗಿದೆ.

**प्रकाशः** – यथाहि परसिद्धान्ते प्रधाननिरासः श्रुत्यादिविरुद्ध इति दर्शयितुं त्वद्भाष्ये यच्छ्रुत्याद्युदाहृतं तद्विरोधादेव त्वत्सिद्धान्तोप्ययुक्त इत्याह – **किञ्चेति** ।। सुधोक्तं दोषान्तरमाह – **किञ्चेति** ।।

ಅದ್ವೈತಿಗಳು ಪ್ರಕೃತಿಯ ಸ್ವರೂಪವನ್ನೇ ಒಪ್ಪುವುದಿಲ್ಲವೆಂಬ ದೃಷ್ಟಿಯಿಂದ ರಾಮಾನುಜರು ಅದ್ವೈತಿಗಳನ್ನು ನಿರಾಕರಿಸುತ್ತಾರೆ. ಒಂದು ವೇಳೆ ಪ್ರಕೃತಿಯನ್ನೇ ಒಪ್ಪದಿದ್ದರೆ ಶ್ರುತಿ-ಸ್ಮೃತಿಗಳ ವಿರೋಧ ಬರುತ್ತದೆ ಇತ್ಯಾದಿಯಾಗಿ.

ಹೀಗೆ ಯಾವ ಶ್ರುತಿ-ಸ್ಮೃತಿಗಳಿಂದ ಅದ್ವೈತಿಗಳನ್ನು ನೀವು ನಿರಾಕರಿಸಿದ್ದೀರೋ ಅದೇ ಶ್ರುತಿ-ಸ್ಮೃತಿಗಳ ವಿರೋಧವು ನಿಮಗೂ ಬರುತ್ತದೆ. ಏಕೆಂದರೆ ನೀವು ಪ್ರಕೃತಿಯನ್ನು ಒಪ್ಪುವುದಿದ್ದರೂ ಕೂಡ ಬ್ರಹ್ಮನ ಕಾರ್ಯವೆನ್ನುತ್ತೀರಿ. ಆದರೆ ಇದೇ ಪ್ರಕೃತಿಯನ್ನು ಶ್ರುತಿ-ಸ್ಮೃತಿಗಳಲ್ಲಿ ಅನಾದಿಯೆಂದು ಕರೆಯಲಾಗುತ್ತಿದೆ. ಆದ್ದರಿಂದ ಶ್ರುತಿ-ಸ್ಮೃತಿಗಳ ವಿರೋಧ ನಿಮಗೂ ಬಾಧಿಸುತ್ತವೆ. ನ್ಯಾಯಸುಧೆಯಲ್ಲಿ ಹೇಳಿದ ಮತ್ತೊಂದು ದೋಷವನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ತೋರಿಸಿದ್ದಾರೆ.

**प्रकाशः** – एतेन प्रायो रामानुजरीतिमनुसरतः कस्यचिच्छैवस्य मतमपि प्रत्युक्तं ध्येयम् । तथाहि – किमजा स्वतन्त्रा शिवाधीना वा ? इति सन्देहे जननाभावादिना सांख्याभिमतेति प्राप्ते

ಹೀಗೆ ಹೇಳಿದ್ದರಿಂದ ಪ್ರಾಯಶಃ ರಾಮಾನುಜರ ಸಿದ್ಧಾಂತವನ್ನೇ ಅನುಸರಿಸುವ ಯಾವನೋ ಶೈವನ ಮತವನ್ನೂ ಕೂಡ ನಿರಾಕರಿಸಿದಂತಾಯಿತು.

ಶೈವರ ಪ್ರಕಾರ ಅಧಿಕರಣಶರೀರ ಹೀಗಿದೆ - ಶ್ರುತಿಯಲ್ಲಿರುವ ಅಜಾಶಬ್ದಿತವಾದ ಪ್ರಕೃತಿಯು ಸ್ವತಂತ್ರವೋ, ಶಿವಾಧೀನವೋ ? ಎಂದು ಸಂದೇಹ. ಜನನಾದಿಗಳನ್ನು ಇಲ್ಲವೆಂದು ಹೇಳಿದ್ದರಿಂದ ಸಾಂಖ್ಯರಿಗೆ ಅಭಿಮತವಾದ ಸ್ವತಂತ್ರವಾದ ಪ್ರಕೃತಿಯೇ ಶ್ರುತಿಪ್ರತಿಪಾದ್ಯವೆಂದು ಪೂರ್ವಪಕ್ಷ.

**प्रकाशः** – तन्निरासकतया यथा चमसशब्दस्य चम्यतेऽनेनेति योगेन भक्षणसाधनमात्रपरस्य शिरःपरत्वे यथा विशेषकमस्ति ''इदं तच्छिरः'' इति तत्प्रकरणे वाक्यं एवमत्र प्रधानग्रहणे विशेषहेतुर्नेति चमससूत्रार्थमुक्त्वा ज्योतिरादिसूत्रस्य रामानुजोक्तमेवाभिधेयमुक्तम् ।

ಈ ಪೂರ್ವಪಕ್ಷವನ್ನು ನಿರಾಕರಿಸಲು 'ಚಮಸವದವಿಶೇಷಾತ್' ಎಂಬ ಸೂತ್ರವು ಹೊರಟಿದೆ. 'ಚಮಸ' ಶಬ್ದಕ್ಕೆ 'ಚಮ್ಯತೇ ಅನೇನ' ಎಂಬ ಯೋಗಾರ್ಥವನ್ನು ಮಾಡಿದಾಗ ಭಕ್ಷಣಸಾಧನವಾದದ್ದು ಎಂಬರ್ಥವು ದೊರೆಯುತ್ತದೆ. 'ಚಮು ಭಕ್ಷಣೇ' ಎಂಬ ಧಾತುವಿನಿಂದ 'ಚಮಸ' ಶಬ್ದವು ನಿಷ್ಪನ್ನವಾಗಿದೆ. ಭಕ್ಷಣಕ್ಕೆ ಸಾಧನವಾದದ್ದು ಅನೇಕ ಪದಾರ್ಥಗಳಿವೆ. ಅವುಗಳಲ್ಲಿ ಯಾವುದು ಎಂಬ ಜಿಜ್ಞಾಸೆಯು ಪ್ರಾಪ್ತವಾದಾಗ 'ಇದಂ ತಚ್ಛಿರಃ' ಎಂಬುದಾಗಿ ಪ್ರಕರಣವು ನಿಶ್ಚಯಿಸುತ್ತಿದೆ. ಭಕ್ಷಣಕ್ಕೆ ಸಾಧನವಾದದ್ದು ಪಾತ್ರೆ, ಆಹಾರಪದಾರ್ಥ ಮೊದಲಾದವುಗಳು ಹೇಗೋ ಅದರಂತೆ ನಮ್ಮ ದೇಹದಲ್ಲಿರುವ ಕತ್ತಿನ ಮೇಲ್ಭಾಗವಾದ ಶಿರಸ್ಸೂ ಕೂಡ ಭಕ್ಷಣಾದಿಗಳಿಗೆ ಸಾಧನವಾಗಿದೆ. ಶಿರಸ್ಸೇ ಇಲ್ಲದಿದ್ದರೆ ತಿನ್ನಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಶ್ರುತಿಯು 'ಇದಂ ತಚ್ಛಿರಃ' ಎಂಬುದಾಗಿ ಭಕ್ಷಣಸಾಧನವಾದ ಚಮಸವನ್ನು ಶಿರಸ್ಸೆಂದು ಗುರುತಿಸುತ್ತಿದೆ. ಹೀಗೆ ಶ್ರುತಿಯು ಚಮಸವನ್ನು ಹೇಗೆ ನಿಖರವಾಗಿ ಶಿರಸ್ಸೆಂದು ಹೇಳುತ್ತಿದೆಯೋ, ಅದರಂತೆ ಅಜಾಶಬ್ದ ಪ್ರತಿಪಾದ್ಯವಾದದ್ದನ್ನು ಶ್ರುತಿಯು ನಿಖರವಾಗಿ ಹೇಳುತ್ತಿಲ್ಲ. ಅಜಾಶಬ್ದದಿಂದ ಪ್ರಕೃತಿಯನ್ನೇ ವಿವಕ್ಷಿಸಬೇಕೆನ್ನಲು ಯಾವುದೇ ವಿಶೇಷವಾದ ಪ್ರಮಾಣಗಳಿರುವುದಿಲ್ಲವೆಂದು ಚಮಸಸೂತ್ರವು ಸಮರ್ಥಿಸುತ್ತಿದೆ. (ಅದ್ವೈತಿಗಳು ಹಾಗೂ ರಾಮಾನುಜರು 'ಚಮಸವತ್' ಎಂಬುದನ್ನು ಅನ್ವಯದೃಷ್ಟಾಂತವೆಂದು ಪರಿಗಣಿಸಿದ್ದರು. ಇವರು ವ್ಯತಿರೇಕದೃಷ್ಟಾಂತವೆಂದು ಪರಿಗಣಿಸಿ ವಿಭಿನ್ನವಾದ ಅರ್ಥವನ್ನೇ ಹೇಳಿದ್ದಾರೆ.) ಉಳಿದ ಜ್ಯೋತಿರಾದಿ ಸೂತ್ರಗಳ ಅರ್ಥವನ್ನು ರಾಮಾನುಜರು ಹೇಳುವಂತೆಯೇ ವ್ಯಾಖ್ಯಾನ ಮಾಡಿದ್ದಾರೆ.

**प्रकाशः** – तदयुक्तम् । गौरनाद्यन्तवतीति श्रुत्यन्तरोक्तप्रत्यभिज्ञानस्यैव विशेषहेतोस्सत्वात् ।

ಶೈವರ ಈ ಅಧಿಕರಣ ಶರೀರವು ಅಸಾಧುವಾಗಿದೆ. ಏಕೆಂದರೆ 'ಗೌರನಾದ್ಯಂತವತೀ' ಎಂಬ ಆಥರ್ವಣೋಪನಿಷತ್ತಿನಲ್ಲಿ ಹೇಳಿದ ವಿಷಯವೇ ಇಲ್ಲೂ ಕೂಡ ಪ್ರತ್ಯಭಿಜ್ಞಾಯಮಾನವಾಗುವುದರಿಂದ

ವಿಶೇಷಹೇತು ಇಲ್ಲವೆಂದು ಹೇಳಲಾಗದು. ಆ ಶ್ರುತಿಯಲ್ಲಿ ಪ್ರತಿಪಾದ್ಯವಾದ ಪ್ರಕೃತಿಯೇ ಇಲ್ಲೂ ಕೂಡ ಪ್ರತಿಪಾದ್ಯವಾಗುತ್ತಿದೆ.

**प्रकाशः** – नच प्रकरणे स नास्तीति वाच्यम् । प्राकरणिकेनैव तेन भाव्यमित्यत्र नियामकाभावात् ।

ಈ ಪ್ರಕರಣದಲ್ಲಿ ಪ್ರಕೃತಿ ಪ್ರತಿಪಾದ್ಯವೆನ್ನಲು ನಿಯಾಮಕಪ್ರಮಾಣವಿಲ್ಲ? ಎಂದು ಪ್ರಶ್ನಿಸಬಾರದು. ಪ್ರಕೃತಿ ಪ್ರತಿಪಾದ್ಯವೆನ್ನಲು ನಿಯಾಮಕ ಪ್ರಮಾಣವಾಗಿದೆ.

**प्रकाशः** – द्वितीयार्थोप्ययुक्तः । ''अणोरणीयान्'' इत्यत्रोक्ताजायाः कार्यत्वा-प्रतीतेस्समिदादिवैषम्यस्य मूलग्रन्थ एव स्फुटत्वात् ।

ಎರಡನೆಯ ಸೂತ್ರದ ಅಭಿಪ್ರಾಯವೂ ಕೂಡ ಅಯುಕ್ತವಾಗಿದೆ. ಏಕೆಂದರೆ 'ಅಣೋರಣೀಯಾನ್' ಎಂಬ ಶ್ರುತಿಯಲ್ಲಿ ಪ್ರಕೃತಿಯು ಬ್ರಹ್ಮನ ಕಾರ್ಯವಾಗಿದೆಯೆಂದು ಪ್ರತೀತವಾಗುತ್ತಿಲ್ಲ. ಮತ್ತು 'ಸಮಿಧೋ ಯಜತಿ' ಇತ್ಯಾದಿ ದೃಷ್ಟಾಂತಗಳೂ ಕೂಡ ವಿಷಮವಾಗಿವೆಯೆಂದು ರಾಮಾನುಜರಿಗೆ ಹೇಳಿದ ದೋಷ ಇವರಿಗೂ ಕೂಡ ತಪ್ಪಿದ್ದಲ್ಲ.

**प्रकाशः** – यदत्रोक्तं शिवार्कमणिदीपिकायां यथा दर्शपूर्णमासप्रकरणे पठितं ''ताभ्यामेतमग्नीषोमीयमेकादशकपालं पौर्णमास्ये प्रायच्छत्'' इति वाक्यमिन्द्र-वृत्तान्तमात्रविषयतया प्रतीयमानमपि प्रकरणानुरोधादिन्द्रेणाग्नीषोमाभ्यां दत्ततयोच्य-मानस्यैकादश कपालपुरोडाशद्रव्यकयागस्यानुष्ठेयत्वेन प्रतिपादकमुपेयते तथेहापि पूर्वोत्तरपरामर्शात्सृज्यत्वेनोपेयत इति

ಶಿವಾರ್ಕಮಣಿದೀಪಿಕೆಯಲ್ಲಿ 'ಸಮಿಧೋ ಯಜತಿ' ಇತ್ಯಾದಿ ವಾಕ್ಯದ ದೃಷ್ಟಾಂತವನ್ನು ರಾಮಾನುಜಮತಕ್ಕಿಂತ ಸ್ವಲ್ಪ ವಿಭಿನ್ನವಾಗಿ ವ್ಯಾಖ್ಯಾನ ಮಾಡಲಾಗಿದೆ. ಅದು ಹೀಗೆ - ದರ್ಶಪೂರ್ಣಮಾಸಯಾಗ ಪ್ರಕರಣದಲ್ಲಿ 'ತಾಭ್ಯಾಮೇತಮಗ್ನೀಷೋಮೀಯಮೇಕಾದಶಕಪಾಲಂ ಪೌರ್ಣಮಾಸ್ಯೇ ಪ್ರಾಯಚ್ಛತ್' ಎಂಬ ವಾಕ್ಯದಿಂದ ಪ್ರಸಂಗವೊಂದನ್ನು ಹೇಳಲಾಗಿದೆ. ಇಂದ್ರದೇವರು ಏಕಾದಶಕಪಾಲದಲ್ಲಿ ಪುರೋಡಾಶವನ್ನು ಇಂದ್ರಸೋಮರನ್ನು ಕುರಿತು ಸಮರ್ಪಣೆ ಮಾಡಿದರು ಎಂಬುದಾಗಿ ಅಗ್ನೀಷೋಮಿಯ ಯಾಗವನ್ನು ಆಚರಿಸಿದನೆಂದು ಹೇಳಲಾಗಿದೆ. ಹೀಗೆ ವಾಕ್ಯವು ಇಂದ್ರನ ಕಥೆಯನ್ನು ಹೇಳುತ್ತಿದ್ದರೂ ಕೂಡ ಪ್ರಕರಣಕ್ಕೆ ಅನುಸಾರಿಯಾಗಿ ಅಗ್ನೀಷೋಮಿಯಯಾಗವನ್ನು ಆಚರಿಸಬೇಕೆಂದು ವಿಧಿಸುತ್ತದೆ. ಅದರಂತೆ ಇಲ್ಲಿಯೂ ಕೂಡ ಹಿಂದಿನ ವಾಕ್ಯಗಳನ್ನು ಪರಾಮರ್ಶ ಮಾಡಿದಾಗ ಪ್ರಕೃತಿಯು ಸೃಜ್ಯತ್ವೇನ ಪ್ರಕೃತವಾಗಿದೆಯೆಂದೇ ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – तन्न, ताभ्यामिति वाक्योक्तयागस्याप्राप्तत्वादिनाऽनुष्ठेयत्वोपगमेन प्रकरणेन तथात्वोपगमाभावात् । प्रकरणस्याङ्गाङ्गिभावे एव प्रमाणत्वात् ।

ಇದು ತಪ್ಪು. 'ತಾಭ್ಯಾಮೇತಮ್' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಯಾಗವು ಹಿಂದೆ ಅಪ್ರಾಪ್ತವಾಗಿದೆಯೆನ್ನುವ ಕಾರಣದಿಂದ ಅಗ್ನಿಷೋಮಿಯಕ್ಕೆ ಅನುಷ್ಠೇಯತ್ವವನ್ನು ವಿಧಿಸುತ್ತಿದೆ ಹೊರತು ಪ್ರಕರಣ ಬಲದಿಂದ ಅನುಷ್ಠೇಯತ್ವವನ್ನು ವಿಧಿಸುತ್ತಿಲ್ಲ. ಒಂದು ವೇಳೆ ಬಲದಿಂದ ಅನುಷ್ಠೇಯತ್ವವು ತಿಳಿದಿದ್ದರೆ ಇಲ್ಲಿಯೂ ಕೂಡ ಪ್ರಕೃತಿಗೆ ಸೃಜ್ಯತ್ವವು ತಿಳಿಯುತ್ತಿತ್ತು. ಆದ್ದರಿಂದ ನೀವು ನೀಡಿದ ದೃಷ್ಟಾಂತವು ವಿಷಮವಾಗಿದೆ. ಏಕೆಂದರೆ ಮೀಮಾಂಸಕರು ಅಂಗಾಂಗಿಭಾವದಲ್ಲಷ್ಟೇ ಪ್ರಕರಣವನ್ನು ಪ್ರಮಾಣವನ್ನಾಗಿ ಒಪ್ಪಿದ್ದಾರೆ. ಬೇರೆ ವಿಷಯದಲ್ಲಿ ಪ್ರಮಾಣವೆಂದು ಹೇಳಲು ಸಾಧ್ಯವಾಗುವುದಿಲ್ಲ.

**प्रकाशः** – अन्यथा यदाग्नेयादिवाक्येष्वपि यागस्याप्रत्यक्षत्वात् प्रकरणानुसरणं तत्रापि स्यात् ।

ಒಂದುವೇಳೆ ಅಗ್ನೀಷೋಮಿಯ ಯಾಗದ ಅನುಷ್ಠೇಯತ್ವವು ಪ್ರಕರಣ ಬಲದಿಂದಲೇ ತಿಳಿಯುತ್ತಿದೆ ಎಂದು ಆಗ್ರಹಿಸುವುದಾದರೆ, 'ಯದಾಗ್ನೇಯೋ ಅಷ್ಟಾಕಪಾಲೋ ಭವತಿ' ಇತ್ಯಾದಿ ವಾಕ್ಯಗಳಲ್ಲಿಯೂ ಕೂಡ ಯಾಗವು ಪ್ರತ್ಯಕ್ಷವಾಗಿ ವಿಹಿತವಲ್ಲದ ಕಾರಣ ಪ್ರಕರಣದಿಂದ ಸಿದ್ಧವಾಗಿದೆಯೆಂದು ಒಪ್ಪಬೇಕಾದೀತು.

**प्रकाशः** – किञ्च सृष्टिप्रकरणेष्वपि तदुपादानत्वेनाप्युक्तिसम्भवेन सृज्यत्वासिद्धेः। सुधोक्तदिशाऽनेनैव चारितार्थ्येनाद्यसूत्रवैयर्थ्याच्च ।

ಮತ್ತು ಸೃಷ್ಟಿಪ್ರಕರಣವೆಂದು ಒಪ್ಪಿದರೂ ಉಪಾದಾನತ್ವದ ಆಕಾಂಕ್ಷೆಯೇ ಬರುತ್ತದೆ ಹೊರತು, ಸೃಜ್ಯತ್ವದ ಆಕಾಂಕ್ಷೆಯು ಬರುವುದಿಲ್ಲವಾದ್ದರಿಂದ ಬ್ರಹ್ಮನಿಂದ ಪ್ರಕೃತಿಯು ಸೃಜ್ಯವಾಗಿದೆಯೆಂದು ತಿಳಿಯುವುದಿಲ್ಲ ಹೊರತು, ಜಗತ್ತಿಗೆ ಪ್ರಕೃತಿಯು ಉಪಾದಾನವಾಗಿದೆಯೆಂದೇ ತಿಳಿಯುತ್ತಿದೆ ಎಂದು ಸಮರ್ಥಿಸಿದ್ದೇವೆ. ಮತ್ತು ನ್ಯಾಯಸುಧೆಯಲ್ಲಿ ಹೇಳಿದಂತೆ 'ಚಮಸವದವಿಶೇಷಾತ್' ಎಂಬ ಸೂತ್ರವು ಇವರ ಮತದಲ್ಲಿಯೂ ವ್ಯರ್ಥವಾಗುತ್ತದೆ.

**प्रकाशः** – कार्यत्वेपि शिवकार्यत्वस्य सर्वथासिद्धेश्च । "धातुः प्रसादान्महिमानमीशम्" इतीशशब्दस्य प्रागुक्तदिशा विष्णुपरत्वात् ।

ಒಂದು ವೇಳೆ ಪ್ರಕೃತಿಯು ಕಾರ್ಯರೂಪವಾಗಿದೆಯೆಂದು ಒಪ್ಪುವುದಾದರೂ ಶಿವನಿಂದ ಹುಟ್ಟಿದೆಯೆಂದು ತೀರ್ಮಾನಿಸಲು ಸಾಧ್ಯವೇ ಇಲ್ಲ. 'ಧಾತುಃ ಪ್ರಸಾದಾನ್ಮಹಿಮಾನಮೀಶಮ್' ಎಂಬ ಅದೇ ಪ್ರಕರಣದಲ್ಲಿ ಬರುವ ವಾಕ್ಯದಿಂದ ಈಶಶಬ್ದವಿದೆ. ಇದರ ಬಲದಿಂದ ಶಿವನಿಂದ ಪ್ರಕೃತಿಯು ಹುಟ್ಟಿದೆಯೆಂದು ನಿರ್ಣಯಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಈಶಶಬ್ದಕ್ಕೆ ವಿಷ್ಣು ಎಂಬರ್ಥವನ್ನು ಈಗಾಗಲೇ ಅನೇಕಬಾರಿ ಸಮರ್ಥಿಸಿದ್ದೇವೆ.

## ಜ್ಯೋತಿರುಪಕ್ರಮಾಧಿಕರಣ (1-4-2)

**प्रकाशः – ''किञ्च प्रकृतेः'' इत्यादिमूलोक्तदोषानुद्धाराच्चेति ।**

'ಕಿಂಚ ಪ್ರಕೃತೇಃ' ಇತ್ಯಾದಿ ವಾಕ್ಯದಲ್ಲಿ ಹೇಳಿದ ಎಲ್ಲ ದೋಷಗಳು ಈ ಶೈವರಿಗೂ ಕೂಡ ಬಂದೇ ಬರುತ್ತವೆ. ಆ ಯಾವ ದೋಷಗಳನ್ನೂ ಕೂಡ ಇವರಿಗೆ ಪರಿಹರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ.




ರಾಮಾನುಜರು ಚಮಸಸೂತ್ರಕ್ಕೆ ಅದ್ವೈತಿಗಳಂತೆ ವ್ಯಾಖ್ಯಾನ ಮಾಡುತ್ತಾರೆ. ಆದರೆ 'ಜ್ಯೋತಿರುಪಕ್ರಮಾತ್' ಇತ್ಯಾದಿ ಸೂತ್ರಕ್ಕೆ ಅದ್ವೈತಿಗಳಿಗಿಂತ ಬೇರೆಯಾದ ವ್ಯಾಖ್ಯಾನವನ್ನು ಮಾಡಿದ್ದಾರೆ. 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎಂಬ ಶ್ರುತಿಯಲ್ಲಿ ಪ್ರಸಕ್ತವಾದ ಅಜಾಶಬ್ದವು ಪ್ರಕೃತಿಯನ್ನು ಹೇಳುತ್ತಿದೆ. ಈ ಪ್ರಕೃತಿಯು ಬ್ರಹ್ಮನಿಂದ ಸೃಜ್ಯವಾಗಿದೆ. ಜ್ಯೋತಿರುಪಕ್ರಮಾ' ಎಂಬ ಸೂತ್ರದಲ್ಲಿರುವ ಜ್ಯೋತಿ ಎಂಬ ಶಬ್ದಕ್ಕೆ ಬ್ರಹ್ಮನೆಂದರ್ಥ. ಉಪಕ್ರಮ ಶಬ್ದಕ್ಕೆ ಕಾರಣವುಳ್ಳವನು ಎಂದರ್ಥ. ತೈತ್ತಿರೀಯಶಾಖೆಯಲ್ಲಿ 'ಅಣೋರಣೀಯಾನ್' ಇತ್ಯಾದಿಯಾಗಿ ಬ್ರಹ್ಮನ ಬಗ್ಗೆ ಹೇಳುತ್ತಾ ಮುಂದೆ 'ಅಜಾಮೇಕಾಮ್' ಎಂಬ ಶ್ರುತಿಯು ಬ್ರಹ್ಮನಿಂದ ಸೃಜ್ಯವಾದ ಪದಾರ್ಥಗಳನ್ನು ಹೇಳುವ ವಾಕ್ಯಗಳ ನಡುವೆ ಪ್ರಸಕ್ತವಾಗಿದೆ. ಆದ್ದರಿಂದ ಪ್ರಕೃತಿಯೂ ಕೂಡ ಬ್ರಹ್ಮನಿಂದ ಹುಟ್ಟಿದೆಯೆಂದು ಸೂತ್ರದ ಅಭಿಪ್ರಾಯವೆನ್ನುತ್ತಾರೆ.

ಇದೂ ಸಹ ತಪ್ಪು. ಏಕೆಂದರೆ 'ಅಜಾಮೇಕಾಮ್'ಎಂಬ ವಾಕ್ಯವನ್ನು ನೋಡಿದಾಗ ಪ್ರಕೃತಿಯು ಬ್ರಹ್ಮನಿಂದ ಹುಟ್ಟಿದೆಯೆಂದು ಸರ್ವಥಾ ತಿಳಿಯುತ್ತಿಲ್ಲ. ಪ್ರಕರಣಬಲದಿಂದ ತಿಳಿಯುತ್ತದೆಂದು ಹೇಳುವುದು ಸರ್ವಥಾ ಯುಕ್ತವಲ್ಲ. ಏಕೆಂದರೆ 'ಸೃಜಮಾನಾಃ' ಇತ್ಯಾದಿ ಶಬ್ದಗಳನ್ನು ಗಮನಿಸಿದಾಗ ಪ್ರಕೃತಿಯಲ್ಲಿ ಉಪಾದಾನತ್ವದ ಆಕಾಂಕ್ಷೆಯೇ ಬರುತ್ತಿದೆ ಹೊರತು, ಪ್ರಕೃತಿಯು ಯಾರಿಂದ ಹುಟ್ಟಿದೆ ? ಎಂಬ ಆಕಾಂಕ್ಷೆ ಬರುತ್ತಿಲ್ಲ. ಪ್ರಕೃತಿಯಿಂದ ಯಾವ ಪದಾರ್ಥಗಳು ಹುಟ್ಟಿವೆ ಎಂಬ ಆಕಾಂಕ್ಷೆ ಬರುತ್ತಿದೆ. ಆದ್ದರಿಂದ ಸಮಸ್ತ ಜಗತ್ತಿಗೆ ಪ್ರಕೃತಿ ಕಾರಣವೆಂದು ಶ್ರುತಿ ಹೇಳಬಹುದೇ ಹೊರತು, ಪ್ರಕೃತಿಯು ಬ್ರಹ್ಮನಿಂದ ಹುಟ್ಟಿದೆ ಎಂದು ಈ ವಾಕ್ಯದಿಂದ ಸರ್ವಥಾ ತಿಳಿಯುವುದಿಲ್ಲ. ಆದ್ದರಿಂದ ಇವರ ಈ ಸೂತ್ರಾರ್ಥಗಳೂ ಕೂಡ ಅತ್ಯಂತ ಅಯುಕ್ತವಾಗಿವೆ.



● ● ● ● ●

## ಟೀಕೆಯ ಕಠಿಣಪದಾರ್ಥ

### तात्पर्यचन्द्रिका

**टीकाक्षरार्थस्तु ।। अधिकारिनियोज्ययजमानेति ।। अधिकारित्वं फलस्वामित्वावस्था । नियोज्यत्वं विधिप्रेर्यत्वावस्था । यजमानत्वं कर्तृत्वावस्था।।**

ಅನುವಾದ - ಟೀಕೆಯಲ್ಲಿ 'ಅಧಿಕಾರಿನಿಯೋಜ್ಯಯಜಮಾನ' ಎಂಬುದಾಗಿ ಹೇಳಿದ್ದಾರೆ. ಇದನ್ನು ನೋಡಿದಾಗ ಎಲ್ಲವೂ ಒಬ್ಬನೇ ಯಜಮಾನನನ್ನು ಪ್ರತಿಪಾದನೆ ಮಾಡುತ್ತಿರುವಾಗ ಪ್ರತ್ಯೇಕವಾಗಿ ಏಕೆ

ಹೇಳಿದ್ದಾರೆ ? ಎಂಬ ಪ್ರಶ್ನೆಯು ಬರುತ್ತದೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. ಒಬ್ಬನೇ ವ್ಯಕ್ತಿಯಾಗಿದ್ದರೂ ಅವಸ್ಥಾಭೇದದಿಂದ ಬೇರೆ ಬೇರೆ ಹೆಸರುಗಳನ್ನು ಪಡೆಯುತ್ತಾನೆ. ಫಲಸ್ವಾಮಿತ್ವವನ್ನು ಹೊಂದಿದ ಅವಸ್ಥೆಯಲ್ಲಿ ಅಧಿಕಾರಿಯೆನಿಸುತ್ತಾನೆ. ವಿಧಿಯಿಂದ ಪ್ರೇರ್ಯನಾದಾಗ ನಿಯೋಜ್ಯ-ನೆನಿಸುತ್ತಾನೆ. ಯಜ್ಞಯಾಗಾದಿಗಳಲ್ಲಿ ಕರ್ತೃತ್ವಾವಸ್ಥೆಯನ್ನು ಹೊಂದಿದಾಗ ಯಜಮಾನನೆನಿಸುತ್ತಾನೆ.

**ज्योतिष्टोमादिशब्दव्युत्पत्तिरिति ।। यद्यपि ज्योतिःशब्द एव सूत्र उपात्तः । अनुव्याख्याने च तस्यैव व्युत्पत्तिर्दर्शिता । तथापि ज्योतिष्टोम-शब्दोऽपीहोदाहरणमिति दर्शयितुं ज्योतिःशब्दोपि ज्योतिष्टोमवाचीति दर्शयितुं च टीकायां ज्योतिष्टोमशब्दस्य व्युत्पत्तिर्दर्शिता ।। छ ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् ज्योतिरुपक्रमाधिकरणं सम्पूर्णम् ।।**

'ಜ್ಯೋತಿಷ್ಟೋಮಾದಿ ಶಬ್ದವ್ಯುತ್ಪತ್ತಿಃ' ಎಂಬುದರ ಅಭಿಪ್ರಾಯ ಹೀಗಿದೆ - ಸೂತ್ರದಲ್ಲಿ 'ಜ್ಯೋತಿಃ' ಶಬ್ದವನ್ನಷ್ಟೇ ಉಲ್ಲೇಖಿಸಿದ್ದಾರೆ. ಅನುವ್ಯಾಖ್ಯಾನದಲ್ಲಿಯೂ 'ಜ್ಯೋತಿಃ' ಎಂಬ ಶಬ್ದದ ನಿಷ್ಪತ್ತಿಯನ್ನಷ್ಟೇ ಮಾಡಿದ್ದಾರೆ. ಆದರೂ ಕೂಡ ಟೀಕೆಯಲ್ಲಿ 'ಜ್ಯೋತಿಷ್ಟೋಮಾದಿ ಶಬ್ದವ್ಯುತ್ಪತ್ತಿಃ' ಎಂದೇಕೆ ಹೇಳಿದ್ದಾರೆ ಎಂದರೆ ಅಭಿಪ್ರಾಯ ಹೀಗಿದೆ - 'ಜ್ಯೋತಿಃ' ಎಂಬ ಶಬ್ದದಂತೆ 'ಜ್ಯೋತಿಷ್ಟೋಮ' ಶಬ್ದವೂ ಕೂಡ ಉದಾಹರಣೆ ಆಗುತ್ತದೆಂದು ತೋರಿಸಬೇಕು. ಮತ್ತು 'ನಾಮೈಕದೇಶೇನ ನಾಮಗ್ರಹಣಂ' ಎಂಬಂತೆ 'ಜ್ಯೋತಿಃ' ಎಂಬ ಶಬ್ದವು ಜ್ಯೋತಿಷ್ಟೋಮಕ್ಕೆ ವಾಚಕವಾಗಿದೆಯೆಂದೂ ಕೂಡ ತೋರಿಸಬೇಕು. ಈ ಎರಡು ದೃಷ್ಟಿಯಿಂದ ಟೀಕೆಯಲ್ಲಿ ಜ್ಯೋತಿಷ್ಟೋಮಶಬ್ದದ ವ್ಯುತ್ಪತ್ತಿಯನ್ನು ತೋರಿಸಿರುತ್ತಾರೆ.

ಇಲ್ಲಿಗೆ ಶ್ರೀಬ್ರಹ್ಮಣ್ಯತೀರ್ಥಶ್ರೀಪಾದರ ಶಿಷ್ಯಂದಿರಾದ ಶ್ರೀ ವ್ಯಾಸತೀರ್ಥಶ್ರೀಪಾದಂಗಳವರಿಂದ ವಿರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ ಜ್ಯೋತಿರುಪಕ್ರಮಾಧಿಕರಣವು ಸಂಪೂರ್ಣವಾಯಿತು

**प्रकाशः –**

अधिकार्यादिपदानां भिन्नार्थत्वमस्फुटत्वादाह – **अधिकारीति** ।। शब्दान्तरव्युत्पत्त्युक्तेर्भावमाह – **ज्योतिष्टोमेति** ।।

**इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे ज्योतिरुपक्रमाधिकरणं सम्पूर्णम् ।।**

ಜ್ಯೋತಿರುಪಕ್ರಮಾಧಿಕರಣ (1-4-2)

ಟೀಕೆಯಲ್ಲಿರುವ ಅಧಿಕಾರಿ ಮೊದಲಾದ ಪದಗಳನ್ನು ಗಮನಿಸಿದರೆ ಅಧಿಕಾರಿಯಾದವನೇ ಬೇರೆ ನಿಯೋಜ್ಯನೇ ಬೇರೆ ಯಜಮಾನನೇ ಬೇರೆ ಎಂಬ ಭ್ರಾಂತಿ ಬರುತ್ತದೆ. ಅದರ ಪರಿಹಾರಕ್ಕಾಗಿ 'ಅಧಿಕಾರಿ' ಇತ್ಯಾದಿ ಗ್ರಂಥವು ಹೊರಟಿದೆ.

ಟೀಕೆಯಲ್ಲಿ ಜ್ಯೋತಿಶಬ್ದವನ್ನು ಬಿಟ್ಟು 'ಜ್ಯೋತಿಷ್ಟೋಮ' ಎಂಬ ಶಬ್ದದ ಅರ್ಥವನ್ನು ಹೇಳಲು ಕಾರಣ ನೀಡುತ್ತಿದ್ದಾರೆ.

ಇಲ್ಲಿಗೆ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ಜ್ಯೋತಿರುಪಕ್ರಮಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम्** – नन्वजाशब्दस्य प्रकारान्तरासम्भवादजात्वारोपोऽभ्युपगम्यत इत्यत आह – **नचेति** ।। ननु प्रकृतिपक्षे लोहितादिशब्दानां रजआदौ गौणत्वापत्तिरित्यत आह – **लोहितादिविशेषणशब्दानामिति** ।।

**उक्तेति** ।। कल्पनारोपो गौणीवृत्तिर्वेत्यादिनोक्तेत्यर्थः । अधिकारिनियोज्य-यजमानशब्दानामेकार्थत्वेन पृथग्ग्रहणमनुपपन्नमित्यतो व्याख्याति ।। **अधिकारित्वमिति** ।।

।। इति श्रीकेशवभट्टारकेण विरचितायां भावदीपिकायाम्
ज्योतिरुपक्रमाधिकरणं सम्पूर्णम् ।। २ ।।

*****

# ಜ್ಯೋತಿರುಪಕ್ರಮಾಧಿಕರಣ

(೧-೪-೨)

## ಭಾಗ -೩

ನ್ಯಾಯವಿವರಣ, ನ್ಯಾಯವಿವರಣ ಟೀಕಾ,
ಅಣುಭಾಷ್ಯ, ತತ್ವಮಂಜರೀ,
ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ
ಸರಳ ಕನ್ನಡ ಅನುವಾದ

* * *

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणम्

## ज्योतिरुपक्रमाधिकरणम् (१।४।२)

**न्या.वि. — रूढो, रूढियोगो, महायोगो, महारूढियोगो, रूढोपचारो, रूढलक्षणोपचारो, लक्षणेति शब्दवृत्तिभेदाः, रूढिपूर्वकत्वेन महायोगवृत्त्या परमेश्वरेऽखिलशब्दव्युत्पत्युपपत्तेः ॥ २ ॥**

ನ್ಯಾಯವಿವರಣೆ

ಶಬ್ದಾರ್ಥಗಳು ಅನೇಕವಾಗಿವೆ ಎಂಬುದನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಏಳು ಬಗೆಯ ಶಬ್ದವೃತ್ತಿಗಳನ್ನು ಹೇಳುತ್ತಿದ್ದಾರೆ. ರೂಢ, ರೂಢಿಯೋಗ, ಮಹಾಯೋಗ, ಮಹಾರೂಢಿಯೋಗ, ರೂಢೋಪಚಾರ, ರೂಢಲಕ್ಷಣೋಪಚಾರ, ಲಕ್ಷಣಾ ಇತ್ಯಾದಿಯಾಗಿ ಅನೇಕವಿಧವಾದ ವೃತ್ತಿಗಳಿವೆ. ಇವುಗಳಲ್ಲಿ 'ನಾರಾಯಣಾದಿಶಬ್ದಗಳು' 'ಮಹಾರೂಢಿಯೋಗ' ಎನಿಸುತ್ತವೆ. 'ಆನಂದಮಯ' ಮೊದಲಾದ ಶಬ್ದಗಳು 'ಮಹಾಯೋಗ' ಎನಿಸುತ್ತವೆ. ಹೀಗೆ ಭಗವಂತನಲ್ಲಿ ಎರಡು ವೃತ್ತಿಗಳು ಉಳಿದ ಪದಾರ್ಥಗಳಲ್ಲಿ ಯಥಾಯೋಗ್ಯವಾಗಿ ಇತರ ವೃತ್ತಿಗಳು ಇರುತ್ತವೆಂಬುದನ್ನು ತಿಳಿದುಕೊಳ್ಳಬೇಕು.

ರೂಢ್ಯಾದಿವೃತ್ತಿಯನ್ನು ಅಂಗೀಕರಿಸಿಯೇ ಮಹಾಯೋಗವೃತ್ತಿಯನ್ನು ಪರಮಾತ್ಮನಲ್ಲಿ ಎಲ್ಲಾ ಶಬ್ದಗಳಿಗೂ ಹೇಳುತ್ತಿರುವುದರಿಂದ 'ಜ್ಯೋತಿಷಾಂ ಸ್ತೋಮಃ' ಮೊದಲಾದ ವ್ಯುತ್ಪತ್ತಿಗಳು ಉಪಪನ್ನವಾಗುತ್ತವೆ.

भा.बो. — **ज्योतिरुपक्रमात्तु तथा ह्यधीयत एके ॥** अत्र 'वसन्ते वसन्ते ज्योतिषा यजेत' इति वाक्यगतज्योतिरादिशब्दानां प्रागुक्तसंशयबीजेन भगवत्परत्व कर्मादिपरत्वकोटिकसंशये कर्मादिपरत्वमेवेति पूर्वः पक्षः ।

## ನ್ಯಾಯವಿವರಣಟೀಕೆ

'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎಂಬ ಈ ಅಧಿಕರಣದಲ್ಲಿ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಲ್ಲಿರುವ 'ಜ್ಯೋತಿಃ' ಮೊದಲಾದ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಹಿಂದೆ ಹೇಳಿದಂತೆ ಸಂದೇಹಬೀಜವಿರುವುದರಿಂದ ಜ್ಯೋತಿರಾದಿಶಬ್ದಗಳು ಭಗವತ್‌ಪರವಾಗಿಯೋ, ಅಥವಾ ಕರ್ಮಾದಿಪರವಾಗಿಯೋ? ಎಂಬ ಸಂಶಯವು ಪ್ರಾಪ್ತವಾದಾಗ ಕರ್ಮಾದಿಪರವೆಂದೇ ಪೂರ್ವಪಕ್ಷ.

**भगवत्परत्वमिति सिद्धान्तः ।**

**एतत्पूर्वपक्षसिद्धान्तसाधकत्वेन 'व्युत्पत्तेरप्यशक्यता' इति 'शब्दार्थाऽनेकता तथा' इति न्यायौ बाध्यबाधकभावं दर्शयन् विवृणोति ।। रूढ इत्यादिना ।।**

ಭಗವತ್‌ಪರವಾಗಿವೆಂದು ಸಿದ್ಧಾಂತ. ಈ ಪೂರ್ವಪಕ್ಷ ಹಾಗೂ ಸಿದ್ಧಾಂತನ್ಯಾಯಗಳಿಗೆ ಸಾಧಕವಾಗಿ 'ವ್ಯುತ್ಪತ್ತೇರಪ್ಯಶಕ್ಯತಾ' ಹಾಗೂ 'ಶಬ್ದಾರ್ಥಾऽನೇಕತಾ ತಥಾ' ಎಂಬ ಎರಡು ನ್ಯಾಯಗಳಲ್ಲಿ ಬಾಧ್ಯಬಾಧಕಭಾವವು ಇರುತ್ತದೆಂದು ವಿವರಿಸಲು 'ರೂಢಿಃ' ಇತ್ಯಾದಿ ನ್ಯಾಯವಿವರಣ ವಾಕ್ಯವು ಹೊರಟಿರುತ್ತದೆ.

**शब्दार्थानामनेकत्वोपपादनार्थं वृत्तिभेदकथनम् । नारायणादिशब्दानां महारूढियोगः, आनन्दममयादिशब्दानां महायोग इति भगवति वृत्तिद्वयम् ।**

ಶಬ್ದದ ಅರ್ಥಗಳು ಅನೇಕವಾಗಿರುತ್ತವೆ ಎಂಬುದನ್ನು ಉಪಪಾದನೆ ಮಾಡುವುದಕ್ಕಾಗಿ ವೃತ್ತಿಯಲ್ಲಿ ಭೇದವನ್ನು ಹೇಳಲಾಗಿದೆ. ನಾರಾಯಣಾದಿಶಬ್ದಗಳು ಮಹಾರೂಢಿಯೋಗಕ್ಕೆ ಉದಾಹರಣೆ. ಆನಂದಮಯಾದಿಶಬ್ದಗಳು ಮಹಾಯೋಗಕ್ಕೆ ಉದಾಹರಣೆಯಾಗಿವೆ. ಹೀಗೆ ಮಹಾರೂಢಿಯೋಗ ಹಾಗೂ ಮಹಾಯೋಗ ಎಂಬೆರಡು ವೃತ್ತಿಗಳು ಭಗವಂತನಲ್ಲಿ ಮಾತ್ರ ಇರುತ್ತವೆಂದು ತಿಳಿಯಬೇಕು.

**तदितरत्र यथायथमितराः सप्त वृत्तय इति ज्ञातव्यम् । एतेषां लक्षणोदाहरणानि तत्वप्रकाशिकादौ द्रष्टव्यानि ।**

ಬೇರೆ ಪದಾರ್ಥಗಳಲ್ಲಿ ಉಳಿದ ಏಳು ಬಗೆಯ ವೃತ್ತಿಗಳು ಯಥಾಕ್ರಮವಾಗಿ ಇರುತ್ತವೆಂಬುದನ್ನು ತಿಳಿಯಬೇಕು. ಈ ಏಳು ಬಗೆಯ ವೃತ್ತಿಯ ಲಕ್ಷಣಾವನ್ನು ಹಾಗೂ ಉದಾಹರಣೆಗಳನ್ನು ತತ್ವಪ್ರಕಾಶಿಕಾ, ತಾತ್ಪರ್ಯಚಂದ್ರಿಕಾ ಮೊದಲಾದ ಗ್ರಂಥಗಳಲ್ಲಿ ನೋಡಿ ತಿಳಿದುಕೊಳ್ಳಬೇಕು.

**ज्योति-र्वसन्त-स्तोमादिशब्दानां याग–काल–समूहादिषु रूढत्वात्, शब्दान्तराणां योगादिसद्भावेऽपि रूढेः प्रायिकत्वाच्च रूढिपूर्वकत्वेनेत्युक्तम् ।**

'ಜ್ಯೋತಿಃ' ಎಂಬ ಶಬ್ದವು 'ಯಾಗದಲ್ಲಿ', 'ವಸಂತೇ' ಎಂಬ ಶಬ್ದವು 'ಕಾಲದಲ್ಲಿ', 'ಸ್ತೋಮ' ಎಂಬ ಶಬ್ದವು 'ಸಮೂಹ' ಎಂಬರ್ಥದಲ್ಲಿ ರೂಢವಾಗಿದೆ. ಬೇರೆ ಶಬ್ದಗಳಿಗೆ ಯೋಗವೃತ್ತಿಯಿದ್ದರೂ ರೂಢಿಯು ಪ್ರಾಯಿಕವಾದ್ದರಿಂದ 'ರೂಢಿಪೂರ್ವಕತ್ವೇನ' ಎಂದು ಹೇಳಿದ್ದಾರೆ.

**रूढ्यादिपूर्वकत्वेनेत्याशयः । अत एव तत्वप्रकाशिकायां 'वृत्तीः' इति बहुवचनप्रयोगेनैतदभिप्राय उक्तः ।**

**'व्युत्पत्त्युपपत्तिः' इति वदतैव 'तदशक्यता' इत्येतदधिकरणपूर्वपक्षसाधिकेति विवृतं भवति ।**

'ರೂಢಿಪೂರ್ವಕತ್ವೇನ' ಎಂಬಲ್ಲಿ 'ರೂಢ್ಯಾದಿಪೂರ್ವಕತ್ವೇನ' ಎಂಬ ಅಭಿಪ್ರಾಯವನ್ನು ತಿಳಿದುಕೊಂಡು, ಉಳಿದ ವೃತ್ತಿಗಳನ್ನು ಸಂಗ್ರಹಿಸಬೇಕು. ಆದ್ದರಿಂದ ತತ್ವಪ್ರಕಾಶಿಕಾದಲ್ಲಿ 'ವೃತ್ತೀಃ' ಎಂಬ ಬಹುವಚನ ಪ್ರಯೋಗವನ್ನು ಮಾಡಿರುತ್ತಾರೆ. ಬಹುವಚನಪ್ರಯೋಗದಿಂದ ರೂಢಿವೃತ್ತಿಯ ಜೊತೆಗೆ ಉಳಿದ ವೃತ್ತಿಗಳನ್ನು ವಿವಕ್ಷಿಸಬೇಕೆಂದು ಸ್ಪಷ್ಟವಾಗುತ್ತದೆ. 'ವ್ಯುತ್ಪತ್ತ್ಯುಪಪತ್ತಿಃ' ಎಂದು ಹೇಳಿದ್ದರಿಂದಲೇ 'ತದಶಕ್ಯತಾ' ಎಂಬ ಈ ಅಧಿಕರಣದ ಪೂರ್ವಪಕ್ಷಸಾಧಕ ನ್ಯಾಯವನ್ನು ವಿವರಿಸಿದಂತಾಯಿತು.

**ततश्च सर्वशब्दानां ब्रह्मपरत्वे ज्योतिष्टोमादिशब्देषु 'ज्योतिषां स्तोमः' इति विग्रहे भगवन्नामावृत्तिमात्रत्वप्रसङ्गाद्व्युत्पत्तेरप्यशक्यत्वेन कर्मादिवाचकत्वमेव ज्योतिष्टोमादिशब्दानामिति पूर्वपक्षे, शब्दार्थानामनेकत्वाज्ज्योतिरादिशब्दानामन्यत्र रूढ्यादिवृत्त्यभ्युपगमेन महायोगवृत्या परमेश्वरे शब्दप्रवृत्त्यभ्युपगमाज्ज्योतिषां स्तोम इत्याद्यखिलशब्दव्युत्पत्युपपत्तेः ब्रह्मैव ज्योतिष्टोमादिशब्दवाच्यमिति सिद्धान्त इति भावः ।**

ಆದ್ದರಿಂದ ಸಕಲ ಶಬ್ದಗಳು ಬ್ರಹ್ಮಪರವೆಂದು ಸಿದ್ಧವಾದಾಗ, ಜೋತಿಷ್ಟೋಮಾದಿ ಶಬ್ದಗಳಲ್ಲಿ 'ಜ್ಯೋತಿಷಾಂ ಸ್ತೋಮಃ' ಎಂಬ ವಿಗ್ರಹವನ್ನು ಮಾಡಿದಾಗ ಭಗವನ್ನಾಮಗಳಿಗೆ ಪುನಃ ಆವೃತ್ತಿಯನ್ನು ಹೇಳಿದಂತಾಗುತ್ತದೆ. ಆದ್ದರಿಂದ ವ್ಯುತ್ಪತ್ತಿಯೇ ಅಶಕ್ಯವಾಗುತ್ತದೆ. ಇದರ ಪರಿಹಾರಕ್ಕಾಗಿ ಜ್ಯೋತಿಷ್ಟೋಮ ಮೊದಲಾದ ಶಬ್ದಗಳು ಕರ್ಮಾದಿಗಳನ್ನೇ ಹೇಳುತ್ತವೆ ಹೊರತು, ಶ್ರೀಹರಿಯನ್ನು ಹೇಳುವುದಿಲ್ಲ ಎಂಬ ಪೂರ್ವಪಕ್ಷವು ಪ್ರಾಪ್ತವಾದರೆ ಶಬ್ದಾರ್ಥಗಳು ಅನೇಕವಾಗಿರುವುದರಿಂದ ಜ್ಯೋತಿರಾದಿಶಬ್ದಗಳಿಗೆ ಲೋಕಪ್ರಸಿದ್ಧವಾದ ಅರ್ಥದಲ್ಲಿ ರೂಢಿವೃತ್ತಿಯನ್ನು ಅಂಗೀಕರಿಸಿ, ಮಹಾಯೋಗವೃತ್ತಿಯಿಂದ ಪರಮೇಶ್ವರನಲ್ಲಿ ಶಬ್ದಗಳು ಪ್ರವೃತ್ತವಾಗುತ್ತವೆ ಎಂದು ಅಂಗೀಕರಿಸುತ್ತಿರುವುದರಿಂದ 'ಜ್ಯೋತಿಷಾಂ ಸ್ತೋಮಃ' ಇತ್ಯಾದಿಯಾದ ಅಖಿಲ ಶಬ್ದಗಳ ವ್ಯುತ್ಪತ್ತಿಯು ಉಪಪನ್ನವಾಗುತ್ತವೆ. ಆದ್ದರಿಂದ 'ಜ್ಯೋತಿಷ್ಟೋಮ' ಮೊದಲಾದ ಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗುತ್ತಾನೆಂಬುದು ಈ ಅಧಿಕರಣದ ಸಿದ್ಧಾಂತ.

श्री श्रीमदानन्दतीर्थभगवत्पादाचार्यविरचितम्
ब्रह्मसूत्राणुभाष्यम्

# अणुभाष्यम्

## ज्योतिरुपक्रमाधिकरणम् (१।४।२)

**कर्मवाक्यैश्च वाच्यः**

ಕರ್ಮ, ಕರ್ಮದ ಅಂಗಗಳು, ಕ್ರಮ, ದೇಶ, ಕಾಲ ಇವುಗಳನ್ನೆಲ್ಲಾ ಹೇಳುವಂತಹ ಶಬ್ದಗಳೂ ಕೂಡ ಮುಖ್ಯವಾಗಿ ಶ್ರೀಹರಿಯ ನಾಮಗಳೇ ಆಗಿರುತ್ತವೆ.

***

श्रीराघवेन्द्रतीर्थविरचिता
ब्रह्मसूत्राणुभाष्यविवृतिः

# तत्वमञ्जरी

## ज्योतिरुपक्रमाधिकरणम् (१।४।२)

नन्वथापि न विष्णोः सर्वशब्दवाच्यत्वम् । 'वसन्ते वसन्ते ज्योतिषा यजेत' इत्यादौ कालकर्मक्रमाधिकारिफलादिवाचकशब्दानां विष्णुवाचित्वायोगादित्यतः प्राप्तं – **ज्योतिरुपक्रमादित्यादिसूत्रद्वयम्** । तदर्थः – **कर्मवाच्यैश्च वाच्य इति** ।

ಅವ್ಯಕ್ತ ಜೀವ ಮೊದಲಾದವುಗಳು ಭಗವಂತನನ್ನೇ ಪ್ರತಿಪಾದನೆ ಮಾಡುತ್ತವೆಂಬುದಾಗಿ ಹಿಂದಿನ ಅಧಿಕರಣದಲ್ಲಿ ಸಮರ್ಥಿಸಲಾಯಿತು. ಆದರೂ ಕೂಡ ವಿಷ್ಣುವಿಗೆ ಸಕಲಶಬ್ದವಾಚ್ಯತ್ವವು ಸಿದ್ಧವಾಗುವುದಿಲ್ಲ.

ಏಕೆಂದರೆ 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇವೇ ಮೊದಲಾದ ಯಜ್ಞಾದಿ ಕರ್ಮಗಳನ್ನು ಪ್ರತಿಪಾದನೆ ಮಾಡುವಂತಹ ಶ್ರುತಿಗಳು ಸರ್ವಥಾ ವಿಷ್ಣುವಾಚಕಗಳಾಗಲಾರವು. ಅಷ್ಟೇ ಅಲ್ಲದೇ ಕಾಲ, ಕರ್ಮ, ಅಧಿಕಾರಿ, ಫಲ ಇವುಗಳನ್ನು ಪ್ರತಿಪಾದನೆ ಮಾಡುವಂತಹ ಶಬ್ದಗಳೂ ಕೂಡ ವಿಷ್ಣುವನ್ನು ಸಮರ್ಥನೆ ಮಾಡಲಾರವು. ಹೀಗಿರುವಾಗ ಸಕಲ ಶಬ್ದಗಳಿಂದ ಮಹಾವಿಷ್ಣುವೇ ಪ್ರತಿಪಾದ್ಯ-ನಾಗುತ್ತಾನೆಂಬುದಾಗಿ ಹೇಗೆ ಹೇಳುತ್ತೀರಿ? ಈ ಪ್ರಶ್ನೆಗೆ 'ಜ್ಯೋತಿರುಪಾಕ್ರಮಾತ್' ಇತ್ಯಾದಿಯಾದ ಎರಡು ಸೂತ್ರಗಳಿಂದ ಕೂಡಿರುವಂತಹ ಈ ಜ್ಯೋತಿರುಪಾಕ್ರಮಾಧಿಕರಣವು ಹೊರಟಿದೆ. ಈ ಅಧಿಕರಣದ ಸಾರವನ್ನೇ ಶ್ರೀಮದಾಚಾರ್ಯರು ಅಣುಭಾಷ್ಯದಲ್ಲಿ 'ಕರ್ಮವಾಕ್ಯೈಶ್ಚ ವಾಚ್ಯಃ' ಎಂಬುದಾಗಿ ಸಂಗ್ರಹಿಸಿದ್ದಾರೆ.

**पूर्ववदनुषङ्गः । प्राधान्यादुक्तवक्ष्यमाणसर्वशब्दानां उपलक्षणत्वेन कर्मोक्तिः । कर्म वाच्यं येषां तैः कर्मवाच्यैश्च । न केवलं तरतमभावापन्नार्थवाचकैरिति चार्थः ।**

ಈ ಅಧಿಕರಣದಲ್ಲಿಯೂ ಕೂಡ ಹಿಂದಿನ ಅಧಿಕರಣದಂತೆ 'ಏಕೋ ಜನಾರ್ದನಃ' ಎಂಬುದನ್ನು ಮತ್ತು 'ಅನ್ಯತ್ರ ನಿಯತೈರಪಿ ಮುಖ್ಯತಯೋದಿತಃ ಶಬ್ದೈಃ' ಎಂಬುದನ್ನೂ ಕೂಡ ಅನುಷಂಗ ಮಾಡಿಕೊಳ್ಳಬೇಕು. ಸೂತ್ರದಲ್ಲಿ ಕರ್ಮವನ್ನು ಹೇಳುವಂತಹ 'ಜ್ಯೋತಿಃ' ಎಂಬ ಶಬ್ದವನ್ನು ಉಲ್ಲೇಖಿಸಿದ್ದು ಕೇವಲ ಉಪಲಕ್ಷಣವಾಗಿದೆ. ಇದರಿಂದ ಹಿಂದಿನ ಎಲ್ಲಾ ಅಧಿಕರಣಗಳಲ್ಲಿ ಸಮನ್ವಯ ಮಾಡಿದ ಶಬ್ದಗಳನ್ನು ಹಾಗೂ ಮುಂದಿನ ಅಧಿಕರಣಗಳಲ್ಲಿ ಸಮನ್ವಯ ಮಾಡುವಂತಹ ಶಬ್ದಗಳನ್ನೂ ಕೂಡ ಈ ಅಧಿಕರಣದಲ್ಲಿ ವಿಷಯವನ್ನಾಗಿ ತಿಳಿಯಬೇಕು. 'ಕರ್ಮವಾಕ್ಯೈಃ' ಎಂಬ ಅಣುಭಾಷ್ಯದ ಮಾತು ಸಮಸ್ತ ಪದವಾಗಿದೆ. 'ಕರ್ಮ ವಾಚ್ಯಂ ಯೇಷಾಂತೇಃ' ಎಂಬುದಾಗಿ ವಿಗ್ರಹವನ್ನು ತಿಳಿಯಬೇಕು. ಯಾವ ಶಬ್ದಗಳು ಕರ್ಮವನ್ನು ಪ್ರತಿಪಾದನೆ ಮಾಡುತ್ತವೋ ಅಂತಹ ಶಬ್ದಗಳಿಂದ ಎಂದರ್ಥ. ಇಲ್ಲಿರುವ 'ಚ' ಶಬ್ದವು ಸಮುಚ್ಚಯದ್ಯೋತಕವಾಗಿದೆ. ಹಿಂದಿನ ಅಧಿಕರಣದಲ್ಲಿ ದೇವತಾತಾರತಮ್ಯವನ್ನು ಹೇಳುವಂತಹ 'ಅವ್ಯಕ್ತಾತ್ ಪುರುಷಃ ಪರಃ' ಮೊದಲಾದ ಶಬ್ದಗಳಿಂದಷ್ಟೇ ಅಲ್ಲ ಕರ್ಮಾದಿವಾಚಕ ಶಬ್ದಗಳೂ ಕೂಡ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತವೆಂಬುದು 'ಚ' ಶಬ್ದದ ಅಭಿಪ್ರಾಯ.

**कर्मतदङ्गतत्क्रमदेशकालाधिकार्यादिवाचकैः अन्यत्र नियतैरपि शब्दैर्मुख्यतया परममुख्यवच्यः एको जनार्दनो वाच्यो न कर्मादिः । कुतः । शब्दैः । 'ता वा एताः सर्वा ऋचः सर्वे वेदाः', 'नामानि सर्वाणि यमाविशन्ति', 'तमेवैकं जानथ', 'सर्वे वेदा यत्पदमामनन्ति' इत्यादिसर्वशब्दवाच्यत्वावेदकश्रुत्यादिरूपशब्दैः ज्ञायत इत्यर्थः ।**

ಕರ್ಮ, ಅವುಗಳ ಅಂಗ, ಕ್ರಮ, ದೇಶ, ಕಾಲ, ಅಧಿಕಾರಿ ಇವೇ ಮೊದಲಾದ ಪದಾರ್ಥಗಳನ್ನು ಪ್ರತಿಪಾದನೆ ಮಾಡುವಂತಹ ಶಬ್ದಗಳು ಲೋಕರೂಢಿಯಿಂದ ಮುಖ್ಯವಾಗಿ ಅನ್ಯತ್ರಪ್ರಸಿದ್ಧವೇ ಆಗಿರುತ್ತವೆ.

ಆದರೂ ಕೂಡ ಪರಮಮುಖ್ಯವೃತ್ತಿಯಿಂದ ಜನಾರ್ದನನೊಬ್ಬನೇ ಈ ಎಲ್ಲಾ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಹೊರತು ಕರ್ಮ, ಅವುಗಳ ಅಂಗ ಮೊದಲಾದವುಗಳಲ್ಲ. ಏಕೆಂದರೆ 'ಶಬ್ದೈಃ' ಎಂಬ ಪದದಿಂದ ಉತ್ತರವನ್ನು ತಿಳಿಯಬೇಕು. 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ' 'ನಾಮಾನಿ ಸರ್ವಾಣಿ ಯಮಾವಿಶಂತಿ' 'ತಮೇವೈಕಂ ಜಾನಥ' 'ಸರ್ವೇ ವೇದಾಃ ಯತ್ಪದಮಾಮನಂತಿ' ಇವೇ ಮೊದಲಾದ ಶ್ರುತಿಗಳು ಮಹಾವಿಷ್ಣುವೇ ಸಕಲಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಘೋಷಣೆ ಮಾಡುತ್ತಿವೆ ಇತ್ಯಾದಿ ಶ್ರುತಿಗಳೆಂಬ ಶಬ್ದಗಳಿಂದ ಕರ್ಮಾದಿವಾಚಕಶಬ್ದಗಳೂ ಕೂಡ ಶ್ರೀಹರಿ ಪ್ರತಿಪಾದಕಗಳೆಂಬುದು ತಿಳಿಯುತ್ತವೆ.

अस्तु श्रुत्यादिबलात् सर्वशब्दोदितत्वम् । मुख्यवृत्त्येति तु कुत इत्यतोऽपि – **शब्दैरिति** । 'एष इमं लोकमभ्यार्चत्' इत्यादिरूपैः हरौ महायोगविद्वद्रूढिप्रदर्शकैः श्रुत्यादिरूपशब्दैरित्यर्थः ।

'ನಾಮಾನಿ ಸರ್ವಾಣಿ' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಪರಮಾತ್ಮನು ಸಕಲಶಬ್ದವಾಚ್ಯನಾಗಿದ್ದಾನೆಂದು ಹೇಳಿದಿರಿ. ಅದನ್ನು ಒಪ್ಪೋಣ. ಆದರೆ ಪರಮಮುಖ್ಯವೃತ್ತಿಯಿಂದ ವಾಚ್ಯನಾಗಿದ್ದಾನೆಂಬುದು ಹೇಗೆ ಸಿದ್ಧವಾಗುತ್ತದೆ ? ಈ ಪ್ರಶ್ನೆಗೆ 'ಶಬ್ದೈಃ' ಎಂಬ ಪದವೇ ಉತ್ತರಿಸುತ್ತಿದೆ. 'ಏಷಃ ಇಮಂ ಲೋಕಂ ಅಭ್ಯಾರ್ಚತ್' ಇವೇ ಮೊದಲಾದ ಶ್ರುತಿಗಳು ಮಹಾಯೋಗ ಹಾಗೂ ವಿದ್ವದ್ರೂಢಿಯಿಂದ ಸಕಲಶಬ್ದಗಳು ವಿಷ್ಣುವಿನಲ್ಲಿ ಸಮನ್ವಯಗೊಳ್ಳುತ್ತಿವೆ ಎಂದು ಘೋಷಣೆ ಮಾಡುತ್ತಿವೆ. ಇದರ ಆಧಾರದಿಂದಲೇ ಕರ್ಮಾದಿವಾಚಕವಾದ ಶಬ್ದಗಳೂ ಕೂಡ ಪರಮಮುಖ್ಯವೃತ್ತಿಯಿಂದ ವಿಷ್ಣುವಾಚಕಗಳಾಗುತ್ತವೆಂಬುದನ್ನು ನಿರ್ಧರಿಸಬಹುದು.

एवं तर्हि कर्मादिपरिलोपः । पदेष्ववयवानामपि विष्णुवाचित्वे हरौ शब्दस्य योगानुपपत्तिश्चेत्यतोऽपि **कर्मवाच्यैश्चेति** । चोऽप्यर्थः ।

ಕರ್ಮ, ತದಂಗಗಳು, ಕಾಲ ಇವೇ ಮೊದಲಾದ ಪದಾರ್ಥಗಳನ್ನು ಪ್ರತಿಪಾದಿಸುವಂತಹ ಶಬ್ದಗಳೆಲ್ಲವೂ ಹರಿನಾಮಗಳಾದರೆ ಜ್ಯೋತಿಷ್ಟೋಮ ಮೊದಲಾದ ಕರ್ಮಗಳ ಲೋಪವಾಗಬೇಕಾದೀತು. ಏಕೆಂದರೆ ಎಲ್ಲ ಶಬ್ದಗಳೂ ಹರಿನಾಮಗಳಾದ್ದರಿಂದ ಕರ್ಮಾದಿಗಳನ್ನು ಪ್ರತಿಪಾದಿಸುವಂತಹ ಶಬ್ದಗಳೇ ಇಲ್ಲದಂತಾಗುತ್ತವೆ. ಅಷ್ಟೇ ಅಲ್ಲದೇ ಯಾವುದೇ ಒಂದು ಪದವನ್ನು ತೆಗೆದುಕೊಂಡರೆ ಅದು ಹರಿನಾಮವಾಗುತ್ತದೆಂದು ಹೇಳಿದಿರಿ. ಆ ಪದದ ಅವಯವಗಳೂ ಕೂಡ ಶ್ರೀಹರಿಯ ನಾಮಗಳೇ ಆಗುತ್ತವೆ. ಆದರೆ ಶಬ್ದದ ಪ್ರಾತಿಪದಿಕ ಹಾಗೂ ಸುಬಂತ ಇವುಗಳ ಸಂಯೋಗದಿಂದ ಶಬ್ದದ ವ್ಯುತ್ಪತ್ತಿಯನ್ನು ಮಾಡಲು ಹೇಗೆ ಸಾಧ್ಯವಾಗುತ್ತದೆ ? ಆದ್ದರಿಂದ ಕರ್ಮಾದಿಗಳ ಲೋಪ ಮತ್ತು ವ್ಯುತ್ಪತ್ತಿಯ ಅನುಪಪತ್ತಿ ಎಂಬೆರಡು ದೋಷಗಳು ಬರುವ ಕಾರಣ, ಎಲ್ಲಾ ಶಬ್ದಗಳಿಂದಲೂ ಪರಮಾತ್ಮನನ್ನು ವಾಚ್ಯನೆಂದು ಹೇಳಬಾರದಲ್ಲವೇ? ಈ ಪ್ರಶ್ನೆಗೆ 'ಕರ್ಮವಾಕ್ಯೈಶ್ಚ' ಎಂಬುದರಿಂದ ಉತ್ತರಿಸುತ್ತಾರೆ. ಇಲ್ಲಿರುವ 'ಚ' ಎಂಬ ಶಬ್ದವು 'ಅಪಿ' ಎಂಬರ್ಥದಲ್ಲಿದೆ. ಅಂದರೆ ಕರ್ಮಗಳನ್ನು ಪ್ರತಿಪಾದನೆ ಮಾಡುವುದಾದರೂ ಕೂಡ ಶ್ರೀಹರಿಯನ್ನು ಪ್ರತಿಪಾದಿಸುತ್ತವೆ ಎಂದಭಿಪ್ರಾಯ.

निगमनिघण्ट्वादिप्रसिद्धयोगरूढिभ्यां मुख्यतया कर्मवाचकैरपि ज्योतिष्टोमादि शब्दैः कर्मादौ लोकसिद्धमुख्यत्वमबाधित्वैव तैः शब्दैः परममुख्यतया हरिरुदित इति। तथा च न कर्मादिलोपदोषः ।

ನಿಗಮ, ನಿಘಂಟು ಮೊದಲಾದವುಗಳಲ್ಲಿ ಶಬ್ದಗಳಿಗೆ ಕೇವಲ ಶ್ರೀಹರಿ ಎಂಬರ್ಥವನ್ನಷ್ಟೇ ಹೇಳಿರುವುದಿಲ್ಲ. ಭಿನ್ನ-ಭಿನ್ನವಾದ ಅರ್ಥಗಳನ್ನು ಹೇಳಿರುತ್ತಾರೆ. ಅಂತಹ ನಿಗಮ, ನಿಘಂಟುಗಳಲ್ಲಿ ಪ್ರಸಿದ್ಧವಾದಂತೆ ಯೋಗ ಹಾಗೂ ರೂಢಿವೃತ್ತಿಯಿಂದ ಶಬ್ದಗಳು ಕರ್ಮ, ಕ್ರಮ ಮೊದಲಾದವುಗಳನ್ನು ಮುಖ್ಯವೃತ್ತಿಯಿಂದಲೇ ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ಕರ್ಮಾದಿಗಳ ಲೋಪವು ಬರುವುದಿಲ್ಲ. ವ್ಯುತ್ಪತ್ತ್ಯನುಪಪತ್ತಿಯೂ ಬರುವುದಿಲ್ಲ. ಹೀಗೆ ಕರ್ಮಾದಿಗಳನ್ನು ನಿಗಮ, ನಿಘಂಟು ಮೊದಲಾದವುಗಳು ಪ್ರತಿಪಾದನೆ ಮಾಡಿದರೂ ಕೂಡ ಶ್ರೀಹರಿಯು ಪರಮಮುಖ್ಯವೃತ್ತಿಯಿಂದ ಅದೇ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಹೇಳಿದರೆ ಯಾವ ದೋಷಗಳೂ ಕೂಡ ಬರುವುದಿಲ್ಲ.

अवयवानां अन्यवाचकमुपेत्यैव शब्दस्य हरौ व्युत्पत्त्यङ्गीकारेण न योगासंभवदोषोऽपि ।

'रूढियोगै विना कश्चिन्नैवार्थो वेदगो भवेत् ।
तथापि यौगिको मुख्यः सर्वत्रास्ति स वैदिके ।
अनवस्था निवृत्यर्थं यौगिके रूढिकल्पना' इति ।

ಯಾವುದೇ ಒಂದು ಪದವನ್ನು ತೆಗೆದುಕೊಂಡಾಗ ಆ ಪದದ ಅವಯವಗಳು ಬೇರೆ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತವೆ. ಆದ್ದರಿಂದ ವ್ಯುತ್ಪತ್ತ್ಯನುಪಪತ್ತಿಯ ದೋಷವು ಬರುವುದಿಲ್ಲ. ಹೀಗೆ ಅನ್ಯವಾಚಕತ್ವವನ್ನು ಒಪ್ಪಿಯೇ ಶ್ರೀಹರಿಯಲ್ಲಿ ಮುಖ್ಯಾರ್ಥತ್ವವನ್ನು ಹೇಳುತ್ತೇವೆ. ಯಾವ ಒಂದು ಪದವನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತೇವೋ, ಆ ಪದದ ಅವಯವಗಳು ಅನ್ಯಾರ್ಥವನ್ನೇ ಹೇಳುತ್ತವೆ. ಆದರೆ ಸಮಸ್ತ ಪದವು ಮಾತ್ರ ವಿಷ್ಣುವನ್ನು ಹೇಳುತ್ತದೆಂದು ನಮ್ಮ ಅಭಿಪ್ರಾಯ. ಹಾಗಾಗಿ ವ್ಯುತ್ಪತ್ತ್ಯನುಪಪತ್ತಿಯು ಬರುವುದಿಲ್ಲ.

'रूढिमेव समाश्रित्य विभज्यार्थान् यथाक्रमम् ।
निर्दोषगुणपूर्त्यर्थं विष्णौ योगार्थमानयेत् ।
पश्चादेव यथायोगमितरेष्वपि सन्नयेत्'

इत्युक्तेरिति भावः ।

'ರೂಢಿಯೋಗೋ ವಿನಾ ಕಶ್ಚಿತ್ ನೈವಾರ್ಥೋ ವೇದಗೋ ಭವೇತ್ ।
ತಥಾಽಪಿ ಯೌಗಿಕೋ ಮುಖ್ಯಃ ಸರ್ವತ್ರಾಸ್ತಿ ಸ ವೈದಿಕೇ
ಅನವಸ್ಥಾ ನಿವೃತ್ತ್ಯರ್ಥ್ಯಂ ಯೌಗಿಕೇ ರೂಢಿಕಲ್ಪನಾ'

ವೇದದಲ್ಲಿ ರೂಢಿ ಮತ್ತು ಯೋಗಗಳೆರಡೂ ಇಲ್ಲದೆ ಅರ್ಥದ ನಿರೂಪಣೆ ಇರುವುದೇ ಇಲ್ಲ. ಆದರೂ ಇವೆರಡರಲ್ಲಿ ಯೌಗಿಕವಾದ ಅರ್ಥವೇ ಪ್ರಬಲವಾಗಿರುತ್ತದೆ. ಅನವಸ್ಥಾದೋಷದ ಪರಿಹಾರಕ್ಕಾಗಿ ಮಾತ್ರ ಕೆಲವೊಮ್ಮೆ ಯೌಗಿಕ ಶಬ್ದಗಳಿಗೂ ರೂಢಿಯನ್ನು ಒಪ್ಪಬೇಕಾಗುತ್ತದೆ. ಎಲ್ಲಾ ಶಬ್ದಗಳಿಗೂ ಯೌಗಿಕಾರ್ಥವನ್ನು ಹೇಳುವುದಾದರೂ ಅನವಸ್ಥಾದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಯಾವ ಶಬ್ದವನ್ನು ಯೌಗಿಕವೆನ್ನುತ್ತೇವೋ ಅದರ ಅವಯವಗಳಿಗೆ ರೂಢ್ಯರ್ಥವನ್ನೇ ಹೇಳಬೇಕು ಎಂದಭಿಪ್ರಾಯ.

'ರೂಢಿಮೇವ ಸಮಾಶ್ರಿತ್ಯ ವಿಭಜ್ಯಾರ್ಥಾನ್ ಯಥಾಕ್ರಮಮ್ ।
ನಿರ್ದೋಷಗುಣಪೂರ್ತ್ಯರ್ಥಂ ವಿಷ್ಣೌ ಯೋಗಾರ್ಥಮಾನಯೇತ್ ।
ಪಶ್ಚಾದೇವ ಯಥಾಯೋಗಮಿತರೇಷ್ವಪಿ ಸನ್ನಯೇತ್'

ಆದ್ದರಿಂದ ಎಲ್ಲಾ ಬಗೆಯ ವೈದಿಕಶಬ್ದಗಳಿಗೆ ರೂಢಿಯನ್ನು ಆಶ್ರಯಿಸಿ ಅವುಗಳ ಅವಯವಾರ್ಥವನ್ನು ವಿಂಗಡಿಸಿ ಪರಮಾತ್ಮನು ನಿರ್ದೋಷಗುಣಪೂರ್ಣನಾಗಿದ್ದಾನೆಂದು ತಿಳಿಯಬೇಕು. ಇಂತಹ ತಿಳುವಳಿಕೆ-ಗೋಸ್ಕರ ಶಬ್ದಗಳ ಯೋಗಾರ್ಥವನ್ನು ವಿಷ್ಣುವಿನಲ್ಲಿ ಆಶ್ರಯಿಸಬೇಕು. ಹೀಗೆ ಮೊದಲು ಸಕಲ ಶಬ್ದಗಳಿಗೆ ವಿಷ್ಣುವಿನಲ್ಲಿ ಸಮನ್ವಯವನ್ನು ತಿಳಿದು ಅನಂತರ ಯಥಾಯೋಗ್ಯವಾಗಿ ಯೋಗಾರ್ಥವನ್ನು ತಿಳಿದುಕೊಳ್ಳಬೇಕು.

**अत एव ज्योतिरादिभिरित्यनुक्त्वा कर्मवाच्यैश्चेत्येवं निर्देशः । कर्मवाक्यैश्चेत्येवं पाठेऽपि अयमेवार्थो ध्येयः । अत्र मुख्यतयेति मुख्यतात्पर्यविषयत्वमात्रम् । वाच्यत्वस्य पृथगुक्तेः । अन्यत्र तूभयमपि ।।**

ಈ ಎಲ್ಲಾ ಅರ್ಥಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಭಾಷ್ಯಕಾರರು 'ಜ್ಯೋತಿರಾದ್ಯೈಃ' ಎಂದು ಹೇಳದೇ 'ಕರ್ಮವಾಚ್ಯೈಶ್ಚ' ಎಂದು ಹೇಳಿದ್ದಾರೆ. ಕೆಲವೆಡೆ 'ಕರ್ಮವಾಕ್ಯೈಶ್ಚ' ಎಂಬ ಪಾಠವಿದೆ. ಆವಾಗಲೂ ಇದರಂತೆ ವ್ಯಾಖ್ಯಾನವನ್ನು ತಿಳಿಯಬೇಕು. 'ಮುಖ್ಯತಯಾ' ಎಂಬುದಕ್ಕೆ ಮುಖ್ಯತಾತ್ಪರ್ಯಕ್ಕೆ ವಿಷಯವಾಗಿರುವುದು ಎಂದಷ್ಟೇ ಅಭಿಪ್ರಾಯ. ವಾಚ್ಯತ್ವವನ್ನು ಪ್ರತ್ಯೇಕವಾಗಿ ಹೇಳಲಾಗಿದೆ. 'ಕರ್ಮವಾಕ್ಯೈಶ್ಚ' ಎಂಬ ಪಾಠದಲ್ಲಿ ಮುಖ್ಯತಯಾ ಎಂಬುದರಿಂದ ಮುಖ್ಯವಾಚ್ಯತ್ವವನ್ನೂ ಕೂಡ ತೆಗೆದುಕೊಳ್ಳಬೇಕು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
ತತ್ವಮಂಜರಿಯ ಕನ್ನಡಾನುವಾದದಲ್ಲಿ ಜ್ಯೋತಿರುಪಕ್ರಮಾಧಿಕರಣವು ಮುಗಿಯಿತು.

***

## ಜ್ಯೋತಿರುಪಕ್ರಮಾಧಿಕರಣ (೧-೪-೨)

।। श्रीजानकीवदनाम्भोजराजहंसाय रामचन्द्राय नमः ।।

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## ज्योतिरुपक्रमाधिकरणम् (१।४।२)

**।। ज्योतिरुपक्रमात्तु तथा ह्यधीयत एके ।। १-४-१० ।।**

अत्र सर्वे शब्दा वर्णपदादिरूपेण समन्वीयन्ते । तत्त्वित्यस्ति । तुरेव । ल्यब्लोपनिमित्ता पञ्चमी । हिर्हेतौ । ''ज्योतिषा यजेत'' इत्युक्तज्योतिरादिः तत्तु परममुख्यवृत्त्या ब्रह्मैव । नतु कर्मादिः । कुतः ? हि यस्मादेके शाखिनः, तदित्यावर्तते, तद् ब्रह्म तथा सर्वशब्दवाच्यत्वेन ''ता वा एतास्सर्वा ऋचः'' इत्यादिनाऽधीयते पठन्ति तस्मादित्यर्थः । कया वृत्त्येत्यत उक्तम् – उपक्रमादिति। उपक्रमं विधायैव । ''एष इति अधीयत इति उपलक्षणत्वेन कांश्चिदृष्यादिशब्दान् ब्रह्मणि यौगिकत्वाद्युत्त्योपक्रम्य सर्वशब्दानां तन्निष्ठतोक्तेमहायोगरूढिवृत्त्या तद्वाचित्वमिति भावः । श्रुतौ वसन्तादेरादित्वेऽपि प्रधानकर्मवाचित्वेनप्राधान्या-दन्योपलक्षणत्वेन ज्योतिरुक्तिः । महायोगविद्वद्रूढ्योः प्रदर्शनायोपक्रमात्त्वित्युक्तिः ।

ಈ ಅಧಿಕರಣದಲ್ಲಿ ವರ್ಣ, ಪದ ಮೊದಲಾದ ಸ್ವರೂಪದಿಂದ ಸಕಲ ಶಬ್ದಗಳ ಸಮನ್ವಯವನ್ನು ಮಾಡಲಾಗಿದೆ. 'ತತ್ತು' ಎಂಬೆರಡು ಪದಗಳು ಈ ಸೂತ್ರದಲ್ಲಿ ಅನುವೃತ್ತವಾಗುತ್ತದೆ. 'ತು' ಶಬ್ದವು 'ಏವ' ಎಂಬರ್ಥದಲ್ಲಿದೆ. 'ಉಪಕ್ರಮಾತ್' ಎಂಬಲ್ಲಿ 'ಲ್ಯಬ್ ಲೋಪೇ ಕರ್ಮಣ್ಯಧಿಕರಣೇ ಚ' ಎಂಬ ವಾರ್ತಿಕದಂತೆ 'ಲ್ಯಪ್' ಪ್ರತ್ಯಯದ ಲೋಪದಿಂದ ಪಂಚಮೀ ವಿಭಕ್ತಿಯು ಬಂದಿರುತ್ತದೆ. 'ಹಿ' ಶಬ್ದವು ಹೇತ್ವರ್ಥದಲ್ಲಿದೆ.

ಸೂತ್ರಾರ್ಥ - ಜ್ಯೋತಿಃ = 'ಜ್ಯೋತಿಷಾ ಯಜೇತ' ಎಂಬುದರಲ್ಲಿರುವ ಜ್ಯೋತಿರಾದಿಗಳು ತತ್ತು = ಪರಮಮುಖ್ಯವೃತ್ತಿಯಿಂದ ವಿಷ್ಣುವೇ ಆಗಿರುತ್ತಾನೆ. ಹೊರತು, ಕರ್ಮ ಮೊದಲಾದವುಗಳಲ್ಲ. 'ಹಿ' = ಏಕೆಂದರೆ, ಏಕೇ = ಐತರೇಯಶಾಖಿಗಳು 'ತತ್' = ಆ ಬ್ರಹ್ಮನನ್ನು, ತಥಾ = ಸಕಲಶಬ್ದವಾಚ್ಯನೆಂದು, ಅಧೀಯತೇ = 'ತಾ ವಾ ಏತಾಃ' ಎಂಬುದಾಗಿ ಅಧ್ಯಯನ ಮಾಡಿದ್ದಾರೆ.

ಉಪ್ರಕಮಾತ್ = ಯೋಗವೃತ್ತಿಯಿಂದ ಕೆಲವು ಋಷಿಗಳ ಹೆಸರನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಿದ್ದಾರೆ ಎಂದು ಉತ್ತರಿಸಲಾಗಿದೆ. ಉಪಲಕ್ಷಣಯಾ ಕರ್ಮವಾಚಕ ಪದಗಳಷ್ಟೇ ಅಲ್ಲದೇ ಋಷ್ಯಾದಿವಾಚಕವಾದ ಶಬ್ದಗಳ ಸಮನ್ವಯವನ್ನು ತಿಳಿಯಬೇಕು. ಋಷ್ಯಾದಿ ವಾಚಕವಾದ ಶಬ್ದಗಳನ್ನು ಬ್ರಹ್ಮನಲ್ಲಿ ಯೌಗಿಕವೆಂದು ಹೇಳಿದಾಗ ಸಕಲಶಬ್ದಗಳು ಬ್ರಹ್ಮನನ್ನೇ ಹೇಳುತ್ತವೆಂದು ತಿಳಿಯುತ್ತದೆ. ಆದ್ದರಿಂದ ಮಹಾಯೋಗ ಹಾಗೂ ವಿದ್ವದ್ರೂಢಿಯಿಂದ ಬ್ರಹ್ಮನು ಸಕಲಶಬ್ದವಾಚ್ಯನೆಂದು ನಿರ್ಣೀತನಾಗಿದ್ದಾನೆ. ಶ್ರುತಿಯಲ್ಲಿ ವಸಂತ ಮೊದಲಾದ ಪದಗಳೇ ಮೊದಲಿರುತ್ತವೆ. ಅದಕ್ಕನುಗುಣವಾಗಿ ಸೂತ್ರದಲ್ಲಿ ಹೇಳಬೇಕಿತ್ತು. ಆದರೂ 'ಜ್ಯೋತಿಃ' ಎಂಬ ಪದವು ಕರ್ಮವಾಚಕವಾದ್ದರಿಂದ ಬಹಳ ಮುಖ್ಯವಾಗಿದೆ. ಪ್ರಧಾನವಾದ್ದರಿಂದ ಅಪ್ರಧಾನವಾದದ್ದನ್ನು ಉಪಲಕ್ಷಣಯಾ ಸ್ವೀಕರಿಸಬೇಕು ಎಂಬ ಕಾರಣಕ್ಕಾಗಿ ವಸಂತ ಪದವನ್ನು ಪ್ರಯೋಗಿಸದೇ ಜ್ಯೋತಿಃ' ಎಂಬ ಪದವನ್ನೇ ಪ್ರಯೋಗಿಸಿದ್ದಾರೆ. ಮಹಾಯೋಗ ಹಾಗೂ ವಿದ್ವದ್ರೂಢಿಗಳನ್ನು ಪ್ರದರ್ಶಿಸುವುದಕ್ಕಾಗಿ 'ಉಪಕ್ರಮಾತ್ತು' ಎಂದು ಹೇಳಿದ್ದಾರೆ.

ननु कथं ज्योतिरादिसर्वशब्दवाच्यं ब्रह्म ? कर्मक्रमादिविरोधात् व्युत्पत्त्यसम्भवाच्चेत्यत आह -

**।। कल्पनोपदेशाच्च मध्वादिवदविरोधः ।। १-४-११ ।।**

च एव समुच्चये वा । कल्पनेति तन्त्रम् । कल्पनां क्लृप्तिम् । लोकसिद्धरूढ्यादि वृतिक्लृप्तिमुपेत्यैव कल्पनया व्युत्पादनेन लोकक्लृप्तमहायोगवृत्तेर्युत्पादनेन सर्वशब्दवाच्यवेन ''ता वा'' इत्यादिनोपदेशात् । कल्पनायाः सर्वशब्दवाच्यत्वेनोपासनायाः ''प्राण ऋच इत्येव विद्यात्'' इत्यादावुपदेशादविरोधश्च । न केवलं साधकमस्ति, कर्माद्यननुष्ठानविरोधश्च नेत्यर्थः । मध्वादिवत् । यथा ''असावादित्यो देवमधु'' इति मधुशब्दस्यादित्यस्थविष्णौ उपासनार्थमुक्तावपि न क्षौद्रकादौ व्यवहारविरोधस्तद्वदित्यर्थः । एवार्थचशब्दस्य उपेत्यैवेत्याद्याहृतेनान्वयः । योग्यतया कल्पनापदेन वा उपदेशादेवेति वाऽन्वय इत्येके । तथा चान्यत्रापि वृत्त्यङ्गीकाराद् व्युत्पत्त्यादि युज्यत इति भावः । पूर्वोत्तरनयशेषत्वेऽप्यस्य योगस्यात्र निवेशो व्युत्पत्त्युक्त्यर्थः ।। २ ।।

'ಜ್ಯೋತಿಃ' ಮೊದಲಾದ ಸಕಲಶಬ್ದಗಳಿಂದ ಬ್ರಹ್ಮನು ವಾಚ್ಯನಾಗುವುದಾದರೆ ಜ್ಯೋತಿಷ್ಟೋಮಾದಿ ಯಜ್ಞಯಾಗಾದಿಗಳೇ ಇಲ್ಲದಂತಾಗಬೇಕಾದೀತು. ಮತ್ತು ಶಬ್ದಗಳ ವ್ಯುತ್ಪತ್ತಿಯೂ ಕೂಡ ಅಸಾಧ್ಯವಾಗಬೇಕಾದೀತು? ಈ ಪ್ರಶ್ನೆಗೆ ಮುಂದಿನ ಸೂತ್ರವು ಉತ್ತರಿಸುತ್ತದೆ.

'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ'

ಸೂತ್ರದಲ್ಲಿರುವ 'ಚ' ಶಬ್ದವು ಏವ ಎಂಬರ್ಥದಲ್ಲಿದೆ. ಅಥವಾ ಸಮುಚ್ಚಯಾರ್ಥದಲ್ಲಿ ಇರುತ್ತದೆ. 'ಕಲ್ಪನಾ' ಎಂಬ ಪದವನ್ನು ಎರಡು ಬಾರಿ ಅನ್ವಯ ಮಾಡಿಕೊಳ್ಳಬೇಕು.

ಸೂತ್ರಾರ್ಥ - ಕಲ್ಪನಾ = ಲೋಕಸಿದ್ಧವಾದ ರೂಢಿವೃತ್ತಿಯನ್ನು ಒಪ್ಪಿಯೇ, ಕಲ್ಪನಯಾ = ವಿಷ್ಣುವಿನಲ್ಲಿ ವ್ಯುತ್ಪತ್ತಿಯನ್ನು ತೋರಿಸುವುದರಿಂದ, ಉಪದೇಶಾತ್ = 'ತಾ ವಾ ಏತಾಃ' ಇತ್ಯಾದಿಯಾಗಿ ಮಹಾಯೋಗವೃತ್ತಿಯಿಂದ ಸಕಲಶಬ್ದವಾಚ್ಯತ್ವವನ್ನು ವಿಷ್ಣುವಿನಲ್ಲಿ ಉಪದೇಶ ಮಾಡಿರುವುದರಿಂದ, ಕಲ್ಪನಾಯಾಃ = 'ಪ್ರಾಣ ಋಚ ಇತ್ಯೇವ ವಿದ್ಯಾತ್' ಇತ್ಯಾದಿ ಶ್ರುತಿಯಲ್ಲಿ ಸಕಲಶಬ್ದವಾಚ್ಯತ್ವೇನ ಭಗವದುಪಾಸನೆಯ ಉಪದೇಶವಿರುವುದರಿಂದ, ಅವಿರೋಧಃ = ಕರ್ಮ, ಕ್ರಮ ಮೊದಲಾದವುಗಳ ಲೋಪಪ್ರಸಂಗದ ವಿರೋಧವಿರುವುದಿಲ್ಲ. ಬ್ರಹ್ಮನು ಸಕಲಶಬ್ದವಾಚ್ಯನಾಗಿದ್ದಾನೆಂಬ ವಿಷಯದಲ್ಲಿ ಸಾಧಕಪ್ರಮಾಣವಷ್ಟೇ ಅಲ್ಲ. ಕರ್ಮಾದಿಗಳ ಅನುಷ್ಠಾನಲೋಪವೆಂಬ ಬಾಧಕವೂ ಕೂಡ ಇರುವುದಿಲ್ಲ ಎಂದಭಿಪ್ರಾಯ. ಮಧ್ವಾದಿವತ್ = 'ಅಸಾವಾದಿತ್ಯೋ ದೇವಮಧು' ಎಂಬಲ್ಲಿ ಆದಿತ್ಯನಲ್ಲಿರುವ ಭಗವಂತನ ಉಪಾಸನೆಗೋಸ್ಕರ ಮಧು ಶಬ್ದವನ್ನು ಹೇಳಿದ್ದರೂ 'ಜೇನು' ಎಂಬರ್ಥದಲ್ಲಿ ಮಧು ಶಬ್ದದ ವ್ಯವಹಾರಕ್ಕೆ ಹೇಗೆ ವಿರೋಧವಿಲ್ಲವೋ, ಅದರಂತೆ ಇಲ್ಲಿಯೂ, ಅವಿರೋಧಃ = ಭಗವಂತನಲ್ಲಿ ಸಕಲಶಬ್ದವಾಚ್ಯತ್ವವನ್ನು ಹೇಳಿದರೂ ಇತರ ಪದಾರ್ಥದಲ್ಲಿ ವ್ಯವಹಾರ ವಿರೋಧ ಬರುವುದಿಲ್ಲ.

'ಏವ' ಎಂಬುದು ಅವಧಾರಣಾರ್ಥದಲ್ಲಿದೆ. 'ಚ' ಶಬ್ದವನ್ನು ಅಧ್ಯಾಹೃತವಾದ 'ಉಪೇತ್ಯ' ಎಂಬಲ್ಲಿ ಅನ್ವಯ ಮಾಡಬೇಕು. ಕೆಲವರು 'ಕಲ್ಪನಾ' ಎಂಬ ಪದದ ಜೊತೆಗೆ, ಅಥವಾ 'ಉಪದೇಶಾತ್' ಎಂಬ ಪದದ ಜೊತೆಗೆ ಅನ್ವಯವನ್ನು ಹೇಳುತ್ತಾರೆ. ಆದ್ದರಿಂದ ಬ್ರಹ್ಮನಲ್ಲಿ ಮಾತ್ರವಲ್ಲದೇ ಬೇರೆ ಪದಾರ್ಥಗಳಲ್ಲಿಯೂ ಶಬ್ದವೃತ್ತಿಯನ್ನು ಅಂಗೀಕಾರ ಮಾಡಿರುವುದರಿಂದ, ವ್ಯವಹಾರ- ವಿರೋಧವಾಗಲೀ, ವ್ಯುತ್ಪತ್ತಿಯ ಅನುಪಪತ್ತಿಯಾಗಲೀ ಬರುವುದಿಲ್ಲ.

ಈ ಸೂತ್ರವನ್ನು ಈ ಅಧಿಕರಣದಲ್ಲೇ ಹೇಳಬೇಕಾಗಿಲ್ಲ. ಹಿಂದಿನ-ಮುಂದಿನ ಅಧಿಕರಣದ ಕೊನೆಯಲ್ಲಿ ಸೇರಿಸಬಹುದಿತ್ತು. ಆದರೂ ಬ್ರಹ್ಮನಲ್ಲಿ ಯೋಗವೃತ್ತಿಯನ್ನು ತಿಳಿಸಲು ಇಲ್ಲಿ ಪ್ರಯೋಗಿಸಲಾಗಿದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು.

### श्री राघवेन्द्रतीर्थविरचिता

# श्रीन्यायमुक्तावळिः

## ज्योतिरुपक्रमाधिकरणम् (१।४।२)

।। ज्योतिरुपक्रमात्तु तथाह्यधीयत एके ।।२ ।।

।। कल्पनोपदेशाच्च मध्वादिवदविरोधः ।।

पूर्वत्र सिद्धरूपदेवतातत्क्रमवाविनां इन्द्रियेभ्य इत्यादीनां समन्वय उक्तः । अत्र तु साध्यरूपकर्मतत्क्रमवाचिनां स उच्यत इति पूर्वसङ्गतिः ।

ಹಿಂದಿನ ಅಧಿಕರಣದಲ್ಲಿ ಸಿದ್ಧಸ್ವರೂಪವಾದ ದೇವತೆ ಹಾಗೂ ತತ್‌ಕ್ರಮವನ್ನು ಹೇಳುವಂತಹ 'ಇಂದ್ರಿಯೇಭ್ಯಃ' ಇತ್ಯಾದಿ ಶ್ರುತಿಯ ಸಮನ್ವಯವನ್ನು ಮಾಡಲಾಯಿತು. ಈ ಅಧಿಕರಣದಲ್ಲಿ ಸಾಧ್ಯರೂಪವಾದ ಕರ್ಮ ಹಾಗೂ ಅವುಗಳ ಕ್ರಮಗಳನ್ನು ಹೇಳುವಂತಹ ಶ್ರುತಿಯ ಸಮನ್ವಯವನ್ನು ಮಾಡಲಾಗುತ್ತಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಸಂಗತಿಯಿರುತ್ತದೆಂದು ತಿಳಿಯಬೇಕು.

''वसन्ते वसन्ते ज्योतिषा'' इति वाक्ये श्रुतज्योतिरादिशब्दाः किं विष्णुवाचिनः किं वा तदन्यकर्मादिवाचिन इति सन्देहः । कर्मादिवाचिन इति पूर्वः पक्षः ।।

'ವಸಂತೇ ವಸಂತೇ ಜ್ಯೋತಿಷಾ ಯಜೇತ' ಎಂಬ ವಾಕ್ಯದಲ್ಲಿ ಯಾವ ಜ್ಯೋತಿ ಮೊದಲಾದ ಶಬ್ದಗಳು ಶ್ರುತವಾಗಿವೆಯೋ, ಇವುಗಳು ವಿಷ್ಣುವನ್ನು ಪ್ರತಿಪಾದಿಸುತ್ತಿವೆಯೋ, ಅಥವಾ ವಿಷ್ಣುವಿಗಿಂತ ಭಿನ್ನವಾದ ಕರ್ಮಾದಿಗಳನ್ನು ಪ್ರತಿಪಾದಿಸುತ್ತಿವೆಯೋ? ಎಂದು ಸಂದೇಹ. ಕರ್ಮಾದಿಗಳನ್ನೇ ಪ್ರತಿಪಾದಿಸುತ್ತಿವೆ ಎಂದು ಪೂರ್ವಪಕ್ಷ.

तेषां ज्योतिष्टोमादिकर्मादिष्वेव प्रसिद्धेः । प्रसिद्धित्यागेन ब्रह्मवाचित्वे च अन्यस्य कर्मतदङ्गक्रमदेवताकालाधिकार्यादिप्रापकस्याभावेन नियतकर्मानुष्ठानलोपः

स्यात् । ज्योतिःपदवाच्येशसम्बन्धात् कर्मादावपि तेषां पूर्वत्रेव वृत्तिरित्यस्यापि ईशादन्यत्र लक्षणाप्रसङ्गेनायोगात् ।

ಏಕೆಂದರೆ 'ಜ್ಯೋತಿರಾದಿ' ಶಬ್ದಗಳು ಜ್ಯೋತಿಷ್ಟೋಮಾದಿ ಕರ್ಮಗಳಲ್ಲಿಯೇ ಪ್ರಸಿದ್ಧವಾಗಿವೆ. ಪ್ರಸಿದ್ಧವನ್ನು ಪರಿತ್ಯಾಗ ಮಾಡಿ, ಅಪ್ರಸಿದ್ಧವಾದ ಬ್ರಹ್ಮಪರತ್ವವನ್ನು ಒಪ್ಪುವುದಾದರೆ, ಕರ್ಮ ಹಾಗೂ ಅವುಗಳ ಅಂಗ, ಕ್ರಮ, ದೇವತೆ, ಕಾಲ, ಅಧಿಕಾರಿ ಇವುಗಳನ್ನು ಪ್ರತಿಪಾದಿಸುವ ಶಬ್ದಗಳೆಲ್ಲವೂ ಬ್ರಹ್ಮನ ಹೆಸರುಗಳೆಂದೇ ಹೇಳಿದಂತಾಗುತ್ತದೆ. ಆವಾಗ ಕರ್ಮಾದಿಗಳನ್ನು ಪ್ರತಿಪಾದನೆ ಮಾಡುವ ಬೇರೆ ಶಬ್ದಗಳೇ ಇಲ್ಲದ ಕಾರಣ ನಿಯಮಸಿದ್ಧವಾದ ಕರ್ಮಾನುಷ್ಠಾನವೇ ಲೋಪವಾಗಬೇಕಾದೀತು.

'ಜ್ಯೋತಿಃ' ಎಂಬ ಪದದಿಂದ ಈಶ್ವರನೇ ಪ್ರತಿಪಾದ್ಯನಾಗಿದ್ದಾನೆ. ಅವನ ಸಂಬಂಧದಿಂದ ಕರ್ಮಾದಿಗಳಲ್ಲಿ ಪ್ರತಿಪಾದ್ಯತ್ವವು ಇರುತ್ತದೆಂದು ಹೇಳಬಾರದು. ಏಕೆಂದರೆ ಹಾಗೆ ಹೇಳಿದಾಗ ಎಲ್ಲಾ ಶಬ್ದಗಳೂ ವಾಕ್ಯವೃತ್ತಿಯಿಂದಷ್ಟೇ ಈಶ್ವರನನ್ನು ಪ್ರತಿಪಾದನೆ ಮಾಡುತ್ತವೆ. ಉಳಿದೆಡೆ ಲಕ್ಷಣಾವೃತ್ತಿಯಿಂದ ಪ್ರತಿಪಾದನೆ ಮಾಡುತ್ತವೆಂದು ಹೇಳಿದಂತಾಗುತ್ತದೆ. ಹೀಗೆ ಪ್ರತಿಯೊಂದು ಶಬ್ದಗಳಿಗೂ ಲೋಕದಲ್ಲಿ ಲಕ್ಷಣಾ ಮಾಡುವುದು ಅತ್ಯಂತ ಅಯುಕ್ತವಾಗುತ್ತದೆ.

किं चेशे तेषां रूढेरभावेन गुणपूर्त्यभावापातेन च योगस्यैव वाच्यत्वेन ततोऽपि कर्मणि रूढेर्बलवत्वात् । सर्वशब्दवाच्यत्वसिद्ध्यर्थं ज्योतिरादिपदावयवानामपि ब्रह्मपरत्वे समुदायस्य तत्परत्वायोगेन योगस्यासम्भवाच्चेति ।।

ಮತ್ತು ಈಶ್ವರನಲ್ಲಿ ಈ ಎಲ್ಲಾ ಶಬ್ದಗಳಿಗೂ ರೂಢಿಯನ್ನು ಒಪ್ಪಿದರೆ, ಗುಣಪೂರ್ಣತ್ವವು ಸಿದ್ಧವಾಗುವುದಿಲ್ಲ. ಆದ್ದರಿಂದ ಯೋಗಾರ್ಥವನ್ನೇ ಹೇಳಬೇಕು. ಯಾವ ಕಾರಣದಿಂದ ಬ್ರಹ್ಮನಲ್ಲಿ ಯೋಗಾರ್ಥವನ್ನು ಹೇಳುತ್ತೀರೋ, ಅಂತಹ ಯೋಗಕ್ಕಿಂತಲೂ ರೂಢಿಯೇ ಪ್ರಬಲವಾದ್ದರಿಂದ ಜ್ಯೋತಿರಾದಿ ಶಬ್ದಗಳಿಗೆ ರೂಢಿಬಲದಿಂದ ಸಿದ್ಧವಾದ ಕರ್ಮಾದಿಪರತ್ವವನ್ನೇ ಒಪ್ಪುವುದು ಅತ್ಯಂತ ಸೂಕ್ತವಾಗಿದೆ.

ಮತ್ತು ಸಕಲ ಶಬ್ದಗಳ ವಾಚ್ಯತ್ವವನ್ನು ಬ್ರಹ್ಮನಲ್ಲಿ ಸಮರ್ಥನೆ ಮಾಡುವುದಕ್ಕಾಗಿ 'ಜ್ಯೋತಿಃ' ಮೊದಲಾದ ಪದಗಳ ಅವಯವಗಳೂ ಕೂಡ ಬ್ರಹ್ಮನ ಹೆಸರುಗಳೆಂದೇ ಹೇಳಬೇಕು. ಆವಾಗ ಸಮುದಾಯರೂಪವಾದ 'ಜ್ಯೋತಿಃ' ಎಂಬ ಪದವು ಬ್ರಹ್ಮನನ್ನು ಪ್ರತಿಪಾದನೆ ಮಾಡುವುದಿಲ್ಲ. ಆದ್ದರಿಂದ ಯೋಗಾರ್ಥವನ್ನೂ ಕೂಡ ವಿಷ್ಣುವಿನಲ್ಲಿ ಹೇಳುವುದು ಅತ್ಯಂತ ಕಠಿಣವಾಗಿದೆ. ಇಷ್ಟು ಪೂರ್ವಪಕ್ಷ.

सिद्धान्तस्तु ।। ''तं यच्छतं वर्षाण्यभ्यार्चत् तस्माच्छतर्चिनस्तस्माच्छतर्चिन इत्याचक्षत एतमेव सन्तम्'' इत्यादिना (ऐ.२-२-१) उपलक्षणत्वेन केषाञ्चिच्छतर्च्यादिशब्दानां महायोगविद्वद्रूढिभ्यां विष्णुपरत्वमुक्त्वा अन्ते ''ता वा एतास्सर्वा ऋचः सर्वे वेदाः सर्वे घोषाः एकैव व्याहृतिः प्राण एव'' इति (ऐ.२-२-२) विष्णौ सर्वशब्दमुख्यार्थत्वोक्तेः मध्वादिशब्दस्य क्षौद्रकादौ रूढिमविहाय तदबाधेन ''असौ वादित्यो देव मधु'' (छां. ३-१-१) इत्यादौ महायोगवृत्त्या उपासनार्थं मध्वादिशब्दार्थस्योक्तिवत् ज्योतिरादिपदानां अन्यत्र रूढिवृत्तिमबाधित्वैव महायोगादिवृत्त्या ईशपरत्वाङ्गीकारेण कर्माद्यसिद्ध्यभावात् । तदवयवानामन्य-वाचित्वमुपेत्यैव समुदायस्य ईशपरत्वोपगमेन जातमोतं जगद्यस्माज्जयोतिरित्याद्युक्त-योगसम्भवात् ज्योतिरादिशब्दमुख्यार्थो हरिरेवेति । फलं तु पूर्ववदेव ।। २ ।।

ಸಿದ್ಧಾಂತ ಹೀಗಿದೆ - 'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ ತಸ್ಮಾಚ್ಛತರ್ಚಿನಸ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತೇ ಏತಮೇವ ಸಂತಮ್' ಇತ್ಯಾದಿಯಾಗಿ ಐತರೇಯೋಪನಿಷತ್ತಿನಲ್ಲಿ ಕೇವಲ ಉಪಲಕ್ಷಣೆಯಿಂದ ಶತರ್ಚಿ ಮೊದಲಾದ ಮಹಾಯೋಗ ಹಾಗೂ ವಿದ್ವದ್ರೂಢಿಗಳನ್ನು ವಿಷ್ಣುವಿನಲ್ಲಿ ಸಮರ್ಥಿಸಲಾಗಿದೆ. ಅನಂತರ ಕೊನೆಯಲ್ಲಿ 'ತಾ ವಾ ಏತಾಃ ಸರ್ವಾ ಋಚಃ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ' ಎಂಬುದಾಗಿ ವಿಷ್ಣುವಿನಲ್ಲಿಯೇ ಶತರ್ಚಿ ಮೊದಲಾದ ಶಬ್ದಗಳಂತೆ ಸರ್ವಶಬ್ದ ಮುಖ್ಯಾರ್ಥವನ್ನು ತಿಳಿದುಕೊಳ್ಳಬೇಕು ಎಂದು ಸಮರ್ಥಿಸಲಾಗಿದೆ. ಯಾವ ರೀತಿಯಾಗಿ ಮಧು ಮೊದಲಾದ ಶಬ್ದಗಳಿಗೆ ಜೇನು ಎಂಬರ್ಥದಲ್ಲಿ ಇರುವಂತಹ ರೂಢ್ಯರ್ಥವನ್ನು ಬಿಡದೇ 'ಅಸೌ ವಾದಿತ್ಯೋ ದೇವ ಮಧು' ಇತ್ಯಾದಿಯಾದ ಶ್ರುತಿಯಲ್ಲಿ ಮಹಾಯೋಗವೃತ್ತಿಯನ್ನು ಒಪ್ಪಿ, ಉಪಾಸನೆಗೋಸ್ಕರ ಮಧು ಶಬ್ದಾರ್ಥವನ್ನು ಹೇಳಲಾಗುತ್ತದೋ, ಅದರಂತೆ 'ಜ್ಯೋತಿಃ' ಮೊದಲಾದ ಪದಗಳಿಗೂ ಬೇರೆಡೆ ಇರುವ ಜ್ಯೋತಿಷ್ಟೋಮ ಮೊದಲಾದವುಗಳಲ್ಲಿ ರೂಢ್ಯರ್ಥವನ್ನು ಬಿಡದೆ, ಮಹಾಯೋಗಾದಿ ವೃತ್ತಿಗಳಿಂದ ವಿಷ್ಣುವಿನಲ್ಲಿ ಶಬ್ದಸಮನ್ವಯವನ್ನು ಮಾಡಲಾಗುತ್ತದೆ. ಆದ್ದರಿಂದ ಜ್ಯೋತಿಷ್ಟೋಮಾದಿ ಕರ್ಮಗಳ ವಿಲೋಪವು ಬರಬೇಕಾದೀತು ಎಂಬ ಅತಿಪ್ರಸಂಗಕ್ಕೆ ಅವಕಾಶವಿರುವುದಿಲ್ಲ.

'ಜ್ಯೋತಿಃ' ಎಂಬ ಪದದ ಅವಯವಗಳು ಹರಿಪರವಾದರೆ ಸಮುದಾಯವು ಶ್ರೀಹರಿಯನ್ನು ಹೇಳಲು ಸಾಧ್ಯವಿಲ್ಲ ಎಂಬ ಆಕ್ಷೇಪಕ್ಕೂ ಅವಕಾಶವಿಲ್ಲ. ಏಕೆಂದರೆ ಯಾವಾಗ ಸಮುದಾಯವು ಹರಿಪರವಾಗುತ್ತದೋ, ಆವಾಗ ಅದರ ಅವಯವಗಳು ಅನ್ಯಪರವಾಗುತ್ತದೆಂದು ಒಪ್ಪುತ್ತೇವೆ.

ಜ್ಯೋತಿರುಪಕ್ರಮಾಧಿಕರಣ (೧-೪-೨)

ಆದ್ದರಿಂದ 'ಜ್ಯೋತಿಃ' ಎಂಬ ಪದದ ಅವಯವಗಳಾದ 'ಜೀ' ಮತ್ತು 'ಓತಿ' ಎಂಬುದು ಅನ್ಯಪರವೆಂದು ಒಪ್ಪಿಯೇ 'ಜ್ಯೋತಿ' ಎಂಬ ಸಮುದಾಯವು ಈಶಪರವಾಗುತ್ತದೆಂದು ಹೇಳುತ್ತೇವೆ. ಆದ್ದರಿಂದ 'ಜಾತಮೋತಮ್ ಹರೌ ಯಸ್ಮಾತ್ ಜ್ಯೋತಿಃ ಷಃ ಪ್ರಾಣರೂಪತಃ' ಎಂಬ ವ್ಯುತ್ಪತ್ತಿಯನ್ನು ಮಾಡಬಹುದು. ಹೀಗೆ ವ್ಯುತ್ಪತ್ತಿಯನ್ನು ಮಾಡಿದಾಗ 'ಜ್ಯೋತಿ' ಎಂಬ ಶಬ್ದದ ಮುಖ್ಯಾರ್ಥನು ಶ್ರೀಹರಿಯೇ ಆಗುತ್ತಾನೆಂದು ಸಿದ್ಧವಾಗುತ್ತದೆ. ಸಮನ್ವಯಾಧಿಕರಣದಲ್ಲಿ ಹೇಳಿದ ಸರ್ವಶಬ್ದ ಸಮನ್ವಯದ ಆಕ್ಷೇಪವೇ ಪೂರ್ವಪಕ್ಷದ ಫಲ. ಅದರ ನಿರಾಕರಣೆಯೇ ಸಿದ್ಧಾಂತದ ಫಲ.

ಇಲ್ಲಿಗೆ ನ್ಯಾಯಮುಕ್ತಾವಳಿಯಲ್ಲಿ ಜ್ಯೋತಿರುಪಕ್ರಮಾಧಿಕರಣವು ಸಮಾಪ್ತವಾಯಿತು.

*****

# ನಸಂಖ್ಯೋಪಸಂಗ್ರಹಾಧಿಕರಣ

(೧-೪-೩)

## ಭಾಗ -೧

ಬ್ರಹ್ಮಸೂತ್ರ, ಸೂತ್ರದೀಪಿಕಾ, ಬ್ರಹ್ಮಸೂತ್ರಭಾಷ್ಯ,
ತತ್ವಪ್ರಕಾಶಿಕಾ, ಭಾವದೀಪ
ಇವುಗಳ ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

# ನಸಂಖ್ಯೋಪಸಂಗ್ರಹಾಧಿಕರಣ

ದೇವದೇವೋತ್ತಮ ದೇವತಾಸಾರ್ವಭೌಮ

ಅಖಿಲಾಂಡಕೋಟಿಬ್ರಹ್ಮಾಂಡನಾಯಕ, ಚತುರ್ದಶಲೋಕಗುರುಗಳಾದ

ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ

## ಬ್ರಹ್ಮಮೀಮಾಂಸಾಶಾಸ್ತ್ರ

## ಒಬ್ಬನೇ ಪರಮಾತ್ಮನಲ್ಲಿ ಬಹುತ್ವಸಂಖ್ಯೆ ಹಾಗೂ ಆಧಾರಾಧೇಯಭಾವವು ಯುಕ್ತವಾಗುತ್ತವೆ

**सूत्रम् – ॥ नसङ्ख्योपसङ्ग्रहादपि नानाभावादतिरेकाच्च ॥ १ ॥**

ಸೂತ್ರಾರ್ಥ - 'ಯಸ್ಮಿನ್ ಪಂಚ ಪಂಚ ಜನಾ' ಇತ್ಯಾದಿ ವಾಕ್ಯಗಳಲ್ಲಿ ಬಹುತ್ವ ಸಂಖ್ಯೆಯನ್ನು ಆಧಾರಾಧೇಯಭಾವವನ್ನು ಹೇಳಿದ್ದರೂ ಸಹ ವಿಷ್ಣುವೇ ಪಂಚ ಜನಾ, ಆಕಾಶ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ವಿರೋಧ ಬರುವುದಿಲ್ಲ. ಏಕೆಂದರೆ ಅನೇಕ ರೂಪಗಳನ್ನು ಸ್ವೀಕರಿಸಿ, ಆಕಾಶಾದಿಗಳಲ್ಲಿ ಆಧಾರನಾದವನು ವಿಷ್ಣುವೇ ಆಗಿದ್ದಾನೆ. ಸವಿಶೇಷಾಭೇದವಿರುವುದರಿಂದ, ಆಧಾರಾಧೇಯಭಾವವು ಬಹುತ್ವಸಂಖ್ಯೆಯು ಅವನಲ್ಲಿ ಯುಕ್ತವಾಗುತ್ತದೆ.

ಶ್ರೀಜಗನ್ನಾಥಯತಿಗಳಿಂದ ರಚಿಸಲ್ಪಟ್ಟ

## ಸೂತ್ರದೀಪಿಕಾ

**सूत्रदीपिका – सङ्ख्योपसङ्ग्रहात्** 'यस्मिन् पञ्च पञ्च जना' इति बहुत्वसङ्ख्यावचनात् । अपि यस्मिन्नित्याधाराधेयभावनिर्देशादपि । विष्णोः पञ्च जनादिशब्दवाच्यत्वे विरोधो **नास्ति** । कुतः **नानाभावात्** भगवतः बहुरूपाणां सत्त्वात् । **अतिरेकाच्च** यस्मिन्नित्युक्ताधाररूपस्य पञ्च जना इत्युक्ताधेयरूपस्य सविशेषाभिन्नत्वाच्चेत्यर्थः ॥१॥

ಪರಿಪೂರ್ಣಚಂದ್ರಿಕಾ

ಅರ್ಥ -- ಸಂಖ್ಯೋಪಸಂಗ್ರಹಾತ್ = 'ಯಸ್ಮಿನ್ ಪಂಚ ಪಂಚ ಜನಾಃ' ಎಂಬಲ್ಲಿ ಹೇಳಲ್ಪಟ್ಟ ಬಹುತ್ವ ಸಂಖ್ಯೆಯ ವಚನದಿಂದ, ಅಪಿ = 'ಯಸ್ಮಿನ್' ಎಂಬಲ್ಲಿ ಆಧಾರಾಧೇಯ ಭಾವವನ್ನು ನಿರ್ದೇಶ ಮಾಡಿದ್ದರಿಂದಲೂ ವಿಷ್ಣುವೇ ಪಂಚ ಜನಾದಿ ಶಬ್ದವಾಚ್ಯನಾಗಿದ್ದಾನೆಂಬುದಕ್ಕೆ, ನ = ವಿರೋಧ ಬರುವುದಿಲ್ಲ. ಏಕೆಂದರೆ ನಾನಾಭಾವಾತ್ = ವಿಷ್ಣುವಿಗೆ ಅನೇಕ ರೂಪಗಳಿರುವುದರಿಂದ, ಅತಿರೇಕಾಚ್ಚ = 'ಯಸ್ಮಿನ್' ಎಂಬಲ್ಲಿ ಆಧಾರವಾದ ರೂಪಕ್ಕೂ, ಪಂಚ ಜನಾಃ ಎಂಬಲ್ಲಿ ಹೇಳಲ್ಪಟ್ಟ ಆಧೇಯವಾದ ರೂಪಕ್ಕೂ ಸವಿಶೇಷಾಭೇದವಿರುವುದರಿಂದ ಎಂದಭಿಪ್ರಾಯ.

### ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

**भाष्यम् – 'यस्मिन् पञ्च पञ्च जना आकाशश्च प्रतिष्ठितः' (बृ.उ. ६-४-१७) इत्यादिषु बहुसङ्ख्योपसङ्ग्रहेऽपि न विरोधः ।**

ಅನುವಾದ - 'ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ' ಇತ್ಯಾದಿ ವಾಕ್ಯದಲ್ಲಿ ಬಹುತ್ವ ಸಂಖ್ಯೆಯನ್ನು ಆಧೇಯತ್ವವನ್ನು ಹೇಳಿದ್ದರೂ ಪಂಚ ಜನಾ, ಆಕಾಶ ಇತ್ಯಾದಿ ಶಬ್ದಗಳಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಪ್ರತ್ಯಯದಿಂದ ತಿಳಿಯುವ ಬಹುತ್ವಸಂಖ್ಯಾವಿಶಿಷ್ಟವಾದ ವಸ್ತುವಾಚಕ ಶಬ್ದಗಳನ್ನು ಆಧಾರಾಧೇಯಭಾವವಾಚಕವಾದ ಶಬ್ದವನ್ನು ಸಮನ್ವಯ ಮಾಡುತ್ತಿದ್ದಾರೆ.

'ತತ್ತುಸಮನ್ವಯಾತ್' ಎಂಬ ಸೂತ್ರದಲ್ಲಿ ಮಾಡಿದ ಸರ್ವಶಬ್ದದ ಸಮನ್ವಯವು ಯುಕ್ತವಲ್ಲ. ಏಕೆಂದರೆ ವಿರೋಧ ಬರುತ್ತದೆ. ಬಹುತ್ವವಾಚಕವಾದ ಆಧಾರಾಧೇಯವಾಚಕವಾದ ಶಬ್ದಗಳು ವಿಷ್ಣುವಿನಲ್ಲಿ ಬರುವುದಿಲ್ಲ. ಏಕೆಂದರೆ ಒಬ್ಬನಲ್ಲಿ ಆಧಾರಾಧೇಯಭಾವವು ಯುಕ್ತವಲ್ಲ. ಒಬ್ಬನೇ ವ್ಯಕ್ತಿಯಲ್ಲಿ ಬಹುತ್ವಸಂಖ್ಯೆಯೂ ಕೂಡ ಯುಕ್ತವಲ್ಲ. ಹೀಗೆ ಹಿಂದಿನ ಅಧಿಕರಣದ ವಾಕ್ಯದ ಜೊತೆ ಸಂಯೋಜನೆ ಮಾಡುವ ಮೂಲಕ ಶಿಷ್ಯರಿಗೆ ಸಂಗತಿ ವಿಷಯಾದಿಗಳನ್ನು ತಿಳಿಸುತ್ತಾ ಸಿದ್ಧಾಂತ ಸ್ಥಾಪಕವಾದ ಸೂತ್ರವನ್ನು ಉಪನ್ಯಾಸ ಮಾಡಿ, ವ್ಯಾಖ್ಯಾನ ಮಾಡುತ್ತಿದ್ದಾರೆ.

ಯಸ್ಮಿನ್ = ಸರ್ವಶರೀರದಲ್ಲಿರುವ ಪರಮಾತ್ಮನಲ್ಲಿ, ಪಂಚ ಪಂಚ ಜನಾ = ಪ್ರತಿದೇಹದಲ್ಲಿ ಪ್ರಾಣಾದಿ ಪಂಚಕಗಳಿಗೆ ನಿಯಾಮಕವಾದ, ಪಂಚಜನ ಶಬ್ದವಾಚ್ಯವಾದ ಪರಮಾತ್ಮನ ಐದು ರೂಪಗಳು, ಆಕಾಶಶ್ಚ = ಆಕಾಶ ಪದದಿಂದ ಪ್ರತಿಪಾದ್ಯನಾದ ವಿಷ್ಣುವೂ ಕೂಡ, ಪ್ರತಿಷ್ಠಿತಃ = ನೆಲೆಸಿರುವನೋ, ತಂ = ಅಂತಹ ಪರಮಾತ್ಮನನ್ನು, ಮನ್ಯೇ = ತಿಳಿಯುತ್ತೇನೆ. ಇವೇ ಈ ಮೊದಲಾದ ವಾಕ್ಯಗಳಲ್ಲಿ, ಬಹುಸಂಖ್ಯೋಪಸಂಗ್ರಹೇಽಪಿ = ಬಹುತ್ವಸಂಖ್ಯಾವಾಚಕವಾದ ವಸ್ತುಗಳ ಆಧಾರತ್ವವನ್ನು ವಿಷ್ಣುವಿನಲ್ಲಿ ಹೇಳಿರುವುದರಿಂದ, ಪಂಚಜನಾದಿ ಶಬ್ದಗಳು ವಿಷ್ಣುವಾಚಕಗಳಾಗುವುದಿಲ್ಲ. ನ ವಿರೋಧಃ = ಈ ವಿಷಯದಲ್ಲಿ ವಿರೋಧವಿಲ್ಲ.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**भाष्यम् – तस्यैवाकाशादिषु नानाभावात्, तदतिरिक्तस्वरूपवत्वाच ।।१।।**

ಅನುವಾದ - ಆಕಾಶಾದಿಗಳಲ್ಲಿ ನಿಯಾಮಕನಾಗಿ, ವಿಷ್ಣುವಿಗೆ ಅನೇಕ ರೂಪಗಳಿರುತ್ತವೆ. ಹಾಗೂ ಆಧಾರವಾದ ರೂಪಕ್ಕಿಂತ ಆಧೇಯವಾದ ರೂಪವು ವಿಶೇಷಬಲದಿಂದ ಅತಿರಿಕ್ತವಾಗಿದೆ. ಆದ್ದರಿಂದ ಆಧಾರಾಧೇಯಭಾವ ಮತ್ತು ಬಹುತ್ವ ಇವೆರಡು ಅವನಲ್ಲಿ ಯುಕ್ತವಾಗುತ್ತವೆ. (ದೇಹನಿಯಾಮಕ ಎಂಬ ಒಂದು ರೂಪದಲ್ಲಿ ಬೇರೆ ನಿಯಾಮಕರೂಪಗಳಿರುವುದರಿಂದ ಒಬ್ಬನಲ್ಲಿಯೇ ಆಧಾರಾಧೇಯಭಾವವು ಯುಕ್ತವಾಗುತ್ತದೆ.)

ಪ್ರತಿಪದಾರ್ಥ -- ವಿರೋಧವೇಕೆ ಬರುವುದಿಲ್ಲ ? ಎಂಬ ಪ್ರಶ್ನೆಗೆ ಸೂತ್ರದಲ್ಲೇ ಹೇಳಲ್ಪಟ್ಟ 'ನಾನಾಭಾವಾತ್' ಎಂಬ ಹೇತುವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ. –

ತಸ್ಯೈವ = ಆ ಪರಮಾತ್ಮನೇ, ಆಕಾಶಾದಿಷು = ಆಕಾಶಾದಿಗಳಲ್ಲಿ, ನಾನಾಭಾವಾತ್ = ಅನೇಕ ರೂಪಗಳಿಂದ ಇರುವುದರಿಂದ, ತದತಿರಿಕ್ತಸ್ವರೂಪತ್ವಾಚ್ಚ = ಅಂತರ್ಗತವಾದ ರೂಪಗಳು ಬೇರೆಯಾಗಿರುವುದರಿಂದ ಆಧಾರಾಧೇಯಭಾವ ಬಹುತ್ವಗಳೆರಡು ಯುಕ್ತವಾಗುತ್ತವೆ.

ಶ್ರೀಮಜ್ಜಯತೀರ್ಥ ಭಿಕ್ಷುಗಳಿಂದ ವಿರಚಿತವಾದ

## ತತ್ವಪ್ರಕಾಶಿಕಾ

**अत्राधाराधेयत्वादिलिङ्गेनान्यत्रैव प्रसिद्धानां पञ्चजनादिशब्दानां हरौ समन्वयप्रतिपादनादस्ति शास्त्रादिसङ्गतिः ।**

ಈ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ 'ಆಧಾರಾಧೇಯತ್ವ' ಎಂಬ ಲಿಂಗದಿಂದ ಮತ್ತು 'ಬಹುತ್ವಸಂಖ್ಯಾ ವಿಶಿಷ್ಟವಸ್ತುವಾಚಿತ್ವ' ಎಂಬ ಲಿಂಗದಿಂದ ಅನ್ಯತ್ರೈವಪ್ರಸಿದ್ಧವಾದ ಪಂಚ ಜನಾ ಮೊದಲಾದ ಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಲಾಗುತ್ತಿದೆ. ಆದ್ದರಿಂದ ಶಾಸ್ತ್ರಸಂಗತಿ, ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳನ್ನು ತಿಳಿಯಬೇಕು.

**तत्वप्रकाशिका – समन्वयसूत्रे सर्वशब्दानां परमात्मपरत्वमुक्तम् । सर्वान्तर्गताश्च पञ्चजनादिब्दा वाजसनेयके श्रूयन्ते – ''यस्मिन् पञ्च पञ्च जना आकाशश्च प्रतिष्ठितः । तमेवं मन्य आत्मानं विद्वान् ब्रह्मामृतोऽमृतम्'' ।। इति ।**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಕಲಶಬ್ದಗಳು ಪರಮಾತ್ಮ ಪರವಾಗಿವೆ ಎಂದು ಪ್ರತಿಜ್ಞೆ ಮಾಡಲಾಯಿತು. ಆ ಸಕಲ ಶಬ್ದಗಳ ಮಧ್ಯದಲ್ಲಿ 'ಪಂಚ ಜನಾ' ಮೊದಲಾದ ಶಬ್ದಗಳೂ ಕೂಡ ಸೇರಿರುತ್ತವೆ. ಇದನ್ನೇ ವಾಜಸನೇಯ ಶಾಖಾದಲ್ಲಿ ಹೀಗೆ ಹೇಳಲಾಗಿದೆ - 'ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ । ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್'

'ಯಾವ ಶರೀರನಿಯಾಮಕನಲ್ಲಿ ಪ್ರಾಣಾದಿ ಐದು ಪದಾರ್ಥಗಳು ಮತ್ತು ಆಕಾಶವು ಆಶ್ರಿತವಾಗಿವೆಯೋ, ಅಂತಹ ಪದಾರ್ಥವನ್ನು ನಾನು ತಿಳಿಯುತ್ತೇನೆ. ಯಾರು ಈ ವಿನಾಶವಿಲ್ಲದ ಆತ್ಮನನ್ನು ತಿಳಿಯುತ್ತಾರೋ, ಅವರು ಮುಕ್ತರಾಗುತ್ತಾರೆ' ಎಂದು.

**तत्वप्रकाशिका – सर्वशरीरेषु अनुवृत्त्यर्थं पञ्च पञ्च जनेति । तद्वाच्यं विष्णोरन्यचेत्, तर्हि समन्वयसूत्रानुपपत्तिरित्यवश्यं निर्णेतव्यम् । तत् पञ्च जनादिशब्दवाच्यं विषयः ।**

ಪ್ರತಿಯೊಬ್ಬರ ಶರೀರದಲ್ಲಿಯೂ ಪಂಚವಿಧ ಪ್ರಾಣಾದಿಪದಾರ್ಥಗಳು ಇರುತ್ತವೆಂದು ಸೂಚನೆ ಮಾಡಲು ಶ್ರುತಿಯಲ್ಲಿ 'ಪಂಚ ಪಂಚ ಜನಾ' ಎಂಬ ಆವೃತ್ತಿಯು ಕೇಳಿಸುತ್ತಿದೆ. ಈ ಪಂಚ ಜನ ಶಬ್ದವಾಚ್ಯರಾದ ವ್ಯಕ್ತಿಗಳು ವಿಷ್ಣುವಿಗಿಂತ ಭಿನ್ನರಾದರೆ ಸರ್ವಶಬ್ದವಾಚ್ಯ ಪರಮಾತ್ಮನೇ ಆಗಿದ್ದಾನೆಂದು ಹೇಳುವ ಸಮನ್ವಯಸೂತ್ರವು ಅನುಪಪನ್ನವಾಗುತ್ತದೆ. ಆದ್ದರಿಂದ ಪಂಚ ಜನ ಶಬ್ದದಿಂದ ಪ್ರತಿಪಾದ್ಯ ಪದಾರ್ಥವನ್ನು ಅವಶ್ಯವಾಗಿ ಇಲ್ಲಿ ನಿರ್ಣಯಿಸಬೇಕು. ಯಾರು ಪ್ರತಿಪಾದ್ಯರಾಗಿದ್ದಾರೋ ಅವರೇ ಈ ಅಧಿಕರಣದ ವಿಷಯರಾಗುತ್ತಾರೆ.

**तत्वप्रकाशिका – विष्णुरन्यद्वेति सन्देहः । समन्वयसूत्रमन्यत्रैव प्रसिद्धिश्च सन्देहबीजम् । न पञ्च जनादिशब्दवाच्यो विष्णुरिति पूर्वः पक्षः ।**

ಈ ಪಂಚ ಜನ ಶಬ್ದದಿಂದ ಪ್ರತಿಪಾದ್ಯನಾದವನು ವಿಷ್ಣುವೋ ಅಥವಾ ಬೇರೆ ಪದಾರ್ಥವೋ ? ಎಂಬುದೇ ಸಂಶಯ. ಸಮನ್ವಯಸೂತ್ರ ಹಾಗೂ ಅನ್ಯತ್ರಪ್ರಸಿದ್ಧಿ ಇವೆರಡೂ ಸಂಶಯ ಬೀಜಗಳು. ಈ ಪಂಚ ಜನಾದಿ ಶಬ್ದಗಳಿಂದ ವಿಷ್ಣುವು ವಾಚ್ಯನಲ್ಲ ಎಂಬುದು ಪೂರ್ವಪಕ್ಷ.

**तत्वप्रकाशिका – तच्छब्दस्य बहुत्वसंख्याविशिष्टवस्तुवाचित्वात् । बहुत्वस्य चेश्वरे विरुद्धत्वात् । 'एकमेवाद्वितीयम्' इत्यादिश्रुतेः ।**

'ಪಂಚ' ಎಂಬ ಶಬ್ದವು ಬಹುತ್ವಸಂಖ್ಯಾವಿಶಿಷ್ಟವಾದ ವಸ್ತುವನ್ನು ಪ್ರತಿಪಾದನೆ ಮಾಡುತ್ತಿದೆ. ಒಬ್ಬನೇ ಆದ ಈಶ್ವರನಲ್ಲಿ ಈ ಬಹುತ್ವ ಸಂಖ್ಯೆಯು ವಿರುದ್ಧವಾಗುತ್ತದೆ. ಏಕೆಂದರೆ 'ಏಕಮೇವಾದ್ವಿತೀಯಮ್' ಎಂಬ ಶ್ರುತಿಯು 'ಪರಮಾತ್ಮನು ಒಬ್ಬನೇ ಆಗಿದ್ದಾನೆ ಅನೇಕರಲ್ಲ' ಎಂದು ಸ್ಪಷ್ಟವಾಗಿ ಹೇಳುತ್ತಿದೆ.

**तत्वप्रकाशिका – नच स्वस्य ईश्वरस्य बहुत्वाभावेऽप्यन्यगतबहुत्वस्य तदधीनत्वेन बहुत्वसंख्यावाचिशब्दवृत्तिः ।**

ಪರಮಾತ್ಮನು ಸ್ವತಃ ಒಬ್ಬನೇ ಆಗಿರುವ ಕಾರಣ 'ಬಹುತ್ವ' ಎಂಬ ಧರ್ಮವು ಅವನಲ್ಲಿ ಬಾರದಿದ್ದರೂ ಬೇರೆ ಪದಾರ್ಥಗಳಲ್ಲಿರುವ ಬಹುತ್ವವು ಪರಮಾತ್ಮನ ಅಧೀನವಾದ್ದರಿಂದ

ಬಹುತ್ವಸಂಖ್ಯಾವಾಚಕವಾದ ಶಬ್ದಗಳು ಪರಮಾತ್ಮನಲ್ಲಿ ಪ್ರವೃತ್ತವಾಗುತ್ತವಲ್ಲವೇ? ಎಂದು ಪ್ರಶ್ನಿಸಬಾರದು.

**तत्वप्रकाशिका – वशीकृतबहुजनेऽपि राजनि तददर्शनात् ।**

ಏಕೆಂದರೆ ಅನೇಕ ಜನರನ್ನು ವಶಮಾಡಿಕೊಂಡಿರುವ ರಾಜನಲ್ಲಿ ಬಹುತ್ವಸಂಖ್ಯಾವಾಚಕವಾದ ಶಬ್ದಪ್ರಯೋಗಗಳು ಎಲ್ಲಿಯೂ ಕಾಣಿಸುತ್ತಿಲ್ಲ. ತದಧೀನತ್ವ ನ್ಯಾಯದಿಂದ ಪರಮಾತ್ಮನಲ್ಲಿ ಬಹುತ್ವಸಂಖ್ಯಾವಾಚಕ ಶಬ್ದಗಳ ಸಮನ್ವಯವನ್ನು ಮಾಡುವುದಾದರೆ ಅನೇಕ ಜನರನ್ನು ವಶಮಾಡಿಕೊಂಡಿರುವ ರಾಜನಲ್ಲಿಯೂ ಬಹುತ್ವಸಂಖ್ಯಾವಾಚಕವಾದ ಶಬ್ದಗಳನ್ನು ಪ್ರಯೋಗಿಸ-ಬೇಕಾದೀತು.

**तत्वप्रकाशिका – अवरादिशब्दवदन्यत्रादृष्टत्वेऽपि वृत्तिः किं न स्यात् ? इति चेत् ।**

'ಅವರ', 'ದುಃಖೀ', 'ಬದ್ಧಃ' ಇವೇ ಮೊದಲಾದ ಶಬ್ದಗಳನ್ನು 'ಅವರ'ನಲ್ಲದ, 'ದುಃಖೀ'-ಯಲ್ಲದ, 'ಬದ್ಧ'ನಾಗದ ವ್ಯಕ್ತಿಯಲ್ಲಿ ಪ್ರಯೋಗ ಮಾಡುವುದು ಲೋಕದಲ್ಲಿ ಕಾಣಿಸುತ್ತಿಲ್ಲ. ಆದರೆ 'ಅವರ'ನಲ್ಲದ 'ದುಃಖೀ'ಅಲ್ಲದ, 'ಬದ್ಧ'ನಲ್ಲದ ಪರಮಾತ್ಮನಲ್ಲಿ 'ಅವರಃ' 'ದುಃಖೀ' ಇತ್ಯಾದಿ ಶಬ್ದಗಳ ಪ್ರಯೋಗವನ್ನು ಮಾಡುವುದು, ಕಾಣಿಸುತ್ತಿದೆ. ಇದೇ ರೀತಿಯಾಗಿ ಬಹುತ್ವಸಂಖ್ಯಾವಾಚಕವಾದ ಶಬ್ದಗಳನ್ನು ಲೋಕದಲ್ಲಿ ಒಬ್ಬನೇ ವ್ಯಕ್ತಿಯಲ್ಲಿ ಮಾಡದಿದ್ದರೂ, ಪರಮಾತ್ಮನಲ್ಲಿ ಪ್ರಯೋಗ ಮಾಡಬಹುದಲ್ಲವೇ?

**तत्वप्रकाशिका – न तत्र हेत्वन्तरेण सिद्धायां वृत्तौ निमित्तमात्राश्रयणात् । न चात्रास्ति तादृशं नियामकम् ।**

ಈ ಪ್ರಶ್ನೆ ತಪ್ಪು. ಏಕೆಂದರೆ 'ಅವರಃ' 'ದುಃಖೀ' 'ಬದ್ಧಃ' ಮೊದಲಾದ ಶಬ್ದಗಳನ್ನು ಪರಮಾತ್ಮನಲ್ಲಿ ಪ್ರಯೋಗಿಸಲು 'ನಾಮಾನಿ ಸರ್ವಾಣಿ ಯಮಾವಿಶಂತಿ' 'ಸೋವರಃ ಸೋನಿತ್ಯ, ಸೋऽವರಯತಿ, ಸೋऽನಿತ್ಯಯತಿ' ಇವೇ ಮೊದಲಾದ ವಿಶೇಷ ಶ್ರುತಿಗಳು ಪ್ರಮಾಣವಾಗಿವೆ. ಆದ್ದರಿಂದ ಈ ಪ್ರಯೋಗಗಳಿಗೆ ಸೂತ್ರಕಾರರು 'ತದಧೀನತ್ವ' ಎಂಬ ಕಾರಣವನ್ನಷ್ಟೇ ತಿಳಿಸಿರುತ್ತಾರೆ. ಆದರೆ 'ಪಂಚ ಜನ' ಮೊದಲಾದ ಶಬ್ದಗಳು ಪರಮಾತ್ಮ ಪ್ರತಿಪಾದಕವಾಗುತ್ತವೆನ್ನಲು ಯಾವುದೇ ವಿಶೇಷ ಪ್ರಮಾಣಗಳು ಇರುವುದಿಲ್ಲ.

**तत्वप्रकाशिका – नच 'सर्वे वेदाः' इति श्रुतिर्नियामिका । तस्याः सङ्कोचसम्भवात् ।**

'ಸರ್ವೇ ವೇದಾ ಯತ್ಪದಮಾಮನಂತಿ' ಎಂಬ ಶ್ರುತಿಯೇ 'ಪಂಚ ಜನ' ಮೊದಲಾದ ಶಬ್ದಗಳ ಸಮನ್ವಯಕ್ಕೆ ನಿಯಾಮಕ ಪ್ರಮಾಣವೆಂದು ಹೇಳಬಾರದು. ಶ್ರುತಿಯಲ್ಲಿರುವ 'ಸರ್ವ' ಪದಕ್ಕೆ ಇಂತಹ ಸಂಖ್ಯಾವಾಚಕ ಶಬ್ದಗಳನ್ನು ಬಿಟ್ಟು ಅನುಪಪತ್ತಿ ಇರದ ಸಕಲ ಶಬ್ದಗಳೆಂದು ಸಂಕೋಚ ಮಾಡಲು ಬರುತ್ತದೆ.

**तत्वप्रकाशिका – 'ऋतं पिबन्तौ' इत्यादाविव स्वगतभेदशून्यस्यापि परमात्मनो बहुरूपत्वेन बहुत्वोक्तिः किं न स्यात्, इति चेन्न ।**

'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಸ್ವಗತಭೇದಶೂನ್ಯನಾಗಿದ್ದರೂ ಪರಮಾತ್ಮನು ದ್ವಿತ್ವ ಎಂಬ ಧರ್ಮಕ್ಕೆ ಆಶ್ರಯನಾಗಿದ್ದಾನೆಂದು ಪ್ರತಿಪಾದನೆ ಮಾಡಲಾಗಿದೆ. ಅದರಂತೆ ಸ್ವಗತಭೇದಶೂನ್ಯನಾದ ಪರಮಾತ್ಮನಲ್ಲಿ ಪಂಚತ್ವ ಮೊದಲಾದ ಸಂಖ್ಯೆಗಳನ್ನು ಏಕೆ ಹೇಳಬಾರದು? ಎಂದು ಪ್ರಶ್ನಿಸಬಾರದು.

**तत्वप्रकाशिका – प्रतिशरीरमात्मान्तरात्मवद् बहुत्वे मानाभावात् ।**

ಪ್ರತಿಯೊಂದು ಶರೀರಗಳಲ್ಲಿಯೂ ಪರಮಾತ್ಮನು 'ಆತ್ಮ' ಹಾಗೂ 'ಅಂತರಾತ್ಮ' ಎಂಬೆರಡು ರೂಪಗಳಿಂದ ನೆಲೆಸಿರುತ್ತಾನೆನ್ನಲು ಪ್ರಮಾಣವಿದೆ. ಆದರೆ ಬಹುತ್ವಸಂಖ್ಯಾದಿಂದ ನೆಲೆಸಿರುತ್ತಾನೆನ್ನಲು ಯಾವುದೇ ಪ್ರಮಾಣಗಳಿರುವುದಿಲ್ಲ.

**तत्वप्रकाशिका – 'यस्मिन्' इति सप्तम्या निर्दिष्टस्य वाक्यशेषबलेन परमात्मत्वाच्च न तदाधेयानां पञ्चजनाकाशानां परमात्मत्वम् ।**

ಶ್ರುತಿಯಲ್ಲಿ 'ಯಸ್ಮಿನ್' ಎಂಬುದಾಗಿ ಸಪ್ತಮೀ ವಿಭಕ್ತಿಯಿಂದ ನಿರ್ದೇಶಿಸಲ್ಪಟ್ಟ ವಾಕ್ಯಶೇಷದ ಬಲದಿಂದ ಪರಮಾತ್ಮನು ಆಧಾರನಾಗಿ ಪ್ರತಿಪಾದ್ಯನಾಗಿದ್ದಾನೆ. ಪುನಃ ಅವನೇ ಆಧೇಯನಾಗಿ ಪಂಚ ಜನಾ, ಆಕಾಶ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗಲು ಸಾಧ್ಯವಿಲ್ಲ.

**तत्वप्रकाशिका – न ह्येकस्यैवाधाराधेयभावो युज्यते । हरेराधेयत्वं च नास्ति, किमुत विरुद्धं स्वाधारत्वम् ।**

ಒಬ್ಬನೇ ವ್ಯಕ್ತಿಯು ಆಧಾರನೂ, ಆಧೇಯನು ಆಗಲು ಸಾಧ್ಯವೇ ಇಲ್ಲ. ಮತ್ತು ಶ್ರೀಹರಿಯು 'ಏಕೋ ದಾಧಾರ ಭುವನಾನಿ ವಿಶ್ವಾ' ಎಂಬ ಶ್ರುತಿ ಹೇಳುವಂತೆ ಎಲ್ಲಕ್ಕೂ ಆಧಾರನಾಗಿರುವಾಗ ಆಧೇಯನಾಗಲು ಸಾಧ್ಯವೇ ಇಲ್ಲ. ಹೀಗಿರುವಾಗ ವಿರುದ್ಧವಾದ ಸ್ವಾಧಾರತ್ವವು ಪರಮಾತ್ಮನಲ್ಲಿ ಹೇಗೆ ತಾನೇ ಕೂಡುತ್ತದೆ?

**तत्वप्रकाशिका – अतस्तस्य पञ्चजनादिशब्दवाच्यताऽसम्भवान्न युक्तं समन्वयसूत्रमिति ।**

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ಆದ್ದರಿಂದ ಪಂಚ ಜನಾದಿ ಶಬ್ದಗಳಿಂದ ಪರಮಾತ್ಮನು ಪ್ರತಿಪಾದ್ಯನಾಗುವುದು ಅತ್ಯಂತ ಅಸಂಭಾವಿತ. ಆದ್ದರಿಂದಲೇ ಸಮನ್ವಯಸೂತ್ರದಲ್ಲಿ ಸಕಲಶಬ್ದವಾಚ್ಯತ್ವವನ್ನು ಪ್ರತಿಜ್ಞೆ ಮಾಡಿದ್ದೂ ಕೂಡ ಅಸಾಧುವಾಗಿದೆ. ಇಷ್ಟು ಪೂರ್ವಪಕ್ಷದ ಅಭಿಪ್ರಾಯ.

**तत्वप्रकाशिका – एवं प्राप्ते सिद्धान्तयत् सूत्रमुपन्यस्य व्याचष्टे – नेति ।। अपिपदेन पूर्वसूत्रात् विरोधपदाकर्षणम् । युक्तमेव पञ्चजनाऽऽकाशशब्दवाच्यत्वं भगवतः । स्वगतभेदशून्यस्यापि नानारूपत्वेन बहुत्वसङ्ख्योपसङ्ग्रहाविरोधात् ।**

ಈ ಪೂರ್ವಪಕ್ಷವನ್ನು ನಿರಾಕರಣೆ ಮಾಡುತ್ತಾ, ಸಿದ್ಧಾಂತ ಸ್ಥಾಪನೆಗೋಸ್ಕರ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ನ' ಇತ್ಯಾದಿಯಾಗಿ. ಸೂತ್ರದಲ್ಲಿರುವ 'ಅಪಿ' ಪದದಿಂದ ಹಿಂದಿನ ಸೂತ್ರದಲ್ಲಿರುವ 'ಅವಿರೋಧಃ' ಎಂಬ ಪದದಿಂದ ವಿರೋಧ ಪದವನ್ನು ಆಕರ್ಷಣೆ ಮಾಡಬೇಕು. ಪಂಚ ಜನಾ, ಆಕಾಶ ಮೊದಲಾದ ಶಬ್ದಗಳಿಂದ ಭಗವಂತನೇ ಪ್ರತಿಪಾದ್ಯನಾಗಿದ್ದಾನೆ. ಸ್ವಗತಭೇದಶೂನ್ಯನಾಗಿದ್ದರೂ ಕೂಡ ಅನೇಕ ರೂಪಗಳನ್ನು ಅವನು ಹೊಂದಿರುವ ಕಾರಣ, ಬಹುತ್ವ ಸಂಖ್ಯೆಗೆ ಆಶ್ರಯನಾಗಿದ್ದಾನೆ. ಬಹುತ್ವಸಂಖ್ಯೆಯನ್ನು ಅವನಲ್ಲಿ ಪ್ರತಿಪಾದನೆ ಮಾಡಿದಾಗ ಯಾವ ವಿರೋಧವೂ ಕೂಡ ಬರುವುದಿಲ್ಲ.

**तत्वप्रकाशिका – नच प्रतिशरीरं परमात्मनो बहुरूपत्वमप्रामाणिकम् । शरीरान्तर्गताकाशप्राणादिपञ्चजननियामकत्वेन तेषु नानाभावस्य न्यायप्राप्तत्वात् ।**

ಪ್ರತಿಯೊಂದು ಶರೀರಗಳಲ್ಲಿಯೂ ಪರಮಾತ್ಮನು ಅನೇಕ ರೂಪಗಳಿಂದ ಇರುತ್ತಾನೆಂಬುದಕ್ಕೆ ಯಾವುದೇ ಪ್ರಮಾಣವಿಲ್ಲವೆಂದು ಶಂಕಿಸಬಾರದು. ಏಕೆಂದರೆ ಶರೀರದಲ್ಲಿರುವ ಪ್ರಾಣಾದಿ ಪಂಚ ಪದಾರ್ಥಗಳು ಮತ್ತು ಆಕಾಶ ಇವುಗಳ ನಿಯಾಮಕನಾಗಿ ಅನೇಕ ರೂಪಗಳಿಂದ ಪರಮಾತ್ಮನಿದ್ದಾನೆಂಬುದು ನ್ಯಾಯಪ್ರಾಪ್ತವೇ ಆಗಿರುತ್ತದೆ.

**तत्वप्रकाशिका – नच 'यस्मिन्' इत्याधारस्य विष्णुत्वात् पञ्चजनादीनामाधेयानाम् अविष्णुत्वम् । आकाशादिगतरूपेभ्योऽतिरिक्तस्य शरीरनियामकरूपस्य तत्रोक्तेः ।**

ಇನ್ನು 'ಯಸ್ಮಿನ್' ಎಂಬ ವಾಕ್ಯಶೇಷದಲ್ಲಿ ಆಧಾರನಾಗಿ ಪ್ರಸ್ತುತನಾದ ಪರಮಾತ್ಮನು ಪುನಃ ಆಧೇಯನಾಗಿ ಪಂಚ ಜನಾದಿ ಶಬ್ದಗಳಿಂದ ಪ್ರತಿಪಾದ್ಯನಾಗಲು ಸಾಧ್ಯವಿಲ್ಲ ಎಂಬ ಶಂಕೆಗೂ ಅವಕಾಶವಿಲ್ಲ. ಏಕೆಂದರೆ ಆಕಾಶಾದಿ ಪದಾರ್ಥದಲ್ಲಿ ಭಗವಂತನು ಯಾವ ನಿಯಾಮಕರೂಪದಿಂದ ನೆಲೆಸಿದ್ದಾನೋ, ಆ ರೂಪಕ್ಕಿಂತ ಅತಿರಿಕ್ತವಾದ 'ಶರೀರನಿಯಾಮಕ' ಎಂಬ ರೂಪದಿಂದ ಸಪ್ತಮ್ಯಂತ ಪದದಿಂದ ಪ್ರತಿಪಾದ್ಯನಾಗಿದ್ದಾನೆ.

**तत्वप्रकाशिका – शरीरनियामकेश्वराधाराकाशादिषु भगवतोऽवस्थानमात्रेण आधाराधेयभावोऽपि युज्यते । अतः परमात्मनः पञ्चजनादिशब्दवाच्यत्वाद्युक्तं समन्वयसूत्रमिति भावः ।। १ ।।**

ಶರೀರಾದಿ ನಿಯಾಮಕನಾದ ಈಶ್ವರನು ಆಕಾಶಾದಿಗಳಿಗೆ ಆಧಾರನಾಗಿದ್ದಾನೆ. ಅಂತಹ ಆಕಾಶಾದಿ ಪದಾರ್ಥಗಳಲ್ಲಿ ಇರುವಂತಹ ಭಗವಂತನ ಯಾವ ನಿಯಾಮಕರೂಪವಿದೆಯೋ, ಅದು ಶರೀರನಿಯಾಮಕವಾದ ರೂಪದಲ್ಲಿ ಆಶ್ರಿತವಾಗಿದೆ. ಆದ್ದರಿಂದ ಆಕಾಶದ ಅಂತರ್ಯಾಮಿಯಾದ ಭಗವಂತನು ಆಧೇಯನು, ಶರೀರದ ನಿಯಾಮಕನಾದ ಭಗವಂತನು ಆಧಾರನು ಆಗಿದ್ದಾನೆ. ಹೀಗೆ ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಹಾಗಾಗಿ ಪರಮಾತ್ಮನು 'ಪಂಚ ಜನಾ' ಮೊದಲಾದ ಶಬ್ದಗಳಿಂದ ವಾಚ್ಯನಾಗಿದ್ದಾನೆಂಬುದು ಸಿದ್ಧವಾಯಿತು. ಸಮನ್ವಯಸೂತ್ರದಲ್ಲಿ ಸಕಲಶಬ್ದವಾಚ್ಯತ್ವವನ್ನು ಪ್ರತಿಜ್ಞೆ ಮಾಡಿದ್ದೂ ಕೂಡ ಅತ್ಯಂತ ಯುಕ್ತವೇ ಆಗಿದೆ.

ಶ್ರೀ ಮಂತ್ರಾಲಯ ಪ್ರಭುಗಳಿಂದ ವಿರಚಿತವಾದ

# ಭಾವದೀಪ

**भावदीपः –** 'अधिकरणाधेयत्वादिकम्' इति न्यायविवरणसूचितलिङ्गेन अन्यत्रैव प्रसिद्धिमाह **– अत्राधाराधेयत्वेति ।।**

"ಅಧಿಕರಣಾಧೇಯತ್ವಾದಿಕಮ್" ಎಂಬ ನ್ಯಾಯವಿವರಣದಲ್ಲಿ ಸೂಚಿತವಾದ ಲಿಂಗದಿಂದ ಅನ್ಯತ್ರಪ್ರಸಿದ್ಧಿಯನ್ನು ಸಮರ್ಥಿಸಲು 'ಅತ್ರ ಆಧಾರಾಧೇಯತ್ವ' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः –** बहुत्वमादिपदार्थः । अन्यत्रैव प्राणचक्षुः प्रभृतिषु । भाष्ये पञ्चजनशब्दो बहुत्ववाचिशब्दमात्रोपलक्षणम् । 'विरोधिसर्वबाहुल्य' इत्यनुभाष्योक्तेरिति भावेनाह **– पञ्च जनादिशब्दानामिति ।।**

ಆದಿಪದದಿಂದ ಬಹುತ್ವವನ್ನು ವಿವಕ್ಷಿಸಬೇಕು. ಬಹುತ್ವವೂ ಕೂಡ ಅನ್ಯತ್ರೈವ ಪ್ರಸಿದ್ಧಿಗೆ ಸೂಚಕವಾದ ಲಿಂಗವಾಗಿದೆ 'ಅನ್ಯತ್ರ' ಎಂದರೆ ಪ್ರಾಣ, ಚಕ್ಷುಸ್ಸು ಮೊದಲಾದವುಗಳಲ್ಲಿ ಎಂದರ್ಥ. ಭಾಷ್ಯದಲ್ಲಿ ಪ್ರಯೋಗಿಸಿದ ಪಂಚ ಜನ ಶಬ್ದವು ಬಹುತ್ವವಾಚಕವಾದ ಸಕಲಶಬ್ದಗಳಿಗೆ ಉಪಲಕ್ಷಣವಾಗಿದೆಯೆಂದು 'ಪಂಚ ಜನಾದಿಶಬ್ದಾನಾಮ್' ಎಂಬ ಮಾತಿನಿಂದ ಹೇಳಿರುತ್ತಾರೆ. 'ವಿರೋಧಿಸರ್ವಬಾಹುಲ್ಯ' ಎಂಬ ಅನುವ್ಯಾಖ್ಯಾನದ ಮಾತಿನಲ್ಲಿ 'ಬಾಹುಲ್ಯ' ಎಂಬ ಪದದಿಂದ ಈ ಅಧಿಕರಣದ ಉಪಾಧಿಯನ್ನು ಹೇಳಿದ್ದಾರೆ. ಅದನ್ನು ಟೀಕೆಯಲ್ಲಿ ಸ್ಪಷ್ಟಪಡಿಸಿದ್ದಾರೆ.

**भावदीपः** – आनुमानिकनयभाष्येण तुल्यन्यायतया सूचिते श्रुत्यधिकरणसङ्गती स्वयमाह – **समन्वयेति** ।।

ಆನುಮಾನಿಕಾಧಿಕರಣದ ಭಾಷ್ಯದಲ್ಲಿ ಸಮಾನನ್ಯಾಯದಿಂದ ಸೂಚಿತವಾದ ಶ್ರುತಿಸಂಗತಿ ಹಾಗೂ ಅಧಿಕರಣಸಂಗತಿಗಳನ್ನು ಸ್ವತಃ ಟೀಕೆಯಲ್ಲಿ 'ಸಮನ್ವಯ ಪ್ರತಿಪಾದನಾತ್' ಎಂಬ ಮಾತಿನಿಂದ ತೋರಿಸಿದ್ದಾರೆ.

**भावदीपः** – **श्रूयन्त इति** ।। षष्ठेऽध्याये । यस्मिन्निति सप्तम्यन्तस्य सर्वप्राणिशरीरवाचिनः शरीरनियामकतया सर्वशरीरेषु विन्यस्तभगवद्रूपपरत्वं द्योतयितुं तमेवेति श्रुतिलिङ्गोक्तिपरवाक्यशेषोद्धारः । स्युः पुमांसः पञ्चजना इत्युक्तेः समस्तपदमिति भ्रमं निरस्यन् पञ्च पञ्चेति वीप्सायाः कृत्यमाह – **सर्वेति** ।।

ಬೃಹದಾರಣ್ಯಕದ ಆರನೆಯ ಅಧ್ಯಾಯದ ವಾಕ್ಯವನ್ನು 'ಯಸ್ಮಿನ್ ಪಂಚ' ಇತ್ಯಾದಿಯಾಗಿ ಉಲ್ಲೇಖ ಮಾಡಿದ್ದಾರೆ. 'ಯಸ್ಮಿನ್' ಎಂಬ ಸಪ್ತಮ್ಯಂತ ಪದದಿಂದ ಸಕಲಪ್ರಾಣಿಗಳ ಶರೀರದಿಂದ ಪ್ರತಿಪಾದ್ಯವಾದ ಶರೀರನಿಯಾಮಕವಾಗಿ ಸಕಲ ಶರೀರಗಳಲ್ಲಿ ಇರುವ ಭಗವದ್‌ರೂಪವನ್ನು ಹೇಳಲಾಗಿದೆ. ಅದನ್ನು 'ತಮೇವ' ಎಂಬ ವಾಕ್ಯಶೇಷವನ್ನು ಉಲ್ಲೇಖಿಸುವ ಮೂಲಕ ಸ್ಪಷ್ಟಪಡಿಸಿದ್ದಾರೆ. 'ಸ್ಯುಃ ಪುಮಾಂಸಃ ಪಂಚ ಜನಾಃ' ಎಂದು ಹೇಳಿರುವುದರಿಂದ ಪಂಚ ಜನಪದವು ಸಮಸ್ತಪದವೆಂಬ ಭ್ರಾಂತಿ ಬರುತ್ತದೆ. ಅದರ ಪರಿಹಾರಕ್ಕಾಗಿ 'ಪಂಚ ಪಂಚ' ಎಂಬ ವೀಪ್ಸಾಗ್ರಹಣದ ಸಾರ್ಥಕ್ಯವನ್ನು 'ಸರ್ವ' ಇತ್ಯಾದಿ ಪದದಿಂದ ಸಮರ್ಥಿಸುತ್ತಿದ್ದಾರೆ.

**भावदीपः** – ''सर्वमानैर्विरोधश्च व्युत्पत्तेरप्यशक्यता । परस्परविरोधश्च विरोधः कार्यतद्वतोः'' इत्याद्यनुभाष्ये परस्परविरोध इत्युक्तं विवृण्वानः बहुसङ्ख्योपसङ्ग्रहेऽपीति भाष्यसूचितयुक्तिमाह – **तच्छब्दस्येति** ।। तदधीनत्वादर्थवदित्यनेन गतार्थत्वमाशङ्क्याह – **नच स्वस्येति** ।।

'ಸರ್ವಮಾನೈರ್ವಿರೋಧಶ್ಚ ವ್ಯುತ್ಪತ್ತೇರಪ್ಯಶಕ್ಯತಾ ।
ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ' ॥

ಎಂಬ ಅನುವ್ಯಾಖ್ಯಾನದ ಮಾತಿನಂತೆ ಪರಸ್ಪರ ವಿರೋಧವು ಈ ಅಧಿಕರಣದ ಪೂರ್ವಪಕ್ಷವಾಗಿದೆ. ಅದನ್ನು ವಿವರಿಸುವವರಾಗಿ 'ಬಹುಸಂಖ್ಯೋಪಸಂಗ್ರಹೇಽಪಿ' ಎಂಬ ಭಾಷ್ಯದಿಂದ ಸೂಚಿತವಾದ ಯುಕ್ತಿಯನ್ನು 'ತಚ್ಛಬ್ದಸ್ಯ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ತದಧೀನತ್ವಾದರ್ಥವತ್' ಎಂಬ ಸೂತ್ರದಿಂದ ಪುನರುಕ್ತಿಯನ್ನು ಆಶಂಕಿಸಿ ಉತ್ತರಿಸುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**भावदीपः** – वशीकृतेति ।। ननु जनानां राजवशत्वेऽपि न तद्गतं बहुत्वं राजाधीनम् । अस्तु वा कथञ्चित् बहुत्वं राजाधीनम्। तथापि भृत्यगतदुःखनिगडबन्धादेः राजाधीनत्वेऽपि राज्ञि दुःखिबद्धादिपदाप्रयोगवदुपपत्तेर्नव्यभिचार इति चेत् ।

ಪ್ರಶ್ನೆ - ಟೀಕೆಯಲ್ಲಿ ಅನೇಕ ಜನರನ್ನು ವಶಮಾಡಿಕೊಂಡಿರುವ ರಾಜನಲ್ಲಿ ಬಹುತ್ವಸಂಖ್ಯಾವಾಚಕವಾದ ಶಬ್ದ ಪ್ರಯೋಗಗಳು ಇರುವುದಿಲ್ಲವೆಂದು ಹೇಳಿದ್ದಾರೆ. ಇದರ ಅಭಿಪ್ರಾಯವನ್ನು ಹೀಗೆ ತಿಳಿಯಬೇಕು. ಅನೇಕ ಜನರು ರಾಜನ ವಶದಲ್ಲಿದ್ದರೂ ಅವರಲ್ಲಿರುವ ಬಹುತ್ವವು ರಾಜನ ಅಧೀನವಲ್ಲ. ಅಥವಾ ಬಹುತ್ವವು ರಾಜನ ಅಧೀನವೆಂದೇ ಒಪ್ಪೋಣ. ಆದರೂ ಕೂಡ ಭೃತ್ಯನಲ್ಲಿರುವ ದುಃಖ ನಿಗಡಬಂಧ ಇವುಗಳು ರಾಜಾಧೀನವಾಗಿದ್ದರೂ ರಾಜನಲ್ಲಿ 'ದುಃಖೀ' 'ಬದ್ಧಃ' ಮೊದಲಾದ ಪ್ರಯೋಗಗಳು ಇರುವುದಿಲ್ಲ. ಅದರಂತೆ ಬಹುತ್ವದ ಪ್ರಯೋಗವೂ ಕೂಡ ರಾಜನಲ್ಲಿ ಬಾರದ ಕಾರಣ ವ್ಯಭಿಚಾರವನ್ನು ಹೇಗೆ ಹೇಳುವಿರಿ?

**भावदीपः** – अत्रोक्तं चन्द्रिकायाम् । तदधीनत्वन्याये सत्यपि हरौ बहुत्वाद्यस्ति न वेति विचारात्तदाच्छादन एव तात्पर्यमिति वा बहुत्ववाचिशब्देषु स्वातन्त्र्यस्य निमित्तत्वे 'अमङ्गलत्वाच्छब्दानां राज्ञो योगादमङ्गले। अप्रियत्वात्तु शब्दस्य स्यात् प्रयोगनिवर्तनम्' इत्यनुभाष्योक्तदिशा बद्धादिशब्दवदमङ्गलत्वाभावात् वशीकृत-बहुजनेऽपि राज्ञि तत्प्रयोगोपपत्तेः न तन्निमित्तमित्यभिप्रायो वेति ।।

ಉತ್ತರ - ಈ ವಿಷಯದಲ್ಲಿ ತಾತ್ಪರ್ಯಚಂದ್ರಿಕೆಯ ಉತ್ತರ ಹೀಗಿದೆ - ತದಧೀನತ್ವ ನ್ಯಾಯವಿದ್ದರೂ ಕೂಡ ಶ್ರೀಹರಿಯಲ್ಲಿ ಬಹುತ್ವವು ಇದೆಯೋ ಇಲ್ಲವೋ ಎಂಬ ವಿಚಾರವು ಪ್ರವೃತ್ತವಾಗುವುದರಿಂದ ಅದನ್ನು ಮುಚ್ಚಿಟ್ಟು ಪೂರ್ವಪಕ್ಷ ಮಾಡಬಹುದು. ಅಥವಾ ಬಹುತ್ವವಾಚಕವಾದ ಶಬ್ದಗಳಲ್ಲಿ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಿದರೆ

'ಅಮಂಗಲತ್ವಾತ್ ಶಬ್ದಾನಾಂ ರಾಜ್ಞೋ ಯೋಗಾದಮಂಗಲೇ ।
ಅಪ್ರಿಯತ್ವಾತ್ತು ಶಬ್ದಸ್ಯ ಸ್ಯಾತ್ ಪ್ರಯೋಗನಿವರ್ತನಮ್ ॥

ಶಬ್ದಗಳು ಅಮಂಗಳವಾದ್ದರಿಂದ ರಾಜನಲ್ಲಿ ಪ್ರಯೋಗ ಮಾಡಿದರೆ ಅವನಿಗೆ ಅಪ್ರಿಯವಾಗುವ ಕಾರಣದಿಂದ ಯಾರೂ ಸಹ ರಾಜನಲ್ಲಿ ಪ್ರಯೋಗ ಮಾಡುವುದಿಲ್ಲ.

ಹೀಗೆ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಬದ್ಧಾದಿಶಬ್ದಗಳು ಹೇಗೆ ಅಮಂಗಳವಾಗಿವೆಯೋ, ಅದರಂತೆ ಬಹುತ್ವವಾಚಕ ಶಬ್ದಗಳು ಅಮಂಗಳವಾಗಿರುವುದಿಲ್ಲ. ಆದ್ದರಿಂದ ಅನೇಕ ಜನರನ್ನು ವಶಮಾಡಿಕೊಂಡಿರುವ ರಾಜನಲ್ಲಿ ಬಹುತ್ವವಾಚಕವಾದ ಶಬ್ದಗಳನ್ನು ಪ್ರಯೋಗ ಮಾಡಬಹುದು. ಹೀಗೆ ವ್ಯಭಿಚಾರ ದೋಷವು ಬರುವುದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಒಪ್ಪಬಾರದು.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**भावदीपः – हेत्वन्तरणेति ।। नामानि सर्वाणि । सोऽवरः सोऽनित्य इति प्रमाणान्तरेणेत्यर्थः ।**

ಟೀಕೆಯಲ್ಲಿರುವ 'ಹೇತ್ವಂತರ' ಪದಕ್ಕೆ 'ನಾಮಾನಿ ಸಾರ್ವಾಣಿ' ಮತ್ತು 'ಸೋಽವರಃ ಸೋಽನಿತ್ಯಃ' ಇವೇ ಮೊದಲಾದ ಪ್ರಮಾಣಾಂತರಗಳಿಂದ ಎಂದರ್ಥ.

**भावदीपः** – ननु गुहां प्रविष्टावित्यत्रोक्तन्यायेन हरौ द्वित्ववत् बहुत्वमपि सिद्धम् । एकत्वविरोधित्वे द्वित्वबहुत्वयोरविशेषादिति भावेन तेनास्य गतार्थत्वमाशङ्क्य निराह – **ऋतं पिबन्तावित्यादाविवेति** ।।

'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ ಹೇಳಿದ ನ್ಯಾಯದಂತೆ ಶ್ರೀಹರಿಯಲ್ಲಿ ದ್ವಿತ್ವವು ಸಿದ್ಧವಾಗಿದೆ ಅದರಂತೆ ಬಹುತ್ವವು ಕೂಡ ಸಿದ್ಧವಾಗುತ್ತದೆ. ಬಹುತ್ವವನ್ನು ಒಪ್ಪಿದರೆ ಏಕತ್ವದಿಂದ ವಿರೋಧ ಬರುವುದಾದರೆ ಅದೇ ಏಕತ್ವಕ್ಕೆ ದ್ವಿತ್ವದಿಂದಲೂ ಕೂಡ ವಿರೋಧವು ಬಂದೇ ಬರುತ್ತದೆ. ದ್ವಿತ್ವ ಹಾಗೂ ಬಹುತ್ವಗಳಲ್ಲಿ ಯಾವುದೇ ವ್ಯತ್ಯಾಸಗಳಿರುವುದಿಲ್ಲ. ಈ ಅಭಿಪ್ರಾಯದಿಂದ ಗುಹಾಧಿಕರಣದಿಂದಲೇ ಈ ಅಧಿಕರಣವು ಗತಾರ್ಥವಾಯಿತೆಂದು ಆಶಂಕಿಸಿ ಉತ್ತರಿಸಲು 'ಋತಂ ಪಿಬಂತೌ' ಇತ್ಯಾದಿ ವಾಕ್ಯಗಳು ಹೊರಟಿವೆ.

**भावदीपः** – द्वितीयसूत्रव्यावर्त्यं हेतुमाह – **मानाभावादिति** ।। तत्र तु ''घर्मा समन्ता त्रिवृतं व्यापतुः'', ''आत्मान्तरात्मेति हरिः'' इति मानमस्तीति भावः ।

ಎರಡನೆ ಸೂತ್ರದಿಂದ ವ್ಯಾವರ್ತ್ಯವಾದ ಪೂರ್ವಪಕ್ಷದ ಹೇತುವನ್ನು 'ಮಾನಾಭಾವಾತ್' ಎಂಬುದರಿಂದ ಹೇಳುತ್ತಿದ್ದಾರೆ. 'ಘರ್ಮಾ ಸಮಂತಾ ತ್ರಿವೃತಂ ವ್ಯಾಪತುಃ' ಮತ್ತು 'ಆತ್ಮಾಂತರಾತ್ಮೇತಿ ಹರಿಃ' ಎಂಬ ಪ್ರಮಾಣದಿಂದ ಶ್ರೀಹರಿಯಲ್ಲಿ ದ್ವಿತ್ವವು ಸಿದ್ಧವಾಗುತ್ತದೆ. ಆದರೆ ಬಹುತ್ವವು ಸಿದ್ಧವಾಗುವುದಿಲ್ಲ ಎಂದಭಿಪ್ರಾಯ.

**भावदीपः** – 'परस्परविरोधश्च' इत्येतद्भाष्यदिशा एकस्यानेकत्वं विरुद्धमिति व्याख्यायेदानीं न्यायविवरणदिशा प्रकारान्तरेण व्याख्यातुमाह – **यस्मिन्निति** ।। तमेवेति वाक्यशेषबलेनेत्यर्थः ।।

'ಪರಸ್ಪರವಿರೋಧಶ್ಚ' ಎಂಬ ಭಾಷ್ಯದ ಮಾತಿನಂತೆ ಒಬ್ಬನೇ ಪರಮಾತ್ಮನಿಗೆ ಅನೇಕತ್ವವು ವಿರುದ್ಧವಾಗಿದೆ ಎಂದು ಇಲ್ಲಿಯ ತನಕ ವ್ಯಾಖ್ಯಾನ ಮಾಡಿದ್ದಾಯಿತು. ಈಗ ನ್ಯಾಯವಿವರಣದ ಪ್ರಕಾರ ಮತ್ತೊಂದು ಪ್ರಕಾರದಲ್ಲಿ 'ಯಸ್ಮಿನ್' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. 'ತಮೇವ' ಎಂಬ ವಾಕ್ಯಶೇಷದ ಬಲದಿಂದ ಎಂದು ಇದರ ಅರ್ಥ.

**भावदीपः – हरेरिति ।।** ''एको दधार'' इत्यादिना हरेरेव सर्वाधारत्वादिति भावः ।। **अत इति ।।** बहुत्वादिविरोधादित्यर्थः ।।

''ಏಕೋ ದಧಾರ'' ಇತ್ಯಾದಿ ಪ್ರಮಾಣದ ಆಧಾರದಿಂದ ಶ್ರೀಹರಿಯೇ ಸಕಲಕ್ಕೂ ಆಧಾರನಾಗಿದ್ದಾನೆ ಎಂದು 'ಹರೇಃ' ಎಂಬ ವಾಕ್ಯದಿಂದ ತಿಳಿಸಿದ್ದಾರೆ. 'ಅತಃ' ಎಂಬ ಪದಕ್ಕೆ ಬಹುತ್ವದ ವಿರೋಧವಿರುವುದರಿಂದ ಎಂದರ್ಥ.

**भावदीपः –** असूत्रितं विरोध इत्येतत्किमिति भाषितमित्यत आह – **अपिपदेनेति ।।** बुद्धिविभागेनेति भावः ।

ಬಹುತ್ವಸಂಖ್ಯೆಯನ್ನು ಪ್ರತಿಪಾದನೆ ಮಾಡಿದಾಗ ಯಾವ ವಿರೋಧವು ಇರುವುದಿಲ್ಲವೆಂದು ಹೇಳುತ್ತಿದ್ದೀರಿ. ಆದರೆ ಸೂತ್ರದಲ್ಲಿ ವಿರೋಧ ಎಂಬ ಪದವೇ ಕಾಣುಸುತ್ತಿಲ್ಲ. ಹೀಗಿರುವಾಗ ಈ ವ್ಯಾಖ್ಯಾನವು ಹೇಗೆ ಸಮಂಜಸವಾಗುತ್ತದೆ ? ಎಂಬ ಪ್ರಶ್ನೆಗೆ 'ಅಪಿಪದೇನ' ಎಂಬ ಟೀಕಾವಾಕ್ಯದಿಂದ ಉತ್ತರಿಸುತ್ತಿದ್ದಾರೆ. ಸೂತ್ರದಲ್ಲಿ 'ನಾನಾಭಾವಾತ್' ಎಂಬ ಪದವನ್ನು ಬುದ್ಧಿಯಿಂದ ವಿಭಾಗ ಮಾಡಿಕೊಂಡು ಹಿಂದಿನ ಸೂತ್ರದಲ್ಲಿರುವ ವಿರೋಧಪದವನ್ನು ಆಕರ್ಷಣೆ ಮಾಡಬೇಕು. ಆವಾಗ 'ಉತ್ಸೂತ್ರಿತತ್ವ' ಎಂಬ ದೋಷವು ಬರುವುದಿಲ್ಲ.

**भावदीपः –** समन्वयपरत्वं स्फोरयन् शेषोक्त्या भाष्यं हेतुत्वेन व्याचष्टे – **युक्तमिति ।।**

ಬಹುತ್ವಸಂಖ್ಯೆಯೂ ಕೂಡ ಪರಮಾತ್ಮನಲ್ಲಿ ಸಮನ್ವಯವಾಗುತ್ತದೆ ಎಂಬುದನ್ನು ಸ್ಪಷ್ಟಪಡಿಸುತ್ತಾ ಭಾಷ್ಯದಲ್ಲಿರುವ ವಾಕ್ಯದಲ್ಲಿ ಶೇಷಪೂರಣ ಮಾಡಿಕೊಂಡು ವ್ಯಾಖ್ಯಾನ ಮಾಡಲು 'ಯುಕ್ತಮ್' ಇತ್ಯಾದಿ ವಾಕ್ಯವು ಹೊರಟಿದೆ.

**भावदीपः –** तस्यैव इत्येवकारसूचितमाह – **स्वगतभेदशून्यस्यापीति ।।** नानाभावान्न विरोध इत्यंशस्यार्थो नानेत्यादि ।

ಭಾಷ್ಯದಲ್ಲಿ 'ತಸ್ಯೈವ' ಎಂಬಲ್ಲಿರುವ ಏವಕಾರದಿಂದ ಸೂಚಿತವಾದ ಅರ್ಥವನ್ನು 'ಸ್ವಗತಭೇದಶೂನ್ಯಸ್ಯಾಪಿ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. 'ನಾನಾಭಾವಾತ್ ನ ವಿರೋಧಃ' ಎಂಬ ಭಾಷ್ಯದ ಮಾತಿಗೆ 'ನಾನಾ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡಿದ್ದಾರೆ.

**भावदीपः –** आकाशादिष्विति भाष्योक्तेरुपयोगाय मानाभावादिति प्रागुक्तशङ्का-मनूद्योत्तरसूत्रतात्पर्यलब्धमाह – **नच प्रतिशरीरमिति ।।**

'ಆಕಾಶಾದಿಷು' ಎಂಬ ಭಾಷ್ಯದ ಮಾತಿಗೆ ಸಾರ್ಥಕ್ಯವನ್ನು ಹೇಳಲು 'ಮಾನಾಭಾವಾತ್' ಎಂಬುದಾಗಿ ಹಿಂದೆ ಮಾಡಿದ ಆಶಂಕೆಯನ್ನು ಅನುವಾದ ಮಾಡಿ ಮುಂದಿನ ಸೂತ್ರದಿಂದ ತಾತ್ಪರ್ಯತಃ ಲಬ್ಧವಾದ ಅರ್ಥವನ್ನು 'ನ ಚ ಪ್ರತಿಶರೀರಮ್' ಇತ್ಯಾದಿಯಾಗಿ ನಿರೂಪಣೆ ಮಾಡುತ್ತಿದ್ದಾರೆ.

**भावदीपः – एतेन बहुरूपत्वादधिकरणाधेयत्वं तस्यैव युज्यत इत्यंशं विवृण्वानः तत्र हेत्वाकाङ्क्षायां तस्यैवातिरिक्तस्वरूपत्वाच्च इति भाष्योक्तं हेतुं योजयन्नुक्तशङ्कामनूद्य निराह – नच यस्मिन्निति ।।**

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಪರಮಾತ್ಮನಲ್ಲಿ ಅನೇಕ ರೂಪಗಳಿರುವುದರಿಂದ ಬಹುತ್ವಸಂಖ್ಯೆಯು ಯುಕ್ತವಾಗುತ್ತದೆ. ಆದ್ದರಿಂದಲೇ ಪರಸ್ಪರ ವಿರುದ್ಧವಾದ ಆಧೇಯತ್ವ-ಆಧಾರತ್ವಗಳೂ ಕೂಡ ಅವನಲ್ಲಿ ಯುಕ್ತವಾಗುತ್ತವೆ. ಇದನ್ನು ವಿವರಿಸುತ್ತಾ. ಈ ವಿಷಯದಲ್ಲಿ ಹುಟ್ಟುವ ಹೇತುವಿನ ಆಕಾಂಕ್ಷೆಗೆ 'ತಸ್ಯೈವ ಅತಿರಿಕ್ತಸ್ವರೂಪತ್ವಾಚ್ಚ' ಎಂಬ ಭಾಷ್ಯದಲ್ಲಿ ಹೇಳಿದ ಹೇತುವನ್ನು ಯೋಜನೆ ಮಾಡುತ್ತಾ ಹಿಂದಿನ ಆಶಂಕೆಯನ್ನು ಅನುವಾದ ಮಾಡಿ ನಿರಾಕರಿಸಲು 'ನಚ ಯಸ್ಮಿನ್' ಇತ್ಯಾದಿ ಟೀಕಾವಾಕ್ಯವು ಹೊರಟಿದೆ.

**भावदीपः – इदानीं न्यायविवरणं सङ्गमयति – शरीरेति ।। अत इति ।।** बाधकभावादित्यर्थः ।।१२।।

ಪ್ರಕೃತ ನ್ಯಾಯವಿವರಣದ ವಾಕ್ಯಕ್ಕೂ ಸಂಗತಿಯನ್ನು ತೋರಿಸುತ್ತಾ 'ಶರೀರ' ಇತ್ಯಾದಿ ವಾಕ್ಯವು ಹೊರಟಿದೆ. 'ಅತಃ' ಎಂಬ ಪದಕ್ಕೆ ಬಾಧಕ ಇರುವುದರಿಂದ ಎಂದರ್ಥ.

## ಬ್ರಹ್ಮಮೀಮಾಂಸಾಶಾಸ್ತ್ರ

### ಪಂಚ ಜನರು-ಭಗವಂತನ ಐದುರೂಪಗಳು

**सूत्रम् – ।। प्राणादयो वाक्यशेषात् ।।२।।**

ಸೂತ್ರಾರ್ಥ - 'ಪ್ರಾಣಸ್ಯ ಪ್ರಾಣಂ' ಎಂಬ ಮುಂದಿನ ವಾಕ್ಯಶೇಷದಿಂದ, ಹಿಂದೆ ಹೇಳಿದ ಪಂಚ ಜನರು, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ ಮತ್ತು ಮನಸ್ಸು ಈ ಶಬ್ದಗಳಿಂದ ಭಗವಂತನ ರೂಪಗಳು ಪ್ರತಿಪಾದ್ಯವಾಗಿವೆ.

### ಸೂತ್ರದೀಪಿಕಾ

**सूत्रदीपिका –** भगवद्रूपत्वेनोक्ताः पञ्च जनास्तु **प्राणादेः प्राणादयः** द्वितीयानिर्दिष्टघ्राणचक्षुःश्रोत्रान्नमनोभिधाः ज्ञेयाः । कुतः ? **वाक्यशेषात्** ते

च भगवद्रूपविशेषा एव । कुतः ? विष्णोरन्यत्रासम्भावितप्राणप्राणप्रदत्वादि-प्रतिपादकं 'प्राणस्य प्राणम्' इत्यादिवाक्यशेषादित्यर्थः ।।२।।

ಅರ್ಥ -- ಶ್ರುತಿಯಲ್ಲಿರುವ ಪಂಚ ಜನರೆಂದರೆ ಭಗವದ್ರೂಪಗಳೇ ಆಗಿವೆ. ಪ್ರಾಣಾದಯಃ = 'ಪ್ರಾಣಸ್ಯ ಪ್ರಾಣಂ' ಇತ್ಯಾದಿ ದ್ವಿತೀಯಾಂತ ಶಬ್ದಗಳಿಂದ ನಿರ್ದೇಶಿಸಲ್ಪಟ್ಟ, ಪ್ರಾಣ, ಚಕ್ಷುಃ, ಶ್ರೋತ್ರ, ಅನ್ನ, ಮನಃ ಈ ಶಬ್ದಗಳಿಂದ ಪ್ರತಿಪಾದ್ಯವಾದವು ವಿಷ್ಣುವೇ ಎಂದು ತಿಳಿಯಬೇಕು. ಏಕೆಂದರೆ, ವಾಕ್ಯಶೇಷಾತ್ = ವಿಷ್ಣುವನ್ನು ಬಿಟ್ಟು, ಬೇರೆಡೆ ಅಸಂಭಾವಿತವಾದ, 'ಪ್ರಾಣಪ್ರಾಣಪ್ರದತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ಹೇಳುವ, 'ಪ್ರಾಣಸ್ಯ ಪ್ರಾಣಂ' ಎಂಬ ವಾಕ್ಯಶೇಷವಿರುವುದರಿಂದ.

## ಬ್ರಹ್ಮಸೂತ್ರಭಾಷ್ಯ

**भाष्यम् – पञ्च पञ्च जनानाह –**

**।। प्राणादयो वाक्यशेषात् ।।**

ಅನುವಾದ - ಪಂಚ ಜನ ಶಬ್ದದಿಂದ ತಿಳಿದ ಐದು ರೂಪಗಳನ್ನು ಸೂತ್ರಕಾರರೇ ಸೂತ್ರದಲ್ಲಿ ಹೇಳುತ್ತಿದ್ದಾರೆ. 'ಪ್ರಾಣಾದಯೋ ವಾಕ್ಯಶೇಷಾತ್' ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ, ಮನಸ್ಸು, ಈ ಶಬ್ದಗಳಿಂದ ಪ್ರತಿಪಾದ್ಯವಾದವು ಭಗವಂತನ ಐದು ರೂಪಗಳೇ ಆಗಿವೆ. ಏಕೆಂದರೆ 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷವಿರುವುದರಿಂದ.

ಪ್ರತಿಪದಾರ್ಥ -- ವಿಷ್ಣುವಿನಲ್ಲಿ ಬಹುತ್ವಾದಿ ಸಂಖ್ಯೆಗಳು ಯುಕ್ತವಾಗುತ್ತವೆಂಬ ವಿಚಾರವು ಯುಕ್ತವಾಗುತ್ತಿತ್ತು. ಒಂದುವೇಳೆ ಪಂಚ ಜನಾದಿ ಶಬ್ದವಾಚ್ಯತ್ವವು ವಿಷ್ಣುವಿನಲ್ಲಿ ಬರುತ್ತದೆ ಎಂದಾಗಿದ್ದಲ್ಲಿ, ಆದರೆ ಈ ವಿಷಯದಲ್ಲಿ ಯಾವುದೇ ವಿಶೇಷ ಕಾರಣಗಳಿರುವುದಿಲ್ಲ. 'ಸರ್ವೇ ವೇದಾಃ' ಇತ್ಯಾದಿ ಶ್ರುತ್ಯಂತರಗಳು ಸಕಲಶಬ್ದ ಸಾಧಾರಣವಾದ್ದರಿಂದ ವಿಶೇಷವಾದ ಪ್ರಮಾಣವಾಗುವುದಿಲ್ಲ. ಆದ್ದರಿಂದ ಬಹುತ್ವಾದಿಗಳು ವಿಷ್ಣುವಿನಲ್ಲಿ ಯುಕ್ತವಾಗುವುದಾದರೂ, ಪಂಚ ಜನಾದಿ ಶಬ್ದವಾಚ್ಯತ್ವವು ಅವನಲ್ಲಿ ಬರುವುದಿಲ್ಲವಲ್ಲವೇ? ಈ ಆಕ್ಷೇಪವನ್ನು ಪರಿಗಣಿಸಲು ಸೂತ್ರಕ್ಕೆ ಅವತಾರಿಕೆ ನೀಡುತ್ತಿದ್ದಾರೆ.-

ಪಂಚ ಪಂಚ ಜನಾನಾಹ = ಪಂಚ ಜನ ಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ಹೇಳುತ್ತಿದ್ದಾರೆ.

**भाष्यम् – 'प्राणस्य प्राणमुत चक्षुषश्चक्षुः श्रोत्रस्य श्रोत्रमन्नस्यान्नं मनसो मनः' (बृ.६-४-१७) इति वाक्यशेषात् ।।२।।**

ಅನುವಾದ - ಮುಂದಿನ ವಾಕ್ಯವು ಐದು ಮಂದಿ ಭಗವಂತನ ಪ್ರಾಣಾದಿರೂಪಗಳೆನ್ನುತ್ತಿದೆ. ಪ್ರಾಣನಿಗೆ ಚೇಷ್ಟಾಪ್ರದನು, ಕಣ್ಣಿಗೆ ದರ್ಶನಶಕ್ತಿಪ್ರದನು, ಕಿವಿಗೆ ಶ್ರವಣಶಕ್ತಿಪ್ರದನು, ಅನ್ನಕ್ಕೆ

ಅನ್ನತ್ವಪ್ರದನು, ಮನಸ್ಸಿಗೆ ಮನನಶಕ್ತಿಪ್ರದನು ಆಗಿದ್ದಾನೆ ಎಂದು ಯಾರು ತಿಳಿಯುತ್ತಾರೋ, ಅವರು ಬ್ರಹ್ಮನನ್ನೇ ಹೊಂದುತ್ತಾರೆ. ಈ ವಾಕ್ಯಶೇಷದಿಂದ ಪ್ರಾಣಾದಿಗಳು ಭಗವದ್ರೂಪಗಳೆಂದು ದೃಢವಾಗುತ್ತದೆ.

ಪ್ರತಿಪದಾರ್ಥ -- ಐದು ಮಂದಿಯು ಭಗವಂತನ ರೂಪಗಳೇ ಆಗಿವೆಯೆಂದು ಸಮರ್ಥಿಸುತ್ತಿದ್ದಾರೆ –

ಪ್ರಾಣಸ್ಯ = ಪ್ರಾಣನಿಗೆ, ಪ್ರಾಣಮ್ = ಚೇಷ್ಟಾಪ್ರದನು, ಉತ = ಮತ್ತು, ಚಕ್ಷುಷಃ = ಕಣ್ಣಿಗೆ, ಚಕ್ಷುಃ = ದರ್ಶನಶಕ್ತಿಪ್ರದನು, ಶ್ರೋತ್ರಸ್ಯ = ಕಿವಿಗೆ, ಶ್ರೋತ್ರಮ್ = ಶ್ರವಣಶಕ್ತಿಪ್ರದನು, ಅನ್ನಸ್ಯ = ಅನ್ನಕ್ಕೆ, ಅನ್ನಂ = ಅನ್ನತ್ವಪ್ರದನು, ಮನಸಃ = ಮನಸ್ಸಿಗೆ, ಮನಃ = ಮನನ ಶಕ್ತಿಪ್ರದನು ಆಗಿದ್ದಾನೆ. ಇತಿ = ಇಂತಹ, ವಾಕ್ಯಶೇಷಾತ್ = ವಾಕ್ಯಶೇಷದಿಂದ ಪ್ರಾಣಾದಿಗಳು ಭಗವದ್ರೂಪಗಳೆಂದು ದೃಢವಾಗುತ್ತದೆ.

## ತತ್ವಪ್ರಕಾಶಿಕಾ

**ननु भवेदियं बहुत्वादिसम्भवविषया चिन्ता यदि पञ्चजनादीनां विष्णुत्वे भवेद् विशेषहेतुः; न चासावस्ति । श्रुत्यन्तराणां साधारणत्वात् ।**

ಪಂಚ ಜನಾ ಮೊದಲಾದ ಸಂಖ್ಯಾವಾಚಕ ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆಂದು ಒಪ್ಪಲು ವಿಶೇಷ ಕಾರಣಗಳಿದ್ದಲ್ಲಿ ಬಹುತ್ವಾದಿ ಧರ್ಮಗಳಿಗೆ ಆಶ್ರಯನಾಗಿದ್ದಾನೆಂದು ವಿಚಾರ ಮಾಡಬಹುದಿತ್ತು. ಆದರೆ ಇಂತಹ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆನ್ನಲು ಯಾವುದೇ ವಿಶೇಷಹೇತುಗಳಿರುವುದಿಲ್ಲ. 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಗಳು ಸಾಮಾನ್ಯವಾಗಿ ಸಕಲಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆ ಎಂದಷ್ಟೇ ಹೇಳುತ್ತಿವೆ. ಆದ್ದರಿಂದ ಆ ಶ್ರುತಿಯು ಸಾವಕಾಶವಾಗಿದೆ.

**तत्वप्रकाशिका – अतो बहुत्वादिसम्भवेऽपि, न पञ्च जनादिशब्दवाच्यो हरिः, इत्याशङ्कां परिहरत्सूत्रमवतार्य व्याचष्टे – पञ्चेति ।।**

ಆದ್ದರಿಂದ ಪರಮಾತ್ಮನಲ್ಲಿ ಬಹುತ್ವ ಎಂಬ ಧರ್ಮವು ಸಂಭವಿಸುವುದಾದರೂ ಪಂಚ ಜನಾ ಮೊದಲಾದ ಶಬ್ದಗಳಿಂದ ಶ್ರೀಹರಿಯು ಪ್ರತಿಪಾದ್ಯನಾಗಲಾರ. ಈ ಆಶಂಕೆಯನ್ನು ನಿರಾಕರಣೆ ಮಾಡಲು ಸೂತ್ರಕ್ಕೆ ಅವತಾರಿಕೆ ನೀಡಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಪಂಚ ಜನಾ' ಇತ್ಯಾದಿಯಾಗಿದೆ.

**तत्वप्रकाशिका – पञ्च जनलिङ्गोक्त्योक्तशङ्कां परिहर्तुं पञ्च जनस्वरूपमाह सूत्रकार इति सम्बन्धभाष्यार्थः**

ಪಂಚ ಜನರು ವಿಷ್ಣುವೇ ಆಗಿದ್ದಾರೆಂದು ನಿಶ್ಚಯಿಸಲು ಲಿಂಗವನ್ನು ಹೇಳಿದ್ದರಿಂದ ಹಿಂದಿನ ಆಕ್ಷೇಪವನ್ನು ಪರಿಹರಿಸಲು ಮೊದಲು ಸೂತ್ರಕಾರರು ಪಂಚ ಜನ ಸ್ವರೂಪವನ್ನು ಹೇಳುತ್ತಿದ್ದಾರೆ. ಇದು ಅವತಾರಿಕೆ ನೀಡುವ ಭಾಷ್ಯದ ಅಭಿಪ್ರಾಯ.

**तत्वप्रकाशिका – एते पञ्च जनाः तावत् प्राणादीनां प्राणत्वादिप्रदाः । 'प्राणस्य प्राणम्' इति वाक्यशेषात् । प्राणादीनां प्राणत्वादिप्रदत्वं भगवत एव सम्भवति ।**

ಪ್ರಾಣ, ಚಕ್ಷುಸ್ಸು, ಶ್ರೋತ್ರ, ಜ್ಯೋತಿಸ್ಸು, ಮನಸ್ಸು ಈ ಪಂಚ ಜನರು ಪ್ರಾಣಾದಿಗಳಿಗೆ ಪ್ರಾಣತ್ವವನ್ನು ನೀಡುವವರು. ಏಕೆಂದರೆ 'ಪ್ರಾಣಸ್ಯ ಪ್ರಾಣಮ್' ಎಂಬುದಾಗಿ 'ಯಸ್ಮಿನ್ ಪಂಚ' ಎಂಬ ಶ್ರುತಿಯ ಮುಂದಿನ ವಾಕ್ಯವೇ ಹೇಳುತ್ತಿದೆ. ಪ್ರಾಣಾದಿಗಳಿಗೆಲ್ಲಾ ಪ್ರಾಣತ್ವವನ್ನು ನೀಡುವವನೆಂದರೆ ಭಗವಂತನೇ ಆಗಬೇಕು.

**तत्वप्रकाशिका – 'यच्छ्रोत्रस्य श्रोत्रं मनसो मनो यद्वाचो ह वाचं स उ प्राणस्य प्राणश्चक्षुषश्चक्षुः' इति श्रुतेः । अतो भगवल्लिङ्गसद्भावात् तस्यैव पञ्चजनत्वमिति भावः ।। २ ।।**

'ಯಚ್ಛ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯದ್ವಾಚೋ ಹ ವಾಚಂ ಸ ಉ ಪ್ರಾಣಸ್ಯ ಪ್ರಾಣಶ್ಚಕ್ಷುಷಶ್ಚಕ್ಷುಃ' 'ಯಾವ ಪರಮಾತ್ಮನು ಶ್ರೋತ್ರೇಂದ್ರಿಯಕ್ಕೆ ಶ್ರವಣಶಕ್ತಿಯನ್ನು ನೀಡುತ್ತಾನೋ, ಮನಸ್ಸಿಗೆ ಮನಶ್ಶಕ್ತಿಯನ್ನು ನೀಡುತ್ತಾನೋ' ಇತ್ಯಾದಿಯಾಗಿ ವಾಕ್ಯಶೇಷ ಶ್ರುತಿಯಿರುವುದರಿಂದ ಪಂಚ ಜನರಲ್ಲಿ ಪರಮಾತ್ಮನ ಅಸಾಧಾರಣ ಲಿಂಗವಿರುತ್ತದೆ. ಆದ್ದರಿಂದ ಪಂಚ ಜನ ಶಬ್ದದಿಂದ ಪರಮಾತ್ಮನೇ ಪ್ರತಿಪಾದ್ಯನಾಗುತ್ತಾನೆ.

## ಭಾವದೀಪ

विशेषहेतुरित्युक्तविशेषपदकृत्यं व्यनक्ति – श्रुत्यन्तराणामिति ।।

'ವಿಶೇಷಹೇತುಃ' ಎಂಬುದಾಗಿ ಟೀಕೆಯಲ್ಲಿ ಪಂಚ ಜನಾದಿ ಶಬ್ದಗಳು ವಿಷ್ಣುವನ್ನೇ ಪ್ರತಿಪಾದನೆ ಮಾಡಲು ವಿಶೇಷಹೇತು ಇರುವುದಿಲ್ಲ ಎಂದು ಹೇಳಲಾಯಿತು. ಹೇತುವಿಲ್ಲವೆಂದಷ್ಟೆ ಹೇಳಿದರೂ ಸಾಕಾಗಿತ್ತು. ವಿಶೇಷಪದವನ್ನೇಕೆ ಹೇಳಿದರು? ಎಂಬ ಪ್ರಶ್ನೆಗೆ 'ಶ್ರುತ್ಯಂತರಾಣಾಮ್' ಎಂಬ ಮುಂದಿನ ವಾಕ್ಯದಿಂದ ಉತ್ತರಿಸಿದ್ದಾರೆ.

भावदीपः – नामानि सर्वाणि, सर्वे वेदाः सर्वे घोषा इत्यादीनामित्यर्थः ।। अत इति ।। विशेषहेत्वभावादित्यर्थः ।

ಶ್ರುತ್ಯಂತರವೆಂದರೆ 'ನಾಮಾನಿ ಸರ್ವಾಣಿ' ಮತ್ತು 'ಸರ್ವೇ ವೇದಾ ಸರ್ವೇ ಘೋಷಾಃ' ಇವೆ ಮೊದಲಾದ ಶ್ರುತಿಗಳು ಎಂದರ್ಥ. 'ಅತಃ' ಎಂಬ ಪದಕ್ಕೆ ವಿಶೇಷ ಕಾರಣವಿಲ್ಲದ್ದರಿಂದ ಎಂದರ್ಥ.

**भावदीपः – सूत्रस्य न्यायनिबन्धरूपत्वात् पञ्च जनस्वरूपोक्तिरयुक्तेत्यतो व्याचष्टे – पञ्च जनेति ।।**

ಸೂತ್ರವು ನ್ಯಾಯನಿಬಂಧನ ರೂಪವಾಗಿರುವುದರಿಂದ ಕೇವಲ ಪಂಚ ಜನ ಸ್ವರೂಪವನ್ನು ಹೇಳುವುದು ಅಯುಕ್ತವಲ್ಲವೆ ? ಎಂಬ ಪ್ರಶ್ನೆಗೆ 'ಪಂಚ ಜನ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ.

**भावदीपः – द्वितीयान्तप्राणादीनां शब्दोऽर्थतश्च प्राधान्यात् तेषामेव पञ्च जनशब्देन ग्रहणं न षष्ठीनिर्दिष्टानामिति भावेन पञ्च जनलिङ्गोक्त्येत्युक्तम् ।**

ದ್ವಿತಿಯಾಂತವಾದ ಪ್ರಾಣಾದಿಶಬ್ದಗಳು ಶಬ್ದದಿಂದ ಹಾಗೂ ಅರ್ಥದಿಂದ ಪ್ರಧಾನವಾಗಿವೆ. ಅವುಗಳನ್ನೇ ಪಂಚ ಜನಶಬ್ದದಿಂದ ಸ್ವೀಕರಿಸಬೇಕು. ಷಷ್ಠೀವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟವಾದುದನ್ನು ಪಂಚ ಜನ ಶಬ್ದದಿಂದ ವಿವಕ್ಷಿಸಬಾರದು. ಇದನ್ನು ತಿಳಿಸಲು 'ಪಂಚ ಜನಲಿಂಗೋಕ್ತ್ಯಾ' ಎಂದು ಹೇಳಿರುತ್ತಾರೆ.

**भावदीपः – वाक्यशेषोक्त्या किं लिङ्गमुक्तमित्यतो व्यनक्ति – एत इति ।। इति श्रुतेरिति ।। तलवकारश्रुतेरित्यर्थः ।।२।।**

ವಾಕ್ಯಶೇಷದ ಉಲ್ಲೇಖದಿಂದ ಲಿಂಗವನ್ನೇಕೆ ಉಲ್ಲೇಖಿಸಿದ್ದಾರೆ ಎಂಬ ಪ್ರಶ್ನೆಗೆ 'ಏತೇ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಂ ಮನಸೋ ಮನೋ ಯೇ ವಿದುಸ್ತೇ ನಿಚಿಕ್ಯುರ್ಬ್ರಹ್ಮ ಪುರಾಣಮಗ್ರ್ಯಮ್' ಎಂಬುದು ಬೃಹದಾರಣ್ಯಕದ ವಾಕ್ಯಶೇಷ. 'ಇತಿ ಶ್ರುತೇಃ' ಎಂದರೆ ತಲವಕಾರಶ್ರುತಿ ಪ್ರಮಾಣವಾಗಿರುವುದರಿಂದ ಎಂದರ್ಥ.

## ಬ್ರಹ್ಮಮೀಮಾಂಸಾಶಾಸ್ತ್ರ

## ಕಾಣ್ವಶಾಖೆಯಲ್ಲಿಯೂ ಕೂಡ ಭಗವಂತನ ಐದುರೂಪಗಳೇ ಹೇಳಲ್ಪಟ್ಟಿವೆ

**सूत्रम् – ।। ज्योतिषैकेषामसत्यन्ने ।। ३ ।।**

ಸೂತ್ರಾರ್ಥ - ಕಾಣ್ವಶಾಖೆಯ ವಾಕ್ಯದಲ್ಲಿ ಪ್ರಾಣಾದಿ ನಾಲ್ಕು ರೂಪಗಳನ್ನಷ್ಟೇ ಹೇಳಿ, 'ಅನ್ನ' ಎಂಬ ರೂಪವನ್ನು ಹೇಳದಿದ್ದರೂ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂಬುದಾಗಿ ಹಿಂದೆ ಹೇಳಲ್ಪಟ್ಟಿರುವ ಜ್ಯೋತಿರೂಪವನ್ನು ಪರಿಗಣಿಸಿದಾಗ, ಐದು ರೂಪಗಳಾಗುತ್ತವೆ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ನ ಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು ॥

ಪರಿಪೂರ್ಣಚಂದ್ರಿಕಾ

## ಸೂತ್ರದೀಪಿಕಾ

**सूत्रदीपिका — एकेषां कण्वादीनां शाखायाम् । अन्ने अन्नाख्यभगवद्रूपे । असति अनुक्तेऽपि । ज्योतिषा तदाख्यभगवद्रूपेण पञ्चत्वसङ्ख्यापूर्तिर्ज्ञातव्येत्यर्थः ।।३।।**

ಅರ್ಥ -- ಏಕೇಷಾಂ = ಕಾಣ್ವಾದಿ ಶಾಖೆಗಳಲ್ಲಿ ಅನ್ನೇ = ಅನ್ನ ಎಂಬ ಭಗವದ್ರೂಪವು, ಅಸತಿ = ಹೇಳದಿದ್ದರೂ ಕೂಡ, ಜ್ಯೋತಿಷಾ = ಹಿಂದಿನ ಮಂತ್ರದಲ್ಲಿರುವ ಹೇಳಿರುವ ಜ್ಯೋತಿಯನ್ನು ಅನ್ನದ ಸ್ಥಾನದಲ್ಲಿ ಸೇರಿಸಿಕೊಳ್ಳಬೇಕು. ಹೀಗೆ ಪಂಚತ್ವ ಸಂಖ್ಯೆಯ ಪೂರ್ತಿಯನ್ನು ತಿಳಿಯಬೇಕು.

॥ ಸೂತ್ರದೀಪಿಕೆಯಲ್ಲಿ ನ ಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು ॥

## ಬ್ರಹ್ಮಸೂತ್ರಭಾಷ್ಯ

**भाष्यम् — 'तद् देवा ज्योतिषां ज्योतिः' (बृ. ६-४-१६) इत्यनेन काण्वानां पञ्चकम् ।।३।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये न सङ्ख्योपसङ्ग्रहाधिकरणम् ।। ३ ।।**

ಅನುವಾದ - ಕಾಣ್ವಶಾಖೆಯ ವಾಕ್ಯಶೇಷದಲ್ಲಿ ನಾಲ್ಕೇ ರೂಪಗಳನ್ನು ಹೇಳಿದ್ದಾರೆ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಪ್ರಕಾಶಗಳಿಗೆ ಅಂತಃಪ್ರಕಾಶಕನಾಗಿರುವನು ಎಂದು ಹಿಂದೆ ಹೇಳಿದೆ. ಅದನ್ನು ಪರಿಗಣಿಸಿದಾಗ ಕಾಣ್ವಶಾಖೆಯಲ್ಲಿಯೂ ಐದು ರೂಪಗಳು ಹೇಳಿದಂತಾಗುತ್ತದೆ.

ಪ್ರತಿಪದಾರ್ಥ -- ಮಾಧ್ಯಂದಿನ ಶಾಖೆಯಲ್ಲಿ ಹೇಳಲ್ಪಟ್ಟ ಪ್ರಾಣಾದಿಗಳು ವಿಷ್ಣುವೇ ಆಗಿದ್ದರೂ, ಪಂಚ ಜನ ಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗಲಾರ. ಏಕೆಂದರೆ ಕಾಣ್ವಶಾಖೆಯ ವಾಕ್ಯಶೇಷದಲ್ಲಿ ನಾಲ್ಕೇ ರೂಪಗಳನ್ನು ಹೇಳಲಾಗಿದೆ. ಈ ಆಶಂಕೆಯನ್ನು ಪರಿಹರಿಸಲು ಸೂತ್ರವನ್ನು ಪಠಿಸಿ, ವ್ಯಾಖ್ಯಾನ ಮಾಡುತ್ತಿದ್ದಾರೆ –

ತದ್ದೇವಾ ಜ್ಯೋತಿಷಾಂ ಜ್ಯೋತಿಃ = ಪ್ರಕಾಶಕಗಳಿಗೆ ಪ್ರಕಾಶಶಕ್ತಿ ಕೊಡುವವನು, ಇತ್ಯನೇನ = ಹೀಗೆ ಹೇಳಿದ್ದರಿಂದ, ಕಾಣ್ವಾನಾಂ = ಕಾಣ್ವಶಾಖೆಯಲ್ಲಿಯೂ, ಪಂಚಕಂ = ಐದು ರೂಪಗಳು ಪ್ರತಿಪಾದ್ಯವಾಗುತ್ತವೆ. ಆದ್ದರಿಂದ ಎರಡೂ ಶಾಖೆಗಳಿಗೆ ಪರಸ್ಪರ ವಿರೋಧ ಬರುವುದಿಲ್ಲ.

ಇಲ್ಲಿಗೆ ನ ಸಂಖ್ಯೋಪಸಂಗ್ರಹಾಧಿಕರಣದಲ್ಲಿ ಭಾಷ್ಯ ಹಾಗೂ ಭಾಷ್ಯಾನುವಾದ ಮುಗಿಯಿತು.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

## ತತ್ವಪ್ರಕಾಶಿಕಾ

**ननु वाक्यशेषोक्तानां प्राणादीनां विष्णुत्वेऽपि, न पञ्च जनानां विष्णुत्वम्, वाक्यशेषे चतुर्णामेवोक्तत्वेन, तस्य पूर्ववाक्यतो भिन्नार्थत्वात् इत्याशङ्कां परिहरत्सूत्रं पठित्वा व्याचष्टे – ज्योतिषेति ।।**

ಹಿಂದಿನ ಸೂತ್ರದಲ್ಲಿ ಉದಾಹರಿಸಿದ 'ಯಸ್ಮಿನ್ ಪಂಚ' ಎಂಬ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಪ್ರಾಣಾದಿಗಳು ವಿಷ್ಣುವೇ ಆಗಿದ್ದಾನೆಂದು ನಿಶ್ಚಯವಾದರೂ ಕೂಡ ಪಂಚ ಜನ ಶಬ್ದದಿಂದ ವಿಷ್ಣುವು ಪ್ರತಿಪಾದ್ಯನಾಗಲಾರನು, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು ಈ ನಾಲ್ಕು ಪದಾರ್ಥಗಳು ಮಾತ್ರ ಹೇಳಲ್ಪಟ್ಟಿವೆ. ಆದ್ದರಿಂದ ಈ ವಾಕ್ಯವು 'ಯಸ್ಮಿನ್ ಪಂಚ' ಎಂಬ ಹಿಂದಿನ ವಾಕ್ಯದಿಂದ ಭಿನ್ನಾರ್ಥಕವಾಗಿದೆ. ಈ ಆಕ್ಷೇಪವನ್ನು ಪರಿಹರಿಸಲು ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಿದ್ದಾರೆ 'ಜ್ಯೋತಿಷಾ' ಇತ್ಯಾದಿಯಾಗಿ.

**तत्वप्रकाशिका – न वाक्यशेषे चतुर्णामेवोक्तिः । माध्यन्दिनशाखायां पञ्चजनानामप्युक्तेः । काण्वानां शाखायामन्नस्यान्नत्वप्रदातृरूपे तत्रैवाऽकथिते सत्यपि 'यस्मादर्वाक् संवत्सरोऽहोभिः परिवर्तते, तद्देवा ज्योतिषां ज्योतिरायुर्होउपासतेऽमृतम्' इति किञ्चिद्दूरोक्तेन ज्योतिषां ज्योतिषा पञ्चत्वसम्भवात् ।**

ವಾಕ್ಯಶೇಷದಲ್ಲಿ ಕೇವಲ ನಾಲ್ಕು ಭಗವದ್ರೂಪಗಳಷ್ಟೇ ಉಕ್ತವಾಗಿವೆ ಎಂದು ಹೇಳಬಾರದು. ಏಕೆಂದರೆ ಮಾಧ್ಯಂದಿನ ಶಾಖೆಯಲ್ಲಿ ಐದು ಬಗೆಯ ಭಗವದ್ರೂಪಗಳು ಹೇಳಲ್ಪಟ್ಟಿವೆ. ಕಾಣ್ವಶಾಖೆಯಲ್ಲಿ ಅನ್ನಕ್ಕೆ ಅನ್ನತ್ವವನ್ನು ಕೊಡುವಂತಹ ಭಗವದ್ರೂಪವು ಹೇಳಲ್ಪಟ್ಟಿಲ್ಲ. ಆದರೂ 'ಯಸ್ಮಾದರ್ವಾಕ್ ಸಂವತ್ಸರೋऽಹೋಭಿಃ ಪರಿವರ್ತತೇ ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇऽಮೃತಮ್' ದಿವಸಗಳಿಂದ ಕೂಡಿರುವಂತಹ ಸಂವತ್ಸರವು ಯಾವ ಆದಿತ್ಯನಿಂದ ಪರಿವರ್ತಿತವಾಗುತ್ತದೋ, ಇಂತಹ ಆದಿತ್ಯಾದಿ ಜ್ಯೋತಿಗಳಿಗೂ ಜ್ಯೋತಿಷ್ಟ್ವವನ್ನು ಕೊಡುವಂತಹ ಆಯುಸ್ಸನ್ನು ನೀಡುವ ನಿತ್ಯಮುಕ್ತನಾದ ಪರಮಾತ್ಮನನ್ನು ದೇವತೆಗಳು ಸದಾ ಉಪಾಸನೆ ಮಾಡುತ್ತಾರೆ ಎಂಬ ವಾಕ್ಯವನ್ನು ಸ್ವಲ್ಪ ದೂರದಲ್ಲಿ ಹೇಳಲಾಗಿದೆ. ಜ್ಯೋತಿಗಳಿಗೆ ಜ್ಯೋತಿಷ್ಟ್ವವನ್ನು ನೀಡುವಂತಹ ಈ ಭಗವದ್ರೂಪವನ್ನು ವಿವಕ್ಷಿಸಿದಾಗ ಐದು ರೂಪಗಳನ್ನು ಹೇಳಿದಂತಾಗುತ್ತದೆ.

**तत्वप्रकाशिका – अतो वाक्यशेषस्य भिन्नार्थत्वाभावात् तद्बलेन युक्तं पञ्चजनानां विष्णुत्वमिति भावः।**

ಪರಿಪೂರ್ಣಚಂದ್ರಿಕಾ

ಆದ್ದರಿಂದ ಭಿನ್ನಾರ್ಥಕವಾಗದ ಕಾರಣ ಈ ವಾಕ್ಯಶೇಷದ ಬಲದಿಂದ ಪಂಚ ಜನ ಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯಬೇಕು.

**तत्वप्रकाशिका – अत्र ज्योतिरन्नशब्दयोरेकार्थत्वं पृथक् पञ्चकं वेत्युपपन्नम्। अतो बहुत्वसंख्याविशिष्टवाचिशब्दवाच्यो हरिरेवेति सिद्धम् ।। ३ ।।**

**।। इति श्रीमज्जयतीर्थभिक्षुविरचितायां तत्वप्रकाशिकायाम्**

**न सङ्ख्योपसङ्ग्राधिकरणम् ।।**

ಮಾಧ್ಯಂದಿನ ಶಾಖೆಯಲ್ಲಿ ಹೇಳಿದ 'ಅನ್ನ' ಮತ್ತು ಕಾಣ್ವಶಾಖೆಯಲ್ಲಿ ಹೇಳಿದ 'ಜ್ಯೋತಿ' ಇವೆರಡೂ ಏಕರೂಪವೇ ಆಗಿರುತ್ತವೆಂದು ತಿಳಿಯಬೇಕು. ಕಾಣ್ವಶಾಖೆಯ ಪ್ರಕಾರ 'ಜ್ಯೋತಿಸ್' ಎಂಬ ಭಗವದ್ರೂಪವನ್ನು ಸೇರಿಸಿಕೊಳ್ಳಬೇಕು. ಮಾಧ್ಯಂದಿನ ಶಾಖೆಯ ಪ್ರಕಾರ 'ಅನ್ನ' ಎಂಬ ಭಗವದ್ರೂಪವನ್ನು ಸೇರಿಸಿಕೊಳ್ಳಬೇಕು. ಆವಾಗ ಪಂಚರೂಪತ್ವವು ಯುಕ್ತವಾಗುತ್ತದೆ.

ಹೀಗೆ ಸಾಧಕ ಪ್ರಮಾಣವಿರುವುದರಿಂದ ಬಾಧಕವಿಲ್ಲದ್ದರಿಂದ ಬಹುತ್ವಸಂಖ್ಯಾವಿಶಿಷ್ಟವಾದ ಪದಾರ್ಥವನ್ನು ಹೇಳುವಂತಹ ಪಂಚ ಜನಾದಿ ಶಬ್ದಗಳಿಂದ ಶ್ರೀಹರಿಯೇ ಪ್ರತಿಪಾದ್ಯನಾಗಿದ್ದಾನೆಂದು ಸಿದ್ಧವಾಯಿತು.

ಇಲ್ಲಿಗೆ ತತ್ವಪ್ರಕಾಶಿಕೆಯ ಕನ್ನಡಾನುವಾದದಲ್ಲಿ ನ ಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು.

## ಭಾವದೀಪ

चतुर्णामेवेति ।। भाष्ये वाक्यशेषे पञ्चानामप्युक्तिर्माध्यन्दिनशाखाशयेन । नतु वाजसनेयवाक्यशेषाभिप्रायेणेति भावः ।

ಟೀಕೆಯಲ್ಲಿ 'ಚತುರ್ಣಾಮೇವ' ಎಂಬ ಪದದಿಂದ ವಾಕ್ಯಶೇಷದಲ್ಲಿ ನಾಲ್ಕು ಭಗವದ್‌ರೂಪಗಳು ಉಕ್ತವಾಗಿವೆ ಎಂದು ಹೇಳಿರುತ್ತಾರೆ. ಆದರೆ ಭಾಷ್ಯದಲ್ಲಿ ಐದು ಭಗವದ್‌ರೂಪಗಳನ್ನು ಉಲ್ಲೇಖಿಸಿದ್ದಾರೆ. ಇದು ಹೇಗೆ ? ಎಂಬ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಮಾಧ್ಯಂದಿನ ಶಾಖೆಯಲ್ಲಿ ಭಗವಂತನ ಐದು ರೂಪಗಳನ್ನು ಹೇಳಲಾಗಿದೆ. ಅದನ್ನು ವಿವಕ್ಷಿಸಿ ಭಾಷ್ಯದಲ್ಲಿ ಐದು ರೂಪಗಳನ್ನು ಉಲ್ಲೇಖಿಸಿದ್ದಾರೆ. ಆದರೆ ವಾಜಸನೇಯ ಶ್ರುತಿಯ ವಾಕ್ಯಶೇಷದಲ್ಲಿ ನಾಲ್ಕು ಭಗವದ್ ರೂಪಗಳನ್ನು ಉಲ್ಲೇಖಿಸಲಾಗಿದೆ. ಈ ವಿವಕ್ಷೆಯಿಂದ ಭಾಷ್ಯದ ಮಾತು ಹೊರಟಿಲ್ಲ ಎಂದು ತಿಳಿಯಬೇಕು.

**भावदीपः** – पूर्ववाक्यतः यस्मिन् पञ्च पञ्चजना इति वाक्यतः । ननु अन्नेन क्वचित् पञ्चकं क्वचिज्ज्योतिषा सह । तथाच विरोध इत्यत आह – अत्रेति ।। एकार्थत्वम् एकरूपवाचित्वमित्यर्थः ।।

'ಪೂರ್ವವಾಕ್ಯತಃ' ಎಂಬ ಪದಕ್ಕೆ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಹಿಂದಿನ ವಾಕ್ಯದಿಂದ ಎಂದರ್ಥ.

ಮಾಧ್ಯಂದಿನ ಶಾಖೆಯಲ್ಲಿ ಅನ್ನವೆಂಬ ಐದನೆಯ ರೂಪವನ್ನು ಹೇಳಲಾಗಿದೆ. ಕಾಣ್ವಶಾಖೆಯಲ್ಲಿ 'ಜ್ಯೋತಿ' ಎಂಬ ಐದನೆಯ ರೂಪವನ್ನು ಹೇಳಲಾಗಿದೆ. ಆದ್ದರಿಂದ ವಿರೋಧ ಬರುತ್ತದಲ್ಲವೆ ? ಎಂಬ ಪ್ರಶ್ನೆಗೆ 'ಅತ್ರ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. 'ಏಕಾರ್ಥತ್ವಮ್' ಎಂಬ ಪದಕ್ಕೆ ಒಂದೇ ರೂಪವನ್ನು ಪ್ರತಿಪಾದನೆ ಮಾಡುತ್ತದೆ ಎಂದರ್ಥ.

**भावदीपः – पृथगिति ।।** रूपभेदेऽपि अधिकारिभेदात् अन्नाख्यरूपेण सह भगवद्रूपपञ्चकं माध्यन्दिनादिभिरुपास्यम् । ज्योतिराख्यरूपेण सह रूपपञ्चकं काण्वादिभिरुपास्यमिति वर्गद्वयमविरुद्धमित्यर्थः ।।

ಟೀಕೆಯಲ್ಲಿ 'ಪೃಥಕ್' ಎಂಬ ಪದದ ಅರ್ಥ ಹೀಗಿದೆ - 'ಅನ್ನ' ಹಾಗೂ 'ಜ್ಯೋತಿ' ಎಂಬ ರೂಪಗಳಿಗೆ ಭೇದವಿದ್ದರೂ ಅಧಿಕಾರಿಗಳಲ್ಲಿ ಭೇದವಿರುವುದರಿಂದ ಅನ್ನವೆಂಬ ರೂಪದ ಜೊತೆ ಐದು ಭಗವದ್ ರೂಪಗಳನ್ನು ಮಾಧ್ಯಂದಿನ ಶಾಖೆಗಳು ಉಪಾಸನೆ ಮಾಡಬೇಕು. 'ಜ್ಯೋತಿ' ಎಂಬ ಭಗವದ್ ರೂಪದ ಜೊತೆಗೆ ಐದು ರೂಪಗಳ ಉಪಾಸನೆಯನ್ನು ಕಾಣ್ವಶಾಖಿಗಳು ಮಾಡಬೇಕು. ಹೀಗೆ ಎರಡು ಬಗೆಯ ಉಪಾಸಕರ ವಿವಕ್ಷೆಯಿಂದ ವಿರೋಧವನ್ನು ಪರಿಹರಿಸಬೇಕು.

**भावदीपः – अत इति ।।** साधकभावात् बाधकाभावाच्च इत्यर्थः ।। **हरिरेवेति ।।** परममुख्यवृत्त्येति योज्यम् । मुख्यवृत्त्याऽन्यदपि वाच्यम् । कल्पनोपदेशादिति न्यायादिति ध्येयम् ।।३।।

।। इति श्रीराघवेन्द्रयतिकृते भावदीपे न सङ्ख्योपसङ्ग्रहाधिकरणम् ।।

'ಅತಃ' ಎಂಬ ಪದಕ್ಕೆ ಸಾಧಕ ಪ್ರಮಾಣವಿರುವುದರಿಂದ ಬಾಧಕಪ್ರಮಾಣವಿಲ್ಲದಿರುವುದರಿಂದ ಎಂದರ್ಥ. 'ಹರಿರೇವ' ಎಂಬಲ್ಲಿ 'ಪರಮಮುಖ್ಯವೃತ್ತ್ಯಾ' ಎಂಬುದನ್ನು ಯೋಜನೆ ಮಾಡಿಕೊಳ್ಳಬೇಕು. ಆವಾಗ ಪಂಚ ಜನಾದಿ ಶಬ್ದಗಳಿಂದ ಶ್ರೀಹರಿಯೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆಂದು ಸಿದ್ಧವಾಗುತ್ತದೆ. ಮುಖ್ಯವೃತ್ತಿಯಿಂದ ಉಳಿದ ಪದಾರ್ಥಗಳೂ ಕೂಡ ಪ್ರತಿಪಾದ್ಯವಾಗುತ್ತವೆಂಬುದನ್ನು 'ಕಲ್ಪನೋಪದೇಶಾತ್' ಎಂಬ ಸೂತ್ರ ನ್ಯಾಯದಿಂದ ಸ್ಪಷ್ಟಮಾಡಿಕೊಳ್ಳಬೇಕು.

ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ
ನ ಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು.

## ನಸಂಖ್ಯೋಪಸಂಗ್ರಹಾಧಿಕರಣ
## (೧-೪-೩)

# ಭಾಗ - ೨

## ತಾತ್ಪರ್ಯಚಂದ್ರಿಕಾ, ಪ್ರಕಾಶ,

ಪ್ರತಿಯೊಂದು ವಾಕ್ಯಗಳ ವಿಶೇಷ ವಿವರಣೆಯೊಂದಿಗೆ

ಸರಳ ಅನುವಾದ

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತರಾಮ್ ॥
॥ ಶ್ರೀಮಧ್ವರಾಜೋ ವಿಜಯತೇತರಾಮ್ ॥
॥ ಶ್ರೀಗುರುಭ್ಯೋ ನಮಃ ॥

ಶ್ರೀಬ್ರಹ್ಮಣ್ಯತೀರ್ಥಶ್ರೀಪಾದಶಿಷ್ಯ ಶ್ರೀ ವ್ಯಾಸತೀರ್ಥವಿರಚಿತಾ

# ತಾತ್ಪರ್ಯಚಂದ್ರಿಕಾ

## अथ न संख्योपसङ्ग्रहाधिकरणम्

### ಪ್ರಸಿದ್ಧ ಪ್ರವೃತ್ತಿನಿಮಿತ್ತವುಳ್ಳ ಶಬ್ದಗಳ ಸಮನ್ವಯಕ್ಕಾಗಿ ನ ಸಂಖ್ಯೋಪಸಂಗ್ರಹಾಧಿಕರಣ

**॥ न संख्योपसङ्ग्रहादपि नानाभावादतिरेकाच्च ॥ पूर्वत्र प्रसिद्धस्य ज्योतिरादि शब्दनिमित्तस्यासत्त्वेऽपि ब्रह्मणि योगलभ्यमप्रसिद्धं निमित्तमस्तीत्युक्तम् । अत्र तु पञ्चादिशब्दानां प्रसिद्धमेव निमित्तं ब्रह्मण्यस्तीत्युच्यत इत्यवान्तरसङ्गतिः ।**

ಅನುವಾದ - 'ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ' ಎಂಬ ಸೂತ್ರದಿಂದ ಅಧಿಕರಣವು ಪ್ರಾರಂಭವಾಗುತ್ತಿದೆ. ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಮಹಾಮಲ್ಲಭಂಗನ್ಯಾಯದಿಂದ ಅವಾಂತರಸಂಗತಿಯನ್ನು ತಿಳಿಯಬೇಕು - ಏಕೆಂದರೆ ಜ್ಯೋತಿರಾದಿಶಬ್ದಗಳ ಪ್ರವೃತ್ತಿನಿಮಿತ್ತವು ಪ್ರಸಿದ್ಧವೇ ಆಗಿರುತ್ತದೆ. ಇದು ಬ್ರಹ್ಮನಲ್ಲಿ ಇರುವುದಿಲ್ಲ. ಆದರೆ ಯೋಗಾರ್ಥದಿಂದ ಲಭ್ಯವಾದ ಅಪ್ರಸಿದ್ಧವಾದ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಬರುವುದರಿಂದ ಜ್ಯೋತಿರಾದಿಶಬ್ದಗಳಿಂದ ಬ್ರಹ್ಮ ಪ್ರತಿಪಾದ್ಯನಾಗುತ್ತಾನೆಂದು ಹಿಂದಿನ ಜ್ಯೋತಿರುಪಕ್ರಮಾಧಿಕರಣದಲ್ಲಿ ಸಮರ್ಥಿಸಲಾಯಿತು. ಆದರೆ ಈ ಅಧಿಕರಣದಲ್ಲಿ ಪಂಚ ಜನ, ಆಕಾಶ ಮೊದಲಾದ ಶಬ್ದಗಳ ಪ್ರಸಿದ್ಧವಾದ ಯಾವ ಪ್ರವೃತ್ತಿನಿಮಿತ್ತವಿದೆಯೋ, ಅದೇ ಬ್ರಹ್ಮನಲ್ಲಿ ಬರುತ್ತದೆಂದು ಸಮರ್ಥಿಸಲಾಗುತ್ತಿದೆ. ಅಪ್ರಸಿದ್ಧವಾದ ಪ್ರವೃತ್ತಿನಿಮಿತ್ತವನ್ನು ಬ್ರಹ್ಮನಲ್ಲಿ ತಿಳಿಯುವುದು ಕಷ್ಟವಾಗಿದೆ. ಪ್ರಸಿದ್ಧವಾದ ಪ್ರವೃತ್ತಿನಿಮಿತ್ತವನ್ನು ಬ್ರಹ್ಮನಲ್ಲಿ ತಿಳಿಯುವುದು ಸುಲಭವಾಗಿದೆ. ಮೊದಲು ಕ್ಲಿಷ್ಟಕರವಾದ ಶಬ್ದದ ಸಮನ್ವಯವನ್ನು ಹಿಂದಿನ ಅಧಿಕರಣದಲ್ಲಿ ಮಾಡಿ, ಅನಂತರ ಸುಲಭವಾದ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡುತ್ತಿರುವುದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಅವಾಂತರ ಸಂಗತಿಯಿರುತ್ತದೆ.

**अत्र पञ्च जनादिशब्दाः किमन्यपराः किं वा ब्रह्मपरा इति चिन्ता ।**

ಈ ಅಧಿಕರಣದ ಸಂಶಯಪರಂಪರೆ ಹೀಗಿದೆ - 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿರುವ ಪಂಚ ಜನ, ಆಕಾಶ ಮೊದಲಾದ ಶಬ್ದಗಳು ಬ್ರಹ್ಮನಿಗಿಂತ ಭಿನ್ನವಾದ ಪ್ರಾಣಾದಿಗಳನ್ನು ಪ್ರತಿಪಾದನೆ ಮಾಡುತ್ತಿವೆಯೋ, ಅಥವಾ ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿವೆಯೋ? ಎಂಬುದು ಪ್ರಧಾನ ಸಂಶಯ.

**तदर्थं पञ्चत्वसंख्याधाराधेयत्वादेर्भिन्ननिष्ठत्वमिति सामान्यन्यायस्यापवादकं नास्त्युतास्तीति ।**

ಇದರ ಪರಿಹಾರಕ್ಕಾಗಿ ಪಂಚತ್ವಸಂಖ್ಯಾ ಹಾಗೂ ಆಧಾರಾಧೇಯತ್ವ ಮೊದಲಾದವುಗಳು ಬೇರೆ ಬೇರೆ ವ್ಯಕ್ತಿಗಳಲ್ಲೇ ಇರುತ್ತದೆಂಬ ಸಾಮಾನ್ಯವ್ಯಾಪ್ತಿಗೆ ಅಪವಾದಪ್ರಮಾಣವಿರುವುದಿಲ್ಲವೋ, ಅಥವಾ ಇರುತ್ತದೋ ? ಎಂಬುದು ಅವಾಂತರ ಸಂಶಯ.

**तदर्थं "प्राणस्य प्राणम्" इत्यादिवाक्यशेषस्थषष्ठीनिर्दिष्टाः प्राणादयः पञ्चजनशब्देनोच्यन्ते किं वा द्वितीयानिर्दिष्टा इति ।**

ಅದಕ್ಕಾಗಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ವಾಕ್ಯಶೇಷದಲ್ಲಿರುವ ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳೇ ಪಂಚಜನಶಬ್ದದಿಂದ ಪ್ರತಿಪಾದ್ಯರಾಗಿದ್ದಾರೋ, ಅಥವಾ 'ಪ್ರಾಣಮ್' ಎಂಬ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ಬ್ರಹ್ಮನು ಪಂಚಜನಾದಿ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೋ ? ಎಂಬ ಸಂಶಯವು ಪರಿಹಾರವಾಗಬೇಕು.

# ಶ್ರೀರಾಘವೇಂದ್ರತೀರ್ಥವಿರಚಿತ
# ಪ್ರಕಾಶ

**प्रकाशः – न संख्योपसङ्ग्रहादपि नानाभावादतिरेकाच ।। प्रसिद्धस्येति ।। कर्मस्वरूपादिरूपस्येत्यर्थः । अप्रसिद्धं जातमित्यादिनोक्तं जगद्धेतुत्वादिरूपमित्यर्थः।।**

ವಿವರಣೆ - 'ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ' ಎಂಬುದಾಗಿ ಅಧಿಕರಣವು ಪ್ರಾರಂಭವಾಗುತ್ತಿದೆ. 'ಪ್ರಸಿದ್ಧಸ್ಯ' ಎಂದರೆ ಕರ್ಮಸ್ವರೂಪಾದಿಗಳೇ ಪ್ರವೃತ್ತಿನಿಮಿತ್ತವಾಗಿವುಳ್ಳ ಜ್ಯೋತಿರಾದಿಶಬ್ದಗಳನ್ನು ಎಂದರ್ಥ. 'ಅಪ್ರಸಿದ್ಧಂ' ಎಂದರೆ 'ಜಾತಮ್' 'ಓತಿಃ' ಇತ್ಯಾದಿ ಪದಗಳಿಂದ ಹೇಳಲ್ಪಟ್ಟ ಜಗದ್ಧೇತುತ್ವಾದಿರೂಪವಾದ ಅಪ್ರಸಿದ್ಧವಾದ ಅರ್ಥವನ್ನು ಎಂದರ್ಥ.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः** – **प्रसिद्धमेवेति** ।। **बहुत्वादिरूपम्** ।। **सङ्गतिरिति** ।। **महामल्लभङ्गन्यायेनेयं सङ्गतिरित्यर्थः** ।

'ಪ್ರಸಿದ್ಧಮೇವ' ಎಂದರೆ ಬಹುತ್ವಾದಿರೂಪವಾದ ಪ್ರಸಿದ್ಧವಾದ ನಿಮಿತ್ತವನ್ನು ಎಂದರ್ಥ. 'ಸಂಗತಿಃ' ಎಂದರೆ ಹಿಂದಿನ ಅಧಿಕರಣದಲ್ಲಿ ಪ್ರಸಕ್ತವಾದ ಜ್ಯೋತಿರಾದಿಶಬ್ದಗಳ ಸಮನ್ವಯವು ಅಪ್ರಸಿದ್ಧವಾದ್ದರಿಂದ ಕಠಿಣವಾಗಿದ್ದವು. ಈ ಅಧಿಕರಣದಲ್ಲಿ ಪ್ರಸಿದ್ಧವಾದ ಶಬ್ದಗಳನ್ನೇ ಸಮನ್ವಯ ಮಾಡುತ್ತಿರುವುದರಿಂದ ಸುಲಭವಾಗಿದೆ. ಆದ್ದರಿಂದ ಮಹಾಮಲ್ಲಭಂಗನ್ಯಾಯೇನ ಹಿಂದಿನ ಅಧಿಕರಣದಿಂದ ಈ ಅಧಿಕರಣಕ್ಕೆ ಸಂಗತಿಯಿರುತ್ತದೆಂದು ತಿಳಿಯಬೇಕು.

**प्रकाशः – ननु नात्र पञ्चपदप्रवृत्तिनिमित्तबहुत्वसंख्या प्रतिपाद्यते । गुहामित्यत्र तस्य सिद्धत्वात् । यद्वक्ष्यति ''साधितं च गुहामित्यत्र'' इत्यादि । किन्तु स्वस्यैव स्वाश्रयत्वम् । तथा चास्तु नाम ज्योतिरादिशब्दानां कथञ्चिद्ब्रह्मणि वृत्तिः । नतु पञ्च जनादिशब्दानाम् । आधाराधेयभावविरोधादित्यादिरूपैव सा वाच्या । नच सूत्रे ''संख्योपसङ्ग्रहात्'' इति विरुध्यत इति वाच्यम् । अभ्युच्चययुक्तित्वेन तत्सम्भवस्य गुहानये प्रागेवोक्तत्वादिति चेत् ।**

ಪ್ರಶ್ನೆ - ಪಂಚಪದ ಪ್ರವೃತ್ತಿನಿಮಿತ್ತವೆನಿಸಿದ ಬಹುತ್ವಸಂಖ್ಯೆಯನ್ನು ಈ ಅಧಿಕರಣದಲ್ಲಿ ಸಮರ್ಥಿಸುವುದು ಸರಿಯಲ್ಲ. ಏಕೆಂದರೆ ಹಿಂದಿನ ಗುಹಾಧಿಕರಣದಲ್ಲಿಯೇ ಇಂತಹ ಅನೇಕತ್ವ ಸಂಖ್ಯೆಗಳ ಸಮನ್ವಯವು ಸಿದ್ಧವಾಗಿದೆ. ಮುಂದೆಯೂ ಕೂಡ 'ಸಾಧಿತಂ ಚ ಗುಹಾಮಿತ್ಯತ್ರ' ಇತ್ಯಾದಿಯಾಗಿ ಹೇಳುತ್ತಾರೆ. ಆದ್ದರಿಂದ 'ಸ್ವಸ್ಯೈವ ಸ್ವಾಶ್ರಯತ್ವಮ್' ಎಂಬ ಯುಕ್ತಿಯೂ ಕೂಡುವುದಿಲ್ಲವೆಂಬುದೇ ಪೂರ್ವಪಕ್ಷದ ಮೂಲಯುಕ್ತಿಯೆಂದು ಪರಿಗಣಿಸಬೇಕು. 'ಸ್ವಸ್ಯೈವ ಸ್ವಾಶ್ರಯತ್ವಮ್' ಎಂಬುದು ಸಿದ್ಧಾಂತ ಯುಕ್ತಿಯೆಂದು ಹೇಳಬೇಕು. ಆವಾಗ ಜ್ಯೋತಿರಾದಿಶಬ್ದಗಳು ಬ್ರಹ್ಮನಲ್ಲಿ ಕಥಂಚಿತ್ ಉಪಪನ್ನವಾಗಬಹುದು. ಹೊರತು, ಪಂಚ ಜನಾದಿ ಶಬ್ದಗಳು ಕೂಡುವುದಿಲ್ಲ. ಏಕೆಂದರೆ ಆಧಾರಾಧೇಯಭಾವದ ವಿರೋಧ ಬರುತ್ತದೆ ಎಂದೇ ಪೂರ್ವಪಕ್ಷವನ್ನು ಮಾಡಬೇಕು.

ಸ್ವಸ್ಯೈವ ಸ್ವಾಶ್ರಯತ್ವವು ಬರುವುದಿಲ್ಲವೆಂದು ಹೇಳಿದರೆ 'ಸಂಖ್ಯೋಪಸಂಗ್ರಹಾತ್' ಎಂಬ ಸೂತ್ರದ ವಿರೋಧ ಬರುತ್ತದೆ. ಏಕೆಂದರೆ ಪರಮಾತ್ಮನಿಗೆ ಬಹುರೂಪಭವನವು ಇರುವುದರಿಂದ ತನಗೆ ತಾನೇ ಆಶ್ರಯನಾಗುತ್ತಾನೆಂದು 'ಸಂಖ್ಯೋಪಸಂಗ್ರಹಾತ್' ಎಂಬ ಸೂತ್ರದಲ್ಲಿ ಸಮರ್ಥಿಸಲಾಗಿದೆ. ಹೀಗಿರುವಾಗ ಸ್ವಸ್ಯೈವ ಸ್ವಾಶ್ರಯತ್ವಾಭಾವವನ್ನು ಪೂರ್ವಪಕ್ಷ ಯುಕ್ತಿಯನ್ನಾಗಿ ಹೇಗೆ ವಿವಕ್ಷಿಸುತ್ತೀರಿ? ಎಂದರೆ ಪ್ರಕೃತ ಈ ಅಧಿಕರಣದಲ್ಲಿ ಆಧಾರಾಧೇಯಭಾವಾನುಪಪತ್ತಿಯೇ ಮುಖ್ಯವಾದ ಪೂರ್ವಪಕ್ಷಯುಕ್ತಿ. 'ಏಕಸ್ಯ ಬಹುತ್ವ ಸಂಖ್ಯಾನುಪಪತ್ತಿ' ಎಂಬುದು ಕೇವಲ ಅಭ್ಯುಚ್ಚಯಯುಕ್ತಿಯಾಗಿದೆ. ಏಕೆಂದರೆ ಇದನ್ನು ಹಿಂದೆ ಗುಹಾಧಿಕರಣದಲ್ಲಿಯೇ ನಿರಾಕರಿಸಿದ್ದಾಗಿದೆ. 'ಏಕಸ್ಯೈವ ಆಧಾರಾಧೇಯಭಾವಾನುಪಪತ್ತಿ' ಎಂಬುದು ಹಿಂದೆ ನಿರಾಕೃತವಾಗಿಲ್ಲವಾದ್ದರಿಂದ ಪೂರ್ವಪಕ್ಷಯುಕ್ತಿಯನ್ನಾಗಿ ಪರಿಗಣಿಸಬಹುದು.

ಪರಿಪೂರ್ಣಚಂದ್ರಿಕಾ

**प्रकाशः** – अस्तुवा तावदेवम्, इयमपि ग्रन्थोक्ता युक्तैव । अनेकत्वं भिन्ननिष्ठमित्यस्येहापवादकं नेति प्राप्ते तत्प्रदर्शनेनेह तस्य स्थापनाभिप्रायेणैवमुक्ति सम्भवात् ।

ಒಬ್ಬನೇ ಆಗಿರುವ ಪರಮಾತ್ಮನಿಗೆ ಅನೇಕತ್ವವು ಬರುತ್ತದೆಂದು ಗುಹಾಧಿಕರಣದಲ್ಲಿ ಸಮರ್ಥಿಸಿದ್ದು ಸತ್ಯ. ಆದರೆ ಒಬ್ಬನಿಗೆ ದ್ವಿತ್ವವಾಗಲೀ, ಅನೇಕತ್ವವಾಗಲೀ ಕೂಡುವುದಿಲ್ಲ ಎಂಬುದು ಸಾಮಾನ್ಯನಿಯಮ. ಈ ನಿಯಮಕ್ಕೆ ಅಪವಾದವಾಗಿ ಗುಹಾಪ್ರವಿಷ್ಟತ್ವ, ಛಾಯಾತಪತ್ವ ಮೊದಲಾದ ಲಿಂಗಗಳು ಅಪವಾದಕವಾಗಿವೆಯೆಂದು ಅಲ್ಲಿ ಸಮರ್ಥಿಸಲಾಯಿತು. ಆದರೆ ಪ್ರಕೃತ ಅಂತಹ ಅಪವಾದಕಗಳೇನೂ ಕಾಣಸುವುದಿಲ್ಲ. ಆದ್ದರಿಂದ ಪಂಚಜನಾದಿಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನೆನ್ನಲಾಗದು. ಪಂಚ ಜನಶಬ್ದದ ಪ್ರವೃತ್ತಿನಿಮಿತ್ತವಾದ ಅನೇಕತ್ವವು ಪರಮಾತ್ಮನಲ್ಲಿ ಬರುತ್ತದೆಂಬ ಸಮರ್ಥನೆಯನ್ನು ಏಕೆ ಮಾಡಬೇಕು?

ಆದ್ದರಿಂದ 'ಏಕಸ್ಯ ಅನೇಕತ್ವಮ್ ನ ಯುಜ್ಯತೇ' ಎಂಬ ವ್ಯಾಪ್ತಿಯನ್ನು ಇಲ್ಲಿ ಆಕ್ಷೇಪ ಮಾಡುತ್ತಿಲ್ಲ. ಈ ಸಾಮಾನ್ಯವ್ಯಾಪ್ತಿಗೆ ಗುಹಾಧಿಕರಣದಲ್ಲಿ ಅಪವಾದಕಪ್ರಮಾಣವನ್ನು ಹೇಳಿದಂತೆ ಇಲ್ಲಿ ಯಾವುದೇ ಅಪವಾದಕ ಪ್ರಮಾಣಗಳು ಇರುವುದಿಲ್ಲ. ಆದ್ದರಿಂದ ಆ ನಿಯಮವನ್ನು ಇಲ್ಲಿ ಯಥಾರ್ಥವಾಗಿಯೇ ವಿವಕ್ಷಿಸಬಹುದಲ್ಲವೇ? ಎಂಬ ಪ್ರಶ್ನೆಯು ಪ್ರಾಪ್ತವಾದರೆ ಆದಕ್ಕೆ ಉತ್ತರವನ್ನು ನೀಡುವುದಕ್ಕಾಗಿ ಗ್ರಂಥಕಾರರು ತೋರಿಸುತ್ತಿರುವ ಸಂಗತಿಯು ಅತ್ಯಂತ ಸಾಧುವೇ ಆಗಿದೆ.

**प्रकाशः** – तत्र कर्मफलभोक्तृत्वमेवोच्यते । इहैवानेकत्वं व्युत्पाद्यत इति पक्षान्तरानुसारेण वैवमुक्तिः । ''समन्वयसूत्र'' इत्यादिटीकातु फलाभिप्रायेति भावः।

ಅಥವಾ ಕರ್ಮಭೋಕ್ತೃತ್ವವೇ ಗುಹಾಧಿಕರಣದ ಪ್ರಧಾನವಾದ ಯುಕ್ತಿ. ಒಬ್ಬನಲ್ಲಿಯೇ ದ್ವಿತ್ವಾನೇಕತ್ವಾದಿಗಳು ಉಪಪನ್ನವಾಗುತ್ತವೆಂಬುದು ಅಭ್ಯುಚ್ಚಯಯುಕ್ತಿ. ಆದ್ದರಿಂದ ಅಲ್ಲಿ ಅಭ್ಯುಚ್ಚಯ ಯುಕ್ತಿಯನ್ನು ಏಕೆ ಸಮರ್ಥನೆ ಮಾಡಿದ್ದಾರೆಂದರೆ ಶಿಷ್ಯರ ಬುದ್ಧಿಸೌಕರ್ಯಕ್ಕೋಸ್ಕರ ಈ ಅಧಿಕರಣದ ಪ್ರಮೇಯವನ್ನು ಮೊದಲೇ ತಿಳಿಸಿದ್ದಾರೆ. ಹೊರತು, ಆ ಅಧಿಕರಣದ ಪ್ರಧಾನವಾದ ಯುಕ್ತಿಯಾಗಿರುವುದಿಲ್ಲ. 'ಋತಂ ಪಿಬಂತೌ' ಎಂಬಲ್ಲಿರುವ 'ಪಿಬತ್' ಎಂಬ ಪ್ರಾತಿಪದಿಕದ ಅರ್ಥ 'ಕರ್ಮಫಲಭೋಕ್ತೃತ್ವ', ಪ್ರತ್ಯಯದ ಅರ್ಥ 'ದ್ವಿತ್ವ' ಇವೆರಡರಲ್ಲಿ ಕರ್ಮಫಲಭೋಕ್ತೃತ್ವವು ಪರಮಾತ್ಮನಲ್ಲಿ ಯುಕ್ತವಾಗುತ್ತದೆಂದು ಸಮರ್ಥನೆ ಮಾಡುವುದೇ ಮುಖ್ಯಉದ್ದೇಶವೆಂದು ತಿಳಿಯಬೇಕು. ಆದ್ದರಿಂದ ಗುಹಾಧಿಕರಣದಿಂದ ಈ ಅಧಿಕರಣಕ್ಕೆ ಗತಾರ್ಥತ್ವವು ಸರ್ವಥಾ ಬರುವುದಿಲ್ಲ.

ಟೀಕೆಯಲ್ಲಿ ಸಮನ್ವಯಸೂತ್ರದಿಂದ ಈ ಅಧಿಕರಣಕ್ಕೆ ಸಂಗತಿಯನ್ನು ತೋರಿಸಿದಂತೆ ಕಾಣಸುತ್ತದೆ. ಆದರೆ ಅದು ಕೇವಲ ಫಲಪರವಾಗಿದೆಯೆಂದು ತಿಳಿಯಬೇಕು.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः** – यद्यपि पञ्चादिशब्दानां पूर्वत्राप्युदाहरणत्वात् पूर्ववदेवाप्रसिद्धनिमित्तेन वृत्तिरस्ति । तथापीह वाक्यविधयैव चिन्त्यत्वात्तत्पक्षे प्रसिद्धमेव निमित्तं व्युत्पाद्यमिति भावः ।

ಪ್ರಶ್ನೆ - ಹಿಂದಿನ ಅಧಿಕರಣದಲ್ಲಿ 'ಸರ್ವ' ಎಂಬ ಉಪಾಧಿಯನ್ನು ಹೇಳಿದ್ದರಿಂದ ಎಲ್ಲಾ ಶಬ್ದಗಳ ಸಮನ್ವಯವು ಸಿದ್ಧವಾಗಿದೆ. ಹಾಗಾಗಿ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿರುವ ಪ್ರತಿಯೊಂದು ಪದಗಳ ಸಮನ್ವಯವೂ ಕೂಡ ಹಿಂದಿನ ಅಧಿಕರಣದಲ್ಲಿಯೇ ಸಿದ್ಧವಾಗಿರುವಾಗ, ಪುನಃ ಈ ಅಧಿಕರಣದಲ್ಲಿ ಅದರ ಸಮನ್ವಯವು ಅನಾವಶ್ಯಕವಲ್ಲವೇ?

ಉತ್ತರ - ಹಿಂದಿನ ಅಧಿಕರಣದಲ್ಲಿ ಪ್ರತಿಯೊಂದು ಪದಗಳ ಸಮನ್ವಯವನ್ನು ಮಾಡಲಾಯಿತು. ಆದರೆ ಈ ಅಧಿಕರಣದಲ್ಲಿ ವಾಕ್ಯದ ಸಮನ್ವಯವನ್ನು ಮಾಡಲಾಗಿದೆ. ಆದ್ದರಿಂದ ಪದಸಮನ್ವಯವೇ ಬೇರೆ, ವಾಕ್ಯಸಮನ್ವಯವೇ ಬೇರೆಯಾಗಿರುವುದರಿಂದ ಗತಾರ್ಥತ್ವವು ಬರುವುದಿಲ್ಲ.

**प्रकाशः** – "तत्पञ्च जनशब्दवाच्यं विषयः" इत्यादिविषयसंशयटीकां व्यनक्ति – अत्रेति ॥

'ತತ್ ಪಂಚ ಜನಶಬ್ದವಾಚ್ಯಂ ವಿಷಯಃ' ಇತ್ಯಾದಿ ವಿಷಯ ಹಾಗೂ ಸಂಶಯವನ್ನು ಸಮರ್ಥಿಸುವ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಅತ್ರ' ಇತ್ಯಾದಿ ಗ್ರಂಥದಿಂದ.

**प्रकाशः** – बृहदारण्यके षष्ठेऽध्याये चतुर्थे शारीरब्राह्मणे श्रूयते "यस्मादर्वाक् संवत्सरोऽहोभिः परिवर्तते । तद्देवा ज्योतिषां ज्योतिरायुर्होपासतेऽमृतम् । यस्मिन्पञ्च पञ्च जना आकाशश्च प्रतिष्ठितः । तमेवं (व) मन्य आत्मानं विद्वान् ब्रह्माऽमृतोऽमृतम् । प्राणस्य प्राणमुत चक्षुषश्चक्षुरुत श्रोत्रस्य श्रोत्रम् मनसोमनो ये विदुस्ते निचिक्युर्ब्रह्म पुराणमग्र्यम्" इत्यादि ।

ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದ ನಾಲ್ಕನೆಯ ಶಾರೀರಬ್ರಾಹ್ಮಣದಲ್ಲಿ ಶ್ರುತವಾದ ವಾಕ್ಯ ಹೀಗಿದೆ - 'ಯಸ್ಮಾತ್ ಅರ್ವಾಕ್ ಸಂವತ್ಸರೋಽಹೋಭಿಃ ಪರಿವರ್ತತೇ । ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್ । ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ । ತಮೇವಂ (ವ) ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ । ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಮ್ ಮನಸೋ ಮನೋ ಯೇ ವಿದುಸ್ತೇ ನಿಚಿಕ್ಯುರ್ಬ್ರಹ್ಮ ಪುರಾಣಮಗ್ರ್ಯಮ್' ಎಂದು.

**प्रकाशः** – तत्रत्यपञ्चशब्दसमभिव्याहृतजनशब्द आकाशशब्दश्चोदाहरणमित्यर्थः । अत्र बहुत्वविशिष्टार्थप्रतिपादकाश्शब्दाश्चिन्त्यन्त इति विषयोपाधिः प्रागेवोक्तः ।

ಈ ವಿಷಯವಾಕ್ಯದಲ್ಲಿರುವ ಪಂಚಶಬ್ದದ ಜೊತೆಗೆ ಸಮಭಿವ್ಯಾಹೃತವಾದ ಜನಶಬ್ದ ಹಾಗೂ ಆಕಾಶಶಬ್ದವೂ ಕೂಡ ಈ ಅಧಿಕರಣಕ್ಕೆ ವಿಷಯವಾಗಿದೆ.

ಬಹುತ್ವವಿಶಿಷ್ಟವಾದ ಅರ್ಥವನ್ನು ಪ್ರತಿಪಾದನೆ ಮಾಡುವ ಶಬ್ದಗಳು ಎಷ್ಟಿವೆಯೋ, ಆ ಎಲ್ಲಾ ಶಬ್ದಗಳ ಸಮನ್ವಯವನ್ನು ಈ ಅಧಿಕರಣದಲ್ಲಿ ಮಾಡಲಾಗಿದೆ. ಆದ್ದರಿಂದ ಬಹುತ್ವವಿಶಿಷ್ಟಾರ್ಥತ್ವಪ್ರತಿಪಾದಕತ್ವವು ಅಧಿಕರಣದ ಉಪಾಧಿಯೆಂದು ಹಿಂದೆಯೇ ಹೇಳಿದ್ದಾಗಿದೆ.

**प्रकाशः** – पञ्च जना इति न समस्तम् । किन्तु पञ्च पञ्चेति वीप्सा सर्वशरीरेषु पञ्चानां जनानामनुवृत्तिसूचनार्थेति । पञ्चशब्दजनशब्दाकाशादिशब्दा इत्यर्थः । तत्वप्रदीपे ''पञ्च पञ्चेति वीप्सा'' इत्युक्तेः । सुधायां समासस्य खण्डितत्वाच्च ।

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿರುವ 'ಪಂಚ ಜನಾಃ' ಎಂಬ ಶಬ್ದವು ಸಮಸ್ತಪದವಲ್ಲ. ಹೊರತು, 'ಪಂಚ' ಎಂಬುದೇ ಬೇರೆ ಪದವಾಗಿದೆ. 'ಜನಾಃ' ಎಂಬುದೇ ಬೇರೆ ಪದವಾಗಿದೆ. ಶ್ರುತಿಯಲ್ಲಿ ಪಂಚ ಪಂಚ ಎಂಬುದಾಗಿ ವೀಪ್ಸಾಗ್ರಹಣ ಮಾಡಿದ್ದರಿಂದ ಪ್ರತಿಯೊಬ್ಬರ ಶರೀರದಲ್ಲಿಯೂ ಐದು ಮಂದಿ ಪ್ರಾಣದೇವತೆಗಳು ಇರುವವರೆಂದು ವೀಪ್ಸಾದಿಂದ ತಿಳಿಸಲಾಗಿದೆ. ಆದ್ದರಿಂದ ಪಂಚಶಬ್ದ, ಜನಶಬ್ದ, ಆಕಾಶ ಮೊದಲಾದ ಶಬ್ದಗಳು ಎಂಬುದಾಗಿ ವಿವಕ್ಷಿಸಬೇಕು. ಹೊರತು, ಪಂಚ ಜನಶಬ್ದವನ್ನು ಸಮಸ್ತವಾಗಿ ವಿವಕ್ಷಿಸಬಾರದು. ತತ್ವಪ್ರದೀಪದಲ್ಲಿಯೂ ಕೂಡ 'ಪಂಚ ಪಂಚೇತಿ ವೀಪ್ಸಾ' ಪಂಚ ಪಂಚ ಎಂಬುದು ವೀಪ್ಸಾ ಗ್ರಹಣವಾಗಿದೆ ಎಂದು ಹೇಳಿದ್ದಾರೆ. ನ್ಯಾಯಸುಧೆಯಲ್ಲಿ ಪಂಚ ಜನ ಶಬ್ದವು ಸಮಾಸವಾಗುವುದಿಲ್ಲವೆಂಬುದನ್ನು ಖಂಡನೆ ಮಾಡಿರುತ್ತಾರೆ.

**प्रकाशः** – एतेन यत्परभाष्ये ''पञ्चशब्दो जनशब्देन समस्तः । स्वरेणैकपद्य-निश्चयात् । ''पञ्चानां त्वापञ्चजनानाम्'' इति प्रयोगदर्शनाच्च । समस्तत्वाच्च न वीप्स'' इत्युक्तं तन्निरस्तम् ।

ಹೀಗೆ ಹೇಳಿದ್ದರಿಂದ ಅದ್ವೈತ ಭಾಷ್ಯದಲ್ಲಿ ಹೇಳಿದ್ದನ್ನು ನಿರಾಕರಣೆ ಮಾಡಿದಂತಾಯಿತು. ಅವರ ಭಾಷ್ಯದ ಮಾತು ಹೀಗಿದೆ - ''ಪಂಚಶಬ್ದೋ ಜನಶಬ್ದೇನ ಸಮಸ್ತಃ । ಸ್ವರೇಣೈಕಪದ್ಯನಿಶ್ಚಯಾತ್ । ''ಪಂಚಾನಾಂ ತ್ವಾಪಂಚ ಜನಾನಾಮ್'' ಇತಿ ಪ್ರಯೋಗದರ್ಶನಾಚ್ಚ। ಸಮಸ್ತತ್ವಾಚ್ಚ ನ ವೀಪ್ಸಾ'' ಪಂಚಶಬ್ದವು ಜನಶಬ್ದದ ಜೊತೆಗೆ ಸಮಾಸವನ್ನು ಹೊಂದಿದೆ. ಏಕೆಂದರೆ ಸಮಾಸದಲ್ಲಿ ಯಾವ ಒಂದೇ ಸ್ವರವಿರಬೇಕೋ ಆ ಸ್ವರವು ಪಂಚ ಜನಶಬ್ದದಲ್ಲಿ ಇರುವುದರಿಂದ ಇದು ಸಮಾಸವೆಂದು ನಿಶ್ಚಯವಾಗುತ್ತದೆ. ಮತ್ತು 'ಪಂಚಾನಾಂ ತ್ವಾಪಂಚ ಜನಾನಾಮ್' ಇತ್ಯಾದಿ ಸ್ಥಳದಲ್ಲಿ ಪಂಚ ಜನಶಬ್ದಕ್ಕೆ ಸಮಾಸವಾಗಿರುವುದು ಕಂಡಿದೆ. ಹೀಗೆ ಸಮಸ್ತವಾದ ಪದವಾದ್ದರಿಂದ ವೀಪ್ಸಾಗ್ರಹಣವೆಂದು ವಿವಕ್ಷಿಸಬಾರದು ಎಂದು.

**प्रकाशः** – अन्यत्र तथात्वेपीह स्वरानिर्णयेनैकपदत्वनिश्चायकाभावात् । सुधोक्तदिशैकपदत्वायोगाच्च ॥

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ವೇದದಲ್ಲಿ ಬೇರೆ ಸ್ಥಳಗಳಲ್ಲಿ ಐಕಪದ್ಯ ಮೊದಲಾದ ಸ್ವರದಿಂದ ಸಮಸ್ತಪದವೆಂದು ನಿರ್ಣಯಿಸಬಹುದು. ಆದರೆ ಪ್ರಕೃತ ಅಂತಹ ಸ್ವರನಿರ್ಣಾಯಕವಾದ ಯಾವುದೇ ಕಾರಣಗಳು ಇರುವುದಿಲ್ಲ. ಆದ್ದರಿಂದ ಐಕಪದ್ಯಸ್ವರದ ನಿಶ್ಚಯವೇ ಆಗದ ಕಾರಣ ಸಮಸ್ತಪದ ಎಂಬುದರ ನಿಶ್ಚಯವೂ ಕೂಡ ಆಗುವುದಿಲ್ಲ. ಮತ್ತು ನ್ಯಾಯಸುಧೆಯಲ್ಲಿ ಹೇಳಿದಂತೆ ಪಂಚ ಜನಶಬ್ದವು ಒಂದೇ ಪದವೆಂಬುದನ್ನು ಸಮರ್ಥಿಸಲು ಸಾಧ್ಯವಿಲ್ಲ.[೧]

(೧) ನ್ಯಾಯಸುಧೆಯಲ್ಲಿ ಪಂಚ ಜನಶಬ್ದವು ಸಮಸ್ತಪದವಲ್ಲವೆಂಬುದನ್ನು ವಿವರವಾಗಿ ನಿರಾಕರಿಸಿದ್ದಾರೆ. ಅದನ್ನು ಬುಭುತ್ಸುಗಳ ಅನುಕೂಲಕ್ಕಾಗಿ ಇಲ್ಲಿ ನೀಡಲಾಗಿದೆ.

**न्यायसुधा** – 'न सङ्ख्योपसङ्ग्रहात्' इत्येतदपि प्रधानस्याशब्दत्वप्रतिपादनार्थतया व्याचक्षते (शां.भा) । तथाहि । 'यस्मिन् पञ्चपञ्चजना आकाशश्च प्रतिष्ठितः । तमेवमन्यमात्मानं विद्वान् ब्रह्मामृतोऽमृतमित्येतस्मिन् मन्त्रे पञ्चपञ्चजना इति पञ्चसङ्ख्याविषयापरा पञ्चसङ्ख्या श्रूयते । पञ्चशब्दद्वयदर्शनात् । त एते पञ्चपञ्चकाः पञ्चविंशतिः सम्पद्यते । तथाच श्रुतिप्रसिद्धया पञ्चविंशतिसङ्ख्यया तेषां स्मृतिप्रसिद्धानां पञ्चविंशतितत्वानामुपसङ्ग्रहात् प्राप्तं श्रुतिमत्त्वं प्रधानादीनां इत्यत्रोच्यते । न सङ्ख्योपसङ्ग्रहादपि प्रधानादीनां श्रुतिमत्त्वप्रत्याशा कर्तव्या । कस्मात् । नानाभावात् । नाना ह्येतानि पञ्चविंशतितत्त्वानि नैषां पञ्चशः पञ्चशः साधारणो धर्मोऽस्ति । येन पञ्चविंशतेरन्तराले पञ्च पञ्चसङ्ख्या निविशेरन् । न ह्येकं निबन्धनमन्तरेण नानाभूतेषु द्वित्वादिकाः सङ्ख्या निविशन्ते । अतिरेकाच्च । अतिरेको हि भवत्यात्माकाशाभ्यां पञ्चविंशतिसङ्ख्यायाः । आत्मनो हि पञ्चविंशतावन्तर्भावे यस्मिन्नित्यधिकरणत्वोक्तिविरोधः । आकाशस्यापि पृथगुक्तिविरोधः । तस्मान्न प्रधानादीनां शाब्दत्वमिति । अत्र वक्तव्यम् । किं पञ्चविंशतितत्त्वप्रक्रिया सर्वथाऽप्रामाणिकीत्यभिप्रायः । उतैतद्वाक्यं तत्परं न भवतीति ।

पक्षद्वयमप्यनुपपन्नमित्याह– **यत्तदिति** ।।

ಅನುವಾದ – 'ನ ಸಂಖ್ಯೋಪಸಂಗ್ರಹಾತ್' ಎಂಬ ಸೂತ್ರವೂ ಪ್ರಧಾನವು ಶಬ್ದ ವಾಚ್ಯವಲ್ಲ ಎಂದು ಪ್ರತಿಪಾದಿಸಲು ಹೊರಟಿದೆ ಎಂದು ಅದ್ವೈತಿಗಳು ವ್ಯಾಖ್ಯಾನಿಸುತ್ತಾರೆ. ಅದು ಹೀಗೆ - ಐದು ಐದು ಜನರೂ ಆಕಾಶವೂ ಆತ್ಮನಲ್ಲಿ ಆಶ್ರಯ ಪಡೆದಿದ್ದಾರೆ. ಆತ್ಮನನ್ನೇ ನಾನು ಅಮೃತಾತ್ಮನೆಂದು ತಿಳಿಯುತ್ತೇನೆ, ಅದರಿಂದ ಅಮೃತನೆನಿಸುತ್ತೇನೆ' ಎಂಬ ಶ್ರುತಿಯಲ್ಲಿ ಐದನ್ನು ತಿರುಗಿ ಐದೆಂದು ಹೇಳಿದೆ. ಐದೈದೆಂದರೆ ಇಪ್ಪತ್ತೈದಾಗುತ್ತದೆ. ಇಪ್ಪತ್ತೈದು ಎಂಬ ಸಂಖ್ಯೆಯ ಮೂಲಕ ಶ್ರುತಿಯು ಸಾಂಖ್ಯ ಶಾಸ್ತ್ರದಲ್ಲಿ ಪ್ರಸಿದ್ಧವಾದ ಇಪ್ಪತ್ತೈದು ತತ್ವಗಳನ್ನು ಹೇಳುತ್ತಿದೆ. ಆದರಿಂದ ಪ್ರಧಾನಾದಿಗಳು ಶಬ್ದವಾಚ್ಯಗಳೆಂದು ಸಿದ್ಧವಾಗುತ್ತದೆ ಎಂಬ ಪೂರ್ವಪಕ್ಷಕ್ಕೆ ಸಮಾಧಾನ- "ಇಪ್ಪತ್ತೈದು ಎಂಬ ಸಂಖ್ಯೆಯನ್ನು ಹೇಳಿದರೂ ಪ್ರಧಾನಾದಿಗಳು ಶ್ರುತಿಸಿದ್ಧವೆಂದು ಸಿದ್ಧವಾಗುವ ಆಸೆ ಇಟ್ಟುಕೊಳ್ಳಬಾರದು. ಏಕೆ? ತತ್ವಗಳು ಪರಸ್ಪರ ವಿಲಕ್ಷಣವಾದ್ದರಿಂದ ಎಂದು ಒಂದು ಹೇತು. ಈ ಇಪ್ಪತ್ತೈದು

ತತ್ತ್ವಗಳು ಪರಸ್ಪರ ವಿಲಕ್ಷಣಗಳಾದ್ದರಿಂದ ಐದೈದಾಗಿ ವರ್ಗೀಕರಿಸಲು ಬೇಕಾದ ಸಾಮ್ಯವಿಲ್ಲ. ಇರುತ್ತಿದ್ದರೆ ಇಪ್ಪತ್ತೈದರಲ್ಲಿ ಐದೈದು ಸಂಖ್ಯೆ ಅಂತರ್ಭಾವವಾಗುತ್ತಿತ್ತು. ಪ್ರಯೋಜಕಧರ್ಮವಿಲ್ಲದೆ, ಬಹು ವಸ್ತುಗಳಲ್ಲಿ ಎರಡು ಮುಂತಾದ ಸಂಖ್ಯೆ ನಿಲ್ಲದು ತಾನೆ? ಸಂಖ್ಯೆ ಅಧಿಕವಾಗುವುದರಿಂದ ಎಂದು ಇನ್ನೊಂದು ಹೇತು. ಆತ್ಮ ಆಕಾಶಗಳು ಸೇರಿದರೆ ಸಂಖ್ಯೆ ಇಪ್ಪತ್ತೈದಕ್ಕಿಂತ ಹೆಚ್ಚಾಗುವುದು. ಇಪ್ಪತ್ತೈದರಲ್ಲಿಯೇ ಅವನ್ನು ಸೇರಿಸಿದರೆ ಆತ್ಮನಲ್ಲಿ ಎಂದು ಅಧಿಕರಣತ್ವವನ್ನು ಹೇಳುವುದು ಮತ್ತು ಆಕಾಶವನ್ನು ಪ್ರತ್ಯೇಕವಾಗಿ ಹೇಳುವುದು ಕೂಡಲಾರದು. ಹೀಗಾಗಿ ಪ್ರಧಾನಾದಿಗಳು ಶಬ್ದವಾಚ್ಯಗಳೆಂದು ಸಿದ್ಧವಾಗುವುದಿಲ್ಲ ಎಂದು'' ಇಲ್ಲಿ ಅವರು ಹೇಳಬೇಕು, ಇಪ್ಪತ್ತೈದು ತತ್ತ್ವಗಳೆನ್ನುವ ಪ್ರಕ್ರಿಯೆ ಸರ್ವಥಾ ಪ್ರಮಾಣ ಬಾಹಿರವೆಂದು ಅಭಿಪ್ರಾಯವೇ, ಅಥವಾ ಈ ಶ್ರುತಿವಾಕ್ಯ ಅದನ್ನು ಹೇಳುವುದಿಲ್ಲವೆಂದೇ? ಎರಡು ಪಕ್ಷಗಳೂ ಅಯುಕ್ತ ಎಂದು.

**न्यायसुधा –** यदुक्तं नानाभावादिति तदसत् । सूत्रकारस्यापि सङ्ग्राहकाभावेन पञ्चभिरित्याद्युक्त्यनुपपत्तिप्रसङ्गात् । अथ तत्र भूतत्वादीनि सङ्ग्राहकाणि सन्ति इति चेत् तर्हि तान्येव भूतत्वतन्मात्रत्वज्ञानेन्द्रियस्वकर्मेन्द्रियत्वतदितरत्वानि च श्रुतावपि सन्तीति समानम् । नचायमस्ति नियमोऽन्तराले सङ्ग्राहकेण विना न सङ्ख्यानिवेशो नास्तीति । 'पञ्च सप्त च वर्षाणि न ववर्ष शतक्रतुः', 'व्रतमेतदनुष्ठेयं वर्षाणि नव पञ्च च' इत्यादौ व्यभिचारात् । यदप्यतिरेकाच्चेति । तदप्यसत् । पातञ्जलैरीश्वरस्याङ्गीकृतत्वात् । आकाशश्चेत्याकाशाद्या इति व्याख्यानोपपत्तेः ।

ಅನುವಾದ – ಏಕೆಂದರೆ, 'ಪರಸ್ಪರವಿಲಕ್ಷಣವಾದ್ದರಿಂದ' ಎಂದು ಹೇಳಿದ್ದೂ ಸರಿಯಲ್ಲ. ಆ ಪಕ್ಷದಲ್ಲಿ ಭಾಗವತದಲ್ಲಿ 'ಪಂಚಭಿಃ ಪಂಚಭಿಃ ' ಎಂದು ಮುಂತಾಗಿ ಹೇಳಿದ್ದೂ ಕೂಡಲಾರದು. ಪಂಚ ಭೂತಗಳು ಪಂಚತನ್ಮಾತ್ರಗಳು ಪಂಚಜ್ಞಾನೇಂದ್ರಿಯಗಳು ಇತರ ತತ್ತ್ವಗಳು ಎಂದು ವರ್ಗೀಕರಣ ಭಾಗವತದಲ್ಲಿ ಯುಕ್ತವೆನ್ನುವುದಾದರೆ ಹಾಗೇ ಶ್ರುತಿಯಲ್ಲಿಯೂ ಸಮಾನ ಎನ್ನಬಹುದು. ವಸ್ತುತಃ ವರ್ಗೀಕರಣವಿಲ್ಲದೆ ಸಂಖ್ಯೆಗಳನ್ನು ಹೇಳಬಾರದೆಂದು ನಿಯಮವಿಲ್ಲ. 'ಐದೇಳು ವರ್ಷಕಾಲ ಇಂದ್ರನು ಮಳೆ ಸುರಿಸಲಿಲ್ಲ' ಅಂದರೆ, ಹನ್ನೆರಡುವರ್ಷಕಾಲ ಮಳೆಯಾಗಲಿಲ್ಲ ಎಂದರ್ಥ. ಒಂಬತ್ತು ಐದುವರ್ಷ ಕಾಲ ವ್ರತವನ್ನಾಚರಿಸಬೇಕು' ಹದಿನಾಲ್ಕುವರ್ಷಕಾಲ ವ್ರತವಾಚರಿಸಬೇಕೆಂದರ್ಥ ಎಂದು ಮುಂತಾದ ಕಡೆಗಳಲ್ಲಿ ಈ ನಿಯಮ ಕಾಣುವುದಿಲ್ಲ. ಸಂಖ್ಯೆ ಅಧಿಕವಾಗುತ್ತದೆ ಎಂದುದೂ ಯುಕ್ತವಲ್ಲ. ಆತ್ಮನನ್ನು ಇಪ್ಪತ್ತೈದರಲ್ಲಿ ಸೇರಿಸಿ 'ಪರಮಾತ್ಮನಲ್ಲಿ'ಎಂದು ಪರಮಾತ್ಮನಲ್ಲಿ ಅಧಿಕರಣತ್ವವನ್ನು ಹೇಳಬಹುದು. ಸಾಂಖ್ಯರಲ್ಲಿಯೂ ಪತಂಜಲಿಯ ಅನುಯಾಯಿಗಳು ಪರಮಾತ್ಮನನ್ನು ಒಪ್ಪಿದ್ದಾರೆ ತಾನೇ ? ಆಕಾಶವೂ ಇಪ್ಪತ್ತೈದರಲ್ಲಿಯೇ ಸೇರುವುದರಿಂದ ಸಂಖ್ಯೆ ಅಧಿಕವಾಗುವುದಿಲ್ಲ. ಆಕಾಶಶ್ಚ ಎಂದು ಚಕಾರವಿರುವುದರಿಂದ ಆಕಾಶ ಮುಂತಾದ ಇಪ್ಪತ್ತೈದು ತತ್ತ್ವಗಳೆಂದು ವ್ಯಾಖ್ಯಾನ ಮಾಡಲು ಶಕ್ಯವಿದೆ.

**न्यायसुधा –** किञ्चेदं वाक्यं पञ्चविंशतितत्त्वसिद्धये साङ्ख्येन स्वशास्त्रे गृहीतत्वाद्वा शङ्कितं सम्भावितत्वाद्वा । न द्वावपि सम्भवतः । पञ्च पञ्चजना इत्यस्य पञ्चविंशत्यप्रत्यायकत्वात् । पञ्चजना इत्यस्य समासत्वे हि द्वितीयः पञ्चशब्दो न

**प्रकाशः** – अन्येति ।। प्राणादिपरा इत्यर्थः । परममुख्यवृत्त्येति भावः । मुख्यवृत्त्याऽन्यपरत्वस्य सिद्धान्तेऽपि स्वीकारात् ।।

'ಅನ್ಯಪರ' ಎಂದರೆ ಪ್ರಾಣಾದಿಪರವಾದ ಅರ್ಥ. 'ಪರಮಮುಖ್ಯವೃತ್ತ್ಯಾ' ಎಂದು ತಿಳಿಯಬೇಕು. ಅಂದರೆ ಪರಮಮುಖ್ಯವೃತ್ತಿಯಿಂದ ಪ್ರಾಣಾದಿಪರವಾಗಿವೆಯೋ ಎಂದು ಕೇಳುತ್ತಿದ್ದಾರೆ. ಏಕೆಂದರೆ ಮುಖ್ಯವೃತ್ತ್ಯಾ ಅನ್ಯಪರವಾಗಿದೆಯೆಂಬುದನ್ನು ಸಿದ್ಧಾಂತದಲ್ಲಿಯೂ ಕೂಡ ಒಪ್ಪಿರುವುದರಿಂದ ಅದನ್ನೇ

तावत् पञ्चशब्देन सम्बद्ध्यते । विशेषणस्योपसर्जनेन सम्बन्धायोगात् । नापि जन-शब्देन । पञ्चजनाः कतीत्याकाङ्क्षानुदयेन विशेषणायोगात् । असमासत्वेऽपि न तावत् पञ्चशब्देन सम्बन्धः । एकार्थयोर्विशेषणविशेष्यभावानुपपत्तेः । नापि जनशब्देन । निराकाङ्क्षत्वात् । कथञ्चिदाकाङ्क्षायामपि दशत्वस्य प्राप्तेः ।

**ಅನುವಾದ** – ಇಪ್ಪತ್ತೈದು ತತ್ವಗಳ ಸಿದ್ಧಿಗಾಗಿ ಈ ಶ್ರುತಿವಾಕ್ಯವನ್ನು ಸಾಂಖ್ಯರು ತಮ್ಮ ಶಾಸ್ತ್ರದಲ್ಲಿ ಸ್ವೀಕರಿಸಿರುವರೇ, ಅಥವಾ ಸ್ವೀಕರಿಸಬಹುದೆಂದು ಸಂಭಾವನೆಯೆ? ಎರಡೂ ಕೂಡುವುದಿಲ್ಲ. ಏಕೆಂದರೆ ಪಂಚ ಪಂಚ ಎಂದೊಡನೆ ಇಪ್ಪತ್ತೈದು ಎಂಬ ಸಂಖ್ಯೆಯನ್ನು ಹೇಳಿದಂತಾಗುವುದಿಲ್ಲ. 'ಪಂಚ ಜನಾಃ ' ಎಂದು ಸಮಾಸವಿಟ್ಟುಕೊಂಡರೆ ಎರಡನೆ ಪಂಚ ಶಬ್ದ ಮೊದಲನೆ ಪಂಚ ಶಬ್ದದೊಡನೆ ಅನ್ವಯಿಸಲಾರದು. ಏಕೆಂದರೆ ಎರಡನೆಯ ಪಂಚಶಬ್ದ ಸಮಾಸದಲ್ಲಿ ಒಂದು ಭಾಗವಾಗಿದ್ದು ಗೌಣವಾಗಿದೆ. ಆದುದರಿಂದ ಅದರೊಡನೆ ಸಮಾಸ ಹೊರಗಿರುವ ಮೊದಲನೆಯ ಪಂಚಶಬ್ದವು ವಿಶೇಷಣವಾಗಿ ಅನ್ವಯಿಸದು. ಜನ ಶಬ್ದದೊಡನೆಯೂ ಅನ್ವಯಿಸಲಾರದು. ಏಕೆಂದರೆ ಐದುಜನರು ಎಷ್ಟುಮಂದಿ ಎಂಬ ಆಕಾಂಕ್ಷೆ ಬಾರದಿರುವುದರಿಂದ ಐದು ಜನರು ಐದು ಮಂದಿ ಎಂದು ಹೇಳಲಾಗುವುದಿಲ್ಲ. ಎರಡನೆಯ ಪಂಚಶಬ್ದ 'ಜನ' ಶಬ್ದದೊಡನೆ ಸಮಾಸ ಹೊಂದಿಲ್ಲ ಎಂದಿಟ್ಟುಕೊಂಡರೂ ಅದಕ್ಕೆ ಮೊದಲ ಪಂಚ ಶಬ್ದದೊಂದಿಗೆ ಅನ್ವಯ ಕೂಡಲಾರದು. ಒಂದೇ ಅರ್ಥದ ಶಬ್ದಗಳಿಗೆ ಒಂದು ವಿಶೇಷ್ಯ ಇನ್ನೊಂದು ವಿಶೇಷಣವಾಗಿ ಅನ್ವಯ ಕಂಡಿಲ್ಲ. ಜನ ಶಬ್ದದೊಡನೆ ಆನ್ವಯ ಹಿಂದೆ ಹೇಳಿದಂತೆ ಆಕಾಂಕ್ಷೆ ಇಲ್ಲದ್ದರಿಂದಲೇ ಅಶಕ್ಯ. ಜನರು ಎಷ್ಟು ಎಂದು ಒಮ್ಮೆ ಆಕಾಂಕ್ಷೆ ತಂದುಕೊಂಡು ಪಂಚಶಬ್ದದಿಂದ ಅನ್ವಯವಾದಮೇಲೆ, ಪುನಃ ಕತಿ ? (ಪುನಃ ಎಷ್ಟು ?) ಎಂಬೀ ರೀತಿಯಲ್ಲಿ ಹೇಗೋ ಆಕಾಂಕ್ಷೆ ತಂದುಕೊಂಡರೂ ಐದು ಐದು ಸೇರಿ ಹತ್ತಾದೀತು ಹೊರತು ಇಪ್ಪತ್ತೈದು ಆಗಲಾರದು.

**न्यायसुधा** – ननु पञ्चजना इति समाहारद्विगुः । तस्य पञ्चेति विशेषणे पञ्चविंशतिः सम्पद्यते । यथा पञ्चपञ्चफ(पू)ल्यं इत्युक्ते पञ्चविंशति(पूलालभ्यं)फलानि लभ्यन्त इति । मैवम् । तथा सति पुल्लिङ्गानुपपत्तेरित्यलम् । कारणत्वेनेत्यादिसूत्राणामपव्याख्यानं स्फुटदूषणमिति न दूषितम् ।। १-४-३ ।।

**ಅನುವಾದ** – 'ಪಂಚ ಜನಾಃ' ಎಂಬುದು ಸಮಾಹಾರದ್ವಿಗು. ಐದು ಜನರ ಅನೇಕ ಸಮುದಾಯಗಳು ಎಂದರ್ಥ. ಅದಕ್ಕೆ ಐದು ಎಂದು ವಿಶೇಷ್ಯ ಸೇರಿಸಿದರೆ ಐದು ಐವರ ಸಮುದಾಯಗಳು ಎಂದರೆ ಇಪ್ಪತ್ತೈದು ಜನರೆಂದಂತಾಗುವುದು. ಉದಾ: ಪಂಚ ಪಂಚ ಪೂಲ್ಯಃ ಐದು ಪೂಲಗಳ ಸಮುದಾಯಗಳು ಐದು, ಅಂದರೆ ಇಪ್ಪತ್ತೈದು ಪೂಲಗಳು ಎಂದಂತಾಗುವುದು - ಹೀಗೆ ಹೇಳಬಾರದು. ಸಮಾಹಾರದ್ವಿಗು ಸಮಾಸದಲ್ಲಿ ಪುಲ್ಲಿಂಗ ಕೂಡುವುದಿಲ್ಲ. ಸ್ತ್ರೀಲಿಂಗ ಅಥವಾ ನಪುಂಸಕಲಿಂಗ ಬರಬೇಕಾಗುವುದು. ಈ ಚರ್ಚೆ ಇಷ್ಟೇ ಸಾಕು.

ಪರಿಪೂರ್ಣಚಂದ್ರಿಕಾ

ಪೂರ್ವಪಕ್ಷ ಮಾಡಲು ಬರುವುದಿಲ್ಲ. ಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿದೆಯೆಂದು ಪೂರ್ವಪಕ್ಷಮಾಡಿದಾಗ, ಸಿದ್ಧಾಂತದಲ್ಲಿ ಅದನ್ನು ನಿರಾಕರಿಸಿ ಮಹಾವಿಷ್ಣುವೇ ಪರಮಮುಖ್ಯವೃತ್ತಿಯಿಂದ ಈ ಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥನೆ ಮಾಡಬಹುದು.

**प्रकाशः – आधारेति ।।** सप्तमीप्रथमाभ्यां प्रतीताधाराधेयत्वाधरोर्ध्वत्वादेरित्यर्थः ।

'ಯಸ್ಮಿನ್' ಎಂಬ ಸಪ್ತಮೀವಿಭಕ್ತಿಯಿಂದ ಆಧಾರವು ತಿಳಿಯುತ್ತಿದೆ. 'ಪಂಚ ಜನಾಃ ಎಂಬ ಪ್ರಥಮ ವಿಭಕ್ತಿಯಿಂದ ಆಧೇಯತ್ವವು ತಿಳಿಯುತ್ತಿದೆ. ಎಲ್ಲಿ ಆಧಾರಾಧೇಯಭಾವವಿರುತ್ತದೋ, ಅಲ್ಲೇ ಊರ್ಧ್ವ-ಅಧರೀಭಾವವೂ ಕೂಡ ಇರುತ್ತದೆ. ಈ ಆಧಾರಾಧೇಯಭಾವವನ್ನಾಗಲೀ, ಊರ್ಧ್ವ ಅಧರೀಭಾವವನ್ನಾಗಲೀ ಕೂಡಿಸಬೇಕೆಂದರೆ ಆಧಾರಕ್ಕೂ, ಆಧೇಯಕ್ಕೂ ಊರ್ಧ್ವಕ್ಕೂ, ಅಧರಕ್ಕೂ ಬೇಧವನ್ನು ಹೇಳಲೇಬೇಕು. ಎರಡನ್ನು ಪರಮಾತ್ಮನೆಂದು ಹೇಳಿದರೆ ಆಧಾರಾಧೇಯಭಾವವೇ ಕೂಡುವುದಿಲ್ಲ.

**प्रकाशः –** यदि वक्ष्यमाणदिशा षष्ठीनिर्दिष्टा एव पञ्च जनाकाशशब्दाभ्यामुच्यन्ते तदा द्वितीयानिर्दिष्टप्राणादिशब्दैकार्थकयस्मिन्निति निर्दिष्टब्रह्माश्रितानां प्राणादीनां भिन्नत्वेन वाक्यशेषस्यानपवादकत्वात् पञ्च जनशब्दार्थोऽन्य इति पूर्वपक्षे फलम् ।

ಪೂರ್ವಪಕ್ಷದ ಫಲಫಲಿಭಾವ - ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವು ಸರ್ವಥಾ ಕೂಡುವುದಿಲ್ಲ. ಒಂದುವೇಳೆ ಅಪವಾದಕವಿದ್ದರೆ ಈ ನಿಯಮವನ್ನು ಬಿಡಬಹುದಿತ್ತು. ಅಂತಹ ಅಪವಾದಗಳೂ ಕೂಡ ಏನೂ ಇರುವುದಿಲ್ಲ. 'ಪ್ರಾಣಸ್ಯ ಪ್ರಾಣಮ್ ಚಕ್ಷುಷಚಕ್ಷುಃ' ಇತ್ಯಾದಿ ವಾಕ್ಯಶೇಷವನ್ನೇ ಅಪವಾದಕವೆನ್ನಬೇಕು. ಆದರೆ ಈ ವಾಕ್ಯಶೇಷವು ಅಪವಾದಕವಾಗುವುದಿಲ್ಲ. ಏಕೆಂದರೆ ವಾಕ್ಯಶೇಷದಲ್ಲಿರುವ 'ಪ್ರಾಣಸ್ಯ' ಎಂಬ ಷಷ್ಠೀವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪಂಚ ಜನಾ ಆಕಾಶಶಬ್ದಗಳಿಂದ ಉಕ್ತನಾಗಿದ್ದಾನೆಂದು ಹೇಳಬೇಕು. ಆವಾಗ ದ್ವಿತೀಯಾವಿಭಕ್ತ್ಯಂತವಾದ ಪ್ರಾಣಾದಿಶಬ್ದಗಳಿಂದ ನಿರ್ದಿಷ್ಟನಾದ ವ್ಯಕ್ತಿಯು 'ಯಸ್ಮಿನ್' ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಆವಾಗ ಬ್ರಹ್ಮರಲ್ಲಿ ಆಶ್ರಿತರಾದ ಪ್ರಾಣಾದಿಗಳು ಭಿನ್ನರೇ ಆಗುತ್ತಾರೆ. ಆವಾಗ 'ಯಸ್ಮಿನ್' ಎಂಬ ಶಬ್ದದಿಂದ ಬ್ರಹ್ಮನನ್ನು ತೆಗೆದುಕೊಂಡಂತಾಯಿತು. ಪಂಚ ಜನಾದಿ ಶಬ್ದಗಳಿಂದ ಪ್ರಾಣಾದಿಗಳನ್ನು ತೆಗೆದುಕೊಂಡಂತಾಯಿತು. ಇವರಿಬ್ಬರಿಗೆ ಭೇದವಿರುವುದರಿಂದ ವಾಕ್ಯಶೇಷವು ಅಪವಾದಕವಾಗುವುದಿಲ್ಲ. ಹಾಗಾಗಿ ಪಂಚ ಜನ ಶಬ್ದಕ್ಕೆ ಬ್ರಹ್ಮನೆಂಬ ಅರ್ಥವನ್ನು ಹೇಳಲು ಸಾಧ್ಯವಿಲ್ಲ.

**प्रकाशः –** यदितु ''प्राणम्'' इत्यादिना पञ्च जनशब्दस्यैकार्थ्यं तदा वाक्यशेषस्यैवापवादकतयाऽभेदेप्याधाराधेयत्वादेर्वाच्यतया बाधकाभावात् ब्रह्म पञ्च जनपदार्थ इति सिद्धान्ते फलमिति भावः ।

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ಸಿದ್ಧಾಂತದ ಫಲಫಲಿಭಾವ - 'ಪ್ರಾಣಸ್ಯ ಪ್ರಾಣಮ್' ಎಂಬಲ್ಲಿರುವ ಷಷ್ಠೀವಿಭಕ್ತ್ಯಂತವಾದ ಪದದಿಂದ ಯಾರು ನಿರ್ದಿಷ್ಟರಾಗಿದ್ದಾರೋ, ಅಂತಹ ಪ್ರಾಣಾದಿಗಳನ್ನು ನಾವು ಪಂಚ ಜನಶಬ್ದದಿಂದ ವಿವಿಕ್ಷಿಸುತ್ತೇವೆ. ಮತ್ತು ಅಂತಹ ಪ್ರಾಣಾದಿಗಳಿಗೂ ಪ್ರಾಣತ್ವವನ್ನು ನೀಡುವಂತಹ ಪರಮಾತ್ಮನನ್ನೂ ಕೂಡ ಪಂಚ ಜನಶಬ್ದದಿಂದ ವಿವಕ್ಷಿಸುತ್ತೇವೆ. ಆದ್ದರಿಂದ ಪಂಚ ಜನ ಶಬ್ದವು ದ್ವಿತೀಯಾಂತವಾದ ಪ್ರಾಣಾದಿಶಬ್ದಗಳಿಂದಲೂ ಏಕಾರ್ಥವನ್ನು ಹೊಂದಿದೆ. ಪಂಚ ಜನಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ ವಾಕ್ಯಶೇಷವೇ ಅಪವಾದಕವಾಗುವುದರಿಂದ ಅಭೇದವಿದ್ದರೂ ಆಧಾರಾಧೇಯ-ಭಾವವನ್ನು ಹೇಳಬಹುದೆಂದು ಸಿದ್ಧವಾಗುತ್ತದೆ. ಬ್ರಹ್ಮನೇ ಪಂಚ ಜನ ಶಬ್ದದ ಅರ್ಥನಾಗಿರುತ್ತಾನೆ.

**प्रकाशः** – **अत्राद्यचिन्ताऽऽद्यसूत्रसूचिता । द्वितीयतृतीये तु द्वितीयसूत्रसूचिते। अत्र पञ्च जनादिशब्दा ब्रह्मतदितरपरत्वेन निर्णेतुमशक्या उत शक्याः । तदर्थं वाक्यशेषस्थप्राणादिपरत्वं तेषां न युक्तमुत युक्तमिति तृतीयसूत्रसूचितचिन्ताऽपि ध्येया ।**

ಈ ಚಿಂತಾಕೋಟಿಗಳಲ್ಲಿ ಮೊದಲನೆಯ ಚಿಂತೆಯು ಪ್ರಥಮಸೂತ್ರದಿಂದ ಸೂಚಿತವಾಗಿದೆ. ಎರಡನೆಯ ಹಾಗೂ ಮೂರನೆಯ ಚಿಂತಾಕ್ರಮಗಳು 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರದಿಂದ ಸೂಚಿತವಾಗಿವೆ.

ತೃತೀಯಸೂತ್ರದಿಂದ ಸೂಚಿತವಾದ ಮತ್ತೊಂದು ಚಿಂತೆಯನ್ನು ಸ್ವತಃ ಇಲ್ಲಿ ಊಹಿಸಿಕೊಳ್ಳಬೇಕು. ಅದು ಹೀಗೆ - 'ಪ್ರಾಣಸ್ಯ ಪ್ರಾಣಮ್ ಚಕ್ಷುಷಃ ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮ್ ಮನಸೋ ಮನಃ' ಎಂಬುದಾಗಿ ವಾಕ್ಯಶೇಷದಲ್ಲಿ ನಾಲ್ಕನ್ನು ಮಾತ್ರ ಹೇಳಲಾಗಿದೆ. ಆದರೆ ವಿಷಯವಾಕ್ಯದಲ್ಲಿ 'ಪಂಚ' ಎಂಬ ಶಬ್ದವಿದೆ. ವಾಕ್ಯಶೇಷದಲ್ಲಿರುವ ಪ್ರಾಣಾದಿಗಳನ್ನೇ 'ಪಂಚ ಜನ' ಶಬ್ದದಿಂದ ವಿವಕ್ಷಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಪಂಚ ಜನಾದಿಶಬ್ದಗಳು ಬ್ರಹ್ಮಪರವೆಂದಾಗಲೀ, ತದಿತರ ಪರವೆಂದಾಗಲೀ ನಿರ್ಣಯಿಸಲು ಸಾಧ್ಯವಿಲ್ಲವೋ, ಅಥವಾ ಸಾಧ್ಯವಿದೆಯೋ? ಅದಕ್ಕಾಗಿ ವಾಕ್ಯಶೇಷದಲ್ಲಿರುವ ಪ್ರಾಣಾದಿಪರತ್ವವನ್ನು ಪಂಚ ಜನಾದಿಶಬ್ದಗಳಿಂದ ವಿವಕ್ಷಿಸಲು ಸಾಧ್ಯವಿಲ್ಲವೆಂದೋ, ಅಥವಾ ಸಾಧ್ಯವಿದೆಯೋ? ಎಂಬ ಸಂಶಯವನ್ನು ತೋರಿಸಬೇಕು.

## ಸಾರ

ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವು ಸರ್ವಥಾ ಕೂಡುವುದಿಲ್ಲ. ಒಂದುವೇಳೆ ಅಪವಾದಕವಿದ್ದರೆ ಈ ನಿಯಮವನ್ನು ಬಿಡಬಹುದಿತ್ತು. ಅಂತಹ ಅಪವಾದಗಳೂ ಕೂಡ ಏನೂ ಇರುವುದಿಲ್ಲ. 'ಪ್ರಾಣಸ್ಯ ಪ್ರಾಣಮ್ ಚಕ್ಷುಷಚಕ್ಷುಃ' ಇತ್ಯಾದಿ ವಾಕ್ಯಶೇಷವನ್ನೇ ಅಪವಾದಕವೆನ್ನಬೇಕು. ಆದರೆ ಈ ವಾಕ್ಯಶೇಷವು ಅಪವಾದಕವಾಗುವುದಿಲ್ಲ. ಏಕೆಂದರೆ ವಾಕ್ಯಶೇಷದಲ್ಲಿರುವ 'ಪ್ರಾಣಸ್ಯ' ಎಂಬ ಷಷ್ಠೀವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪಂಚ ಜನಾ ಆಕಾಶಶಬ್ದಗಳಿಂದ ಉಕ್ತನಾಗಿದ್ದಾನೆಂದು ಹೇಳಬೇಕು. ಆವಾಗ ದ್ವಿತೀಯಾವಿಭಕ್ತ್ಯಂತವಾದ ಪ್ರಾಣಾದಿಶಬ್ದಗಳಿಂದ

ನಿರ್ದಿಷ್ಟನಾದ ವ್ಯಕ್ತಿಯು 'ಯಸ್ಮಿನ್' ಎಂಬ ಶಬ್ದದಿಂದ ಹೇಳಲ್ಪಡುತ್ತಾನೆ. ಆವಾಗ ಬ್ರಹ್ಮರಲ್ಲಿ ಆಶ್ರಿತರಾದ ಪ್ರಾಣಾದಿಗಳು ಭಿನ್ನರೇ ಆಗುತ್ತಾರೆ. ಆವಾಗ 'ಯಸ್ಮಿನ್' ಎಂಬ ಶಬ್ದದಿಂದ ಬ್ರಹ್ಮನನ್ನು ತೆಗೆದುಕೊಂಡಂತಾಯಿತು. ಪಂಚ ಜನಾದಿ ಶಬ್ದಗಳಿಂದ ಪ್ರಾಣಾದಿಗಳನ್ನು ತೆಗೆದುಕೊಂಡಂತಾಯಿತು. ಇವರಿಬ್ಬರಿಗೆ ಭೇದವಿರುವುದರಿಂದ ವಾಕ್ಯಶೇಷವು ಅಪವಾದಕವಾಗುವುದಿಲ್ಲ. ಹಾಗಾಗಿ ಪಂಚ ಜನ ಶಬ್ದಕ್ಕೆ ಬ್ರಹ್ಮನೆಂಬ ಅರ್ಥವನ್ನು ಹೇಳಲು ಸಾಧ್ಯವಿಲ್ಲ. ಇಷ್ಟು ಈ ಅಧಿಕರಣದ ಪೂರ್ವಪಕ್ಷ.

'ಪ್ರಾಣಸ್ಯ ಪ್ರಾಣಮ್' ಎಂಬಲ್ಲಿರುವ ಷಷ್ಠೀವಿಭಕ್ತ್ಯಂತವಾದ ಪದದಿಂದ ಯಾರು ನಿರ್ದಿಷ್ಟರಾಗಿದ್ದಾರೋ, ಅಂತಹ ಪ್ರಾಣಾದಿಗಳನ್ನು ನಾವು ಪಂಚ ಜನಶಬ್ದದಿಂದ ವಿವಕ್ಷಿಸುತ್ತೇವೆ. ಮತ್ತು ಅಂತಹ ಪ್ರಾಣಾದಿಗಳಿಗೂ ಪ್ರಾಣತ್ವವನ್ನು ನೀಡುವಂತಹ ಪರಮಾತ್ಮನನ್ನೂ ಕೂಡ ಪಂಚ ಜನಶಬ್ದದಿಂದ ವಿವಕ್ಷಿಸುತ್ತೇವೆ. ಆದ್ದರಿಂದ ಪಂಚ ಜನ ಶಬ್ದವು ದ್ವಿತೀಯಾಂತವಾದ ಪ್ರಾಣಾದಿಶಬ್ದಗಳಿಂದಲೂ ಏಕಾರ್ಥವನ್ನು ಹೊಂದಿದೆ. ಪಂಚ ಜನಾದಿಶಬ್ದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ ವಾಕ್ಯಶೇಷವೇ ಅಪವಾದಕವಾಗುವುದರಿಂದ ಅಭೇದವಿದ್ದರೂ ಆಧಾರಾಧೇಯಭಾವವನ್ನು ಹೇಳಬಹುದೆಂದು ಸಿದ್ಧವಾಗುತ್ತದೆ. ಬ್ರಹ್ಮನೇ ಪಂಚ ಜನ ಶಬ್ದದ ಅರ್ಥನಾಗಿರುತ್ತಾನೆ. ಇಷ್ಟು ಈ ಅಧಿಕರಣದ ಸಿದ್ಧಾಂತ.

---

• • • • •

## ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡುವುದರಿಂದ ಪೂರ್ವಪಕ್ಷದ ಉದಯವಾಗುತ್ತದೆ

## तात्पर्यचन्द्रिका

**पूर्वपक्षस्तु । ''यस्मिन् पञ्च पञ्च जना आकाशश्च प्रतिष्ठितः'' इति बृहदारण्यकवाक्यस्थपञ्च जनादिशब्दवाच्यो न विष्णुः ।**

ಅನುವಾದ - ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - 'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿರುವ ವಾಕ್ಯದಲ್ಲಿ 'ಪಂಚ', 'ಜನಾಃ', 'ಆಕಾಶಃ' ಇತ್ಯಾದಿ ಶಬ್ದಗಳು ಶ್ರುತವಾಗಿವೆ. ಈ ಶಬ್ದಗಳಿಂದ ಮಹಾವಿಷ್ಣುವು ಪ್ರತಿಪಾದ್ಯನಾಗುವುದಿಲ್ಲ.

**तेषां बहुत्वविशिष्टवाचित्वात् । बहुत्वस्य चाद्वितीये ब्रह्मण्ययोगात् ।**

ಏಕೆಂದರೆ ಈ ಎಲ್ಲಾ ಶಬ್ದಗಳು ಬಹುತ್ವವಿಶಿಷ್ಟವಾದದ್ದನ್ನು ಪ್ರತಿಪಾದನೆ ಮಾಡುತ್ತಿವೆ. ಒಬ್ಬನೇ ಬ್ರಹ್ಮನಲ್ಲಿ ಬಹುತ್ವವು ಸರ್ವಥಾ ಬರುವುದಿಲ್ಲ.

**नन्वन्यगतबहुत्वस्य ब्रह्माधीनत्वात् ''तदधीनत्वात्'' इत्युक्तन्यायेन तत्र शब्दवृत्तिरस्तु ।**

ಆಕ್ಷೇಪ - ಈ ಅಧಿಕರಣದ ಪೂರ್ವಪಕ್ಷವೇ ಉದಯವಾಗುವುದಿಲ್ಲ. ಏಕೆಂದರೆ ಒಬ್ಬನೇ ಬ್ರಹ್ಮನಲ್ಲಿ ಬಹುತ್ವವಿಲ್ಲದಿದ್ದರೂ ಬೇರೆ ಪದಾರ್ಥದಲ್ಲಿರುವ ಬಹುತ್ವವು ಬ್ರಹ್ಮನ ಅಧೀನ-ವಾಗಿರುವುದರಿಂದ 'ತದಧೀನತ್ವಾತ್' ಎಂಬ ನ್ಯಾಯದಂತೆ ಬಹುತ್ವವಿಶಿಷ್ಟವಾಚಕವಾದ ಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡಬಹುದು.

**नच वशीकृतबहुजनेपि राजनि बहुत्ववाचिशब्दवृत्तिर्न दृष्टेति वाच्यम् ।**

ಪ್ರಶ್ನೆ - ರಾಜನು ಅನೇಕ ಜನರನ್ನು ವಶಮಾಡಿಕೊಂಡಿರುತ್ತಾನೆ. ಹೀಗೆ ಬಹುಜನರನ್ನು ಹೊಂದಿದ್ದರೂ ಕೂಡ ರಾಜನಲ್ಲಿ ಬಹುತ್ವವಾಚಕವಾದ ಶಬ್ದಪ್ರಯೋಗವನ್ನು ಮಾಡುವುದಿಲ್ಲ. ನೀವು ಹೇಳಿದಂತೆ ತದಧೀನತ್ವನ್ಯಾಯವನ್ನು ವಿವಕ್ಷಿಸಿ ಪರಮಾತ್ಮನಲ್ಲಿ ಬಹುತ್ವವಾಚಕಶಬ್ದಗಳನ್ನು ಪ್ರಯೋಗಿಸಬಹುದೆಂದಾದಲ್ಲಿ, ಇಂತಹ ರಾಜನಲ್ಲಿಯೂ ಕೂಡ ಬಹುತ್ವವಾಚಕವಾದ ಶಬ್ದವನ್ನು ಪ್ರಯೋಗ ಮಾಡಬೇಕಾದೀತು. ಆದರೆ ಲೋಕದಲ್ಲಿ ಯಾರೂ ಸಹ ಒಬ್ಬನೇ ರಾಜನಲ್ಲಿ ಬಹುತ್ವವನ್ನು ವ್ಯವಹರಿಸುವುದಿಲ್ಲ.

**तत्र बहुत्वस्य राजानधीनत्वात् । अवरादिशब्दवदन्यत्रादर्शनेपि ब्रह्मणि वृत्तिसम्भवाच्च ।**

ಉತ್ತರ - ಈ ಪ್ರಶ್ನೆ ಸರಿಯಿಲ್ಲ. ಏಕೆಂದರೆ ಬೇರೆಯವರಲ್ಲಿರುವ ಬಹುತ್ವವು ರಾಜನ ಅಧೀನವೇ ಆಗಿಲ್ಲ. ಅನೇಕ ಪ್ರಜೆಗಳು ರಾಜನ ಅಧೀನರಾಗಿದ್ದರೂ ಕೂಡ ಪ್ರಜೆಗಳಲ್ಲಿರುವ ಬಹುತ್ವವು ರಾಜನ ಅಧೀನವಾಗಿರುವುದಿಲ್ಲ. ಆದರೆ ಪರಮಾತ್ಮನು ಅನ್ಯಗತವಾದ ಬಹುತ್ವಕ್ಕೆ ಸ್ವತಂತ್ರನಾಗಿರಬಹುದು. ಆದ್ದರಿಂದ ನೀವು ನೀಡಿದ ದೃಷ್ಟಾಂತವೇ ವಿಷಮವಾಗಿದೆ.

ಮತ್ತು 'ದುಃಖೀ', 'ಅವರ' ಮೊದಲಾದ ಶಬ್ದಗಳ ಪ್ರಯೋಗವು ರಾಜಾದಿಗಳಲ್ಲಿ ಕಾಣಸದಿದ್ದರೂ ಬ್ರಹ್ಮನಲ್ಲಿ ಸಮನ್ವಯ ಮಾಡಬಹುದೆಂದು 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಸಮರ್ಥಿಸಲಾಗಿದೆ. ಅದರಂತೆ ಬಹುತ್ವವಿಶಿಷ್ಟವಾಚಕವಾದ ಶಬ್ದಪ್ರಯೋಗವು ರಾಜಾದಿಗಳಲ್ಲಿ ಕಾಣಸದಿದ್ದರೂ ಪರಮಾತ್ಮನಲ್ಲಿ ಮಾಡಬಹುದು.

**न चावरादिषु "सोऽवरयति" इति विशेषश्रुतिरस्ति । नत्विह सेति वाच्यम्।**

ಪ್ರಶ್ನೆ - ದುಃಖೀ, 'ಅವರ' ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆನ್ನಲು 'ಸೋऽವರಯತಿ' 'ಸೋದುಃಖಯತಿ' ಇತ್ಯಾದಿ ವಿಶೇಷ ಶ್ರುತಿಗಳು ಆಧಾರವಾಗಿವೆ. ಅಂತಹ ವಿಶೇಷ ಶ್ರುತಿಗಳು ಪ್ರಕೃತ ಬಹುತ್ವವಾಚಕವಾದ ಶಬ್ದದ ವಿಷಯದಲ್ಲಿ ಇರುವುದಿಲ್ಲ. ಆದ್ದರಿಂದ ಪರಮಾತ್ಮನಲ್ಲಿ

'ಅವರ' 'ದುಃಖೀ' ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಬಹುದೇ ಹೊರತು, ಬಹುತ್ವವಾಚಕವಾದ 'ಪಂಚ', 'ಜನಾಃ' ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಲು ಸಾಧ್ಯವಿಲ್ಲವಲ್ಲವೇ?

**''तदधीनत्वात्'' इत्यत्र शब्दमात्रे स्वातन्त्र्यं निमित्तमित्युक्तेः । अन्यथाऽव्यक्तादिशब्देषु विशेषश्रुत्यभावेन स्वातन्त्र्यं निमित्तं न स्यात् ।**

ಉತ್ತರ - 'ತದಧೀನತ್ವಾತ್' ಎಂಬ ಸೂತ್ರದಲ್ಲಿ ಪ್ರತಿಯೊಂದು ಶಬ್ದಗಳ ಸಮನ್ವಯ ಮಾಡುವಾಗ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವೆಂದು ತಿಳಿಯಬೇಕು ಎಂದಷ್ಟೇ ಹೇಳಲಾಗಿದೆ. ಆ ವಿಷಯದಲ್ಲಿ ವಿಶೇಷಶ್ರುತಿಯಿರಬೇಕೆಂದೇನೂ ಹೇಳಿರುವುದಿಲ್ಲ. ಹಾಗೇನಾದರೂ ಪ್ರತಿಯೊಂದು ಶಬ್ದಗಳಿಗೂ ವಿಶೇಷಶ್ರುತಿಯು ಆವಶ್ಯಕವೆನ್ನುವುದಾದಲ್ಲಿ ಅವ್ಯಕ್ತಾದಿಶಬ್ದಗಳ ಸಮನ್ವಯವೂ ಕೂಡ ಪರಮಾತ್ಮನಲ್ಲಿ ಸಿದ್ಧವಾಗದಿರಬೇಕು. ಏಕೆಂದರೆ 'ಅವ್ಯಕ್ತಾತ್ ಪುರುಷಃಪರಃ' ಎಂಬ ಶ್ರುತಿಯಲ್ಲಿರುವ ಅವ್ಯಕ್ತಾದಿ-ಶಬ್ದಗಳಿಂದ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆನ್ನಲು ಯಾವುದೇ ಶ್ರುತಿಗಳು ಪ್ರಮಾಣ-ವಾಗಿರುವುದಿಲ್ಲ. ವಿಶೇಷ ಶ್ರುತಿಯಿಲ್ಲದ ಕಾರಣ ಸ್ವಾತಂತ್ರ್ಯವೇ ಪ್ರವೃತಿನಿಮಿತ್ತವಲ್ಲವೆಂದು ಆಗಬೇಕಾದೀತು.

**नच 'राजा जयी' इत्यादौ तद्गतत्वस्यासम्भवादेव स्वातन्त्र्यस्य ग्रहणम् । इह तु ''पञ्च जनाः'' इत्यस्याब्रह्मपरत्वे तद्गतत्वं सम्भवतीति वाच्यम् ।**

ಪ್ರಶ್ನೆ - 'ರಾಜಾ ಜಯೀ' ಇತ್ಯಾದಿ ಸ್ಥಳದಲ್ಲಿ ತದ್ಗತತ್ವವು ಅಸಂಭಾವಿತವಾದ್ದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಅನಿವಾರ್ಯವಾಗಿ ಹೇಳಬೇಕು. ಆದರೆ ಪ್ರಕೃತ 'ಪಂಚ', 'ಜನಾಃ' ಇತ್ಯಾದಿ ಶಬ್ದಗಳು ಬ್ರಹ್ಮನನ್ನು ಬಿಟ್ಟು ಬೇರೆ ಪದಾರ್ಥಗಳನ್ನು ಪ್ರತಿಪಾದನೆ ಮಾಡುವಾಗ ತದ್ಗತತ್ವವು ಪ್ರವೃತ್ತಿನಿಮಿತ್ತವಾಗುತ್ತದೆ. ಹಾಗೇನಾದರೂ ತದ್ಗತತ್ವವು ಅಸಂಭಾವಿತವಾಗಿದ್ದಲ್ಲಿ ಇಲ್ಲಿಯೂ ಕೂಡ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆನ್ನಬಹುದಿತ್ತು.

**स्वातन्त्र्यस्य मुख्यत्वात् । नच मुख्यसम्भव एवामुख्यग्रहणं युक्तम् । सम्भवति चात्राप्यव्यक्तादिशब्देष्विव ज्ञेयत्वावचनादिहेतुभिर्ब्रह्मपरत्वाध्यवसायः । तस्मान्न पूर्वपक्षोदय इति चेन्न ।**

ಉತ್ತರ - ಈ ಪ್ರಶ್ನೆಯು ಸರಿಯಿಲ್ಲ. ಏಕೆಂದರೆ 'ತದ್ಗತತ್ವ' ಹಾಗೂ 'ಸ್ವಾತಂತ್ರ್ಯ' ಎಂಬೆರಡು ಪ್ರವೃತ್ತಿನಿಮಿತ್ತಗಳ ನಡುವೆ ಸ್ವಾತಂತ್ರ್ಯವೇ ಮುಖ್ಯವಾದ ಪ್ರವೃತ್ತಿನಿಮಿತ್ತವಾಗಿದೆ. ಮುಖ್ಯವಾದ ಪ್ರವೃತ್ತಿನಿಮಿತ್ತವನ್ನು ಹೇಳಲು ಬರುವಾಗ ಅಮುಖ್ಯವಾದ ಪ್ರವೃತ್ತಿನಿಮಿತ್ತವನ್ನು ಸರ್ವಥಾ ವಿವಕ್ಷಿಸಬಾರದು. ಪ್ರಕೃತ ನೀವು ಪಂಚ ಜನಾದಿ ವಿಷಯದಲ್ಲಿ ತದ್ಗತತ್ವವೆಂಬ ಅಮುಖ್ಯವಾದ

ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸುತ್ತಿದ್ದೀರಿ. ಇದು ತಪ್ಪು. ಅಷ್ಟೇ ಅಲ್ಲದೇ ಯಾವರೀತಿಯಾಗಿ ಅವ್ಯಕ್ತಾದಿ ಶಬ್ದಗಳು ಬ್ರಹ್ಮನನ್ನೇ ಪ್ರತಿಪಾದನೆ ಮಾಡುತ್ತವೆ ಎಂಬ ವಿಷಯದಲ್ಲಿ ಜ್ಞೇಯತ್ವಾವಚನ ಮೊದಲಾದ ಹೇತುಗಳು ಕಾರಣವಾಗಿವೆಯೋ, ಅದರಂತೆ ಪಂಚ ಜನಾದಿ ಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂಬ ವಿಷಯದಲ್ಲಿಯೂ ಕೂಡ ಅದೇ ಹೇತುಗಳೇ ಆಧಾರವಾಗಿವೆ. ಹೀಗೆ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿರುವ ಬಹುತ್ವವಾಚಕವಾದ ಶಬ್ದಗಳ ಸಮನ್ವಯವು ಹಿಂದಿನ ತದಧೀನತ್ವ ನ್ಯಾಯದಿಂದಲೇ ಸಿದ್ಧವಾಗಿರುವಾಗ ಪುನಃ ಈ ಅಧಿಕರಣದ ಪೂರ್ವಪಕ್ಷವು ಉದಯವಾಗಲು ಸಾಧ್ಯವಿಲ್ಲ.

**यथा ''ज्योतिरुपक्रमात्'' इति पूर्वोक्तपदसमन्वये स्थित एवेह वाक्यसमन्वयः सम्भवति न वेति विचारः यथा वा ''ज्योतिः'' इत्यत्र तदधीनत्वंन्याये स्थित एव गुणपूर्त्यर्थं पदसमन्वयविचारः तथा तदधीनत्वन्याये स्थित एव तमाच्छाद्य ब्रह्मणि बहुत्वाद्यस्ति न वेतीह विचारात् ।**

ಸಮಾಧಾನ - ಒಂದು ವೇಳೆ ತದಧೀನತ್ವನ್ಯಾಯವನ್ನು ವಿವಕ್ಷಿಸುವುದಾದಲ್ಲಿ ನಿಮ್ಮ ಆಕ್ಷೇಪವು ಸಮಂಜಸವಾಗುತ್ತಿತ್ತು. ಆದರೆ ಪ್ರಕೃತ ಈ ಅಧಿಕರಣದಲ್ಲಿ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ (ಮುಚ್ಚಿಟ್ಟು) ಪೂರ್ವಪಕ್ಷವನ್ನು ಮಾಡುತ್ತಿದ್ದೇವೆ. ಯಾವರೀತಿಯಾಗಿ ಹಿಂದಿನ ಜ್ಯೋತಿರುಪಕ್ರಮಾಧಿಕರಣದಿಂದಲೇ ಈ ಅಧಿಕರಣದಲ್ಲಿ ಸಮನ್ವಯ ಮಾಡುತ್ತಿರುವ 'ಯಸ್ಮಿನ್ ಪಂಚ' ಮೊದಲಾದ ಪ್ರತಿಯೊಂದು ಪದಗಳ ಸಮನ್ವಯವೂ ಕೂಡ ಪರಮಾತ್ಮನಲ್ಲಿ ಸಿದ್ಧವಾಗುತ್ತಿದ್ದರೂ ವಾಕ್ಯಸಮನ್ವಯದ ದೃಷ್ಟಿಯಿಂದ ಈ ಅಧಿಕರಣವು ಆರಂಭಣೀಯ-ವಾಗುತ್ತಿದೆಯೆಂದು ಹೇಳುತ್ತೇವೋ, ಅದರಂತೆ ತದಧೀನತ್ವನ್ಯಾಯವನ್ನು ಮುಚ್ಚಿಟ್ಟು ಪೂರ್ವಪಕ್ಷ-ನ್ಯಾಯವನ್ನು ಮಾಡಬೇಕು. ಅಥವಾ ತದಧೀನತ್ವನ್ಯಾಯದಿಂದಲೇ ಜ್ಯೋತಿರುಪಕ್ರಮಾಧಿಕರಣದಲ್ಲಿ ಮಾಡಲ್ಪಟ್ಟ ಪ್ರತಿಯೊಂದು ಪದಗಳ ಸಮನ್ವಯವೂ ಕೂಡ ಸಿದ್ಧವಾಗುತ್ತಿರುವಾಗ, ತದಧೀನತ್ವನ್ಯಾಯವನ್ನು ಮುಚ್ಚಿಟ್ಟು ಜ್ಯೋತಿರುಪಕ್ರಮಾಧಿಕರಣದಲ್ಲಿ ಪ್ರತಿಯೊಂದು ಪದಗಳ ಸಮನ್ವಯವನ್ನು ಮಾಡಲಾಗಿದೆಯೋ, ಅದರಂತೆ ಈ ಅಧಿಕರಣದಲ್ಲಿಯೂ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ ಪೂರ್ವಪಕ್ಷವನ್ನು ಮಾಡಲಾಗುತ್ತದೆ.

**अन्यथेन्द्रादिशब्दानामपि तदधीनत्वादेव वृत्तावैश्वर्यादिगुणासिद्धिः । अवरत्वादौ तु सर्वथा तद्गतत्वासम्भवात्तदधीनत्वन्याय उक्तः । टीकायामिह तदधीनत्वन्यायासम्भवोक्तिरप्येतदभिप्राया ।**

ಒಂದು ವೇಳೆ ನೀವು ಆಕ್ಷೇಪ ಮಾಡಿದಂತೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನೇ ಎಲ್ಲೆಡೆಯೂ ವಿವಕ್ಷಿಸುವುದಾದಲ್ಲಿ ಇಂದ್ರಾದಿ ಶಬ್ದಗಳ ವಿಷಯದಲ್ಲಿಯೂ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನೇ

ವಿವಕ್ಷಿಸಬಹುದು. ಆವಾಗ ಇಂದ್ರಶಬ್ದವು ಯಾವ ಐಶ್ವರ್ಯಾದಿಗುಣಗಳನ್ನು ಹೇಳುತ್ತದೋ, ಅದು ಪರಮಾತ್ಮನಲ್ಲಿ ಸಿದ್ಧವಾಗದಿರಬೇಕಾದೀತು. ಕೇವಲ ಎಲ್ಲಾ ಅಧಿಕರಣದಿಂದಲೂ ಪರಮಾತ್ಮನಲ್ಲಿ 'ಸ್ವಾತಂತ್ರ್ಯ' ಎಂಬ ಒಂದೇ ಗುಣವು ಸಿದ್ಧವಾಗಬೇಕಾದೀತು.

ಹಾಗಾದರೆ 'ದುಃಖೀ' 'ಅವರಃ' ಇತ್ಯಾದಿ ಶಬ್ದಗಳ ವಿಷಯದಲ್ಲಿಯೂ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸದೇ, 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನೇ ವಿವಕ್ಷಿಸಬಹುದಲ್ಲವೇ? ಎಂದು ಪ್ರಶ್ನಿಸಬಾರದು. ಅವರಾದಿಶಬ್ದಗಳ ಸಮನ್ವಯ ಮಾಡುವಾಗ ತದ್ಗತತ್ವವನ್ನು ವಿವಕ್ಷಿಸಲು ಸರ್ವಥಾ ಸಾಧ್ಯವಾಗುವುದಿಲ್ಲ. ಅನಿವಾರ್ಯವಾಗಿ ತದಧೀನತ್ವನ್ಯಾಯವನ್ನು ಅನುಸರಿಸಲಾಗಿದೆ. ಆದರೆ ಉಳಿದ ಅಧಿಕರಣಗಳಲ್ಲಿ ವಾಕ್ಯಗಳ ಸಮನ್ವಯ ಮಾಡುವಾಗ ಸ್ವಾತಂತ್ರ್ಯವನ್ನೇ ಪ್ರವೃತ್ತಿನಿಮಿತ್ತವನ್ನಾಗಿ ವಿವಕ್ಷಿಸುವ ಅನಿವಾರ್ಯತೆ ಇರುವುದಿಲ್ಲ. ಈ ಅಧಿಕರಣದ ಟೀಕೆಯಲ್ಲಿ ತದಧೀನತ್ವನ್ಯಾಯವನ್ನು ವಿವಕ್ಷಿಸಬಾರದೆಂದು ಹೇಳಿದ್ದೂ ಕೂಡ ಇದೇ ಅಭಿಪ್ರಾಯದಿಂದ.

**यद्वा बहुत्ववाचिशब्देषु स्वातन्त्र्यस्य निमित्तत्वे बद्धादिशब्दवदमङ्गलत्वाभावा द्वशीकृतबहुजने राज्ञि तत्प्रयोगापत्तेर्न तन्निमित्तमित्यभिप्राया ।**

ಅಥವಾ ಪೂರ್ವಪಕ್ಷದ ಉದಯವನ್ನು ಮತ್ತೊಂದು ಬಗೆಯಲ್ಲಿ ತಿಳಿಯಬಹುದು. ಬಹುತ್ವವಾಚಕವಾದ ಶಬ್ದಗಳ ಸಮನ್ವಯದಲ್ಲಿಯೂ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾಗುವುದಾದರೆ ರಾಜನಲ್ಲಿಯೂ ಕೂಡ ಬಹುತ್ವವಾಚಕವಾದ ಶಬ್ದಪ್ರಯೋಗವು ಬರಬೇಕಾದೀತು. 'ದುಃಖೀ', 'ಬದ್ಧಃ' ಇತ್ಯಾದಿ ಶಬ್ದಗಳನ್ನು ರಾಜನಲ್ಲಿ ಪ್ರಯೋಗಿಸಬಾರದೆನ್ನಲು ಅಮಂಗಳತ್ವ ಮೊದಲಾದ ಉಪಾಧಿಗಳಿವೆ. ಆದರೆ ಬಹುತ್ವವಾಚಕಶಬ್ದವನ್ನು ಪ್ರಯೋಗಿಸಿದರೆ ಅಂತಹ ಉಪಾಧಿಗಳೇನೂ ಇರುವುದಿಲ್ಲ. ಲೋಕದಲ್ಲಿ ಯಾರೂ ಕೂಡ ವಶೀಕೃತಬಹುಜನನಾದ ರಾಜನಲ್ಲಿ ಬಹುತ್ವವಾಚಕವಾದ ಶಬ್ದವನ್ನು ಪ್ರಯೋಗಿಸುವುದಿಲ್ಲ. ಇದರಿಂದ ತದಧೀನತ್ವಸೂತ್ರದಲ್ಲಿ ಹೇಳಿದ ಸ್ವಾತಂತ್ರ್ಯವು ಯಾವುದೇ ಶಬ್ದದ ಪ್ರವೃತ್ತಿನಿಮಿತ್ತವಾಗಲು ಸಾಧ್ಯವೇ ಇಲ್ಲವೆಂದು ತಿಳಿಯುತ್ತದೆ. ಅಂದರೆ ತದದಧೀನತ್ವನ್ಯಾಯಕ್ಕೆ ವ್ಯಭಿಚಾರ ದೋಷ ಬರುತ್ತದೆ. ಹೀಗೆ ಪೂರ್ವಪಕ್ಷವನ್ನು ಮಾಡಬಹುದು.

**अत एव भाष्ये ''एतेन सर्वे व्याख्याताः'' इत्यत्रैव तदधीनत्वन्याय उक्तः । शून्यादिशब्दानां स्वातन्त्र्यनिमित्तकत्वेप्यमङ्गलत्वेन राज्यप्रयोगोपपत्तेः । नतु ''न संख्योपसङ्ग्रहात्'' इत्यादौ ।**

ಈ ಅಭಿಪ್ರಾಯದಿಂದ ಭಾಷ್ಯದಲ್ಲಿ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಕೊನೆಯ ಅಧಿಕರಣದಲ್ಲೇ ತದಧೀನತ್ವನ್ಯಾಯವನ್ನು ಹೇಳಿರುತ್ತಾರೆ ಹೊರತು, ಅಮಂಗಳವಾಗಿರುವ ಕಾರಣ ಶೂನ್ಯಾದಿ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಮಾಡುವಾಗ ಸ್ವಾತಂತ್ರ್ಯವೆಂಬ

ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಲಾಗುತ್ತದೆ. ಆದರೆ ರಾಜನಲ್ಲಿ ಇಂತಹ ಶಬ್ದಪ್ರಯೋಗಗಳನ್ನು ಮಾಡಲು ಸಾಧ್ಯವಿಲ್ಲ. 'ನ ಸಂಖ್ಯೋಪಸಂಗ್ರಹಾತ್' ಮೊದಲಾದ ಅಧಿಕರಣಗಳಲ್ಲಿ ಸ್ವಾತಂತ್ರ್ಯವೆಂದು ಪ್ರವೃತ್ತಿನಿಮಿತ್ತವೆಂದು ವಿವಕ್ಷಿಸಿರುವುದಿಲ್ಲ.

**एवमुत्तरत्र ''सम्भूत'' इत्यादिशब्देषु टीकायां स्वातन्त्र्यस्यानिमित्तत्वोक्तिरपि द्वेधा व्याख्येया ।**

ಹೀಗೆ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಚ್ಛಾದನೆ ಮಾಡಿ ಪೂರ್ವಪಕ್ಷ ಮಾಡಬೇಕು. ಅಥವಾ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದೇ ವಿವಕ್ಷಿಸಲು ಬರುವುದಿಲ್ಲ. ಈ ಎರಡು ಕಾರಣಗಳಿಂದ ಪೂರ್ವಪಕ್ಷವು ಉದಯವಾಗುತ್ತದೆ ಎಂಬ ಈ ವಿಚಾರವನ್ನು ಮುಂದೆ 'ಸಂಭೂತ' ಇತ್ಯಾದಿ ವಿಷಯದಲ್ಲಿಯೂ ತಿಳಿಯಬೇಕು. ಸಂಭೂತಾದಿಶಬ್ದಗಳ ಸಮನ್ವಯದ ವಿಷಯದಲ್ಲಿ ಹೊರಟಿರುವ ಟೀಕಾವಾಕ್ಯಕ್ಕೆ ಈ ಎರಡುಬಗೆಯ ಅಭಿಪ್ರಾಯಗಳನ್ನು ತಿಳಿದುಕೊಳ್ಳಬೇಕು.

**प्रकाशः –**

''न पञ्च जनादिशब्दवाच्यो विष्णुः'' इत्यादिपूर्वपक्षटीकां व्यनक्ति ।। **यस्मिन्पञ्च पञ्चेति** ।। **बृहदारण्यकेति** ।। एतच्च ''ज्योतिरेकेषाम्'' इति सूत्रार्थव्यक्तयेऽभिहितम् ।

ವಿವರಣೆ - ಈ ಅಧಿಕರಣದ ಪೂರ್ವಪಕ್ಷವನ್ನು 'ನ ಪಂಚ ಜನಾದಿಶಬ್ದವಾಚ್ಯೋ ವಿಷ್ಣುಃ' ಇತ್ಯಾದಿ ಟೀಕೆಯು ವಿವರಿಸುತ್ತಿದೆ. ಅದನ್ನೇ ಪ್ರಕೃತ ಗ್ರಂಥಕಾರರು 'ಯಸ್ಮಿನ್ ಪಂಚ ಪಂಚ' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಗ್ರಂಥಕಾರರು 'ಬೃಹದಾರಣ್ಯಕ' ಎಂಬುದಾಗಿ ಉಪನಿಷತ್ತಿನ ಹೆಸರನ್ನು ಉಲ್ಲೇಖಿಸಲು ಕಾರಣ ಹೀಗಿದೆ - 'ಜ್ಯೋತಿರೇಕೇಷಾಮ್' ಎಂಬ ಸೂತ್ರದ ಅರ್ಥವನ್ನು ಹೇಳುವಾಗ ಇದನ್ನು ಸ್ಪಷ್ಟಪಡಿಸಲಾಗಿದೆ. ಯಾವ ಉಪನಿಷತ್ತೆಂದು ಮೊದಲು ತಿಳಿದರೆ ಆಮೇಲೆ ಶಾಖಾಭೇದವನ್ನು ವಿಚಾರ ಮಾಡುವುದು ಯುಕ್ತವಾಗುತ್ತದೆಂದು.

**प्रकाशः** – ''नच स्वस्य बहुत्वाभावेपि'' इत्यादिटीकोक्तशङ्कां व्यनक्ति – **नन्वित्यादिना** ।। ''वशीकृत'' इति टीकोक्तसमाधिं च निराह – **नच वशीकृतेति** ।। व्यभिचारान्न स्वातन्त्र्यं निमित्तमिति भावः । व्यभिचारं निराह – **तत्रेति** ।। अपेक्षाबुद्धिजन्यत्वात्तस्येति भावः ।

'ನಚ ಸ್ವಸ್ಯ ಬಹುತ್ವಾಭಾವೇಪಿ' ಇತ್ಯಾದಿ ಟೀಕೆಯಲ್ಲಿ ತನ್ನಲ್ಲಿ ಬಹುತ್ವವಿಲ್ಲದಿದ್ದರೂ ಬೇರೆ ಪದಾರ್ಥಗಳಲ್ಲಿರುವ ಬಹುತ್ವಕ್ಕೆ ಸ್ವತಂತ್ರನಾದ್ದರಿಂದ ಇವನಲ್ಲಿಯೂ ಬಹುತ್ವ ಬರಬಹುದಲ್ಲವೇ? ಇತ್ಯಾದಿ ಟೀಕೆಯಲ್ಲಿ ಹೇಳಿದ ಶಂಕೆಯನ್ನೇ 'ನನು' ಇತ್ಯಾದಿ ಗ್ರಂಥದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಜನರು ರಾಜನ ಅಧೀನರಾಗಿದ್ದರೂ ಜನರಲ್ಲಿರುವ ಬಹುತ್ವವು ರಾಜನ ಅಧೀನವಾಗಿಲ್ಲ ಎಂಬುದಾಗಿ 'ವಶೀಕೃತ' ಇತ್ಯಾದಿ ಟೀಕೆಯಲ್ಲಿ ಸಮಾಧಾನ ಹೇಳಿದ್ದಾರೆ. ಅದನ್ನು 'ನಚ ವಶೀಕೃತೇ' ಇತ್ಯಾದಿ ಗ್ರಂಥದಿಂದ ನಿರಾಕರಿಸಿದ್ದಾರೆ. 'ಯದ್ಗತತ್ವ ನಿಮಿತ್ತಂ ಸತಿ ಯತ್ರ ಸ್ವಾತಂತ್ರ್ಯಂ ತತ್ರ ತಸ್ಯತದ್ಗತವಾಚಕವಾಚ್ಯತ್ವಮ್' ಎಂಬುದಾಗಿ ವಾಕ್ಯವನ್ನು ಹೇಳಬೇಕು. ಪ್ರಕೃತ ಬಹುತ್ವವು ರಾಜನ ಅಧೀನವಾಗಿದೆ. ಆದರೆ ಅವನಲ್ಲಿ ಬಹುತ್ವದ ವ್ಯವಹಾರವು ಇರುವುದಿಲ್ಲವಾದ್ದರಿಂದ ವ್ಯಭಿಚಾರ ಬರುತ್ತದೆ. ಹೀಗೆ ಪ್ರಶ್ನಿಸಬಾರದು. ಏಕೆಂದರೆ ಬಹುತ್ವವು ರಾಜನ ಅಧೀನವೇ ಆಗಿರುವುದಿಲ್ಲ. ಆದ್ದರಿಂದ ಹೇತುವು ಬರುವುದಿಲ್ಲ. ಸಾಧ್ಯವೂ ಕೂಡ ಬರುವುದಿಲ್ಲವದಾದ್ದರಿಂದ ವ್ಯಭಿಚಾರಕ್ಕೆ ಆಸ್ಪದವಿಲ್ಲ. ಬಹುತ್ವವು ಕೇವಲ ಅಪೇಕ್ಷಾಬುದ್ಧಿಯಿಂದಷ್ಟೇ ಜನ್ಯವಾಗಿದೆ. ಇತ್ಯಾದಿ ವಿಷಯವನ್ನು 'ತತ್' ಇತ್ಯಾದಿ ಗ್ರಂಥದಿಂದ ನಿರೂಪಣೆ ಮಾಡಿದ್ದಾರೆ.

**प्रकाशः – एवं तर्हि यदपेक्षाबुद्धिजन्यं तस्मिन्बहुशब्दप्रयोगस्स्यादिति चेन्न । तस्यापि कारणान्तरवन्निमित्तमात्रत्वेन बहुत्वं प्रति स्वातन्त्र्याभावात् ।**

ಹಾಗಾದರೆ ಯಾವ ವ್ಯಕ್ತಿಯ ಅಪೇಕ್ಷಾಬುದ್ಧಿಯಿಂದ ಬಹುತ್ವವು ಜನ್ಯವಾಗಿದೆಯೋ, ಅಂತಹ ವ್ಯಕ್ತಿಯಲ್ಲಿ ಬಹುಶಬ್ದ ಪ್ರಯೋಗವನ್ನು ಮಾಡಬೇಕಲ್ಲವೇ? ಎಂದು ಪ್ರಶ್ನಿಸಬಾರದು. ಅಪೇಕ್ಷಾಬುದ್ಧಿಯೂ ಕೂಡ ಬೇರೆ ಕಾರಣಗಳಂತೆ ಕೇವಲ ನಿಮಿತ್ತವಾಗಿದೆ. ಹೊರತು ಬಹುತ್ವವನ್ನು ಕುರಿತು ಸ್ವತಂತ್ರವಾಗಿಲ್ಲ. ಆದ್ದರಿಂದ ಅಂತಹ ವ್ಯಕ್ತಿಯಲ್ಲಿ ಬಹುಶಬ್ದಪ್ರಯೋಗವು ಬರಬೇಕಾಗಿಲ್ಲ.

**प्रकाशः – शब्दप्रवृत्तिहेतुत्वेन प्राग्विवक्षितनिरुक्तस्वातन्त्र्यस्याभावाच्च ।**

ಬಹುತ್ವವು ರಾಜನ ಅಧೀನವಲ್ಲ. ಅಪೇಕ್ಷಾಬುದ್ಧಿಯಿಂದ ಬಹುತ್ವವು ಹುಟ್ಟುವುದಾದರೂ ಕೂಡ ಅಪೇಕ್ಷಾಬುದ್ಧಿಯು ಕೇವಲ ನಿಮಿತ್ತವಾಗಿದೆ. ಅಪೇಕ್ಷಾಬುದ್ಧಿಯುಳ್ಳ ನಾವೂ ಕೂಡ ಕೇವಲ ನಿಮಿತ್ತರಾಗಿದ್ದೇವೆ. ಇಷ್ಟರಿಂದ ಬಹುತ್ವವು ನಮ್ಮ ಅಧೀನವೆಂದೇನೂ ಆಗುವುದಿಲ್ಲ. ಆದ್ದರಿಂದ ವ್ಯಾಪ್ಯ ಹಾಗೂ ವ್ಯಾಪಕಗಳೆರಡೂ ಇಲ್ಲದ ಕಾರಣ ವ್ಯಭಿಚಾರಕ್ಕೆ ಅವಕಾಶವಿಲ್ಲ.

**प्रकाशः – एवमादिशब्दानां धेन्वादिशब्ददृष्टान्तेन व्यभिचारोद्धारस्य प्रागेव कृतत्वाच्चेति भावः । अभ्युपेत्यापि लोके व्यभिचारं ''अवरादिशब्दवत्'' इति टीकोक्तमाह – अवरेति ।। टीकोक्तं समाधिमपि विवृण्वन्नेवाशङ्क्य निराह – नचेति ।। इत्युक्तेरिति ।।**

ಮತ್ತು ಇಂತಹ ಅನೇಕ ಬಗೆಯ ವ್ಯಭಿಚಾರಗಳನ್ನು ಮೊದಲನೇ ಅಧಿಕರಣದಲ್ಲಿಯೇ ನಿರಾಕರಿಸಿದ್ದಾಗಿದೆ. 'ಧೇಟ್‌ಪಾನೇ' ಎಂಬ ಧಾತುವಿನಿಂದ ನಿಷ್ಪನ್ನವಾದ ಧೇನುಶಬ್ದವು ವತ್ಸಕರ್ತೃಕದಾನಕರ್ಮತ್ವವು

ಮಹಿಷಾದಿಗಳಲ್ಲಿಯೂ ಇರುತ್ತದೆ. ಆದರೂ ಸಹ ಮಹಿಷಾದಿಗಳನ್ನು ಯಾರೂ ಸಹ ಧೇನುವೆಂದು ಕರೆಯುವುದಿಲ್ಲ. ಹಸುವನ್ನಷ್ಟೇ ಧೇನುವೆಂದು ಕರೆಯುತ್ತಾರೆ. ಅದರಂತೆ ಇಲ್ಲಿಯೂ ಕೂಡ ವ್ಯಭಿಚಾರ ಬರುವುದಿಲ್ಲವೆಂದು ಸಮರ್ಥಿಸಿದ್ದಾಗಿದೆ. ಒಂದುವೇಳೆ ಬಹುತ್ವವು ರಾಜನ ಅಧೀನವೆಂದು ವಿವಕ್ಷಿಸಿ ಬಹುತ್ವವ್ಯವಹಾರವನ್ನು ರಾಜಾದಿಗಳಲ್ಲಿಯೂ ಬಹುತ್ವವ್ಯವಹಾರವನ್ನು ಮಾಡಬೇಕು. ಆದ್ದರಿಂದ ವ್ಯಭಿಚಾರ ಬರುತ್ತದೆಂದು ಅಂಗೀಕರಿಸಿದರೂ ಕೂಡ ಬ್ರಹ್ಮನಲ್ಲಿ ಅವರಾದಿಶಬ್ದಗಳಂತೆ ಬಹುತ್ವಾದಿಗಳ ಪ್ರಯೋಗಗಳು ಬರಬಹುದಲ್ಲವೇ? ಎಂಬುದಾಗಿ ಟೀಕೆಯಲ್ಲಿ ಮಾಡಿದ ಆಕ್ಷೇಪವನ್ನು 'ಅವರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಈ ಪ್ರಶ್ನೆಗೆ ಟೀಕೆಯಲ್ಲಿಯೇ ವಿಶೇಷಶ್ರುತಿಯಿರುವುದಿಲ್ಲ ಎಂಬುದಾಗಿ ಸಮಾಧಾನವನ್ನೂ ಕೂಡ ಹೇಳಿರುತ್ತಾರೆ. ಅದನ್ನೇ ಪ್ರಕೃತ ಗ್ರಂಥಕಾರರು ವಿವರಿಸುತ್ತಾ ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**ಪ್ರಕಾಶಃ** – नन्वस्तु पञ्च जनादिशब्दप्रवृत्तिनिमित्तं बहुत्वादि प्रति स्वातन्त्र्यं तद्वृत्तौ निमित्तम् । न तावता तच्छब्दस्येहेश्वरे प्रयोगः । तत्र प्रमाणभावात् । ''प्रयोगे सति निमित्तानुसरणं नतु निमित्तमस्तीति प्रयोग'' इति न्यायात् ।

ಆಕ್ಷೇಪ - ಪಂಚ ಜನಾದಿಶಬ್ದಗಳ ಪ್ರವೃತ್ತಿನಿಮಿತ್ತ ಬಹುತ್ವವೇ ಆಗಿದೆ. ಮತ್ತು ಪರಮಾತ್ಮನ ಅಧೀನವೂ ಆಗಿದೆ. ಆದ್ದರಿಂದ 'ಪಂಚ ಜನಾ' ಎಂಬ ಶಬ್ದವು ಪರಮಾತ್ಮನಲ್ಲಿ ಪ್ರವೃತ್ತವೂ ಕೂಡ ಆಗುತ್ತದೆ. ಅಂದಮಾತ್ರಕ್ಕೆ 'ಪಂಚ ಜನಾ' ಎಂಬ ಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗ ಮಾಡಬೇಕೆನ್ನಲು ಪ್ರಮಾಣವಿಲ್ಲ. ಏಕೆಂದರೆ ಪ್ರಯೋಗವಿದ್ದರೆ ನಿಮಿತ್ತವನ್ನು ಅನ್ವೇಷಣೆ ಮಾಡಬೇಕು. ಹೊರತು, ನಿಮಿತ್ತವಿದೆಯೆಂಬ ಕಾರಣದಿಂದ ಪ್ರಯೋಗ ಮಾಡಬೇಕಾಗಿಲ್ಲ ಎಂಬ ನ್ಯಾಯವು ಪ್ರಸಿದ್ಧವೇ ಆಗಿದೆ.

**ಪ್ರಕಾಶಃ** – नच ''अव्यक्तात्पुरुषः परः'' इत्यादौ स्वातन्त्र्यरूपनिमित्तमात्रेण हरौ प्रयोगस्साधित इति वाच्यम् ।

'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಸ್ಥಳದಲ್ಲಿ ಸ್ವಾತಂತ್ರ್ಯವೆಂಬ ನಿಮಿತ್ತದಿಂದಲೇ ಶ್ರೀಹರಿಯಲ್ಲಿ ಪ್ರಯೋಗವನ್ನು ಸಾಧಿಸಿದೆಯಲ್ಲವೇ? ಎಂದು ಪ್ರಶ್ನಿಸಬಾರದು.

**ಪ್ರಕಾಶಃ** – तत्र ''अव्यक्तमचलं शान्तं निष्कलम्'' इत्यादौ हरौ प्रयोगान्निमित्तभावाच्च ''अव्यक्तात्'' इत्यत्रेश्वरे वृत्तिरुक्ता ।

ಆ ಸ್ಥಳದಲ್ಲಿ 'ಅವ್ಯಕ್ತಮಚಲಂ ಶಾಂತಂ ನಿಷ್ಕಲಮ್' ಇತ್ಯಾದಿ ವಾಕ್ಯಗಳಲ್ಲಿ ಅವ್ಯಕ್ತಾದಿ ಶಬ್ದಗಳ ಪ್ರಯೋಗವು ಕಾಣಸುತ್ತಿದೆ. ಮತ್ತು ನಿಮಿತ್ತವೂ ಕೂಡ ಇರುತ್ತದೆ. ಆದ್ದರಿಂದ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಈಶ್ವರನಲ್ಲಿ ಶಬ್ದವೃತ್ತಿಯನ್ನು ಹೇಳಲಾಯಿತು.

**ಪ್ರಕಾಶಃ** – नचेह पञ्चादिशब्दानामीश्वरे प्रयोगश्श्रुत्यन्तरसिद्ध इति चेन्न ।

ಆದರೆ ಅವ್ಯಕ್ತಶಬ್ದದಂತೆ ಪ್ರಕೃತ ಪಂಚಾದಿಶಬ್ದಗಳ ಪ್ರಯೋಗವು ಈಶ್ವರನಲ್ಲಿ ಇರುತ್ತದೆನ್ನಲು ಯಾವುದೇ ಶ್ರುತಿಪ್ರಮಾಣವಿರುವುದಿಲ್ಲವೇ?

**प्रकाशः** – अन्यत्र पञ्चादिशब्दानां हरावप्रयोगेऽपीह निमित्तसद्भावमात्रेण हरौ पञ्चजनादिशब्दवृत्तिनिर्णयसम्भवात् ।

ಸಮಾಧಾನ - ಶ್ರುತ್ಯಂತರದಲ್ಲಿ ಪಂಚ ಮೊದಲಾದ ಶಬ್ದಗಳ ಪ್ರಯೋಗವನ್ನು ಶ್ರೀಹರಿಯಲ್ಲಿ ಮಾಡದಿದ್ದರೂ ಪ್ರವೃತ್ತಿನಿಮಿತ್ತವಿದೆಯೆಂಬ ಕಾರಣದಿಂದಲೇ 'ಪಂಚ, ಜನ' ಮೊದಲಾದ ಶಬ್ದಗಳನ್ನು ಶ್ರೀಹರಿಯಲ್ಲಿ ನಾವು ಪ್ರಯೋಗಿಸುತ್ತೇವೆ.

**प्रकाशः** – ''प्रयोगे सति'' इति न्यायस्य सुधायां ''अमुख्यप्रयोग-विषयत्वादस्य न्यायस्य । तत्र हि निमित्तं न सामग्री । किन्तु तदेकदेशः । मुख्यप्रयोगे तु निमित्तमेव सामग्री । नहि सिंहशब्दस्य शार्दूले प्रयोगाभाववदु-पगोरपत्येऽप्यौपगवशब्दस्य प्रयोगाभावो भवति'' इत्यानुमानिकनयेऽमुख्य-विषयत्वाभिधानात् ।

'ಪ್ರಯೋಗೇ ಸತಿ ನಿಮಿತ್ತಾನುಸಾರಣಂ ನತು ನಿಮಿತ್ತಮಸ್ತೀತಿ ಪ್ರಯೋಗಾನುಸರಣಂ' ಎಂಬ ನ್ಯಾಯವನ್ನು ಎಲ್ಲೆಡೆಯೂ ವಿವಕ್ಷಿಸಬಾರದು. ಕೇವಲ ಅಮುಖ್ಯಪ್ರಯೋಗದಲ್ಲಷ್ಟೇ ಅದನ್ನು ವಿವಕ್ಷಿಸಬೇಕು. ಮುಖ್ಯಪ್ರಯೋಗದಲ್ಲಿ ವಿವಕ್ಷಿಸಬಾರದು. ಇದನ್ನು ನ್ಯಾಯಸುಧೆಯಲ್ಲಿ ಹೀಗೆ ಹೇಳಿದ್ದಾರೆ - 'ಅಮುಖ್ಯಪ್ರಯೋಗವಿಷಯತ್ವಾದಸ್ಯ ನ್ಯಾಯಸ್ಯ । ತತ್ರ ಹಿ ನಿಮಿತ್ತಂ ನ ಸಾಮಗ್ರೀ । ಕಿಂತು ತದೇಕದೇಶಃ । ಮುಖ್ಯಪ್ರಯೋಗೇ ತು ನಿಮಿತ್ತಮೇವ ಸಾಮಗ್ರೀ । ನಹಿ ಸಿಂಹಶಬ್ದಸ್ಯ ಶಾರ್ದೂಲೇ ಪ್ರಯೋಗಾಭಾವವದು ಪಗೋರಪತ್ಯೇऽಪ್ಯೌಪಗವಶಬ್ದಸ್ಯ ಪ್ರಯೋಗಾಭಾವೋ ಭವತಿ''.

ಅಮುಖ್ಯಪ್ರಯೋಗಗಳಲ್ಲಿ ನಿಮಿತ್ತವಿದೆಯೆಂದು ಪ್ರಯೋಗವನ್ನು ಮಾಡಬಾರದು. ಪ್ರಯೋಗವಿದ್ದರೆ ಮಾತ್ರ ನಿಮಿತ್ತವನ್ನು ಅನುಸರಿಸಬೇಕು. ಏಕೆಂದರೆ ಲಾಕ್ಷಣಿಕವಾಗಿಯೋ, ಅಥವಾ ಗೌಣವಾಗಿಯೋ ಶಬ್ದವನ್ನು ಪ್ರಯೋಗಿಸುವಾಗ ಅದರಲ್ಲಿ ನಿಮಿತ್ತವೇ ಸಾಮಗ್ರಿಯಾಗಿರುವುದಿಲ್ಲ. ನಿಮಿತ್ತವು ಕೇವಲ ಸಾಮಗ್ರಿ ಏಕದೇಶವಾಗಿರುತ್ತದೆ. ಸಾಮಗ್ರಿಯ ಏಕದೇಶದಿಂದ ಪ್ರಯೋಗವನ್ನು ಮಾಡಲು ಸಾಧ್ಯವಿಲ್ಲ. ಆದರೆ ಮುಖ್ಯಪ್ರಯೋಗದಲ್ಲಿ ನಿಮಿತ್ತವೇ ಸಾಮಗ್ರಿಯಾಗಿರುತ್ತದೆ. ಏಕೆಂದರೆ ನಿಮಿತ್ತವಿದ್ದರೆ ಪ್ರಯೋಗವಿರಲೇಬೇಕು. ಸಿಂಹದಲ್ಲಿರುವ ಕ್ರೌರ್ಯದ ಸಾದೃಶ್ಯ ದೇವದತ್ತನಲ್ಲಿರುವುದರಿಂದ 'ಸಿಂಹೋ ದೇವದತ್ತಃ' ಎಂದು ಪ್ರಯೋಗಿಸುತ್ತೇವೆ. ಆದರೆ ಅದೇ ಸಿಂಹದಲ್ಲಿರುವ ಕ್ರೌರ್ಯದ ಸಾದೃಶ್ಯವು ಹುಲಿಯಲ್ಲಿಯೂ ಇರುತ್ತದೆ. ಆದರೆ ಯಾರೂ ಸಹ ಹುಲಿಯನ್ನು ಸಿಂಹ ಎಂದು ಕರೆಯುವುದಿಲ್ಲ. ಏಕೆಂದರೆ ಶಾರ್ದೂಲದಲ್ಲಿ ನಿಮಿತ್ತವು ಸಾಮಗ್ರಿಯು ಏಕದೇಶವಾಗಿರುತ್ತದೆ. ಇದರಂತೆ ಉಪಗೋವಿನ ಮಗನನ್ನು ಔಪಗವಶಬ್ದವನ್ನು ಪ್ರಯೋಗಿಸುತ್ತೇವೆ. ಔಪಗವನಲ್ಲಿ ಉಪಗೋರಪತ್ಯತ್ವ ಎಂದು ಒಂದೇ ಸಾಮಗ್ರಿಯಿರುತ್ತದೆ. ಇಂತಹ ನಿಮಿತ್ತವಿದ್ದಮೇಲೆ ಔಪಗವಶಬ್ದವನ್ನು ಅವನಲ್ಲಿ ಪ್ರಯೋಗ ಮಾಡಲೇಬೇಕು. ಪ್ರಯೋಗ

ಮಹಿಷಾದಿಗಳಲ್ಲಿಯೂ ಇರುತ್ತದೆ. ಆದರೂ ಸಹ ಮಹಿಷಾದಿಗಳನ್ನು ಯಾರೂ ಸಹ ಧೇನುವೆಂದು ಕರೆಯುವುದಿಲ್ಲ. ಹಸುವನ್ನಷ್ಟೇ ಧೇನುವೆಂದು ಕರೆಯುತ್ತಾರೆ. ಅದರಂತೆ ಇಲ್ಲಿಯೂ ಕೂಡ ವ್ಯಭಿಚಾರ ಬರುವುದಿಲ್ಲವೆಂದು ಸಮರ್ಥಿಸಿದ್ದಾಗಿದೆ. ಒಂದುವೇಳೆ ಬಹುತ್ವವು ರಾಜನ ಅಧೀನವೆಂದು ವಿವಕ್ಷಿಸಿ ಬಹುತ್ವವ್ಯವಹಾರವನ್ನು ರಾಜಾದಿಗಳಲ್ಲಿಯೂ ಬಹುತ್ವವ್ಯವಹಾರವನ್ನು ಮಾಡಬೇಕು. ಆದ್ದರಿಂದ ವ್ಯಭಿಚಾರ ಬರುತ್ತದೆಂದು ಅಂಗೀಕರಿಸಿದರೂ ಕೂಡ ಬ್ರಹ್ಮನಲ್ಲಿ ಅವರಾದಿಶಬ್ದಗಳಂತೆ ಬಹುತ್ವಾದಿಗಳ ಪ್ರಯೋಗಗಳು ಬರಬಹುದಲ್ಲವೇ? ಎಂಬುದಾಗಿ ಟೀಕೆಯಲ್ಲಿ ಮಾಡಿದ ಆಕ್ಷೇಪವನ್ನು 'ಅವರ' ಇತ್ಯಾದಿ ಗ್ರಂಥದಿಂದ ತೋರಿಸುತ್ತಿದ್ದಾರೆ. ಈ ಪ್ರಶ್ನೆಗೆ ಟೀಕೆಯಲ್ಲಿಯೇ ವಿಶೇಷಶ್ರುತಿಯಿರುವುದಿಲ್ಲ ಎಂಬುದಾಗಿ ಸಮಾಧಾನವನ್ನೂ ಕೂಡ ಹೇಳಿರುತ್ತಾರೆ. ಅದನ್ನೇ ಪ್ರಕೃತ ಗ್ರಂಥಕಾರರು ವಿವರಿಸುತ್ತಾ ಆಶಂಕಿಸಿ ನಿರಾಕರಣೆ ಮಾಡುತ್ತಿದ್ದಾರೆ 'ನಚ' ಇತ್ಯಾದಿ ಗ್ರಂಥದಿಂದ.

**प्रकाशः** – नन्वस्तु पञ्च जनादिशब्दप्रवृत्तिनिमित्तं बहुत्वादि प्रति स्वातन्त्र्यं तद्वृत्तौ निमित्तम् । न तावता तच्छब्दस्येहेश्वरे प्रयोगः । तत्र प्रमाणभावात् । ''प्रयोगे सति निमित्तानुसरणं नतु निमित्तमस्तीति प्रयोग'' इति न्यायात् ।

ಆಕ್ಷೇಪ - ಪಂಚ ಜನಾದಿಶಬ್ದಗಳ ಪ್ರವೃತ್ತಿನಿಮಿತ್ತ ಬಹುತ್ವವೇ ಆಗಿದೆ. ಮತ್ತು ಪರಮಾತ್ಮನ ಅಧೀನವೂ ಆಗಿದೆ. ಆದ್ದರಿಂದ 'ಪಂಚ ಜನಾ' ಎಂಬ ಶಬ್ದವು ಪರಮಾತ್ಮನಲ್ಲಿ ಪ್ರವೃತ್ತವೂ ಕೂಡ ಆಗುತ್ತದೆ. ಅಂದಮಾತ್ರಕ್ಕೆ 'ಪಂಚ ಜನಾ' ಎಂಬ ಶಬ್ದವನ್ನು ಪರಮಾತ್ಮನಲ್ಲಿ ಪ್ರಯೋಗ ಮಾಡಬೇಕೆನ್ನಲು ಪ್ರಮಾಣವಿಲ್ಲ. ಏಕೆಂದರೆ ಪ್ರಯೋಗವಿದ್ದರೆ ನಿಮಿತ್ತವನ್ನು ಅನ್ವೇಷಣೆ ಮಾಡಬೇಕು. ಹೊರತು, ನಿಮಿತ್ತವಿದೆಯೆಂಬ ಕಾರಣದಿಂದ ಪ್ರಯೋಗ ಮಾಡಬೇಕಾಗಿಲ್ಲ ಎಂಬ ನ್ಯಾಯವು ಪ್ರಸಿದ್ಧವೇ ಆಗಿದೆ.

**प्रकाशः** – नच ''अव्यक्तात्पुरुषः परः'' इत्यादौ स्वातन्त्र्यरूपनिमित्तमात्रेण हरौ प्रयोगस्साधित इति वाच्यम् ।

'ಅವ್ಯಕ್ತಾತ್ ಪುರುಷಃ ಪರಃ' ಇತ್ಯಾದಿ ಸ್ಥಳದಲ್ಲಿ ಸ್ವಾತಂತ್ರ್ಯವೆಂಬ ನಿಮಿತ್ತದಿಂದಲೇ ಶ್ರೀಹರಿಯಲ್ಲಿ ಪ್ರಯೋಗವನ್ನು ಸಾಧಿಸಿದೆಯಲ್ಲವೇ? ಎಂದು ಪ್ರಶ್ನಿಸಬಾರದು.

**प्रकाशः** – तत्र ''अव्यक्तमचलं शान्तं निष्कलम्'' इत्यादौ हरौ प्रयोगान्निमित्तभावाच्च ''अव्यक्तात्'' इत्यत्रेश्वरे वृत्तिरुक्ता ।

ಆ ಸ್ಥಳದಲ್ಲಿ 'ಅವ್ಯಕ್ತಮಚಲಂ ಶಾಂತಂ ನಿಷ್ಕಲಮ್' ಇತ್ಯಾದಿ ವಾಕ್ಯಗಳಲ್ಲಿ ಅವ್ಯಕ್ತಾದಿ ಶಬ್ದಗಳ ಪ್ರಯೋಗವು ಕಾಣಸುತ್ತಿದೆ. ಮತ್ತು ನಿಮಿತ್ತವೂ ಕೂಡ ಇರುತ್ತದೆ. ಆದ್ದರಿಂದ 'ಅವ್ಯಕ್ತಾತ್ ಪುರುಷಃ ಪರಃ' ಎಂಬಲ್ಲಿ ಈಶ್ವರನಲ್ಲಿ ಶಬ್ದವೃತ್ತಿಯನ್ನು ಹೇಳಲಾಯಿತು.

**प्रकाशः** – नचेह पञ्चादिशब्दानामीश्वरे प्रयोगश्श्रुत्यन्तरसिद्ध इति चेन्न ।

ಆದರೆ ಅವ್ಯಕ್ತಶಬ್ದದಂತೆ ಪ್ರಕೃತ ಪಂಚಾದಿಶಬ್ದಗಳ ಪ್ರಯೋಗವು ಈಶ್ವರನಲ್ಲಿ ಇರುತ್ತದೆನ್ನಲು ಯಾವುದೇ ಶ್ರುತಿಪ್ರಮಾಣವಿರುವುದಿಲ್ಲವೇ?

**प्रकाशः** – अन्यत्र पञ्चादिशब्दानां हरावप्रयोगेऽपीह निमित्तसद्भावमात्रेण हरौ पञ्चजनादिशब्दवृत्तिनिर्णयसम्भवात् ।

ಸಮಾಧಾನ - ಶ್ರುತ್ಯಂತರದಲ್ಲಿ ಪಂಚ ಮೊದಲಾದ ಶಬ್ದಗಳ ಪ್ರಯೋಗವನ್ನು ಶ್ರೀಹರಿಯಲ್ಲಿ ಮಾಡದಿದ್ದರೂ ಪ್ರವೃತ್ತಿನಿಮಿತ್ತವಿದೆಯೆಂಬ ಕಾರಣದಿಂದಲೇ 'ಪಂಚ, ಜನ' ಮೊದಲಾದ ಶಬ್ದಗಳನ್ನು ಶ್ರೀಹರಿಯಲ್ಲಿ ನಾವು ಪ್ರಯೋಗಿಸುತ್ತೇವೆ.

**प्रकाशः** – ''प्रयोगे सति'' इति न्यायस्य सुधायां ''अमुख्यप्रयोग-विषयत्वादस्य न्यायस्य । तत्र हि निमित्तं न सामग्री । किन्तु तदेकदेशः । मुख्यप्रयोगे तु निमित्तमेव सामग्री । नहि सिंहशब्दस्य शार्दूले प्रयोगाभाववदु-पगोरपत्येऽप्यौपगवशब्दस्य प्रयोगाभावो भवति'' इत्यानुमानिकनयेऽमुख्य-विषयत्वाभिधानात् ।

'ಪ್ರಯೋಗೇ ಸತಿ ನಿಮಿತ್ತಾನುಸಾರಣಂ ನತು ನಿಮಿತ್ತಮಸ್ತೀತಿ ಪ್ರಯೋಗಾನುಸರಣಂ' ಎಂಬ ನ್ಯಾಯವನ್ನು ಎಲ್ಲೆಡೆಯೂ ವಿವಕ್ಷಿಸಬಾರದು. ಕೇವಲ ಅಮುಖ್ಯಪ್ರಯೋಗದಲ್ಲಷ್ಟೇ ಅದನ್ನು ವಿವಕ್ಷಿಸಬೇಕು. ಮುಖ್ಯಪ್ರಯೋಗದಲ್ಲಿ ವಿವಕ್ಷಿಸಬಾರದು. ಇದನ್ನು ನ್ಯಾಯಸುಧೆಯಲ್ಲಿ ಹೀಗೆ ಹೇಳಿದ್ದಾರೆ - 'ಅಮುಖ್ಯಪ್ರಯೋಗವಿಷಯತ್ವಾದಸ್ಯ ನ್ಯಾಯಸ್ಯ । ತತ್ರ ಹಿ ನಿಮಿತ್ತಂ ನ ಸಾಮಗ್ರೀ । ಕಿಂತು ತದೇಕದೇಶಃ । ಮುಖ್ಯಪ್ರಯೋಗೇ ತು ನಿಮಿತ್ತಮೇವ ಸಾಮಗ್ರೀ । ನಹಿ ಸಿಂಹಶಬ್ದಸ್ಯ ಶಾರ್ದೂಲೇ ಪ್ರಯೋಗಾಭಾವವದು ಪಗೋರಪತ್ಯೇಽಪ್ಯೌಪಗವಶಬ್ದಸ್ಯ ಪ್ರಯೋಗಾಭಾವೋ ಭವತಿ''.

ಅಮುಖ್ಯಪ್ರಯೋಗಗಳಲ್ಲಿ ನಿಮಿತ್ತವಿದೆಯೆಂದು ಪ್ರಯೋಗವನ್ನು ಮಾಡಬಾರದು. ಪ್ರಯೋಗವಿದ್ದರೆ ಮಾತ್ರ ನಿಮಿತ್ತವನ್ನು ಅನುಸರಿಸಬೇಕು. ಏಕೆಂದರೆ ಲಾಕ್ಷಣಿಕವಾಗಿಯೋ, ಅಥವಾ ಗೌಣವಾಗಿಯೋ ಶಬ್ದವನ್ನು ಪ್ರಯೋಗಿಸುವಾಗ ಅದರಲ್ಲಿ ನಿಮಿತ್ತವೇ ಸಾಮಗ್ರಿಯಾಗಿರುವುದಿಲ್ಲ. ನಿಮಿತ್ತವು ಕೇವಲ ಸಾಮಗ್ರಿ ಏಕದೇಶವಾಗಿರುತ್ತದೆ. ಸಾಮಗ್ರಿಯ ಏಕದೇಶದಿಂದ ಪ್ರಯೋಗವನ್ನು ಮಾಡಲು ಸಾಧ್ಯವಿಲ್ಲ. ಆದರೆ ಮುಖ್ಯಪ್ರಯೋಗದಲ್ಲಿ ನಿಮಿತ್ತವೇ ಸಾಮಗ್ರಿಯಾಗಿರುತ್ತದೆ. ಏಕೆಂದರೆ ನಿಮಿತ್ತವಿದ್ದರೆ ಪ್ರಯೋಗವಿರಲೇಬೇಕು. ಸಿಂಹದಲ್ಲಿರುವ ಕ್ರೌರ್ಯದ ಸಾದೃಶ್ಯ ದೇವದತ್ತನಲ್ಲಿರುವುದರಿಂದ 'ಸಿಂಹೋ ದೇವದತ್ತಃ' ಎಂದು ಪ್ರಯೋಗಿಸುತ್ತೇವೆ. ಆದರೆ ಅದೇ ಸಿಂಹದಲ್ಲಿರುವ ಕ್ರೌರ್ಯದ ಸಾದೃಶ್ಯವು ಹುಲಿಯಲ್ಲಿಯೂ ಇರುತ್ತದೆ. ಆದರೆ ಯಾರೂ ಸಹ ಹುಲಿಯನ್ನು ಸಿಂಹ ಎಂದು ಕರೆಯುವುದಿಲ್ಲ. ಏಕೆಂದರೆ ಶಾರ್ದೂಲದಲ್ಲಿ ನಿಮಿತ್ತವು ಸಾಮಗ್ರಿಯು ಏಕದೇಶವಾಗಿರುತ್ತದೆ. ಇದರಂತೆ ಉಪಗೋವಿನ ಮಗನನ್ನು ಔಪಗವಶಬ್ದವನ್ನು ಪ್ರಯೋಗಿಸುತ್ತೇವೆ. ಔಪಗವನಲ್ಲಿ ಉಪಗೋರಪತ್ಯತ್ವ ಎಂದು ಒಂದೇ ಸಾಮಗ್ರಿಯಿರುತ್ತದೆ. ಇಂತಹ ನಿಮಿತ್ತವಿದ್ದಮೇಲೆ ಔಪಗವಶಬ್ದವನ್ನು ಅವನಲ್ಲಿ ಪ್ರಯೋಗ ಮಾಡಲೇಬೇಕು. ಪ್ರಯೋಗ

ಮಾಡುವುದಿಲ್ಲವೆಂದು ಹೇಳಲಾಗದು. ಈ ಯುಕ್ತಿಯಿಂದ ಅಮುಖ್ಯಪ್ರಯೋಗದಲ್ಲಷ್ಟೇ 'ಪ್ರಯೋಗೇ ಸತಿ ನಿಮಿತ್ತಾನುಸಾರಣಂ' ಎಂಬ ನಿಯಮದ ಅನ್ವಯವಾಗುತ್ತದೆ. ಮುಖ್ಯಪ್ರಯೋಗವಾಗಿದ್ದರೆ ನಿಮಿತ್ತವಿದ್ದರೆ ಪ್ರಯೋಗವನ್ನು ಅವಶ್ಯ ಮಾಡಲೇ ಬೇಕು ಎಂಬುದನ್ನು ಒಪ್ಪಬೇಕು. ಹೀಗೆ ಆನುಮಾನಿಕಾಧಿಕರಣದ ಸುಧೆಯಲ್ಲಿ ಹೇಳಿರುತ್ತಾರೆ.

**प्रकाशः** – ''इन्द्रियेभ्यः'' इत्यादौ हरावन्यत्र प्रयोगादर्शनेपि स्वातन्त्र्यरूपनिमित्तमात्रेण पूर्वत्र हराविन्द्रियादिशब्दवृत्तेरनुमतत्वाच्च । तत्र त्रिपादीन्यायेन वाक्यान्तरे हरौ प्रयोगस्य सिद्धत्वे त्विहापि तथा ।

ಮತ್ತು 'ಇಂದ್ರಿಯೇಭ್ಯಃ' ಇತ್ಯಾದಿ ಶ್ಲೋಕದಲ್ಲಿ 'ಇಂದ್ರಿಯ', 'ಅರ್ಥ' ಮೊದಲಾದ ಶಬ್ದಗಳ ಪ್ರಯೋಗವು ಶ್ರುತ್ಯಂತರದಿಂದ ಶ್ರೀಹರಿಯಲ್ಲಿ ಸಿದ್ಧವಾಗಿಲ್ಲ. ಆದರೂ ಕೂಡ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವಿದೆಯೆಂಬ ಕಾರಣದಿಂದ ಹಿಂದೆ ಇಂದ್ರಿಯ, ಅರ್ಥ ಮೊದಲಾದ ಶಬ್ದಗಳ ಸಮನ್ವಯವನ್ನೂ ಕೂಡ ಮಾಡಲಾಗಿತ್ತು. ಆದ್ದರಿಂದ ಶ್ರುತಿಪ್ರಮಾಣವೇ ಪ್ರಯೋಗಕ್ಕೆ ಕಾರಣವಲ್ಲ.

ಹಿಂದಿನ ಮೂರು ಪಾದಗಳಲ್ಲಿ ಅನ್ಯತ್ರಪ್ರಸಿದ್ದವಾದ ಎಲ್ಲಾ ಶಬ್ದಗಳನ್ನು ಶ್ರೀಹರಿಯಲ್ಲಿ ಸಮನ್ವಯ ಮಾಡಿದ್ದಾಗಿದೆ. ಆದ್ದರಿಂದ ಇಂದ್ರಿಯಾದಿಶಬ್ದಗಳ ಸಮನ್ವಯವೂ ಶ್ರುತ್ಯಂತರದಲ್ಲಿ ಸಿದ್ಧವಾಗಿದೆ. ಅಂತಹ ಶ್ರುತ್ಯಂತರಬಲದಿಂದಲೇ ಇಂದ್ರಿಯಾದಿಶಬ್ದಗಳ ಸಮನ್ವಯವನ್ನು ಹೇಳಿದ್ದೇವೆಂದು ಉತ್ತರಿಸಿದರೆ ಪ್ರಕೃತ ಪಂಚ ಜನಶಬ್ದದ ವಿಷಯದಲ್ಲಿಯೂ ಹೀಗೆ ಸಮನ್ವಯವನ್ನು ತಿಳಿಯಬಹುದು.

**प्रकाशः** – अवरत्वादिप्रबललिङ्गेनेन्द्रियादिशब्दानामुभयत्र प्रसिद्धिनिरासेनान्यत्रैव प्रसिद्धत्वसम्पादनवदिहापि पूर्वपक्षेऽस्मिन्वाक्ये बहुत्वादिलिङ्गेन तथात्वसम्पादन-सम्भवादिति भावः ।

ಅವರತ್ವಾದಿ ಪ್ರಬಲವಾದ ಲಿಂಗಗಳಿಂದ ಇಂದ್ರಿಯಾದಿಶಬ್ದಗಳಿಗೆ ಉಭಯತ್ರಪ್ರಸಿದ್ಧತ್ವವನ್ನು ನಿರಾಸ ಮಾಡಿ, ಅನ್ಯತ್ರೈವಪ್ರಸಿದ್ಧತ್ವವನ್ನು ಸಮರ್ಥಿಸಿದಂತೆ ಪ್ರಕೃತ ಪಂಚ ಜನಾದಿಶಬ್ದಗಳ ವಿಷಯದಲ್ಲಿಯೂ ಬೃಹತ್ವಾದಿಲಿಂಗಗಳಿಂದ ಉಭಯತ್ರಪ್ರಸಿದ್ಧತ್ವವನ್ನು ನಿರಾಕರಿಸಿ ಅನ್ಯತ್ರೈವಪ್ರಸಿದ್ಧತ್ವವನ್ನು ಸಂಪಾದಿಸಬಹುದು. ಆದ್ದರಿಂದ ಪೂರ್ವಪಕ್ಷದ ಉದಯವಾಗಲು ಸಾಧ್ಯವಿಲ್ಲ.

**प्रकाशः** – अनन्यगतिस्थल एव स्वातन्त्र्याश्रयणं नतु सत्यां गतावित्येतदाशङ्क्य निराह – **नच राजेति** ।।

ಗತ್ಯಂತರವಿಲ್ಲದಿದ್ದಾಗ ಮಾತ್ರ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಬೇಕು. ಬೇರೆ ಗತಿಯಿದ್ದಾಗ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಆಶ್ರಯಿಸಬಾರದೆಂದು ಆಶಂಕಿಸಿ ನಿರಾಕರಿಸುತ್ತಿದ್ದಾರೆ 'ನಚ ರಾಜೇತಿ' ಇತ್ಯಾದಿ ವಾಕ್ಯದಿಂದ.

ಪರಿಪೂರ್ಣಚಂದ್ರಿಕಾ

**प्रकाशः** – **मुख्यत्वादिति** ।। ''स्वातन्त्र्यं तत्र मुख्यं स्यात्'' इत्युक्तेराश्रितं प्रत्याश्रयेपि स्वातन्त्र्यस्योक्तेश्चेति भावः ।

'ಸ್ವಾತಂತ್ರ್ಯಂ ತತ್ರ ಮುಖ್ಯಂ ಸ್ಯಾತ್' ಎಂಬ ಅನುವ್ಯಾಖ್ಯಾನದಲ್ಲಿ ಹೇಳಿದಂತೆ ಸ್ವಾತಂತ್ರ್ಯವನ್ನೇ ಮುಖ್ಯವೆಂದು ಹೇಳಿದ್ದಾರೆ. ಇಂತಹ ಸ್ವಾತಂತ್ರ್ಯವು ಯಾವ ಆಶ್ರಯದಲ್ಲಿದೆಯೋ ಅಲ್ಲಿಯೂ ಸ್ವಾತಂತ್ರ್ಯವಿದೆಯೆಂದು ಹಿಂದೆ ಹೇಳಲಾಗಿತ್ತು. ತದ್ಗತತ್ವ ಇರುವ ಕಡೆಯೂ ಕೂಡ ಸ್ವಾತಂತ್ರ್ಯವಿದೆ. ಹೀಗೆ ಸ್ವಾತಂತ್ರ್ಯವನ್ನು ಮುಖ್ಯವೆಂದು ಪರಿಗಣಿಸಿದ್ದರಿಂದ ಮುಖ್ಯವಾದದ್ದು ಕೂಡದಿದ್ದಾಗ ಮಾತ್ರ ಅಮುಖ್ಯವಾದದ್ದನ್ನು ಗ್ರಹಣ ಮಾಡಬೇಕು.

**प्रकाशः** – एवं च मुख्यस्वातन्त्र्यरूपनिमित्तमपहायाऽमुख्यं तद्गतत्वमादाय तद्ब्रह्मणि न युक्तमन्यत्र युक्तमिति पूर्वपक्षो न युक्त इति भावेनाह – **नच मुख्येति** ।।

ಮುಖ್ಯವಾದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಅಮುಖ್ಯವಾದ ತದ್ಗತತ್ವವನ್ನು ವಿವಕ್ಷಿಸಿ ಅದು ಬ್ರಹ್ಮನಲ್ಲಿ ಕೂಡುವುದಿಲ್ಲ ಬೇರೆಕಡೆ ಕೂಡುತ್ತದೆ ಎಂಬ ಪೂರ್ವಪಕ್ಷವೇ ಹುಟ್ಟುವುದಿಲ್ಲ. ಈ ಅಭಿಪ್ರಾಯದಿಂದ 'ನಚ ಮುಖ್ಯ' ಎಂಬ ಗ್ರಂಥವು ಹೊರಟಿದೆ.

**प्रकाशः** – ननु सति शब्दस्य तत्परत्वे स्वातन्त्र्यनिमित्तानुसरणम् । तदेव नेत्याह – **सम्भवति चेति** ।।

ಪಂಚ ಜನಾ ಮೊದಲಾದ ಶಬ್ದಗಳು ಭಗವತ್‌ಪರವೆಂದು ನಿರ್ಣಯವಾದರೆ, ಸ್ವಾತಂತ್ರ್ಯವೆಂಬ ನಿಮಿತ್ತವನ್ನು ಅನುಸರಿಸಬಹುದು. ಆದರೆ ಈ ಶಬ್ದಗಳು ಭಗವತ್‌ಪರವೆಂಬುದೇ ನಿರ್ಣಯವಾಗಿಲ್ಲವಲ್ಲ ? ಎಂಬ ಪ್ರಶ್ನೆಗೆ 'ಸಂಭವತಿ ಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः** – ''तमेवैकं जानथ'' इति ब्रह्मण एव मुमुक्षुज्ञेयत्ववचनादन्यस्य तदवचनादिति द्वौ हेतू । आदिपदेन ''अविशेषात्'' इत्युक्त ''नामानि सर्वाणि'' इति श्रुतिरूपहेतुः । ''अधीयते एक'' इत्याद्युक्तहेतवश्च ग्राह्याः ।

ಅವ್ಯಕ್ತಾದಿಶಬ್ದಗಳು ಭಗತವ್‌ಪರವೆನ್ನಲು ಯಾವ ಯಾವ ಕಾರಣಗಳನ್ನು ಹೇಳಲಾಯಿತೋ, ಆ ಎಲ್ಲಾ ಕಾರಣಗಳು ಪಂಚ ಜನಾದಿಶಬ್ದಗಳಲ್ಲಿಯೂ ಇರುತ್ತವೆಂದು ತಿಳಿಯಬೇಕು. 'ತಮೇವೈಕಂ ಜಾನಥ' ಎಂಬಲ್ಲಿ ಬ್ರಹ್ಮನೊಬ್ಬನೇ ಮುಮುಕ್ಷುಗಳಿಂದ ಜ್ಞೇಯನಾಗಿದ್ದಾನೆ. ಉಳಿದವರು ಯಾರೂ ಸಹ ಮುಮುಕ್ಷುಗಳಿಂದ ಜ್ಞೇಯರಾಗಿಲ್ಲ ಎಂಬುದಾಗಿ ಎರಡು ಹೇತುಗಳನ್ನು 'ಜ್ಞೇಯತ್ವಾವಚನಾಚ್ಚ' ಎಂಬಲ್ಲಿ ಹೇಳಲಾಗಿದೆ. ಆದಿಪದಿಂದ 'ಚಮಸವದವಿಶೇಷಾತ್' ಎಂಬಲ್ಲಿ ಹೇಳಲ್ಪಟ್ಟ 'ನಾಮಾನಿ ಸರ್ವಾಣಿ' ಇತ್ಯಾದಿ ಶ್ರುತಿಗಳು ಬ್ರಹ್ಮನ ವಿಷಯದಲ್ಲಿ ಹೇತುಗಳಾಗಿವೆ. 'ತಥಾ ಹ್ಯಧೀಯತೇ ಏಕೇ' ಎಂಬಲ್ಲಿ ಹೇಳಿದ ಹೇತುಗಳಿಂದಲೂ

ಅವ್ಯಕ್ತಾದಿಶಬ್ದಗಳು ಬ್ರಹ್ಮಪರವೆಂದು ನಿರ್ಣಯವಾಗಿವೆ. ಈ ಎಲ್ಲಾ ಹೇತುಗಳು ಪ್ರಕೃತ 'ಪಂಚ ಜನಾ' ಮೊದಲಾದ ಶಬ್ದಗಳಲ್ಲಿಯೂ ಕೂಡ ಇರುತ್ತವೆ. ಆದ್ದರಿಂದ ಅವ್ಯಕ್ತಾದಿಶಬ್ದಗಳು ಯಾವರೀತಿಯಾಗಿ ಭಗವತ್‌ಪರವಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಹೊಂದಿವೆಯೋ, ಅದರಂತೆ 'ಪಂಚ ಜನಾ' ಮೊದಲಾದ ಶಬ್ದಗಳೂ ಕೂಡ ಭಗವತ್‌ಪರವಾದ್ದರಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತವನ್ನು ಹೊಂದಿವೆ. ಹೀಗೆ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತದಿಂದಲೇ ಪಂಚ ಜನಾದಿಶಬ್ದಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಲು ಬರುವಾಗ ಪೂರ್ವಪಕ್ಷ ಉದಯವೇ ಆಗುವುದಿಲ್ಲವೆಂದು ತಿಳಿಯಬೇಕು.

**प्रकाशः – एतेन ''नच सर्वे वेदा इति श्रुतिर्नियामिका । तस्यास्सङ्कोचसम्भवात्'' इति टीकोक्तं न युक्तम् । बाधकाभावादित्युक्तं भवति ।।**

ಹೀಗೆ ಹೇಳಿದ್ದರಿಂದ ಟೀಕೆಯಲ್ಲಿ ಸಮರ್ಥಿಸಿದ ಪೂರ್ವಪಕ್ಷದ ಉದಯವೂ ಕೂಡ ಸರಿಯಲ್ಲವೆಂದು ತಿಳಿಯುತ್ತದೆ. ಟೀಕೆಯಲ್ಲಿ 'ನಚ ಸರ್ವೇ ವೇದಾ ಇತಿ ಶ್ರುತಿರ್ನಿಯಾಮಿಕಾ । ತಸ್ಯಾಃ ಸಂಕೋಚಸಂಭವಾತ್' 'ಸರ್ವೇ ವೇದಾ' ಇತ್ಯಾದಿ ಶ್ರುತಿಗಳು ಪಂಚ ಜನಾದಿಶಬ್ದಗಳು ಹರಿಪರವಾಗಲು ಪ್ರಮಾಣವಾಗುವುದಿಲ್ಲ. ಏಕೆಂದರೆ ಈ ಶ್ರುತಿಗೆ ಸಂಕೋಚ ಮಾಡಬಹುದು ಎಂದು ಪೂರ್ವಪಕ್ಷದ ಸಮರ್ಥನೆಯನ್ನು ಮಾಡಿದ್ದಾರೆ. ಆದರೆ ಸಂಕೋಚ ಮಾಡಲು ಯಾವುದೇ ಕಾರಣಗಳಿರುವುದಿಲ್ಲ. ಬಾಧಕಪ್ರಮಾಣವಿದ್ದರೆ ಮಾತ್ರ ಸಂಕೋಚ ಮಾಡಬಹುದಿತ್ತು.

**प्रकाशः – तस्मादिति ।।** उक्तरीत्याऽव्यभिचारेण विशेषश्रुत्यभावस्याप्रयोजकत्वेन मुख्यत्वेन तात्पर्यनिर्णायकाभावेन च स्वातन्त्र्यरूपनिमित्तेन पञ्च जनादिशब्दवृत्तेर्हरौ सम्भवादिति भावः ।।

ಒಟ್ಟು ಇಷ್ಟನ್ನು ತಿಳಿಯಬೇಕು - 'ಯಾವ ಶಬ್ದದ ಪ್ರವೃತ್ತಿನಿಮಿತ್ತವು ಯಾರ ಅಧೀನವಾಗಿದೆಯೋ, ಅವನು ಆ ಶಬ್ದದಿಂದ ಪ್ರತಿಪಾದ್ಯನು' ಎಂಬ ವ್ಯಾಪ್ತಿಗೆ ಎಲ್ಲಿಯೂ ವ್ಯಭಿಚಾರವಿಲ್ಲ. ಬಹುತ್ವವು ರಾಜನ ಅಧೀನವೇ ಆಗಿರುವುದಿಲ್ಲ. ಒಂದುವೇಳೆ ಅಧೀನವೆಂದು ವಿವಕ್ಷಿಸಿದರೂ ರಾಜನಲ್ಲಿ ಬಹುತ್ವದ ಪ್ರಯೋಗವಿರುವುದಿಲ್ಲ. ಆದ್ದರಿಂದ ವ್ಯಭಿಚಾರವಿಲ್ಲ. ಮತ್ತು 'ಸ ಬಂಧಯತಿ' 'ಸ ಅವರಯತಿ' ಇತ್ಯಾದಿಯಾಗಿ ವಿಶೇಷ ಶ್ರುತಿಯಿರುವಂತೆ ಪಂಚ ಜನ ವಿಷಯದಲ್ಲಿ ಅಂತಹ ಶ್ರುತಿಯಿಲ್ಲವಲ್ಲ ಎಂಬ ಶಂಕೆಯು ಅಪ್ರಯೋಜಕವಾಗಿದೆ. ಎಲ್ಲಾ ಶಬ್ದಕ್ಕೂ ಸ್ವಾತಂತ್ರ್ಯವೇ ಪ್ರವೃತ್ತಿನಿಮಿತ್ತವಾದ ಮೇಲೆ ಇಂತಹ ಶ್ರುತಿಯ ಅವಶ್ಯಕತೆಯಿರುವುದಿಲ್ಲ. ಮತ್ತು ಸ್ವಾತಂತ್ರ್ಯ ತದ್ಗತತ್ವಗಳಲ್ಲಿ ಸ್ವಾತಂತ್ರ್ಯವೇ ಮುಖ್ಯವಾದ್ದರಿಂದ ತದ್ಗತತ್ವವು ಕೂಡದಿದ್ದಾಗ ಸ್ವಾತಂತ್ರ್ಯವನ್ನು ವಿವಕ್ಷಿಸಬೇಕೆಂದು ಹೇಳಲಾಗದು. ಮತ್ತು ತಾತ್ಪರ್ಯ-ನಿರ್ಣಾಯಕವಾದ ಶ್ರುತಿಗಳು ಇರುವುದರಿಂದ ಪಂಚ ಜನಾದಿಶಬ್ದಗಳು ಭಗವತ್‌ಪರವೆಂದು ನಿರ್ಣಯಿಸಬಹುದು. ಈ ಎಲ್ಲಾ ಕಾರಣಗಳಿಂದ ಸ್ವಾತಂತ್ರ್ಯವೆಂಬ ಪ್ರವೃತ್ತಿನಿಮಿತ್ತದಿಂದ ಪಂಚ ಜನಾದಿಶಬ್ದಗಳು ಶ್ರೀಹರಿಯಲ್ಲಿ ಸಮನ್ವಯವಾಗುತ್ತವೆ. ಆದ್ದರಿಂದ ಪೂರ್ವಪಕ್ಷದ ಉದಯವೇ ಆಗುವುದಿಲ್ಲ.

ಪರಿಪೂರ್ಣಚಂದ್ರಿಕಾ

**प्रकाशः** – इह वाक्येति ।। अन्यथाऽऽधाराधेयत्वादेरप्रतीतेरिति भावः ।। यथावेति ।। यथा चैतत्तथा मूलएव प्राक् पूर्वपक्षावसरेऽभिहितम् ।

ಹೀಗೆ ಪೂರ್ವಪಕ್ಷದ ಉದಯವೇ ಆಗುವುದಿಲ್ಲವೆಂಬ ಆಕ್ಷೇಪವು ಪ್ರಾಪ್ತವಾದರೆ, ಗ್ರಂಥಕಾರರು 'ಯಥಾ' ಇತ್ಯಾದಿ ಗ್ರಂಥದಿಂದ ಉತ್ತರವನ್ನು ನೀಡುತ್ತಿದ್ದಾರೆ. ಆಕ್ಷೇಪದ ಅಂಶಗಳನ್ನು ಆಚ್ಛಾದನೆ ಮಾಡಿ ಪೂರ್ವಪಕ್ಷವನ್ನು ಮಾಡಬೇಕೆಂದು ಅಭಿಪ್ರಾಯ. ಈ ವಿಷಯದಲ್ಲಿ ಮೊದಲನೆಯ ಉದಾಹರಣೆಯನ್ನು 'ಯಥಾ ಜ್ಯೋತಿರುಪಕ್ರಮಾತ್' ಎಂಬುದರಿಂದ ಹೇಳುತ್ತಿದ್ದಾರೆ. ಒಂದುವೇಳೆ ಜ್ಯೋತಿರುಪಕ್ರಮಾಧಿಕರಣದ ನ್ಯಾಯವನ್ನು ವಿವಕ್ಷಿಸಿದರೆ ಎಲ್ಲಾ ಪದಗಳೂ ಕೂಡ ಸಬುದ್ಧ್ಯಂತವಾಗುವುದರಿಂದ ಆಧಾರಾಧೇಯಭಾವದ ಪ್ರತೀತಿಯೇ ಬರುವುದಿಲ್ಲ. ಹಾಗಾಗಿ ಪದಸಮನ್ವಯವನ್ನು ಮರೆತು, ವಾಕ್ಯಸಮನ್ವಯದ ಉದ್ದೇಶದಿಂದಷ್ಟೇ ಈ ಅಧಿಕರಣವು ಹೊರಟಿದೆಯೆನ್ನಬೇಕು. ಮತ್ತೊಂದು ಉದಾಹರಣೆಯನ್ನು 'ಯಥಾ ವಾ' ಇತ್ಯಾದಿ ಗ್ರಂಥದಿಂದ ಹೇಳುತ್ತಿದ್ದಾರೆ. 'ತದಧೀನತ್ವಾತ್' ಎಂಬ ಸೂತ್ರದಿಂದಲೇ ಎಲ್ಲಾ ಪದಗಳ ಸಮನ್ವಯವು ಸಿದ್ಧವಾಗಿದ್ದರೂ ಜ್ಯೋತಿರುಪಕ್ರಮಾಧಿಕರಣದಲ್ಲಿ ಪುನಃ ಪ್ರತ್ಯೇಕವಾಗಿ ಪೂರ್ವಪಕ್ಷವನ್ನು ಪದಸಮನ್ವಯದ ದೃಷ್ಟಿಯಿಂದ ಮಾಡಲಾಗಿದೆಯೋ, ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು. ಅದು ಹೇಗೆ ಎಂಬುದನ್ನು ಜ್ಯೋತಿರುಪಕ್ರಮಾಧಿಕರಣದ ಪೂರ್ವಪಕ್ಷದಲ್ಲಿಯೇ ಸಮರ್ಥಿಸಿದ್ದಾರೆ.

**प्रकाशः** – तमाच्छाद्य तमतन्त्रीकृत्य तमवज्ञायेति वा । यथा पूर्वतन्त्रे द्वितीयाद्यपादे ''व्रीहीनवहन्ति'' इत्यत्र ''धर्ममात्रे तु कर्म स्यात्'' इति पञ्चमाधिकरणरीत्या शेषित्वबोधकद्वितीयायां सत्यामपि तामाच्छाद्य भावार्थस्य शेषित्वं व्रीहीणां शेषत्वमुत विपरीतमिति चिन्ता कृता ''तानि द्वैधं गुणप्रधानभूतानि'' इति चतुर्थेऽधिकरणे तथेति भावः ।

'ತಮಾಚ್ಛಾದ್ಯ' ಎಂದರೆ ತದಧೀನತ್ವನ್ಯಾಯವನ್ನು ಅಪ್ರಯೋಜಕವೆಂದು ಶಬ್ದವಾಚ್ಯತ್ವಕ್ಕೆ ಪ್ರಯೋಜಕವೇ ಅಲ್ಲ ಎಂದು ವಿವಕ್ಷಿಸಿ, ಈ ಅಧಿಕರಣವು ಹೊರಟಿದೆ. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತವು ಇರುತ್ತದೆ -

'ಧರ್ಮಮಾತ್ರೇ ತು ಕರ್ಮ ಸ್ಯಾತ್' (೨-೧-೫)[1]

ಈ ಅಧಿಕರಣದಲ್ಲಿ 'ವ್ರೀಹೀನವಹಂತಿ' ಎಂಬುದು ವಿಷಯವಾಕ್ಯವಾಗಿದೆ. ದ್ವಿತೀಯಾವಿಭಕ್ತ್ಯಂತವಾದ ಪದವು ಶೇಷಿತ್ವವನ್ನು ಹೇಳುವುದರಿಂದ ವ್ರೀಹಿಯು ಶೇಷಿಯಾಗಿದೆ. ಅವಹನನವು ಶೇಷವಾಗಿದೆಯೆಂದು ಈ ವಾಕ್ಯದಿಂದಲೇ ತಿಳಿಯುತ್ತದೆ. ಹೀಗೆ ನಾಲ್ಕನೆಯ ಅಧಿಕರಣದಲ್ಲಿಯೇ 'ವ್ರೀಹಿ' ಎಂಬುದು ಶೇಷಿಯಾಗಿದೆ ಎಂದು ದ್ವಿತಿಯಾವಿಭಕ್ತಿಯಿಂದಲೇ ಸ್ಪಷ್ಟವಾಗಿ ನಿರ್ಣಯವಾಗಿದೆ. ಆದರೂ ಸಹ ಇದನ್ನು ಆಚ್ಛಾದನೆ

(೧) ಈ ಅಧಿಕರಣವು ಹಿಂದೆ ಬಂದಿರುವುದರಿಂದ ಪುನಃ ಇಲ್ಲಿ ಭಾಟ್ಟಸಂಗ್ರಹವನ್ನು ನೀಡಿರುವುದಿಲ್ಲ.
ನ ಸಂಯ್ಯೋಪಸಂಗ್ರಹಾಧಿಕರಣ (೧-೪-೩)

ಮಾಡಿ 'ತಾನಿ ದ್ವೈಧಂ ಗುಣಪ್ರಧಾನಭೂತಾನಿ' ಎಂಬ ಹಿಂದಿನ ಅಧಿಕರಣದಲ್ಲಿ ಅದನ್ನೇ ವಿಚಾರ ಮಾಡಲಾಗಿದೆ. ಭಾವಾರ್ಥವೆನಿಸಿದ ಅವಹನನವು ಶೇಷಿಯಾಗಿ, ವ್ರೀಹಿಯು ಶೇಷವಾಗಿದೆಯೋ, ಅಥವಾ ವ್ರೀಹಿಯು ಶೇಷಿಯಾಗಿ ಭಾವಾರ್ಥವೆನಿಸಿದ ಅವಹನನವು ಶೇಷವಾಗಿದೆಯೋ? ಹೀಗೆ ಮುಂದಿನ ಅಧಿಕರಣದಲ್ಲಿ ವಿಚಾರ ಮಾಡಲಾಗಿದೆ. ವಿಷಯವನ್ನು ಆಚ್ಛಾದನೆ ಮಾಡಿ, ಹಿಂದಿನ ಅಧಿಕರಣದಲ್ಲಿ ಹೇಗೆ ವಿಚಾರ ಮಾಡಿದ್ದಾರೋ ಅದರಂತೆ ಇಲ್ಲಿಯೂ ಕೂಡ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ ಪೂರ್ವಪಕ್ಷ ಮಾಡಲಾಗಿದೆಯೆಂದು ತಿಳಿಯಬೇಕು.

**प्रकाशः** – तर्हि स न्यायो व्यर्थ इत्यत आह – **अवरत्वेति** ।। टीकाविरोधमाशङ्क्याह – **टीकायामिति** ।। **एतदिति**।। तदाच्छादनाभिप्रायेत्यर्थः ।।

ಹಾಗಾದರೆ ತದಧೀನತ್ವನ್ಯಾಯವನ್ನು ಹೇಳುವುದು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ 'ಅವರತ್ವ' ಇತ್ಯಾದಿ ವಾಕ್ಯದಿಂದ ಉತ್ತರಿಸಿದ್ದಾರೆ. ಟೀಕಾವಿರೋಧವನ್ನು 'ಟೀಕಾಯಾಮ್' ಎಂಬುದರಿಂದ ಆಶಂಕಿಸುತ್ತಿದ್ದಾರೆ. 'ಏತತ್' ಎಂಬುದು ತದಧೀನತ್ವನ್ಯಾಯದ ಆಚ್ಛಾದನೆಯೆಂಬ ಅಭಿಪ್ರಾಯದಲ್ಲಿದೆ.

**प्रकाशः – तत्प्रयोगापत्तेरिति** ।। एतच्चाभ्युपेत्यवादेन । धेनूदञ्चनकारादिशब्द दृष्टान्तेनैवमादिशब्देष्वपि लोकेऽप्रयोगस्योपपादितत्वादिति बोध्यम् ।

ಗ್ರಂಥದಲ್ಲಿ 'ತತ್ಪ್ರಯೋಗಾಪತ್ತೇಃ' ಎಂಬುದರಿಂದ ರಾಜನಲ್ಲಿ ಬಹುತ್ವವಾಚಕವಾದ ಶಬ್ದವನ್ನು ಪ್ರಯೋಗ ಮಾಡಬೇಕಿತ್ತು. ಆದರೂ ಪ್ರಯೋಗ ಮಾಡದ ಕಾರಣ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಲ್ಲ ಎಂದು ಅಂಗೀಕಾರವಾದದಿಂದ ಹೇಳಿರುತ್ತಾರೆ. ಏಕೆಂದರೆ ಪೂರ್ವಪೂರ್ವಪ್ರಯೋಗವಿಲ್ಲದಿರುವುದೇ ಇದಕ್ಕೆ ಕಾರಣವೆಂದು ಉತ್ತರಿಸಬಹುದು. ಯಾವರೀತಿಯಾಗಿ ಮಹಿಷಾದಿಗಳಲ್ಲಿ ಧಾನಕರ್ಮತ್ವ ಇದ್ದರೂ ಧೇನುಶಬ್ದದ ವ್ಯವಹಾರವಿರುವುದಿಲ್ಲ. ಕುಂಭಕಾರನಲ್ಲಿ ಉದಂಚನಕರ್ತೃತ್ವಾದಿಗಳಿದ್ದರೂ 'ಉದಂಚನಕಾರ' ಇತ್ಯಾದಿ ಶಬ್ದಪ್ರಯೋಗಗಳಿರುವುದಿಲ್ಲ. ಏಕೆಂದರೆ ಹಿಂದಿನವರು ಪ್ರಯೋಗ ಮಾಡಿಲ್ಲ ಎಂಬುದಷ್ಟೇ ಇದಕ್ಕೆ ಕಾರಣ. ರಾಜನಲ್ಲಿಯೂ ಕೂಡ ಬಹುತ್ವವಿಶಿಷ್ಟವಾಚಕ ಶಬ್ದಪ್ರಯೋಗಗಳಿಲ್ಲದಿರಲು ಇದನ್ನೇ ಕಾರಣ ಎಂದು ಹೇಳಬಹುದಿತ್ತು. ಆದ್ದರಿಂದ 'ತತ್ಪ್ರಯೋಗಾಪತ್ತೇಃ' ಎಂದು ಹೇಳಿರುವುದು ಅಭ್ಯುಪೇತ್ಯವಾದದಿಂದ ಎಂದು ತಿಳಿಯಬೇಕು.

**प्रकाशः** – अत्र सर्वत्र तदधीनत्वाच्छादनेन वा तस्यानिमित्तत्वाभ्युपगमाद्वा पूर्वपक्ष इत्यत्र संवादमाह – **अत एवेति** ।।

ತದಧೀನತ್ವ ನ್ಯಾಯವನ್ನು ಆಚ್ಛಾದನೆ ಮಾಡಿ ಪೂರ್ವಪಕ್ಷ ಮಾಡಬೇಕು ಎಂಬುದಕ್ಕೆ ಹಾಗೂ ತದಧೀನತ್ವವು ಪ್ರವೃತ್ತಿನಿಮಿತ್ತವೇ ಅಲ್ಲ ಎಂದು ಒಪ್ಪಿ ಪೂರ್ವಪಕ್ಷ ಮಾಡಬೇಕು ಎಂಬುದಕ್ಕೂ ಭಾಷ್ಯದ ಸಮ್ಮತಿಯನ್ನು 'ಅತ ಏವ' ಎಂಬುದರಿಂದ ನೀಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – द्वेधेति** ।। आच्छादनाभिप्रायेण वा व्यभिचारात् स्वातन्त्र्य-निमित्तत्वाक्षेपाभिप्रायेण वेत्यर्थः ।

'ದ್ವೇಧಾ' ಎಂದರೆ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ ಪೂರ್ವಪಕ್ಷ ಮಾಡಬೇಕು ಅಥವಾ ಮತ್ತು ತದಧೀನತ್ವನ್ಯಾಯಕ್ಕೆ ವಶೀಕೃತಬಹುಜನನಾದ ರಾಜನಲ್ಲಿ ವ್ಯಭಿಚಾರ ಬರುತ್ತದೆ. ಏನೆಂದರೆ ರಾಜನಲ್ಲಿ ಅಮಂಗಳತ್ವ ಎಂಬ ಉಪಾಧಿ ಇಲ್ಲದ ಕಾರಣ ಅಥವಾ ರಾಜನಲ್ಲಿಯೂ ಬಹುತ್ವವ್ಯವಹಾರವನ್ನು ಮಾಡಬೇಕಾಗಿತ್ತು. ಆದರೂ ಪ್ರಯೋಗ ಮಾಡದಿರುವುದರಿಂದ ವ್ಯಭಿಚಾರ ಬರುತ್ತದೆ. ಈ ಕಾರಣದಿಂದ ಸ್ವಾತಂತ್ರ್ಯವು ಪ್ರವೃತ್ತಿನಿಮಿತ್ತವಾಗುವುದಿಲ್ಲ. ಈ ಎರಡು ಅಭಿಪ್ರಾಯಗಳನ್ನು ಮುಂದೆಯೂ ತಿಳಿಯಬೇಕು.

ಪಾಂಡುರಂಗಿಕೇಶವಾಚಾರ್ಯವಿರಚಿತ

## ಗುರುರಾಜೀಯಮ್ (ಭಾವದೀಪ)

**गुरुराजीयम् – न संख्योपसङ्ग्रहात्** ।। टीकायामवरादिशब्दवदन्यत्रादृष्टत्वेऽपि वृत्तिः किं न स्यादित्यत्रात्रेति न प्रतीयते । सन्निधानाचान्यत्रैवेति प्रतीयते । ततश्च विरुद्धतेत्यतः शेषं सम्पूर्य व्याख्याति ।। **अवरादिशब्दवदिति** ।। तत्र हेत्वन्तरेण सिद्धायां वृत्तावित्यादिटीकायां किं तद्धेत्वन्तरमिति न प्रतीयते । अतस्तत्प्रदर्शनपूर्वकं व्याचष्टे ।। **न चावरादिष्विति**।। **अन्यथेति** ।। हेत्वन्तरेण सिद्धायां वृत्तौ तदधीनत्वनिमित्तमात्राश्रयणादित्यर्थः । ननु भृत्यगतस्य जयस्य राजगतत्वाभावेन राज्ञि जयशब्दवृत्तौ तद्गतत्वस्य निमित्तत्वासम्भवेन तत्र स्वातन्त्र्यस्य निमित्तत्वकल्पनेऽपि प्रकृते पञ्चजनादिशब्दप्रवृत्तिनमित्तस्यान्यगतत्वे-नान्यत्र पञ्चजनादिशब्दप्रवृत्तौ तद्गतत्वस्यैव निमित्तत्वसम्भवेन स्वातन्त्र्यस्या-निमित्तत्वान्न पञ्चजनादिशब्दानां ब्रह्मपरत्वमित्याशङ्कते ।। **नचेति** ।। तथा च मुख्यामुख्यन्यायविरोध इति भावः । मुख्यसम्भवे ह्यमुख्यग्रहणे मुख्यामुख्यन्याय-विरोधः । नतु तदसम्भवेपि । प्रकृते मुख्यासम्भवादेवामुख्यार्थोऽभ्युपगम्यत इत्यत आह – **सम्भवति चेति** ।। समन्वये स्थित एव जगत्स्रष्टृत्वसर्वशब्दवाच्यत्वादिगुण पूर्त्यर्थमिति शेषः । ननु तदधीनत्वेनैव शब्दानां ब्रह्मपरत्वोपपत्तौ किं तत्तच्छब्दप्रवृत्तिनिमित्तस्य तद्गतत्वव्युत्पादनेन । वैयर्थ्यादित्यत आह – **अन्यथेति**।। नन्वेवमवरादिशब्देष्वपि तदधीनत्वन्यायेन ब्रह्मपरत्वोक्तिरयुक्तेत्यत आह – **अवरत्वादाविति** ।। नन्वेवं तदधीनत्व-न्यायमभ्युपेत्यापि पूर्वपक्षश्चेत्तर्हि टीकाविरोधः । तत्र हेत्वन्तरेण सिद्धायां वृत्तौ निमित्तमात्राश्रयणादित्यादिना

तदधीनत्वन्यायासम्भवाभिधानादित्यत आह – **टीकायामिति ।। एतदभिप्रायेति ।।** तदधीनत्वन्यायेन ब्रह्मपरत्वे स्थितेऽपि तमाच्छाद्य पञ्चजनादिशब्दप्रवृत्तिनिमित्त-बहुत्वाद्यपि ब्रह्मण्यस्तीतीह विचारः क्रियत इत्यभिप्रायेणेत्यर्थः । टीकास्वारस्यार्थं पक्षान्तरमाह – **यद्वेति ।। द्वेधा व्याख्येयेति।।** तदधीनत्वन्यायमाच्छाद्येत्युक्तप्रकारद्वयपरतयेत्यर्थः ।




ಈ ಅಧಿಕರಣದ ಪೂರ್ವಪಕ್ಷ ಹೀಗಿದೆ - 'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ಬೃಹದಾರಣ್ಯಕೋಪನಿಷತ್ತಿನಲ್ಲಿ ಬಹುತ್ವಸಂಖ್ಯೆಯನ್ನು ಹೇಳುವ 'ಪಂಚ' 'ಜನಾಃ' ಮೊದಲಾದ ಶಬ್ದಗಳು ಇರುತ್ತವೆ. ಈ ಶಬ್ದಗಳು ಒಬ್ಬನೇ ಬ್ರಹ್ಮನನ್ನು ಹೇಳಲು ಸಾಧ್ಯವಿಲ್ಲ. ಬಹುತ್ವವಾಚಕವಾದ ಈ ಶಬ್ದಗಳು ಬಹುಜನರನ್ನೇ ಹೇಳಬೇಕು ಹೊರತು, ಒಬ್ಬನನ್ನು ಹೇಳಲು ಸಾಧ್ಯವಿಲ್ಲ. ಮತ್ತು ಆಧಾರಾಧೇಯಭಾವವೂ ಕೂಡ ಈ ಶ್ರುತಿಯಿಂದಲೇ ತಿಳಿಯುತ್ತಿದೆ. ಒಬ್ಬನೇ ಬ್ರಹ್ಮನಲ್ಲಿ ಆಧಾರಾಧೇಯಭಾವವೂ ಕೂಡ ಯುಕ್ತವಾಗುವುದಿಲ್ಲ. ಆದ್ದರಿಂದ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ವಾಕ್ಯಶೇಷದಲ್ಲಿ ಪ್ರಸಕ್ತರಾದ ಪ್ರಾಣಾದಿಗಳೇ ಈ ಶ್ರುತಿಗಳಿಂದ ಪ್ರತಿಪಾದ್ಯರಾಗುತ್ತಾರೆ ಹೊರತು, ಬ್ರಹ್ಮನಾಗುವುದಿಲ್ಲ.

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯ ಸಮನ್ವಯಕ್ಕಾಗಿ ಈ ಅಧಿಕರಣವು ಪ್ರಾರಂಭವಾಗಬೇಕಾಗಿಲ್ಲ. ಏಕೆಂದರೆ ಹಿಂದಿನ ತದಧೀನತ್ವಾಧಿಕರಣದಿಂದಲೇ ಇಲ್ಲಿರುವ ಶಬ್ದಗಳ ಸಮನ್ವಯವೂ ಕೂಡ ಶ್ರೀಹರಿಯಲ್ಲಿ ಸಿದ್ಧವಾಗುತ್ತದೆ. ಬಹುತ್ವವೆಂಬ ಪ್ರವೃತ್ತಿನಿಮಿತ್ತವು ಪರಮಾತ್ಮನ ಅಧೀನವಾದ್ದರಿಂದ ತದ್ವಾಚಕವಾದ 'ಪಂಚ' ಮೊದಲಾದ ಶಬ್ದಗಳು ಪರಮಾತ್ಮನಲ್ಲಿ ಸಮನ್ವಯಗೊಳ್ಳುತ್ತವೆಂದು ಹೇಳಬಹುದೆಂಬ ಪ್ರಶ್ನೆಯು ಬರುತ್ತದೆ. ಆದರೆ ತದಧೀನತ್ವನ್ಯಾಯವನ್ನು ಆಚ್ಛಾದನೆ ಮಾಡಿ, ಈ ಅಧಿಕರಣದ ಪೂರ್ವಪಕ್ಷ ಹೊರಟಿದೆ. ಎಲ್ಲೆಡೆಯೂ ತದಧೀನತ್ವನ್ಯಾಯವನ್ನು ವಿವಕ್ಷಿಸುವುದಾದಲ್ಲಿ ಆಯಾ ಶಬ್ದಗಳಿಂದ ಪ್ರತಿಪಾದ್ಯವಾದ ಗುಣಗಳ ಸಮನ್ವಯವನ್ನು ಶ್ರೀಹರಿಯಲ್ಲಿ ಮಾಡಲು ಸಾಧ್ಯವೇ ಆಗುವುದಿಲ್ಲ. ಇಂದ್ರಾದಿಶಬ್ದಗಳ ಸಮನ್ವಯದ ವಿಷಯದಲ್ಲಿಯೂ ತದಧೀನತ್ವನ್ಯಾಯವನ್ನೇ ವಿವಕ್ಷಿಸುವುದಾದಲ್ಲಿ ಪರಮೈಶ್ವರ್ಯಾದಿ ಗುಣಗಳೂ ಕೂಡ ಶ್ರೀಹರಿಯಲ್ಲಿ ಸಿದ್ಧವಾಗದಿರುವ ಪ್ರಸಂಗ ಬರುತ್ತದೆ. ಆದ್ದರಿಂದ ಪ್ರತಿಯೊಂದು ಅಧಿಕರಣಗಳಲ್ಲಿಯೂ ತದಧೀನತ್ವನ್ಯಾಯವನ್ನು ಮುಚ್ಚಿಟ್ಟು ಪೂರ್ವಪಕ್ಷ ಮಾಡಬೇಕು. 'ದುಃಖೀ', 'ಅವರ' ಮೊದಲಾದ ಶಬ್ದಗಳ ಸಮನ್ವಯವನ್ನು ಮಾಡುವಾಗ 'ತದ್ಗತತ್ವ' ಎಂಬ ಪ್ರವೃತ್ತಿನಿಮಿತ್ತವನ್ನು ವಿವಕ್ಷಿಸಲು ಸಾಧ್ಯವೇ ಆಗುವುದಿಲ್ಲ. ಅನಿವಾರ್ಯವಾಗಿ ಸ್ವಾತಂತ್ರ್ಯ ಎಂಬ ಪ್ರವೃತ್ತಿನಿಮಿತ್ತವನ್ನು ಅನುಸರಿಸಬೇಕಾಗುತ್ತದೆ. ಆದರೆ ಉಳಿದ ಅಧಿಕರಣಗಳಲ್ಲಿ ಅಂತಹ ಅನಿವಾರ್ಯತೆ ಇರುವುದಿಲ್ಲವೆಂಬುದನ್ನು ಗಮನಿಸಬೇಕು. ಅಥವಾ ಸ್ವಾತಂತ್ರ್ಯವೆಂಬುದನ್ನು ಪ್ರವೃತ್ತಿನಿಮಿತ್ತವೆನ್ನುವುದಾದರೆ ಅನೇಕ ಜನರನ್ನು ವಶಮಾಡಿಕೊಂಡ ರಾಜನಲ್ಲಿಯೂ ಬಹುತ್ವವ್ಯವಹಾರವು ಬರಬೇಕಾಗುತ್ತದೆ. ಒಬ್ಬನೇ ರಾಜನನ್ನು ಬಹುರಾಜನೆಂದು ಎಲ್ಲರೂ ಕರೆಯಬೇಕಾಗುತ್ತದೆ. ಯಾರೂ ಸಹ ಲೋಕದಲ್ಲಿ ಒಬ್ಬ ರಾಜನನ್ನು

ಬಹುರಾಜನೆಂದು ಕರೆಯುವುದಿಲ್ಲ. ಆದ್ದರಿಂದ ಸ್ವಾತಂತ್ರ್ಯವನ್ನು ಪ್ರವೃತ್ತಿನಿಮಿತ್ತವೆಂದು ಹೇಳಲು ಸಾಧ್ಯವಿಲ್ಲ. ಹೀಗೆ ಸ್ವಾತಂತ್ರ್ಯವನ್ನೇ ಆಕ್ಷೇಪ ಮಾಡಿ ಪೂರ್ವಪಕ್ಷವನ್ನೂ ಕೂಡ ಮಾಡಬಹುದು. ಆದ್ದರಿಂದ ಈ ಅಧಿಕರಣವು ತದಧೀನತ್ವನ್ಯಾಯದಿಂದ ಗತಾರ್ಥವಾಗುವುದಿಲ್ಲ.





## ಗುಹಾಧಿಕರಣದಿಂದಲೂ ಗತಾರ್ಥವಲ್ಲದ ಪೂರ್ವಪಕ್ಷವು ಸುದೃಢವಾಯಿತು

### तात्पर्यचन्द्रिका

**ननु ''गुहां प्रविष्टौ'' इति न्यायेन ब्रह्मणि द्वित्ववद्बहुत्वमपि सिद्धम् । एकत्वविरोधित्वे द्वित्वबहुत्वयोरविशेषात् ।**

ಅನುವಾದ - ಪ್ರಶ್ನೆ - 'ಗುಹಾಂ ಪ್ರವಿಷ್ಟೌ' ಎಂಬ ಸೂತ್ರದಲ್ಲಿ ದ್ವಿತ್ವ ಬಹುತ್ವ ಮೊದಲಾದ ಧರ್ಮಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿದ್ದಾಗಿದೆ. ಹೇಗೆಂದರೆ ಏಕತ್ವಕ್ಕೆ ದ್ವಿತ್ವವು ಹೇಗೆ ವಿರೋಧಿಯಾಗಿದೆಯೋ, ಅದರಂತೆ ಬಹುತ್ವವೂ ಕೂಡ ವಿರೋಧಿಯೇ ಆಗಿದೆ. ಆದ್ದರಿಂದ ದ್ವಿತ್ವವು ಪರಮಾತ್ಮನಲ್ಲಿ ಸಿದ್ಧವಾದಂತೆ ಬಹುತ್ವವೂ ಕೂಡ ಪರಮಾತ್ಮನಲ್ಲಿ ಗುಹಾಧಿಕರಣದಿಂದಲೇ ಸಿದ್ಧವಾಗಿರುವಾಗ ಈ ಅಧಿಕರಣವು ವ್ಯರ್ಥವಲ್ಲವೇ?

**नच तत्रानेकत्वं प्रत्ययार्थः । इह तु प्रातिपदिकार्थः । प्रत्ययास्वारस्यं च सह्यम् । नतु प्रातिपदिकस्येति शङ्क्यम् ।**

ಗುಹಾಧಿಕರಣದಲ್ಲಿ ಅನೇಕತ್ವವು ಪ್ರತ್ಯಯದ ಅರ್ಥವಾಗಿದೆ. ಈ ಅಧಿಕರಣದಲ್ಲಿ ಪಂಚ ಮೊದಲಾದ ಪ್ರಾತಿಪದಿಕದ ಅರ್ಥವಾಗಿದೆ. ಪ್ರತ್ಯಯದ ಅರ್ಥವು ಅಸ್ವಾರಸ್ಯವಾದರೆ ಸಹಿಸಬಹುದು. ಆದರೆ ಪ್ರಾತಿಪದಿಕದ ಅರ್ಥವು ಅಸ್ವಾರಸ್ಯವಾದರೆ ಸಹಿಸಲು ಸಾಧ್ಯವಿಲ್ಲ. ಆದ್ದರಿಂದ ಪ್ರಾತಿಪದಿಕದ ಅರ್ಥಸ್ವಾರಸ್ಯವನ್ನು ನಿರ್ಣಯಿಸಲು ಈ ಅಧಿಕರಣದಲ್ಲಿ ಪರಮಾತ್ಮನಲ್ಲಿ ಬಹುತ್ವಾದಿ ಧರ್ಮಗಳನ್ನು ಸಮನ್ವಯ ಮಾಡುತ್ತಿರುವುದು ಸಾರ್ಥಕವಲ್ಲವೇ? ಎಂದು ಪ್ರಶ್ನಿಸಬಾರದು.

**अनेकत्वस्यैव तत्र साधितत्वेन तद्वाचिनोर्द्वयोरपि स्वारस्यादिति चेन्न ।**

ಗುಹಾಧಿಕರಣದಲ್ಲಿ ಪ್ರತ್ಯಯದ ಅರ್ಥವೆನಿಸಿದ ದ್ವಿತ್ವಾದಿ ಸಂಖ್ಯೆಗಳ ಸಮನ್ವಯವನ್ನು ಮಾಡಿರುವುದಲ್ಲ. ಕೇವಲ ಅನೇಕತ್ವ ಎಂಬ ಧರ್ಮವು ಪರಮಾತ್ಮನಲ್ಲಿ ಬರುತ್ತದೆ ಎಂದಷ್ಟೇ ಸಮನ್ವಯ ಮಾಡಲಾಗಿದೆ. ಅಂತಹ ಅನೇಕತ್ವವು ಪ್ರಾತಿಪದಿಕದ ಅರ್ಥವಾದರೇನು? ಪ್ರತ್ಯಯದ ಅರ್ಥವಾದರೇನು? ಎರಡರ ಸಮನ್ವಯವೂ ಕೂಡ ಗುಹಾಧಿಕರಣದಿಂದಲೇ ಸಿದ್ಧವಾಗುತ್ತಿರುವಾಗ ಈ ಅಧಿಕರಣ ಹೊರಟಿದ್ದು ವ್ಯರ್ಥವಲ್ಲವೇ? ಎಂಬ ಆಕ್ಷೇಪ ಬಂದೇ ಬರುತ್ತದೆ.

**औत्सर्गिकं ह्यनेकत्वसंख्याया भिन्नवृत्तित्वम् । अन्यथा ''द्वासुपर्ण'' इत्यादावपि भेदो न सिद्ध्येत् ।**

ಉತ್ತರ - ಅನೇಕತ್ವಸಂಖ್ಯೆಯು ಭಿನ್ನವ್ಯಕ್ತಿಗಳಲ್ಲಿರುತ್ತವೆಂಬುದು ಔತ್ಸರ್ಗಿಕವಾದ ನಿಯಮ. ಹೀಗೊಪ್ಪದಿದ್ದರೆ 'ದ್ವಾಸುಪರ್ಣ' ಇತ್ಯಾದಿ ಶ್ರುತಿಗಳಿಂದಲೂ ಕೂಡ ಭೇದವು ಸಿದ್ಧವಾಗದಿರ-ಬೇಕಾದೀತು.

**तच्च ''ऋतं पिबन्ता'' इत्यत्र बाधकैरपोदितम् । न चेहापवादकमस्ति।**

ಅಂತಹ ನಿಯಮವನ್ನು 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಬಾಧಕಗಳಿರುವುದರಿಂದ ಬಿಡಲಾಗಿದೆ. 'ಋತಂ ಪಿಬಂತೌ' ಇತ್ಯಾದಿ ಶ್ರುತಿಯಲ್ಲಿ ಬ್ರಹ್ಮಶಬ್ದ ಮೊದಲಾದ ಲಿಂಗಗಳಿರುವುದರಿಂದ ಅನೇಕತ್ವ ಸಂಖ್ಯೆಯಿದ್ದರೂ ಏಕತ್ವವೇ ಬರಬಹುದೆಂದು ಒಪ್ಪಲಾಗಿದೆ. ಆದರೆ ಪ್ರಕೃತ 'ಯಸ್ಮಿನ್ ಪಂಚ' ಇತ್ಯಾದಿ ಶ್ರುತಿಯಲ್ಲಿ ಅಂತಹ ಅಪವಾದಕ ಪ್ರಮಾಣಗಳೇನೂ ಕಾಣಿಸುತ್ತಿಲ್ಲ. ಆದ್ದರಿಂದ ಈ ಶ್ರುತಿಯಿಂದ ತಿಳಿಯುತ್ತಿರುವ ಬಹುತ್ವ ಸಂಖ್ಯೆಯು ಪರಮಾತ್ಮನಲ್ಲಿ ಬರುವುದಿಲ್ಲವೆಂಬ ಪೂರ್ವಪಕ್ಷವು ಉದಯವಾಗುತ್ತದೆ. ಗುಹಾಧಿಕರಣದಲ್ಲಿ ಬಾಧಕಪ್ರಮಾಣವಿರುವುದರಿಂದ ಅನೇಕತ್ವ- ಸಂಖ್ಯೆಯನ್ನು ಪರಮಾತ್ಮನಲ್ಲಿ ಸಮರ್ಥಿಸಿದ್ದು ತಪ್ಪಾಗುವುದಿಲ್ಲ. ಆದರೆ ಪ್ರಕೃತ ವಿಷಯವಾಕ್ಯದಲ್ಲಿ ಅಂತಹ ಬಾಧಕಪ್ರಮಾಣಗಳಿಲ್ಲದ ಕಾರಣ ಅನೇಕತ್ವಸಂಖ್ಯೆಯನ್ನು ಸಮರ್ಥಿಸಲಾಗದು ಎಂಬ ಆಕ್ಷೇಪಕ್ಕೆ ಉತ್ತರಿಸಲು ಈ ಅಧಿಕರಣ ಹೊರಟಿದ್ದು ಸಾರ್ಥಕವಾಗಿದೆ ಎಂದಭಿಪ್ರಾಯ.

**नच ''प्राणस्य प्राणमुत चक्षुषश्चक्षुरुत श्रोत्रस्य श्रोत्रमन्नस्यान्नं मनसो मनः'' इति वाक्यशेषोऽपवादकः । ''प्राणस्य प्राणश्चक्षुषश्चक्षुः'' इत्यादिश्रुत्यन्तरेण प्राणप्राणत्वादेर्ब्रह्मलिङ्गत्वादिति वाच्यम् ।**

ಪ್ರಶ್ನೆ - 'ಪ್ರಾಣ್ಯಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನಃ' ಎಂಬ ವಾಕ್ಯಶೇಷವೇ ಅಪವಾದಕವಾಗಿದೆ. ಏಕೆಂದರೆ 'ಪ್ರಾಣಸ್ಯ ಪ್ರಾಣಃ ಚಕ್ಷುಷಶ್ಚಕ್ಷುಃ' ಇತ್ಯಾದಿಯಾದ ಶ್ರುತ್ಯಂತರದಿಂದ ಪ್ರಾಣಪ್ರಾಣತ್ವಾದಿಗಳು ಬ್ರಹ್ಮನ ಲಿಂಗವೆಂದು ನಿರ್ಣಯವಾಗಿದೆ. ಇಂತಹ ಬ್ರಹ್ಮನ ಲಿಂಗವಿರುವುದರಿಂದ ಪಂಚ ಮೊದಲಾದ ಸಂಖ್ಯಾವಾಚಕ ಶಬ್ದಗಳಿಂದ ಬ್ರಹ್ಮನೇ ಪ್ರತಿಪಾದ್ಯನಾಗುತ್ತಾನಲ್ಲವೇ? ಆದ್ದರಿಂದ ಪೂರ್ವಪಕ್ಷವು ಹೇಗೆ ಉದಯವಾಗುತ್ತದೆ?

**द्वितीयानिर्दिष्टानां प्राणादीनां ब्रह्मत्वेऽपि षष्ठीनिर्दिष्टानामब्रह्मत्वात् । तेषामेव च ''यस्मिन्'' इति सप्तम्या ब्रह्माश्रितत्वेनोक्तपञ्चजनत्वस्य न्याय्यत्वात् ।**

ಉತ್ತರ - ವಾಕ್ಯಶೇಷದ ಬಲದಿಂದ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಮೊದಲಾದ ಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಸಿದ್ಧವಾಗಬಹುದೇ ಹೊರತು, ಪ್ರಾಣಸ್ಯ ಮೊದಲಾದ ಷಷ್ಠ್ಯಂತವಾದ ಪದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗುವುದಿಲ್ಲ. ಅಂತಹ ಷಷ್ಠೀನಿರ್ದಿಷ್ಟವಾದ ಶಬ್ದಪ್ರತಿಪಾದ್ಯರಾದ ಪ್ರಾಣಾದಿಗಳೇ 'ಯಸ್ಮಿನ್' ಎಂಬ ಸಪ್ತಮೀವಿಭಕ್ತ್ಯಂತವಾದ ಪದದಿಂದ ಪ್ರತಿಪಾದ್ಯನಾದ ಬ್ರಹ್ಮನಲ್ಲಿ ಆಶ್ರಿತರಾಗಿದ್ದಾರೆ. ಅವರೇ ಪಂಚಜನ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆಂದು ಹೇಳಬೇಕು ಹೊರತು, ಬ್ರಹ್ಮನು ಪಂಚಜನಾದಿ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲ.

**किञ्च ''यस्मिन्पञ्च पञ्च जना'' इति पञ्चजनानां ब्रह्माश्रितता भाति । नच ब्रह्म स्वाश्रितम् ।**

ಮತ್ತು 'ಯಸ್ಮಿನ್ ಪಂಚ ಪಂಚ ಜನಾಃ' ಎಂಬುದಾಗಿ ಪಂಚ ಜನರು ಬ್ರಹ್ಮನಲ್ಲಿ ಆಶ್ರಿತರಾಗಿದ್ದಾರೆಂದು ವಾಕ್ಯದಿಂದ ತಿಳಿಯುತ್ತಿದೆ ಹೊರತು, ಬ್ರಹ್ಮನು ಸ್ವಾಶ್ರಿತನಾಗಿದ್ದಾನೆಂದು ಈ ವಿಷಯವಾಕ್ಯದಿಂದ ತಿಳಿಯುತ್ತಿಲ್ಲ.

**तस्मात् षष्ठीनिर्दिष्टा अब्रह्मात्मका एव प्राणादयः पञ्चजनादिशब्दवाच्याः । नतु द्वितीयानिर्दिष्टं ब्रह्म तद्वाच्यमिति ।**

ಹೀಗೆ ಬಹುತ್ವಸಂಖ್ಯೆಯು ಬ್ರಹ್ಮನಲ್ಲಿ ಅಯುಕ್ತವಾದ್ದರಿಂದ, ಸ್ವಾಶ್ರಿತತ್ವವೂ ಕೂಡ ಬ್ರಹ್ಮನಲ್ಲಿ ಅಯುಕ್ತವಾದ್ದರಿಂದ ಷಷ್ಠೀನಿರ್ದಿಷ್ಟರಾದವರು ಬ್ರಹ್ಮನಿಗಿಂತ ಭಿನ್ನರಾದ ಪ್ರಾಣಾದಿಗಳೇ ಆಗುತ್ತಾರೆ. ಅವರೇ ಪಂಚ ಜನಾದಿಶಬ್ದಗಳಿಂದ ಪ್ರತಿಪಾದ್ಯರಾಗುತ್ತಾರೆ. ಹೊರತು, ದ್ವಿತೀಯಾವಿಭಕ್ತ್ಯಂತಪದದಿಂದ ನಿರ್ದಿಷ್ಟನಾದ ಬ್ರಹ್ಮನು ಷಷ್ಠ್ಯಂತಪದದಿಂದ ಪ್ರತಿಪಾದ್ಯನಾಗುವುದಿಲ್ಲ. ಪಂಚ ಜನಾದಿ ಶಬ್ದಗಳಿಂದಲೂ ಕೂಡ ಪ್ರತಿಪಾದ್ಯವಾಗುವುದಿಲ್ಲವೆಂಬ ಪೂರ್ವಪಕ್ಷವು ಸುದೃಢವಾಯಿತು.

**प्रकाशः –**

''ऋतं पिबन्तौ'' इत्यादिटीकां व्यनक्ति – **नन्विति** ।। अत्र द्वित्वमेव साधितं न बहुत्वमित्यत उक्तम् ।। **द्वित्ववदिति** ।।

ವಿವರಣೆ - 'ಋತಂ ಪಿಬಂತೌ' ಇತ್ಯಾದಿ ಟೀಕೆಯನ್ನು ವ್ಯಾಖ್ಯಾನ ಮಾಡಲು 'ನನು' ಇತ್ಯಾದಿ ಗ್ರಂಥವು ಹೊರಟಿದೆ. ಗುಹಾಧಿಕರಣದಲ್ಲಿ ದ್ವಿತ್ವವನ್ನಷ್ಟೇ ಸಾಧಿಸಲಾಗಿದೆ. ಬಹುತ್ವವನ್ನಲ್ಲವೆಂಬ ಶಂಕೆಗೆ 'ದ್ವಿತ್ವವತ್' ಎಂಬುದರಿಂದ ಉತ್ತರಿಸಿದ್ದಾರೆ.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः – ''यथैकस्मिन्नेव पाशोऽदितिः पाशानिति श्रुतिः । तथैकस्मिन्नीश्वरेऽस्तु पिबन्ताविति वागपि'' इति स्वोत्प्रेक्षितपक्षानुरोधेन प्राप्तार्थमाशङ्क्य निरस्यति – नच तत्रेति ।।**

ಯಥೈಕಸ್ಮಿನ್ನೇವ ಪಾಶೋಽದಿತಿಃ ಪಾಶಾನಿತಿ ಶ್ರುತಿಃ।
ತಥೈಕಸ್ಮಿನ್ನೀಶ್ವರೇಽಸ್ತು ಪಿಬಂತಾವಿತಿ ವಾಗಪಿ ॥

'ಅದಿತಿಃ ಪಾಶಾನ್' ಎಂಬ ಮಂತ್ರದಲ್ಲಿ ಅನೇಕ ಪಾಶಗಳಿದ್ದಲ್ಲಿ ಬಹುವಚನವನ್ನು ಪ್ರಯೋಗಿಸಿದ್ದು ಸಾರ್ಥಕವಾಗುತ್ತಿತ್ತು. ಆದರೆ ಏಕಪಶುಕವಾದ ಯಾಗದಲ್ಲಿ ಒಂದೇ ಪಾಶವಿರುವುದರಿಂದ ಬಹುವಚನವು ಹೇಗೆ ಯುಕ್ತವಾಗುತ್ತದೆ? ಎಂಬ ಶಂಕೆಗೆ ಪೂರ್ವಮೀಮಾಂಸೆಯಲ್ಲಿ ಪಾಶಪ್ರಾತಿಪದಿಕದ ಬಲದಿಂದ ಪ್ರತ್ಯಯಕ್ಕೆ ಅಸ್ವಾರಸ್ಯವನ್ನು ಹೇಳಬೇಕು ಎಂದು ನಿರ್ಣಯಿಸಿದ್ದಾರೆ. ಏಕಪಶುಕವಾದ ಯಾಗದಲ್ಲಿ ಪಾಶಪ್ರಾತಿಪದಿಕವಾದ ಅರ್ಥವು ಮುಖ್ಯವಾಗಿ ಯುಕ್ತವಾಗುವುದರಿಂದ ದೋಷ ಬರುವುದಿಲ್ಲ ಎಂದು ನಿರ್ಣಯಿಸಿದ್ದಾರೆ. ಅದರಂತೆ ಪ್ರಕೃತ ಒಬ್ಬನೇ ಈಶ್ವರನಲ್ಲಿ 'ಪಿಬಂತೌ' ಎಂಬ ದ್ವಿವಚನವು ಅಸಾಧುವಾಗುವುದಿಲ್ಲ. ಹೀಗೆ ಪ್ರಾತಿಪದಿಕ ಸ್ವಾರಸ್ಯದ ಬಲದಿಂದ ಪ್ರತ್ಯಯಕ್ಕೆ ಅಸ್ವಾರಸ್ಯವನ್ನು ಹೇಳಬೇಕು ಎಂದು ಗುಹಾಧಿಕರಣದಲ್ಲಿ ಸಮರ್ಥಿಸಿದ್ದರು. ಅದನ್ನು ಅನುಸರಿಸಿ ಇಲ್ಲಿ ಆಕ್ಷೇಪ ಮಾಡುತ್ತಿದ್ದಾರೆ. ಗುಹಾಧಿಕರಣದಲ್ಲಿ ಅನೇಕತ್ವವು ಪ್ರತ್ಯಯಾರ್ಥವಾಗಿತ್ತು, ಆದರೆ ಪ್ರಕೃತ ಪಂಚ ಇತ್ಯಾದಿ ಪ್ರಾತಿಪದಿಕದ ಅರ್ಥವೇ ಅನೇಕವಾಗಿರುವುದರಿಂದ ಇದಕ್ಕೆ ಅಸ್ವಾರಸ್ಯವನ್ನು ಹೇಗೆ ಹೇಳುತ್ತೀರಿ? ಎಂಬ ಆಶಂಕೆಯನ್ನು 'ನಚ ತತ್ರ' ಇತ್ಯಾದಿ ಗ್ರಂಥದಿಂದ ನಿರಾಕರಣೆ ಮಾಡುತ್ತಿದ್ದಾರೆ.

**प्रकाशः – अनेकत्वस्येति ।। ''द्वित्वं चैकस्य युज्यते'' इत्यनुव्याख्यानोक्तेरिति भावः । यथैकस्मिन्नित्यादि तु प्रौढिवादेनेति विभावितम् ।। द्वयोरिति ।। प्रातिपदिकप्रत्यययोरित्यर्थः ।**

ಗುಹಾಧಿಕರಣದಲ್ಲಿ ಅನೇಕತ್ವವನ್ನೇ ಸಾಧನೆ ಮಾಡಿದ್ದರಿಂದ ಪ್ರತ್ಯಯಾರ್ಥ, ಪ್ರಾತಿಪದಿಕಾರ್ಥ ಎರಡನ್ನೂ ಕೂಡ ಅಲ್ಲಿಯೇ ಸಮರ್ಥನೆ ಮಾಡಿದಂತಾಗಿದೆ. 'ದ್ವಿತ್ವಂ ಚೈಕಸ್ಯ ಯುಜ್ಯತೇ' ಎಂಬ ಅನುವ್ಯಾಖ್ಯಾನವು ಈ ವಿಷಯದಲ್ಲಿ ಆಧಾರವಾಗಿದೆ. 'ಯಥೈಕಸ್ಮಿನ್' ಇತ್ಯಾದಿಯಾಗಿ ಹೇಳಿದ್ದು ಪ್ರೌಢಿವಾದದಿಂದ ಎಂದು ತಿಳಿಯಬೇಕು. 'ದ್ವಯೋಃ' ಎಂದರೆ ಪ್ರಾತಿಪದಿಕ ಹಾಗೂ ಪ್ರತ್ಯಯಗಳಿಗೆ ಎಂದರ್ಥ.

**प्रकाशः – यद्यपीह ''पञ्चपञ्च'' इत्यत्र प्रत्ययो नास्ति । तस्य ''षड्भ्यो लुक्'' इति लुप्तत्वात् । तथापि जना इत्यत्र बहुत्ववाचिप्रत्ययश्रवणमस्तीति भावः।।**

ಪ್ರಶ್ನೆ - 'ಪಂಚ ಪಂಚ' ಎಂಬಲ್ಲಿ ಪ್ರತ್ಯಯವು ಲೋಪವಾಗಿದೆ. 'ಷ್ಣಾಂತಾಃ ಷಟ್' ಎಂಬ ಸೂತ್ರದಿಂದ ಣಕಾರಾಂತವಾದ ಮತ್ತು ಷಕಾರಾಂತವಾದ ಸಂಖ್ಯಾವಾಚಕ ಶಬ್ದಗಳಿಗೆ 'ಷಟ್' ಎಂಬ ಸಂಜ್ಞೆಯು ಬಂದು,

ಅನಂತರ 'ಷಡ್ಭ್ಯೋ ಲುಕ್' ಎಂಬ ಸೂತ್ರದಿಂದ ಪ್ರತ್ಯಯವು 'ಲುಕ್' ಆಗಿರುತ್ತದೆ. ಆದ್ದರಿಂದ ಬಹುತ್ವವನ್ನು ಹೇಗೆ ಹೇಳುತ್ತೀರಿ?

ಉತ್ತರ - 'ಜನಾಃ' ಎಂಬಲ್ಲಿ ಬಹುತ್ವವಾಚಿಯಾದ ಪ್ರತ್ಯಯವು ಶ್ರುತವಾದ್ದರಿಂದ ಪ್ರತ್ಯಯವು ಬಹುತ್ವವನ್ನು ಹೇಳುತ್ತಿದೆಯೆಂದು ಹೇಳಿದ್ದು ತಪ್ಪಾಗುವುದಿಲ್ಲ.

**प्रकाशः – बाधकैरिति ।। ''गुहावेशाद्ब्रह्मशब्दात्सेतुत्वादक्षरत्वतः । पारत्वादभयत्वाच्च'' इत्युक्तेरिति भावः । एतेन टीकायां प्रमाणपदं बाधकस्याप्युपलक्षणमिति सूचितम् । यद्वा प्रमाणपदमपवादकप्रमाणपरमिति व्याख्यातं भवति ।**

ಬಾಧಕವೆಂದರೆ 'ಗುಹಾವೇಶಾತ್ ಬ್ರಹ್ಮಶಬ್ದಾತ್ ಸೇತುತ್ವಾತ್ ಅಕ್ಷರತ್ವತಃ । ಪಾರತ್ವಾದಭಯತ್ವಾಚ್ಚ'' ಇತ್ಯಾದಿಯಾಗಿ ಹೇಳಿದಂತೆ ಗುಹಾವಿಷ್ಟತ್ವ, ಬ್ರಹ್ಮಶಬ್ದ, ಸೇತುತ್ವ, ಅಕ್ಷರತ್ವ ಮೊದಲಾದ ಬಾಧಕಪ್ರಮಾಣಗಳು ಇರುವುದರಿಂದ ಎಂದರ್ಥ. ಹೀಗೆ ಹೇಳಿದ್ದರಿಂದ ಟೀಕೆಯಲ್ಲಿ ಪ್ರಮಾಣಪದವನ್ನು ಪ್ರಯೋಗಿಸಿದ್ದಾರೆ. ಅದರಿಂದ ಬಾಧಕವನ್ನೂ ಕೂಡ ಉಪಲಕ್ಷಣಯಾ ಸ್ವೀಕರಿಸಬೇಕೆಂದು ಸೂಚಿಸಿದಂತಾಯಿತು. ಅಥವಾ ಪ್ರಮಾಣಪದಕ್ಕೆ ಅಪವಾದಕ ಪ್ರಮಾಣ ಎಂಬರ್ಥವನ್ನು ವಿವಕ್ಷಿಸಿದರೆ ಆವಾಗ ಬಾಧಕಪ್ರಮಾಣ ಎಂಬರ್ಥವನ್ನೇ ಹೇಳಿದಂತಾಗುತ್ತದೆ.

**प्रकाशः – द्वितीयसूत्राभिप्रेतं ''प्राणादीनां प्राणत्वादिप्रदत्वं भगवत एव'' इत्यादिटीकोक्तं बाधकमाशङ्कते – नच प्राणस्येति।।**

ಎರಡನೆಯ ಸೂತ್ರದಿಂದ ಅಭಿಪ್ರೇತವಾದ ಬಾಧಕವನ್ನು ಆಶಂಕಿಸುತ್ತಿದ್ದಾರೆ - 'ಪ್ರಾಣಾದೀನಾಂ ಪ್ರಾಣತ್ವಾದಿಪ್ರದತ್ವಂ ಭಗವತ ಏವ' ಪ್ರಾಣಾದಿಗಳಿಗೂ ಪ್ರಾಣತ್ವವನ್ನು ನೀಡುವವನು ಶ್ರೀಹರಿಯೇ ಆಗಿದ್ದಾನೆ ಇತ್ಯಾದಿಯಾಗಿ ಟೀಕೆಯಲ್ಲಿ ಬಾಧಕವನ್ನು ಹೇಳಿದ್ದಾರೆ. ಅದನ್ನೇ 'ನಚ ಪ್ರಾಣಸ್ಯ' ಎಂಬುದರಿಂದ ವಿವರಿಸುತ್ತಿದ್ದಾರೆ.

**प्रकाशः – ''अन्नस्य'' इति माध्यन्दिनशाखानुरोधादध्याहृत्योक्तम् । बृहदारण्यके चतुर्णामेव श्रवणात् । तस्यैव चोदाहरणात् । अन्यथा तृतीय-सूत्रायोगात् ।**

ಬೃಹದಾರಣ್ಯಕೋಪನಿಷತ್ತಿನಲ್ಲಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ನಾಲ್ಕನ್ನು ಮಾತ್ರ ಹೇಳಲಾಗಿದೆ. 'ಅನ್ನಸ್ಯ ಅನ್ನಂ' ಎನ್ನುವುದನ್ನು ಹೇಳಿರುವುದಿಲ್ಲ. ಗ್ರಂಥಕಾರರು ಮಾಧ್ಯಂದಿನ ಶಾಖೆಯನ್ನು ಅನುಸರಿಸಿ 'ಅನ್ನಸ್ಯ ಅನ್ನಂ' ಎಂಬುದನ್ನು ಅಧ್ಯಾಹಾರ ಮಾಡಿಕೊಂಡು ಹೇಳಿದ್ದಾರೆ. ವಿಷಯವಾಕ್ಯವನ್ನು ಉದಾಹರಿಸುವಾಗ ಬೃಹದಾರಣ್ಯಕದ ಮಾತನ್ನೇ ಉದಾಹರಿಸಿದ್ದಾರೆ. ಆದ್ದರಿಂದ 'ಅನ್ನಸ್ಯ ಅನ್ನಂ' ಎಂಬುದು

ಮಾಧ್ಯಂದಿನಶಾಖೆಯಿಂದ ಅಧ್ಯಾಹಾರ ಮಾಡಿಕೊಂಡದ್ದು ಎಂದು ತಿಳಿಯಬೇಕು. ಹೀಗೆ ತಿಳಿಯದಿದ್ದರೆ ಬೃಹದಾರಣ್ಯಕದಲ್ಲಿಯೇ 'ಅನ್ನಸ್ಯ ಅನ್ನಂ' ಎಂಬ ವಾಕ್ಯವು ಇದೆ ಎಂದಾದಲ್ಲಿ ಮೂರನೆಯ ಸೂತ್ರದಲ್ಲಿ ನಾಲ್ಕನ್ನು ಮಾತ್ರ ಉಪನಿಷತ್ತಿನಲ್ಲಿ ಹೇಳಿದೆಯಲ್ಲವೇ? ಎಂಬ ಆಶಂಕೆಗೆ ಉತ್ತರವನ್ನು ನೀಡಿದ್ದೇ ತಪ್ಪಾಗುತ್ತಿತ್ತು. ಆದ್ದರಿಂದ ಬೃಹದಾರಣ್ಯಕೋಪನಿಷತ್ತಿನಲ್ಲಿ ಕೇವಲ ನಾಲ್ಕು ಮಾತ್ರ ಶ್ರುತವಾಗಿವೆ. ಜ್ಯೋತಿಯನ್ನು ಇಟ್ಟುಕೊಂಡು ಪಂಚತ್ವವನ್ನು ನಿರ್ವಾಹ ಮಾಡುತ್ತೇವೆ. ಮಾಧ್ಯಂದಿನ ಶಾಖೆಯಲ್ಲಿ ಅನ್ನವನ್ನು ವಿವಕ್ಷಿಸಿ ಪಂಚತ್ವವನ್ನು ನಿರ್ವಾಹ ಮಾಡುತ್ತೇವೆ ಎಂದು ಉತ್ತರಿಸಿದ್ದು ಸಮಂಜಸವಾಗಿದೆ.

**प्रकाशः** – अपवादकतां व्यनक्ति – **प्राणस्येति** ।। एतेन प्राणादिसूत्रटीका विवृता ।। **न्याय्यत्वादिति** ।। आधाराधेयभावस्य भिन्नवृत्तित्वादिति न्यायप्राप्तत्वादित्यर्थः ।

ವಾಕ್ಯಶೇಷವು ಹೇಗೆ ಅಪವಾದಕವಾಗುತ್ತದೆ ಎಂಬುದನ್ನು 'ಪ್ರಾಣಸ್ಯ' ಎಂಬುದರಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ. ಇದರಿಂದ ಪ್ರಾಣಾದಿಸೂತ್ರದ ಟೀಕೆಯನ್ನು ವಿವರಿಸಿದಂತಾಯಿತು. 'ನ್ಯಾಯತ್ವಾತ್' ಎಂದರೆ ದ್ವಿತೀಯಾನಿರ್ದಿಷ್ಟನಾದ ಬ್ರಹ್ಮನನ್ನು 'ಯಸ್ಮಿನ್' ಎಂಬ ಪದದಿಂದ ಕರೆದದ್ದರಿಂದ 'ಪರಿಶೇಷಾತ್' ಷಷ್ಠೀನಿರ್ದಿಷ್ಟರಾದವರೇ 'ಪಂಚ ಜನ' ಶಬ್ದದಿಂದ ಪ್ರತಿಪಾದ್ಯರಾಗುತ್ತಾರೆ. ಒಂದು ವೇಳೆ 'ಯಸ್ಮಿನ್' ಎಂಬ ಪದದಿಂದ ಹಾಗೂ 'ಪಂಚ ಜನ' ಶಬ್ದದಿಂದ ಒಬ್ಬನನ್ನೇ ಪ್ರತಿಪಾದನೆ ಮಾಡಿದರೆ ಆಧಾರಾಧೇಯಭಾವಕ್ಕೆ ಭಿನ್ನವೃತ್ತಿತ್ವವು ನಾಶವಾಗಬೇಕಾಗುತ್ತದೆ. ಹೀಗೆ ಭಿನ್ನವೃತ್ತಿತ್ವವು ನಾಯ್ಯಪ್ರಾಪ್ತವಾಗಿದೆಯೆಂದು ತಿಳಿಯಬೇಕು.

**प्रकाशः** – यद्वा ''तमेव मन्य आत्मानं विद्वान् ब्रह्मामृतोऽमृतम्'' इति वाक्यशेषे ब्रह्मश्रुतिलिङ्गबलेन ''यस्मिन्'' इत्यस्य ब्रह्मत्वेन तदाश्रितत्वेनोक्तपञ्चजनत्वस्यायोगात्परिशेषाद्वाक्यशेषोक्तप्राणादीनामब्रह्मणामेव प्राप्तत्वादित्यर्थः ।

'ತಮೇವ ಮನ್ಯೇ ಆತ್ಮಾನಂ ವಿದ್ವಾನ್ ಬ್ರಹ್ಮ ಅಮೃತೋಽಮೃತಮ್' ಎಂಬ ವಾಕ್ಯಶೇಷದಲ್ಲಿ ಬ್ರಹ್ಮಶ್ರುತಿ ಎಂಬ ಲಿಂಗದ ಬಲದಿಂದ 'ಯಸ್ಮಿನ್' ಎಂಬ ಶಬ್ದದಿಂದ ಬ್ರಹ್ಮನೇ ಪ್ರತಿಪಾದ್ಯನಾಗಿದ್ದಾನೆಂದು ತಿಳಿಯುತ್ತದೆ. ಅಂತಹ ಬ್ರಹ್ಮನಲ್ಲಿ ಆಶ್ರಿತರಾದ ಪಂಚ ಜನರು ಪರಿಶೇಷಾತ್ ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಪ್ರಾಣಾದಿಗಳೇ ಆಗುತ್ತಾರೆ ಹೊರತು ಬ್ರಹ್ಮರಾಗಲು ಸಾಧ್ಯವಿಲ್ಲ. ಹೀಗೆ ನ್ಯಾಯಪ್ರಾಪ್ತವಾಗಿದೆ ಎಂಬುದನ್ನು ತಿಳಿಯಬೇಕು.

**प्रकाशः** – तदपि ब्रह्मण एवास्त्वित्यतः ''यस्मिन्निति सप्तम्या निर्दिष्टस्य'' इत्यादिटीकार्थमाह – **किञ्चेति** ।।

ಅಂತಹ ಪಂಚ ಜನರೂ ಕೂಡ ಬ್ರಹ್ಮನೇ ಆಗಬಹುದಲ್ಲವೇ ? ಎಂಬ ಪ್ರಶ್ನೆಗೆ 'ಯಸ್ಮಿನ್ನಿತಿ ಸಪ್ತಮ್ಯಾ ನಿರ್ದಿಷ್ಟಸ್ಯ' ಇತ್ಯಾದಿ ಟೀಕೆಯಲ್ಲಿ ಉತ್ತರಿಸಿದ್ದಾರೆ. ಅದನ್ನೇ 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ.

ಪರಿಪೂರ್ಣಚಂದ್ರಿಕಾ

**प्रकाशः – नच ब्रह्मेति ।।** एकस्मिन्नाधाराधेयभावस्य लोकेऽदर्शनाद्ब्रह्मण आधेयत्वाभावाच्चेत्यर्थः ।

ಒಬ್ಬನೇ ವ್ಯಕ್ತಿಯಲ್ಲಿ ಆಧಾರಾಧೇಯಭಾವವಿರುವುದು ಲೋಕದಲ್ಲಿ ಕಂಡಿರುವುದಿಲ್ಲ. ಆದ್ದರಿಂದ ಒಬ್ಬನೇ ಬ್ರಹ್ಮನಲ್ಲಿಯೂ ಕೂಡ ಆಧಾರಾಧೇಯಭಾವವನ್ನು ಹೇಳಲಾಗದು. ಅಥವಾ ಬ್ರಹ್ಮನು ಎಲ್ಲಾ ಪದಾರ್ಥಗಳಿಗೂ ಆಧಾರನೇ ಆಗುತ್ತಾನೆ ಹೊರತು, ಆಧೇಯನಾಗಲು ಸಾಧ್ಯವಿಲ್ಲದಿರುವುದರಿಂದ ಎಂದು ತಿಳಿಯಬಹುದು.

**प्रकाशः –** पञ्च जनानामब्रह्मत्वे तच्छब्दस्य निर्विषयत्वमिति शङ्कामपनुदन्नत इत्याद्युपसंहारटीकां व्यनक्ति – **तस्मादिति ।।** बहुत्वसंख्यायास्स्वाश्रिततायाश्च ब्रह्मण्ययोगादित्यर्थः ।

'ಪಂಚ ಜನ' ಶಬ್ದದಿಂದ ಬ್ರಹ್ಮನು ಪ್ರತಿಪಾದ್ಯನಾಗದಿದ್ದರೆ ಪಂಚ ಜನ ಶಬ್ದವು ನಿರ್ವಿಷಯವಾಗುತ್ತದಲ್ಲವೇ? ಎಂಬ ಶಂಕೆಯನ್ನು ಪರಿಹರಿಸುತ್ತಾ 'ಅಥ' ಇತ್ಯಾದಿಯಾಗಿ ಹೇಳಲ್ಪಟ್ಟ ಉಪಸಂಹಾರ ಟೀಕೆಯನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ತಸ್ಮಾತ್' ಇತ್ಯಾದಿಯಾಗಿ. 'ತಸ್ಮಾತ್' ಎಂದರೆ ಬಹುತ್ವ ಸಂಖ್ಯೆಯಾಗಲೀ, ಸ್ವಾಶ್ರಿತತ್ವವೇ ಆಗಲಿ ಬ್ರಹ್ಮನಲ್ಲಿ ಅಯುಕ್ತವಾದ್ದರಿಂದ ಎಂದರ್ಥ.




ತದಧೀನತ್ವನ್ಯಾಯದಿಂದ ಈ ಅಧಿಕರಣದ ಪ್ರಮೇಯವು ಗತಾರ್ಥವಾಗದಿದ್ದರೂ ಗುಹಾಧಿಕರಣದಿಂದ ಗತಾರ್ಥವಾಗಿದೆಯಲ್ಲವೇ? ಎಂಬುದಾಗಿ ಮತ್ತೊಂದು ಗೊಂದಲ ಹುಟ್ಟುತ್ತದೆ. ಏಕೆಂದರೆ ಗುಹಾಧಿಕರಣದಲ್ಲಿ 'ಗುಹಾಂ ಪ್ರವಿಷ್ಟೌ' ಇತ್ಯಾದಿ ಸೂತ್ರದಿಂದ 'ದ್ವಿತ್ವ' ಮೊದಲಾದ ಧರ್ಮಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡಲಾಗಿದೆ. ಏಕತ್ವಕ್ಕೆ ವಿರೋಧಿಯಾದ ದ್ವಿತ್ವವು ಬ್ರಹ್ಮನಲ್ಲಿ ಇದೆ ಎಂದು ಸಿದ್ಧವಾದ ಮೇಲೆ ಏಕತ್ವಕ್ಕೆ ವಿರೋಧಿಯಾದ ಬಹುತ್ವವೂ ಕೂಡ ಇರಲೇಬೇಕು. ಹೀಗೆ ಅನೇಕತ್ವ ಸಂಖ್ಯೆಯ ಸಮನ್ವಯವನ್ನು ಗುಹಾಧಿಕರಣದಲ್ಲಿ ಸಾಧಿಸಿದ ಮೇಲೆ ಪುನಃ ಈ ಅಧಿಕರಣದಲ್ಲಿಯೂ ಅದರ ಸಮನ್ವಯವು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಅನೇಕತ್ವ ಸಂಖ್ಯೆಯು ಭಿನ್ನವೃತ್ತಿಯಾಗಿದೆ ಎಂಬ ನಿಯಮವು ಔತ್ಸರ್ಗಿಕವಾದದ್ದು. ಹೀಗೊಪ್ಪದಿದ್ದರೆ 'ದ್ವಾಸುಪರ್ಣಾ' ಎಂಬ ಶ್ರುತಿಯೂ ಕೂಡ ಭೇದವನ್ನು ಸಮರ್ಥನೆ ಮಾಡುವುದಿಲ್ಲ ಎಂದಾಗಬೇಕಾದೀತು. ಆದ್ದರಿಂದ ಯಾವ ಶ್ರುತಿಯು ಅನೇಕತ್ವ ಸಂಖ್ಯೆಯನ್ನು ಹೇಳುತ್ತಿದೆಯೋ, ಅದು ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕಾಗುತ್ತದೆ. ಆದರೆ 'ಋತಂ ಪಿಬಂತೌ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವೇ ಮೊದಲಾದ ಬಾಧಕಪ್ರಮಾಣಗಳಿರುವುದರಿಂದ ಈ ನಿಯಮವನ್ನು ಕೈಬಿಡಲಾಗಿತ್ತು. ಆದರೆ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಪ್ರಕೃತ ವಿಷಯವಾಕ್ಯದಲ್ಲಿ ಅಂತಹ ಬಾಧಕಗಳೇನೂ ಕಾಣಿಸುತ್ತಿಲ್ಲ. ಆದ್ದರಿಂದ ಅನೇಕತ್ವ

ಸಂಖ್ಯೆಯನ್ನು ಈ ಶ್ರುತಿಯು ಪ್ರತಿಪಾದನೆ ಮಾಡುವುದರಿಂದ ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕು. ವಾಕ್ಯಶೇಷದಲ್ಲಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ಶ್ರುತವಾಗಿದೆ. ಅಲ್ಲಿರುವ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಅವನೇ ಪ್ರಕೃತ 'ಯಸ್ಮಿನ್' ಎಂಬ ಸಪ್ತಮ್ಯಂತವಾದ ಪದದಿಂದ ಪ್ರತಿಪಾದ್ಯನಾಗಿದ್ದಾನೆ. 'ಪ್ರಾಣಸ್ಯ' ಎಂಬ ಷಷ್ಠ್ಯಂತವಾದ ಪದಗಳಿಂದ ನಿರ್ದಿಷ್ಟರಾದ ಪ್ರಾಣಾದಿಗಳು ಈ ವಿಷಯವಾಕ್ಯದಲ್ಲಿ 'ಪಂಚ ಜನಾ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆಂದು ಒಪ್ಪಬೇಕು. ಕಾರಣವೇನೆಂದರೆ ಬಹುತ್ವಸಂಖ್ಯೆಯು ಬ್ರಹ್ಮನಲ್ಲಿ ಅಯುಕ್ತವಾಗಿದೆ. ಸ್ವಾಶ್ರಿತತ್ವವೂ ಕೂಡ ಬ್ರಹ್ಮನಲ್ಲಿ ಅಯುಕ್ತವಾಗಿದೆ. ಈ ಎರಡು ಕಾರಣಗಳಿಂದ ಪ್ರಾಣಾದಿಗಳಿಗೆ ಆಶ್ರಿತನಾದ ಬ್ರಹ್ಮನು 'ಪಂಚ ಜನಾ' ಮೊದಲಾದ ಬಹುತ್ವಸಂಖ್ಯಾವಾಚಕ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲವೆಂಬ ಪೂರ್ವಪಕ್ಷವು ಉದಯವಾಗುತ್ತದೆ.



● ● ● ● ●

## ಒಬ್ಬನೇ ಪರಮಾತ್ಮನಲ್ಲಿ ಪಂಚತ್ವಸಂಖ್ಯೆಯು ಯುಕ್ತವಾಗುತ್ತದೆ

## तात्पर्यचन्द्रिका

**सिद्धान्तस्तु ।**

**द्वितीयान्तविनिर्दिष्टं प्रधानं प्राणपूर्वकम् ।**
**अर्थतः शब्दतश्चैव नतु षष्ठ्यन्तशब्दितम् ।।**

ಅನುವಾದ - ಅಧಿಕರಣದ ಸಿದ್ಧಾಂತ ಹೀಗಿದೆ -

ದ್ವಿತೀಯಾಂತವಿನಿರ್ದಿಷ್ಟಂ ಪ್ರಧಾನಂ ಪ್ರಾಣಪೂರ್ವಕಮ್ ।
ಅರ್ಥತಃ ಶಬ್ದತಶ್ಚೈವ ನತು ಷಷ್ಠ್ಯಂತಶಬ್ದಿತಮ್ ॥

'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯಲ್ಲಿ 'ಪ್ರಾಣಮ್' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪ್ರಧಾನನಾಗಿದ್ದಾನೆ. ಅರ್ಥದಿಂದ ಮತ್ತು ಶಬ್ದದಿಂದಲೂ ಷಷ್ಠ್ಯಂತವಾದ 'ಪ್ರಾಣಸ್ಯ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ.

**षष्ठीनिर्दिष्टा हि प्राणादयो द्वितीयानिर्दिष्टप्राणाद्यधीनत्वात्तदवच्छेदकत्वाच्चार्थतः शब्दतश्चाप्रधानभूताः ।**

'ಪ್ರಾಣಸ್ಯ ಪ್ರಾಣಮ್' ಎಂಬಲ್ಲಿ ಷಷ್ಠೀವಿಭಕ್ತ್ಯಂತವಾದ ಪದದಿಂದ ಯಾವ ಪ್ರಾಣಾದಿಗಳು ಪ್ರತಿಪಾದ್ಯರಾಗಿದ್ದಾರೋ, ಅವರು ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟರಾದ ಪ್ರಾಣಾದಿಗಳ ಅಧೀನರಾಗಿದ್ದಾರೆ. ಆದ್ದರಿಂದ ಅರ್ಥದಿಂದ ಇವರು ಅಪ್ರಧಾನರಾಗಿದ್ದಾರೆಂದು ಹೇಳಿದಂತಾಯಿತು.

ಮತ್ತು ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಎಂಬಲ್ಲಿ 'ಪ್ರಾಣಸ್ಯ' ಎಂಬ ಷಷ್ಠ್ಯಂತವಾದ ಪದವು ವಿಶೇಷಣವಾಗಿರುವುದರಿಂದ ಶಬ್ದದಿಂದಲೂ ಕೂಡ ಅಪ್ರಧಾನರಾಗಿದ್ದಾರೆ.

**नच ''पञ्च जनाः'' इत्यस्य प्रधानपरत्वे सम्भवत्यप्रधानपरता युक्ता ।**

ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಎಂಬ ಪದದಿಂದ ಪ್ರತಿಪಾದ್ಯನಾದ ಶ್ರೀಹರಿಯೇ ಪ್ರಧಾನನಾಗಿದ್ದಾನೆಂದು ಸಿದ್ಧವಾಯಿತು. ಹಾಗಾದರೆ ಪಂಚ ಜನರಿಗೆ ಪ್ರಾಧಾನ್ಯವು ಹೇಗೆ ಸಿದ್ಧವಾಯಿತು? ಪಂಚ ಜನ ಶಬ್ದದಿಂದ ಪ್ರಧಾನವಾಗಿ ಪ್ರಸಕ್ತವಾದ ಪರಮಾತ್ಮನನ್ನೇ ವಿವಕ್ಷಿಸಬೇಕು ಹೊರತು, ಅಪ್ರಧಾನರಾದ ಪಂಚಪ್ರಾಣಾದಿಗಳನ್ನು ವಿವಕ್ಷಿಸಬಾರದು. ಏಕೆಂದರೆ ಪಂಚ ಜನ ಶಬ್ದಕ್ಕೆ ಪ್ರಧಾನವಾದ ಅರ್ಥವನ್ನೇ ವಿವಕ್ಷಿಸಲು ಬರುವಾಗ ಅಪ್ರಧಾನವಾದ್ದನ್ನು ಒಪ್ಪುವುದು ಅಯುಕ್ತವಾಗಿದೆ.

**नच ''यस्मिन्'' इति सप्तमीस्वारस्यायाप्रधानपरता । प्रयाजशेषन्यायेन प्रातिपदिकस्वारस्याय विभक्त्यस्वारस्यस्य सह्यत्वात् ।**

ಪ್ರಶ್ನೆ - 'ಯಸ್ಮಿನ್' ಎಂಬ ಸಪ್ತಮೀ ವಿಭಕ್ತಿಗೆ ಸ್ವಾರಸ್ಯವನ್ನು ಉಪಪಾದನೆ ಮಾಡಬೇಕೆಂದರೆ ಪಂಚ ಜನ ಶಬ್ದದಿಂದ ಅಪ್ರಧಾನರಾದ ಪ್ರಾಣಾದಿಗಳನ್ನೇ ವಿವಕ್ಷಿಸಬೇಕು. ಒಂದು ವೇಳೆ ಪ್ರಧಾನನಾದ ಶ್ರೀಹರಿಯನ್ನು ಪಂಚ ಜನಶಬ್ದದಿಂದ ವಿವಕ್ಷಿಸಿದಲ್ಲಿ 'ಯಸ್ಮಿನ್' ಎಂಬ ಸಪ್ತಮೀ ವಿಭಕ್ತಿಯು ಅಸ್ವರಸವಾಗುತ್ತದೆ. ತನಗೆ ತಾನೇ ಆಶ್ರಯನಾಗಲು ಸಾಧ್ಯವಾಗದ ಕಾರಣ ಸಪ್ತಮೀ ವಿಭಕ್ತಿಗೆ ಬೇರೆ ವಿಭಕ್ತ್ಯರ್ಥವನ್ನು ಹೇಳಬೇಕಾಗುತ್ತದಲ್ಲವೇ?

ಉತ್ತರ - ಈ ಪ್ರಶ್ನೆ ಸರಿಯಿಲ್ಲ. ಏಕೆಂದರೆ ಪ್ರಾತಿಪದಿಕ ಹಾಗೂ ಪ್ರತ್ಯಯಗಳ ನಡುವೆ ಪ್ರಾತಿಪದಿಕವೇ ಶ್ರೇಷ್ಠವಾದ್ದರಿಂದ ಅದರ ಸ್ವಾರಸ್ಯಕ್ಕಾಗಿ ವಿಭಕ್ತಿಯ ಅಸ್ವಾರಸ್ಯವನ್ನು ಸಹಿಸಿಕೊಳ್ಳಬೇಕು. ಹೊರತು ವಿಭಕ್ತಿಯ ಸ್ವಾರಸ್ಯಕ್ಕಾಗಿ ಪ್ರಾತಿಪದಿಕಕ್ಕೆ ಅಸ್ವರಸವಾದ ಅರ್ಥವನ್ನು ಸರ್ವಥಾ ಮಾಡಬಾರದು. ಪೂರ್ವಮೀಮಾಂಸೆಯಲ್ಲಿ ಬರುವ 'ಪ್ರಯಾಜಶೇಷೇನ ಹವೀಂಷ್ಯಭಿಘಾರಯತಿ' ಎಂಬ ವಾಕ್ಯದಲ್ಲಿ ಶೇಷೇಣ ಎಂಬಲ್ಲಿರುವ ಪ್ರಾತಿಪದಿಕಕ್ಕೆ ಸ್ವಾರಸ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ 'ಹವೀಂಷಿ' ಎಂಬಲ್ಲಿರುವ ದ್ವಿತೀಯಾ ವಿಭಕ್ತಿಗೆ ಸಪ್ತಮ್ಯರ್ಥವನ್ನು ಅಂಗೀಕರಿಸಿ ಪ್ರತ್ಯಯಾರ್ಥಕ್ಕೆ ಅಸ್ವಾರಸ್ಯವನ್ನು ಉಪಪಾದನೆ ಮಾಡಲಾಗಿದೆ. ಅದರಂತೆ ಇಲ್ಲಿಯೂ ಕೂಡ 'ಪಂಚ ಜನಾ' ಎಂಬ ಪ್ರಾತಿಪದಿಕಕ್ಕೆ ಸ್ವಾರಸ್ಯಾರ್ಥವನ್ನು ಹೇಳುವುದಕ್ಕಾಗಿ 'ಯಸ್ಮಿನ್' ಎಂಬ ಸಪ್ತಮೀ ವಿಭಕ್ತಿಗೆ ಅಸ್ವರಸವಾದ ಅರ್ಥವನ್ನು ಹೇಳಬಹುದು.

**विभक्त्यस्वारस्यं च नेति वक्ष्यते ।**

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ಸಂಖ್ಯೆಯನ್ನು ಈ ಶ್ರುತಿಯು ಪ್ರತಿಪಾದನೆ ಮಾಡುವುದರಿಂದ ಭೇದವನ್ನೂ ಕೂಡ ಹೇಳುತ್ತದೆಯೆಂದೇ ಒಪ್ಪಬೇಕು. ವಾಕ್ಯಶೇಷದಲ್ಲಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ಶ್ರುತವಾಗಿದೆ. ಅಲ್ಲಿರುವ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಮೊದಲಾದ ಶಬ್ದಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಅವನೇ ಪ್ರಕೃತ 'ಯಸ್ಮಿನ್' ಎಂಬ ಸಪ್ತಮ್ಯಂತವಾದ ಪದದಿಂದ ಪ್ರತಿಪಾದ್ಯನಾಗಿದ್ದಾನೆ. 'ಪ್ರಾಣಸ್ಯ' ಎಂಬ ಷಷ್ಠ್ಯಂತವಾದ ಪದಗಳಿಂದ ನಿರ್ದಿಷ್ಟರಾದ ಪ್ರಾಣಾದಿಗಳು ಈ ವಿಷಯವಾಕ್ಯದಲ್ಲಿ 'ಪಂಚ ಜನಾ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯರಾಗಿದ್ದಾರೆಂದು ಒಪ್ಪಬೇಕು. ಕಾರಣವೇನೆಂದರೆ ಬಹುತ್ವಸಂಖ್ಯೆಯು ಬ್ರಹ್ಮನಲ್ಲಿ ಅಯುಕ್ತವಾಗಿದೆ. ಸ್ವಾಶ್ರಿತತ್ವವೂ ಕೂಡ ಬ್ರಹ್ಮನಲ್ಲಿ ಅಯುಕ್ತವಾಗಿದೆ. ಈ ಎರಡು ಕಾರಣಗಳಿಂದ ಪ್ರಾಣಾದಿಗಳಿಗೆ ಆಶ್ರಿತನಾದ ಬ್ರಹ್ಮನು 'ಪಂಚ ಜನಾ' ಮೊದಲಾದ ಬಹುತ್ವಸಂಖ್ಯಾವಾಚಕ ಶಬ್ದಗಳಿಂದ ಪ್ರತಿಪಾದ್ಯನಾಗುವುದಿಲ್ಲವೆಂಬ ಪೂರ್ವಪಕ್ಷವು ಉದಯವಾಗುತ್ತದೆ.



## ಒಬ್ಬನೇ ಪರಮಾತ್ಮನಲ್ಲಿ ಪಂಚತ್ವಸಂಖ್ಯೆಯು ಯುಕ್ತವಾಗುತ್ತದೆ

### तात्पर्यचन्द्रिका

**सिद्धान्तस्तु ।**

**द्वितीयान्तविनिर्दिष्टं प्रधानं प्राणपूर्वकम् ।**
**अर्थतः शब्दतश्चैव नतु षष्ठ्यन्तशब्दितम् ।।**

ಅನುವಾದ - ಅಧಿಕರಣದ ಸಿದ್ಧಾಂತ ಹೀಗಿದೆ -

ದ್ವಿತೀಯಾಂತವಿನಿರ್ದಿಷ್ಟಂ ಪ್ರಧಾನಂ ಪ್ರಾಣಪೂರ್ವಕಮ್ ।
ಅರ್ಥತಃ ಶಬ್ದತಶ್ಚೈವ ನತು ಷಷ್ಠ್ಯಂತಶಬ್ದಿತಮ್ ॥

'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯಲ್ಲಿ 'ಪ್ರಾಣಮ್' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪ್ರಧಾನನಾಗಿದ್ದಾನೆ. ಅರ್ಥದಿಂದ ಮತ್ತು ಶಬ್ದದಿಂದಲೂ ಷಷ್ಠ್ಯಂತವಾದ 'ಪ್ರಾಣಸ್ಯ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ.

**षष्ठीनिर्दिष्टा हि प्राणादयो द्वितीयानिर्दिष्टप्राणाद्यधीनत्वात्तदवच्छेदकत्वाचार्थतः शब्दतश्चाप्रधानभूताः ।**

'ಪ್ರಾಣಸ್ಯ ಪ್ರಾಣಮ್' ಎಂಬಲ್ಲಿ ಷಷ್ಠೀವಿಭಕ್ತ್ಯಂತವಾದ ಪದದಿಂದ ಯಾವ ಪ್ರಾಣಾದಿಗಳು ಪ್ರತಿಪಾದ್ಯರಾಗಿದ್ದಾರೋ, ಅವರು ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟರಾದ ಪ್ರಾಣಾದಿಗಳ ಅಧೀನರಾಗಿದ್ದಾರೆ. ಆದ್ದರಿಂದ ಅರ್ಥದಿಂದ ಇವರು ಅಪ್ರಧಾನರಾಗಿದ್ದಾರೆಂದು ಹೇಳಿದಂತಾಯಿತು.

ಪರಿಪೂರ್ಣಚಂದ್ರಿಕಾ

ಮತ್ತು ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಎಂಬಲ್ಲಿ 'ಪ್ರಾಣಸ್ಯ' ಎಂಬ ಷಷ್ಠ್ಯಂತವಾದ ಪದವು ವಿಶೇಷಣವಾಗಿರುವುದರಿಂದ ಶಬ್ದದಿಂದಲೂ ಕೂಡ ಅಪ್ರಧಾನರಾಗಿದ್ದಾರೆ.

**नच ''पञ्च जनाः'' इत्यस्य प्रधानपरत्वे सम्भवत्यप्रधानपरता युक्ता ।**

ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಎಂಬ ಪದದಿಂದ ಪ್ರತಿಪಾದ್ಯನಾದ ಶ್ರೀಹರಿಯೇ ಪ್ರಧಾನನಾಗಿದ್ದಾನೆಂದು ಸಿದ್ಧವಾಯಿತು. ಹಾಗಾದರೆ ಪಂಚ ಜನರಿಗೆ ಪ್ರಾಧಾನ್ಯವು ಹೇಗೆ ಸಿದ್ಧವಾಯಿತು? ಪಂಚ ಜನ ಶಬ್ದದಿಂದ ಪ್ರಧಾನವಾಗಿ ಪ್ರಸಕ್ತವಾದ ಪರಮಾತ್ಮನನ್ನೇ ವಿವಕ್ಷಿಸಬೇಕು ಹೊರತು, ಅಪ್ರಧಾನರಾದ ಪಂಚಪ್ರಾಣಾದಿಗಳನ್ನು ವಿವಕ್ಷಿಸಬಾರದು. ಏಕೆಂದರೆ ಪಂಚ ಜನ ಶಬ್ದಕ್ಕೆ ಪ್ರಧಾನವಾದ ಅರ್ಥವನ್ನೇ ವಿವಕ್ಷಿಸಲು ಬರುವಾಗ ಅಪ್ರಧಾನವಾದ್ದನ್ನು ಒಪ್ಪುವುದು ಅಯುಕ್ತವಾಗಿದೆ.

**नच ''यस्मिन्'' इति सप्तमीस्वारस्यायाप्रधानपरता । प्रयाजशेषन्यायेन प्रातिपदिकस्वारस्याय विभक्त्यस्वारस्यस्य सह्यत्वात् ।**

ಪ್ರಶ್ನೆ - 'ಯಸ್ಮಿನ್' ಎಂಬ ಸಪ್ತಮೀ ವಿಭಕ್ತಿಗೆ ಸ್ವಾರಸ್ಯವನ್ನು ಉಪಪಾದನೆ ಮಾಡಬೇಕೆಂದರೆ ಪಂಚ ಜನ ಶಬ್ದದಿಂದ ಅಪ್ರಧಾನರಾದ ಪ್ರಾಣಾದಿಗಳನ್ನೇ ವಿವಕ್ಷಿಸಬೇಕು. ಒಂದು ವೇಳೆ ಪ್ರಧಾನನಾದ ಶ್ರೀಹರಿಯನ್ನು ಪಂಚ ಜನಶಬ್ದದಿಂದ ವಿವಕ್ಷಿಸಿದಲ್ಲಿ 'ಯಸ್ಮಿನ್' ಎಂಬ ಸಪ್ತಮೀ ವಿಭಕ್ತಿಯು ಅಸ್ವರಸವಾಗುತ್ತದೆ. ತನಗೆ ತಾನೇ ಆಶ್ರಯನಾಗಲು ಸಾಧ್ಯವಾಗದ ಕಾರಣ ಸಪ್ತಮೀ ವಿಭಕ್ತಿಗೆ ಬೇರೆ ವಿಭಕ್ತ್ಯರ್ಥವನ್ನು ಹೇಳಬೇಕಾಗುತ್ತದಲ್ಲವೇ?

ಉತ್ತರ - ಈ ಪ್ರಶ್ನೆ ಸರಿಯಿಲ್ಲ. ಏಕೆಂದರೆ ಪ್ರಾತಿಪದಿಕ ಹಾಗೂ ಪ್ರತ್ಯಯಗಳ ನಡುವೆ ಪ್ರಾತಿಪದಿಕವೇ ಶ್ರೇಷ್ಠವಾದ್ದರಿಂದ ಅದರ ಸ್ವಾರಸ್ಯಕ್ಕಾಗಿ ವಿಭಕ್ತಿಯ ಅಸ್ವಾರಸ್ಯವನ್ನು ಸಹಿಸಿಕೊಳ್ಳಬೇಕು. ಹೊರತು ವಿಭಕ್ತಿಯ ಸ್ವಾರಸ್ಯಕ್ಕಾಗಿ ಪ್ರಾತಿಪದಿಕಕ್ಕೆ ಅಸ್ವರಸವಾದ ಅರ್ಥವನ್ನು ಸರ್ವಥಾ ಮಾಡಬಾರದು. ಪೂರ್ವಮೀಮಾಂಸೆಯಲ್ಲಿ ಬರುವ 'ಪ್ರಯಾಜಶೇಷೇನ ಹವೀಂಷ್ಯಭಿಘಾರಯತಿ' ಎಂಬ ವಾಕ್ಯದಲ್ಲಿ ಶೇಷೇಣ ಎಂಬಲ್ಲಿರುವ ಪ್ರಾತಿಪದಿಕಕ್ಕೆ ಸ್ವಾರಸ್ಯವನ್ನು ಸಮರ್ಥನೆ ಮಾಡುವುದಕ್ಕಾಗಿ 'ಹವೀಂಷಿ' ಎಂಬಲ್ಲಿರುವ ದ್ವಿತೀಯಾ ವಿಭಕ್ತಿಗೆ ಸಪ್ತಮ್ಯರ್ಥವನ್ನು ಅಂಗೀಕರಿಸಿ ಪ್ರತ್ಯಯಾರ್ಥಕ್ಕೆ ಅಸ್ವಾರಸ್ಯವನ್ನು ಉಪಪಾದನೆ ಮಾಡಲಾಗಿದೆ. ಅದರಂತೆ ಇಲ್ಲಿಯೂ ಕೂಡ 'ಪಂಚ ಜನಾ' ಎಂಬ ಪ್ರಾತಿಪದಿಕಕ್ಕೆ ಸ್ವಾರಸ್ಯಾರ್ಥವನ್ನು ಹೇಳುವುದಕ್ಕಾಗಿ 'ಯಸ್ಮಿನ್' ಎಂಬ ಸಪ್ತಮೀ ವಿಭಕ್ತಿಗೆ ಅಸ್ವರಸವಾದ ಅರ್ಥವನ್ನು ಹೇಳಬಹುದು.

**विभक्त्यस्वारस्यं च नेति वक्ष्यते ।**

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ವಿಚಾರ ಮಾಡಿದರೆ 'ಯಸ್ಮಿನ್' ಎಂಬಲ್ಲಿರುವ ಸಪ್ತಮೀ ವಿಭಕ್ತಿಗೆ ಅಸ್ವರಸವಾದ ಅರ್ಥವನ್ನೂ ಕೂಡ ಮಾಡಬೇಕಾಗಿಲ್ಲವೆಂದು ಇಲ್ಲಿಯೇ ಮುಂದೆ ಹೇಳುವವರಿದ್ದೇವೆ.

**नच ब्रह्मण एकत्वात् पञ्चत्वायोगः । षष्ठीनिर्दिष्टानामपि प्राणादीनां प्रत्येकं बहुत्वेन त्वत्पक्षेऽपि पञ्चत्वायोगात् ।**

ಪ್ರಶ್ನೆ - ಬ್ರಹ್ಮನು ಒಬ್ಬನೇ ಆಗಿರುವುದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ ಪಂಚತ್ವ ಸಂಖ್ಯೆಯನ್ನು ಹೇಗೆ ಕೂಡಿಸುತ್ತೀರಿ?

ಉತ್ತರ - ನೀವೂ ಸಹ ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳು ಕೇವಲ ಐದುಮಂದಿ ಮಾತ್ರ ಅಲ್ಲ. ಪ್ರತಿಶರೀರದಂತೆ ಅನಂತ ಸಂಖ್ಯೆಯಲ್ಲಿರುತ್ತಾರೆ. ಆ ಎಲ್ಲಾ ಪ್ರಾಣಾದಿಗಳಲ್ಲಿಯೂ ಪಂಚತ್ವಸಂಖ್ಯೆಯನ್ನು ಹೇಗೆ ಕೂಡಿಸುತ್ತೀರಿ.

**नहि ब्रह्मण एकस्यैव प्राणादेः प्राणत्वादिः । किं त्वनन्तानां प्राणादीनाम् ।**

ಒಬ್ಬ ಪ್ರಾಣನಿಗೆ ಮಾತ್ರ ಪ್ರಾಣತ್ವವನ್ನು ಬ್ರಹ್ಮನು ನೀಡುತ್ತಿರುವುದಲ್ಲ. ಅನಂತ ಪ್ರಾಣರಿಗೆಲ್ಲಾ ಪ್ರಾಣತ್ವವನ್ನು ನೀಡುವವನು ಬ್ರಹ್ಮನೇ ಆಗಿದ್ದಾನೆ. ಆದ್ದರಿಂದ ಏಕವಚನ ಪ್ರಯೋಗವಿರುವುದರಿಂದ ಒಬ್ಬನೇ ಪ್ರಾಣನಿಗೆ ಪಾಣತ್ವವನ್ನು ನೀಡುತ್ತಾನೆಂದು ತಿಳಿಯಬಾರದು.

**एवञ्च –**

**एकत्र हि यथा पञ्च संख्या नैवोपपद्यते ।**
**तथाऽनन्तेषु पञ्चत्वसंख्याऽपि नच युज्यते ।। १ ।।**

ಆದ್ದರಿಂದ,

ಏಕತ್ರ ಹಿ ಯಥಾ ಪಂಚ ಸಂಖ್ಯಾ ನೈವೋಪಪದ್ಯತೇ ।
ತಥಾಽನಂತೇಷು ಪಂಚತ್ವಸಂಖ್ಯಾಪಿ ನಚ ಯುಜ್ಯತೇ ॥೧॥

ಒಬ್ಬನೇ ಬ್ರಹ್ಮನಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲವೆಂದು ಹೇಗೆ ಹೇಳುತ್ತೀರೋ, ಅದರಂತೆ ಅನಂತ ಪ್ರಾಣರಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲ ಎಂಬ ಪ್ರತಿಬಂದಿಯು ನಿಮಗೂ ಇರುತ್ತದೆ.

**अथ प्राणादीनां प्रत्येकं स्वरूपेण बहुत्वेप्येकवचननिर्देशात् प्राणत्वादिधर्मैक्याद्वा प्रत्येकमैक्यम् ।**

ಆದ್ದರಿಂದ ಪ್ರಾಣಾದಿಗಳು ಪ್ರತ್ಯೇಕವಾಗಿ ಅನೇಕರಾಗಿದ್ದರೂ ಕೂಡ ಏಕವಚನ ನಿರ್ದೇಶದಿಂದ ಐಕ್ಯವು ಯುಕ್ತವಾಗಿದೆಯೆಂದು ತಿಳಿಯಬೇಕು. ಅಥವಾ ಎಲ್ಲಾ ಪ್ರಾಣರಲ್ಲಿಯೂ ಪ್ರಾಣತ್ವ ಎಂಬ ಧರ್ಮವು ಒಂದೇ ಆಗಿರುವುದರಿಂದಲೂ ಐಕ್ಯವು ಯುಕ್ತವಾಗಿದೆಯೆಂದು ತಿಳಿಯಬೇಕು.

**तथा च मिलितानां पञ्चत्वमिति चेत्तर्हि ब्रह्मस्वरूपेणैकमपि पञ्चभिः शब्दैर्निर्देशाद्वा प्राणत्वचक्षुष्ट्वादिधर्मपञ्चकयोगाद्वा पञ्चेत्युच्यताम् ।**

ಹಾಗಾದರೆ ಮಿಲಿತರಾದ ಪ್ರಾಣಾದಿಗಳಲ್ಲಿ ಪಂಚತ್ವಸಂಖ್ಯೆಯು ಯುಕ್ತವಾಗುತ್ತದಲ್ಲವೇ ? ಎಂದರೆ ಬ್ರಹ್ಮನು ಸ್ವರೂಪತಃ ಒಬ್ಬನೇ ಆಗಿದ್ದರೂ ಪಂಚ ಇತ್ಯಾದಿ ಶಬ್ದಗಳಿಂದ ನಿರ್ದಿಷ್ಟನಾದ್ದರಿಂದ ಪಂಚ ಇತ್ಯಾದಿ ಪದಗಳಿಂದ ಪ್ರತಿಪಾದ್ಯನಾಗಿದ್ದಾನೆ. ಅಥವಾ ಪ್ರಾಣತ್ವ ಮತ್ತು ಚಕ್ಷುಷ್ಟ್ವ ಮೊದಲಾದ ಧರ್ಮಗಳು ಐದು ಬಗೆಯಾಗಿರುವುದರಿಂದಲೂ ಬ್ರಹ್ಮನು ಪಂಚ ಎಂಬ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂದು ಉತ್ತರಿಸುತ್ತೇವೆ.

**यथा प्रयाजाः स्वरूपेण पञ्चाप्यावृत्तिमात्रेणैकादशेत्युच्यन्ते । तथा च "द्वे पौर्णमास्यात्" इत्यादावेकमेव पौर्णमासी कर्म द्वे इत्युच्यते तद्वत् ।**

ಯಾವರೀತಿಯಾಗಿ ಪೂರ್ವಮೀಮಾಂಸೆಯಲ್ಲಿ ಪ್ರಯಾಜಯಾಗಗಳು ಐದೇ ಆಗಿದ್ದರೂ 'ಏಕಾದಶ ಪ್ರಯಾಜಾನ್ ಯಜತಿ' ಎಂಬ ಶ್ರುತಿಯಲ್ಲಿ ಹನ್ನೊಂದು ಪ್ರಯಾಜಗಳನ್ನು ಆಚರಿಸಬೇಕು ಎಂದು ಹೇಳಲಾಗಿದೆ. ಇಲ್ಲಿ ಹೇಳಲ್ಪಟ್ಟ ಏಕಾದಶತ್ವ ಸಂಖ್ಯೆಯನ್ನು ಐದುಪ್ರಯಾಜಯಾಗಗಳಲ್ಲಿ ನಾಲ್ಕನ್ನು ಎರಡುಬಾರಿ ಆಚರಣೆ ಮಾಡಿ, ಒಂದನ್ನು ಮೂರುಬಾರಿ ಆಚರಿಸುವುದರಿಂದ ಪೂರಣೆ ಮಾಡಲಾಗುತ್ತದೋ, ಅದರಂತೆ ಇಲ್ಲಿಯೂ ಸಹ ಪ್ರಾಣತ್ವ, ಚಕ್ಷುಷ್ಟ್ವ, ಮೊದಲಾದ ಐದು ಬಗೆಯ ಧರ್ಮಗಳನ್ನು ಬ್ರಹ್ಮನಲ್ಲಿ ಹೇಳುವುದರಿಂದ ಪಂಚತ್ವಸಂಖ್ಯೆಯು ಯುಕ್ತವಾಗುತ್ತದೆ.

ಮತ್ತು 'ದ್ವೇ ಪೂರ್ಣಮಾ ಸ್ಯಾತ್' ಎಂಬಲ್ಲಿಯೂ ಎರಡು ಪೌರ್ಣಮಾಸ ಯಾಗಗಳನ್ನು ಆಚರಿಸಿದರೆ ಒಂದು ದ್ರಾಕ್ಷಾಯಣಯಜ್ಞ ಎನಿಸುತ್ತದೆ. ಆದರೆ ಪೌರ್ಣಮಾಸೀಯಾಗ ಎಂಬುದು ಒಂದೇ ಆಗಿದೆ. ಹೀಗಿರುವಾಗ ದ್ವಿತ್ವಸಂಖ್ಯೆಯನ್ನು ಹೇಗೆ ಪೂರಣೆ ಮಾಡಬೇಕು? ಎಂಬ ಆಕಾಂಕ್ಷೆಯು ಪ್ರಾಪ್ತವಾದರೆ ಆಚರಿಸುವಂತಹ ಒಂದೇ ಪೌರ್ಣಮಾಸೀಯಾಗವನ್ನು ಎರಡು ಬಾರಿ ಆಚರಣೆ ಮಾಡಬೇಕು ಎಂದು ಉತ್ತರಿಸಿದ್ದಾರೆ. ಅದರಂತೆ ಇಲ್ಲಿಯೂ ತಿಳಿಯಬೇಕು.

**यथा चानेकत्वस्य भिन्ननिष्ठत्वमौत्सर्गिकं तथा वैदिकसर्वशब्दानां प्रसिद्धनिमित्तस्य तद्गतत्वं निमित्तीकृत्य ब्रह्मणि वृत्तिरप्यौत्सर्गिकी ।**

ಮತ್ತು ಅನೇಕತ್ವವಿದ್ದಲ್ಲಿ ಭೇದವು ಇದ್ದೇ ಇರುತ್ತದೆಂಬ ನಿಯಮವು ಹೇಗೆ ಔತ್ಸರ್ಗಿಕವೋ, ಅದರಂತೆ ವೈದಿಕವಾದ ಸಕಲಶಬ್ದಗಳ ಪ್ರವೃತ್ತಿನಿಮಿತ್ತವೆನಿಸಿದ ತದ್ಗತತ್ವವನ್ನು ನಿಮಿತ್ತೀಕರಿಸಿಕೊಂಡು ಬರುವಂತಹ ಎಲ್ಲ ವೃತ್ತಿಗಳು ಬ್ರಹ್ಮನಲ್ಲಿ ಔತ್ಸರ್ಗಿಕವೇ ಆಗಿವೆ.

**अवरादिशब्देषु त्वसम्भवात्तत्त्यागः । साधितं च ''गुहाम्'' इत्यत्रैकस्याप्यनेकत्वम् । युक्तं च ब्रह्मणः स्वाश्रयत्वम् ।**

ಅವರಾದಿಶಬ್ದಗಳ ವಿಷಯದಲ್ಲಿ ತದ್ಗತತ್ವವನ್ನು ಹೇಳುವುದು ಅಸಂಭಾವಿತವಾದ್ದರಿಂದ ಅದನ್ನು ಬಿಡಲಾಗಿತ್ತು. ಆದರೆ ಪ್ರಕೃತ ಪಂಚತ್ವಾದಿ ಸಂಖ್ಯೆಗಳನ್ನು ತದ್ಗತತ್ವವೆಂಬ ಪ್ರವೃತ್ತಿನಿಮಿತ್ತದಿಂದಲೇ ಉಪಪಾದನೆ ಮಾಡಲು ಬರುವಾಗ ಸ್ವಾಮಿತ್ವ ಎಂಬ ಪ್ರವೃತ್ತಿನಿಮಿತ್ತವನ್ನು ಸರ್ವಥಾ ಆಶ್ರಯಿಸಬಾರದು. ಇದನ್ನು ಗುಹಾಧಿಕರಣದಲ್ಲಿ ಒಬ್ಬನೇ ಪರಮಾತ್ಮನಲ್ಲಿ ಅನೇಕತ್ವಸಂಖ್ಯೆಯು ಬರುತ್ತದೆಂದು ಸಾಧಿಸಲಾಗಿದೆ. ಹಾಗಾದರೆ ಬ್ರಹ್ಮನಿಗೆ ಸ್ವಾಶ್ರಯತ್ವವನ್ನು ಹೇಳಿದಂತಾಗುತ್ತದಲ್ಲವೇ ಎಂದರೆ ಬ್ರಹ್ಮನು ತನಗೆ ತಾನು ಆಶ್ರಯನೂ ಆಗುತ್ತಾನೆ.

**आधाराधेयभावो हि भेदाभावेऽपि युज्यते ।**
**कालः सदाऽस्ति देशोऽस्ति सर्वत्रेत्यादिभानतः ।। १ ।।**

ಆಧಾರಾಧೇಯಭಾವೋ ಹಿ ಭೇದಾಭಾವೇಽಪಿ ಯುಜ್ಯತೇ ।
ಕಾಲಃ ಸದಾಽಸ್ತಿ ದೇಶೋಽಸ್ತಿ ಸರ್ವತ್ರೇತ್ಯಾದಿಭಾನತಃ ॥೧॥

ಭೇದವಿಲ್ಲದಿದ್ದರೂ ಕೂಡ ಬ್ರಹ್ಮನ ವಿಷಯದಲ್ಲಿ ಆಧಾರಾಧೇಯಭಾವವು ಯುಕ್ತವೇ ಆಗುತ್ತದೆ. 'ಕಾಲಃ ಸದಾಽಸ್ತಿ, ದೇಶಃ ಸರ್ವತ್ರ ಅಸ್ತಿ' ಕಾಲವು ಯಾವಾಗಲೂ ಇರುತ್ತದೆ. ದೇಶವು ಎಲ್ಲೆಡೆಯೂ ಇದೆ. ಇತ್ಯಾದಿ ಪ್ರಯೋಗಗಳೇ ಈ ವಿಷಯದಲ್ಲಿ ಉದಾಹರಣೆ.

**एवं च यावन्ति नियम्यानि नियामकभगवद्रूपाण्यपि तावन्तीति शरीरगत-प्राणादिपञ्चकनियामकरूपेषु पञ्चत्वम् ।**

ಆದ್ದರಿಂದ ಜಗತ್ತಿನಲ್ಲಿ ಒಟ್ಟು ಎಷ್ಟು ನಿಯಮ್ಯ ಪದಾರ್ಥಗಳಿವೆಯೋ, ಅಷ್ಟೇ ನಿಯಾಮಕವಾದ ಭಗವದ್ರೂಪಗಳೂ ಕೂಡ ಇರುತ್ತವೆ. ಆದ್ದರಿಂದ ಶರೀರದಲ್ಲಿ ಪಂಚಪ್ರಾಣಗಳು ಇವೆ. ಪಂಚಪ್ರಾಣಗಳೆಂಬ ನಿಯಮ್ಯಪದಾರ್ಥಗಳು ಐದುಸಂಖ್ಯೆಯಲ್ಲಿರುವುದರಿಂದ ತನ್ನಿಯಾಮಕವಾದ ಭಗವದ್ರೂಪಗಳೂ ಕೂಡ ಐದುಸಂಖ್ಯೆಯಲ್ಲಿಯೇ ಇರುತ್ತವೆ.

ಪರಿಪೂರ್ಣಚಂದ್ರಿಕಾ

**तथा तद्गताकाशनियामकरूपस्य षष्ठत्वादाकाशश्चेति समुच्चयः ।**

ಶರೀರದಲ್ಲಿರುವ 'ಆಕಾಶ' ಎಂಬ ನಿಯಾಮಕ ರೂಪವು ಆರನೆಯದಾದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶಶ್ಚ ಪ್ರತಿಷ್ಠಿತಃ' ಎಂಬುದು ಸಾಧುವಾಗುತ್ತದೆ.

**आधारभूतशरीरनियामकरूपस्याधेयभूतप्राणादिनियामकरूपेभ्योऽतिरिक्तत्वात्तानि प्रत्याधारत्वं च युक्तम् ।**

ಶರೀರವು ಪಂಚಪ್ರಾಣಗಳಿಗೆ ಆಧಾರವಾಗಿದೆ. ಪಂಚಪ್ರಾಣಗಳು ಆಧೇಯವಾಗಿವೆ. ಶರೀರದಲ್ಲಿರುವ ನಿಯಾಮಕ ಭಗವದ್ರೂಪವು ಆಧಾರವೆಂದು, ಆಧೇಯವಾದ ಪಂಚಪ್ರಾಣಗಳಲ್ಲಿರುವ ರೂಪಗಳು ಆಧೇಯವೆಂದು ಕರೆಸಿಕೊಳ್ಳುತ್ತವೆ. ಹೀಗೆ ಒಬ್ಬನೇ ಭಗವಂತನ ರೂಪಗಳಿಗೆ ಆಧಾರಾಧೇಯಭಾವವು ಯುಕ್ತವಾಗುತ್ತದೆ.

**तदुक्तं न्यायविवरणे "बहुरूपत्वादधिकरणाधेयत्वादि तस्यैव युज्यते" इति ।**

ಇದನ್ನೇ ನ್ಯಾಯವಿವರಣದಲ್ಲಿ 'ಬಹುರೂಪತ್ವಾತ್ ಅಧಿಕರಣಾಧೇಯತ್ವಾದಿ ತಸ್ಯೈವ ಯುಜ್ಯತೇ' ಭಗವಂತನಿಗೆ ಬಹುರೂಪಗಳಿರುವುದರಿಂದ ಅಧಿಕರಣಭಾವ ಹಾಗೂ ಆಧೇಯಭಾವವು ಒಬ್ಬನಲ್ಲಿಯೇ ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

**प्रकाशः –**

**"प्राणादयो वाक्यशेषात्" इति द्वितीयसूत्रभाष्यटीकोक्तदिशा द्वितीयान्तप्राणादेर्ब्रह्मत्वेऽपि तेषामेव पञ्चजनत्वे को हेतुरित्यतस्तात्पर्यं विवृण्वन्द्वितीयान्तप्राणादिशब्दस्य पञ्च जनशब्दस्य चैकार्थ्यं हेतूक्तिपूर्वं समर्थयमानस्सिद्धान्तयति – सिद्धान्तस्त्विति ।।**

ವಿವರಣೆ - 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರಭಾಷ್ಯದ ಟೀಕೆಯಲ್ಲಿ ಹೇಳಿದಂತೆ 'ಪ್ರಾಣಮ್' ಇವೇ ಮೊದಲಾದ ದ್ವಿತೀಯಾಂತವಾದ ಪ್ರಾಣಾದಿಶಬ್ದಗಳೂ ಬ್ರಹ್ಮಪರವಾಗುತ್ತವೆ. ಆದರೆ ದ್ವಿತೀಯಾಂತಶಬ್ದಗಳಿಂದ ಪ್ರತಿಪಾದ್ಯರಾದವರೇ ಪಂಚ ಜನಶಬ್ದದಿಂದಲೂ ಪ್ರತಿಪಾದ್ಯರೆಂದು ನಿರ್ಣಯಿಸಲು ಏನು ಕಾರಣ? ಎಂಬ ಪ್ರಶ್ನೆಗೆ ಟೀಕೆಯ ತಾತ್ಪರ್ಯವನ್ನು ವಿವರಿಸುತ್ತಾ ದ್ವಿತೀಯಾಂತವಾದ ಪ್ರಾಣಶಬ್ದಗಳು ಹಾಗೂ ಪಂಚ ಜನಾದಿಶಬ್ದಗಳು ಒಂದೇ ಅರ್ಥವನ್ನು ಹೊಂದಿವೆ ಎಂಬ ವಿಷಯದಲ್ಲಿ ಕಾರಣವನ್ನು ಹೇಳುತ್ತಿದ್ದಾರೆ. ದ್ವಿತೀಯಾಂತಶಬ್ದದಿಂದ ಪ್ರತಿಪಾದ್ಯವಾದದ್ದೇ ಪ್ರಧಾನವಾಗಿರುತ್ತದೆಂಬ

ನಿಯಮವಿದೆ. ಇದನ್ನು ಸಮರ್ಥಿಸುವವರಾಗಿ ಸಿದ್ಧಾಂತವನ್ನು ಸ್ಥಾಪನೆ ಮಾಡುತ್ತಿದ್ದಾರೆ 'ಸಿದ್ಧಾಂತಸ್ತು' ಇತ್ಯಾದಿ ಗ್ರಂಥದಿಂದ.

**प्रकाशः – प्राणपूर्वकम् = प्राणचक्षुरादिकम् ।** द्वितीयान्तनिर्दिष्टमेवेत्येवकारान्वयं मत्वा तत् व्यावर्त्यमाह – **नत्विति ।।** शब्दितं प्राणपूर्वकं प्रधानं नत्वित्यन्वयः । श्लोकोक्ताप्राधान्याप्राधान्ये व्यनक्ति – **षष्ठीति ।।**

'ಪ್ರಾಣಪೂರ್ವಕಮ್' ಎಂದರೆ ಪ್ರಾಣ, ಚಕ್ಷುಸ್ಸು ಮೊದಲಾದವುಗಳು ಎಂದು ಅರ್ಥ. ದ್ವಿತೀಯಾಂತ 'ನಿರ್ದಿಷ್ಟರಾದವರೇ' ಎಂಬಲ್ಲಿರುವ ಏವಕಾರಕ್ಕೆ 'ದ್ವಿತೀಯಾಂತನಿರ್ದಿಷ್ಟಮ್' ಎಂಬ ಶಬ್ದದ ಜೊತೆಗೆ ಅನ್ವಯವನ್ನು ತಿಳಿಯಬೇಕು ಎಂಬುದನ್ನು ತೋರಿಸುತ್ತಾ ಏವಕಾರದಿಂದ ವ್ಯಾವರ್ತವಾದದ್ದನ್ನು 'ನತು' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. 'ನತು ಷಷ್ಠ್ಯಂತ ಶಬ್ದಿತಮ್' ಎಂದರೆ ಷಷ್ಠ್ಯಂತವಾದ 'ಪ್ರಾಣಸ್ಯ' ಎಂಬ ಪದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ ಎಂದಭಿಪ್ರಾಯ. ಶ್ಲೋಕದಲ್ಲಿ ದ್ವಿತೀಯಾಂತ ಪದದಿಂದ ವಿನಿರ್ದಿಷ್ಟವಾದದ್ದನ್ನು ಪ್ರಧಾನವೆಂದು, ಷಷ್ಠ್ಯಂತವಾದ ಪದದಿಂದ ವಿನಿರ್ದಿಷ್ಟವಾದದ್ದನ್ನು ಅಪ್ರಧಾನವೆಂದು ಪರಿಗಣಿಸಲಾಗಿದೆ. ಇದನ್ನೇ ಗ್ರಂಥದಲ್ಲಿ 'ಷಷ್ಠೀ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः – शब्दत इति ।।** ''षष्ठी शेषे'' इति स्मृत्या षष्ठ्याश्शेषार्थत्वादिति भावः ।। **अप्रधानेति ।।** द्वितीयानिर्दिष्टास्तु प्रधानभूता इत्यर्थाल्लभ्यत इत्यनुक्तिः । तावता पञ्च जनत्वं प्रधानानामिति कुतः? इत्यत आह – **नचेति ।।**

'ಶಬ್ದತಃ' ಎಂದರೆ 'ಷಷ್ಠೀ ಶೇಷೇ' ಎಂಬ ಸೂತ್ರದಲ್ಲಿ ಷಷ್ಠೀವಿಭಕ್ತಿಗೆ ಸಂಬಂಧಾರ್ಥವನ್ನು ಹೇಳಲಾಗಿದೆ ಎಂದಭಿಪ್ರಾಯ. 'ಅಪ್ರಧಾನ' ಎಂದರೆ ಷಷ್ಠ್ಯಂತ ಪದದಿಂದ ನಿರ್ದಿಷ್ಟವಾದದ್ದು ಅಪ್ರಧಾನವೆಂದು ಹೇಳಿದ ಮೇಲೆ ದ್ವಿತೀಯಾಂತಪದದಿಂದ ನಿರ್ದಿಷ್ಟವಾದದ್ದು ಪ್ರಧಾನವೆಂಬುದು ಅರ್ಥಾತ್ ಸಿದ್ಧವಾಗುತ್ತದೆ. ಆದ್ದರಿಂದ ಇದನ್ನು ಪ್ರತ್ಯೇಕವಾಗಿ ಹೇಳಿರುವುದಿಲ್ಲ. ಇಷ್ಟು ಮಾತ್ರದಿಂದ ಪಂಚ ಜನತ್ವಕ್ಕೆ ಪ್ರಾಧಾನ್ಯವನ್ನು ಹೇಗೆ ಹೇಳಿದಂತಾಯಿತು ? ಎಂಬ ಪ್ರಶ್ನೆಗೆ 'ನಚ' ಎಂಬ ಗ್ರಂಥದಿಂದ ಉತ್ತರಿಸುತ್ತಿದ್ದಾರೆ.

**प्रकाशः – प्रयाजशेषेति ।।** उक्तमधिकरणशरीरं ''अनुकृतेः'' इत्यत्र । ''अभिघारणे विप्रकर्षादनुयाजवत्पात्रभेदस्स्यात्'' इति चतुर्थाद्यपादीयचतुर्दशाधिकरणे ''प्रयाजशेषेण हर्वींष्यभिघारयति'' इति वाजपेयगतवाक्ये प्रातिपदिकानुरोधेन प्रत्ययास्वारस्यमुपेत्य प्रयाजशेषं हविष्षु क्षारयेदित्यर्थः समाश्रितः । तथेहापि पञ्चजनप्रातिपदिकस्वारस्याय ''यस्मिन्'' इति सप्तम्या अपि प्रथमाद्यर्थत्वेनास्वारस्यमस्त्वित्यर्थः ।

ಪೂರ್ವಮೀಮಾಂಸೆಯ ಪ್ರಯಾಜಾಶೇಷಾಧಿಕರಣ ಶರೀರವನ್ನು ಹಿಂದೆ 'ಅನುಕೃತೇಸ್ತಸ್ಯಚ' ಎಂಬ ಸೂತ್ರವ್ಯಾಖ್ಯಾನದಲ್ಲಿ ವಿವರಿಸಲಾಗಿದೆ.

'ಅಭಿಘಾರಣೇ ವಿಪ್ರಕರ್ಷಾದನುಯಾಜವತ್ ಪಾತ್ರಭೇದಃ ಸ್ಯಾತ್' (೪-೧-೧೪)

ಪ್ರಯಾಜಶೇಷೇಣ ಹವೀಂಷ್ಯಭಿಘಾರಯತಿ ಎಂಬ ವಾಕ್ಯದಲ್ಲಿ ವಾಜಪೇಯಪ್ರಕರಣದಲ್ಲಿರುವ ಈ ವಾಕ್ಯವನ್ನು ವಿಚಾರ ಮಾಡಲಾಗಿದೆ. ಪ್ರಾತಿಪದಿಕಕ್ಕೆ ಅನುಸಾರಿಯಾಗಿ ಪ್ರತ್ಯಯಕ್ಕೆ ಅಸ್ವಾರಸ್ಯವನ್ನು ಒಪ್ಪಿ ಪ್ರಯಾಜಶೇಷವನ್ನು ಹವಿಸ್ಸುಗಳಲ್ಲಿ ಕ್ಷಾರಣ ಮಾಡಬೇಕು ಎಂಬುದು ಇದರ ಅರ್ಥ. ಅದರಂತೆ ಇಲ್ಲೂ ಕೂಡ ಪಂಚ ಜನ ಪ್ರಾತಿಪದಿಕ ಸ್ವಾರಸ್ಯಕ್ಕಾಗಿ 'ಯಸ್ಮಿನ್' ಎಂಬಲ್ಲಿರುವ ಸಪ್ತಮೀ ವಿಭಕ್ತಿಗೆ ಪ್ರಥಮ್ಯಾದ್ಯರ್ಥವನ್ನು ಹೇಳಿ ಅಸ್ವಾರಸ್ಯವನ್ನು ಹೇಳಬೇಕು ಎಂದು ತಿಳಿಯಬೇಕು.

**ಪ್ರಕಾಶಃ** – ननु तत्र शेषेणेत्येकपद एव प्रातिपदिकप्रत्यययोस्स्वारस्यास्वारस्ये । इह तु न तथेति कथं दृष्टान्तः ।

ಪ್ರಶ್ನೆ - ಪೂರ್ವಮೀಮಾಂಸೆಯ ಈ ದೃಷ್ಟಾಂತವು ಏಕಪದನಿಷ್ಠವಾದ ಪ್ರಾತಿಪದಿಕ ಹಾಗೂ ಪ್ರತ್ಯಯಗಳ ನಡುವೆ ಯಾವುದರ ಅರ್ಥವು ಸ್ವಾರಸ್ಯವಾಗುತ್ತದೆ ಅಥವಾ ಅಸ್ವಾರಸ್ಯವಾಗುತ್ತದೆ ? ಎಂಬ ವಿಚಾರದಲ್ಲಿ ಹೊರಟಿರುತ್ತದೆ. ಆದರೆ ಪ್ರಕೃತ ಪಂಚ ಜನ ಪ್ರಾತಿಪದಿಕದ ಸ್ವಾರಸ್ಯಕ್ಕೋಸ್ಕರ 'ಯಸ್ಮಿನ್' ಎಂಬ ಅನ್ಯಪದನಿಷ್ಠವಾದ ಸಪ್ತಮೀ ವಿಭಕ್ತಿಗೆ ಅಸ್ವಾರಸ್ಯವನ್ನು ಕಲ್ಪನೆ ಮಾಡುತ್ತಿದ್ದೀರಿ. ಆದ್ದರಿಂದ ಭಿನ್ನಪದ ನಿಷ್ಠವಾದ ಪ್ರತ್ಯಯಾರ್ಥದ ಅಸ್ವಾರಸ್ಯಕ್ಕೆ ಏಕಪದನಿಷ್ಠವಾದ 'ಶೇಷೇಣ' ಎಂಬ ಪೂರ್ವಮೀಮಾಂಸೆಯ ದೃಷ್ಟಾಂತವು ವಿಷಮವಾಗುತ್ತದಲ್ಲವೇ?

**ಪ್ರಕಾಶಃ** – सत्यम् । तयोस्स्वारस्यास्वारस्यमात्रे दृष्टान्तोऽयमित्यदोषः । यद्वा शेषप्रातिपदिकस्वारस्यार्थं हवींषीति द्वितीयाया अस्वारस्याङ्गीकारात्तदभिप्रायेणायं दृष्टान्तः ।

ಉತ್ತರ - ಹೌದು. ಆದರೆ ಪ್ರಾತಿಪದಿಕಾರ್ಥವು ಪ್ರತ್ಯಯಾರ್ಥಕ್ಕಿಂತ ಸ್ವರಸವಾಗುತ್ತದೆನ್ನಲು ಮಾತ್ರ ಪೂರ್ವಮೀಮಾಂಸೆಯ ದೃಷ್ಟಾಂತವನ್ನು ತಿಳಿಯಬೇಕು ಹೊರತು, ಏಕಪದನಿಷ್ಠವೇ ಆಗಿರುವ ಪ್ರಾತಿಪದಿಕ ಹಾಗೂ ಪ್ರತ್ಯಯಗಳ ನಡುವೆ ಪ್ರಾತಿಪದಿಕದ ಅರ್ಥವು ಸ್ವರಸವಾಗಿರುತ್ತದೆನ್ನಲು ಇದು ದೃಷ್ಟಾಂತವಲ್ಲ.

ಅಥವಾ 'ಪ್ರಯಾಜಶೇಷೇಣ ಹವೀಂಷಿ ಅಭಿಘಾರಯತಿ' ಎಂಬ ವಾಕ್ಯದಲ್ಲಿ 'ಹವೀಂಷಿ' ಎಂಬ ಮತ್ತೊಂದು ಪದದಲ್ಲಿ ದ್ವಿತೀಯಾ ವಿಭಕ್ತಿಯು ಶ್ರುತವಾಗಿದೆ. ಈ ದ್ವಿತೀಯಾವಿಭಕ್ತಿಗೆ 'ಹವಿಸ್ಸು' ಎಂಬುದಾಗಿ ಸಪ್ತಮ್ಯರ್ಥವನ್ನು ಅಂಗೀಕರಿಸಿದ್ದರಿಂದ ಅಸ್ವಾರಸ್ಯವನ್ನು ಒಪ್ಪಿದಂತಾಯಿತು. 'ಶೇಷೇಣ' ಎಂಬ ಪದದಲ್ಲಿರುವ 'ಶೇಷ' ಎಂಬ ಪ್ರಾತಿಪದಿಕದ ಸ್ವಾರಸ್ಯಕ್ಕೋಸ್ಕರ 'ಹವೀಂಷಿ' ಎಂಬ ಭಿನ್ನಪದನಿಷ್ಠವಾದ ದ್ವಿತೀಯಾವಿಭಕ್ತಿಗೆ ಸಪ್ತಮ್ಯರ್ಥವೆಂಬ ಅಸ್ವಾರಸ್ಯವನ್ನು ಹೇಗೆ ಪೂರ್ವಮೀಮಾಂಸೆಯಲ್ಲಿ ಒಪ್ಪಲಾಗಿದೆಯೋ, ಅದರಂತೆ ಪ್ರಕೃತ ಪಂಚ ಜನ ಪ್ರಾತಿಪದಿಕದ ಸ್ವಾರಸ್ಯಕ್ಕಾಗಿ 'ಯಸ್ಮಿನ್' ಎಂಬಲ್ಲಿರುವ ಸಪ್ತಮೀ ವಿಭಕ್ತಿಗೆ ಅಸ್ವಾರಸ್ಯವನ್ನು

ಒಪ್ಪುವುದು ತಪ್ಪಾಗುವುದಿಲ್ಲ. ಆದ್ದರಿಂದ ಪೂರ್ವಮೀಮಾಂಸೆಯ ದೃಷ್ಟಾಂತವು ಭಿನ್ನಪದನಿಷ್ಠವಾದ ಪ್ರಾತಿಪದಿಕಾರ್ಥ ಹಾಗೂ ಪ್ರತ್ಯಯಾರ್ಥಗಳ ಸ್ವಾರಸ್ಯ ಹಾಗೂ ಅಸ್ವಾರಸ್ಯ ವಿಚಾರಗಳಲ್ಲಿಯೇ ಪ್ರಸಕ್ತವಾಗಿದೆಯೆಂದು ತಿಳಿಯಬೇಕು.

**प्रकाशः** – यस्मिन्निति प्रातिपदिकस्य पञ्च जन प्रातिपदिकस्य चैकार्थत्वात्तदभिप्रायेण वाऽयमिति ध्येयम् ।

ಅಥವಾ 'ಯಸ್ಮಿನ್' ಎಂಬ ಪ್ರಾತಿಪದಿಕಕ್ಕೂ ಬ್ರಹ್ಮನೆಂದೇ ಅರ್ಥ. ಪಂಚ ಜನ ಪ್ರಾತಿಪದಿಕಕ್ಕೂ ಬ್ರಹ್ಮನೆಂದೇ ಅರ್ಥ. ಎರಡೂ ಪದಗಳಿಗೆ ಒಂದೇ ಅರ್ಥವಿರುವುದರಿಂದ ಇದನ್ನು ವಿವಕ್ಷಿಸಿ ಪಂಚ ಜನ ಪ್ರಾತಿಪದಿಕದ ಸ್ವಾರಸ್ಯಕ್ಕಾಗಿ 'ಯಸ್ಮಿನ್' ಎಂಬಲ್ಲಿರುವ ಸಪ್ತಮೀ ವಿಭಕ್ತಿಗೆ ಅಸ್ವಾರಸ್ಯವನ್ನು ಕಲ್ಪನೆ ಮಾಡಬೇಕೆಂದು ತಿಳಿಯಬೇಕು.

**प्रकाशः** – ननु च तत्रोभयोरपि स्वारस्यमाश्रितम् । यदाह ''उभयसंस्कारः-स्विष्टकृत्सूक्तवाक्यवत्'' इति ।

ಶಂಕೆ - ನೀವು ನೀಡಿದ ಪೂರ್ವಮೀಮಾಂಸೆಯ ದೃಷ್ಟಾಂತವು ಸರಿಯಿಲ್ಲ. ಏಕೆಂದರೆ ಪೂರ್ವಮೀಮಾಂಸಕರಾದ ಭಾಟ್ಟರು ಪ್ರತ್ಯಯಾರ್ಥ ಹಾಗೂ ಪ್ರಾತಿಪದಿಕಾರ್ಥ ಎರಡಕ್ಕೂ ಕೂಡ ಸ್ವಾರಸ್ಯವನ್ನೇ ಆಶ್ರಯಿಸಿದ್ದಾರೆ. ಇದನ್ನೇ 'ಉಭಯಸಂಸ್ಕಾರಸ್ವಿಷ್ಟಕೃತ್‌ಸೂಕ್ತವಾಕ್ಯವತ್' ಎಂಬ ಅವರ ಮಾತಿನಲ್ಲಿ ಕಾಣಬಹುದು. ಪ್ರಯಾಜಶೇಷದಿಂದ ಹವಿಸ್ಸುಗಳಲ್ಲಿ ಮಾಡುವಂತಹ ಅಭಿಘಾರವು ಎರಡು ಪ್ರಯೋಜನವುಳ್ಳದ್ದು ಎಂದು ಹೇಳಿದ್ದಾರೆ. ಅಂದರೆ ಶೇಷಕ್ಕೆ ಪ್ರತಿಪತ್ತಿಯು ಆಯಿತು. ಉಪಯೋಕ್ಷ್ಯಮಾಣ ಸಂಸ್ಕಾರರೂಪವೂ ಆಯಿತು. ಈ ಪಕ್ಷದಲ್ಲಿ ಶೇಷ ಎಂಬ ಪ್ರಾತಿಪದಿಕಕ್ಕೂ ಸ್ವಾರಸ್ಯ ಬಂದಂತಾಯಿತು. ದ್ವಿತೀಯಾವಿಭಕ್ತ್ಯರ್ಥವೂ ಕೂಡ ಸ್ವಾರಸ್ಯವಾಯಿತು. ಹೀಗೆ ಯಥಾಸ್ಥಿತವಾದ ಅರ್ಥವನ್ನು ವಿವಕ್ಷಿಸಿದ್ದಾರಲ್ಲವೇ?

**प्रकाशः** – मैवम् । गुरुमताभिप्रायेणैतदुक्तेस्तेन तस्यास्वीकारात् । भट्टमतेपि हविराधारनियमात्तत्संस्कारत्वम् । नतु कस्यचित्स्वारस्यानुरोधेनेति न कश्चिद्दोषः।।

ಸಮಾಧಾನ - ಭಾಟ್ಟರು ಹಾಗೆ ಹೇಳಿದರೂ ಕೂಡ ಪ್ರಾಭಾಕರರ ಮತವನ್ನು ಅನುಸರಿಸಿ ಇಲ್ಲಿ ದೃಷ್ಟಾಂತವನ್ನು ನೀಡಲಾಗಿದೆ. ಪ್ರಾಭಾಕರರ ಮತದಲ್ಲಿ ಶೇಷಕ್ಕೆ ಪ್ರತಿಪತ್ತಿಯನ್ನು ಸ್ವೀಕರಿಸಿ ಉಪಯೋಕ್ಷ್ಯಮಾಣ ಸಂಸ್ಕಾರವನ್ನು ನಿರಾಕರಿಸಿದ್ದಾರೆ. ಆದ್ದರಿಂದ ಸಪ್ತಮ್ಯರ್ಥಕ್ಕೆ ಅಸ್ವಾರಸ್ಯವನ್ನು ಒಪ್ಪಿದಂತಾಯಿತು. ಇವರ ಮತವನ್ನು ಅನುಸರಿಸಿ ದೃಷ್ಟಾಂತವೆಂದು ತಿಳಿಯಬೇಕು.

ಭಾಟ್ಟಮತದಲ್ಲಿಯೂ ಕೂಡ ಶೇಷಕ್ಕೆ ಪ್ರತಿಪತ್ತಿಯನ್ನು ಉಪಯೋಕ್ಷ್ಯಮಾಣವಾದದ್ದಕ್ಕೆ ಸಂಸ್ಕಾರ ಎಂಬೆರಡನ್ನೂ ಕೂಡ ಏಕೆ ಒಪ್ಪಿದ್ದಾರೆಂದರೆ ಪುರೋಡಾಶರೂಪವಾದ ಹವಿಸ್ಸಿಗೆ ತುಪ್ಪದ ಸಂಸ್ಕಾರವು ಇದ್ದೇ ಇರಬೇಕೆಂದು ತಿಳಿಸಬೇಕಾಗಿದೆ. ಅದಕ್ಕೋಸ್ಕರ ಉಕ್ತವಾದದ್ದಕ್ಕೂ ವಕ್ಷ್ಯಮಾಣವಾದದ್ದಕ್ಕೂ ಸಂಸ್ಕಾರವೆಂದಷ್ಟೇ

ಅವರು ಈ ಅಧಿಕರಣದಲ್ಲಿ ಸಮರ್ಥನೆ ಮಾಡಿದ್ದಾರೆ. ಹೊರತು ಪ್ರತ್ಯಯ ಹಾಗೂ ಪ್ರಾತಿಪದಿಕಗಳ ನಡುವೆ ಯಾವುದರ ಅರ್ಥ ಸ್ವರಸವಾಗುತ್ತದೆಂಬ ವಿಚಾರವನ್ನು ಅವರು ಈ ಅಧಿಕರಣದಲ್ಲಿ ಮಾಡಿರುವುದಿಲ್ಲ. ಆದ್ದರಿಂದ ನಾವು ವಿವಕ್ಷಿಸಿದ ಅರ್ಥಕ್ಕೆ ಭಾಟ್ಟರ ಅಭಿಪ್ರಾಯದ ವಿರೋಧವೂ ಸರ್ವಥಾ ಬರುವುದಿಲ್ಲ.

**प्रकाशः – वक्ष्यत इति ।। युक्तं चेत्यादिना । एतेन यत्परैः प्राणादयषष्ठ्यन्तनिर्दिष्टा एव ग्राह्या इत्युक्तं तन्निरस्तं भवति ।**

ವಿಭಕ್ತಿಗೆ ಅಸ್ವಾರಸ್ಯವನ್ನು ಹೇಳಬೇಕಾಗಿಲ್ಲ ಎಂಬುದರ ಬಗ್ಗೆ ಮುಂದೆ 'ಯುಕ್ತಂಚ' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತೇವೆ. ಹಿಂದೆ ಪ್ರಧಾನವಾಗಿ ಪ್ರಸಕ್ತವಾದ ಭಗವದ್ರೂಪಗಳನ್ನೇ ಪಂಚ ಜನ ಶಬ್ದದಿಂದ ತೆಗೆದುಕೊಳ್ಳಬೇಕೆಂದು ಸಮರ್ಥನೆ ಮಾಡಿದ್ದರಿಂದ ಅದ್ವೈತಿಗಳು ಹಾಗೂ ವಿಶಿಷ್ಟಾದ್ವೈತಿಗಳು ಷಷ್ಠ್ಯಂತನಿರ್ದಿಷ್ಟವಾದ ಪದಗಳಿಂದ ಪ್ರಸಕ್ತರಾದ ಪ್ರಾಣಾದಿಗಳನ್ನೇ ಪಂಚ ಜನಾದಿ ಶಬ್ದಗಳಿಂದ ತೆಗೆದುಕೊಳ್ಳಬೇಕೆಂದು ಹೇಳುತ್ತಾರೆ, ಅದನ್ನೇ ನಿರಾಕರಣೆ ಮಾಡಿದಂತೆ ಆಯಿತು.

**प्रकाशः** – एवं द्वितीयसूत्रभाष्यटीकाभिमतहेतूक्त्या द्वितीयान्तनिर्दिष्टप्राणादीनामेव पञ्च जनत्वव्युत्पादनेन टीकायां द्वितीयान्तप्राणादेर्ब्रह्मत्वसमर्थनेपि कुतस्तेषां पञ्च जनत्वमिति शङ्कां निरस्य इदानीं पूर्वपक्ष्युक्तं बाधकद्वयं क्रमेण निराचिकीर्षुर्बहुत्वसंख्यानुपपत्तिबाधकं टीकोक्तपरिहारं गुहानये विवृतं मत्वा परिहारान्तरेण निराह – **न चेत्यादिना साधितं चेत्यन्तेन ।।**

ಇಲ್ಲಿಯ ತನಕ ಎರಡನೆಯ ಸೂತ್ರದ ಭಾಷ್ಯದ ಟೀಕೆಯಲ್ಲಿ ಹೇತುವನ್ನು ಹೇಳಿ ದ್ವಿತೀಯಾಂತ ಪದದಿಂದ ನಿರ್ದಿಷ್ಟರಾದ ಪ್ರಾಣಾದಿಗಳನ್ನೇ ಪಂಚ ಜನಾದಿ ಶಬ್ದಗಳಿಂದ ತೆಗೆದುಕೊಳ್ಳಬೇಕು ಎಂಬುದನ್ನು ಸಮರ್ಥಿಸಲಾಯಿತು. ಇದರಿಂದ ಟೀಕೆಯಲ್ಲಿ ದ್ವಿತೀಯಾಂತವಾದ ಪ್ರಾಣಾದಿಗಳು ಬ್ರಹ್ಮನ ಸ್ವರೂಪವೇ ಆಗಿವೆ ಎಂದು ಸಮರ್ಥನೆ ಮಾಡಿದಂತಾಯಿತು. ಮತ್ತು ಈ ಬ್ರಹ್ಮನ ಸ್ವರೂಪವೇ ಪಂಚ ಜನ ಶಬ್ದ ಪ್ರತಿಪಾದ್ಯವೆಂದು ಹೇಳಲು ಹೇಗೆ ಸಾಧ್ಯ ? ಎಂಬ ಆಶಂಕೆಯನ್ನೂ ಕೂಡ ನಿರಾಕರಿಸಿದ್ದಾಯಿತು. ಪ್ರಕೃತ ಪೂರ್ವಪಕ್ಷಿಯು ಹೇಳಿದ ಎರಡು ಬಾಧಕಗಳನ್ನು ಕ್ರಮವಾಗಿ ನಿರಾಕರಿಸುವವರಾಗಿ, ಬಹುತ್ವಸಂಖ್ಯೆಯು ಅನುಪಪನ್ನವಾಗುತ್ತದೆಂಬ ಬಾಧಕವನ್ನು ಟೀಕೆಯಲ್ಲಿ ಹೇಳಿದಂತೆ ಗುಹಾಧಿಕರಣದಲ್ಲಿಯೇ ಪರಿಹರಿಸಿದ್ದಾಗಿದೆ ಎಂದು ತಿಳಿದು ಪ್ರಕೃತ ಮತ್ತೊಂದು ಪರಿಹಾರದಿಂದ ಅನುಪಪತ್ತಿಯನ್ನು ನಿರಾಕರಿಸುತ್ತಿದ್ದಾರೆ 'ನಚ' ಎಂಬಲ್ಲಿಂದ ಪ್ರಾರಂಭ ಮಾಡಿ 'ಸಾಧಿತಂ ಚ' ಎಂಬಲ್ಲಿಯ ತನಕ.

**प्रकाशः** – पूर्वपक्षिणैव समाधिं वाचयितुं प्रतिबन्दीमादत्ते – **षष्ठीति ।।** प्रतिशरीरं भेदादिति भावः । एकवचनादेकैक एवास्तु प्राणादिरित्यत आह – **नहीति ।।**

ಪೂರ್ವಪಕ್ಷಿಯಿಂದಲೇ ಸಮಾಧಾನವನ್ನು ಹೇಳಿಸಲು ಪ್ರತಿಬಂದಿಯನ್ನು ಆಶಂಕಿಸುತ್ತಿದ್ದಾರೆ 'ಷಷ್ಠೀ' ಇತ್ಯಾದಿ ವಾಕ್ಯದಿಂದ. ಪ್ರತಿಶರೀರದಲ್ಲಿಯೂ ಪಂಚಪ್ರಾಣಾದಿಗಳಿಗೆ ಭೇದವಿರುವುದರಿಂದ ಎಂದಭಿಪ್ರಾಯ. ಏಕವಚನದಿಂದ ಎಲ್ಲರಲ್ಲಿಯೂ ಒಬ್ಬನೇ ಪ್ರಾಣನು ಇರಬಹುದಲ್ಲವೇ? ಎಂಬ ಪ್ರಶ್ನೆಗೆ 'ನಹಿ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ.

**प्रकाशः – एकस्यैवेति प्राणादेर्विशेषणम् । ततश्च किमित्यत आह – एवञ्चेति ।। प्रत्येकं प्राणादीनामानन्त्ये सतीत्यर्थः ।**

'ಏಕಸ್ಯೈವ' ಎಂಬ ಪದಕ್ಕೆ 'ಬ್ರಹ್ಮಣಃ' ಎಂಬಲ್ಲಿ ಅನ್ವಯವನ್ನು ತಿಳಿಯಬಾರದು. 'ಪ್ರಾಣಾದೇಃ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. ಬ್ರಹ್ಮನೊಬ್ಬನಿಗೆ ಮಾತ್ರ ಪ್ರಾಣತ್ವವನ್ನು ಪರಮಾತ್ಮನು ನೀಡುತ್ತಿರುವುದಲ್ಲ. ಹೊರತು, ಎಲ್ಲರ ಶರೀರದಲ್ಲಿರುವ ಪ್ರಾಣಗಳಿಗೂ ಪ್ರಾಣತ್ವವನ್ನು ನೀಡುತ್ತಾನೆಂದೇ ತಿಳಿಯಬೇಕು. ಇದರಿಂದ ಏನು ಹೇಳಿದಂತಾಯಿತು ? ಎಂಬ ಪ್ರಶ್ನೆಗೆ 'ಏವಂಚ' ಎಂಬ ಶ್ಲೋಕದಿಂದ ಉತ್ತರಿಸುತ್ತಿದ್ದಾರೆ. 'ಏವಂಚ' ಎಂದರೆ ಪ್ರತ್ಯೇಕವಾಗಿ ಪ್ರಾಣಾದಿಗಳು ಅನಂತವಾದ್ದರಿಂದ ಎಂದರ್ಥ.

**प्रकाशः – एतेन बहुसंख्योपसङ्ग्रहेऽपि न विरोधः । पञ्चजनशब्देनाब्रह्मभूत-षष्ठ्यन्तनिर्दिष्टप्राणादिग्रहणाद्यस्समन्वयसूत्रविरोधस्स नास्ति ।**

ಹೀಗೆ ವ್ಯಾಖ್ಯಾನ ಮಾಡಿದ್ದರಿಂದ ಸೂತ್ರದಲ್ಲಿ ಬಹುತ್ವ ಸಂಖ್ಯೆಯನ್ನು ಹೇಳಿದ್ದರೂ ಕೂಡ ವಿರೋಧವಿಲ್ಲ ಎಂಬುದನ್ನು ಸಮರ್ಥನೆ ಮಾಡಿದಂತಾಯಿತು. ಪಂಚ ಜನಾದಿ ಶಬ್ದಗಳಿಂದ ಷಷ್ಠ್ಯಂತಶಬ್ದಗಳಿಂದ ನಿರ್ದಿಷ್ಟರಾದ ಬ್ರಹ್ಮರಲ್ಲದ ಪ್ರಾಣಾದಿಗಳನ್ನೇ ತೆಗೆದುಕೊಳ್ಳಬೇಕು. ಆವಾಗ ಸಮನ್ವಯಸೂತ್ರದ ವಿರೋಧ ಬರುತ್ತದೆಂದು ಹೇಳಿದ್ದು ಅಸಾಧುವಾಯಿತು. ಈ ಶಂಕೆಯನ್ನು ಈಗ ನಿರಾಕರಿಸಿದಂತಾಯಿತು.

**प्रकाशः – कुतः । आकाशादिषु नानाभावात् । आदिपदोक्तप्राणादिषु नानाभावात् । प्रत्येकं तेषां नानात्वात् । बहुत्वात् । पञ्च जनशब्देन तेषां ग्रहणासम्भवादिति भाष्यखण्डस्यार्थान्तरमुक्तं भवति । परमुखेनोत्तरं वाचयति ।। अथेति ।।**

ಏಕೆಂದರೆ ಆಕಾಶಾದಿಗಳಲ್ಲಿ ನಾನಾಭಾವವಿದೆ. ಆದಿಪದದಿಂದ ಹೇಳಲ್ಪಟ್ಟ ಪ್ರಾಣಾದಿಗಳಲ್ಲಿಯೂ ನಾನಾಭಾವವಿದೆ. ಹೀಗೆ ಪ್ರತ್ಯೇಕವಾಗಿ ಪ್ರತಿಯೊಂದೂ ಕೂಡ ಅನೇಕವಾಗಿವೆ. ಆದ್ದರಿಂದ ಪಂಚ ಜನ ಶಬ್ದದಿಂದ ಒಬ್ಬನೇ ಪರಮಾತ್ಮನನ್ನು ಹೇಗೆ ತೆಗೆದುಕೊಳ್ಳಲು ಬರುವುದಿಲ್ಲವೋ, ಅದರಂತೆ ಅನೇಕ ಪದಾರ್ಥಗಳನ್ನೂ ಕೂಡ ತೆಗೆದುಕೊಳ್ಳಲು ಬರುವುದಿಲ್ಲ ಎಂಬ ಆಕ್ಷೇಪ ಪ್ರಾಪ್ತವಾದರೆ, ನೀವು ಯಾವ ಸಮಾಧಾನವನ್ನು ಹೇಳುತ್ತೀರೋ, ನಾವೂ ಕೂಡ ಅದೇ ಸಮಾಧಾನವನ್ನು ಹೇಳುತ್ತೇವೆಂದು ತಿಳಿಯಬೇಕು. ಅವನ ಮುಖದಿಂದಲೇ ಉತ್ತರವನ್ನೂ ಕೂಡ ಹೇಳಿಸುತ್ತಿದ್ದಾರೆ. 'ಅಥ' ಇತ್ಯಾದಿ ಗ್ರಂಥದಿಂದ.

ಪರಿಪೂರ್ಣಚಂದ್ರಿಕಾ

**प्रकाशः – एकवचनेति** ।। यथा चातुर्मास्येषु ''एतेन वैश्वदेवेन यजेत'' इत्यत्र प्रकृतानां वैश्वदेवपर्वगतानामष्टयागानामेकेन यजिनानुवादेनैकसमुदायकरणं यथा वा ''राजा राजसूयेन यजेत'' इत्यादौ प्रकृतेष्टिपशुसोमानामेकेन यजिना यथा वा द्युभ्वाद्यायतनत्वादीनामनेकत्वेप्येकवाक्योपात्ततयैकत्वं तथेति भावः ।।

ಪ್ರತಿಯೊಂದು ಶರೀರದಲ್ಲಿರುವ ಪ್ರಾಣಾದಿಗಳು ಭಿನ್ನ-ಭಿನ್ನವಾದ್ದರಿಂದ ಅನೇಕ ಪ್ರಾಣರೆಂದು ಹೇಳಬೇಕಿತ್ತು. ಆದರೂ ಸಹ 'ಪ್ರಾಣಸ್ಯ' ಎಂಬುದಾಗಿ ಏಕವಚನದ ನಿರ್ದೇಶವನ್ನು ಮಾಡಿದ್ದು ಎಲ್ಲಾ ಪ್ರಾಣರಲ್ಲಿರುವ ಪ್ರಾಣತ್ವ ಧರ್ಮವನ್ನು ವಿವಕ್ಷಿಸಿ ಎಂದು ತಿಳಿಯಬೇಕು. ಈ ವಿಷಯದಲ್ಲಿ ಪೂರ್ವಮೀಮಾಂಸೆಯ ದೃಷ್ಟಾಂತ ಹೀಗಿದೆ - ಚಾತುರ್ಮಾಸ್ಯಯಾಗದಲ್ಲಿ 'ಏತೇನ ವೈಶ್ವದೇವೇನ ಯಜೇತ' ಎಂಬ ವಾಕ್ಯವು ಪ್ರಕೃತವಾಗಿದೆ. ವೈಶ್ವದೇವಪರ್ವದಲ್ಲಿ ಎಂಟುಯಾಗಗಳು ಪ್ರಕೃತವಾಗಿವೆ. ಆ ಎಲ್ಲಾ ಯಾಗಗಳನ್ನು ಸಮುದಾಯರೂಪದಿಂದ ಒಂದೇ ಎಂದು ಪರಿಗಣಿಸಿ ಒಂದೇ ಯಜ್ ಧಾತುವು ಹೇಗೆ ಅನುವಾದ ಮಾಡುತ್ತಿದೆಯೋ, ಅಥವಾ 'ರಾಜಾ ರಾಜಸೂಯೇನ ಯಜೇತ' ಎಂಬಲ್ಲಿ ರಾಜಸೂಯ ಎಂಬ ಇಷ್ಟಿಸೋಮಗಳು ಅನೇಕವಾಗಿದ್ದರೂ ಕೂಡ ಅವೆಲ್ಲವನ್ನೂ 'ಯಜೇತ' ಎಂಬ ಒಂದೇ 'ಯಜ್' ಧಾತುವು ಅನುವಾದ ಮಾಡುತ್ತಿದೆಯೋ, ಅಥವಾ ಇದೇ ದ್ಯುಭ್ವಾದ್ಯಧಿಕರಣದಲ್ಲಿ ಹೇಳಿದಂತೆ, ಅಂತರಿಕ್ಷಾಶ್ರಯತ್ವ, ದ್ಯುಲೋಕಾಶ್ರಯತ್ವ, ಪೃಥಿವ್ಯಾಶ್ರಯತ್ವ ಮೊದಲಾದ ಲಿಂಗಗಳು ಆ ವಿಷಯವಾಕ್ಯ ಪ್ರಕರಣದಲ್ಲಿ ಬಹಳವಾಗಿ ಶ್ರುತವಾಗಿದ್ದರೂ 'ದ್ಯುಭ್ವಾದ್ಯಾಯತನಮ್' ಎಂಬುದಾಗಿ ಒಂದೇ ಲಿಂಗದಿಂದ ಎಲ್ಲವನ್ನೂ ಹೇಗೆ ಸಂಗ್ರಹಿಸಿದ್ದಾರೋ, ಆದರಂತೆ ಪ್ರಕೃತ, ಪ್ರಾಣಾದಿಗಳು ಅನೇಕರಾಗಿದ್ದರೂ ಎಲ್ಲಾ ಪ್ರಾಣರಲ್ಲಿರುವ ಪ್ರಾಣತ್ವ ಎಂಬ ಧರ್ಮವು ಒಂದೇ ಆಗಿರುವುದರಿಂದ ಏಕವಚನಪ್ರಯೋಗವು ಯುಕ್ತವಾಗಿದೆಯೆಂದು ತಿಳಿಯಬೇಕು.

**प्रकाशः – धर्मेति** ।। प्रमाणानामनेकत्वेऽपि यथा प्रत्यक्षत्वादिना त्रित्वं तथेति भावः ।। **पञ्चभिरिति** ।। ''प्राणस्य प्राणम्'' इत्यादिभिरित्यर्थः। एतेन संख्योपसङ्ग्रहादपि न विरोधः । तस्यैव भगवत एव नानाभावात् । प्राणमित्यादिना नाशब्दनिर्देशभावात् । प्राणप्राणदत्वादिनानाधर्माणां भावादित्यपि भाष्यखण्डस्यार्थान्तरमुक्तं भवति ।।

ಪ್ರತ್ಯಕ್ಷಾದಿ ಪ್ರಮಾಣಗಳು ಮೂರುವಿಧವಾಗಿವೆ ಎಂದು ಶಾಸ್ತ್ರದಲ್ಲಿ ಪ್ರಯೋಗಿಸುತ್ತಾರೆ. ಆದರೆ ಪ್ರತ್ಯಕ್ಷ ಪ್ರಮಾಣವೇ ಅನೇಕವಿಧವಾಗಿವೆ. ಅನುಮಾನ ಪ್ರಮಾಣವೂ ಕೂಡ ಅನೇಕವಿಧವಾಗಿವೆ. ಆದರೂ ಎಲ್ಲಾ ವಿಧವಾದ ಪ್ರತ್ಯಕ್ಷ ಪ್ರಮಾಣಗಳಲ್ಲಿ ಪ್ರತ್ಯಕ್ಷತ್ವ ಎಂಬ ಧರ್ಮವು ಒಂದೇ ಆಗಿದೆ. ಆದರಂತೆ ವಿಭಿನ್ನವಾದ ಎಲ್ಲಾ ಅನುಮಾನಗಳಲ್ಲಿಯೂ ಅನುಮಾನತ್ವ ಎಂಬ ಒಂದೇ ಧರ್ಮವಿದೆ. ಈ ದೃಷ್ಟಿಯಿಂದ ಮೂರು ಬಗೆಯ ಪ್ರಮಾಣಗಳೆಂದು ವ್ಯವಹರಿಸುವಂತೆ ಇಲ್ಲಿಯೂ ಸಹ ಧರ್ಮೈಕ್ಯದಿಂದ ಏಕವಚನ ಪ್ರಯೋಗವು ಸಾಧುವಾಗಿದೆಯೆಂದು ತಿಳಿಯಬೇಕು. 'ಪಂಚಭಿಃ' ಎಂದರೆ ''ಪ್ರಾಣಸ್ಯ ಪ್ರಾಣಮ್'' ಇತ್ಯಾದಿ ಐದುಬಗೆಯ

ಶಬ್ದಗಳಿಂದ ಎಂದರ್ಥ. ಹೀಗೆ ಹೇಳಿದ್ದರಿಂದ 'ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದವಿರೋಧಃ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡಿದಂತಾಯಿತು. ಒಬ್ಬನೇ ಬ್ರಹ್ಮನು 'ಪ್ರಾಣಮ್' ಇತ್ಯಾದಿಯಾದ ಅನೇಕ ಶಬ್ದಗಳಿಂದ ನಿರ್ದಿಷ್ಟನಾಗಿದ್ದಾನೆ. ಅಥವಾ ಒಬ್ಬನೇ ಬ್ರಹ್ಮನಲ್ಲಿ ಪ್ರಾಣಪ್ರಾಣದತ್ವ ಮೊದಲಾದ ಅನೇಕ ಧರ್ಮಗಳು ಇರುತ್ತವೆ. ಹೀಗೆಯೂ ಭಾಷ್ಯವನ್ನು ವ್ಯಾಖ್ಯಾನ ಮಾಡಿದಂತಾಗುತ್ತದೆ.

**प्रकाशः** – **यथेति** ।। उक्तमधिकरणशरीरं गुहामित्यत्र ।। **पञ्चापीति** ।। ''पञ्चप्रयाजास्त्रयोऽनुयाजाः'' इत्युक्तेरिति भावः ।

'ಯಥಾಪ್ರಯಾಜ' ಎಂಬ ವಾಕ್ಯದಲ್ಲಿ ಹೇಳಲ್ಪಟ್ಟ ಪೂರ್ವಮೀಮಾಂಸಾ ಅಧಿಕರಣ ಶರೀರವನ್ನು ಹಿಂದೆ ಗುಹಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ. 'ಪಂಚಪ್ರಯಾಜಾಃ ತ್ರಯೋಽನುಯಾಜಾಃ' ಐದು ಪ್ರಯಾಜ ಯಾಗಗಳನ್ನು, ಮೂರು ಅನುಯಾಜ ಯಾಗಗಳನ್ನು ಮಾಡಬೇಕೆಂದು ಈ ವಾಕ್ಯವು ಹೇಳುತ್ತಿದೆ.

**प्रकाशः** – तत्र ''एकादशप्रयाजान् यजति'' इति विकृतौ श्रुतसंख्यासम्पत्तये तेषां पञ्चानां प्रयोगावृत्त्यैकस्य त्रिरन्येषां द्विरित्येकादशत्वमुच्यते ''विवृद्धिभिः कर्मभेदात्'' इत्यधिकरणे । तद्वदित्यर्थः ।।

ವಿಕೃತಿಯಾಗದಲ್ಲಿ ''ಏಕಾದಶಪ್ರಯಾಜಾನ್ ಯಜತಿ'' ಒಟ್ಟು ಹನ್ನೊಂದು ಪ್ರಯಾಜಗಳನ್ನು ಮಾಡಬೇಕು ಎನ್ನಲಾಗಿದೆ. ಆದರೆ 'ಪಂಚ ಪ್ರಯಾಜಾಃ ತ್ರಯೋಽನುಯಾಜಾಃ' ಎಂಬಲ್ಲಿ ಪ್ರಯಾಜಯಾಗಗಳನ್ನು ಐದು ಎಂದು ಹೇಳಲಾಗಿದೆ. ಹೀಗಿರುವಾಗ ಹನ್ನೊಂದು ಪ್ರಯಾಜಗಳನ್ನು ಆಚರಿಸುವುದು ಹೇಗೆ ? ಎಂಬ ಪ್ರಶ್ನೆಯು ಪ್ರಾಪ್ತವಾದರೆ, ಇರುವ ಐದು ಪ್ರಯಾಜಯಾಗಗಳಲ್ಲಿ ನಾಲ್ಕನ್ನು ಎರಡೆರಡು ಬಾರಿ ಆಚರಣೆ ಮಾಡಬೇಕು. ಒಂದು ಪ್ರಯಾಜಯಾಗವನ್ನು ಮಾತ್ರ ಮೂರುಬಾರಿ ಆಚರಣೆ ಮಾಡಬೇಕು. ಆವಾಗ ಒಟ್ಟು ಹನ್ನೊಂದು ಪ್ರಯಾಜಯಾಗಗಳನ್ನು ಆಚರಿಸದಂತಾಗುತ್ತದೆ. ಇದನ್ನು 'ವಿವೃದ್ಧಿಭಿಃ ಕರ್ಮಭೇದಾತ್' ಎಂಬ ಅಧಿಕರಣದಲ್ಲಿ ಸಮರ್ಥಿಸಲಾಗಿದೆ. ಅದರಂತೆ ಇಲ್ಲಿಯೂ ತಿಳಿಯಬೇಕು.

**प्रकाशः** – **यथा चेति** ।। विवृतमेतद्दाक्षायणयज्ञाधिकरणमानन्दमयाधिकरणे । दर्शपूर्णमासप्रकरणे श्रुते ''दाक्षायणयज्ञेन यजेत'' इति वाक्ये दाक्षायणशब्दस्य ''द्वे पौर्णमास्यौ द्वे अमावास्ये'' इति वाक्यशेषबलेनावृत्त्यर्थत्वोक्त्या यथैकमेव दर्शपौर्णमासाख्यं कर्मावृत्त्या द्वे इत्युच्यते तद्वदित्यर्थः ।

'ದಾಕ್ಷಾಯಣಯಜ್ಞ' ಎಂಬ ಈ ಅಧಿಕರಣವನ್ನು ಹಿಂದೆ ಆನಂದಮಯಾಧಿಕರಣದಲ್ಲಿಯೇ ವಿವರಿಸಿದ್ದಾಗಿದೆ. ದರ್ಶಪೂರ್ಣಮಾಸ ಪ್ರಕರಣದಲ್ಲಿ 'ದಾಕ್ಷಾಯಣಯಜ್ಞೇನ ಯಜೇತ' ಎಂಬ ವಾಕ್ಯವು ಶ್ರುತವಾಗಿದೆ. ದಾಕ್ಷಾಯಣಯಜ್ಞ ಎಂದರೆ 'ದ್ವೇ ಪೌರ್ಣಮಾಸ್ಯೌ ದ್ವೇ ಅಮಾವಾಸ್ಯೇ' ಎಂಬ ವಾಕ್ಯಶೇಷವು ಎರಡು ಪೌರ್ಣಮಾಸ್ಯ ಯಾಗವನ್ನು, ಎರಡು ಅಮಾವಾಸ್ಯೆಯಾಗಗಳನ್ನು ಆಚರಿಸುವಂತಹ ಕ್ರಿಯೆ ಎಂದು

ಸ್ಪಷ್ಟಪಡಿಸಿದೆ. ಒಂದೇ ದರ್ಶಪೂರ್ಣಮಾಸ ಎಂಬ ಯಾಗವನ್ನು ಎರಡು ಬಾರಿ ಆವೃತ್ತಿ ಮಾಡಿಕೊಳ್ಳುವುದೇ ದಾಕ್ಷಾಯಣಯಾಗ ಎನಿಸುತ್ತದೆ ಆದರಂತೆ ಇಲ್ಲಿಯೂ ಕೂಡ ತಿಳಿಯಬೇಕು.

**प्रकाशः** – नन्वनेकत्वं भिन्ननिष्ठमित्यस्यौत्सर्गिकत्वेन पौर्णमास्यादौ क्वचिदन्यथात्वेऽपीहान्यगतस्य तस्य भगवदधीनत्वेनैवावरादिशब्दस्येव पञ्च जनादिशब्दस्यापि विष्णौ वृत्तिसम्भवात्किमेतत्क्लेशेनेत्यत आह – **यथा चेति** ।।

ಪ್ರಶ್ನೆ - ಅನೇಕತ್ವವು ಭಿನ್ನನಿಷ್ಠ ಎಂಬ ನಿಯಮವು ಔತ್ಸರ್ಗಿಕವಾಗಿದೆ. ಪೌರ್ಣಮಾಸ್ಯಯಾಗದಲ್ಲಿ ಅನೇಕತ್ವ ಎಂಬ ಶಂಕೆಯು ಕೂಡದಿದ್ದಾಗ ಆವೃತ್ತಿರೂಪದಿಂದ ಅನೇಕತ್ವವನ್ನು ಸಮರ್ಥಿಸಲಾಯಿತು. ಆದರೆ ಪರಮಾತ್ಮನ ವಿಷಯದಲ್ಲಿ ಬೇರೆ ರೀತಿಯಾಗಿ ಹೇಳಬಹುದು. ಏಕೆಂದರೆ ಅವನಲ್ಲಿ ಅನೇಕತ್ವವು ಇಲ್ಲದಿದ್ದರೂ ಬೇರೆಯವರಲ್ಲಿರುವ ಅನೇಕತ್ವವು ಇವನ ಅಧೀನವಾಗಿದೆ. ಆದ್ದರಿಂದ ಇವನನ್ನು ಪಂಚ ಇತ್ಯಾದಿ ಶಬ್ದಗಳಿಂದ ವ್ಯವಹರಿಸಲಾಗಿದೆ. ಹೀಗೆ ಕೂಡಿಸಲು ಬರುವಾಗ ಒಂದೇ ಪದಾರ್ಥದಲ್ಲಿ ಅನೇಕತ್ವವು ಕೂಡಬಹುದೆನ್ನಲು ಅನೇಕ ಪೂರ್ವಮೀಮಾಂಸಾದೃಷ್ಟಾಂತಗಳನ್ನು ಏಕೆ ನೀಡುತ್ತಿದ್ದೀರಿ?

ಉತ್ತರ - ಯಾವರೀತಿಯಾಗಿ ಅನೇಕತ್ವ ಸಂಖ್ಯೆಯು ಭಿನ್ನನಿಷ್ಠ ಎಂಬುದು ಔತ್ಸರ್ಗಿಕವೋ, ಅದರಂತೆ ವೈದಿಕವಾದ ಸಕಲ ಶಬ್ದಗಳ ಪ್ರವೃತ್ತಿನಿಮಿತ್ತಕ್ಕೆ ತದ್ಗತತ್ವವನ್ನು ನಿಮಿತ್ತೀಕರಿಸಿಕೊಂಡು ಬ್ರಹ್ಮನಲ್ಲಿ ಹೇಳುವ ವೃತ್ತಿಯೂ ಕೂಡ ಔತ್ಸರ್ಗಿಕವೇ ಆಗಿರುತ್ತದೆ.

**प्रकाशः – तत्त्याग इति** ।। हेतुसम्भवे त्यागायोगात्तदुपपादनमेवं कृतमिति भावः । ननु तथापि न मुख्यमनेकत्वं सम्भवतीत्यत आह – **साधितं चेति** ।। तत्र रूपभेदेनानेकत्वसमर्थनादिति भावः । एतेन ''नानाभावात्'' इत्येतदर्थोक्तिपरा ''नानारूपत्वेन'' इत्यादिटीका विवृता ।

'ತತ್ತ್ಯಾಗೇ' ಎಂದರೆ ಹೇತು ಇರುವಾಗ ನಿಯಮವನ್ನು ಬಿಡುವುದು ತಪ್ಪಾಗುತ್ತದೆ ಎಂದು ಉಪಪಾದನೆ ಮಾಡಿದ್ದರಿಂದ ಎಂದಭಿಪ್ರಾಯ. ಇಲ್ಲಿಯ ತನಕ ಹೇಳಿದ ವಿಚಾರಗಳಿಂದ ಮುಖ್ಯವಾದ ಪಂಚತ್ವವನ್ನು ಹೇಗೆ ಸಮರ್ಥಿಸಿದಂತಾಯಿತು? ಎಂದರೆ ಹಿಂದೆ ಗುಹಾಧಿಕರಣದಲ್ಲಿಯೇ ಅದನ್ನು ಸಮರ್ಥಿಸಿದ್ದಾಗಿದೆ. ಹೀಗೆ ಹೇಳಿದ್ದರಿಂದ 'ನಾನಾಭಾವಾತ್' ಎಂಬುದರ ಅರ್ಥವನ್ನು ಸಮರ್ಥಿಸುವ 'ನಾನಾರೂಪತ್ವೇನ' ಇತ್ಯಾದಿ ಟೀಕಾಮಾತನ್ನು ವಿವರಿಸಿದಂತಾಯಿತು.

**प्रकाशः** – ''नच यस्मिन्नित्याधारस्य'' इत्यादिटीकां विवृण्वन् ब्रह्म न स्वाश्रितमित्येतदपि बाधकं निराह – **युक्तञ्चेति** ।।

'ನಚ ತಸ್ಮಿನ್ನಿತ್ಯಾಧಾರಸ್ಯ' ಇತ್ಯಾದಿ ಟೀಕೆಯನ್ನು ವಿವರಿಸುತ್ತಾ, ಬ್ರಹ್ಮನು ತನಗೆ ಆಶ್ರಯನಾಗಲು ಸಾಧ್ಯವಿಲ್ಲ ಎಂಬ ಬಾಧಕವನ್ನು ಕೂಡ ನಿರಾಕರಿಸುತ್ತಿದ್ದಾರೆ 'ಯುಕ್ತಂಚ' ಇತ್ಯಾದಿ ಗ್ರಂಥದಿಂದ.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः** – प्रतिशरीरं रूपबाहुल्यसाधनपूर्वं कालादौ विशेषबलादाधारत्वादिकमिवेहापि तद्बलादिति भावेनाह – **एवञ्चेति** ।।

ಪ್ರತಿಶರೀರದಲ್ಲಿಯೂ ಭಗವಂತನ ಅನೇಕ ರೂಪಗಳಿರುತ್ತವೆಂದು ಸಾಧಿಸುವುದಕ್ಕಾಗಿ ಮತ್ತು ಕಾಲಾದಿಗಳಲ್ಲಿ ವಿಶೇಷಬಲದಿಂದ ಸ್ವಾಧಾರತ್ವ ಇರುವಂತೆ ಪರಮಾತ್ಮನಲ್ಲಿಯೂ ವಿಶೇಷಬಲದಿಂದ ತನಗೆ ತಾನೇ ಆಶ್ರಯನಾಗಿರುವಿಕೆಯು ಯುಕ್ತವಾಗುತ್ತದೆಂದು ತಿಳಿಸಲು 'ಏವಂಚ' ಎಂಬ ಗ್ರಂಥವು ಹೊರಟಿದೆ.

**प्रकाशः** – देशकालादावभेदेपि विशेषबलादाधाराधेयभावे प्रमिते सतीत्यर्थः ।। **तद्गतेति** ।। प्राणसञ्चरणाय शरीरगताकाशस्थस्यावकाशदातृरूपस्येत्यर्थः ।

ದೇಶ ಹಾಗೂ ಕಾಲಗಳಲ್ಲಿ ಅಭೇದವಿದ್ದರೂ ವಿಶೇಷಬಲದಿಂದ ಆಧಾರಾಧೇಯಭಾವವು ಪ್ರಮಿತವಾಗಿದೆ. ಅದರಂತೆ ಎಂದು ತಿಳಿಯಬೇಕು. 'ತದ್ಗತ' ಎಂದರೆ ಪ್ರಾಣಸಂಚಾರಕ್ಕಾಗಿ ಶರೀರದಲ್ಲಿರುವ ಆಕಾಶದಲ್ಲಿ ಅವಕಾಶದಾತೃತ್ವರೂಪದಿಂದ ಶ್ರೀಹರಿಯು ಇರುತ್ತಾನೆ ಎಂದರ್ಥ.

**प्रकाशः** – अतिरिक्तत्वात् भिन्नत्वात् । भेदप्रतिनिधिविशेषवत्त्वादित्यर्थः । टीकोक्तेर्मूलमाह – **तदुक्तमिति** ।।

'ಅತಿರಿಕ್ತತ್ವಾತ್' ಎಂದರೆ ಭಿನ್ನವಾಗಿ ಇರುವುದರಿಂದ ಎಂದರ್ಥ. ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ ತಾನೇ ಆಧಾರನು ಮತ್ತು ಆಧೇಯನು ಆಗುತ್ತಾನೆಂದು ತಿಳಿಯಬೇಕು. ಟೀಕೆಯಲ್ಲಿ ಹೇಳಿದ್ದಕ್ಕೆ ನ್ಯಾಯವಿವರಣವೇ ಮೂಲವಾಗಿದೆಯೆಂದು 'ತದುಕ್ತಮ್' ಎಂಬುದರಿಂದ ತೋರಿಸಿದ್ದಾರೆ.

**गुरुराजीयम्** – एकस्येत्यस्य प्राणादेरित्यनेनान्वयः । नन्वौत्सर्गिकं ह्यनेकत्वसंख्याया भिन्नवृत्तित्वम् । न चेहापादकमस्तीत्यत आह – **यथा चानेकत्वस्येति** ।। नन्वेवं सन्देह एव स्यादित्यत आह – **साधितं चेति** ।। किं चेत्यादिनोक्तं बाधकं परिहरति ।। **युक्तञ्चेति** ।।



ಸಾರ

ದ್ವಿತೀಯಾಂತವಿನಿರ್ದಿಷ್ಟಂ ಪ್ರಧಾನಂ ಪ್ರಾಣಪೂರ್ವಕಮ್ ।
ಅರ್ಥತಃ ಶಬ್ದತಶ್ಚೈವ ನತು ಷಷ್ಠ್ಯಂತಶಬ್ದಿತಮ್ ॥

'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯಲ್ಲಿ 'ಪ್ರಾಣಮ್' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪ್ರಧಾನನಾಗಿದ್ದಾನೆ. ಅರ್ಥದಿಂದ ಮತ್ತು ಶಬ್ದದಿಂದಲೂ ಷಷ್ಠ್ಯಂತವಾದ 'ಪ್ರಾಣಸ್ಯ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ.

ಪರಿಪೂರ್ಣಚಂದ್ರಿಕಾ

ಏಕತ್ರ ಹಿ ಯಥಾ ಪಂಚ ಸಂಖ್ಯಾ ನೈವೋಪಪದ್ಯತೇ ।
ತಥಾಽನಂತೇಷು ಪಂಚತ್ವಸಂಖ್ಯಾಪಿ ನಚ ಯುಜ್ಯತೇ ॥೧॥

ಒಬ್ಬನೇ ಬ್ರಹ್ಮನಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲವೆಂದು ಹೇಗೆ ಹೇಳುತ್ತೀರೋ, ಅದರಂತೆ ಅನಂತ ಪ್ರಾಣರಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲ ಎಂಬ ಪ್ರತಿಬಂದಿಯು ನಿಮಗೂ ಇರುತ್ತದೆ.

ಆಧಾರಾಧೇಯಭಾವೋ ಹಿ ಭೇದಾಭಾವೇಽಪಿ ಯುಜ್ಯತೇ ।
ಕಾಲಃ ಸದಾಽಸ್ತಿ ದೇಶೋಽಸ್ತಿ ಸರ್ವತ್ರೇತ್ಯಾದಿಭಾನತಃ ॥೧॥

ಭೇದವಿಲ್ಲದಿದ್ದರೂ ಕೂಡ ಬ್ರಹ್ಮನ ವಿಷಯದಲ್ಲಿ ಆಧಾರಾಧೇಯಭಾವವು ಯುಕ್ತವೇ ಆಗುತ್ತದೆ. 'ಕಾಲಃ ಸದಾಽಸ್ತಿ, ದೇಶಃ ಸರ್ವತ್ರ ಅಸ್ತಿ' ಕಾಲವು ಯಾವಾಗಲೂ ಇರುತ್ತದೆ. ದೇಶವು ಎಲ್ಲೆಡೆಯೂ ಇದೆ. ಇತ್ಯಾದಿ ಪ್ರಯೋಗಗಳೇ ಈ ವಿಷಯದಲ್ಲಿ ಉದಾಹರಣೆ.

ಆದ್ದರಿಂದ ಜಗತ್ತಿನಲ್ಲಿ ಒಟ್ಟು ಎಷ್ಟು ನಿಯಮ್ಯ ಪದಾರ್ಥಗಳಿವೆಯೋ, ಅಷ್ಟೇ ನಿಯಾಮಕವಾದ ಭಗವದ್ರೂಪಗಳೂ ಕೂಡ ಇರುತ್ತವೆ. ಆದ್ದರಿಂದ ಶರೀರದಲ್ಲಿ ಪಂಚಪ್ರಾಣಗಳು ಇವೆ. ಪಂಚಪ್ರಾಣಗಳೆಂಬ ನಿಯಮ್ಯಪದಾರ್ಥಗಳು ಐದುಸಂಖ್ಯೆಯಲ್ಲಿರುವುದರಿಂದ ತನ್ನಿಯಾಮಕವಾದ ಭಗವದ್ರೂಪಗಳೂ ಕೂಡ ಐದುಸಂಖ್ಯೆಯಲ್ಲಿಯೇ ಇರುತ್ತವೆ.

ಶರೀರದಲ್ಲಿರುವ 'ಆಕಾಶ' ಎಂಬ ನಿಯಾಮಕ ರೂಪವು ಆರನೆಯದಾದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶಶ್ಚ ಪ್ರತಿಷ್ಠಿತಃ' ಎಂಬುದು ಸಾಧುವಾಗುತ್ತದೆ.

ಶರೀರವು ಪಂಚಪ್ರಾಣಗಳಿಗೆ ಆಧಾರವಾಗಿದೆ. ಪಂಚಪ್ರಾಣಗಳು ಆಧೇಯವಾಗಿವೆ. ಶರೀರದಲ್ಲಿರುವ ನಿಯಾಮಕ ಭಗವದ್ರೂಪವು ಆಧಾರವೆಂದು, ಆಧೇಯವಾದ ಪಂಚಪ್ರಾಣಗಳಲ್ಲಿರುವ ರೂಪಗಳು ಆಧೇಯವೆಂದು ಕರೆಸಿಕೊಳ್ಳುತ್ತವೆ. ಹೀಗೆ ಒಬ್ಬನೇ ಭಗವಂತನ ರೂಪಗಳಿಗೆ ಆಧಾರಾಧೇಯಭಾವವು ಯುಕ್ತವಾಗುತ್ತದೆ.

ಇದನ್ನೇ ನ್ಯಾಯವಿವರಣದಲ್ಲಿ 'ಬಹುರೂಪತ್ವಾತ್ ಅಧಿಕರಣಾಧೇಯತ್ವಾದಿ ತಸ್ಯೈವ ಯುಜ್ಯತೇ' ಭಗವಂತನಿಗೆ ಬಹುರೂಪಗಳಿರುವುದರಿಂದ ಅಧಿಕರಣಭಾವ ಹಾಗೂ ಆಧೇಯಭಾವವು ಒಬ್ಬನಲ್ಲಿಯೇ ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

////////////////////////////////////////////

## ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः** – प्रतिशरीरं रूपबाहुल्यसाधनपूर्वं कालादौ विशेषबलादाधारत्वादिकमिवेहापि तद्बलादिति भावेनाह – **एवञ्चेति** ।।

ಪ್ರತಿಶರೀರದಲ್ಲಿಯೂ ಭಗವಂತನ ಅನೇಕ ರೂಪಗಳಿರುತ್ತವೆಂದು ಸಾಧಿಸುವುದಕ್ಕಾಗಿ ಮತ್ತು ಕಾಲಾದಿಗಳಲ್ಲಿ ವಿಶೇಷಬಲದಿಂದ ಸ್ವಾಧಾರತ್ವ ಇರುವಂತೆ ಪರಮಾತ್ಮನಲ್ಲಿಯೂ ವಿಶೇಷಬಲದಿಂದ ತನಗೆ ತಾನೇ ಆಶ್ರಯನಾಗಿರುವಿಕೆಯು ಯುಕ್ತವಾಗುತ್ತದೆಂದು ತಿಳಿಸಲು 'ಏವಂಚ' ಎಂಬ ಗ್ರಂಥವು ಹೊರಟಿದೆ.

**प्रकाशः** – देशकालादावभेदेपि विशेषबलादाधाराधेयभावे प्रमिते सतीत्यर्थः ।। **तद्गतेति** ।। प्राणसञ्चरणाय शरीरगताकाशस्थस्यावकाशदातृरूपस्येत्यर्थः ।

ದೇಶ ಹಾಗೂ ಕಾಲಗಳಲ್ಲಿ ಅಭೇದವಿದ್ದರೂ ವಿಶೇಷಬಲದಿಂದ ಆಧಾರಾಧೇಯಭಾವವು ಪ್ರಮಿತವಾಗಿದೆ. ಅದರಂತೆ ಎಂದು ತಿಳಿಯಬೇಕು. 'ತದ್ಗತ' ಎಂದರೆ ಪ್ರಾಣಸಂಚಾರಕ್ಕಾಗಿ ಶರೀರದಲ್ಲಿರುವ ಆಕಾಶದಲ್ಲಿ ಅವಕಾಶದಾತೃತ್ವರೂಪದಿಂದ ಶ್ರೀಹರಿಯು ಇರುತ್ತಾನೆ ಎಂದರ್ಥ.

**प्रकाशः** – अतिरिक्तत्वात् भिन्नत्वात् । भेदप्रतिनिधिविशेषवत्त्वादित्यर्थः । टीकोक्तेर्मूलमाह – **तदुक्तमिति** ।।

'ಅತಿರಿಕ್ತತ್ವಾತ್' ಎಂದರೆ ಭಿನ್ನವಾಗಿ ಇರುವುದರಿಂದ ಎಂದರ್ಥ. ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ ತಾನೇ ಆಧಾರನು ಮತ್ತು ಆಧೇಯನು ಆಗುತ್ತಾನೆಂದು ತಿಳಿಯಬೇಕು. ಟೀಕೆಯಲ್ಲಿ ಹೇಳಿದ್ದಕ್ಕೆ ನ್ಯಾಯವಿವರಣವೇ ಮೂಲವಾಗಿದೆಯೆಂದು 'ತದುಕ್ತಮ್' ಎಂಬುದರಿಂದ ತೋರಿಸಿದ್ದಾರೆ.

**गुरुराजीयम्** – एकस्येत्यस्य प्राणादेरित्यनेनान्वयः । नन्वौत्सर्गिकं ह्यनेकत्वसंख्याया भिन्नवृत्तित्वम् । न चेहापादकमस्तीत्यत आह – **यथा चानेकत्वस्येति** ।। नन्वेवं सन्देह एव स्यादित्यत आह – **साधितं चेति** ।। किं चेत्यादिनोक्तं बाधकं परिहरति ।। **युक्तश्चेति** ।।




ದ್ವಿತೀಯಾಂತವಿನಿರ್ದಿಷ್ಟಂ ಪ್ರಧಾನಂ ಪ್ರಾಣಪೂರ್ವಕಮ್ ।
ಅರ್ಥತಃ ಶಬ್ದತಶ್ಚೈವ ನತು ಷಷ್ಠ್ಯಂತಶಬ್ದಿತಮ್ ॥

'ಪ್ರಾಣಸ್ಯ ಪ್ರಾಣಮ್' ಎಂಬ ಶ್ರುತಿಯಲ್ಲಿ 'ಪ್ರಾಣಮ್' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದದಿಂದ ನಿರ್ದಿಷ್ಟನಾದ ವ್ಯಕ್ತಿಯೇ ಪ್ರಧಾನನಾಗಿದ್ದಾನೆ. ಅರ್ಥದಿಂದ ಮತ್ತು ಶಬ್ದದಿಂದಲೂ ಷಷ್ಠ್ಯಂತವಾದ 'ಪ್ರಾಣಸ್ಯ' ಇತ್ಯಾದಿ ಶಬ್ದದಿಂದ ಪ್ರತಿಪಾದ್ಯವಾದದ್ದು ಪ್ರಧಾನವಲ್ಲ.

ಪರಿಪೂರ್ಣಚಂದ್ರಿಕಾ

ಏಕತ್ರ ಹಿ ಯಥಾ ಪಂಚ ಸಂಖ್ಯಾ ನೈವೋಪಪದ್ಯತೇ ।
ತಥಾಽನಂತೇಷು ಪಂಚತ್ವಸಂಖ್ಯಾಪಿ ನಚ ಯುಜ್ಯತೇ ॥೧॥

ಒಬ್ಬನೇ ಬ್ರಹ್ಮನಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲವೆಂದು ಹೇಗೆ ಹೇಳುತ್ತೀರೋ, ಅದರಂತೆ ಅನಂತ ಪ್ರಾಣರಲ್ಲಿ ಪಂಚತ್ವ ಸಂಖ್ಯೆಯು ಯುಕ್ತವಾಗುವುದಿಲ್ಲ ಎಂಬ ಪ್ರತಿಬಂದಿಯು ನಿಮಗೂ ಇರುತ್ತದೆ.

ಆಧಾರಾಧೇಯಭಾವೋ ಹಿ ಭೇದಾಭಾವೇಽಪಿ ಯುಜ್ಯತೇ ।
ಕಾಲಃ ಸದಾಽಸ್ತಿ ದೇಶೋಽಸ್ತಿ ಸರ್ವತ್ರೇತ್ಯಾದಿಭಾನತಃ ॥೧॥

ಭೇದವಿಲ್ಲದಿದ್ದರೂ ಕೂಡ ಬ್ರಹ್ಮನ ವಿಷಯದಲ್ಲಿ ಆಧಾರಾಧೇಯಭಾವವು ಯುಕ್ತವೇ ಆಗುತ್ತದೆ. 'ಕಾಲಃ ಸದಾಽಸ್ತಿ, ದೇಶಃ ಸರ್ವತ್ರ ಅಸ್ತಿ' ಕಾಲವು ಯಾವಾಗಲೂ ಇರುತ್ತದೆ. ದೇಶವು ಎಲ್ಲೆಡೆಯೂ ಇದೆ. ಇತ್ಯಾದಿ ಪ್ರಯೋಗಗಳೇ ಈ ವಿಷಯದಲ್ಲಿ ಉದಾಹರಣೆ.

ಆದ್ದರಿಂದ ಜಗತ್ತಿನಲ್ಲಿ ಒಟ್ಟು ಎಷ್ಟು ನಿಯಮ್ಯ ಪದಾರ್ಥಗಳಿವೆಯೋ, ಅಷ್ಟೇ ನಿಯಾಮಕವಾದ ಭಗವದ್ರೂಪಗಳೂ ಕೂಡ ಇರುತ್ತವೆ. ಆದ್ದರಿಂದ ಶರೀರದಲ್ಲಿ ಪಂಚಪ್ರಾಣಗಳು ಇವೆ. ಪಂಚಪ್ರಾಣಗಳೆಂಬ ನಿಯಮ್ಯಪದಾರ್ಥಗಳು ಐದುಸಂಖ್ಯೆಯಲ್ಲಿರುವುದರಿಂದ ತನ್ನಿಯಾಮಕವಾದ ಭಗವದ್ರೂಪಗಳೂ ಕೂಡ ಐದುಸಂಖ್ಯೆಯಲ್ಲಿಯೇ ಇರುತ್ತವೆ.

ಶರೀರದಲ್ಲಿರುವ 'ಆಕಾಶ' ಎಂಬ ನಿಯಾಮಕ ರೂಪವು ಆರನೆಯದಾದ್ದರಿಂದ ಶ್ರುತಿಯಲ್ಲಿ ಹೇಳಲ್ಪಟ್ಟ 'ಆಕಾಶಶ್ಚ ಪ್ರತಿಷ್ಠಿತಃ' ಎಂಬುದು ಸಾಧುವಾಗುತ್ತದೆ.

ಶರೀರವು ಪಂಚಪ್ರಾಣಗಳಿಗೆ ಆಧಾರವಾಗಿದೆ. ಪಂಚಪ್ರಾಣಗಳು ಆಧೇಯವಾಗಿವೆ. ಶರೀರದಲ್ಲಿರುವ ನಿಯಾಮಕ ಭಗವದ್ರೂಪವು ಆಧಾರವೆಂದು, ಆಧೇಯವಾದ ಪಂಚಪ್ರಾಣಗಳಲ್ಲಿರುವ ರೂಪಗಳು ಆಧೇಯವೆಂದು ಕರೆಸಿಕೊಳ್ಳುತ್ತವೆ. ಹೀಗೆ ಒಬ್ಬನೇ ಭಗವಂತನ ರೂಪಗಳಿಗೆ ಆಧಾರಾಧೇಯಭಾವವು ಯುಕ್ತವಾಗುತ್ತದೆ.

ಇದನ್ನೇ ನ್ಯಾಯವಿವರಣದಲ್ಲಿ 'ಬಹುರೂಪತ್ವಾತ್ ಅಧಿಕರಣಾಧೇಯತ್ವಾದಿ ತಸ್ಯೈವ ಯುಜ್ಯತೇ' ಭಗವಂತನಿಗೆ ಬಹುರೂಪಗಳಿರುವುದರಿಂದ ಅಧಿಕರಣಭಾವ ಹಾಗೂ ಆಧೇಯಭಾವವು ಒಬ್ಬನಲ್ಲಿಯೇ ಯುಕ್ತವಾಗುತ್ತದೆ ಎಂದು ಹೇಳಿರುತ್ತಾರೆ.

////////////////////////////////////////////

## ಸೂತ್ರಗಳ ವಿನ್ಯಾಸ ಕ್ರಮು

**तात्पर्यचन्द्रिका**

**अत्र चाद्ये सूत्रे पूर्वाधिकरणोक्तसाधकैरेवेहापि ब्रह्मपरत्वसिद्धेर्बाधकमात्रमुद्धृतम् ।**

ಈ ನಸಂಖ್ಯೋಪಸಂಗ್ರಹಾಧಿಕರಣದ ಮೊದಲನೆಯ ಸೂತ್ರದಲ್ಲಿ ಬಾಧಕವನ್ನೇ ನೇರವಾಗಿ ಹೇಳಿದ್ದಾರೆ. ಏಕೆಂದರೆ ಹಿಂದಿನ ಅಧಿಕರಣದಲ್ಲಿ ಹೇಳಿದ ಸಾಧಕಪ್ರಮಾಣಗಳನ್ನು ಇಲ್ಲಿಯೂ ಕೂಡ ವಿವಕ್ಷಿಸಬಹುದಾದ್ದರಿಂದ ತನ್ಮೂಲಕವಾದ ಬ್ರಹ್ಮಪರತ್ವವು ಸಿದ್ಧವಾಗುತ್ತದೆ. ಆದಕ್ಕಾಗಿ ಸಾಧಕ-ಪ್ರಮಾಣವನ್ನು ಮೊದಲು ಹೇಳಿರುವುದಿಲ್ಲ.

**तत्र च "संख्योपसङ्ग्रहात्" इत्यनेनोक्ताया बहुत्वानुपपत्तेः "नानाभावात्" इत्यनेन निरासः ।**

ಮೊದಲನೆಯ ಕೂಡ 'ಸಂಖ್ಯೋಪಸಂಗ್ರಹಾತ್' ಎಂಬುದರಿಂದ ಹೇಳಲ್ಪಟ್ಟ ಬಹುತ್ವದ ಅನುಪಪತ್ತಿಯನ್ನು 'ನಾನಾಭಾವಾತ್' ಎಂಬುದರಿಂದ ನಿರಾಕರಣೆ ಮಾಡಿದ್ದಾರೆ.

**अपिशब्दसमुच्चितायास्त्वाधारत्वाद्यनुपपत्तेः "अतिरेकाच्च" इत्यनेन ।**

ಸೂತ್ರದಲ್ಲಿರುವ 'ಅಪಿ'ಶಬ್ದವು ಆಧಾರತ್ವಾದ್ಯನುಪಪತ್ತಿಯನ್ನು ಸಮುಚ್ಚಯ ಮಾಡುತ್ತಿದೆ. ಇದನ್ನು 'ಅತಿರೇಕಾಚ್ಚ' ಎಂಬ ಪದವು ನಿರಾಕರಣೆ ಮಾಡುತ್ತಿದೆ.

**द्वितीये के ते पञ्चत्वाश्रयभगवद्रूपविशेषा इति शङ्कायां तेषां मुखत उक्तिः । सिद्धान्तसाधकोक्तिस्त्वर्थात् ।**

'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರದಲ್ಲಿ ಪಂಚತ್ವಕ್ಕೆ ಆಶ್ರಯವಾದ ಭಗವದ್ರೂಪಗಳು ಯಾವುದು ? ಎಂಬ ಆಶಂಕೆಗೆ ನೇರವಾಗಿಯೇ ಉತ್ತರಿಸಲಾಗಿದೆ. ಸಿದ್ಧಾಂತ-ಸಾಧಕವಾದ ವಚನವು ಅರ್ಥಾತ್ ಸಿದ್ಧವಾಗುತ್ತದೆ. ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ, ಮನಸ್ಸು, ಇವುಗಳೇ ಪಂಚ ಜನ ಶಬ್ದದಿಂದ ಪ್ರತಿಪಾದ್ಯವಾಗಿವೆ.

**तृतीये तु शाखान्तरेपि पञ्चत्वसम्पादनमिति सूत्रक्रमः ।**

'ಜ್ಯೋತಿಷೈಕೇಷಾಮಸತ್ಯನ್ನೇ' ಎಂಬ ಮೂರನೆಯ ಸೂತ್ರದಲ್ಲಿ ಶಾಖಾಂತರದಲ್ಲಿಯೂ ಕೂಡ ಪ್ರಾಣಾದಿ ಪಂಚಕಗಳು ಹೇಳಲ್ಪಟ್ಟವೆ ಎಂಬುದಾಗಿ ಪಂಚತ್ವವನ್ನು ಸಂಪಾದನೆ ಮಾಡಲಾಗಿದೆ. ಹೀಗೆ ಸೂತ್ರಗಳ ವಿನ್ಯಾಸಕ್ರಮವನ್ನು ಅತ್ಯಂತ ಸಾಧು ಎಂಬುದಾಗಿ ತಿಳಿಯಬೇಕು.

**अत्र "यस्मिन् पञ्च पञ्च जनाः" इति मन्त्रस्य शाखाद्वयेप्येकपञ्चकपरत्वाय ज्योतिरन्नशब्दयोरेकार्थत्वं वा तयोर्भिन्नार्थत्वाय शाखाभेदेन पञ्चकद्वयं वेति द्रष्टव्यम् ।**

ಈ ಅಧಿಕರಣದಲ್ಲಿ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಮಂತ್ರವು ಎರಡೂ ಶಾಖೆಗಳಲ್ಲಿ ಒಂದೇ ಪಂಚಕವನ್ನು ಪ್ರತಿಪಾದನೆ ಮಾಡುತ್ತದೆ. ಇದನ್ನು ತಿಳಿಸುವುದಕ್ಕಾಗಿ ಜ್ಯೋತಿ ಹಾಗೂ ಅನ್ನಶಬ್ದಗಳಿಗೆ ಏಕಾರ್ಥತ್ವವನ್ನು ಇವೆರಡು ಭಿನ್ನಾರ್ಥತ್ವವನ್ನು ತಿಳಿಸುವುದಕ್ಕಾಗಿ ಶಾಖಾಭೇದದಿಂದ ಪಂಚಕದ್ವಯವನ್ನು ಹೇಳಿದ್ದಾರೆಂದೂ ಕೂಡ ತಿಳಿಯಬಹುದು.

**प्रकाशः –**

**अत्र चाद्य इति ।। ग्रन्थस्य वादकथारूपेण प्रवृत्तत्वादादौ स्वपक्षसाधकोक्त्या भाव्यम् । पश्चाद्बाधकनिरासेन । तथैवानन्दमयनयादिषु पूर्वत्र त्रिपाद्यामुक्ते-र्द्वितीयस्यादौ निवेश आद्यस्य पश्चादित्यतो वा न्यूनत्वाशङ्क्या वाह – पूर्वेति ।।**

ವಿವರಣೆ - ಈ ಗ್ರಂಥವು ವಾದಕಥಾರೂಪದಲ್ಲಿ ಹೊರಟಿರುವುದರಿಂದ ಮೊದಲು ಸ್ವಪಕ್ಷಸಾಧಕ ಪ್ರಮಾಣವನ್ನು ಹೇಳಿ, ಅನಂತರ ಬಾಧಕಪ್ರಮಾಣವನ್ನು ನಿರಾಕರಣೆ ಮಾಡಬೇಕು. ಆನಂದಮಯಾಧಿ-ಕರಣದಲ್ಲಿ 'ಆನಂದಮಯೋಽಭ್ಯಾಸಾತ್' ಎಂಬ ಪ್ರಥಮಸೂತ್ರದಿಂದ ಸ್ವಪಕ್ಷಸಾಧಕವನ್ನು ಹೇಳಿ, 'ವಿಕಾರ ಶಬ್ದಾನ್ನೇಚೇತಿ ಚೇನ್ನ ಪ್ರಾಚುರ್ಯಾತ್' ಎಂಬ ಸೂತ್ರದಿಂದ ಬಾಧಕವನ್ನು ಪರಿಹರಿಸಲಾಗಿದೆ. ಇದರಂತೆ ಮೂರು ಪಾದಗಳಲ್ಲಿರುವ ಎಲ್ಲಾ ಅಧಿಕರಣಗಳಲ್ಲಿ ಮೊದಲು ಸ್ವಪಕ್ಷಸಾಧಕವನ್ನು ಹೇಳಿ, ಅನಂತರವೇ ಪರಪಕ್ಷಬಾಧಕವನ್ನು ಹೇಳಲಾಗಿದೆ. ಆದರೆ ಈ ಅಧಿಕರಣದಲ್ಲಿ ಮೊದಲು ಸಾಧಕಪ್ರಮಾಣವನ್ನು ಹೇಳದೇ, 'ನ ಸಂಖ್ಯೋಪಸಂಗ್ರಹಾದಪಿ' ಎಂಬುದಾಗಿ ಬಾಧಕಪ್ರಮಾಣವನ್ನೇ ಪರಿಹರಿಸುತ್ತಿದ್ದಾರೆ. ಅನಂತರ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಸೂತ್ರದಲ್ಲಿ ಸ್ವಪಕ್ಷಸಾಧಕಪ್ರಮಾಣವನ್ನು ಹೇಳುತ್ತಿದ್ದಾರೆ. ಆದ್ದರಿಂದ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರವನ್ನು ಮೊದಲು ಉಲ್ಲೇಖ ಮಾಡಿ, ಅನಂತರ 'ನ ಸಂಖ್ಯೋಪಸಂಗ್ರಹಾದಪಿ' ಎಂಬ ಸೂತ್ರವನ್ನು ಉಲ್ಲೇಖ ಮಾಡಬೇಕಿತ್ತಲ್ಲವೇ? ಅಥವಾ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ವಾಕ್ಯಶೇಷದಲ್ಲಿ ನೇರವಾಗಿ ಸ್ವಪಕ್ಷಸಾಧಕವನ್ನು ಹೇಳಿರುವುದಿಲ್ಲ. ಆದ್ದರಿಂದ ಈ ಅಧಿಕರಣದಲ್ಲಿ ಕೇವಲ ಬಾಧಕವನ್ನಷ್ಟೇ ನಿರಾಕರಣೆ ಮಾಡಿದಂತಾಗುತ್ತದೆ. ಆವಾಗ ನ್ಯೂನತೆ

ಬರುತ್ತದಲ್ಲವೇ? ಎಂಬ ಈ ಎರಡು ಪ್ರಶ್ನೆಗಳಿಗೆ ಗ್ರಂಥಕಾರರು 'ಅತ್ರ ಚ ಆದ್ಯಸೂತ್ರೇ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**प्रकाशः – ''ज्ञेयत्वावचनात्'' ''महद्वच्च'' ''चमसवदविशेषात्'' ''तथाह्यधीयत एके'' इत्युक्तहेतुभिरित्यर्थः । तथाच वक्ष्यत्युत्तराधिकरणटीकायां टीकाकारः ''नामानि सर्वाणीत्याद्युक्तरीत्या सिद्धेऽखिलशब्दसमन्वये तत्र प्रतीतविरोधाभासनिरासेनैव सूत्रकृतश्चरितार्थत्वात् । यत्तु विशेषं च वक्ति स त्वधिको लाभः'' इतीति भावः ।**

ಹಿಂದಿನ ಅಧಿಕರಣಗಳಲ್ಲಿರುವ ಸಾಧಕಪ್ರಮಾಣಗಳಿಂದಲೇ 'ಪಂಚ ಜನ' ಎಂಬ ಶಬ್ದವು ಬ್ರಹ್ಮಪರವೆಂದು ಸಿದ್ಧವಾಗಿದೆ. 'ಜ್ಞೇಯತ್ವಾವಚನಾತ್' 'ಮಹದ್ವಚ್ಚ' 'ಚಮಸವದವಿಶೇಷಾತ್' 'ತಥಾಹ್ಯಧೀಯತೇ ಏಕೇ' ಇವೇ ಮೊದಲಾದ ಹಿಂದಿನ ಅಧಿಕರಣದ ಹೇತುಗಳಿಂದ ಎಂದು 'ಪೂರ್ವೋಕ್ತ ಹೇತುಭಿಃ' ಎಂಬುದರ ಅರ್ಥವನ್ನು ತಿಳಿಯಬೇಕು. ಆದ್ದರಿಂದ ಮುಂದಿನ ಅಧಿಕರಣದ ಟೀಕೆಯಲ್ಲಿ ಟೀಕಾರಾಯರು ಹೀಗೆ ಹೇಳಿದ್ದಾರೆ - 'ನಾಮಾನಿ ಸರ್ವಾಣೀತ್ಯಾದ್ಯುಕ್ತರೀತ್ಯಾ ಸಿದ್ಧೇऽಖಿಲಶಬ್ದಸಮನ್ವಯೇ ತತ್ರ ಪ್ರತೀತವಿರೋಧಾಭಾಸನಿರಾಸೇನೈವ ಸೂತ್ರಕೃತಶ್ಚರಿತಾರ್ಥತ್ವಾತ್ । ಯತ್ತು ವಿಶೇಷಂ ಚ ವಕ್ತಿ ಸ ತ್ವಧಿಕೋ ಲಾಭಃ' 'ನಾಮಾನಿ ಸರ್ವಾಣಿ ಯಮಾವಿಶಂತಿ' ಇತ್ಯಾದಿ ಶ್ರುತಿಗಳು ಹೇಳಿದಂತೆ ಬ್ರಹ್ಮನಲ್ಲಿ ಅಖಿಲಶಬ್ದಸಮನ್ವಯವು ಸಿದ್ಧವಾದ ಮೇಲೆ ಪ್ರಾಪ್ತವಾದ ವಿರೋಧಾಭಾಸವನ್ನು ನಿರಾಕರಿಸಲು ಮುಂದಿನ ಸೂತ್ರಗಳು ಚರಿತಾರ್ಥವಾಗಿವೆ. ಆದರೂ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' ಇತ್ಯಾದಿ ಸೂತ್ರಗಳಿಂದ ಹೇಳಲ್ಪಟ್ಟ ವಿಶೇಷಕಾರಣವು ಕೇವಲ ಅಧಿಕಲಾಭವೆಂದಷ್ಟೇ ತಿಳಿಯಬೇಕು ಎಂದು ಹೇಳಿದ್ದಾರೆ. ಆದ್ದರಿಂದ ಎಲ್ಲಾ ಬಗೆಯ ಶಬ್ದಗಳು ಶ್ರೀಹರಿಯಲ್ಲಿ ಸಮನ್ವಯವಾಗುತ್ತವೆಂದು ಈಗಾಗಲೇ ಹಿಂದಿನ ಅಧಿಕರಣಗಳಿಂದಲೇ ಸಿದ್ಧವಾಗಿದೆ. ಮುಂದಿನ ಅಧಿಕರಣಗಳಲ್ಲಿ ಕೇವಲ ಬಾಧಕಗಳನ್ನು ಪರಿಹರಿಸುತ್ತಿದ್ದಾರೆಂದು ತಿಳಿಯಬೇಕು.

**प्रकाशः – अपिशब्देति ।। यद्यपि टीकायां ''अपिपदेन पूर्वसूत्राद्विरोधपदाकर्षणम्'' इत्युक्तम् । तथापि तत्वप्रदीपे ''तेषां बहुसंख्यानां न विष्णुत्वमिति न मन्तव्यम्'' इत्युक्त्या तदनुवृत्त्यर्थत्वाप्रतीतेस्तदनुरोधेन वा अपिपदस्य विरोधपदाकर्षणसूचकत्वेप्यन्यार्थसमुच्चायकत्वमविरुद्धमिति भावेन वैतदुक्तम् ।**

ಪ್ರಶ್ನೆ - ಟೀಕೆಯಲ್ಲಿ 'ಅಪಿಪದೇನ ಪೂರ್ವಸೂತ್ರಾದ್ವಿರೋಧಪದಾಕರ್ಷಣಮ್' ಸೂತ್ರದಲ್ಲಿರುವ ಅಪಿಪದದಿಂದ ಹಿಂದಿನ ಸೂತ್ರದಲ್ಲಿರುವ ವಿರೋಧಪದವನ್ನು ಅನುವೃತ್ತಿ ಮಾಡಬೇಕು ಎಂದು ಹೇಳಿರುತ್ತಾರೆ. ಆದರೆ ಗ್ರಂಥಕಾರರು ಅಪಿಶಬ್ದವು ಅನುಪಪತ್ತಿಗೆ ಸಮುಚ್ಚಾಯಕ ಎಂದು ಹೇಳುತ್ತಿದ್ದಾರೆ. ಇದು ಹೇಗೆ ?

ಉತ್ತರ - ಟೀಕೆಯಲ್ಲಿ ಹಾಗೇ ಹೇಳಿದ್ದರೂ ಕೂಡ ತತ್ವಪ್ರದೀಪದಲ್ಲಿ 'ತೇಷಾಂ ಬಹುಸಂಖ್ಯಾನಾಂ ನ ವಿಷ್ಣುತ್ವಮಿತಿ ನ ಮಂತವ್ಯಮ್' ಎಂಬುದಾಗಿ ವಿಷ್ಣುವಿನಲ್ಲಿ ಬಹುಸಂಖ್ಯೆಯನ್ನು ತಿಳಿಯಬಾರದು ಎಂದಷ್ಟೇ

ಹೇಳಿದ್ದಾರೆ ಹೊರತು, ಬಹುಸಂಖ್ಯೆಯನ್ನು ವಿಷ್ಣುವಿನಲ್ಲಿ ಹೇಳಿದರೂ ವಿರೋಧ ಬರುವುದಿಲ್ಲವೆಂದೇನೂ ಹೇಳುವುದಿಲ್ಲ. ಆದ್ದರಿಂದ ತತ್ವಪ್ರದೀಪಕ್ಕೆ ಅನುಸಾರಿಯಾಗಿ ವಿರೋಧಪದದ ಅರ್ಥವು ತೋರದಿರುವುದರಿಂದ ಗ್ರಂಥಕಾರರು ಅಪಿಶಬ್ದಕ್ಕೆ ಅನುಪಪತ್ತಿ ಸಮುಚ್ಚಾಯಕ ಎಂದು ಬೇರೆ ಅರ್ಥವನ್ನು ಹೇಳಿರುತ್ತಾರೆ. ಅಥವಾ ತತ್ವಪ್ರದೀಪಕಾರರು ಕೇವಲ ತಾತ್ಪರ್ಯವನ್ನು ಹೇಳಿದ್ದಾರೆ ಎಂದು ವಿವಕ್ಷಿಸಿ, ಟೀಕೆಯಲ್ಲಿ ಹೇಳಿದಂತೆ ಅಪಿಪದದ ಆಕರ್ಷಣ ಇರುವುದರ ಜೊತೆಗೆ ಅನುಕ್ತವಾದ ಆಧಾರಾಧೇಯ ಭಾವಾನುಪಪತ್ತಿ ಎಂಬುದೂ ಕೂಡ ಇರಬಹುದು. ಹಾಗಾದರೆ ಒಂದೇ 'ಅಪಿ'ಪದಕ್ಕೆ ಟೀಕೆಯಲ್ಲಿ ಹೇಳಿದಂತೆ ಅನುಕ್ತಿಸಮುಚ್ಚಯವೂ ಇದೆ. ಉಕ್ತಸಮುಚ್ಚಾಯಕತ್ವವೂ ಇದೆ ಎಂದು ಹೇಳಿದಿರಿ. ಇದು ಗ್ರಂಥಕಾರರಿಗೆ ಅಭಿಪ್ರೇತವಾಗಿದೆಯೆಂದು ಹೇಗೆ ತಿಳಿಯುತ್ತದೆ.

**प्रकाशः** – तथाचोक्तं ग्रन्थकृतैव ''प्राणभृच्च'' इत्यत्र ''चशब्दो न केवलं टीकोक्तरीत्या पूर्वोक्तहेतूनां नञश्चानुकर्षणार्थः । किन्तु वायुसमुच्चयार्थोऽपीति द्रष्टव्यम्'' इति ।

ಇದನ್ನು ಗ್ರಂಥಕಾರರೇ ದ್ಯುಭ್ವಾದ್ಯಧಿಕರಣದಲ್ಲಿ ಹೇಳಿದ್ದಾರೆ. 'ಪ್ರಾಣಭೃಚ್ಚ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುವಾಗ "ಚಶಬ್ದೋ ನ ಕೇವಲಂ ಟೀಕೋಕ್ತರೀತ್ಯಾ ಪೂರ್ವೋಕ್ತಹೇತೂನಾಂ ನಞಶ್ಚಾನುಕರ್ಷಣಾರ್ಥಃ । ಕಿಂತು ವಾಯುಸಮುಚ್ಚಾಯರ್ಥೋऽಪೀತಿ ದ್ರಷ್ಟವ್ಯಮ್'' ಚಶಬ್ದವು ಕೇವಲ ಟೀಕೆಯಲ್ಲಿ ಹೇಳಿದಂತೆ ಹಿಂದೆ ಹೇಳಲ್ಪಟ್ಟ ಹೇತುಗಳನ್ನು ಅಥವಾ ವಿರೋಧವನ್ನು ಅನುಕರ್ಷಣ ಮಾಡುವುದಕ್ಕಾಗಿ ಅಲ್ಲ ವಾಯುದೇವರನ್ನು ಸಮುಚ್ಚಯ ಮಾಡಿ ಜೀವನು ಹೇಗೆ ದ್ಯುಭ್ವಾದ್ಯಾಯತನನಲ್ಲವೋ, ಅದರಂತೆ ವಾಯುವೂ ಕೂಡ ದ್ಯುಭ್ವಾದ್ಯಾಯತನನಲ್ಲ ಎಂಬುದನ್ನು ತಿಳಿಸಲು. ಹೀಗೆ ಪೂರ್ವಸೂತ್ರದಲ್ಲಿರುವ ಚಶಬ್ದವನ್ನು ಅನುಕ್ತಸಮುಚ್ಚಾಯಕವಾಗಿ ಗ್ರಂಥಕಾರರೇ ಹೇಳಿರುವುದರಿಂದ ಪ್ರಕೃತದಲ್ಲಿಯೂ ಅಪಿಶಬ್ದವು ವಿರೋಧಪದದ ಅನುಕರ್ಷಣವನ್ನು ಸೂಚನೆ ಮಾಡುತ್ತಿದೆ.

**प्रकाशः** – एतेन अत्र विरोधपदानुवृत्तौ नेत्यवक्तुं शक्यम् । पूर्वसूत्रादविरोधपदस्यैवाक्लेशेनानुवर्तनसम्भवादिति निरस्तम् ।

ಹಿಂದಿನ ಸೂತ್ರದಿಂದ ವಿರೋಧಪದವನ್ನು ಅನುವೃತ್ತಿ ಮಾಡುವುದಾದರೆ 'ನ' ಎಂಬುದಾಗಿ ಈ ಸೂತ್ರದಲ್ಲಿ ಹೇಳುವುದೇ ಬೇಡ. 'ಸಂಖ್ಯೋಪಸಂಗ್ರಹಾದಪಿ' ಎಂದಷ್ಟೇ ಹೇಳಿದಾಗ ಹಿಂದಿನ ಸೂತ್ರದಲ್ಲಿರುವ ಅವಿರೋಧಪದವನ್ನೇ ಸುಲಭವಾಗಿ ಅನುವೃತ್ತಿ ಮಾಡಿಕೊಳ್ಳಬಹುದು. ಈ ಶಂಕೆಯನ್ನು ನಿರಾಕರಿಸಿ-ದಂತಾಯಿತು.

**प्रकाशः** – संख्योपसङ्ग्रहादपि न षष्ठीनिर्दिष्टप्राणादयः पञ्च जनशब्दार्थः । तेषां प्रत्येकं नानाभावादिति प्रागुक्तरीत्याऽर्थान्तरस्याप्यभिमतत्वात् ।

ಏಕೆಂದರೆ 'ಸಂಖ್ಯೋಪಸಂಗ್ರಹಾದಪಿ' ಎಂಬುದು 'ನ ವಿರೋಧಃ' ಎಂಬುದಕ್ಕೆ ಮಾತ್ರ ಹೇತುವಲ್ಲ 'ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳು ಪಂಚ ಜನಶಬ್ದಾರ್ಥರಾಗುವುದಿಲ್ಲ' ಎಂಬಲ್ಲಿಯೂ ಹೇತುವಾಗಿದೆ. ಏಕೆಂದರೆ 'ತೇಷಾಂ ಪ್ರತ್ಯೇಕಂ ನಾನಾಭಾವಾತ್' ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳು ಪ್ರತ್ಯೇಕವಾಗಿ ಅನೇಕರಾಗಿರುತ್ತಾರೆ ಎಂಬುದಾಗಿ ಹಿಂದೆ ಈ ಸೂತ್ರಕ್ಕೆ ಮತ್ತೊಂದು ಬಗೆಯ ಅರ್ಥವನ್ನು ಹೇಳಲಾಗಿತ್ತು. ನಮ್ಮ ಬ್ರಹ್ಮನು ಒಬ್ಬನೇ ಆಗಿದ್ದಾನೆಂದು ಹೇಗೆ ಆಕ್ಷೇಪ ಮಾಡುತ್ತಿರೋ, ಅದರಂತೆ ನೀವು ಹೇಳುವ ಪ್ರಾಣಾದಿಗಳೂ ಕೂಡ ಅನಂತ ಸಂಖ್ಯೆಯಲ್ಲಿರುತ್ತಾರೆ. ಇಂತಹವರಲ್ಲಿ ಪಂಚತ್ವ ಸಂಖ್ಯೆಯು ಹೇಗೆ ಕೂಡುತ್ತದೆ ? ಎಂಬ ಆಕ್ಷೇಪವನ್ನು ಹಿಂದೆ ಮಾಡಲಾಗಿತ್ತು. ಈ ಪಕ್ಷದಲ್ಲಿ ಹಿಂದಿನ ಸೂತ್ರದಿಂದ ವಿರೋಧಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕಾಗಿಲ್ಲ. 'ನ' ಎಂಬುದಕ್ಕೆ ಆವಶ್ಯಕವಾಗಿರುವ ಪ್ರತಿಯೋಗಿಯನ್ನು ಹೊಸದಾಗಿ 'ಷಷ್ಠೀನಿರ್ದಿಷ್ಟಪ್ರಾಣಾದಯಃ ಪಂಚ ಜನಶಬ್ದಾರ್ಥಃ' ಎಂಬುದಾಗಿ ಶೇಷಪೂರಣ ಮಾಡಿಕೊಂಡಿದ್ದೇವೆ ಹೊರತು, ಹಿಂದಿನ ಸೂತ್ರದಿಂದ ಯಾವುದನ್ನೂ ಕೂಡ ಅನುವೃತ್ತಿ ಮಾಡಿಕೊಂಡು ಅನ್ವಯವನ್ನು ಹೇಳುತ್ತಿಲ್ಲ. ಆದ್ದರಿಂದ ಸೂತ್ರದಲ್ಲಿ 'ಸಂಖ್ಯೋಪಸಂಗ್ರಹಾದಪಿ ನ ವಿರೋಧಃ' ಎಂಬರ್ಥವನ್ನಷ್ಟೇ ವಿವಕ್ಷಿಸಿದಲ್ಲಿ 'ನ' ಎಂಬ ಪದವೇ ಬೇಕಾಗಿರಲಿಲ್ಲ ಎಂದು ನೀವು ಆಕ್ಷೇಪ ಮಾಡಬಹುದಿತ್ತು. ಆದರೆ 'ನ' ಎಂಬುದಕ್ಕೆ ವಿರೋಧವಿಲ್ಲ ಎಂಬರ್ಥವು ಇರುವಂತೆ 'ಷಷ್ಠೀನಿರ್ದಿಷ್ಟಪ್ರಾಣಾದಯಃ ನ ಪಂಚ ಜನಶಬ್ದಾರ್ಥಃ' ಎಂಬ ಮತ್ತೊಂದು ಅರ್ಥವನ್ನು ವಿವಕ್ಷಿಸಿರುವುದರಿಂದ 'ನ' ಎಂಬುದಾಗಿ ಹೇಳಿರುವುದು ಸಾರ್ಥಕವೇ ಆಗಿದೆ.

**प्रकाशः** – अविरोधपदाकर्षे ''संख्योपसङ्ग्रहात्'' इति पञ्चम्यन्तस्य समासे गुणभूतविरोधपदेनान्वयासामर्थ्याच्चेति ।।

ಮತ್ತು ಹಿಂದಿನ ಸೂತ್ರದಿಂದ 'ಅವಿರೋಧಾತ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳುವುದಾದರೆ ಮತ್ತೊಂದು ಬಾಧಕ ಬರುತ್ತದೆ. 'ಸಂಖ್ಯೋಪಸಂಗ್ರಹಾತ್' ಎಂಬುದಕ್ಕೆ ಅನುವೃತ್ತಿ ಮಾಡಿಕೊಳ್ಳಲ್ಪಟ್ಟ ಅವಿರೋಧಪದದಲ್ಲಿ ಗರ್ಭಿತವಾದ ವಿರೋಧದಲ್ಲಿ ಅನ್ವಯವನ್ನು ಮಾಡಬೇಕಾಗುತ್ತದೆ. ಹಿಂದಿನ 'ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ' ಎಂಬಲ್ಲಿ ಈ ಸಮಸ್ಯೆಯಿರಲಿಲ್ಲ. ಏಕೆಂದರೆ ಅವಿರೋಧ ಪದಕ್ಕೆ ವಿರೋಧಾಭಾವ ಎಂದರ್ಥ. ಅಂತಹ ವಿರೋಧದಲ್ಲಿ 'ಕಲ್ಪನೋಪದೇಶಾತ್' ಎಂಬುದು ಹೇತು-ವಾಗಿದೆ. ಅಂದರೆ ಅನ್ಯತ್ರವ್ಯವಹಾರಾದಿಗಳ ವಿರೋಧವೂ ಬರುವುದಿಲ್ಲ. ಅಥವಾ ವ್ಯುತ್ಪತ್ತಿಯ ಅನುಪಪತ್ತಿ ಮೊದಲಾದವುಗಳು ಬರುವುದಿಲ್ಲ. ಏಕೆಂದರೆ 'ಕಲ್ಪನೋಪದೇಶಾತ್' ಎಂಬುದಾಗಿ ವ್ಯಾಖ್ಯಾನ ಮಾಡಲಾಗಿತ್ತು. ಆದರೆ ಪ್ರಕೃತ 'ಸಂಖ್ಯೋಪಸಂಗ್ರಹಾತ್' ಎಂಬುದು ವಿರೋಧಾಭಾವದಲ್ಲಿ ಹೇತುವಾಗಿಲ್ಲ. ವಿರೋಧದಲ್ಲೇ ಹೇತುವಾಗಿದೆ. ಸಂಖ್ಯೋಪಸಂಗ್ರಹದಿಂದ ಯಾವ ವಿರೋಧವು ಪ್ರಸ್ತಕವಾಗಿದೆಯೋ ಅದು ಇರುವುದಿಲ್ಲವೆಂದೇ ಸೂತ್ರಕ್ಕೆ ಅರ್ಥವನ್ನು ಹೇಳಬೇಕು. ಆದ್ದರಿಂದ ಅವಿರೋಧಪದವನ್ನು ಅನುವೃತ್ತಿ ಮಾಡಿಕೊಂಡರೆ ಅದರಲ್ಲಿ ಗರ್ಭಿತವಾದ ವಿರೋಧ ಪದಾರ್ಥದಲ್ಲೇ 'ಸಂಖ್ಯೋಪಸಂಗ್ರಹಾತ್' ಎಂಬುದಕ್ಕೆ ಹೇತುತ್ವೇನ ಅನ್ವಯವನ್ನು ಮಾಡಬೇಕಾಗುತ್ತದೆ. ಆದರೆ ಈ ಎರಡು ಪದಗಳಿಗೆ ಸಾಮರ್ಥ್ಯವಿಲ್ಲದ ಕಾರಣ ಅನ್ವಯವನ್ನು ಮಾಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅವಿರೋಧಪದವನ್ನು ಹಿಂದಿನ ಸೂತ್ರದಿಂದ ಅನ್ವಯ ಮಾಡಿಕೊಳ್ಳದೇ ಕೇವಲ ವಿರೋಧಪದವನ್ನಷ್ಟೇ ಅನುವೃತ್ತಿ ಮಾಡಿಕೊಳ್ಳಲಾಗಿದೆ. ಅಂತಹ ವಿರೋಧಪದಾರ್ಥದಲ್ಲಿ 'ಸಂಖ್ಯೋಪಸಂಗ್ರಹಾತ್' ಎಂಬುದಕ್ಕೆ ಅನ್ವಯ ಮಾಡುವುದು ಸುಲಭವಾಗುತ್ತದೆ.

ಪರಿಪೂರ್ಣಚಂದ್ರಿಕಾ

**प्रकाशः – इति शङ्कायामिति ।।** तथा च तस्य द्वितीयत्वं युक्तमिति भावः । ननु टीकायां ''यदि पञ्च जनादीनां विष्णुत्वे भवेद्विशेषहेतुः'' इत्यवतारितत्वात्कथमेवमित्यत आह – **सिद्धान्तेति ।।** प्राणप्राणदत्वादिरूपसिद्धान्तसाधकोक्तिरित्यर्थः।।

ಹಿಂದಿನ ಅಧಿಕರಣದಲ್ಲಿರುವ ಸೂತ್ರಗಳಿಂದ ಸಾಧಕಪ್ರಮಾಣವನ್ನು ಹೇಳಿದ ಮೇಲೆ 'ನ ಸಂಖ್ಯೋಪಸಂಗ್ರಹಾತ್' ಎಂಬ ಪ್ರಥಮ ಸೂತ್ರದಿಂದ ಬಾಧಕವನ್ನು ಪರಿಹರಿಸಿದ್ದಾಯಿತು. ಇದರ ನಂತರ ಪಂಚ ಜನರು ಯಾರು? ಎಂಬ ಶಂಕೆಯು ಪ್ರಾಪ್ತವಾಗುತ್ತದೆ. ಅದಕ್ಕೆ ಉತ್ತರಿಸುವುದಕ್ಕಾಗಿ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಮುಂದಿನ ಸೂತ್ರವು ಹೊರಟಿದೆ. ಆದ್ದರಿಂದ ಎರಡನೆಯ ಸ್ಥಾನವನ್ನು ಈ ಸೂತ್ರವು ಪಡೆದಿರುತ್ತದೆ.

ಪಂಚ ಜನರು ಯಾರು ? ಎಂಬ ಪ್ರಶ್ನೆಗೆ ಮುಂದಿನ ಸೂತ್ರ ಹೊರಟಿದೆ ಎಂದು ಸಾಮಾನ್ಯವಾಗಿ ಇಲ್ಲಿ ಗ್ರಂಥಕಾರರು ವ್ಯಾಖ್ಯಾನ ಮಾಡಿದ್ದಾರೆ. ಆದರೆ ಟೀಕೆಯಲ್ಲಿ 'ಯದಿ ಪಂಚ ಜನಾದೀನಾಂ ವಿಷ್ಣುತ್ವೇ ಭವೇದ್ವಿಶೇಷಹೇತುಃ' ಪಂಚ ಜನ ಶಬ್ದದಿಂದ ವಿಷ್ಣುವನ್ನೇ ತೆಗೆದುಕೊಳ್ಳಬೇಕೆನ್ನಲು ವಿಶೇಷಹೇತು ಇದ್ದಿದ್ದಲ್ಲಿ ಬಹುತ್ವನುಪಪತ್ತಿ ಮೊದಲಾದ ವಿರೋಧವನ್ನು ಪರಿಹರಿಸಬಹುದಿತ್ತು. ಆದರೆ ವಿಶೇಷಹೇತುವೇ ಇರುವುದಿಲ್ಲವಲ್ಲ? ಎಂಬ ಪ್ರಶ್ನೆಗೆ 'ಸಿದ್ಧಾಂತಸಾಧಕೋಕ್ತಿಸ್ತು' ಎಂಬ ವಾಕ್ಯದಿಂದ ಉತ್ತರಿಸುತ್ತಿದ್ದಾರೆ. ವಾಕ್ಯಶೇಷದಲ್ಲಿ ಹೇಳಲ್ಪಟ್ಟ ಪ್ರಾಣಪ್ರಾಣದತ್ವ ಎಂಬ ಲಿಂಗದ ಬಲದಿಂದ ಪಂಚ ಜನ ಶಬ್ದದಿಂದ ವಿಷ್ಣುವನ್ನೇ ತೆಗೆದುಕೊಳ್ಳಬೇಕು. ಎಲ್ಲಾ ಪ್ರಾಣರಿಗೂ ಪ್ರಾಣತ್ವವನ್ನು ಕೊಡುವವನು, ಎಲ್ಲಾ ಚಕ್ಷುಸ್ಸುಗಳಿಗೂ ಚಕ್ಷುಷ್ಟ್ವವನ್ನು ಕೊಡುವವನು ಮಹಾವಿಷ್ಣುವೇ ಆಗಿದ್ದಾನೆ. ಈ ಲಿಂಗವು ಯಾರಲ್ಲಿಯೂ ಕೂಡ ಬರುವುದಿಲ್ಲ.

**प्रकाशः – तृतीय इति ।।** माध्यन्दिनशाखायामन्नेन सह पञ्चत्वोक्तावपि काण्वशाखायां चतुर्णामेवोक्त्या न वाक्यशेषोक्तप्राणादीनां पञ्च जनत्वमित्याशङ्क्य एकेषामन्ने अन्नस्यान्नत्वप्रदातृरूपे असत्यपि ''तद्देवा ज्योतिषां ज्योतिः'' इति पूर्ववाक्योक्तज्योतिषा पञ्चत्वसम्भवादित्युक्तेरिति भावः ।

ಮಾಧ್ಯಂದಿನಶಾಖೆಯಲ್ಲಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ಐದುಜನರನ್ನು ಉಲ್ಲೇಖ ಮಾಡಲಾಗಿದೆ. ಆದರೆ ಕಾಣ್ವಶಾಖೆಯಲ್ಲಿ ನಾಲ್ಕನ್ನು ಮಾತ್ರ ಹೇಳಿದ್ದಾರೆ. ಅನ್ನವನ್ನು ಹೇಳಿರುವುದಿಲ್ಲ. ಹೀಗಿರುವಾಗ ವಾಕ್ಯಶೇಷದಲ್ಲಿ ಪಂಚ ಜನರು ಪ್ರಸಕ್ತರಾಗಿದ್ದಾರೆಂದು ಹೇಗೆ ಹೇಳುತ್ತೀರಿ? ಎಂಬ ಆಶಂಕೆಗೆ 'ಜ್ಯೋತಿಷೈಕೇಷಾಮಸತ್ಯನ್ನೇ' ಎಂಬ ಮುಂದಿನ ಸೂತ್ರ ಹೊರಟಿದೆ. ಸೂತ್ರಾರ್ಥ ಹೀಗಿದೆ - ಏಕೇಷಾಂ ಅನ್ನೇ = ಪ್ರಸಿದ್ಧವಾದ ಅನ್ನಕ್ಕೆ ಅನ್ನತ್ವವನ್ನು ಕೊಡುವಂತಹ ಭಗವದ್ರೂಪವನ್ನು ಯಾವ ಶಾಖೆಗಳು ಹೇಳಿಲ್ಲವೋ, ಅಲ್ಲಿ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಹೇಳಲ್ಪಟ್ಟ 'ಜ್ಯೋತಿಯನ್ನು ವಿವಕ್ಷಿಸಿ, ಪಂಚತ್ವಸಂಖ್ಯೆಯನ್ನು ಪೂರಣ ಮಾಡಿಕೊಳ್ಳಬೇಕು ಎಂದು.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः** – "अत्र ज्योतिरन्नशब्दयोरेकार्थत्वं पृथक् पञ्चकं वा इत्युपपन्नम्" इति टीकां व्यनक्ति – **अत्रेति ।। शाखेति ।।** तत्तच्छाखिभिस्तथा तथोपासनं कार्यमिति व्यवस्थितंविकल्पेन तदुक्तिरित्यर्थः ।

ಈ ಸಂದರ್ಭದ ಟೀಕೆಯಲ್ಲಿ 'ಅತ್ರ ಜ್ಯೋತಿರನ್ನಶಬ್ದಯೋರೇಕಾರ್ಥತ್ವಂ ಪೃಥಕ್ ಪಂಚಕಂ ವಾ ಇತ್ಯುಪಪನ್ನಮ್' ಜ್ಯೋತಿ ಹಾಗೂ ಅನ್ನ ಶಬ್ದಗಳಿಗೆ ಒಂದೇ ಅರ್ಥವನ್ನು ವಿವಕ್ಷಿಸಿ ಪಂಚಕತ್ವವನ್ನು ಸಮರ್ಥಿಸಬಹುದು. ಅಥವಾ ಜ್ಯೋತಿಯನ್ನು ಸೇರಿಸಿಕೊಂಡು ಪಂಚತ್ವವನ್ನು ಹೇಳಬಹುದು. ಅಥವಾ ಅನ್ನವನ್ನು ಸೇರಿಸಿಕೊಂಡೂ ಕೂಡ ಪಂಚತ್ವವನ್ನು ಹೇಳಬಹುದು. ಹೀಗೆ ಪ್ರತ್ಯೇಕವಾಗಿಯೂ ಪಂಚತ್ವ ಸಂಖ್ಯೆಯನ್ನು ತಿಳಿಯಬೇಕು ಎಂಬುದಾಗಿ ಟೀಕೆಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಅದನ್ನೇ ಪ್ರಕೃತ ಗ್ರಂಥಕಾರರು 'ಅತ್ರ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಎರಡು ಪಂಚಕಗಳನ್ನು ಸಮರ್ಥನೆ ಮಾಡಿದರೆ ವಿರೋಧ ಬರುತ್ತದಲ್ಲವೇ? ಎಂದರೆ ಮಾಧ್ಯಂದಿನ ಶಾಖಿಗಳು ಉಪಾಸನೆ ಮಾಡುವ ಪಂಚಕವು 'ಅನ್ನ' ಎಂಬ ಭಗವದ್ ರೂಪದಿಂದ ಕೂಡಿರುತ್ತದೆ. ಕಾಣ್ವಶಾಖಿಗಳು ಉಪಾಸನೆ ಮಾಡುವ ಐದು ಭಗವದ್ ರೂಪಗಳು 'ಜ್ಯೋತಿ' ಎಂಬ ರೂಪವಿಶೇಷದಿಂದ ಕೂಡಿರುತ್ತದೆ. ಹೀಗೆ ಆಯಾ ಶಾಖಿಗಳಿಗೆ ಬೇರೆ ಬೇರೆಯಾದ ಉಪಾಸನೆಗಳಿರುತ್ತವೆಂದು ವ್ಯವಸ್ಥಿತವಿಕಲ್ಪದಿಂದ ವಿರೋಧವನ್ನು ಪರಿಹರಿಸಬೇಕು.

**प्रकाशः** – यदत्र केनचिद् रामानुजीयेनोक्तं यस्मिन्निति मन्त्रपदानामपि ज्योतिर्नयन्यायेनावयवव्युत्पत्त्या ब्रह्मपरत्वसम्भवान्न समन्वयसूत्राक्षेपः पूर्वपक्षे युक्तः । सिद्धान्ते च पञ्च जनशब्दस्य द्वितीयान्तनिर्दिष्टप्राणादिपरत्वोक्तिरयुक्ता । आधेयतयोपसर्जनपरस्य पञ्च जनशब्दस्योपसर्जनीभूतविशेष्याकाङ्क्षस्य नियम्यत्वेनोपसर्जनप्राणादिपरत्वस्यैव युक्तत्वात् । न संख्येति सूत्रेच नेति व्यर्थम् । अविरोधपदस्यैवानुवृत्तिसम्भवादिति ।

ಯಾರೋ ಒಬ್ಬ ರಾಮಾನುಜನು ನಮ್ಮ ಮೇಲೆ ಕೆಲವು ಆಕ್ಷೇಪಗಳನ್ನು ಮಾಡಿರುತ್ತಾನೆ - ಈ ಅಧಿಕರಣದ ಟೀಕೆಯಲ್ಲಿ ಪಂಚ ಜನ ಮೊದಲಾದ ಶಬ್ದಗಳ ಸಮನ್ವಯವು ಸಿದ್ಧವಾಗದ ಕಾರಣ, 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಸಕಲ ಶಬ್ದಗಳ ಸಮನ್ವಯವನ್ನು ವಿಷ್ಣುವಿನಲ್ಲಿ ಹೇಳಿದ್ದು ಅಸಾಧುವಾಗುತ್ತದಲ್ಲವೇ ? ಎಂಬ ಆಕ್ಷೇಪವನ್ನು ತೋರಿಸಿರುತ್ತಾರೆ. ಈ ಆಕ್ಷೇಪವೇ ಕೂಡುವುದಿಲ್ಲ. ಏಕೆಂದರೆ 'ಜ್ಯೋತಿಃ ಏಕೇಷಾಂ' ಎಂಬ ಹಿಂದಿನ ಅಧಿಕರಣದ ಸೂತ್ರದಲ್ಲಿ ಮಂತ್ರದಲ್ಲಿರುವ ಎಲ್ಲಾ ಪದಗಳ ಸಮನ್ವಯವನ್ನು ನೀವೇ ಮಾಡಿರುತ್ತೀರಿ. ಅದೇ ನ್ಯಾಯದಿಂದಲೇ ಈ ಅಧಿಕರಣದ ವಿಷಯವಾಕ್ಯದಲ್ಲಿರುವ ಪಂಚ ಜನ ಮೊದಲಾದ ಪದಗಳ ಸಮನ್ವಯವೂ ಕೂಡ ಸಿದ್ಧವಾಯಿತು. ಹೀಗಿರುವಾಗ ಸಮನ್ವಯಾಧಿ-ಕರಣದ ಪ್ರಮೇಯವನ್ನು ಆಕ್ಷೇಪ ಮಾಡಿದ್ದು ಹೇಗೆ ಸರಿಯಾಗುತ್ತದೆ? ಆದ್ದರಿಂದ ಪೂರ್ವಪಕ್ಷ ಟೀಕೆಯು ಸರಿಯಿಲ್ಲ. ಮತ್ತು ಸಿದ್ಧಾಂತದ ಟೀಕೆಯೂ ಕೂಡ ಅಸಾಧುವಾಗಿದೆ. ಸಿದ್ಧಾಂತದಲ್ಲಿ ಪಂಚ ಜನ ಶಬ್ದವು ದ್ವಿತೀಯಾನಿರ್ದಿಷ್ಟವಾದ ಪ್ರಾಣಾದಿಗಳನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಹೇಳುತ್ತೀರಿ. ಆದರೆ

ದ್ವಿತೀಯಾಂತನಿರ್ದಿಷ್ಟರಾದ ಪ್ರಾಣಾದಿಗಳು ಆಧೇಯತ್ವೇನ ಶ್ರುತರಾಗಿದ್ದಾರೆ. ಆಧೇಯವಾದದ್ದು ಅಪ್ರಧಾನವಾಗಿರುತ್ತದೆ. 'ಯಸ್ಮಿನ್' ಎಂಬ ಪದದ ಅರ್ಥವೂ ಪ್ರಧಾನವಾಗಿರುತ್ತದೆ. ಆದ್ದರಿಂದ 'ಪ್ರಾಣಸ್ಯ ಪ್ರಾಣಮ್' ಎಂಬ ಹಿಂದಿನ ವಾಕ್ಯದಲ್ಲಿಯೂ 'ಪ್ರಾಣಮ್' ಎಂಬುದಾಗಿ ದ್ವಿತೀಯಾವಿಭಕ್ತಿಪದದಿಂದ ನಿರ್ದಿಷ್ಟರಾದವರು ಪ್ರಧಾನರಾಗಿದ್ದಾರೆ. 'ಪ್ರಾಣಸ್ಯ' ಎಂಬುದಾಗಿ ಷಷ್ಠೀನಿರ್ದಿಷ್ಟರಾದವರು ಅಪ್ರಧಾನ-ರಾಗಿದ್ದಾರೆ. ಹೀಗೆ ಹಿಂದಿನ ವಾಕ್ಯದಲ್ಲಿಯೂ ಒಂದು ಪ್ರಧಾನ, ಮತ್ತೊಂದು ಅಪ್ರಧಾನವಾಗಿದೆ. ಅದರಂತೆ 'ಯಸ್ಮಿನ್ ಪಂಚ' ಎಂಬ ವಾಕ್ಯದಲ್ಲಿಯೂ ಕೂಡ ಒಂದು ಪ್ರಧಾನ, ಮತ್ತೊಂದು ಅಪ್ರಧಾನವಿದೆ. ಆದ್ದರಿಂದ ಉಪಸರ್ಜನರಾದವರನ್ನು ಹೇಳುವ ಪಂಚ ಜನ ಶಬ್ದವು ಹಿಂದಿನ ವಾಕ್ಯದಲ್ಲಿ ಉಪಸರ್ಜನತಯಾ ಉಕ್ತರಾದ ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳನ್ನೇ ಹೇಳುತ್ತದೆ ಹೊರತು, ಪ್ರಧಾನವಾಗಿ ನಿರ್ದಿಷ್ಟರಾದ ಪ್ರಾಣಾದಿಗಳನ್ನು ಈ ಪಂಚ ಜನ ಶಬ್ದವು ಸರ್ವಥಾ ಹೇಳುವುದಿಲ್ಲ.

ಮತ್ತು 'ನ ಸಂಖ್ಯೋಪಸಂಗ್ರಹಾತ್' ಎಂಬ ಸೂತ್ರದಲ್ಲಿ 'ನ' ಎಂಬ ಪದವೂ ಕೂಡ ವ್ಯರ್ಥವಾಗಿದೆ. ಹಿಂದಿನ ಅಧಿಕರಣದ ಸೂತ್ರದಿಂದ ಅವಿರೋಧ ಪದವನ್ನೇ ಅನುವೃತ್ತಿ ಮಾಡಿಕೊಳ್ಳಬಹುದಲ್ಲವೇ?

**प्रकाशः** – तत्तु ग्रन्थतात्पर्याज्ञानविजृम्भितमित्ययुक्तम् । ज्योतिर्नयन्यायेन पदसमन्वयसम्भवेऽपि तदनधिकार्यपेक्षितवाक्यमर्यादापक्षमुपेत्यैवेह पूर्वपक्षे समन्वयसूत्राक्षेपात् । आधेयतया निर्देशमात्रेणोपसर्जनत्वे भूमप्रकरणे ''स एवाधस्तात् स एवोपरिष्टात्'' इत्यादिना भूम्नोऽप्याधेयत्वश्रवणात् आथर्वणे च ''ब्रह्मदक्षिणतो ब्रह्मोत्तरतः'' इत्यादिना ब्रह्मण आधेयत्वश्रवणादुपसर्जनत्वं स्यात् । ''यः पृथिव्यां तिष्ठन् योऽप्सुतिष्ठन्'' इत्यादिनान्तर्यामिणोऽप्याधेयत्वोक्तेस तथात्वं स्यात् । नियम्यतयाऽऽधेयत्वं च नात्र श्रुतम् ।

ಇವರ ಈ ವಾದವು ಗ್ರಂಥದ ತಾತ್ಪರ್ಯವನ್ನು ಅರ್ಥಮಾಡಿಕೊಳ್ಳದೇ ಅಜ್ಞಾನದ ವಿಜೃಂಭಣೆಯಿಂದ ಮಾಡಿದ ಆಕ್ಷೇಪವಾಗಿದೆ. ಏಕೆಂದರೆ ಹಿಂದಿನ ಜ್ಯೋತಿರಧಿಕರಣದಲ್ಲಿ ಪದಸಮನ್ವಯವು ಸಿದ್ಧವಾದರೂ ಕೂಡ ಪದಸಮನ್ವಯದಲ್ಲಿ ಯಾರು ಅಧಿಕಾರಿಗಳಲ್ಲವೋ, ಅಂತಹ ವ್ಯಕ್ತಿಗಳಿಗೆ ವಾಕ್ಯಸಮನ್ವಯವನ್ನು ಅವಶ್ಯವಾಗಿ ಮಾಡಬೇಕು. ಅಂತಹ ವಾಕ್ಯಸಮನ್ವಯವು ಕೂಡುವುದಿಲ್ಲವೆಂದು ಪೂರ್ವಪಕ್ಷ ಮಾಡಲಾಗಿದೆ. ಇದರಿಂದ ಸಮನ್ವಯ ಸೂತ್ರದ ಆಕ್ಷೇಪ ಮಾಡಿದ್ದು ಸಂಗತವಾಗಿದೆ. ಮತ್ತು ಯಾವುದು ಆಧೇಯವೆಂದು ನಿರ್ದಿಷ್ಟವಾಗಿದೆಯೋ, ಅದು ಅಪ್ರಧಾನವಾಗಿರುತ್ತದೆ ಎಂಬ ವ್ಯಾಪ್ತಿಯು ಅಸಿದ್ಧವಾಗಿದೆ. ಏಕೆಂದರೆ ಭೂಮಾಪ್ರಕರಣದಲ್ಲಿ 'ಸ ಏವಾಧಸ್ತಾತ್ ಸ ಏವ ಉಪರಿಷ್ಟಾತ್' ಎಂಬುದಾಗಿ ಒಬ್ಬನೇ ಪರಮಾತ್ಮನಿಗೆ ಆಧಾರತ್ವ ಹಾಗೂ ಆಧೇಯತ್ವಗಳು ಶ್ರುತವಾಗಿವೆ. ಆಥರ್ವಣದಲ್ಲಿಯೂ ಕೂಡ 'ಬ್ರಹ್ಮ ದಕ್ಷಿಣತಃ ಬ್ರಹ್ಮ ಉತ್ತರತಃ' ಎಂಬುದಾಗಿ ಬ್ರಹ್ಮನೇ ಆಧಾರನಾಗಿಯೂ, ಆಧೇಯನಾಗಿಯೂ ಶ್ರುತನಾಗಿದ್ದಾನೆ. 'ಯ ಪೃಥಿವ್ಯಾಂ ತಿಷ್ಠನ್ ಯೋಽಪ್ಸು ತಿಷ್ಠನ್' ಎಂಬುದಾಗಿ ಪೃಥಿವಿಯನ್ನು ಆಧಾರವನ್ನಾಗಿ ಪರಮಾತ್ಮನನ್ನು ಆಧೇಯವನ್ನಾಗಿ ಹೇಳಲಾಗಿದೆ. ಹಾಗಾದರೆ ಈ ಎಲ್ಲಾ ಸ್ಥಳದಲ್ಲಿ ಆಧೇಯತ್ವೇನ ನಿರ್ದಿಷ್ಟನಾದ ಪರಮಾತ್ಮನಿಗೆ

ಉಪಸರ್ಜನತ್ವವನ್ನು ನೀವು ಹೇಳಬೇಕಾಗುತ್ತದೆ. ಆದ್ದರಿಂದ ಆಧೇಯತ್ವವನ್ನು ಹೇಳಿದ ಮಾತ್ರಕ್ಕೆ ಉಪಸರ್ಜನತ್ವವನ್ನು ಸರ್ವಥಾ ತಿಳಿಯಬಾರದು. ಒಂದು ವೇಳೆ ನಿಯಮ್ಯತಯಾ ಶ್ರುತವಾದರೆ ಮಾತ್ರ ಆಧೇಯವು ಉಪಸರ್ಜನವಾಗುತ್ತದೆ. ಅಂತಹ ನಿಯಮ್ಯತ್ವವನ್ನು ಇಲ್ಲಿ ಎಲ್ಲಿಯೂ ಕೂಡ ಹೇಳಿರುವುದಿಲ್ಲ.

**प्रकाशः** – वाक्यशेषस्य पञ्च जनस्वरूपविवेचनार्थं वृत्तत्वेन षष्ठ्यन्त-निर्दिष्टानामेव पञ्च जनत्वे ''प्राणं चक्षुश्श्रोत्रमन्नं मनः'' इत्युक्त्यैव पूर्तौ वाक्यशेषे ''प्राणस्य प्राणम्'' इत्याद्युक्तिर्व्यर्था ।

ಮತ್ತು ವಾಕ್ಯಶೇಷದಲ್ಲಿ ಪಂಚ ಜನರ ಸ್ವರೂಪವನ್ನು ತಿಳಿಸುವುದಕ್ಕಾಗಿ ಷಷ್ಠ್ಯಂತವಾದ ವಾಕ್ಯಶೇಷವು ಹೊರಟಿದೆ ಎಂದು ವ್ಯಾಖ್ಯಾನ ಮಾಡುವುದಾದರೆ 'ಪ್ರಾಣಂ ಚಕ್ಷುಃಶ್ರೋತ್ರಮನ್ನಂ ಮನಃ' ಎಂದಷ್ಟೇ ಶ್ರುತಿಯಲ್ಲಿ ಹೇಳಿದ್ದರೆ ಸಾಕಾಗುತ್ತಿತ್ತು. 'ಪ್ರಾಣಸ್ಯ ಪ್ರಾಣಮ್' ಇತ್ಯಾದಿಯಾಗಿ ಷಷ್ಠ್ಯಂತನಿರ್ದೇಶವೆಲ್ಲವೂ ವ್ಯರ್ಥವಾಗುತ್ತವೆ.

**प्रकाशः** – अस्मन्मते तु पञ्च जनशब्देन शरीररूपकविन्यस्तेति न्यायेन प्राणादिषु नियामकतया स्थितभगवद्रूपाणामेव गृहीतत्वेन तद्विवेचनाय सार्थक्यम् ।

ಆದರೆ ನಮ್ಮ ಮತದಲ್ಲಿ ಪಂಚ ಜನ ಶಬ್ದದಿಂದ ಪ್ರಸಿದ್ಧವಾದ ಪ್ರಾಣಾದಿಗಳನ್ನೂ ಕೂಡ ತೆಗೆದುಕೊಳ್ಳುತ್ತೇವೆ. ಮತ್ತು ಶರೀರನಿಯಾಮಕವಾದ ಭಗವದ್ರೂಪವು ಆಧಾರವಾಗಿದೆ. ಅದರಲ್ಲಿ ಆಧೇಯವಾದ ಪ್ರಸಿದ್ಧ ಪ್ರಾಣಾದಿಗಳಲ್ಲಿ ಅಂತರ್ಗತವಾದ ಭಗವದ್ರೂಪವನ್ನು ಪಂಚ ಜನ ಶಬ್ದದಿಂದ ತೆಗೆದುಕೊಳ್ಳುತ್ತೇವೆ. ಹೀಗೆ ಶರೀರರೂಪವಾದ ಭಗವದ್ರೂಪದಲ್ಲಿ ಪ್ರಾಣಾದಿ ಐದು ರೂಪಗಳು ಆಧೇಯವಾಗಿವೆ ಎಂಬುದನ್ನು ತಿಳಿಸುವುದಕ್ಕಾಗಿ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ಷಷ್ಠ್ಯಂತನಿರ್ದಿಷ್ಟವಾದ ಶ್ರುತಿಗಳೆಲ್ಲವೂ ಸಾರ್ಥಕವಾಗಿವೆ.

**प्रकाशः** – षष्ठ्यन्तनिर्दिष्टप्राणादेः पञ्च जनत्वे तृतीयसूत्रस्थैकवचननिर्देशविरोधो ग्रन्थ एवाग्रे स्पष्टः । सूत्रे संख्योपसङ्ग्रहादपि न षष्ठ्यन्तोक्तप्राणादयः पञ्च जनाः । तेषां प्रत्येकं नानात्वात्पञ्चत्वानुपपत्तेरित्याद्यर्थान्तरस्याप्यनुमतत्वेन नञ् सार्थक्यमुक्तमेवेति ।।

ಮತ್ತು ಷಷ್ಠ್ಯಂತರಾಗಿ ನಿರ್ದಿಷ್ಟರಾದ ಪ್ರಾಣಾದಿಗಳು ಪಂಚ ಜನ ಶಬ್ದದ ಅರ್ಥವೆಂದು ಪರಿಗಣಿಸಿದರೆ, ಮೂರನೆಯ ಸೂತ್ರದಲ್ಲಿ 'ಜ್ಯೋತಿಷಾ' ಎಂಬಲ್ಲಿರುವ ಏಕವಚನದ ವಿರೋಧವು ರಾಮಾನುಜರಿಗೆ ಬರುತ್ತದೆಂದು ಮುಂದೆ ಗ್ರಂಥಕಾರರೇ ಸ್ಪಷ್ಟವಾಗಿ ಹೇಳುತ್ತಾರೆ. ಮತ್ತು ಸೂತ್ರದಲ್ಲಿ 'ನ' ಎಂಬ ಪದವನ್ನು ಹೇಳಬೇಕಾಗಿರಲಿಲ್ಲ ಎಂಬ ಆಕ್ಷೇಪಕ್ಕೆ ಈ ಹಿಂದೆಯೇ ನಾವು ಉತ್ತರಿಸಿದ್ದೇವೆ. ಸಂಖ್ಯೋಪಸಂಗ್ರಹದಿಂದಲೂ ಷಷ್ಠ್ಯಂತವಾದ ಪ್ರಾಣಾದಿಗಳನ್ನು ಪಂಚ ಜನಶಬ್ದದಿಂದ ತೆಗೆದುಕೊಳ್ಳಬಾರದು. ಏಕೆಂದರೆ ಅವರು ಪ್ರತ್ಯೇಕವಾಗಿ ಅನೇಕರಾಗಿರುತ್ತಾರೆ. ಆದ್ದರಿಂದ ಪಂಚತ್ವವು ಅನುಪಪನ್ನವಾಗುತ್ತದೆ ಇತ್ಯಾದಿಯಾದ ಬೇರೆ

ಅರ್ಥಗಳನ್ನು ವಿವಕ್ಷಿಸುವುದರಿಂದ 'ನಞ್' ಎಂಬುದು ಸಾರ್ಥಕವಾಗಿರುತ್ತದೆ. ಆದ್ದರಿಂದ ರಾಮಾನುಜರ ಈ ಯಾವುದೇ ಆಕ್ಷೇಪವೂ ಕೂಡ ವಿವೇಕದಿಂದ ಕೂಡಿರುವುದಿಲ್ಲ.

## ಅದ್ವೈತಿಗಳ ಅಧಿಕರಣ ವಿಮರ್ಶೆ

### तात्पर्यचन्द्रिका

**अन्येतु । ''यस्मिन् पञ्च पञ्च जना आकाशश्च प्रतिष्ठितः'' इति वाक्ये समस्तेन पञ्चजनशब्देनोक्तानां समाहाराणामसमस्तेनान्येन पञ्चशब्देन पञ्चत्वसंख्यान्वयः प्रतीयते । एवं च पञ्च पञ्चकानि पञ्चविंशतिः सम्पद्यते ।**

ಅನುವಾದ - ಅದ್ವೈತಿಗಳ ಅಧಿಕರಣ ಶರೀರ ಹೀಗಿದೆ - 'ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ' ಎಂಬುದೇ ಅಧಿಕರಣದ ವಿಷಯವಾಕ್ಯ. ಈ ವಾಕ್ಯದಲ್ಲಿ ಸಮಾಸ ಹೊಂದಿರುವ ಪಂಚ ಜನ ಶಬ್ದದಿಂದ ಐದು ತತ್ವಗಳ ಸಮಾಹಾರವನ್ನು ಹೇಳಲಾಗಿದೆ. ಈ ಪಂಚ ಜನಶಬ್ದಕ್ಕೆ ಸಮಾಸ ಹೊಂದದೇ ಪ್ರತ್ಯೇಕವಾಗಿರುವ ಪಂಚ ಎಂಬ ಶಬ್ದದಿಂದ ಯಾವ ಪಂಚತ್ವ ಸಂಖ್ಯೆಯು ತಿಳಿಯುತ್ತಿದೆಯೋ, ಅದರಲ್ಲಿ ಅನ್ವಯವನ್ನು ಮಾಡಬೇಕು. ಆವಾಗ ಐದು ತತ್ವಗಳ ಐದರ ಗುಂಪು ಎಂಬರ್ಥವು ದೊರೆಯುತ್ತದೆ. ಇಪ್ಪತ್ತೈದು ತತ್ವಗಳನ್ನು ಈ ವಾಕ್ಯವು ಪ್ರತಿಪಾದನೆ ಮಾಡುತ್ತಿದೆಯೆಂದು ಹೇಳಿದಂತಾಗುತ್ತದೆ.

**यथा पञ्चपञ्चपूल्य इत्यत्र पञ्चविंशति पूल्यः । पञ्चजना इति पुँल्लिङ्गं तु छान्दसम् ।**

ಯಾವರೀತಿಯಾಗಿ 'ಪಂಚಪಂಚಪೂಲ್ಯಃ' ಎಂದು ಹೇಳಿದಾಗ ಇಪ್ಪತ್ತೈದು ಹಣ್ಣುಗಳು ಎಂಬರ್ಥವು ದೊರೆಯುತ್ತದೋ, ಅದರಂತೆ ಇಲ್ಲಿಯೂ ಕೂಡ 'ಪಂಚ ಪಂಚ ಜನಾಃ' ಎಂಬುದರಿಂದ ಇಪ್ಪತ್ತೈದು ತತ್ವಗಳು ಎಂಬರ್ಥವು ದೊರೆಯುತ್ತದೆ. ಹಾಗಾದರೆ 'ದ್ವಿಗೋಃ' ಎಂಬ ಸೂತ್ರದಿಂದ ಙ್ೕಪ್ ಪ್ರತ್ಯಯವು ಬಂದು ಪಂಚಜನೀ ಎಂಬ ಸ್ತ್ರೀಲಿಂಗ ಪ್ರಯೋಗವನ್ನು ಮಾಡಬೇಕಲ್ಲವೇ? ಎಂದು ಪ್ರಶ್ನಿಸಬಾರದು. 'ಪಂಚ ಜನಾಃ' ಎಂಬ ಪುಲ್ಲಿಂಗ ನಿರ್ದೇಶವು ಛಾಂದಸವಾದ್ದರಿಂದ ಸಾಧುವಾಗುತ್ತದೆ.

**तस्मात् पञ्चविंशतितत्वानामुपसङ्ग्रहात् प्रधानादीनां श्रुतिमत्त्वमिति प्राप्ते**

ಆದ್ದರಿಂದ ಇಪ್ಪತ್ತೈದು ತತ್ವಗಳನ್ನು ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಸಾಂಖ್ಯಸ್ಮೃತಿಯಲ್ಲಿ ಸಿದ್ಧವಾದ ಪ್ರಧಾನಾದಿಗಳಿಗೆ ಶ್ರುತಿಪ್ರಮಾಣಸಿದ್ಧತ್ವವನ್ನು ಸಮರ್ಥನೆ ಮಾಡಿದಂತಾಯಿತು. ಇಷ್ಟು ಪೂರ್ವಪಕ್ಷ.

**सिद्धान्तः न संख्योपसङ्ग्रहादपि प्रधानादीनां श्रुतिमत्त्वम् ।**

ಸಿದ್ಧಾಂತ ಹೀಗಿದೆ - ಶ್ರುತಿಸಿದ್ಧವಾದ ಸಂಖ್ಯೆಯಿಂದ ಸ್ಮೃತಿಸಿದ್ಧವಾದ ಪ್ರಧಾನಾದಿಗಳಿಗೆ ಶ್ರುತಿಸಿದ್ಧತ್ವವನ್ನು ಸಮರ್ಥಿಸುವುದು ಅಯುಕ್ತವಾಗಿದೆ.

**कस्मात् । नानाभावात् । नाना ह्येतानि पञ्चविंशति तत्वानि । नैषां पञ्चशः पञ्चशः साधारणधर्मोस्ति । येन पञ्चविंशतेरन्तराले पञ्चपञ्च संख्याः निवेशेरन् । नह्येकं निबन्धनं विना नानाभूतेषु द्वित्वादिका संख्याऽस्ति**

ಏಕೆಂದರೆ ನಾನಾಭಾವಾತ್ = ಈ ಪಂಚವಿಂಶತಿ ತತ್ವಗಳು ವಿವಿಧವಾಗಿವೆ. ಇವುಗಳಲ್ಲಿ 'ನಾನಾಭಾವಾತ್' ಎಂಬ ಸೂತ್ರದ ಭಾಗಕ್ಕೆ ಹೀಗೆ ಅರ್ಥ - ಪಂಚವಿಂಶತಿ ತತ್ವಗಳು ವಿಭಿನ್ನವಾಗಿವೆ. ಏಕೆಂದರೆ ಐದೈದು ತತ್ವಗಳಲ್ಲಿ ಯಾವುದೇ ಸಾಧಾರಣ ಧರ್ಮಗಳು ಕಾಣಿಸುತ್ತಿಲ್ಲ. ಹಾಗೇನಾದರೂ ಸಾಧಾರಣಧರ್ಮಗಳಿದ್ದಲ್ಲಿ ಇಪ್ಪತ್ತೈದು ತತ್ವಗಳ ನಡುವೆ ಐದೈದರ ಐದು ಗುಂಪುಗಳನ್ನು ಮಾಡಬಹುದಿತ್ತು. ಯಾವುದೇ ಸಂಗ್ರಾಹಕ ಧರ್ಮಗಳಿಲ್ಲದೇ ವಿವಿಧವಾದ ಪದಾರ್ಥಗಳಲ್ಲಿ ದ್ವಿತ್ವಾದಿ ಸಂಖ್ಯೆಗಳನ್ನು ನಿರ್ವಾಹ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಇಪ್ಪತ್ತೈದು ತತ್ವಗಳಲ್ಲಿ ಸಂಗ್ರಾಹಕ-ಧರ್ಮವಿಲ್ಲದೇ ಐದೈದರ ಗುಂಪನ್ನು ರಚನೆ ಮಾಡಲು ಬರುವುದಿಲ್ಲ.

**अतिरेकाच्च । अतिरेकोऽपि भवत्यात्माकाशाभ्यां पञ्चविंशतिसंख्यायाः । आत्मनो हि पञ्चविंशतावन्तर्भावे यस्मिन्नित्यधिकरणत्वोक्तिविरोधः । आकाशस्य तु पृथगुक्तिविरोध इत्याहुः ।**

'ಅತಿರೇಕಾಚ್ಚ' ಎಂಬ ಸೂತ್ರದ ಭಾಗಕ್ಕೆ ಹೀಗೆ ಅರ್ಥ - 'ಆತ್ಮ' ಹಾಗೂ 'ಆಕಾಶ' ಎಂಬೆರಡು ತತ್ವಗಳನ್ನು ಇಪ್ಪತ್ತೈದು ತತ್ವಕ್ಕಿಂತಲೂ ಅತಿರಿಕ್ತವಾಗಿ ಉಲ್ಲೇಖಿಸಲಾಗಿದೆ. ಆದರೂ ಕೂಡ ಆತ್ಮನನ್ನು ಇಪ್ಪತ್ತೈದು ತತ್ವದಲ್ಲೇ ಸೇರಿಸುವುದಾದರೆ, 'ಯಸ್ಮಿನ್' ಎಂಬ ಪದದಿಂದ ಹೇಳಲ್ಪಟ್ಟ ಆತ್ಮನೇ ಎಲ್ಲ ತತ್ವಗಳಿಗೆ ಅಧಿಕರಣನಾಗಿದ್ದಾನೆಂಬ ಮಾತಿನ ವಿರೋಧ ಪ್ರಾಪ್ತವಾಗುತ್ತದೆ. ಮತ್ತು 'ಆಕಾಶಶ್ಚ ಪ್ರತಿಷ್ಠಿತಃ' ಎಂಬಲ್ಲಿ ಆಕಾಶವನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದೂ ಕೂಡ ತಪ್ಪಾಗುತ್ತದೆ. ಆದ್ದರಿಂದ ಈ ಶ್ರುತಿಯು ಸಾಂಖ್ಯರ ತತ್ವಗಳನ್ನು ಪ್ರತಿಪಾದನೆ ಮಾಡಲು ಹೊರಟಿರುವುದಿಲ್ಲ. ಇಷ್ಟು ಅದ್ವೈತಿಗಳ ಸಿದ್ಧಾಂತ.

**तत्र ब्रूमः ।**

**पञ्चविंशतितत्वानि श्रुतिस्मृतिसमाजतः ।**
**प्रमितान्यपलप्यन्ते कथं वैदिकमानिना ।। १ ।।**

ಪರಿಪೂರ್ಣಚಂದ್ರಿಕಾ

ಇವರ ಈ ಅಧಿಕರಣ ಶರೀರ ಅಸಾಧುವಾಗಿದೆ.

ಪಂಚವಿಂಶತಿತತ್ವಾನಿ ಶ್ರುತಿಸ್ಮೃತಿಸಮಾಜತಃ ।
ಪ್ರಮಿತಾನ್ಯಪಲಪ್ಯಂತೇ ಕಥಂ ವೈದಿಕಮಾನಿನಾ ॥೧॥

ಇಪ್ಪತ್ತೈದು ತತ್ವಗಳು ಶ್ರುತಿ ಹಾಗೂ ಸ್ಮೃತಿಗಳೆಂಬ ಸಮಾಜದಿಂದ ಪ್ರಮಿತವಾಗಿರುವಾಗ ವೈದಿಕತತ್ವಗಳಿಗೆ ಮಾನ್ಯತೆಯನ್ನು ನೀಡುವ ನೀನು ಹೇಗೆ ತಾನೇ ಅಪಲಾಪ ಮಾಡುವಿ?

**किं पञ्चविंशति तत्वान्येवाप्रामाणिकानि किं वैतद्वाक्यं न तत्परम् ।**

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯು ಇಪ್ಪತ್ತೈದು ತತ್ವಗಳನ್ನು ಪ್ರತಿಪಾದನೆ ಮಾಡುತ್ತಿಲ್ಲವೆಂದು ಹೇಳುತ್ತಿರುವ ನಿನ್ನ ಅಭಿಪ್ರಾಯವೇನು? ಪಂಚವಿಂಶತಿ ತತ್ವವೇ ಅಪ್ರಾಮಾಣಿಕವೆಂದೋ, ಅಥವಾ 'ಯಸ್ಮಿನ್ ಪಂಚ' ಎಂಬ ವಾಕ್ಯವು ಪಂಚವಿಂಶತಿ ತತ್ವವನ್ನು ಪ್ರತಿಪಾದನೆ ಮಾಡುತ್ತಿಲ್ಲವೆಂದೋ?

**नाद्यः । ''तं षड्विंशमिति प्राहुः'' इति ''तन्मात्राणि भूतादौ लीयन्ते भूतादिर्महति महानव्यक्ते लीयते'' इति ''यस्याहंकारः शरीरं यस्य बुद्धिः शरीरं यस्याव्यक्तं शरीरम्'' इत्यादिश्रुतिभिः, ''पञ्चभिः पञ्चभिर्ब्रह्म चतुर्भिर्दशभिस्तथा । एतच्चतुर्विंशतिकं गणं प्राधानिकं विदुः'' इति ''त्रिविधोऽयमहंकारो महत्तत्वादजायते'' इत्यादिस्मृतिभिश्च पञ्चविंशतितत्वानां प्रमितत्वात् ।**

ಮೊದಲನೆಯ ಪಕ್ಷ ಸರಿಯಿಲ್ಲ. ಏಕೆಂದರೆ 'ತಂ ಷಡ್ವಿಂಶಮಿತಿ ಪ್ರಾಹುಃ' ಎಂಬ ಆಥರ್ವಣೋಪನಿಷತ್ತಿನಲ್ಲಿ, 'ತನ್ಮಾತ್ರಾಣಿ ಭೂತಾದೌ ಲೀಯಂತೇ ಭೂತಾದಿರ್ಮಹತಿ ಮಹಾನವ್ಯಕ್ತೇ ಲೀಯತೇ' ಎಂಬುದಾಗಿ ಮತ್ತೊಂದು ಶ್ರುತಿಯಲ್ಲಿ, 'ಯಸ್ಯಾಹಂಕಾರಃ ಶರೀರಂ ಯಸ್ಯ ಬುದ್ಧಿಃ ಶರೀರಂ ಯಸ್ಯಾವ್ಯಕ್ತಂ ಶರೀರಮ್' ಎಂಬುದಾಗಿ ಸುಬಾಲೋಪನಿಷತ್ತಿನಲ್ಲಿ 'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ । ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ' ಎಂಬುದಾಗಿ ಭಾಗವತದ ಕಪಿಲಗೀತೆಯಲ್ಲಿ, 'ತ್ರಿವಿಧೋಽಯಮಹಂಕಾರಃ ಮಹತ್ತತ್ವಾದಜಾಯತೇ' ಎಂಬ ಸ್ಮೃತಿಯಲ್ಲಿಯೂ ಕೂಡ ಪಂಚವಿಂಶತಿ ತತ್ವಗಳ ನಿರೂಪಣೆಯು ಸ್ಪಷ್ಟವಾಗಿರುತ್ತದೆ. ಹೀಗೆ ಅನೇಕ ಶ್ರುತಿ-ಸ್ಮೃತಿಗಳ ಆಧಾರದಿಂದ ಪಂಚವಿಂಶತಿ ತತ್ವವು ಪ್ರಮಾಣಸಿದ್ಧವಾಗಿರುವಾಗ ಅಪ್ರಾಮಾಣಿಕವೆಂಬ ನಿನ್ನ ಊಹೆಯು ಅಸಮೀಚೀನವಾಗಿದೆ.

**नान्त्यः । अस्माकमविरोधात् । तावता तेषामशब्दत्वासिद्धेश्च ।**

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ವಾಕ್ಯವು ಪಂಚವಿಂಶತಿ ತತ್ವವನ್ನು ಪ್ರತಿಪಾದನೆ ಮಾಡುವುದಿಲ್ಲ ಎಂಬ ಎರಡನೆಯ ಪಕ್ಷವು ಸರಿಯಲ್ಲ. ಆ ಪಕ್ಷವನ್ನು ನೀನು ಒಪ್ಪುವುದಾದರೆ ನನಗೆ

ವಿರೋಧವೇ ಇಲ್ಲ. ಏಕೆಂದರೆ ನಾವೂ ಸಹ 'ಯಸ್ಮಿನ್ ಪಂಚ' ಇತ್ಯಾದಿ ವಾಕ್ಯಕ್ಕೆ ತತ್ವಪರತ್ವವನ್ನು ಅಂಗೀಕರಿಸುವುದಿಲ್ಲ. ಮತ್ತು ಕೇವಲ ಈ ವಾಕ್ಯವು ಪಂಚವಿಂಶತಿತತ್ವವನ್ನು ಪ್ರತಿಪಾದನೆ ಮಾಡುವುದಿಲ್ಲ ಎಂದ ಮಾತ್ರಕ್ಕೆ ಪ್ರಕೃತಿಗೆ ಅಶಬ್ದತ್ವವನ್ನು ಸಮರ್ಥನೆ ಮಾಡಿದಂತಾಗುವುದಿಲ್ಲ.

**यच्चोक्तं नानाभावादिति तन्न । पृथिव्यादिषु भूतत्वस्य शब्दादिषु तन्मात्रात्वस्य घ्राणादिषु बाह्यज्ञानेन्द्रियत्वस्य वागादिषु कर्मेन्द्रियत्वस्य महदहंकारमनःप्रकृति पुरुषेषूक्तविंशत्यन्यत्वस्य चोपसङ्ग्राहकस्य सत्त्वात् । अन्यथा ''पञ्चभिः'' इत्यादिस्मार्तनिर्देशस्याप्ययोगात् ।**

ಇದರಂತೆ ಅದ್ವೈತಿಗಳ ಸೂತ್ರವ್ಯಾಖ್ಯಾನವೂ ಕೂಡ ಸರಿಯಿಲ್ಲ. ಏಕೆಂದರೆ ಪೃಥಿವ್ಯಾದಿಗಳಲ್ಲಿ ಪಂಚಭೂತತ್ವ, ಶಬ್ದಾದಿಗಳಲ್ಲಿ ತನ್ಮಾತ್ರತ್ವ, ಘ್ರಾಣಾದಿಗಳಲ್ಲಿ ಬಾಹ್ಯಜ್ಞಾನೇಂದ್ರಿಯತ್ವ, ವಾಗಾದಿ ಇಂದ್ರಿಯಗಳಲ್ಲಿ ಕರ್ಮೇಂದ್ರಿಯತ್ವ, ಮಹದಹಂಕಾರ ಮನಸ್ಸು, ಪ್ರಕೃತಿ, ಪುರುಷ ಇವುಗಳಲ್ಲಿ ಏಕವಿಂಶತ್ಯನ್ಯತ್ವ ಇತ್ಯಾದಿಯಾದ ಉಪಸಂಗ್ರಾಹಕ ಧರ್ಮವಿರುವಾಗ, ಯಾವುದೇ ಸಂಗ್ರಾಹಕ-ಧರ್ಮಗಳಿಲ್ಲದ ಕಾರಣ ಇಪ್ಪತ್ತೈದು ತತ್ವವನ್ನು ಈ ಶ್ರುತಿಯು ಪ್ರತಿಪಾದನೆ ಮಾಡುವುದಿಲ್ಲವೆಂಬ ಈ ವ್ಯಾಖ್ಯಾನವು ಅಸಾಧುವಾಗಿದೆ. ಒಂದುವೇಳೆ ಹೀಗೆ ಸಂಗ್ರಾಹಕಧರ್ಮಗಳಿಲ್ಲವೆಂಬುದು ಸೂತ್ರಕಾರರ ಉದ್ದೇಶವಾಗಿದ್ದಲ್ಲಿ ಅವರೇ ಸ್ವತಃ ಭಾಗವತದಲ್ಲಿ 'ಪಂಚಭಿಃ ಪಂಚಭಿರ್ಬ್ರಹ್ಮ' ಎಂಬುದಾಗಿ ಐದೈದರ ಗುಂಪುಗಳನ್ನಾಗಿ ತತ್ವಗಳ ವಿಂಗಡನೆಯನ್ನು ಮಾಡಿದ್ದು ತಪ್ಪಾಗುತ್ತಿತ್ತು.

**प्रकाशः –**

**अन्ये त्विति** ।। एवं परिहृतेप्यजामन्त्रे पुनरप्यन्यस्मान्मन्त्रात्सांख्यप्रत्यवस्थाने तन्निरासार्थमिदमित्युक्त्वा ''यस्मिन् पञ्च पञ्च जनाः'' इति मन्त्रः किं सांख्याभिमत-प्रधानादितत्वपरोऽथार्थान्तरपरः? इति सन्दिह्य पूर्वोत्तरपक्षावुक्तौ, तौ सुधां विवृण्वन्ननुवदति – **यस्मिन्निति** ।।

ವಿವರಣೆ - ಅದ್ವೈತಿಗಳ ಅಧಿಕರಣಶರೀರವನ್ನು 'ಅನ್ಯೇ ತು' ಇತ್ಯಾದಿ ಗ್ರಂಥದಿಂದ ಅನುವಾದ ಮಾಡುತ್ತಿದ್ದಾರೆ. ಹಿಂದಿನ ಅಧಿಕರಣದಲ್ಲಿ 'ಅಜಾಮೇಕಾಮ್ ಲೋಹಿತಶುಕ್ಲಕೃಷ್ಣಾಂ' ಎಂಬ ಮಂತ್ರ ಪ್ರಕೃತಿಪರವಲ್ಲ ಎಂದು ನಿರಾಕರಣೆ ಮಾಡಿದ ಮೇಲೆ ಪುನಃ ಸಾಂಖ್ಯರು 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಮಂತ್ರ ಸಾಂಖ್ಯಪರವೆಂದು ಆಕ್ಷೇಪ ಮಾಡುತ್ತಾರೆ. ಅದರ ನಿರಾಕರಣೆಗಾಗಿ ಈ ಅಧಿಕರಣವು ಸಾರ್ಥಕವಾಗಿದೆ. 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಮಂತ್ರವು ಸಾಂಖ್ಯರಿಗೆ ಅಭಿಮತವಾದ ಪ್ರಧಾನಾದಿ ತತ್ವಪರವಾಗಿದೆಯೋ, ಅಥವಾ ಬೇರೆ ಅರ್ಥವನ್ನು ಪ್ರತಿಪಾದನೆ ಮಾಡಲು ಹೊರಟಿದೆಯೋ? ಎಂಬ ಸಂದೇಹವನ್ನು ತೋರಿಸಿ, ಪೂರ್ವಪಕ್ಷ ಹಾಗೂ ಸಿದ್ಧಾಂತಪಕ್ಷಗಳನ್ನು ಸ್ಥಾಪನೆ ಮಾಡಿರುತ್ತಾರೆ. ಅವರ

ಪೂರ್ವಪಕ್ಷ ಹಾಗೂ ಸಿದ್ಧಾಂತ ಪಕ್ಷಗಳನ್ನು ವಿವರಿಸುತ್ತಾ ನ್ಯಾಯಸುಧೆಯನ್ನೂ ಕೂಡ ವಿವರಿಸುತ್ತಿದ್ದಾರೆ 'ಯಸ್ಮಿನ್' ಇತ್ಯಾದಿ ಗ್ರಂಥದಿಂದ.

**प्रकाशः** – समस्तेन समासं प्राप्तेन । नायं पञ्च जनशब्दः ''दिक्संख्ये संज्ञायाम्'' इति समासविधानात् ''स्युः पुमांसः पञ्च जनाः'' इत्यमरोक्तेश्च रूढ्या मनुष्यवाची ।

'ಸಮಸ್ತೇನ' ಎಂದರೆ ಸಮಾಸವನ್ನು ಹೊಂದಿರುವ ಎಂದರ್ಥ. ಶ್ರುತಿಯಲ್ಲಿರುವ ಪಂಚ ಜನ ಶಬ್ದವು ರೂಢಿಯಿಂದ ಮನುಷ್ಯ ಎಂಬರ್ಥವನ್ನು ಹೇಳಬಹುದು. ಏಕೆಂದರೆ 'ದಿಕ್‌ಸಂಖ್ಯೇ ಸಂಜ್ಞಾಯಾಮ್' ಎಂಬ ಪಾಣಿನೀಸೂತ್ರದಲ್ಲಿ ರೂಢ್ಯರ್ಥದಲ್ಲಿ ದಿಗ್ವಾಚಕವಾದ ಹಾಗೂ ಸಂಖ್ಯಾವಾಚಕವಾದ ಶಬ್ದಗಳಿಗೆ ಸಮಾಸವನ್ನು ಹೇಳಿದ್ದಾರೆ. ಮತ್ತು ಅಮರಕೋಶದಲ್ಲಿ 'ಸ್ಯುಃ ಪುಮಾಂಸಃ ಪಂಚ ಜನಾಃ' ಎಂಬುದಾಗಿ ಮನುಷ್ಯ ಎಂಬರ್ಥದಲ್ಲಿ ಪಂಚ ಜನ ಶಬ್ದಕ್ಕೆ ರೂಢಿಯನ್ನು ಹೇಳಲಾಗಿದೆ. ಆದ್ದರಿಂದ ಪಂಚ ಜನ ಶಬ್ದವು ರೂಢಿಯಿಂದ ಮನುಷ್ಯರನ್ನು ಹೇಳುತ್ತದಲ್ಲವೇ? ಎಂದು ತಿಳಿಯಬಾರದು.

**प्रकाशः** – ''यस्मिन् पञ्च मनुष्या आकाशश्च प्रतिष्ठितः'' इति वदतो वाक्यस्य निस्तात्पर्यप्रसङ्गात् । सर्वस्यैवात्मनि प्रतिष्ठितत्वात् ।

ಏಕೆಂದರೆ ಪಂಚ ಜನಶಬ್ದಕ್ಕೆ ಮನುಷ್ಯ ಎಂಬರ್ಥವನ್ನು ವಿವಕ್ಷಿಸಿದಾಗ ಶ್ರುತಿಗೆ ಯಾರಲ್ಲಿ ಐದು ಮಂದಿ ಮನುಷ್ಯರು ಮತ್ತು ಆಕಾಶವು ಪ್ರತಿಷ್ಠಿತವಾಗಿದೆಯೋ ಎಂಬರ್ಥವನ್ನು ಹೇಳಿದಂತಾಗುತ್ತದೆ. ಈ ಅರ್ಥದಲ್ಲಿ ಶ್ರುತಿಗೆ ತಾತ್ಪರ್ಯವಿರಲು ಸಾಧ್ಯವೇ ಇಲ್ಲ. ಏಕೆಂದರೆ ಆತ್ಮನಲ್ಲಿ ಎಲ್ಲವೂ ಪ್ರತಿಷ್ಠಿತವಾಗಿರುವಾಗ, ಐದು ಮಂದಿ ಮನುಷ್ಯರು ಪ್ರತಿಷ್ಠಿತರಾಗಿದ್ದಾರೆ ಎಂದು ಹೇಳುವುದರಲ್ಲಿ ತಾತ್ಪರ್ಯವಿರಲು ಸಾಧ್ಯವಿಲ್ಲ.

**प्रकाशः** – किन्तु रूढित्यागेन ''जायन्ते इति जनाः'' इति कल्पतरूक्तयोगेन जनशब्दस्तत्वपरः ।

ಹೊರತಾಗಿ ಪಂಚ ಜನ ಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು 'ಜಾಯಂತೇ ಇತಿ ಜನಾಃ' ಎಂಬ ಕಲ್ಪತರುವಿನಲ್ಲಿ ಯೋಗಾರ್ಥವನ್ನು ವಿವಕ್ಷಿಸಿ ಜನಶಬ್ದಕ್ಕೆ ತತ್ವಪರವಾದ ಅರ್ಥವನ್ನು ಹೇಳಬೇಕು. ಅಂದರೆ ಯಾವ ಆತ್ಮನಲ್ಲಿ ಐದು ತತ್ವಗಳು ಪ್ರತಿಷ್ಠಿತವಾಗಿವೆಯೋ ಎಂಬರ್ಥವನ್ನು ಹೇಳಿದಂತಾಗುತ್ತದೆ.

**प्रकाशः** – तथापि पञ्चानां जनानां समाहारः पञ्च जना इति समस्तेन पञ्च जनशब्देन पञ्चसंख्याकास्तत्वसमुदायाः प्रतीयन्ते । ते कतीत्याकाङ्क्षायामसमस्तेन पृथक् स्थितेन पञ्चेत्यनेनान्वयः प्रतीयत इत्यर्थः ।।

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ಆದರೂ ಕೂಡ 'ಪಂಚಾನಾಂ ಜನಾನಾಂ ಸಮಾಹಾರಃ ಪಂಚ ಜನಾಃ' ಎಂಬುದಾಗಿ ಸಮಾಸವನ್ನು ಹೊಂದಿರುವ ಪಂಚ ಜನಶಬ್ದದಿಂದ ಐದು ಸಂಖ್ಯೆಯುಳ್ಳ ತತ್ವಗಳ ಸಮುದಾಯವು ಪ್ರತೀತವಾಗುತ್ತದೆ. ಅಂತಹ ತತ್ವಸಮುದಾಯಗಳು ಎಷ್ಟು ಎಂಬ ಆಕಾಂಕ್ಷೆಯು ಉತ್ಥಾಪ್ಯವಾದರೆ ಸಮಾಸವನ್ನು ಹೊಂದದ ಪ್ರತ್ಯೇಕವಾಗಿರುವ ಪಂಚ ಎಂಬ ಪದದಿಂದ ಅನ್ವಯವನ್ನು ತಿಳಿಯಬೇಕು. ಆವಾಗ ಐದು ಸಂಖ್ಯೆಯುಳ್ಳ ತತ್ವಸಮುದಾಯಗಳ ಐದು ಗುಂಪು ಎಂಬರ್ಥವು ಪ್ರತೀತವಾಗುತ್ತದೆಂದು ಶ್ರುತಿಯಿಂದ ತಿಳಿಯುತ್ತದೆ..

**प्रकाशः – यथेति** ।। पञ्चानां पूलानां समाहारः पञ्चपूली । पञ्चपूल्यः पञ्चेत्युक्ते पञ्चविंशतिः प्रतीयते यथा तथेत्यर्थः ।

ಉದಾಹರಣೆ - 'ಪಂಚಾನಾಂ ಪೂಲಾನಾಂ ಸಮಾಹಾರಃ ಪಂಚಪೂಲೀ' ಐದು ಹಣ್ಣುಗಳು ಸೇರಿದರೆ 'ಪಂಚಪೂಲೀ' ಎಂದು ಕರೆಯುತ್ತಾರೆ. ಅಂತಹ ಪಂಚಪೂಲಿಗಳು ಎಷ್ಟು ? ಎಂಬ ಪ್ರಶ್ನೆಯು ಬಂದಾಗ ಪಂಚ ಎಂದು ಉತ್ತರಿಸಿದರೆ ಐದು ಹಣ್ಣುಗಳ ಗುಂಪು ಐದು ಎಂದು ತಿಳಿಯುತ್ತದೆ. ಒಟ್ಟಾರೆ ಇಪ್ಪತ್ತೈದು ಹಣ್ಣುಗಳು ಎಂಬರ್ಥವು ಹೇಗೆ ಅರ್ಥವಾಗುತ್ತದೋ, ಅದರಂತೆ ಇಲ್ಲಿಯೂ ಕೂಡ ತಿಳಿಯಬೇಕು.

**प्रकाशः** – ननु समाहारपक्षे ''संख्यापूर्वो द्विगुः'' इति द्विगुसंज्ञायां ''द्विगोः'' इति ङीपि सति पञ्चजनीति स्यादित्यत आह – **पुँल्लिङ्गं त्विति** ।।

'ಪಂಚಾನಾಂ ಜನಾನಾಂ ಸಮಾಹಾರಃ' ಎಂಬ ವಿಗ್ರಹವನ್ನು ಆಶ್ರಯಿಸುವುದಾದರೆ 'ಸಂಖ್ಯಾಪೂರ್ವೋ ದ್ವಿಗುಃ' ಎಂಬ ಸೂತ್ರದಂತೆ ಸಂಖ್ಯಾಪೂರ್ವಕವಾದ ಪಂಚ ಜನಶಬ್ದಕ್ಕೆ ದ್ವಿಗುಸಂಜ್ಞೆಯು ಪ್ರಾಪ್ತವಾಗುತ್ತದೆ. ಆವಾಗ 'ದ್ವಿಗೋಃ' ಎಂಬ ಸೂತ್ರದಿಂದ 'ಙೀಪ್' ಎಂಬ ಪ್ರತ್ಯಯವು ಪ್ರಾಪ್ತವಾದರೆ 'ಪಂಚ ಜನೀ' ಎಂದಾಗಬೇಕು. ಆದರೆ ಶ್ರುತಿಯಲ್ಲಿ 'ಪಂಚ ಜನಾಃ' ಎಂಬ ಪ್ರಯೋಗವು ಇದೆಯಲ್ಲವೇ? ಎಂಬ ಪ್ರಶ್ನೆಗೆ 'ಪುಲ್ಲಿಂಗಂ ತು' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ಪುಲ್ಲಿಂಗ ಪ್ರಯೋಗವು ಕೇವಲ ಛಾಂದಸವಾದ್ದರಿಂದ ಯುಕ್ತವಾಗುತ್ತದೆಂದು ಅಭಿಪ್ರಾಯ.

**प्रकाशः – उपसङ्ग्रहादिति** ।। श्रुतिसिद्धया संख्यया तेषां स्मृतिसिद्धानामुपसङ्ग्रहादित्यर्थः । **श्रुतिमत्त्वमिति** ।। तथा च प्रागुक्तमशब्दत्वमयुक्तमित्यर्थः ।

'ಉಪಸಂಗ್ರಹಾತ್' ಎಂಬುದರ ಅಭಿಪ್ರಾಯ ಹೀಗಿದೆ - ಇಪ್ಪತ್ತೈದು ತತ್ವಗಳು ಶ್ರುತಿಸಿದ್ಧವಾದ ಸಂಖ್ಯೆಯಿಂದ ಕೂಡಿರುವ ಕಾರಣ ಸ್ಮೃತಿಸಿದ್ಧವಾದ ಪ್ರಕೃತಿಯನ್ನು ಸಂಗ್ರಹ ಮಾಡಬಹುದಾದ್ದರಿಂದ ಎಂದರ್ಥ. 'ಶ್ರುತಿಮತ್ವಮ್' ಎಂದು ಹೇಳಿದ್ದರಿಂದ ಪ್ರಕೃತಿಗೆ ಅಶಬ್ದತ್ವವು ಅಯುಕ್ತವಾಗಿದೆ ಎಂದು ಪೂರ್ವಪಕ್ಷ.

**प्रकाशः** – सूत्रशेषस्यार्थमाह – **अतिरेकाच्चेति** ।। आत्माकाशौ हित्वैव वक्ष्यमाणदिशा पञ्चविंशतिसंख्यापूर्तेरिति भावः ।। **आत्मान इति** ।। आकाशस्य चेत्यपि ग्राह्यम् ।

ಸೂತ್ರಶೇಷವನ್ನು 'ಅತಿರೇಕಾಚ್ಚ' ಎಂಬುದರಿಂದ ವ್ಯಾಖ್ಯಾನ ಮಾಡಿದ್ದಾರೆ. ಆತ್ಮ ಹಾಗೂ ಆಕಾಶ ಈ ಎರಡು ತತ್ವಗಳನ್ನು ಬಿಟ್ಟು ಇಪ್ಪತ್ತೈದು ಸಂಖ್ಯೆಯು ಪೂರ್ತಿಯಾಗಿರುವಾಗ ಪ್ರಕೃತಿಯು ಪ್ರತಿಪಾದ್ಯವೆಂದು ಹೇಳಲಾಗದು ಎಂದು ಸಿದ್ಧಾಂತ. 'ಆತ್ಮನಃ' ಎಂಬ ಪದದ ಜೊತೆಗೆ 'ಆಕಾಶಸ್ಯ ಚ' ಎಂಬುದನ್ನು ವಿವಕ್ಷಿಸಬೇಕು.

**प्रकाशः** – एतेन "तथाहि" इत्यादिपरमतानुवादसुधाग्रन्थो विवृतः । सुधोक्तं दूषणं सङ्गृह्याह – **पञ्चेति** ।। सुधोक्तदिशा विकल्पपूर्वं श्लोकं व्याचष्टे – **किमिति** ।।

ಹೀಗೆ ಹೇಳಿದ್ದರಿಂದ 'ತಥಾಹಿ' ಇತ್ಯಾದಿಯಾದ ಅದ್ವೈತಮತ ಅನುವಾದಪರವಾದ ಸುಧಾವಾಕ್ಯವನ್ನು ವಿವರಿಸಿದಂತಾಯಿತು. ಸುಧೆಯಲ್ಲಿ ಹೇಳಿದ ದೋಷವನ್ನು ಸಂಗ್ರಹಿಸುತ್ತಿದ್ದಾರೆ 'ಪಂಚ' ಇತ್ಯಾದಿ ವಾಕ್ಯದಿಂದ. ಸುಧೆಯಲ್ಲಿ ಹೇಳಿದ ಪ್ರಕಾರ ವಿಕಲ್ಪಪೂರ್ವಕವಾಗಿ 'ಪಂಚ ವಿಂಶತಿ' ಇತ್ಯಾದಿ ಶ್ಲೋಕವನ್ನು ವ್ಯಾಖ್ಯಾನ ಮಾಡುತ್ತಿದ್ದಾರೆ 'ಕಿಮ್' ಇತ್ಯಾದಿ ಗ್ರಂಥದಿಂದ.

**प्रकाशः** – "तं षड्विंशकमित्याहुः सप्तविंशमथापरे । पुरुषं निर्गुणं सांख्यमथर्वशिरसो विदुः" इत्याथर्वणिकानां श्रुतिः । तन्मात्राणीति शब्दादीनि । भूतानामादिर्भूतादिरहङ्कारः ।।

ತಂ ಷಡ್ವಿಂಶಕಮಿತ್ಯಾಹುಃ ಸಪ್ತವಿಂಶಮಥಾಪರೇ ।
ಪುರುಷಂ ನಿರ್ಗುಣಂ ಸಾಂಖ್ಯಮಥರ್ವಶಿರಸೋ ವಿದುಃ ॥

ತತ್ವಗಳನ್ನು ಕೆಲವರು ಇಪ್ಪತ್ತಾರು ಎನ್ನುತ್ತಾರೆ. ಕೆಲವರು ಇಪ್ಪತ್ತೇಳು ಎನ್ನುತ್ತಾರೆ. ಹೀಗೆ ಆಥರ್ವಣಿಕ ಶ್ರುತಿಯು ಹೇಳಿದೆ. 'ತನ್ಮಾತ್ರಾಣಿ' ಎಂದರೆ ಶಬ್ದಾದಿಗಳು ಎಂದರ್ಥ. 'ಭೂತಾದಿಃ' ಎಂಬುದಕ್ಕೆ 'ಭೂತಾನಾಮ್ ಆದಿಃ ಭೂತಾದಿಃ' ಎಂಬ ವಿಗ್ರಹವನ್ನು ಮಾಡಿ ಅಹಂಕಾರತತ್ವವೆಂಬರ್ಥವನ್ನು ತಿಳಿಯಬೇಕು. ಸಕಲಭೂತಗಳಿಗೆ ಅಹಂಕಾರತತ್ವವೇ ಪ್ರಥಮಸ್ಥಾನದಲ್ಲಿರುವುದರಿಂದ ಈ ಅರ್ಥವು ದೊರೆಯುತ್ತದೆ.

**प्रकाशः – यस्येति** ।। "यस्याहङ्कारः शरीरं योऽहङ्कारमन्तरे सञ्चरन् यमहङ्कारो न वेद । यस्य बुद्धिः शरीरं यो बुद्धिमन्तरे सञ्चरन् यं बुद्धिर्नवेद । यस्य चित्तं शरीरं यश्चित्तमन्तरे सञ्चरन् यं चित्तं न वेद । यस्याव्यक्तं शरीरं योऽव्यक्तमन्तरे सञ्चरन् यमव्यक्तं न वेद" इत्यादिसुबालोपनिषच्छ्रुतिः ।।

ಯಸ್ಯಾಹಂಕಾರಃ ಶರೀರಂ ಯೋऽಹಂಕಾರಮಂತರೇ ಸಂಚರನ್ ಯಮಹಂಕಾರೋ ನ ವೇದ ।
ಯಸ್ಯ ಬುದ್ಧಿಃ ಶರೀರಂ ಯೋ ಬುದ್ಧಿಮಂತರೇ ಸಂಚರನ್ ಯಂ ಬುದ್ಧಿರ್ನವೇದ ।
ಯಸ್ಯ ಚಿತ್ತಂ ಶರೀರಂ ಯಶ್ಚಿತ್ತಮಂತರೇ ಸಂಚರನ್ ಯಂ ಚಿತ್ತಂ ನ ವೇದ ।
ಯಸ್ಯಾವ್ಯಕ್ತಂ ಶರೀರಂ ಯೋऽವ್ಯಕ್ತಮಂತರೇ ಸಂಚರನ್ ಯಮವ್ಯಕ್ತಂ ನ ವೇದ ॥

ಇದು ಸುಬಾಲೋಪನಿಷತ್ತಿನ ಶ್ರುತಿವಾಕ್ಯವಾಗಿದೆ.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

**प्रकाशः – पञ्चभिरिति।।** इदं चात्रैवानुव्याख्यानोदाहृतभागवतवाक्यं कापिलेयगतम्। पञ्चभिर्महाभूतैः पञ्चभिस्तन्मात्राभिर्महदहंकारमनोबुद्धिभिर्दशभिरिन्द्रियैश्च ब्रह्म = पूरितम् एतच्चतुर्विंशतिकं गणं प्रधानकार्यं विदुरिति सुधोक्तार्थः। ''सात्विको राजसश्चैव तामसश्च त्रिधा महान्'' । त्रिविधोऽयमिति पूर्वशेषः ।।

'ಪಂಚಭಿಃ ಪಂಚಭಿರ್ಬ್ರಹ್ಮ' ಎಂಬುದು ಇದೇ ಅಧಿಕರಣದಲ್ಲಿ ಉದಾಹರಿಸಿದ ಭಾಗವತದ ತೃತೀಯಸ್ಕಂಧದ ಕಪಿಲಗೀತೆಯ ಮಾತು. ಇದಕ್ಕೆ ನ್ಯಾಯಸುಧೆಯಲ್ಲಿ ಹೀಗೆ ಅರ್ಥವನ್ನು ಹೇಳಿದ್ದಾರೆ. ಪಂಚಭಿಃ = ಐದು ಮಹಾಭೂತಗಳಿಂದ 'ಪಂಚಭಿಃ' = ಐದು ತನ್ಮಾತ್ರಗಳಿಂದ ಮಹತ್ತತ್ವ, ಅಹಂಕಾರತತ್ವ, ಮನಸ್ಸು, ಬುದ್ಧಿ ಇವುಗಳಿಂದ, ದಶಭಿಃ = ಹತ್ತು ಇಂದ್ರಿಯಗಳಿಂದ, ಬ್ರಹ್ಮ = ತುಂಬಿದ, ಏತತ್ ಚತುರ್ವಿಂಶತಿಕಂ = ಈ ಇಪ್ಪತ್ನಾಲ್ಕು, ಗಣಂ = ತತ್ವಗಳು, ಪ್ರಧಾನಕಾರ್ಯಂ ವಿದುಃ = ಪ್ರಕೃತಿಯ ಕಾರ್ಯವೆಂದು ತಿಳಿಯುತ್ತಾರೆ ಎಂದು.

'ಸಾತ್ವಿಕೋ ರಾಜಸಶ್ಚೈವ ತಾಮಸಶ್ಚ ತ್ರಿಧಾ ಮಹಾನ್' ಎಂಬ ಹಿಂದಿನ ವಾಕ್ಯವನ್ನು 'ತ್ರಿವಿಧೋಽಯಮ್' ಎಂಬಲ್ಲಿ ಶೇಷಪೂರ್ಣ ಮಾಡಿಕೊಳ್ಳಬೇಕು.

**प्रकाशः – तावतेति ।।** ''यस्मिन्'' इति वाक्याप्रतिपाद्यत्वमात्रेणेत्यर्थः । सूत्रार्थमपि सुधोक्तविवरणेन निराह – **यच्चेत्यादिना ।।**

'ತಾವತಾ' ಎಂದರೆ 'ಯಸ್ಮಿನ್ ಪಂಚ' ಎಂಬ ವಾಕ್ಯದಿಂದ ಪ್ರತಿಪಾದ್ಯವೆಂದು ಒಪ್ಪದಿದ್ದರೆ ಎಂದರ್ಥ. ಅದ್ವೈತಿಗಳ ಸೂತ್ರಾರ್ಥವನ್ನೂ ಕೂಡ ನ್ಯಾಯಸುಧೆಗೆ ಅನುಸಾರಿಯಾಗಿ ನಿರಾಕರಿಸುತ್ತಿದ್ದಾರೆ 'ಯಚ್ಚ' ಇತ್ಯಾದಿ ವಾಕ್ಯದಿಂದ.

**प्रकाशः – अन्यथेति ।।** एवं क्रोडीकारकधर्मानिरूपणे सूत्रकारस्याप्येवमन्यत्र निरूपणं न स्यात्, व्याहतिप्रसङ्गादित्यर्थः । एतेन ''नहि तन्त्रसिद्धेषु तत्वेषु पञ्चसु पञ्चस्वनुगतसंख्यानिवेशनिमित्तं जात्याद्यस्ति'' इति रामानुजभाष्योक्तं प्रत्युक्तम् ।

'ಅನ್ಯಥಾ' ಎಂಬ ವಾಕ್ಯದ ಅಭಿಪ್ರಾಯ ಹೀಗಿದೆ - ಹೀಗೆ ಇಪ್ಪತ್ತೈದು ತತ್ವಗಳನ್ನು ಕ್ರೋಢೀಕರಿಸಿ ನಿರೂಪಣೆ ಮಾಡದಿದ್ದರೆ ಸೂತ್ರಕಾರರೂ ಕೂಡ ಇದೇ ರೀತಿಯಾಗಿ ಬೇರೆಡೆ ವಿವರಿಸಿದ್ದು ತಪ್ಪಾಗಬೇಕಾದೀತು. ಆದ್ದರಿಂದ ಸೂತ್ರಕಾರರಿಗೆ ವ್ಯಾಹತಿ ದೋಷವು ಬರಬೇಕಾದೀತು ಎಂದಭಿಪ್ರಾಯ.

ಹೀಗೆ ಅದ್ವೈತಿಗಳನ್ನು ನಿರಾಕರಣೆ ಮಾಡಿದ್ದರಿಂದ 'ನಹಿ ತಂತ್ರಸಿದ್ಧೇಷು ತತ್ವೇಷು ಪಂಚಸು ಪಂಚಸ್ವನು-ಗತಸಂಖ್ಯಾನಿವೇಶನಿಮಿತ್ತಂ ಜಾತ್ಯಾದ್ಯಸ್ತಿ' ಸಾಂಖ್ಯಸ್ಮೃತಿಯಿಂದ ಸಿದ್ಧವಾದ ತತ್ವಗಳಲ್ಲಿ ಐದರ ವಿಭಾಗಗಳನ್ನು ಮಾಡಲು ಪ್ರತ್ಯೇಕವಾದ ಧರ್ಮಗಳಿರುವುದಿಲ್ಲ ಎಂಬ ರಾಮಾನುಜ ಭಾಷ್ಯದ ಅಭಿಪ್ರಾಯವನ್ನು ನಿರಾಕರಣೆ ಮಾಡಿದಂತಾಯಿತು.

**गुरुराजीयम्** – ननु साधकोक्त्यनन्तरमेव बाधकोद्धारः सङ्गतः । तत्कथं साधकमनुक्त्वैव बाधकमेव प्रथममुद्धृतमित्यत आह – **अत्र चेति** ।। ननु टीकायां द्वितीयं सूत्रं साधकोक्तिपरतया व्याख्यातम् । तत्कथं प्रकारान्तरेण व्याख्यायत इत्यत आह – **द्वितीय इति** ।। ननु पञ्चजना इत्ययुक्तम् । समाहारस्यैकत्वादेकवचने क्लीबताचेति क्लीबत्वे च पञ्चजनमिति भवितव्यम् । न चाकारान्तोत्तरपदो द्विगुःस्त्रियामिष्ट इति स्त्रीलिङ्गप्राप्त्या कथं नपुंसकत्वमापाद्यत इति वाच्यम् । पात्रादौ निषेधेन स्त्रीलिङ्गबाधात् । तथा चापवादापवादात्पुनरुत्सर्गस्योत्थितिरिति न्यायेन नपुंसकत्वं स्यादित्यत आह – **पञ्चजना इति पुँल्लिङ्गं त्विति** ।। **अस्माकमिति** ।। अस्माभिर्यस्मिन्पञ्चजना इति वाक्ये पञ्चविंशतितत्वानां प्रतिपाद्यत्वानभ्युपगमात्।। **तावतेति** ।। यस्मिन्पञ्च जना इति वाक्याप्रतिपाद्यत्वेऽपीत्यर्थः । वाक्यान्तर-प्रतिपाद्यत्वाभावाभावादिति भावः ।



'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಬೃಹದಾರಣ್ಯಕೋಪನಿಷತ್ತಿನ ವಾಕ್ಯವೇ ಈ ಅಧಿಕರಣದ ವಿಷಯ. ಈ ವಾಕ್ಯವು ಸಾಂಖ್ಯಸಿದ್ಧಾಂತದಲ್ಲಿ ಪ್ರತಿಪಾದನೆ ಮಾಡಲ್ಪಟ್ಟ ಇಪ್ಪತ್ತೈದು ತತ್ವಗಳನ್ನು ನಿರೂಪಣೆ ಮಾಡುತ್ತಿದೆ. ಶ್ರುತಿಯಲ್ಲಿ 'ಪಂಚ ಜನ' ಎಂಬ ಶಬ್ದವು ಸಮಾಸವನ್ನು ಹೊಂದಿದೆ. ಇನ್ನೊಂದು 'ಪಂಚ' ಶಬ್ದವು ಸಮಾಸವನ್ನು ಹೊಂದಿಲ್ಲ. ಸಮಾಸ ಹೊಂದಿರುವ ಪಂಚ ಜನ ಶಬ್ದಕ್ಕೆ ಐದು ತತ್ವಗಳು ಎಂದರ್ಥ. ಸಮಾಸ ಹೊಂದದ ಪಂಚ ಶಬ್ದಕ್ಕೆ ಐದು ಎಂದರ್ಥ. ಆದ್ದರಿಂದ ಐದೈದು ತತ್ವಗಳ ಐದರ ಗುಂಪು ಎಂಬರ್ಥವು ಇದರಿಂದ ದೊರೆಯುತ್ತದೆ. ಆದ್ದರಿಂದ ಇಪ್ಪತ್ತೈದು ತತ್ವಗಳನ್ನು 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯು ಪ್ರತಿಪಾದನೆ ಮಾಡುತ್ತಿದೆ. ಆದ್ದರಿಂದ ಪ್ರಕೃತಿಯು ಶ್ರುತಿಪ್ರತಿಪಾದ್ಯವಾಗಿದೆ ಎಂದು ಪೂರ್ವಪಕ್ಷ.

ಈ ವಾಕ್ಯವು ಇಪ್ಪತ್ತೈದು ತತ್ವಗಳನ್ನು ಪ್ರತಿಪಾದನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಯಾವುದೇ ಶ್ರುತಿಯಲ್ಲಿ ದ್ವಿತ್ವಾದಿ ಸಂಖ್ಯೆಗಳ ನಿರ್ದೇಶವಿರಬೇಕೆಂದರೆ ಉಪಸಂಗ್ರಾಹಕ ಧರ್ಮಗಳನ್ನು ಹೇಳಲೇಬೇಕಾಗುತ್ತದೆ. ಪ್ರಕೃತ ಅಂತಹ ಉಪಸಂಗ್ರಾಹಕ ಧರ್ಮಗಳಿಲ್ಲದ ಕಾರಣ ಈ ಶ್ರುತಿಯು ಇಪ್ಪತ್ತೈದು ತತ್ವವನ್ನು ಪ್ರತಿಪಾದನೆ ಮಾಡುತ್ತಿದೆಯೆಂದು ಸರ್ವಥಾ ಹೇಳಲಾಗದು. ಏಕೆಂದರೆ 'ನಾನಾಭಾವಾತ್' ಈ ತತ್ವಗಳಲ್ಲಿ ಬೇರೆರೀತಿಯಾದ ಗುಂಪುಗಳನ್ನು ಹೇಳಬಹುದೇ ಹೊರತು, ಐದರ ಐದು ಗುಂಪುಗಳನ್ನು ಹೇಳಲು ಸಾಧ್ಯವಿಲ್ಲ. ಇಪ್ಪತ್ತೈದು ತತ್ವಗಳ ಮಧ್ಯದಲ್ಲಿ ಅಂತಹ ಯಾವುದೇ ಸಂಗ್ರಾಹಕ ಧರ್ಮಗಳು ಕಾಣಿಸುತ್ತಿಲ್ಲ. 'ಅತಿರೇಕಾಚ್ಚ' = ಆತ್ಮ ಹಾಗೂ ಆಕಾಶಗಳನ್ನು ಇಪ್ಪತ್ತೈದು ತತ್ವಗಳಿಗಿಂತ ಅತಿರಿಕ್ತವಾಗಿ ಉಲ್ಲೇಖಿಸಲಾಗಿದೆ. ಆದ್ದರಿಂದಲೂ ಇಪ್ಪತ್ತೈದು ಎಂಬ ಸಂಖ್ಯೆಯನ್ನು ನಿರ್ವಹಣೆ ಮಾಡಲು ಬರುವುದಿಲ್ಲ. ಆದ್ದರಿಂದ ಈ ವಾಕ್ಯವು ಸಾಂಖ್ಯರು ಹೇಳುವ ಇಪ್ಪತ್ತೈದು ತತ್ವಗಳನ್ನು ಪ್ರತಿಪಾದನೆ ಮಾಡುತ್ತಿಲ್ಲ. ಇಷ್ಟು ಸಿದ್ಧಾಂತ.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

ಅದ್ವೈತಿಗಳ ಈ ಅಧಿಕರಣ ಶರೀರ ಅಸಾಧುವಾಗಿದೆ.

ಪಂಚವಿಂಶತಿತತ್ವಾನಿ ಶ್ರುತಿಸ್ಮೃತಿಸಮಾಜತಃ ।
ಪ್ರಮಿತಾನ್ಯಪಲಪ್ಯಂತೇ ಕಥಂ ವೈದಿಕಮಾನಿನಾ ॥೧॥

ಇಪ್ಪತ್ತೈದು ತತ್ವಗಳು ಶ್ರುತಿ ಹಾಗೂ ಸ್ಮೃತಿಗಳೆಂಬ ಸಮಾಜದಿಂದ ಪ್ರಮಿತವಾಗಿರುವಾಗ ವೈದಿಕತತ್ವಗಳಿಗೆ ಮಾನ್ಯತೆಯನ್ನು ನೀಡುವ ನೀನು ಹೇಗೆ ತಾನೇ ಅಪಲಾಪ ಮಾಡುವಿ? ಮತ್ತು ಪಂಚವಿಂಶತಿ ತತ್ವಗಳೇ ಅಪ್ರಾಮಾಣಿಕ ಎಂದು ಅದ್ವೈತಿಗೆ ಹೇಳಲಾಗದು.

'ತಂ ಷಡ್ವಿಂಶಮಿತಿ ಪ್ರಾಹುಃ', 'ಪಂಚಭಿಃ ಪಂಚಭಿರ್ಬ್ರಹ್ಮ' ಇವೇ ಮೊದಲಾದ ಶ್ರುತಿ-ಸ್ಮೃತಿಗಳು ಅನೇಕ ಬಾರಿ ತತ್ವಗಳನ್ನು ಪ್ರತಿಪಾದನೆ ಮಾಡುತ್ತಿವೆ. ಇನ್ನು ಈ ವಾಕ್ಯವು ತತ್ವಪರವಲ್ಲವೆನ್ನಬೇಕು. ಹಾಗೇ ಹೇಳಿದ ಮಾತ್ರದಿಂದ ಪ್ರಕೃತಿಗೆ ಶಬ್ದಪ್ರತಿಪಾದ್ಯತ್ವವೇ ಇಲ್ಲವೆಂಬ ಸಮರ್ಥನೆಯನ್ನು ಮಾಡಲಾಗದು. ಸಾಂಖ್ಯರು ಹೇಳುವ ಇಪ್ಪತ್ತೈದು ತತ್ವಗಳು ಎಲ್ಲಾ ವೇದಾಂತಿಗಳೂ ಕೂಡ ಪ್ರಾಮಾಣಿಕವೆಂದು ಒಪ್ಪಲೇಬೇಕು. ಹಾಗೊಪ್ಪದಿದ್ದರೆ ಸೂತ್ರಕಾರರ ಮಾತಿನಿಂದಲೇ ವಿರೋಧ ಬರುತ್ತದೆ. ಭಾಗವತದ ತೃತೀಯಸ್ಕಂಧದಲ್ಲಿ 'ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ । ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ' ಎಂದು ಪುರುಷನನ್ನು ಬಿಟ್ಟು ಇಪ್ಪತ್ನಾಲ್ಕು ತತ್ವಗಳನ್ನು ಪ್ರತಿಪಾದನೆ ಮಾಡಿದ್ದಾರೆ. ಆದ್ದರಿಂದ ಇಪ್ಪತ್ತೈದು ತತ್ವಗಳು ಪ್ರಾಮಾಣಿಕವಾಗಿದ್ದರೂ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಬೃಹದಾರಣ್ಯಕದ ಈ ವಾಕ್ಯದಲ್ಲಿ ತತ್ವಗಳು ಪ್ರತಿಪಾದ್ಯವಾಗಿಲ್ಲ ಎಂದಷ್ಟೇ ಹೇಳಬೇಕು. ಹೀಗೆ ಹೇಳಿದಾಗ ಏನೂ ಲಾಭವಾಗುವುದಿಲ್ಲ. ಏಕೆಂದರೆ ಸಾಂಖ್ಯರು ಯಾವ ಪ್ರಕೃತಿಯನ್ನು ಶಬ್ದಪ್ರತಿಪಾದ್ಯವೆನ್ನುತ್ತಾರೋ, ಅದನ್ನು ಅಲ್ಲಗಳೆಯಲು ಈ ಸೂತ್ರಗಳು ಹೊರಟಿವೆ ಎಂಬುದು ನಿಮ್ಮ ಸಿದ್ಧಾಂತ. ಆದರೆ 'ಯಸ್ಮಿನ್ ಪಂಚ' ಎಂಬ ಶಬ್ದದಿಂದಷ್ಟೇ ಪ್ರತಿಪಾದ್ಯವಲ್ಲವೆಂದು ಹೇಳಿದಾಗ ಬೇರೊಂದು ಶಬ್ದದಿಂದ ಪ್ರತಿಪಾದ್ಯವಾಗಬಹುದು. ಮತ್ತು ಇಪ್ಪತ್ತೈದು ತತ್ವಗಳನ್ನು ಐದು ಗುಂಪುಗಳಲ್ಲಿ ವಿಂಗಡಿಸಲು ಯಾವುದೇ ಸಂಗ್ರಾಹಕ ಧರ್ಮಗಳಿಲ್ಲ ಎಂದು ಹೇಳಿದ್ದರು. ಇದೂ ಕೂಡ ಸರಿಯಲ್ಲ. ೧. ಪಂಚ ತನ್ಮಾತ್ರಗಳು, ೨. ಪಂಚಭೂತಗಳು, ೩. ಪಂಚಜ್ಞಾನೇಂದ್ರಿಯಗಳು, ೪. ಪಂಚಕರ್ಮೇಂದ್ರಿಯಗಳು, ೫. ಉಳಿದ ಐದು. ಹೀಗೆ ಐದೈದರ ಗುಂಪುಗಳನ್ನು ಸುಲಭವಾಗಿ ಮಾಡಬಹುದು.

/////////////////////////////////////////////

## ಇಪ್ಪತ್ತೈದು ತತ್ವಗಳಲ್ಲಿ ಸಂಗ್ರಾಹಕಧರ್ಮಗಳಿವೆ

### तात्पर्यचन्द्रिका

**ननु श्रुतावाकाशात्मनोः पृथगुक्तत्वात्तदतिरेकपरिहाराय सत्वरजस्तमोरूपान् प्रकृतिभागानादाय सत्वरजस्तमोमहदहंकाराः पृथिव्यप्तेजोवायुघ्राणानि रसनचक्षुस्त्वक्-श्रोत्रवाचः पाणिपादपायूपस्थमनांसिशब्दस्पर्शरूपरसगन्धाः इति पञ्चपञ्चकानि वाच्यानि । तत्र चाद्ये पञ्चकचतुष्टये नास्त्युपसङ्ग्राहकधर्मः**

ಅನುವಾದ - ಆಕ್ಷೇಪ - 'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ಶ್ರುತಿಯಲ್ಲಿ ಆಕಾಶ ಹಾಗೂ ಆತ್ಮರನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ. ಆದ್ದರಿಂದ ಇಪ್ಪತ್ತೈದು ತತ್ವಗಳಲ್ಲಿ ಆಕಾಶ ಹಾಗೂ ಆತ್ಮರನ್ನು ಸೇರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸತ್ವರಜಸ್ತಮೋ-ರೂಪವಾದ ಪ್ರಕೃತಿಯ ಭಾಗವನ್ನು ಸ್ವೀಕರಿಸಿ ಐದರ ಗುಂಪನ್ನು ಮಾಡಬೇಕು. ಸತ್ವ, ರಜಸ್ಸು, ತಮಸ್ಸು, ಮಹತ್ತತ್ವ, ಅಹಂಕಾರತತ್ವಈ ಐದನ್ನೂ ಸೇರಿಸಿದಾಗ ಒಂದು ಗುಂಪಾಗುತ್ತದೆ. ಜ್ಞಾನೇಂದ್ರಿಯಗಳ ನಡುವೆ ಇರುವ ಘ್ರಾಣೇಂದ್ರಿಯವನ್ನು ಪಂಚಭೂತಗಳಲ್ಲಿ ಸೇರಿಸಬೇಕು. ಏಕೆಂದರೆ ಆಕಾಶವನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಪಂಚಭೂತಗಳಲ್ಲಿ ಆಕಾಶವನ್ನು ಸೇರಿಸಿಕೊಳ್ಳಲಾಗದು. ಆದ್ದರಿಂದ ಪೃಥಿವೀ, ಅಪ್, ತೇಜಸ್ಸು, ವಾಯು, ಘ್ರಾಣೇಂದ್ರಿಯ ಈ ಐದು ಸೇರಿ ಒಂದು ಗುಂಪಾಗುತ್ತವೆ. ಅನಂತರ ಜ್ಞಾನೇಂದ್ರಿಯದಲ್ಲಿ ಘ್ರಾಣೇಂದ್ರಿಯವನ್ನು ಹಿಂದೆ ಸೇರಿಸಿದ್ದರಿಂದ ಮುಂದಿನ ಕರ್ಮೇಂದ್ರಿಯಗಳ ನಡುವೆ ಇರುವ ವಾಗಿಂದ್ರಿಯವನ್ನು ಜ್ಞಾನೇಂದ್ರಿಯಗಳ ನಡುವೆ ಸೇರಿಸಬೇಕು. ಆವಾಗ ರಸನ, ಚಕ್ಷುಷ್, ತ್ವಕ್, ಶ್ರೋತ್ರ, ವಾಕ್ ಈ ಐದು ಸೇರಿ ಒಂದು ಗುಂಪಾಗಬೇಕು. ಇದರಂತೆ ಕರ್ಮೇಂದ್ರಿಯಗಳ ನಡುವೆ ಮನಸ್ಸನ್ನು ಸೇರಿಸಿದಾಗ ಪಾಣಿ, ಪಾದ, ಉಪಾಯು, ಉಪಸ್ಥ ಮನಸ್ಸು ಇವುಗಳು ಒಂದು ಗುಂಪಾಗುತ್ತವೆ. ಅನಂತರ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಎಂಬ ಪಂಚತನ್ಮಾತ್ರಗಳು ಮತ್ತೊಂದು ಗುಂಪಾಗುತ್ತವೆ. ಹೀಗೆ ಐದೈದರ ಐದು ಗುಂಪುಗಳನ್ನು ನಿರ್ವಹಣೆ ಮಾಡಿ, ಇಪ್ಪತ್ತೈದು ಎಂಬ ಸಂಖ್ಯೆಯನ್ನು ಉಪಪಾದನೆ ಮಾಡಬೇಕು.

ಇದರ ಮೊದಲನೆಯ ಗುಂಪಾಗಿರುವ ಸತ್ವಾದಿ ಐದರಲ್ಲಿ ಯಾವುದೇ ಉಪಸಂಗ್ರಾಹಕ ಧರ್ಮವು ಇರುವುದಿಲ್ಲ.

**इति चेन्न । आकाशस्थाने घ्राणस्य घ्राणस्थाने वाचो वाक्स्थाने च मनसो निवेशन उपसंग्राहकाभावेऽप्याकाशमात्रस्थाने मनो निवेश्य सत्वादिपञ्चकस्य "मनसस्तु पराबुद्धिः" इत्यादिश्रुतिसिद्धेन मनःपरत्वेन पृथिव्यादेश्च विंशत्यतिरिक्तत्वेन क्रोडीकरण उपसंग्राहकाणां सत्त्वात् ।**

ಸಮಾಧಾನ - ಇದು ತಪ್ಪು. ಒಂದು ವೇಳೆ ಪಂಚಭೂತಗಳಲ್ಲಿ ಆಕಾಶದ ಸ್ಥಾನದಲ್ಲಿ ಘ್ರಾಣೇಂದ್ರಿಯವನ್ನು ಸೇರಿಸಿ ಪಂಚಜ್ಞಾನೇಂದ್ರಿಯಗಳಲ್ಲಿ ಘ್ರಾಣೇಂದ್ರಿಯದ ಸ್ಥಾನದಲ್ಲಿ ವಾಗಿಂದ್ರಿಯವನ್ನು ಸೇರಿಸಿ, ಪಂಚಕರ್ಮೇಂದ್ರಿಯಗಳ ನಡುವೆ ವಾಗಿಂದ್ರಿಯ ಸ್ಥಾನದಲ್ಲಿ ಮನಸ್ಸೆಂಬ ಇಂದ್ರಿಯವನ್ನು ಸೇರಿಸಿದಲ್ಲಿ ಯಾವುದೇ ಉಪಸಂಗ್ರಾಹಕ ಧರ್ಮಗಳು ಇರುತ್ತಿರಲಿಲ್ಲ. ಆದರೆ ಹೀಗೆ ಐದೈದರ ಗುಂಪನ್ನು ಮಾಡುವುದೇ ತಪ್ಪು. ಗುಂಪುಗಳ ರಚನೆಯು ಐಚ್ಛಿಕವಾದ್ದರಿಂದ ಹೇಗೆ ಐದೈದರ ಗುಂಪನ್ನು ಮಾಡಿದರೆ ಉಪಸಂಗ್ರಾಹಕ ಧರ್ಮಗಳನ್ನು ಹೇಳಲು ಸಾಧ್ಯವಿರುತ್ತದೆಯೋ, ಅದರಂತೆಯೇ ಮಾಡಬೇಕಾಗುತ್ತದೆ. ಆದ್ದರಿಂದ ಪೃಥಿವ್ಯಾದಿ ಪಂಚಭೂತಗಳಲ್ಲಿ ಘ್ರಾಣೇಂದ್ರಿಯವನ್ನು

ಸೇರಿಸದೇ ಮನಸ್ಸನ್ನು ಸೇರಿಸಬೇಕು. ಆವಾಗ ಘ್ರಾಣಾದಿ ಐದು ಜ್ಞಾನೇಂದ್ರಿಯಗಳು ಒಂದು ಗುಂಪಾಗುತ್ತವೆ. ವಾಗಿಂದ್ರಿಯವೇ ಮೊದಲಾದ ಐದು ಕರ್ಮೇಂದ್ರಿಯಗಳು ಒಂದಾಗುತ್ತವೆ. ಶಬ್ದಸ್ಪರ್ಶಾದಿಗಳೂ ಕೂಡ ಪಂಚತನ್ಮಾತ್ರಗಳೆಂದು ಒಂದು ಗುಂಪಾಗುತ್ತವೆ. ಮೊದಲಿನ ಸತ್ತ್ವ, ರಜಸ್ಸು, ತಮಸ್ಸು, ಮಹತ್ತತ್ತ್ವ, ಅಹಂಕಾರತತ್ವ ಈ ಐದರಲ್ಲಿ ಮನಃಪರತ್ವವೆಂಬ ಸಂಗ್ರಾಹಕ ಧರ್ಮವನ್ನು ಹೇಳಬೇಕು. ಏಕೆಂದರೆ ಪೃಥಿವ್ಯಾದಿಗಳ ನಡುವೆ ಮನಸ್ತತ್ವವನ್ನು ಸೇರಿಸಿದ್ದರಿಂದ. ಈ ಪೃಥಿವ್ಯಾದಿಗಳಲ್ಲಿ 'ಪಂಚಭೂತತ್ವ' ಎಂಬ ಉಪಸಂಗ್ರಾಹಕಧರ್ಮವಿಲ್ಲದಿದ್ದರೂ 'ವಿಂಶತ್ಯತಿರಿಕ್ತತ್ವ' ಎಂಬ ಉಪಸಂಗ್ರಾಹಕಧರ್ಮ ಇರುತ್ತದೆ. ಆದ್ದರಿಂದ ಮೊದಲನೇ ಗುಂಪಿನಲ್ಲಿ 'ಮನಃಪರತ್ವ' ಎಂಬುದು ಉಪಸಂಗ್ರಾಹಕಧರ್ಮ. ಎರಡನೆಯ ಗುಂಪಿನಲ್ಲಿ 'ವಿಂಶತ್ಯತಿರಿಕ್ತತ್ವ' ಎಂಬುದು ಉಪಸಂಗ್ರಾಹಕಧರ್ಮ. ಮೂರನೆಯ ಗುಂಪಿನಲ್ಲಿ ಜ್ಞಾನೇಂದ್ರಿಯತ್ವ, ನಾಲ್ಕನೆಯ ಗುಂಪಿನಲ್ಲಿ ಕರ್ಮೇಂದ್ರಿಯತ್ವ, ಐದನೆಯ ಗುಂಪಿನಲ್ಲಿ ಪಂಚತನ್ಮಾತ್ರತ್ವ ಹೀಗೆ ಐದು ಗುಂಪುಗಳಲ್ಲಿಯೂ ಪ್ರತ್ಯೇಕ ಪ್ರತ್ಯೇಕವಾದ ಉಪಸಂಗ್ರಾಹಕಧರ್ಮಗಳು ಇರುತ್ತವೆ. ಆದ್ದರಿಂದ ಪಂಚವಿಂಶತಿತ್ವವು ಸರಿಯಾಗಿ ಉಪಪನ್ನವಾಗುತ್ತದೆ.

**कथं चास्मिन्पक्षेऽतिरेकः । आकाशात्मातिरिक्तत्रयोविंशतितत्त्वेषु प्रकृति-भागोपादानेन पञ्चविंशतित्वसंख्यानिर्वाहात् ।**

ಮತ್ತು ಈ ಪಕ್ಷದಲ್ಲಿ 'ಅತಿರೇಕಾಚ್ಚ' ಎಂಬ ಸೂತ್ರದ ಭಾಗಕ್ಕೆ ಮಾಡಿದ ವ್ಯಾಖ್ಯಾನವೂ ಕೂಡ ಹೇಗೆ ಸರಿಯಾಗುತ್ತದೆ. ಏಕೆಂದರೆ ಆಕಾಶ ಹಾಗೂ ಆತ್ಮ ಈ ಎರಡು ತತ್ವಗಳನ್ನು ಬಿಟ್ಟರೆ, ಇಪ್ಪತ್ಮೂರು ತತ್ವಗಳಾಗುತ್ತವೆ. ಆದರೆ ಪ್ರಕೃತಿಯ ಭಾಗವೆನಿಸಿದ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ತತ್ವಗಳನ್ನು ಅತಿರಿಕ್ತವೆಂದು ವಿವಕ್ಷಿಸಿದಾಗ 'ಪಂಚವಿಂಶತಿತ್ವ' ಎಂಬ ಸಂಖ್ಯೆಯು ನಿರ್ವಾಹವಾಗುತ್ತದೆ. ಆದ್ದರಿಂದ 'ಅತಿರೇಕಾಚ್ಚ' ಎಂಬ ಸೂತ್ರವ್ಯಾಖ್ಯಾನವು ಸರಿಯಲ್ಲ.

**नच वाच्यं प्रकृतिभागोपादानेन पञ्चविंशतित्वनिर्वाहे नानाभावोऽन्यथा त्वतिरेक इति । तथात्वे नानाभावातिरेकयोर्वैकल्पिकत्वेन सौत्रस्य चशब्दस्य समुच्चयार्थत्वोमुक्त्ययोगात् ।**

ಪ್ರಶ್ನೆ - ಪ್ರಕೃತಿಭಾಗವೆನಿಸಿದ ಸತ್ವಾದಿಗುಣಗಳನ್ನು ಸ್ವೀಕರಿಸಿ 'ಪಂಚವಿಂಶತಿತ್ವ' ಎಂಬ ಸಂಖ್ಯೆಯನ್ನು ನಿರ್ವಹಿಸುವುದಾದರೆ ಸಂಗ್ರಾಹಕ ಧರ್ಮಗಳಿರುವುದಿಲ್ಲ. ಒಂದುವೇಳೆ ಪ್ರತ್ಯೇಕವಾಗಿ ಪರಿಗಣಿಸದೇ ಆಕಾಶಾದಿಗಳನ್ನು ಪಂಚವಿಂಶತಿ ತತ್ವಗಳಲ್ಲೇ ಸೇರಿಸುವುದಾದರೆ, 'ಆಕಾಶಶ್ಚ ಪ್ರತಿಷ್ಠಿತಃ' ಎಂಬ ಪ್ರತಿಗುಕ್ತಿಯ ವಿರೋಧವು ಬರುತ್ತದಲ್ಲವೇ?

ಪರಿಪೂರ್ಣಚಂದ್ರಿಕಾ

ಉತ್ತರ - ಹಾಗಾದರೆ 'ನಾನಾಭಾವಾತ್' 'ಅತಿರೇಕಾತ್' ಎಂಬೆರಡು ಹೇತುಗಳಿಗೆ ವೈಕಲ್ಪಿಕವನ್ನು ನೀವು ಹೇಳಬೇಕಿತ್ತು. ಆದರೆ ಸೂತ್ರದಲ್ಲಿರುವ ಸಮುಚ್ಚಯಾರ್ಥದಲ್ಲಿ 'ಚ'ಶಬ್ದವನ್ನು ಸೂತ್ರಕಾರರು ಪ್ರಯೋಗಿಸಿರುತ್ತಾರೆ. ನೀವಾದರೂ 'ಚ'ಶಬ್ದಕ್ಕೆ ವಿಕಲ್ಪ ಎಂಬರ್ಥವನ್ನು ಹೇಳಬೇಕಿತ್ತು. ಆದ್ದರಿಂದ ನಿಮ್ಮ ವ್ಯಾಖ್ಯಾನವು ಅಸ್ವರಸವಾಗಿದೆ.

**प्रकाशः –**

भामत्याद्युक्तानुगतधर्माभावप्रकारमाशङ्क्य निराह – **नन्विति** ।।

ವಿವರಣೆ - 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿ ಐದೈದು ತತ್ವಗಳಲ್ಲಿ ಅನುಗತಧರ್ಮಗಳನ್ನು ಸಂಗ್ರಹಿಸಲು ಸಾಧ್ಯವಿಲ್ಲ. ಆದಕಾರಣ ಪ್ರಕೃತಿಯನ್ನು ಈ ವಾಕ್ಯ ಪ್ರತಿಪಾದನೆ ಮಾಡುವುದಿಲ್ಲ ಎಂಬುದಾಗಿ ಹಿಂದೆ ಅದ್ವೈತಿಗಳು ಸಿದ್ಧಾಂತವನ್ನು ಮಾಡಿದ್ದರು. ಭಾಮತಿಯಲ್ಲಿ ಐದೈದು ತತ್ವಗಳಲ್ಲಿ ಅನುಗತಧರ್ಮಗಳನ್ನು ಸಂಗ್ರಹಿಸಲು ಸಾಧ್ಯವಿಲ್ಲವೆಂಬುದನ್ನು ಸಮರ್ಥನೆ ಮಾಡಲಾಗಿದೆ. ಅದನ್ನು ಆಶಂಕಿಸಿ ನಿರಾಕರಿಸಲು 'ನನು' ಇತ್ಯಾದಿ ಗ್ರಂಥವು ಹೊರಟಿವೆ.

**प्रकाशः – अतिरेकेति** ।। तयोरपि ग्रहणे पौनरुक्त्यं स्यात् । अतस्तौ विहायैव प्रकृतिभागोपादानेनैव पञ्चविंशतिर्वाच्येत्यर्थः ।

'ಅತಿರೇಕಾಚ್ಚ' ಎಂಬ ಸೂತ್ರದ ಭಾಗಕ್ಕೆ ಅವರ ವ್ಯಾಖ್ಯಾನ ಹೀಗಿದೆ - ಆಕಾಶ ಹಾಗೂ ಆತ್ಮರನ್ನು ಶ್ರುತಿಯಲ್ಲಿ ಪ್ರತ್ಯೇಕವಾಗಿ ಪರಿಗಣಿಸಲಾಗಿದೆ. 'ಯಸ್ಮಿನ್ ಪ್ರತಿಷ್ಠಿತಃ' ಎಂಬುದರಿಂದ ಯಾವ ಆತ್ಮನಲ್ಲಿ ಎಲ್ಲವೂ ಪ್ರತಿಷ್ಠಿತವಾಗಿದೆಯೋ ಎಂದು ಆತ್ಮನನ್ನು ಪ್ರತ್ಯೇಕವಾಗಿ ಶ್ರುತಿ ಹೇಳಿದೆ. 'ಆಕಾಶಶ್ಚ ಪ್ರತಿಷ್ಠಿತಃ' ಎಂಬಲ್ಲಿ ಆಕಾಶವನ್ನು ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ. ಹೀಗಿರುವಾಗ ಇಪ್ಪತ್ತೈದು ತತ್ವಗಳಲ್ಲಿ ಪುನಃ ಆಕಾಶ ಮತ್ತು ಆತ್ಮರನ್ನು ಸೇರಿಸಿದರೆ ಪುನರುಕ್ತಿ ಬರುತ್ತದೆ ಆದ್ದರಿಂದ ಆಕಾಶ ಮತ್ತು ಆತ್ಮ ಈ ಎರಡು ತತ್ವಗಳನ್ನು ಬಿಟ್ಟು, ಪ್ರಕೃತಿಯ ವಿಭಾಗವಾದ ಸತ್ವರಜಸ್ತಮೋಗುಣಗಳನ್ನು ಸೇರಿಸಿಕೊಂಡು ಇಪ್ಪತ್ತೈದು ಎಂಬ ಸಂಖ್ಯೆಯನ್ನು ಪೂರಣೆ ಮಾಡಬೇಕು.

**प्रकाशः –** तयोरुपादानेन सत्वरजस्तमसां प्रकृतित्वेनैकीकृत्य प्रकृति-महदहंकारात्माकाश इति समाहारोक्त्या पञ्चविंशत्युक्तिस्तु यस्मिन्नित्यधिकरणत्व-विरोधादाकाशस्य पृथगुक्त्ययोगाच्चायुक्तेत्यर्थः ।

ಒಂದುವೇಳೆ ಆಕಾಶ ಮತ್ತು ಆತ್ಮ ಈ ಎರಡು ತತ್ವಗಳನ್ನು ಇಪ್ಪತ್ತೈದರಲ್ಲೇ ಸೇರಿಸುವುದಾದರೆ ಸತ್ವ, ರಜಸ್ಸು, ತಮಸ್ಸು ಗುಣಗಳನ್ನು ಪ್ರಕೃತಿಯಲ್ಲಿ ಸೇರಿಸುವುದಾದರೆ ಪ್ರಕೃತಿ, ಮಹತ್ತತ್ವ, ಅಹಂಕಾರತತ್ವ, ಆತ್ಮ, ಆಕಾಶ ಎಂಬುದಾಗಿ ಐದರ ಗುಂಪನ್ನು ಮಾಡಿದಂತಾಗುತ್ತದೆ. ಹೀಗೆ ಹೇಳಿದಾಗಲೂ ಇಪ್ಪತ್ತೈದು ಎಂಬ

ಸಂಖ್ಯೆಯು ನಿರ್ವಾಹವಾಗುತ್ತದೆ. ಆದರೆ 'ಯಸ್ಮಿನ್' ಎಂಬುದಾಗಿ ಹೇಳಲ್ಪಟ್ಟ ಅಧಿಕರಣದ ವಿರೋಧ ಹಾಗೂ ಆಕಾಶದ ಪೃಥಗುಕ್ತಿಯ ವಿರೋಧ ಬಂದೇ ಬರುತ್ತದೆ.

**प्रकाशः** – **स्मार्तनिर्देशस्तु बाधकाभावादुक्तविवक्षया युक्तो न श्रौत इति भावः। अत एव श्रुतावित्यवादि ।।**

'ಪಂಚಭಿಃ ಪಂಚಭಿರ್ಬ್ರಹ್ಮ' ಎಂಬ ಭಾಗವತದ ಮಾತಿನ ವಿರೋಧವಂತೂ ಬರಲು ಸಾಧ್ಯವಿಲ್ಲ. ಏಕೆಂದರೆ ಆ ವಾಕ್ಯದಲ್ಲಿ ಆಕಾಶ ಮತ್ತು ಆತ್ಮರನ್ನು ಪ್ರತ್ಯೇಕವಾಗಿ ಪರಿಗಣಿಸಿಯೇ ಇಲ್ಲ. ಹಾಗಾಗಿ ಇಪ್ಪತ್ತೈದು ತತ್ವಗಳಲ್ಲಿ ಐದೈದರ ಗುಂಪನ್ನು ಕ್ರಮವಾಗಿ ಹೇಳಬಹುದು. ೧. ಪಂಚ ತನ್ಮಾತ್ರಗಳು, ೨. ಪಂಚಭೂತಗಳು, ೩. ಪಂಚ ಜ್ಞಾನೇಂದ್ರಿಯಗಳು, ೪. ಪಂಚ ಕರ್ಮೇಂದ್ರಿಯಗಳು, ೫. ಉಳಿದ ಐದು. ಹೀಗೆ ಐದೈದರ ಗುಂಪುಗಳನ್ನು ಮಾಡಬಹುದು. ಆದರೆ ಶ್ರುತಿಯಲ್ಲಿ ಆತ್ಮ ಹಾಗೂ ಆಕಾಶಗಳನ್ನು ಪ್ರತ್ಯೇಕವಾಗಿ ಪರಿಗಣಿಸಿದ್ದರಿಂದ ಈಗ ಐದೈದರ ಗುಂಪನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ಗ್ರಂಥದಲ್ಲಿ 'ಶ್ರುತೌ' ಎಂಬ ಪದವನ್ನು ಬಳಸಿದ್ದಾರೆ.

**प्रकाशः** – **घ्राणानीति ।। उद्धृताकाशानां पृथिव्यादीनां ज्ञानेन्द्रियेभ्यो घ्राणमादाय पूरयितव्यम् । गत्यन्तराभावात् । एवमुद्धृतघ्राणानां ज्ञानेन्द्रियाणां वाचमादायैवेत्यग्रेपीति भावः ।।**

ಪೃಥಿವೀ, ಅಪ್, ತೇಜಸ್ಸು, ವಾಯು, ಆಕಾಶ ಈ ಐದು ಪಂಚಭೂತಗಳ ನಡುವೆ ಶ್ರುತಿಯು ಆಕಾಶವನ್ನು ಪ್ರತ್ಯೇಕವಾಗಿ ಉಲ್ಲೇಖ ಮಾಡಿದ್ದರಿಂದ ಜ್ಞಾನೇಂದ್ರಿಯಗಳ ಐದರ ನಡುವೆ ಇರುವ ಘ್ರಾಣೇಂದ್ರಿಯವನ್ನು ಈ ಪಂಚಭೂತಗಳ ನಡುವೆ ಸೇರಿಸಿಕೊಳ್ಳಬೇಕು. ಏಕೆಂದರೆ ಪಂಚತ್ವ ಸಂಖ್ಯೆಯನ್ನು ನಿರ್ವಹಿಸಲು ಬೇರೆ ಗತಿಯಿರುವುದಿಲ್ಲ. ಯಾವಾಗ ಜ್ಞಾನೇಂದ್ರಿಯಗಳ ನಡುವೆ ಇರುವ ಘ್ರಾಣೇಂದ್ರಿಯವನ್ನು ಪಂಚಭೂತಗಳ ನಡುವೆ ಸೇರಿಸಲಾಗಿದೆಯೋ, ಆವಾಗ ಪಂಚಜ್ಞಾನೇಂದ್ರಿಯಗಳಲ್ಲಿಯೂ ಪಂಚತ್ವಸಂಖ್ಯೆಯು ಕೂಡುವುದಿಲ್ಲ. ಅದಕ್ಕೋಸ್ಕರ ಕರ್ಮೇಂದ್ರಿಯಗಳಲ್ಲಿರುವ ವಾಕ್ ಎಂಬ ಇಂದ್ರಿಯವನ್ನು ಜ್ಞಾನೇಂದ್ರಿಯಗಳ ನಡುವೆ ಸೇರಿಸಿಕೊಳ್ಳಬೇಕು. ಹೀಗೆ ಹೇಳಿದರೆ ಐದೈದು ಗುಂಪುಗಳನ್ನಾಗಿ ಪರಿಗಣಿಸಲು ಸಂಗ್ರಾಹಕ ಧರ್ಮಗಳನ್ನೇ ನಿರ್ವಹಣೆ ಮಾಡಲು ಸಾಧ್ಯವಿಲ್ಲ.

**प्रकाशः** – **निवेश्येति ।। पञ्चकसम्पादनस्यैच्छिकत्वादिति भावः । तथा च ज्ञानेन्द्रियाणां कर्मेन्द्रियाणां तन्मात्राणां च क्रोडीकारको धर्म उक्त एव । आद्यपञ्चके मनःपरत्वं द्वितीये तु विंशत्यन्यत्वं सङ्ग्राहकं भविष्यतीति भावः ।।**

'ನಿವೇಶ್ಯ' ಇತ್ಯಾದಿ ವಾಕ್ಯದ ಅಭಿಪ್ರಾಯ ಹೀಗಿದೆ - ಐದೈದರ ಗುಂಪುಗಳನ್ನು ಮಾಡುವುದು ಐಚ್ಛಿಕ. ಆದ್ದರಿಂದ ಘ್ರಾಣ, ರಸನ, ಚಕ್ಷುಸ್ಸು, ತ್ವಕ್, ಶ್ರೋತ್ರ ಎಂಬ ಐದು ಜ್ಞಾನೇಂದ್ರಿಯಗಳು ಸೇರಿ ಒಂದು ಗುಂಪಾಗುತ್ತವೆ. ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಈ ಐದು ಕರ್ಮೇಂದ್ರಿಯಗಳು ಸೇರಿ ಒಂದು

ಗುಂಪಾಗುತ್ತವೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಐದು ಪಂಚತನ್ಮಾತ್ರಗಳು ಸೇರಿ ಒಂದು ಗುಂಪಾಗುತ್ತವೆ. ಇನ್ನು ಸತ್ವ, ರಜಸ್ಸು, ತಮಸ್ಸು, ಮಹತ್ತತ್ವ, ಅಹಂಕಾರತತ್ವ ಈ ಐದರಲ್ಲಿ ಮನಃಪರತ್ವ ಎಂಬ ಸಂಗ್ರಾಹಕಧರ್ಮವಿರುವುದರಿಂದ ಒಂದು ಗುಂಪಾಗುತ್ತವೆ. ಪೃಥಿವೀ, ಅಪ್, ತೇಜಸ್ಸು, ವಾಯು, ಮನಸ್ಸು ಈ ಐದರಲ್ಲಿ ವಿಂಶತ್ಯತಿರಿಕ್ತತ್ವ ಎಂಬ ಸಂಗ್ರಾಹಕಧರ್ಮವಿರುವುದರಿಂದ ಇವುಗಳನ್ನು ಐದರ ಗುಂಪನ್ನಾಗಿ ಪರಿಗಣಿಸಬಹುದು. ಹೀಗೆ ಸುಲಭವಾಗಿ ಇಪ್ಪತ್ತೈದು ತತ್ವಗಳಲ್ಲಿ ಐದೈದರ ಗುಂಪನ್ನಾಗಿ ಪರಿಗಣಿಸಲು ಉಪಸಂಗ್ರಾಹಕಧರ್ಮಗಳನ್ನು ಹೇಳಬಹುದು.

**प्रकाशः** – बुद्धिरिति ।। बुद्ध्यहंकारयोरेकार्थत्वात् । अन्यथा तत्र श्रुतावहंकारानुक्तिस्स्यादिति भावः ।

'ಮನಸಸ್ತು ಪರಾ ಬುದ್ಧಿಃ' ಎಂಬ ಶ್ರುತಿಯಲ್ಲಿ ಮನಸ್ತತ್ವಕ್ಕಿಂತ ಬುದ್ಧಿತತ್ವವು ಶ್ರೇಷ್ಠವಾಗಿದೆ ಎಂದು ಹೇಳಲಾಗಿದೆ. ಆದರೆ ಪ್ರಕೃತ ಉಪಸಂಗ್ರಾಹಕಧರ್ಮಗಳನ್ನು ಹೇಳುವುದಕ್ಕಾಗಿ ಮನಃಪರತ್ವವು ಸತ್ವಾದಿಗುಣಗಳಲ್ಲಿ ಇರುತ್ತವೆಂದು ಹೇಳುವಾಗ ಅಹಂಕಾರತತ್ವವೂ ಕೂಡ ಅದರಲ್ಲಿ ಸೇರಿದೆ. ಆದ್ದರಿಂದ ಮನಸ್ತತ್ವಕ್ಕಿಂತ ಅಹಂಕಾರತತ್ವವು ಶ್ರೇಷ್ಠವೆಂದು ಹೇಳಿದಂತಾಯಿತು, ಇದು ಹೇಗೆ ಎಂದು ಪ್ರಶ್ನಿಸಬಾರದು. ಏಕೆಂದರೆ ಬುದ್ಧಿ ಮತ್ತು ಅಹಂಕಾರಗಳು ಒಂದೇ ಅರ್ಥವುಳ್ಳವುಗಳಾಗಿವೆ. ವಾಸ್ತವಿಕವಾಗಿ ಬುದ್ಧಿಯೆಂಬ ತತ್ವವು ಅಹಂಕಾರತತ್ವಕ್ಕಿಂತ ಬೇರೆಯಾಗಿದೆ. ಆದರೆ ಕಾಠಕೋಪನಿಷತ್ತಿನ ಈ ಪ್ರಕರಣದಲ್ಲಿ 'ಮನಸಸ್ತು ಪರಾ ಬುದ್ಧಿಃ' ಎಂಬಲ್ಲಿರುವ ಬುದ್ಧಿತತ್ವಕ್ಕಿಂತ ಅಹಂಕಾರತತ್ವವನ್ನೇ ತೆಗೆದುಕೊಳ್ಳಬೇಕು. ಏಕೆಂದರೆ ಅಹಂಕಾರತತ್ವವನ್ನು ಶ್ರುತಿ ಪ್ರತ್ಯೇಕವಾಗಿ ಉಲ್ಲೇಖ ಮಾಡುತ್ತಿಲ್ಲ. ಆದ್ದರಿಂದ ಮನಃಪರತ್ವೇನ ಸಂಗ್ರಾಹಕಧರ್ಮವನ್ನು ವಿವಕ್ಷಿಸಬಹುದು.

**प्रकाशः** – एतेन ''भूतत्वतन्मात्रत्वज्ञानेन्द्रियत्वकर्मेन्द्रियत्वतदितरत्वानि श्रुतावपि सन्ति'' इति सुधावाक्यं समर्थितं भवति ।

ಹೀಗೆ ಹೇಳಿದ್ದರಿಂದ ಭೂತತ್ವ, ತನ್ಮಾತ್ರತ್ವ, ಜ್ಞಾನೇಂದ್ರಿಯತ್ವ, ಕರ್ಮೇಂದ್ರಿಯತ್ವ, ತದಿತರತ್ವ ಇಂತಹ ಸಾಧಾರಣಧರ್ಮಗಳು ಶ್ರುತಿಯಲ್ಲೂ ಕೂಡ ಇರುತ್ತವೆ ಎಂಬುದಾಗಿ 'ಭೂತತ್ವ ತನ್ಮಾತ್ರತ್ವ, ಜ್ಞಾನೇಂದ್ರಿಯತ್ವ, ಕರ್ಮೇಂದ್ರಿಯತ್ವ, ತದಿತರತ್ವಾನಿ ಶ್ರುತಾವಪಿ ಸಂತಿ ಎಂಬ ಸುಧಾವಾಕ್ಯದಲ್ಲಿ ವಿವರಿಸಿರುತ್ತಾರೆ. ಅದನ್ನೇ ಪ್ರಕೃತ ಗ್ರಂಥಕಾರರು ಸಮರ್ಥನೆ ಮಾಡಿದ್ದಾರೆಂದು ತಿಳಿಯಬೇಕು.

**प्रकाशः** – एतेन ''नच वाच्यं पञ्चकर्मेन्द्रियाणि पञ्चज्ञानेन्द्रियाणि पञ्चमहाभूतानि पञ्चतन्मात्राण्यवशिष्टानि पञ्चेत्यवान्तरसंख्यानिवेशनिमित्तमस्त्येवेति । आकाशस्य पृथङ्निर्देशेन पञ्चभिरारब्धमहाभूतसमुदायासिद्धेः'' इति रामानुजभाष्योक्तं निरस्तम्। आकाशस्थाने मनसो निवेशेन सर्वसामञ्जस्यादिति ।

ಇದರಿಂದ 'ನಚ ವಾಚ್ಯಂ ಪಂಚಕರ್ಮೇಂದ್ರಿಯಾಣಿ ಪಂಚಜ್ಞಾನೇಂದ್ರಿಯಾಣಿ ಪಂಚಮಹಾಭೂತಾನಿ ಪಂಚತನ್ಮಾತ್ರಾಣ್ಯವಶಿಷ್ಟಾನಿ ಪಂಚೇತ್ಯವಾಂತರಸಂಖ್ಯಾನಿವೇಶನಿಮಿತ್ತಮಸ್ತ್ಯೇವೇತಿ । ಆಕಾಶಸ್ಯ ಪೃಥಙ್

ನಿರ್ದೇಶೇನ ಪಂಚಭಿರಾರಬ್ಧಮಹಾಭೂತಸಮುದಾಯಾಸಿದ್ಧೇಃ' ಪಂಚಕರ್ಮೇಂದ್ರಿಯಗಳು, ಪಂಚ-ಜ್ಞಾನೇಂದ್ರಿಯಗಳು, ಪಂಚಮಹಾಭೂತಗಳು, ಪಂಚತನ್ಮಾತ್ರಗಳು ತದತಿರಿಕ್ತತ್ವೇನ ಉಳಿದವುಗಳು ಹೀಗೆ ಉಪಸಂಗ್ರಾಹಕಧರ್ಮಗಳಿರುವುದರಿಂದ ಅವಾಂತರ ಸಂಖ್ಯೆಯನ್ನು ಕೂಡಿಸಬಹುದು. ಆದರೆ ಆಕಾಶವನ್ನು ಪ್ರತ್ಯೇಕವಾಗಿ ನಿರ್ದೇಶ ಮಾಡಿದ್ದರಿಂದ ಪಂಚಮಹಾಭೂತತ್ವ ಎಂಬ ಸಂಗ್ರಾಹಕಧರ್ಮವನ್ನು ಹೇಳಲು ಬರುವುದಿಲ್ಲ ಎಂದು ರಾಮಾನುಜಭಾಷ್ಯದಲ್ಲಿ ಹೇಳಲಾಗಿದೆ. ಅದನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಆಕಾಶದ ಸ್ಥಾನದಲ್ಲಿ ಮನಸ್ಸನ್ನು ನಿವೇಶನ ಮಾಡಿದ್ದರಿಂದ ಎಲ್ಲಾ ಸಮಸ್ಯೆಯು ಪರಿಹಾರವಾಗುತ್ತದೆ.

**प्रकाशः** – यदपि ''अतिरेकात्'' इति सूत्रांशार्थवर्णनं तदपि नेत्याह – **कथञ्चेति** ।। **संख्येति** ।। उक्तदिशेति भावः ।। **अन्यथेति** ।। तयोः पञ्चविंशतावन्तर्भावे ''आकाशश्च'' इति पृथगुक्तिविरोध इत्यर्थः ।। **चशब्दस्येति** ।। ''स्तुतयेऽनुमतिर्वा'' इतिवन्नानाभावादतिरेकाद्वेति निर्देशस्स्यात् । चशब्दस्य वाशब्दार्थत्वोक्तिर्वा स्यादिति भावः ।

'ಅತಿರೇಕಾತ್' ಎಂಬ ಸೂತ್ರಭಾಗಕ್ಕೆ ಯಾವ ಅರ್ಥವನ್ನು ಹೇಳಿದ್ದಾರೋ, ಅದೂ ಕೂಡ ಅಸಾಧುವಾಗಿದೆ ಎಂಬುದಾಗಿ 'ಕಥಂಚ' ಇತ್ಯಾದಿ ಗ್ರಂಥವು ಸಮರ್ಥನೆ ಮಾಡುತ್ತಿದೆ. ಸಂಖ್ಯಾನಿರ್ವಹಣೆಯನ್ನು ಹಿಂದಿನಂತೆ ತಿಳಿಯಬೇಕು. 'ಅನ್ಯಥಾ' ಎಂದರೆ ಆಕಾಶ ಹಾಗೂ ಆತ್ಮ ಈ ಎರಡು ತತ್ವಗಳು ಇಪ್ಪತ್ತೈದರಲ್ಲೇ ಸೇರುವುದಾದರೆ 'ಆಕಾಶಶ್ಚ ಪ್ರತಿಷ್ಠಿತಃ' ಎಂಬುದು 'ಯಸ್ಮಿನ್' ಎಂಬುದರಿಂದ ಆತ್ಮನನ್ನು ಪ್ರತ್ಯೇಕವಾಗಿ ಹೇಳಿದ್ದು ವಿರುದ್ಧವಾಗುತ್ತದೆ ಎಂದರ್ಥ. 'ಚ ಶಬ್ದಸ್ಯ' ಎಂಬುದರ ಅಭಿಪ್ರಾಯ ಹೀಗಿದೆ - 'ಸ್ತುತಯೇಽನುಮತಿರ್ವಾ' ಎಂದು ಹೇಳಿದಂತೆ ಇಲ್ಲಿಯೂ ಕೂಡ 'ನಾನಾಭಾವಾದತಿರೇಕಾದ್ವಾ' ಎಂದೇ ನಿರ್ದೇಶಿಸಬೇಕಿತ್ತು. ಅಥವಾ ಚಶಬ್ದಕ್ಕೆ ವಿಕಲ್ಪ ಎಂಬರ್ಥವನ್ನಾದರೂ ಹೇಳಬೇಕಿತ್ತು ಎಂದಭಿಪ್ರಾಯ.

**प्रकाशः** – एतेन ''आत्माकाशश्चातिरिच्यते'' इति श्रीभाष्योक्तमपि निरस्तं ध्येयम् ।

ಹೀಗೆ ಹೇಳಿದ್ದರಿಂದ 'ಆತ್ಮಾಕಾಶಶ್ಚಾತಿರಿಚ್ಯತೇ' ಆತ್ಮ ಹಾಗೂ ಆಕಾಶಗಳನ್ನು ಪ್ರತ್ಯೇಕವಾಗಿ ಹೇಳಿದ್ದು ವಿರುದ್ಧವಾಗುತ್ತದೆ ಎಂಬ ಶ್ರೀಭಾಷ್ಯದ ಮಾತನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು.




'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ವಾಕ್ಯವು ಪ್ರಕೃತಿಪರವಾದರೂ ಕೂಡ ಯಾವ ಬಾಧಕವಿರುವುದಿಲ್ಲ. ಇಪ್ಪತ್ತೈದರಲ್ಲಿ ಸಂಗ್ರಾಹಕಧರ್ಮಗಳಿರುವುದಿಲ್ಲ ಎಂಬುದು ಅವರ ವಾದ. ಏಕೆಂದರೆ

ಆಕಾಶ ಹಾಗೂ ಆತ್ಮ ಈ ಎರಡು ತತ್ವಗಳನ್ನು ಶ್ರುತಿಯು ಪ್ರತ್ಯೇಕವಾಗಿ ಪರಿಗಣಿಸಿದ್ದರಿಂದ ಪೃಥಿವ್ಯಾದಿಗಳ ನಡುವೆ ಆಕಾಶವನ್ನು ಸೇರಿಸಲಾಗದು. ಆದ್ದರಿಂದ ಮುಂದಿನ ತತ್ವದಲ್ಲಿರುವ ಒಂದೊಂದು ತತ್ವಗಳನ್ನು ಹಿಂದಿನ ವಿಭಾಗಗಳಲ್ಲಿ ಸೇರಿಸಿಕೊಳ್ಳಬೇಕು. ಆವಾಗ ಐದೈದರ ಗುಂಪಿನಲ್ಲಿ ಸಂಗ್ರಾಹಕಧರ್ಮಗಳು ಭಗ್ನವಾಗುತ್ತವೆ ಎಂದು.

ಇದು ಸರಿಯಲ್ಲ. ಏಕೆಂದರೆ ಪೃಥಿವ್ಯಾದಿಗಳ ನಡುವೆ ಮನಸ್ಸನ್ನು ಸೇರಿಸಬೇಕು. ಆವಾಗ ಪೃಥಿವಿ, ಅಪ್, ತೇಜಸ್ಸು, ವಾಯು, ಮನಸ್ಸು ಇವುಗಳಲ್ಲಿ 'ವಿಶಂತ್ಯತಿರಿಕ್ತತ್ವ' ಎಂಬ ಸಂಗ್ರಾಹಕಧರ್ಮವು ಇರುತ್ತದೆ. ಸತ್ವ, ರಜಸ್ಸು, ತಮಸ್ಸು, ಮಹತ್ತತ್ವ, ಅಹಂಕಾರತತ್ವ ಈ ಐದರಲ್ಲಿ 'ಮನಃಪರತ್ವ' ಎಂಬ ಸಂಗ್ರಾಹಕಧರ್ಮವಿರುತ್ತದೆ. ಏಕೆಂದರೆ ಈ ಐದೂ ತತ್ವಗಳು ಮನುಷ್ಯರಿಗಿಂತ ಶ್ರೇಷ್ಠವಾಗಿವೆ. ಉಳಿದಂತೆ ಘ್ರಾಣಾದಿ ಐದು ಜ್ಞಾನೇಂದ್ರಿಯಗಳಲ್ಲಿ ಜ್ಞಾನೇಂದ್ರಿಯತ್ವವೆಂಬ ಸಂಗ್ರಾಹಕಧರ್ಮವು ಇದೆ. ವಾಗಿಂದ್ರಿಯವೇ ಮೊದಲಾದ ಐದರಲ್ಲಿ ಕರ್ಮೇಂದ್ರಿಯತ್ವ ಎಂಬ ಸಂಗ್ರಾಹಕಧರ್ಮವಿದೆ. ಶಬ್ದಾದಿಗಳಲ್ಲಿ ತನ್ಮಾತ್ರ ಎಂಬ ಸಂಗ್ರಾಹಕಧರ್ಮವಿದೆ. ಹೀಗೆ ಸಂಗ್ರಾಹಕಧರ್ಮಗಳನ್ನು ಹೇಳಲು ಬರುವಾಗ ಇಪ್ಪತ್ತೈದು ತತ್ವವನ್ನು ಈ ಶ್ರುತಿಯು ಪ್ರತಿಪಾದನೆ ಮಾಡುತ್ತಿಲ್ಲವೆಂಬ ಧೋರಣೆ ಸರಿಯಲ್ಲ.

////////////////////////////////////////////////////////////

## 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರದ ಶಾಂಕರ ಭಾಷ್ಯ ಹಾಗೂ ರಾಮಾನುಜ ಭಾಷ್ಯದ ನಿರಾಕರಣೆ

### तात्पर्यचन्द्रिका

**किञ्च किमुपसङ्ग्राहकाभावे कुत्रापि द्वित्वादिका संख्या नास्ति किं वा महासंख्यायामवान्तरसंख्या नास्ति ।**

ಅನುವಾದ - 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿ ಇಪ್ಪತ್ತೈದು ತತ್ವಗಳು ಪ್ರತಿಪಾದ್ಯವಾಗಿಲ್ಲ. ಏಕೆಂದರೆ ಇಪ್ಪತ್ತೈದು ತತ್ವಗಳಲ್ಲಿ ಐದೈದರ ವಿಭಾಗವನ್ನು ಮಾಡಲು ಯಾವುದೇ ಉಪಸಂಗ್ರಾಹಕಧರ್ಮಗಳಿಲ್ಲ ಎಂಬುದಾಗಿ ಅದ್ವೈತಿಗಳು ಹೇಳುವುದಾದರೆ ನಾವು ಪ್ರಶ್ನಿಸುತ್ತೇವೆ. ಉಪಸಂಗ್ರಾಹಕವಾದ ಧರ್ಮಗಳಿಲ್ಲದಿದ್ದರೆ ಎಲ್ಲಿಯೂ ಕೂಡ ದ್ವಿತ್ವ ತ್ರಿತ್ವ ಮೊದಲಾದ ಸಂಖ್ಯೆಗಳನ್ನು ಹೇಳಬಾರದೆಂದೋ, ಅಥವಾ ಮಹಾಸಂಖ್ಯೆಯಲ್ಲಿ ಅವಾಂತರಸಂಖ್ಯೆಯನ್ನು ಹೇಳಬಾರದೆಂದೋ ?

**आद्ये त्वत्पक्षेपि प्राणचक्षुश्श्रोत्रान्नमनस्सु पञ्चत्वं न स्यात् ।**

ಮೊದಲಿನ ಪಕ್ಷ ಸರಿಯಲ್ಲ. ಏಕೆಂದರೆ ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ, ಮನಸ್ಸು ಈ ಐದರಲ್ಲಿ ಯಾವುದೇ ಉಪಸಂಗ್ರಾಹಕಧರ್ಮಗಳಿಲ್ಲದಿದ್ದರೂ ಪಂಚತ್ವವನ್ನು ನೀವು ಒಪ್ಪಿದ್ದೀರಿ. ಇದು ತಪ್ಪಾಗಬೇಕಾದೀತು.

**नान्त्यः ।**

**पञ्चसप्तच वर्षाणि नव वर्ष शतक्रतुः ।**

**व्रतमेतदनुष्ठेयं वर्षाणि नव पञ्च च ॥**

**इत्यादावुपसङ्ग्राहकाभावेपि महासंख्यायामवान्तरसंख्यादर्शनात् । तस्मात् परकीयाद्यसूत्रव्याख्या न युक्ता ।**

ಎರಡನೆಯ ಪಕ್ಷವು ಸರಿಯಲ್ಲ. 'ಪಂಚಸಪ್ತಚ ವರ್ಷಾಣಿ ನವವರ್ಷ ಶತಕ್ರತುಃ' ಐದೇಳು ವರ್ಷಗಳ ಕಾಲ ಇಂದ್ರನು ಮಳೆಯನ್ನು ಸುರಿಸಲಿಲ್ಲ. ಎಂದರೆ ಹನ್ನೆರಡು ವರ್ಷಗಳ ಕಾಲ ಮಳೆಯೇ ಬರಲಿಲ್ಲ ಎಂದರ್ಥ. ಹನ್ನೆರಡು ವರ್ಷ ಎಂಬ ಮಹಾಸಂಖ್ಯೆಯಲ್ಲಿ ಐದು ಮತ್ತು ಏಳು ಎಂಬ ಅವಾಂತರಸಂಖ್ಯೆಯನ್ನು ಪರಿಗಣಿಸಲಾಗಿದೆ. ಈ ಅವಾಂತರಸಂಖ್ಯೆಯನ್ನು ಪರಿಗಣಿಸಲು ಯಾವುದೇ ಉಪಸಂಗ್ರಾಹಕಧರ್ಮಗಳು ಕಾಣಿಸುತ್ತಿಲ್ಲ. ಮತ್ತು 'ವ್ರತಮೇತದನುಷ್ಠೇಯಂ ವರ್ಷಾಣಿ ನವ ಪಂಚ ಚ' ಒಂಭತ್ತು ಐದು ವರ್ಷಗಳ ಕಾಲ ವ್ರತವನ್ನು ಆಚರಿಸಬೇಕು. ಎಂದರೆ ಹದಿನಾಲ್ಕು ವರ್ಷಗಳ ಕಾಲ ವ್ರತವನ್ನು ಆಚರಿಸಬೇಕು ಎಂದರ್ಥ. ಇಲ್ಲಿಯೂ ಕೂಡ ಹದಿನಾಲ್ಕು ವರ್ಷ ಎಂಬ ಮಹಾಸಂಖ್ಯೆಯಲ್ಲಿ ಒಂಭತ್ತು ಮತ್ತು ಐದು ಎಂಬ ಅವಾಂತರ ಸಂಖ್ಯೆಯನ್ನು ಪರಿಗಣಿಸಲಾಗಿದೆ. ಆದರೆ ಉಪಸಂಗ್ರಾಹಕಧರ್ಮವಿಲ್ಲದ ಕಾರಣ ಇಲ್ಲಿಯೂ ಕೂಡ ವ್ಯಭಿಚಾರ ದೋಷವು ಬರುತ್ತದೆ. ಆದ್ದರಿಂದ ಯಾವಸ್ಥಳದಲ್ಲಿ ಮಹಾಸಂಖ್ಯೆಯಲ್ಲಿ ಅವಾಂತರಸಂಖ್ಯೆಯನ್ನು ಹೇಳಿರುತ್ತಾರೋ ಅಲ್ಲಿ ಉಪಸಂಗ್ರಾಹಕಧರ್ಮವು ಇರಲೇಬೇಕು ಎಂಬ ವ್ಯಾಪ್ತಿಯು ಸಿದ್ಧವಾಗುವುದಿಲ್ಲ. ಆದ್ದರಿಂದ ಅದ್ವೈತಿಗಳ ಮೊದಲನೆಯ ಸೂತ್ರವ್ಯಾಖ್ಯಾನವು ಅಯುಕ್ತವಾಗಿದೆ.

**द्वितीयेऽपि श्रुतौ षष्ठीनिर्दिष्टाः प्राणादयः सूत्रे गृह्यन्त इति यदुक्तं तदस्मदीय-पूर्वपक्ष एव निक्षिप्य दूषितम् ।**

'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರವ್ಯಾಖ್ಯಾನವೂ ಕೂಡ ಸಾಧುವಲ್ಲ. ಏಕೆಂದರೆ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ಶ್ರುತಿಯಲ್ಲಿ ಷಷ್ಠೀವಿಭಕ್ತ್ಯಂತವಾದ 'ಪ್ರಾಣಸ್ಯ' ಎಂಬ ಪದದಿಂದ ಯಾರು ನಿರ್ದಿಷ್ಟರಾಗಿದ್ದಾರೋ ಅಂತಹ ಪ್ರಾಣಾದಿಗಳನ್ನೇ ಸೂತ್ರದಲ್ಲಿ ಸ್ವೀಕರಿಸಬೇಕು ಎಂಬ ಅದ್ವೈತಿಗಳ ವಾದವನ್ನು ನಮ್ಮ ಸಿದ್ಧಾಂತದ ಪೂರ್ವಪಕ್ಷದಲ್ಲಿಯೇ ಅನುವಾದ ಮಾಡಿ ನಿರಾಕರಿಸಿದ್ದಾಗಿದೆ. ದ್ವಿತೀಯಾಂತವಾದ ಪ್ರಾಣಾದಿಶಬ್ದಗಳೇ ಪ್ರಧಾನವಾಗಿರುವುದರಿಂದ ಅವುಗಳನ್ನೇ ಸೂತ್ರದಲ್ಲಿ ನಿರ್ದೇಶಿಸಬೇಕು.

ಪರಿಪೂರ್ಣಚಂದ್ರಿಕಾ

**किञ्च तृतीयसूत्र एकवचनान्तेन ''ज्योतिषा'' इत्यनेन ''ज्योतिषां ज्योतिः'' इति श्रुतावेकवचननिर्दिष्टस्यैव ज्योतिषो ग्राह्यत्वात् द्वितीयसूत्रेपि प्राणादिशब्देन श्रुतौ द्वितीयानिर्दिष्टा एव प्राणादयो ग्राह्याः । एतेनैव केषाञ्चित्पक्षोपि निरस्तः ।**

ಮತ್ತು 'ಜ್ಯೋತಿಷೈಕೇಷಾಮಸತ್ಯನ್ನೇ' ಎಂಬ ಮೂರನೆಯ ಸೂತ್ರದಲ್ಲಿ ಏಕವಚನಾಂತವಾದ 'ಜ್ಯೋತಿಷಾ' ಎಂಬ ಪದದಿಂದ 'ಜ್ಯೋತಿಷಾಂ ಜ್ಯೋತಿಃ' ಎಂಬ ಶ್ರುತಿಯಲ್ಲಿ ಏಕವಚನದಿಂದ ನಿರ್ದೇಶಿಸಲ್ಪಟ್ಟ ಜ್ಯೋತಿಯನ್ನೇ ಸ್ವೀಕರಿಸಲಾಗಿದೆ. ಅದರಂತೆ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರದಲ್ಲಿಯೂ ಕೂಡ ಪ್ರಾಣಾದಿ ಶಬ್ದದಿಂದ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಇತ್ಯಾದಿ ಶಬ್ದದಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳನ್ನೇ ಸ್ವೀಕರಿಸಬೇಕು. ಹೀಗೆ ಅದ್ವೈತಮತವನ್ನು ನಿರಾಕರಣ ಮಾಡಿದ್ದರಿಂದ ರಾಮಾನುಜರ ಪಕ್ಷವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು.

**किञ्च तत्पक्ष एतच्छास्त्रपूर्वभागे पूर्वतन्त्रे ''सन्दिग्धे तु वाक्यशेषात्'' इत्यत्रैव वाक्यशेषान्निर्णयस्योक्तत्वात् ''प्राणादयो वाक्यशेषात्'' इति पुनरिह तदुक्तिरयुक्ता।**

ಮತ್ತು ರಾಮಾನುಜ ಪಕ್ಷದಲ್ಲಿ ಈ ಅಧಿಕರಣಕ್ಕೆ ಆರಂಭಣೀಯತ್ವವೇ ಕೂಡುವುದಿಲ್ಲ. ಏಕೆಂದರೆ ಈ ಬ್ರಹ್ಮಮೀಮಾಂಸಾಶಾಸ್ತ್ರವು ರಾಮಾನುಜರ ಪ್ರಕಾರ ಪೂರ್ವಮೀಮಾಂಸೆಯ ಜೊತೆಗೆ ಸೇರಿ ಒಂದೇ ಶಾಸ್ತ್ರವೆನಿಸಿದೆ. ಆದ್ದರಿಂದ ಈ ಶಾಸ್ತ್ರದ ಪೂರ್ವಭಾಗವೆನಿಸಿದ ಪೂರ್ವಮೀಮಾಂಸಾ ಗ್ರಂಥದಲ್ಲಿ 'ಸಂದಿಗ್ಧೇ ತು ವಾಕ್ಯಶೇಷಾತ್' ಎಂಬ ಅಧಿಕರಣದಿಂದ ಇದು ಗತಾರ್ಥವಾಗಿದೆ. ಏಕೆಂದರೆ ಆ ಅಧಿಕರಣದಲ್ಲಿ ವಾಕ್ಯಶೇಷದಿಂದಲೇ ಶ್ರುತ್ಯರ್ಥವನ್ನು ನಿರ್ಣಯ ಮಾಡಬೇಕು ಎಂದು ಸಾಧಿಸಿದ್ದಾಗಿದೆ. ಅದೇ ವಿಷಯವನ್ನೇ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಈ ಅಧಿಕರಣದ ಸೂತ್ರದಲ್ಲಿಯೂ ಸಮರ್ಥನೆ ಮಾಡುವುದು ವ್ಯರ್ಥ. 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷದ ಬಲದಿಂದ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯ ಅರ್ಥವನ್ನು ನಿರ್ಣಯಿಸಲು ಪೂರ್ವಮೀಮಾಂಸೆಯ 'ಸಂದಿಗ್ಧೇ ತು ವಾಕ್ಯಶೇಷಾತ್' ಎಂಬ ಅಧಿಕರಣವು ಸಾಕು.

**ननु तत्र ''तेजो वै घृतम्'' इति वाक्यशेषस्य घृतपरत्वेन निर्णीतत्वात्तदनुसारेण ''अक्ता'' इत्यस्य सन्दिग्धस्य निर्णयः । इह तु ''प्राणस्य प्राणम्'' इति वाक्यशेषस्य नेन्द्रियपरत्वं निर्णीतम् । तत्रानिन्द्रिययोः प्राणान्नयोः श्रवणात् । इन्द्रियत्वनिर्णयं च विना न प्राणादीनां पञ्चत्वयोग्यत्वम् । संख्यानिवेशकोपाध्यभावादिति शङ्कायां**

ಆಕ್ಷೇಪ - ಪೂರ್ವಮೀಮಾಂಸೆಯ ಅಧಿಕರಣದಿಂದ ಇದು ಗತಾರ್ಥವಾಗುವುದಿಲ್ಲ. ಏಕೆಂದರೆ 'ಸಂದಿಗ್ಧೇ ತು ವಾಕ್ಯಶೇಷಾತ್' ಎಂಬ ಸೂತ್ರದಲ್ಲಿ 'ತೇಜೋ ವೈ ಘೃತಮ್' ಎಂಬ ವಾಕ್ಯಶೇಷವು ಘೃತಪರವೆಂದು ನಿರ್ಣೀತವಾಗಿದೆ. ಅದಕ್ಕನುಸಾರಿಯಾಗಿ 'ಅಕ್ತಾ' ಎಂಬ ಸಂದಿಗ್ಧವಾದ ವಾಕ್ಯವನ್ನು, ತುಪ್ಪದಿಂದ ಮಿಶ್ರಣ ಮಾಡಬೇಕು ಎಂಬರ್ಥದಲ್ಲಿ ನಿರ್ಣಯಿಸುವುದು ಸೂಕ್ತವಾಗುತ್ತದೆ. ಆದರೆ ಪ್ರಕೃತ 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷವು ಇಂದ್ರಿಯಪರವಾಗಿದೆಯೆಂದು ಇದುವರೆಗೂ ನಿರ್ಣಯವಾಗಿಲ್ಲ. ಏಕೆಂದರೆ ವಾಕ್ಯಶೇಷದಲ್ಲಿ ಇಂದ್ರಿಯವಲ್ಲದ ಪ್ರಾಣ ಹಾಗೂ ಅನ್ನಗಳು ಶ್ರುತವಾಗಿವೆ. ಎಲ್ಲಿಯ ತನಕ ಈ ವಾಕ್ಯವು ಇಂದ್ರಿಯಪರವಾಗಿದೆ ಎಂದು ನಿರ್ಣಯವಾಗುವುದಿಲ್ಲವೋ, ಅಲ್ಲಿಯ ತನಕ ಪ್ರಾಣಾದಿಗಳು 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯು ಹೇಳುತ್ತಿರುವ ಪಂಚತ್ವಸಂಖ್ಯೆಯನ್ನು ಪೂರಣೆ ಮಾಡಲು ಯೋಗ್ಯಗಳಾಗುವುದಿಲ್ಲ. ಏಕೆಂದರೆ ಪಂಚತ್ವಸಂಖ್ಯೆಯನ್ನು ನಿವೇಶ ಮಾಡಲು ಇಂದ್ರಿಯ ಹಾಗೂ ಅನಿಂದ್ರಿಯಗಳಲ್ಲಿ ಒಂದು ಉಪಾಧಿಯನ್ನು ಹೇಳಲು ಸಾಧ್ಯವಿಲ್ಲ. ಪ್ರಾಣಾದಿ ಐದು ತತ್ವಗಳೂ ಕೂಡ ಇಂದ್ರಿಯವೆಂದು ನಿರ್ಣಯವಾದರೆ ಪಂಚತ್ವಸಂಖ್ಯೆಗೆ ಅನುಕೂಲವಾದ ಇಂದ್ರಿಯತ್ವ ಎಂಬ ಉಪಾಧಿಯನ್ನು ಹೇಳಿದಂತಾಗುತ್ತಿತ್ತು.

**बहूनां चक्षुःश्रोत्रमनःशब्दानामनुकूलतया द्वौ प्राणान्नशब्दाविन्द्रियपरौ । स्पर्शनेन्द्रियं हि प्राणशब्दार्थः । तस्य वायुसम्बन्धित्वात् । अन्नशब्देन तु पृथिवीवाचिना पृथिवीसम्बन्धिघ्राणेन्द्रियं, अद्यतेऽनेनेति व्युत्पत्त्या रसनेन्द्रियं च गृह्यते । घ्राणरसनयोस्तन्त्रेणोपादानात्पञ्चत्वमप्यविरुद्धम् । तथाचात्रापि वाक्यशेषस्येन्द्रियपरत्वेन निर्णीतत्वात्तदनुरोधात् ''पञ्चपञ्च जनाः'' इत्यस्यापीन्द्रियपरतेति वक्तुं प्राणादिसूत्रमिति न पुनरुक्तिः**

ಹೀಗೆ ಪ್ರಶ್ನಿಸಿಕೊಂಡು ರಾಮಾನುಜರೇ ಉತ್ತರವನ್ನು ನೀಡಿದ್ದಾರೆ. ವಾಕ್ಯಶೇಷವು ಸಂಪೂರ್ಣವಾಗಿ ಐದು ಇಂದ್ರಿಯಗಳನ್ನೇ ಪ್ರತಿಪಾದನೆ ಮಾಡುತ್ತದೆಯೆಂದು ನಿರ್ಣಯಿಸಬೇಕು. ಹೇಗೆಂದರೆ ಚಕ್ಷುಃ ಶ್ರೋತ್ರ, ಮನಃ, ಈ ಮೂರು ಶಬ್ದಗಳು ಇಂದ್ರಿಯಪರವಾಗಿವೆ. ಆದರೆ ಪ್ರಾಣ, ಅನ್ನ ಎಂಬ ಎರಡೇ ಶಬ್ದಗಳು ಬೇರೆ ಅರ್ಥಗಳನ್ನು ಹೇಳುತ್ತಿವೆ. ಅನೇಕ ಶಬ್ದಗಳು ಇಂದ್ರಿಯಗಳನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ ಅವುಗಳಿಗೆ ಅನುಸಾರಿಯಾಗಿ ಈ ಎರಡು ಶಬ್ದಗಳಿಗೂ ಇಂದ್ರಿಯಪರತ್ವವನ್ನೇ ಸಾಧಿಸಬೇಕು. ಅದು ಹೀಗೆ - ಪ್ರಾಣಶಬ್ದಕ್ಕೆ ವಾಯು ಎಂದರ್ಥ. ವಾಯುವಿನಲ್ಲಿ ಸ್ಪರ್ಶ ಎಂಬ ಗುಣವಿದೆ. ಅಂತಹ ಸ್ಪರ್ಶವನ್ನು ತಿಳಿಸುವ ಸ್ಪರ್ಶನೇಂದ್ರಿಯವನ್ನು ಪ್ರಾಣಶಬ್ದವು ತಿಳಿಸುತ್ತದೆ. ಅನ್ನ ಶಬ್ದಕ್ಕೆ ಪೃಥಿವೀ ಎಂದರ್ಥ. ಪೃಥಿವೀಯಲ್ಲಿ ಗಂಧ ಎಂಬ ಗುಣವಿದೆ. ಈ ಗಂಧ ಎಂಬ ಗುಣವನ್ನು ತಿಳಿಸುವಂತಹದ್ದು ಘ್ರಾಣೇಂದ್ರಿಯ. ಆದ್ದರಿಂದ ಅನ್ನಶಬ್ದಕ್ಕೆ ಘ್ರಾಣೇಂದ್ರಿಯ ಎಂಬರ್ಥವನ್ನು ತಿಳಿಯಬೇಕು. ಅಥವಾ 'ಅದ್ಯತೇऽನೇನ' ಎಂಬ ವ್ಯುತ್ಪತ್ತಿಯನ್ನು ಮಾಡಿದಾಗ ರಸನೇಂದ್ರಿಯ

ಎಂಬರ್ಥವನ್ನೂ ಕೂಡ ತಿಳಿಸುತ್ತದೆ. ಹೀಗೆ ಅನ್ನಶಬ್ದವು ಘ್ರಾಣೇಂದ್ರಿಯ ಮತ್ತು ರಸನೇಂದ್ರಿಯಗಳನ್ನು ತಂತ್ರದಿಂದ ಅನ್ವಯ ಮಾಡಿದಾಗ ತಿಳಿಸುತ್ತದೆ. ಆದ್ದರಿಂದ ಐದು ಇಂದ್ರಿಯಗಳನ್ನು ಈ ವಾಕ್ಯಶೇಷವು ಪ್ರತಿಪಾದನೆ ಮಾಡುತ್ತದೆಂದು ಹೇಳಲು ಯಾವ ವಿರೋಧವೂ ಇರುವುದಿಲ್ಲ. ಹೀಗೆ ವಾಕ್ಯಶೇಷವು ಇಂದ್ರಿಯಪರವಾಗಿದೆಯೆಂದು ನಿರ್ಣಯವಾದ ಮೇಲೆ ಇದಕ್ಕನುಸಾರಿಯಾಗಿ 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ವಾಕ್ಯವೂ ಕೂಡ ಇಂದ್ರಿಯಪರವೇ ಆಗಿದೆಯೆಂದು ಸಮರ್ಥಿಸಲು 'ಪ್ರಾಣಾದಯೋ ವಾಕ್ಯಶೇಷಾತ್'ಎಂಬ ಸೂತ್ರವು ಹೊರಟಿದೆ. ಹೀಗೆ ಹೇಳಿದಾಗ 'ಸಂದಿಗ್ಧೇತು ವಾಕ್ಯಶೇಷಾತ್'ಎಂಬ ಪೂರ್ವಮೀಮಾಂಸೆಯ ಅಧಿಕರಣದಿಂದ ಪುನರುಕ್ತಿದೋಷವನ್ನು ಹೇಗೆ ಹೇಳುತ್ತೀರಿ ?

**इति चेन्न । बह्वनुग्रहन्यायस्यापि पूर्वतन्त्र एवोक्तत्वात् । टीकाक्षरार्थस्तु स्पष्टः ।।छ।।**

**।। इति श्रीब्रह्मण्यतीर्थपूज्यश्रीपादशिष्यव्यासतीर्थविरचितायां तात्पर्यचन्द्रिकायाम् नसंख्योपसङ्ग्रहाधिकरणं सम्पूर्णम् ।।३।।**

ಸಮಾಧಾನ - ಹೀಗೆ ರಾಮಾನುಜರು 'ಸಂದಿಗ್ಧೇತು ವಾಕ್ಯಶೇಷಾತ್' ಎಂಬ ಪೂರ್ವಮೀಮಾಂಸೆಯ ಸೂತ್ರದಿಂದ ಪುನರುಕ್ತಿಯನ್ನು ಪರಿಹರಿಸಕೊಳ್ಳಬಹುದು. ಆದರೆ ಈ ಬಹ್ವನುಗ್ರಹನ್ಯಾಯವೂ ಕೂಡ ಪೂರ್ವಮೀಮಾಂಸೆಯ ಅಧಿಕರಣದಿಂದಲೇ ಸಿದ್ಧವಾಗುತ್ತದೆ. ಅಂದರೆ ವಾಕ್ಯಶೇಷದಲ್ಲಿ ಮೂರು ಪದಗಳು ಇಂದ್ರಿಯಗಳನ್ನು ಪ್ರತಿಪಾದನೆ ಮಾಡುತ್ತಿವೆ. ಅದಕ್ಕನುಗುಣವಾಗಿ ಉಳಿದೆರಡೂ ಪದಗಳೂ ಕೂಡ ಇಂದ್ರಿಯಗಳನ್ನೇ ಪ್ರತಿಪಾದನೆ ಮಾಡಬೇಕು ಎಂಬುದು ಬಹ್ವನುಗ್ರಹನ್ಯಾಯವಾಗುತ್ತದೆ. ಇದನ್ನೂ ಕೂಡ ಪೂರ್ವಮೀಮಾಂಸೆಯಲ್ಲಿ 'ವಿಪ್ರತಿಷಿದ್ಧಧರ್ಮಾಣಾಂ ಸಮನ್ವಯೇ ಭೂಯಸಾಂ ಸ್ಯಾತ್ ಸಧರ್ಮತ್ವಮ್' ಎಂಬ ಪೂರ್ವಮೀಮಾಂಸೆಯ ಅಧಿಕರಣದಿಂದಲೇ ಸಿದ್ಧವಾಗಿದೆ. ಆದ್ದರಿಂದ ವಾಕ್ಯಶೇಷಾಧಿಕರಣದಿಂದ ಪುನರುಕ್ತಿ ಬಾರದಿದ್ದರೂ ಬಹ್ವನುಗ್ರಹನ್ಯಾಯಾಧಿಕರಣದಿಂದ ಪುನರುಕ್ತಿಯು ಬಂದೇ ಬರುತ್ತದೆ. ಈ ಅಧಿಕರಣದಲ್ಲಿ ಟೀಕೆಯ ಕಠಿಣಪದಾರ್ಥಗಳನ್ನು ವ್ಯಾಖ್ಯಾನ ಮಾಡುವ ಸಂದರ್ಭದಲ್ಲೇ ಸ್ಪಷ್ಟಪಡಿಸಲಾಗಿದೆ.

ಇಲ್ಲಿಗೆ ಶ್ರೀ ಬ್ರಹ್ಮಣ್ಯತೀರ್ಥಪೂಜ್ಯಶ್ರೀಪಾದಶಿಷ್ಯಂದಿರಾದ ಶ್ರೀ ವ್ಯಾಸತೀರ್ಥಯತಿಗಳಿಂದ ವಿರಚಿತವಾದ ತಾತ್ಪರ್ಯಚಂದ್ರಿಕೆಯ ಕನ್ನಡಾನುವಾದದಲ್ಲಿ
ನಸಂಖ್ಯೋಪಸಂಗ್ರಹಾಧಿಕರಣವು ಸಂಪೂರ್ಣವಾಯಿತು

**प्रकाशः –**

''न चायमस्ति नियमोऽन्तराले सङ्ग्राहकेण विना संख्यानिवेशो नास्ति'' इत्यादिसुधोक्तं व्यनक्ति – **किञ्चेति** ।।

ವಿವರಣೆ - ''ನ ಚಾಯಮಸ್ತಿ ನಿಯಮೋಽಂತರಾಲೇ ಸಂಗ್ರಾಹಕೇಣ ವಿನಾ ಸಂಖ್ಯಾನಿವೇಶೋ ನಾಸ್ತಿ'' ಅವಾಂತರ ವಿಭಾಗದಲ್ಲಿ ಸಂಗ್ರಾಹಕಧರ್ಮವಿಲ್ಲದಿದ್ದರೆ ಸಂಖ್ಯೆಗಳನ್ನು ಹೇಳಬಾರದು ಎಂಬ ನಿಯಮವಿರುವುದಿಲ್ಲ ಇತ್ಯಾದಿಯಾಗಿ ನ್ಯಾಯಸುಧೆಯಲ್ಲಿ ಹೇಳಿದ್ದಾರೆ. ಅದನ್ನೇ ಗ್ರಂಥಕಾರರು 'ಕಿಂಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಿದ್ದಾರೆ.

**प्रकाशः** – त्वत्पक्षेपीति ।। ''प्राणादयः'' इति सूत्रे पञ्चजनाः प्राणादय इति स्वीकृतेरिति भावः ।।

ಏಕೆಂದರೆ ನಿಮ್ಮ ಅದ್ವೈತ ಸಿದ್ಧಾಂತದಲ್ಲಿಯೂ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ 'ಪ್ರಾಣಾದಯಃ' ಎಂದರೆ ಪ್ರಾಣ ಮೊದಲಾದ ಐದು ತತ್ವಗಳು ಎಂಬರ್ಥವನ್ನು ಸ್ವೀಕರಿಸಿದ್ದೀರಿ. ಯಾವುದೇ ಸಂಗ್ರಾಹಕಧರ್ಮವಿಲ್ಲದಿದ್ದರೂ ಪ್ರಾಣಾದಿಗಳಲ್ಲಿ ಪಂಚತ್ವ ಸಂಖ್ಯೆಯನ್ನು ನೀವು ಒಪ್ಪಿರುವುದರಿಂದ ಸಂಗ್ರಾಹಕಧರ್ಮವಿಲ್ಲದಿದ್ದರೆ ಸಂಖ್ಯಾನಿವೇಶ ಮಾಡಬಾರದೆಂಬ ನಿಯಮ ಮಾಡಲು ಸಾಧ್ಯವಿಲ್ಲ.

**प्रकाशः – पञ्चेति** ।। अत्र द्वादशवार्षिकानावृष्टिप्रतीतेस्तदवान्तरसंख्यानिर्देश-दर्शनादिति भावः । तथा ''व्रतम्'' इत्यत्र चतुर्दशवर्षप्रतीतेस्तत्रापि व्यभिचार इति भावः।

'ಯತ್ರ ಮಹಾಸಂಖ್ಯಾ ಮಧ್ಯೇ ಅವಾಂತರ ಸಂಖ್ಯಾ ನಿವೇಶಃ ತತ್ರ ಸಂಗ್ರಾಹಕಧರ್ಮಾಣಾಂ ಆವಶ್ಯಕತ್ವಮ್' ಎಂಬ ಅದ್ವೈತಿಗಳು ಹೇಳಿದ ವ್ಯಾಪ್ತಿಗೆ ವ್ಯಭಿಚಾರ ಬರುತ್ತದೆ - 'ಪಂಚಸಪ್ತಚ ವರ್ಷಾಣಿ ನವವರ್ಷ ಶತಕ್ರತುಃ' ಐದೇಳು ವರ್ಷಗಳ ಕಾಲ ಇಂದ್ರನು ಮಳೆಯನ್ನು ಸುರಿಸಲಿಲ್ಲ. ಅಂದರೆ ಹನ್ನೆರಡು ವರ್ಷಕಾಲ ಮಳೆಯಾಗಲಿಲ್ಲ ಎಂದರ್ಥ. ಹನ್ನೆರಡು ಎಂಬ ಮಹಾಸಂಖ್ಯೆಯ ಮಧ್ಯದಲ್ಲಿ ಐದು ಏಳು ಎಂಬ ಅವಾಂತರ ಸಂಖ್ಯೆಯನ್ನು ಇಲ್ಲಿ ನಿರ್ದೇಶಿಸಲಾಗಿದೆ. ಆದರೂ ಕೂಡ ಸಂಗ್ರಾಹಕಧರ್ಮವು ಕಾಣಿಸುತ್ತಿಲ್ಲ.

ಇದರಂತೆ 'ವ್ರತಮೇತದನುಷ್ಠೇಯಂ ವರ್ಷಾಣಿ ನವ ಪಂಚ ಚ' ಒಂಭತ್ತು ಐದು ವರ್ಷಗಳ ಕಾಲ ವ್ರತವನ್ನು ಆಚರಿಸಬೇಕು. ಅಂದರೆ ಹದಿನಾಲ್ಕುವರ್ಷಗಳ ಕಾಲ ವ್ರತವನ್ನು ಆಚರಿಸಬೇಕು ಎಂದು ಇದರ ಅರ್ಥ. ಇಲ್ಲಿಯೂ ಕೂಡ ಹದಿನಾಲ್ಕು ಎಂಬ ಮಹಾಸಂಖ್ಯೆಗಳ ಮಧ್ಯದಲ್ಲಿ ಒಂಭತ್ತು ಮತ್ತು ಐದು ಎಂಬ ಅವಾಂತರಸಂಖ್ಯೆಯನ್ನು ಪರಿಗಣಿಸಲಾಗಿದೆ. ಇಲ್ಲಿಯೂ ಕೂಡ ಸಂಗ್ರಾಹಕಧರ್ಮವಿಲ್ಲದ ಕಾರಣ ವ್ಯಭಿಚಾರ ಬರುತ್ತದೆಂದು ತಿಳಿಯಬೇಕು.

ಪರಿಪೂರ್ಣಚಂದ್ರಿಕಾ

**प्रकाशः** – नन्विदमाशंक्योक्तं भामतीभाष्ययोः ''यद्यपि परसंख्यायामवान्तर-द्वित्वादिसंख्या नास्ति । तथापि तत्पूर्वकं तस्यास्सम्भवात्पौर्वापर्यलक्षणया प्रत्यासत्त्या परसंख्यालक्षणार्थं पूर्वसंख्योपन्यस्यत इति लक्षणैव दोषस्स्यादिति'' इति चेत्

ಆಕ್ಷೇಪ - ಈ ವ್ಯಭಿಚಾರದೋಷವನ್ನು ಆಶಂಕಿಸಿಕೊಂಡು ಭಾಮತಿ ಹಾಗೂ ಶಾಂಕರಭಾಷ್ಯದಲ್ಲಿಯೇ ಹೀಗೆ ಉತ್ತರವನ್ನು ನೀಡಿದ್ದಾರೆ - ''ಯದ್ಯಪಿ ಪರಸಂಖ್ಯಾಯಾಮವಾಂತರದ್ವಿತ್ವಾದಿಸಂಖ್ಯಾ ನಾಸ್ತಿ । ತಥಾಪಿ ತತ್ಪೂರ್ವಕಂ ತಸ್ಯಾಸ್ಸಂಭವಾತ್ಪೌರ್ವಾಪರ್ಯಲಕ್ಷಣಯಾ ಪ್ರತ್ಯಾಸತ್ತ್ಯಾ ಪರಸಂಖ್ಯಾಲಕ್ಷಣಾರ್ಥಂ ಪೂರ್ವಸಂಖ್ಯೋಪನ್ಯಸ್ಯತ ಇತಿ ಲಕ್ಷಣೈವ ದೋಷಃ ಸ್ಯಾದಿತಿ'' ವಸ್ತುತಃ ಮಹಾಸಂಖ್ಯೆಯಲ್ಲಿ ಅವಾಂತರ-ಸಂಖ್ಯೆಯೆನಿಸಿದ ದ್ವಿತ್ವಾದಿಗಳು ಇರಲು ಸಾಧ್ಯವಿಲ್ಲ. ಆದರೂ ಕೂಡ ಅವಾಂತರಸಂಖ್ಯೆಯ ಮೂಲಕ ಮಹಾಸಂಖ್ಯೆಯನ್ನು ಲಕ್ಷಣಯಾ ತಿಳಿಯಲು ಇಂತಹ ಪ್ರಯೋಗಗಳು ಶ್ರುತಿಯಲ್ಲಿ ಕಾಣಿಸುತ್ತವೆ. ಪ್ರಕೃತ ಇಪ್ಪತ್ತೈದು ಎಂಬ ಮಹಾಸಂಖ್ಯೆಯನ್ನು ತಿಳಿಯುವುದಕ್ಕಾಗಿ 'ಯಸ್ಮಿನ್ ಪಂಚ' ಎಂಬ ಶ್ರುತಿಯಲ್ಲಿ ಪಂಚ ಎಂಬ ಶಬ್ದವನ್ನು ಉಲ್ಲೇಖಿಸಲಾಗಿದೆ. ಪಂಚ ಎಂಬ ಶಬ್ದಕ್ಕೆ ಐದು ಸಂಖ್ಯೆ ಎಂದರ್ಥ. ಈ ಸಂಖ್ಯೆಯ ಮೂಲಕವೇ ಇಪ್ಪತ್ತೈದು ಎಂಬ ಸಂಖ್ಯೆಯನ್ನು ತಿಳಿಯಲು ಸಾಧ್ಯವಾಗುವ ಕಾರಣ ಪೌರ್ವಾಪರ್ಯ ಎಂಬ ಶಕ್ತಿಸಂಬಂಧದ ಮೂಲಕ ಪಂಚ ಶಬ್ದಕ್ಕೆ ಇಪ್ಪತ್ತೈದು ಎಂಬ ಅರ್ಥದಲ್ಲಿ ಲಕ್ಷಣಾ ಮಾಡಬೇಕು. ಹೀಗೆ ಮಹಾಸಂಖ್ಯೆಯನ್ನು ಲಕ್ಷಣಯಾ ತಿಳಿಯುವುದಕ್ಕಾಗಿ ಹಿಂದಿನ ಸಂಖ್ಯೆಯ ಉಪನ್ಯಾಸವನ್ನು ಶ್ರುತಿಗಳಲ್ಲಿ ಮಾಡಲಾಗಿದೆ. ಹೀಗೆ ಹೇಳಿದರೆ ಲಕ್ಷಣಾ ಮಾಡಬೇಕಾಗುತ್ತದೆ.

**प्रकाशः** – मैवम् । त्वत्पक्षे पञ्च जनशब्दस्य ''दिक्संख्ये संज्ञायाम्'' इति समासस्वीकारे प्राणादिषु रूढेरभावेन प्रसिद्धमनुष्यसमुद्रान्तस्स्थासुरपरत्वत्यागेना-प्रसिद्धार्थस्वीकारादपि ''सोमेन यजेत'' इत्यादाविव लक्षणाया एव ज्यायस्त्वात् । अत एव सोमपदं न कर्मनाम । किन्तु सोमवता यागेनेति मत्वर्थलक्षणामङ्गीकृत्य रूढलतारूपद्रव्यपरमित्युपेतम् ।

ಸಮಾಧಾನ - ಲಕ್ಷಣಾವನ್ನು ಆಶ್ರಯಿಸುವುದೇ ಲೇಸು, ಏಕೆಂದರೆ ನಿಮ್ಮ ಅದ್ವೈತಪಕ್ಷದಲ್ಲಿ ಪಂಚ ಜನ ಶಬ್ದಕ್ಕೆ ಅಪ್ರಸಿದ್ಧವಾದ ಅರ್ಥವನ್ನು ಕಲ್ಪನೆ ಮಾಡುತ್ತೀರಿ. ವಾಸ್ತವಿಕವಾಗಿ 'ದಿಕ್‌ಸಂಖ್ಯೇ ಸಂಜ್ಞಾಯಾಮ್' ಎಂಬ ಸೂತ್ರದಂತೆ ಸಮಾಸವನ್ನು ಸ್ವೀಕರಿಸಿದಾಗ ಪ್ರಸಿದ್ಧರಾದ ಮನುಷ್ಯ ಎಂಬರ್ಥವು ಪಂಚ ಜನ ಶಬ್ದದಿಂದ ತಿಳಿಯುತ್ತದೆ. ಅಥವಾ ಪಂಚ ಜನ ಎಂಬ ಅಸುರನು ಸಮುದ್ರದಲ್ಲಿ ಇರುತ್ತಾನೆ. ಅಂತಹ ಅಸುರನನ್ನು ಕೊಂದು ಶ್ರೀಕೃಷ್ಣನು ಪಾಂಚಜನ್ಯ ಶಂಖವನ್ನು ಪಡೆಯುತ್ತಾನೆ. ಅಂತಹ ಪಂಚ ಜನ ಎಂಬ ಅಸುರನು ಈ ಪಂಚ ಜನ ಶಬ್ದಕ್ಕೆ ರೂಢಾರ್ಥನಾಗಿದ್ದಾನೆ. ಹೀಗೆ ಮನುಷ್ಯ ಅಥವಾ ಪಂಚ ಜನ ಎಂಬ ಅಸುರ ಈ ಎರಡೂ ಬಗೆಯ ರೂಢಾರ್ಥಗಳನ್ನು ಬಿಟ್ಟು ಅಪ್ರಸಿದ್ಧವಾದ ಪ್ರಾಣಾದಿಗಳು ಎಂಬರ್ಥವನ್ನು ನೀವು ಸ್ವೀಕರಿಸುತ್ತಿದ್ದೀರಿ. ಅಪ್ರಸಿದ್ಧವಾದ ಅರ್ಥವನ್ನು ಸ್ವೀಕರಿಸುವುದಕ್ಕಿಂತ ಲಕ್ಷಣಾ ಮಾಡುವುದೇ ಶ್ರೇಷ್ಠವಾಗಿದೆ. ಉದಾಹರಣೆ - 'ಸೋಮೇನ ಯಜೇತ' ಎಂಬ ವಾಕ್ಯವನ್ನು ನೋಡಿದಾಗ ಸೋಮ ಎಂಬ ಯಾಗವಿಶೇಷ-

ದಿಂದ ಕರ್ಮವನ್ನು ಆಚರಿಸಬೇಕು ಎಂಬರ್ಥವು ಆಪಾತತಃ ಕಾಣಿಸುತ್ತದೆ. ಆದರೆ ಪೂರ್ವಮೀಮಾಂಸಕರು ಸೋಮಶಬ್ದಕ್ಕೆ ರೂಢ್ಯರ್ಥವನ್ನು ಬಿಟ್ಟು ಲಕ್ಷಣಾರ್ಥವನ್ನೇ ಸ್ವೀಕರಿಸಿದ್ದಾರೆ. 'ಸೋಮೇನ' ಎಂದರೆ ಸೋಮಲತೆಯುಳ್ಳ ಯಾಗದಿಂದ ಎಂಬುದಾಗಿ ಮತ್ವರ್ಥದಲ್ಲಿ ಲಕ್ಷಣಾವನ್ನು ಅಂಗೀಕರಿಸಿದ್ದಾರೆ. ಆದ್ದರಿಂದ ಸೋಮಪದಕ್ಕೆ ರೂಢವಾದ ಲತೆ ಎಂಬ ದ್ರವ್ಯವನ್ನೇ ಒಪ್ಪಿ ಪ್ರಸಿದ್ಧಾರ್ಥವನ್ನು ಸ್ವೀಕರಿಸಿದ್ದಾರೆ. ಹೀಗೆ ಅಪ್ರಸಿದ್ಧಾರ್ಥವನ್ನು ಹೇಳುವುದಕ್ಕಿಂತ ಲಕ್ಷಣಾವನ್ನು ಆಶ್ರಯಿಸುವುದೇ ಶ್ರೇಷ್ಠವೆಂದು ಪೂರ್ವಮೀಮಾಂಸೆಯಲ್ಲಿ ನಿರ್ಣಯವಾಗಿದೆ. ಅದರಂತೆ ಪಂಚ ಜನ ಶಬ್ದಕ್ಕೆ ಅಪ್ರಸಿದ್ಧವಾದ ಪ್ರಾಣಾದಿಗಳು ಎಂಬರ್ಥವನ್ನು ಹೇಳುವುದಕ್ಕಿಂತ ಪ್ರಸಿದ್ಧವಾದ ಇಪ್ಪತ್ತೈದು ಎಂಬರ್ಥದಲ್ಲಿ ಲಕ್ಷಣಾ ಮಾಡುವುದೇ ಸೂಕ್ತವಾಗಿದೆ.

**प्रकाशः – समाहारेतु ''समासश्चायुक्तः'' इति सुधायामेव परीक्षितमिति भावः।।**

ಒಂದು ವೇಳೆ 'ಪಂಚ ಜನಾಃ' ಎಂಬ ಶಬ್ದದಲ್ಲಿ ಸಮಾಹಾರ ದ್ವಿಗುಸಮಾಸವನ್ನು ಮಾಡುವುದಾದಲ್ಲಿ ನ್ಯಾಯಸುಧೆಯಲ್ಲಿಯೇ ಅದರ ನಿರಾಕರಣೆಯನ್ನು ಮಾಡಿರುತ್ತಾರೆ. ಐದು ಜನರ ಅನೇಕ ಸಮುದಾಯಗಳು ಎಂಬರ್ಥವು ಸಮಾಹಾರ ದ್ವಿಗುಸಮಾಸ ಮಾಡಿದಾಗ ದೊರೆಯುತ್ತದೆ. ಅದಕ್ಕೆ ಪುನಃ ಐದು ಎಂಬ ವಿಶೇಷ್ಯವನ್ನು ಸೇರಿಸಿದಾಗ ಐದು ಐವರ ಸಮುದಾಯಗಳೆಂದು ಇಪ್ಪತ್ತೈದು ತತ್ವಗಳು ಎಂದಂತಾಗುತ್ತದೆ. ಹೀಗೆ ಹೇಳಬಾರದು. ಸಮಾಹಾರ ದ್ವಿಗುಸಮಾಸದಲ್ಲಿ ಪುಲ್ಲಿಂಗ ಕೂಡುವುದಿಲ್ಲ. ಸ್ತ್ರೀಲಿಂಗ ಅಥವಾ ನಪುಂಸಕಲಿಂಗ ಬರಬೇಕಾಗುತ್ತದೆ ಎಂಬ ದೋಷವನ್ನು ನ್ಯಾಯಸುಧೆಯಲ್ಲಿ ಹೇಳಿರುತ್ತಾರೆ.

**प्रकाशः – द्वितीयेपीति ।। सूत्रइत्यन्वयः ।। दूषितमिति ।। द्वितीयान्त-निर्दिष्टमित्यादिनेति भावः । एतेन केषाञ्चिद्द्वितीयसूत्रार्थोऽपि निरस्तो ध्येयः ।।**

'ದ್ವಿತೀಯೇಪಿ' ಎಂಬುದಕ್ಕೆ 'ಸೂತ್ರ' ಎಂಬಲ್ಲಿ ಅನ್ವಯವನ್ನು ತಿಳಿಯಬೇಕು. 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರಾರ್ಥವೂ ಕೂಡ ಅಸಾಧುವಾಗಿದೆ. ಏಕೆಂದರೆ ದ್ವಿತೀಯಾ-ವಿಭಕ್ತ್ಯಂತವಾದ ಪ್ರಾಣಾದಿಗಳೇ ಪ್ರಧಾನರಾಗಿದ್ದಾರೆ. ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳು ಅಪ್ರಧಾನರಾಗಿದ್ದಾರೆ. ಆದರೆ ನೀವು ಷಷ್ಠೀನಿರ್ದಿಷ್ಟರಾದ ಪ್ರಾಣಾದಿಗಳನ್ನೇ ಸ್ವೀಕರಿಸುತ್ತಿದ್ದೀರಿ. ಇದು ಅಸಾಧುವಾಗಿದೆಯೆಂಬುದನ್ನು ನಮ್ಮ ಸಿದ್ಧಾಂತದ ಪೂರ್ವಪಕ್ಷದಲ್ಲಿಯೇ ನಿರಾಕರಣೆ ಮಾಡಿರುತ್ತೇವೆ. ಹೀಗೆ ಹೇಳಿದ್ದರಿಂದಲೇ ರಾಮಾನುಜರು ಹೇಳುವ ಎರಡನೆಯ ಸೂತ್ರಾರ್ಥವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು.

**प्रकाशः – ग्राह्यत्वादिति ।। परभाष्ये तथैवोक्तत्वाचेत्यपि ग्राह्यं । द्वितीयानिर्दिष्टाएवेति ।। अन्यथा चतुर्णामब्रह्मत्वं पञ्चमस्य तु ब्रह्मत्वमिति वैरूप्यापातात्**

'ಗ್ರಾಹ್ಯತ್ವಾತ್' ಎಂಬಲ್ಲಿ ಪರಭಾಷ್ಯದಲ್ಲಿ ಹಾಗೆಯೇ ಹೇಳಿದ್ದಾರೆಂಬುದನ್ನೂ ಕೂಡ ವಿವಕ್ಷಿಸಬೇಕು. 'ಜ್ಯೋತಿಷಾಂ ಜ್ಯೋತಿಃ' ಎಂಬಲ್ಲಿ ದ್ವಿತೀಯಾವಿಭಕ್ತಿಯ ಏಕವಚನದಲ್ಲಿರುವ 'ಜ್ಯೋತಿಃ' ಎಂಬುದನ್ನೇ 'ಜ್ಯೋತಿಷಾ' ಎಂಬ ಏಕವಚನಾಂತವಾದ ಸೂತ್ರದಲ್ಲಿರುವ ಪದದಿಂದ ವಿವಕ್ಷಿಸಲಾಗಿದೆ. ಇದರಂತೆ ಎರಡನೆಯ ಸೂತ್ರದಲ್ಲಿಯೂ ಪ್ರಾಣಾದಿ ಶಬ್ದಗಳಿಂದ ದ್ವಿತೀಯಾವಿಭಕ್ತಿಯಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳನ್ನೇ ವಿವಕ್ಷಿಸಬೇಕು ಎಂದು ಪರಭಾಷ್ಯದಲ್ಲಿಯೇ ಹೇಳಿರುತ್ತಾರೆ.

ಪರಿಪೂರ್ಣಚಂದ್ರಿಕಾ

'ಪ್ರಾಣಾದಯೋ ವಾಕ್ಯಶೇಷಾತ್' ಎಂಬಲ್ಲಿ ಪ್ರಾಣಾದಿಗಳು ಎಂದರೆ ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು ಈ ನಾಲ್ಕನ್ನು ಷಷ್ಠ್ಯಂತನಿರ್ದಿಷ್ಟವಾದ ಪದದಿಂದ ವಿವಕ್ಷಿಸಲಾಗಿದೆ. ಆದ್ದರಿಂದ ಈ ನಾಲ್ಕೂ ಕೂಡ ಅಬ್ರಹ್ಮರಾಗಿದ್ದಾರೆ. ಆದರೆ ಮುಂದಿನ 'ಜ್ಯೋತಿಷಾ' ಎಂಬ ಪದದಿಂದ ದ್ವಿತೀಯಾನಿರ್ದಿಷ್ಟವಾದ 'ಜ್ಯೋತಿಃ' ಎಂಬ ಪದದಿಂದ ನಿರ್ದೇಶಿಸಲ್ಪಟ್ಟದ್ದನ್ನು ತೆಗೆದುಕೊಳ್ಳಲಾಗಿದೆ. ಆದ್ದರಿಂದ ಜ್ಯೋತಿಯು ಬ್ರಹ್ಮನಾಗಿರುತ್ತಾನೆ ಎಂದು ಅವರ ವ್ಯಾಖ್ಯಾನ. ಹೀಗೆ ಹೇಳಿದಾಗ ಐದು ತತ್ವಗಳ ಮಧ್ಯದಲ್ಲಿ ನಾಲ್ಕು ಅಬ್ರಹ್ಮ, ಜ್ಯೋತಿಯು ಮಾತ್ರ ಬ್ರಹ್ಮ ಎಂದು ಹೇಳಿದಂತಾಯಿತು. ಹೀಗೆ ಹೇಳಿದರೆ ವೈರೂಪ್ಯದೋಷ ಬರುತ್ತದೆ. ಅದಕ್ಕೋಸ್ಕರ ನಾವು ಹೇಳುವಂತೆ ಎಲ್ಲೆಡೆಯು ದ್ವಿತೀಯಾನಿರ್ದಿಷ್ಟವಾದದ್ದನ್ನೇ ತೆಗೆದುಕೊಳ್ಳಬೇಕು. ಆವಾಗ ಬ್ರಹ್ಮನ ಐದು ರೂಪಗಳನ್ನು ತೆಗೆದುಕೊಂಡಂತೆ ಆಗುತ್ತದೆ.

**प्रकाशः – ''स्वे महिम्नि प्रतिष्ठितः'' इत्यादिना स्वाश्रितत्वनिर्वाहस्य पञ्चमस्य ब्रह्मत्व इव पञ्चानां ब्रह्मत्वेऽपि साम्यात् ।**

'ಸ್ವೇ ಮಹಿಮ್ನಿ ಪ್ರತಿಷ್ಠಿತಃ' ಎಂಬ ಶ್ರುತ್ಯರ್ಥವನ್ನು ತಿಳಿಯಬೇಕೆಂದರೆ ಐದೂ ತತ್ವಗಳನ್ನು ಬ್ರಹ್ಮಸ್ವರೂಪವೆಂದು ಹೇಳಬಾರದು. ಹೊರತಾಗಿ ಒಂದನ್ನು ಬ್ರಹ್ಮನೆಂದು ಹೇಳಿ, ಉಳಿದದ್ದು ಆ ಬ್ರಹ್ಮನಲ್ಲೇ ಆಶ್ರಿತವಾಗಿದೆಯೆಂದೇ ಹೇಳಬೇಕಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ಐದೂ ತತ್ವಗಳು ಬ್ರಹ್ಮಸ್ವರೂಪವೆಂದು ಹೇಳಿದರೆ ಸ್ವಪ್ರತಿಷ್ಠಿತತ್ವವು ಅಸಂಭಾವಿತವೆಂದು ಹೇಗೆ ಹೇಳುತ್ತಿರೋ, ಅದರಂತೆ ಐದನೆಯ ತತ್ವವೆನಿಸಿದ ಜ್ಯೋತಿಯನ್ನು ಬ್ರಹ್ಮನೆಂದು ಹೇಳಿದರೂ ಕೂಡ ಸ್ವಪ್ರತಿಷ್ಠಿತತ್ವವು ಯುಕ್ತವಾಗುವುದಿಲ್ಲ. ಏಕೆಂದರೆ ಶ್ರುತಿಯಲ್ಲಿ 'ಯಸ್ಮಿನ್ ಪಂಚ ಪಂಚ ಜನಾಃ ಪ್ರತಿಷ್ಠಿತಃ' ಎಂಬುದಾಗಿ 'ಯಸ್ಮಿನ್' ಎಂಬುದಾಗಿ ಬ್ರಹ್ಮನನ್ನೇ ಅಧಿಕರಣನೆಂದು ಹೇಳಿದ್ದರಿಂದ ಬ್ರಹ್ಮನಲ್ಲಿ ಐದನೆಯ ಜ್ಯೋತಿಯೆನಿಸಿದ ಬ್ರಹ್ಮನು ಇದ್ದಾನೆ ಎಂದು ಸ್ವಪ್ರತಿಷ್ಠಿತತ್ವವನ್ನು ಹೇಳಿದಂತಾಗುತ್ತದೆ. ಆದ್ದರಿಂದ ಐದೂ ತತ್ವಗಳನ್ನು ಬ್ರಹ್ಮಸ್ವರೂಪವೆಂದು ಹೇಳಿದಾಗ ಸ್ವಪ್ರತಿಷ್ಠಿತತ್ವದ ಅನುಪಪತ್ತಿಯು ಏನು ಬರುತ್ತದೋ, ಅದು ಐದನೆಯ ತತ್ವವು ಬ್ರಹ್ಮವೆಂದು ಹೇಳಿದಾಗಲೂ ಕೂಡ ಬಂದೇ ಬರುತ್ತದೆ. ಈ ದೋಷವನ್ನು ಪರಿಹರಿಸಿಕೊಳ್ಳಲು ಯಾವ ಉತ್ತರವನ್ನು ನೀವು ಹೇಳುತ್ತೀರೋ, ಅದನ್ನು ಐದೂ ತತ್ವಗಳು ಭಿನ್ನಸ್ವರೂಪವೆಂದು ಹೇಳಿದಾಗಲೂ ತಿಳಿಯಬೇಕು.

**प्रकाशः – माध्यन्दिनशाखायां पञ्चत्वसंख्यापूरकत्वरहितब्रह्मणः काण्वशाखायां पञ्चत्वसंख्यापूरकत्वायोगाच्च**

ಮತ್ತು ಅದ್ವೈತಿಗಳು ಮಾಧ್ಯಂದಿನಶಾಖೆಯಲ್ಲಿರುವ ವಾಕ್ಯವನ್ನು ಸ್ವೀಕರಿಸಿದಾಗ ಬ್ರಹ್ಮನನ್ನು ಸ್ವೀಕರಿಸುವುದೇ ಇಲ್ಲ. ಏಕೆಂದರೆ 'ಪ್ರಾಣಸ್ಯ ಪ್ರಾಣಮ್' 'ಚಕ್ಷುಷಶ್ಚಕ್ಷುಃ' 'ಶ್ರೋತ್ರಸ್ಯ ಶ್ರೋತ್ರಮ್', 'ಮನಸೋ ಮನಃ' 'ಅನ್ನಸ್ಯ ಅನ್ನಂ' ಎಂಬಲ್ಲಿ ಷಷ್ಠೀನಿರ್ದಿಷ್ಟವಾದ ಅನ್ನವನ್ನೇ ಪಂಚ ಜನಶಬ್ದದಿಂದ ತೆಗೆದುಕೊಳ್ಳಲಾಗಿದೆ. ಆವಾಗ ಎಲ್ಲವನ್ನೂ ಷಷ್ಠೀನಿರ್ದಿಷ್ಟವಾದದ್ದನ್ನೇ ತೆಗೆದುಕೊಂಡಿದ್ದರಿಂದ ಬ್ರಹ್ಮನಿಗೆ ಪ್ರಸಕ್ತಿಯೇ ಇಲ್ಲ. ಏಕೆಂದರೆ ಷಷ್ಠೀನಿರ್ದಿಷ್ಟವಾದ ಪದದಿಂದ ಪ್ರತಿಪಾದ್ಯವಾದದ್ದು ಯಾವುದೂ ಕೂಡ ಬ್ರಹ್ಮನಲ್ಲ. ಆದ್ದರಿಂದ ಮಾಧ್ಯಂದಿನ ಶಾಖೆಯಲ್ಲಿ ಹೇಳಲ್ಪಟ್ಟ ಪಂಚ ಜನರನ್ನು ವಿವಕ್ಷಿಸಿದಾಗ ಅಬ್ರಹ್ಮಭೂತವಾದ ಪಂಚ ಜನರನ್ನೇ ತೆಗೆದುಕೊಂಡಂತೆ ಆಯಿತು. ಆದರೆ ಕಾಣ್ವಶಾಖೆಯ ಪ್ರಕಾರ 'ಅನ್ನಸ್ಯ ಅನ್ನಮ್' ಎಂಬುದು ಇರುವುದಿಲ್ಲ. ಹೊರತಾಗಿ 'ಜ್ಯೋತಿಷಾಂ ಜ್ಯೋತಿಃ' ಎಂಬುದನ್ನು ವಿವಕ್ಷಿಸಬೇಕು.

ಇಲ್ಲಿ ದ್ವಿತೀಯಾ ವಿಭಕ್ತ್ಯಂತವಾದ 'ಜ್ಯೋತಿಃ' ಎಂಬ ಪದದಿಂದ ಬ್ರಹ್ಮನು ನಿರ್ದಿಷ್ಟನಾಗಿದ್ದಾನೆ. ಅವನನ್ನು ಇಲ್ಲಿ ಪಂಚ ಜನಶಬ್ದದಿಂದ ವಿವಕ್ಷಿಸುತ್ತಿದ್ದಾರೆ. ಹೀಗೆ ಹೇಳಿದಾಗ ಒಂದು ಶಾಖೆಯ ಪ್ರಕಾರ ಐದುತತ್ವಗಳೂ ಕೂಡ ಬ್ರಹ್ಮನಲ್ಲ. ಕಾಣ್ವಶಾಖೆಯ ಪ್ರಕಾರ ನಾಲ್ಕು ಬೇರೆ ತತ್ವಗಳು ಒಂದುಮಾತ್ರ ಬ್ರಹ್ಮತತ್ವ ಎಂದು ಹೇಳಿದಂತಾಯಿತು. ಹೀಗೆ ಹೇಳಿದಾಗ ಎರಡು ಶಾಖೆಗಳಿಗೆ ಪರಸ್ಪರ ವಿರೋಧವನ್ನು ಅದ್ವೈತಿಗಳು ಒಪ್ಪಿದಂತಾಯಿತು. ಆದ್ದರಿಂದ ಮಾಧ್ಯಂದಿನ ಶಾಖೆಯಲ್ಲಿ ಪಂಚತ್ವ ಎಂಬ ಸಂಖ್ಯೆಗೆ ಬ್ರಹ್ಮನು ಪೂರಕನಾಗಿಲ್ಲ. ಆದರೆ ಕಾಣ್ವಶಾಖೆಯಲ್ಲಿ ಪಂಚತ್ವ ಸಂಖ್ಯೆಗೆ ಪೂರಕನಾಗಿದ್ದಾನೆಂದು ಹೇಳಲು ಹೇಗೆ ಸಾಧ್ಯ ?

**प्रकाशः** – शाखाद्वयेऽपि पञ्च जनशब्दितानां द्वितीयान्तप्राणादिपदनिर्दिष्ट-ब्रह्मरूपत्वमेवोपेयमिति भावः ॥

ಆದ್ದರಿಂದ ಎರಡೂ ಶಾಖೆಗಳಲ್ಲಿ ವೈರೂಪ್ಯವು ಬರಬಾರದೆಂದರೆ ಪಂಚ ಜನ ಶಬ್ದದಿಂದ ಹೇಳಲ್ಪಟ್ಟವರು ಐದೂ ಕೂಡ ಬ್ರಹ್ಮನ ರೂಪಗಳೇ ಆಗಿವೆಯೆಂದು ಒಪ್ಪಬೇಕು. 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ವಾಕ್ಯದಲ್ಲಿ ದ್ವಿತೀಯಾವಿಭಕ್ತ್ಯಂತವಾದ 'ಪ್ರಾಣಮ್' ಇತ್ಯಾದಿ ಪದಗಳಿಂದ ನಿರ್ದೇಶಿಸಲ್ಪಟ್ಟ ಬ್ರಹ್ಮನ ರೂಪಗಳೇ ಪಂಚ ಜನ ಶಬ್ದದಿಂದ ವಿವಕ್ಷಿತವಾಗಿವೆ ಎಂದು ಒಪ್ಪಿದಾಗ ಈ ಯಾವ ಬಾಧಕಗಳೂ ಕೂಡ ಬರುವುದಿಲ್ಲ.

**प्रकाशः** – **एतेनैवेति** ॥ मतयोरविशेषादुक्तदूषणेनैव निरास इति भावः । अधिकरणानुत्थितिश्चाह – **किञ्चेति** ॥ वाक्यशेषाधिकरणमुक्तं समन्वयसूत्रे । श्रुतप्रकाशोक्तमधिकाशङ्काप्रकारमाशङ्कते ॥ **नन्विति** ॥

ಹೀಗೆ ಅದ್ವೈತಮತವನ್ನು ನಿರಾಕರಣೆ ಮಾಡಿದ್ದರಿಂದ ಅದ್ವೈತಿಗಳಿಗಿಂತ ಏನು ವ್ಯತ್ಯಾಸವಿಲ್ಲದಂತೆ ವ್ಯಾಖ್ಯಾನ ಮಾಡುವ ರಾಮಾನುಜರ ಮತವನ್ನೂ ಕೂಡ ನಿರಾಕರಣೆ ಮಾಡಿದಂತೆ ಆಯಿತು. ರಾಮಾನುಜರ ಪ್ರಕಾರ ಈ ಅಧಿಕರಣವು ಅನಾರಂಭಣೀಯವೇ ಆಗುತ್ತದೆಂಬುದನ್ನು 'ಕಿಂಚ' ಇತ್ಯಾದಿ ಗ್ರಂಥದಿಂದ ಸಮರ್ಥನೆ ಮಾಡುತ್ತಿದ್ದಾರೆ. ಪೂರ್ವಮೀಮಾಂಸೆಯ ವಾಕ್ಯಶೇಷಾಧಿಕರಣವನ್ನು ಸಮನ್ವಯಸೂತ್ರದಲ್ಲಿಯೇ ವಿವರಿಸಿದ್ದಾಗಿದೆ. ಶ್ರುತಪ್ರಕಾಶದಲ್ಲಿ ಅಧಿಕಾಶಂಕೆಯಿರುವುದರಿಂದ ಈ ಅಧಿಕರಣವು ಸಾರ್ಥಕವಾಗಿದೆಯೆಂದು ಸಮರ್ಥಿಸಿದ್ದಾರೆ. ಇದನ್ನು 'ನನು' ಇತ್ಯಾದಿ ಗ್ರಂಥದಿಂದ ಆಶಂಕಿಸುತ್ತಿದ್ದಾರೆ.

**प्रकाशः** – **बह्वनुग्रहेति** ॥ द्वादशे द्वितीयपादे "विप्रतिषिद्धधर्माणां समन्वये भूयसां स्यात् सधर्मत्वम्" इत्यष्टमेऽधिकरणे चिन्तितं पञ्चदशरात्रे प्रथममहर-ग्निष्टुन्नामकम् । तत्र नामातिदेशेनैकाहाग्निष्टुद्धर्मभूताग्नेयी सुब्रह्मण्या प्राप्नोति । इतरेषु त्वहस्सु यथाप्रकृत्यैन्द्री । तत्रोपसद्दिवसेतु का द्वयोराह्वातव्येति संशये

ಬಹ್ವನುಗ್ರಹನ್ಯಾಯವನ್ನು ಪೂರ್ವಮೀಮಾಂಸೆಯಲ್ಲಿ ಹೀಗೆ ಹೇಳಿರುತ್ತಾರೆ -

'ವಿಪ್ರತಿಷಿದ್ಧಧರ್ಮಾಣಾಂ ಸಮನ್ವಯೇ ಭೂಯಸಾಂ ಸ್ಯಾತ್ ಸಧರ್ಮತ್ವಮ್'(೧೨-೨-೮)

ಈ ಅಧಿಕರಣದಲ್ಲಿ ಪರಸ್ಪರ ವಿರುದ್ಧವಾದ ಧರ್ಮಗಳ ಸಮನ್ವಯವನ್ನು ಮಾಡುವ ಸಂದರ್ಭದಲ್ಲಿ

ಹೆಚ್ಚು ಧರ್ಮಗಳು ಯಾವ ವಾಕ್ಯದಲ್ಲಿ ಶ್ರುತವಾಗಿರುತ್ತದೋ, ಅದಕ್ಕನುಗುಣವಾಗಿ ವಿರುದ್ಧವಾದ ಧರ್ಮಗಳ ಸಮನ್ವಯವನ್ನು ತಿಳಿಯಬೇಕು ಎಂದು ವಿಚಾರ ಮಾಡಿರುತ್ತಾರೆ. ಹದಿನೈದು ದಿವಸಗಳಲ್ಲಿ ಆಚರಿಸುವಂತಹ 'ಪಂಚದಶರಾತ್ರ' ಎಂಬ ಸತ್ರವಿಶೇಷವಿದೆ. ಅದರಲ್ಲಿ ಮೊದಲನೆಯ ದಿವಸ ಆಚರಿಸುವ ಸತ್ರಕ್ಕೆ 'ಅಗ್ನಿಷ್ಟುತ್' ಎಂದು ಹೆಸರು. ಇದನ್ನು ಬಿಟ್ಟು ಒಂದೇ ದಿನದಲ್ಲಿ ಆಚರಿಸಬೇಕಾದ 'ಅಗ್ನಿಷ್ಟುತ್' ಎಂಬ ಮತ್ತೊಂದು ಯಾಗವಿದೆ. ಎರಡು ಯಾಗಗಳಿಗೆ ಒಂದೇ ಹೆಸರನ್ನು ಇಟ್ಟಿರುವುದರಿಂದ ಸ್ವತಂತ್ರವಾದ 'ಅಗ್ನಿಷ್ಟುತ್' ಯಾಗದಲ್ಲಿ ಯಾವ ಅಂಗಕಲಾಪಗಳಿರುತ್ತವೋ, ಅದನ್ನೇ ಪಂಚದಶರಾತ್ರದಲ್ಲಿ ಆಚರಿಸುವ 'ಅಗ್ನಿಷ್ಟುತ್' ಎಂಬ ಹೆಸರಿನ ಯಾಗದಲ್ಲಿಯೂ ತಿಳಿಯಬೇಕು. ಪ್ರಕೃತಿಭೂತವಾದ ಒಂದೇ ದಿನದಲ್ಲಿ ಆಚರಿಸುವಂತಹ 'ಅಗ್ನಿಷ್ಟುತ್' ಎಂಬ ಯಾಗದಲ್ಲಿ ಅಗ್ನಿಗೆ ಸಂಬಂಧಪಟ್ಟ ಸುಬ್ರಹ್ಮಣ್ಯ ಎಂಬ 'ಋಜ್' ಮಂತ್ರವು ವಿಹಿತವಾಗಿದೆ. ಆಗ್ನೇಯಯಾಗದಲ್ಲಿ ಹೇಳುವ ಸುಬ್ರಹ್ಮಣ್ಯ 'ಋಜ್' ಮಂತ್ರವನ್ನೇ ಪ್ರಕೃತ ಪಂಚದಶರಾತ್ರದ ಅಗ್ನಿಷ್ಟುತ್ ಎಂಬ ಯಾಗದಲ್ಲಿಯೂ ಕೂಡ ಹೇಳಬೇಕು. ಪಂಚದಶರಾತ್ರದಲ್ಲಿ ಉಳಿದ ದಿವಸಗಳಲ್ಲಿ ಆಚರಿಸಲ್ಪಟ್ಟ ಯಾಗಗಳಲ್ಲಿ ಐಂದ್ರೀ ಸುಬ್ರಹ್ಮಣ್ಯ ಋಜ್ ಮಂತ್ರವು ಆಯಾ ಪ್ರಕೃತಿ ಯಾಗಗಳಿಂದ ಪ್ರಾಪ್ತವಾಗುತ್ತದೆ.

ಸಂಶಯ - ಮೊದಲನೆಯ ದಿವಸದಲ್ಲಿ ದೀಕ್ಷೆಯನ್ನು ಪಡೆಯಬೇಕು. ಹದಿನೈದನೆಯ ದಿವಸದಲ್ಲಿ ಅವಭೃತವನ್ನು ಆಚರಿಸಬೇಕು. ದೀಕ್ಷೆ ಪಡೆಯುವ ಸಂದರ್ಭದಲ್ಲಿ ಆಗ್ನೇಯ ಸುಬ್ರಹ್ಮಣ್ಯಮಂತ್ರದಿಂದ ಆಹ್ವಾನವನ್ನು ಮಾಡಬೇಕು. ಉಳಿದ ದಿವಸಗಳಲ್ಲಿ ಐಂದ್ರೀ ಸುಬ್ರಹ್ಮಣ್ಯಮಂತ್ರದಿಂದ ಆಹ್ವಾನ ಮಾಡಬೇಕು ಎಂದು ತಿಳಿಯುತ್ತದೆ. ಆದರೆ ದೀಕ್ಷಾಕಾಲದಲ್ಲಿ ಆಹ್ವಾನ ಮಾಡುವ ಆಗ್ನೇಯಸುಬ್ರಹ್ಮಣ್ಯ ಎಂಬ ಒಂದು ಮಂತ್ರಕ್ಕೆ ಅನುಗುಣವಾಗಿ ಉಳಿದ ದಿವಸಗಳಲ್ಲಿಯೂ ಆಗ್ನೇಯಸುಬ್ರಹ್ಮಣ್ಯ ಮಂತ್ರದಿಂದಲೇ ಆಹ್ವಾನ ಮಾಡಬೇಕು. ಅಥವಾ ಐಂದ್ರೀಸುಬ್ರಹ್ಮಣ್ಯ ಮಂತ್ರಗಳು ಎರಡನೆಯ ದಿವಸದಿಂದ ಪ್ರತಿನಿತ್ಯ ಆಚರಿಸುವ ಕಾರಣ ಅನೇಕವಾಗಿವೆ. ಅದಕ್ಕೆ ಅನುಗುಣವಾಗಿ ಮೊದಲನೆಯ ದಿವಸದಲ್ಲಿ ಮಾತ್ರ ಆಚರಿಸುವ ಆಹ್ವಾನದಲ್ಲಿಯೂ ಐಂದ್ರೀಸುಬ್ರಹ್ಮಣ್ಯ ಮಂತ್ರವನ್ನೇ ಪಠಿಸಬೇಕೋ, ಅಥವಾ ಯಾವ ಮಂತ್ರವನ್ನು ಬೇಕಾದರೂ ಪಠಿಸಬೇಕೆಂಬ ಅನಿಯಮವೋ ? ಎಂದು ಸಂಶಯ.

**प्रकाशः** – मुख्यश्रुत्यनुग्रहार्थमाग्नेयीति प्राप्ते प्रयोगवचनस्य भूयो वैगुण्यासहिष्णुतया द्वितीयादिबहुश्रुत्यनुग्रहार्थमैन्द्री सुब्रह्मण्याऽऽह्वातव्येति सिद्धान्त इति । त[illegible] च तत एव सिद्धेर्नेदमारभ्यमिति भावः ।

ಪೂರ್ವಪಕ್ಷ - ಯಾವ ಮಂತ್ರವನ್ನು ಬೇಕಾದರೂ ಪಠಿಸಿ ಆಹ್ವಾನವನ್ನು ಮಾಡಬಹುದೆಂಬ ಅನಿಯಮಪಕ್ಷವು ಮೊದಲನೆಯ ಪೂರ್ವಪಕ್ಷ. ಆಗ್ನೇಯೀ ಎಂಬ ಋಜ್ ಮಂತ್ರವೇ ಪ್ರಥಮ ಪ್ರಾಪ್ತವಾಗಿದೆ. ಆದ್ದರಿಂದ ಇದನ್ನೇ ಪಠಿಸಿ ಎಲ್ಲೆಡೆಯೂ ಆಹ್ವಾನವನ್ನು ಮಾಡಬೇಕು. ಪ್ರಥಮಪ್ರಾಪ್ತವಾದದ್ದನ್ನು ಅನುಸರಿಸಿ ಉಳಿದ ಆಹ್ವಾನಗಳಿಗೆ ಸಾಗುಣ್ಯವನ್ನು ಸಾಧಿಸಬೇಕು ಎಂಬುದು ಎರಡನೆಯ ಪೂರ್ವಪಕ್ಷ.

ಸಿದ್ಧಾಂತ - ಭಾವನಾಕ್ಕೆ ಪ್ರಧಾನಕರ್ಮವೇ ಅನಿವಾರ್ಯವಾಗಿ ಆವಶ್ಯಕವಾಗಿರುತ್ತದೆ. ಉಳಿದ ಕರ್ಮಗಳು ಅಂಗವಾಗಿರುತ್ತವೆ. ಸರ್ವಾಂಗಗಳನ್ನು ಸಂಗ್ರಹ ಮಾಡುವ ಭಾವನಾವು ಯಾವುದರ ವೈಗುಣ್ಯವನ್ನೂ ಕೂಡ ಸಹಿಸುವುದಿಲ್ಲ. ಆದರೂ ಕೂಡ ಯಾವುದಾದರೂ ವೈಗುಣ್ಯವನ್ನು ಸಹಿಸಿಕೊಳ್ಳಬೇಕು

ಎಂದು ಹೇಳುವುದಾದರೆ ಅನೇಕ ಕರ್ಮಗಳ ವೈಗುಣ್ಯವನ್ನು ಸಹನೆ ಮಾಡುವುದಕ್ಕಿಂತಲೂ ಒಂದೇ ಕರ್ಮದ ವೈಗುಣ್ಯವನ್ನು ಸಹಿಸುವುದು ಹೆಚ್ಚು ಸೂಕ್ತ. ಅನೇಕ ಕರ್ಮಗಳ ಸಾಗುಣ್ಯಕ್ಕೋಸ್ಕರ ಒಂದು ಕರ್ಮದ ವೈಗುಣ್ಯವನ್ನು ಹೇಳುವುದೇ ಸೂಕ್ತವಾಗುತ್ತದೆ. ಪ್ರಕೃತ ಮೊದಲನೆಯ ಆಗ್ನೇಯೀ ಮಂತ್ರಕ್ಕೆ ಸಾಗುಣ್ಯವನ್ನು ಸಂಪಾದನೆ ಮಾಡುವುದಕ್ಕಿಂತ ಉಳಿದ ಹದಿನಾಲ್ಕು ಐಂದ್ರೀ ಮಂತ್ರಗಳಿಗೆ ಸಾಗುಣ್ಯವನ್ನು ಸಂಪಾದನೆ ಮಾಡುವುದಕ್ಕಾಗಿ ಪ್ರಥಮಪ್ರಾಪ್ತವಾದ ಆಗ್ನೇಯಮಂತ್ರಕ್ಕೆ ವೈಗುಣ್ಯವನ್ನು ಸಂಪಾದನೆ ಮಾಡುವುದೇ ಶ್ರೇಷ್ಠವಾಗಿದೆ. ಇದು ಸಿದ್ಧಾಂತ.

ಹೀಗೆ ಪೂರ್ವಮೀಮಾಂಸೆಯ ಬಹ್ವನುಗ್ರಹಾಧಿಕರಣದಿಂದಲೇ ಸಿದ್ಧವಾಗುವಾಗ ಪುನಃ ಈ ಅಧಿಕರಣವು ಹೊರಡುವುದು ವ್ಯರ್ಥವಾಗಿದೆಯೆಂದು ತಿಳಿಯಬೇಕು.

**प्रकाशः** – एतेन प्राणान्नशब्दयोरिन्द्रियपरत्वं न चक्षुश्श्रोत्रमनश्शब्दरूप-बह्वनुग्रहबलात् । किं तर्हि ''तद्देवा ज्योतिषां ज्योतिः'' इति पूर्ववाक्ये प्रकाशकानां प्रकाशकं ब्रह्मेत्यवगतौ सत्यां के ते प्रकाशका इत्याकाङ्क्षायां ''पञ्च पञ्च जना'' इत्युक्तानां पञ्च जनशब्दितानां पञ्चपदार्थानामिन्द्रियत्वावगमात् पूर्ववाक्यश्रुतज्योतिःशब्दबलेनैव प्राणपदस्योक्तविधया त्वगिन्द्रियार्थत्वमन्नशब्दस्य चेन्द्रियार्थत्वमुपादीयते। अत एव तृतीयसूत्रे ज्योतिषा ''तद्देवा ज्योतिषां ज्योतिः'' इत्युक्तज्योतिश्शब्देन पञ्च जनशब्दिताः (संज्ञिताः) पञ्चपदार्था इन्द्रियाणीति विज्ञायन्त इति असत्यन्ने अन्नपाठेऽसति तदध्याहारेण काण्वानां शाखायां पञ्चत्वसम्भवादित्युक्तं सूत्रकृतैवेत्येतदपि निरस्तम् ।

ಹೀಗೆ ಹೇಳಿದ್ದರಿಂದ ರಾಮಾನುಜರ ಮತ್ತೊಂದು ವಾದವನ್ನು ನಿರಾಕರಣೆ ಮಾಡಿದಂತಾಯಿತು -

ಆಕ್ಷೇಪ - ಪ್ರಾಣಶಬ್ದದಿಂದ ತ್ವಗಿಂದ್ರಿಯಗುಣವನ್ನು ತೆಗೆದುಕೊಳ್ಳಬೇಕು. ಅನ್ನಶಬ್ದದಿಂದ ಪೃಥಿವಿಯ ಗುಣವನ್ನು ಗ್ರಹಿಸುವ ಘ್ರಾಣೇಂದ್ರಿಯ ಗುಣವನ್ನು ತೆಗೆದುಕೊಳ್ಳಬೇಕು. ಅಥವಾ 'ಅತ್ತಿ ಅನೇನ ಇತಿ' ಎಂಬ ವ್ಯುತ್ಪತ್ತಿಯಿಂದ ರಸನೇಂದ್ರಿಯವನ್ನು ತೆಗೆದುಕೊಳ್ಳಬೇಕು. ಹೀಗೆ ಪ್ರಾಣ ಮತ್ತು ಅನ್ನಶಬ್ದಗಳಿಗೆ ಇಂದ್ರಿಯಪರತ್ವವನ್ನು ಮಾಡಲು ಉಳಿದ ಚಕ್ಷುಸ್ಸು, ಶ್ರೋತ್ರ, ಮನಃ ಶಬ್ದಗಳು ಇಂದ್ರಿಯಪರವಾಗಿರುವುದು ಕಾರಣವಲ್ಲ. ಮೂರು ಶಬ್ದಗಳು ಇಂದ್ರಿಯಪರವಾದ್ದರಿಂದ ಉಳಿದೆರಡು ಶಬ್ದಗಳಿಗೂ ಇಂದ್ರಿಯ ಪರತ್ವವನ್ನೇ ಹೇಳಬೇಕೆಂಬುದು ವಿವಕ್ಷಿತವಾಗಿಲ್ಲ. 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂಬುದಾಗಿ ಹಿಂದಿನ ವಾಕ್ಯದಲ್ಲಿ ಪ್ರಕಾಶಕರಿಗೂ ಕೂಡ ಬ್ರಹ್ಮನು ಪ್ರಕಾಶಕನಾಗಿದ್ದಾನೆಂದು ಪ್ರಸಕ್ತವಾಗಿದೆ. ಹಾಗಾದರೆ ಅಂತಹ ಪ್ರಕಾಶಕರು ಯಾರು? ಎಂಬ ಆಕಾಂಕ್ಷೆಯು ಪ್ರಾಪ್ತವಾಗುತ್ತದೆ. ಆವಾಗ 'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ' ಎಂಬ ವಾಕ್ಯವು ಪ್ರಸಕ್ತವಾಗಿದೆ. ಆದ್ದರಿಂದ ಪಂಚ ಜನ ಶಬ್ದದಿಂದ ಪ್ರಕಾಶಕಜನರನ್ನೇ ತೆಗೆದುಕೊಳ್ಳಬೇಕು ಎಂದು ತಿಳಿಯುತ್ತದೆ. ಜ್ಞಾನೇಂದ್ರಿಯಗಳೇ ಪ್ರಕಾಶಕ ಎನಿಸಿವೆ. ಪಂಚ ಜನಶಬ್ದದಿಂದ ಪ್ರಕಾಶಕ ಎನಿಸಿದ ಜ್ಞಾನೇಂದ್ರಿಯಗಳನ್ನು ತೆಗೆದುಕೊಳ್ಳಬೇಕೆಂದು ತಿಳಿಯುತ್ತದೆ. ಹೀಗೆ ನಿರ್ಣಯವಾದ

ಮೇಲೆ ಮುಂದೆ ಬರುವ ವಾಕ್ಯಶೇಷದಲ್ಲಿ ಪ್ರಾಣ ಮೊದಲಾದ ಐದು ಶಬ್ದಗಳಿಂದ ಐದು ಇಂದ್ರಿಯಗಳನ್ನೇ ತೆಗೆದುಕೊಳ್ಳಬೇಕೆಂದು ಸಿದ್ಧವಾಗುತ್ತದೆ. ಹೀಗೆ ಪ್ರಾಣ ಮತ್ತು ಅನ್ನ ಎಂಬೆರಡು ಶಬ್ದಗಳು ಇಂದ್ರಿಯ-ಪರವಾಗುತ್ತವೆ. ಒಟ್ಟಾರೆ ಬಹ್ವನುಗ್ರಹನ್ಯಾಯದಿಂದ ಪ್ರಾಣ ಮತ್ತು ಅನ್ನಶಬ್ದಗಳಿಗೆ ಇಂದ್ರಿಯಪರತ್ವವು ಸಿದ್ಧವಾಗಿರುವುದಲ್ಲ. ಹೊರತಾಗಿ ಉಪಕ್ರಮಾಧಿಕರಣನ್ಯಾಯದಿಂದ ಪ್ರಾಣ ಮತ್ತು ಅನ್ನಶಬ್ದಗಳಿಗೆ ಇಂದ್ರಿಯಪರತ್ವವು ಸಿದ್ಧವಾಗಿದೆ. ಈಗ ಮೂರನೆಯ ಸೂತ್ರಕ್ಕೆ ಹೀಗೆ ಅರ್ಥ - ಪ್ರಾರಂಭದಲ್ಲಿ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂಬುದಾಗಿ 'ಜ್ಯೋತಿಃ' ಶಬ್ದವು ಕೇಳಿಸುತ್ತಿದೆ. ಆದ್ದರಿಂದ ಪ್ರಕಾಶಕವಾದ ತತ್ವವನ್ನೇ ಪಂಚ ಜನ ಶಬ್ದದಿಂದ ಮುಂದೆ ಶ್ರುತಿಯು ಕರೆಯುತ್ತಿದೆ. ಆದ್ದರಿಂದ ಪಂಚ ಪದಾರ್ಥಗಳು ಇಂದ್ರಿಯವೇ ಆಗಿವೆ. ಇಷ್ಟು ವಿಷಯವು ಸೂತ್ರದಲ್ಲಿರುವ 'ಜ್ಯೋತಿಷಾ' ಎಂಬ ಪದದಿಂದ ತಿಳಿಯುತ್ತದೆ. ಹಾಗಾದರೆ ಕಾಣ್ವಶಾಖೆಯಲ್ಲಿ ಅನ್ನ ಎಂಬ ಪದವು ಇಲ್ಲವಲ್ಲ ಎಂದರೆ, ಅದನ್ನು ಅಧ್ಯಾಹಾರ ಮಾಡಬೇಕು ಎಂಬುದನ್ನು 'ಏಕೇಷಾಂ ಅಸತ್ಯನ್ನೇ' ಎಂಬ ಸೂತ್ರಭಾಗವು ವ್ಯಾಖ್ಯಾನ ಮಾಡುತ್ತಿದೆ.

**प्रकाशः** – तथा सत्युपक्रमस्थज्योतिश्शब्दबलादिन्द्रियत्वाध्यवसाय इत्युक्तं स्यात् । प्रक्रमान्निर्णयस्य ''वेदो वा प्रायदर्शनात्'' इति तृतीयाध्यायतृतीयपादीया द्यनये सिद्धत्वान्नात्र पुनरारम्भस्स्यात् ।

ಸಮಾಧಾನ - ಈ ವಿಷಯವೂ ಕೂಡ ಪೂರ್ವಮೀಮಾಂಸೆಯ ಅಧಿಕರಣದಿಂದಲೇ ಗತಾರ್ಥವಾಗಿದೆ. 'ವೇದೋ ವಾ ಪ್ರಾಯದರ್ಶನಾತ್' (೩-೩-೧) ಈ ಅಧಿಕರಣದ ಪ್ರಾರಂಭದಲ್ಲಿ ವೇದಶಬ್ದವಿರುವುದಿರಂದ ಮುಂದೆಯೂ ಕೂಡ ವೇದವನ್ನೇ ಸ್ವೀಕರಿಸಬೇಕೆಂದು ಉಪಕ್ರಮಕ್ಕೆ ಅನುಗುಣವಾದ ಅರ್ಥವನ್ನು ಮಾಡಬೇಕೆಂದು ನಿರ್ಣಯಿಸಲಾಗಿದೆ. ಅದರಂತೆ ಪ್ರಕೃತದಲ್ಲಿಯೂ 'ತದ್ದೇವಾ ಜ್ಯೋತಿಷಾಂ ಜ್ಯೋತಿಃ' ಎಂಬ ಉಪಕ್ರಮವಾಕ್ಯದಲ್ಲಿ 'ಜ್ಯೋತಿಸ್' ಶಬ್ದವು ಇರುವುದರಿಂದ ಮುಂದಿನ ಪ್ರಾಣಾದಿ ಶಬ್ದಗಳಿಂದಲೂ ಪ್ರಕಾಶಕವಾದ ಇಂದ್ರಿಯಗಳನ್ನೇ ತೆಗೆದುಕೊಳ್ಳಬೇಕೆಂದು ನಿರ್ಣಯಿಸುತ್ತಿದ್ದೀರಿ. ಇದು ಪೂರ್ವಮೀಮಾಂಸೆಯ 'ವೇದೋವಾ' ಇತ್ಯಾದಿ ಅಧಿಕರಣದಿಂದಲೇ ಗತಾರ್ಥವಾಗಿದೆ.

**प्रकाशः** – सूत्रे च ज्योतिषा सह पञ्चत्वमित्यक्लेशेनान्वयसम्भवे अनेकपदाध्याहारादिना सूत्रार्थोक्तेरयुक्तत्वात् । ''प्राणादयो वाक्यशेषात्'' इत्युक्तिवैयर्थ्याच्चेति ।

ಮತ್ತು ಸೂತ್ರದಲ್ಲಿ ಜ್ಯೋತಿಯ ಜೊತೆಗೆ ಪಂಚತ್ವವನ್ನು ಸಮರ್ಥಿಸಿದಾಗ ಸುಲಭವಾಗಿ ಅರ್ಥವನ್ನು ಹೇಳಿದಂತಾಗುತ್ತದೆ. ಅದನ್ನು ಬಿಟ್ಟು ಅನೇಕ ಪದಗಳನ್ನು ಅಧ್ಯಾಹಾರ ಮಾಡಿಕೊಂಡು ಸೂತ್ರಾರ್ಥವನ್ನು ಹೇಳಿದ್ದೂ ಕೂಡ ಅತ್ಯಂತ ಅಯುಕ್ತವಾಗಿದೆ. ಮತ್ತು 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಸೂತ್ರವೇ ವ್ಯರ್ಥವಾಗುತ್ತದೆ. ಏಕೆಂದರೆ ಉಪಕ್ರಮಕ್ಕೆ ಅನುಗುಣವಾಗಿ ವಾಕ್ಯಶೇಷವನ್ನು ವ್ಯಾಖ್ಯಾನ ಮಾಡುತ್ತಿರುವುದರಿಂದ ಈ ಸೂತ್ರಕ್ಕೆ ಅರ್ಥವೇ ಇಲ್ಲವೆಂದಂತಾಯಿತು.

**प्रकाशः** – एतेनैव कस्यचिच्छैवस्य मतमपि प्रत्युक्तं बोध्यम् । यत्तु

तृतीयसूत्रस्यासत्यन्ने ज्योतिषां ज्योतिरिति सन्निहितपूर्ववाक्ये श्रुतानां बहुवचनेन शक्यविवक्षपञ्चकत्वानां ''अग्निर्वायुरादित्यश्चन्द्रमा नक्षत्राणि'' इति श्रुतिप्रसिद्धानां ज्योतिषां ग्रहणसम्भवेन ज्योतिषां ज्योतिः पदार्थेन पञ्चजनसंज्ञितानां पञ्चत्वमित्यर्थ वर्णनं तत्तुच्छम् ।

ಹೀಗೆ ರಾಮಾನುಜಮತವನ್ನು ನಿರಾಕರಣೆ ಮಾಡಿದ್ದರಿಂದ ಯಾರೋ ಒಬ್ಬ ಶೈವನನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಸಾಮಾನ್ಯವಾಗಿ ರಾಮಾನುಜರಂತೆ ಇವನೂ ಕೂಡ ವ್ಯಾಖ್ಯಾನ ಮಾಡುತ್ತಾನೆ. ಆದರೆ ಮೂರನೆಯ ಸೂತ್ರದಲ್ಲಿ ಮಾತ್ರ ಸ್ವಲ್ಪ ವ್ಯತ್ಯಾಸವಾದ ವ್ಯಾಖ್ಯಾನವನ್ನು ಮಾಡಿರುತ್ತಾನೆ. 'ಅಸತ್ಯನ್ನೇ' ಎಂಬ ಪದದ ಅಭಿಪ್ರಾಯ ಹೀಗಿದೆ - 'ಜ್ಯೋತಿಷಾಂ ಜ್ಯೋತಿಃ' ಎಂಬ ಸನ್ನಿಹಿತವಾದ ಹಿಂದಿನ ವಾಕ್ಯದಲ್ಲಿ 'ಜ್ಯೋತಿಷಾಂ' ಎಂಬುದಾಗಿ ಬಹುವಚನವು ಶ್ರುತವಾಗಿದೆ. ಈ ಬಹುವಚನದಿಂದ ಐದು ತತ್ವಗಳನ್ನೂ ಕೂಡ ತೆಗೆದುಕೊಳ್ಳಬಹುದು. ಅಂತಹ ಐದು ತತ್ವಗಳು ಯಾವುದು ಎಂಬ ಆಕಾಂಕ್ಷೆಯು ಪ್ರಾಪ್ತವಾದದರೆ 'ಅಗ್ನಿರ್ವಾಯುರಾದಿತ್ಯಶ್ಚಂದ್ರಮಾ ನಕ್ಷತ್ರಾಣಿ' ಎಂಬ ಶ್ರುತಿಯಲ್ಲಿ ಪ್ರಸಿದ್ಧವಾದ ಅಗ್ನಿ, ವಾಯು, ಆದಿತ್ಯ, ಚಂದ್ರ, ನಕ್ಷತ್ರ ಎಂಬ ಪ್ರಕಾಶವುಳ್ಳ ಐದು ಪದಾರ್ಥಗಳನ್ನು ತೆಗೆದುಕೊಳ್ಳಬಹುದು. ಆದ್ದರಿಂದ ಅನ್ನವು ಕೇಳಿಸದಿದ್ದಾಗ ಪಂಚತ್ವಸಂಖ್ಯೆಯನ್ನು ಹೇಗೆ ತಿಳಿಯಬೇಕು ? ಎಂಬ ಪ್ರಶ್ನೆಗೆ ಉತ್ತರವನ್ನು ತಿಳಿದಂತಾಯಿತು. ಇಂತಹ ಅಗ್ನಿ ಮೊದಲಾದವರಿಗೂ ಪ್ರಕಾಶವನ್ನು ನೀಡುವ ಯಾವ ತತ್ವವಿದೆಯೋ, ಅದನ್ನು ಸೇರಿಸಿಕೊಂಡು ಪಂಚ ಜನ ಶಬ್ದದ ಅರ್ಥವನ್ನು ತಿಳಿಯಬೇಕು, ಆದ್ದರಿಂದ ಯಾವ ಶಾಖೆಯಲ್ಲಿ ಅನ್ನವು ಶ್ರುತವಾಗಿದೆಯೋ ಅಲ್ಲಿ ಪ್ರಾಣಾದಿ ಪಂಚಕಗಳನ್ನು ಪಂಚ ಜನ ಶಬ್ದದಿಂದ ವಿವಕ್ಷಿಸಬೇಕು. ಯಾವ ಶಾಖೆಯಲ್ಲಿ ಅನ್ನವು ಶ್ರುತವಾಗಿಲ್ಲವೋ, ಅಲ್ಲಿ ಹಿಂದಿನ ವಾಕ್ಯದಲ್ಲಿ ಪ್ರಸಕ್ತವಾದ ಅಗ್ನ್ಯಾದಿ ಐದು ತತ್ವಗಳನ್ನು ಪಂಚ ಜನ ಶಬ್ದದಿಂದ ವಿವಕ್ಷಿಸಬೇಕು. ಹೀಗೆ ರಾಮಾನುಜರು ಮೂರನೆಯ ಸೂತ್ರಕ್ಕೆ ವ್ಯಾಖ್ಯಾನ ಮಾಡಿರುತ್ತಾರೆ. ಇದು ಅತ್ಯಂತ ತುಚ್ಛವಾಗಿದೆ.

**प्रकाशः** – तथात्वे प्राणादय इतिवज्ज्योतींषीति वा ज्योतिर्भिरिति वा निर्देशापत्तेः। ज्योतिषा सह पञ्चत्वमित्यक्लेशेनैवान्वयसम्भवे क्लेशायोगात् । वाक्यशेषे चतुष्कस्यैवोक्त्या कथं पूर्ववाक्ये ''पञ्च पञ्च जनाः'' इत्युक्तिरिति शङ्काया अपरिहारेण वाक्यस्य ''प्राणादयः'' इति सूत्रोक्तेश्चानुपपत्तेरनुद्धाराच्चेति यत्किञ्चिदेतत् ।।

**।। इति श्रीमत्सर्वतन्त्रस्वतन्त्रसुधीन्द्रतीर्थगुरुपादशिष्यराघवेन्द्रयतिकृते चन्द्रिकाप्रकाशे नसंख्योपसंग्रहाधिकरणं सम्पूर्णम् ।।**

ಹೀಗೆ ವ್ಯಾಖ್ಯಾನ ಮಾಡುವುದಾದರೆ 'ಪ್ರಾಣಾದಯೋ ವಾಕ್ಯಶೇಷಾತ್' ಎಂಬ ಸೂತ್ರದಲ್ಲಿ 'ಪ್ರಾಣಾದಯಃ' ಎಂದು ಹೇಳಿದಂತೆ ಮೂರನೆಯ ಸೂತ್ರದಲ್ಲಿಯೂ ಕೂಡ 'ಜ್ಯೋತೀಂಷಿ' ಎಂದಾಗಲೀ, 'ಜ್ಯೋತಿಭಿಃ' ಎಂದಾಗಲೀ ಸೂತ್ರಕಾರರು ಹೇಳಬೇಕಾಗಿತ್ತು. ಇದನ್ನು ಬಿಟ್ಟು ಸಮುದಾಯ ಏಕವಚನದಲ್ಲಿ 'ಜ್ಯೋತಿಷಾ' ಎಂಬ ಪದವನ್ನು ನಿರ್ದೇಶಿಸಿದ್ದಾರೆ ಎಂದು ಹೇಳುವುದು ಅಸ್ವರಸವಾಗಿದೆ. ಮತ್ತು ಜ್ಯೋತಿಯ

ಜೊತೆಗೆ ಪಂಚತ್ವ ಸಂಖ್ಯೆಯನ್ನು ಕೂಡಿಸಬಹುದು ಎಂಬುದಾಗಿ ಸುಲಭವಾಗಿ ನಮ್ಮಂತೆ ಅನ್ವಯವನ್ನು ಹೇಳಲು ಬರುವಾಗ ಕ್ಲೇಶಕರವಾದ ವ್ಯಾಖ್ಯಾನ ಮಾಡುವುದು ಅಸಾಧುವಾಗಿದೆ. ವಾಕ್ಯಶೇಷದಲ್ಲಿ ನಾಲ್ಕನ್ನು ಮಾತ್ರ ಹೇಳಿದ್ದರೂ ಕೂಡ ಮೊದಲು ಪ್ರಸಕ್ತವಾದ ಜ್ಯೋತಿಯನ್ನು ಸೇರಿಸಿಕೊಂಡು ಪಂಚತ್ವಸಂಖ್ಯೆಯನ್ನು ಪೂರಣೆ ಮಾಡಬೇಕೆಂದು ನಾವು ವ್ಯಾಖ್ಯಾನ ಮಾಡಿದ್ದೆವು. ಆದರೆ ನೀವು ಜ್ಯೋತಿಯನ್ನೇ ಐದು ತತ್ವವನ್ನಾಗಿ ವಿಂಗಡಣೆ ಮಾಡಿದ್ದೀರಿ. ಆವಾಗ ವಾಕ್ಯಶೇಷದಲ್ಲಿ ಕೇವಲ ನಾಲ್ಕನ್ನು ಹೇಳಿದ್ದರಿಂದ ಹಿಂದಿನ ವಾಕ್ಯದಲ್ಲಿ 'ಪಂಚ ಪಂಚ ಜನಾಃ' ಎಂದು ಹೇಳಿದ್ದು ಹೇಗೆ ಯುಕ್ತವಾಗುತ್ತದೆ? ಎಂಬ ಆಶಂಕೆಗೆ ಉತ್ತರವನ್ನು ನೀಡಿದಂತಾಗಲಿಲ್ಲ. ಮತ್ತು 'ಪ್ರಾಣಾದಯಃ ವಾಕ್ಯಶೇಷಾತ್' ಎಂಬ ಹಿಂದಿನ ಸೂತ್ರವು ಅನುಪಪನ್ನ-ವಾಗುತ್ತದೆಂಬ ದೋಷವನ್ನೂ ಕೂಡ ನೀನು ಪರಿಹರಿಸಿಕೊಂಡಿಲ್ಲ. ಆದ್ದರಿಂದ ಶೈವರ ಅಧಿಕರಣ ರಚನೆಯು ಅತ್ಯಂತ ವ್ಯರ್ಥವಾಗಿದೆ.

ಇಲ್ಲಿಗೆ ಶ್ರೀ ಸರ್ವತಂತ್ರ ಸ್ವತಂತ್ರ ಶ್ರೀಸುಧೀಂದ್ರಗುರುಪಾದರ ಶಿಷ್ಯಂದಿರಾದ
ಶ್ರೀ ರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ ಪ್ರಕಾಶಟಿಪ್ಪಣಿಯ ಕನ್ನಡಾನುವಾದದಲ್ಲಿ
ನಸಂಖ್ಯೋಪಸಂಗ್ರಹಾಧಿಕರಣವು ಮುಕ್ತಾಯವಾಯಿತು.

* * * * * * *

ಶ್ರೀಕೃಷ್ಣಾರ್ಪಣಮಸ್ತು.

**गुरुराजीयम् – तन्त्रेणोपादानादिति ।। सकृदुक्तमनेकोपकारकं तन्त्रम् । तथा च सकृत्प्रयुक्तेनान्नशब्देन योगेन रसनस्य रूढ्या घ्राणस्य लाभ इति भावः ।।**

**।। इति श्रीकेशवभट्टारकेण विरचितायां भावदीपिकायाम्**
**न संख्योपसङ्ग्रहाधिकरणं सम्पूर्णम् ।। ३ ।।**




ಅವಾಂತರ ಸಂಖ್ಯೆಯಲ್ಲಿ ಉಪಸಂಗ್ರಾಹಕ ಧರ್ಮಗಳಿಲ್ಲದೇ ಸಂಖ್ಯೆಗಳನ್ನು ಹೇಳಬಾರದೆಂದು ನಿಯಮವಿಲ್ಲ. ಏಕೆಂದರೆ 'ಪಂಚಸಪ್ತಚ ವರ್ಷಾಣಿ ನವವರ್ಷ ಶತಕ್ರತುಃ' ಐದೇಳು ವರ್ಷಗಳ ಕಾಲ ಇಂದ್ರನು ಮಳೆ ಸುರಿಸಲಿಲ್ಲ. ಅಂದರೆ ಹನ್ನೆರಡುವರ್ಷಕಾಲ ಮಳೆಯಾಗಲಿಲ್ಲ ಎಂದರ್ಥ. ಮತ್ತು ಒಂಭತ್ತುಐದುವರ್ಷ ಕಾಲ ವ್ರತವನ್ನಾಚರಿಸಬೇಕು. ಅಂದರೆ ಹದಿನಾಲ್ಕುವರ್ಷಕಾಲ ವ್ರತವನಾಚರಿಸಬೇಕು ಎಂದರ್ಥ. ಮುಂತಾದ ಸ್ಥಳಗಳಲ್ಲಿ ಅವಾಂತರಸಂಖ್ಯೆಯಲ್ಲಿ ಸಂಗ್ರಾಹಕಧರ್ಮಗಳಿಲ್ಲದಿದ್ದರೂ ಮಹಾಸಂಖ್ಯೆಯಲ್ಲಿ ಅವಾಂತರಸಂಖ್ಯೆಯ ವಿಭಾಗ ಮಾಡಿದ್ದು ಕಾಣಿಸುತ್ತದೆ.

'ಪ್ರಾಣದಯೋ ವಾಕ್ಯಶೇಷಾತ್' ಎಂಬ ಎರಡನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನವು ಸಾಧುವಲ್ಲ. 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷದಲ್ಲಿ ದ್ವಿತೀಯಾಂತ ಶಬ್ದಗಳಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳೇ ಪ್ರಧಾನರಾಗಿದ್ದಾರೆ. ಅವರನ್ನೇ ಸೂತ್ರದಲ್ಲಿಯೂ ಕೂಡ ಉಲ್ಲೇಖಿಸಬೇಕು. ಅದನ್ನು ಬಿಟ್ಟು ಅಪ್ರಧಾನರಾದ ಷಷ್ಠ್ಯಂತವಾದ ಶಬ್ದಗಳಿಂದ

ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳನ್ನು ಸೂತ್ರದಲ್ಲಿ ಉಲ್ಲೇಖಿಸುವುದು ಅಸ್ವರಸವಾಗುತ್ತದೆ. ಮತ್ತು ಮೂರನೆಯ ಸೂತ್ರದಲ್ಲಿ ಏಕವಚನಾಂತವಾದ ಜ್ಯೋತಿಷಾ ಎಂಬ ಪದದಿಂದ ನಿರ್ದೇಶಿಸಲ್ಪಟ್ಟ ಜ್ಯೋತಿಸ್ಸನ್ನೇ ಪ್ರಧಾನವೆಂದು ಪರಿಗಣಿಸಿದಂತೆ ಇಲ್ಲಿಯೂ ಕೂಡ ದ್ವಿತೀಯಾವಿಭಕ್ತ್ಯಂತವಾದ ಪ್ರಾಣಾದಿಶಬ್ದದಿಂದ ನಿರ್ದೇಶಿಸಲ್ಪಟ್ಟ ಪ್ರಾಣಾದಿಗಳನ್ನೇ ಉಲ್ಲೇಖಿಸುವುದು ಸ್ವರಸವಾಗುತ್ತದೆ. ಅದ್ವೈತಿಗಳಂತೆ ರಾಮಾನುಜರೂ ಕೂಡ ಎರಡನೆಯ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ. ಅದ್ವೈತಮತದ ನಿರಾಕರಣೆಯಿಂದ ಅವರ ಮತವನ್ನೂ ಕೂಡ ನಿರಾಕರಣೆ ಮಾಡಿದಂತಾಯಿತು. ಮತ್ತು ರಾಮಾನುಜರಿಗೆ ಅಧಿಕವಾದ ದೋಷ ಬರುತ್ತದೆ. ಈ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಪೂರ್ವಮೀಮಾಂಸೆಯು ಪೂರ್ವಭಾಗವೆಂದು ಅವರು ಹೇಳುತ್ತಾರೆ. ಈ ಶಾಸ್ತ್ರದ ಪೂರ್ವಭಾಗವೆನಿಸಿದ ಪೂರ್ವಮೀಮಾಂಸೆಯಲ್ಲಿ 'ಸಂದಿಗ್ಧೇತು ವಾಕ್ಯಶೇಷಾತ್' ಎಂಬ ಅಧಿಕರಣವೇ ವಾಕ್ಯಶೇಷದ ಬಲದಿಂದ ಶ್ರುತ್ಯರ್ಥವನ್ನು ನಿರ್ಣಯ ಮಾಡಬೇಕೆಂದು ನಿರ್ಣಯಿಸಿದೆ. ಅದೇ ವಿಷಯವನ್ನೇ 'ಪ್ರಾಣದಯೋ ವಾಕ್ಯಶೇಷಾತ್' ಎಂಬ ಅಧಿಕರಣವು ಸಮರ್ಥನೆ ಮಾಡುತ್ತಿರುವುದರಿಂದ ಈ ಅಧಿಕರಣಕ್ಕೆ ರಾಮಾನುಜರ ಪ್ರಕಾರ ಪುನರುಕ್ತಿದೋಷವು ಬರುತ್ತದೆ.

ಪೂರ್ವಮೀಮಾಂಸೆಯ ವಾಕ್ಯಶೇಷಾಧಿಕರಣದಿಂದ ಪುನರುಕ್ತಿ ಬರುವುದಿಲ್ಲವೆನ್ನಲು ರಾಮಾನುಜರು ತಮ್ಮ ಗ್ರಂಥಗಳಲ್ಲಿ ಸಮರ್ಥನೆಯನ್ನು ಮಾಡಿಕೊಂಡಿದ್ದಾರೆ. 'ತೇಜೋ ವೈ ಘೃತಮ್' ಎಂಬ ವಾಕ್ಯಶೇಷವು ಘೃತಪರವೆಂದು ನಿರ್ಣಯವಾದ್ದರಿಂದ 'ಅಕ್ತಾ' ಎಂಬುದನ್ನು ತುಪ್ಪದಿಂದ ಮಿಶ್ರಣಮಾಡಬೇಕು ಎಂಬರ್ಥದಲ್ಲಿ ನಿರ್ಣಯಿಸುತ್ತೇವೆ. ಆದರೆ ಪ್ರಕೃತ 'ಪ್ರಾಣಸ್ಯ ಪ್ರಾಣಮ್' ಎಂಬ ವಾಕ್ಯಶೇಷವು ಇಂದ್ರಿಯಪರವೆಂದು ನಿರ್ಣಯವೇ ಆಗಿರುವುದಿಲ್ಲ. ಏಕೆಂದರೆ ಪ್ರಾಣ ಮತ್ತು ಅನ್ನ ಎಂಬೆರಡು ಶಬ್ದಗಳು ಇಂದ್ರಿಯಗಳನ್ನು ಪ್ರತಿಪಾದನೆ ಮಾಡುವುದಿಲ್ಲ. ಹೀಗಿರುವಾಗ ವಾಕ್ಯಶೇಷವು ಐದು ಇಂದ್ರಿಯಗಳನ್ನು ಪ್ರತಿಪಾದನೆಯನ್ನೇ ಮಾಡದಿರುವಾಗ 'ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿರುವ ಪಂಚತ್ವ ಸಂಖ್ಯೆಯನ್ನು ವಾಕ್ಯಶೇಷದಿಂದ ಪೂರಣ ಮಾಡಲು ಹೇಗೆ ಸಾಧ್ಯವಾಗುತ್ತದೆ? ಆದ್ದರಿಂದ ಪ್ರಾಣ ಮತ್ತು ಅನ್ನ ಶಬ್ದಗಳಿಗೆ ಚಕ್ಷುಸ್ಸು, ಶ್ರೋತ್ರ, ಮನಃ ಈ ಮೂರು ಶಬ್ದಗಳಿಗೆ ಅನುಕೂಲವಾಗಿ ಇಂದ್ರಿಯಪರತ್ವವನ್ನೇ ಸಮರ್ಥನೆ ಮಾಡಬೇಕು. ಅಂದರೆ ಇಂದ್ರಿಯಗಳನ್ನು ಪ್ರತಿಪಾದನೆ ಮಾಡುವ ಶಬ್ದಗಳು ಶ್ರುತಿಯಲ್ಲಿ ಮೂರು ಇರುವುದರಿಂದ ಅದಕ್ಕನುಗುಣವಾಗಿ ಎರಡು ಈ ಶಬ್ದಗಳಿಗೆ ಇಂದ್ರಿಯಪರತ್ವವನ್ನು ಸಮರ್ಥನೆ ಮಾಡುವುದು ಅನಿವಾರ್ಯ. ಹೀಗೆ ವಾಕ್ಯಶೇಷಕ್ಕೆ ಮೊದಲು ಇಂದ್ರಿಯಪರತ್ವವನ್ನು ನಿರ್ಣಯ ಮಾಡಿ, ಇಂತಹ ವಾಕ್ಯಶೇಷದ ಬಲದಿಂದ 'ಪಂಚ ಪಂಚ ಜನಾಃ' ಎಂಬ ವಾಕ್ಯವೂ ಕೂಡ ಇಂದ್ರಿಯಪರವಾಗಿದೆ ಎಂದು ನಿರ್ಣಯಿಸಬೇಕು. ಹೀಗೆ ಸಮರ್ಥನೆ ಮಾಡುತ್ತಿರುವಾಗ ಪೂರ್ವಮೀಮಾಂಸೆಯ ಅಧಿಕರಣದಿಂದ ಪುನರುಕ್ತಿಯನ್ನು ಹೇಗೆ ಹೇಳುತ್ತೀರಿ? ಎಂದು. ಆದರೆ ಹೀಗೆ ಸಮರ್ಥಿಸುವ ರಾಮಾನುಜರಿಗೆ 'ಸಂದಿಗ್ಧೇ ತು ವಾಕ್ಯಶೇಷಾತ್' ಎಂಬ ಪೂರ್ವಮೀಮಾಂಸೆಯ ಅಧಿಕರಣದಿಂದ ಪುನರುಕ್ತಿಯು ಬಾರದಿದ್ದರೂ ಕೂಡ ಬಹ್ವನುಗ್ರಹನ್ಯಾಯವೆಂಬ ಪೂರ್ವಮೀಮಾಂಸಾ ಅಧಿಕರಣದಿಂದ ಪುನರುಕ್ತಿಯು ಬಂದೇ ಬರುತ್ತದೆ. ಏಕೆಂದರೆ ಅನೇಕ ಶ್ರುತಿಯ ಅನುಗ್ರಹಕ್ಕೋಸ್ಕರ ಏಕಶ್ರುತಿಯನ್ನು ಅರ್ಥಾಂತರ ಮಾಡಬೇಕು ಎಂಬುದನ್ನೂ ಕೂಡ ಪೂರ್ವಮೀಮಾಂಸೆಯ 'ವಿಪ್ರತಿಷಿದ್ಧಧರ್ಮಾಣಾಂ ಸಮನ್ವಯೇ ಭೂಯಸಾಂ ಸ್ಯಾತ್ ಸಧರ್ಮತ್ವಮ್' ಎಂಬ ಅಧಿಕರಣದಲ್ಲಿ ಸಮರ್ಥನೆ ಮಾಡಿದ್ದಾಗಿದೆ. ಅದನ್ನೇ ಪುನಃ 'ಪ್ರಾಣದಯೋ ವಾಕ್ಯಶೇಷಾತ್' ಎಂಬ ಅಧಿಕರಣದಲ್ಲಿ ಸಮರ್ಥನೆ ಮಾಡುತ್ತಿರುವುದರಿಂದ ರಾಮಾನುಜರಿಗೆ ಪುನರುಕ್ತಿಯು ತಪ್ಪಿದ್ದಲ್ಲ. ಪರರು ಮಾಡಿದ ಅಪವ್ಯಾಖ್ಯಾನಗಳ ವಿಮರ್ಶೆಯು ಇಲ್ಲಿಗೆ ಸಾಕು.

////////////////////////////////////////////////////

ಪರಿಪೂರ್ಣಚಂದ್ರಿಕಾ

# ನಸಂಖ್ಯೋಪಸಂಗ್ರಹಾಧಿಕರಣ

(೧-೪-೩)

## ಭಾಗ -೩

### ನ್ಯಾಯವಿವರಣ, ನ್ಯಾಯವಿವರಣ ಟೀಕಾ, ಅಣುಭಾಷ್ಯ, ತತ್ವಮಂಜರೀ, ತಂತ್ರದೀಪಿಕಾ, ನ್ಯಾಯಮುಕ್ತಾವಳಿ ಗ್ರಂಥಗಳ ಸರಳ ಕನ್ನಡ ಅನುವಾದ

॥ ಶ್ರೀಗುರುಭ್ಯೋ ನಮಃ ॥

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणम्

## नसङ्ख्योपसङ्ग्रहाधिकरणम् ॥१।४।३॥

न्या.वि.— बहुरूपत्वादधिकरणाधेयत्वादि तस्यैव युज्यते ।

ನ್ಯಾಯವಿವರಣೆ

ಈಶ್ವರನಿಗೆ ಅನೇಕ ರೂಪಗಳಿರುವುದರಿಂದ ಅವನೊಬ್ಬನಿಗೆ ಮಾತ್ರ ಆಧಾರತ್ವ, ಆಧೇಯತ್ವ, ಏಕತ್ವ, ಬಹುತ್ವ ಮೊದಲಾದ ಧರ್ಮಗಳು ಯುಕ್ತವಾಗುತ್ತವೆ ಹೊರತು ಬೇರೆಯವರಲ್ಲಿ ಇಂತಹ ವಿರುದ್ಧಧರ್ಮಗಳು ಬರುವುದಿಲ್ಲ. ಆದ್ದರಿಂದ ಪಂಚ ಜನಾಃ ಮೊದಲಾದ ಶಬ್ದಗಳು ಮಹಾವಿಷ್ಣುವನ್ನು ಪ್ರತಿಪಾದಿಸುತ್ತವೆಂದು ಹೇಳಿದಾಗ, ಆಧಾರತ್ವ, ಆಧೇಯತ್ವ ಧರ್ಮಗಳು ಒಬ್ಬನಲ್ಲಿ ವಿರುದ್ಧವಲ್ಲವೇ? ಎಂಬ ಆಕ್ಷೇಪವು ಬರುವುದಿಲ್ಲ. ಒಬ್ಬನೇ ಪರಮಾತ್ಮನಿಗೆ ಅನೇಕ ರೂಪಗಳಿರುವುದರಿಂದ ಒಂದು ರೂಪವು ಆಧಾರವೆಂದು, ಮತ್ತೊಂದು ರೂಪವು ಆಧೇಯವೆಂದು ಹೇಳಬಹುದು. ಆದ್ದರಿಂದ ಮಹಾವಿಷ್ಣುವೇ ಮುಖ್ಯವಾಗಿ ಪಂಚ ಜನ ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬುದು ಈ ಅಧಿಕರಣದ ಸಿದ್ಧಾಂತ.

भा.बो.— **न सङ्ख्योपसङ्ग्रहादपि नानाभावादतिरेकाच्च** ॥ 'यस्मिन् पञ्च पञ्च जना आकाशश्च तिष्ठतः' इति वाक्यगतपञ्च जनादिशब्दाः पूर्वोक्तसन्देहबीजेन विष्णोर्वाचका न वेति सन्देहे विष्णोर्वाचका न भवन्तीति पूर्वः पक्षः । विष्णोर्वाचका इति सिद्धान्तः ।

ನ್ಯಾಯವಿವರಣೆ ಟೀಕೆ

'ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ' ಎಂಬ ಈ ಅಧಿಕರಣದಲ್ಲಿ 'ಯಸ್ಮಿನ್ ಪಂಚ ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ' ಎಂಬ ವಾಕ್ಯದಲ್ಲಿರುವ ಪಂಚ ಜನಾದಿ ಶಬ್ದಗಳ ಸಮನ್ವಯವನ್ನು ಮಹಾವಿಷ್ಣುವಿನಲ್ಲಿ ಮಾಡುತ್ತಿದ್ದಾರೆ. ಹಿಂದಿನ ಅಧಿಕರಣದ ಸಂದೇಹಬೀಜವನ್ನು ವಿವಕ್ಷಿಸಿದಾಗ 'ಪಂಚ ಜನಾಃ' ಮೊದಲಾದ ಶಬ್ದಗಳಿಂದ ವಿಷ್ಣು ಪ್ರತಿಪಾದ್ಯನಾಗುತ್ತಾನೋ ಇಲ್ಲವೋ ? ಎಂಬ ಸಂಶಯವು ಪ್ರಾಪ್ತವಾಗುತ್ತದೆ. ವಿಷ್ಣುವನ್ನು ಈ ಶಬ್ದಗಳು ಪ್ರತಿಪಾದನೆ ಮಾಡುವುದಿಲ್ಲ ಎಂದು ಪೂರ್ವಪಕ್ಷ. ವಿಷ್ಣುವನ್ನೇ ಪ್ರತಿಪಾದನೆ ಮಾಡುತ್ತವೆಂಬುದು ಸಿದ್ಧಾಂತ.

**एतत्पूर्वपक्षसिद्धान्तसाधकत्वेन 'परस्परविरोधश्च' इति 'बहुरूपत्वमीशस्य' इति उक्तौ न्यायौ पूर्ववदेव विवृणोति – बहुरूपत्वादिति ।।**

ಈ ಪೂರ್ವಪಕ್ಷಕ್ಕೆ ಸಾಧಕವಾಗಿ 'ಪರಸ್ಪರವಿರೋಧಃ' 'ಒಬ್ಬನಲ್ಲಿಯೇ ಆಧಾರತ್ವ, ಆಧೇಯತ್ವಗಳು, ಏಕತ್ವ-ಬಹುತ್ವಗಳು ಪರಸ್ಪರ ವಿರುದ್ಧವಾಗುತ್ತವೆ' ಎಂಬ ನ್ಯಾಯವನ್ನು; ಸಿದ್ಧಾಂತಕ್ಕೆ ಸಾಧಕವಾಗಿ 'ಬಹುರೂಪತ್ವಮೀಶಸ್ಯ' 'ಶ್ರೀಹರಿಗೆ ಅನೇಕ ರೂಪಗಳಿವೆ' ಎಂಬ ನ್ಯಾಯವನ್ನು ವಿವರಿಸುವುದಕ್ಕಾಗಿ 'ಬಹುರೂಪತ್ವಾತ್' ಇತ್ಯಾದಿ ವಾಕ್ಯವು ಹೊರಟಿರುತ್ತದೆ.

**तस्यैव ईशस्यैव । इदं च 'बहुरूपत्वात्' इत्यत्राप्याकर्षणीयम् । एवकारेण तस्यैकस्यैव न त्वन्यसाहित्येनेति वा, अतादृशविरुद्धधर्मघटकबहुरूपत्वाद्यैश्वर्यं नान्यस्येति वा अभिप्रैति । आधेयत्वादिकमित्यादिपदेन ईशत्वाधेयत्वयोरेकत्व-बहुत्वयोर्ग्रहणम् ।**

'ತಸ್ಯೈವ' ಎಂದರೆ 'ಈಶ್ವರನಿಗೆ ಮಾತ್ರ ಎಂದರ್ಥ. 'ಬಹುರೂಪತ್ವಾತ್' ಎಂಬುದನ್ನು 'ತಸ್ಯೈವ' ಎಂಬಲ್ಲಿಯೂ ಅನುಕರ್ಷ ಮಾಡಿಕೊಳ್ಳಬೇಕು. ಏವಕಾರದಿಂದ ಪರಮಾತ್ಮನೊಬ್ಬನಲ್ಲಿ ಮಾತ್ರ ಇಂತಹ ವಿರುದ್ಧ ಧರ್ಮಗಳನ್ನು ಹೇಳಬಹುದು. ಹೊರತು, ಅನೇಕತ್ವವನ್ನು ಪರಮಾತ್ಮನಲ್ಲಿ ಕೂಡಿಸಲು ಬೇರೆ ಪದಾರ್ಥಗಳ ಸಾಹಿತ್ಯವನ್ನು ವಿವಕ್ಷಿಸುವ ಅವಶ್ಯಕತೆಯಿರುವುದಿಲ್ಲ. ಇಂತಹ ವಿರುದ್ಧಧರ್ಮಗಳನ್ನು ವಿಷ್ಣುವಿನಲ್ಲಿ ಕೂಡಿಸುವಂತಹ ಬಹುರೂಪತ್ವ ಮೊದಲಾದ ಐಶ್ವರ್ಯವು ಪರಮಾತ್ಮನಲ್ಲಿ ಮಾತ್ರ ಇರುತ್ತದೆ. ಬೇರೆ ಪದಾರ್ಥಗಳಲ್ಲಿ ಇರುವುದಿಲ್ಲ. 'ಆಧೇಯತ್ವಾದಿಕಮ್' ಎಂಬಲ್ಲಿರುವ ಆದಿಪದದಿಂದ ಈಶತ್ವ, ಆಧೇಯತ್ವಗಳನ್ನು ಏಕತ್ವ ಹಾಗೂ ಬಹುತ್ವಗಳನ್ನು ವಿವಕ್ಷಿಸಬೇಕು.

**तथा च 'एकस्मिन्नाधाराधेयत्वयोरेकत्वबहुत्वयोः, ईशस्य सर्वाधारत्वा-दीशत्वाधेयत्वयोश्च परस्परं विरोधः' इति पूर्वपक्षन्यायो विवृतो भवति ।**

ಹೀಗೆ ಹೇಳಿದ್ದರಿಂದ ಒಬ್ಬನೇ ಮಹಾವಿಷ್ಣುವಿನಲ್ಲಿ ಆಧಾರತ್ವ, ಆಧೇಯತ್ವಗಳು, ಏಕತ್ವ ಹಾಗೂ ಬಹುತ್ವಗಳು ಸರ್ವಾಶ್ರಯನಾದ್ದರಿಂದ ಈಶತ್ವ, ಆಧೇಯತ್ವಗಳು ಪರಸ್ಪರ ವಿರುದ್ಧವಾಗುತ್ತವೆ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿದಂತಾಯಿತು.

**एवं च पञ्च जनादिशब्दानां विष्णुवाचकत्वे आधाराधेयत्वादीनां एकस्मिन् परस्परविरोधान्न विष्णोः पञ्च जनादिशब्दवाच्यत्वमिति पूर्वपक्षे, ईशस्य बहुरूपत्वा द्विरोधाप्रसङ्गाद्विष्णोरेव पञ्च जनादिशब्दवाच्यत्वमिति सिद्धान्त इति भावः ।**

ಆದ್ದರಿಂದ ಪಂಚ ಜನಾಃ ಮೊದಲಾದ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಾದರೆ ಆಧಾರಾಧೇಯಭಾವವು ಒಬ್ಬನಲ್ಲಿ ಪರಸ್ಪರ ವಿರುದ್ಧವಾಗುತ್ತವೆ. ಆದ್ದರಿಂದ ವಿಷ್ಣುವು 'ಪಂಚ ಜನಾ'ಃ ಎಂಬ ಶಬ್ದದಿಂದ ವಾಚ್ಯನಾಗಲು ಸಾಧ್ಯವಿಲ್ಲ ಎಂಬುದು ಪೂರ್ವಪಕ್ಷ. ಒಬ್ಬನೇ ಈಶ್ವರನಿಗೆ ಅನೇಕ ರೂಪಗಳಿರುವುದರಿಂದ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಆದ್ದರಿಂದ ವಿಷ್ಣುವೇ 'ಪಂಚ ಜನಾಃ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತ.

**श्री श्रीमदानन्दतीर्थभगवत्पादाचार्यविरचितम्**

**ब्रह्मसूत्राणुभाष्यम्**

# अणुभाष्यम्

## नसंख्योपसंग्रहाधिकरणम् (१।४।३)

**एको अमितात्मकः**

ಶರೀರ, ತದಂತರ್ಗತವಾದ ಆಕಾಶ, ಪ್ರಾಣ ಇವುಗಳಿಗೆಲ್ಲಾ ನಿಯಾಮಕನಾದ್ದರಿಂದ ಬಹುಸಂಖ್ಯಾಸಹಿತನಾದ ವಿಷ್ಣುವೇ 'ಪಂಚ ಜನಾಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ.

***

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## नसंख्योपसंग्रहाधिकरणम् (१।४।३)

नन्वथापि न सर्वशब्दवाच्यता हरेर्युक्ता । काण्वश्रुतौ षष्ठेऽध्याये

'यस्मिन् पञ्च पञ्च जना आकाशश्च प्रतिष्ठितः ।
तमेवमन्य आत्मानं विद्वान् ब्रह्मामृतोऽमृतं'

इत्यादौ पञ्चपञ्चेति वीप्साया यस्मिन्नित्युक्तसर्वशरीरस्थेश्वराधारकतया श्रुतानां पञ्चत्वसङ्ख्यायुतानां 'प्राणस्य प्राणमुत चक्षुषश्चक्षुः' इत्यादिवाक्यशेषोक्तद्वितीयान्त-प्राणादिशब्दितानां जनानां आधाराधेयभावविरोधेन एकस्य पञ्चत्वरूपबहुसङ्ख्या-विरोधेन चाविष्णुत्वेन जनादिशब्दवाच्यात्वायोगादित्यतः प्राप्तं – **नसङ्ख्योपसंग्रहाद-पीत्यादिसूत्रयम्** । तदर्थः – **एकोऽमितात्मक इति** ।

ಹಿಂದಿನ ಅಧಿಕರಣದಲ್ಲಿ ಮಹಾವಿಷ್ಣುವೇ ಸಕಲಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಯಿತು. ಇದು ಸರಿಯಲ್ಲ. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಶ್ರುತಿ ಹೀಗಿದೆ -

'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ।
ತಮೇವ ಮನ್ಯೇ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥'

ಇತ್ಯಾದಿಯಾದ ಶ್ರುತಿಯಲ್ಲಿ 'ಪಂಚ' ಎಂಬ ಪದವು ಎರಡು ಬಾರಿ ಕೇಳಿಸುತ್ತಿದೆ. ಏಕೆಂದರೆ 'ಪಂಚ ಜನಾಃ' ಶಬ್ದದಿಂದ ಪ್ರಾಣ, ಶ್ರೋತ್ರ, ಮನಸ್ಸು, ವಾಕ್ ಈ ಐದು ಪ್ರತಿಪಾದ್ಯವಾಗಿವೆ. ಇವೆಲ್ಲವೂ ಸಕಲೈಶ್ವರ್ಯದಲ್ಲಿರುವ ಪರಮಾತ್ಮನನ್ನು ಆಧರಿಸಿಕೊಂಡು ಇರುತ್ತದೆ ಎಂದು ಶ್ರುತಿಯ ಅಭಿಪ್ರಾಯ.

ಹೀಗೆ ಹೇಳಿದ್ದರಿಂದ ಒಬ್ಬನೇ ಮಹಾವಿಷ್ಣುವಿನಲ್ಲಿ ಆಧಾರತ್ವ, ಆಧೇಯತ್ವಗಳು, ಏಕತ್ವ ಹಾಗೂ ಬಹುತ್ವಗಳು ಸರ್ವಾಶ್ರಯನಾದ್ದರಿಂದ ಈಶತ್ವ, ಆಧೇಯತ್ವಗಳು ಪರಸ್ಪರ ವಿರುದ್ಧವಾಗುತ್ತವೆ ಎಂಬ ಪೂರ್ವಪಕ್ಷನ್ಯಾಯವನ್ನು ವಿವರಿಸಿದಂತಾಯಿತು.

**एवं च पञ्च जनादिशब्दानां विष्णुवाचकत्वे आधाराधेयत्वादीनां एकस्मिन् परस्परविरोधान्न विष्णोः पञ्च जनादिशब्दवाच्यत्वमिति पूर्वपक्षे, ईशस्य बहुरूपत्वा द्विरोधाप्रसङ्गाद्विष्णोरेव पञ्च जनादिशब्दवाच्यत्वमिति सिद्धान्त इति भावः ।**

ಆದ್ದರಿಂದ ಪಂಚ ಜನಾಃ ಮೊದಲಾದ ಶಬ್ದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವುದಾದರೆ ಆಧಾರಾಧೇಯಭಾವವು ಒಬ್ಬನಲ್ಲಿ ಪರಸ್ಪರ ವಿರುದ್ಧವಾಗುತ್ತವೆ. ಆದ್ದರಿಂದ ವಿಷ್ಣುವು 'ಪಂಚ ಜನಾ'ಃ ಎಂಬ ಶಬ್ದದಿಂದ ವಾಚ್ಯನಾಗಲು ಸಾಧ್ಯವಿಲ್ಲ ಎಂಬುದು ಪೂರ್ವಪಕ್ಷ. ಒಬ್ಬನೇ ಈಶ್ವರನಿಗೆ ಅನೇಕ ರೂಪಗಳಿರುವುದರಿಂದ ಯಾವುದೇ ವಿರೋಧಕ್ಕೆ ಅವಕಾಶವಿಲ್ಲ. ಆದ್ದರಿಂದ ವಿಷ್ಣುವೇ 'ಪಂಚ ಜನಾಃ' ಮೊದಲಾದ ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತ.

**श्री श्रीमदानन्दतीर्थभगवत्पादाचार्यविरचितम्**

**ब्रह्मसूत्राणुभाष्यम्**

# अणुभाष्यम्

## नसंख्योपसंग्रहाधिकरणम् (१।४।३)

**एको अमितात्मकः**

ಶರೀರ, ತದಂತರ್ಗತವಾದ ಆಕಾಶ, ಪ್ರಾಣ ಇವುಗಳಿಗೆಲ್ಲಾ ನಿಯಾಮಕನಾದ್ದರಿಂದ ಬಹುಸಂಖ್ಯಾಸಹಿತನಾದ ವಿಷ್ಣುವೇ 'ಪಂಚ ಜನಾಃ' ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆ.

***

ಪರಿಪೂರ್ಣಚಂದ್ರಿಕಾ

श्रीराघवेन्द्रतीर्थविरचिता

ब्रह्मसूत्राणुभाष्यविवृतिः

# तत्वमञ्जरी

## नसंख्योपसंग्रहाधिकरणम् (१।४।३)

नन्वथापि न सर्वशब्दवाच्यता हरेर्युक्ता । काण्वश्रुतौ षष्ठेऽध्याये

'यस्मिन् पञ्च पञ्च जना आकाशश्च प्रतिष्ठितः ।
तमेवमन्य आत्मानं विद्वान् ब्रह्मामृतोऽमृतं'

इत्यादौ पञ्चपञ्चेति वीप्साया यस्मिन्नित्युक्तसर्वशरीरस्थेश्वराधारकतया श्रुतानां पञ्चत्वसङ्ख्यायुतानां 'प्राणस्य प्राणमुत चक्षुषश्चक्षुः' इत्यादिवाक्यशेषोक्तद्वितीयान्त-प्राणादिशब्दितानां जनानां आधाराधेयभावविरोधेन एकस्य पञ्चत्वरूपबहुसङ्ख्या-विरोधेन चाविष्णुत्वेन जनादिशब्दवाच्यात्वायोगादित्यतः प्राप्तं – **नसङ्ख्योपसंग्रहाद-पीत्यादिसूत्रयम्** । तदर्थः – **एकोऽमितात्मक इति** ।

ಹಿಂದಿನ ಅಧಿಕರಣದಲ್ಲಿ ಮಹಾವಿಷ್ಣುವೇ ಸಕಲಶಬ್ದಗಳಿಂದ ಪ್ರತಿಪಾದ್ಯನಾಗಿದ್ದಾನೆಂದು ಸಮರ್ಥಿಸಲಾಯಿತು. ಇದು ಸರಿಯಲ್ಲ. ಏಕೆಂದರೆ ಬೃಹದಾರಣ್ಯಕೋಪನಿಷತ್ತಿನ ಆರನೆಯ ಅಧ್ಯಾಯದಲ್ಲಿ ಶ್ರುತಿ ಹೀಗಿದೆ -

'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ।
ತಮೇವ ಮನ್ಯೇ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥'

ಇತ್ಯಾದಿಯಾದ ಶ್ರುತಿಯಲ್ಲಿ 'ಪಂಚ' ಎಂಬ ಪದವು ಎರಡು ಬಾರಿ ಕೇಳಿಸುತ್ತಿದೆ. ಏಕೆಂದರೆ 'ಪಂಚ ಜನಾಃ' ಶಬ್ದದಿಂದ ಪ್ರಾಣ, ಶ್ರೋತ್ರ, ಮನಸ್ಸು, ವಾಕ್ ಈ ಐದು ಪ್ರತಿಪಾದ್ಯವಾಗಿವೆ. ಇವೆಲ್ಲವೂ ಸಕಲೈಶ್ವರ್ಯದಲ್ಲಿರುವ ಪರಮಾತ್ಮನನ್ನು ಆಧರಿಸಿಕೊಂಡು ಇರುತ್ತದೆ ಎಂದು ಶ್ರುತಿಯ ಅಭಿಪ್ರಾಯ.

ಆದ್ದರಿಂದ ಪರಮಾತ್ಮನು ಆಧಾರನು. ಮತ್ತು ಈ ಪ್ರಾಣಾದಿಗಳು ಆಧೇಯಗಳೆಂದು ಹೇಳಿದಂತಾಯಿತು. ಒಂದು ವೇಳೆ ಪಂಚ ಜನ ಶಬ್ದದಿಂದಲೂ ಪರಮಾತ್ಮನೇ ಪ್ರತಿಪಾದ್ಯನೆಂದು ಹೇಳಿದರೆ ಈ ಆಧಾರಾಧೇಯವ್ಯವಸ್ಥೆಯೇ ತಪ್ಪಿ ಹೋಗುತ್ತದೆ. ಮತ್ತು ಒಬ್ಬನೇ ಆದ ಪರಮಾತ್ಮನು ಬಹುತ್ವವನ್ನು ಹೇಳುವ ಪಂಚತ್ವಸಂಖ್ಯೆಗೆ ಆಧಾರನೆಂದು ಹೇಳಲು ಬರುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿರುವ 'ಪಂಚ ಜನ' ಶಬ್ದಕ್ಕೆ ಪ್ರಾಣ, ಶ್ರೋತ್ರ ಮೊದಲಾದ ಐದು ಇಂದ್ರಿಯಗಳು ಅರ್ಥವಾಗಿವೆ. ಹೊರತು ವಿಷ್ಣುವಲ್ಲ. ಆದ್ದರಿಂದ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವ ಬರುವುದಿಲ್ಲ ಎಂಬ ಆಶಂಕೆ 'ನ ಸಂಖ್ಯೋಪಸಂಗ್ರಹಾದಪಿ' ಇವೇ ಮೊದಲಾದ ಮೂರು ಸೂತ್ರಗಳು ಹೊರಟಿವೆ. ಇದರ ಅಭಿಪ್ರಾಯವನ್ನೇ ಅಣುಭಾಷ್ಯದಲ್ಲಿ 'ಏಕೋ ಅಮಿತಾತ್ಮಕಃ' ಎಂದು ಸಂಗ್ರಹಿಸಿದ್ದಾರೆ.

पूर्ववदनुषङ्गः । एको यस्मिन्नित्येकवचनान्तयत्तदादिशब्दोक्तः पञ्च जनादिशब्दार्थभूतामितात्मक एको जनार्दनः । तथा चाधाराधेयत्वादिना अन्यत्र नियतैरपि पञ्च जनादिशब्दैर्मुख्यतया परममुख्यत्त्वेनोदितः । तदर्थं बहुत्वसङ्ख्यायुक्तस्य विष्णुत्वे तच्छब्दोदितत्वावश्यंभावात् । हरेः पञ्च जनशब्दार्थभूतामितात्मकत्वमेव कुत इत्यतोऽपि – **अमितात्मक इति** । अमितानामनेकेषां आत्मा नियामकः स एवामितात्मकः ।

ಇಲ್ಲಿಯೂ ಕೂಡ ಹಿಂದಿನ ಅಧಿಕರಣದಲ್ಲಿ ಹೇಳಿದಂತೆ 'ಏಕ ಜನಾರ್ದನಃ' ಎಂಬುದಾಗಿ, ಮತ್ತು 'ಅನ್ಯತ್ರ ನಿಯತೈರಪಿ ಮುಖ್ಯತಯೋದಿತಃ ಶಬ್ದೈಃ' ಎಂಬುದಾಗಿಯೂ ಅನುಷಂಗ ಮಾಡಿಕೊಳ್ಳಬೇಕು. 'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿ 'ಯಸ್ಮಿನ್' ಎಂಬ ಏಕವಚನಾಂತವಾದ 'ಯತ್' 'ತದ್' ಶಬ್ದಗಳಿಂದ ಪ್ರತಿಪಾದ್ಯನಾದವನು ಜನಾರ್ದನನೇ ಆಗಿರುತ್ತಾನೆ. 'ಪಂಚ ಜನಾಃ' ಮೊದಲಾದ ಬಹುಸಂಖ್ಯಾಬೋಧಕವಾದ ಶಬ್ದಗಳಿಂದಲೂ ಈ ಜನಾರ್ದನನೇ ಪ್ರತಿಪಾದ್ಯನಾಗಿದ್ದಾನೆ. ಆಧಾರಾಧೇಯ ಪ್ರಯುಕ್ತವಾಗಿ ಪ್ರಾಣಾದಿ ಬೇರೆ ಪದಾರ್ಥಗಳು ಪ್ರತಿಪಾದ್ಯವಾಗುತ್ತವೆ ಎಂದು ತೋರುವ ಪಂಚ ಜನಾದಿ ಶಬ್ದಗಳಿಂದ ಪರಮಾತ್ಮನೇ ಮುಖ್ಯವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ. ವಿಷ್ಣುವು ಬಹುತ್ವಸಂಖ್ಯಾಯುಕ್ತನಾದ್ದರಿಂದ ಪಂಚ ಜನಾದಿ ಶಬ್ದಗಳಿಂದ ಪ್ರತಿಪಾದ್ಯನಾಗಲು ಯಾವ ಬಾಧಕವಿರುವುದಿಲ್ಲ. ಶ್ರೀಹರಿಗೆ ಪಂಚ ಜನ ಶಬ್ದಾರ್ಥವಾದ ಬಹುತ್ವವಾದರೂ ಹೇಗೆ ಯುಕ್ತವಾಗುತ್ತವೆ ? ಎಂಬ ಪ್ರಶ್ನೆಗೆ 'ಅಮಿತಾತ್ಮಕಃ' ಎಂಬುದರಿಂದ ಉತ್ತರಿಸಿದ್ದಾರೆ. ಅನೇಕ ಆತ್ಮರಿಗೆ ನಿಯಾಮಕನಾದ್ದರಿಂದ ವಿಷ್ಣು ಅಮಿತಾತ್ಮಕನೆನಿಸಿದ್ದಾನೆ.

शरीरतदन्तर्गताकाशप्राणादिपञ्च जननियामक इत्यर्थः । एतेन 'प्राणस्य प्राणः' इत्यादिवाक्यशेषे द्वितीयान्ततया प्राधान्येन निर्दिष्टानामेव पञ्च जन शब्दार्थत्वात् तेषामेव च प्राणादिनियामकत्वरूपविष्णुलिङ्गेन विष्णुत्वादित्युक्तं भवति ।

ಪರಿಪೂರ್ಣಚಂದ್ರಿಕಾ

तावताऽपि कथमनेकत्वं हरेरित्यतोऽपि – **अमितात्मक इति** । अमितेषु अनेकेषु शरीरतदन्तस्थाकाशपञ्च जनेषु आत्मा स्वरूपं यस्य स इत्यर्थः । नियम्यानामनैकत्वेन तन्नियामकतया तेष्वनेकरूपत्वस्य न्यायप्राप्तत्वादिति भावः ।

ಶರೀರ ತದಂರ್ಗತವಾದ ಆಕಾಶ, ಪ್ರಾಣ, ಶ್ರೋತ್ರ ಮೊದಲಾದ ಪಂಚ ಜನರಿಗೆ ಪರಮಾತ್ಮನು ನಿಯಾಮಕನಾಗಿದ್ದಾನೆ ಎಂಬುದು 'ಅಮಿತಾತ್ಮಕಃ' ಎಂಬುದರ ಅಭಿಪ್ರಾಯ. ಹೀಗೆ ಹೇಳಿದ್ದರಿಂದ 'ಪ್ರಾಣಸ್ಯ ಪ್ರಾಣಃ' ಇತ್ಯಾದಿ ವಾಕ್ಯಶೇಷದಲ್ಲಿ ದ್ವಿತೀಯಾಂತವಾಗಿ ನಿರ್ದೇಶಿಸಲ್ಪಟ್ಟ ಪದಾರ್ಥಗಳೇ ಪ್ರಧಾನವಾದ್ದರಿಂದ ಪಂಚ ಜನ ಶಬ್ದದಿಂದ ಪ್ರತಿಪಾದ್ಯವಾಗಿದೆ. 'ಪ್ರಾಣಸ್ಯ ಪ್ರಾಣಃ' ಎಂದರೆ ಪ್ರಾಣಾದಿಗಳಿಗೆ ನಿಯಾಮಕನಾಗಿರುವುದು ಎಂದರ್ಥ. ಇದು ವಿಷ್ಣುವಿನ ಧರ್ಮವಾದ್ದರಿಂದ ಈ ಐದನ್ನು ನಿರ್ದೇಶಿಸುವ 'ಪಂಚ ಜನ' ಶಬ್ದವೂ ಕೂಡ ವಿಷ್ಣುವಾಚಕವೇ ಆಗಿದೆ. ನಿಯಮ್ಯವಾದ ಪ್ರಾಣಾದಿ ಐದರಲ್ಲಿ ನಿಯಾಮಕನಾದ ಪರಮಾತ್ಮನ ಐದು ರೂಪಗಳಿರುತ್ತವೆ ಎಂದು ತಿಳಿಯಬೇಕು. ಹಾಗಾಗಿ ಪರಮಾತ್ಮನಿಗೆ ಅನೇಕ ರೂಪಗಳಿರುವುದರಿಂದ ಅವುಗಳ ವಿವಕ್ಷೆಯಿಂದ 'ಪಂಚ ಜನಾಃ' ಎಂದು ಶ್ರುತಿಯು ಕರೆಯುತ್ತಿದೆ. ಇದರಿಂದ ಪರಮಾತ್ಮನಿಗೆ ಅನೇಕತ್ವವು ಹೇಗೆ ಬರುತ್ತದೆ ? ಎಂಬ ಪ್ರಶ್ನೆಗೂ 'ಅಮಿತಾತ್ಮಕಃ' ಎಂಬ ಪದದಿಂದಲೇ ಉತ್ತರಿಸಿದ್ದಾರೆ. 'ಅಮಿತ' ಶಬ್ದಕ್ಕೆ 'ಅನೇಕ' ಎಂದರ್ಥ. 'ಅನೇಕ' ಎಂದರೆ ಶರೀರ, ಶರೀರಾಂತರ್ಗತವಾದ ಆಕಾಶ, ಪ್ರಾಣ, ಶ್ರೋತ್ರ ಮೊದಲಾದ ಐದು ಪದಾರ್ಥಗಳಿಗೆ ಆತ್ಮನು ನಿಯಾಮಕನಾದ್ದರಿಂದ ಅನೇಕ ರೂಪವುಳ್ಳವನಾಗಿದ್ದಾನೆ ಎಂದು ತಿಳಿಯಬೇಕು. ನಿಯಮ್ಯವಾದ ಪದಾರ್ಥವು ಅನೇಕವಾದ್ದರಿಂದ ನಿಯಾಮಕವಾದ ರೂಪಗಳೂ ಕೂಡ ಅನೇಕವಾಗಿರುತ್ತವೆ ಎಂಬುದು ನ್ಯಾಯಪ್ರಾಪ್ತವಾಗಿದೆ.

एवं तर्ह्येकस्यैव आधाराधेयभावविरोध इत्येतदपि अमितात्मक इत्युक्त्यैव समाहितम् । शरीरादीनामाधाराधेयभावापन्नतया तन्नियामकेश्वररूपाणां तत्रस्थानामपि तथात्वोपपत्तेरिति ।

ಹಾಗಾದರೆ ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೂ 'ಅಮಿತಾತ್ಮಕಃ' ಎಂಬ ಪದದಿಂದಲೇ ಉತ್ತರಿಸಿದ್ದಾರೆ. ಶರೀರ ಹಾಗೂ ಪ್ರಾಣಾದಿಗಳಲ್ಲಿ ಆಧಾರಾಧೇಯಭಾವವಿರುವುದರಿಂದ ತದಂತರ್ಯಾಮಿಯಾದ ರೂಪಗಳಿಗೂ ಆಧಾರಾಧೇಯಭಾವವನ್ನು ಸುಲಭವಾಗಿ ತಿಳಿಯಬಹುದು.

'ननु प्राणस्य प्राणमुत चक्षुषश्चक्षुः श्रोत्रस्य श्रोत्रं अन्नस्यान्नं मनसो मनः' इति माध्यान्दिनश्रुतौ अन्नाख्यरूपेण सहामितात्मक उक्तः । काण्वानां श्रुतौ तु ज्योतिषा सह । तथा च को वाऽमितात्मकः पञ्च जनशब्दाभिधेय इत्यतोऽपि – एक

इत्यादि । श्रुतिद्वयोक्तोप्यमितात्मक एक इत्यर्थः । अन्नज्योतिःशब्दाभ्यां रूपपञ्चक-प्रविष्टमेकरूपमुच्यते । नतु रूपभेद इत्यर्थः ।

'ಪ್ರಾಣಸ್ಯ ಪ್ರಾಣಂ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಂ ಅನ್ನಸ್ಯಾನ್ನಂ ಮನಸೋ ಮನಃ' ಇತ್ಯಾದಿಯಾಗಿ ಮಾಧ್ಯಂದಿನ ಶ್ರುತಿಯಲ್ಲಿ ಅನ್ನ ಎಂಬ ರೂಪದ ಜೊತೆಗೆ ಬಹುರೂಪತ್ವವನ್ನು ಹೇಳಲಾಗಿದೆ. ಆದರೆ ಕಾಣ್ವಶ್ರುತಿಯಲ್ಲಿ 'ಜ್ಯೋತಿಷಾಂ ಜ್ಯೋತಿಃ' ಎಂಬುದಾಗಿ 'ಜ್ಯೋತಿಃ' ಎಂಬ ರೂಪದ ಜೊತೆಗೆ ಬಹುತ್ವವನ್ನು ಹೇಳಲಾಗಿದೆ. ಇವೆರಡರಲ್ಲಿ ಯಾವ ರೂಪವನ್ನು ವಿವಕ್ಷಿಸಿ, ಪರಮಾತ್ಮನನ್ನು ಪಂಚ ಜನ ಶಬ್ದದಿಂದ ಪ್ರತಿಪಾದ್ಯನೆಂದು ತಿಳಿಯಬೇಕು ಎಂಬ ಪ್ರಶ್ನೆಗೆ 'ಏಕಃ' ಎಂಬುದರಿಂದ ಉತ್ತರಿಸಿದ್ದಾರೆ. 'ಅನ್ನ' ಎಂಬ ರೂಪದಿಂದ ಕೂಡಿರುವ ಐದು ರೂಪಗಳಲ್ಲಿಯೂ, 'ಜ್ಯೋತಿ' ಎಂಬ ರೂಪದಿಂದ ಕೂಡಿರುವ ಐದು ರೂಪಗಳಲ್ಲಿಯೂ ಇರುವ ಪರಮಾತ್ಮನ ರೂಪವು ಒಂದೇ ಆಗಿರುತ್ತದೆ. ಆದ್ದರಿಂದ ವಿರೋಧವಿಲ್ಲ.

यद्वा एको जनार्दनोऽमितात्मकः । अमितः अनेकः आत्मा अधिकारी जीवो यस्य स इत्यर्थः । अन्नज्योतिषोः भिन्नरूपत्वेऽप्युपासकाधिकारिभेदेन पञ्चकद्वयमिति भावः ।

ಅಥವಾ 'ಏಕೋ ಜನಾರ್ದನಃ ಅಮಿತಾತ್ಮಕಃ' ಎಂಬುದರಿಂದ ಪರಿಹಾರವನ್ನು ತಿಳಿಯಬೇಕು. ಅಂದರೆ ಅಧಿಕಾರಿಭೇದದಿಂದ ಎರಡು ಬಗೆಯ ಪಂಚ ರೂಪಗಳನ್ನು ಶ್ರುತಿಯು ವಿವರಿಸುತ್ತಿದೆ. 'ಅಮಿತಾತ್ಮಕಃ' ಎಂಬ ಪದಕ್ಕೆ 'ಅಮಿತಃ' ಅನೇಕರಾದ, 'ಆತ್ಮ' ಅಧಿಕಾರಿಯು ಯಸ್ಯ = ಯಾರಿಗೆ ಇರುತ್ತದೋ, ಸಃ = ಅವನು ಎಂಬುದಾಗಿ ವಿಗ್ರಹವನ್ನು ಮಾಡಬೇಕು. ಅನ್ನ ಹಾಗೂ ಜ್ಯೋತಿ ಎಂಬೆರಡು ರೂಪಗಳನ್ನು ಬೇರೆ ಬೇರೆ ಎಂದು ವಿವಕ್ಷಿಸಿದರೂ ಉಪಾಸಕರಾದ ಅಧಿಕಾರಿಗಳು ಭಿನ್ನ-ಭಿನ್ನರಾದ್ದರಿಂದ ಎರಡು ಪಂಚಕಗಳೂ ಕೂಡ ಯುಕ್ತವಾಗುತ್ತವೆ.

ननु शरीरतत्स्थाकाशप्राणाद्यधिष्ठानभेदेन तन्नियामकतया तत्रस्थित-विष्णोरमितात्मकत्वे रूपाणां भेदः स्यादित्यतोऽपि 'न स्थानतोपि' इति वक्ष्यमाणन्यायस्मरणायैको निर्भेद इत्युक्तम् । कथं निर्भेदोप्यमितात्मकः । अन्यत्र लोकेऽदृष्टेरित्यतोऽपि **अमितात्मक** इति । आत्मनि चैवं विचित्राश्च हीति वक्ष्यमाण न्यायेनापरिमितस्वरूपसामर्थ्य इत्यर्थ इत्याद्यूह्यम् ।

ಶರೀರ, ಶರೀರದಲ್ಲಿರುವ ಆಕಾಶ, ಪ್ರಾಣ ಈ ಭಿನ್ನ-ಭಿನ್ನವಾದ ಅಧಿಷ್ಠಾನಗಳಲ್ಲಿ ಭಗವಂತನ ಬೇರೆ ಬೇರೆ ನಿಯಾಮಕರೂಪಗಳು ಇರುತ್ತವೆ. ಆದ್ದರಿಂದ ಭಗವಂತನ ರೂಪಗಳಿಗೆ ಭೇದವಿಲ್ಲವೆಂಬ ಮಾತು ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ನ ಸ್ಥಾನತೋऽಪಿ' ಎಂಬ ಮುಂದೆ ಹೇಳುವ ನ್ಯಾಯವನ್ನು ಸ್ಮರಿಸಲು

'ಏಕಃ' ಎಂದು ಹೇಳಿರುತ್ತಾರೆ. 'ಏಕಃ' ಎಂದರೆ ಭೇದವಿರುವುದಿಲ್ಲ ಎಂದರ್ಥ. ಭಗವಂತನ ರೂಪಗಳಿಗೆ ಭೇದವಿಲ್ಲದಿದ್ದರೂ ಅನೇಕತ್ವವು ಹೇಗೆ ಕೂಡುತ್ತದೆ ? ಲೋಕದಲ್ಲಿ ಎಲ್ಲಿಯೂ ಕೂಡ ಹೀಗೆ ಕಂಡಿಲ್ಲವಲ್ಲವೇ? ಎಂಬ ಪ್ರಶ್ನೆಗೂ 'ಅಮಿತಾತ್ಮಕಃ' ಎಂಬ ಪದದಿಂದ ಉತ್ತರಿಸಿದ್ದಾರೆ. 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಎಂಬ ಸೂತ್ರದ ನ್ಯಾಯದಿಂದ ಒಬ್ಬನೇ ಪರಮಾತ್ಮನಲ್ಲಿ ಇಂತಹ ಅನೇಕತ್ವವು ಉಪಪನ್ನವಾಗುತ್ತದೆ. ಅಮಿತಾತ್ಮಕನು ಎಂದರೆ ಬಹುರೂಪವುಳ್ಳವನು ಆದರೂ ಕೂಡ ಭೇದವಿರುವುದಿಲ್ಲ. ಇದೆಲ್ಲವೂ ಅವನ ಅಪರಿಮಿತವಾದ ಸಾಮರ್ಥ್ಯದಿಂದ ಯುಕ್ತವಾಗುತ್ತದೆಂಬುದನ್ನು ಊಹಿಸಿಕೊಳ್ಳಬೇಕು.

**अत्रामितात्मक इत्युक्त्या 'विरोधिसर्वबाहुल्य' इत्यनुभाष्योक्तदिशा च बहुत्ववाचिनः शब्दा उदाहरणम् । बहुत्वमेव पूर्वपक्षयुक्तिः । सूत्रेऽतिरेकाच्च इत्याधाराधेयसमर्थनञ्च अभ्युच्चयेन । गुहां प्रविष्टावित्यत्र अत्तेत्युक्त्या कर्मफलात्तृत्वमेव तत्र व्युत्पाद्यम् । 'द्वित्वं चैकस्य युज्यते' इत्यनुभाष्यादौ त्वभ्युच्चयत्वेन एकस्यानेकत्वव्युत्पादनम् । अतो न पुनरूक्तिरिति दर्शितम् ।।**

'ಅಮಿತಾತ್ಮಕಃ' ಎಂದು ಹೇಳಿದ್ದರಿಂದ ಮತ್ತೊಂದು ಪ್ರಯೋಜನವನ್ನು ತೋರಿಸಿದಂತಾಯಿತು. 'ವಿರೋಧಿ ಸರ್ವಬಾಹುಲ್ಯ' ಎಂಬುದಾಗಿ ಮೊದಲ ವ್ಯಾಖ್ಯಾನದಲ್ಲಿ ಹೇಳಿದಂತೆ ಬಹುತ್ವವಾಚಕವಾದ ಎಲ್ಲ ಬಗೆಯ ಶಬ್ದಗಳ ಸಮನ್ವಯವು ಈ ಅಧಿಕರಣದ ಉದ್ದೇಶವಾಗಿದೆಯೆಂದು ತಿಳಿಸಿದಂತಾಯಿತು. ಬಹುತ್ವಸಂಖ್ಯೆಯೇ ಈ ಅಧಿಕರಣದ ಪೂರ್ವಪಕ್ಷ ಯುಕ್ತಿಯಾಗಿದೆ. ಸೂತ್ರದಲ್ಲಿ 'ಅತಿರೇಕಾಚ್ಚ' ಎಂಬುದಾಗಿ ಆಧಾರಾಧೇಯಭಾವವನ್ನು ಸಮರ್ಥನೆ ಮಾಡಿದ್ದು ಅಭ್ಯುಚ್ಚಯುಕ್ತಿಯಾಗಿದೆ. ಅಂದರೆ ಶರೀರದಲ್ಲಿರುವ ಪರಮಾತ್ಮನ ರೂಪ ಮತ್ತು ಪ್ರಾಣಾದಿಗಳಲ್ಲಿರುವ ಪರಮಾತ್ಮನ ರೂಪಗಳಿಗೆ ಆಧಾರಾಧೇಯಭಾವವನ್ನು ಸಮರ್ಥನೆ ಮಾಡಿರುವುದು ಹೆಚ್ಚಿನ ವಿಷಯವಾಗಿದೆ ಎಂದಭಿಪ್ರಾಯ. 'ಗುಹಾಂ ಪ್ರವಿಷ್ಟೌ ಆತ್ಮಾನೌऽಹಿ ತದ್ದರ್ಶನಾತ್' ಎಂಬ ಸೂತ್ರದಲ್ಲಿ ಕರ್ಮಫಲಭೋಕ್ತೃತ್ವವನ್ನಷ್ಟೇ ಸಮನ್ವಯ ಮಾಡಿದ್ದಾರೆ. ಹೊರತು ಅನೇಕತ್ವ ಸಂಖ್ಯೆಯನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಿರುವುದಿಲ್ಲ. 'ದ್ವಿತ್ವಂ ಚೈಕಸ್ಯ ಯುಜ್ಯತೇ' ಎಂಬುದಾಗಿ ಅನುವ್ಯಾಖ್ಯಾನದಲ್ಲಿ ಅನೇಕತ್ವವನ್ನು ಅಲ್ಲಿ ಪ್ರತಿಪಾದನೆ ಮಾಡಿದ್ದರೂ ಕೂಡ ಅಲ್ಲಿ ಕೇವಲ ಅಭ್ಯುಚ್ಚಯಯುಕ್ತಿ ಎಂದು ತಿಳಿಯಬೇಕು. ಆದ್ದರಿಂದ ಗುಹಾಧಿಕರಣದಿಂದ ಈ ಅಧಿಕರಣಕ್ಕೆ ಪುನರುಕ್ತಿ ದೋಷವು ಇರುವುದಿಲ್ಲ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ

ತತ್ವಮಂಜರಿಯ ಕನ್ನಡಾನುವಾದದಲ್ಲಿ ನಸಂಖ್ಯೋಪಸಂಗ್ರಹಾಧಿಕರಣವು ಮುಗಿಯಿತು.

***

## ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

।। श्री गुरुभ्यो नमः ।। हरिः ॐ ।।

श्री राघवेन्द्रतीर्थविरचिता

# तन्त्रदीपिका

## नसङ्ख्योपसंग्रहाधिकरणम् (१।४।३)

### पञ्चजनाधिकरणम् - ३

**।। न सङ्ख्योपसंग्रहादपि नानाभावादतिरेकाच्च ।। १-४-१२ ।।**

अत्र बहुत्ववाचिशब्दाः समन्वीयन्ते । अपिर्विभागेन विरोधपदाकर्षणार्थः । आधाराधेयभावसमुच्चयार्थो वा । पञ्च जना इति योग्यतयाऽन्वेति । तत्त्वित्यस्ति । ''यस्मिन् पञ्च पञ्च जना'' इत्युक्तपञ्चपञ्चेति विशेषणयुक्ता जनाः तत्तु ब्रह्मैव परममुख्यवृत्त्या । न प्राणःचक्षुश्रोत्रमनांसि । कुतः ? तदधीनत्वज्ञेयवावचनादि-विशोषाद्युक्तहेतुभ्यः । अग्रेतनहेतोश्चेति भावः । एवं तर्हि पञ्चेत्युक्तवहुत्सङ्ख्यादिविरोध इत्यतः सूत्रम् - सङ्ख्योपसङ्ग्रहादपि । पञ्चेति बहुत्वसङ्ख्योपसङ्ग्रहात् यस्मिन्ब्रह्मणीत्युक्ताधाराधेयभावादपि न विरोधः । कुतः ? नानाभावात्। नानानशब्दो भिन्नवाची । नानारूपाणां भावात् सत्त्वादतिरेकाच्च भेदाच्च जना इत्युक्तरूपापेक्षया यस्मिन्नित्युक्तशरीरस्थरूपस्यातिरिक्तत्वाच्चेति द्वयोः क्रमेण निरासः। प्रागुक्तहेतुभिरेहापि ब्रह्मत्वसिद्धेः बाधकमात्रमुद्ध–तम् । एवमग्रेऽपि । अत्र भेदो विशेषो बोध्यः । अत्राविरोधपक्षमनुवर्त्य नेत्यवक्तुं शक्यत्वेऽपि तदुक्तिः सङ्ख्योपसङ्ग्रहादपि ''प्राणस्य प्राणम्'' इत्यादिषष्ठीनिर्दिष्टप्राणादयो न पञ्चजना नानाभावात् तेषां प्रतिशरीरं नानात्वेन पञ्चत्वायोगात् । न ह्येकस्मिन् देहे एक एव प्राणादिरित्यादिवृत्त्यन्तरं चन्द्रिकोक्तदिशा ज्ञापयितुं सङ्ख्योपसङ्ग्रहादपि यो विरोधः स नेत्यन्वयलाभाय चेति ।।

ಈ ಅಧಿಕರಣದಲ್ಲಿ ಬಹುತ್ವವಾಚಕವಾದ ಶಬ್ದಗಳನ್ನು ವಿಷ್ಣುವಿನಲ್ಲಿ ಸಮನ್ವಯ ಮಾಡಲಾಗಿದೆ. ಸೂತ್ರದಲ್ಲಿರುವ 'ಅಪಿ' ಎಂಬ ಪದವು ಹಿಂದಿನ ಸೂತ್ರದ 'ಅವಿರೋಧ' ಎಂಬ ಪದವನ್ನು ವಿರೋಧ

ಎಂಬುದಾಗಿ ಪದವಿಭಾಗ ಮಾಡಿ, ಅನ್ವಯಮಾಡಿಕೊಳ್ಳಲು ಇರುತ್ತದೆ. ಅಥವಾ ಆಧಾರಾಧೇಯ-ಭಾವವನ್ನು ಸಮುಚ್ಚಯ ಮಾಡಲೂ ಕೂಡ ಸಾರ್ಥಕವಾಗಿದೆ. 'ಪಂಚ ಜನಾಃ' ಎಂಬ ಪದವು ಅನ್ವಯಕ್ಕೆ ಯೋಗ್ಯವಾದ್ದರಿಂದ ಅನ್ವಿತವಾಗಿದೆ. 'ತತ್ತು' ಎಂಬ ಎರಡು ಪದಗಳು ಇಲ್ಲಿಯೂ ಅನುವೃತ್ತವಾಗಿವೆ.

'ಯಸ್ಮಿನ್ ಪಂಚ ಪಂಚ ಜನಾಃ' ಎಂಬ ಶ್ರುತಿಯಲ್ಲಿ ಪಂಚ ಪಂಚ ಎಂಬ ವಿಶೇಷಣಯುಕ್ತವಾದ ಜನಶಬ್ದವು 'ತತ್ತು' ಬ್ರಹ್ಮನನ್ನೇ ಪರಮಮುಖ್ಯವೃತ್ತಿಯಿಂದ ಪ್ರತಿಪಾದನೆ ಮಾಡುತ್ತದೆ. ಹೊರತು, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು ಇವುಗಳನ್ನು ಪ್ರತಿಪಾದನೆ ಮಾಡುವುದಿಲ್ಲ. ಏಕೆಂದರೆ ತದಧೀನತ್ವ, ಜ್ಞೇಯತ್ವಾವಚನ ಮೊದಲಾದ ಹೇತುಗಳಿರುವುದರಿಂದ, ಅಷ್ಟೇ ಅಲ್ಲದೇ ಮುಂದೆ ಹೇಳುವ ಹೇತುವಿನಿಂದಲೂ ಬ್ರಹ್ಮನೇ ವಾಚ್ಯನಾಗುತ್ತಾನೆ ಎಂದಭಿಪ್ರಾಯ.

ಹಾಗಾದರೆ 'ಪಂಚ' ಎಂಬಲ್ಲಿ ಹೇಳಿರುವ ಬಹುತ್ವಸಂಖ್ಯೆಯಿಂದ ವಿರೋಧ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸಲು ಸೂತ್ರವು ಹೊರಟಿದೆ.

ಸೂತ್ರಾರ್ಥ - ಸಂಖ್ಯೋಪಸಂಗ್ರಹಾದಪಿ = 'ಪಂಚ' ಎಂಬ ಬಹುತ್ವ ಸಂಖ್ಯೆಯಿಂದ ಸಂಗ್ರಹ ಮಾಡಿರವುದರಿಂದಲೂ 'ನ ವಿರೋಧಃ' = ಆಯಾ ಶಬ್ದಗಳ ವಾಚ್ಯತ್ವ ಬರುವುದಿಲ್ಲವೆಂಬ ವಿರೋಧಕ್ಕೆ ಅವಕಾಶವಿಲ್ಲ. 'ಯಸ್ಮಿನ್ ಬ್ರಹ್ಮಣಿ' ಎಂಬಲ್ಲಿ ಹೇಳಲ್ಪಟ್ಟ ಆಧಾರಾಧೇಯಭಾವದಿಂದಲೂ ವಿರೋಧ ಇರುವುದಿಲ್ಲ. ಏಕೆಂದರೆ ನಾನಾಭಾವಾತ್ = ನಾನಾ ಶಬ್ದಕ್ಕೆ ಭಿನ್ನ ಎಂಬರ್ಥ, ಹಾಗೂ ನಾನಾ ರೂಪಗಳಿರುವುದರಿಂದ, ಅತಿರೇಕಾಚ್ಚ = ಎಲ್ಲಾ ಪದಾರ್ಥಗಳಿಂದ ಭೇದವಿರುವುದರಿಂದ, ಜನಾ = 'ಯಸ್ಮಿನ್ ಪಂಚ ಪಂಚ ಜನಾಃ' ಎಂಬಲ್ಲಿ 'ಪಂಚ ಜನಾ' ಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ. 'ಪಂಚ ಜನಾಃ' ಎಂಬಲ್ಲಿ ಪ್ರತಿಪಾದಿತವಾದ ಭಗವದ್ರೂಪಕ್ಕಿಂತ 'ಯಸ್ಮಿನ್' ಎಂಬ ಪದದಿಂದ ಪ್ರತಿಪಾದ್ಯವಾದ ಭಗವದ್ರೂಪವು ಅತಿರಿಕ್ತವೇ ಆಗಿದೆ. ಅದರಿಂದಲೂ ಆಧಾರಾಧೇಯಭಾವದ ವಿರೋಧ ಬರುವುದಿಲ್ಲ. ಬಹುತ್ವಸಂಖ್ಯೆಯಾಗಲೀ, ಆಧಾರಾಧೇಯ-ಭಾವವಾಗಲೀ ಒಬ್ಬನೇ ಬ್ರಹ್ಮನಲ್ಲಿ ಬರುವುದಿಲ್ಲ ಎಂಬ ಆಕ್ಷೇಪವು ನಿರಾಕೃತವಾಯಿತು. ಹಿಂದೆ ಹೇಳಿದ ಹೇತುಗಳಿಂದಲೇ ಬ್ರಹ್ಮತ್ವವೂ ಕೂಡ ಸಿದ್ಧವಾಗುವುದರಿಂದ ಸೂತ್ರದಲ್ಲಿ ಬ್ರಹ್ಮತ್ವಕ್ಕೆ ಸಾಧಕವಾದ ಬಾಧಕವನ್ನಷ್ಟೇ ಪರಿಹರಿಸಲಾಗಿದೆ. ಮುಂದೆಯೂ ಕೂಡ ಇದರಂತೆ ತಿಳಿಯಬೇಕು. 'ಭೇದ' ಶಬ್ದಕ್ಕೆ ವಿಶೇಷ ಎಂದರ್ಥ.

ಹಿಂದಿನ ಸೂತ್ರದಿಂದ ಅವಿರೋಧ ಎಂಬ ಪದವನ್ನು ಅನುವೃತ್ತಿ ಮಾಡಿಕೊಂಡಾಗ ಪುನಃ 'ನ' ಎಂಬುದನ್ನು ಹೇಳುವ ಅವಶ್ಯಕತೆಯಿರುವುದಿಲ್ಲ. ಆದರೂ ಸಂಖ್ಯೆಯನ್ನು ಸಂಗ್ರಹ ಮಾಡಿರುವ ಕಾರಣದಿಂದ 'ಪ್ರಾಣಸ್ಯ ಪ್ರಾಣಮ್' ಇತ್ಯಾದಿ ಶ್ರುತಿಯಲ್ಲಿ ಷಷ್ಠೀ ವಿಭಕ್ತ್ಯಂತವಾದ ಪ್ರಾಣಾದಿ ಶಬ್ದಗಳಿಂದ ಪಂಚ ಜನರು ನಿರ್ದೇಶಿಸಿಲ್ಲ. ಏಕೆಂದರೆ 'ನಾನಾಭಾವಾತ್' ಪ್ರಾಣಾದಿಗಳು

ಪ್ರತಿಶರೀರದಲ್ಲಿಯೂ ಭಿನ್ನರಾಗಿರುವುದರಿಂದ ಅವರಲ್ಲಿ ಐದು ಎಂಬ ಸಂಖ್ಯೆಯು ಯುಕ್ತವಾಗುವುದಿಲ್ಲ. ಒಂದು ದೇಹದಲ್ಲಿ ಒಬ್ಬನೇ ಪ್ರಾಣ ಎಂದು ಹೇಳಲು ಸಾಧ್ಯವಿಲ್ಲವಷ್ಟೇ. ಹೀಗೆ ಬೇರೆ ವ್ಯಾಖ್ಯಾನವನ್ನು ತಾತ್ಪರ್ಯಚಂದ್ರಿಕೆಯಲ್ಲಿ ಮಾಡಿರುತ್ತಾರೆ. ಅದನ್ನು ಸೂಚಿಸಲು ಮತ್ತು ಸಂಖ್ಯೆಯ ಉಪಸಂಗ್ರಹದಿಂದ ಯಾವ ವಿರೋಧವು ಬರುತ್ತದೋ, ಅದೂ ಕೂಡ ಇರುವುದಿಲ್ಲ ಎಂಬ ಅನ್ವಯವನ್ನು ತಿಳಿಸಲು 'ನ' ಎಂಬ ಪದವನ್ನು ಸೂತ್ರದಲ್ಲಿ ಸೇರಿಸಿದ್ದಾರೆ.

**के ते पञ्चत्वाश्रयरूपविशेषाः, कुतश्च हेतुविशेषात्ते ब्रह्मेत्यत आह -**

**।। प्राणादयो वाक्यशेषात् ।। १-४-१३ ।।**

**पञ्च जना इत्यस्ति । ''प्राणस्य प्राणमुत चक्षुषश्चक्षुः'' इत्यादिद्वितीयान्तनिर्दिष्टप्राणचक्षुःश्रोत्रान्नमनःशब्दिताः पञ्च जनाः ''प्राणस्य प्राणम्'' इत्यादिवाक्यशेषादित्यर्थः । अत्र प्राणप्राणदत्वादिलिङ्गात् पञ्च जना ब्रह्मरूपविशेषा इत्युक्तं भवति । तेन पञ्च जनस्वरूपोक्तिः व्यर्थेति न शङ्क्यम् । उत्तरार्थत्वाच्च । न ह्येतदनुक्तौ ज्योतिषेत्याद्युक्तिर्युक्ता ।।**

ಭಗವಂತನ ಐದು ರೂಪಗಳು ಎಂದರೆ ಯಾವುವು ? ಆ ಐದು ರೂಪಗಳೂ ಕೂಡ ಭಗವಂತನೇ ಆಗಿದ್ದಾನೆನ್ನಲು ಏನು ಕಾರಣ? ಎಂಬ ಪ್ರಶ್ನೆಗೆ ಉತ್ತರಿಸಲು ಮುಂದಿನ ಸೂತ್ರ ಹೊರಟಿದೆ -

ಪ್ರಾಣಾದಯೋ ವಾಕ್ಯಶೇಷಾತ್

ಪಂಚ ಜನಾ ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಪ್ರಾಣಾದಯಃ = 'ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ' ಇತ್ಯಾದಿಯಾದ ದ್ವಿತೀಯಾವಿಭಕ್ತ್ಯಂತವಾದ ಪದಗಳಿಂದ ನಿರ್ದೇಶಿಸಲ್ಪಟ್ಟ, ಪ್ರಾಣ, ಚಕ್ಷುಸ್ಸು, ಶ್ರೋತ್ರ, ಅನ್ನ ಮತ್ತು ಮನಸ್ಸು ಈ ಶಬ್ದಗಳಿಂದ ಯಾರು ಪ್ರತಿಪಾದ್ಯರೋ, ಅವರೇ ಪಂಚ ಜನ ಶಬ್ದದಿಂದ ಪ್ರತಿಪಾದ್ಯರಾಗಿದ್ದಾರೆ. ವಾಕ್ಯಶೇಷಾತ್ = 'ಪ್ರಾಣಸ್ಯ ಪ್ರಾಣಮ್' ಎಂಬುದಾಗಿ ಮುಂದೆ ವಾಕ್ಯಶೇಷವಿರುವುದರಿಂದ. ಇಷ್ಟು ಸೂತ್ರಾರ್ಥ.

ಪ್ರಾಣನಿಗೂ ಕೂಡ ಪ್ರಾಣತ್ವವನ್ನು ನೀಡುವ ಲಿಂಗದಿಂದ ಪಂಚ ಜನರು ಬ್ರಹ್ಮನ ರೂಪವಿಶೇಷವೇ ಆಗಿವೆಯೆಂದು ಹೇಳಿದಂತಾಯಿತು. ಇದರಿಂದ ಪಂಚ ಜನರ ಸ್ವರೂಪವನ್ನು ಇಲ್ಲಿ ಹೇಳಿರುವುದು ವ್ಯರ್ಥವೆಂಬ ಆಶಂಕೆಗೆ ಅವಕಾಶವಿರುವುದಿಲ್ಲ. ಮತ್ತು ಮುಂದಿನ ಸೂತ್ರಕ್ಕೋಸ್ಕರ ಈ ಸೂತ್ರದಲ್ಲಿ ಪಂಚ ಜನರ ಸ್ವರೂಪವನ್ನು ಹೇಳಲೇ ಬೇಕು. ಇಲ್ಲದಿದ್ದರೆ ಮುಂದಿನ ಸೂತ್ರವು ಅಯುಕ್ತವಾಗುತ್ತಿತ್ತು. ಅಂದರೆ ಮುಂದಿನ ಸೂತ್ರದಲ್ಲಿ ಪಂಚ ಜನರು ಬ್ರಹ್ಮನ ರೂಪವಿಶೇಷವೆಂದು

ಹೇಳಲು ಸಾಧ್ಯವಿಲ್ಲವೆಂಬ ಆಕ್ಷೇಪವನ್ನು ಪರಿಹರಿಸಲಾಗಿದೆ. ಪ್ರಕೃತ ಈ ಸೂತ್ರದಲ್ಲಿ ಪ್ರಾಣಾದಿಗಳೇ ಪಂಚ ಜನರು ಎಂದು ಹೇಳಿದರೆ ಈ ಆಕ್ಷೇಪ ಸಮಾಧಾನಗಳೇ ಅಯುಕ್ತವಾಗುತ್ತದೆ.

वाजसनेये वाक्यशेषे पञ्चजना न श्रूयन्त इत्यत आह -

**।। ज्योतिषैकेषामसत्यन्ने ।। १-४-१४ ।।**

एकेषां काण्वानां शाखायामन्ने अन्नाख्यरूपे असत्यपि जयोतिषां ज्योतिरिति प्रागुक्तजयोतिषा पञ्चत्वं बोध्यमित्यर्थः । ज्योतिषेत्येकवचनोक्त्या न षष्ठ्यन्तज्योतिरादेः पञ्चजनत्वमिति सूचितम् । द्वयोरेकार्थत्वं वा अधिकारिभेदात् पञ्चकद्वयं वेति भावः ।। ३ ।।

ಬೃಹದಾರಣ್ಯಕದ ವಾಕ್ಯಶೇಷದಲ್ಲಿ ಪಂಚ ಜನರು ಕೇಳಿಸುತ್ತಿದೆಯಲ್ಲವೇ? ಎಂಬ ಆಶಂಕೆಗೆ ಉತ್ತರಿಸಲು. ಮುಂದಿನ ಸೂತ್ರ ಹೊರಟಿದೆ.

ಜ್ಯೋತಿಷೈಕೇಷಾಮಸತ್ಯನ್ನೇ

ಸೂತ್ರಾರ್ಥ - ಏಕೇಷಾಂ = ಕಾಣ್ವಶಾಖೆಯಲ್ಲಿ, ಅನ್ನೇ = ಅನ್ನವೆಂಬ ರೂಪವು, ಅಸತ್ಯಪಿ = ಇಲ್ಲದಿದ್ದರೂ, ಜೋತಿಷಾಂ = 'ಜ್ಯೋತಿಷಾಂ ಜ್ಯೋತಿಃ' ಎಂದು ಹಿಂದೆ ಹೇಳಿದ ಜ್ಯೋತಿ ಎಂಬ ರೂಪದಿಂದ ಐದು ರೂಪಗಳನ್ನು ತಿಳಿಯಬೇಕು.

ಸೂತ್ರದಲ್ಲಿ 'ಜ್ಯೋತಿಷಾ' ಎಂಬ ಏಕವಚನ ಪ್ರಯೋಗವಿರುವುದರಿಂದ ಷಷ್ಠೀವಿಭಕ್ತ್ಯಂತವಾದ ಜ್ಯೋತಿರಾದಿಶಬ್ದಗಳು ಪಂಚ ಜನರಲ್ಲ ಎಂದು ಸೂಚಿಸಿದಂತಾಯಿತು. ಏಕೆಂದರೆ 'ಜ್ಯೋತಿಷಾಮ್' ಎಂಬ ಷಷ್ಠ್ಯಂತ ಪದವು ಬಹುವಚನದಲ್ಲಿದೆ. ಸೂತ್ರದಲ್ಲಿ 'ಜ್ಯೋತಿಷಾ' ಎಂಬ ಏಕವಚನ ಪ್ರಯೋಗವಿರುವುದರಿಂದ ಬಹುವಚನಾಂತವಾದ 'ಜ್ಯೋತಿಷ್' ಶಬ್ದವಾಚ್ಯನು ಪಂಚ ಜನರಲ್ಲಿ ಸೇರುವುದಿಲ್ಲವೆಂದು ತಿಳಿಯುತ್ತದೆ.

'ಜ್ಯೋತಿಷ್' ಶಬ್ದ ಹಾಗೂ ಅನ್ನ ಶಬ್ದಗಳಿಗೆ ಒಂದೇ ಅರ್ಥವಿರುವುದರಿಂದ ಬೇರೆ ಶಾಖೆಯಲ್ಲಿ ಅನ್ನ ಎಂಬ ರೂಪವನ್ನು ಹೇಳಿದ್ದರೂ ಪಂಚತ್ವ ಸಂಖ್ಯೆಗೆ ಪೂರಕವಾದ ರೂಪವಿಶೇಷವಿಲ್ಲವೆಂಬ ಆಕ್ಷೇಪಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ವಿಭಿನ್ನರೂಪಗಳಿಂದ ಬೇರೆ ಶಾಖೆಯಿಂದ ವಿರೋಧ ಬರುತ್ತದೆಂದು ಆಕ್ಷೇಪಿಸಬಾರದು.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ

ತಂತ್ರದೀಪಿಕಾದ ಕನ್ನಡಾನುವಾದದಲ್ಲಿ ನಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು.

ನ ಸಂಖ್ಯೋಪಸಂಗ್ರಹಾಧಿಕರಣ (೧-೪-೩)

श्री राघवेन्द्रतीर्थविरचिता

# श्रीन्यायमुक्तावळिः

## नसंख्योपसंग्रहाधिकरणम् (१।४।३)

।। न संख्योपसंग्रहादपि नानाभावादतिरेकाच्च ।। ३ ।।

।। प्राणादयो वाक्यशेषात् ।। ।। ज्योतिषैकेषामसत्यन्ने ।।

पूर्वत्र प्रसिद्धस्य ज्योतिरादिशब्दनिमित्तस्याभावेऽपि योगलभ्यं अप्रसिद्धं तदस्तीत्युक्तम् ।। इह तु पञ्च जनादिशब्दानां प्रसिद्धमेव तदीशेऽस्तीत्युच्यत इति सङ्गतिः।

ಹಿಂದಿನ ಜ್ಯೋತಿರುಪಾಕ್ರಮಾಧಿಕರಣದಲ್ಲಿ 'ಜ್ಯೋತಿರಾದಿ' ಶಬ್ದಗಳ ಪ್ರಸಿದ್ಧವಾದ ಯಾವ ಪ್ರವೃತ್ತಿನಿಮಿತ್ತವಿರುತ್ತದೋ, ಅದು ಈಶ್ವರನಲ್ಲಿ ಬಾರದಿದ್ದರೂ 'ಜ್ಯೋತಿಃ' ಎಂಬ ಶಬ್ದದ ಯೋಗವೃತ್ತಿಯಿಂದ ಲಭಿಸುವ ಅಪ್ರಸಿದ್ಧವಾದ ಪ್ರವೃತ್ತಿನಿಮಿತ್ತವು ಈಶ್ವರನಲ್ಲಿ ಬರುತ್ತದೆ. ಆದ್ದರಿಂದ ಅವನು 'ಜ್ಯೋತಿಃ' ಮೊದಲಾದ ಶಬ್ದಗಳಿಂದೆಲ್ಲಾ ಪ್ರತಿಪಾದ್ಯನಾಗುತ್ತಾನೆಂದು ಸಮರ್ಥಿಸಲಾಯಿತು. ಆದರೆ ಈ ಅಧಿಕರಣದಲ್ಲಿ 'ಪಂಚ ಜನ' ಮೊದಲಾದ ಶಬ್ದಗಳಲ್ಲಿ ಯಾವ ಪ್ರಸಿದ್ಧವಾದ ಪ್ರವೃತ್ತಿನಿಮಿತ್ತವಿರುತ್ತದೋ ಅದೇ ಈಶ್ವರನಲ್ಲಿ ಬರುತ್ತಿದೆ ಎಂದು ಸಮರ್ಥನೆ ಮಾಡಲಾಗಿದೆ. ಆದ್ದರಿಂದ ಹಿಂದಿನ ಅಧಿಕರಣದಿಂದ ಈ ಅಧಿಕರಣವು ಸಂಗತವಾಗಿದೆಯೆಂದು ತಿಳಿಯಬೇಕು.

काण्वश्रुतौ षष्ठेऽध्याये ''तद्देवा ज्योतिषां ज्योतिरायुर्होपासतेऽमृतम् । यस्मिन् पञ्च जनाः आकाशश्च प्रतिष्ठितः । तमेव मन्य आत्मानं विद्वान् ब्रह्मामृतोऽमृतम्'' (बृ. ६-४-१६,१७) इति श्रुतपञ्चत्वयुक्तः पंच जनादिशब्दमुख्यार्थः किं वाक्यशेषे षष्ठ्यन्तेन प्राणचक्षुःश्रोत्रमनोऽन्नादिशब्देनोक्ता किं वा द्वितीयान्ततत्तच्छब्दनिर्दिष्टेश-स्वरूपाणीति सन्देहः । विष्ण्वन्ये प्राणादय एव पञ्च जनादिशब्दार्थः इति पूर्वः पक्षः ।।

ಕಾಣ್ವಶ್ರುತಿಯ ಆರನೆಯ ಅಧ್ಯಾಯದಲ್ಲಿ 'ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋ-ಪಾಸತೇऽಮೃತಮ್ । ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ । ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋऽಮೃತಮ್' ಎಂಬ ವಾಕ್ಯವಿದೆ. ಇಲ್ಲಿರುವ ಪಂಚ ಜನಾ ಎಂಬ ಶಬ್ದದ ಮುಖ್ಯಾರ್ಥನು ವಾಕ್ಯಶೇಷದಲ್ಲಿ ಷಷ್ಠ್ಯಂತವಾದ ಪ್ರಾಣ, ಚಕ್ಷುಸ್ಸು, ಶ್ರೋತ್ರ, ಮನಸ್ಸು, ಅನ್ನ ಮೊದಲಾದ ಪದಗಳಿಂದ ಪ್ರತಿಪಾದ್ಯನಾದವನೇ ಮುಖ್ಯಾರ್ಥನಾಗಿದ್ದಾನೋ, ಅಥವಾ ದ್ವಿತೀಯಾಂತವಾದ ಪ್ರಾಣ ಮೊದಲಾದ ಶಬ್ದಗಳಿಂದ ನಿರ್ದೇಶಿಸಲ್ಪಟ್ಟ ಸ್ವರೂಪವುಳ್ಳವನು ಪಂಚ

ಜನ ಶಬ್ದದ ಮುಖ್ಯಾರ್ಥನಾಗಿದ್ದಾನೋ ? ಎಂಬುದು ಸಂದೇಹ. ವಿಷ್ಣುವಿಗಿಂತ ಭಿನ್ನರಾದ ಪ್ರಾಣಾದಿಗಳೇ ಪಂಚ ಜನ ಶಬ್ದಾರ್ಥವೆಂದು ಪೂರ್ವಪಕ್ಷ.

तस्य बहुत्वविशिष्टार्थवाचित्वात् । तस्य चैकमेवाद्वितीयमित्युक्तिविरोधेन ईशेऽयोगात् । वशीकृतबहुजनेऽपि राजनि बहुत्ववाचिशब्दादर्शनेन तदधीनत्व-न्यायस्यापि अत्र अनवतारात् । गुहामित्यत्र गुहानिविष्टत्वादिबाधकेन एकस्यानेकत्वं नेत्युत्सर्गबाधेऽपि इह बाधकाभावेन तन्न्यायस्याप्यनवकाशात् । तमेवात्मान-मित्यात्मपदसामानाधिकरण्यात् । यस्मिन्नित्यस्य ब्रह्मत्वेन तदाश्रितानां पञ्चानां जनानां आकाशस्य ब्रह्मत्वे एकस्याधाराधेयभावानुपपत्तेश्चेति ।।

ಏಕೆಂದರೆ 'ಪಂಚ ಜನಾ' ಎಂಬ ಶಬ್ದವು ಬಹುತ್ವ ವಿಶಿಷ್ಟವಾದ ಅರ್ಥವನ್ನು ಹೇಳುತ್ತಿದೆ. 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತಿಯು ಪರಮಾತ್ಮನಲ್ಲಿ ಅದ್ವಿತೀಯತ್ವವನ್ನು ಹೇಳುತ್ತಿರುವುದರಿಂದ ಬಹುತ್ವ ಎಂಬ ಧರ್ಮವನ್ನು ಹೇಳಲು ಸಾಧ್ಯವಿಲ್ಲ. ತದಧೀನತ್ವ ನ್ಯಾಯದಿಂದ ಬಹುತ್ವವನ್ನು ಈಶ್ವರನಲ್ಲಿ ಉಪಪಾದನೆ ಮಾಡಲೂ ಕೂಡ ಬರುವುದಿಲ್ಲ. ಹಾಗಾದಲ್ಲಿ ಅನೇಕ ಜನರನ್ನು ವಶಮಾಡಿಕೊಂಡಿರುವ ರಾಜನಲ್ಲಿಯೂ ಬಹುತ್ವವಾಚಕವಾದ ಶಬ್ದಪ್ರಯೋಗವನ್ನು ಮಾಡಬೇಕಾಗುತ್ತದೆ.

ಈ ಅಧಿಕರಣಕ್ಕೆ ಗುಹಾಧಿಕರಣದಿಂದ ಪುನರುಕ್ತಿಯೂ ಕೂಡ ಬರುವುದಿಲ್ಲ. ಏಕೆಂದರೆ 'ಗುಹಾನಿವಿಷ್ಟತ್ವ' ಎಂಬ ಬಾಧಕವಿರುವುದರಿಂದ, ಒಬ್ಬನಿಗೆ ಅನೇಕತ್ವವು ಬರುವುದಿಲ್ಲ ಎಂಬ ಆಕ್ಷೇಪಕ್ಕೆ ಗುಹಾಧಿಕರಣದಲ್ಲಿ ಉತ್ತರಿಸಲಾಗಿದೆ. ಆದರೆ ಈ ಅಧಿಕರಣದಲ್ಲಿ ಅಂತಹ ಯಾವುದೇ ಬಾಧಕಗಳಿಲ್ಲದ ಕಾರಣ ಗುಹಾಧಿಕರಣದ ನ್ಯಾಯಕ್ಕೆ ಇಲ್ಲಿ ಅವಕಾಶವಿಲ್ಲ. 'ತಮೇವಂ ಆತ್ಮಾನಾಂ' ಎಂಬಲ್ಲಿ ಆತ್ಮಪದದ ಸಾಮಾನಾಧಿಕರಣವಿರುವುದರಿಂದ

'ಯಸ್ಮಿನ್ ಪಂಚ ಪಂಚ ಜನಾಃ' ಎಂಬಲ್ಲಿರುವ ಸಪ್ತಮ್ಯಂತವಾದ 'ಯಸ್ಮಿನ್' ಎಂಬ ಪದವು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ, ಅಂತಹ ಬ್ರಹ್ಮನಲ್ಲಿ ಆಶ್ರಿತರಾದ ಪಂಚ ಜನರು, ಆಕಾಶವು ಬ್ರಹ್ಮನೇ ಆದರೆ ಒಬ್ಬನಲ್ಲಿಯೇ ಆಧಾರಾಧೇಯಭಾವವನ್ನು ಹೇಳಿದಂತಾಗುತ್ತದೆ. ಯಾರು ಆಧಾರನಾಗಿದ್ದಾನೋ, ಅವನೇ ಆಧೇಯನಾಗಿದ್ದಾನೆಂದು ಹೇಳುವುದು ವಿರುದ್ಧವಾದ್ದರಿಂದ 'ಪಂಚ ಜನ' ಶಬ್ದದಿಂದ ಪ್ರತಿಪಾದ್ಯನಾದವನು ಮಹಾವಿಷ್ಣು ಆಗುವುದಿಲ್ಲ. ಇಷ್ಟು ಪೂರ್ವಪಕ್ಷ.

सिद्धान्तस्तु ।। ''प्राणस्य प्राणं चक्षुषश्चक्षुः श्रोत्रस्य श्रोत्रं अन्नस्यान्नं मनसो मनः'' इति वाक्यशेषे द्वितीयान्ततया श्रुतानां प्रणादिनियन्तृत्वादिविष्णुलिङ्गस्य श्रवणेन विष्णुरूपत्वात् तेषां च षष्ठ्यन्तनिर्दिष्टप्राणाद्यपेक्षया शब्दतोऽर्थतश्च प्राधान्यात् । ''नामानि सर्वाणि'' ''तावा एता'' इत्याद्युक्तसर्वशब्दवाच्यत्व-

**मुमुक्षुज्ञेयत्वादिप्रागुक्तहेतुभ्यश्च एकस्यापि बहुरूपत्वेन पञ्चत्वसङ्ख्यायाः भेदप्रतिनिधिविशेषबलेन यस्मिन्निति निर्दिष्टशरीरस्थरूपस्य पञ्च जनादिशब्दितरूपाणां च आधाराधेयभावस्यापि सम्भवात् । माध्यन्दिनशाखायामिव काण्वश्रुतौ वाक्यशेषे अन्नाख्यरूपस्याश्रवणेऽपि पूर्वश्रुतज्योतिषा सह पञ्चत्वात् वाक्यशेषस्थद्वितीयान्त-प्राणादिशब्दितेशरूपविशेषा एव पञ्चजना इति । अत्र पादे सर्वत्र पूर्ववदेव फलम्।।३।।**

'ಪ್ರಾಣಸ್ಯ ಪ್ರಾಣಂ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಂ ಅನ್ನಸ್ಯಾನ್ನಂ ಮನಸೋ ಮನಃ' ಎಂಬ ವಾಕ್ಯಶೇಷದಲ್ಲಿ ದ್ವಿತೀಯಾಂತವಾದ ಪದಗಳಿಂದ ಶ್ರುತವಾದ 'ಪ್ರಾಣಾದಿನಿಯಂತೃತ್ವ' ಎಂಬ ವಿಷ್ಣುಲಿಂಗವು ಕೇಳಿಸುತ್ತಿದೆ. ಷಷ್ಠ್ಯಂತವಾದ ಪ್ರಾಣಾದಿಶಬ್ದಗಳಿಗಿಂತಲೂ ದ್ವಿತೀಯಾಂತವಾದ ಪ್ರಾಣಾದಿಶಬ್ದಗಳು ಶಬ್ದದಿಂದ ಹಾಗೂ ಅರ್ಥದಿಂದ ಪ್ರಧಾನವಾಗಿವೆ. ದ್ವಿತೀಯಾಂತವಾದ ಶಬ್ದಗಳು ವಿಷ್ಣುವನ್ನೇ ಪ್ರತಿಪಾದನೆ ಮಾಡುವುದರಿಂದ ಪಂಚ ಜನ ಶಬ್ದದಿಂದ ಮಹಾವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. 'ನಾಮಾನಿ ಸರ್ವಾಣಿ ಯಮಾವಿಶಂತಿ' 'ತಾವಾ ಏತಾಃ' ಇವೇ ಮೊದಲಾದ ಶ್ರುತಿಗಳು ಮುಮುಕ್ಷು ಆದವನು ಪರಮಾತ್ಮನನ್ನು ಸರ್ವಶಬ್ದದಿಂದ ವಾಚ್ಯನೆಂದು ಅವಶ್ಯ ತಿಳಿಯಬೇಕೆಂದು ಹೇಳುತ್ತಿವೆ. ಹಿಂದೆ ಹೇಳಿದ ಈ ಹೇತುಗಳಿಂದ ಒಬ್ಬ ಪರಮಾತ್ಮನು ಅನೇಕ ರೂಪಗಳನ್ನು ತಾಳುತ್ತಾನಾದ್ದರಿಂದ ಪಂಚತ್ವ ಸಂಖ್ಯೆಯನ್ನು ಕೂಡಿಸಬಹುದು. ಹಾಗಾದರೆ ಒಬ್ಬನೇ ಪರಮಾತ್ಮನಲ್ಲಿ ಆಧಾರಾಧೇಯಭಾವವನ್ನು ಹೇಳುವುದು ವಿರುದ್ಧವಲ್ಲವೇ? ಎಂದು ಪ್ರಶ್ನಿಸಬಾರದು. ಭೇದಪ್ರತಿನಿಧಿಯಾದ ವಿಶೇಷದ ಬಲದಿಂದ 'ಯಸ್ಮಿನ್' ಎಂಬ ಶಬ್ದದಿಂದ ನಿರ್ದಿಷ್ಟವಾದ ಶರೀರ ಎಂಬ ರೂಪದಲ್ಲಿ ಪಂಚ ಜನ ಶಬ್ದದಿಂದ ಪ್ರತಿಪಾದ್ಯವಾದ ರೂಪಗಳು ನೆಲೆಸಿವೆ. ಆದ್ದರಿಂದ ಆಧಾರಾಧೇಯಭಾವವನ್ನು ಈ ವಿಶೇಷದ ಬಲದಿಂದ ಹೇಳಬಹುದು.

ಮಾಧ್ಯಂದಿನಶಾಖೆಯಲ್ಲಿ 'ಅನ್ನ' ಎಂಬ ರೂಪವನ್ನು ಹೇಳಲಾಗಿದೆ. ಆದರೆ ಕಾಣ್ವಶ್ರುತಿಯಲ್ಲಿ 'ಅನ್ನ' ಎಂಬ ರೂಪದ ಬದಲು 'ಜ್ಯೋತಿ' ಎಂಬ ರೂಪವನ್ನು ಹೇಳಲಾಗಿದೆ. ಹೀಗೆ ಎರಡು ಶಾಖೆಗಳ ವಾಕ್ಯಶೇಷದಲ್ಲಿ ರೂಪಗಳ ವ್ಯತ್ಯಾಸವಿದ್ದರೂ ಪಂಚತ್ವ ಪೂರಕವಾದ ರೂಪವನ್ನು ಹೇಳಿರುವುದರಿಂದ ದೋಷವಿಲ್ಲ. ಮತ್ತು ಆ ರೂಪಗಳಿಗೆ ಅಭೇದವಿರುವುದರಿಂದಲೂ ದೋಷವಿರುವುದಿಲ್ಲ. ಆದ್ದರಿಂದ ವಾಕ್ಯಶೇಷದಲ್ಲಿರುವ ದ್ವಿತೀಯಾಂತವಾದ ಪ್ರಾಣಾದಿ ಶಬ್ದಗಳಿಂದ ಭಗವದ್ರೂಪ ವಿಶೇಷವೇ ಪ್ರತಿಪಾದ್ಯವಾಗಿವೆ. ಅದೇ ಪಂಚ ಜನ ಶಬ್ದದಿಂದ ಪ್ರತಿಪಾದ್ಯವಾಗಿರುವ ಕಾರಣ ಮಹಾವಿಷ್ಣುವೇ ಪಂಚ ಜನ ಶಬ್ದದಿಂದ ಪ್ರತಿಪಾದ್ಯನಾಗಿದ್ದಾನೆಂಬುದು ಸಿದ್ಧವಾಯಿತು. ಈ ಪಾದದಲ್ಲಿರುವ ಪ್ರತಿಯೊಂದು ಅಧಿಕರಣಗಳ ಪೂರ್ವಪಕ್ಷ ಫಲ ಹಾಗೂ ಸಿದ್ಧಾಂತ ಫಲಗಳನ್ನು ಒಂದೇ ರೀತಿಯಲ್ಲಿ ಹಿಂದೆ ಹೇಳಿದಂತೆ ತಿಳಿದುಕೊಳ್ಳಬೇಕು.

ಇಲ್ಲಿಗೆ ನ್ಯಾಯಮುಕ್ತಾವಳಿಯಲ್ಲಿ ನಸಂಖ್ಯೋಪಸಂಗ್ರಹಾಧಿಕರಣವು ಸಮಾಪ್ತವಾಯಿತು.

*****

ಪರಿಪೂರ್ಣಚಂದ್ರಿಕಾ



ದುಷ್ಟ . . ದುಃಖೀ . . ಬಡವ . . ದುರ್ಬಲ

ದೋಷವಾಚಕ ಶಬ್ದಗಳೂ ಭಗವಂತನನ್ನು ಹೇಳುತ್ತವೆಯೆಂದರೆ

ಅವನು ದೋಷಿ ಅಂತಾಯಿತು!

ಹೇಳುವುದಿಲ್ಲವೆಂದರೆ ಅವನು ಸರ್ವಶಬ್ದವಾಚ್ಯ ಎಂಬುದು ಬಾಧಿತವಾಯಿತು!

ಛೇ . . ಛೇ . . ಭಗವಂತನನ್ನು ಒಳ್ಳೆ ಶಬ್ದಗಳಿಂದಷ್ಟೇ ಕರೆಯಿರಿ.

ಕೆಟ್ಟ ಶಬ್ದಗಳನ್ನು ದೂರ ಎಸೆಯಿರಿ . .ಇದು ಮುಗ್ಧರ ಮಾತು.

ಎಲ್ಲದರ ಒಡೆಯನಾದ್ದರಿಂದಲೇ ಎಲ್ಲ ಶಬ್ದಗಳೂ ಅವನಲ್ಲೇ ಸಮನ್ವಿತ

ಲೋಕ ವ್ಯವಹಾರದ ಗತಿಯೇನೆಂದು ಯೋಚಿಸದಿರಿ . . .

ಅವನದ್ದೇ ಎಲ್ಲಾ . . . ಕಡತೊಗೊಂಡು ನಮ್ಮೆಲ್ಲಾ ವ್ಯವಹಾರ . .

ಇದುವೇ ಸತ್ಯಲೋಕೇಶ್ವರರ ನಿರ್ಣಯ.